# ಬ್ರಹ್ಮಸೂತ್ರಗಳು

## ಶಾರೀರಕಮೀಮಾಂಸೆ

ವೇದಾಂತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಮ್

ಶಾಂಕರ ಭಾಷ್ಯ ೧. ೧. ೨



ಶ್ರೀರಾಮಕೃಷ್ಣಾಶ್ರಮ
ಮೈಸೂರು-570002

# ಬ್ರಹ್ಮಸೂತ್ರಗಳು

## ಶಾರೀರಕಮೀಮಾಂಸೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣಾಶ್ರಮ
ಮೈಸೂರು-570002

ಪ್ರಕಾಶಕರು :
ಅಧ್ಯಕ್ಷರು
ಶ್ರೀರಾಮಕೃಷ್ಣಾಶ್ರಮ
ಮೈಸೂರು

ಮೊದಲನೆಯ ಪ್ರಕಾಶನ ೧೯೬೪
ಎರಡನೆಯ ಪ್ರಕಾಶನ ೧೯೬೫

ಮುದ್ರಕರು :
ಜಿ. ಹೆಚ್. ರಾಮರಾವ್
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

## ಆಚಾರ್ಯಪ್ರಶಸ್ತಿಃ

ವಾಗ್ವಿಸ್ತರಾ ಯಸ್ಯ ಬೃಹತ್ತರಂಗಾ
ವೇಲಾತಟಂ ವಸ್ತುನಿ ತತ್ತ್ವಬೋಧಃ ।
ರತ್ನಾನಿ ತರ್ಕಪ್ರಸರಪ್ರಕಾರಾಃ
ಪುನಾತ್ವಸೌ ವ್ಯಾಸಪಯೋನಿಧಿರ್ನಃ ॥

*       *       *

ವಕ್ತ್ರಾರವಮಾಸಾದ್ಯ ಯಮೇವ ನಿತ್ಯಾ
ಸರಸ್ವತೀ ಸ್ವಾರ್ಥಸಮನ್ವಿತಾಽಽಸೀತ್ ।
ನಿರಸ್ತದುಸ್ತರ್ಕಕಲಂಕಪಂಕಾ
ನಮಾಮಿ ತಂ ಶಂಕರಮರ್ಚಿತಾಂಘ್ರಿಮ್ ॥

*       *       *

ಜಯತಿ ಸಕಲವಿದ್ಯಾವಾಹಿನೀಜನ್ಮಶೈಲೋ
ಜನಿಪಥಪರಿವೃತ್ತಿಶ್ರಾಂತವಿಶ್ರಾಂತಶಾಖೀ ।
ನಿಖಿಲಕುಮತಿಮಾಯಾಶರ್ವರೀಬಾಲಸೂರ್ಯೋ
ನಿಗಮಜಲಧಿವೇಲಾಪೂರ್ಣಚಂದ್ರೋ ಯತೀಂದ್ರಃ ॥

*       *       *

ಯೋ ವಿಪ್ರಲಂಭವಿಪರೀತಮತಿಪ್ರಭೂತ-
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತ-
ಮಾನಂದತೀರ್ಥಮುನಿವರ್ಯಮಹಂ ನಮಾಮಿ ॥

# ಪೀಠಿಕೆ

ಭಾರತವರ್ಷದ ತತ್ತ್ವೋದಯದ ಯುಗದಲ್ಲಿ ರಚಿಸಲ್ಪಟ್ಟ 'ಸೂತ್ರಗಳು' ಒಂದು ಅಸದೃಶ-ಸಾಹಿತ್ಯವಾಗಿದೆ. ಅತ್ಯಂತಪ್ರಾಚೀನವಾದ ಶ್ರೌತ-ಗೃಹ್ಯ-ಧರ್ಮ-ಸೂತ್ರಗಳಲ್ಲದೆ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಮತ್ತು ಉತ್ತರ ಮೀಮಾಂಸೆ—ಎಂಬ ಆರು ಪ್ರಸಿದ್ಧವಾದ ದರ್ಶನಗಳಿಗೂ ಸೂತ್ರಗಳಿವೆ. ಸೂತ್ರಗಳು ಸಂಕ್ಷಿಪ್ತವಾಗಿದ್ದು ಅರ್ಥವನ್ನು ಸೂಚಿಸಬೇಕು; ಮಿತವಾದ ಅಕ್ಷರಗಳಿಂದಲೂ ಪದಗಳಿಂದಲೂ ರಚಿಸಲ್ಪಟ್ಟು ಸರ್ವತಃ ಸಾರಭೂತವಾಗಿರಬೇಕು; ಇವುಗಳನ್ನು ಮನೀಷಿಗಳು ಸೂತ್ರಗಳೆಂದು ಕರೆಯುತ್ತಾರೆ.[1] ಆದರೆ ಅಕ್ಷರಗಳನ್ನೂ ಪದಗಳನ್ನೂ ಆದಷ್ಟೂ ಕಡಿಮೆ ಮಾಡಬೇಕೆಂಬ ಕಾತರದಲ್ಲಿ ಸೂತ್ರಗಳು ಅತ್ಯಂತ ಹ್ರಸ್ವವಾಗಿ ಭಾಷ್ಯದ ಸಹಾಯವಿಲ್ಲದೆ ಅವುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಹಿಂದಿನ ಕಾಲದಲ್ಲಿ ಶಿಷ್ಯನು ಸೂತ್ರಗಳನ್ನು ಅರ್ಥದೊಂದಿಗೆ ಗುರುಮುಖದಿಂದಲೇ ಕಲಿಯುತ್ತಿದ್ದನು. ಭಾಷ್ಯಕಾರರು ಸೂತ್ರಗಳ ತಾತ್ಪರ್ಯವನ್ನು ನಿರ್ಣಯಿಸುವಾಗ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿ—ಎಂಬ ವಿಧಿಗಳನ್ನು ಸ್ವೀಕರಿಸುತ್ತಾರೆ.[2] ಸೂತ್ರಗಳ ಉದ್ದೇಶವು ಎರಡು ಬಗೆಯಾಗಿರುತ್ತದೆ: (೧) ತಾವು ಪ್ರತಿಪಾದಿಸುವ ತತ್ತ್ವದ ಮಂಡನ; (೨) ಇದಕ್ಕೆ ವಿರುದ್ಧವಾಗಿರುವ ಪಕ್ಷಗಳ ಖಂಡನೆ. ಈ ದೃಷ್ಟಿಯಿಂದ ಸೂತ್ರಗಳು ವಿಮರ್ಶಾತ್ಮಕವೂ ರಚನಾತ್ಮಕವೂ ಆಗಿವೆ.

## ಬ್ರಹ್ಮಸೂತ್ರಗಳು

ಬ್ರಹ್ಮಸೂತ್ರಗಳು ಉತ್ತರಮೀಮಾಂಸೆಯ ಅಥವಾ ವೇದಾಂತ-ದರ್ಶನದ ಪ್ರಸಿದ್ಧವಾದ ಕೈಪಿಡಿ. ಬ್ರಹ್ಮಸೂತ್ರಗಳಿಗೆ ವೇದಾಂತಸೂತ್ರಗಳೆಂಬ ಹೆಸರು ಇದೆ. ವೇದಗಳ ಅಂತವೆನಿಸಿರುವ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳಿಗೆ ವೇದಾಂತವೆಂದು ಹೆಸರು. 'ಬ್ರಹ್ಮಸೂತ್ರಗಳು ವೇದಾಂತವಾಕ್ಯಗಳೆಂಬ ಕುಸುಮಗಳನ್ನು ಮಾಲೆಯಾಗಿ ಕಟ್ಟಲು ಬಂದಿರುತ್ತವೆ'[3] ಎಂದು ಶ್ರೀಶಂಕರಾಚಾರ್ಯರು ತಮ್ಮ ಸೂತ್ರಭಾಷ್ಯದಲ್ಲಿ (೧. ೧. ೩) ಹೇಳುತ್ತಾರೆ. ಇವುಗಳು ಶಾರೀರಕ-ಸೂತ್ರಗಳೆಂದೂ ಕರೆಯಲ್ಪಟ್ಟಿವೆ. ಶರೀರವೆಂದರೆ ದೇಹ; ಶರೀರದಲ್ಲಿ ಇರುವವನಿಗೆ ಎಂದರೆ ಆತ್ಮನಿಗೆ ಶಾರೀರಕನೆಂದು ಹೆಸರು. ಶರೀರದಲ್ಲಿರುವ ಜೀವನ ಬ್ರಹ್ಮತ್ವವನ್ನು ಕುರಿತು ವಿಚಾರಮಾಡುವುದರಿಂದ ಈ ಸೂತ್ರಗಳಿಗೆ

---

[1] ಲಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರಪದಾನಿ ಚ ।
ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ ॥

[2] ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥

[3] ವೇದಾಂತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಂ

ಶಾರೀರಕ-ಸೂತ್ರಗಳೆಂಬ ಹೆಸರು ಬಂದಿದೆ[1] ಇವು ಸಂನ್ಯಾಸಿಗಳಿಗೆ ಬೇಕಾದ ಗ್ರಂಥವಾಗಿರುವುದರಿಂದ ಇವನ್ನು ಭಿಕ್ಷು-ಸೂತ್ರಗಳೆಂದೂ ಕರೆಯುತ್ತಾರೆ ಪಾಣಿನಿಯು 'ಪಾರಾಶರ್ಯಶಿಲಾಲಿಭ್ಯಾಂ ಭಿಕ್ಷುನಟಸೂತ್ರಯೋಃ' ಎಂಬ ಸೂತ್ರದಲ್ಲಿ ವ್ಯಾಸರು ಭಿಕ್ಷು-ಸೂತ್ರಗಳ ಕರ್ತೃವೆಂದು ಸೂಚಿಸಿದ್ದಾರೆ ಪೂರ್ವಮೀಮಾಂಸೆಯು ಕರ್ಮವನ್ನು ಕುರಿತು ಜಿಜ್ಞಾಸೆಮಾಡಿದರೆ ಉತ್ತರಮೀಮಾಂಸೆಯು ಬ್ರಹ್ಮವನ್ನು ಕುರಿತು ಜಿಜ್ಞಾಸೆಮಾಡುತ್ತದೆ ಇವೆರಡು ಮೀಮಾಂಸೆಗಳೂ ಸಮಸ್ತವೇದವನ್ನು ಕುರಿತು ಜಿಜ್ಞಾಸೆಮಾಡುತ್ತವೆ ಶ್ರೀಭಾಷ್ಯದಲ್ಲಿ ಉದಾಹರಿಸಿರುವ ವೃತ್ತಿಕಾರರ ಮತದ ಪ್ರಕಾರ ಕರ್ಮಮೀಮಾಂಸೆಯೂ ಬ್ರಹ್ಮಮೀಮಾಂಸೆಯೂ ಒಂದೇ ಶಾಸ್ತ್ರವಾಗಿದೆ 'ಜೈಮಿನಿಯ ಮತದೊಂದಿಗೆ ಹದಿನಾರು ಅಧ್ಯಾಯಗಳನ್ನು ಒಳಕೊಂಡಿರುವಂತೆ ಈ ಶಾರೀರಕವು ಸಂಬಂಧಪಟ್ಟಿದೆ' (೧ ೧ ೧)

## ಕರ್ತೃತ್ವ ಮತ್ತು ಕಾಲ

ಬ್ರಹ್ಮಸೂತ್ರಗಳನ್ನು ರಚಿಸಿದವರು ಬಾದರಾಯಣರು ಅನೇಕ ಸೂತ್ರಗಳಲ್ಲಿಯೇ[3] ಬಾದರಾಯಣರ ಹೆಸರನ್ನು ಪ್ರಥಮಪುರುಷದಿಂದ ಹೇಳಿರುವುದರಿಂದ 'ಇವರೇ ನಿಜವಾದ ಸೂತ್ರಕಾರರೊ ?' ಎಂಬ ಸಂಶಯವುಂಟಾಗಬಹುದು ಆದರೆ ಭಾರತೀಯ-ಶಾಸ್ತ್ರ-ಸಾಹಿತ್ಯದಲ್ಲಿ ಇಂಥ ಪ್ರಯೋಗವು ಅಸಾಧಾರಣವಾದುದಲ್ಲ ನಮ್ಮ ಋಷಿಗಳು—ನಮ್ಮ ದೇವತೆಗಳಂತೆ—ಪರೋಕ್ಷಪ್ರಿಯರೂ ಪ್ರತ್ಯಕ್ಷದ್ವೇಷಿಗಳೂ ಆಗಿದ್ದರು ಸನಾತನಸಂಪ್ರದಾಯದ ಪ್ರಕಾರ ಬಾದರಾಯಣರಿಗೂ ವ್ಯಾಸರಿಗೂ ಯಾವ ಭೇದವೂ ಇಲ್ಲ ಇವರಿಬ್ಬರೂ ಏಕವ್ಯಕ್ತಿಯೆಂದು ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯಗಳಲ್ಲಿ ಹೇಳದಿದ್ದರೂ ಶಾಂಕರಭಾಷ್ಯದ ವ್ಯಾಖ್ಯಾನಕಾರರೂ, ಶ್ರೀರಾಮಾನುಜಾಚಾರ್ಯ ಶ್ರೀಮಧ್ವಾಚಾರ್ಯ ಶ್ರೀವಲ್ಲಭಾಚಾರ್ಯ ಮೊದಲಾದ ಭಾಷ್ಯಕಾರರೂ ಬಾದರಾಯಣರೇ ವ್ಯಾಸರೆಂದು ಅಂಗೀಕರಿಸುತ್ತಾರೆ ಮಹಾಭಾರತ, ವಿಷ್ಣುಪುರಾಣ, ಭಾಗವತ—ಇವುಗಳ ಪ್ರಕಾರ

---

[1] ಶಾರೀರಕೋ ಜೀವಸ್ತಸ್ಯ ಬ್ರಹ್ಮತ್ವವಿಚಾರೋ ಮೀಮಾಂಸಾ (ರ ಪ್ರ. ಉಪೋದ್ಘಾತ)

[2] ವಕ್ಷ್ಯತಿ ಚ ಕರ್ಮಬ್ರಹ್ಮಮೀಮಾಂಸಯೋರೈಕಶಾಸ್ತ್ರ್ಯಮ್—ಸಂಹಿತಮೇತಚ್ಛಾರೀರಕಂ ಜೈಮಿನೀಯೇನ ಷೋಡಶಲಕ್ಷಣೇನೇತಿ ಶಾಸ್ತ್ರೈಕತ್ವಸಿದ್ಧಿಃ ।

[3] ತದುಪರ್ಯಪಿ ಬಾದರಾಯಣಃ ಸಂಭವಾತ್ (೧. ೩ ೨೬), ಭಾವಂ ತು ಬಾದರಾಯಣೋಽಸ್ತಿ ಹಿ (೧ ೩ ೩೩); ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ (೩ ೨ ೪೧), ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ (೩. ೪ ೧), ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ (೩ ೪. ೮), ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ (೩ ೪ ೧೯), ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ .. (೪ ೩ ೧೫), ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ (೪. ೪. ೭), ದ್ವಾದಶಾಹವದುಭಯವಿಧಂ ಬಾದರಾಯಣೋಽತಃ (೪. ೪. ೧೨).

ಜೈಮಿನಿಯು ವ್ಯಾಸರ ಶಿಷ್ಯ ಬಾದರಾಯಣರು ತಮ್ಮ ಸೂತ್ರಗಳಲ್ಲಿ ಜೈಮಿನಿಯನ್ನೂ ಜೈಮಿನಿಯು ತನ್ನ ಸೂತ್ರಗಳಲ್ಲಿ ಬಾದರಾಯಣರನ್ನೂ ಉಲ್ಲೇಖಿಸಿರುವುದರಿಂದ ಬಾದರಾಯಣರು ವ್ಯಾಸರಾಗಲಾರರು—ಎಂಬ ಆಕ್ಷೇಪವಿದೆ, ಏಕೆಂದರೆ ಗುರುವು ಶಿಷ್ಯನ ಹೆಸರನ್ನು—ಪೂರ್ವಪಕ್ಷದ ಅಥವಾ ಉತ್ತರಪಕ್ಷದ ಸಮರ್ಥನೆಗಾಗಿ—ಉಲ್ಲೇಖಿಸುವುದು ವಾಡಿಕೆಯಲ್ಲಿಲ್ಲ ಆದರೆ ಅನೇಕ ಟೀಕಾಕಾರರು ಇದರಲ್ಲಿ ಯಾವ ಅಸಾಮಂಜಸ್ಯವನ್ನೂ ನೋಡಿಲ್ಲ ಶ್ರೀಶಂಕರಾಚಾರ್ಯರು ೩ ೩ ೩೨ನೆಯ ಸೂತ್ರದ ಮೇಲೆ ವ್ಯಾಖ್ಯಾನ-ಮಾಡುತ್ತ ಕಲಿದ್ವಾಪರಯುಗಗಳ ಸಂಧಿಕಾಲದಲ್ಲಿ ವಿಷ್ಣುವಿನ ಆಜ್ಞೆಯಂತೆ ಅಪಾಂತರ-ತಮಸ್ ಎಂಬ ವೇದಾಚಾರ್ಯನಾದ ಪುರಾತನಋಷಿಯು ಕೃಷ್ಣದ್ವೈಪಾಯನನಾಗಿ ಹುಟ್ಟಿದನು—ಎಂಬ ಸ್ಮೃತಿಯಿದೆ' ಎಂದು ಹೇಳಿರುತ್ತಾರೆ ಇಲ್ಲಿ ಬಾದರಾಯಣರ ಹೆಸರೇ ಇಲ್ಲ ಮತ್ತೆ ಶ್ರೀಶಂಕರರು ತಮ್ಮ ಭಾಷ್ಯದಲ್ಲಿ ವ್ಯಾಸರ ಹೆಸರನ್ನು ಉಲ್ಲೇಖಿಸಿದಾಗೆಲ್ಲ[1] ವ್ಯಾಸರು ಸೂತ್ರಕಾರರೆಂಬುದನ್ನು ಸೂಚಿಸದೆಯೇ ಉದಾಹರಿಸಿರುತ್ತಾರೆ. ಆದುದರಿಂದ ವಿಂಡಿಷ್‌ಮ್ಯಾನ್ (Windischmann) ಟೀಲಾಂಗ್ ಮೊದಲಾದವರು ಶ್ರೀಶಂಕರರ ದೃಷ್ಟಿಯದಲ್ಲಿ ವ್ಯಾಸ-ಬಾದರಾಯಣರು ವಿಭಿನ್ನವ್ಯಕ್ತಿಗಳೆಂದು ಅಭಿಪ್ರಾಯ-ಪಡುತ್ತಾರೆ

ಬ್ರಹ್ಮಸೂತ್ರಗಳು ಸಾಂಖ್ಯ-ವೈಶೇಷಿಕ-ಪಾಶುಪತ-ಪಾಂಚರಾತ್ರಗಳಲ್ಲದೆ ಜೈನರ ಮತ್ತು ಬೌದ್ಧರ ಅಭಿಪ್ರಾಯಗಳನ್ನೂ ಸೂಚಿಸಿವೆ ಆದುದರಿಂದ ಸೂತ್ರಗಳು ಮಹಾವೀರ ಮತ್ತು ಬುದ್ಧ ಇವರ ಕಾಲಕ್ಕಿಂತ ಹಿಂದೆ ಹೋಗಲಾರವೆಂದು ಹೇಳಬಹುದು ಮತ್ತೆ 'ಅಪಿ ಚ ಸ್ಮರ್ಯತೇ' (೨ ೩ ೪೫), 'ಸ್ಮರಂತಿ ಚ' (೪. ೧ ೧೦) ಎಂಬ ಸೂತ್ರಗಳು ಗೀತೆಯ ಶ್ಲೋಕಗಳನ್ನೇ (೧೫ ೭, ೬ ೧೧) ಸ್ಮರಿಸುತ್ತವೆಂದು ಮೂರು ಆಚಾರ್ಯರೂ ಹೇಳಿರುತ್ತಾರೆ ಕೀತ್ ಮಹಾಶಯನ ಪ್ರಕಾರ ಸೂತ್ರಕಾರರ ಕಾಲವು ಕ್ರಿ ಶ. ೨೦೦ಕ್ಕಿಂತ ಇತ್ತೀಚೆಗೆ ಆಗಲಾರದು ಭಾರತೀಯ ಪಂಡಿತರು ಕ್ರಿ ಪೂ ೫೦೦–೨೦೦ರಲ್ಲಿ ರಚಿಸಲ್ಪಟ್ಟಿರಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ ಮ್ಯಾಕ್ಸ್‌ಮುಲ್ಲರರ ಅಭಿಪ್ರಾಯದ ಪ್ರಕಾರ ಸೂತ್ರಗಳ ಮತ್ತು ಸೂತ್ರಕಾರರ ಕಾಲವು ಭಗವದ್ಗೀತೆಗಿಂತ, ಎಂದರೆ ಅದರ ಮೂಲವಾದ ಮಹಾಭಾರತಕ್ಕಿಂತ ಪ್ರಾಚೀನವ-ಗಿರಬೇಕು ; ಏಕೆಂದರೆ ಗೀತೆಯಲ್ಲಿ 'ಬ್ರಹ್ಮಸೂತ್ರ ಪದೈಶ್ಚೈವ' (೧೩–೧೪) ಎಂದು ಬ್ರಹ್ಮಸೂತ್ರಗಳ ಉಲ್ಲೇಖವಿದೆ ಹೀಗಿರುವಾಗ ಬಾದ-ರಾಯಣರು — ಕೃಷ್ಣದ್ವೈಪಾಯನವ್ಯಾಸರಾಗಿದ್ದರೆ—ಇನ್ನೊಬ್ಬ ವ್ಯಾಸರಾಗಿರಬಹುದೆಂದೂ ಅವರ ಕಾಲವು ಕ್ರಿ ಪೂ ೩೦೦ ಇರಬಹುದೆಂದೂ ನಿರ್ಣಯಿಸಿದರೆ ತೀವ್ರ ವಿರೋಧವಾಗಲಾರದು ಈ ಅಭಿನವ-ವ್ಯಾಸರು ಕೃಷ್ಣದ್ವೈಪಾಯನರ ಅಭಿಪ್ರಾಯಗಳನ್ನು ತಮ್ಮ ಸೂತ್ರಗಳಲ್ಲಿ ಅಳವಡಿಸಿಕೊಂಡಿರಬಹುದು ಅಥವಾ ಅವರ ಕೆಲವು ಪ್ರಾಚೀನ ಸೂತ್ರಗಳನ್ನೂ ತಮ್ಮ ಗ್ರಂಥದಲ್ಲಿ ಸೇರಿಸಿಕೊಂಡಿರಬಹುದು—ಎಂಬ ಅಭಿಪ್ರಾಯವನ್ನೂ ಮುಂದಿಡಬಹುದು

---

[1] ೨. ೧ ೧೨; ೨ ೩. ೪೭.

## ಸೂತ್ರಗಳು ಮತ್ತು ಉಪನಿಷತ್ತುಗಳು

ಪ್ರಸ್ಥಾನತ್ರಯವೆನಿಸಿರುವ ಉಪನಿಷತ್ತುಗಳು, ಭಗವದ್ಗೀತೆ ಮತ್ತು ವೇದಾಂತ-ಸೂತ್ರಗಳು—ಈ ಮೂರೂ ವೇದಾಂತದ ತಳಹದಿಯಾಗಿವೆ. ಆದುದರಿಂದ ವೇದಾಂತಕ್ಕೆ ಸೇರಿದ ದರ್ಶನಗಳೆಲ್ಲ ಉಪನಿಷತ್ತುಗಳನ್ನು ಅವಲಂಬಿಸಿವೆ. ವೇದಾಂತದ ಪ್ರಧಾನತತ್ತ್ವಗಳನ್ನು ನಿರ್ಣಯಿಸುವಾಗೆಲ್ಲ ಪುನಃ ಪುನಃ ಉಪನಿಷತ್ತುಗಳಿಗೆ ಹಿಂದಿರುಗಬೇಕಾಗುತ್ತದೆ. ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ, ಇತರೇತರ-ವಿರುದ್ಧವಾಗಿ ಕಂಡುಬರುವ ತತ್ತ್ವಗಳನ್ನೆಲ್ಲ ಸಮನ್ವಯಗೊಳಿಸುವುದು ಬಾದರಾಯಣರ ಒಂದು ಮುಖ್ಯವಾದ ಉದ್ದೇಶವಾಗಿರುತ್ತದೆ. ಹೀಗೆ ಮಾಡುವಾಗ ಅವರು ಹಿಂದಿನ ಮತ್ತು ಪ್ರಾಚೀನವಾದ ಉಪನಿಷದ್ವಾಕ್ಯಗಳನ್ನು ಗ್ರಹಿಸಿರುತ್ತಾರೆ. ಆದರೆ ಸೂತ್ರಗಳು ಹ್ರಸ್ವವಾಗಿರುವುದರಿಂದ ಅವರು ಯಾವ ಉಪನಿಷತ್ತುಗಳನ್ನು ಪ್ರಮಾಣವೆಂದು ಉದಾಹರಿಸಿರುತ್ತಾರೆ ?—ಎಂಬ ಪ್ರಶ್ನೆಗೆ ತೃಪ್ತಿಕರವಾದ ಉತ್ತರವನ್ನು ಕೊಡಲು ಸ್ವಲ್ಪ ಕಷ್ಟವೇ. ಆದುದರಿಂದ ಪ್ರಾಚೀನವಾದ ಭಾಷ್ಯಗಳೇ ನಮಗೆ ಈ ವಿಷಯದಲ್ಲಿ ಪ್ರಮಾಣವಾಗಿವೆ. ಆದರೆ ಭಾಷ್ಯಕಾರರು ಸಂಪ್ರದಾಯದ ಪ್ರಕಾರ ವೇದಾಂತವಾಕ್ಯಗಳನ್ನು ಉದಾಹರಿಸಿರುವರೊ ? ಅಥವಾ ಇಲ್ಲವೊ ?—ಎಂಬ ಸಂಶಯವು ಬಂದರೆ ಬೇರೆ ಗತಿಯೇ ಇಲ್ಲ.

ಸೂತ್ರಕಾರರು ತಮ್ಮ ಮನಸ್ಸಿನಲ್ಲಿ ಯಾವ ವಾಕ್ಯಗಳನ್ನು ಇಟ್ಟುಕೊಂಡಿದ್ದರೆಂಬುದನ್ನು ಸೂತ್ರಗಳ ಮೊದಲನೆಯ ಅಧ್ಯಾಯದಲ್ಲಿ ಹೆಚ್ಚು ಕಡಮೆ ಹೇಳಬಹುದು—ಎಂದು ಡಾಯ್ಸನ್ ಮಹಾಶಯನು ಅಭಿಪ್ರಾಯಪಟ್ಟಿರುತ್ತಾನೆ. ಮೊದಲನೆಯ ೨೮ ಅಧಿಕರಣಗಳಲ್ಲಿ ಉಪನಿಷದ್ವಾಕ್ಯಗಳ ಪ್ರಕಾರ ಬ್ರಹ್ಮದ ವಿಷಯದಲ್ಲಿ ಉಪದೇಶವನ್ನು ಮಾಡಿದೆ. ಈ ಅಧಿಕರಣಗಳಲ್ಲಿ ಉದಾಹರಿಸಿರುವ ೨೮ ಪ್ರಧಾನ ವಾಕ್ಯಗಳಲ್ಲಿ ೧೨ ಛಾಂದೋಗ್ಯದಿಂದಲೂ, ೪ ಬೃಹದಾರಣ್ಯಕದಿಂದಲೂ, ೪ ಕಠದಿಂದಲೂ, ಎರಡೆರಡು ತೈತ್ತಿರೀಯ ಮತ್ತು ಕೌಷೀತಕಿ—ಇವುಗಳಿಂದಲೂ, ೩ ಮುಂಡಕದಿಂದಲೂ, ೧ ಪ್ರಶ್ನದಿಂದಲೂ, ಬಂದಿವೆ. ಸೂತ್ರಗಳು ಉದಾಹರಿಸಿರುವ ವಾಕ್ಯಗಳೆಲ್ಲ ಹೆಚ್ಚು ಕಡಮೆ ತಮ್ಮ ಮೂಲ-ದಲ್ಲಿರುವ ಕ್ರಮವನ್ನೇ ಅನುಸರಿಸಿವೆಯೆಂದು ಹೇಳಬಹುದು.

ಹೆಚ್ಚು ವಾಕ್ಯಗಳನ್ನು ಛಾಂದೋಗ್ಯದಿಂದ ಆರಿಸಿರುವುದು ಗಮನಾರ್ಹವಾಗಿದೆ. ಇದರಿಂದ ಬಾದರಾಯಣರ ದರ್ಶನಕ್ಕೂ ಛಾಂದೋಗ್ಯದಲ್ಲಿರುವ ವಿಷಯಗಳಿಗೂ ಇರುವ ಸಾಮ್ಯವು ತಿಳಿದುಬರುತ್ತದೆ. ಈ ಉಪನಿಷತ್ತುಗಳನ್ನಲ್ಲದೆ ಶ್ವೇತಾಶ್ವತರ (೧. ೪. ೮—೧೦), ಐತರೇಯ (೩. ೩. ೧೬—೧೮) ಮತ್ತು ಜಾಬಾಲ (೧. ೨. ೩೨)—ಈ ಉಪನಿಷತ್ತುಗಳನ್ನು ಬಾದರಾಯಣರು ಉಪಯೋಗಿಸಿಕೊಂಡಿರಬಹುದೆಂದು ಹೇಳಬಹುದು.

## ಸೂತ್ರಗಳಲ್ಲಿ ಪೂರ್ವಾಚಾರ್ಯರು

ಉಪನಿಷದ್ವಾಕ್ಯಗಳನ್ನು ಸಮನ್ವಯಗೊಳಿಸುವಾಗ ಬಾದರಾಯಣರು ಅನೇಕ ಆಚಾರ್ಯರ ಅಭಿಪ್ರಾಯಗಳನ್ನೆಲ್ಲ ಪರಿಗಣಿಸಿರುತ್ತಾರೆ. ಇವರು ಉದ್ಧಾಹರಿಸಿರುವ

ಆಚಾರ್ಯರು[1] ಇವರಿಗಿಂತ ಹಿಂದಿನವರೊ ಅಥವಾ ಸಮಕಾಲೀನರೊ ಎಂಬುದು ತಿಳಿದು ಬರುವುದಿಲ್ಲ. ಈ ಹೆಸರುಗಳೆಲ್ಲ ಶ್ರೌತಸೂತ್ರಗಳಲ್ಲಿಯೂ ಗೃಹ್ಯಸೂತ್ರಗಳಲ್ಲಿಯೂ ಬಹಳ ಹಿಂದೆಯೇ ಬಂದಿವೆ. ಮೋಕ್ಷ, ಸಂನ್ಯಾಸ, ಜೀವ-ಬ್ರಹ್ಮರ ಸಂಬಂಧ ಇವೇ ಮೊದಲಾದ ಅನೇಕ ವಿಷಯಗಳಲ್ಲಿ ಈ ಆಚಾರ್ಯರೆಲ್ಲ ಭಿನ್ನಾಭಿಪ್ರಾಯವನ್ನು ಹೊಂದಿದಂತೆ ಕಂಡು ಬರುತ್ತದೆ. ಜೀವ-ಬ್ರಹ್ಮರ ಸಂಬಂಧದ ವಿಷಯದಲ್ಲಿ ಆಶ್ಮರಥ್ಯನು ಭೇದಾಭೇದವನ್ನು ಒಪ್ಪಿಕೊಂಡಿರುತ್ತಾನೆ.[2] ಮೋಕ್ಷವಾಗುವವರೆಗೂ ಜೀವನು ಬ್ರಹ್ಮಕ್ಕಿಂತ ಬೇರೆಯಾಗಿಯೇ ಇರುತ್ತಾನೆಂದು ಔಡುಲೋಮಿಯು ಅಭಿಪ್ರಾಯಪಡುತ್ತಾನೆ.[3] ಕಾಶಕೃತ್ಸ್ನನು ಜೀವ-ಬ್ರಹ್ಮರಿಗೆ ಅಭೇದವನ್ನೇ ಒಪ್ಪಿಕೊಂಡಿರುತ್ತಾನೆ.[4] ಹೀಗೆ ಈ ಮುಖ್ಯರಾದ ಆಚಾರ್ಯರು ತತ್ತ್ವದ ವಿಷಯದಲ್ಲಿ ಭಿನ್ನಾಭಿಪ್ರಾಯಗಳನ್ನು ತಳೆದಿದ್ದರೂ ಬಾದರಾಯಣರ ಮತವು ಅವುಗಳನ್ನೆಲ್ಲ ನಿರಾಕರಿಸಿ ಉಪನಿಷತ್ತುಗಳ ಪ್ರಮಾಣೀಕೃತವಾದ ಅಭಿಪ್ರಾಯವನ್ನು ಕೊಟ್ಟಿರುವುದು ಅವರ ಮಹತ್ವವಾಗಿರುತ್ತದೆ.

## ಸೂತ್ರಗಳಲ್ಲಿರುವ ವಿಷಯಗಳು

ಬ್ರಹ್ಮಸೂತ್ರಗಳಿಗೆ ನಾಲ್ಕು ಅಧ್ಯಾಯಗಳಿದ್ದು ಒಂದೊಂದು ಅಧ್ಯಾಯಕ್ಕೂ ನಾಲ್ಕು ನಾಲ್ಕು ಪಾದಗಳಿವೆ. ಒಂದೊಂದು ಪಾದಕ್ಕೂ ಅಧಿಕರಣಗಳಿದ್ದು ಅಧಿಕರಣಗಳು ಸೂತ್ರಗಳನ್ನು ಒಳಕೊಂಡಿವೆ. ಅಧಿಕರಣದಲ್ಲಿ ವಿಷಯಕ್ಕನುಗುಣವಾಗಿ ಸೂತ್ರಗಳ ಸಂಖ್ಯೆಯಿದೆಯೆಂದು ಹೇಳಬಹುದು. ಭಾಷ್ಯಕಾರರ ಅಭಿಪ್ರಾಯದಲ್ಲಿ ಪ್ರತಿಯೊಂದು ಅಧಿಕರಣವೂ ಒಂದೊಂದು ವಿಷಯವನ್ನು ಒಳಕೊಂಡು ಅದಕ್ಕೆ ವಿರೋಧವಾಗಿರುವುದನ್ನು ನಿರಾಕರಿಸುತ್ತದೆ. ಪೂರ್ವಮೀಮಾಂಸೆಯ ಪ್ರಕಾರ ಅಧಿಕರಣದಲ್ಲಿ ಐದು ಅಂಶಗಳಿರಬೇಕು: (೧) ವಿಷಯ; (೨) ವಿಶಯ, (ಎಂದರೆ ಸಂಶಯ), (೩) ಪೂರ್ವಪಕ್ಷ (ಎಂದರೆ ವಿರೋಧಿಯ ಮತ), (೪) ಸಿದ್ಧಾಂತ ಮತ್ತು (೫) ಸಂಗತಿ (ಎಂದರೆ ಅಧಿಕರಣಗಳಿಗಿರುವ ಸಂಬಂಧ). ಹೀಗೆ ಭಾಷ್ಯಗಳು ಅಧಿಕರಣಗಳಲ್ಲಿ ಸಂಶಯ, ಪೂರ್ವಪಕ್ಷ, ಸಿದ್ಧಾಂತ—ಇವೇ ಮೊದಲಾದುವನ್ನು ತಿಳಿಸುತ್ತವೆ. ಭಾಷ್ಯಕಾರರಿಗೆ ಅನೇಕ ವಿಷಯಗಳಲ್ಲಿ ಒಮ್ಮತವಿಲ್ಲದಿದ್ದರೂ ಅಧಿಕರಣಗಳ ವಿಭಾಗದಲ್ಲಿ, ಸೂತ್ರದ ಅರ್ಥದಲ್ಲಿ ಮತ್ತು ವಿಷಯವಾಕ್ಯಗಳ ಆಯ್ಕೆಯಲ್ಲಿ ಹೆಚ್ಚು ಭೇದವಿರುವುದಿಲ್ಲ. ಇದನ್ನು ವಿಶೇಷವಾಗಿ ಶ್ರೀಶಂಕರ–ರಾಮಾನುಜರಲ್ಲಿ ನೋಡಬಹುದು. ಪ್ರಾಚೀನಭಾಷ್ಯಕಾರರು ಒಮ್ಮತವನ್ನು

---

1 ಆತ್ರೇಯ, ೩. ೪. ೪೪; ಆಶ್ಮರಥ್ಯ, ೧. ೨. ೨೯, ೧. ೪. ೨೦; ಔಡುಲೋಮಿ, ೧. ೪. ೨೧, ೩. ೪. ೪೫, ೪. ೪. ೬; ಕಾರ್ಷ್ಣಾಜಿನಿ, ೩. ೧. ೯; ಕಾಶಕೃತ್ಸ್ನ, ೧. ೪. ೨೨, ಜೈಮಿನಿ, ೧. ೨. ೨೮, ೩೧ ಮತ್ತು ೧. ೩. ೩೧; ಬಾದರಿ ೧. ೨. ೩೦.

2 ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ (೧. ೪. ೨೦).

3 ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ (೧. ೪. ೨೧).

4 ಅವಸ್ಥಿತೇರಿತಿ ಕಾಶಕೃತ್ಸ್ನಃ (೧. ೪. ೨೨).

ಹೊಂದಿರುವ ಸ್ಥಾನಗಳಲ್ಲೆಲ್ಲ ಸಂಪ್ರದಾಯವೇ ಬಂದಿರಬೇಕೆಂಬ ಅಭಿಪ್ರಾಯವನ್ನು ಸ್ವಲ್ಪ ಧೈರ್ಯದಿಂದ ಹೇಳಬಹುದು

ಮೊದಲನೆಯ ಅಧ್ಯಾಯಕ್ಕೆ **ಸಮನ್ವಯಾಧ್ಯಾಯವೆಂಬ** ಹೆಸರಿದೆ ಇತರೇತರ ವಿರುದ್ಧವಾಗಿ ಕಂಡುಬರುವ ಶ್ರುತಿವಾಕ್ಯಗಳಿಗೆಲ್ಲ ಸುಸಂಗತವಾದ ತಾತ್ಪರ್ಯವನ್ನು ಕೊಡುವುದೇ ಈ ಅಧ್ಯಾಯದ ಉದ್ದೇಶವಾಗಿರುತ್ತದೆ ಎರಡನೆಯದಕ್ಕೆ **ಅವಿರೋಧಾಧ್ಯಾಯವೆಂದು ಹೆಸರು ;** ಮೊದಲನೆಯ ಅಧ್ಯಾಯದಲ್ಲಿ ಪ್ರತಿಪಾದಿಸಿದ ವಿಷಯಗಳು ಇತರ ಪಕ್ಷಗಳಿಗೆ ವಿರುದ್ಧವಲ್ಲವೆಂದು ಇಲ್ಲಿ ತಿಳಿಸಿದೆ **ಸಾಧನಾಧ್ಯಾಯವೆನಿಸಿದ** ಮೂರನೆಯದು ಬ್ರಹ್ಮದರ್ಶನಕ್ಕೆ ಆವಶ್ಯಕವಾದ ಸಾಧನೆಗಳನ್ನು ಪ್ರತಿಪಾದಿಸುತ್ತದೆ **ಫಲಾಧ್ಯಾಯವೆನಿಸಿದ** ನಾಲ್ಕನೆಯದು ಬ್ರಹ್ಮವಿದ್ಯೆಯ ಫಲವನ್ನು ಕುರಿತು ವಿಚಾರ ಮಾಡುತ್ತದೆ

ಭಾಷ್ಯಗಳ ಕೆಲವೆಡೆಗಳಲ್ಲಿ ಸೂತ್ರಗಳ ಪಾಠಗಳು ಭಿನ್ನವಾಗಿರುವುದನ್ನು ನೋಡಬಹುದು ಕೆಲವು ಭಾಷ್ಯಕಾರರು ಒಂದು ಸೂತ್ರವನ್ನು ಎರಡಾಗಿಯೊ ಅಥವಾ ಎರಡು ಸೂತ್ರಗಳನ್ನು ಒಂದಾಗಿಯೊ ಪಠಿಸುತ್ತಾರೆ ಹೀಗೆ ಮಾಡಿದಾಗ ಭಾಷ್ಯಗಳ ತಾತ್ಪರ್ಯವು ಬೇರೆಯೇ ಆಗುವ ಸಂಭವವಿದೆ 'ಮೊದಲನೆಯದು ಸಿದ್ಧಾಂತವೆಂದೂ ಎರಡನೆಯದು ಪೂರ್ವಪಕ್ಷವೆಂದೂ ನಾವು ವ್ಯಾಖ್ಯಾನಮಾಡಿರುತ್ತೇವೆ'[1] ಎಂದು ಶ್ರೀಶಂಕರರೇ ಒಂದು ಕಡೆ ಹೇಳಿರುತ್ತಾರೆ ಹೀಗೆ ಸೂತ್ರಗಳಲ್ಲಿ ಬೇರೆ ಬೇರೆ ಅರ್ಥಗಳೂ ದ್ಯೋತಕವಾಗಿರುವುದರಿಂದ ಪರಮತ-ವ್ಯಾಖ್ಯಾನಗಳಿಗೆ ಗೌರವವನ್ನು ತೋರಿಸಿ ಸ್ವಮತವನ್ನು ಅನುಸರಿಸಿದರೆ ಯಾವ ದೋಷವೂ ಇರುವುದಿಲ್ಲ

## ಸೂತ್ರಗಳಲ್ಲಿ ಕಂಡುಬರುವ ದರ್ಶನ

ಉಪನಿಷತ್ತುಗಳ ತತ್ತ್ವಗಳನ್ನು ವಿಶದಪಡಿಸಲು ಬಂದಿರುವ ಬ್ರಹ್ಮಸೂತ್ರಗಳು ಉಪನಿಷತ್ತುಗಳಿಗಿಂತಲೂ ರಹಸ್ಯತರವಾಗಿವೆಯೆಂದು ಹೇಳಬಹುದು ಆದುದರಿಂದ ಅನೇಕ ಮುಖ್ಯಾಂಶಗಳಲ್ಲಿ ಸಂದಿಗ್ಧತೆಯು ಕಂಡುಬರುವುದು ಸಹಜವಾಗಿದೆ ಆದರೂ ಅಸಂದಿಗ್ಧವಾಗಿ ಕಂಡುಬರುವ ಕೆಲವು ಸೂತ್ರಗಳ ಆಧಾರದಿಂದ ಬಾದರಾಯಣರ ದರ್ಶನವನ್ನು ಅವಲೋಕಿಸಲು ಈಗ ಪ್ರಯತ್ನಪಡಬಹುದು

**೧. ಪ್ರಮಾಣಗಳು :** ಬಾದರಾಯಣರಿಗೆ ವೇದಗಳ ಶಬ್ದಗಳು ನಿತ್ಯವಾಗಿವೆ[2] ಬ್ರಹ್ಮದ ಸ್ವರೂಪವನ್ನು ತಿಳಿದುಕೊಳ್ಳಲು ಶಾಸ್ತ್ರವೇ ಪ್ರಮಾಣವು[3] ತರ್ಕವೂ ಅಪ್ರತಿಷ್ಠಿತವಾಗಿರುವುದರಿಂದ ಆಗಮ-ಗಮ್ಯವಾದ ವಿಷಯದಲ್ಲಿ ಕೇವಲ ತರ್ಕವನ್ನು ಆಶ್ರಯಿಸಕೂಡದು[4] ಶ್ರುತಿಯನ್ನಲ್ಲದೆ ಸೂತ್ರಕಾರರು ಪ್ರತ್ಯಕ್ಷ, ಅನುಮಾನ—ಇವುಗಳನ್ನೂ ಪ್ರಮಾಣವಾಗಿ ಒಪ್ಪಿಕೊಂಡಿರುತ್ತಾರೆ[5] ಪ್ರತ್ಯಕ್ಷವೆಂದರೆ ಶ್ರುತಿ ಏಕೆಂದರೆ ಇದರ

---

1 ಆದ್ಯ ಏವ ಸಿದ್ಧಾಂತೋ ವ್ಯಾಖ್ಯಾತೋ ದ್ವಿತೀಯಃ ಪೂರ್ವಪಕ್ಷಃ (೪. ೩. ೧೪).

2 ೧. ೩. ೨೯ 3 ೧. ೧ ೩. 4 ೨. ೧. ೧೧ 5 ೧. ೩ ೨೮, ೩. ೨. ೨೪; ೪. ೪. ೨೦.

ಪ್ರಾಮಾಣ್ಯಕ್ಕೆ ಬೇರೆ ಪ್ರಮಾಣವು ಬೇಕಾಗುವುದಿಲ್ಲ. ಶ್ರುತಿಯೆಂದರೆ ಉಪನಿಷದ್ವಾಕ್ಯಗಳು. ಅನುಮಾನವೆಂದರೆ ಸ್ಮೃತಿ; ಏಕೆಂದರೆ ಇದರ ಪ್ರಾಮಾಣ್ಯಕ್ಕೆ ಶ್ರುತಿಯು ಬೇಕಾಗುತ್ತದೆ. ಸ್ಮೃತಿಯೆಂದರೆ ಮನುಸ್ಮೃತಿ, ಭಗವದ್ಗೀತೆ ಮತ್ತು ಮಹಾಭಾರತ. ಇವುಗಳನ್ನಲ್ಲದೆ ಸೂತ್ರಕಾರರು ಬೇರೆ ಯಾವ ಪ್ರಮಾಣವನ್ನೂ ಒಪ್ಪಿಕೊಂಡಂತೆ ಕಂಡುಬರುವುದಿಲ್ಲ.

**೨. ಪರಬ್ರಹ್ಮ:** ಮೊದಲನೆಯ ಮೂರು ಸೂತ್ರಗಳಲ್ಲಿ ಉಪನಿಷತ್ತುಗಳು ವಿವರಿಸಿರುವ ಪರಬ್ರಹ್ಮನ ಲಕ್ಷಣಗಳನ್ನು ಚರ್ಚಿಸಿದೆ. ಜಗತ್ತಿನ ಉದ್ಭವ-ಸ್ಥಿತಿ-ಲಯಗಳಿಗೆ ಬ್ರಹ್ಮನೇ ಕಾರಣನು.[1] ಅವನೇ ನಿಮಿತ್ತಕಾರಣನೂ ಉಪಾದಾನಕಾರಣನೂ ಆಗಿದ್ದಾನೆ. ಸೃಷ್ಟಿಮಾಡಲು ಬ್ರಹ್ಮನಿಗೆ ಬಾಹ್ಯಸಾಧನಗಳು ಬೇಕಾಗಿಲ್ಲ; ಹಾಲಿನಂತೆ ಪರಿಣಾಮವನ್ನು ಹೊಂದಲು ಶಕ್ತನಾಗಿದ್ದಾನೆ.[2] ಸುಷುಪ್ತಿಯಲ್ಲಿ ಜೀವನು ಸದ್ವಸ್ತುವಾದ ಬ್ರಹ್ಮನಲ್ಲಿ ಲಯವಾಗುತ್ತಾನೆ; ಇದರಿಂದ ಬ್ರಹ್ಮನ ಅಸ್ತಿತ್ವವು ಸಿದ್ಧಿಸುತ್ತದೆ.[3] ಬ್ರಹ್ಮನು ಅಚೇತನವಾದ ಪ್ರಧಾನವೂ ಅಲ್ಲ, ಚೇತನವಾದ ಜೀವನೂ ಅಲ್ಲ. ಸೃಷ್ಟಿಗೆ ಆವಶ್ಯಕವಾದ ಧರ್ಮಗಳೆಲ್ಲವೂ ಅವನಲ್ಲಿ ಹೊಂದುತ್ತವೆ.[4] ಆದಿತ್ಯನಲ್ಲಿಯೂ ಚಕ್ಷುಸ್ಸಿನಲ್ಲಿಯೂ ಅಂತರ್ಯಾಮಿಯಾಗಿ ಇರುವವನು ಪರಮೇಶ್ವರನೇ.[5] ಮನೋಮಯತ್ವಾದಿ-ಧರ್ಮಗಳೂ, ಸತ್ಯಸಂಕಲ್ಪತ್ವಾದಿ-ಗುಣಗಳೂ ಪರಬ್ರಹ್ಮನಲ್ಲಿಯೇ ಉಪಪನ್ನವಾಗುತ್ತವೆ.[6] ಪರಬ್ರಹ್ಮನು ಸರ್ವಶಕ್ತಿಗಳಿಂದ ಕೂಡಿರುವನೆಂಬುದು ಶ್ರುತಿಗಳಿಂದಲೇ ತಿಳಿದುಬರುತ್ತದೆ.[7] ಅವನು ಜ್ಯೋತಿರ್ಮಯನು. ಆಕಾಶ-ಪ್ರಾಣಗಳೆಲ್ಲ ಬ್ರಹ್ಮನೇ.[8] ಅವನೇ ಪುರುಷಶರೀರದಲ್ಲಿರುವ ಜ್ಯೋತಿಯು.[9] ಅವನು ಸರ್ವಗತನಾಗಿದ್ದರೂ ಅವನನ್ನು ಹೃದಯದಲ್ಲಿ ಧ್ಯಾನಿಸಲು ಸಾಧ್ಯವಾಗುತ್ತದೆ.[10] ಪರಬ್ರಹ್ಮನಲ್ಲಿ ನಿಷ್ಠೆಯುಳ್ಳವನಿಗೆ ಮೋಕ್ಷವಾಗುತ್ತದೆ.[11]

ಪರಬ್ರಹ್ಮನು ಉತ್ಪತ್ತಿರಹಿತನಾಗಿದ್ದರೂ[12] ಜಗತ್ಕಾರಣನಾಗಿರುತ್ತಾನೆ.[13] ಅವನೇ ಆಕಾಶಾದಿರೂಪದಲ್ಲಿದ್ದುಕೊಂಡು ಅಭಿಧ್ಯಾನಿಸಿ ಆಯಾ ಕಾರ್ಯವನ್ನು ಸೃಷ್ಟಿಸುತ್ತಾನೆ.[14] ಅವನೇ ಉಪಾದಾನ-ನಿಮಿತ್ತಕಾರಣಗಳಾಗಿರುತ್ತಾನೆಂದು ಹಿಂದೆಯೇ ತಿಳಿಸಿದೆ.[15] ಕಾರ್ಯವು ಉತ್ಪತ್ತಿಗೆ ಮೊದಲು ತನ್ನ ಕಾರಣದಲ್ಲಿರುತ್ತದೆ.[16] ಕಾರ್ಯ-ಕಾರಣಗಳ ಅಭೇದವನ್ನು ಎರಡು ದೃಷ್ಟಾಂತಗಳಿಂದ ಹೇಳಿದೆ: ಬಟ್ಟೆಯನ್ನು ಮಡಿಸಿರುವಾಗ ಅದರ ವಿವರವು ತಿಳಿದುಬರುವುದಿಲ್ಲ; ಆದರೆ ಅದನ್ನು ಬಿಚ್ಚಿದಾಗ ಉದ್ದ, ಅಗಲ ಮೊದಲಾದ ವಿವರಗಳು ತಿಳಿದುಬರುತ್ತವೆ. ಕಾರ್ಯ-ಕಾರಣಗಳು ಒಂದೇ ಆಗಿದ್ದರೂ ಅವುಗಳ ಗುಣಗಳು ಬೇರೆಯಾಗಿರುತ್ತವೆ.[17] ಪ್ರಾಣಗಳ ಗತಿಯನ್ನು ತಡೆದಾಗ ಅವು ತಮ್ಮ ಕಾರಣ

---

[1] ೧.೧.೨. [2] ೨.೧.೨೪-೨೭. [3] ೧.೧.೯. [4] ೨.೧.೩೭. [5] ೧.೧.೨೦. [6] ೧.೨.೧.೨. [7] ೨.೧.೩೦. [8] ೧.೧.೨೨-೨೩. [9] ೧.೧.೨೪. [10] ೧.೨.೭. [11] ೧.೧.೭. [12] ೨.೩.೯. [13] ೧.೧.೫; ೨.೧.೨೨. [14] ೨.೩.೧೩. [15] ೧.೪.೨೩.೨೭. [16] ೨.೧.೬. [17] ೨.೧.೧೯.

ರೂಪದಲ್ಲಿದ್ದುಕೊಂಡು ಶರೀರವು ಒದುಕಿರುವಂತೆ ಮಾಡುತ್ತವೆ, ಆದರೆ ಆ ಪ್ರಾಣಗಳೇ ತಮ್ಮ ವ್ಯಾಪಾರದಲ್ಲಿ ತೊಡಗಿರುವಾಗ ಇತರ ಕಾರ್ಯಗಳು ನಡೆಯುತ್ತವೆ ಕಾರಣಾವಸ್ಥೆಯಲ್ಲಿ ವ್ಯಕ್ತವಾದ ವ್ಯಾಪಾರವು ಕಾರ್ಯಾವಸ್ಥೆಯಲ್ಲಿ ವ್ಯಕ್ತವಾಗುತ್ತದೆ ಹೀಗೆಯೇ ಬ್ರಹ್ಮದ ಕಾರ್ಯವಾದ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ[1] ಕಾರಣನಾದ ಪರಬ್ರಹ್ಮನೂ ಕಾರ್ಯವಾದ ಜಗತ್ತೂ ಅಭಿನ್ನವು[2] ಮಣ್ಣು ನ್ನು ಗಡಿಗೆಯ ಆಕಾರಕ್ಕೆ ತಂದಾಗಲೂ ಮಣ್ಣಾಗಿಯೇ ಇರುತ್ತದೆ ಕಾರ್ಯ-ಕಾರಣಗಳಲ್ಲಿ ಭೇದವು ಕಂಡುಬರುವುದು ಅವಸ್ಥೆಯಿಂದ ಸ್ವಪ್ನದ ಹಾಗೆ ಜಗತ್ತು ಮಾಯಾಮಯವಲ್ಲ[3] ಬ್ರಹ್ಮದ ಸೃಷ್ಟಿಯು ಲೀಲೆಯ ಹಾಗೆ.[4] ಅವನಿಗೆ ಸ್ವಭಾವದಿಂದಲೇ ಲೀಲಾರೂಪವಾದ ಪ್ರವೃತ್ತಿಯಾಗಬಹುದು ಆದರೆ ಜಗತ್ತಿನಲ್ಲಿರುವ ವೈಷಮ್ಯವನ್ನು ತನ್ನ ಸುಖಕ್ಕಾಗಿ ಕಲ್ಪಿಸಿಕೊಂಡಿರುವನೆಂದು ತಿಳಿಯಕೂಡದು, ಏಕೆಂದರೆ ಅವನಿಗೆ ವೈಷಮ್ಯ-ಕ್ರೂರತ್ವಗಳಿಲ್ಲ[5] ಸೃಷ್ಟಿಸಬೇಕಾಗಿರುವ ಪ್ರಾಣಿಗಳ ಧರ್ಮಾಧರ್ಮಗಳ ಅಪೇಕ್ಷೆಯಿಂದ ಸೃಷ್ಟಿಯುಂಟಾಗಿದೆ ಮನುಷ್ಯನು ಪುಣ್ಯಕರ್ಮದಿಂದ ಪುಣ್ಯವಂತನಾಗುತ್ತಾನೆ ಪಾಪಕರ್ಮದಿಂದ ಪಾಪಿಯಾಗುತ್ತಾನೆ ಎಂದು ಶ್ರುತಿಯು (ಬೃ ಉ ೩ ೨ ೧೩) ಹೇಳುತ್ತದೆ

**೩. ಜೀವ:** ಜೀವಾತ್ಮನು 'ಜ್ಞ' ಎಂದು ಬಾದರಾಯಣರು ಹೇಳುತ್ತಾರೆ[6] ಶ್ರೀಶಂಕರಾಚಾರ್ಯರು ಜ್ಞ-ಶಬ್ದಕ್ಕೆ 'ನಿತ್ಯಚೈತನ್ಯಸ್ವರೂಪನು' ಎಂಬ ಅರ್ಥವನ್ನು ಕೊಟ್ಟಿರುತ್ತಾರೆ ಶ್ರೀರಾಮಾನುಜಾಚಾರ್ಯರು 'ಜ್ಞಾತೃ' ಎಂಬ ಅರ್ಥವನ್ನು ಕೊಟ್ಟಿರುತ್ತಾರೆ ಜೀವಾತ್ಮನು ಕರ್ತೃವೂ ಆಗಿರುತ್ತಾನೆ[7] ಇವನಿಗೆ ಜನನ-ಮರಣಗಳಿಲ್ಲ; ಜನನ-ಮರಣಗಳು ಶರೀರಕ್ಕೆ ಉಂಟಾಗುತ್ತವೆ[8] ಇವನು ನಿತ್ಯನು[9] ಮತ್ತು ಅಣುಪರಿಮಾಣವುಳ್ಳವನು[10] ಜೀವನು ಬ್ರಹ್ಮನ ಅಂಶವಾಗಿರುತ್ತಾನೆ[11] ಆಶ್ಮರಥ್ಯ, ಔಡುಲೋಮಿ ಕಾಶಕೃತ್ಸ್ನ—ಇವರು ಜೀವ-ಬ್ರಹ್ಮರ ಸಂಬಂಧದ ವಿಷಯದಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳನ್ನು ಕೊಟ್ಟಿರುತ್ತಾರೆ[12] ಬಾದರಾಯಣರು ತಮ್ಮ ಅಭಿಪ್ರಾಯವನ್ನು ಹೇಳದಿದ್ದರೂ ಶಂಕರ-ರಾಮಾನುಜರು ಕಾಶಕೃತ್ಸ್ನನ ಅಭಿಪ್ರಾಯವನ್ನು ತಾವು ತಿಳಿದಂತೆ ಅಂಗೀಕರಿಸಿರುತ್ತಾರೆ ಕಾಶಕೃತ್ಸ್ನನ ಅಭಿಪ್ರಾಯದ ಪ್ರಕಾರ ಶ್ರೀಶಂಕರಾಚಾರ್ಯರು ಜೀವ-ಬ್ರಹ್ಮರ ಅಭೇದವನ್ನು ಹೇಳಿದರೆ ಪರಮಾತ್ಮನು ಜೀವನ ಅಂತರಾತ್ಮನೆಂದು ಶ್ರೀರಾಮಾನುಜಾಚಾರ್ಯರು ಹೇಳುತ್ತಾರೆ. ಶ್ರುತಿಗಳಲ್ಲಿ ಭೇದ, ಅಭೇದ ಎಂಬ ವ್ಯಪದೇಶವಿರುವುದರಿಂದ ಜೀವ-ಬ್ರಹ್ಮರ ಸಂಬಂಧವೂ ಹಾವು ಮತ್ತು ಅದರ ಕುಂಡಲ ಅಥವಾ ಪ್ರಕಾಶ ಮತ್ತು ಅದರ ಆಶ್ರಯ—ಇವುಗಳಂತೆ ಆಗಬಹುದು[13] ಜೀವ, ಪರಮಾತ್ಮ—ಇವರಿಗಿರುವ ಭೇದವು ನಿಜವೆಂದಾಗಲಿ ಮಿಥ್ಯೆಯೆಂದಾಗಲಿ ಸೂತ್ರಗಳಿಂದ ಖಂಡಿತವಾಗಿ ಹೇಳಲು ಸಾಧ್ಯವಿಲ್ಲ

---

[1] ೨ ೧. ೨೦ [2] ೨ ೧ ೧೪. [3] ೩ ೨. ೩ [4] ೨. ೧ ೩೩ [5] ೨. ೧. ೩೪ [6] ೨. ೩. ೧೮. [7] ೨ ೩ ೩೩. ೩೯. [8] ೨ ೩ ೧೬. [9] ೨. ೩ ೧೭ [10] ೨. ೩. ೧೯. [11] ೨. ೩. ೪೩. [12] ೧. ೪. ೨೦ ೨೨, [13] ೩. ೨ ೨೭. ೨೮,

ಉಪಾಸನಾರೂಪವಾದ ಜ್ಞಾನದಿಂದ ಜೀವನಿಗೆ ಪುರುಷಾರ್ಥವು ಸಿದ್ಧಿಸುತ್ತದೆ [1] ಕರ್ಮಾನುಷ್ಠಾನ ಮತ್ತು ಕರ್ಮತ್ಯಾಗ— ಇವೆರಡಕ್ಕೂ ಸಮಾನವಾದ ಬೆಂಬಲವು ಶ್ರುತಿಯಿಂದ ದೊರಕುತ್ತದೆ [2] ಮುಮುಕ್ಷುವಿಗೂ ಆಶ್ರಮಕರ್ಮವಿದೆ,[3] ಏಕೆಂದರೆ ಕರ್ಮಗಳು ಉಪಾಸನೆಗೆ ಸಹಕಾರಿಯಾಗಬಹುದು.[4] ಜೀವನಿಗೆ ಉಪಾಸನೆಯ ಫಲವು ಈಶ್ವರನಿಂದಲೇ ಉಂಟಾಗುತ್ತದೆ [5] ಜೀವನು ಉಪಾಸನೆಯನ್ನು ಪುನಃ ಪುನಃ ಮಾಡಬೇಕು [6] ಉಪಾಸಕನು ಪ್ರತೀಕವನ್ನು ಆತ್ಮನೆಂದು ತಿಳಿಯಕೂಡದು [7] ಬ್ರಹ್ಮಜ್ಞಾನದಿಂದ ಹಿಂದಿನ ಪಾಪವು ನಾಶವಾಗುತ್ತದೆ ಮತ್ತು ಮುಂದಿನ ಪಾಪವು ಅಂಟಿಕೊಳ್ಳುವುದಿಲ್ಲ [8] ಜೀವನು ಪ್ರಾರಬ್ಧಕರ್ಮವನ್ನು ಭೋಗದ ಮೂಲಕ ನಾಶಗೊಳಿಸಿ ಬ್ರಹ್ಮನಲ್ಲಿ ಸಂಪತ್ತಿಯನ್ನು ಪಡೆಯುತ್ತಾನೆ [9]

**೪. ಉತ್ಕ್ರಾಂತಿ:** ಮುಮುಕ್ಷುವಾದ ಜೀವಾತ್ಮನು ಅರ್ಚಿರಾದಿಮಾರ್ಗದಿಂದಲೇ ಬ್ರಹ್ಮನೊಂದಿಗೆ ಸಂಪತ್ತಿಯನ್ನು ಪಡೆಯುತ್ತಾನೆ ಶ್ರೀಶಂಕರಾಚಾರ್ಯರ ಭಾಷ್ಯದ ಪ್ರಕಾರ ಸಗುಣಬ್ರಹ್ಮೋಪಾಸಕರಿಗೆ ಗತಿಯಿರುತ್ತದೆ ನಿರ್ಗುಣಬ್ರಹ್ಮೋಪಾಸಕರಿಗೆ ಗತಿಯಾಗಲಿ ಅಗತಿಯಾಗಲಿ ಇರುವುದಿಲ್ಲ ಶ್ರೀರಾಮಾನುಜ, ಶ್ರೀಮಧ್ವಾಚಾರ್ಯ—ಇವರೇ ಮೊದಲಾದ ವೇದಾಂತಿಗಳ ಪ್ರಕಾರ ಮುಕ್ತರಿಗೆಲ್ಲ ಗತಿಯಿರುತ್ತದೆ ಜೀವನು ಪರಂಜ್ಯೋತಿಯನ್ನು ಸೇರಿದಮೇಲೆ ಅವನ ಸ್ವರೂಪವು ವ್ಯಕ್ತವಾಗುತ್ತದೆ [10] ಹೊಸ ಗುಣಗಳು ಉತ್ಪನ್ನವಾಗುವುದಿಲ್ಲ ಈ ಅವಸ್ಥೆಯಲ್ಲಿ ಅವನು ಮುಕ್ತನಾಗಿರುತ್ತಾನೆ[11] ಮತ್ತು ಪರಮಾತ್ಮನಿಂದ ಬೇರೆಯಾಗಿರುವುದಿಲ್ಲ [12] ಜೀವನು ಬ್ರಾಹ್ಮರೂಪದಿಂದ ಇರುತ್ತಾನೆಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ ಅವನು ಚೈತನ್ಯರೂಪದಿಂದ ವ್ಯಕ್ತನಾಗುತ್ತಾನೆಂಬುದು ಔಡುಲೋಮಿಯ ಮತವು, ಬ್ರಾಹ್ಮಸ್ವರೂಪ, ಚೈತನ್ಯಸ್ವರೂಪ—ಎರಡೂ ಆಗಬಹುದೆಂದು ಸೂತ್ರಕಾರರು ಅಭಿಪ್ರಾಯಪಡುತ್ತಾರೆ [13] ಮುಕ್ತನು ತನ್ನ ಸಂಕಲ್ಪಾನುಸಾರ ಶರೀರಿಯಾಗಿಯೂ ಇರಬಹುದು, ಅಶರೀರಿಯಾಗಿಯೂ ಇರಬಹುದು [14] ಮುಕ್ತನಿಗೆ ಜಗದ್ವ್ಯಾಪಾರವನ್ನು ಬಿಟ್ಟು ಉಳಿದ ಐಶ್ವರ್ಯವೆಲ್ಲ ಉಂಟಾಗುತ್ತದೆ [15] ಬ್ರಹ್ಮಲೋಕಕ್ಕೆ ಹೋಗುವವರು ಸಂಸಾರಕ್ಕೆ ಹಿಂದಿರುಗುವುದೇ ಇಲ್ಲ

## ಉಪಸಂಹಾರ

ಬಾದರಾಯಣರ ಮತವು ಒಂದು ಬಗೆಯಾದ ಅದ್ವೈತವೆಂದು ಹೇಳಬಹುದು ಅವರು ಸ್ವತಂತ್ರರೂ ಬ್ರಹ್ಮನಿಗಿಂತ ಭಿನ್ನರೂ ಆದ ಜೀವರನ್ನಾಗಲಿ ಜಗತ್ತನ್ನಾಗಲಿ ಒಪ್ಪಿಕೊಳ್ಳುವುದಿಲ್ಲ ಅವರು ಬಾದರಿ ಕಾಶಕೃತ್ಸ್ನ ಔಡುಲೋಮಿ—ಇವರ ನಿರ್ವಿಶೇಷಚಿನ್ಮಾತ್ರಬ್ರಹ್ಮವನ್ನೂ, ಅಶ್ಮರಥ್ಯ, ಜೈಮಿನಿ—ಇವರ ಸವಿಶೇಷ-ಬ್ರಹ್ಮವನ್ನೂ ಅಂಗೀ-

---

1 ೩. ೪. ೮. 2 ೩. ೪. ೯. 3 ೩. ೪ ೩೨. 4 ೩. ೪ ೩೩-೩೫. 5 ೩. ೨ ೩೮-೪೧. 6 ೪. ೧. ೧. ೨. 7 ೪. ೧. ೪. 8 ೪. ೧. ೧೩-೧೪. 9 ೪. ೧ ೧೯. 10 ೪ ೪. ೧. 11 ೪. ೪. ೨. 12 ೪. ೪. ೪. 13 ೪. ೪ ೫-೭. 14 ೪. ೪. ೧೦-೧೪. 15 ೪. ೪. ೧೭.

ಕರಿಸಿದಂತೆ ಕಾಣುತ್ತದೆ ಬಾದರಾಯಣರು ಉಪನಿಷತ್ತುಗಳನ್ನು ಪ್ರಮಾಣತಮವೆಂದು ಒಪ್ಪಿಕೊಂಡಿರುವುದರಿಂದ ಅವುಗಳ ಸಮನ್ವಯವನ್ನೂ ತಾತ್ಪರ್ಯವನ್ನೂ ವಿವರಿಸಲು ಪ್ರವೃತ್ತರಾಗಿದ್ದಾರೆಯೇ ಹೊರತು ಒಂದು ಸ್ವತಂತ್ರವಾದ ಶಾಸ್ತ್ರವನ್ನು ಯುಕ್ತಿಯ ಆಧಾರದ ಮೇಲೆ ಪ್ರತಿಪಾದಿಸಲು ಪ್ರಯತ್ನಿಸಿಲ್ಲ

## ಭಾಷ್ಯಕಾರರು ಮತ್ತು ಭಾಷ್ಯಗಳು

ಶ್ರೀಶಂಕರಾಚಾರ್ಯರಿಗೆ ಹಿಂದೆ ಬ್ರಹ್ಮಸೂತ್ರಗಳಿಗೆ ಅನೇಕ ಭಾಷ್ಯಗಳಿದ್ದಂತೆ ತೋರುತ್ತದೆ ಶಂಕರ, ಭಾಸ್ಕರ, ಯಾದವಪ್ರಕಾಶ, ರಾಮಾನುಜ, ಮಧ್ವ—ಇವರಾದ ಮೇಲೆ ಶ್ರೀಕಂಠ, ಶ್ರೀಪತಿ, ನಿಂಬಾರ್ಕ, ವಲ್ಲಭ, ಶುಕ, ವಿಜ್ಞಾನಭಿಕ್ಷು, ಬಲದೇವ—ಇವರೆಲ್ಲರೂ ಭಾಷ್ಯಗಳನ್ನು ಬರೆದಿರುತ್ತಾರೆ ಇವುಗಳಲ್ಲಿ ಶಂಕರ, ರಾಮಾನುಜ, ಮಧ್ವ, ನಿಂಬಾರ್ಕ ಮತ್ತು ವಲ್ಲಭ—ಇವರ ಅದ್ವೈತ-ವಿಶಿಷ್ಟಾದ್ವೈತ-ದ್ವೈತ-ದ್ವೈತಾದ್ವೈತ-ಪರಗಳಾದ ಭಾಷ್ಯಗಳೇ ಮುಖ್ಯವೆಂದು ಹೇಳಬಹುದು ಇವರೆಲ್ಲ ಹಿಂದಿನ ಸಂಪ್ರದಾಯಗಳಲ್ಲಿ ಯಾವುದನ್ನೋ ಅನುಸರಿಸಿರುವಂತೆ ಕಂಡುಬರುತ್ತದೆ

ಭಾಷ್ಯಕಾರರಿಗೆಲ್ಲ ಸೂತ್ರಕಾರರಲ್ಲಿ ಮತ್ತು ಸೂತ್ರಗಳಲ್ಲಿ ಅಪಾರವಾದ ಶ್ರದ್ಧೆಯಿದೆ. ಅವರೆಲ್ಲರೂ ಸೂತ್ರಗಳಿಗೆ—ಆಗಿನ ಕಾಲದ ಪೂರ್ವಪಕ್ಷಗಳನ್ನೆಲ್ಲ ಸಮೀಕ್ಷಿಸಿ—ಸುಬದ್ಧವೂ ಸುಸಂಗತವೂ ಆದ ವ್ಯಾಖ್ಯಾನವನ್ನು ಮಾಡಲು ಪ್ರಯತ್ನಿಸಿರುತ್ತಾರೆ ಆದರೆ ತಾತ್ತ್ವಿಕ ಸಮೀಕ್ಷೆಗಳು ಆಗಿನ ಕಾಲಕ್ಕೆ ಸಂಗತವಾಗಿದ್ದರೂ ಈಗಿನ ಯುಗಕ್ಕೆ ಸಂಬಂಧಿಸಿಲ್ಲವೆಂದು ಹೇಳಲಾಗುವುದಿಲ್ಲ ಮಾನವನ ಹೊರಗಿನ ವಾತಾವರಣ ಬದಲಾಯಿಸಿದ್ದರೂ ಒಳಗಿನ ವಾತಾವರಣವು ಬದಲಾಯಿಸಿಲ್ಲ ಜನ್ಮ ಮರಣ ಜೀವನ ಕರ್ಮ ಸುಖ ದುಃಖ—ಇವೆಲ್ಲವೂ ಹಿಂದಿನಂತೆಯೇ ಈಗಲೂ ಸಮಸ್ಯಾತ್ಮಕಗಳಾಗಿಯೇ ಉಳಿದಿವೆ, ರಾಗದ್ವೇಷಗಳು ಈರ್ಷ್ಯಾಸೂಯೆಗಳು ನಮ್ಮ ಮೇಲೆ ಧಾಳಿಯನ್ನು ಮಾಡಲು ನಿಲ್ಲಿಸಿಲ್ಲ ಮನುಷ್ಯನು ಸುಖಪ್ರಾಪ್ತಿಗಾಗಿ ಮಾಡುವ ಬೇಟೆಯು ಇನ್ನೂ ಕೊನೆಗೊಂಡಿಲ್ಲ ಆದುದರಿಂದ ತಾತ್ತ್ವಿಕಭಾವನೆಗಳು ಯಾವಾಗಲೂ ಹೊಸದಾಗಿಯೇ ಇರುತ್ತವೆ ಆದುದರಿಂದ ಭಾಷ್ಯ-ಕಾರರು ಸಂಪ್ರದಾಯ-ನಿರಪೇಕ್ಷಿತವಾದ ತಂತ್ರವನ್ನು ಸ್ಥಾಪಿಸದಿದ್ದರೂ ತಮ್ಮ ಪ್ರಸನ್ನವೂ ಗಂಭೀರವೂ ಉಜ್ಜ್ವಲವೂ ಆದ ಭಾಷ್ಯಗಳಲ್ಲಿ ಸಂಸಾರದ ಸಮಸ್ಯೆಗಳಿಗೆ ಪರಿಹಾರವನ್ನೂ ಅವುಗಳಿಗೆ ಅತಿಕ್ರಮಿಸಲು ಉಪಾಯಗಳನ್ನೂ ವಿಶೇಷ ಪ್ರತಿಭೆಯಿಂದ ಹೇಳಿರುತ್ತಾರೆ ಯಾರಿಗೆ ಏನು ಬೇಕೊ ಅದನ್ನು ಈ ಭಾಷ್ಯಗಳಿಂದ ಪಡೆಯಬಹುದು. ಆದರೆ ಎಲ್ಲವೂ ಮುಮುಕ್ಷುವಿನ ಯೋಗ್ಯತೆಯನ್ನೂ ಬುದ್ಧಿಯನ್ನೂ ಅವಲಂಬಿಸಿರುತ್ತದೆ.

ಈ ಕೆಳಗಿನ ಎಂಟು ಭಾಷ್ಯಗಳು ಈಗಲೂ ಪ್ರಧಾನವಾಗಿದ್ದು ಪಂಡಿತರ ಅಧ್ಯಯನಕ್ಕೆ ವಿಷಯಗಳಾಗಿವೆ

| | | | |
|---|---|---|---|
| ೧ | ಶ್ರೀಶಂಕರಾಚಾರ್ಯ | ಕ್ರಿ. ಶ. ೭೮೮—೮೨೦ | ಅದ್ವೈತ |
| ೨ | ಭಾಸ್ಕರ | ೧೦ ನೇ ಶತಮಾನದ ಉತ್ತರಾರ್ಧ | ಔಪಾಧಿಕ-ಭೇದಾಭೇದ |
| ೩. | ಯಾದವಪ್ರಕಾಶ | | ಸ್ವಾಭಾವಿಕ-ಭೇದಾಭೇದ |

| | | | |
|---|---|---|---|
| ೪. | ಶ್ರೀರಾಮಾನುಜಾಚಾರ್ಯ | ಕ್ರಿ. ಶ. ೧೦೧೭–೧೧೩೭ | ವಿಶಿಷ್ಟಾದ್ವೈತ |
| ೫. | ಶ್ರೀಮನ್ಮಧ್ವಾಚಾರ್ಯ | ಕ್ರಿ. ಶ. ೧೨೩೮–೧೩೧೭ | ದ್ವೈತ |
| ೬. | ನಿಂಬಾರ್ಕ | ೧೩ ನೇ ಶತಮಾನದ ಉತ್ತರಾರ್ಧ | ದ್ವೈತಾದ್ವೈತ |
| ೭. | ಶ್ರೀಕಂಠಾಚಾರ್ಯ | ” | ಶೈವ–ವಿಶಿಷ್ಟಾದ್ವೈತ |
| ೮. | ಶ್ರೀವಲ್ಲಭಾಚಾರ್ಯ | ೧೪೭೯–೧೫೩೧ | ಶುದ್ಧಾದ್ವೈತ |

ಈ ಭಾಷ್ಯಗಳಿಗೆಲ್ಲ ಟೀಕಾಕಾರರು ತಮ್ಮ ಟೀಕೆಗಳನ್ನು ಬರೆದಿರುತ್ತಾರೆ.

## ಉಪವರ್ಷ

ಉಪವರ್ಷರು ಅತ್ಯಂತ ಪ್ರಾಚೀನರಾದ ಭಾಷ್ಯಕಾರರೆಂದು ಹೇಳಬಹುದು. ಅವರು ಪೂರ್ವಮೀಮಾಂಸಾವೃತ್ತಿಯಲ್ಲದೆ ಉತ್ತರಮೀಮಾಂಸೆಗೂ ವೃತ್ತಿಯನ್ನು ಬರೆದಂತೆ ಕಾಣುತ್ತದೆ. ಇದು ಶ್ರೀಶಂಕರಾಚಾರ್ಯರ ಭಾಷ್ಯದಿಂದಲೇ (೩. ೩. ೫೩) ತಿಳಿದು ಬರುತ್ತದೆ: 'ಆದುದರಿಂದಲೇ ಭಗವಂತರಾದ ಉಪವರ್ಷರು ಮೊದಲನೆಯ ತಂತ್ರದಲ್ಲಿ ಆತ್ಮನ ಅಸ್ತಿತ್ವದ ಪ್ರಸಕ್ತಿ ಬರಲಾಗಿ "ಶಾರೀರಕದಲ್ಲಿ ಹೇಳುವೆವು" ಎಂದು ವಿಷಯವನ್ನು ಅಲ್ಲಿಗೇ ಬಿಟ್ಟಿರುತ್ತಾರೆ.'[1] ಶಬರಸ್ವಾಮಿಗಳು ತಮ್ಮ ಜೈಮಿನಿಸೂತ್ರಭಾಷ್ಯದಲ್ಲಿ ಇವರ ಮತವನ್ನು ಉದಾಹರಿಸುತ್ತ ವರ್ಣಗಳೇ ಶಬ್ದಗಳು ಎಂಬುದನ್ನು ಒಪ್ಪಿಕೊಂಡಿರುತ್ತಾರೆ. ಶ್ರೀಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ (೧. ೩. ೨೮) ಇದೇ ಮತವನ್ನು ಒಪ್ಪಿಕೊಂಡು ಹೀಗೆ ಹೇಳುತ್ತಾರೆ: 'ಈ ಸ್ಫೋಟವಾದಕ್ಕೆ ವಿರುದ್ಧವಾಗಿ ಭಗವಂತರಾದ ಉಪವರ್ಷರು "ವರ್ಣಗಳೇ ಶಬ್ದಗಳು" ಎಂದು ಹೇಳಿರುತ್ತಾರೆ.'[2] ಶ್ರೀಭಾಷ್ಯದಲ್ಲಿ ಉದಾಹರಿಸಲ್ಪಟ್ಟಿರುವ ಬೋಧಾಯನರೆಂಬ ವೃತ್ತಿಕಾರರು, ಶಾಂಕರಭಾಷ್ಯದಲ್ಲಿ ಉದಾಹರಿಸಲ್ಪಟ್ಟಿರುವ ಉಪವರ್ಷರು—ಇವರಿಬ್ಬರೂ ಒಂದೇ ವ್ಯಕ್ತಿಯೊ ಅಥವಾ ಬೇರೆ ಬೇರೆಯೊ ? —ಎಂಬ ವಿಷಯದಲ್ಲಿ ಏನನ್ನೂ ಖಂಡಿತವಾಗಿ ಹೇಳಲು ಸಾಧ್ಯವಿಲ್ಲ.

## ಶ್ರೀಶಂಕರಾಚಾರ್ಯ

ಈಗ ನಮಗೆ ಸಿಕ್ಕಿರುವ ಭಾಷ್ಯಗಳಲ್ಲಿ ಶ್ರೀಶಂಕರಾಚಾರ್ಯರದು ಅತ್ಯಂತಪ್ರಾಚೀನವಾಗಿದೆ. ಅವರು ಉಪನಿಷತ್ತುಗಳಿಗೂ ಬ್ರಹ್ಮಸೂತ್ರಗಳಿಗೂ ಅದ್ವೈತಪರವಾಗಿ ಭಾಷ್ಯವನ್ನು ಬರೆದಿರುತ್ತಾರೆ. **ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ** ಎಂಬುದು ಇವರ ಸಿದ್ಧಾಂತದ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸುತ್ತದೆ: ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯೆ, ಜೀವ ಬ್ರಹ್ಮಕ್ಕಿಂತ ಬೇರೆಯಲ್ಲ. ಚೈತನ್ಯವು ಪರಬ್ರಹ್ಮ, ಅಪರಬ್ರಹ್ಮ ಎಂದು ಎರಡು ವಿಧ. ಎಲ್ಲಿ ಅವಿದ್ಯಾಕೃತವಾದ ನಾಮರೂಪಾದಿಗಳನ್ನು ನಿಷೇಧಿಸಿ ಅಸ್ಥೂಲಾದಿ-ಶಬ್ದಗಳಿಂದ ಬ್ರಹ್ಮನನ್ನು ಉಪದೇಶಿಸಿದೆಯೊ

---

[1] ಅತ ಏವ ಭಗವತಾ ಉಪವರ್ಷೇಣ ಪ್ರಥಮೇ ತಂತ್ರ ಆತ್ಮಾಸ್ತಿತ್ವಾಭಿಧಾನಪ್ರಸಕ್ತೌ ಶಾರೀರಕೇ ವಕ್ಷ್ಯಾಮ ಇತ್ಯುದ್ಧಾರಃ ಕೃತಃ।

[2] ವರ್ಣಾ ಏವ ತು ಶಬ್ದ ಇತಿ ಭಗವಾನುಪವರ್ಷಃ।

ಅದು ನಿರುಪಾಧಿಕವೂ ನಿರ್ವಿಶೇಷವೂ ಆದ ಪರಬ್ರಹ್ಮ , ಎಲ್ಲಿ ಅದೇ ಬ್ರಹ್ಮವನ್ನು ನಾಮ ರೂಪಾದಿ-ವಿಶೇಷದಿಂದ ವಿಶಿಷ್ಟವಾಗಿ ಉಪದೇಶಿಸಿದೆಯೊ ಅದು ಅಪರಬ್ರಹ್ಮ [1] ಅಪರ ಬ್ರಹ್ಮವು ಜಗತ್ತಿನ ಜನ್ಮಾದಿಗಳಿಗೆ ಕಾರಣವಾಗಿರುತ್ತದೆ ಬ್ರಹ್ಮವು ನಿಜವಾಗಿ ಪರಿಣಮಿಸುವುದಿಲ್ಲ ಅವಿದ್ಯೆಯಿಂದ ನಾಮರೂಪಾದಿ-ವೈವಿಧ್ಯವು ಕಂಡುಬರುತ್ತದೆ ಇದಕ್ಕೆ ವಿವರ್ತವೆಂದು ಹೆಸರು ಆತ್ಮ-ಅನಾತ್ಮ ಎಂಬ ವಿವೇಕವಿಲ್ಲದಿದ್ದರೆ–ಹಗ್ಗವು ಹಾವಿನಂತೆ ತೋರುವ ಹಾಗೆ—ಆತ್ಮವು ಅನಾತ್ಮವಾಗಿಯೂ, ಅನಾತ್ಮವು ಆತ್ಮವಾಗಿಯೂ ತೋರುತ್ತದೆ ಇದಕ್ಕೆ ಅಧ್ಯಾಸವೆಂದು ಹೆಸರು ಪಂಡಿತರು ಈ ಅಧ್ಯಾಸವನ್ನು ಅವಿದ್ಯೆಯೆಂದು ತಿಳಿಯುತ್ತಾರೆ; ಅದನ್ನು ವಿವೇಚಿಸಿ ವಸ್ತುಸ್ವರೂಪವನ್ನು ನಿರ್ಧರಿಸುವುದನ್ನೇ ವಿದ್ಯೆಯೆಂದು ಕರೆಯುತ್ತಾರೆ.[2] ಅಂತಃಕರಣದಿಂದ ಅವಚ್ಛಿನ್ನವಾದ ಚೈತನ್ಯವೇ ಜೀವಾತ್ಮ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವಭಾವವುಳ್ಳ ಚೈತನ್ಯವು ಕರ್ತೃತ್ವ-ಭೋಕ್ತೃತ್ವ-ಜ್ಞಾತೃತ್ವವೇ ಮೊದಲಾದ ಜೀವಧರ್ಮಗಳಿಂದ ಕೂಡಿದಂತೆ ಕಂಡುಬರುತ್ತದೆ ಇಂಥ ಜೀವನಿಗೂ ಬ್ರಹ್ಮಕ್ಕೂ ಐಕ್ಯವನ್ನು ತತ್ತ್ವಮಸ್ಯಾದಿ-ವಾಕ್ಯಗಳು ಬೋಧಿಸುತ್ತವೆ ನಿರ್ಗುಣ-ಬ್ರಹ್ಮೋಪಾಸಕರಿಗೆ ಸಮ್ಯಗ್-ಜ್ಞಾನದಿಂದಲೇ ಬ್ರಹ್ಮಪ್ರಾಪ್ತಿಯಾಗುತ್ತದೆ ಅವರಿಗೆ ಅರ್ಚಿರಾದಿಗತಿಯಿಲ್ಲ ಆದರೆ ಸಗುಣೋಪಾಸಕನು ಅರ್ಚಿರಾದಿಗತಿಯ ಮೂಲಕ ಬ್ರಹ್ಮ-ಲೋಕವನ್ನು ಸೇರಿ ಅನಂತರ ಆತ್ಯಂತಿಕವಾದ ಮೋಕ್ಷವನ್ನು ಹೊಂದುತ್ತಾನೆ ಅನೇಕ ಸೂತ್ರಗಳು ಜೀವ, ಈಶ್ವರ, ಉಪಾಸನೆ, ಉತ್ಕ್ರಾಂತಿ—ಇವುಗಳ ಪರವಾಗಿದೆಯೆಂದು ಹೇಳಿದರೆ ತಪ್ಪಾಗಲಾರದು ಶಾಂಕರಭಾಷ್ಯದ ಪ್ರಕಾರ ಸೂತ್ರಗಳು ೫೫೫

## ಶ್ರೀರಾಮಾನುಜಾಚಾರ್ಯ

ಶ್ರೀರಾಮಾನುಜಾಚಾರ್ಯರು ವಿಶಿಷ್ಟಾದ್ವೈತಪರವಾಗಿ ಸೂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾರೆ. ಇದು ಶ್ರೀಭಾಷ್ಯವೆಂದು ಪ್ರಸಿದ್ಧವಾಗಿದೆ ಶ್ರೀಭಾಷ್ಯವನ್ನಲ್ಲದೆ ಇವರು ಬ್ರಹ್ಮಸೂತ್ರಗಳಿಗೆ ವೇದಾಂತದೀಪ, ವೇದಾಂತಸಾರ ಎಂಬ ಸಂಗ್ರಹರೂಪವಾದ ವೃತ್ತಿ ಬರೆದಿದ್ದಾರೆ ಶ್ರೀಭಾಷ್ಯಕ್ಕೆ ಬೋಧಾಯನವೃತ್ತಿಯು ಮೂಲವಾಗಿದೆ ಅವರು ಬೋಧಾಯನವೃತ್ತಿಯ ಸಂಗ್ರಹವನ್ನು ಅನುಸರಿಸಿ ವ್ಯಾಖ್ಯಾನಮಾಡಿರುವುದಾಗಿ ತಮ್ಮ ಭಾಷ್ಯಾವತರಣಿಕೆಯಲ್ಲಿಯೇ ಹೇಳಿರುತ್ತಾರೆ 'ಭಗವದ್ಬೋಧಾಯನರು ವಿಸ್ತೀರ್ಣವಾಗಿ ಬರೆದ ಬ್ರಹ್ಮಸೂತ್ರ-ವೃತ್ತಿಯನ್ನು ಪೂರ್ವಾಚಾರ್ಯರು ಸಂಕ್ಷೇಪಮಾಡಿದರು, ಅವರ ಮತವನ್ನು

---

1 ಯತ್ರಾವಿದ್ಯಾಕೃತನಾಮರೂಪಾದಿವಿಶೇಷಪ್ರತಿಷೇಧಾದಸ್ಥೂಲಾದಿಶಬ್ದೈರ್ಬ್ರಹ್ಮೋಪದಿಶ್ಯತೇ ತತ್ಪರಮ್ । ತದೇವ ಯತ್ರ ನಾಮರೂಪಾದಿವಿಶೇಷೇಣ ಕೇನಚಿದ್ವಿಶಿಷ್ಟಮುಪಾಸನಾಯೋಪದಿಶ್ಯತೇ ತದಪರಮ್ ।

2 ತಮೇತಮೇವಂ ಲಕ್ಷಣಮಧ್ಯಾಸಂ ಪಂಡಿತಾ ಅವಿದ್ಯೇತಿ ಮನ್ಯಂತೇ । ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಾಮಾಹುಃ ।

ಅನುಸರಿಸಿ ಸೂತ್ರಾಕ್ಷರಗಳು ವ್ಯಾಖ್ಯಾನಮಾಡಲ್ಪಡುತ್ತವೆ[1] ವಿಶಿಷ್ಟಾದ್ವೈತ-ಸಿದ್ಧಾಂತದ ಪ್ರಕಾರ ಈ ಬೋಧಾಯನರೇ ಉಪವರ್ಷರು ಶ್ರೀರಾಮಾನುಜರು ತಮ್ಮ ಭಾಷ್ಯದಲ್ಲಿ ಬೋಧಾಯನವೃತ್ತಿಯ ವಾಕ್ಯಗಳನ್ನು ಉದಾಹರಿಸಿರುವರಲ್ಲದೆ ಛಾಂದೋಗ್ಯೋಪನಿಷತ್ತಿಗೆ ವಾಕ್ಯವೆಂಬ ವ್ಯಾಖ್ಯಾನವನ್ನು ಬರೆದ ಆತ್ರೇಯವಂಶ್ಯರಾದ ಟಂಕಾಚಾರ್ಯರೆಂಬ ಬ್ರಹ್ಮನಂದಿಗಳ ವಾಕ್ಯಗಳನ್ನೂ ಅದಕ್ಕೆ ಪ್ರಸಿದ್ಧವಾದ ಭಾಷ್ಯವನ್ನೂ ಬರೆದ ದ್ರಮಿಡಾಚಾರ್ಯರ ವಾಕ್ಯಗಳನ್ನೂ ಅಲ್ಲಲ್ಲಿ ಉದಾಹರಿಸಿರುತ್ತಾರೆ ಶ್ರೀಭಾಷ್ಯದ ಪ್ರಕಾರ ಸೂತ್ರಗಳು ೫೪೫

ಚೇತನ, ಅಚೇತನ, ಈಶ್ವರ—ಎಂದು ತತ್ತ್ವವು ಮೂರು ಭಾಗವಾಗಿ ವಿಂಗಡಿಸಲ್ಪಟ್ಟಿದೆ ಈಶ್ವರನಲ್ಲಿಯೇ ಚೇತನಾಚೇತನಗಳು ಸ್ಥಿತಿಯನ್ನು ಹೊಂದಿವೆ ಇದೇ ವಿಶಿಷ್ಟಾದ್ವೈತ ಇಲ್ಲಿ ವಸ್ತುಗಳಿಗೆ ಭೇದವೂ ಅಭೇದವೂ ಸಂರಕ್ಷಿಸಲ್ಪಟ್ಟಿದೆ. ವಿಭುವಾದ ಪರಬ್ರಹ್ಮನು ಅಶೇಷದೋಷರಹಿತನು ಸರ್ವಕಲ್ಯಾಣಗುಣಗಳುಳ್ಳವನು ಅಖಿಲಭುವನಜನ್ಮಸ್ಥಿತಿಭಂಗಗಳಿಗೆ ಕಾರಣನು ; ಅಪ್ರಾಕೃತದಿವ್ಯಮಂಗಳವಿಗ್ರಹರೂಪನು, ಪರಮಪ್ರಾಪ್ಯನು ಮತ್ತು ಪರಮಪ್ರಾಪಕನು ಇವನು ಸೂಕ್ಷ್ಮರೂಪದಲ್ಲಿ ಚೇತನಾಚೇತನಶಕ್ತಿವಿಶಿಷ್ಟನಾಗಿರುತ್ತಾನೆ, ಇವನೇ ಸ್ಥೂಲರೂಪವನ್ನು ಹೊಂದಿದ ಚೇತನಾಚೇತನಶಕ್ತಿಗಳಿಂದ ವಿಶಿಷ್ಟನಾಗಿರುವುದರಿಂದ ಜಗತ್ತಿಗೆ ಕಾರಣವೆನಿಸಿದ್ದಾನೆ ಇವನು ಪ್ರಕಾರಿ ಚೇತನಾಚೇತನಗಳು ಇವನ ಪ್ರಕಾರಗಳು ಜೀವನು ತನ್ನ ಶರೀರಕ್ಕೆ ಆತ್ಮನಾಗಿರುವಂತೆ ಸಮಸ್ತಚೇತನಾಚೇತನಗಳಿಗೆ ಪರಮಾತ್ಮನು ಆತ್ಮನಾಗಿದ್ದಾನೆ ಈ ದೃಷ್ಟಿಯಿಂದ ಅವನೊಬ್ಬನೇ ಶರೀರಿ, ಚೇತನಾಚೇತನ ವಸ್ತುಗಳಿಂದ ಕೂಡಿದ ಜಗತ್ತು ಅವನ ಶರೀರ ಸೃಷ್ಟಿಯೇ ಮೊದಲಾದ ವ್ಯಾಪಾರವು ಅವನ ಲೀಲೆ

ಶರೀರಾದಿವಿಲಕ್ಷಣನಾದ ಜೀವನು ಅಣುಪರಿಮಾಣವುಳ್ಳವನು, ಪ್ರತಿಶರೀರದಲ್ಲಿಯೂ ಬೇರೆ ಬೇರೆಯಾಗಿರುತ್ತಾನೆ ಪ್ರಕೃತಿ-ಸಂಬಂಧದಲ್ಲಿರುವ ಜೀವರು ಬದ್ಧರು ; ಪ್ರಕೃತಿಯಿಂದ ಬಿಡಿಸಿಕೊಂಡವರು ಮುಕ್ತರು ಕೆಲವು ಜೀವರು ಸಂಸಾರಕ್ಕೆ ಬರುವುದೇ ಇಲ್ಲ, ಅವರು ನಿತ್ಯರೆನಿಸುವರು ಸಂಸಾರಿಜೀವರು ಅರ್ಚಿರಾದಿಗತಿಯಿಂದ ಭಗವತ್ಪ್ರಾಪ್ತಿಯನ್ನು ಹೊಂದುತ್ತಾರೆ ಈ ಸಂಪ್ರದಾಯದಲ್ಲಿ ನಿತ್ಯನಾರಕಿಗಳಾಗಲೀ ನಿತ್ಯಸಂಸಾರಿಗಳಾಗಲೀ ಇಲ್ಲ ; ಎಲ್ಲರೂ ಮೋಕ್ಷಕ್ಕೆ ಅರ್ಹರು ಸಕಲಜೀವಾತ್ಮರಿಗೂ ಕರ್ಮಕೃತವಾದ ಶರೀರಭೇದದ ಹೊರತು ಸ್ವರೂಪದಲ್ಲಿ ಯಾವ ಭೇದವೂ ಇರುವುದಿಲ್ಲ ಜೀವಾತ್ಮರಿಗೂ ಪರಮಾತ್ಮನಿಗೂ ಕೆಲವು ವಿಷಯಗಳಲ್ಲಿ ಹೊರತು ಉಳಿದ ವಿಷಯಗಳಲ್ಲೆಲ್ಲ ಅತ್ಯಂತ ಸಾಮ್ಯವಿರುವುದು ಪ್ರತಿಜೀವಾತ್ಮನ ಗುರಿ ಪರಮಾತ್ಮ-ಸಾಮ್ಯವೆಂಬ ಪರಮಪುರುಷಾರ್ಥ ಇಂಥ ಪ್ರಾಪ್ತಿಗೆ ಪರಮಾತ್ಮನ ಅನುಗ್ರಹವೇ ಕಾರಣವಾಗಿರುವುದರಿಂದ ಭಕ್ತಿ-

---

1 ಭಗವದ್ಬೋಧಾಯನಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ ಪೂರ್ವಾಚಾರ್ಯಾಃ ಸಂಕ್ಷಿಪುಃ ; ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ ।

ಪ್ರಪತ್ತಿಗಳಿಂದ ಸಾಧನಗಳು ನಿರೂಪಿಸಲ್ಪಟ್ಟಿವೆ ಆಧ್ಯಾತ್ಮಿಕ-ಜೀವನವು ಕರ್ಮಯೋಗ ದಿಂದ ಪ್ರಾರಂಭವಾಗುತ್ತದೆ, ಕರ್ಮಯೋಗದ ಅನುಷ್ಠಾನದಿಂದ ನಿರ್ಮಲಾಂತಃ-ಕರಣವನ್ನು ಪಡೆದ ಮುಮುಕ್ಷುವು ಜ್ಞಾನಕ್ಕೆ ಅರ್ಹತೆಯನ್ನು ಪಡೆಯುತ್ತಾನೆ ಆತ್ಮನು ಪ್ರಕೃತಿಗಿಂತ ಭಿನ್ನನೆಂದು ತಿಳಿಯುವುದೇ ಜ್ಞಾನಯೋಗವು ಕೊನೆಗೆ ಭಕ್ತಿಯೋಗವು ಸಾಧನವಾಗುತ್ತದೆ ಪರಮಪ್ರೇಮದಿಂದ ಭಗವಂತನನ್ನು ನಿರಂತರವಾಗಿ ಧ್ಯಾನಿಸು-ವುದೇ ಭಕ್ತಿ ಭಕ್ತಿಯೋಗಕ್ಕೆ ಅರ್ಹತೆಯನ್ನು ಪಡೆಯದವರಿಗೆ ಪ್ರಪತ್ತಿಯು ಹೆದ್ದಾರಿ-ಯಾಗುತ್ತದೆ. ಪರಮಪುರುಷನಲ್ಲಿ ಸಂಪೂರ್ಣವಾಗಿ ಶರಣಾಗತಿಯನ್ನು ಮಾಡುವುದೇ ಪ್ರಪತ್ತಿ

## ಶ್ರೀಮನ್ಮಧ್ವಾಚಾರ್ಯ

ಶ್ರೀಮಧ್ವಾಚಾರ್ಯರು ೩೭ ಗ್ರಂಥಗಳನ್ನು ಬರೆದಿದ್ದಾರೆ ಇವುಗಳಿಗೆ ಸರ್ವ-ಮೂಲವೆಂದು ಹೆಸರು ಇವುಗಳಲ್ಲಿ ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ, ನ್ಯಾಯ-ವಿವರಣ, ಅನುವ್ಯಾಖ್ಯಾನ—ಎಂಬ ನಾಲ್ಕು ಗ್ರಂಥಗಳು ಸೂತ್ರಪ್ರಸ್ಥಾನಕ್ಕೆ ಸೇರಿವೆ. ಶಾಂಕರಭಾಷ್ಯಕ್ಕೆ ಕೆಲವು ಪೂರ್ವಾಚಾರ್ಯರ ಕೃತಿಗಳೂ ಶ್ರೀಭಾಷ್ಯಕ್ಕೆ ಬೋಧಾಯನ-ವೃತ್ತಿಯೂ ಮೂಲವಾಗಿದ್ದರೆ ಮಧ್ವಭಾಷ್ಯಕ್ಕೆ ಮೂಲವು ಯಾವುದೆಂದು ಹೇಳಲು ಸಾಧ್ಯವಿಲ್ಲ. ಇವರ ಸೂತ್ರಭಾಷ್ಯವು ಅನೇಕ ವಿಷಯಗಳಲ್ಲಿ ಹಳೆಯ ಮಾರ್ಗವನ್ನು ಬಿಟ್ಟು ಹೊಸ ರೀತಿಯಲ್ಲಿದೆ ಎಂದು ಹೇಳಿದರೆ ತಪ್ಪಾಗಲಾರದು ಮೊಟ್ಟಮೊದಲು ಅತ್ಯಂತ ಸರಳವಾದ ಭಾಷೆಯಲ್ಲಿ ಪುಟ್ಟ ಪುಟ್ಟವಾದ ವಾಕ್ಯಗಳಿಂದ ಕೂಡಿದೆ ಈ ಭಾಷ್ಯ ಕೆಲವು ಕಡೆಗಳಲ್ಲಿ ಭಾಷ್ಯವು ಸೂತ್ರಕ್ಕಿಂತ ದೊಡ್ಡದಾಗಿಲ್ಲ. ಹೆಚ್ಚು ಕಡಮೆ ಶಂಕರ–ರಾಮಾನುಜರ ವಿಷಯವಾಕ್ಯಗಳೂ ಒಂದೇ ಆಗಿರುತ್ತವೆ ಆದರೆ ಇವರ ವಿಷಯ-ವಾಕ್ಯಗಳೂ ಅಧಿಕರಣಗಳ ವಿಷಯಗಳೂ ಬೇರೆಯಾಗಿರುತ್ತವೆ ಶ್ರೀಮನ್ಮಧ್ವಾ-ಚಾರ್ಯರು ಬ್ರಹ್ಮಸೂತ್ರಗಳಿಗೆ ವಿಶೇಷಮಹತ್ವವನ್ನು ಕೊಟ್ಟಿರುತ್ತಾರೆ, ಇತರ ಗ್ರಂಥ ಗಳು ನಿರ್ಣಯಗ್ರಂಥಗಳಾಗಿದ್ದರೆ ಸೂತ್ರಗಳನ್ನು 'ನಿರ್ಣಾಯಕ-ಗ್ರಂಥಗಳು' ಎಂದು ಕರೆದಿರುತ್ತಾರೆ

ಒಂದು ಪ್ರಸಿದ್ಧವಾದ ಶ್ಲೋಕದಲ್ಲಿ[1] ಶ್ರೀಮನ್ಮಧ್ವಾಚಾರ್ಯರ ಪ್ರಧಾನವಾದ ಒಂಬತ್ತು ತತ್ತ್ವಗಳನ್ನು ಬಹಳ ಚೆನ್ನಾಗಿ ಹೇಳಿದೆ. ಇದರ ಸಿದ್ಧಾಂತದಲ್ಲಿ ಪ್ರಮೇಯ-ರತ್ನಗಳು ಹೀಗಿವೆ :

---

1 ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

## ೧. ಶ್ರೀಹರಿಯೇ ಸರ್ವೋತ್ತಮನು

ಶ್ರೀನಾರಾಯಣನೇ ಬ್ರಹ್ಮರುದ್ರರೇ ಮೊದಲಾದ ಸಮಸ್ತಜೀವರಿಗಿಂತಲೂ ಅಕ್ಷರ-ಶಬ್ದವಾಚ್ಯಳಾದ ಲಕ್ಷ್ಮೀದೇವಿಗಿಂತಲೂ ಅತ್ಯುತ್ತಮನು (ಗೀತಾ. ೧೫.೧೬-೧೮). ಸಮಸ್ತಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾದ ಶ್ರೀನಾರಾಯಣನೇ ಸರ್ವೋತ್ತಮನೆಂದು ಶ್ರುತಿಗಳು ಸಾರುತ್ತವೆ.

## ೨. ಜಗತ್ತು ಸತ್ಯವಾದದು

ಶ್ರೇಷ್ಠಪ್ರಮಾಣವೆನಿಸಿದ ಶ್ರುತಿಯಿಂದ ಜಗತ್ತಿನ ಸತ್ಯತ್ವವು ತಿಳಿದುಬರುತ್ತದೆ. ಪ್ರವಾಹತಃ ಉತ್ಪತ್ತಿನಾಶಗಳಿಲ್ಲದ, ನಾನಾವಿಧವಾದ ಜಗತ್ತು ಪ್ರತಿಕಲ್ಪದಲ್ಲಿಯೂ ಇರುತ್ತದೆ. ಈ ಜಗತ್ತು ಹಿಂದೆ ಯಾವ ಕಾಲದಲ್ಲಿಯೂ ಯಾವ ದೇಶದದಲ್ಲಿಯೂ ಯಾವನಿಗೂ ಬಾಧಿತವಾಗಲಿಲ್ಲ, ಮುಂದೆಯೂ ಆಗಲಾರದು. ಆದುದರಿಂದ ಇದು ನಿತ್ಯವೂ ಅಬಾಧಿತವೂ ಆಗಿದೆ.

## ೩. ಭೇದವು ನಿಜ

ಭೇದವು ಯಥಾರ್ಥವಾದುದು. ಭೇದವಿಲ್ಲದಿದ್ದರೆ ಪೂಜ್ಯ-ಪೂಜಕಭಾವವು ಹೊಂದುವುದಿಲ್ಲ. ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಯಥಾರ್ಥಭೇದವೇ ಪ್ರತ್ಯಕ್ಷ-ಅನುಮಾನ-ಆಗಮಗಳಿಂದ ಸಿದ್ಧವಾಗಿರುತ್ತದೆ. ಪರಮಶ್ರುತಿಯು ಭೇದಪಂಚಕವನ್ನು ಹೀಗೆ ಸಮರ್ಥಿಸುತ್ತದೆ: (೧) ಜೀವರಿಗೂ ಈಶ್ವರನಿಗೂ ಭೇದವಿದೆ; (೨) ಜೀವರಲ್ಲಿ ಪರಸ್ಪರ ಭೇದವಿದೆ; (೩) ಜಡಪದಾರ್ಥಗಳಿಗೂ ಈಶ್ವರನಿಗೂ ಭೇದವಿದೆ; (೪) ಜಡ-ಪದಾರ್ಥಗಳಿಗೆ ಪರಸ್ಪರ ಭೇದವಿದೆ; (೫) ಜಡಪದಾರ್ಥಗಳಿಗೂ ಜೀವರಿಗೂ ಭೇದವಿದೆ. ಸರ್ವಾವಸ್ಥೆಗಳಲ್ಲಿಯೂ ಸರ್ವಶಃ ಈ ಪಂಚಭೇದಗಳು ನಿತ್ಯವಾಗಿವೆ. ಈ ಭೇದಪಂಚಕವು ಕಲ್ಪಿತವಾಗಿದ್ದರೆ ನಾಶವಾಗುತ್ತಿದ್ದಿತು. ಆದರೆ ಇದು ನಾಶವಾಗುವುದಿಲ್ಲ. ಆದುದರಿಂದ ದ್ವೈತವಿಲ್ಲವೆಂಬುದು ಅಜ್ಞಾನಿಗಳ ಮತ. ಈ ಭೇದಪಂಚಕವು ಜ್ಞಾನಿಗಳಿಗೆ ಸಮ್ಮತವಾಗಿ ವಿಷ್ಣುವಿನಿಂದ ರಕ್ಷಿಸಲ್ಪಟ್ಟಿದೆ. ಆದುದರಿಂದ ಸತ್ಯವೆಂದೇ ಹೇಳಲ್ಪಟ್ಟಿದೆ. ಹರಿಯೊಬ್ಬನೇ ಸರ್ವೋತ್ತಮನು.

## ೪. ಜೀವರೆಲ್ಲ ಶ್ರೀಹರಿಯ ಅನುಚರರು

ಭಗವಂತನೇ ನಿಯಾಮಕನಾದುದರಿಂದ ಬ್ರಹ್ಮಾದಿ-ಜೀವರೆಲ್ಲರೂ ಶ್ರೀಹರಿಯ ದಾಸಾನುದಾಸರು. ಇತರ ದೇವತೆಗಳಿಗೆ ದಾಸರಾಗುವುದೆಂಬುದು ಪ್ರಮಾಣವಿರುದ್ಧವೂ ಪ್ರಮಾಣಶೂನ್ಯವೂ ಆಗಿದೆ; ಏಕೆಂದರೆ ಇತರ ದೇವತೆಗಳಿಗೆ ಉತ್ತಮತ್ವವು ಹೊಂದುವುದಿಲ್ಲ. ಶ್ರೀಹರಿಗೆ ನಿಯಾಮಕತ್ವಾದಿಗಳನ್ನು ಶ್ರುತಿಗಳು ಸಾಧಿಸುತ್ತವೆ.

## ೫. ಜೀವರಲ್ಲಿ ನೀಚೋಚ್ಚಭಾವವಿದೆ

ಜೀವರೆಲ್ಲರೂ ಪರಸ್ಪರವಾಗಿ ತಾರತಮ್ಯವನ್ನು ಹೊಂದಿರುತ್ತಾರೆ ಇದು ತೃತ್ತಿರೀಯಶ್ರುತಿಯಲ್ಲಿ (೨ ೮) ವಿವರಿಸಲಾಗಿದೆ ನೀಚೋಚ್ಚಭಾವವು ಮುಕ್ತಿಯಲ್ಲಿಯೂ ನಾಶವಾಗುವುದಿಲ್ಲ ಜೀವನು ತಾರತಮ್ಯವನ್ನು ತಿಳಿಯದಿದ್ದರೆ ನಿತ್ಯನರಕವನ್ನೂ ತಿಳಿದಿದ್ದರೆ ಮುಕ್ತ್ಯಾದಿ-ಪುರುಷಾರ್ಥಗಳನ್ನೂ ಹೊಂದುವುದರಿಂದ ಅಂಥ ಜ್ಞಾನವನ್ನು ಆವಶ್ಯಕವಾಗಿ ಸಂಪಾದಿಸಬೇಕು

## ೬. ನೈಜಸುಖದ ಅನುಭವವೇ ಮುಕ್ತಿ

ಜೀವನ ಸ್ವರೂಪಗಳಾದ ಸಾಮರ್ಥ್ಯ ಆನಂದ ಕಾಂತಿ ಸಹನಶಕ್ತಿ ಯಥಾರ್ಥಜ್ಞಾನ—ಇವುಗಳು ಪರಬ್ರಹ್ಮನ ಪ್ರಸಾದದಿಂದ ಅಭಿವ್ಯಕ್ತಗಳಾಗುತ್ತವೆ ಇದೇ ಮುಕ್ತಿ

## ೭. ಅಮಲವಾದ ಭಕ್ತಿಯೇ ಆ ಮುಕ್ತಿಗೆ ಸಾಧನ

ಮುಕ್ತಿಗೆ ಭಕ್ತಿಯು ಸಾಧನವು ವಿಷ್ಣುಭಕ್ತಿಯು ಪೂರ್ಣವಾದರೆ ಮುಕ್ತಿಯಾಗುವುದು. ನಿರಂತರವಾದ ಸ್ನೇಹಪ್ರವಾಹವೇ ಭಕ್ತಿಯೆನಿಸುವುದು

## ೮. ಪ್ರತ್ಯಕ್ಷಾದಿಗಳೇ ಮೂರು ಪ್ರಮಾಣಗಳು

ಪ್ರತ್ಯಕ್ಷ, ಅನುಮಾನ, ಆಗಮ—ಎಂದು ಪ್ರಮಾಣಗಳು ಮೂರು ವಿಧವಾಗಿವೆ ಉಪಮಾನಾದಿಗಳು ಇವುಗಳಲ್ಲೇ ಅಂತರ್ಭೂತಗಳಾಗಿವೆ ಈ ದರ್ಶನದಲ್ಲಿ ದ್ರವ್ಯಾದಿ ಹತ್ತು ಪದಾರ್ಥಗಳನ್ನೂ, ಪರಮಾತ್ಮ ಲಕ್ಷ್ಮೀ ಜೀವ ಮೊದಲಾದ ಇಪ್ಪತ್ತು ದ್ರವ್ಯಗಳನ್ನೂ, ರೂಪರಸಾದಿ ನಲವತ್ತೊಂದು ಗುಣಗಳನ್ನೂ, ವಿಹಿತನಿಷಿದ್ಧಾದಿ ಮೂರು ಬಗೆಯ ಕರ್ಮಗಳನ್ನೂ, ಸಾಮಾನ್ಯ-ವಿಶೇಷಗಳನ್ನೂ, ಅಚಿಂತ್ಯಾಧೇಯಗಳೇ ಮೊದಲಾದ ನಾಲ್ಕು ಬಗೆಯ ಶಕ್ತಿಗಳನ್ನೂ ಒಪ್ಪಿಕೊಂಡಿದೆ

## ೯. ಶ್ರೀಹರಿಯೇ ಎಲ್ಲ ವೇದಗಳಿಂದಲೂ ಪ್ರತಿಪಾದ್ಯನು

ಜಗಜ್ಜನ್ಮಾದಿಕಾರಣನಾದ ಶ್ರೀಹರಿಯನ್ನು ಸದಾಗಮಗಳಿಂದಲೇ ತಿಳಿಯಬೇಕು, ಪ್ರತ್ಯಕ್ಷಾನುಮಾನಗಳಿಂದ ತಿಳಿಯಲು ಸಾಧ್ಯವಿಲ್ಲ ವೇದಗಳೆಲ್ಲ ಶ್ರೀಹರಿಯನ್ನೇ ಪ್ರತಿಪಾದಿಸುತ್ತವೆ ವೇದದಲ್ಲಿ ಒಂದು ಭಾಗವು ಶ್ರೇಷ್ಠವೆಂದೂ ಇನ್ನೊಂದು ಭಾಗವು ಕನಿಷ್ಠವೆಂದೂ ಹೇಳುವುದು ಸರಿಯಲ್ಲ ವೇದದ ಕರ್ಮಕಾಂಡದಲ್ಲಿಯೂ ಜ್ಞಾನಕಾಂಡದಲ್ಲಿಯೂ ಶ್ರೀಹರಿಯ ಸರ್ವೋತ್ತಮತ್ವವನ್ನೇ ಪ್ರತಿಪಾದಿಸಿದೆ

ಮೇಲೆ ಹೇಳಿದ ಪ್ರಮೇಯರತ್ನಗಳನ್ನು ಶ್ರೀಮನ್ಮಧ್ವಾಚಾರ್ಯರು ತಮ್ಮ ಗ್ರಂಥಗಳಲ್ಲೆಲ್ಲ ವಿವರವಾಗಿ ಪ್ರತಿಪಾದಿಸಿರುತ್ತಾರೆ

# ಪ್ರಕೃತಗ್ರಂಥ

ಆಚಾರ್ಯತ್ರಯರ ಸೂತ್ರಭಾಷ್ಯಗಳ ಸಂಗ್ರಹವನ್ನು ಆದಷ್ಟು ಅವರ ಭಾಷೆಯಲ್ಲಿಯೇ ಕೊಡುವುದು ಈ ಗ್ರಂಥದ ಉದ್ದೇಶವಾಗಿದೆಯೇ ಹೊರತು ಅವುಗಳನ್ನು ತುಲನಾತ್ಮಕ-ದೃಷ್ಟಿಯಿಂದ ಪರಸ್ಪರ ಹೋಲಿಸಿ ಒಂದು ನಿರ್ಣಯವನ್ನು ಕೊಡುವುದು ಉದ್ದೇಶವಾಗಿಲ್ಲ. ಭಾಷ್ಯಗಳನ್ನು ಸಂಗ್ರಹಿಸುವಾಗ ಆವೃತ್ತಿಯಾಗಿ ಬರುವ ಅಂಶಗಳನ್ನೂ ದೃಷ್ಟಾಂತಗಳನ್ನೂ ಸೂತ್ರಕ್ಕೆ ನೇರವಾಗಿ ಸಂಬಂಧವಾಗದಿರುವ ವಿಷಯಗಳನ್ನೂ ತ್ಯಜಿಸಿ ಭಾಷ್ಯದ ಮೂಲರೂಪವನ್ನು ಸರಳವಾಗಿ ಸುಸಂಗತವಾಗಿ ರಕ್ಷಿಸಲು ಪ್ರಯತ್ನಿಸಿದೆ. ಆದಷ್ಟು ಭಾಷ್ಯದ ಮೂಲಭಾಷೆಯನ್ನೇ ಅಳವಡಿಸಿಕೊಂಡು ಅಪರಿಚಿತ ಶಬ್ದಗಳಿಗೆ ಟಿಪ್ಪಣಿಗಳಲ್ಲಿ ಅರ್ಥವನ್ನು ಕೊಟ್ಟಿದೆ. ಹೀಗೆಯೇ ವಿಷಯವಾಕ್ಯಗಳ ಮೂಲವೂ ಉದಾಹರಿಸಲ್ಪಟ್ಟ ಇತರ ಶ್ರುತಿಗಳೂ, ಭಾಷ್ಯಗಳಲ್ಲಿ ಮುಖ್ಯವೆಂದು ತೋರಿದ ವಾಕ್ಯಗಳೂ ಬಂದಿವೆ. ಸೂತ್ರ, ಸೂತ್ರಾರ್ಥ—ಇವುಗಳಾದ ಮೇಲೆ **ಮೊದಲು ಬರುವುದು ಶಾಂಕರಭಾಷ್ಯದ ಸಂಗ್ರಹ**; ಇದು ಸಂಶಯ-ಪೂರ್ವಪಕ್ಷ-ಸಿದ್ಧಾಂತ-ಪೂರ್ವಕವಾಗಿ ಬರುತ್ತದೆ. ಈ ಭಾಷ್ಯದಲ್ಲಿ ಹೇಳದಿರುವ ವಿಷಯಗಳನ್ನು ಅನಂತರ ಬರುವ ಶ್ರೀಭಾಷ್ಯದ (ವಿ.) ಸಂಗ್ರಹದಲ್ಲಿ ಕೊಟ್ಟಿದೆ; ಏಕೆಂದರೆ ಇವೆರಡು ಭಾಷ್ಯಗಳಿಗೂ—ಸ್ವಪಕ್ಷದ ಸಿದ್ಧಾಂತವನ್ನು ಬಿಟ್ಟರೆ—ಸೂತ್ರಾರ್ಥಗಳ ವ್ಯಾಖ್ಯಾನದಲ್ಲಿ ಹೆಚ್ಚು ಭೇದವಿರುವುದಿಲ್ಲ. ಸೂತ್ರಾರ್ಥವು ತೀರಾ ಭಿನ್ನವಾಗಿರುವಾಗ ಅದರ ಭಾಷಾಂತರವನ್ನು ಬೇರೆಯಾಗಿಯೇ ಕೊಟ್ಟಿದೆ. ಕೊನೆಯದಾಗಿ ಬರುವುದು ಶ್ರೀಮನ್ಮಧ್ವಾಚಾರ್ಯರ ಸೂತ್ರಭಾಷ್ಯ (ದ್ವೈ.). ಮಧ್ವಭಾಷ್ಯವು ಹಿಂದಿನ ಎರಡು ಭಾಷ್ಯಗಳಿಗಿಂತ ಅತ್ಯಂತ ಭಿನ್ನವಾಗಿರುವುದರಿಂದ ಅನೇಕ ಸೂತ್ರಗಳ ತಾತ್ಪರ್ಯವನ್ನು ಬೇರೆಯಾಗಿಯೇ ಕೊಟ್ಟಿದೆ. ಈ ಭಾಷ್ಯದಲ್ಲಿ ಉದಾಹರಿಸಿರುವ ಶ್ರುತಿ-ಸ್ಮೃತಿಗಳನ್ನು ಬಿಟ್ಟು ನೇರವಾಗಿರುವ ಭಾಷ್ಯದ ವಾಕ್ಯಗಳನ್ನು ಎಲ್ಲೆಲ್ಲಿಯೂ ಕೊಟ್ಟಿದೆ. ಹೀಗೆಯೇ ಅಧಿಕರಣದ ವಿಷಯದಲ್ಲಿ ಅಥವಾ ಸೂತ್ರದ ವಿಷಯದಲ್ಲಿ ಏನಾದರೂ ಭೇದವಿದ್ದರೆ ಅದನ್ನು ಟಿಪ್ಪಣಿಯಲ್ಲಿ ತೋರಿಸಲಾಗಿದೆ. ನಮಗೆ ತಿಳಿದಂತೆ ಭಾಷ್ಯತ್ರಯದ ಸಂಗ್ರಹವನ್ನು ಒಳಕೊಂಡು ಈ ಆಕಾರದಲ್ಲಿ ಪ್ರಕಾಶಿತವಾಗಿರುವ ಗ್ರಂಥವು ಇದೇ ಮೊದಲನೆಯದಾಗಿದೆ. ಇದನ್ನು ಓದಿದ ಓದುಗರು ಮೂಲಭಾಷ್ಯಗಳನ್ನು ಇನ್ನೂ ವಿವರವಾಗಿ ಅಧ್ಯಯನಮಾಡಲು ಪ್ರವೃತ್ತರಾದರೆ ನಮ್ಮ ಉದ್ದೇಶವು ಸಫಲವಾದಂತೆಯೇ ಆಗುವುದು.

ಶ್ರೀಮದ್ಭಗವದ್ಗೀತೆಯು ಮೂಲ-ಪ್ರತಿಪದಾರ್ಥ-ತಾತ್ಪರ್ಯ-ಟಿಪ್ಪಣಿಗಳೊಡನೆ ೧೯೫೬ರಲ್ಲಿ ಪ್ರಕಾಶಿತವಾಯಿತು. ೧೯೫೭ರಲ್ಲಿ ಈಶಾವಾಸ್ಯೋಪನಿಷತ್ತಿನಿಂದ ಪ್ರಾರಂಭವಾದ ಉಪನಿಷತ್-ಪ್ರಸ್ಥಾನವು ೧೯೬೦ರಲ್ಲಿ ಛಾಂದೋಗ್ಯೋಪನಿಷತ್ತಿನ ಪ್ರಕಾಶನದೊಂದಿಗೆ ಮುಕ್ತಾಯವಾಯಿತು. ಅನಂತರ ಪ್ರಾರಂಭಿಸಲ್ಪಟ್ಟ 'ಬ್ರಹ್ಮಸೂತ್ರಗಳು' ಈಗ ಪೂರ್ತಿಯಾಯಿತು. ಇದಕ್ಕೆ ಮುಖ್ಯವಾಗಿ ಭಗವದ್ರಾಮಕೃಷ್ಣರ ಪರಮಾನು-

ಗ್ರಹವೇ ಕಾರಣವಾಗಿದೆ. ಭಗವಂತನ ಸಂಕಲ್ಪವನ್ನು ಕಾರ್ಯರೂಪಕ್ಕೆ ತರಲು ಕಾರಣರಾದವರು ಮೈಸೂರು ಶ್ರೀರಾಮಕೃಷ್ಣಾಶ್ರಮಕ್ಕೆ ಸೇರಿದ ಶ್ರೀಸ್ವಾಮಿ ಸೋಮನಾಥಾನಂದರು. ಇವರಿಗೆ ನನ್ನ ಅನಂತಧನ್ಯವಾದಗಳು ಮೊದಲು ಸಲ್ಲಬೇಕು. ಮೊದಲಿನಿಂದ ಕೊನೆಯವರೆಗೂ ಪ್ರಸ್ಥಾನತ್ರಯವನ್ನು ಸುಂದರವಾಗಿ ಶ್ರದ್ಧೆಯಿಂದ ಮುದ್ರಿಸಿದವರು ಮಂಗಳೂರಿನ ಶಾರದಾ ಛಾಪಖಾನೆಯ ಕಾಮತ್ ಸಹೋದರರು. ಇವರಿಗೂ ನನ್ನ ಧನ್ಯವಾದಗಳು.

ನಮೋ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ

ಶ್ರೀರಾಮಕೃಷ್ಣಾಶ್ರಮ
ಮೈಸೂರು
೨೦—೮—೧೯೩೪

ಸ್ವಾಮಿ ಆದಿದೇವಾನಂದ

# ವಿಷಯಸೂಚಿಕೆ

## ಮೊದಲನೆಯ ಅಧ್ಯಾಯ

## ಎರಡನೆಯ ಅಧ್ಯಾಯ

## ಮೂರನೆಯ ಅಧ್ಯಾಯ

ಮೊದಲನೆಯ ಪಾದ



ಎರಡನೆಯ ಪಾದ



ಮೂರನೆಯ ಪಾದ

## ನಾಲ್ಕನೆಯ ಅಧ್ಯಾಯ

# ಮೊದಲನೆಯ ಅಧ್ಯಾಯ

## ಮೊದಲನೆಯ ಪಾದ

### ೧. ಜಿಜ್ಞಾಸಾಧಿಕರಣ

**ಅಥಾತೋ ಬ್ರಹ್ಮಜಿಜ್ಞಾಸಾ ॥ ೧ ॥**

೧. ಇನ್ನು ಆದುದರಿಂದ ಬ್ರಹ್ಮವನ್ನು ಅರಿತುಕೊಳ್ಳಲು ಇಚ್ಛಿಸಬೇಕು.

**ಅಥ**—ಕೆಲವು ಆವಶ್ಯಕವಾದ ನಿಯಮಗಳನ್ನು ಮೊದಲು ಅನುಸರಿಸಿದ ಮೇಲೆ ಬ್ರಹ್ಮವನ್ನು ಅರಿತುಕೊಳ್ಳಲು ಬಯಕೆಯು ಹುಟ್ಟುತ್ತದೆ ಎಂಬುದನ್ನು ಅಥ-ಶಬ್ದವು ಸೂಚಿಸುತ್ತದೆ. ಅಥ-ಶಬ್ದಕ್ಕೆ ಅನಂತರ ಅಥವಾ ಆಮೇಲೆ ಎಂಬುದು ಅರ್ಥ. ಹೀಗೆ ಅಥ-ಶಬ್ದಕ್ಕೆ ಆನಂತರ್ಯವೇ ಅರ್ಥವಾದರೆ ಯಾವ ನಿಯಮಗಳನ್ನು ಅವಶ್ಯವಾಗಿ ಅನುಸರಿಸಬೇಕು? ವೇದಾಧ್ಯಯನವು ಆಗಿರಲಾರದು ; ಏಕೆಂದರೆ ಇದು ಪೂರ್ವಮೀಮಾಂಸೆಯ ವಿಷಯವಾದ ಧರ್ಮಜಿಜ್ಞಾಸೆಗೂ ವೇದಾಂತದ ವಿಷಯವಾದ ಬ್ರಹ್ಮಜಿಜ್ಞಾಸೆಗೂ ಸಮಾನವಾಗಿರುತ್ತದೆ. ಪೂರ್ವಮೀಮಾಂಸೆಯಿಂದ ಹೊಂದಬಹುದಾದ ಕರ್ಮ-ಜ್ಞಾನವು ಆಗಿರಲಾರದು ; ಏಕೆಂದರೆ ವೇದಾಂತವನ್ನು ಅಧ್ಯಯನಮಾಡಿದವನು ಧರ್ಮಜಿಜ್ಞಾಸೆಯನ್ನು ಮಾಡುವುದಕ್ಕೂ ಮೊದಲೇ ಬ್ರಹ್ಮಜಿಜ್ಞಾಸೆಯನ್ನು ಮಾಡಬಹುದು. ಧರ್ಮಜ್ಞಾನದ ಫಲ ಅಭ್ಯುದಯ ; ಇದನ್ನು ಹೊಂದಲು ಅನುಷ್ಠಾನವು ಆವಶ್ಯಕ. ಇದಲ್ಲದೆ ಜಿಜ್ಞಾಸೆಗೆ ವಿಷಯವಾದ ಧರ್ಮವು ಮುಂದೆ ಉಂಟಾಗತಕ್ಕದ್ದು, ಜ್ಞಾನಕಾಲದಲ್ಲಿ ಇರುವುದಿಲ್ಲ ; ಏಕೆಂದರೆ ಇದು ಪುರುಷವ್ಯಾಪಾರಕ್ಕೆ ಅಧೀನವಾಗಿದೆ. ಜ್ಞಾನದ ಫಲ ನಿಃಶ್ರೇಯಸ್ಸು : ಇದನ್ನು ಪಡೆಯಲು ಯಾವ ಅನುಷ್ಠಾನವೂ ಬೇಕಾಗಿಲ್ಲ. ಜಿಜ್ಞಾಸೆಗೆ ವಿಷಯವಾದ ಬ್ರಹ್ಮವು ಎಲ್ಲ ಕಾಲದಲ್ಲಿಯೂ ನಿತ್ಯವಾಗಿರುವುದರಿಂದ ಪುರುಷವ್ಯಾಪಾರಕ್ಕೆ ಅಧೀನವಲ್ಲ. ಈ ಎರಡು ಜಿಜ್ಞಾಸೆಗಳ ಚೋದನಾಪ್ರವೃತ್ತಿಗಳೇ ಬೇರೆ ಬೇರೆಯಾಗಿರುತ್ತವೆ. ಧರ್ಮ-ಚೋದನೆಯು ಮನುಷ್ಯನನ್ನು ಕರ್ಮದಲ್ಲಿ ತೊಡಗಿಸುತ್ತಲೇ ಇದ್ದರೆ ಬ್ರಹ್ಮ-ಚೋದನೆಯು ಜ್ಞಾನವನ್ನು ಮಾತ್ರ ಉಂಟುಮಾಡುತ್ತದೆ.

ಬ್ರಹ್ಮಜಿಜ್ಞಾಸೆಗೆ ಮೊದಲೇ ಅನುಸರಿಸಬೇಕಾದ ನಿಯಮಗಳು ಯಾವುವೆಂದರೆ : **(೧) ನಿತ್ಯಾನಿತ್ಯವಸ್ತುವಿವೇಕಃ ;** ಯಾವುದು ನಿತ್ಯ, ಯಾವುದು ಅನಿತ್ಯ ಎಂಬ ವಿವೇಚನೆ. **(೨) ಇಹಾಮುತ್ರಾರ್ಥಫಲಭೋಗವಿರಾಗಃ ;** ಈ ಲೋಕದ ಮತ್ತು ಪರಲೋಕದ ವಿಷಯಭೋಗಗಳಲ್ಲಿ ಆಸಕ್ತಿಯಿಲ್ಲದಿರುವುದು. **(೩) ಶಮದಮಾದಿಸಾಧನಸಂಪತ್;** ಶಮ ದಮ ಉಪರತಿ ತಿತಿಕ್ಷೆ ಸಮಾಧಾನ ಮತ್ತು ಶ್ರದ್ಧೆ ಎಂಬ ಸಾಧನೆ

ಗಳ ಸಂಪತ್ತು. (೪) **ಮುಮುಕ್ಷುತ್ವವ್** ; ಮೋಕ್ಷಕ್ಕಾಗಿ ಬಯಕೆ. ಪ್ರತ್ಯಗಾತ್ಮನು ನಿತ್ಯನೆಂದೂ ದೇಹೇಂದ್ರಿಯವಿಷಯಾದಿಗಳು ಅನಿತ್ಯವೆಂದೂ ಅರಿತುಕೊಂಡರೆ ಸರ್ವ ಭೋಗಗಳಲ್ಲಿಯೂ ವಿರಕ್ತಿಯುಂಟಾಗುವುದು ಅನಂತರ ಶಮದಮಾದಿಗಳು ತಾವಾಗಿಯೇ ಉತ್ಪನ್ನವಾಗುತ್ತವೆ. ಹೀಗೆ ಅಥ-ಶಬ್ದವು ಸಾಧನಸಂಪತ್ತಿಯ ಆನಂತರ್ಯವನ್ನು ಸೂಚಿಸುತ್ತದೆ.

**ಅತಃ**—ಈ ಶಬ್ದವು ಕಾರಣವನ್ನು ಸೂಚಿಸುತ್ತದೆ ; ಏಕೆಂದರೆ ವೇದವೇ ಅಗ್ನಿಹೋತ್ರಾದಿ-ಶ್ರೇಯಃಸಾಧನಗಳ ಫಲವು ಅನಿತ್ಯವೆಂದು ತಿಳಿಸುವಾಗ[1] ಬ್ರಹ್ಮಜ್ಞಾನದಿಂದಲೇ ಮನುಷ್ಯನ ಪರಮಪುರುಷಾರ್ಥವು ಉಂಟಾಗುವುದೆಂದು ಉಪದೇಶಿಸುತ್ತದೆ[2] ಆದುದರಿಂದ ಸಾಧನಸಂಪತ್ತಿಯನ್ನು ಪಡೆದಮೇಲೆಯೇ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು

**ಬ್ರಹ್ಮಜಿಜ್ಞಾಸಾ**—ಬ್ರಹ್ಮದ ಜಿಜ್ಞಾಸೆಯು, ಬ್ರಹ್ಮಜಿಜ್ಞಾಸೆ.[3] ಅರಿತುಕೊಳ್ಳಬೇಕೆಂಬ ಇಚ್ಛೆಗೆ ಜಿಜ್ಞಾಸೆಯೆಂದು ಹೆಸರು. ಸೂತ್ರಕಾರರು ಪ್ರಯೋಗಿಸಿರುವ ಈ ಶಬ್ದದಲ್ಲಿ ವಿಶೇಷಸ್ವಾರಸ್ಯವಿದೆ. ಬ್ರಹ್ಮಜ್ಞಾನವು ಮೂಢನಂಬಿಕೆಯಿಂದ ಉತ್ಪನ್ನವಾಗಲಾರದು, ವಿಚಾರದಿಂದಲೇ ಉತ್ಪನ್ನವಾಗಬೇಕು. ಬ್ರಹ್ಮಜ್ಞಾನವು ಉತ್ಪನ್ನವಾಗುವವರೆಗೂ ವಿಚಾರವು ನಿಲ್ಲುವುದಿಲ್ಲ. ಅರಿವಿನಲ್ಲಿ (ಎಂದರೆ ಸಾಕ್ಷಾತ್ಕಾರದಲ್ಲಿ) ಪರ್ಯವಸಾನವಾಗುವ ಜ್ಞಾನವೇ ಇಚ್ಛೆಯ ಗುರಿ ಎಂಬುದನ್ನು ಜಿಜ್ಞಾಸಾ-ಪದದಲ್ಲಿರುವ **ಸನ್**-ಪ್ರತ್ಯಯವು ಸೂಚಿಸುತ್ತದೆ.[4] ಬ್ರಹ್ಮಜ್ಞಾನವೇ ಪುರುಷಾರ್ಥ ; ಏಕೆಂದರೆ ಅದು ಸಂಸಾರಕ್ಕೆ ಬೀಜವಾಗಿರುವ ಅವಿದ್ಯೆಯೇ ಮೊದಲಾದ ಅನರ್ಥಗಳನ್ನು ನಿಃಶೇಷವಾಗಿ ನಾಶಮಾಡುತ್ತದೆ. ಆದುದರಿಂದ ಬ್ರಹ್ಮವನ್ನು ಅರಿತುಕೊಳ್ಳಲು ಇಚ್ಛಿಸಬೇಕು.

ಈಗ ಒಂದು ಆಕ್ಷೇಪಣೆಯನ್ನು ಹೇಳಬಹುದು : ಬ್ರಹ್ಮವು ಪ್ರಸಿದ್ಧವಸ್ತುವೊ ಅಥವಾ ಅಪ್ರಸಿದ್ಧವಸ್ತುವೊ ? ಪ್ರಸಿದ್ಧವಾಗಿದ್ದರೆ ಜಿಜ್ಞಾಸೆಮಾಡಬೇಕಾದ ಆವಶ್ಯಕತೆಯಿಲ್ಲ, ಅಪ್ರಸಿದ್ಧವಾಗಿದ್ದರೆ ಜಿಜ್ಞಾಸೆಮಾಡಲು ಆಗುವುದಿಲ್ಲ. ಇದಕ್ಕೆ ಪರಿಹಾರವನ್ನು ಹೀಗೆ ಹೇಳಿದೆ : ಬ್ರಹ್ಮವು ಪ್ರಸಿದ್ಧವಸ್ತು. ಸರ್ವಜ್ಞವೂ ಸರ್ವಶಕ್ತಿ-ಸಮನ್ವಿತವೂ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವಭಾವವುಳ್ಳದ್ದೂ ಆದ ಬ್ರಹ್ಮವು ಇದೆ. **ಬೃಹ್** ಎಂಬ ಧಾತುವಿನ

---

[1] 'ಹೇಗೆ ಇಲ್ಲಿ ಕರ್ಮಾರ್ಜಿತವಾದ ಭೋಗವು ಕ್ಷೀಣವಾಗುತ್ತದೆಯೊ ಹಾಗೆಯೆ (ಅಗ್ನಿಹೋತ್ರಾದಿ) ಪುಣ್ಯದಿಂದ ಆರ್ಜಿತವಾದ ಭೋಗವೂ ಕ್ಷೀಣವಾಗುತ್ತದೆ' ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ (ಛಾಂ. ಉ. ೮. ೧. ೬).

[2] 'ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ' ಬ್ರಹ್ಮವಿದಾಪ್ನೋತಿ ಪರಮ್ (ತೈ. ಉ. ೨. ೧).

[3] ಬ್ರಹ್ಮಣೋ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ (ಸೂ. ಭಾ.).

[4] ಅವಗತಿಪರ್ಯಂತಂ ಜ್ಞಾನಂ ಸನ್-ವಾಚ್ಯಾಯಾ ಇಚ್ಛಾಯಾಃ ಕರ್ಮ (ಸೂ. ಭಾ.).

ಪ್ರಕಾರ ಬ್ರಹ್ಮ-ಶಬ್ದದ ವ್ಯುತ್ಪತ್ತಿಯನ್ನು ಮಾಡಿದರೆ ನಿತ್ಯಶುದ್ಧತ್ವಾದಿಗಳು ಬ್ರಹ್ಮಕ್ಕೇ ಸೇರಿರಬೇಕೆಂದು ತಿಳಿದುಬರುತ್ತದೆ. ಬ್ರಹ್ಮ-ಶಬ್ದವು ವೇದದಲ್ಲಿ ಬಂದಿರುವುದರಿಂದ ಬ್ರಹ್ಮ ಮೀಮಾಂಸೆಗೆ ಮೊದಲೇ ಬ್ರಹ್ಮದ ಅಸ್ತಿತ್ವವು ನಮಗೆ ತಿಳಿದಿದ್ದರೂ ಶಬ್ದನಿಷ್ಪತ್ತಿಯಿಂದ ಬ್ರಹ್ಮದ ಗುಣಗಳನ್ನು ಅನುಮಾನಿಸಬಹುದು. ಇದಲ್ಲದೆ ಬ್ರಹ್ಮವು ಸರ್ವಾತ್ಮವಾಗಿರುವುದ ರಿಂದ ಅದರ ಅಸ್ತಿತ್ವವು ಪ್ರಸಿದ್ಧವಾಗಿರುತ್ತದೆ ; ಏಕೆಂದರೆ ಪ್ರತಿಯೊಬ್ಬನೂ ತಾನು ಇರುವೆ ನೆಂದು ಅರಿತುಕೊಂಡಿರುವನೆ ಹೊರತು ತಾನಿಲ್ಲವೆಂದು ಅರಿತುಕೊಂಡಿರುವುದಿಲ್ಲ. ಆತ್ಮನ ಅಸ್ತಿತ್ವವು ಪ್ರಸಿದ್ಧವಾಗಿಲ್ಲದಿದ್ದರೆ ಪ್ರತಿಯೊಬ್ಬನೂ 'ನಾನಿಲ್ಲ' ಎಂದೇ ಚಿಂತಿಸಬಹುದಾ ಗಿತ್ತು. ನಮಗೆ ತಿಳಿದಿರುವ ಆತ್ಮನೇ ಬ್ರಹ್ಮವು.

ಹೀಗೆ ಬ್ರಹ್ಮವು ಆತ್ಮರೂಪದಿಂದ ಪ್ರಸಿದ್ಧವಾಗಿದ್ದರೂ ಜಿಜ್ಞಾಸೆಗೆ ಅವಕಾಶವಿದೆ ; ಏಕೆಂದರೆ ಬ್ರಹ್ಮದ ವಿಶೇಷಸ್ವರೂಪದ ವಿಷಯದಲ್ಲಿ ವಿರುದ್ಧಾಭಿಪ್ರಾಯಗಳಿವೆ. ಚೈತನ್ಯ ವೆಂಬ ಗುಣದಿಂದ ಕೂಡಿರುವ ದೇಹವೇ ಆತ್ಮನೆಂದೂ ಚೈತನ್ಯದಿಂದ ಕೂಡಿರುವ ಇಂದ್ರಿಯ ಗಳೇ ಆತ್ಮನೆಂದೂ ಮನಸ್ಸೇ ಆತ್ಮನೆಂದೂ ಪ್ರಾಕೃತಜನರೂ ಲೋಕಾಯತಿಕರೂ ತಿಳಿದು ಕೊಂಡಿರುತ್ತಾರೆ. ಕ್ಷಣಿಕವಾದ ಜ್ಞಾನವು ಆತ್ಮನೆಂದು ಯೋಗಾಚಾರಬೌದ್ಧರೂ, ಶೂನ್ಯವೇ ಆತ್ಮನೆಂದು ಮಾಧ್ಯಮಿಕಬೌದ್ಧರೂ ಅರಿತುಕೊಂಡಿರುತ್ತಾರೆ. ದೇಹಾದಿಗಳಿ ಗಿಂತ ಭಿನ್ನನೂ, ಕರ್ತೃವೂ, ಭೋಕ್ತೃವೂ ಆದ ಸಂಸಾರಿಯು ಇರುವನೆಂಬುದು ತಾರ್ಕಿ ಕರ ಮತ. ಆತ್ಮನು ಕೇವಲ ಭೋಕ್ತೃವೇ ಹೊರತು ಕರ್ತೃವಲ್ಲವೆಂಬುದು ಸಾಂಖ್ಯರ ಮತ. ಜೀವಾತ್ಮರಿಗಿಂತ ಭಿನ್ನನೂ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನು ಇರುವ ನೆಂಬುದು ಯೋಗಮತ. ಆದರೆ ಬ್ರಹ್ಮವು ಅಥವಾ ಭಗವಂತನು ಭೋಕ್ತೃವಾದ ಜೀವನ ಆತ್ಮನೇ ಎಂಬುದು ವೇದಾಂತಿಗಳಿಗೆ ಇಷ್ಟವಾದ ಅಭಿಪ್ರಾಯ.

ಹೀಗೆ ಕೆಲವು ಕಡೆಗಳಲ್ಲಿ ಸರಿಯಾದ ಯುಕ್ತಿಗಳನ್ನೂ ವೇದಾಂತವಾಕ್ಯಗಳನ್ನೂ ಅವಲಂಬಿಸಿರುವ ಅಭಿಪ್ರಾಯಗಳೂ, ಮತ್ತೆ ಕೆಲವೆಡೆಗಳಲ್ಲಿ ಕುಯುಕ್ತಿಗಳನ್ನೂ ತಪ್ಪಾಗಿ ಅರಿತುಕೊಂಡಿರುವ ವೇದಾಂತವಾಕ್ಯಗಳನ್ನೂ ಆಶ್ರಯಿಸಿರುವ ಅಭಿಪ್ರಾಯಗಳೂ ಇವೆ. ಮನುಷ್ಯನು ವಿಚಾರಮಾಡದೆ ಯಾವುದೂ ಒಂದು ಅಭಿಪ್ರಾಯವನ್ನು ಅವಲಂಬಿಸಿದರೆ ಅವನು ನಿಃಶ್ರೇಯಸ್ಸನ್ನೂ ಕಳೆದುಕೊಳ್ಳಬೇಕಾದೀತು. ಅನರ್ಥವನ್ನೂ ಹೊಂದಬೇಕಾ ದೀತು. ಆದುದರಿಂದ ಮೊದಲನೆಯ ಸೂತ್ರವು ಬ್ರಹ್ಮಜಿಜ್ಞಾಸೋಪನ್ಯಾಸದ ಮೂಲಕ ನಿಃಶ್ರೇಯಸ್ಸೆಂಬ ಪ್ರಯೋಜನವುಳ್ಳ **ವೇದಾಂತವಾಕ್ಯಗಳ ಮೀಮಾಂಸೆಯನ್ನು** ಅವುಗಳಿಗೆ ವಿರೋಧವಾಗದ ತರ್ಕದ ಸಹಾಯದಿಂದ ಪ್ರಾರಂಭಿಸಿರುತ್ತದೆ.

**ವಿ.**—ಶ್ರೀಭಾಷ್ಯಕಾರರೂ ಕೂಡ ಅಥ-ಶಬ್ದಕ್ಕೆ ಆನಂತರ್ಯವೆಂಬ ಅರ್ಥವನ್ನೇ ಕೊಟ್ಟಿರುತ್ತಾರೆ. ಕರ್ಮಕಾಂಡದ ವಿಚಾರವನ್ನು ಮಾಡಿದಮೇಲೆಯೇ ಬ್ರಹ್ಮವಿಚಾರವನ್ನು ಮಾಡಬೇಕೆಂಬುದನ್ನು ಅಥ-ಶಬ್ದವು ಸೂಚಿಸುತ್ತದೆ.[1] ಮುಂದೆ ಹೆಚ್ಚು ಕಡಮೆ ಇದೇ

---

[1] ಕರ್ಮವಿಚಾರಾನಂತರಂ ತತ ಏವ ಹೇತೋಃ ಬ್ರಹ್ಮವಿಚಾರಃ ಕರ್ತವ್ಯ ಇತಿ (ಶ್ರೀಭಾಷ್ಯ).

ಅರ್ಥವನ್ನೇ ಶ್ರೀಕಂಠ ನಿಂಬಾರ್ಕ ವಲ್ಲಭ ಮೊದಲಾದ ಭಾಷ್ಯಕಾರರು ಕೊಟ್ಟಿರುತ್ತಾರೆ. ಅತಃ-ಶಬ್ದವು ಹಿಂದೆ ಆಗಿಹೋದದ್ದು (ಎಂದರೆ ಕರ್ಮಕಾಂಡದ ಜ್ಞಾನ) ಬ್ರಹ್ಮಜಿಜ್ಞಾಸೆಗೆ ಕಾರಣವೆಂಬುದನ್ನು ಸೂಚಿಸುತ್ತದೆ. ಎಲ್ಲ ಅಂಗಗಳಿಂದ ಕೂಡಿರುವ ವೇದಗಳನ್ನು ಅಧ್ಯಯನಮಾಡಿ, ಕರ್ಮಫಲವು ಅಲ್ಪವೂ ಅಸ್ಥಿರವೂ ಎಂದು ಅರಿತುಕೊಂಡು, ಮೋಕ್ಷಾಭಿಲಾಷೆಯನ್ನು ಪಡೆದ ಕೂಡಲೇ ಅನಂತ-ಸ್ಥಿರ-ಫಲವುಳ್ಳ ಬ್ರಹ್ಮಜಿಜ್ಞಾಸೆಯು ಉಂಟಾಗುತ್ತದೆ ಎಂದು ಅಭಿಪ್ರಾಯ.[1] ಕರ್ಮ-ಜ್ಞಾನವನ್ನು ಪಡೆದಮೇಲೆ ಬ್ರಹ್ಮವಿಚಾರವು ಬರುತ್ತದೆ ಎಂದು ವೃತ್ತಿಕಾರರಾದ ಬೋಧಾಯನರು ಹೇಳಿರುತ್ತಾರೆ.[2] ಬ್ರಹ್ಮ-ಶಬ್ದವು ಸ್ವಭಾವದಿಂದಲೇ ನಿಖಿಲದೋಷರಹಿತನೂ ಅವಧಿಯಿಲ್ಲದ ಅತಿಶಯವುಳ್ಳ ಕಲ್ಯಾಣಗುಣಗಣಗಳಿಂದ ಕೂಡಿರುವವನೂ ಆದ ಪುರುಷೋತ್ತಮನನ್ನು ನಿರ್ದೇಶಿಸುತ್ತದೆ.[3] ಪೂರ್ವಮೀಮಾಂಸೆಯೂ ಬ್ರಹ್ಮಮೀಮಾಂಸೆಯೂ ಒಂದೇ ಶಾಸ್ತ್ರವಾಗಿವೆ; ಅವುಗಳಲ್ಲಿ ಪ್ರತಿಪಾದಿಸಿರುವ ವಿಷಯದೃಷ್ಟಿಯಿಂದ ಪೂರ್ವೋತ್ತರ-ಮೀಮಾಂಸೆಗಳಿಗೆ ಭೇದವನ್ನು ಹೇಳಿದೆ.

ಪರಬ್ರಹ್ಮನೂ ಸಿದ್ಧವಸ್ತುವಾದುದರಿಂದ ಅವನನ್ನು ನಿರ್ದೇಶಿಸಲು ಕೇವಲ ವಾಕ್ ಆದ ವೇದಾಂತಕ್ಕೆ ಸಾಮರ್ಥ್ಯವಿಲ್ಲವೆಂದು ತಿಳಿಯಕೂಡದು; ಏಕೆಂದರೆ ವ್ಯವಹಾರದಲ್ಲಿಯೂ ಕೂಡ ಪದಕ್ಕೆ ಸಿದ್ಧವಸ್ತುವನ್ನು ತಿಳಿಯಪಡಿಸುವ ಶಕ್ತಿ ಇರುವುದು ನಮಗೆ ಕಂಡುಬರುತ್ತದೆ; ಪದವು ಯಾವಾಗಲೂ ಕಾರ್ಯಪರವಾಗಿರಬೇಕೆಂಬ ನಿಯಮವಿಲ್ಲ. ತಾಯಿಯೊ ತಂದೆಯೋ ಮಕ್ಕಳಿಗೆ 'ಇದು ಸೂರ್ಯ, ಇದು ಚಂದ್ರ, ಇದು ಮರ' ಎಂದು ಬೆರಳಿನಿಂದ ನಿರ್ದೇಶಿಸಿ ಆಯಾ ಪದಗಳನ್ನೂ ಅವುಗಳ ಅರ್ಥಗಳನ್ನೂ ಕಲಿಯುವಂತೆ ಮಾಡುತ್ತಾರೆ. ಮಕ್ಕಳು ಅರಿತುಕೊಳ್ಳುವ ವಿಷಯಗಳೆಲ್ಲ ಸಿದ್ಧವಸ್ತುಗಳೇ ಹೊರತು ಮಾಡಬೇಕಾದ ಕಾರ್ಯಗಳಲ್ಲ. ಇವರು ಸ್ವಲ್ಪ ದೊಡ್ಡವರಾದ ಮೇಲೆ ಪದಕ್ಕೂ ವಸ್ತುವಿಗೂ ಇರುವ ಸಂಬಂಧವನ್ನೂ, ಏಕೆ ಒಂದು ನಿರ್ದಿಷ್ಟಪದವು ಒಂದು ನಿರ್ದಿಷ್ಟವಸ್ತುವನ್ನು ಸೂಚಿಸುತ್ತದೆ ಎಂಬುದನ್ನೂ ಅರಿತುಕೊಳ್ಳುತ್ತಾರೆ. ಹೀಗೆ ವಾಕ್ಯಕ್ಕೆ ಯಾವ ಕಾರ್ಯದ ಸಂಬಂಧವೂ ಇಲ್ಲದೆ ವಸ್ತುವನ್ನು ತನ್ನ ಶಕ್ತಿಯಿಂದ ತಿಳಿಸುವ ಸಾಮರ್ಥ್ಯವಿರುವುದರಿಂದ ವೇದಾಂತವಾಕ್ಯಗಳು ಪರಬ್ರಹ್ಮನ ವಿಷಯದಲ್ಲಿ ಪ್ರಮಾಣಗಳಾಗಿವೆ. ಆದುದರಿಂದ ಬ್ರಹ್ಮ-ಮೀಮಾಂಸೆಯನ್ನು ಮಾಡಬೇಕು.

**ದ್ವೈತ.**—ಅಥ-ಶಬ್ದವು ಮಂಗಳವನ್ನೂ ಅಧಿಕಾರದ ಆನಂತರ್ಯವನ್ನೂ ಸೂಚಿಸುತ್ತದೆ;[4] ಅಧಿಕಾರವನ್ನು ಪಡೆದಮೇಲೆಯೇ ವೇದಾಂತವಿಚಾರವನ್ನೂ ಮಾಡಬೇಕೆಂದು

---

[1] ಅಧೀತಸಾಂಗಸಶಿರಸ್ಕವೇದಸ್ಯ ಅಧಿಗತಾಲ್ಪಾಸ್ಥಿರಫಲಕೇವಲಕರ್ಮಜ್ಞಾನತಯಾ ಸಂಜಾತಮೋಕ್ಷಾಭಿಲಾಷಸ್ಯ ಅನಂತಸ್ಥಿರಫಲಬ್ರಹ್ಮಜಿಜ್ಞಾಸಾ ಹ್ಯನಂತರ-ಭಾವಿನೀ (ಶ್ರೀಭಾಷ್ಯ).

[2] ವೃತ್ತಾತ್ ಕರ್ಮಾಧಿಗಮಾದನಂತರಂ ಬ್ರಹ್ಮವಿವಿದಿಷಾ (ಶ್ರೀಭಾಷ್ಯ).

[3] ಬ್ರಹ್ಮಶಬ್ದೇನ ಸ್ವಭಾವತಃ ನಿರಸ್ತನಿಖಿಲದೋಷೋऽನವಧಿಕಾತಿಶಯಾಸಂಖ್ಯೇಯ-ಕಲ್ಯಾಣಗುಣಗಣಃ ಪುರುಷೋತ್ತಮೋऽಭಿಧೀಯತೇ (ಶ್ರೀಭಾಷ್ಯ).

[4] ಅಥಶಬ್ದೋ ಮಂಗಲಾರ್ಥೋऽಧಿಕಾರಾನಂತರ್ಯಾರ್ಥಶ್ಚ (ಮ. ಭಾ.).

ಅರ್ಥ ಭಾಗವತ-ತಂತ್ರದ ಪ್ರಕಾರ ಅಧಿಕಾರಿಗಳು ಮಂದ ಮಧ್ಯಮ ಉತ್ತಮ ಎಂಬ ಭೇದದಿಂದ ಮೂರು ಬಗೆಯಾಗಿರುತ್ತಾರೆ ಮನುಷ್ಯರಲ್ಲಿ ಉತ್ತಮರಾದವರು ಮಂದಾಧಿಕಾರಿಗಳು, ಋಷಿಗಳೂ ಗಂಧರ್ವರೂ ಮಧ್ಯಮಾಧಿಕಾರಿಗಳು, ದೇವತೆಗಳು ಉತ್ತಮಾಧಿಕಾರಿಗಳು. ಇದು ಜಾತಿಕೃತವಾದ ಭೇದ. ಅಧಿಕಾರಿಗಳನ್ನು ಗುಣದೃಷ್ಟಿಯಿಂದಲೂ ವಿಂಗಡಿಸಬಹುದು : ಅಧ್ಯಯನವನ್ನು ಮಾಡಿದವನೂ ವಿಷ್ಣುಭಕ್ತಿಯುಳ್ಳವನೂ ಆದ ಮನುಷ್ಯನು ಅಧಮಾಧಿಕಾರಿ. ಭಕ್ತಿ ಅಧ್ಯಯನ ಇವುಗಳೊಂದಿಗೆ ಶಮಾದಿಗಳಿಂದ ಕೂಡಿರುವವನು ಮಧ್ಯಮಾಧಿಕಾರಿ. ಬ್ರಹ್ಮನಿಂದ ಹಿಡಿದು ಹುಲ್ಲಿನ ವರೆಗೆ ಎಲ್ಲವೊ ಅನಿತ್ಯವೆಂದೂ ಅಸಾರವೆಂದೂ ಅರಿತು, ವೈರಾಗ್ಯವುಳ್ಳವನಾಗಿ ವಿಷ್ಣುವಾದವನ್ನೇ ಆಶ್ರಯಿಸುವವನು ಉತ್ತಮಾಧಿಕಾರಿ. ಶ್ರೀಮನ್ನಾರಾಯಣನ ಪ್ರಸಾದವಿಲ್ಲದೆ ಮೋಕ್ಷವು ಸಿದ್ಧಿಸುವುದಿಲ್ಲ, ಅವನನ್ನು ಅರಿತುಕೊಳ್ಳದಿದ್ದರೆ ಅವನ ಪ್ರಸಾದವು ಲಭಿಸುವುದಿಲ್ಲ, ಆದುದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು.[1] ಇದು ಅತಃ-ಶಬ್ದದ ಅರ್ಥ. ಬ್ರಹ್ಮ-ಶಬ್ದವು ವಿಷ್ಣುವನ್ನೇ ನಿರ್ದೇಶಿಸುತ್ತದೆ.[2]

---

[1] ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ನ ಚ ಜ್ಞಾನಂ ವಿನಾಽತ್ಯರ್ಥ-ಪ್ರಸಾದಃ, ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ (ಮ. ಭಾ.).

[2] ಬ್ರಹ್ಮಶಬ್ದಶ್ಚ ವಿಷ್ಣಾವೇವ (ಮ. ಭಾ.).

# ೨. ಜನ್ಮಾದ್ಯಧಿಕರಣ

## ಜನ್ಮಾದ್ಯಸ್ಯ ಯತಃ ॥ ೨ ॥

೨. ಈ ಜಗತ್ತಿನ ಉತ್ಪತ್ತಿ ಮೊದಲಾದುವು ಯಾವುದರಿಂದ (ಉಂಟಾಗುವುವೋ ಅದು ಬ್ರಹ್ಮ).

ಬ್ರಹ್ಮವನ್ನು ಅರಿತುಕೊಳ್ಳಲು ಬಯಸಬೇಕೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದಾಯಿತು. ಹಾಗಾದರೆ ಆ ಬ್ರಹ್ಮದ ಲಕ್ಷಣಗಳೇನು? ಜಗತ್ಕಾರಣತ್ವವೇ ಮೊದಲಾದುವು ಬ್ರಹ್ಮದ ಲಕ್ಷಣಗಳೆಂದು ಇಲ್ಲಿ ಹೇಳಿದೆ.

'ಯಾವುದರಿಂದ ಈ ಪ್ರಾಣಿಗಳು ಹುಟ್ಟುವುವೊ, ಹಾಗೆಯೇ ಹುಟ್ಟಿದವುಗಳು ಯಾವುದರಿಂದ ಜೀವಿಸುತ್ತವೆಯೊ ಮತ್ತು ಇಲ್ಲಿಂದ ಹೊರಡುವಾಗ ಯಾವುದನ್ನು ಪ್ರವೇಶಿಸುವುವೊ ಅದನ್ನು ತಿಳಿದುಕೊ; ಅದು ಬ್ರಹ್ಮ' (ತೈ. ಉ. ೩. ೧) ಎಂಬುದು ವಿಷಯವಾಕ್ಯ.[1]

**ಜನ್ಮಾದಿ**—'ಉತ್ಪತ್ತಿ ಮೊದಲಾದುವು.' **ಆದಿ** ಎಂದರೆ ಸ್ಥಿತಿ-ಲಯಗಳು. **ಅಸ್ಯ**—'ಈ ಜಗತ್ತಿನ'; ಈ ಪದವು ಪ್ರತ್ಯಕ್ಷಾದಿಪ್ರಮಾಣಗಳಿಂದ ನಮಗೆ ತಿಳಿದುಬರುವ ಜಗದ್ವಸ್ತುವನ್ನು ಸೂಚಿಸುತ್ತದೆ. ಷಷ್ಠೀವಿಭಕ್ತಿಯು ಧರ್ಮಿಯಾದ ಜಗತ್ತಿಗೆ ಉತ್ಪತ್ತಿಯೇ ಮೊದಲಾದ ಧರ್ಮಗಳ ಸಂಬಂಧವನ್ನು ಸೂಚಿಸುತ್ತದೆ. **ಯತಃ**—'ಯಾವುದರಿಂದ' ಎಂಬುದು ಕಾರಣವನ್ನು ನಿರ್ದೇಶಿಸುತ್ತದೆ.

ನಾಮ-ರೂಪಗಳಿಂದ ಭಿನ್ನವಾಗಿರುವುದೂ ಅನೇಕ ಕರ್ತೃ-ಭೋಕ್ತೃಗಳಿಂದ ಕೂಡಿರುವುದೂ, ನಿಯತವಾದ ದೇಶ-ಕಾಲ-ನಿಮಿತ್ತಗಳನ್ನು ಪಡೆದಿರುವ ಕರ್ಮಫಲಗಳಿಗೆ ಆಶ್ರಯವಾಗಿರುವುದೂ, ಮನಸ್ಸಿನಿಂದಲೂ ಕೂಡ ಊಹಿಸಲಾಗದ ರಚನಾರೂಪವುಳ್ಳದ್ದೂ ಆದ ಈ ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳು ಸರ್ವಜ್ಞವೂ ಸರ್ವಶಕ್ತವೂ ಆದ ಬ್ರಹ್ಮದಿಂದಲೇ ಉಂಟಾಗುತ್ತವೆ ಎಂಬುದು ಸೂತ್ರದ ಒಟ್ಟರ್ಥ.[2]

---

[1] ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ।

[2] ಬ್ರಹ್ಮವು ಜಗತ್ಕಾರಣವೆಂಬುದು ತಟಸ್ಥಲಕ್ಷಣವು. ಯಾವ ಲಕ್ಷಣವು ವಸ್ತು-ಸ್ವರೂಪಕ್ಕಿಂತ ಭಿನ್ನವಾಗಿದ್ದು ವಸ್ತುಸ್ವರೂಪವನ್ನು ತಿಳಿಸುವುದೊ ಅದು ತಟಸ್ಥಲಕ್ಷಣ. ಉತ್ಪತ್ತಿ-ಸ್ಥಿತಿ-ಲಯಗಳು ಜಗತ್ತಿನ ಲಕ್ಷಣಗಳಾಗಿರುವುದರಿಂದ ನಿತ್ಯವೂ ವಿಕಾರಶೂನ್ಯವೂ ಆದ ಬ್ರಹ್ಮಕ್ಕೆ ಸಂಬಂಧಪಟ್ಟಿಲ್ಲ ಆದರೂ ಇವು ಜಗತ್ಕಾರಣವೆಂದು ಹೇಳಲ್ಪಟ್ಟ ಬ್ರಹ್ಮವನ್ನೇ ಸೂಚಿಸುತ್ತವೆ. ಬ್ರಹ್ಮಕ್ಕೆ ಇನ್ನೊಂದು ಲಕ್ಷಣವಿದೆ: ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ (ತೈ. ಉ. ೨. ೧) ಎಂಬುದು ಸ್ವರೂಪಲಕ್ಷಣ. ಇದು ಬ್ರಹ್ಮದ ಸ್ವರೂಪವನ್ನೇ ತಿಳಿಸಿಕೊಡುತ್ತದೆ. ಸತ್ಯಾದಿಶಬ್ದಗಳಿಗೆ ವ್ಯವಹಾರದಲ್ಲಿ ಬೇರೆ ಅರ್ಥಗಳಿದ್ದರೂ ಅವು ಇಲ್ಲಿ—ತಂದೆ ಮಗ ಸಹೋದರ ಮೊದಲಾದ ಪದಗಳು ಒಬ್ಬೊಬ್ಬನನ್ನೇ ಸೂಚಿಸುವಂತೆ—ಅಖಂಡ ಬ್ರಹ್ಮದಲ್ಲಿಯೇ ಪರ್ಯವಸಾನವಾಗುತ್ತವೆ.

ನಾಮ-ರೂಪಗಳೇ ಮೊದಲಾದ ವಿಶೇಷಣಗಳಿಂದ ಕೂಡಿದ ಜಗತ್ತಿಗೆ ಸರ್ವಜ್ಞನೂ ಸರ್ವಶಕ್ತಿಸಮನ್ವಿತನೂ ಆದ ಈಶ್ವರನನ್ನು (ಎಂದರೆ ಬ್ರಹ್ಮವನ್ನು) ಬಿಟ್ಟರೆ ಬೇರೊಂದು ಕಾರಣವಿರಲಾರದು: ಅಚೇತನವಾದ ಪ್ರಕೃತಿಯಾಗಲಿ, ಪರಮಾಣುವಾಗಲಿ, ಶೂನ್ಯವಾಗಲಿ, ಸಂಸರಿಸುತ್ತಿರುವ ಹಿರಣ್ಯಗರ್ಭನೆಂಬ ಜೀವನಾಗಲಿ ಅಥವಾ ಸ್ವಭಾವವಾಗಲಿ ಜಗದುತ್ಪತ್ತಿ ಮೊದಲಾದುವುಗಳಿಗೆ ಕಾರಣವಾಗಲಾರದು. ಬ್ರಹ್ಮವು ಜಗತ್ಕಾರಣವೆಂಬುದನ್ನು ಈ ಸೂತ್ರವು ಪ್ರತ್ಯಕ್ಷಾದಿ-ಪ್ರಮಾಣಗಳ ಮೂಲಕ ನಿರ್ಧರಿಸಿಲ್ಲ; ಬ್ರಹ್ಮಸೂತ್ರಗಳು ವೇದಾಂತವಾಕ್ಯಗಳೆಂಬ ಕುಸುಮಗಳನ್ನು ಮಾಲೆಯಾಗಿ ಕಟ್ಟಲು ಬಂದಿರುತ್ತವೆ.[1] ಈ ಸೂತ್ರವು ವೇದಾಂತವಾಕ್ಯವನ್ನೇ ಉದಾಹರಿಸಿ ಅದರ ತಾತ್ಪರ್ಯವನ್ನು ಹೇಳಿರುತ್ತದೆ. ವೇದಾಂತವಾಕ್ಯಗಳ ಅರ್ಥವನ್ನು ವಿಚಾರಮಾಡಿ ನಿರ್ಧರಿಸಿಕೊಳ್ಳುವುದರಿಂದ ಬ್ರಹ್ಮಜ್ಞಾನವು ಉಂಟಾಗುವುದೇ ಹೊರತು ಅನುಮಾನಾದಿ-ಪ್ರಮಾಣಗಳಿಂದ ಆಗತಕ್ಕದ್ದಲ್ಲ. ಆದರೆ ವೇದಾಂತವಾಕ್ಯಗಳಿಗೆ ವಿರೋಧವಾಗದ ಅನುಮಾನಪ್ರಮಾಣವನ್ನು ಇಲ್ಲಿ ನಿರಾಕರಿಸಿಲ್ಲ; ಏಕೆಂದರೆ ಉಪನಿಷತ್ತೇ ತರ್ಕವನ್ನು (ಅಥವಾ ಪುರುಷಬುದ್ಧಿಯನ್ನು) ತನಗೆ ಸಹಾಯವಾಗಿ ಅಂಗೀಕರಿಸಿರುತ್ತದೆ.[2]

ಆದರೆ ಶ್ರುತಿಸ್ಮೃತಿಗಳು ಧರ್ಮಜಿಜ್ಞಾಸೆಯಲ್ಲಿ ಏಕಮಾತ್ರ ಪ್ರಮಾಣವಾಗಿರುವ ಹಾಗೆ ಬ್ರಹ್ಮಜಿಜ್ಞಾಸೆಯಲ್ಲಿ ಪ್ರಮಾಣವಾಗಿಲ್ಲ.[3] ಶ್ರುತಿಸ್ಮೃತ್ಯಾದಿಗಳಲ್ಲದೆ ಬ್ರಹ್ಮಾನುಭವವೇ ಮೊದಲಾದುವೂ ಯಥಾಸಂಭವವಾಗಿ ವೇದಾಂತದಲ್ಲಿ ಪ್ರಮಾಣವಾಗಿರುತ್ತವೆ: ಏಕೆಂದರೆ ಮೊದಲನೆಯದಾಗಿ ಬ್ರಹ್ಮಜಿಜ್ಞಾಸೆಯು **ಅನುಭವದಲ್ಲಿ** ಕೊನೆಗಾಣುತ್ತದೆ; ಎರಡನೆಯದಾಗಿ ಬ್ರಹ್ಮಜಿಜ್ಞಾಸೆಯ ವಿಷಯವು **ಸಿದ್ಧವಸ್ತುವೇ** ಆಗಿದೆ. ಇನ್ನುಮುಂದೆ ಮಾಡಬೇಕಾದ ಕರ್ಮವಲ್ಲ. ಕರ್ತವ್ಯವೇ (ಎಂದರೆ ಮಾಡಬೇಕಾದ ಕರ್ಮವೇ) ಬ್ರಹ್ಮಜಿಜ್ಞಾಸೆಗೆ ವಿಷಯವಾಗಿದ್ದರೆ ಅನುಭವವು ಬೇಕಾಗಿರದೆ ಶ್ರುತ್ಯಾದಿಗಳೇ ಏಕಮಾತ್ರ ಪ್ರಮಾಣವಾಗುತ್ತಿದ್ದುವು. ಕರ್ತವ್ಯವು ಮನುಷ್ಯನಿಗೆ ಅಧೀನವಾಗಿ ಉತ್ಪನ್ನವಾಗುತ್ತದೆ: ಲೌಕಿಕಕರ್ಮವನ್ನಾಗಲಿ ವೈದಿಕಕರ್ಮವನ್ನಾಗಲಿ ಮಾಡಬಹುದು, ಮಾಡದಿರಬಹುದು, ಬೇರೊಂದು ಬಗೆಯಾಗಿ ಮಾಡಬಹುದು ಆದರೆ ಸಿದ್ಧವಸ್ತುವಿನ ವಿಷಯದಲ್ಲಿ 'ಹೀಗೆ, ಹೀಗಲ್ಲ' ಅಥವಾ 'ಇದೆ, ಇಲ್ಲ' ಎಂಬ ವಿಕಲ್ಪಕ್ಕೆ[4] ಸಾಧ್ಯವಿಲ್ಲ. ವಿಕಲ್ಪವು ಪುರುಷಬುದ್ಧಿಯನ್ನು ಅನುಸರಿಸುತ್ತದೆ. ಆದರೆ ವಸ್ತುವಿನ ಜ್ಞಾನವು ಪುರುಷಬುದ್ಧಿಯನ್ನು ಅನುಸರಿಸದೆ

[1] ವೇದಾಂತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಮ್ (ಸೂ. ಭಾ.).

[2] ಶ್ರೋತವ್ಯೋ ಮಂತವ್ಯಃ (ಬೃ. ಉ. ೨. ೪. ೫).

[3] ಇಂತಹ ಕೆಲಸವನ್ನು ಮಾಡಿದರೆ ಇಂತಹ ಫಲವಾಗುತ್ತದೆಂದು ಧರ್ಮಜಿಜ್ಞಾಸೆಯಿಂದ ತಿಳಿದುಬರುತ್ತದೆ. ಇದು ಮುಂದೆ ಉಂಟಾಗಬೇಕೇ ವಿನಾ ವರ್ತಮಾನಕಾಲದಲ್ಲಿರುವ ಸಿದ್ಧವಸ್ತುವಲ್ಲ. ಆದುದರಿಂದ ಶಾಸ್ತ್ರದಲ್ಲಿರುವ ಶ್ರದ್ಧೆಯನ್ನು ಬಿಟ್ಟರೆ ಧರ್ಮಜಿಜ್ಞಾಸೆಗೆ ಬೇರೆ ಸ್ವತಂತ್ರವಾದ ಪ್ರಮಾಣವಿಲ್ಲ.

[4] 'ಹೀಗೂ ಆಗಬಹುದು, ಹಾಗೂ ಆಗಬಹುದು' ಎಂಬುದು ವಿಕಲ್ಪ.

ವಸ್ತುವನ್ನೇ ಅನುಸರಿಸಿರುತ್ತದೆ. ಒಂದು ಮೋಟುಮರದ ವಿಷಯದಲ್ಲಿ 'ಇದು ಮರದ ಕಂಬವೊ, ಮನುಷ್ಯನೊ ಅಥವಾ ಇನ್ನು ಯಾವುದೊ' ಎಂದು ತಿಳಿದುಕೊಳ್ಳುವುದು ತತ್ತ್ವಜ್ಞಾನವಲ್ಲ. ಇವುಗಳಲ್ಲಿ 'ಇದು ಮನುಷ್ಯ ಅಥವಾ ಮತ್ತೊಂದು' ಎಂದು ಭಾವಿಸುವುದು ಮಿಥ್ಯಾಜ್ಞಾನ. 'ಇದು ಮೋಟುಮರವೇ' ಎಂದು ತಿಳಿದುಕೊಳ್ಳುವುದು ತತ್ತ್ವಜ್ಞಾನ . ಆದುದರಿಂದ ಬ್ರಹ್ಮಜ್ಞಾನವು ವಸ್ತುವಿಗೆ ಅಧೀನವಾಗಿಯೇ ಇರುತ್ತದೆ.

ಬ್ರಹ್ಮವು ಸಿದ್ಧವಸ್ತುವಾದರೂ ಬೇರೆ ಬೇರೆ ಪ್ರಮಾಣಗಳಿಗೆ ವಿಷಯವಾಗಲಾರದು; ಏಕೆಂದರೆ ಅದು ಇಂದ್ರಿಯಗಳಿಗೆ ವಿಷಯವಲ್ಲದುದರಿಂದ ಅದಕ್ಕೂ ಜಗತ್ತಿಗೂ ಇರುವ ಸಂಬಂಧವು ತಿಳಿದುಬರುವುದಿಲ್ಲ. ಇಂದ್ರಿಯಗಳಿಗೆ ಸ್ವಭಾವತಃ ವಸ್ತುಗಳು ವಿಷಯವೇ ಹೊರತು ಬ್ರಹ್ಮವು ವಿಷಯವಲ್ಲ. ಬ್ರಹ್ಮವು ಇಂದ್ರಿಯಗಳಿಗೆ ವಿಷಯವಾಗಿದ್ದರೆ ಈ ಜಗತ್ತು ಬ್ರಹ್ಮಕ್ಕೆ ಕಾರ್ಯವಾಗಿ ಸಂಬಧಿಸಿದುದೆಂದು ತಿಳಿದುಬರುತ್ತಿತ್ತು. ಆದರೆ ಕಾರ್ಯವಾದ ಜಗತ್ತು ಮಾತ್ರ ಕಾಣುತ್ತಿರುವುದರಿಂದ ಅದು ಬ್ರಹ್ಮಕ್ಕೇ ಸಂಬಂಧಪಟ್ಟಿದೆಯೊ ಅಥವಾ ಬೇರೆ ಯಾವುದಕ್ಕಾದರೂ ಸಂಬಂಧಪಟ್ಟಿದೆಯೊ ಎಂದು ನಿರ್ಧರಿಸಲು ಆಗುವುದಿಲ್ಲ. ಆದುದರಿಂದ ಈ **ಜನ್ಮಾದಿಸೂತ್ರವು** ಬ್ರಹ್ಮವನ್ನು ಅರಿತುಕೊಳ್ಳಲು ಅನುಮಾನಪ್ರಮಾಣವಾಗಿ ಬಂದಿರದೆ ವೇದಾಂತವಾಕ್ಯವನ್ನು (ತೈ. ಉ. ೩. ೧) ತಿಳಿಸಲು ಬಂದಿದೆ. 'ಆನಂದದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ಆನಂದದಿಂದಲೇ ಜೀವಿಸುತ್ತವೆ ಮತ್ತು ಆನಂದವನ್ನೇ ಪ್ರವೇಶಿಸುತ್ತವೆ'[1] (ತೈ. ಉ. ೩. ೬) ಎಂಬುದು ಈ ವೇದಾಂತವಾಕ್ಯದ ತಾತ್ಪರ್ಯವನ್ನು ನಿರ್ಣಯಿಸಿದೆ.

**ವಿ.**—ಅಚಿಂತ್ಯವಾದ ವಿವಿಧ-ವಿಚಿತ್ರ-ರಚನೆಯುಳ್ಳ ಮತ್ತು ನಿಯತವಾದ ದೇಶ ಕಾಲಗಳಲ್ಲಿ ಕರ್ಮಫಲಗಳನ್ನು ಅನುಭವಿಸುತ್ತಿರುವ ಬ್ರಹ್ಮಾದಿ-ಸ್ತಂಬ-ಪರ್ಯಂತ ಜೀವ ರಾಶಿಯುಳ್ಳ ಜಗತ್ತನ್ನು ಅಸ್ಯ-ಪದವು ಸೂಚಿಸುತ್ತದೆ. ಸರ್ವೇಶ್ವರನೂ ನಿಖಿಲಹೇಯಗಳಿಗೆ ವಿರುದ್ಧವಾದ ಸ್ವಭಾವವುಳ್ಳವನೂ ಸತ್ಯಸಂಕಲ್ಪನೂ ಜ್ಞಾನಾನಂದಗಳೇ ಮೊದಲಾದ ಅನಂತ-ಕಲ್ಯಾಣ-ಗುಣವುಳ್ಳವನೂ ಸರ್ವಜ್ಞನೂ ಸರ್ವಶಕ್ತನೂ ಪರಮಕಾರುಣಿಕನೂ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನೂ ಆದ ಪರಮಪುರುಷನನ್ನು ಯತಃ-ಶಬ್ದವು ತಿಳಿಸುತ್ತದೆ; ಇವನೇ ಪರಬ್ರಹ್ಮ. ಇದು ಸೂತ್ರಾರ್ಥ. ಸತ್-ಶಬ್ದವಾಚ್ಯನಾದ ಪರಬ್ರಹ್ಮನೇ ಜಗತ್ತಿಗೆ ನಿಮಿತ್ತಕಾರಣನಾಗಿಯೂ ಉಪಾದಾನಕಾರಣನಾಗಿಯೂ ಇರುವನು.[2]

ವಿಷಯವಾಕ್ಯದಲ್ಲಿ (ತೈ. ಉ. ೩. ೧) ಹೇಳಿರುವ ಲಕ್ಷಣಗಳಿಂದ ಬ್ರಹ್ಮನನ್ನು ಅರಿತುಕೊಳ್ಳಲು ಆಗುವುದೆ ಅಥವಾ ಇಲ್ಲವೆ ಎಂಬ ಸಂದೇಹವು ಇಲ್ಲಿ ಒದಗುತ್ತದೆ.

---

[1] ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿಸಂವಿಶಂತೀತಿ ।

[2] ಸದೇವ ಸೋಮ್ಯೇದಮಗ್ರ ಆಸೀತ್. . . ತತ್ತೇಜೋಽಸೃಜತ (ಛಾಂ. ಉ. ೬. ೨. ೧-೩).

ಲಕ್ಷಣವನ್ನು ಎರಡು ವಿಧವಾಗಿ ವಿಂಗಡಿಸಬಹುದು. ಉಪಲಕ್ಷಣ ಮತ್ತು ವಿಶೇಷಣ. ಯಾವ ಲಕ್ಷಣವು ಬೇರೆ ವಿಧದಿಂದ ತಿಳಿಯಲ್ಪಟ್ಟ ಒಂದು ವಸ್ತುವನ್ನು ಮೊದಲನೆಯ ನಲ ನಿರ್ದೇಶಿಸುತ್ತದೆಯೊ ಅದು ಉಪಲಕ್ಷಣ ; ಆದರೆ ಮುಂದೆ ನೋಡಿದಾಗಲೆಲ್ಲ ಆ ಲಕ್ಷಣವು ಅಲ್ಲಿ ಇರಬೇಕೆಂಬ ನಿಯಮವಿಲ್ಲ. ಉದಾಹರಣೆ. 'ಆ ಕೊಕ್ಕರೆ ನಿಂತುಕೊಂಡಿರುವ ಗದ್ದೆ ದೇವದತ್ತನದು' ; ಇಲ್ಲಿ ಕೊಕ್ಕರೆಯೇ ಉಪಲಕ್ಷಣ. ಆದರೆ ಅದೇ ಗದ್ದೆಯಲ್ಲಿ ಇನ್ನೆಲ್ಲೂ ಇಲ್ಲದಿರುವ ಯಾವುದೊ ಒಂದು ಗುರುತಿದ್ದರೆ ಅದು ವಿಶೇಷಣವಾಗುತ್ತದೆ. ಜಗಜ್ಜನ್ಮಾದಿಗಳು ಉಪಲಕ್ಷಣವೂ ಅಲ್ಲ, ವಿಶೇಷಣವೂ ಅಲ್ಲ ಎಂಬುದು ಪೂರ್ವಪಕ್ಷ. ಜಗಜ್ಜನ್ಮಾದಿಗಳು ಉಪಲಕ್ಷಣವಾಗಿಯೂ ಇವೆ, ವಿಶೇಷಣವಾಗಿಯೂ ಇವೆ ಎಂಬುದು ಸಿದ್ಧಾಂತ.

ಜಿಜ್ಞಾಸೆಗೆ ವಿಷಯವಾದ ವಸ್ತುವು ನಿರ್ವಿಶೇಷವೆಂದು ಹೇಳುವವರಿಗೆ ಮೊದಲನೆಯ ಸೂತ್ರವಾಗಲಿ ಎರಡನೆಯ ಸೂತ್ರವಾಗಲಿ ಸಂಗತವಾಗುವುದಿಲ್ಲ ; ಏಕೆಂದರೆ ಮೊದಲನೆಯ ಸೂತ್ರದ ಪ್ರಕಾರ ಜಿಜ್ಞಾಸೆಗೆ ವಿಷಯನಾದ ಬ್ರಹ್ಮನು ನಿರ್ವಚನದ್ವಾರಾ ಪರಮಶ್ರೇಷ್ಠನೂ ವೃದ್ಧಿಯನ್ನು ಹೊಂದುವ ಶಕ್ತಿಯುಳ್ಳವನೂ[1] ಆಗಿರುತ್ತಾನೆ ಎರಡನೆಯ ಸೂತ್ರದ ಪ್ರಕಾರ ಬ್ರಹ್ಮನು ಜಗತ್ತಿನ ಉತ್ಪತ್ತಿ-ಸ್ಥಿತಿ- ಲಯಗಳಿಗೆ ಕಾರಣನಾಗಿರುತ್ತಾನೆ. ಹೀಗೆಯೆ ಮುಂದೆ ಬರುವ ಸೂತ್ರಗಳೂ ಮತ್ತು ಅವುಗಳಿಗೆ ಆಧಾರವಾದ ಶ್ರುತಿಗಳೂ ನಿರ್ವಿಶೇಷವಸ್ತುವನ್ನು ಪ್ರತಿಪಾದಿಸುವುದಿಲ್ಲ 'ಯಾವುದರಿಂದ ಈ ಜಗತ್ತಿನ ಉತ್ಪತ್ತಿ ಮೊದಲಾದ ಭ್ರಮೆಯು ಆಗಿರುವುದೊ ಅದು ಬ್ರಹ್ಮ' ಎಂಬ ಅರ್ಥವನ್ನು ಒಪ್ಪಿಕೊಂಡರೂ ನಿರ್ವಿಶೇಷವಸ್ತುವು ಸಿದ್ಧವಾಗುವುದಿಲ್ಲ ; ಏಕೆಂದರೆ ನಿರ್ವಿಶೇಷವಾದಿಯ ಪ್ರಕಾರ ಅಜ್ಞಾನವೇ ಎಲ್ಲಾ ಭ್ರಮೆಯ ಮೂಲವಾಗಿದೆ, ಮತ್ತು ಬ್ರಹ್ಮವೇ ಈ ಅಜ್ಞಾನದ ಸಾಕ್ಷಿಯಾಗಿದೆ. ಶುದ್ಧಪ್ರಕಾಶವೇ (ಎಂದರೆ ಶುದ್ಧಜ್ಞಾನವೇ) ಸಾಕ್ಷಿತ್ವವೆನಿಸುವುದು. ಯಾವುದು ಜಡಕ್ಕಿಂತ ಬೇರೆಯಾಗಿ ತನ್ನನ್ನೂ ತನಗಿಂತ ಭಿನ್ನವಾದುದನ್ನೂ ವ್ಯವಹಾರಕ್ಕೆ (ಎಂದರೆ ವಾಙ್ಮನಸ್ಸುಗಳಿಗೆ) ಯೋಗ್ಯವಾದುದನ್ನಾಗಿ ಮಾಡುವುದೊ ಅದು ಶುದ್ಧ ಪ್ರಕಾಶವು. ಹೀಗೂ ಸವಿಶೇಷತ್ವವೇ ಸಿದ್ಧವಾಗುತ್ತದೆ. ಸವಿಶೇಷತ್ವವಿಲ್ಲದಿದ್ದರೆ ಶುದ್ಧ ಪ್ರಕಾಶವು ಇರುತ್ತಿರಲಿಲ್ಲ, ಒಂದು ವೇಳೆ ಇದ್ದರೆ ಅರ್ಥಶೂನ್ಯವಾಗುತ್ತಿತ್ತು.

**ದ್ವೈ.**—ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳು ಮಾತ್ರ ಪರಬ್ರಹ್ಮನ ಲಕ್ಷಣಗಳಲ್ಲ. ಇವನಿಂದಲೇ ನಿಯಮ (ಎಂದರೆ ನಿಯಾಮಕಶಕ್ತಿ) ಜ್ಞಾನ ಅಜ್ಞಾನ ಬಂಧ ಮೋಕ್ಷ— ಇವೂ ಉಂಟಾಗುತ್ತವೆ. 'ಯಾವ ಪುರುಷನಿಂದ ಉತ್ಪತ್ತಿ ಸ್ಥಿತಿ ಲಯ ನಿಯತಿ ಜ್ಞಾನ ಆವೃತಿ ಬಂಧ ಮೋಕ್ಷ ಉಂಟಾಗುತ್ತವೆಯೊ ಅವನೇ ಶ್ರೇಷ್ಠನಾದ ಹರಿ'[2] (ಸ್ಕಾಂದ).

---

[1] ನಿರತಿಶಯಬೃಹತ್ ಬೃಂಹಣಂ ಚ ಬ್ರಹ್ಮೇತಿ ನಿರ್ವಚನಾತ್ (ಶ್ರೀಭಾಷ್ಯ).

[2] ಉತ್ಪತ್ತಿಸ್ಥಿತಿಸಂಹಾರಾ ನಿಯತಿಜ್ಞಾನಸಮಾವೃತಿಃ ।
ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ ಸ ಹರಿರೇಕರಾಟ್ ॥

ಪರಬ್ರಹ್ಮನು ಸ್ವಗತಭೇದರಹಿತನಾಗಿದ್ದರೂ ಸತ್ಯಜ್ಞಾನಾನಂದವೇ ಮೊದಲಾದ ಅನಂತ ಗುಣಗಳಿಂದ ಕೂಡಿರುತ್ತಾನೆ. ಅನಂತಗುಣಗಳ ಸತ್ತ್ವವೇ ಬ್ರಹ್ಮನ ಲಕ್ಷಣ[1] ಇಂತಹ ಲಕ್ಷಣಗಳುಳ್ಳ ಬ್ರಹ್ಮನು ಚೇತನಾಚೇತನವಸ್ತುಗಳಿಗಿಂತ ಭಿನ್ನವೆಂದು ಈ ಸೂತ್ರದಿಂದ ತಿಳಿದುಬರುತ್ತದೆ. ಈ ಸೂತ್ರದಿಂದ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವು ವಿಷ್ಣುವಿಗೇ ಒಪ್ಪುತ್ತದೆ. ಇದು ಸ್ವರೂಪಲಕ್ಷಣವೇ ಆಗಿದೆ, ತಟಸ್ಥಲಕ್ಷಣವಲ್ಲ.[2]

---

[1] ಅನಂತಗುಣಸತ್ತ್ವಮ್ ಏವ ಬ್ರಹ್ಮಣೋ ಲಕ್ಷಣಮ್ (ನ್ಯಾಯಸುಧಾ).

[2] ಜನ್ಮಾದ್ಯಸ್ಯೇತಿ ತೇನೈತದ್ವಿಷ್ಣೋರೇವ ಸ್ವಲಕ್ಷಣಮ್ ।
ಅನ್ಯೋಽಧ್ವವಾದಿಹೇತುತ್ವಂ ಸಾಕ್ಷಾದೇವ ಲಕ್ಷಣಮ್ ॥ (ಅನುವ್ಯಾಖ್ಯಾನ)

## ೩. ಶಾಸ್ತ್ರಯೋನಿತ್ವಾಧಿಕರಣ

### ಶಾಸ್ತ್ರಯೋನಿತ್ವಾತ್ ॥ ೩॥

೩. ಶಾಸ್ತ್ರಕ್ಕೆ ಕಾರಣವಾಗಿರುವುದರಿಂದ (ಬ್ರಹ್ಮವು ಸರ್ವಜ್ಞವು).

ಹಿಂದಿನ ಸೂತ್ರದಲ್ಲಿ ಬ್ರಹ್ಮವು ಜಗತ್ಕಾರಣವೆಂದು ಹೇಳಿದ್ದರಿಂದ ಅದು ಸರ್ವಜ್ಞವೆಂದು ನಿರ್ದೇಶಿಸಿದಂತಾಯಿತು. ಅದನ್ನೇ ದೃಢೀಕರಿಸಲು ಈ ಸೂತ್ರವು ಬಂದಿದೆ.

'ಋಗ್ವೇದ ಯಜುರ್ವೇದ ಸಾಮವೇದ ಅಥರ್ವಾಂಗಿರಸ ಇತಿಹಾಸ ಪುರಾಣ ಕಲೆಗಳು ಉಪನಿಷತ್ತುಗಳು ಶ್ಲೋಕಗಳು ಸೂತ್ರಗಳು ಮಂತ್ರ- ವಿವರಣೆಗಳು ಅರ್ಥವಾದಗಳು—ಇವೆಲ್ಲ ಈ ಮಹತ್ ಪರಮಾರ್ಥದ ನಿಃಶ್ವಾಸದಂತೆ' (ಬೃ. ಉ. ೨. ೪. ೧೦) ಎಂಬುದು ವಿಷಯವಾಕ್ಯ.[1]

ಬ್ರಹ್ಮದ ಸರ್ವಜ್ಞತೆಯು ಕೇವಲ ಜಗತ್ಕಾರಣತ್ವದಿಂದ ಉಂಟಾಗಿಲ್ಲ, ಶಾಸ್ತ್ರಕ್ಕೆ ಕಾರಣವಾಗಿರುವುದರಿಂದಲೂ ಆಗಿದೆ.[2] ಅನೇಕ ವಿದ್ಯಾಸ್ಥಾನಗಳಿಂದ[3] ಸಮರ್ಥನೆ ಪಡೆದಿರುವ, ಪ್ರದೀಪದಂತೆ ಸರ್ವವಿಷಯಗಳನ್ನೂ ಪ್ರಕಾಶಿಸುತ್ತಿರುವ ಮತ್ತು ಸರ್ವಜ್ಞನಂತಿರುವ ಋಗ್ವೇದಾದಿ ಮಹಾಶಾಸ್ತ್ರಕ್ಕೆ ಬ್ರಹ್ಮವು **ಯೋನಿ,** ಎಂದರೆ ಕಾರಣವು. ಹೀಗೆ ಸರ್ವಜ್ಞಗುಣದಿಂದ ಯುಕ್ತವಾಗಿರುವ ಋಗ್ವೇದಾದಿ ರೂಪವಾದ ಇಂತಹ ಶಾಸ್ತ್ರಕ್ಕೆ ಸರ್ವಜ್ಞನಿಂದಲ್ಲದೆ ಮತ್ತೆ ಯಾರಿಂದಲೂ ಉತ್ಪತ್ತಿಯು ಉಂಟಾಗಲಾರದು ; ಏಕೆಂದರೆ ಒಬ್ಬ ಶಾಸ್ತ್ರಕರ್ತೃವಿನ ಜ್ಞಾನವು ಅವನು ನಿರ್ಮಿಸಿರುವ ಶಾಸ್ತ್ರಕ್ಕಿಂತ—ಅದು ಎಷ್ಟೇ ವಿಸ್ತಾರವಾಗಿರಲಿ—ಇನ್ನೂ ಹೆಚ್ಚಾಗಿರುವುದೆಂಬುದು ಲೋಕಪ್ರಸಿದ್ಧವಾಗಿದೆ. ಹೀಗಿರುವಾಗ ಅನೇಕ ಶಾಖಾ-ಭೇದಗಳಿಂದ ಭಿನ್ನವಾಗಿರುವ, ತಿರ್ಯಕ್-ಮನುಷ್ಯ-ವರ್ಣಾಶ್ರಮಗಳು ಎಂಬ ವಿಭಾಗಗಳಿಗೆ ಕಾರಣವಾಗಿರುವ, ಸರ್ವಜ್ಞಾನಕ್ಕೂ ಆಕರವಾಗಿರುವ, ಋಗ್ವೇದಾದಿ ಹೆಸರನ್ನು ಪಡೆದಿರುವ ಶಾಸ್ತ್ರವು ಯಾವ ಮಹದ್ ಭೂತಯೋನಿಯಿಂದ ಉಂಟಾಗಿದೆಯೊ ಆ ಮಹದ್ಭೂತವಾದ ಬಹ್ಮದ ನಿರತಿಶಯ ಸರ್ವಜ್ಞತ್ವದ ಮತ್ತು ಸರ್ವಶಕ್ತಿತ್ವದ ವಿಷಯವಾಗಿ ಹೇಳಬೇಕಾದುದು ಏನೂ ಇಲ್ಲ. ಮನುಷ್ಯನು ಸಹಜವಾಗಿ ಉಸಿರುಬಿಡುವಂತೆ ಬ್ರಹ್ಮವು ಯಾವ ಪ್ರಯತ್ನವೂ ಇಲ್ಲದೆ ಲೀಲಾನ್ಯಾಯದಿಂದ ಋಗ್ವೇದಾದಿಗಳನ್ನು ವ್ಯಕ್ತಪಡಿಸಿದೆ.

---

[1] ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ।

[2] ನ ಕೇವಲಂ ಜಗದ್ಯೋನಿತ್ವಾದಸ್ಯ ಭಗವತಃ ಸರ್ವಜ್ಞತಾ, ಶಾಸ್ತ್ರಯೋನಿತ್ವಾದಪಿ ಬೋದ್ಧವ್ಯಾ (ಭಾಮತೀ).

[3] ಪುರಾಣ-ನ್ಯಾಯ-ಮೀಮಾಂಸಾ-ಧರ್ಮಶಾಸ್ತ್ರಗಳೂ, ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಛಂದಸ್ಸು ಜ್ಯೋತಿಷ ಎಂಬ ಆರು ಅಂಗಗಳೂ ಸೇರಿ ದಶವಿದ್ಯಾಸ್ಥಾನಗಳೆನಿಸುವುವು.

ಈ ಸೂತ್ರಕ್ಕೆ ಇನ್ನೊಂದು ಬಗೆಯಿಂದಲೂ ಅರ್ಥವನ್ನು ಮಾಡಬಹುದು: 'ಬ್ರಹ್ಮದ ಸ್ವರೂಪವನ್ನು ನಿಜವಾಗಿ ಅರಿತುಕೊಳ್ಳಲು ಋಗ್ವೇದಾದಿ ಶಾಸ್ತ್ರವೇ **ಯೋನಿಯು,** ಎಂದರೆ **ಪ್ರಮಾಣವು.**'[1] ಶಾಸ್ತ್ರವೆಂಬ ಪ್ರಮಾಣದಿಂದಲೇ ಜಗಜ್ಜನ್ಮಾದಿಗಳಿಗೆ ಕಾರಣವಾದ ಬ್ರಹ್ಮವನ್ನು ಅರಿಯಬಹುದು. ಹಿಂದಿನ ಸೂತ್ರದಲ್ಲಿ ಆ ಶಾಸ್ತ್ರವನ್ನು (ತೈ. ಉ. ೩. ೧) ಉದಾಹರಿಸಿದೆ.

ಬ್ರಹ್ಮವು ಜಗಜ್ಜನ್ಮಾದಿಗಳಿಗೆ ಕಾರಣವೆಂಬುದು ಶಾಸ್ತ್ರದಿಂದಲೇ ಸಿದ್ಧವಾಗಿದೆ, ಸ್ವತಂತ್ರವಾದ ಅನುಮಾನದಿಂದಲ್ಲ ಎಂಬ ವಿಷಯದಲ್ಲಿ ಏನಾದರೂ ಸಂದೇಹವಿದ್ದರೆ ಈ ಸೂತ್ರವು ಶಾಸ್ತ್ರವೇ ಬ್ರಹ್ಮಕ್ಕೆ ಪ್ರಮಾಣವೆಂಬುದನ್ನು ತನ್ನ ಅಕ್ಷರಗಳಿಂದಲೇ ನಿರ್ಧರಿಸಿದೆ.

**ವಿ.**—'ಪರಬ್ರಹ್ಮನು ಶಾಸ್ತ್ರದಿಂದಲೇ ತಿಳಿಯಲ್ಪಡುವುದರಿಂದ' ಎಂಬುದು ಸೂತ್ರಾರ್ಥ. ಶಾಸ್ತ್ರವೆಂದರೆ ವೇದ.

ಹಿಂದಿನ ಅಧಿಕರಣದಲ್ಲಿ ಉದಾಹರಿಸಲ್ಪಟ್ಟ ವೇದಾಂತವಾಕ್ಯವೇ (ತೈ. ಉ. ೩. ೧) ಇಲ್ಲಿಯೂ ವಿಷಯವಾಕ್ಯವಾಗಿದೆ. ಪರಬ್ರಹ್ಮನು ಜಗತ್ಕಾರಣನೆಂಬುದಕ್ಕೆ ಈ ಶ್ರುತಿವಾಕ್ಯವು ಪ್ರಮಾಣವೆ ಅಥವಾ ಅಲ್ಲವೆ ಎಂಬುದು ಸಂಶಯ.

ಇದು ಪ್ರಮಾಣವಲ್ಲ ಎಂಬುದು ಪೂರ್ವಪಕ್ಷ: ಯಾವಾಗ ಶಾಸ್ತ್ರವನ್ನು ಬಿಟ್ಟು ಬೇರೆ ಯಾವ ಪ್ರಮಾಣದಿಂದಲೂ ವಸ್ತುವು ಸಿದ್ಧಿಸದಿರುವುದೊ ಆಗ ಶಾಸ್ತ್ರವು ಪ್ರಮಾಣವಾಗುವುದು. 'ಅಗ್ನಿಹೋತ್ರವನ್ನು ಮಾಡಿದರೆ ಮನುಷ್ಯನು ಸ್ವರ್ಗವನ್ನು ಪಡೆಯುತ್ತಾನೆ' ಎಂಬ ಉದಾಹರಣೆಯಲ್ಲಿ ಕಾರ್ಯ-ಕರಣಗಳ ಸಂಬಂಧವು ಶಾಸ್ತ್ರದಿಂದಲೇ ಸಿದ್ಧವಾಗುತ್ತದೆ. ಆದರೆ 'ಅಗ್ನಿಯು ಹಿಮಕ್ಕೆ ಮದ್ದು' ಎಂಬಲ್ಲಿ ಅನುಭವದಿಂದಲೇ ತತ್ತ್ವವು ತಿಳಿಯಬರುತ್ತದೆ. ಆದುದರಿಂದ ಅನುಮಾನ-ಪ್ರಮಾಣದಿಂದಲೇ ಪರಬ್ರಹ್ಮನು ಜಗತ್ಕಾರಣನೆಂಬುದು ಸಿದ್ಧಿಸುತ್ತದೆ. ಅದು ಹೇಗೆಂದರೆ: ಜಗತ್ತು ಅವಯವಗಳಿಂದ ಕೂಡಿರುವುದರಿಂದ ಕಾರ್ಯವಾಗಿರುವುದು; ಆದುದರಿಂದ ಜಗತ್ತು ಒಂದು ಕಾರ್ಯವಿಧಾನದ ಫಲವಾಗಿರುವುದು. ಕಾರ್ಯರೂಪಕ್ಕೆ ಬಂದ ಒಂದು ವಸ್ತುವು ಉಪದಾನ-ನಿಮಿತ್ತ-ಕಾರಣಗಳನ್ನೂ ವಸ್ತುವಿನ ಭೋಕ್ತೃವನ್ನೂ ಮತ್ತು ಅದರ ವಿನಿಯೋಗವನ್ನೂ ಬಲ್ಲ ಒಬ್ಬ ಕರ್ತೃವಿನಿಂದಲೇ ಉಂಟಾಗಿರಬೇಕು: ಆದುದರಿಂದ ಪರಿಮಿತಶಕ್ತಿಯುಳ್ಳ ಜೀವನಿಗಿಂತ ವಿಲಕ್ಷಣನಾದ ಮತ್ತು ಜಗನ್ನಿರ್ಮಾಣಕಾರ್ಯದಲ್ಲಿ ಚತುರನೂ ಸರ್ವಜ್ಞನೂ ಆದ ಪುರುಷನಿಂದ ಈ ಜಗತ್ತು ಉತ್ಪನ್ನವಾಗಿದೆ ಎಂಬುದು ಅನುಮಾನಸಿದ್ಧವಾಗಿದೆ.

**ಯತೋ ವಾ ಇಮಾನಿ ಭೂತಾನಿ** ಎಂಬ ಶ್ರುತಿವಾಕ್ಯವೇ ಪರಬ್ರಹ್ಮನ ಜಗತ್ಕಾರಣತ್ವಕ್ಕೆ ಪ್ರಮಾಣ ಎಂಬುದು ಸಿದ್ಧಾಂತ; ಏಕೆಂದರೆ ಜಗತ್ತು ಕಾರ್ಯ

---

[1] ಅಥವಾ ಯಥೋಕ್ತಮೃಗ್ವೇದಾದಿಶಾಸ್ತ್ರಂ ಯೋನಿಃ ಕಾರಣಂ ಪ್ರಮಾಣಮಸ್ಯ ಬ್ರಹ್ಮಣೋ ಯಥಾವತ್ಸ್ವರೂಪಾಧಿಗಮೇ । ಶಾಸ್ತ್ರಾದೇವ ಪ್ರಮಾಣಾಜ್ಜಗತೋ ಜನ್ಮಾದಿಕಾರಣಂ ಬ್ರಹ್ಮಾಧಿಗಮ್ಯತ ಇತ್ಯಭಿಪ್ರಾಯಃ । (ಸೂ. ಭಾ.)

ವೆಂದು ಒಪ್ಪಿಕೊಂಡರೂ ಅದು ಒಬ್ಬನಿಂದಲೇ ನಿರ್ಮಿತವಾಗಿದೆ ಎಂಬುದಕ್ಕೆ ಪ್ರಮಾಣವಿಲ್ಲ. ವಿಶೇಷ ಪುಣ್ಯವಂತರಾದ ಜೀವರೂ ಕೂಡ ತಮ್ಮ ಜ್ಞಾನಶಕ್ತಿಗಳ ಮೂಲಕ ಈ ಜಗತ್ತನ್ನು ಸೃಷ್ಟಿಸಬಹುದು. ಆದುದರಿಂದ ಜಗದುತ್ಪತ್ತಿಗೆ ಒಬ್ಬ ವ್ಯಕ್ತಿಯ ಅಸ್ತಿತ್ವವನ್ನು ಊಹಿಸ ಬೇಕಾದ ಆವಶ್ಯಕತೆಯಿಲ್ಲ

**ದ್ವೈ.**—'ಯಾವನನ್ನು ಅರಿತುಕೊಳ್ಳಲು ಶಾಸ್ತ್ರವು ಏಕಪ್ರಮಾಣವೊ (ಅವನೇ ಜಗಜ್ಜನ್ಮಾದಿಗಳಲ್ಲಿ ಕಾರಣನು)' ಎಂಬುದು ಸೂತ್ರಾರ್ಥ.

'ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದ, ಭಾರತ, ಪಂಚರಾತ್ರ, ಮೂಲರಾಮಾಯಣ—ಇವು ಶಾಸ್ತ್ರವೆನಿಸುವುವು. ಇವುಗಳಿಗೆ ಯಾವುವು ಅನುಕೂಲವಾಗಿ ರುವುವೊ ಅವೂ ಶಾಸ್ತ್ರವೆಂದು ಪ್ರಸಿದ್ಧವಾಗಿವೆ'[1] (ಸ್ಕಾಂದ).

ಪರಬ್ರಹ್ಮನನ್ನು ಶ್ರುತಿಗಳಿಂದಲೆ, ಅರಿತುಕೊಳ್ಳಬೇಕು. ಅನುಮಾನವು ಪ್ರಮಾಣ ವಾಗಲಾರದು 'ಶ್ರುತಿಸಹಾಯವಿಲ್ಲದ ಅನುಮಾನವು ಎಂದಿಗೂ ವಸ್ತುವನ್ನು ಸಾಧಿಸಲಾ ರದು; ಹಾಗೆಯೇ ಇತರ ಪ್ರಮಾಣಗಳೂ ಕೂಡ'[2] (ಕೂರ್ಮ) ಆದರೆ ಶ್ರುತಿಸ್ಮೃತಿಗಳ ಸಹಾಯದಿಂದ ಪ್ರತ್ಯಕ್ಷಾನುಮಾನಪ್ರಮಾಣಗಳು ಕಾರ್ಯಕಾರಿಯಾಗುತ್ತವೆ. ಶ್ರುತಿ ಸಹಾಯವಿಲ್ಲದ ಅನುಮಾನದಿಂದ ಏನನ್ನಾದರೂ ಸಾಧಿಸಬಹುದು. ಆದುದರಿಂದ ಶಾಸ್ತ್ರದ ಸಹಾಯವಿಲ್ಲದೆ ಅತೀಂದ್ರಿಯ ವಸ್ತುಗಳನ್ನು ಸಾಧಿಸಲು ಶುಷ್ಕತರ್ಕವು ಪ್ರಯೋಜನ ವಾಗಲಾರದು.

---

1 ಋಗ್ಯಜುಃಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ।

2 ಶ್ರುತಿಸಾಹಾಯ್ಯರಹಿತಮನುಮಾನಂ ನ ಕುತ್ರಚಿತ್ ।
ನಿಶ್ಚಯಾತ್ಸಾಧಯೇದರ್ಥಂ ಪ್ರಮಾಣಾಂತರಮೇವ ಚ ॥

# ४. ಸಮನ್ವಯಾಧಿಕರಣ

## ತತ್ತು ಸಮನ್ವಯಾತ್ ॥ ४ ॥

४. ಆದರೆ ಆ (ಬ್ರಹ್ಮವು ವೇದಾಂತಶಾಸ್ತ್ರದಿಂದಲೇ ತಿಳಿಯಬರತಕ್ಕದ್ದು) ; ಏಕೆಂದರೆ (ವೇದಾಂತ ವಾಕ್ಯಗಳ) ಸಮನ್ವಯವಿದೆ.

ಸಮಸ್ತ ವೇದಾಂತವಾಕ್ಯಗಳ ಏಕವಿಷಯವು ಬ್ರಹ್ಮವೇ ಎಂದು ಈ ಅಧಿಕರಣದಲ್ಲಿ ನಿರ್ಧರಿಸಿದೆ.

'ಹೇ ಸೋಮ್ಯ, ಸೃಷ್ಟಿಗೆ ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್ಸ್ವರೂಪವೇ ಆಗಿತ್ತು'[1] (ಛಾಂ ಉ. ೬. ೨. ೧), 'ಮೊದಲು ಇದು ಆತ್ಮನೊಬ್ಬನೇ ಆಗಿತ್ತು'[2] (ಐ. ಉ. ೧ ೧. ೧), 'ಆ ಈ ಬ್ರಹ್ಮವು ಅಪೂರ್ವವೂ ಅನಪರವು, ಅನಂತರವು, ಅಬಾಹ್ಯವು, ಸರ್ವವನ್ನೂ ಅನುಭವಿಸುತ್ತಿರುವ ಈ ಆತ್ಮನು ಬ್ರಹ್ಮವು'[3] (ಬೃ. ಉ. ೨. ೫. ೧೯), 'ಮುಂದಿರುವ ಇದು ಅಮೃತವಾದ ಬ್ರಹ್ಮವೇ'[4] (ಮುಂ. ಉ. ೨. ೨. ೧೨) ಇವೇ ಮೊದಲಾದುವು ವಿಷಯವಾಕ್ಯಗಳು.

### ಮೊದಲನೆಯ ವರ್ಣಕ

**ಪೂರ್ವಪಕ್ಷ**—ಶಾಸ್ತ್ರವೇ ಬ್ರಹ್ಮಕ್ಕೆ ಪ್ರಮಾಣವೆಂದು ಹೇಗೆ ಹೇಳಬಹುದು? 'ವೇದಕ್ಕೆ ಕ್ರಿಯೆಯೇ ಉದ್ದೇಶವಾಗಿರುವುದರಿಂದ ಕ್ರಿಯೆಯನ್ನು ಸೂಚಿಸದ ವೇದವಾಕ್ಯಗಳು ನಿಷ್ಪ್ರಯೋಜಕ'[5] (ಜೈ. ಸೂ. ೧. ೨. ೧) ಎಂಬ ಪ್ರಮಾಣವಿರುವುದರಿಂದ ಶಾಸ್ತ್ರವು ಕ್ರಿಯೆಯನ್ನೇ ಸೂಚಿಸುತ್ತದೆ. ಆದುದರಿಂದ ಕ್ರಿಯಾಪರವಲ್ಲದ ವೇದಾಂತವಾಕ್ಯಗಳು ನಿರರ್ಥಕವೆಂದಾಗುತ್ತದೆ.

ಅಥವಾ ಕರ್ತೃ ದೇವತೆ—ಇವುಗಳನ್ನು ಪ್ರಕಾಶಪಡಿಸುವ ಮೂಲಕವಾಗಲಿ ಅಥವಾ ಉಪಾಸನೆಯೇ ಮೊದಲಾದ ಕ್ರಿಯೆಯ ವಿಧಿಯನ್ನು ಸೂಚಿಸುವುದರ ಮೂಲಕವಾಗಲಿ ವೇದಾಂತವಾಕ್ಯಗಳು ಕ್ರಿಯೆಯ ವಿಧಿಗೆ ಶೇಷವಾಗಿವೆಯೆಂದು ಹೇಳಬಹುದು. ಇವು ಸಿದ್ಧ ವಸ್ತುವನ್ನು ಪ್ರತಿಪಾದಿಸಲು ಬಂದಿವೆಯೆಂದು ಹೇಳಲು ಕೂಡ ಆಗುವುದಿಲ್ಲ; ಏಕೆಂದರೆ ಸಿದ್ಧವಸ್ತುವು ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿಷಯವಾಗಿದೆ ಮತ್ತು ಹೇಯ-ಉಪಾದೇಯ-

---

1 ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ।

2 ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ।

3 ತದೇತದ್ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮ್, ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ ।

4 ಬ್ರಹ್ಮೈವೇದಮಮೃತಂ ಪುರಸ್ತಾತ್ ।

5 ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್ ।

ರಹಿತವಾದುದನ್ನು (ಎಂದರೆ ಸ್ವೀಕರಿಸುವುದಕ್ಕೂ ವಿಸರ್ಜಿಸುವುದಕ್ಕೂ ಅನರ್ಹವಾದು ದನ್ನು ಪ್ರತಿಪಾದಿಸಿದರೆ ಯಾವ ಪುರುಷಾರ್ಥವೂ ಉಂಟಾಗುವುದಿಲ್ಲ. ಆದುದರಿಂದಲೇ 'ಅವನು ಅತ್ತನು'[1] (ತೈ. ಸಂ. ೨. ೫. ೧. ೧) ಮೊದಲಾದ ವಾಕ್ಯಗಳು ನಿರರ್ಥಕವಾಗ ದಿರಲೆಂದು ಕರ್ಮವಿಧಿಗಳನ್ನು ಹೊಗಳುವುದರ ಮೂಲಕ ಅವುಗಳಿಗೆ ಪೂರ್ವಮೀಮಾಂಸೆ ಯಲ್ಲಿ ಸಾರ್ಥಕ್ಯವನ್ನು ಹೇಳಿದೆ: 'ಇವು ವಿಧಿಯೊಂದಿಗೆ ಏಕವಾಕ್ಯವಾಗಿರುವುದರಿಂದ ವಿಧಿಯನ್ನು ಸ್ತುತಿಸುವುದರ ಮೂಲಕ ಸಾರ್ಥಕವಾಗಿವೆ'[2] (ಜೈ. ಸೂ. ೧. ೨. ೭). 'ಅವನು ಅತ್ತನು' ಮೊದಲಾದ ಅರ್ಥವಾದಗಳಿಗೆ ಸ್ವತಂತ್ರವಾದ ಅರ್ಥವಿಲ್ಲದಿರುವುದರಿಂದ ವಿಧಿವಾಕ್ಯದೊಂದಿಗೆ ಸೇರಿಕೊಂಡು ಅರ್ಥವನ್ನು ಪಡೆದಿವೆ ಎಂದು ತಿಳಿಯಬೇಕು. ಇದೇ ರೀತಿ 'ಬಲಕ್ಕೋಸ್ಕರ ನಿನ್ನನ್ನು ಕತ್ತರಿಸುತ್ತೇನೆ'[3] (ತೈ. ಸಂ. ೧. ೧. ೧. ೧.) ಮೊದಲಾದ ಮಂತ್ರಗಳು ಕ್ರಿಯೆಯನ್ನೂ ಅದರ ಸಾಧನವನ್ನೂ ಹೇಳುವುದರ ಮೂಲಕ ಕರ್ಮಕ್ಕೆ ಸಂಬಂಧಪಟ್ಟಿವೆ. ಆದುದರಿಂದ ವಿಧಿಸ್ಪರ್ಶವಿಲ್ಲದ ವೇದವಾಕ್ಯಗಳಿಗೆ ಪ್ರಯೋಜನವಿರುವು ದೆಂಬುದು ಎಲ್ಲಿಯೂ ಕಂಡುಬರುವುದಿಲ್ಲ, ಯುಕ್ತವೂ ಅಲ್ಲ. ವಿಧಿಯು ಕ್ರಿಯಾವಿಷಯ ವಾಗಿರುವುದರಿಂದ ಸಿದ್ಧವಸ್ತುವಿನ ವಿಷಯದಲ್ಲಿ ಹೊಂದುವುದಿಲ್ಲ

ವೇದಾಂತವಾಕ್ಯಗಳು ಕ್ರಿಯಾವಿಧಿಗೆ ಅಂಗವಾಗಿರುತ್ತವೆಯೆಂದು ಒಪ್ಪಿಕೊಂಡರೆ ಒಂದು ಹೊಸ ವಿಷಯವು ಬರುತ್ತದೆ ಎಂದು ಹೆದರಬೇಕಾಗಿಲ್ಲ; ಏಕೆಂದರೆ ಆಗಲೂ ಉಪ ನಿಷತ್ತುಗಳು ತಮ್ಮ ವಾಕ್ಯಗಳಲ್ಲಿಯೇ ಇರುವ ಉಪಾಸನಾದಿ ಕರ್ಮಗಳನ್ನು ಸೂಚಿಸು ತ್ತವೆ. ಆದುದರಿಂದ ಬ್ರಹ್ಮವು ಶಾಸ್ತ್ರಕ್ಕೆ ಕಾರಣ ಎನ್ನುವುದು ಸರಿಯಲ್ಲ.

**ಸಿದ್ಧಾಂತಿ**—ಮೂಲದಲ್ಲಿರುವ **ತು**–ಶಬ್ದವು ಪೂರ್ವಪಕ್ಷವನ್ನು ಖಂಡಿಸುತ್ತದೆ. **ತತ್** ಎಂದರೆ ಸರ್ವಜ್ಞವೂ ಸರ್ವಶಕ್ತಿಯುಳ್ಳದ್ದೂ ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣವೂ ಆದ ಬ್ರಹ್ಮವು ; ಇದನ್ನು ವೇದಾಂತಶಾಸ್ತ್ರದಿಂದಲೇ ಅರಿತುಕೊಳ್ಳಬೇಕು. ಅದು ಹೇಗೆ?ಎಲ್ಲ ವೇದಾಂತಗಳಲ್ಲಿಯೂ ವಾಕ್ಯಗಳು ಬ್ರಹ್ಮವನ್ನೇ ತಾತ್ಪರ್ಯದ ಮೂಲಕ ಅನ್ವಯಮಾಡುತ್ತವೆ, ಪದಗಳ ಅರ್ಥ ಕಟ್ಟುತ್ತವೆ. ವೇದಾಂತವಾಕ್ಯಗಳಲ್ಲಿರುವ ಪದಗಳು ಬ್ರಹ್ಮಸ್ವರೂಪವಿಷಯದಲ್ಲಿಯೇ ನಿಶ್ಚಯವಾಗಿ ಸಮನ್ವಯವಾಗುವುವರಿಂದ ಕರ್ತಾದ್ರಿ ದೇವತೆಗಳನ್ನು ಪ್ರಕಾಶಪಡಿಸುವ ಮೂಲಕ ಕ್ರಿಯಾವಿಧಿಗೆ ಶೇಷವಾಗಬೇಕೆಂಬ ಅರ್ಥವನ್ನು ಕಲ್ಪಿಸುವುದು ಯುಕ್ತವಲ್ಲ; ಹಾಗೆ ಮಾಡಿದರೆ ಶ್ರುತಿಯಲ್ಲಿ ಹೇಳಿರುವುದನ್ನು ಬಿಟ್ಟು ಅದರಲ್ಲಿ ಹೇಳದೆ ಇರುವ ಅರ್ಥವನ್ನು ಕಲ್ಪಿಸಿಕೊಂಡಂತೆ ಆಗುವುದು. 'ಅಲ್ಲಿ ಯಾವುದ ರಿಂದ ಯಾವುದನ್ನು ನೋಡಿಯಾನು?'[4] (ಬೃ. ಉ. ೨. ೪. ೧೪) ಎಂಬ ಶ್ರುತಿವಾಕ್ಯವು ಕ್ರಿಯಾ-ಕಾರಕ-ಫಲಗಳನ್ನು ನಿರಾಕರಿಸುವುದರಿಂದ ವೇದಾಂತವಾಕ್ಯಗಳು ಕರ್ತೃವಿನ

1 ಸೋಽರೋದೀತ್ ।

2 ವಿಧಿನಾ ತ್ವೇಕವಾಕ್ಯತ್ವಾತ್ ಸ್ತುತ್ಯರ್ಥೇನ ವಿಧೀನಾಂ ಸ್ಯುಃ ।

3 ಇಷೇ ತ್ವಾ । ದರ್ಶಪೂರ್ಣಮಾಸಯಜ್ಞಕ್ಕೆ ದರ್ಭೆಯನ್ನು ಕತ್ತರಿಸುವಾಗ ಹೇಳುವ ಮಂತ್ರ.

4 ತತ್ಕೇನ ಕಂ ಪಶ್ಯೇತ್ ?

ಸ್ವರೂಪವನ್ನು ಪ್ರತಿಪಾದಿಸುವುದಿಲ್ಲ.

ಬ್ರಹ್ಮವು ಸಿದ್ಧವಸ್ತುವಿನ ಸ್ವರೂಪವುಳ್ಳದ್ದಾದರೂ ಪ್ರತ್ಯಕ್ಷವೇ ಮೊದಲಾದ ಪ್ರಮಾಣಗಳಿಗೆ ವಿಷಯವಾಗುವುದಿಲ್ಲ; ಏಕೆಂದರೆ **ತತ್ ತ್ವಮ್ ಅಸಿ** (ಛಾಂ. ಉ. ೬ ೮. ೭) ಎಂದು ಶ್ರುತಿಯಲ್ಲಿ ಹೇಳಿರುವ ಬ್ರಹ್ಮಾತ್ಮಭಾವವನ್ನು ಶಾಸ್ತ್ರವಿಲ್ಲದೆ ಅರಿತು ಕೊಳ್ಳಲು ಆಗುವುದಿಲ್ಲ. ಹೇಯೋಪಾದೇಯ-ರಹಿತವಾದುದರಿಂದ ಸಿದ್ಧವಸ್ತುವಿನ ಉಪ ದೇಶವು ವ್ಯರ್ಥವೆಂಬ ಪೂರ್ವಪಕ್ಷಿಯ ಮತವು ನಮ್ಮ ಸಿದ್ಧಾಂತದಲ್ಲಿ ದೋಷವನ್ನು ತೋರಿ ಸುವುದಿಲ್ಲ; ಏಕೆಂದರೆ ಹೇಯೋಪಾದೇಯಶೂನ್ಯವಾದ ಬ್ರಹ್ಮಜ್ಞಾನದಿಂದಲೇ ಸರ್ವ ಕ್ಲೇಶಗಳೂ ನಾಶವಾಗುವುದರಿಂದ ಪುರುಷಾರ್ಥವು ಸಿದ್ಧಿಸುತ್ತದೆ

ಶ್ರುತಿಗಳಲ್ಲಿ ದೇವತಾದಿಗಳನ್ನು ಪ್ರತಿಪಾದಿಸಿರುವುದು ಆಯಾ ವೇದಾಂತ ವಾಕ್ಯಗಳ ಲ್ಲಿರುವ ಉಪಾಸನೆಗಾಗಿ ಎಂದು ಇಟ್ಟುಕೊಂಡರೂ ವಿರೋಧವಾಗುವುದಿಲ್ಲ. ಆದರೆ ಬ್ರಹ್ಮವು ಮಾತ್ರ ಉಪಾಸನಾವಿಧಿಗೆ ಅಂಗವಾಗುವುದಿಲ್ಲ ; ಏಕೆಂದರೆ ಬ್ರಹ್ಮದ ಏಕತ್ವ ಜ್ಞಾನದಿಂದ ಹೇಯೋಪಾದೇಯವಿಲ್ಲದೆ ಕ್ರಿಯಾ-ಕಾರಕಗಳೇ ಮೊದಲಾದ ದ್ವೈತ ಜ್ಞಾನವು ನಾಶವಾಗುತ್ತದೆ. ಏಕತ್ವಜ್ಞಾನದಿಂದ ನಾಶವಾದ ದ್ವೈತಜ್ಞಾನವು ಪುನಃ ಉತ್ಪನ್ನವಾಗುವುದೇ ಇಲ್ಲ ; ಅಂಥ ಸಂಭವವಿದ್ದರೆ ಬ್ರಹ್ಮವು ಉಪಾಸನಾವಿಧಿಗೆ ಅಂಗ ವೆಂದು ಭಾವಿಸಲು ಸಾಧ್ಯವಾದೀತು [1]

ಕರ್ಮಕಾಂಡದಲ್ಲಿ ವಿಧಿಯ ಸೋಂಕಿಲ್ಲದೆ ವೇದವಾಕ್ಯಗಳು ಪ್ರಮಾಣವಾಗದಿದ್ದರೂ ಆತ್ಮಜ್ಞಾನವು ಫಲದಲ್ಲಿ ಕೊನೆಗಾಣುತ್ತಿರುವುದರಿಂದ ಅದರ ವಿಷಯವಾದ ಶಾಸ್ತ್ರವು ಪ್ರಮಾಣವೆಂಬುದನ್ನು ನಿರಾಕರಿಸಲು ಆಗುವುದಿಲ್ಲ ಮತ್ತೆ ಶಾಸ್ತ್ರದ ಪ್ರಾಮಾಣ್ಯವು ಅನುಮಾನ-ಪ್ರಮಾಣದಿಂದ ಸಿದ್ಧಿಸುವುದಿಲ್ಲ ; ಹಾಗಿದ್ದರೆ ದೃಷ್ಟಾಂತವು ಅವಶ್ಯವಾಗಿ ಬೇಕಾಗುತ್ತಿತ್ತು. ಆದುದರಿಂದ ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣವೆಂಬುದು ಸಿದ್ಧವಾಗುತ್ತದೆ.

## ಎರಡನೆಯ ವರ್ಣಕ

ಇಲ್ಲಿ ಇನ್ನು ಕೆಲವರು ಸಿದ್ಧಾಂತಕ್ಕೆ ಹೀಗೆ ಆಕ್ಷೇಪಣೆಮಾಡುತ್ತಾರೆ : ಬ್ರಹ್ಮವನ್ನು ಅರಿತುಕೊಳ್ಳಲು ಶಾಸ್ತ್ರವೊಂದೇ ಪ್ರಮಾಣವೆಂದು ಒಪ್ಪಿಕೊಳ್ಳುತ್ತೇವೆ ; ಆದರೆ ಅದು ಉಪಾಸನಾವಿಧಿಗೆ (ಎಂದರೆ ಪ್ರತಿಪತ್ತಿವಿಧಿಗೆ) ಅಂಗದಾಗಿಯೇ ಬ್ರಹ್ಮವನ್ನು ತಿಳಿಸಿಕೊಡು ತ್ತದೆ, ಎಂದರೆ ನೇರಾಗಿ ತಿಳಿಸಿಕೊಡುವುದಿಲ್ಲ; ಯಜ್ಞಪಶುವನ್ನು ಕಟ್ಟುವ ಕಂಬ, ಆಹವ- ನೀಯಾಗ್ನಿ ಮೊದಲಾದುವು ಲೋಕಪ್ರಸಿದ್ಧವಲ್ಲವಾದರೂ ಶಾಸ್ತ್ರವು ಅವುಗಳನ್ನು ವಿಧಿಗೆ ಅಂಗವಾಗಿಯೇ ತಿಳಿಸಿಕೊಡುತ್ತದೆ ಎಂಬುದು ಉದಾಹರಣೆ.

**ಸಿದ್ಧಾಂತಿ**—ಅದು ಹೇಗೆ ?

---

[1] ಶ್ರುತಿಗಳಲ್ಲಿ ಹೇಳಿರುವ ಎಲ್ಲ ಉಪಾಸನೆಗಳಿಗೂ ಬ್ರಹ್ಮಾತ್ಮಸ್ವರೂಪವೇ ತಾತ್ಪರ್ಯ ಎಂಬ ಮತವನ್ನೊಪ್ಪಿಕೊಂಡರೆ ಹಾನಿಯಿಲ್ಲ ಎಂದು ಅಭಿಪ್ರಾಯ.

**ಪೂರ್ವಪಕ್ಷಿ**—ಏಕೆಂದರೆ ಶಾಸ್ತ್ರವು ಮನುಷ್ಯನನ್ನು ಕಾರ್ಯದಲ್ಲಿ ಪ್ರೇರಿಸುತ್ತದೆ ಅಥವಾ ನಿರೋಧಿಸುತ್ತದೆ ಆದುದರಿಂದ ಶಾಸ್ತ್ರದ ತಾತ್ಪರ್ಯವನ್ನು ಅರಿತವರು 'ಕರ್ಮವನ್ನು ಮಾಡುವಂತೆ ಬೋಧಿಸುವುದೇ ವೇದದ ಪ್ರಯೋಜನ'[1] (ಶಾಬರಭಾಷ್ಯ, ೧ ೧ ೧) ಎಂದು ಹೇಳಿರುತ್ತಾರೆ ಆದುದರಿಂದ ಯಾವುದಾದರೊಂದು ವಿಷಯದಲ್ಲಿ ಕರ್ಮವನ್ನು ಮಾಡಲು ಮನುಷ್ಯನನ್ನು ಪ್ರೇರಿಸುವುದರಿಂದ ಅಥವಾ ನಿರೋಧಿಸುವುದರಿಂದ ಶಾಸ್ತ್ರಕ್ಕೆ ಪ್ರಯೋಜನವುಂಟಾಗುತ್ತದೆ ಇದೇ ರೀತಿ ವೇದಾಂತವಾಕ್ಯಗಳಿಗೂ ಪ್ರಯೋಜನವಿರುತ್ತದೆ ಹೀಗೆ ವೇದಾಂತ ವಾಕ್ಯಗಳು ವಿಧಿಪರವಾದರೆ—ಸ್ವರ್ಗಾದಿಕಾಮಗಳನ್ನು ಬಯಸುವವರಿಗೆ ಅಗ್ನಿ-ಹೋತ್ರಾದಿ ಸಾಧನಗಳನ್ನು ವಿಧಿಸಿರುವಂತೆ—ಅಮೃತತ್ವವನ್ನು ಬಯಸುವವನಿಗೆ ಬ್ರಹ್ಮಜ್ಞಾನವನ್ನು ವಿಧಿಸಿದೆ ಎಂಬುದು ಯುಕ್ತವಾಗುತ್ತದ

**ಸಿದ್ಧಾಂತಿ**—ಏನನ್ನು ಅರಿತುಕೊಳ್ಳಬೇಕೊ ಅದರ ವೈಲಕ್ಷಣ್ಯವನ್ನು ಇಲ್ಲಿ ಹೇಳಿದೆ ಮುಂದೆ ಉಂಟಾಗತಕ್ಕ ಧರ್ಮವನ್ನು ಅರಿತುಕೊಳ್ಳಬೇಕಂದು ಕರ್ಮ-ಕಾಂಡದಲ್ಲಿ ಹೇಳಿದೆ, ಆದರೆ ಇಲ್ಲಿ ಅರಿತುಕೊಳ್ಳಬೇಕಾದುದು ನಿತ್ಯವಾಗಿರುವ ಬ್ರಹ್ಮವು ಇವೆರಡರಲ್ಲಿ ಅನುಷ್ಠಾನವನ್ನು ಅಪೇಕ್ಷಿಸುವ ಧರ್ಮಜ್ಞಾನದ ಫಲಕ್ಕಿಂತ ಬ್ರಹ್ಮಜ್ಞಾನದ ಫಲವು ಬೇರೆಯೇ ಆಗಿರಬೇಕು

**ಪೂರ್ವಪಕ್ಷಿ**—ಹೀಗಿರಬೇಕಾದ ಆವಶ್ಯಕತೆಯಿಲ್ಲ, ಏಕೆಂದರೆ, 'ಎಲೈ ಮೈತ್ರೇಯಿ, ಆತ್ಮನನ್ನು ನೋಡಬೇಕು'[2] (ಬೃ ಉ ೨ ೪ ೫) ಎಂಬ ಶ್ರುತಿಯ ಪ್ರಕಾರ ಕಾರ್ಯವಿಧಿಗೆ ಸಂಬಂಧಪಟ್ಟ ಬ್ರಹ್ಮವನ್ನು ಇಲ್ಲಿ ಪ್ರತಿಪಾದಿಸಿದೆ 'ಯಾವ ಆತ್ಮನು ಪಾಪರಹಿತನೊ ಅವನನ್ನೇ ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು'[3] (ಛಾಂ ಉ ೮. ೭ ೧), 'ಆತ್ಮನೆಂದೇ ಉಪಾಸಿಸಬೇಕು'[4] (ಬೃ ಉ ೧ ೪ ೭) ಇವೇ ಮೊದಲಾದ ವಿಧಿಗಳಿರುವಾಗ, 'ಈ ಆತ್ಮನು ಯಾರು ?' 'ಆ ಬ್ರಹ್ಮವು ಯಾವುದು ?' ಎಂದು ಅರಿತುಕೊಳ್ಳಲು ಇಚ್ಛೆಯಿರುವಾಗ, ನಿತ್ಯವೂ ಸರ್ವಜ್ಞನೂ ಸರ್ವಗತವೂ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವಭಾವವುಳ್ಳದ್ದೂ ವಿಜ್ಞಾನವೂ ಆನಂದವೂ ಆದ ಬ್ರಹ್ಮದ ಸ್ವರೂಪವನ್ನು ತಿಳಿಸುವುದರಲ್ಲಿ ಎಲ್ಲ ವೇದಾಂತ ವಾಕ್ಯಗಳೂ ಉಪಯುಕ್ತವಾಗಿರುವುವು ಆ ಬ್ರಹ್ಮೋಪಾಸನೆಯಿಂದ ಶಾಸ್ತ್ರಪ್ರಸಿದ್ಧವಾದ ಮೋಕ್ಷವೆಂಬ ಅದೃಷ್ಟಫಲವು ಉಂಟಾಗುತ್ತದೆ

ವೇದಾಂತವಾಕ್ಯಗಳು ಕರ್ತವ್ಯವಿಧಿಗಳನ್ನು ತಿಳಿಸದೆ ಕೇವಲ ವಸ್ತುನಿರೂಪಣೆಯನ್ನು ಮಾಡಿದರೆ ಹೇಯೋಪಾದೇಯಗಳಿಲ್ಲದೆ, 'ರಾಜನು ಹೋಗುತ್ತಿದ್ದಾನೆ'

---

1 ದೃಷ್ಟೋ ಹಿ ತಸ್ಯಾರ್ಥಃ ಕರ್ಮಾವಬೋಧನಮ್ ।
2 ಆತ್ಮಾ ವಾ ಅರೇ ದ್ರಷ್ಟವ್ಯಃ ।
3 ಯ ಆತ್ಮಾಽಪಹತಪಾಪ್ಮಾ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ।
4 ಆತ್ಮೇತ್ಯೇವೋಪಾಸೀತ ।

ಎಂಬ ವಾಕ್ಯದಂತೆ ಪ್ರಯೋಜನರಹಿತವಾಗುವುವು

**ಸಿದ್ಧಾಂತಿ**—'ಇದು ಹಗ್ಗ, ಹಾವಲ್ಲ' ಎಂಬ ವಾಕ್ಯದಲ್ಲಿ ಕೇವಲ ವಸ್ತು-ನಿರೂಪಣೆಯಿದ್ದರೂ ಭ್ರಾಂತಿಜನಿತಭೀತಿಯು ಹೋಗುವುದರಿಂದ ಅಂಥ ವಾಕ್ಯದಲ್ಲಿಯೂ ಪ್ರಯೋಜನವಿರುತ್ತದೆ ಇದೇ ರೀತಿ ಅಸಂಸಾರಿಯಾದ ಆತ್ಮನನ್ನು ತಿಳಿಸುವ ವಾಕ್ಯವೂ ಆತ್ಮನು ಸಂಸಾರಿಯೆಂಬ ಭ್ರಮೆಯನ್ನು ತೊಲಗಿಸುವುದರಿಂದ ಪ್ರಯೋಜನವುಳ್ಳದ್ದಾಗಿರುತ್ತದೆ

**ಪೂರ್ವಪಕ್ಷಿ**—'ಇದು ಹಗ್ಗ, ಹಾವಲ್ಲ' ಎಂದು ಕೇಳಿದಕೂಡಲೇ ಸರ್ಪಭ್ರಾಂತಿಯು ಹೋಗುವಂತೆ ಬ್ರಹ್ಮಸ್ವರೂಪಶ್ರವಣದಿಂದ ಸಂಸಾರಿತ್ವಭ್ರಾಂತಿಯು ಹೋಗುವಹಾಗಿದ್ದರೆ ಹೀಗೆ ಆಗಬಹುದಾಗಿತ್ತು ಆದರೆ ಅದು ಹಾಗೆ ಹೋಗುವುದಿಲ್ಲ, ಏಕೆಂದರೆ ಬ್ರಹ್ಮಸ್ವರೂಪವನ್ನು ಕೇಳಿದವನಿಗೂ ಹಿಂದಿನಂತೆ ಸುಖದುಃಖಗಳೇ ಮೊದಲಾದ ಸಂಸಾರಿಧರ್ಮಗಳು ಇರುತ್ತವೆ, ಮತ್ತು 'ಆತ್ಮನನ್ನು ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು'[1] (ಬೃ ಉ ೨ ೪ ೫) ಎಂಬಲ್ಲಿ ಶ್ರವಣಮಾಡಿದಮೇಲೂ ಮನನ-ನಿದಿಧ್ಯಾಸನಗಳನ್ನು ವಿಧಿಸಿರುತ್ತದೆ ಆದುದರಿಂದ ಉಪಾಸನಾವಿಧಿಗೆ ವಿಷಯವಾಗಿಯೇ ಬ್ರಹ್ಮವು ಶಾಸ್ತ್ರಪ್ರಮಾಣಕವಾಗಿರುತ್ತದೆ

**ಸಿದ್ಧಾಂತಿ**—ಪೂರ್ವಪಕ್ಷದ ಮತವು ಸರಿಯಲ್ಲ ಕರ್ಮಫಲ ಮತ್ತು ಬ್ರಹ್ಮ-ವಿದ್ಯಾಫಲ—ಇವೆರಡೂ ವಿಲಕ್ಷಣವಾಗಿರುತ್ತವೆ ಶರೀರ ವಾಕ್ಕು ಮನಸ್ಸು—ಇವುಗಳಿಂದ ಮಾಡಿದ ಕರ್ಮವು ಧರ್ಮವೆಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ ಹಿಂಸೆಯೇ ಮೊದಲಾದ ಅಧರ್ಮವು ಪ್ರತಿಷೇಧರೂಪವಾಗಿರುವುದರಿಂದ ಅದನ್ನು ತ್ಯಜಿಸುವುದಕ್ಕಾಗಿ ಜಿಜ್ಞಾಸ್ಯವಾಗಿದೆ ಹೀಗೆ ಚೋದನಾಲಕ್ಷಣವೂ ಅರ್ಥಾನರ್ಥರೂಪವೂ ಆದ ಧರ್ಮಾ-ಧರ್ಮಗಳಿಗೆ ಫಲವಾಗಿರುವ ಸುಖದುಃಖಗಳು ಎಲ್ಲ ಪ್ರಾಣಿಗಳಿಗೂ ಗೋಚರವಾಗಿರುವುವು ದೇಹಿಗಳಲ್ಲಿ ಸುಖದುಃಖಗಳ ತಾರತಮ್ಯಕ್ಕೆ ಧರ್ಮಾಧರ್ಮಗಳ ತಾರತಮ್ಯವೇ ಕಾರಣ ಅವಿದ್ಯೆಯೇ ಮೊದಲಾದ ದೋಷವುಳ್ಳವರಿಗೆ ಧರ್ಮಾಧರ್ಮಗಳ ತಾರತಮ್ಯ-ನಿಮಿತ್ತದಿಂದ ಶರೀರಸ್ವೀಕಾರದ ಮೂಲಕ ಸಂಸಾರರೂಪವಾಗಿರುವ ಸುಖದುಃಖಗಳ ತಾರತಮ್ಯವುಂಟಾಗುವುದೆಂಬುದು ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ ಆದುದರಿಂದ ಶ್ರುತಿಯೇ 'ಶರೀರವುಳ್ಳವನಿಗೆ ಪ್ರಿಯಾಪ್ರಿಯಗಳ ನಾಶವಿಲ್ಲ'[2] (ಛಾಂ ಉ ೮ ೧೨ ೧) ಎಂದು ಸಂಸಾರದ ಸ್ವರೂಪವನ್ನು ಅನುವಾದಮಾಡಿರುತ್ತದ

ಆದರೆ 'ಶರೀರವಿಲ್ಲದವನನ್ನು ಪ್ರಿಯಾಪ್ರಿಯಗಳು ಸೋಂಕುವುದಿಲ್ಲ'[3] (ಛಾಂ ಉ ೮ ೧೨ ೧) ಎಂಬ ಶ್ರುತಿವಚನದಿಂದ ಮೋಕ್ಷವೆಂಬ ಅಶರೀರತ್ವವು ಚೋದನಾಲಕ್ಷಣವಾದ

---

[1] ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ।

[2] ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ ।

[3] ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ।

ಧರ್ಮದ ಕಾರ್ಯವಲ್ಲವೆಂದು ತಿಳಿದುಬರುತ್ತದೆ , ಮೋಕ್ಷವು ಧರ್ಮದ ಕಾರ್ಯವಾಗಿದ್ದರೆ ಪ್ರಿಯಾಪ್ರಿಯಗಳು ಅವನನ್ನು ಸೋಂಕುವುದಿಲ್ಲವೆಂಬ ವಚನವು ಯುಕ್ತವಾಗುತ್ತಿರಲಿಲ್ಲ ಅಶರೀರತ್ವವು ಧರ್ಮದ ಕಾರ್ಯವಾಗಿರದ ಆತ್ಮನಿಗೆ ಸ್ವಾಭಾವಿಕವಾಗಿರುತ್ತದೆ 'ಈ ಪುರುಷನು ಅಸಂಗನು'[1] (ಬೃ ಉ ೪ ३ ೧೫) ಎಂದು ಶ್ರುತಿಯೇ ಹೇಳುತ್ತದೆ ಆದುದರಿಂದ ಅನುಷ್ಠೇಯಕರ್ಮಕ್ಕಿಂತ ವಿಲಕ್ಷಣವಾದ ಮೋಕ್ಷವೆಂಬ ಅಶರೀರತ್ವವು ನಿತ್ಯವೆಂಬುದು ಸಿದ್ಧವಾಗಿದೆ

ನಿತ್ಯತೆಯು ಎರಡು ವಿಧವಾಗಿರುವುದು ಪರಿಣಾಮಿ-ನಿತ್ಯತೆ ಮತ್ತು ಕೂಟಸ್ಥ-ನಿತ್ಯತೆ , ಪೃಥ್ವೀ ಮೊದಲಾದ ಭೂತಗಳು, ಸತ್ತ್ವಾದಿಗುಣಗಳು ಪರಿಣಾಮಿ-ನಿತ್ಯತೆಗೆ ಸೇರಿದುವು ಈ ನಿತ್ಯತೆಯು ಪಾರಮಾರ್ಥಿಕವಲ್ಲ ಆದರೆ ಅಶರೀರತ್ವವು ಪಾರಮಾರ್ಥಿಕವೂ ಕೂಟಸ್ಥನಿತ್ಯವೂ ಆಕಾಶದಂತೆ ಸರ್ವವ್ಯಾಪಿಯೂ ಸರ್ವಕ್ರಿಯಾರಹಿತವೂ ನಿತ್ಯ-ತೃಪ್ತವೂ ಅವಯವರಹಿತವೂ ಸ್ವಯಂಜ್ಯೋತಿಃ-ಸ್ವಭಾವವುಳ್ಳದ್ದೂ ಆಗಿರುವುದು ಯಾವುದರ ವಿಷಯದಲ್ಲಿ ಜಿಜ್ಞಾಸೆಯು ಪ್ರಸ್ತುತವಾಗಿರುವುದೊ ಆ ಬ್ರಹ್ಮವೇ ಇದು ಬ್ರಹ್ಮವನ್ನು ಕರ್ತವ್ಯಕ್ಕೆ ಅಂಗವಾಗಿ ಉಪದೇಶಿಸಿಲ್ಲ ಬ್ರಹ್ಮಜ್ಞಾನವಾದ ಕೂಡಲೇ ಮೋಕ್ಷವಾಗುವುದರಿಂದ ಮಾಡಬೇಕಾದ ಯಾವ ಕರ್ಮವೂ ಉಳಿಯುವುದಿಲ್ಲ 'ಕಾರ್ಯ-ಕಾರಣ-ರೂಪವಾದ ಬ್ರಹ್ಮವು ಸಾಕ್ಷಾತ್ಕರಿಸಲ್ಪಟ್ಟರೆ ಇವನ ಕರ್ಮಗಳು ಕ್ಷೀಣವಾಗುವುವು'[2] (ಮುಂ ಉ ೨ ೨ ೯) ಎಂದು ಶ್ರುತಿಯು ಹೇಳುತ್ತದೆ

ಅನೇಕ ಶ್ರುತಿಗಳು[3] ಮೋಕ್ಷಕ್ಕೆ ಪ್ರತಿಬಂಧವಾದ ಅವಿದ್ಯೆಯನ್ನು ನಾಶಮಾಡುವುದೇ ಆತ್ಮಜ್ಞಾನದ ಫಲವೆಂದು ಹೇಳುತ್ತವೆ ಆತ್ಮನೂ ಬ್ರಹ್ಮವೂ ಒಂದೇ ಎಂಬ ಜ್ಞಾನದಿಂದ ಮಿಥ್ಯಾಜ್ಞಾನದ ನಾಶವುಂಟಾಗುತ್ತದೆ [4]

ಈ ಬ್ರಹ್ಮಾತ್ಮ-ಏಕತ್ವವಿಜ್ಞಾನವು ಸಂಪದ್ರೂಪವಲ್ಲ [5] 'ಮನಸ್ಸನ್ನು ಬ್ರಹ್ಮವೆಂದು ಉಪಾಸಿಸಬೇಕು'[6] (ಛಾಂ ಉ ३ ೧೮ ೧) ಎಂಬಲ್ಲಿ ಬ್ರಹ್ಮದೃಷ್ಟಿಯನ್ನು ಅಭ್ಯಾಸ ಮಾಡಿರುವಂತೆ ಇದು ಅಭ್ಯಾಸರೂಪವೂ ಅಲ್ಲ 'ವಾಯುವು ಸಂವರ್ಗ'[7] (ಛಾಂ ಉ ೪

---

[1] ಅಸಂಗೋ ಹ್ಯಯಂ ಪುರುಷಃ ।

[2] ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ।

[3] ಪ್ರ ಉ ೬ ೮ , ಛಾಂ ಉ ೭ ೧ ३, ೭ ೨೬ ೨

[4] ಮಿಥ್ಯಾಜ್ಞಾನಾಪಾಯಶ್ಚ ಬ್ರಹ್ಮಾತ್ಮೈಕತ್ವ-ವಿಜ್ಞಾನಾದ್ ಭವತಿ । (ಸೂ ಭಾ )

[5] ಒಂದು ಅಲ್ಪಗುಣವುಳ್ಳ ವಸ್ತುವಿಗೆ ಉತ್ಕೃಷ್ಟಗುಣವನ್ನು ಆರೋಪಿಸಿ ಧ್ಯಾನಿಸುವುದು ಸಂಪತ್ತು , ಉದಾಹರಣೆ 'ಮನಸ್ಸು ಅನಂತವೇ ಮತ್ತು ವಿಶ್ವೇದೇವತೆಗಳೂ ಅನಂತರು , ಈ ಉಪಾಸನೆಯಿಂದ ಉಪಾಸಕನು ಅನಂತಲೋಕಗಳನ್ನೇ ಜಯಿಸಿಕೊಳ್ಳುತ್ತಾನೆ' (ಬೃ ಉ. ३ ೧ ೯)

[6] ಮನೋ ಬ್ರಹ್ಮೇತ್ಯುಪಾಸೀತ ।

[7] ವಾಯುರ್ವಾವ ಸಂವರ್ಗಃ ।

೩. ೧), 'ಪ್ರಾಣವು ಸಂವರ್ಗ'[1] (ಛಾಂ. ಉ. ೪. ೩. ೩) ಎಂಬಲ್ಲಿ ಹೇಳಿರುವಂತೆ ಇದು ಒಂದು ವಿಶಿಷ್ಟವಾದ ಕ್ರಿಯಾಯೋಗನಿಮಿತ್ತದಿಂದ ಉತ್ಪನ್ನವಾಗಲಿಲ್ಲ.[2] ಇದು ಆಜ್ಯವನ್ನು ನೋಡುವುದೇ ಮೊದಲಾದ ಕರ್ಮಗಳ ಹಾಗೆ ಕರ್ಮಾಂಗವಾದ ಸಂಸ್ಕಾರವೂ ಅಲ್ಲ.[3]

ಹೀಗೆ ಬ್ರಹ್ಮವು ಯಾವುದಕ್ಕೂ ವಿಷಯವಲ್ಲದಿದ್ದರೆ ಶಾಸ್ತ್ರವು ಅದಕ್ಕೆ ಹೇಗೆ ಪ್ರಮಾಣವಾಗುತ್ತದೆ ? ಶಾಸ್ತ್ರವು ಬ್ರಹ್ಮವನ್ನು 'ಇದು' ಎಂದು ವಿಷಯವಾಗಿ ತಿಳಿಸಲು ಹೊರಟಿಲ್ಲ. ಅವಿದ್ಯೆಯಿಂದ ಕಲ್ಪಿತವಾದ ಭೇದವನ್ನು ಹೋಗಲಾಡಿಸುವುದೇ ಶಾಸ್ತ್ರದ ಉದ್ದೇಶ. ಬ್ರಹ್ಮವು ಪ್ರತ್ಯಗಾತ್ಮವಾಗಿರುವುದರಿಂದ ಅದು ಅವಿಷಯವೆಂದು ತಿಳಿಸಿ, ಅವಿದ್ಯಾಕಲ್ಪಿತವಾದ ವೇದ-ವೇದಿತೃ-ವೇದನವೇ (ಅರಿಯಲ್ಪಡತಕ್ಕದ್ದು, ಅರಿಯುವವನು ಮತ್ತು ಅರಿವು) ಮೊದಲಾದ ಭೇದಗಳನ್ನು ನಾಶಮಾಡುವುದೇ ಶಾಸ್ತ್ರದ ಉದ್ದೇಶ. ಆದುದರಿಂದ ಅವಿದ್ಯೆಯಿಂದ ಕಲ್ಪಿತವಾದ ಸಂಸಾರತ್ವದ ನಾಶದ ಮೂಲಕ ನಿತ್ಯಮುಕ್ತನಾದ ಆತ್ಮನ ಸ್ವರೂಪವು ಉದ್ಧಾರವಾಗುತ್ತದೆ. ಆದಕಾರಣ ಮೋಕ್ಷದಲ್ಲಿ ಅನಿತ್ಯತ್ವದ ದೋಷವಿಲ್ಲ.

ಮೋಕ್ಷವು ಕ್ರಿಯೆಯಿಂದ ಉಂಟಾಗುವುದಾದರೆ ಅದಕ್ಕೆ ನಾಲ್ಕು ದ್ವಾರಗಳಿವೆ : ಉತ್ಪಾದ್ಯ (ಉತ್ಪತ್ತಿಮಾಡಿಕೊಳ್ಳುವುದು), ವಿಕಾರ್ಯ (ಬದಲಾವಣೆಯನ್ನು ಪಡೆಯುವುದು), ಆಪ್ಯ (ಹೊಂದುವುದು) ಮತ್ತು ಸಂಸ್ಕಾರ್ಯ (ಗುಣವನ್ನು ಸೇರಿಸುವುದು ಅಥವಾ ದೋಷವನ್ನು ತೆಗೆದುಹಾಕುವುದು); ಸರ್ವಗತವೂ ನಿತ್ಯಪ್ರಾಪ್ತವೂ ನಿತ್ಯಶುದ್ಧವೂ ಆದ ಮೋಕ್ಷವು ಈ ಯಾವ ದ್ವಾರದಿಂದಲೂ ಉಂಟಾಗುವುದಿಲ್ಲ. ಆದುದರಿಂದ ಮೋಕ್ಷಕ್ಕೆ ಜ್ಞಾನವೊಂದೇ ದ್ವಾರವಾಗಿದೆ.

ಆದರೆ ಜ್ಞಾನವನ್ನು ಒಂದು ಮಾನಸೀ ಕ್ರಿಯೆಯೆಂದು ಅರಿಯಕೂಡದು ; ಏಕೆಂದರೆ ಜ್ಞಾನಕ್ಕೂ ಮಾನಸೀ ಕ್ರಿಯೆಗೂ ಭೇದವಿದೆ : ವಸ್ತು-ಸ್ವರೂಪವನ್ನು ಅಪೇಕ್ಷಿಸದೆ ಯಾವುದು ವಿಧಿಸಲ್ಪಟ್ಟಿದೆಯೊ, ಯಾವುದು ಮನುಷ್ಯನ ಚಿತ್ತವ್ಯಾಪಾರಕ್ಕೆ ಅಧೀನವಾಗಿದೆಯೊ ಅದು ಕ್ರಿಯೆ.[4] ಧ್ಯಾನವೆಂದರೆ ಚಿಂತನ ; ಅದು ಮಾನಸವಾಗಿದ್ದರೂ ಮನುಷ್ಯನು ಮಾಡುವುದಕ್ಕೂ ಬಿಡುವುದಕ್ಕೂ ಅಥವಾ ಬೇರೊಂದು ಬಗೆಯಲ್ಲಿ

---

[1] ಪ್ರಾಣೋ ವಾವ ಸಂವರ್ಗಃ ।

[2] 'ಮಹಾಪ್ರಳಯಕಾಲದಲ್ಲಿ ವಾಯುವು ಅಗ್ನ್ಯಾದಿಗಳನ್ನು ನುಂಗಿ ತನ್ನಲ್ಲಿ ಅಡಗಿಸಿಕೊಳ್ಳುತ್ತದೆ. ಇದೇ ರೀತಿ ಪ್ರಾಣವು ಮರಣಕಾಲದಲ್ಲಿ ಎಲ್ಲ ಇಂದ್ರಿಯಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳುತ್ತದೆ. ವಾಯುವಿನಲ್ಲಿ ಅಥವಾ ಪ್ರಾಣದಲ್ಲಿ ಇಟ್ಟ ಸಂವರ್ಗದೃಷ್ಟಿಯು ಹೇಗೆ ಜಗತ್ತಿನ ದಶದಿಕ್ಕುಗಳನ್ನು ಬೆಳಗಿಸುವುದೊ ಹಾಗೆಯೇ ಜೀವದಲ್ಲಿ ಬ್ರಹ್ಮದೃಷ್ಟಿಯನ್ನಿಟ್ಟರೆ ಜೀವಾತ್ಮನ ಬೃಂಹಣಕ್ರಿಯೆಯಿಂದ ಅಮೃತತ್ವವು ಉಂಟಾಗುತ್ತದೆ' (ಭಾಮತೀ).

[3] ಉಪಾಂಶುಯಾಗಕ್ಕೆ ಅಂಗವಾದ ಆಜ್ಯವನ್ನು (ಎಂದರೆ ತುಪ್ಪವನ್ನು) ಪತ್ನಿಯು ನೋಡುವುದರಿಂದಲೇ ಅದು ಸಂಸ್ಕಾರವನ್ನು ಪಡೆಯುತ್ತದೆ ಹಾಗೆ ಆತ್ಮನಲ್ಲಿ ಯಾವ ಸಂಸ್ಕಾರವೂ ಉಂಟಾಗುವುದಿಲ್ಲ.

[4] 'ಸಂಧ್ಯೆಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು' (ಐ. ಬ್ರಾ. ೩. ೮. ೧).

ಮಾಡುವುದಕ್ಕೂ ಸಾಧ್ಯವಾಗುತ್ತದೆ. ಆದರೆ ಜ್ಞಾನವು ಪ್ರಮಾಣದಿಂದ ಉಂಟಾಗ ತಕ್ಕದ್ದು. ಪ್ರಮಾಣಕ್ಕೆ ಯಥಾಭೂತವಸ್ತುವೇ ವಿಷಯವಾಗಿರುತ್ತದೆ. ಆದುದರಿಂದ ಜ್ಞಾನವು ವಸ್ತುತಂತ್ರವಾಗಿದೆ, ಚೋದನಾತಂತ್ರವೂ ಅಲ್ಲ, ಪುರುಷತಂತ್ರವೂ ಅಲ್ಲ. ಹೀಗಿರುವಾಗ ಯಥಾಭೂತ-ಬ್ರಹ್ಮಾತ್ಮ-ವಿಷಯವಾದ ಜ್ಞಾನವು ವಿಧಿಯನ್ನು ಅವಲಂಬಿಸಿರುವುದಿಲ್ಲ.

ಹಾಗಾದರೆ ಶ್ರುತಿಗಳಲ್ಲಿ ವಿಧಿಯಂತಿರುವ (ಬೃ. ಉ. ೨. ೪. ೫) ವಚನಗಳ ಪ್ರಯೋಜನವೇನು ?—ಎಂಬ ಪ್ರಶ್ನೆಯು ಬರುತ್ತದೆ. ಇದಕ್ಕೆ ಉತ್ತರ: ಮನುಷ್ಯನನ್ನು ಸ್ವಾಭಾವಿಕವಾದ ದೇಹೇಂದ್ರಿಯಗಳ ಪ್ರವೃತ್ತಿಯಿಂದ ಹಿಂತಿರುಗಿಸಿ ಪ್ರತ್ಯಗಾತ್ಮನ ಕಡೆಗೆ ಸ್ರೋತವಾಗಿ ಹರಿಸುವಂತೆ ವಿಧಿಚ್ಛಾಯೆಯುಳ್ಳ ವಚನಗಳು ಉಪಯುಕ್ತವಾಗಿವೆ. ಹೀಗೆ ಆತ್ಮಾನ್ವೇಷಣೆಗೆ ಪ್ರವೃತ್ತನಾದ ಮನುಷ್ಯನಿಗೆ ಹೇಯೋಪಾದೇಯರಹಿತವಾದ ಆತ್ಮತತ್ತ್ವವನ್ನು 'ಇದೆಲ್ಲವೂ ಈ ಆತ್ಮನೇ'[1] (ಬೃ. ಉ. ೨. ೪. ೬) ಮೊದಲಾದ ವಚನಗಳು ಉಪದೇಶಮಾಡುತ್ತವೆ.

ಕರ್ತವ್ಯ-ಪ್ರಧಾನವಾಗದ ಆತ್ಮಜ್ಞಾನವು ಸ್ವೀಕರಿಸುವುದಕ್ಕಾಗಲಿ ನಿರಾಕರಿಸುವುದಕ್ಕಾಗಲಿ ಬರುವುದಿಲ್ಲ ಎಂಬ ಪೂರ್ವಪಕ್ಷದ ಅಭಿಪ್ರಾಯವು ನಿಜವೇ ಸರಿ. ಬ್ರಹ್ಮಜ್ಞಾನವಾದಮೇಲೆ ಸರ್ವಕರ್ತವ್ಯಹಾನಿಯೂ ಕೃತಕೃತ್ಯತೆಯೂ ಆಗುವುದೆಂಬುದು ನಮ್ಮ ಮತಕ್ಕೆ ಭೂಷಣವೇ ಆಗಿದೆ. 'ಪುರುಷರು ಪರಮಾತ್ಮನನ್ನು "ಇವನೇ ನಾನು" ಎಂದು ಅರಿತುಕೊಂಡರೆ, ಯಾವುದನ್ನು ಬಯಸುತ್ತ ಯಾವ ಪ್ರಯೋಜನಕ್ಕಾಗಿ ಶರೀರವನ್ನನುಸರಿಸಿ ದುಃಖಪಟ್ಟಾನು ?'[2] (ಬೃ. ಉ. ೪. ೪. ೧೨) ಆದುದರಿಂದ ಶಾಸ್ತ್ರವು ಬ್ರಹ್ಮವನ್ನು ಉಪಾಸನಾವಿಧಿಗೆ ಶೇಷವಾಗಿ ತಿಳಿಸುವುದಿಲ್ಲ.

ಪ್ರವೃತ್ತಿ-ನಿವೃತ್ತಿ-ರೂಪವಾದ ವಿಧಿಗಳು, ಅವುಗಳಿಗೆ ಶೇಷವಾದದ್ದು—ಇವುಗಳನ್ನು ಬಿಟ್ಟರೆ ಕೇವಲ ವಸ್ತುವನ್ನು ತಿಳಿಸುವ ವೇದಭಾಗವೇ ಇಲ್ಲವೆಂಬ ಮತವೂ ಸರಿಯಲ್ಲ; ಏಕೆಂದರೆ ಉಪನಿಷತ್ತುಗಳಲ್ಲಿ ಪ್ರತಿಪಾದಿತನಾದ ಆತ್ಮನು (ಎಂದರೆ ಔಪನಿಷದ-ಪುರುಷನು) ಯಾವುದಕ್ಕೂ ಶೇಷವಾಗಿರುವುದಿಲ್ಲ. ಇವನು ಇಲ್ಲವೆಂದಾಗಲಿ, ತಿಳಿಯಬರುವುದಿಲ್ಲವೆಂದಾಗಲಿ ಹೇಳುವುದಕ್ಕೆ ಆಗುವುದಿಲ್ಲ; ಏಕೆಂದರೆ '"ಹೀಗಲ್ಲ, ಹೀಗಲ್ಲ" ಎಂದು ಹೇಳಲ್ಪಟ್ಟಿರುವ ಅವನೇ ಈ ಆತ್ಮನು'[3] (ಬೃ. ಉ. ೩. ೯. ೨೬) ಎಂಬಲ್ಲಿ ಆತ್ಮಶಬ್ದವಿರುತ್ತದೆ; ಇದಲ್ಲದೆ ಆತ್ಮನನ್ನು ನಿರಾಕರಿಸುವುದಕ್ಕೂ ಆಗುವುದಿಲ್ಲ; ಏಕೆಂದರೆ ಯಾವನು ನಿರಾಕರಿಸುತ್ತಾನೆಯೊ ಅವನೇ ಆತ್ಮನಾಗಿರುತ್ತಾನೆ.[4]

---

[1] ಇದಂ ಸರ್ವಂ ಯದಯಮಾತ್ಮಾ । ಬೃ. ಉ. ೪. ೫. ೧೫. ; ೨. ೫. ೧೯ ನೋಡಿ.

[2] ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ, ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ?

[3] ಸ ಏಷ ನೇತಿ ನೇತ್ಯಾತ್ಮಾ ।

[4] ಯ ಏವ ನಿರಾಕರ್ತಾ ತಸ್ಯೈವಾತ್ಮತ್ವಾತ್ (ಸೂ. ಭಾ.).

ಆತ್ಮನು ಅಹಂಪ್ರತ್ಯಯಕ್ಕೆ ವಿಷಯನಾಗಿರುವನೆಂಬುದು ಸರಿಯಲ್ಲ ಅಹಂಪ್ರತ್ಯಯಕ್ಕೆ ವಿಷಯನಾಗಿರುವ ಕರ್ತೃವಿಗಿಂತ ಭಿನ್ನನಾಗಿರುವವನೂ, ಆ ಕರ್ತೃವಿಗೆ ಕೂಡ ಸಾಕ್ಷಿಯಾಗಿರುವವನೂ ಸರ್ವಭೂತಸ್ಥನೂ ಸಮನೂ ಏಕನೂ ಕೂಟಸ್ಥ-ನಿತ್ಯನೂ ಆದ ಪುರುಷನು ಎಲ್ಲರ ಆತ್ಮನೆಂದು ವಿಧಿಕಾಂಡದಲ್ಲಾಗಲಿ ತರ್ಕಶಾಸ್ತ್ರದಲ್ಲಾಗಲಿ ಯಾರಿಗೂ ತಿಳಿಯಬರುವುದಿಲ್ಲ 'ಆ ಔಪನಿಷದ-ಪುರುಷನನ್ನು ಕುರಿತು ನಿನ್ನನ್ನು ಪ್ರಶ್ನಿಸುತ್ತೇನೆ'[1] (ಬೃ ಉ ೩ ೯ ೨೬) ಎಂಬಲ್ಲಿರುವ ಔಪನಿಷದತ್ವ-ವಿಶೇಷಣವು ಆತ್ಮನನ್ನು ಉಪನಿಷತ್ತುಗಳಲ್ಲಿ ಮುಖ್ಯವಾಗಿ ಪ್ರಕಾಶಿಸಿರುತ್ತದೆ ಎಂಬ ಅಭಿಪ್ರಾಯದಲ್ಲಿಯೇ ಹೊಂದುತ್ತದೆ ಆದುದರಿಂದ ಭೂತವಸ್ತುವನ್ನು ತಿಳಿಸುವ ವೇದಭಾಗವು ಅಲ್ಲವೆನ್ನುವುದು ಸಾಹಸವೇ ಸರಿ

'ನಾನು ಬ್ರಹ್ಮ' ಎಂಬ ಜ್ಞಾನದಲ್ಲಿಯೇ ಎಲ್ಲ ವಿಧಿಗಳೂ ಪ್ರಮಾಣಗಳೂ ಕೊನೆಗಾಣುತ್ತವೆ, ಏಕೆಂದರೆ ಹೇಯೋಪಾದೇಯರಹಿತನಾದ ಅದ್ವೈತಾತ್ಮನ ಜ್ಞಾನವು ಉಂಟಾದಮೇಲೆ ನಿರ್ವಿಷಯವೂ ಪ್ರಮಾತೃರಹಿತವೂ ಆದವುಗಳು ಪ್ರಮಾಣವಾಗಲಾರವು [2]

**ವಿ.**—'ಆದರೆ ಅದು (ಎಂದರೆ ಪರಬ್ರಹ್ಮನನ್ನು ಅರಿತುಕೊಳ್ಳಲು ಶಾಸ್ತ್ರವು ಪ್ರಮಾಣವೆಂಬುದು) (ಸಮಂಜಸವು), ಏಕೆಂದರೆ (ಪರಮಪುರುಷಾರ್ಥದೊಂದಿಗೆ ಶಾಸ್ತ್ರವು) ಅನ್ವಯವಾಗಿರುವುದು' ಎಂಬುದು ಸೂತ್ರಾರ್ಥ [3]

ತು-ಶಬ್ದವು ಪೂರ್ವಪಕ್ಷವನ್ನು ನಿರಾಕರಿಸಲು ಬಂದಿದೆ ಉಪನಿಷತ್ತುಗಳ ಪದಸಮುದಾಯಗಳು[4] ಪರಮಪುರುಷಾರ್ಥಭೂತವೂ ತಮಗೆ ವಿಷಯವೂ ಆದ ಪರಬ್ರಹ್ಮನೊಂದಿಗೆ ಸಂಬಂಧಿಸಲ್ಪಟ್ಟಿವೆ ಎಂದರ್ಥ

ಪರಬ್ರಹ್ಮನನ್ನು ಅರಿತುಕೊಳ್ಳಲು ಶಾಸ್ತ್ರವು ಪ್ರಮಾಣವೊ ಅಥವಾ ಅಲ್ಲವೊ ಎಂಬುದು ಸಂಶಯ

ಶಾಸ್ತ್ರವು ಪ್ರಮಾಣವಲ್ಲ ಎಂಬುದು ಪೂರ್ವಪಕ್ಷ, ಶಾಸ್ತ್ರ ತನ್ನ ವಿಧಿ-ನಿಷೇಧ-ವಾಕ್ಯಗಳಿಂದ ಮನುಷ್ಯನಿಗೆ ಪ್ರವೃತ್ತಿ-ನಿವೃತ್ತಿ-ರೂಪದಲ್ಲಿ ಉಪಯುಕ್ತವಾಗಿರುತ್ತದೆ ಪರಬ್ರಹ್ಮನು ಪುರುಷಾರ್ಥರೂಪನಲ್ಲದ್ದರಿಂದ ಶಾಸ್ತ್ರವು ಅವನ ವಿಷಯದಲ್ಲಿ ಪ್ರಮಾಣವಾಗಲಾರದು ಶ್ರುತಿಯಲ್ಲಿ ಬ್ರಹ್ಮಧ್ಯಾನದ ವಿಧಿಯಿದ್ದರೂ ಅದು ಅಸದ್ಬ್ರಹ್ಮಧ್ಯಾನವೇ

---

[1] ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ ।

[2] ಈ ಮೊದಲಿನ ನಾಲ್ಕು ಸೂತ್ರಗಳು ಇಡೀ ಬ್ರಹ್ಮಸೂತ್ರಗಳ ಸಾರವಾಗಿವೆಯೆಂದು ಹೇಳಬಹುದು

[3] ತತ್-ಶಾಸ್ತ್ರಪ್ರಮಾಣಕತ್ವಂ ಬ್ರಹ್ಮಣಸ್ಸಂಭವತ್ಯೇವ । ಕುತಃ ? ಸಮನ್ವಯಾತ್—ಪರಮಪುರುಷಾರ್ಥತಯಾಽನ್ವಯಸ್ಸಮನ್ವಯಃ, ಪರಮಪುರುಷಾರ್ಥಭೂತಸ್ಯೈವ ಬ್ರಹ್ಮಣೋಽಭಿಧೇಯತಯಾಽನ್ವಯಾತ್ (ಶ್ರೀಭಾಷ್ಯ)

[4] ತೈ ಉ ೩ ೧ ೧, ಛಾಂ, ಉ ೬ ೨ ಇವೇ ಮೊದಲಾದವು

ಆಗಬಹುದು ; ಆದುದರಿಂದ ಪರಬ್ರಹ್ಮನ ಅಸ್ತಿತ್ವವು ಕೂಡುವುದಿಲ್ಲ.

ವಿಧಿಪರವಾಗಿರದ ಜ್ಞಾನದಿಂದಲೂ ಪ್ರಯೋಜನವಿದೆಯೆಂಬುದು ಸಿದ್ಧಾಂತ. ಅತಿಶಯವಾದ ಗುಣಗಳುಳ್ಳ ತಂದೆಯ ಅಥವಾ ಮಗನ ಸಮಾಚಾರವನ್ನು ಕೇಳಿದಾಗ ಅದರಿಂದ ಉಂಟಾಗುವ ಜ್ಞಾನವು ಪ್ರಯೋಜನಕಾರಿಯಾಗಿರುವುದು. ಇದೇ ರೀತಿ ಶ್ರುತಿಗಳು ಪರಬ್ರಹ್ಮನ ವಿಷಯದಲ್ಲಿ ಹೇಳುತ್ತವೆ : 'ಬ್ರಹ್ಮನು ಆನಂದ'[1] (ತೈ. ಉ. ೩. ೬), 'ಆಕಾಶದಂತೆ ಅಪರಿಮಿತನಾದ ಈ ಬ್ರಹ್ಮನು ಆನಂದವಾಗಿಲ್ಲದಿದ್ದರೆ ಯಾವನು ತಾನೇ ಆನಂದವನ್ನು ಹೊಂದುತ್ತಿದ್ದನು ?'[2] (ತೈ. ಉ. ೨ ೭), 'ವಾಙ್ಮನಸ್ಸುಗಳು ಯಾವ ಬ್ರಹ್ಮಾನಂದವನ್ನು ಇಷ್ಟೇ ಎಂದು ನಿರ್ಣಯಿಸಲು ಹೊರಟು, ಅದರ ಆನಂತ್ಯದ ಜೆನೆಯಿಂದ ವಿಫಲವಾಗಿ ಹಿಂತಿರುಗುವುವೊ ಆ ಬ್ರಹ್ಮಾನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ'[3] (ತೈ. ಉ. ೨. ೯). ಪರಬ್ರಹ್ಮನು ನಿರತಿಶಯಾನಂದಸ್ವರೂಪನು ಎಂದು ಶಾಸ್ತ್ರದಿಂದ ಅರಿತುಕೊಂಡವನು, ಅವನೇ ಪುರುಷಾರ್ಥರೂಪನೆಂದು ಉಪಾಸಿಸಿ ಆನಂದವನ್ನು ಪಡೆಯುತ್ತಾನೆ.

ವಿವಿಧಶ್ರುತಿಗಳ ಅನ್ವಯವು ಹೀಗಿರುತ್ತದೆ : ಸಂಸಾರದಲ್ಲಿರುವ ಜೀವಾತ್ಮರ ಸಂಖ್ಯೆಗೆ ಮಿತಿಯಿಲ್ಲ, ಇವರು ಅನಾದಿಕರ್ಮರೂಪವಾದ ಅವಿದ್ಯೆಯಿಂದ ಜ್ಞಾನಸಂಕೋಚವನ್ನು ಪಡೆದು ಪರತತ್ತ್ವದ ವಿಚಾರದಲ್ಲಿ ಜ್ಞಾನರಹಿತರಾಗಿರುತ್ತಾರೆ. ಈ ಜೀವಾತ್ಮರು ಮುಕ್ತಿದಶೆಯಲ್ಲಿ ಯಾವ ಬ್ರಹ್ಮಾನಂದವನ್ನು ಪಡೆಯಬಹುದೊ ಆ ಪರಬ್ರಹ್ಮನನ್ನು ಬೋಧಿಸುವ ವೇದಾಂತವಾಕ್ಯಗಳಿಂದ ಪ್ರಯೋಜನವನ್ನು ಪಡೆಯುತ್ತಾರೆ. ಇಂಥ ಪರಬ್ರಹ್ಮನನ್ನು ಪಡೆಯಬಹುದು ಎಂಬ ಅಪೇಕ್ಷೆಯುಂಟಾದಾಗ, 'ಬ್ರಹ್ಮೋಪಾಸನೆ ಮಾಡುವವನು ಪರಬ್ರಹ್ಮನನ್ನು ಹೊಂದುವನು'[4] (ತೈ. ಉ. ೨. ೧), 'ಆತ್ಮನೆಂಬ ಲೋಕವನ್ನೇ ಉಪಾಸಿಸಬೇಕು'[5] (ಬೃ. ಉ. ೧. ೪. ೧೫) ಮೊದಲಾದ ಶ್ರುತಿಗಳು ವೇದನ ಮೊದಲಾದ ಶಬ್ದಗಳಿಂದ ಬ್ರಹ್ಮಪ್ರಾಪ್ತಿಗೆ ಉಪಾಯವಾದ ಉಪಾಸನೆಯನ್ನು ವಿಧಿಸುತ್ತವೆ.

ಆದುದರಿಂದ **ಯತೋ ವಾ ಇಮಾನಿ ಭೂತಾನಿ ಜಾಯಂತೇ** ಮೊದಲಾದ ಶ್ರುತಿವಾಕ್ಯಗಳು ನಿಖಿಲಜಗತ್ತಿಗೆ ಏಕಕಾರಣನೂ ನಿಖಿಲದೋಷರಹಿತನೂ ಸಾರ್ವಜ್ಞ್ಯ-ಸತ್ಯಸಂಕಲ್ಪತ್ವಾದಿ ಅನಂತಕಲ್ಯಾಣಗುಣಾಕರನೂ ಆನಂದಸ್ವರೂಪನೂ ಆದ ಪರಬ್ರಹ್ಮನ ಅಸ್ತಿತ್ವವನ್ನು ಬೋಧಿಸುತ್ತವೆ ಎಂಬುದು ಸಿದ್ಧವಾಯಿತು.

**ದ್ವೈತ.**—'ಪರಬ್ರಹ್ಮನೇ ಸರ್ವಶಾಸ್ತ್ರಗಳಿಗೆ ವಿಷಯನಾಗಿರುತ್ತಾನೆ ; ಏಕೆಂದರೆ ಅವನೇ ಮುಖ್ಯವಾಗಿ (ಎಲ್ಲ ವೇದಾಂತವಾಕ್ಯಗಳೊಂದಿಗೆ) ಸಂಬಂಧಿಸಲ್ಪಟ್ಟಿರುತ್ತಾನೆ'

---

1 ಆನಂದಂ ಬ್ರಹ್ಮ ।

2 ಯದೇಷ ಆಕಾಶ ಆನಂದೋ ನ ಸ್ಯಾತ್ ।

3 ಯತೋ ವಾಚೋ ನಿವರ್ತಂತೇ...ನ ಬಿಭೇತಿ ಕುತಶ್ಚನೇತಿ ।

4 ಬ್ರಹ್ಮವಿದಾಪ್ನೋತಿ ಪರಮ್ ।

5 ಆತ್ಮಾನಮೇವ ಲೋಕಮುಪಾಸೀತ ।

ಎಂಬುದು ಸೂತ್ರಾರ್ಥ.

ಉಪಪತ್ತಿಯೇ ಮೊದಲಾದ ಲಕ್ಷಣಗಳುಳ್ಳದ್ದಕ್ಕೆ ಅನ್ವಯವೆಂದು ಹೆಸರು. 'ಪ್ರಾರಂಭ, ಉಪಸಂಹಾರ, ಪುನರಾವೃತ್ತಿ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿ-ಇವುಗಳಿಂದ ತಾತ್ಪರ್ಯವನ್ನು ನಿರ್ಣಯಿಸಬೇಕು' ಎಂದು ಬೃಹತ್ಸಂಹಿತೆಯಲ್ಲಿ ಹೇಳಿದೆ. ಹೀಗೆ ಪ್ರಾರಂಭವೇ ಮೊದಲಾದ ಲಕ್ಷಣಗಳಿಂದ ತಾತ್ಪರ್ಯವನ್ನು ನಿರ್ಣಯಿಸುವಾಗ ಬ್ರಹ್ಮನೇ ಶಾಸ್ತ್ರಗಮ್ಯನಾಗುತ್ತಾನೆ[1] ಭಗವಂತನಾದ ವಿಷ್ಣುವೇ ಸರ್ವಶಾಸ್ತ್ರಗಳಿಗೂ ಮುಖ್ಯಾರ್ಥನು, ಇತರರಲ್ಲ.[2]

---

[1] ಉಪಕ್ರಮಾದಿ-ತಾತ್ಪರ್ಯಲಿಂಗೈಃ ಸಮ್ಯಙ್ನಿರೂಪ್ಯಮಾಣೇ ತದೇವ ಶಾಸ್ತ್ರಗಮ್ಯಮ್ (ಮ. ಭಾ.).

[2] ಮುಖ್ಯಾರ್ಥೋ ಭಗವಾನ್ ವಿಷ್ಣುಃ ಸರ್ವಶಾಸ್ತ್ರಸ್ಯ ನಾಪರಃ (ಅನುವ್ಯಾಖ್ಯಾನ.)

## ೫. ಈಕ್ಷತ್ಯಧಿಕರಣ

(ಸೂ ೫–೧೧)

**ಈಕ್ಷತೇರ್ನಾಶಬ್ದಮ್ || ೫ ||**

೫ (ಜಗತ್ಕಾರಣಕ್ಕೆ) ಪ್ರೇಕ್ಷಣವನ್ನು ಎಂದರೆ ಆಲೋಚನೆಯನ್ನು (ಹೇಳಿರುವುದರಿಂದ ಪ್ರಧಾನವು) ಜಗತ್ಕಾರಣವಲ್ಲ; ಏಕೆಂದರೆ ಅದು ಶ್ರುತಿಯನ್ನು ಆಧಾರವಾಗಿಟ್ಟುಕೊಂಡಿಲ್ಲ

ಈ ಅಧಿಕರಣದ ಏಳು ಸೂತ್ರಗಳು ಸಾಂಖ್ಯರ ಮತವನ್ನು ಖಂಡಿಸಿ ಬ್ರಹ್ಮವೇ ಜಗತ್ಕಾರಣವೆಂದು ಸ್ಥಾಪಿಸುತ್ತವೆ

'ಹೇ ಸೋಮ್ಯ, ಸೃಷ್ಟಿಗೆ ಮೊದಲು ಇದು ಏಕವೂ ಅದ್ವಿತೀಯವೂ ಆದ ಸದ್ವಸ್ತುವೇ ಆಗಿತ್ತು ಅದು "ಬಹುವಾಗುವೆನು, ಹುಟ್ಟುವೆನು" ಎಂದು ಆಲೋಚಿಸಿತು ಅದು ತೇಜಸ್ಸನ್ನು ಸೃಷ್ಟಿಸಿತು'[1] (ಛಾಂ ಉ ೬. ೨ ೧–೩) ಇಲ್ಲಿ ಸಚ್ಛಬ್ದವಾಚ್ಯವಾಗಿ ಜಗತ್ತಿಗೆ ಉಪಾದಾನಕಾರಣವಾಗಿರುವುದು ಪ್ರಧಾನವೆ (ಎಂದರೆ ಸಾಂಖ್ಯರ ಮೂಲಪ್ರಕೃತಿಯೆ) ಅಥವಾ ಬ್ರಹ್ಮವೆ ಎಂಬುದು ಸಂಶಯ

ಬ್ರಹ್ಮಜ್ಞಾನವೆಂಬ ಪ್ರಯೋಜನವುಳ್ಳ ಮತ್ತು ಬ್ರಹ್ಮ-ಆತ್ಮನಲ್ಲಿಯೇ ತಾತ್ಪರ್ಯದಿಂದ ಸಮನ್ವಯವಾಗಿರುವ ವೇದಾಂತವಾಕ್ಯಗಳು ಕಾರ್ಯಸಂಬಂಧವಿಲ್ಲದೆಯೇ ಬ್ರಹ್ಮದಲ್ಲಿ ಪರ್ಯವಸಾನವಾಗುವುವೆಂದು ಹೇಳಿದ್ದಾಯಿತು ಬ್ರಹ್ಮವು ಸರ್ವಜ್ಞವು, ಸರ್ವಶಕ್ತಿಯುಳ್ಳದ್ದು ಮತ್ತು ಜಗತ್ತಿನ ಉತ್ಪತ್ತಿ-ಸ್ಥಿತಿ-ನಾಶಗಳಿಗೆ ಕಾರಣ ಎಂದೂ ಹೇಳಿದ್ದಾಯಿತು. ಆದರೆ ಸಾಂಖ್ಯರೇ ಮೊದಲಾದವರು ಸಿದ್ಧವಸ್ತುವನ್ನು ಪ್ರಮಾಣಾಂತರದಿಂದ ಅರಿಯಬಹುದೆಂದು ಭಾವಿಸಿ, ಪ್ರಧಾನಾದಿ ಕಾರಣಗಳನ್ನು ಅನುಮಾನಿಸುವವರಾಗಿ, ಪ್ರಧಾನಪರವಾಗಿಯೇ ವೇದಾಂತವಾಕ್ಯಗಳಿಗೆ ಅರ್ಥವನ್ನು ಕಲ್ಪಿಸಿರುತ್ತಾರೆ ಸೃಷ್ಟಿವಿಷಯವನ್ನು ತಿಳಿಸುವ ಎಲ್ಲ ವೇದಾಂತವಾಕ್ಯಗಳೂ ಅನುಮಾನದ ಮೂಲಕವೇ ಕಾರ್ಯದಿಂದ ಕಾರಣವನ್ನು ನಿಗಮನಮಾಡಬಹುದು, ಮತ್ತು ಪ್ರಧಾನ-ಪುರುಷರ ಸಂಯೋಗವು ನಿತ್ಯವೂ ಅನುಮೇಯವೂ ಆಗಿರುತ್ತದೆ ಎಂದು ಸಾಂಖ್ಯರು ಅಭಿಪ್ರಾಯಪಡುತ್ತಾರೆ ಕಾಣಾದರು ಈಶ್ವರನು ಜಗತ್ತಿಗೆ ನಿಮಿತ್ತಕಾರಣನೆಂದೂ ಅಣುಗಳು ಉಪಾದಾನಕಾರಣವೆಂದೂ ಇದೇ ವೇದಾಂತವಾಕ್ಯಗಳಿಂದ ಅನುಮಾನಿಸುತ್ತಾರೆ ಇದೇ ರೀತಿ ಇತರ ತಾರ್ಕಿ-

---

[1] ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ।

ಕರೂ (ಎಂದರೆ ಬೌದ್ಧರೂ) ವಾಕ್ಯಾಭಾಸಗಳನ್ನು ಮತ್ತು ಯುಕ್ತ್ಯಾಭಾಸಗಳನ್ನು[1] ಆಶ್ರಯಿಸಿಕೊಂಡು ಪೂರ್ವಪಕ್ಷಿಗಳಾಗಿರುತ್ತಾರೆ ಪದಗಳನ್ನೂ ವಾಕ್ಯಗಳನ್ನೂ ಪ್ರಮಾಣಗಳನ್ನೂ (ಎಂದರೆ ವ್ಯಾಕರಣ-ಮೀಮಾಂಸಾ ನ್ಯಾಯಗಳನ್ನೂ) ಬಲ್ಲ ಬಾದರಾಯಣರು ವೇದಾಂತವಾಕ್ಯಗಳಿಗೆ ಬ್ರಹ್ಮಜ್ಞಾನವೇ ತಾತ್ಪರ್ಯವೆಂದು ತೋರಿಸಲು ಮೇಲೆ ಹೇಳಿದ ಆಭಾಸಗಳನ್ನು ಪೂರ್ವಪಕ್ಷವಾಗಿ ಮಾಡಿಕೊಂಡು ಖಂಡಿಸಿರುತ್ತಾರೆ

**ಪೂರ್ವಪಕ್ಷಿ** (ತ್ರಿಗುಣಗಳನ್ನು ಒಳಗೊಂಡಿರುವ ಮತ್ತು ಅಚೇತನವಾದ ಪ್ರಧಾನವೇ ಜಗತ್ಕಾರಣವೆಂದು ಭಾವಿಸುವ ಸಾಂಖ್ಯರು)—ಯಾವ ವೇದಾಂತ ವಾಕ್ಯಗಳು ಸರ್ವಜ್ಞವೂ ಸರ್ವಶಕ್ತಿಯುಳ್ಳದ್ದೂ ಆದ ಬ್ರಹ್ಮವೇ ಜಗತ್ಕಾರಣವೆಂದು ತೋರಿಸುತ್ತವೆಯೊ ಅವುಗಳನ್ನೇ ಪ್ರಧಾನವು ಕಾರಣವೆಂಬ ಪಕ್ಷಕ್ಕೂ ಅನ್ವಯಿಸಬಹುದು ಪ್ರಧಾನವೆಂಬ ಕಾರಣದಲ್ಲಿ ಕಾರ್ಯವನ್ನುಂಟುಮಾಡುವ ಶಕ್ತಿಯಿರುವುದರಿಂದ ಅದು ಸರ್ವಶಕ್ತಿಯುಳ್ಳದ್ದು , ಜ್ಞಾನವೆಂಬುದು ಸತ್ತ್ವದ ಗುಣವಾದುದರಿಂದ ಅದು ಸರ್ವಜ್ಞವೂ ಆಗುವುದು 'ಸತ್ತ್ವದಿಂದ ಜ್ಞಾನವು ಹುಟ್ಟುತ್ತದೆ'[2] ಎಂದು ಗೀತೆಯಲ್ಲಿ (೧೪-೧೭) ಹೇಳಿದೆ ಶರೀರೇಂದ್ರಿಯಗಳುಳ್ಳ ಮನುಷ್ಯರು ಸತ್ತ್ವಗುಣದಿಂದ ಜ್ಞಾನದಿಂದ ಸರ್ವಜ್ಞರಾದ ಯೋಗಿಗಳಾಗುತ್ತಾರೆ ಸತ್ತ್ವದ ನಿರತಿಶಯವಾದ ಉತ್ಕರ್ಷವುಂಟಾದರೆ ಸರ್ವಜ್ಞತ್ವವು ಫಲಿಸುವುದೆಂಬುದು ಪ್ರಸಿದ್ಧವಾಗಿದೆ ಶರೀರೇಂದ್ರಿಯಗಳಿಲ್ಲದ ಕೇವಲಜ್ಞಾನಸ್ವರೂಪನಾದ ಪುರುಷನು ಸರ್ವಜ್ಞನಾಗಲಿ ಕಿಂಚಿಜ್ಞನಾಗಲಿ ಆಗಲಾರನು ಆದರೆ ಪ್ರಧಾನವು ತ್ರಿಗುಣಗಳನ್ನು ಒಳಗೊಂಡಿರುವುದರಿಂದಲೂ ಸರ್ವಜ್ಞಾನಕ್ಕೆ ಕಾರಣವಾದ ಸತ್ತ್ವವು ಪ್ರಧಾನಾವಸ್ಥೆಯಲ್ಲಿ[3] ಇರುವುದರಿಂದಲೂ ಪ್ರಧಾನವು ಅಚೇತನವಾದರೂ ಸರ್ವಜ್ಞವೆಂದು ವೇದಾಂತ ವಾಕ್ಯಗಳಲ್ಲಿ ಔಪಚಾರಿಕವಾಗಿ ಹೇಳಿದೆ

ಬ್ರಹ್ಮವು ಸರ್ವಜ್ಞವೆಂದು ಎಣಿಸುವ ವೇದಾಂತಿಗಳು ಕೂಡ ಅದಕ್ಕೆ ಸರ್ವಜ್ಞಾನಗಳ ಅಂತಸ್ಥಶಕ್ತಿ ಇರುವ ಮಟ್ಟಿಗೆ ಅದನ್ನು ಸರ್ವಜ್ಞವೆಂದು ಅಂಗೀಕರಿಸಿರುತ್ತಾರೆ , ಏಕೆಂದರೆ ಬ್ರಹ್ಮವು ಯಾವಾಗಲೂ ಎಲ್ಲ ವಿಷಯಗಳನ್ನೂ ಅರಿಯುತ್ತ ಇರುವುದಿಲ್ಲ ಅದು ಯಾವಾಗಲೂ ಅರಿಯುತ್ತ ಇದ್ದರೆ ಅದರ ಸ್ವಾತಂತ್ರ್ಯವು ಹೋಗುತ್ತದೆ ಬ್ರಹ್ಮವು ಯಾವಾಗಲೂ ಅರಿಯುತ್ತಿಲ್ಲವೆಂದು ಹೇಳಿದರೆ ಅದು ಜ್ಞಾನಕ್ರಿಯೆಯನ್ನು ಬಿಟ್ಟಿರಬಹುದೆಂದು ಆಗುತ್ತದೆ ಆದುದರಿಂದ ಸರ್ವಜ್ಞಾನಗಳ ಅಂತಸ್ಥಶಕ್ತಿಯನ್ನು ಹೊಂದಿರುವುದರಿಂದಲೇ ಬ್ರಹ್ಮವು ಸರ್ವಜ್ಞವೆನಿಸಿರುತ್ತದೆ ಇದಲ್ಲದೆ ಜಗದುತ್ಪತ್ತಿಗೆ ಮೊದಲು ಬ್ರಹ್ಮಕ್ಕೆ ಯಾವ ಕಾರಕವೂ (ಎಂದರೆ ಕ್ರಿಯೆಗೆ ಅವಶ್ಯಕವಾದ ಕರಣಗಳೂ) ಇರಲಿಲ್ಲವೆಂದು

---

[1] 'ಇದು ಮೊದಲು ಅಸತ್ತೇ ಆಗಿತ್ತು' (ತೈ ಉ ೨ ೭) ಎಂಬುದು ವಾಕ್ಯಾಭಾಸ , 'ಯಾವುದು ವಸ್ತುವೊ ಅದು ಕ್ಷಣಿಕವಾದದ್ದು ದೀಪದಂತೆ' ಎಂಬುದು ಯುಕ್ತ್ಯಾಭಾಸ (ರತ್ನಪ್ರಭಾ)

[2] ಸತ್ತ್ವಾತ್ ಸಂಜಾಯತೇ ಜ್ಞಾನಮ್ ।

[3] ತ್ರಿಗುಣಗಳು ಸಮವಾಗಿರುವ ಪ್ರಳಯಾವಸ್ಥೆಯಲ್ಲಿ

ವೇದಾಂತಿಗಳೇ ಒಪ್ಪಿಕೊಂಡಿರುತ್ತಾರೆ ಜ್ಞಾನಕ್ಕೆ ಸಾಧನಗಳಾದ ಶರೀರೇಂದ್ರಿಯಗಳು ಇಲ್ಲದಿದ್ದರೆ ಜ್ಞಾನವುಂಟಾಗಲಾರದು ಮತ್ತು ಅನೇಕಾವಯವಗಳುಳ್ಳ ಪ್ರಧಾನಕ್ಕೆ ಪರಿಣಾಮವು ಸಾಧ್ಯವಾಗುವುದರಿಂದ ಅದು—ಮಣ್ಣು ಮೊದಲಾದುವಂತೆ—ಜಗತ್ತಿಗೆ ಕಾರಣವಾಗಬಹುದು ಆದರೆ ಯಾವುದರೊಂದಿಗೂ ಸೇರದಿರುವ ಅವಯವರಹಿತವಾದ ಬ್ರಹ್ಮವು ಜಗತ್ಕಾರಣವಾಗಲಾರದು.

**ಸಿದ್ಧಾಂತಿ**—ಸಾಂಖ್ಯರು ಕಲ್ಪಿಸಿರುವ ಅಚೇತನವಾದ ಪ್ರಧಾನವು ವೇದಾಂತ ವಾಕ್ಯಗಳಲ್ಲಿ ಪ್ರತಿಪಾದಿತವಾಗಿರುವ ಜಗತ್ಕಾರಣವೆಂದು ಒಪ್ಪಿಕೊಳ್ಳಲು ಆಗುವುದಿಲ್ಲ; ಏಕೆಂದರೆ ಅದನ್ನು ಶ್ರುತಿಗಳಲ್ಲಿ ಹೇಳಿಲ್ಲ; ಅದು ಹೇಗೆ? ಶ್ರುತಿಗಳಲ್ಲಿ 'ಆಲೋಚನೆಯನ್ನು' (ಈಕ್ಷಿತೃತ್ವ) ಜಗತ್ಕಾರಣಕ್ಕೆ ಹೇಳಿರುವುದರಿಂದ. ವಿಷಯವಾಕ್ಯದಲ್ಲಿ (ಛಾಂ ಉ. ೬. ೨. ೧-೩) **ಇದಂ**-ಶಬ್ದಕ್ಕೆ ವಾಚ್ಯವಾದುದೂ ನಾಮರೂಪಗಳಿಂದ ವ್ಯಾಕೃತವಾಗಿರುವುದೂ ಆದ ಜಗತ್ತು ಉತ್ಪತ್ತಿಗೆ ಮೊದಲು ಸದ್ರೂಪವಾಗಿತ್ತೆಂದು ತಿಳಿಯಪಡಿಸಿ, ಆ ವಾಕ್ಯದಲ್ಲಿಯೇ ಹೇಳಿರುವ ಮತ್ತು ಸಚ್ಛಬ್ದವಾಚ್ಯವಾದ ವಸ್ತುವು ಮೊದಲು **ಆಲೋಚಿಸಿ** ಅನಂತರ ತೇಜಸ್ಸು ಮೊದಲಾದುವನ್ನು ಸೃಷ್ಟಿಸಿತು ಎಂದು ಹೇಳಿರುತ್ತದೆ ಹೀಗೆಯೇ ಇನ್ನೊಂದು ಶ್ರುತಿಯಲ್ಲಿ, 'ಮೊದಲು ಈ ಜಗತ್ತು ಆತ್ಮನೇ ಆಗಿದ್ದಿತು; ಕಣ್ಣು ಮಿಟುಕಿಸಲು ಯಾವುದೂ ಇರಲಿಲ್ಲ; "ನಾನು ಲೋಕಗಳನ್ನು ಸೃಷ್ಟಿಸುವೆನು" ಎಂದು ಅವನು ಆಲೋಚಿಸಿ ಈ ಲೋಕಗಳನ್ನೆಲ್ಲ ಸೃಷ್ಟಿಸಿದನು'[1] (ಐ. ಉ. ೧. ೧. ೧-೨) ಎಂದು ಅವನು ಆಲೋಚನೆ ಮಾಡಿದಮೇಲೆಯೇ ಸೃಷ್ಟಿಯನ್ನು ಹೇಳಿದೆ. ಮತ್ತೊಂದು ಶ್ರುತಿಯು, 'ಅವನು ಯೋಚಿಸಿದನು, ಅವನು ಪ್ರಾಣವನ್ನು ಸೃಷ್ಟಿಸಿದನು'[2] (ಪ್ರ. ಉ. ೬. ೩) ಎಂದು ಹದಿನಾರು ಕಲೆಗಳ ಪುರುಷನ ವಿಷಯದಲ್ಲಿ ಹೇಳಿರುತ್ತದೆ.

ಸತ್ತ್ವದ ಗುಣವಾದ ಜ್ಞಾನದಿಂದ ಪ್ರಧಾನವು ಸರ್ವಜ್ಞವಾಗಬಹುದೆಂಬ ಪಕ್ಷವು ಸರಿಯಲ್ಲ; ಏಕೆಂದರೆ ಪ್ರಧಾನಾವಸ್ಥೆಯಲ್ಲಿ ಮೂರು ಗುಣಗಳೂ ಸಮಾನವಾಗಿರುವುದರಿಂದ ಸತ್ತ್ವಗುಣವಾದ ಜ್ಞಾನವು ಉಂಟಾಗಲಾರದು. ಸರ್ವಜ್ಞಾನಗಳ ಅಂತಸ್ಥ ಶಕ್ತಿಯನ್ನು ಹೊಂದಿರುವುದರಿಂದ ಅದು ಸರ್ವಜ್ಞವಾಗಬಹುದೆಂಬುದೂ ಸರಿಯಲ್ಲ; ಏಕೆಂದರೆ ಗುಣಗಳು ಸಮಾನವಾಗಿರುವಾಗ ಸತ್ತ್ವದಲ್ಲಿರುವ ಜ್ಞಾನಶಕ್ತಿಯನ್ನು ಆಶ್ರಯಿಸಿ ಪ್ರಧಾನವನ್ನು ಸರ್ವಜ್ಞವೆಂದು ಹೇಳಬಹುದಾದರೆ, ರಜಸ್ತಮಸ್ಸುಗಳಲ್ಲಿರುವ ಜ್ಞಾನಪ್ರತಿಬಂಧಕಶಕ್ತಿಯನ್ನು ಆಶ್ರಯಿಸಿ ಅದು ಕಿಂಚಿಜ್ಞವೆಂದೂ ಹೇಳಬಹುದು. ಮತ್ತೆ ಸಾಕ್ಷಿಯಾಗುವ ಸತ್ತ್ವವೃತ್ತಿಯನ್ನು **ಜ್ಞಾ** (ಅರಿ) ಎಂಬ ಧಾತುವಿನಿಂದ ಕರೆಯಲಾಗುವುದಿಲ್ಲ. ಅಚೇತನವಾದ ಪ್ರಧಾನಕ್ಕೆ ಸಾಕ್ಷಿತ್ವವಿಲ್ಲ. ಆದುದರಿಂದ ಪ್ರಧಾನಕ್ಕೆ ಸರ್ವಜ್ಞತ್ವ

---

[1] ಆತ್ಮಾ ವಾ ಇದಮೇಕ ಏವಾಗ್ರ ಆಸೀತ್। ನಾನ್ಯತ್ ಕಿಂಚನ ಮಿಷತ್। ಸ ಈಕ್ಷತ ಲೋಕಾನ್ನು ಸೃಜಾ ಇತಿ। ಸ ಇಮಾಂಲ್ಲೋಕಾನಸೃಜತ।

[2] ಸ ಈಕ್ಷಾಂಚಕ್ರೇ। ಸ ಪ್ರಾಣಮಸೃಜತ।

ವನ್ನು ಆರೋಪಿಸುವುದು ಸರಿಯಲ್ಲ ಸತ್ತ್ವೋತ್ಕರ್ಷದಿಂದ ಯೋಗಿಗಳಿಗೆ ಸರ್ವಜ್ಞತ್ವ ಉಂಟಾಗುವುದೆಂಬ ಉದಾಹರಣೆಯು ಇಲ್ಲಿ ಹೊಂದುವುದಿಲ್ಲ, ಏಕೆಂದರೆ ಅವರು ಚೇತನರು ಪುನಃ ಅಗ್ನಿಯೆಂಬ ಕಾರಣದಿಂದ ಕಬ್ಬಿಣವೇ ಮೊದಲಾದುವಕ್ಕೆ ಸುಡುವ ಶಕ್ತಿ ಬರುವಂತೆ ಸಾಕ್ಷಿಯ ನಿಮಿತ್ತದಿಂದ ಪ್ರಧಾನಕ್ಕೆ 'ಆಲೋಚನೆ' ಉಂಟಾಗುವುದೆಂದು ಕಲ್ಪಿಸುವುದಾದರೆ, ಯಾವುದರ ನಿಮಿತ್ತದಿಂದ ಪ್ರಧಾನಕ್ಕೆ 'ಆಲೋಚನೆ' ಉಂಟಾಗಿದೆಯೊ ಆ ಸರ್ವಜ್ಞವೂ ಮುಖ್ಯವೂ ಆದ ಬ್ರಹ್ಮವೇ ಜಗತ್ಕಾರಣವೆಂಬುದು ಯುಕ್ತತರವಾಗುವುದು

ಬ್ರಹ್ಮವು ಯಾವಾಗಲೂ ಅರಿಯುತ್ತಿದ್ದರೆ ಅದರ ಸ್ವಾತಂತ್ರ್ಯವು ಹೋಗುವುದರಿಂದ ಅದಕ್ಕೆ ಸರ್ವಜ್ಞತ್ವವು ಮುಖ್ಯವಾಗಿ ಹೊಂದುವುದಿಲ್ಲ ಎಂಬ ಪೂರ್ವಪಕ್ಷಕ್ಕೆ ಪರಿಹಾರವು ಹೀಗಿದೆ ಜ್ಞಾನಕ್ರಿಯೆಯು ನಿತ್ಯವಾಗಿದ್ದರೆ ಬ್ರಹ್ಮದ ಸರ್ವಜ್ಞತ್ವವು ಹೇಗೆ ಹೋಗುತ್ತದೆ ?—ಎಂದು ಪೂರ್ವಪಕ್ಷಿಯನ್ನೇ ಕೇಳಬೇಕಾಗಿದೆ ಯಾವನಿಗೆ ಸರ್ವವಿಷಯಗಳನ್ನೂ ಪ್ರಕಾಶಿಸುವ ಜ್ಞಾನವು ನಿತ್ಯವಾಗಿರುವುದೊ ಅವನು ಸರ್ವಜ್ಞನಲ್ಲವೆಂಬುದು ವಿರುದ್ಧವಾಗಿರುವುದು, ಏಕೆಂದರೆ ಜ್ಞಾನವು ಅನಿತ್ಯವಾಗಿದ್ದರೆ ಬ್ರಹ್ಮವು ಕಲವು ವೇಳೆ ಅರಿಯಬಹುದು, ಕೆಲವು ವೇಳೆ ಅರಿಯದಿರಬಹುದು, ಇಂಥ ಸಂದರ್ಭದಿಂದ ಬ್ರಹ್ಮಕ್ಕೆ ಅಸರ್ವಜ್ಞತ್ವವು ಒದಗಬಹುದು ಜ್ಞಾನವು ನಿತ್ಯವಾದರೆ ಈ ದೋಷವಿರುವುದಿಲ್ಲ

ಸೃಷ್ಟಿಗೆ ಮೊದಲು ಶರೀರೇಂದ್ರಿಯಗಳ ಸಂಬಂಧವಿಲ್ಲದೆ ಬ್ರಹ್ಮವು ಆಲೋಚಿಸಲಾರದು ಎಂಬ ಪಕ್ಷವೂ ಸರಿಯಲ್ಲ, ಏಕೆಂದರೆ ಸೂರ್ಯಪ್ರಕಾಶದಂತೆ ಬ್ರಹ್ಮದ ಜ್ಞಾನಸ್ವರೂಪವು ನಿತ್ಯವಾಗಿರುವಾಗ ಜ್ಞಾನದ ಸಾಧನಗಳು ಬೇಕಾಗಿರುವುದಿಲ್ಲ ಅವಿದ್ಯಾದಿ ದೋಷಗಳುಳ್ಳ ಸಂಸಾರಿಗೆ ಜ್ಞಾನವುಂಟಾಗುವುದಕ್ಕೆ ಶರೀರಾದಿಗಳು ಬೇಕಾಗಬಹುದು, ಜ್ಞಾನಕ್ಕೆ ಪ್ರತಿಬಂಧಕಕಾರಣವೇ ಇಲ್ಲದ ಈಶ್ವರನಿಗೆ ಇಂಥ ಆವಶ್ಯಕತೆಯಿಲ್ಲ ಈಶ್ವರನಿಗೆ ಶರೀರಾದಿಗಳ ಅಪೇಕ್ಷೆಯಿಲ್ಲವೆಂದೂ ಅವನ ಜ್ಞಾನಕ್ಕೆ ಯಾವ ಆವರಣವೂ ಇಲ್ಲವೆಂದೂ ಈ ಎರಡು ಮಂತ್ರಗಳಿಂದ ತಿಳಿದುಬರುತ್ತದ 'ಇವನಿಗೆ ಶರೀರೇಂದ್ರಿಯಗಳಿಲ್ಲ, ಇವನಿಗೆ ಸಮನೂ ಇಲ್ಲ, ಅಧಿಕನೂ ಇಲ್ಲ ಇವನ ಪರಾಶಕ್ತಿಯೇ ವಿವಿಧವಾಗಿರುವುದೆಂದೂ, ಇವನ ಜ್ಞಾನ-ಬಲ-ಕ್ರಿಯೆಗಳು ಸ್ವಾಭಾವಿಕವೆಂದೂ ವೇದದಲ್ಲಿ ಹೇಳಿದ'[1] (ಶ್ವೇ ಉ ೬ ೮), 'ಅವನು ಕೈಕಾಲುಗಳಿಲ್ಲದೆ ವೇಗವಾಗಿ ನಡೆಯುತ್ತಾನೆ ಮತ್ತು ಹಿಡಿಯುತ್ತಾನೆ, ಕಣ್ಣುಗಳಿಲ್ಲದೆ ನೋಡುತ್ತಾನೆ, ಕಿವಿಗಳಿಲ್ಲದೆ ಕೇಳುತ್ತಾನೆ, ಅವನು ಅರಿಯಬೇಕಾದುದನ್ನೆಲ್ಲ ಅರಿಯುತ್ತಾನೆ, ಆದರೆ ಅವನನ್ನು ಅರಿಯುವವನು ಯಾವನೂ ಇಲ್ಲ

---

[1] ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥

ಅವನನ್ನು ಅಗ್ರ್ಯನೆಂದೂ ಮಹಾಪುರುಷನೆಂದೂ ಹೇಳುವರು'[1] (ಶ್ವೇ. ಉ ३. ೧೯).

**ಪೂರ್ವಪಕ್ಷಿ**—ಈಶ್ವರನಿಗಿಂತ ಬೇರೆಯಾದ ಮತ್ತು ಜ್ಞಾನವನ್ನು ಪ್ರತಿಬಂಧಿಸುವ ಕಾರಣವುಳ್ಳ ಸಂಸಾರಿಯೇ ಇರುವುದಿಲ್ಲ ; ಏಕೆಂದರೆ 'ಅವನಿಗಿಂತ ಬೇರೆಯಾದ ಸಾಕ್ಷಿಯಿಲ್ಲ. . . ಅವನಿಗಿಂತ ಬೇರೆಯಾದ ಅರಿಯುವವನಿಲ್ಲ'[2] (ಬೃ ಉ. ३. ೭. ೨३) ಎಂದು ಶ್ರುತಿಯು ಹೇಳುತ್ತದೆ. ಹೀಗಿರುವಾಗ, ಸಂಸಾರಿಗೆ ಶರೀರಾದಿ-ಅಪೇಕ್ಷೆಯಿಂದ ಜ್ಞಾನವುಂಟಾಗುವುದು, ಈಶ್ವರನಿಗಲ್ಲ ಎಂದು ಹೇಗೆ ಹೇಳುವುದು ?

**ಸಿದ್ಧಾಂತಿ**—ಈಶ್ವರನಿಗಿಂತ ಬೇರೆಯಾದ ಸಂಸಾರಿಯಿಲ್ಲ ; ಆದರೂ ಆಕಾಶಕ್ಕೆ ಮಡಕೆ ಕುಡಿಕೆ ಮೊದಲಾದ ಉಪಾಧಿಗಳ ಸಂಬಂಧವಿರುವಂತೆ ದೇಹಾದಿಸಂಘಾತವೆಂಬ ಉಪಾಧಿಯನ್ನು ಒಪ್ಪಿಕೊಂಡಿರುತ್ತೇವೆ. ಮಡಕೆ-ಕುಡಿಕೆಗಳ ಆಕಾಶಗಳು ಹೊರಗಿನ ಆಕಾಶಕ್ಕಿಂತ ಭಿನ್ನವಲ್ಲದಿದ್ದರೂ ಉಪಾಧಿಯ ದೆಸೆಯಿಂದ 'ಮಡಕೆಯ ಆಕಾಶ', 'ಕುಡಿಕೆಯ ಆಕಾಶ' ಎಂದು ನಾವು ವ್ಯವಹರಿಸುತ್ತೇವೆ. ಈ ಉಪಾಧಿಯ ಸಂಬಂಧದಿಂದ ಆಕಾಶದಲ್ಲಿ ಘಟಾಕಾಶಾದಿಭೇದಗಳೆಂಬ ಮಿಥ್ಯಾಬುದ್ಧಿಯನ್ನು ನೋಡುತ್ತೇವೆ. ಹೀಗೆಯೇ ಇಲ್ಲಿಯೂ ದೇಹಾದಿ-ಸಂಘಾತವೆಂಬ ಉಪಾಧಿಸಂಬಂಧದಿಂದ ಅವಿವೇಕದಿಂದುಂಟಾದ ಈಶ್ವರ-ಸಂಸಾರಿ-ಭೇದವೆಂಬ ಮಿಥ್ಯಾಬುದ್ಧಿಯು ಉಂಟಾಗುತ್ತದೆ. ತಾನು ಆತ್ಮನಾಗಿದ್ದರೂ ಅನಾತ್ಮವಾದ ದೇಹಾದಿಸಂಘಾತದಲ್ಲಿ ಆತ್ಮತ್ವ-ಅಭಿನಿವೇಶವು ಮಿಥ್ಯಾಬುದ್ಧಿಯಿಂದಲೇ ಉಂಟಾಗಿರುತ್ತದೆ. ಹೀಗೆ ಸಂಸಾರಿತ್ವವಾಗಿರುವಾಗ ದೇಹಾದಿ-ಅಪೇಕ್ಷೆಯಿಂದಲೇ ಸಂಸಾರಿಗೆ 'ಆಲೋಚನಾಶಕ್ತಿ' ಉಂಟಾಗಿದೆ,

ವಿ.—'ಸದ್ವಸ್ತುವು ಪ್ರಧಾನ (ಅಶಬ್ದ)ವಲ್ಲ ; ಏಕೆಂದರೆ ಸದ್ವಸ್ತುವಿಗೆ ಸಂಕಲ್ಪರೂಪವಾದ ಈಕ್ಷಣವಿದೆ' ಎಂಬುದು ಸೂತ್ರಾರ್ಥ.[3]

ಛಾಂದೋಗ್ಯೋಪನಿಷತ್ತಿನ ಸದ್ವಿದ್ಯೆಯು ಬ್ರಹ್ಮನನ್ನೇ ಸೂಚಿಸುತ್ತದೆ, ಪ್ರಧಾನವನ್ನಲ್ಲ ಎಂದು ಈ ಅಧಿಕರಣವು ತಿಳಿಸುತ್ತದೆ.

ಛಾಂ. ಉ. ೬ ೨. ೧-೩ರಲ್ಲಿ ಮತ್ತು 'ಯಾವುದನ್ನು ಕೇಳಿದರೆ ಎಲ್ಲವನ್ನೂ ಕೇಳಿದಂತಾಗುವುದೊ, ಯಾವುದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತಾಗುವುದೊ'[4] (ಛಾಂ. ಉ. ೬. ೧. ३) ಎಂಬುದರಲ್ಲಿ ಜಗತ್ಕಾರಣವನ್ನು ಹೇಳಿದೆ. ಇದು ಸಾಂಖ್ಯರ ಪ್ರಧಾನವೊ ಅಥವಾ ನಿರತಿಶಯಾನಂದಸ್ವರೂಪನಾದ ಬ್ರಹ್ಮನೊ ಎಂಬುದು ಸಂಶಯ.

---

[1] ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಮ್ ॥

[2] ನಾನ್ಯೋಽತೋಽಸ್ತಿ ದ್ರಷ್ಟಾ . . . ನಾನ್ಯೋಽತೋಽಸ್ತಿ ವಿಜ್ಞಾತಾ ।

[3] ಈಕ್ಷತೇರಿತಿ ಈಕ್ಷತಿಧಾತ್ವರ್ಥಃ ಈಕ್ಷಣಮ್ । ಶಬ್ದಃ ಪ್ರಮಾಣಂ ಯಸ್ಯ ನ ಭವತಿ ತತ್ ಅಶಬ್ದಂ ಪರೋಕ್ತಮಾನುಮಾನಿಕಂ ಪ್ರಧಾನಮ್ (ವೇ. ದೀ.).

[4] ಯೇನಾಶ್ರುತಂ ಶ್ರುತಂ ಭವತಿ... ಅವಿಜ್ಞಾತಂ ವಿಜ್ಞಾತಮ್ ।

**ಪೂರ್ವಪಕ್ಷಿ**—ಶ್ರುತಿಯು ಪ್ರಧಾನವನ್ನೇ ಸೂಚಿಸುತ್ತದೆ ಅನುಮಾನಾಕಾರದ ಒಂದು ವಾಕ್ಯದಲ್ಲಿ ಮೊದಲು 'ಪ್ರತಿಜ್ಞೆಯನ್ನು' (ಎಂದರೆ ಸ್ಥಾಪಿಸಬೇಕಾದ ವಿಷಯವನ್ನು) ಹೇಳಲಾಗುತ್ತದೆ, ಅನಂತರ ದೃಷ್ಟಾಂತವೇ ಮೊದಲಾದುವು ಬರುತ್ತವ **ಯೇನಾ-ಶ್ರುತಂ ಶ್ರುತಂ ಭವತಿ** ಎಂಬಲ್ಲಿ ಪ್ರತಿಜ್ಞೆಯನ್ನು ಹೇಳಿ, **ಯಥಾ ಸೋಮ್ಯೈಕೇನ ಮೃತ್ಪಿಂಡೇನ**[1] ಎಂಬಲ್ಲಿ ದೃಷ್ಟಾಂತವನ್ನು ತಿಳಿಸಿದ ಇಲ್ಲಿ ಜಗತ್ಕಾರಣವನ್ನು ಅನುಮಾನದಿಂದಲೇ ಅರಿತುಕೊಳ್ಳಬಹುದು ಆದುದರಿಂದ ಸಚ್ಛಬ್ದವು ಪ್ರಧಾನವನ್ನೇ ತಿಳಿಸುತ್ತದ **ತದೈಕ್ಷತ ಬಹು ಸ್ಯಾಮ್** (ಛಾಂ ಉ ೬ ೨ ೩) ಎಂಬಲ್ಲಿ ಈಕ್ಷಣವು ಗೌಣವಾಗಬಹುದು , ಏಕೆಂದರೆ **ತತ್ತೇಜ ಐಕ್ಷತ** (ಛಾಂ ಉ ೬ ೨ ೩) ಎಂಬಲ್ಲಿ ಅಚೇತನವಾದ ತೇಜಸ್ಸೇ ಸಂಕಲ್ಪಿಸಿತೆಂದು ಗೌಣವಾಗಿ ಹೇಳಿದೆ

**ಸಿದ್ಧಾಂತಿ—ತದೈಕ್ಷತ ಬಹು ಸ್ಯಾಮ್** ಎಂಬಲ್ಲಿ ತಾನು ಬಹುವಾಗಬೇಕೆಂಬ ಪರಬ್ರಹ್ಮನ ಸಂಕಲ್ಪರೂಪವಾದ ಈಕ್ಷಣವನ್ನು ಹೇಳಿರುವುದರಿಂದ **ಸದೇವ ಸೋಮ್ಯ** ಎಂಬಲ್ಲಿ ಕಾರಣವಾಚಿಯಾದ ಸಚ್ಛಬ್ದಕ್ಕೆ ಅಚೇತನವಾದ ಪ್ರಧಾನವೆಂಬ ಅರ್ಥವನ್ನು ಕಲ್ಪಿಸಲು ಆಗುವುದಿಲ್ಲ ಸಾರ್ವಜ್ಞ್ಯ-ಸತ್ಯಸಂಕಲ್ಪತ್ವಾದಿಗಳಿಂದ ಕೂಡಿದ ಪರಬ್ರಹ್ಮನೆಂದೇ ನಿರ್ಧರಿಸಲ್ಪಟ್ಟಿದೆ ಅನುಮಾನಪ್ರಮಾಣದಲ್ಲಿ ಪ್ರತಿಜ್ಞೆ ದೃಷ್ಟಾಂತ ಇವುಗಳಲ್ಲದೆ ಹೇತುವೂ ಬೇಕಾಗಿರುವುದು ಇಲ್ಲಿ ಹೇತುವಿಲ್ಲ ಒಂದು ವಸ್ತುವಿನ ಜ್ಞಾನದಿಂದ ಅನೇಕ ವಸ್ತುಗಳ ಜ್ಞಾನ ಉಂಟಾಗುತ್ತದೆಯೊ ಅಥವಾ ಇಲ್ಲವೊ ಎಂಬ ಸಂದೇಹವನ್ನು ಪರಿಹರಿಸಲು ಇಲ್ಲಿ ದೃಷ್ಟಾಂತವನ್ನು ಹೇಳಿದೆಯೆ ಹೊರತು ಅನುಮಾನಕ್ಕಲ್ಲ, ತೇಜಸ್ಸು ನೀರು ಎಂಬ ಪದಗಳು (ಛಾಂ ಉ ೬, ೨ ೩ರಲ್ಲಿ) ಪಾರ್ಥಿವವಸ್ತುಗಳನ್ನು ಸೂಚಿಸುವುದಿಲ್ಲ, ಅವುಗಳಲ್ಲಿರುವ ಚೇತನನಾದ ಅಂತರ್ಯಾಮಿಯನ್ನು ಸೂಚಿಸುತ್ತವೆ ಆದುದರಿಂದ ಈಕ್ಷಣ-ಶಬ್ದಕ್ಕೆ ಮುಖ್ಯವಾದ ಅರ್ಥವು ಸಮಂಜಸವಾಗಿರುವಾಗ ಗೌಣಾರ್ಥವು ಅನಾವಶ್ಯಕ ಈ ವಿಷಯವು ಮುಂದಿನ ಸೂತ್ರಗಳಲ್ಲಿ ಚರ್ಚಿಸಲ್ಪಟ್ಟಿದ

**ದ್ವೈತ**— ಈಕ್ಷಣಕ್ಕೆ (ಜ್ಞಾನಕ್ಕೆ) ವಿಷಯನಾಗಿರುವುದರಿಂದ ಬ್ರಹ್ಮನು ಅವಾಚ್ಯನಲ್ಲ' ಎಂಬುದು ಸೂತ್ರಾರ್ಥ [2]

**ಪೂರ್ವಪಕ್ಷಿ**—'ಯಾವುದರಿಂದ ವಾಕ್ಕುಗಳು ಹಿಂತಿರುಗುವುವೊ'[3] (ತೈ ಉ. ೨ ೯), 'ಯಾವುದು ವಾಕ್ಕಿನಿಂದ ವ್ಯಕ್ತವಾಗುವುದಿಲ್ಲವೊ, ಯಾವುದರಿಂದ ವಾಕ್ಕು ವ್ಯಕ್ತವಾಗುವುದೊ'[4] (ಕೇ ಉ ೧ ೫) ಇವೇ ಮೊದಲಾದ ಶ್ರುತಿಗಳಲ್ಲಿ ಬ್ರಹ್ಮನು

---

1 ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ 'ಹೇ ಸೋಮ್ಯ, ಹೇಗೆ ಒಂದು ಮೃತ್ಪಿಂಡವನ್ನು ಅರಿತುಕೊಂಡರೆ ಮೃನ್ಮಯವಾದದ್ದೆಲ್ಲವನ್ನೂ ಅರಿತುಕೊಂಡಂತಾಗುವುದೊ' (ಛಾಂ ಉ ೬ ೧ ४)

2 ಈಕ್ಷಣೀಯತ್ವತೋ ವಿಷ್ಣುರ್ವಾಚ್ಯ ಏವ (ಅನುವ್ಯಾಖ್ಯಾನ)

3 ಯತೋ ವಾಚೋ ನಿವರ್ತಂತೇ

4 ಯದ್ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ ।

ಅವಾಚ್ಯನೆಂದು ಹೇಳಿದೆ. ಆದುದರಿಂದ ಬ್ರಹ್ಮನು ಶ್ರುತಿಗಳಲ್ಲಿ ಹೇಳಿರುವ ಕಾರಣನಲ್ಲ.

**ಸಿದ್ಧಾಂತಿ**—'ಜೀವಸಾರನಾದ ಬ್ರಹ್ಮನಅನುಗ್ರಹದಿಂದ ಉಪಾಸಕನು ಪರಾತ್ಪರನೂ ಸಮಸ್ತಶರೀರಗಳಲ್ಲಿರುವವನೂ ಆದ ಪರಮಪುರುಷನನ್ನು ನೋಡುತ್ತಾನೆ'[1] (ಪ್ರ. ಉ. ೫. ೫), 'ತನ್ನಲ್ಲಿಯೇ ಪರಮಾತ್ಮನನ್ನು ನೋಡಬೇಕು'[2] ಇವೇ ಮೊದಲಾದ ವಾಕ್ಯಗಳು ಬ್ರಹ್ಮನು ಜ್ಞಾನಕ್ಕೆ ವಿಷಯನಾಗಿರುವುದರಿಂದ ಶಬ್ದವಾಚ್ಯನೆಂದು ತಿಳಿಸುತ್ತವೆ. ಬ್ರಹ್ಮನು ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾಗಿರುವುದರಿಂದ ಅವನನ್ನು ಶಬ್ದಗಳಿಂದಲೇ ಅರಿತುಕೊಳ್ಳಬೇಕು. 'ಸರ್ವವೇದಗಳೂ ಯಾವ ಪದವನ್ನು ಪ್ರತಿಪಾದಿಸುತ್ತವೆಯೊ'[3] ಎಂದು ಕಠೋಪನಿಷತ್ತೂ (೧. ೨. ೧೫), 'ಎಲ್ಲ ವೇದಗಳಿಂದಲೂ ನಾನೇ ತಿಳಿಯಲ್ಪಡತಕ್ಕವನು'[4] ಎಂದು ಗೀತೆಯೂ (೧೫. ೧೫) ಹೇಳುತ್ತವೆ. ಬ್ರಹ್ಮನು ಅಪ್ರಸಿದ್ಧನಾದುದರಿಂದ ಶಬ್ದವಾಚ್ಯನಲ್ಲ ಎಂಬ ಅಭಿಪ್ರಾಯ ಉಂಟಾಗಿರುವುದು. 'ಜ್ಞಾನಿಗಳು ಮೇರುವಿನ ರೂಪವನ್ನು ನೋಡುತ್ತಿದ್ದರೂ ಅರಿತುಕೊಂಡಿಲ್ಲ' ಎಂದು ಹೇಳಿದಂತೆ; ಏಕೆಂದರೆ ಮೇರುಪರ್ವತವನ್ನು ಸಂಪೂರ್ಣವಾಗಿ ಅರಿತುಕೊಳ್ಳಲಾಗುವುದಿಲ್ಲ. ಹೀಗೆಯೇ ಬ್ರಹ್ಮನನ್ನು ಪೂರ್ಣವಾಗಿ ವಿವರಿಸಲು, ಅನುಮಾನಮಾಡಲು ಮತ್ತು ಅರಿತುಕೊಳ್ಳಲು ಸಾಧ್ಯವಿಲ್ಲ.[5]

## ಗೌಣಶ್ಚೇನ್ನಾತ್ಮಶಬ್ದಾತ್ ‖ ೬ ‖

೬. (ಈಕ್ಷಣ ಶಬ್ದವನ್ನು) ಔಪಚಾರಿಕವಾಗಿ ಪ್ರಯೋಗಿಸಿದೆಯೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಆತ್ಮ-ಶಬ್ದವಿದೆ.

ಈಗ ಸಾಂಖ್ಯರು ಒಂದು ಹೊಸ ಆಕ್ಷೇಪಣೆಯನ್ನು ತರುತ್ತಾರೆ. ವೇದಾಂತವಾಕ್ಯಗಳಲ್ಲಿ ಹೇಳಿರುವ ಈಕ್ಷಿತೃತ್ವವು ಅಚೇತನವಾದ ಪ್ರಧಾನಕ್ಕೆ ಇನ್ನೊಂದು ವಿಧದಿಂದಲೂ ಹೊಂದುತ್ತದೆ. ಒಂದು ನದಿಯ ದಡವು ಬೀಳುತ್ತಿರುವಾಗ 'ನದಿಯ ದಡವು ಬೀಳಲು ಬಯಸುತ್ತಿದೆ' ಎಂದು ಅಚೇತನವಾದ ದಡದ ವಿಷಯದಲ್ಲಿ ಅದು ಚೇತನವಾಗಿರುವಂತೆ ಹೇಳುತ್ತೇವೆ. ಹೀಗೆಯೇ 'ಆ ತೇಜಸ್ಸು ಯೋಚಿಸಿತು' (ಛಾಂ. ಉ. ೬. ೨. ೩), 'ಆ ನೀರು ಯೋಚಿಸಿತು' (ಛಾಂ. ಉ. ೬. ೨. ೪) ಎಂದು ಅಚೇತನಗಳಾದ ನೀರು-ತೇಜಸ್ಸುಗಳ ವಿಷಯದಲ್ಲಿಯೂ ಚೇತನದಂತೆ ಈಕ್ಷಣ-ಶಬ್ದವನ್ನು ಪ್ರಯೋಗಿಸಿದೆ. ಆದುದರಿಂದ ಸದ್ವಸ್ತುವಿನ ಈಕ್ಷಣವನ್ನು ಔಪಚಾರಿಕವಾಗಿಯೇ ಗ್ರಹಿಸಬೇಕು; ಹಾಗೆ ಅರಿತುಕೊಂಡರೆ

---

[1] ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ।

[2] ಆತ್ಮನ್ಯೇವಾತ್ಮಾನಂ ಪಶ್ಯೇತ್ ।

[3] ಸರ್ವೇ ವೇದಾ ಯತ್ಪದಮಾಮನಂತಿ...

[4] ವೇದೈಶ್ಚ ಸರ್ವೈರಹಮೇವ ವೇದ್ಯಃ. .

[5] ನ ತದೀದೃಗಿತಿ ಜ್ಞೇಯಂ ನ ವಾಚ್ಯಂ ನ ಚ ತರ್ಕ್ಯತೇ (ಮ. ಭಾ.).

ಪ್ರಧಾನವು ಅಚೇತನವಾದರೂ ಜಗತ್ಕಾರಣವಾಗಬಹುದು

**ಸಿದ್ಧಾಂತಿ**—ಈ ಆಕ್ಷೇಪಣೆಯು ಸರಿಯಲ್ಲ, ಏಕೆಂದರೆ ಇಲ್ಲಿ ಆತ್ಮ-ಶಬ್ದದ ಪ್ರಯೋಗವಿದೆ ಶ್ರುತಿಯು 'ಹೇ ಸೋಮ್ಯ, ಇದು ಮೊದಲು ಸದ್ವಸ್ತುವೇ ಆಗಿದ್ದಿತು'[1] (ಛಾಂ ಉ ೬ ೨ ೧) ಎಂದು ಪ್ರಾರಂಭಿಸಿ, ತೇಜಸ್ಸು ನೀರು ಪೃಥ್ವಿ—ಇವುಗಳ ಸೃಷ್ಟಿಯನ್ನು ಹೇಳಿದಮೇಲೆ ('ಅದು ಯೋಚಿಸಿತು, ಅದು ತೇಜಸ್ಸನ್ನು ಸೃಷ್ಟಿಸಿತು') ಪ್ರಕೃತವಾಗಿರುವ ಆ ಸದ್ವಸ್ತುವನ್ನೇ ಈಕ್ಷಿತೃವೆಂದು ಸೂಚಿಸಿ ಮತ್ತು ಆ ತೇಜಸ್ಸು ನೀರು ಪೃಥ್ವಿ ಇವುಗಳನ್ನು ದೇವತಾ-ಶಬ್ದದಿಂದ ಪರಾಮರ್ಶಿಸಿ ಮುಂದುವರಿಯುತ್ತದೆ 'ಆ ಈ ದೇವತೆಯು ಯೋಚಿಸಿತು—"ಸರಿ, ನಾನು ಈ ಜೀವನೆಂಬ ಆತ್ಮರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ, ನಾಮರೂಪಗಳನ್ನು ವಿಂಗಡಿಸುವೆನು'[2] (ಛಾಂ ಉ ೬ ೩ ೨) ಇಲ್ಲಿ ಅಚೇತನವಾದ ಪ್ರಧಾನವನ್ನು ಈಕ್ಷಿತೃವೆಂದು ಔಪಚಾರಿಕವಾಗಿ ಕಲ್ಪಿಸಿದರೆ, ಆ ಪ್ರಧಾನವೇ ಪ್ರಕೃತವಾಗಿರುವುದರಿಂದ ಅದನ್ನೇ 'ಆ ಈ ದೇವತೆ' ಎಂದು ಪರಾಮರ್ಶಿಸಿದೆ ಎಂದಾಗುತ್ತಿತ್ತು ಹಾಗಾದರೆ ದೇವತೆಯು ಜೀವವನ್ನು ಆತ್ಮ-ಶಬ್ದದಿಂದ ಕರೆಯುತ್ತಿರಲಿಲ್ಲ, ಏಕೆಂದರೆ ಜೀವನು ಚೇತನನು, ಶರೀರಕ್ಕೆ ಅಧ್ಯಕ್ಷನು, ಪ್ರಾಣಗಳನ್ನು ಧರಿಸಿರುವವನು ಎಂಬುದು ಲೋಕಪ್ರಸಿದ್ಧವಾಗಿದೆ ಮತ್ತು ನಿರ್ವಚನದಿಂದಲೂ ನಿರ್ಣಯಿಸಲ್ಪಟ್ಟಿದೆ ಜೀವನು ಅಚೇತನವಾದ ಪ್ರಧಾನದ ಆತ್ಮನು ಹೇಗಾದಾನು? ಆತ್ಮ ಎಂದರೆ ಸ್ವರೂಪ ಅಚೇತನವಾದ ಪ್ರಧಾನಕ್ಕೆ ಚೇತನನಾದ ಜೀವನು ಸ್ವರೂಪವಾಗಲಾರನು ಆದರೆ ಚೇತನವಾದ ಬ್ರಹ್ಮವನ್ನು ಈಕ್ಷಿತೃವೆಂದು ಮುಖ್ಯಾರ್ಥದಲ್ಲಿ ಗ್ರಹಿಸಿದರೆ ಜೀವ-ವಿಷಯದಲ್ಲಿ ಆತ್ಮ-ಶಬ್ದವನ್ನು ಪ್ರಯೋಗಿಸಿರುವುದು ಹೊಂದುತ್ತದೆ

ವಿ.—'ಆ ತೇಜಸ್ಸು ಸಂಕಲ್ಪಿಸಿತು' (ಛಾಂ ಉ ೬. ೨. ೩) ಎಂಬಲ್ಲಿ ಇರುವ 'ಅದು ಸಂಕಲ್ಪಿಸಿತು' ಎಂಬುದರಲ್ಲಿರುವ ಈಕ್ಷಣ-ಶಬ್ದವು ಔಪಚಾರಿಕವಾಗಿ ಪ್ರಯೋಗಿಸಲ್ಪಟ್ಟಿದೆ ಎಂದು ಹೇಳಿದರೆ ತಪ್ಪಾಗುವುದು, ಏಕೆಂದರೆ **ಐತದಾತ್ಮ್ಯವ್** ಎಂಬಲ್ಲಿ ಹೇಳಿರುವಂತೆ ಪ್ರಕೃತವಾದ ಸತ್-ಶಬ್ದವು ಆತ್ಮನನ್ನೇ ಸೂಚಿಸುತ್ತದೆ[3] ತೇಜಸ್ಸು ನೀರು—ಇವುಗಳ ಆತ್ಮನು ಸತ್ ಎಂದೂ ಈ ಎರಡು ಶಬ್ದಗಳು ತೇಜಸ್ಸಿನಲ್ಲಿಯೂ ನೀರಿನಲ್ಲಿಯೂ ಇರುವ ಮತ್ತು ತೇಜಸ್ಸೇ ಮೊದಲಾದುವನ್ನು ಶರೀರವಾಗಿ ಪಡೆದಿರುವ ಪರಬ್ರಹ್ಮನನ್ನೇ ಸೂಚಿಸುತ್ತವೆಯೆಂದೂ ಇದರಿಂದ ತಿಳಿದುಬರುತ್ತದೆ

---

1 ಸದೇವ ಸೋಮ್ಯೇದಮಗ್ರ ಆಸೀತ್ ।

2 ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನ ಆತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ।

3 'ಈ ಸಮಸ್ತ ಜಗತ್ತೂ ಪರಬ್ರಹ್ಮನನ್ನೇ ಆತ್ಮನಾಗಿ ಉಳ್ಳದ್ದು, ಅದು ಸತ್ಯವು, ಅದೇ ಆತ್ಮನು' ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ (ಛಾಂ ಉ ೬ ೮ ೭)

ದ್ವೈತ.—'ಅದು ಸಗುಣಬ್ರಹ್ಮವೆಂದು ಹೇಳಿದರೆ ನಾವು ಒಪ್ಪಿಕೊಳ್ಳುವುದಿಲ್ಲ ; ಏಕೆಂದರೆ ಆತ್ಮಶಬ್ದವನ್ನು (ಜಗತ್ಕಾರಣವನ್ನು ಸೂಚಿಸಲು) ಪ್ರಯೋಗಿಸಿದೆ' ಎಂಬುದು ಸೂತ್ರಾರ್ಥ.

ಸಗುಣಬ್ರಹ್ಮನೇ ಈಕ್ಷಣೀಯನೂ ವಾಚ್ಯನೂ ಆಗಿರುವನು, ನಿರ್ಗುಣಬ್ರಹ್ಮವಲ್ಲ ಎಂಬುದು ಸರಿಯಲ್ಲ ; ಏಕೆಂದರೆ ಆತ್ಮ-ಶಬ್ದವು—ಬ್ರಹ್ಮ-ಪುರುಷ-ಶಬ್ದಗಳಂತೆ—ಪರಬ್ರಹ್ಮನನ್ನೇ ತಿಳಿಸಿ ಪೂರ್ಣಾರ್ಥವಾಚಕವಾಗಿದೆ. 'ತ್ರಿಗುಣರಹಿತನೂ ದೋಷವರ್ಜಿತನೂ ಹೇಯೋಪಾದೇಯರಹಿತನೂ ಆದವನು ಆತ್ಮನೆನಿಸುತ್ತಾನೆ. ಇದಕ್ಕಿಂತ ವಿರುದ್ಧವಾಗಿರುವವನು ಅನಾತ್ಮನು ಎಂಬುದು ಜ್ಞಾನಿಗಳ ಮತವು'[1] ಎಂದು ವಾಮನಪುರಾಣವು ಹೇಳುತ್ತದೆ. 'ಬ್ರಹ್ಮನಿಗೆ ಎರಡು ರೂಪಗಳುಂಟು—ಆತ್ಮ ಅನಾತ್ಮ ; ಇವೆರಡರಲ್ಲಿ ಆತ್ಮನು ನಿತ್ಯನೂ ಶುದ್ಧನೂ ಕೇವಲನೂ ತ್ರಿಗುಣರಹಿತನೂ ಆಗಿರುವನು ; ಹೀಗೆ ಗುಣವಿಲ್ಲದಿರುವವನು ಅನಾತ್ಮನು'[2] ಎಂದು ತಲವಕಾರ-ಬ್ರಾಹ್ಮಣದಲ್ಲಿ ಹೇಳಿದೆ. ಮುಖ್ಯಾರ್ಥವು ಹೊಂದುವಾಗ ಗೌಣಾರ್ಥವನ್ನು ಗ್ರಹಿಸುವುದು ಯುಕ್ತವಲ್ಲ.

## ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥ ೭ ॥

೭. ಅದರಲ್ಲಿ (ಎಂದರೆ ಸದ್ವಸ್ತುವಿನಲ್ಲಿ) ನಿಷ್ಠೆಯುಳ್ಳವನಿಗೆ ಮೋಕ್ಷೋಪದೇಶವಿರುವುದರಿಂದ (ಪ್ರಧಾನವನ್ನು ಆತ್ಮ-ಶಬ್ದದಿಂದ ಕರೆಯಲಾಗುವುದಿಲ್ಲ.)

**ಪೂರ್ವಪಕ್ಷಿ**—ಪ್ರಧಾನವು ಅಚೇತನವಾದರೂ ಅದನ್ನು ಆತ್ಮ-ಶಬ್ದದಿಂದ ಔಪಚಾರಿಕವಾಗಿ ಕರೆಯಬಹುದು ; ಏಕೆಂದರೆ ಅದು ಪುರುಷನಿಗೆ ಬೇಕಾದುದನ್ನೆಲ್ಲ ಮಾಡಿ ಕೊಡುತ್ತದೆ. ರಾಜನು ತನ್ನ ಕೆಲಸವನ್ನೆಲ್ಲ ಮಾಡಿಕೊಡುವ ಸೇವಕನ ವಿಷಯದಲ್ಲಿ 'ಇವನು ನನ್ನ ಆತ್ಮನು' ಎಂದು ಹೇಳುವಂತೆ ಪ್ರಧಾನವನ್ನು ಆತ್ಮನೆಂದು ಕರೆಯಬಹುದು ; ಅಥವಾ ಆತ್ಮ-ಶಬ್ದವನ್ನು ಚೇತನ-ಅಚೇತನ-ವಸ್ತುಗಳ ವಿಷಯದಲ್ಲಿಯೂ ಪ್ರಯೋಗಿಸಬಹುದು ; ಏಕೆಂದರೆ ಅಚೇತನವಾದ ಭೂತೇಂದ್ರಿಯಗಳಿಗೂ 'ಭೂತಾತ್ಮಾ' 'ಇಂದ್ರಿಯಾತ್ಮಾ'ಎಂದು ಹೆಸರಿಡುವುದು ಕಂಡುಬರುತ್ತದೆ. ಆದುದರಿಂದ ಈಕ್ಷಿತೃತ್ವವು ಔಪಚಾರಿಕವಲ್ಲವೆಂದು

---

1 ಯೋ ಗುಣೈಃ ಸರ್ವತೋ ಹೀನೋ ಯಶ್ಚ ದೋಷವಿವರ್ಜಿತಃ ।
ಹೇಯೋಪಾದೇಯರಹಿತಃ ಸ ಆತ್ಮೇತ್ಯಭಿಧೀಯತೇ ॥
ಏತದನ್ಯಸ್ವಭಾವೋ ಯಃ ಸೋಽನಾತ್ಮೇತಿ ಸತಾಂ ಮತಃ ।

2 ದ್ವೇ ವಾವ ಬ್ರಹ್ಮಣೋ ರೂಪೇ ಆತ್ಮಾ ಚೈವಾನಾತ್ಮಾ ಚ । ತತ್ರ ಯಃ ಸ ಆತ್ಮಾ ಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ । ಅಥ ಹ ಯೋಽನೀದೃಶಃ ಸೋಽನಾತ್ಮೇತಿ (ಮ. ಭಾ.).

ಹೇಗೆ ಹೇಳುತ್ತೀಯೆ ?

**ಸಿದ್ಧಾಂತಿ**—ಅಚೇತನವಾದ ಪ್ರಧಾನವು ಆತ್ಮ-ಶಬ್ದದ ಅರ್ಥವಾಗಲಾರದು ; ಏಕೆಂದರೆ ಇಲ್ಲಿ ಪ್ರಕೃತವಾಗಿರುವ (ಛಾಂ. ಉ. ೬. ೨) ಸೂಕ್ಷ್ಮವಾದ ಸದ್ವಸ್ತುವನ್ನು ಆತ್ಮನೆಂದು ಗ್ರಹಿಸಿಕೊಂಡು ಮತ್ತು ಮೋಕ್ಷವನ್ನು ಪಡೆಯಿಸಬೇಕಾಗಿರುವ ಚೇತನನಾದ ಶ್ವೇತಕೇತುವಿಗೆ ಆತ್ಮನಲ್ಲಿ ನಿಷ್ಠೆಯನ್ನು ಹೇಳಿ, ಮೋಕ್ಷೋಪದೇಶವನ್ನು ಹೀಗೆ ಕೊಟ್ಟಿರುತ್ತದೆ: 'ಆಚಾರ್ಯವಂತನಾದ ಪುರುಷನು ಅದನ್ನು ಅರಿತುಕೊಳ್ಳುತ್ತಾನೆ, ಅವನಿಗೆ ಎಲ್ಲಿಯವರೆಗೆ ಮೋಕ್ಷವಾಗುವುದಿಲ್ಲವೋ ಅಲ್ಲಿಯವರೆಗೇ ತಡ, ಅನಂತರ ಅದನ್ನೇ ಸೇರುತ್ತಾನೆ'[1] (ಛಾಂ. ಉ. ೬. ೧೪. ೨.) ಮುಮುಕ್ಷುವೂ ಚೇತನನೂ ಆದ ಶ್ವೇತಕೇತುವಿಗೆ ಸತ್-ಶಬ್ದವಾಚ್ಯವೂ ಅಚೇತನವೂ ಆದ ಪ್ರಧಾನವೇ ನೀನು ಎಂದು ಉಪದೇಶಮಾಡಿದ್ದರೆ ನಿರ್ದೋಷವಾದ ಶಾಸ್ತ್ರವು ವಿಪರೀತವಾದಿಯಾಗಿ ಮನುಷ್ಯನಿಗೆ ಅನರ್ಥವನ್ನು ಉಂಟುಮಾಡುತ್ತಿತ್ತು. ಆಗ ಅವನಿಗೆ ಪುರುಷಾರ್ಥವು ತಪ್ಪಿಹೋಗಿ ಅನರ್ಥವುಂಟಾಗುತ್ತಿತ್ತು. ಆದುದರಿಂದ ಶಾಸ್ತ್ರವು ಸ್ವರ್ಗಾದಿಕಾಮನಿಗೆ ಅಗ್ನಿಹೋತ್ರಾದಿ-ಸಾಧನಗಳನ್ನು ಉಪದೇಶಿಸಿರುವಂತೆ ಮುಮುಕ್ಷುವಿಗೂ 'ಓ ಶ್ವೇತಕೇತು, ಅದು ಆತ್ಮನು, ಅದು ನೀನಾಗಿರುವೆ'[2] (ಛಾಂ. ಉ. ೬. ೮. ೭) ಎಂದು ನಿಜವಾದ ಆತ್ಮನನ್ನೇ ಉಪದೇಶಿಸಿರುತ್ತದೆ.

ರಾಜನೂ ಸೇವಕನೂ ಬೇರೆಬೇರೆಯಾಗಿರುವುದು ಪ್ರತ್ಯಕ್ಷವಾಗಿರುವುದರಿಂದ 'ಇವನು ನನ್ನ ಆತ್ಮನು' ಎಂದು ಔಪಚಾರಿಕವಾಗಿ ಆತ್ಮ-ಶಬ್ದವು ಪ್ರಯೋಗಿಸಲ್ಪಟ್ಟಿರುವುದು ಸರಿಯಾಗಿರುತ್ತದೆ. ಎಲ್ಲಿಯೋ ಒಂದು ಕಡೆಯಲ್ಲಿ ಒಂದು ಶಬ್ದವನ್ನು ಔಪಚಾರಿಕವಾಗಿ ಪ್ರಯೋಗಿಸುವುದು ಕಂಡುಬಂದರೆ ಆ ಕಾರಣದಿಂದ ಶಾಸ್ತ್ರವೇ ಪ್ರಮಾಣವಾಗಿರುವ ವಿಷಯದಲ್ಲಿಯೂ ಔಪಚಾರಿಕವಾಗಿರಬೇಕು ಎಂಬ ಕಲ್ಪನೆ ಸರಿಯಲ್ಲ ; ಏಕೆಂದರೆ ಆ ಪಕ್ಷದಲ್ಲಿ ಎಲ್ಲೆಲ್ಲಿಯೂ ಸಂದೇಹವೇ ಉಂಟಾದೀತು.

ಆತ್ಮ-ಶಬ್ದವನ್ನು ಚೇತನ-ಅಚೇತನ-ವಸ್ತುಗಳಿಗೆ ಸಮಾನವಾಗಿ ಪ್ರಯೋಗಿಸಬಹುದು ಎಂಬ ಅಭಿಪ್ರಾಯವು ಸರಿಯಲ್ಲ ; ಏಕೆಂದರೆ ಒಂದು ಶಬ್ದಕ್ಕೆ ಅನೇಕ ಅರ್ಥಗಳನ್ನು ಕಲ್ಪಿಸುವುದು ಸರಿಯಲ್ಲ. ಚೇತನ-ವಿಷಯದಲ್ಲಿಯೇ ಆತ್ಮಶಬ್ದವು ಮುಖ್ಯವಾಗಿರುತ್ತದೆ. ಭೂತ, ಇಂದ್ರಿಯ ಮೊದಲಾದುವುಗಳಲ್ಲಿ ಅವು ಚೇತನವೆಂದು ಉಪಚಾರಕ್ಕಾಗಿ ಇಟ್ಟುಕೊಂಡು 'ಭೂತಾತ್ಮಾ' 'ಇಂದ್ರಿಯಾತ್ಮಾ' ಎಂದು ಹೇಳಿರುತ್ತದೆ. ಆತ್ಮ-ಶಬ್ದವು ಚೇತನ-ಅಚೇತನಗಳಿಗೆ ಸಮಾನವೆಂದು ಇಟ್ಟುಕೊಂಡರೂ ನಿರ್ಣಯಿಸುವುದಕ್ಕೆ ಅನುಕೂಲವಾದ ಪ್ರಕರಣ, ಸನ್ನಿಧಿ ಮೊದಲಾದುವು ಇಲ್ಲದಿದ್ದರೆ ಶಬ್ದವನ್ನು ಯಾವ ಅರ್ಥದಲ್ಲಿ ಪ್ರಯೋಗಿಸಿದೆಯೆಂದು ಹೇಳುವುದು ಕಷ್ಟ. ಇಲ್ಲಿ ಅದು ಅಚೇತನವನ್ನೇ ಹೇಳಿದೆಯೆಂದು ನಿರ್ಣಯಿಸಲು

---

[1] ಆಚಾರ್ಯವಾನ್ ಪುರುಷೋ ವೇದ, ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ ।

[2] ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ।

ಯಾವ ಕಾರಣವೂ ಇಲ್ಲ. ಇಲ್ಲಿ ಪ್ರಕೃತವಾಗಿರುವುದು ಈಕ್ಷಿತೃವಾದ ಸದ್ವಸ್ತು, ಸಮೀಪದಲ್ಲಿ ಹೇಳಿರುವುದು ಚೇತನನಾದ ಶ್ವೇತಕೇತು ; ಚೇತನನಾದ ಶ್ವೇತಕೇತುವಿಗೆ ಅಚೇತನವು ಆತ್ಮವಾಗಲಾರದು. ಆದುದರಿಂದ ಆತ್ಮ-ಶಬ್ದವನ್ನು ಚೇತನವಸ್ತುವಿನ ವಿಷಯದಲ್ಲಿಯೇ ಪ್ರಯೋಗಿಸಿದೆ ಎಂಬುದು ಯುಕ್ತವು.

ವಿ.—ಸದ್ವಸ್ತುವು ಪ್ರಧಾನವಾಗಿದ್ದರೆ ಪ್ರಧಾನದ ಉಪಾಸನೆಯು ಅದರಲ್ಲಿಯೇ ಐಕ್ಯವನ್ನು ಉಂಟುಮಾಡುತ್ತದೆ ; 'ಇಲ್ಲಿ ಯಾವುದನ್ನು ಧ್ಯಾನಿಸುತ್ತಾನೆಯೊ ಇಲ್ಲಿಂದ ಹೋದಮೇಲೆ ಅದೇ ಆಗುತ್ತಾನೆ'[1] ಎಂದು ಶ್ರುತಿಯು (ಛಾಂ. ಉ. ೩. ೧೪. ೧.) ಹೇಳುತ್ತದೆ ಮೊದಲೇ ತಾಪತ್ರಯದಿಂದ ನರಳುತ್ತಿರುವ ಮನುಷ್ಯರಿಗೆ ಪ್ರಧಾನದಲ್ಲಿ ಐಕ್ಯವು ಬಂಧನವನ್ನು ಇನ್ನೂ ದೃಢೀಕರಿಸುತ್ತದೆ. ಸಹಸ್ರಮಾತಾ-ಪಿತೃಗಳಿಗಿಂತಹೆಚ್ಚಾಗಿ ನಮ್ಮನ್ನು ಪ್ರೀತಿಸುವ ವೇದವು ಇಂಥ ಉಪದೇಶವನ್ನು ಕೊಡಲಾರದು[2] ಪ್ರಧಾನವು ಜಗತ್ಕಾರಣವೆಂದು ಹೇಳುವವರು ಕೂಡ ಪ್ರಧಾನ-ನಿಷ್ಠೆಯಿಂದ ಮೋಕ್ಷವುಂಟಾಗುವುದೆಂದು ಹೇಳುವುದಿಲ್ಲ.[3]

ದ್ವೈ.—ಸಗುಣಬ್ರಹ್ಮದಲ್ಲಿ ನಿಷ್ಠೆಯುಳ್ಳವನಿಗೆ ಮೋಕ್ಷವು ಲಭಿಸುವುದಿಲ್ಲ ;[4] ಏಕೆಂದರೆ ಆತ್ಮನಿಷ್ಠೆಯುಳ್ಳವನಿಗೆ ಮೋಕ್ಷವುಂಟಾಗುವುದೆಂದು ಶ್ರುತಿಯಲ್ಲಿ[5] ಹೇಳಿದೆ. 'ಹೇ ಪ್ರಭು, ಚೇತನವು ಎರಡು ವಿಧ—ಜೀವ ಮತ್ತು ಆತ್ಮಾ. ಬ್ರಹ್ಮಾದಿಗಳು ಜೀವರು, ಜನಾರ್ದನನು ಆತ್ಮನು. ಇತರರ ವಿಷಯದಲ್ಲಿ ಆತ್ಮ-ಶಬ್ದವನ್ನು ಪ್ರಯೋಗಿಸುವುದು ಉಪಚಾರಕ್ಕೆ ಮಾತ್ರ. ನಿರ್ಗುಣನಾದ ಪರಮಾತ್ಮನ ಜ್ಞಾನದಿಂದ ಮೋಕ್ಷವು ಉಂಟಾಗುತ್ತದೆ. ಯಾರ ಜ್ಞಾನದಿಂದ ಮೋಕ್ಷವುಂಟಾಗುವುದಿಲ್ಲವೊ ಅವರು ಸಗುಣರಾದ ಜೀವರು. ವಿಷ್ಣುವು ಪರಮಪುರುಷನು. ಅವನ ಅನುಗ್ರಹದಿಂದ ಮೋಕ್ಷವುಂಟಾಗುವುದು' ಎಂದು ಪದ್ಮಪುರಾಣದಲ್ಲಿ ಹೇಳಿದೆ.[6] ಆದುದರಿಂದ ಮೋಕ್ಷಜನಕಜ್ಞಾನಕ್ಕೆ ವಿಷಯನಾದ ಆತ್ಮನು ಸತ್ತ್ವಾದಿ

---

[1] ಯಥಾ ಕ್ರತುರಸ್ಮಿಂಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ।

[2] ನ ಚ ಮಾತಾಪಿತೃಸಹಸ್ರೇಭ್ಯೋಽಪಿ ವತ್ಸಲತರಂ ಶಾಸ್ತ್ರಮ್ ಏವಂವಿಧತಾಪತ್ರಯಾಭಿಹತಿಹೇತುಭೂತಾಮ್ ಅಚಿತ್ಸಂಪತ್ತಿಮ್ ಉಪದಿಶತಿ (ಶ್ರೀಭಾಷ್ಯ).

[3] ಪ್ರಧಾನಕಾರಣವಾದಿನೋಽಪಿ ಹಿ ಪ್ರಧಾನನಿಷ್ಠಸ್ಯ ಮೋಕ್ಷಂ ನಾಭ್ಯುಪಗಚ್ಛಂತಿ (ಶ್ರೀಭಾಷ್ಯ).

[4] ನ ಹಿ ಗೌಣಾತ್ಮನಿಷ್ಠಸ್ಯ ಮೋಕ್ಷಃ (ಮ. ಭಾ.).

[5] ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಽಸ್ಮಿನ್ ಸಂದೇಹೇ ಗಹನೇ ಪ್ರವಿಷ್ಟಃ । ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ ಏವ । (ಬೃ. ಉ. ೪. ೪. ೧೩).

[6] ಚೇತನಸ್ತು ದ್ವಿಧಾ ಪ್ರೋಕ್ತೋ ಜೀವ ಆತ್ಮೇತಿ ಚ ಪ್ರಭೋ ।
ಜೀವಾ ಬ್ರಹ್ಮಾದಯಃ ಪ್ರೋಕ್ತಾ ಆತ್ಮೈಕಸ್ತು ಜನಾರ್ದನಃ ॥
ಇತರೇಷ್ವಾತ್ಮಶಬ್ದಸ್ತು ಸೋಽಪಚಾರೋಽಭಿಧೀಯತೇ ।
ತಸ್ಮಾತ್ಮನೋ ನಿರ್ಗುಣಸ್ಯ ಜ್ಞಾನಾನ್ಮೋಕ್ಷ ಉದಾಹೃತಃ ॥
ಸಗುಣಾಸ್ತ್ವಪರೇ ಪ್ರೋಕ್ತಾಸ್ತಜ್ಜ್ಞಾನಾನ್ನೈವ ಮುಚ್ಯತೇ ।
ಪರೋ ಹಿ ಪುರುಷೋ ವಿಷ್ಣುಸ್ತಸ್ಮಾನ್ಮೋಕ್ಷಸ್ತತಃ ಸ್ಮೃತಃ (ಮ. ಭಾ.).

ಗುಣರಹಿತನಾದ ಪರಬ್ರಹ್ಮನೇ.

### ಹೇಯತ್ವಾವಚನಾಚ್ಚ || ೮ ||

೮. ಮತ್ತು (ಪ್ರಧಾನವನ್ನು ಸತ್-ಶಬ್ದದಿಂದ ಸೂಚಿಸಲಾಗುವುದಿಲ್ಲ), ಏಕೆಂದರೆ ಅದನ್ನು ನಿರಾಕರಿಸಬೇಕೆಂಬ ವಚನವಿಲ್ಲ.

ಪ್ರಧಾನವು ಸತ್-ಶಬ್ದ-ವಾಚ್ಯವಲ್ಲವೆಂದು ತೋರಿಸಲು ಸೂತ್ರಕಾರರು ಮತ್ತೊಂದು ಕಾರಣವನ್ನು ಕೊಡುತ್ತಾರೆ: ಅನಾತ್ಮವಾದ ಪ್ರಧಾನವು ಸತ್-ಶಬ್ದದಿಂದ ಸೂಚಿಸಲ್ಪಟ್ಟಿದ್ದರೆ ಮತ್ತು 'ಓ ಶ್ವೇತಕೇತು, ಅದು ಆತ್ಮನು, ಅದು ನೀನಾಗಿರುವೆ' (ಛಾಂ. ಉ. ೬. ೮. ೭.) ಎಂಬ ವಾಕ್ಯವು ಪ್ರಧಾನವನ್ನು ಸೂಚಿಸಿದ್ದರೆ, ನಿಜವಾದ ಆತ್ಮನನ್ನೇ ಉಪದೇಶಿಸಬೇಕೆಂದಿರುವ ಆಚಾರ್ಯನು ಪ್ರಧಾನವನ್ನು ನಿರಾಕರಿಸಬೇಕೆಂದು ಕೊನೆಯಲ್ಲಿ ಹೇಳುತ್ತಿದ್ದನು ; ಏಕೆಂದರೆ ಪ್ರಧಾನದ ಉಪದೇಶವನ್ನು ಪಡೆದಿರುವ ಶ್ವೇತಕೇತುವು ಅನಾತ್ಮನನ್ನು ಆತ್ಮನೆಂದು ತಿಳಿದುಕೊಂಡು ಅದರಲ್ಲಿಯೇ ನೆಲೆನಿಲ್ಲುತ್ತಿದ್ದನು. ಇದು ಅರುಂಧತೀನ್ಯಾಯದಂತೆ : ಅರುಂಧತೀ ನಕ್ಷತ್ರವನ್ನು ತೋರಿಸಿಕೊಡಬೇಕೆಂದಿರುವವನು ಇನ್ನೊಬ್ಬನಿಗೆ ಅರುಂಧತಿಯ ಸಮೀಪದಲ್ಲಿರುವ ಒಂದು ದೊಡ್ಡನಕ್ಷತ್ರವನ್ನು ಅರುಂಧತಿಯೆಂದು ಮೊದಲು ನಿರ್ದೇಶಿಸುತ್ತಾನೆ ; ಅನಂತರ ಅದು ಅರುಂಧತಿಯಲ್ಲವೆಂದು ಹೇಳಿ ನಿಜವಾದ ಅರುಂಧತಿಯನ್ನು ತೋರಿಸಿಕೊಡುತ್ತಾನೆ. ಇದೇ ರೀತಿ (ಅನಾತ್ಮದ ಮೂಲಕ ಆತ್ಮನನ್ನು ಶಿಷ್ಯನಿಗೆ ಉಪದೇಶಿಸಬೇಕೆಂಬ ಅಭಿಪ್ರಾಯವು ಆಚಾರ್ಯನಿಗಿದ್ದರೆ) ಆತ್ಮನು ಪ್ರಧಾನವಲ್ಲವೆಂದು ಹೇಳುತ್ತಿದ್ದನು. ಆದರೆ ಅಂಥ ನಿರಾಕರಣ-ವಚನವು ಇಲ್ಲ ; ಛಾಂದೋಗ್ಯೋಪನಿಷತ್ತಿನ ಆರನೆಯ ಪ್ರಪಾಠಕವು ಸದ್ವಸ್ತುವೇ ಆತ್ಮನೆಂಬ ಸಿದ್ಧಾಂತದಲ್ಲಿ ಕೊನೆಗೊಳ್ಳುತ್ತದೆ.

ಸೂತ್ರದಲ್ಲಿರುವ **ಚ**-ಶಬ್ದವು ಮೂಲಪ್ರತಿಜ್ಞೆಗೆ ವಿರೋಧವನ್ನು ತಿಳಿಸಲು ಬಂದಿದೆ. ಪ್ರಧಾನವು ನಿಜವಾದ ಆತ್ಮನೆಂಬುದನ್ನು ನಿರಾಕರಿಸುವ ವಚನವು ಉಪನಿಷತ್ತಿನಲ್ಲಿ ಬಂದಿದ್ದರೂ ಮೂಲಪ್ರತಿಜ್ಞೆಗೆ ವಿರೋಧವು ಒದಗುತ್ತಿತ್ತು ; ಏಕೆಂದರೆ ಕಾರಣ-ಜ್ಞಾನದಿಂದ ಅದರ ಕಾರ್ಯವಾದ ಎಲ್ಲವೂ ತಿಳಿದುಬರುತ್ತದೆ ಎಂಬುದು ಉಪನಿಷತ್ತಿನ ಪ್ರತಿಜ್ಞೆ : 'ಯಾವುದರಿಂದ ಶ್ರುತವಲ್ಲದುದು ಶ್ರುತವಾಗುವುದೊ, ಮನನಮಾಡದೆ ಇದ್ದದ್ದು ಮನನವಾಗುವುದೊ, ವಿಜ್ಞಾತವಲ್ಲದುದು ವಿಜ್ಞಾತವಾಗುವುದೊ ಆ ಆದೇಶವನ್ನು ಕೇಳಿರುವೆಯ? ಭಗವಂತನೆ, ಆ ಆದೇಶವು ಹೇಗಿರುತ್ತದೆ ?'[1] (ಛಾಂ ಉ. ೬. ೧. ೩).

---

[1] ಉತ ತಮಾದೇಶಮಪ್ರಾಕ್ಷ್ಯೋ ಯೇನ ಅಶ್ರುತಂ ಶ್ರುತಂ ಭವತಿ, ಅಮತಂ ಮತಮ್, ಅವಿಜ್ಞಾತಂ ವಿಜ್ಞಾತಮ್ ಇತಿ, ಕಥಂ ನು ಭಗವಃ ಸ ಆದೇಶೋ ಭವತೀತಿ ।

ಸತ್-ಶಬ್ದ-ವಾಚ್ಯವಾದ ಪ್ರಧಾನವು ಭೋಗ್ಯವರ್ಗಕ್ಕೆ ಕಾರಣವೆಂದು ಎಣಿಸಿದರೂ ಮತ್ತು ಅದು ತ್ಯಾಜ್ಯವು ಅಥವಾ ತ್ಯಾಜ್ಯವಲ್ಲದುದು ಎಂದು ತಿಳಿಯಲ್ಪಟ್ಟರೂ ಭೋಕ್ತೃವರ್ಗವನ್ನು ಅರಿತಂತೆ ಆಗುವುದಿಲ್ಲ; ಏಕೆಂದರೆ ಭೋಕ್ತೃವರ್ಗವು ಪ್ರಧಾನದ ಪರಿಣಾಮವಲ್ಲ. ಆದುದರಿಂದ ಪ್ರಧಾನವು ಸತ್-ಶಬ್ದ-ವಾಚ್ಯವಲ್ಲ.

ವಿ.—ಸತ್-ಶಬ್ದವು ಪ್ರಧಾನವನ್ನು ಜಗತ್ಕಾರಣವೆಂದು ಸೂಚಿಸಿದ್ದರೆ ಶ್ವೇತಕೇತುವು ಪ್ರಧಾನದಲ್ಲಿರುವ ಆತ್ಮಭಾವವನ್ನು ಬಿಡಬೇಕೆಂದು ಶ್ರುತಿಯು ಹೇಳಬೇಕಾಗಿತ್ತು; ಏಕೆಂದರೆ ಆ ಭಾವನೆಯು ಮೋಕ್ಷಕ್ಕೆ ವಿರೋಧವಾಗುತ್ತಿತ್ತು. ಆದರೆ ಶ್ರುತಿಯು ಹಾಗೆ ಮಾಡದೆ 'ಅದು ನೀನಾಗಿರುವೆ' ಎಂದೇ ಉಪದೇಶಿಸಿರುತ್ತದೆ.

ಪ್ರತಿಜ್ಞಾವಿರೋಧಾತ್ * ॥ ೧. ೧. ೮ ॥

೮. ಏಕೆಂದರೆ (ಸದ್ವಸ್ತುವು ಪ್ರಕೃತಿ ಎಂಬುದು) ಪ್ರತಿಜ್ಞೆಗೆ ವಿರೋಧವಾಗಿದೆ.

ಪ್ರಧಾನವು ಜಗತ್ಕಾರಣವಾದರೆ ಪ್ರತಿಜ್ಞೆಗೆ (ಛಾಂ. ಉ. ೬. ೧. ೩) ವಿರೋಧವಾಗುತ್ತದೆ. ಏಕವಸ್ತುವಿನ ವಿಜ್ಞಾನದಿಂದ ಸರ್ವವಸ್ತುಗಳ ವಿಜ್ಞಾನವು ಉಂಟಾಗುತ್ತದೆ. ಎಂಬುದು ಪ್ರತಿಜ್ಞೆ. ಕಾರಣ ಮತ್ತು ಕಾರ್ಯ—ಇವು ಅನನ್ಯವಾಗಿರುವುದರಿಂದ ಕಾರಣವಾದ ಸತ್-ವಿಜ್ಞಾನದಿಂದ ಅದರ ಕಾರ್ಯವೂ ಚೇತನಾ-ಚೇತನವೂ ಆದ ಪ್ರಪಂಚದ ಜ್ಞಾನವು ಉಂಟಾಗುತ್ತದೆ. ಪ್ರಧಾನವು ಜಗತ್ಕಾರಣವಾದರೆ ಅದರಿಂದ ಚೇತನವರ್ಗದ ಜ್ಞಾನವು ಉಂಟಾಗುತ್ತಿರಲಿಲ್ಲ; ಏಕೆಂದರೆ ಚೇತನವರ್ಗವು ಪ್ರಧಾನದ ಕಾರ್ಯವಲ್ಲ.

ದ್ವೈ.—'ಆ ಆತ್ಮನೊಬ್ಬನನ್ನೇ ಅರಿತುಕೊಳ್ಳಿರಿ, ಬೇರೆ ಮಾತುಗಳನ್ನು ಬಿಡಿರಿ; ಇದು ಅಮೃತಕ್ಕೆ ಸೇತು'[1] (ಮುಂ. ಉ. ೨. ೨. ೫) ಎಂದು ಅಥರ್ವಣೋಪನಿಷತ್ತು ವಿಧಿಸುತ್ತದೆ. ಅನ್ಯವಿಷಯಗಳನ್ನು ಬಿಡಬೇಕು, ಆತ್ಮನನ್ನು ಬಿಡಕೂಡದು ಎಂದು ಶ್ರುತಿಯು ವಿಧಿಸಿರುವುದರಿಂದ ಆತ್ಮನು ಸತ್ತ್ವಾದಿಗುಣಗಳಿಂದ ಕೂಡಿದ ಗೌಣನಲ್ಲ.[2]

## ಸ್ವಾಪ್ಯಯಾತ್ ॥ ೯ ॥

೯. (ಜೀವನು) ಆತ್ಮನಲ್ಲಿ ಲೀನವಾಗುವುದರಿಂದ (ಪ್ರಧಾನವು ಸತ್-ಶಬ್ದ-ವಾಚ್ಯವಲ್ಲ).

---

* ರಾಮಾನುಜ ನಿಂಬಾರ್ಕ—ಇವರ ಪಾಠದ ಪ್ರಕಾರ ಇದೊಂದು ಅಧಿಕವಾದ ಸೂತ್ರವಾಗಿದೆ; ಶಂಕರ ಭಾಸ್ಕರ ಮಧ್ವ ವಲ್ಲಭ ಬಲದೇವ—ಇವರು ಈ ಸೂತ್ರವನ್ನು ಹೇಳಿಲ್ಲ.

[1] ತಮೇವೈಕಂ ಜಾನಥ ಆತ್ಮಾನಮ್, ಅನ್ಯಾ ವಾಚೋ ವಿಮುಂಚಥ, ಅಮೃತಸ್ಯೈಷ ಸೇತುಃ ।

[2] ಹೇಯತ್ವಾವಚನಾಚ್ಚೈವ ನಾತ್ಮಾ ಗೌಣಃ ಶ್ರುತೌ ಶ್ರುತಃ । ತಮೇವೈಕಂ ಜಾನ-ಥಾನ್ಯಾ ವಾಚೋ ಮುಂಚಥ ಚೇತಿ ಹ (ಅನುವ್ಯಾಖ್ಯಾನ).

'ಎಲ್ಲೈ ಸೋಮ್ಯ, ಪುರುಷನು ನಿದ್ರಿಸುವಾಗ ಅವನು ಸದ್ವಸ್ತುವಿನೊಂದಿಗೆ ಐಕ್ಯನಾಗುತ್ತಾನೆ, ತನ್ನ ಆತ್ಮನಲ್ಲಿಯೇ ಲೀನವಾಗುತ್ತಾನೆ. ಆದುದರಿಂದ ಇವನನ್ನು ಕುರಿತು **ಸ್ವಪಿತಿ** ಎಂದು ಹೇಳುತ್ತಾರೆ, ಏಕೆಂದರೆ ಇವನು ತನ್ನ ಆತ್ಮನಲ್ಲಿಯೇ ಲೀನವಾಗಿರುತ್ತಾನೆ'[1] ಎಂದು ಶ್ರುತಿಯು (ಛಾಂ ಉ. ೬. ೮. ೧) ಹೇಳುತ್ತದೆ. **ಸ್ವ** ಎಂದರೆ ಸತ್-ಶಬ್ದ-ವಾಚ್ಯನಾದ ಆತ್ಮನು. ಇಲ್ಲಿ ಪ್ರಕೃತನಾಗಿರುವ ಮತ್ತು ಸತ್-ಶಬ್ದ-ವಾಚ್ಯನಾಗಿರುವ ಆತ್ಮನಲ್ಲಿ ಸೇರುತ್ತಾನೆ ಎಂದರ್ಥ. **ಸ್ವ**-ಶಬ್ದಕ್ಕೆ 'ತನ್ನದು', **ಆತ್ಮೀಯ** ಎಂಬ ಅರ್ಥವಿರುವುದರಿಂದ ಅದು ಪ್ರಧಾನವನ್ನು ಸೂಚಿಸಬಹುದು ಎಂದಾದರೆ, ಚೇತನನು ಅಚೇತನದಲ್ಲಿ ಲಯವಾಗುತ್ತಾನೆ ಎಂಬ ಅಸಂಬದ್ಧವಾದ ಪಕ್ಷವು ಬಂದೊದಗುತ್ತದೆ.[2] ಸುಷುಪ್ತಿಯಲ್ಲಿ ಜೀವನು ಚೇತನದಲ್ಲಿಯೇ ಲಯವಾಗುತ್ತಾನೆಂದು ಇನ್ನೊಂದು ಶ್ರುತಿಯು (ಬೃ. ಉ. ೯. ೩. ೨೧)[3] ಹೇಳುತ್ತದೆ. ಆದುದರಿಂದ ಎಲ್ಲಾ ಚೇತನರೂ ಯಾವುದರಲ್ಲಿ ಲಯವಾಗುತ್ತಾರೆಯೊ ಆ ಚೇತನವೇ ಸತ್-ಶಬ್ದ-ವಾಚ್ಯವಾದ ಜಗತ್ಕಾರಣವು, ಪ್ರಧಾನವಲ್ಲ.

**ವಿ.**—ಜೀವನು ಸುಷುಪ್ತಿಯಲ್ಲಿರುವಾಗ ಅವನು ಪರಮಾತ್ಮನಲ್ಲಿ ಲೀನನಾಗಿರುವನೆಂದು ಶ್ರುತಿಯು ಹೇಳುತ್ತದೆ. **ಸ್ವ**–ಕಾರಣದಲ್ಲಿ ಲೀನವಾಗಿರುವುದಕ್ಕೆ ಲಯವೆಂದು ಹೆಸರು.[4] ಅಚೇತನವಾದ ಪ್ರಧಾನವು ಜೀವನ ಕಾರಣವಾಗಿರಲಾರದು. **ಸ್ವಮ್ ಅಪೀತೋ ಭವತಿ** ಎಂದರೆ ಜೀವನು ಪರಮಾತ್ಮನನ್ನೇ ಸೇರುತ್ತಾನೆ ಎಂದರ್ಥ. ಜೀವನು ಸುಷುಪ್ತಿಯಲ್ಲಿ—ಪ್ರಲಯದಂತೆ—ನಾಮ-ರೂಪಗಳನ್ನು ಬಿಟ್ಟು ಕೇವಲ **ಸತ್** ಎನಿಸುತ್ತಾನೆ, **ಸತಾ ಸೋಮ್ಯ ತದಾ ಸಂಪನ್ನೋ ಭವತಿ.** ನಾಮ-ರೂಪಗಳನ್ನು ಪಡೆದಿರುವ ಜೀವನಿಗೆ ಮೋಕ್ಷವಾಗುವವರೆಗೂ ತನಗಿಂತ ಬೇರೆಯಾದ ವಿಷಯಗಳ ಜ್ಞಾನವು ಉಂಟಾಗುತ್ತದೆ. ಸುಷುಪ್ತಿಯಲ್ಲಿ ನಾಮ-ರೂಪ-ರಹಿತನಾದ ಆತ್ಮನು ಜಾಗ್ರದವಸ್ಥೆಯಲ್ಲಿ ನಾಮ-ರೂಪಗಳನ್ನು ಪಡೆಯುತ್ತಾನೆ. ಸತ್-ಶಬ್ದವು ಪರಬ್ರಹ್ಮನೂ ಸರ್ವಜ್ಞನೂ ಪರಮೇಶ್ವರನೂ ಆದ ಪರಮ-ಪುರುಷನನ್ನೇ ಸೂಚಿಸುತ್ತದೆ. 'ಆಗ ಸದ್ವಸ್ತುವಿನೊಂದಿಗೆ ಸಂಪನ್ನನಾಗುತ್ತಾನೆ—(ಪ್ರಾಣಿಗಳು) ಅದರಲ್ಲಿ ಲಯವಾಗುವಿಕೆ ಮತ್ತು ಹಿಂತಿರುಗುವಿಕೆ—ಇದರಿಂದ ಇದು ಸಿದ್ಧಿಸುತ್ತದೆ' ಎಂದು ವೃತ್ತಿಕಾರರು ಹೇಳಿರುತ್ತಾರೆ.[5]

**ದ್ವೈ.**—'ತಾನು ತನ್ನಲ್ಲಿಯೇ ಲಯವಾಗುವುದರಿಂದ' ಎಂಬುದು ಸೂತ್ರಾರ್ಥ.

---

[1] ಯತ್ರೈತತ್ ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತಿ ಇತ್ಯಾಚಕ್ಷತೇ ಸ್ವಂ ಹ್ಯಪೀತೋ ಭವತಿ ।

[2] ಯದಿ ಪುನಃ ಪ್ರಧಾನಮೇವ ಆತ್ಮೀಯತ್ವಾತ್ ಸ್ವಶಬ್ದೇನೈವ ಉಚ್ಯೇತ, ಏವಮಪಿ ಚೇತನೋಽಚೇತನಮ್ ಅಪ್ಯೇತಿ ಇತಿ ವಿರುದ್ಧಮಾಪದ್ಯೇತ । (ಸೂ. ಭಾ.).

[3] ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಮ್ ।

[4] ಪ್ರಲಯಶ್ಚ—ಸ್ವಕಾರಣೇ ಲಯಃ (ಶ್ರೀಭಾಷ್ಯ).

[5] ತದಾಹ ವೃತ್ತಿಕಾರಃ—ಸತಾ ಸೋಮ್ಯ ತದಾ ಸಂಪನ್ನೋ ಭವತೀತಿ, ಸಂಪತ್ತ್ಯಸಂಪತ್ತಿಭ್ಯಾಮ್ ಏತದ್ ಅಧ್ಯವಸೀಯತೇ ।

'ಪೂರ್ಣವಾದ ಮೂಲರೂಪದಿಂದ ಪೂರ್ಣವಾದ ಅವತಾರ. ರೂಪಗಳನ್ನು ಸ್ವೀಕರಿಸಿ, ಪೂರ್ಣವಾದ ಮೂಲರೂಪದಲ್ಲಿಯೇ ಅವಶಿಷ್ಟನಾಗುತ್ತಾನೆ'[1] ಎಂದು ಶ್ರುತಿಯು (ಬೃ. ಉ. ೫. ೧ ೧.) ಹೇಳುತ್ತದೆ. ನಿರ್ಗುಣನೂ ಪುರುಷೋತ್ತಮನೂ ಆದ ದೇವನು ಬಹುವಾಗುತ್ತಾನೆ, ಅನಂತರ ದೋಷರಹಿತನೂ ಆದಿಕಾರಣನೂ ಆದ ಹರಿಯು ಏಕ ನಾಗಿ ಶಯನಮಾಡುತ್ತಾನೆ. ನಿರ್ದೋಷನಾದ ಪರಬ್ರಹ್ಮನು ಸಗುಣಬ್ರಹ್ಮನಲ್ಲಿ ಲಯ ವಾಗುವುದಿಲ್ಲ. ಮಾಯಾವಿಶಿಷ್ಟನಾದ ಸಗುಣಬ್ರಹ್ಮನು ಹೇಗೆ ಮುಖ್ಯವಾಗಿ ಪೂರ್ಣ ನಾಗುವನು ?[2]

## ಗತಿಸಾಮಾನ್ಯಾತ್ ॥ ೧೦ ॥

೧೦. (ವೇದಾಂತ-ವಾಕ್ಯಗಳ) ಉಪದೇಶವು[3] ಏಕರೀತಿಯಲ್ಲಿರುವುದರಿಂದ (ಬ್ರಹ್ಮವೇ ಜಗತ್ಕಾರಣವು).

ತಾರ್ಕಿಕರ ಶಾಸ್ತ್ರಗಳಲ್ಲಿರುವಂತೆ ವೇದಾಂತವಾಕ್ಯಗಳಲ್ಲಿಯೂ ಬೇರೆ ಬೇರೆ ಜಗತ್ಕಾರಣಗಳು[4] ಪ್ರತಿಪಾದಿಸಲ್ಪಟ್ಟಿದ್ದರೆ ಆಗ ಪ್ರಧಾನವೇ ಜಗತ್ಕಾರಣವೆಂಬ ವಾದಕ್ಕೆ ಅನುಸಾರವಾಗಿ ಈಕ್ಷಿತೃತ್ವಾದಿ-ಶ್ರುತಿಯ ತಾತ್ಪರ್ಯವನ್ನು ಕಲ್ಪಿಸಬಹುದಾಗಿತ್ತು. ಆದರೆ ಅಂಥ ಪರಿಸ್ಥಿತಿ ಕಂಡುಬರುವುದಿಲ್ಲ ; ಏಕೆಂದರೆ ಎಲ್ಲ ವೇದಾಂತ-ವಾಕ್ಯಗಳಲ್ಲಿಯೂ ಚೇತ-ನವೇ ಕಾರಣವೆಂಬ ಉಪದೇಶವು ಏಕರೀತಿಯಲ್ಲಿದೆ. ಅನೇಕ ವೇದಾಂತವಾಕ್ಯಗಳು[5] ಆತ್ಮನೇ ಜಗತ್ಕಾರಣವೆಂದು ತಿಳಿಸುತ್ತವೆ. ಆತ್ಮ-ಶಬ್ದವು ಚೇತನವನ್ನು ಸೂಚಿಸುತ್ತದೆ ಯೆಂದು ಹಿಂದೆಯೇ ಹೇಳಿದೆ ಕಣ್ಣೇ ಮೊದಲಾದ ಇಂದ್ರಿಯಗಳು[6] ರೂಪಾದಿಗಳನ್ನು ತಿಳಿಸುವಂತೆ ವೇದಾಂತವಾಕ್ಯಗಳು ಚೇತನಕಾರಣವನ್ನೇ ಏಕರೀತಿಯಲ್ಲಿ ತಿಳಿಸುತ್ತವೆ ಯೆಂಬುದು ಶ್ರುತಿಗಳ ಪ್ರಾಮಾಣ್ಯಕ್ಕೆ ಒಂದು ಮಹತ್ಕಾರಣವಾಗಿದೆ. ಆದುದರಿಂದ ಬ್ರಹ್ಮವೇ ಜಗತ್ಕಾರಣವು.

---

1 ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ।

2 ಕಥಂ ಮಾಯಾವ್ಯವಚ್ಛಿನ್ನಃ ಪೂರ್ಣೋ ಮುಖ್ಯತಯಾ ಭವೇತ್ ?
(ಅನುವ್ಯಾಖ್ಯಾನ)

3 ಗತಿ—ಶಬ್ದಕ್ಕೆ ಜ್ಞಾನ, ಪ್ರವೃತ್ತಿ ಎಂಬ ಅರ್ಥಗಳಿವೆ.

4 ಚೇತನವಾದ ಬ್ರಹ್ಮ, ಅಚೇತನವಾದ ಪ್ರಧಾನ ಅಥವಾ ಇವೆರಡಕ್ಕಿಂತ ಬೇರೆ ಯಾದುದು.

5 ಕಾ. ಉ. ೩. ೩, ತೈ. ಉ. ೨. ೧, ಛಾಂ. ಉ. ೭. ೨೬. ೨, ಪ್ರ. ಉ. ೩. ೩.

6 ಎಲ್ಲರ ಕಣ್ಣುಗಳೂ ರೂಪಾದಿಗಳನ್ನು ಗ್ರಹಿಸುತ್ತವೆಯೇ ಹೊರತು ಇತರ ಇಂದ್ರಿಯ-ವಿಷಯಗಳನ್ನು ಗ್ರಹಿಸುವುದಿಲ್ಲ.

ವಿ.—ಇತರ ಶ್ರುತಿಗಳ ಸೃಷ್ಟಿವಾಕ್ಯಗಳಲ್ಲಿಯೂ[1] ತಾತ್ಪರ್ಯವು ಒಂದೇ ರೀತಿಯಲ್ಲಿದೆ ಆದುದರಿಂದ ಛಾಂದೋಗ್ಯೋಪನಿಷತ್ತಿನ ಸದ್ವಿದ್ಯೆಯಲ್ಲಿಯೂ ಕೂಡ ಸರ್ವೇಶ್ವರನೇ ಜಗತ್ಕಾರಣನೆಂಬುದು ನಿಶ್ಚಯವಾಗಿದೆ

**ದ್ವೈ.**—'ಎಲ್ಲ ವೇದಗಳೂ ಸುಪ್ರಮಾಣವಾದ ಯುಕ್ತಿಗಳೂ ಒಂದೇ ವಿಧವಾದ ಪರಮಬ್ರಾಹ್ಮಜ್ಞಾನವನ್ನು ಉಂಟುಮಾಡುತ್ತವೆ, ಆದುದರಿಂದ ವೇದಗಳಲ್ಲಾಗಲಿ ಇತಿಹಾಸದಲ್ಲಾಗಲಿ ಯಾವ ವಿರೋಧವೂ ಇಲ್ಲ' ಎಂದು ಪೈಂಗಿಗಳ ಶ್ರುತಿಯು[2] ಹೇಳುತ್ತದೆ ಆದುದರಿಂದ ಜ್ಞಾನವು ಏಕರೂಪವಾಗಿದೆ

## ಶ್ರುತತ್ವಾಚ್ಚ ॥ ೧೧ ॥

೧೧ ಮತ್ತು ಶ್ರುತಿಯಲ್ಲಿ ಹೇಳಿರುವುದರಿಂದಲೂ (ಸರ್ವಜ್ಞವಾದ ಬ್ರಹ್ಮವೇ ಜಗತ್ಕಾರಣವು).

ಶ್ವೇತಾಶ್ವತರಶಾಖೆಯ ಮಂತ್ರೋಪನಿಷತ್ತು ಸರ್ವಜ್ಞವಾದ ಬ್ರಹ್ಮವು ಜಗತ್ಕಾರಣವೆಂದು ನೇರಾಗಿ ಹೇಳುತ್ತದೆ 'ಅವನು ಕಾರಣನು, ಇಂದ್ರಿಯಗಳಿಗೆ ಒಡೆಯರಾದ (ಜೀವರಿಗೂ) ಅಧಿಪತಿಯು'[3] (ಶ್ವೇ ಉ ೬ ೯) ಆದುದರಿಂದ ಸರ್ವಜ್ಞವಾದ ಬ್ರಹ್ಮವು ಜಗತ್ಕಾರಣವೇ ಹೊರತು ಅಚೇತನವಾದ ಪ್ರಧಾನವಲ್ಲ

**ವಿ.**—ಛಾಂದೋಗ್ಯೋಪನಿಷತ್ತಿನ ಭೂಮವಿದ್ಯೆಯು 'ಆತ್ಮನಿಂದಲೇ ಸರ್ವವೂ ಬಂದಿದೆ'[4] (೭ ೧೬ ೪) ಎಂದು ಹೇಳುತ್ತದ ಆದುದರಿಂದ **ಸದೇವ ಸೋಮ್ಯ** ಎಂದು ಪ್ರಾರಂಭವಾಗುವ ಸದ್ವಿದ್ಯೆಯು ಪ್ರಧಾನವನ್ನು ಸೂಚಿಸುವುದಿಲ್ಲ, ಸರ್ವಜ್ಞನೂ ಸರ್ವಸಂಕಲ್ಪನೂ ಆದ ಪರಬ್ರಹ್ಮನನ್ನೇ ಸೂಚಿಸುತ್ತದೆ

ಸೂತ್ರಕಾರರು ನಿರ್ವಿಶೇಷ-ಚಿನ್ಮಾತ್ರ-ಬ್ರಹ್ಮವಾದವನ್ನು ನಿರಾಕರಿಸಿರುವರೆಂದು ಅನೇಕ ಶ್ರುತಿಗಳ[5] ಸಹಾಯದಿಂದ ಅರಿತುಕೊಳ್ಳಬೇಕು ಈ ಶ್ರುತಿವಾಕ್ಯಗಳು ಜಿಜ್ಞಾಸ್ಯನಾದ ಪರಬ್ರಹ್ಮನು ಪಾರಮಾರ್ಥಿಕವಾದ ಈಕ್ಷಿತೃತವೇ ಮೊದಲಾದ ಗುಣಗಳಿಂದ ಕೂಡಿರುವನೆಂದು ಹೇಳುತ್ತವೆ ನಿರ್ವಿಶೇಷ-ವಾದದಲ್ಲಿ ಸಾಕ್ಷಿತ್ವವೂ ಕೂಡ ಅಪಾರಮಾರ್ಥಿಕ

---

[1] ಐ ಉ ೧ ೧ ೧–೨, ತೈ ಉ ೨ ೧ ಬೃ ಉ ೨ ೪, ೧೦.

[2] ಸರ್ವೇ ವೇದಾ ಯುಕ್ತಯಃ ಸುಪ್ರಮಾಣಾ ಬ್ರಾಹ್ಮಂ ಪರಂ ತ್ವೇಕಮೇವ ಪ್ರಕಾಶಯಂತೇ ನ ವಿರೋಧಃ ಕುತಶ್ಚಿದ್ವೇದೇಷು ಸರ್ವೇಷು ತದೇತಿಹಾಸ ಇತಿ (ಮ ಭಾ )

[3] ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ ।

[4] ಆತ್ಮನ ಏವೇದಂ ಸರ್ವಮ್ ।

[5] ಛಾಂ ಉ ೬ ೩ ೨ ೬ ೮ ೪ ಮತ್ತು ೭, ೮ ೧ ೩ ಮತ್ತು ೫, ತೈ ಆ. ೩ ೧೨, ೭, ೩ ೨೪, ಮ. ನಾ ಉ ೧೧.

ವಾಗಿರುತ್ತದೆ.[1] ಸೂತ್ರಗಳು ವೇದಾಂತವೇದ್ಯನಾದ ಪರಬ್ರಹ್ಮನೇ ಜಿಜ್ಞಾಸ್ಯನೆಂದು ಪ್ರತಿಜ್ಞೆಮಾಡಿ ಅವನು ಚೇತನನೆಂದು (೧. ೧. ೫) ತಿಳಿಸುತ್ತವೆ. ಚೈತನ್ಯಗುಣದಿಂದ ಕೂಡಿರುವುದಕ್ಕೆ ಚೇತನತ್ವವೆಂದು ಹೆಸರು.[2] ಈಕ್ಷಣಗುಣವಿಲ್ಲದಿರುವವನು ಪ್ರಧಾನಕ್ಕೆ ಸಮನಾಗುತ್ತಾನೆ. ಬ್ರಹ್ಮವು ಕೇವಲ ನಿರ್ವಿಶೇಷ-ಪ್ರಕಾಶವೆಂಬ ವಾದದಲ್ಲಿ ಪ್ರಕಾಶತ್ವ ವನ್ನು ಕೂಡ ಉಪಪಾದಿಸುವುದು ಕಷ್ಟವಾಗುತ್ತದೆ. ಯಾವುದು ತನ್ನನ್ನೂ ಮತ್ತು ಇತರ ವಸ್ತುಗಳನ್ನೂ ವ್ಯವಹಾರಕ್ಕೆ ಯೋಗ್ಯವಾಗಿ ಮಾಡುವುದೋ ಅದು ಪ್ರಕಾಶ ವೆನಿಸುವುದು [3] ನಿರ್ವಿಶೇಷವಸ್ತುವಿಗೆ ಈ ಎರಡು ರೂಪಗಳಿಲ್ಲದಿರುವುದರಿಂದ ಅದು ಗಡಿಗೆ ಯಂತೆ ಅಚಿತ್ತೇ ಆಗುತ್ತದೆ. ಆದುದರಿಂದ ವಿಚಿತ್ರವಾದ ಚೇತನಾಚೇತನ-ಜಗದ್ರೂಪವುಳ್ಳ ಮತ್ತು 'ನಾನು ಬಹುವಾಗುವೆನು' ಎಂಬ ಈಕ್ಷಣ-ಶಕ್ತಿಯುಳ್ಳ ಪುರುಷೋತ್ತಮನೇ ಜಿಜ್ಞಾಸೆಗೆ ಅರ್ಹನು ಎಂಬುದು ಸಿದ್ಧವಾಗುತ್ತದೆ.

**ದ್ವೈತ.**—'ಒಬ್ಬನೇ ದೇವನು ಸರ್ವಪ್ರಾಣಿಗಳಲ್ಲಿ ಗೂಢನಾಗಿರುವವನು, ಸರ್ವ-ವ್ಯಾಪಿಯು, ಸರ್ವಪ್ರಾಣಿಗಳ ಅಂತರಾತ್ಮನು, ಕರ್ಮಾಧ್ಯಕ್ಷನು, ಸರ್ವಭೂತಗಳಲ್ಲಿಯೂ ವಾಸಿಸುವವನು, ಸಾಕ್ಷಿಯು, ಚೇತನನು, ಪ್ರಕೃತಿಯೊಂದಿಗೆ ಮಿಶ್ರವಾಗದಿರುವವನು ಮತ್ತು ಸತ್ತ್ವಾದಿಗುಣಗಳಿಲ್ಲದವನು'[4] (ಶ್ವೇ. ಉ. ೬. ೧೧) ಎಂಬ ಶ್ರುತಿಯಲ್ಲಿ ನಿರ್ಗುಣನಾದ ಬ್ರಹ್ಮನು ಹೇಳಲ್ಪಟ್ಟಿರುವುದರಿಂದ ಅವನು ಅವಾಚ್ಯನಲ್ಲ ; ಏಕೆಂದರೆ ಯಾವುದು ಪದದಿಂದ ಅವಾಚ್ಯವೊ ಅದನ್ನು ಶ್ರುತಿಯು ಹೇಳಲಾರದು ಮತ್ತೆ ಯಾವುದು ಪ್ರಮಾಣದಿಂದ ಪ್ರಸಿದ್ಧವಲ್ಲವೊ ಅದನ್ನು ಕಲ್ಪಿಸಕೂಡದು ; ಏಕೆಂದರೆ ಯಾವ ಪದದಿಂದಲೂ ಹೆಸರಿಸಲಾಗದ ವಸ್ತುಗಳನ್ನು ಪದಗಳು ಸೂಚಿಸಲಾರವು. ನಿರ್ಗುಣವೆಂಬ ಪದವು ಸತ್ತ್ವಾದಿಗಳಿಂದ ಕೂಡಿದ ಬ್ರಹ್ಮನನ್ನು ಹೇಗೆ ಸೂಚಿಸುವುದು ?[5]

ಈ ಇಡೀ ಅಧಿಕರಣವು ಸಾಂಖ್ಯರ ಮತವನ್ನು ನಿರಾಕರಿಸಲು ಬಂದಿಲ್ಲ ; ಇಲ್ಲಿ ಮುಖ್ಯ ವಿಷಯವಾಗಿರುವುದು ಪರಬ್ರಹ್ಮನ ವಾಚ್ಯತ್ವದ ಸಮರ್ಥನ.

---

[1] ನಿರ್ವಿಶೇಷವಾದೇ ಹಿ ಸಾಕ್ಷಿತ್ವಮಪ್ಯಪಾರಮಾರ್ಥಿಕಮ್ (ಶ್ರೀಭಾಷ್ಯ).

[2] ಚೇತನತ್ವಂ ನಾಮ ಚೈತನ್ಯಗುಣಯೋಗಃ (ಶ್ರೀಭಾಷ್ಯ).

[3] ಪ್ರಕಾಶೋ ಹಿ ನಾಮ ಸ್ವಸ್ಯ ಪರಸ್ಯ ಚ ವ್ಯವಹಾರಯೋಗ್ಯತಾಮಾಪಾದಯನ್ ವಸ್ತುವಿಶೇಷಃ (ಶ್ರೀಭಾಷ್ಯ).

[4] ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥

[5] ಪದಂ ಚ ನಿರ್ಗುಣ ಇತಿ ಕಥಂ ಗೌಣಂ ವದಿಷ್ಯತಿ ? (ಅನುವ್ಯಾಖ್ಯಾನ)

## ೬. ಆನಂದಮಯಾಧಿಕರಣ

(ಸೂ. ೧೨–೧೯)

**ಆನಂದಮಯೋಽಭ್ಯಾಸಾತ್ ॥ ೧೨ ॥**

೧೨. ಆನಂದಮಯನು (ಪರಬ್ರಹ್ಮವೇ), ಏಕೆಂದರೆ (ಆನಂದ-ಶಬ್ದದ) ಪುನರಾವೃತ್ತಿಯಿದೆ.*

ಇದುವರೆಗೆ ಸೂತ್ರಗಳಲ್ಲಿ (ಸೂ. ೧. ೧. ೨ರಿಂದ ೧. ೧. ೧೧ರ ವರೆಗೆ) ಯಾವ ವೇದಾಂತವಾಕ್ಯಗಳನ್ನು ಉದಾಹರಿಸಲಾಯಿತೋ ಅವು ಸರ್ವಜ್ಞನಾದ ಸರ್ವಶಕ್ತನಾದ ಈಶ್ವರನು ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನು ಎಂಬ ಅರ್ಥವನ್ನು ಪ್ರತಿಪಾದಿಸುತ್ತವೆ ಎಂದು ನ್ಯಾಯಪೂರ್ವಕವಾಗಿ ಹೇಳಿದ್ದಾಯಿತು. ವೇದಾಂತವಾಕ್ಯಗಳ ಉಪದೇಶವು ಏಕರೀತಿಯಲ್ಲಿರುವುದರಿಂದ (ಸೂ. ೧. ೧೦) ಎಲ್ಲ ವೇದಾಂತವಾಕ್ಯಗಳು ಚೇತನವಸ್ತುವನ್ನೇ ಜಗತ್ಕಾರಣವೆಂದು ಹೇಳುತ್ತವೆ. ಹೀಗಿರುವಾಗ ಮುಂದಿನ ಸೂತ್ರಗಳ ಪ್ರಯೋಜನವೇನು ?—ಎಂಬ ಪ್ರಶ್ನೆಯು ಬರುತ್ತದೆ.

ಇದಕ್ಕೆ ಪರಿಹಾರ ಹೀಗಿದೆ : ಬ್ರಹ್ಮವು ಎರಡು ರೂಪಗಳಿಂದ ತಿಳಿಯಲ್ಪಟ್ಟಿದೆ— ನಾಮ-ರೂಪಗಳ ಪರಿಣಾಮವಾದ ಭೇದಗಳ ಉಪಾಧಿಯಿಂದ ಕೂಡಿದ ಒಂದು ರೂಪ, ಅದಕ್ಕೆ ವಿರುದ್ಧವಾಗಿ ಸರ್ವೋಪಾಧಿರಹಿತವಾದ ಮತ್ತೊಂದು ರೂಪ.[1] 'ಎಲ್ಲಿ ದ್ವೈತ

---

* ಶ್ರೀಶಂಕರಾಚಾರ್ಯರು ಈ ಅಧಿಕರಣಕ್ಕೆ ಎರಡು ವ್ಯಾಖ್ಯಾನಗಳನ್ನು ಮಾಡಿರುತ್ತಾರೆ : ಮೊದಲನೆಯದು ವೃತ್ತಿಕಾರರ ಮತ—ಈ ಮತದ ಪ್ರಕಾರ ಆನಂದಮಯಾತ್ಮನೇ ಪರಬ್ರಹ್ಮ ; ಆಚಾರ್ಯರು ಇದನ್ನು ನಿರಾಕರಿಸಿ ಆನಂದಮಯಾತ್ಮನು ಸವಿಶೇಷಬ್ರಹ್ಮನೆಂದೂ ಪುಚ್ಛ-ಬ್ರಹ್ಮವು ನಿರ್ವಿಶೇಷಬ್ರಹ್ಮವೆಂದೂ ಹತ್ತೊಂಬತ್ತನೆಯ ಸೂತ್ರದ ವ್ಯಾಖ್ಯಾನದಲ್ಲಿ ನಿರ್ಧರಿಸಿರುತ್ತಾರೆ. ಮೊದಲನೆಯ ಮತವನ್ನು ಶ್ರೀರಾಮಾನುಜ, ಶ್ರೀಮಧ್ವ, ಶ್ರೀವಲ್ಲಭ ಮೊದಲಾದವರು ಅನುಸರಿಸಿರುತ್ತಾರೆ. ಈ ಮತವು ನಿರ್ಗುಣಬ್ರಹ್ಮವಾದಕ್ಕೆ ವಿರುದ್ಧವಾಗಿರುವುದರಿಂದ ಶ್ರೀಶಂಕರಾಚಾರ್ಯರು ಆನಂದಮಯನು ಸೋಪಾಧಿಕನೆಂದು ನಿರ್ಣಯಿಸಿರುತ್ತಾರೆ ಡಾ. ರಾಧಾಕೃಷ್ಣನ್ ಅವರು ಇತ್ತೀಚೆಗೆ ಪ್ರಕಟವಾದ ತಮ್ಮ THE BRAHMA SUTRA (ಪುಟ ೨೬೧) ಎಂಬ ಗ್ರಂಥದಲ್ಲಿ ಹೀಗೆ ಹೇಳಿರುತ್ತಾರೆ : 'Ś. offers a strained explantion that *ānanda-maya* is a vesture of *Brahman*. The Śūtrakāra evidently means that *Brahman* is full of bliss.' ಈ ಅಭಿಪ್ರಾಯವು Thıbaut ಮಹಾಶಯನ ಸಿದ್ಧಾಂತವನ್ನು ಪುಷ್ಟೀಕರಿಸುತ್ತದೆ. (THE VEDĀNTA-SŪTRAS, Part I, p. xxxiii ನೋಡಿ.)

[1] ದ್ವಿರೂಪಂ ಹಿ ಬ್ರಹ್ಮಾವಗಮ್ಯತೇ, ನಾಮರೂಪ-ವಿಕಾರ-ಭೇದೋಪಾಧಿ-ವಿಶಿಷ್ಟಂ ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಮ್ (ಸೂ. ಭಾ.).

ಇರುವಂತೆ ಇರುವುದೊ ಅಲ್ಲಿ ಒಬ್ಬನು ಇನ್ನೊಂದನ್ನು ನೋಡುತ್ತಾನೆ'[1] (ಬೃ ಉ ೪ ೫ ೧೫) ಇವೇ ಮೊದಲಾದ ಶ್ರುತಿಗಳು[2] ಅವಿದ್ಯಾವಿಷಯವಾದ ಸೋಪಾಧಿಕರೂಪವನ್ನೂ ವಿದ್ಯಾವಿಷಯವಾದ ನಿರುಪಾಧಿಕರೂಪವನ್ನೂ ತಿಳಿಸುತ್ತವೆ

ಬ್ರಹ್ಮವು ಅವಿದ್ಯೆಗೆ ವಿಷಯವಾಗಿರುವಾಗ, ಉಪಾಸ್ಯವಸ್ತು ಉಪಾಸಕ ಎಂಬ ಭೇದದಿಂದ ಕಂಡುಬರುತ್ತದ ಬೇರೆ ಬೇರೆ ಉಪಾಸನೆಗಳು ಬೇರೆ ಬೇರೆ ಫಲಗಳಿಗೆ ಒಯ್ಯುತ್ತವೆ ಕೆಲವು ಉಪಾಸನೆಗಳಿಗೆ[3] ಅಭ್ಯುದಯವು ಫಲ, ಕೆಲವಕ್ಕೆ[4] ಕ್ರಮಮುಕ್ತಿಯು ಫಲ, ಮತ್ತೆ ಕೆಲವಕ್ಕ[5] ಕರ್ಮಸಮೃದ್ಧಿಯು ಫಲ ಗುಣವಿಶೇಷದಿಂದಲೂ ಉಪಾಧಿಭೇದದಿಂದಲೂ[6] ಉಪಾಸನೆಗಳು ಬೇರೆಬೇರೆಯಾಗಿವೆ[7] 'ಅವನು ಹೇಗೆ ಉಪಾಸಿಸುತ್ತಾನೆಯೊ ಹಾಗೆಯೇ ಇಗುತ್ತಾನೆ'[8] ಎಂದು ಶ್ರುತಿಯು ಹೇಳುತ್ತದೆ[9]

ಒಬ್ಬನೇ ಆದ ಆತ್ಮನು ಸ್ಥಾವರ-ಜಂಗಮ-ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಅಡಗಿದ್ದರೂ ಆತ್ಮನ ಚಿತ್ತವೆಂಬ ಉಪಾಧಿಯ ತಾರತಮ್ಯದಿಂದ ಕೂಟಸ್ಥನಿತ್ಯನೂ ಏಕರೂಪದಲ್ಲಿರುವವನೂ ಆದ ಆತ್ಮನು ಹೆಚ್ಚು ಕಡಮೆ ಐಶ್ವರ್ಯಶಕ್ತಿಗಳಿಂದ ಕೂಡಿ ಪ್ರಕಟನಾಗುತ್ತಾನೆ ಎಂದು ಶ್ರುತಿಗಳು ಹೇಳುತ್ತವೆ 'ಯಾವನು ತನ್ನಲ್ಲಿ ಅತಿಶಯವಾಗಿ ಪ್ರಕಟವಾಗಿರುವ ಆತ್ಮನನ್ನು ಉಪಾಸಿಸುವನೊ (ಅವನು ಅತಿಶಯವಾದ ಪ್ರಾಕಟ್ಯವನ್ನು ಹೊಂದುವನು)'[10](ಐ ಆ ೨ ೩ ೨ ೧) ಸ್ಮೃತಿಯೂ ಕೂಡ ಇದನ್ನೇ ಹೇಳುತ್ತದೆ[11] ಎಲ್ಲೆಲ್ಲಿ ವಿಭೂತಿಯೇ ಮೊದಲಾದುವುಗಳ ಅತಿಶಯವಿರುವುದೊ ಅದನ್ನು ಈಶ್ವರನೆಂದು ಉಪಾಸಿಸಬೇಕೆಂದು ವಿಧಿಸಿದೆ ಹೀಗೆಯೇ ಸೂತ್ರಕಾರರೂ ಕೂಡ ಸರ್ವಪಾಪಗಳಿಂದಲೂ ಅಸ್ಪೃಷ್ಟನೆಂಬ ಗುರುತುಳ್ಳ ಆದಿತ್ಯಮಂಡಲದಲ್ಲಿರುವ ಹಿರಣ್ಮಯಪುರುಷನು ಪರಮಾತ್ಮನು (ಸೂ ೧ ೧೦ ೨೦) ಎಂದು ಹೇಳಿರುತ್ತಾರೆ

---

1 ಯತ್ರ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ।

2 ಛಾಂ. ಉ ೭ ೨೪ ೧, ತೈ ಆ ೩ ೧೨ ೭, ಶ್ವೇ ಉ ೬ ೧೯, ಬೃ ಉ ೨ ೩ ೬ ಮತ್ತು ೩ ೮ ೮ ಇವೇ ಮೊದಲಾದವು

3 ನಾಮಬ್ರಹ್ಮ (ಛಾಂ ಉ ೭ ೧ ೫) ಇವೇ ಮೊದಲಾದ ಉಪಾಸನೆಗಳು

4 ದಹರವೇ ಮೊದಲಾದ ಉಪಾಸನೆಗಳಿಗೆ (ಛಾಂ ಉ ೮ ೧ ೧)

5 ಉದ್ಗೀಥವೇ ಮೊದಲಾದ ಧ್ಯಾನಗಳಿಗೆ (ಛಾಂ ಉ ೧ ೧)

6 ಸತ್ಯಕಾಮತ್ವಾದಿ–ಗುಣವಿಶೇಷಗಳು, ಹೃದಯವೇ ಮೊದಲಾದ ಉಪಾಧಿಗಳು.

7 ಉಪಾಸ್ಯಬ್ರಹ್ಮವು ಒಂದೇ ಆಗಿದ್ದರೂ ಉಪಾಸನೆಗಳು ಬೇರೆಬೇರೆಯಾಗಿರುವುದಕ್ಕೆ ಕಾರಣವನ್ನು ಹೇಳಿದೆ.

8 ತಂ ಯಥಾ ಯಥೋಪಾಸತೇ ತದೇವ ಭವತಿ । ಛಾಂ ಉ ೩ ೨೫ ೧ನ್ನೂ ನೋಡಿ

9 ಇದೇ ಭಾವವನ್ನೇ ಗೀತೆಯ ೮ ೬ರಲ್ಲಿ ನೋಡಬಹುದು

10 ತಸ್ಯ ಯ ಆತ್ಮಾನಮಾವಿಸ್ತರಾಂ ವೇದ ।

11 ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ (ಗೀತಾ ೧೦. ೪೧)

ಆದುದರಿಂದ ಸದ್ಯೋಮುಕ್ತಿಗೆ[1] ಕಾರಣವಾದ ಆತ್ಮಜ್ಞಾನವನ್ನು ನಿರ್ಣಯಿಸಲು ವೇದಾಂತವಾಕ್ಯಗಳ ತಾತ್ಪರ್ಯವನ್ನು ಪುನಃ ಆಲೋಚಿಸಬೇಕಾಗುತ್ತದೆ ; ಏಕೆಂದರೆ ಆತ್ಮಜ್ಞಾನವು ಅಲ್ಲಲ್ಲಿ ಉಪಾಧಿಗಳ ಮೂಲಕ ಉಪದೇಶಿಸಲ್ಪಟ್ಟಿದ್ದರೂ ಆಯಾ ಉಪಾಧಿಗಳ ಸಂಬಂಧವು ವಿವಕ್ಷಿತವಾಗಿಲ್ಲದುದರಿಂದ ವೇದಾಂತವಾಕ್ಯವು ಪರಬ್ರಹ್ಮವಿಷಯವೊ ಅಪರಬ್ರಹ್ಮವಿಷಯವೊ ಎಂಬ ಸಂದೇಹವುಂಟಾಗುತ್ತದೆ.[2] **ಆನಂದಮಯೋಽಭ್ಯಾಸಾತ್** ಎಂಬ ಸೂತ್ರವೇ ಇದಕ್ಕೆ ಉದಾಹರಣೆಯಾಗಿದೆ.

ಬ್ರಹ್ಮವು ಏಕವಾಗಿದ್ದರೂ ಉಪಾಸ್ಯತ್ವದಿಂದ ಉಪಾಧಿಸಂಬಂಧವನ್ನು ಅಪೇಕ್ಷಿಸುತ್ತದೆ, ಜ್ಞೇಯತ್ವದಿಂದ ಉಪಾಧಿಸಂಬಂಧವನ್ನು ಅಪೇಕಿಸುವುದಿಲ್ಲ ಎಂಬುದು ವೇದಾಂತವಾಕ್ಯಗಳಲ್ಲಿ ಉಪದಿಷ್ಟವಾಗಿರುತ್ತದೆ ಎಂದು ಪ್ರದರ್ಶಿಸುವುದಕ್ಕೆ ಮುಂದಿನ ಗ್ರಂಥವನ್ನು ಪ್ರಾರಂಭಿಸಿರುತ್ತದೆ.

ಸೂತ್ರಕಾರರು ಅಚೇತನಕಾರಣವನ್ನು ನಿರಾಕರಿಸಲು (ಸೂ. ೧. ೧. ೧೦) ಹಿಂದೆ ಏನು ಹೇಳಿದ್ದರೋ ಅದನ್ನೇ ಬ್ರಹ್ಮಕ್ಕಿಂತ ಬೇರೆಯಾದ ಜಗತ್ಕಾರಣವನ್ನು ನಿಷೇಧಿಸುವ ವಾಕ್ಯಗಳ ಮೂಲಕ ವಿವರಿಸುತ್ತಾರೆ.

## ವೃತ್ತಿಕಾರರ ಮತ

ತೈತ್ತಿರೀಯೋಪನಿಷತ್ತು ಆತ್ಮನು ಅನ್ನಮಯನು, ಪ್ರಾಣಮಯನು, ಮನೋಮಯನು, ವಿಜ್ಞಾನಮಯನು ಎಂದು ಕ್ರಮೇಣ ಎಣಿಸಿ, 'ಅಂಥ ಈ ವಿಜ್ಞಾನಮಯನಾದ ಆತ್ಮನಿರುವನು'[3] (೨. ೫) ಎಂದು ಹೇಳುತ್ತದೆ. ಇಲ್ಲಿ ಈ ಸಂಶಯವು ಬರುತ್ತದೆ : ಆದಂದ-ಮಯ-ಶಬ್ದವು **ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ** (ತೈ. ಉ. ೨. ೧) ಎಂದು ಹೇಳಲ್ಪಟ್ಟ ಪರಬ್ರಹ್ಮವನ್ನು ಸೂಚಿಸುತ್ತದೆಯೊ ? ಅಥವಾ ಅನ್ನಮಯಾದಿಗಳಂತೆ ಬ್ರಹ್ಮಕ್ಕಿಂತ ಭಿನ್ನವಾದ ವಸ್ತುವನ್ನು ಸೂಚಿಸುತ್ತದೆಯೊ ?

**ಆಕ್ಷೇಪಣೆ**—ಆನಂದಮಯನು ಅಮುಖ್ಯನಾದ ಆತ್ಮನು, ಬ್ರಹ್ಮಕ್ಕಿಂತ ಭಿನ್ನವಾದ ವಸ್ತು. ಅದು ಹೇಗೆಂದರೆ : ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಎಂಬ ಅಮುಖ್ಯರಾದ ಆತ್ಮರ ಸಂಧಿಯಲ್ಲಿ ಆನಂದಮಯನನ್ನು

---

[1] ಯಾವ ಲೋಕಕ್ಕೂ ಹೋಗದೆ ಕೂಡಲೇ ಉಂಟಾಗುವ ಮುಕ್ತಿ.

[2] 'But that such an investigation is actually carried on in the remaining portion of the first *ahhyāya*, appears neither from the wording of the Sūtras nor even from Sankara's own treatment of Vedic texts referred to in the Sūtras' ಎಂದು Thibaut ಮಹಾಶಯನು ತನ್ನ ಪ್ರಸ್ತಾವನೆಯಲ್ಲಿ ಹೇಳಿದ್ದಾನೆ.

[3] ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾದ್ ಅನ್ಯೋಽಂತರ ಆತ್ಮಾಽಽನಂದಮಯಃ ।

ಹೇಳಿರುವುದರಿಂದ ಅವನೂ ಅಮುಖ್ಯಾತ್ಮನು. ಆನಂದಮಯನು ಸರ್ವಾಂತರನಾದುದ ರಿಂದ ಅವನು ಮುಖ್ಯಾತ್ಮನೆಂಬ ವೃತ್ತಿಕಾರರ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಅವನಿಗೆ ಪ್ರಿಯವೇ ಮೊದಲಾದ ಅವಯವಗಳ ಸಂಬಂಧವಿದೆ[1] (ತೈ. ಉ. ೨. ೫). ಇವನಿಗೆ ಶರೀರವಿದೆಯೆಂದು ಇದೇ ಶ್ರುತಿಯಲ್ಲಿ ಹೇಳಿದೆ.[2] ಇವನು ಮುಖ್ಯನಾದರೆ ಪ್ರಿಯಾದಿಗಳ ಸ್ಪರ್ಶವು ಉಂಟಾಗಲಾರದು. ಶರೀರವುಳ್ಳವನಿಗೆ ಪ್ರಿಯಾಪ್ರಿಯಗಳ ಸಂಸ್ಪರ್ಶವನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಆನಂದಮಯನೆಂಬ ಆತ್ಮನು ಸಂಸಾರಿಯೇ.

**ಪರಿಹಾರ**—ಆನಂದಮಯನು ಪರಮಾತ್ಮನೇ; ಏಕೆಂದರೆ ಈ ಅನುವಾಕದಲ್ಲಿ ಆನಂದ-ಶಬ್ದವನ್ನು ಪರಮಾತ್ಮನ ವಿಷಯದಲ್ಲಿ ಪುನಃ ಪುನಃ ಪ್ರಯೋಗಿಸಿದೆ. ಆದುದರಿಂದ ಈ ಉಪನಿಷತ್ತು (೨. ೭) 'ಅವನೇ ರಸ', **ರಸೋ ವೈ ಸಃ** ಎಂಬ ವಾಕ್ಯದಿಂದ ಆನಂದ-ಮಯನಿಗೆ ರಸತ್ವವನ್ನು ಹೇಳಿ ಅನಂತರ 'ರಸವನ್ನು ಹೊಂದಿ ಇವನು ಆನಂದಿಯಾಗು ತ್ತಾನೆ. ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ ಯಾವನು ತಾನೇ ಪ್ರಾಣಕ್ರಿಯೆಯನ್ನಾ ಗಲಿ ಅಪಾನಕ್ರಿಯೆಯನ್ನಾಗಲಿ ಮಾಡಬಲ್ಲನು? ಇವನೇ ಅಲ್ಲವೆ ಆನಂದಪಡಿಸುವವನು?[3] 'ಆ ಇದು ಆನಂದದ ವಿಚಾರವಾಗಿರುತ್ತದೆ . . ಈ ಆನಂದಮಯನೆಂಬ ಆತ್ಮನನ್ನು ಹೊಂದುತ್ತಾನೆ'[4] (೨. ೮), 'ಆ ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ'[5] (೨. ೯), 'ಆನಂದವು ಬ್ರಹ್ಮ ಎಂದು ತಿಳಿದುಕೊಂಡವನು'[6] (೩. ೬) ಎಂದು ಹೇಳುತ್ತದೆ. ಮತ್ತೊಂದು ಶ್ರುತಿಯೂ ಕೂಡ 'ವಿಜ್ಞಾನವೂ ಆನಂದವೂ ಆದ ಬ್ರಹ್ಮವು'[7] (ಬೃ. ಉ. ೩. ೯ ೨೮) ಎಂದು ಹೇಳುತ್ತದೆ.

ಅನ್ನಮಯನೇ ಮೊದಲಾದ ಅಮುಖ್ಯಾತ್ಮರ ಪ್ರವಾಹದಲ್ಲಿ ಸೇರಿರುವುದರಿಂದ ಆನಂದಮಯನೂ ಅಮುಖ್ಯಾತ್ಮನೆಂಬ ಪಕ್ಷ ಸರಿಯಲ್ಲ; ಏಕೆಂದರೆ ಆನಂದಮಯನು ಎಲ್ಲದರ ಒಳಗೆ ಇರುತ್ತಾನೆ. ಶಾಸ್ತ್ರವು ಮುಖ್ಯನಾದ ಆತ್ಮನನ್ನು ಉಪದೇಶಿಸಲು

---

1 'ಅವನಿಗೆ ಪ್ರಿಯವೇ ತಲೆ, ಮೋದವು ದಕ್ಷಿಣಪಕ್ಷ, ಪ್ರಮೋದವು ಉತ್ತರ ಪಕ್ಷ, ಆನಂದವು ಮಧ್ಯಭಾಗ, ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ತಸ್ಯ ಪ್ರಿಯಮೇವ ಶಿರಃ, ಮೋದೋ ದಕ್ಷಿಣಃ ಪಕ್ಷಃ, ಪ್ರಮೋದ ಉತ್ತರಃ ಪಕ್ಷಃ, ಆನಂದ ಆತ್ಮಾ, ಬ್ರಹ್ಮಪುಚ್ಛಂ ಪ್ರತಿಷ್ಠಾ।

2 'ಆ ಹಿಂದಿನ ವಿಜ್ಞಾನಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೋ ಅವನೇ ಇವನು' ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ (ತೈ. ಉ. ೨. ೬).

3 ರಸಂ ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ। ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್। ಯದೇಷ ಆಕಾಶ ಆನಂದೋ ನ ಸ್ಯಾತ್। ಏಷ ಹ್ಯೇವಾನಂದ ಯಾತಿ।

4 ಸೈಷಾಽಽನಂದಸ್ಯ ಮೀಮಾಂಸಾ ಭವತಿ. . . ಏತಮಾನಂದಮಯಮಾತ್ಮಾನಮುಪ-ಸಂಕ್ರಾಮತಿ।

5 ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ।

6 ಆನಂದೋ ಬ್ರಹ್ಮೇತಿ ವ್ಯಜಾನಾತ್।

7 ವಿಜ್ಞಾನಮಾನಂದಂ ಬ್ರಹ್ಮ।

ಲೋಕದ ನಡವಳಿಕೆಯನ್ನು ಅನುಸರಿಸುತ್ತದೆ: ಮೊದಲು ಅತ್ಯಂತಮೂಢರಿಗೆ ಆತ್ಮನೆಂದು ಕಂಡುಬರುತ್ತಿರುವ ಅನ್ನಮಯವಾದ ಶರೀರವನ್ನು ನಿರ್ದೇಶಿಸುತ್ತದೆ ; ಅನಂತರ ಅನ್ನಮಯ-ಶರೀರದಿಂದ-ಮೂಸೆಯಲ್ಲಿ ಹೊಯ್ದಿರುವ ಲೋಹದ ಪ್ರತಿಮೆಯಂತೆ ಸಮಾನಾಕಾರದಲ್ಲಿರುವ—ಇನ್ನೊಂದು ಆತ್ಮನನ್ನು ಸೂಚಿಸುತ್ತದೆ ; ಅನಂತರ ಅದಕ್ಕಿಂತ ಒಳಗಿರುವ ಮತ್ತೊಂದನ್ನು ನಿರ್ದೇಶಿಸುತ್ತದೆ. ಜನರು ಸುಲಭವಾಗಿ ತಿಳಿದುಕೊಳ್ಳಲು ಮುಂದೆ ಬರುವ ಅನಾತ್ಮನನ್ನೇ ಆತ್ಮನೆಂಬ ಹೆಸರಿನಿಂದ ಕರೆದಿದೆ. ಕೊನೆಗೆ ಎಲ್ಲಕ್ಕೂ ಒಳಗಿರುವ ಆನಂದಮಯನನ್ನೇ ಮುಖ್ಯಾತ್ಮನೆಂದು ಉಪದೇಶಿಸುತ್ತದೆ. ಈ ನಿರ್ದೇಶನ ಅರುಂಧತೀನ್ಯಾಯದಂತೆ.

ಮುಖ್ಯಾತ್ಮನಿಗೆ ಪ್ರಿಯವೇ ಮೊದಲಾದುವು ಶಿರಸ್ಸೇ ಮೊದಲಾದ ಅವಯವಗಳು ಎಂಬ ಕಲ್ಪನೆಯಲ್ಲಿ ದೋಷವಿಲ್ಲ ; ಏಕೆಂದರೆ ಹಿಂದೆ ಹೇಳಿರುವ ವಿಜ್ಞಾನಮಯ-ಕೋಶವೆಂಬ ಉಪಾಧಿಯಿಂದ ಈ ಕಲ್ಪನೆಯು ಉಂಟಾಗಿದೆಯೇ ಹೊರತು ಸ್ವಾಭಾವಿಕವಾಗಿ ಅಲ್ಲ. ಅನ್ನಮಯವೇ ಮೊದಲಾದ ಶರೀರಗಳ ಪರಂಪರೆಯಲ್ಲಿ ಆನಂದಮಯನು ಬರುವುದರಿಂದ ಅವನಿಗೆ ಶಾರೀರತ್ವವನ್ನು ಆರೋಪಿಸಿದೆಯೇ ಹೊರತು ಸಂಸಾರಿಜೀವರಂತೆ ಮುಖ್ಯಾರ್ಥದಲ್ಲಿ ಹೇಳಿಲ್ಲ. ಆದುದರಿಂದ ಆನಂದಮಯನು ಪರಮಾತ್ಮನೇ.

**ವಿ.**—ಇಲ್ಲಿಯ ವರೆಗೆ ಜಿಜ್ಞಾಸಿತನಾದ ಪರಬ್ರಹ್ಮನು ಜೀವಾತ್ಮರಿಗೆ ಭೋಗ್ಯವಾದ ಜಡಪ್ರಕೃತಿಗಿಂತ ಭಿನ್ನನೆಂದು ಸೂತ್ರಗಳು ತಿಳಿಸಿದುವು ; ಈಗ ನಿಖಿಲದೋಷಗಳಿಗೆ ವಿರುದ್ಧನೂ ನಿರತಿಶಯಾನಂದನೂ ಆದ ಪರಬ್ರಹ್ಮನು ಪ್ರಕೃತಿಸಂಬಂಧದಿಂದ ನಾನಾ ವಿಧವಾದ ಅನಂತದುಃಖಸಾಗರದಲ್ಲಿ ಮುಳುಗಿರುವ ಕರ್ಮ-ವಶ್ಯನಾದ ಜೀವನಿಗಿಂತ ಅಥವಾ ಶುದ್ಧ ಜೀವನಿಗಿಂತ ಭಿನ್ನನೆಂದು ತಿಳಿಸುತ್ತವೆ.

ವಿಜ್ಞಾನಮಯನಿಗಿಂತ ಬೇರೆಯವನೂ, ಅವನಲ್ಲಿ ಅಂತರ್ಗತನೂ ಆದ ಆತ್ಮನು ಆನಂದಮಯನೆಂದು (ತೈ. ಉ. ೨. ೫) ತೈತ್ತಿರೀಯರು ಹೇಳುತ್ತಾರೆ. ಈ ಆನಂದಮಯನು ಬಂಧ-ಮೋಕ್ಷ-ಭಾಗಿಯೂ ಜೀವ-ಶಬ್ದದಿಂದ ಕರೆಯಲ್ಪಡುವವನೂ ಆದ ಪ್ರತ್ಯಗಾತ್ಮನಿಗಿಂತ ಭಿನ್ನನೊ ಅಥವಾ ಅವನೇ ಪ್ರತ್ಯಗಾತ್ಮನೊ ಎಂಬುದು ಸಂಶಯ. ಆನಂದಮಯನು ಪ್ರತ್ಯಗಾತ್ಮನೆಂಬುದು ಪೂರ್ವಪಕ್ಷಿಯ ಮತ ; ಏಕೆಂದರೆ ಶ್ರುತಿಯು (ತೈ. ಉ. ೨. ೬) ಆನಂದಮಯನಿಗೆ ಶಾರೀರತ್ವವನ್ನು ಹೇಳಿದೆ. ಯಾವುದು ಶರೀರದ ಸಂಬಂಧವನ್ನು ಪಡೆದಿದೆಯೋ ಅದು ಶಾರೀರ ಎಂದರೆ ಜೀವಾತ್ಮ.[1]

ಆನಂದಮಯನು ಪರಮಾತ್ಮನೆಂಬುದು ಸಿದ್ಧಾಂತ. 'ಇದು ಆನಂದದ ಮೀಮಾಂಸೆ[2] (ತೈ. ಉ. ೨. ೮) ಎಂದು ಶ್ರುತಿಯು ಪ್ರಾರಂಭಿಸಿ, ಮಾನುಷ-ಆನಂದದಿಂದ ಬ್ರಹ್ಮಾನಂದದ ವರೆಗೆ ಅನೇಕ ಆನಂದಗಳನ್ನು—ಹಿಂದುಹಿಂದಿನ ಆನಂದಕ್ಕಿಂತ ಮುಂದುಮುಂದಿನ

[1] ಶಾರೀರೋ ಹಿ ಶರೀರಸಂಬಂಧೀ ಜೀವಾತ್ಮಾ (ಶ್ರೀಭಾಷ್ಯ).

[2] ಸೈಷಾಽಽನಂದಸ್ಯ ಮೀಮಾಂಸಾ ಭವತಿ ।

ಆನಂದವು ನೂರರಷ್ಟು ಅಧಿಕವಾಗಿರುತ್ತದೆಯೆಂದು—ಹೇಳುತ್ತದೆ ; ಕೊನೆಗೆ 'ವಾಙ್ಮನಸ್ಸು ಗಳು ಯಾವ ಬ್ರಹ್ಮನ ಆನಂದವನ್ನು ಇಷ್ಟೇ ಎಂದು ನಿರ್ಣಯಿಸಲು ಹೊರಟು, ಅದರ ಆನಂತ್ಯದ ದೆಸೆಯಿಂದ ವಿಫಲವಾಗಿ ಹಿಂತಿರುಗುವುವೊ, ಆ ಬ್ರಹ್ಮಾನಂದವನ್ನು ತಿಳಿದವನು ಯಾವುದಕ್ಕೂ ಭಯಪಡುವುದಿಲ್ಲ'[1] (ತೈ. ಉ. ೨. ೯) ಎಂದು ಮುಗಿಸುತ್ತದೆ. ಹೀಗೆ ಗುಣಿಸಲ್ಪಟ್ಟ ನಿರತಿಶಯಾನಂದವು ವಿಜ್ಞಾನಮಯನಾದ ಪ್ರತ್ಯಗಾತ್ಮನಿಗಿಂತ ಬೇರೆಯವನಾದ ಪರಬ್ರಹ್ಮನಲ್ಲಿಯೇ ಇರಬೇಕು.

ಶಾರೀರತ್ವವು ಪರಮಾತ್ಮನಿಗೆ ಯುಕ್ತವಾದುದೇ. ಈ ಪ್ರಕರಣದಲ್ಲೆಲ್ಲ 'ಹಿಂದೆ ಹೇಳಿದವನಿಗೆ ಯಾವ ಶಾರೀರನು ಆತ್ಮನೋ ಅವನೇ ಇವನಿಗೂ ಆತ್ಮನಾಗಿರುವನು'[2] ಎಂದು ಪರಮಾತ್ಮನಿಗೆ ಶಾರೀರತ್ವವನ್ನು ಹೇಳಿದೆ. ಶ್ರುತಿಯು ಆತ್ಮನಿಂದ ಆಕಾಶವು ಉತ್ಪನ್ನವಾಯಿತೆಂದೂ, ಆಕಾಶದಿಂದ ವಾಯುವು ಉತ್ಪನ್ನವಾಯಿತೆಂದು ಹೇಳುತ್ತದೆ (ತೈ. ಉ. ೨. ೧).[3] ಇವೆಲ್ಲದರ ಕಾರಣವು ಆತ್ಮನೆಂದೂ ಮತ್ತು ಇವೆಲ್ಲವೂ ಆತ್ಮನ ಶರೀರವೆಂದೂ ಈ ಶ್ರುತಿಯಿಂದ ತಿಳಿದುಬರುತ್ತದೆ. ಪೃಥಿವ್ಯಾದಿಗಳ ಶರೀರತ್ವವನ್ನೂ ಪರಮಾತ್ಮನ ಆತ್ಮತ್ವವನ್ನೂ ಇತರ ಶ್ರುತಿಗಳೂ ತಿಳಿಸುತ್ತವೆ : 'ಯಾವನಿಗೆ ಪೃಥ್ವಿಯು ಶರೀರವೊ. . . ಇವನು ಸರ್ವಭೂತಗಳ ಅಂತರಾತ್ಮನು, ಸರ್ವದೋಷರಹಿತನು, ದಿವ್ಯನೂ ಅದ್ವಯನೂ ಆದ ನಾರಾಯಣನು'[4] ಎಂದು ಸುಬಾಲಶ್ರುತಿಯು ಹೇಳುತ್ತದೆ. ಮತ್ತೆ ಅನ್ನಮಯದ ಆತ್ಮನೇ ಪ್ರಾಣಮಯ-ಮನೋಮಯ-ವಿಜ್ಞಾನಮಯಗಳ ಆತ್ಮನೆಂದು ಹೇಳಿದೆ. ಆದುದರಿಂದ ಇವೆಲ್ಲವೂ ಆನಂದಮಯನ ಶರೀರಗಳೇ. ಶಾರೀರನೆಂಬುದು ಅಯುಕ್ತವಲ್ಲ.

'ಹಿಂದೆ ಹೇಳಿದ ವಿಜ್ಞಾನಮಯನಿಗೆ ಯಾವ ಶಾರೀರನು ಆತ್ಮನೋ, ಅವನೇ ಈ ಆನಂದಮಯನಿಗೂ ಆತ್ಮನಾಗಿರುವನು' (ತೈ. ಉ. ೨. ೬) ಎಂದು ಹೇಳಿರುವುದರಿಂದ ಆನಂದಮಯನು ಕೊನೆಯವನಲ್ಲವೆಂಬ ಪೂರ್ವಪಕ್ಷವು ಸರಿಯಲ್ಲ. ಈ ವಾಕ್ಯವು ಆನಂದಮಯನ ಅನನ್ಯಾತ್ಮತ್ವವನ್ನು ಪ್ರದರ್ಶಿಸಲು ಬಂದಿದೆ. ಆನಂದಮಯನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ ಆದ ಬೇರೊಬ್ಬ ಆತ್ಮನ ಪ್ರತಿಪಾದನೆ ಇಲ್ಲದಿರುವುದರಿಂದ ಅವನಿಗೆ ಅವನೇ ಆತ್ಮನು ಎಂದು ಭಾವ. ಹೀಗೆ ಪರಮಾತ್ಮನಿಗಿಂತ ಭಿನ್ನವಾದ ಚೇತನಾಚೇತನವಸ್ತು ಸಮೂಹವೆಲ್ಲ ಅವನ ಶರೀರವಾಗಿರುವುದರಿಂದ ಅವನೇ ಉಪಾಧಿರಹಿತನಾದ ಶಾರೀರಾತ್ಮನು.

---

[1] ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ ।

[2] ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ ।

[3] ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್। ಅನ್ನಾತ್ಪುರುಷಃ ।

[4] ಯಸ್ಯ ಪೃಥಿವೀ ಶರೀರಮ್...ಯಸ್ಯ ಮೃತ್ಯುಃ ಶರೀರಮ್, ಏಷ ಸರ್ವಭೂತಾಂತರಾತ್ಮಾಽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ ।

**ಆದುದರಿಂದಲೇ ಪರಬ್ರಹ್ಮನ ವಿಷಯವಾಗಿ ಪ್ರವೃತ್ತವಾದ ಶಾಸ್ತ್ರವನ್ನು ಅಭಿಯುಕ್ತರೂ 'ಶಾರೀರಕ' ಎಂದು ಹೇಳುತ್ತಾರೆ.**[1]

**ದ್ವೈ.—ಆನಂದಮಯೋಽಭ್ಯಾಸಾತ್** ಎಂಬ ಸೂತ್ರದಿಂದ ಮೊದಲಾಗಿ ಈ ಅಧ್ಯಾಯದಲ್ಲೆಲ್ಲ ಪರಬ್ರಹ್ಮನು ಶಾಸ್ತ್ರಪ್ರತಿಪಾದ್ಯನೆಂದು ಸೂತ್ರಕಾರರು ಪ್ರಕಟಪಡಿಸುತ್ತಾರೆ ಬೇರೆ ಕಡೆಯಲ್ಲಿ ಬೇರೆ ಅರ್ಥವಿರುವ ಶಬ್ದಗಳು ಪರಮಾತ್ಮನಲ್ಲಿಯೇ ಹೇಗೆ ಸಮನ್ವಯವಾಗುವುದೆಂಬುದನ್ನು ಮೊದಲನೆಯ ಪಾದದಲ್ಲಿ ಪ್ರದರ್ಶಿಸಿದ ಈ ವಾದದ ವಿಷಯವು ಇನ್ನು ಯಾವುದೂ ಆಗುವುದಿಲ್ಲ [2]

•ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಮೊದಲು ಹೇಳಿದ್ದಾಯಿತು ಅದೇ ಬ್ರಹ್ಮನು 'ಬ್ರಹ್ಮನು ಅದರ ಪುಚ್ಛ, ಅದರ ಪ್ರತಿಷ್ಠೆ'[3] (ತೈ ಉ ೨ ೫) ಎಂದು ತೈತ್ತಿರೀಯ ಶ್ರುತಿಯಲ್ಲಿ ಆನಂದಮಯನ ಅವಯವವಾಗಿ ಕಂಡುಬರುತ್ತಾನೆ, ಆದರೆ ಅವಯವಿಯ ಜ್ಞಾನವು ಬೇಕಾಗಿದೆಯೆ ಹೊರತು ಅವಯವದ ಜ್ಞಾನವು ಬೇಕಾಗಿಲ್ಲ [4] ಇಂಥ ಸಂದೇಹದ ನಿವೃತ್ತಿಗಾಗಿ ಈ ಸೂತ್ರವು ಬಂದಿದೆ

ಆನಂದಮಯನು ಬ್ರಹ್ಮನೇ ಮೊದಲಾದ ಇತರ ದೇವತೆಗಳಾಗಲಿ ಲಕ್ಷ್ಮಿಯಾಗಲಿ ಅಥವಾ ವಿಷ್ಣುವಾಗಲಿ ಆಗಬಹುದು **ಮಮ ಯೋನಿರ್ಮಹದ್ಬ್ರಹ್ಮ** (ಗೀ ೧೪ ೩) ಎಂದು ಹೇಳಿದಂತೆ ಬ್ರಹ್ಮಶಬ್ದವು ಪ್ರಕೃತಿಯನ್ನೂ ಸೂಚಿಸಬಹುದು ಧಾತ್ವರ್ಥದಿಂದ ಬ್ರಹ್ಮಶಬ್ದವು ಜೀವಜಾತಿಯನ್ನೂ ಸೂಚಿಸಬಹುದು ಹೀಗಿದ್ದರೂ ಇವುಗಳನ್ನು 'ಆನಂದಮಯ' ಎಂದು ಕರೆಯಲಾಗುವುದಿಲ್ಲ [5] ವಿಷ್ಣುವೇ ಆನಂದಮಯನು 'ಇದೇ ಕವಿಗಳ ಪರಮಬ್ರಹ್ಮ',[6] 'ಇವನನ್ನೇ ಬ್ರಹ್ಮನೆಂದು ಕರೆಯುತ್ತಾರೆ'[7] ಎಂದು ಅನೇಕ ಶ್ರುತಿಸ್ಮೃತಿಗಳಲ್ಲಿ ಬ್ರಹ್ಮಶಬ್ದದ ಪುನರಾವೃತ್ತಿಯು ವಿಷ್ಣುವನ್ನೇ ಸೂಚಿಸುತ್ತದೆ

## ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ॥ ೧೩ ॥

೧೩. ('ಮಯಟ್' ಎಂಬ ಪ್ರತ್ಯಯವು) ವಿಕಾರವನ್ನು ಸೂಚಿಸುವುದರಿಂದ

---

[1] ಏವಂ ಚ ಸ್ವವ್ಯತಿರಿಕ್ತಂ ಚೇತನಾಚೇತನವಸ್ತುಜಾತಂ ಸ್ವಶರೀರಮಿತಿ ಸ ಏವ ನಿರುಪಾಧಿಕಃ ಶಾರೀರ ಆತ್ಮಾ । ಅತ ಏವೇದಂ ಪರಂ ಬ್ರಹ್ಮಾಧಿಕೃತ್ಯ ಪ್ರವೃತ್ತಂ ಶಾಸ್ತ್ರಂ ಶಾರೀರಕಮ್ ಇತ್ಯಭಿಯುಕ್ತೈರಭಿಧೀಯತೇ (ಶ್ರೀಭಾಷ್ಯ)

[2] ನಾನ್ಯಥಾ ತದದೃಷ್ಟೇಃ (ಮ ಭಾ)

[3] ಬ್ರಹ್ಮಪುಚ್ಛಂ ಪ್ರತಿಷ್ಠಾ ।

[4] ನ ಹಿ ಅವಯವಿನಂ ವಿನಾಽವಯವಮಾತ್ರಸ್ಯ ಜ್ಞೇಯತಾ (ಮ ಭಾ )

[5] ತಥಾಽಪಿ ನ ತ ಆನಂದಮಯಶಬ್ದೇನೋಚ್ಯಂತೇ (ಮ ಭಾ )

[6] ತದೇವ ಬ್ರಹ್ಮ ಪರಮಂ ಕವೀನಾಮ್ (ಮ ನಾ ಉ )

[7] ಏತಮೇವ ಬ್ರಹ್ಮೇತ್ಯಾಚಕ್ಷತೇ ।

(ಆನಂದಮಯನು) ಪರಮಾತ್ಮನಲ್ಲ ಎಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ (ಮಯಟ್ ಎಂಬ ಪ್ರತ್ಯಯಕ್ಕೆ) ಪ್ರಾಚುರ್ಯವೆಂಬ ಅರ್ಥವೂ ಇದೆ.

**ಆಕ್ಷೇಪಣೆ**—ಆನಂದಮಯನು ಪರಮಾತ್ಮನಲ್ಲ ; ಏಕೆಂದರೆ 'ಆನಂದಮಯ' ಎಂಬಲ್ಲಿ ಮೂಲವಾದ ಆನಂದ-ಶಬ್ದಕ್ಕಿಂತ ಭಿನ್ನವಾದ ವಿಕಾರವನ್ನು ಸೂಚಿಸುವ ಶಬ್ದವಿರುತ್ತದೆ. 'ಆನಂದಮಯ' ಎಂಬಲ್ಲಿ **ಮಯಟ್** ಎಂಬ ಪ್ರತ್ಯಯಕ್ಕೆ ವಿಕಾರವೆಂಬುದೇ ಅರ್ಥ (ಪಾಣಿನಿ, ೪. ೩. ೧೪೩).[1] ಆದುದರಿಂದ ಅನ್ನಮಯವೇ ಮೊದಲಾದುವುಗಳಂತೆ ಆನಂದಮಯ-ಶಬ್ದವು ವಿಕಾರವನ್ನು ಸೂಚಿಸುತ್ತದೆ.

**ಪರಿಹಾರ**—ಇದು ಸರಿಯಲ್ಲ; ಏಕೆಂದರೆ ಸ್ಮೃತಿಯಲ್ಲಿ **ಮಯಟ್**, ಎಂಬ ಪ್ರತ್ಯಯಕ್ಕೆ ಪ್ರಾಚುರ್ಯವೆಂಬ ಅರ್ಥವೂ ಇದೆ (ಪಾಣಿನಿ, ೫. ೪. ೨೧).[2] ಅನ್ನಪ್ರಚುರವಾಗಿರುವ ಯಜ್ಞವನ್ನು **ಅನ್ನಮಯೋ ಯಜ್ಞಃ** ಎಂದು ಕರೆಯುವಂತೆ ಆನಂದ-ಪ್ರಚುರವಾಗಿರುವ ಬ್ರಹ್ಮವನ್ನು 'ಆನಂದಮಯ' ಎಂದು ಕರೆದಿದೆ. ಮನುಷ್ಯತ್ವದಿಂದ ಪ್ರಾರಂಭಿಸಿ ಹಿಂದುಹಿಂದಿನ ಆನಂದಕ್ಕಿಂತ ಮುಂದುಮುಂದಿನ ಆನಂದವು ನೂರರಷ್ಟು ಅಧಿಕವಾಗಿರುತ್ತದೆಂದು ಹೇಳಿ ಬ್ರಹ್ಮಾನಂದದ ನಿರತಿಶಯತ್ವವನ್ನು ನಿರ್ಧರಿಸಿರುವುದರಿಂದ ಬ್ರಹ್ಮದ ಆನಂದ-ಪ್ರಚುರತ್ವವು ಸಿದ್ಧವಾಗಿದೆ. ಆದುದರಿಂದ **ಮಯಟ್** ಎಂಬ ಪ್ರತ್ಯಯವು ಪ್ರಾಚುರ್ಯವನ್ನೇ ಸೂಚಿಸುತ್ತದೆ.

**ವಿ.**—ಆನಂದಮಯನು ಜೀವಾತ್ಮನೆಂಬುದು ಪೂರ್ವಪಕ್ಷ ; ಏಕೆಂದರೆ **ಮಯಟ್** ಎಂಬ ಪ್ರತ್ಯಯವು ವಿಕಾರವನ್ನು ಸೂಚಿಸುತ್ತದೆ. ಹಿಂದೆ 'ಅನ್ನಮಯ' ಎಂಬಲ್ಲಿ ವಿಕಾರಾರ್ಥವನ್ನು ಒಪ್ಪಿಕೊಂಡಿರುವಾಗ ಔಚಿತ್ಯಕ್ಕಾಗಿಯಾದರೂ 'ಆನಂದಮಯ' ಎಂಬಲ್ಲಿಯೂ ಆ ಅರ್ಥವನ್ನೇ ಒಪ್ಪಿಕೊಳ್ಳಬೇಕು. ಮತ್ತೆ **ಮಯಟ್** ಎಂಬ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನು ಒಪ್ಪಿಕೊಂಡರೂ ಜೀವನಿಗಿಂತ ಭಿನ್ನನಾದವನು ಸಿದ್ಧನಾಗುವುದಿಲ್ಲ; ಏಕೆಂದರೆ ಆನಂದ-ಪ್ರಚುರ ಎಂದು ಹೇಳಿದಾಗ ದುಃಖಮಿಶ್ರತ್ವವನ್ನು ಬಿಡಲಾಗುವುದಿಲ್ಲ. ದುಃಖಮಿಶ್ರತ್ವವೇ ಜೀವತ್ವವು. ಆನಂದತ್ವ-ಸ್ವರೂಪನಾದ ಜೀವನು ಸಂಸಾರಾವಸ್ಥೆಯಲ್ಲಿರುವಾಗ ಆನಂದದ ವಿಕಾರವಾಗಿರುತ್ತಾನೆ. ಆದುದರಿಂದ ಆನಂದಮಯನು ಜೀವನೇ.

ಪರಬ್ರಹ್ಮನಲ್ಲಿ ಆನಂದಪ್ರಾಚುರ್ಯವಿರುವುದರಿಂದ ಪೂರ್ವಪಕ್ಷಿಯ ಮತವು ಸರಿಯಲ್ಲ. **ಮಯಟ್** ಎಂಬ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥದ ಸಂಭವವೂ ಇದೆ. ತೈತ್ತಿರೀಯ ಶ್ರುತಿಯಲ್ಲಿ ಹೇಳಿರುವ ಆನಂದವು—ಹಿಂದುಹಿಂದಿನ ಆನಂದಕ್ಕಿಂತ ನೂರುಮಡಿ ಅಧಿಕವಾಗುವ ಆನಂದವು—ಜೀವಾತ್ಮನಿಗೆ ಸೇರಿರಲಾರದು, ಪರಬ್ರಹ್ಮನಿಗೇ ಸೇರಿರಬೇಕು.

---

[1] ಮಯಡ್ವೈತಯೋರ್ಭಾಷಾಯಾಮಭಕ್ಷ್ಯಾಚ್ಛಾದನಯೋಃ ।

[2] ತತ್ಪ್ರಕೃತವಚನೇ ಮಯಟ್ ।

ಔಚಿತ್ಯದಿಂದಲೂ ಪ್ರಯೋಗದಿಂದಲೂ **ಮಯಟ್** ಪ್ರತ್ಯಯಕ್ಕಿರುವ ವಿಕಾರಾರ್ಥವನ್ನು ಅರ್ಥವಿರೋಧವಿರುವುದರಿಂದ ತ್ಯಜಿಸಬೇಕಾಗುತ್ತದೆ [1] ಮತ್ತು ಔಚಿತ್ಯವನ್ನು 'ಪ್ರಾಣ-ಮಯನಲ್ಲಿಯೇ' ಬಿಟ್ಟಿದೆ, ಏಕೆಂದರೆ ಅಲ್ಲಿ ವಿಕಾರಾರ್ಥವು ಸಾಧ್ಯವಿಲ್ಲ ಪಂಚವೃತ್ತಿಗಳುಳ್ಳ ವಾಯುವು ಪ್ರಾಣವೃತ್ತಿಯುಳ್ಳದ್ದು ಎಂಬುದರಿಂದಲೇ 'ಪ್ರಾಣಮಯ' ಎನಿಸಿದೆ, ಅಥವಾ ಪ್ರಾಣಾಪಾನಾದಿಗಳೇ ಮೊದಲಾದ ಪಂಚವೃತ್ತಿಗಳಲ್ಲಿ ಪ್ರಾಣವೃತ್ತಿಯ ಪ್ರಾಚುರ್ಯ ವಿರುವುದರಿಂದಲೂ 'ಪ್ರಾಣಮಯ' ಆಗಬಹುದು ಸಾಮಾನ್ಯವ್ಯವಹಾರದಲ್ಲಿಯೂ **ಮಯಟ್** ಪ್ರತ್ಯಯದ ಪ್ರಾಚುರ್ಯಾರ್ಥವು ಅಪರೂಪವಲ್ಲ,[2] ಆನಂದ-ಪ್ರಾಚುರ್ಯ ದಲ್ಲಿ ಸ್ವಲ್ಪ ದುಃಖವಿರಬೇಕೆಂಬ ಅಭಿಪ್ರಾಯವು ಸರಿಯಲ್ಲ, ಏಕೆಂದರೆ ಯಾವುದು ಪ್ರಭೂತ ವಾಗಿರಬೇಕೊ ಅದರ ಕೊರತೆಯಿಲ್ಲದಿರುವುದು ಪ್ರಾಚುರ್ಯವೆನಿಸುವುದೇ ವಿನಾ ಅದಕ್ಕೆ ವಿರುದ್ಧವಾದ ವಸ್ತುವು ಸ್ವಲ್ಪವಾದರೂ ಇದೆ ಎಂದಲ್ಲ ಆನಂದಕ್ಕೆ ವಿರುದ್ಧವಾದುದು ಪ್ರಾಚುರ್ಯದಲ್ಲಿ ಇದೆಯೊ ಇಲ್ಲವೊ ಎಂಬುದನ್ನು ಬೇರೆ ಪ್ರಮಾಣಗಳಿಂದ ನಿರ್ಧರಿಸ ಬೇಕು **ಅಪಹತಪಾಪ್ಮಾ** ಮೊದಲಾದ ಶ್ರುತಿವಾಕ್ಯಗಳಿಂದ ಆನಂದ-ಪ್ರಾಚುರ್ಯದಲ್ಲಿ ದುಃಖದ ಅಭಾವವು ಕಂಡುಬರುತ್ತದೆ ಬ್ರಹ್ಮಾನಂದದ ಪ್ರಾಚುರ್ಯವು ಇತರ ಆನಂದ ಗಳ ಅಲ್ಪತ್ವವನ್ನು ಅಪೇಕ್ಷಿಸುತ್ತದೆ 'ಅವನ ಆನಂದವು ಒಂದು ಮಾನುಷ ಆನಂದ'[3] (ತೈ ಉ ೨ ೮) ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಬ್ರಹ್ಮಾನಂದವು ಜೀವಾ-ನಂದಕ್ಕೆ ಹೋಲಿಸಿದರೆ ನಿರತಿಶಯವೂ ಪ್ರಭೂತವೂ ಆಗಿರುತ್ತದೆ ಎಂದು ತಿಳಿದುಬರುತ್ತದೆ.

ಜೀವನು ಆನಂದದ ವಿಕಾರವೆಂಬುದೂ ಸರಿಯಲ್ಲ, ಏಕೆಂದರೆ ಜ್ಞಾನಾನಂದ ಸ್ವರೂಪನಾದ ಜೀವನು—ಮಣ್ಣು ಗಡಿಗೆ ಮೊದಲಾದ ರೂಪವನ್ನು ಪಡೆಯುವಂತೆ—ಯಾವುದೊ ಒಂದು ಪರಿಣಾಮವನ್ನು ಪಡೆಯುವನೆಂಬುದು ಎಲ್ಲಾ ಶ್ರುತಿಸ್ಮೃತಿ-ಯುಕ್ತಿ ಗಳಿಗೆ ವಿರುದ್ಧವಾಗಿದೆ [4] ಜೀವನು ಸಂಸಾರಾವಸ್ಥೆಯಲ್ಲಿರುವಾಗ ಮಾತ್ರ ಕರ್ಮದ ದೆಸೆ ಯಿಂದ ಜ್ಞಾನಾನಂದಗಳ ಸಂಕೋಚವನ್ನು ಪಡೆಯುವನೆಂಬುದು ಮುಂದೆ ವಿವರಿಸಲ್ಪಡು ತ್ತದೆ ಆದುದರಿಂದ ಆನಂದಮಯನು ಜೀವನಿಗಿಂತ ಭಿನ್ನನಾದ ಪರಬ್ರಹ್ಮ

**ದ್ವೈತ**.—ವಿಕಾರಾತ್ಮಕವೂ ಅಭಿಮಾನಿದೇವತೆಗಳುಳ್ಳವೂ ಆದ ಪ್ರಕೃತಿಯೇ ಮೊದ ಲಾದುವುಗಳಿಗೆ ಮಾತ್ರ **ಮಯಟ್**-ಪ್ರತ್ಯಯವು ಅನ್ವಯಿಸುತ್ತದೆ, ಪರಮಾತ್ಮನಿಗಲ್ಲ ಎಂದು ಹೇಳಲಾಗುವುದಿಲ್ಲ, ಪರಮಾತ್ಮನು ಆನಂದಪ್ರಚುರನಾಗಿರುವುದರಿಂದ ಆನಂದ

---

[1] ಔಚಿತ್ಯಾತ್ ಪ್ರಯೋಗಪ್ರಾಚುರ್ಯಾಚ್ಚ ಮಯಟೋ ವಿಕಾರಾರ್ಥತ್ವಮರ್ಥವಿರೋಧಾನ್ನ ಸಂಭವತಿ (ಶ್ರೀಭಾಷ್ಯ)

[2] ಅನ್ನಮಯೋ ಯಜ್ಞಃ, ಶಕಟಮಯೀ ಯಾತ್ರಾ ಇತ್ಯಾದಿ

[3] ಸ ಏಕೋ ಮಾನುಷ ಆನಂದಃ ।

[4] ಯಚ್ಚೋಕ್ತಂ ಜೀವಸ್ಯಾನಂದವಿಕಾರತ್ವಂ ಸಂಭವತೀತಿ, ತದಪಿ ನೋಪಪದ್ಯತೇ, ಜೀವಸ್ಯ ಜ್ಞಾನಾನಂದಸ್ವರೂಪಸ್ಯ ಕೇನಚಿದಾಕಾರೇಣ ಮೃದ ಇವ ಘಟಾದ್ಯಾಕಾರೇಣ ಪರಿಣಮಿಃ ಸಕಲ-ಶ್ರುತಿ-ಸ್ಮೃತಿ-ನ್ಯಾಯ-ವಿರುದ್ಧಃ (ಶ್ರೀಭಾಷ್ಯ).

ಮಯನೆನಿಸಿರುವನೇ ಹೊರತು ಅದರ ವಿಕಾರದಿಂದಲ್ಲ [1] ಅನ್ನಮಯ ಮೊದಲಾದುವುಗಳಲ್ಲಿ ಕೂಡ ಪ್ರಾಚುರ್ಯಾರ್ಥವನ್ನೇ ಗ್ರಹಿಸಬೇಕು [2] 'ಅವನು ಉಪಜೀವಿಸಲ್ಪಡುತ್ತಾನೆ, ಅವನು ಪ್ರಾಣಿವರ್ಗವನ್ನು ತಿನ್ನುತ್ತಾನೆ'[3] (ತೈ ಉ ೨ ೨) ಎಂಬುದರಲ್ಲಿರುವ ಅನ್ನ-ಪದದ ವ್ಯಾಖ್ಯಾನದಿಂದ **ಮಯಟ್**-ಪ್ರತ್ಯಯವನ್ನು ಪ್ರಾಚುರ್ಯಾರ್ಥದಲ್ಲಿಯೇ ತೆಗೆದುಕೊಳ್ಳಬೇಕೆಂಬುದು ಯುಕ್ತವು 'ಉಪಜೀವಿಸಲ್ಪಡುತ್ತಾನೆ' (**ಅದ್ಯತೇ**) ಎಂದರೆ ಎಲ್ಲ ಪ್ರಾಣಿಗಳಿಗೂ ಜೀವನಾದಿಗಳನ್ನು ಕೊಡುತ್ತಾನೆ ಎಂದರ್ಥ **ಯೋಽನ್ನಂ ಬ್ರಹ್ಮೋ-ಪಾಸತೇ, ಯೋ ಪ್ರಾಣಂ ಬ್ರಹ್ಮೋಪಾಸತೇ** ಮೊದಲಾದುವುಗಳಲ್ಲಿ ಬ್ರಹ್ಮ-ಶಬ್ದ ಪ್ರಯೋಗವಿರವುದರಿಂದಲೂ ಮತ್ತು ಬ್ರಹ್ಮನಿಗೆ ಬಹುರೂಪವಿರುವುದರಿಂದಲೂ ಇಲ್ಲಿ ವಿಕಾರಾರ್ಥಕ್ಕೆ ಅವಕಾಶವಿಲ್ಲ

## ತದ್ಧೇತುವ್ಯಪದೇಶಾಚ್ಚ ॥ ೧೪ ॥

೧೪. ಅದಕ್ಕೆ ಎಂದರೆ ಆನಂದಕ್ಕೆ (ಬ್ರಹ್ಮವು) ಕಾರಣವೆಂದು ಹೇಳಿರುವುದರಿಂದ (ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯವೇ ಅರ್ಥ)

'ಇವನೇ ಅಲ್ಲವೆ ಆನಂದಪಡಿಸುವವನು ?'[4] (ತೈ ಉ ೨ ೭) ಎಂದು ಶ್ರುತಿಯು ಬ್ರಹ್ಮವೇ ಆನಂದಕ್ಕೆ ಕಾರಣವೆಂದು ತಿಳಿಸುತ್ತದೆ ಯಾವನು ಇತರರನ್ನು ಆನಂದಗೊಳಿಸುವನೊ ಅವನಲ್ಲಿ ಪ್ರಚುರಾನಂದವಿರಬೇಕು ಆದುದರಿಂದ **ಮಯಟ್**ಪ್ರತ್ಯ-ಯಕ್ಕೆ ಪ್ರಾಚುರ್ಯಾರ್ಥವು ಬರುವುದರಿಂದ ಆನಂದಮಯನು ಪರಮಾತ್ಮನೇ

ವಿ —'ಆ ಬ್ರಹ್ಮನು ಆನಂದವಾಗಿಲ್ಲದಿದ್ದರೆ ಯಾವನು ತಾನೇ ಸಾಂಸಾರಿಕಸುಖವನ್ನಾಗಲಿ ಅಪವರ್ಗಸುಖವನ್ನಾಗಲಿ ಹೊಂದಬಹುದು ? ಇವನೇ ಸರ್ವಚೇತನರನ್ನೂ ಆನಂದಗೊಳಿಸುವನು'[5] (ತೈ ಉ. ೨ ೭) ಎಂದು ಶ್ರುತಿಯು ಬ್ರಹ್ಮನೇ ಜೀವನ ಆನಂದಕ್ಕೆ ಕಾರಣನೆಂದು ಹೇಳುತ್ತದೆ ಜೀವಾನಂದಕ್ಕೆ ಕಾರಣನಾದವನು ಆನಂದವನ್ನು ಪಡೆಯುತ್ತಿರುವ ಜೀವರಿಗಿಂತ ಭಿನ್ನವಾದ ಆನಂದಮಯನಾದ ಪರಮಾತ್ಮನು [6]

---

[1] ಪ್ರಚುರಾನಂದತ್ವಾತ್ ಹಿ ಆನಂದಮಯಃ, ನ ತು ತದ್ವಿಕಾರತ್ವಾತ್ । (ಮ ಭಾ)

[2] ಅನ್ನಾದೀನಾಂ ಚ ಪ್ರಾಚುರ್ಯಮೇವ (ಮ ಭಾ) ಪ್ರಾಚುರ್ಯಾರ್ಥಾಶ್ಚ ಮಯಟಃ ಸರ್ವೇಽತ್ರ ಪ್ರತಿಪಾದಿತಾಃ (ಅನುವ್ಯಾಖ್ಯಾನ).

[3] ಅದ್ಯತೇಽತ್ತಿ ಚ ಭೂತಾನಿ ।

[4] ಏಷ ಹ್ಯೇವಾನಂದಯಾತಿ ।

[5] ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್ .

[6] ಅತಶ್ಚ ಆನಂದಯಿತವ್ಯಾಜ್ಜೀವಾದ್ ಆನಂದಯಿತಾ ಅಯಮನ್ಯ ಆನಂದ-ಮಯಃ ಪರಮಾತ್ಮೇತಿ ವಿಜ್ಞಾಯತೇ (ಶ್ರೀಭಾಷ್ಯ).

**ದ್ವೈ.**—'ಅವನು ಜಗತ್-ಚೇಷ್ಟೆಗೆ ಕಾರಣನಾಗಿರುವುದರಿಂದ ಆನಂದಮಯನು' ಎಂಬುದು ಸೂತ್ರಾರ್ಥ 'ದೀಪ್ತಸ್ವರೂಪನಾದ ವಾಸುದೇವನು ಆನಂದರೂಪನಲ್ಲದಿದ್ದರೆ ಅವನನ್ನು ಬಿಟ್ಟು ಯಾವನಿಗೆ ತಾನೇ ಲೌಕಿಕಕರ್ಮಗಳೂ ವೈದಿಕಕರ್ಮಗಳೂ ಆದಾವು?'[1]

## ಮಾಂತ್ರವರ್ಣಿಕಮೇವ ಚ ಗೀಯತೇ ॥ ೧೫ ॥

೧೫. ಮಂತ್ರದಲ್ಲಿ ಉಕ್ತವಾದ (ಬ್ರಹ್ಮವೇ ಬ್ರಾಹ್ಮಣದಲ್ಲಿಯೂ) ಹೇಳಲ್ಪಟ್ಟಿದೆ; (ಆದುದರಿಂದ ಆನಂದಮಯನು ಪರಮಾತ್ಮನೇ).

ಈ ಕಾರಣದಿಂದಲೂ[2] ಆನಂದಮಯನು ಪರಮಾತ್ಮನು; 'ಬ್ರಹ್ಮವು ಸತ್ಯಜ್ಞಾನ ಅನಂತ'[3] (ತೈ. ಉ. ೨. ೧.) ಎಂಬ ಮಂತ್ರದಲ್ಲಿ ಯಾವ ಬ್ರಹ್ಮವನ್ನು ಸತ್ಯಜ್ಞಾನ ಅನಂತ ಇವುಗಳಿಂದ ನಿರ್ಧರಿಸಿಯೊ, ಯಾವುದನ್ನು ಅರಿತುಕೊಳ್ಳಲು 'ಅನ್ಯನೂ ಒಳಗಿರುವವನೂ ಆದ ಆತ್ಮನು, ಅನ್ಯನೂ ಒಳಗಿರುವವನೂ ಆದ ಆತ್ಮನು' ಎಂದು ಪುನಃ ಪುನಃ ಹೇಳಿದೆಯೊ ಆ ಮಾಂತ್ರವರ್ಣಿಕವಾದ ಬ್ರಹ್ಮವನ್ನೇ ಬ್ರಾಹ್ಮಣದಲ್ಲಿಯೂ 'ಈ ವಿಜ್ಞಾನಮಯವಾದ ಆತ್ಮನಿಗಿಂತ ಅನ್ಯನೂ ಒಳಗಿರುವವನೂ ಆನಂದಮಯನೂ ಆದ ಆತ್ಮನಿರುವನು'[4] (ತೈ. ಉ. ೨. ೫) ಎಂದು ಹೇಳಿದೆ. ಮಂತ್ರ-ಬ್ರಾಹ್ಮಣಗಳಿಗೆ ಏಕಾರ್ಥವನ್ನು ಕಲ್ಪಿಸುವುದು ಯುಕ್ತವು; ಹಾಗೆ ಮಾಡಿದರೆ ವಿರೋಧವಿರುವುದಿಲ್ಲ. ಹಾಗೆ ಮಾಡಿದಿದ್ದರೆ ಪ್ರಕೃತವಾದ ಬ್ರಹ್ಮವನ್ನು ಬಿಟ್ಟು ಬೇರೊಂದನ್ನು ಸ್ವೀಕರಿಸಿದಂತಾಗುತ್ತದೆ. ಅನ್ನಮಯಾದಿಗಳಿಗಿಂತ ಭಿನ್ನನಾದ ಒಳಗಿರುವ ಆತ್ಮನನ್ನು ಹೇಳಿರುವಂತೆ ಆನಂದಮಯನಿಗಿಂತ ಭಿನ್ನನಾದ ಅಂತರಾತ್ಮನನ್ನು ಹೇಳಿಲ್ಲ.[5] 'ಆ ಈ ಭಾರ್ಗವೀ ವಾರುಣೀ ವಿದ್ಯೆ'[6] (ತೈ. ಉ. ೩. ೬) ಎಂಬುದು ಬ್ರಹ್ಮದಲ್ಲಿಯೇ ನಿಂತಿದೆ. ಆದುದರಿಂದ ಆನಂದಮಯನು ಪರಮಾತ್ಮನೇ.

**ವಿ.**—'ಬ್ರಹ್ಮನು ಸತ್ಯ ಜ್ಞಾನ ಅನಂತ' (ತೈ. ಉ. ೨. ೧) ಎಂದು ಮಂತ್ರಾ.

---

[1] ಆದೀಪ್ತಸ್ತ್ವೇಷ ಭಗವಾನ್ ಯದ್ಯಾನಂದೋ ಭವೇನ್ನ ಚ ।
ಸಾಮಾನ್ಯಚೇಷ್ಟಾ ಧರ್ಮಾಶ್ಚ ಕಸ್ಯ ಸ್ಯುಸ್ತಮೃತೇ ಪ್ರಭುಮ್ ॥
(ತೈತ್ತಿರೀಯ-ಭಾಷ್ಯ).

[2] ಹಿಂದೆ ಹೇಳಿದ ಯುಕ್ತಿಯು 'ಲಿಂಗವನ್ನು' ಅವಲಂಬಿಸಿದ್ದಿತು; ಈಗ 'ಪ್ರಕರಣವನ್ನು' ಅವಲಂಬಿಸಿದೆ.

[3] ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ ।

[4] ಅನ್ಯೋಽಂತರ ಆತ್ಮಾಽಽನಂದಮಯಃ ।

[5] ನ ಚ ಅನ್ನಮಯಾದಿಭ್ಯ ಇವ ಆನಂದಮಯಾದನ್ಯೋಽಂತರ ಆತ್ಮಾಽಭಿಧೀಯತೇ (ಸೂ. ಭಾ.).

[6] ಸೈಷಾ ಭಾರ್ಗವೀ ವಾರುಣೀ ವಿದ್ಯಾ ।

ಕ್ಷರಗಳಲ್ಲಿ ಹೇಳಲ್ಪಟ್ಟ ಬ್ರಹ್ಮನೇ ಆನಂದಮಯನು ಪರಬ್ರಹ್ಮನು ಜೀವಸ್ವರೂಪಕ್ಕಿಂತ ಭಿನ್ನನಾದವನು ಆದುದರಿಂದಲೇ 'ಬ್ರಹ್ಮೋಪಾಸಕನು ಸರ್ವೋತ್ಕೃಷ್ಟವಾದುದನ್ನು ಹೊಂದುವನು'[1] (ತೈ ಉ ೨ ೧) ಎಂಬಲ್ಲಿ ಜೀವನಿಗೆ ಪ್ರಾಪ್ಯನಾದ ಬ್ರಹ್ಮನು ನಿರ್ದಿಷ್ಟ ನಾಗಿದ್ದಾನೆ 'ಈ ವಿಷಯದಲ್ಲಿ ಅಧ್ಯೇತೃಗಳು ಈ ಋಕ್ಕನ್ನು ಹೇಳಿರುವರು'[2] (ತೈ ಉ ೨ ೧) ಎಂಬಲ್ಲಿ ಈ ಮಂತ್ರವು ಅದೇ ಬ್ರಹ್ಮನನ್ನೇ ಸೂಚಿಸುತ್ತದ ಬ್ರಾಹ್ಮಣದಲ್ಲಿ ಹೇಳಿ ರುವ ಅರ್ಥವನ್ನು ಮಂತ್ರವು ಹೀಗೆ ಸ್ಪಷ್ಟಮಾಡುತ್ತದೆ ಉಪಾಸಕನಾದ ಜೀವನಿಗೆ ಪ್ರಾಪ್ಯನಾದ ಬ್ರಹ್ಮನು ಅವನಿಗಿಂತ ಬೇರೆಯಾಗಿರಬೇಕು[3] 'ಆ ಈ ಆತ್ಮನಿಂದ ಆಕಾಶವು ಹುಟ್ಟಿತು'[4] (ತೈ ಉ ೨, ೧) ಎಂಬಲ್ಲಿಂದ ಮುಂದೆ ಬರುವ ಬ್ರಾಹ್ಮಣ-ಮಂತ್ರವಾಕ್ಯ ಗಳೆಲ್ಲ ಈ ವಿಷಯವನ್ನೇ ಸ್ಪಷ್ಟಪಡಿಸುತ್ತವೆ ಆದುದರಿಂದ ಆನಂದಮಯನು ಜೀವನಿಗಿಂತ ಭಿನ್ನನು

**ದ್ವೈತ** —'ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದುತ್ತಾನೆ' ಎಂದು ಮೊದಲು ಯಾವ ಪರಬ್ರಹ್ಮನು ಸೂಚಿಸಲ್ಪಟ್ಟನೊ ಅವನೇ ಮಂತ್ರವರ್ಣದಿಂದ 'ಬ್ರಹ್ಮನು ಸೃಷ್ಟಿ-ಕರ್ತೃ, ಜ್ಞಾನಸ್ವರೂಪನು, ಅನಂತನು' (ತೈ ಉ ೨ ೧) ಎಂದು ಪ್ರತಿಪಾದಿಸಲ್ಪಟ್ಟಿ-ದ್ದಾನೆ,[5] ಈ ಪರಬ್ರಹ್ಮನೇ ಅನ್ನಮಯವೇ ಮೊದಲಾದ ಶಬ್ದಗಳಿಂದ ಗಾನಮಾಡಲ್ಪಟ್ಟಿ ದ್ದಾನೆ ಅನ್ನಮಯಾದಿಶಬ್ದಗಳಿಗೂ ಬ್ರಹ್ಮನೇ ಸತ್ಯ ಜ್ಞಾನ ಅನಂತ ಎಂಬ ಶಬ್ದಗಳಿಗೂ ಅರ್ಥವನ್ನು ಅನುಸಂಧಾನಮಾಡಿದರೆ ಏಕಾರ್ಥವು ತೋರುತ್ತದೆ 'ಅನ್ನರಸಮಯ' ಎಂಬಲ್ಲಿ ರಸ-ಶಬ್ದವು ಸಮಸ್ತ ವಸ್ತುಗಳಲ್ಲಿ ಸಾರವಾಗಿರುವ ಬ್ರಹ್ಮನನ್ನು ತಿಳಿಸುತ್ತದೆಯೇ ಹೊರತು ಭೌತಿಕಾನ್ನವನ್ನು ಹೇಳುವುದಿಲ್ಲ[6]

ಬ್ರಹ್ಮನನ್ನು ಆನಂದಮಯನ ಅವಯವವಾಗಿ ಹೇಳಿರುವುದರಲ್ಲಿ ವಿರೋಧವಿಲ್ಲ, ಏಕೆಂದರೆ ಚತುರ್ವೇದಶಿಖೆಯಲ್ಲಿ ಭಗವಂತನೇ ಬೇರೆ ಬೇರೆ ಅವಯವಗಳಾಗಿರುವನೆಂದು ಹೇಳಿದೆ 'ಅವನು ತಲೆ, ಅವನು ಬಲಗೈ, ಅವನು ಎಡಗೈ, ಅವನು ನಡುಮೈ, ಅವನು ಕಾಲು'[7] ಇದೇ ರೀತಿ ಬೃಹತ್ಸಂಹಿತೆಯಲ್ಲೂ ಹೇಳಿದೆ,[8] ಆದುದರಿಂದ ವಿಷ್ಣುವೇ ಆನಂದ ಮಯನು

---

1 ಬ್ರಹ್ಮವಿದಾಪ್ನೋತಿ ಪರಮ್ ।

2 ತದೇಷಾಽಭ್ಯುಕ್ತಾ ।

3 ಜೀವಸ್ಯೋಪಾಸಕಸ್ಯ ಪ್ರಾಪ್ಯಂ ಬ್ರಹ್ಮ ತಸ್ಮಾದ್ವಿಲಕ್ಷಣಮೇವ (ಶ್ರೀಭಾಷ್ಯ)

4 ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ।

5 ಬ್ರಹ್ಮವಿತ್ ಪರಮಾಪ್ನೋತಿ ಯತ್ ಪ್ರಥಮಸೂಚಿತಮ್ ।
ತದೇವ ಮಂತ್ರವರ್ಣೇನ ಸತ್ಯಂ ಜ್ಞಾನಮನಂತವತ್ ॥ (ಅನುವ್ಯಾಖ್ಯಾನ)

6 ರಸಶಬ್ದೇನ ವಿಶೇಷಣಾತ್ ತತ್ತತ್ ಸಾರಭೂತಂ ಚಿನ್ಮಾತ್ರಮೇವೋಚ್ಯತೇ ।
(ಮ ಭಾ )

7 ಸ ಶಿರಃ ಸ ದಕ್ಷಿಣಃ ಪಕ್ಷಃ ಸ ಉತ್ತರಃ ಪಕ್ಷಃ ಸ ಆತ್ಮಾ ಸ ಪುಚ್ಛಮ್ ।

8 ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೇಹೋ ವಾಸುದೇವಕಃ ॥

## ನೇತರೋಽನುಪಪತ್ತೇಃ ॥ ೧೬ ॥

೧೬ (ಆನಂದಮಯನು ಪರಬ್ರಹ್ಮವೇ), ಇನ್ನೊಬ್ಬನಲ್ಲ, ಏಕೆಂದರೆ (ಈಕ್ಷಿತೃತ್ವವೇ ಮೊದಲಾದ ಧರ್ಮಗಳು ಅವನಲ್ಲಿ) ಹೊಂದುವುದಿಲ್ಲ

'ಇನ್ನೊಬ್ಬನು' ಎಂದರೆ ಈಶ್ವರನಿಗಿಂತ ಭಿನ್ನವಾದ ಸಂಸಾರಿಜೀವ ಈ ಜೀವನನ್ನು ಆನಂದಮಯ-ಶಬ್ದದಿಂದ ಹೇಳಿಲ್ಲ "ನಾನು ಬಹುವಾಗುವೆನು, ನಾನು ಹುಟ್ಟುವೆನು" ಎಂದು ಆತ್ಮನು ಸಂಕಲ್ಪಿಸಿದನು ಅವನು ತಪಸ್ಸನ್ನು ಮಾಡಿದನು ಅವನು ತಪಸ್ಸು ಮಾಡಿದ ಬಳಿಕ ಇದೆಲ್ಲವನ್ನೂ—ಏನೇನಿದೆಯೊ—ಸೃಷ್ಟಿಸಿದನು"[1] ಎಂದು ಶ್ರುತಿಯು (ತೈ ಉ ೨ ೬) ಹೇಳುತ್ತದೆ ಇಲ್ಲಿ ಶರೀರವೇ ಮೊದಲಾದುವುಗಳ ಉತ್ಪತ್ತಿಗೆ ಮೊದಲೇ ಆಲೋಚನೆಮಾಡುವುದು, ಸೃಷ್ಟಿಯಾಗುವ ಕಾರ್ಯಗಳಿಗೂ ಸೃಷ್ಟಿಸುವವನಿಗೂ ಭೇದ ವಿಲ್ಲದಿರುವುದು ಮತ್ತು ಸರ್ವಕಾರ್ಯಗಳ ಸೃಷ್ಟಿ—ಇವೆಲ್ಲ ಪರಮಾತ್ಮನನ್ನು ಬಿಟ್ಟರೆ ಯಾರಿಗೂ ಹೊಂದುವುದಿಲ್ಲ ಮತ್ತು ಸಾಧ್ಯವಿಲ್ಲ ಹೀಗೆ ಆನಂದಮಯನು ಪರಮಾತ್ಮನೇ

ವಿ.—ಮಂತ್ರವರ್ಣವು ಜೀವವನ್ನೇ ಸೂಚಿಸುತ್ತದೆ ಜೀವನು ಆನಂದಮಯನಿ ಗಿಂತ ಭಿನ್ನನಲ್ಲ, ಏಕಂದರೆ ಜೀವನು ತನ್ನ ಶುದ್ಧವಾದ ನಿರ್ವಿಶೇಷ-ಚಿನ್ಮಾತ್ರ-ರೂಪದಲ್ಲಿ ಬ್ರಹ್ಮವೇ ಆಗಿರುತ್ತಾನೆ—ಎಂಬುದು ಪೂರ್ವಪಕ್ಷ

ಪರಮಾತ್ಮನಿಗಿಂತ ಭಿನ್ನನಾದ ಮುಕ್ತಜೀವನೂ ಕೂಡ ಮಂತ್ರವರ್ಣದಲ್ಲಿ ಹೇಳಲ್ಪ ಟ್ಟಿಲ್ಲ ಎಂಬುದು ಸಿದ್ಧಾಂತ, ಏಕೆಂದರೆ ಶ್ರುತಿಯು (ತೈ ಉ ೨ ೧) ಬ್ರಹ್ಮನಿಗೆ ವಿಪಶ್ಚಿತ್ತ್ವವನ್ನು (ಎಂದರೆ ಸರ್ವಜ್ಞತ್ವವನ್ನು) ಹೇಳಿದೆ.[2] ನಿರುಪಾಧಿಕವಾದ ವಿಪಶ್ಚಿ-ತ್ತ್ವವು ಅಂಥ ಜೀವನಿಗೆ ಕೂಡ ಸೇರಿಲ್ಲ 'ನಾನು ಬಹುವಾಗುವೆನು, ಅದಕ್ಕೋಸ್ಕರ ಸೃಷ್ಟಿಸುವೆನು' (ತೈ ೨ ೬) ಎಂಬಲ್ಲಿ ಪರಬ್ರಹ್ಮನ ನಿರುಪಾಧಿಕವಾದ ವಿಪಶ್ಚಿತ್ತ್ವವು ಸತ್ಯಸಂಕಲ್ಪತ್ವದ ಪ್ರದರ್ಶನದ ಮೂಲಕ ವಿವರಿಸಲ್ಪಟ್ಟಿದೆ ಮುಕ್ತಜೀವನಿಗೆ ವಿಪಶ್ಚಿತ್ತ್ವವು ಸಾಧ್ಯವಾದರೂ ಸಂಸಾರದಶೆಯಲ್ಲಿ ವಿಪಶ್ಚಿತ್ತ್ವವು ಇಲ್ಲದಿರುವುದರಿಂದ ಅದು ನಿರುಪಾಧಿಕ ವಾದ ವಿಪಶ್ಚಿತ್ತ್ವವಲ್ಲ ಮುಕ್ತನು ನಿರ್ವಿಶೇಷ-ಚಿನ್ಮಾತ್ರನೆಂದು ಭಾವಿಸಿದರೆ ಆಗ ವಿವಿಧ ದರ್ಶನಗಳ ಅಭಾವದಿಂದ ವಿಪಶ್ಚಿತ್ತ್ವವು ಸುತರಾಂ ಸಂಭವಿಸುವುದಿಲ್ಲ[3] ನಿರ್ವಿಶೇಷವಸ್ತು

---

[1] ಸೋಽಕಾಮಯತ—ಬಹು ಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ ॥ ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ । ಯದಿದಂ ಕಿಂ ಚ ।

[2] 'ಅವನು ಪರಮಪದದಲ್ಲಿ ಸರ್ವಜ್ಞನಾದ ಬ್ರಹ್ಮನೊಂದಿಗೆ ಅವನ ಕಲ್ಯಾಣಗುಣ ಗಳನ್ನು ಭೋಗ್ಯತ್ವೇನ ಹೊಂದುವನು' ಸೋಽಶ್ನುತೇ ಸರ್ವಾನ್ ಕಾಮಾನ್ ಸಹ, ಬ್ರಹ್ಮಣಾ ವಿಪಶ್ಚಿತೇತಿ ।

[3] ಯದ್ಯಪಿ ಮುಕ್ತಸ್ಯ ವಿಪಶ್ಚಿತ್ತ್ವಂ ಸಂಭವತಿ, ತಥಾಽಪಿ ತಸ್ಯೈವಾತ್ಮನಃ ಸಂಸಾರ-ದಶಾಯಾಮ್ ಅವಿಪಶ್ಚಿತ್ತ್ವಮಪಿ ಅಸ್ತೀತಿ ನಿರುಪಾಧಿಕಂ ವಿಪಶ್ಚಿತ್ತ್ವಂ ನೋಪಪದ್ಯತೇ । (ಶ್ರೀಭಾಷ್ಯ).

ವನ್ನು ಯಾವ ಪ್ರಮಾಣದಿಂದಲೂ ಪ್ರತಿಪಾದಿಸಲು ಸಾಧ್ಯವಿಲ್ಲ. ಆದುದರಿಂದ ಪರಬ್ರಹ್ಮ ನನ್ನೇ ಮಂತ್ರವರ್ಣದಲ್ಲಿ ಹೇಳಿದೆ.

**ದ್ವೈ ಪ.**—ವಿಷ್ಣುವಿಗಿಂತ ಇತರರಾದ ಬ್ರಹ್ಮಾದಿಗಳ ಜ್ಞಾನದಿಂದ ಮೋಕ್ಷವು ಲಭಿಸುವುದಿಲ್ಲ 'ಅವನನ್ನು ಅರಿತುಕೊಂಡವನು ಅಮೃತನಾಗುತ್ತಾನೆ; ಅವನನ್ನು ಹೊಂದಲು ಬೇರೆ ಯಾವ ದಾರಿಯೂ ಇಲ್ಲ'[1] (ತೈ. ಆ. ३. ೧೨. ೭) ಎಂದು ಶ್ರುತಿಯು ಹೇಳುತ್ತದೆ. ಪರಮಪುರುಷನಾದ ವಿಷ್ಣುವನ್ನು ಅರಿತುಕೊಂಡವನು ಮುಕ್ತನಾಗುವನು. ಬೇರೆ ಯಾವ ದಾರಿಯೂ ಇರುವುದಿಲ್ಲ. ಪರಮಾತ್ಮನಿಗಿಂತ ಬೇರೆಯಾದವನನ್ನು ತಿಳಿದುಕೊಂಡವನು ಮುಕ್ತಿಯನ್ನು ಹೇಗೆ ಹೊಂದುತ್ತಾನೆ ?[2]

## ಭೇದವ್ಯಪದೇಶಾಚ್ಚ ॥ ೧೭ ॥

೧೭. ಮತ್ತು (ಇಬ್ಬರಿಗೂ) ಭೇದವನ್ನು ಹೇಳಿರುವುದರಿಂದ (ಆನಂದಮಯನು ಜೀವನಲ್ಲ).

ಆನಂದಮಯನ ಪ್ರಕರಣದಲ್ಲಿ 'ಅದೇ ರಸ. ರಸವನ್ನೇ ಹೊಂದಿ ಇವನು ಆನಂದಿಯಾಗುತ್ತಾನೆ'[3] (ತೈ. ಉ. ೨. ೭) ಎಂಬ ಶ್ರುತಿವಾಕ್ಯವು ಜೀವನಿಗೂ ಆನಂದಮಯನಿಗೂ ಭೇದವನ್ನು ಹೇಳಿದೆ; ಏಕೆಂದರೆ ಪಡೆದುಕೊಳ್ಳುವವನೇ ಪಡೆಯಲ್ಪಡತಕ್ಕದ್ದು ಆಗಲಾರದು.[4]

**ಆಕ್ಷೇಪಣೆ**—ಪಡೆದುಕೊಳ್ಳುವವನು ಪಡೆಯಲ್ಪಡತಕ್ಕದ್ದು ಆಗದಿದ್ದರೆ, 'ಆತ್ಮನನ್ನು ಹುಡುಕಬೇಕು'[5] (ಛಾಂ. ಉ. ೮. ೭. ೧), 'ಆತ್ಮಲಾಭಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ'[6] (ಆ. ಧ. ಸೂ. ೧. ೮. ೨) ಎಂಬ ಶ್ರುತಿ-ಸ್ಮೃತಿವಾಕ್ಯಗಳು ಹೇಗೆ ಸರಿಹೊಂದುತ್ತವೆ ?

**ಪರಿಹಾರ**—ಈ ಆಕ್ಷೇಪಣೆಯು ನಿಜ. ಆತ್ಮನ ಆತ್ಮಭಾವಕ್ಕೆ ಚ್ಯುತಿಯಿಲ್ಲದಿದ್ದರೂ ತತ್ತ್ವವನ್ನು ತಿಳಿಯದೆ ಇರುವುದರಿಂದ ಅನಾತ್ಮವಾದ ದೇಹಾದಿಗಳಲ್ಲಿ ಆತ್ಮತ್ವನಿಶ್ಚಯವು ಕಂಡುಬರುತ್ತದೆ. ಆದುದರಿಂದ ಶರೀರಾದಿಗಳನ್ನೇ ಆತ್ಮನೆಂದು ನಿಶ್ಚಯಿಸಿ

---

1 ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ ।

2 ಪುರುಷಂ ವೇತ್ತಿ ಯೋ ಮುಚ್ಯೇನ್ನಾನ್ಯಃ ಪಂಥಾ ಹಿ ವಿದ್ಯತೇ ।
ಇತಿ ಶ್ರುತೇರನ್ಯವೇದೀ ಕಥಂ ಮುಕ್ತಿಂ ಪ್ರಯಾಸ್ಯತಿ ॥ (ಅನುವ್ಯಾಖ್ಯಾನ).

3 ರಸೋ ವೈ ಸಃ । ರಸಂ ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ ।

4 ನ ಹಿ ಲಬ್ಧೈವ ಲಬ್ಧವ್ಯೋ ಭವತಿ (ಸೂ. ಭಾ.).

5 ಆತ್ಮಾ...ಅನ್ವೇಷ್ಟವ್ಯಃ ।

6 ಆತ್ಮಲಾಭಾನ್ನ ಪರಂ ವಿದ್ಯತೇ ।

ಕೊಂಡಿರುವ ಆತ್ಮನಿಗೆ ಆತ್ಮನು 'ಹುಡುಕಲ್ಪಡದೆ ಇರುವವನು, ಹುಡುಕಲ್ಪಡತಕ್ಕವನು' ಮೊದಲಾದ ಭೇದ-ವ್ಯಪದೇಶವು ಸರಿಯಾಗಿರುತ್ತದೆ. ಆದರೆ ಪರಮಾರ್ಥತಃ ಸರ್ವಜ್ಞನಾದ ಪರಮೇಶ್ವರನಿಗಿಂತ ಬೇರೆಯಾದ ದ್ರಷ್ಟೃವನ್ನಾಗಲಿ ಶ್ರೋತೃವನ್ನಾಗಲಿ ಶ್ರುತಿಯು ನಿಷೇಧಿಸುತ್ತದೆ: 'ಅವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ'[1] (ಬೃ. ಉ. ೩. ೭. ೨೩). ಪರಮೇಶ್ವರನು ಅವಿದ್ಯಾಕಲ್ಪಿತನೂ ಶರೀರದಲ್ಲಿರುವವನೂ ಕರ್ತೃ-ಭೋಕ್ತೃವೂ ಆದ ಜೀವಾತ್ಮನಿಗಿಂತ ಬೇರೆಯಾದವನು. ಜೀವಾತ್ಮ-ಪರಮಾತ್ಮರಿಗೆ ಇಂಥ ಭೇದವನ್ನಿಟ್ಟು ಕೊಂಡೇ ಈ ಎರಡು ಸೂತ್ರಗಳನ್ನು (೧೬ ಮತ್ತು ೧೭) ಹೇಳಿದೆ.[2]

ವಿ.—'ಇವನ ಭಯದಿಂದ ವಾಯುವು ಬೀಸುವುದು'[3] (ತೈ. ಉ. ೨. ೮) ಇವೇ ಮೊದಲಾದ ವಾಕ್ಯಗಳಿಂದ ಅಗ್ನಿ ವಾಯು ಸೂರ್ಯ ಇವರೇ ಮೊದಲಾದ ಜೀವವರ್ಗಕ್ಕೆಲ್ಲ ಆನಂದಮಯನು ನಿಯಾಮಕನೆಂದೂ ಜೀವವರ್ಗವೆಲ್ಲ ನಿಯಮ್ಯವೆಂದೂ ಭೇದವನ್ನು ಹೇಳಿದೆ. 'ಈ ವಿಜ್ಞಾನಮಯನಿಗಿಂತ ಅನ್ಯನೂ, ಅವನಲ್ಲಿ ಅಂತರ್ಗತನೂ ಆದ ಆತ್ಮನು ಆನಂದಮಯನು' (ತೈ. ಉ. ೨. ೫) ಎಂಬಲ್ಲಿ ವಿಜ್ಞಾನಮಯನಾದ ಜೀವನಿಗಿಂತ ಆನಂದಮಯನು ಭಿನ್ನನೆಂದು ಹೇಳಿದೆ. ವಿಜ್ಞಾನಮಯನು ಜೀವನೇ, ಬುದ್ಧಿಮಾತ್ರವಲ್ಲ; ಏಕೆಂದರೆ ಮಯಟ್-ಪ್ರತ್ಯಯವಿದೆ.[4]

ದ್ವೈ.—'ಪ್ರಜಾಪತಿಯ ಆ ನೂರು ಆನಂದಗಳು (ಬ್ರಹ್ಮನ ಒಂದು ಆನಂದ)'[5] (ತೈ. ಉ. ೨. ೮), 'ಯಾವಾಗ ಜ್ಞಾನಿಯು ಅದೃಶ್ಯನೂ ಜೀವಗುಣರಹಿತನೂ ಸಂಪೂರ್ಣವಾಗಿ ಪ್ರತಿಪಾದ್ಯವಾಗದಿರುವವನೂ ಆಶ್ರಯರಹಿತನೂ ಆದ ಇವನಲ್ಲಿ ಭಯವಿಲ್ಲದೆ ಪ್ರತಿಷ್ಠೆಯನ್ನು ಹೊಂದುವನೊ'[6] (ತೈ. ಉ. ೨. ೭) 'ಯಾವ ಆ ಇವನು ನಿಖಿಲ ಜೀವವರ್ಗದಲ್ಲಿ ಇರುವನೊ'[7] (ತೈ. ಉ. ೨. ೮) ಇವೇ ಮೊದಲಾದ ವಾಕ್ಯಗಳಲ್ಲಿ ಆನಂದಮಯನಿಗೂ ಜೀವನಿಗೂ ಭೇದವನ್ನು ಹೇಳಿದೆ. **ತತ್ತ್ವಮಸಿ** (ಛಾಂ. ಉ. ೬. ೮), **ಅಹಂ ಬ್ರಹ್ಮಾಸ್ಮಿ** (ಬೃ. ಉ. ೧. ೪. ೧೦) ಇವೇ ಮೊದಲಾದ ಶ್ರುತಿಗಳಿಗೆ ಯಾವ ವಿರೋಧವೂ ಇಲ್ಲ; ಏಕೆಂದರೆ 'ಎಲ್ಲ ಹೆಸರುಗಳೂ ಅವನನ್ನು ಪ್ರವೇಶಿಸುತ್ತವೆ' ಎಂಬ ಶ್ರುತಿಯ ಪ್ರಕಾರ ಪ್ರತಿಯೊಂದು ಶಬ್ದದಿಂದಲೂ ಭಗವಂತನೇ ಹೇಳಲ್ಪಡುತ್ತಾನೆ.[8]

---

1 ನಾನ್ಯೋಽತೋಽಸ್ತಿ ದ್ರಷ್ಟಾ।

2 ಈದೃಶಂ ಚ ವಿಜ್ಞಾನಾತ್ಮಪರಮಾತ್ಮಭೇದಮಾಶ್ರಿತ್ಯ 'ನೇತರೋಽನುಪಪತ್ತೇಃ, ಭೇದವ್ಯಪದೇಶಾಚ್ಚ' ಇತ್ಯುಕ್ತಮ್ (ಸೂ. ಭಾ.).

3 ಭೀಷಾಽಸ್ಮಾದ್ವಾತಃ ಪವತೇ।

4 ವೇ. ದೀ. ೧. ೧. ೧೮.

5 ತೇ ಯೇ ಶತಂ ಪ್ರಜಾಪತೇರಾನಂದಾಃ।

6 ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ।

7 ಸ ಯಶ್ಚಾಯಂ ಪುರುಷೇ।

8 ನ ಚ ತತ್ತ್ವಮಸ್ಯಹಂ ಬ್ರಹ್ಮಾಸ್ಮೀತ್ಯಾದಿ–ಶ್ರುತಿವಿರೋಧಃ। ನಾಮಾನಿ ಸರ್ವಾಣಿ ಯಮಾವಿಶಂತೀತಿ ತತ್ತಚ್ಛಬ್ದವಾಚ್ಯತೋಕ್ತೇಃ (ಮ. ಭಾ.).

ಆದುದರಿಂದ ಆನಂದಮಯನಾದ ಪರಮಾತ್ಮನು ಜೀವನಲ್ಲ

## ಕಾಮಾಚ್ಚ ನಾನುಮಾನಾಪೇಕ್ಷಾ ॥ ೧೮ ॥

೧೮. (ಆನಂದಮಯನಿಗೆ 'ಬಯಕೆಯನ್ನು' ಹೇಳಿರುವುದರಿಂದ ಅನುಮಾನದ ಅಪೇಕ್ಷೆಯಿಲ್ಲ).

ಆನಂದಮಯನ ಪ್ರಕರಣದಲ್ಲಿ '"ನಾನು ಬಹುವಾಗುವೆನು, ಹುಟ್ಟುವೆನು" ಎಂದು ಆ ಆತ್ಮನು ಬಯಸಿದನು' (ತೈ. ಉ. ೨. ೬) ಎಂದು ಆನಂದಮಯನಿಗೆ 'ಬಯಕೆಯನ್ನು' ನಿರ್ದೇಶಿಸಿರುವುದರಿಂದ ಸಾಂಖ್ಯಕಲ್ಪಿತವಾದ ಮತ್ತು ಅನುಮಾನ-ಪ್ರಮಾಣ-ಗಮ್ಯವಾದ ಪ್ರಧಾನವು ಆನಂದಮಯವೆಂದಾಗಲಿ ಜಗತ್ಕಾರಣವೆಂದಾಗಲಿ ಗಣಿಸಲಾಗುವುದಿಲ್ಲ. ಸೂ. ೧. ೧. ೫ರಲ್ಲಿ ಪ್ರಧಾನವನ್ನು ನಿರಾಕರಿಸಿದ್ದರೂ—ಈಗ ಅನುಕೂಲ-ಸಂದರ್ಭವೊದಗಿರುವುದರಿಂದ—ಹಿಂದಿನ ಸೂತ್ರದಲ್ಲಿ (೧. ೧. ೧೬) ಉದಾಹರಿಸುವ ಕಾಮಯಿತೃತ್ವ-ಶ್ರುತಿಯನ್ನು ಆಶ್ರಯಿಸಿ ವೇದಾಂತವಾಕ್ಯಗಳ ಏಕರೂಪತೆಯನ್ನು ತೋರಿಸಲು ಪುನಃ ಅದನ್ನು ಇಲ್ಲಿ ನಿರಾಕರಿಸಿದೆ.

**ವಿ.**—ಅವಿದ್ಯಾಪರವಶನಾದ ಜೀವನು ಜಗತ್ಕಾರಣನಾಗಬೇಕಾದರೆ 'ಆನುಮಾನಿಕ' 'ಪ್ರಧಾನ' ಎಂಬ ಹೆಸರುಗಳಿಂದ ಕರೆಯಲ್ಪಡುವ ಅಚಿದ್ವಸ್ತುವಿನ ಸಂಬಂಧವನ್ನು ಪಡೆಯಬೇಕು. ಹೀಗೆಯೇ ಬ್ರಹ್ಮಾದಿಗಳು ಸೃಷ್ಟಿ-ಶಕ್ತಿಯನ್ನು ಪಡೆದಿರುತ್ತಾರೆ. ಇಲ್ಲಿ ಶ್ರುತಿಯು (ತೈ. ಉ. ೨. ೬) ಅಚಿತ್-ಸಂಬಂಧ-ರಹಿತನಾದ ಪರಮಾತ್ಮನ ಸ್ವಸಂಕಲ್ಪದಿಂದಲೇ ವಿಚಿತ್ರವಾದ ಚಿತ್-ಅಚಿತ್-ವಸ್ತುಗಳ ಸೃಷ್ಟಿಯನ್ನು ಹೇಳಿದೆ. ಜಗತ್ತನ್ನು ಸೃಷ್ಟಿಸುವ ಆನಂದಮಯನಿಗೆ ಅಚಿದ್ವಸ್ತುವಿನ ಸಂಬಂಧವು ಬೇಕಾಗಿಲ್ಲ. ಆದುದರಿಂದ ಆನಂದಮಯನು ಜೀವನಿಗಿಂತ ಭಿನ್ನನಾದವನು.

**ದ್ವೈ.**—'(ಶುಷ್ಕವಾದ) ಅನುಮಾನ-ಪ್ರಮಾಣವನ್ನು ಅಪೇಕ್ಷಿಸಕೂಡದು ; ಏಕೆಂದರೆ (ಅನುಮಾನಕ್ಕೆ) ಕಾಮಚಾರಿತ್ವವಿದೆ' ಎಂಬುದು ಸೂತ್ರಾರ್ಥ.

ಮನುಷ್ಯನು ಇಚ್ಛಾನುಸಾರವಾಗಿ ಅನುಮಾನಿಸಬಹುದು. ಆದುದರಿಂದ ಶ್ರುತಿ-ಪ್ರತಿಪಾದ್ಯವಾದ ತತ್ತ್ವದ ವಿಷಯದಲ್ಲಿ ಶ್ರುತಿಯನ್ನು ಅಪೇಕ್ಷಿಸದ ತರ್ಕವನ್ನು ಬಯಸಕೂಡದು.[1] 'ಈ ಬ್ರಹ್ಮವಿಷಯಕ-ಬುದ್ಧಿಯು ಕೇವಲ ಅನುಮಾನದಿಂದ ಪಡೆಯುವುದಕ್ಕಾಗಲಿ ನಿರಾಕರಿಸುವುದಕ್ಕಾಗಲಿ ಆಗುವುದಿಲ್ಲ'[2] (ಕ. ಉ. ೧. ೨. ೯.).

---

[1] ಯಥಾಕಾಮಂ ಹ್ಯನುಮಾತುಂ ಶಕ್ಯತೇ । ಅತೋ ನ ತತ್ತ್ವೇ ಪೃಥಗನುಮಾನಮಪೇಕ್ಷ್ಯತೇ (ಮ. ಭಾ.).

[2] ನೈಷಾ ತರ್ಕೇಣ ಮತಿರಾಪನೇಯಾ ।

## ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ॥ ೧೯ ॥

೧೯. ಮತ್ತು ಇವನಲ್ಲಿ (ಎಂದರೆ ಆನಂದಮಯನಲ್ಲಿ) ಇವನ (ಎಂದರೆ ಜೀವನ) ತದ್-ಯೋಗವನ್ನು (ಶಾಸ್ತ್ರವು) ಉಪದೇಶಿಸುತ್ತದೆ.

ಈ ಕಾರಣದಿಂದಲೂ ಆನಂದಮಯ-ಶಬ್ದವು ಪ್ರಧಾನವನ್ನಾಗಲಿ ಜೀವನನ್ನಾಗಲಿ ಸೂಚಿಸುವುದಿಲ್ಲ; ಏಕೆಂದರೆ ಪ್ರಕೃತನಾಗಿರುವ ಈ ಆನಂದಮಯನೆಂಬ ಆತ್ಮನಲ್ಲಿ ಪ್ರಬುದ್ಧನಾದ ಜೀವನ ತದ್-ಯೋಗವನ್ನು ಹೇಳಿದೆ. **ತದ್-ಯೋಗ** ಎಂದರೆ ರೂಪದಿಂದ ಐಕ್ಯ, ಆ ಸ್ವರೂಪವನ್ನು ಪಡೆಯುವುದು; ಮೋಕ್ಷ ಎಂದರ್ಥ.[1] ಈ ತದ್-ಯೋಗವನ್ನೇ ಶಾಸ್ತ್ರವು ಹೀಗೆ ಉಪದೇಶಿಸುತ್ತದೆ: 'ಯಾವಾಗ ಇವನು ಈ ಅವಿಕಾರವೂ ಅಶರೀರವೂ ಅನಿರ್ವಾಚ್ಯವೂ ಆಧಾರರಹಿತವೂ ಆದ ಬ್ರಹ್ಮದಲ್ಲಿ ಭಯವಿಲ್ಲದೆ ಆತ್ಮ-ಭಾವವನ್ನು ಹೊಂದುತ್ತಾನೆಯೊ ಆಗ ಅವನು ಅಭಯವನ್ನು ಪಡೆದವನಾಗುತ್ತಾನೆ. ಯಾವಾಗ ಇವನು ಈ ಬ್ರಹ್ಮದಲ್ಲಿ ಸ್ವಲ್ಪವಾದರೂ ಭೇದದರ್ಶನವನ್ನು ಮಾಡುತ್ತಾನೆಯೊ ಆಗ ಇವನಿಗೆ ಭಯವಾಗುತ್ತದೆ'[2] (ತೈ. ಉ. ೨. ೭). ಈ ಆನಂದಮಯನಲ್ಲಿ ತಾದಾತ್ಮ್ಯರೂಪವಲ್ಲದ ಭೇದವನ್ನು ಎಷ್ಟು ಸ್ವಲ್ಪವಾಗಿ ನೋಡಿದರೂ ಸಂಸಾರಭಯವು ತಪ್ಪುವುದಿಲ್ಲ; ಆದರೆ ಇವನಲ್ಲಿ ನಿರಂತರವೂ ತಾದಾತ್ಮ್ಯದಿಂದ ಪ್ರತಿಷ್ಠಿತವಾದಾಗ ಸಂಸಾರಭಯದಿಂದ ತಪ್ಪಿಸಿಕೊಳ್ಳಬಹುದು ಎಂದರ್ಥ. ಆನಂದಮಯನು ಪರಮಾತ್ಮನೆಂದು ಅರಿತುಕೊಂಡಾಗ ಇದು ಸಾಧ್ಯವೇ ಹೊರತು ಅವನು ಪ್ರಧಾನವೆಂದಾಗಲಿ ಜೀವನೆಂದಾಗಲಿ ಅರಿತುಕೊಂಡಾಗಲ್ಲ. ಆದುದರಿಂದ ಆನಂದಮಯನು ಪರಮಾತ್ಮನೇ

### ಭಾಷ್ಯಕಾರರ ಮತ

'ಆ ಈ ಪುರುಷನು ಅನ್ನರಸಮಯನು'[3] (ತೈ. ಉ. ೨ ೧) ಇವೇ ಮೊದಲಾದ ವಿಕಾರಾರ್ಥವುಳ್ಳ ಮಯಟ್-ಪ್ರತ್ಯಯಗಳ ಪ್ರವಾಹವಿರುವಾಗ ಅರ್ಧಜರತೀಯ-

---

[1] ತದಾತ್ಮನಾ ಯೋಗಃ ತದ್ಯೋಗಃ, ತತ್-ಭಾವಾಪತ್ತಿಃ । ಮುಕ್ತಿಃ ಇತ್ಯರ್ಥಃ ।

[2] ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ ।

[3] ಸ ವಾ ಏಷ ಪುರುಷೋಽನ್ನರಸಮಯಃ । ತೈ. ಉ. ೨. ೨, ೨. ೩ ಮತ್ತು ೨. ೪ ನೋಡಿ.

ನ್ಯಾಯದ ಪ್ರಕಾರ[1] ಆನಂದಮಯನಲ್ಲಿ ಮಾತ್ರ ಮಯಟ್-ಪ್ರತ್ಯಯಕ್ಕೆ ಪ್ರಾಚು-ರ್ಯಾರ್ಥವಿದೆಯೆಂದೂ ಮತ್ತು ಅದು ಬ್ರಹ್ಮವನ್ನು ಸೂಚಿಸುವುದೆಂದೂ ಒಪ್ಪಿಕೊಳ್ಳುವುದು ಹೇಗೆ ? ಮಂತ್ರವರ್ಣದಲ್ಲಿ ಹೇಳಿರುವ ಬ್ರಹ್ಮಪ್ರಕರಣದ ಬಲದಿಂದ ಹಾಗೆ ಒಪ್ಪಿಕೊಳ್ಳಬೇಕೆಂಬ ಅಭಿಪ್ರಾಯವೂ ಸರಿಯಲ್ಲ, ಏಕೆಂದರೆ (ಬ್ರಹ್ಮಪ್ರಕರಣದಲ್ಲಿಯೇ ಬರುವ) ಅನ್ನಮಯಾದಿಗಳು ಕೂಡ ಬ್ರಹ್ಮವಾಗುವ ಪ್ರಸಂಗವು ಒದಗುವುದು ।

**ವೃತ್ತಿಕಾರ**—ಅನ್ನಮಯಾದಿಗಳು ಬ್ರಹ್ಮವಲ್ಲವೆಂಬುವುದು ಯುಕ್ತ, ಏಕೆಂದರೆ ಅವುಗಳಿಂದ ಒಳಗಿರುವ ಮತ್ತೊಬ್ಬ ಆತ್ಮನನ್ನು ಶ್ರುತಿಯು **ಅನ್ಯೋಽಂತರ ಆತ್ಮಾ, ಅನ್ಯೋಽಂತರ ಆತ್ಮಾ** ಎಂದು ಕ್ರಮವಾಗಿ ಹೇಳುತ್ತದೆ, ಆದರೆ ಆನಂದಮಯನಿಗಿಂತ ಒಳಗಿರುವ ಮತ್ತೊಬ್ಬ ಆತ್ಮನನ್ನು ಹೇಳಿಲ್ಲ ಆದುದರಿಂದ ಆನಂದಮಯನು ಬ್ರಹ್ಮವೇ

**ಸಿದ್ಧಾಂತಿ**—ಅನ್ನಮಯಾದಿಗಳಂತೆ ಆನಂದಮಯನಿಗಿಂತ ಒಳಗಿರುವ ಮತ್ತೊಬ್ಬ ಆತ್ಮನನ್ನು ಶ್ರುತಿಯು ಹೇಳದಿದ್ದರೂ ಆನಂದಮಯನು ಬ್ರಹ್ಮವಲ್ಲ, ಏಕೆಂದರೆ ಆನಂದ-ಮಯನನ್ನೇ ಕುರಿತು ಶ್ರುತಿಯು ಹೀಗೆ ಹೇಳುತ್ತದೆ 'ಅವನಿಗೆ ಪ್ರಿಯವೇ ತಲೆ, ಮೋದವು ದಕ್ಷಿಣಪಕ್ಷ, ಪ್ರಮೋದವು ಉತ್ತರಪಕ್ಷ, ಆನಂದವು ಮಧ್ಯಭಾಗ ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ'[2] (ತೈ ಉ ೨ ೫) **ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ** (ತೈ ಉ ೨ ೧) ಎಂಬಲ್ಲಿ ಯಾವ ಬ್ರಹ್ಮವು ಪ್ರಕೃತವಾಗಿದೆಯೊ ಅದನ್ನೇ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿದೆ ಅದರ ಜ್ಞಾನವನ್ನು ಉಪದೇಶಿಸುವುದಕ್ಕಾಗಿಯೇ ಅನ್ನಮಯದಿಂದ ಪ್ರಾರಂಭಿಸಿ ಆನಂದಮಯನ ವರೆಗೆ ಪಂಚಕೋಶಗಳನ್ನು ಕಲ್ಪಿಸಿದೆ

**ವೃತ್ತಿಕಾರ**—ಅನ್ನಮಯಾದಿಗಳಿಗೆ 'ಇದು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿರುವ ಹಾಗೆ ಆನಂದಮಯನಿಗೆ ಅವಯವವಾಗಿ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿದೆ ಹೀಗಿರುವಾಗ ಬ್ರಹ್ಮವು ಸ್ವಪ್ರಧಾನ[3] ಎಂದು ಹೇಗೆ ಅರಿಯುವುದು ?

**ಸಿದ್ಧಾಂತಿ**—ಅದು ಪ್ರಕರಣಕ್ಕೆ ಪ್ರಕೃತವಾಗಿರುವುದರಿಂದ

---

[1] ಕೋಳಿಯ ಒಂದು ಭಾಗವನ್ನು ಅಡಿಗೆಮಾಡಲು ಇಟ್ಟುಕೊಂಡು ಇನ್ನೊಂದು ಭಾಗವನ್ನು ಮೊಟ್ಟೆಹಾಕಲು ಇಡಲಾಗುವುದಿಲ್ಲ, ಎಂದರೆ ಒಂದು ವಸ್ತುವನ್ನು ಸಮಗ್ರವಾಗಿಯೇ ತೆಗೆದುಕೊಳ್ಳಬೇಕು ಅಥವಾ ಸಮಗ್ರವಾಗಿ ಬಿಡಬೇಕು ನ ಹಿ ಕುಕ್ಕುಟ್ಯಾದೇಃ ಏಕದೇಶೋ ಭೋಗಾಯ ಪಚ್ಯತ ಏಕದೇಶಸ್ತು ಪ್ರಸವಾಯ ಕಲ್ಪ್ಯತೇ ವಿರೋಧಾತ್ (ನ್ಯಾ ನಿ ೧ ೨ ೮) ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಇವುಗಳಲ್ಲಿ ಮಯಟ್-ಪ್ರತ್ಯಯಕ್ಕೆ ವಿಕಾರಾರ್ಥವನ್ನು ಒಪ್ಪಿಕೊಂಡು ಆನಂದಮಯನ ಮಯಟ್-ಪ್ರತ್ಯಯಕ್ಕೆ ಮಾತ್ರ ಪ್ರಾಚು-ರ್ಯಾರ್ಥವನ್ನು ಕಲ್ಪಿಸುವುದು ಸರಿಯಲ್ಲ ಎಂದರ್ಥ

[2] ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ।

[3] ಎಂದರೆ ಸೂಚಿಸಲ್ಪಟ್ಟ ಮುಖ್ಯ ವಿಷಯ,

**ವೃತ್ತಿಕಾರ**—ಬ್ರಹ್ಮವು ಆನಂದಮಯನ ಅವಯವವೆಂದು ಅರಿತುಕೊಂಡರೂ ಅಪ್ರಕೃತವಾಗುವುದಿಲ್ಲ ; ಏಕೆಂದರೆ ಆನಂದಮಯನು ಬ್ರಹ್ಮವೇ.

**ಸಿದ್ಧಾಂತಿ**—ಒಂದೇ ಬ್ರಹ್ಮವು ಆನಂದಮಯಾತ್ಮನಾದ ಅವಯವಿಯಾಗಿಯೂ ಅದೇ ಬ್ರಹ್ಮವು ಪುಚ್ಛವೂ ಪ್ರತಿಷ್ಠೆಯೂ ಆದ ಅವಯವವಾಗಿಯೂ ಅರಿತುಕೊಳ್ಳುವುದರಲ್ಲಿ ಸಾಮಂಜಸ್ಯವಿರುವುದಿಲ್ಲ. ಇವೆರಡರಲ್ಲಿ ಒಂದನ್ನು ಪರಿಗ್ರಹಿಸುವುದು ಅವಶ್ಯವಾಗಿರುವಾಗ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂಬಲ್ಲಿ ಬ್ರಹ್ಮದ ನಿರ್ದೇಶವಿದೆಯೆಂದು ಒಪ್ಪಿಕೊಳ್ಳುವುದು ಯುಕ್ತವು ; ಏಕೆಂದರೆ ಇಲ್ಲಿ ಬ್ರಹ್ಮಶಬ್ದದ ಸಂಬಂಧವಿರುವುದೇ ವಿನಾ ಆನಂದಮಯವಾಕ್ಯದಲ್ಲಿ ಬ್ರಹ್ಮಶಬ್ದದ ಸಂಬಂಧವಿಲ್ಲ.

ಪುನಃ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿ ಉಪನಿಷತ್ತು ಹೀಗೆ ಮುಂದುವರಿಯುತ್ತದೆ. 'ಆ ವಿಷಯದಲ್ಲಿ ಈ ಶ್ಲೋಕವಿರುವುದು : "ಬ್ರಹ್ಮವು ಅಸತ್ ಎಂದು ತಿಳಿದುಕೊಂಡರೆ ಅವನು ಅಸತ್ ಆಗುತ್ತಾನೆ. ಬ್ರಹ್ಮವು ಇದೆ ಎಂದು ತಿಳಿದುಕೊಂಡರೆ ಅದರಿಂದ ಇವನನ್ನು ಸತ್ ಎಂದು ತಿಳಿಯುವರು".'[1] ಈ ಶ್ಲೋಕದಲ್ಲಿ ಆನಂದಮಯನನ್ನು ಸೂಚಿಸದೆ, 'ಬ್ರಹ್ಮವು ಇದೆ', 'ಬ್ರಹ್ಮವು ಇಲ್ಲ' ಎಂಬ ಜ್ಞಾನಗಳಿಂದ ಉಂಟಾಗುವ ಗುಣದೋಷಗಳನ್ನು ಹೇಳಿರುವುದರಿಂದ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂಬಲ್ಲಿ ಬ್ರಹ್ಮಕ್ಕೆ ಸ್ವಪ್ರಧಾನತ್ವವಿದೆ. ಆನಂದಮಯಾತ್ಮನು ಇರುವನೊ ಅಥವಾ ಇಲ್ಲವೊ ಎಂಬ ಸಂದೇಹವು ಸರಿಯಲ್ಲ ; ಏಕೆಂದರೆ ಪ್ರಿಯ, ಮೋದ ಇವೇ ಮೊದಲಾದ ವಿಶೇಷಣಗಳುಳ್ಳ ಆನಂದಮಯನು ಲೋಕಪ್ರಸಿದ್ಧನಾಗಿರುವನು.

**ವೃತ್ತಿಕಾರ**—ಹಾಗಾದರೆ ಸ್ವಪ್ರಧಾನವಾಗಿರುವ ಬ್ರಹ್ಮವನ್ನು 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಆನಂದಮಯನ ಪುಚ್ಛವಾಗಿ ಏಕೆ ಹೇಳಿದೆ ?

**ಸಿದ್ಧಾಂತಿ**—ಇದರಲ್ಲಿ ದೋಷವಿಲ್ಲ. ಬ್ರಹ್ಮಾನಂದವು ಪುಚ್ಛದಂತೆ ಇರುವುದರಿಂದ ಪುಚ್ಛವೆನಿಸಿದೆ ; ಎಂದರೆ ಅದು ಲೌಕಿಕವಾದ ಆನಂದಸಮೂಹಕ್ಕೆಲ್ಲ ಪ್ರತಿಷ್ಠೆಯೂ ಪರಾಯಣವೂ ಮತ್ತು ಏಕಾಶ್ರಯವೂ ಆಗಿದೆ ಎಂಬುದು ಇಲ್ಲಿ ವಿವಕ್ಷಿತವಾಗಿದೆಯೇ ಹೊರತು ಆನಂದಮಯನ ಅವಯವವಾಗಿ ಅಲ್ಲ[2] ಇದೇ ರೀತಿ ಇನ್ನೊಂದು ಶ್ರುತಿಯೂ (ಬೃ. ಉ. ೪. ೩. ೩೨) ಹೇಳುತ್ತದೆ : 'ಈ ಆನಂದದ ಒಂದು ಅಂಶವನ್ನೇ (ಅವಲಂಬಿಸಿ) ಇತರ ಪ್ರಾಣಿಗಳು ಜೀವಿಸುತ್ತವೆ.'[3]

ಇನ್ನು ಆನಂದಮಯನು ಬ್ರಹ್ಮವೆಂದು ಅರಿತುಕೊಳ್ಳಬೇಕಾದರೆ ಅವನನ್ನು

---

[1] ತದಪ್ಯೇಷ ಶ್ಲೋಕೋ ಭವತಿ । ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ವೇದ । ಸಂತಮೇನಂ ತತೋ ವಿದುರಿತಿ ।

[2] ಪುಚ್ಛವತ್ ಪುಚ್ಛಂ, ಪ್ರತಿಷ್ಠಾ ಪರಾಯಣಮ್ ಏಕನೀಡಂ ಲೌಕಿಕಸ್ಯ ಆನಂದಜಾತಸ್ಯ ಬ್ರಹ್ಮಾನಂದ ಇತ್ಯೇತದನೇನ ವಿವಕ್ಷ್ಯತೇ, ನಾವಯವತ್ವಮ್ ।

[3] ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ।

ಸವಿಶೇಷ-ಬ್ರಹ್ಮವೆಂದು ಗ್ರಹಿಸಬೇಕಾಗುವುದು ,[1] ಏಕೆಂದರೆ ಅವನಿಗೆ ಪ್ರಿಯವೇ ಮೊದಲಾದ ಅವಯವಗಳಿವೆ ಆದರೆ ವಾಕ್ಯಶೇಷದಲ್ಲಿ ನಿರ್ವಿಶೇಷ-ಬ್ರಹ್ಮವು ವಾಙ್ಮನಸ್ಸುಗಳಿಗೆ ಅಗೋಚರವೆಂದು ಹೇಳಿದೆ 'ಯಾವುದರಿಂದ ವಾಕ್ಕುಗಳು ಮನಸ್ಸಿನೊಂದಿಗೆ (ಅದನ್ನು) ಹೊಂದದೆ ಹಿಂತಿರುಗುವುವೊ ಆ ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ'[2] (ತೈ ಉ ೩ ೯) ಇದಲ್ಲದೆ ಆನಂದ-ಪ್ರಚುರವೆಂದರೆ ಸ್ವಲ್ಪ ದುಃಖವೂ ಇದೆಯೆಂದು ಅರ್ಥವಾಗುತ್ತದೆ, ಏಕೆಂದರೆ ಲೋಕದಲ್ಲಿ ಯಾವುದರ ಪ್ರಾಚುರ್ಯವಾಗಲಿ ಅದಕ್ಕ ವಿರುದ್ಧವಾದುದೂ ಸ್ವಲ್ಪ ಸೇರಿಕೊಂಡಿದೆ ಎಂದಾಗುತ್ತದೆ ಹೀಗೆ ಅರಿತುಕೊಂಡರೆ, 'ಎಲ್ಲಿ ಮತ್ತೊಂದನ್ನು ನೋಡುವುದಿಲ್ಲವೊ ಮತ್ತೊಂದನ್ನು ಕೇಳುವುದಿಲ್ಲವೊ ಮತ್ತೊಂದನ್ನು ಅರಿಯುವುದಿಲ್ಲವೊ ಅದು ಭೂಮವು'[3] (ಛಾಂ ಉ ೭ ೨೪ ೧) ಎಂಬಲ್ಲಿ ಭೂಮವೆಂಬ ಬ್ರಹ್ಮಕ್ಕಿಂತ ಬೇರೆಯಾದುದು ಯಾವುದೂ ಇಲ್ಲ ಎಂಬ ಶ್ರುತಿಗೆ ವಿರೋಧವಾಗುವುದು ಮತ್ತು ಪ್ರಿಯವೇ ಮೊದಲಾದುವು ಪ್ರತಿಶರೀರದಲ್ಲಿಯೂ ಬೇರೆ ಬೇರೆಯಾಗಿರುವುದರಿಂದ ಆನಂದಮಯನೂ ಬೇರೆಬೇರೆಯಾಗಿರುತ್ತಾನೆ [4] ಆದರೆ ಬ್ರಹ್ಮವು ಪ್ರತಿಶರೀರದಲ್ಲಿಯೂ ಬೇರೆಬೇರೆಯಾಗಿರುವುದಿಲ್ಲ **ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ** (ತೈ ಉ ೨ ೧) ಎಂಬುದು ಬ್ರಹ್ಮದ ಆನಂತ್ಯವನ್ನು ಸೂಚಿಸುತ್ತದ [5]

ಆನಂದಮಯಶಬ್ದದ ಪುನರಾವೃತ್ತಿ ಶ್ರುತಿಯಲ್ಲಿಲ್ಲ 'ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ ಯಾವನು ತಾನೇ ಪ್ರಾಣನಕ್ರಿಯೆಯನ್ನಾಗಲಿ ಅಪಾನಕ್ರಿಯೆಯನ್ನಾಗಲಿ ಮಾಡಿಯಾನು ?' (ತೈ ಉ ೨ ೭), 'ಆ ಇದು ಆನಂದದ ವಿಚಾರವಾಗಿರುತ್ತದೆ' (ತೈ ಉ ೨ ೮), 'ಆ ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ' (ತೈ ಉ ೨ ೯), 'ಆನಂದವು ಬ್ರಹ್ಮ ಎಂದು ತಿಳಿದುಕೊಂಡನು'[6] (ತೈ ಉ ೩ ೬)—ಹೀಗೆ ಎಲ್ಲ ಕಡೆಯಲ್ಲಿಯೂ ಪ್ರಾತಿಪದಿಕಾರ್ಥವನ್ನೇ (ಮಯಟ್ ಪ್ರತ್ಯಯವು ಸೇರದ ಆನಂದಶಬ್ದ) ಪುನಃಪುನಃ ಹೇಳಿದೆ ಆನಂದಮಯಶಬ್ದಕ್ಕೆ ಬ್ರಹ್ಮವೇ ಅರ್ಥವೆಂದು ನಿರ್ಧರಿಸಲ್ಪಟ್ಟಿದ್ದರೆ ಆಗ ಮುಂದೆ ಆನಂದಶಬ್ದದ ಪ್ರಯೋಗವಿರುವಲ್ಲಿಯೂ ಆನಂದಮಯಶಬ್ದದ ಪುನರಾವೃತ್ತಿಯೇ ಇದೆಯೆಂದು ಕಲ್ಪಿಸಬಹುದಾಗಿತ್ತು ಆದರೆ

---

1 ಅಪಿ ಚ ಆನಂದಮಯಸ್ಯ ಬ್ರಹ್ಮತ್ವೇ ಪ್ರಿಯಾದ್ಯವಯವತ್ತ್ವೇನ ಸವಿಶೇಷಂ ಬ್ರಹ್ಮಾಭ್ಯುಪಗಂತವ್ಯಮ್ (ಸೂ ಭಾ )

2 ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ ।

3 ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ ।

4 ಪ್ರತಿಶರೀರಂ ಚ ಪ್ರಿಯಾದಿಭೇದಾದಾನಂದಮಯಸ್ಯಾಪಿ ಭಿನ್ನತ್ವಮ್ (ಸೂ ಭಾ )

5 ಶ್ವೇ ಉ. ೬ ೧೧ ನೋಡಿ ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।

6 ಆನಂದೋ ಬ್ರಹ್ಮೇತಿ ವ್ಯಜಾನಾತ್ ।

'ಅವನಿಗೆ ಪ್ರಿಯವೇ ತಲೆ' (ತೈ ಉ ೨ ೫) ಎಂದು ಇವೇ ಮೊದಲಾದ ಅವಯವಗಳನ್ನು ಹೇಳಿರುವುದರಿಂದ ಆನಂದಮಯನು ಬ್ರಹ್ಮವಲ್ಲವೆಂದು ಹಿಂದೆಯೇ ತಿಳಿಸಿದೆ ಆದುದರಿಂದ 'ವಿಜ್ಞಾನವೂ ಆನಂದವೂ ಆದ ಬ್ರಹ್ಮವು'[1] (ಬೃ ಉ ೩ ೯ ೨೮) ಎಂಬ ಇನ್ನೊಂದು ಶ್ರುತಿಯಲ್ಲಿ ಆನಂದ-ಪ್ರಾತಿಪದಿಕವನ್ನು ಬ್ರಹ್ಮವೆಂಬ ಅರ್ಥದಲ್ಲಿ ಪ್ರಯೋಗಿಸಿರುವುದರಿಂದ 'ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ' (ತೈ ಉ ೨ ೭) ಇವೇ ಮೊದಲಾದ ವಾಕ್ಯಗಳಲ್ಲಿ ಆನಂದಶಬ್ದವು ಬ್ರಹ್ಮವನ್ನು ಸೂಚಿಸುತ್ತದೆಯೇ ಹೊರತು ಆನಂದ-ಮಯಶಬ್ದದ ಪುನರಾವೃತ್ತಿಯಲ್ಲವೆಂದು ಅರಿಯಬೇಕು ಆದರೆ 'ಈ ಆನಂದಮಯನೆಂಬ ಆತ್ಮನನ್ನು ಉಪಸಂಕ್ರಮಿಸುತ್ತಾನೆ'[2] (ತೈ ಉ ೨ ೮) ಎಂಬಲ್ಲಿ ಮಯಟ್-ಅಂತವೇ ಆಗಿರುವ ಆನಂದಮಯಶಬ್ದದ ಪುನರಾವೃತ್ತಿಯು ಬ್ರಹ್ಮವನ್ನು ಸೂಚಿಸುವುದಿಲ್ಲ, ಏಕೆಂದರೆ ವಿಕಾರಗುಣವುಳ್ಳವರೂ ಅನಾತ್ಮರೂ ಮತ್ತು ಉಪಸಂಕ್ರಮಿಸಬೇಕಾಗಿರುವವರೂ ಆದ ಅನ್ನಮಯಾದಿಗಳ ಪ್ರವಾಹದಲ್ಲಿ ಆನಂದಮಯನನ್ನು ಹೇಳಿರುತ್ತದೆ

**ವೃತ್ತಿಕಾರ**—ಉಪಸಂಕ್ರಮಿಸಬೇಕಾಗಿರುವ ಆನಂದಮಯನು ಅನ್ನಮಯಾದಿಗಳಂತೆ ಬ್ರಹ್ಮವಲ್ಲದಿದ್ದರೆ ಮುಂದಿನ ವಾಕ್ಯದಲ್ಲಿ ಜ್ಞಾನಿಗೆ ಬ್ರಹ್ಮಪ್ರಾಪ್ತಿಯು ಫಲವೆಂದು ನಿರ್ದೇಶಿಸುತ್ತಿರಲಿಲ್ಲ

**ಸಿದ್ಧಾಂತಿ**—ಇದು ದೋಷವಲ್ಲ, ಆನಂದಮಯನನ್ನು ಉಪಸಂಕ್ರಮಿಸಬೇಕೆಂಬ ನಿರ್ದೇಶದಿಂದಲೇ ಪುಚ್ಛವೂ ಪ್ರತಿಷ್ಠೆಯೂ ಆದ ಬ್ರಹ್ಮದ ಪ್ರಾಪ್ತಿಯೆಂಬ ಫಲವನ್ನೂ ನಿರ್ದೇಶಿಸಿದಂತಾಯಿತು ಇದನ್ನೇ 'ಆ ವಿಷಯದಲ್ಲಿ ಈ ಶ್ಲೋಕವಿರುವುದು ಯಾವುದರಿಂದ ವಾಕ್ಕುಗಳು ಮನಸ್ಸಿನೊಂದಿಗೆ (ಅದನ್ನು) ಹೊಂದದೆ ಹಿಂತಿರುಗುವುವೊ' (ತೈ ಉ ೨ ೯) ಇವೇ ಮೊದಲಾದ ವಾಕ್ಯಗಳು ವಿಸ್ತರಿಸಿವೆ ಆನಂದಮಯನ ಸಮೀಪದಲ್ಲಿರುವುದೆಂದು ವೃತ್ತಿಕಾರರಿಂದ ಹೇಳಲಾದ 'ನಾನು ಬಹುವಾಗುವೆನು, ಹುಟ್ಟುವೆನು—ಎಂದು ಆತ್ಮನು ಬಯಸಿದನು' ಎಂಬ ಶ್ರುತಿಯು (ತೈ ಉ. ೨ ೬) ನಿಜವಾಗಿ ಬ್ರಹ್ಮವು ಪುಚ್ಛ, ಪ್ರತಿಷ್ಠೆ ಎಂಬಲ್ಲಿ ಇನ್ನೂ ಸಮೀಪವಾಗಿರುವ ಬ್ರಹ್ಮಕ್ಕೆ ಸಂಬಂಧಿಸಿರುವುದರಿಂದ ಆನಂದ-ಮಯನು ಬ್ರಹ್ಮವಲ್ಲ ಮುಂದಿನ ವಾಕ್ಯವಾದ **ರಸೋ ವೈ ಸಃ** ಎಂಬುದೂ ಈ ಪ್ರಕರಣದಲ್ಲಿಯೇ ಇರುವುದರಿಂದ ಆನಂದಮಯನನ್ನು ಸೂಚಿಸುವುದಿಲ್ಲ

**ವೃತ್ತಿಕಾರ**—'ಅವನು ಬಯಸಿದನು' (ತೈ ಉ ೨ ೬) ಎಂಬಲ್ಲಿ ಪುಲ್ಲಿಂಗದಿಂದ ಬ್ರಹ್ಮವನ್ನು ನಿರ್ದೇಶಿಸಿರುವುದು ನಿಮ್ಮ ಸಿದ್ಧಾಂತದಲ್ಲಿ ಹೊಂದುವುದಿಲ್ಲವಲ್ಲ ?

**ಸಿದ್ಧಾಂತಿ**—ಇದರಲ್ಲಿ ದೋಷವಿಲ್ಲ 'ಆ ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು' (ತೈ ಉ ೨ ೧) ಎಂಬಲ್ಲಿಯೂ ಪುಲ್ಲಿಂಗವಾದ ಆತ್ಮಶಬ್ದದಿಂದ ಬ್ರಹ್ಮವನ್ನು ನಿರ್ದೇಶಿಸಿದೆ ಪುನಃ 'ಆನಂದವು ಬ್ರಹ್ಮ ಎಂದು ತಿಳಿದುಕೊಂಡನು' (ತೈ ಉ

---

1 ವಿಜ್ಞಾನಮಾನಂದಂ ಬ್ರಹ್ಮ ।

2 ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ ।

೩ ೬) ಎಂದು ಉದಾಹರಿಸಿರುವ ಭಾರ್ಗವೀ-ವಾರುಣೀ-ವಿದ್ಯೆಯಲ್ಲಿ ಮಯಟ್ ಪ್ರತ್ಯಯವನ್ನು ಹೇಳಿಲ್ಲದಿರುವುದರಿಂದಲೂ ಪ್ರಿಯಶಿರಸ್ಸು ಮೊದಲಾದುವುಗಳ ಅಶ್ರವಣದಿಂದಲೂ ಆನಂದವು ಬ್ರಹ್ಮವೆಂಬುದು ಯುಕ್ತವು

ಬ್ರಹ್ಮಕ್ಕೆ ಅಣುಮಾತ್ರವಾದರೂ ವಿಶೇಷಣವನ್ನು ಇಟ್ಟುಕೊಳ್ಳದಿದ್ದರೆ ಅದಕ್ಕೆ ಪ್ರಿಯಶಿರಸ್ಸು ಮೊದಲಾದ ಲಕ್ಷಣಗಳಿಂದ ಅದನ್ನು ವಿವರಿಸಲು ಆಗುತ್ತಿರಲಿಲ್ಲ ಬ್ರಹ್ಮವು ವಾಙ್ಮನಸ್ಸುಗಳಿಗೆ ವಿಷಯವಲ್ಲದುದರಿಂದ ಸವಿಶೇಷಬ್ರಹ್ಮವನ್ನು ಪ್ರತಿಪಾದಿಸುವುದು ಇಲ್ಲಿ ಶ್ರುತಿಯ ಉದ್ದೇಶವಲ್ಲ ಆದುದರಿಂದ ಆನಂದಮಯನಲ್ಲಿಯೂ ವಿಕಾರಾರ್ಥವನ್ನೇ ತೆಗೆದುಕೊಳ್ಳಬೇಕೇ ವಿನಾ ಪ್ರಾಚುರ್ಯಾರ್ಥವನ್ನಲ್ಲ

## ಭಾಷ್ಯಕಾರರ ಮತದಂತೆ ಸೂತ್ರಾರ್ಥಗಳು

ಆದುದರಿಂದ ಸೂತ್ರಗಳಿಗೆ ಹೀಗೆ ವ್ಯಾಖ್ಯಾನಮಾಡಬೇಕು 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' (ತೈ ಉ ೨ ೫) ಎಂಬಲ್ಲಿ ಬ್ರಹ್ಮವು ಆನಂದಮಯನ ಅವಯವವೇ ಅಥವಾ ಸ್ವಪ್ರಧಾನವಾಗಿ ವಿವಕ್ಷಿತವಾಗಿದೆಯೋ ಎಂಬುದು ಸಂಶಯ ಪುಚ್ಛ-ಶಬ್ದವಿರುವುದರಿಂದ ಅವಯವವೆಂದೇ ವಿವಕ್ಷಿತವಾಗಿದೆ ಎಂಬುದು ಪೂರ್ವಪಕ್ಷ ಇದಕ್ಕೆ **ಆನಂದಮಯೋಽಭ್ಯಾಸಾತ್** (೧ ೧ ೧೨) ಎಂಬ ಸೂತ್ರವೇ ಉತ್ತರ ಆನಂದಮಯನು ಆತ್ಮನು ಎಂಬಲ್ಲಿ 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಬ್ರಹ್ಮವನ್ನು ಸ್ವಪ್ರಧಾನವಾಗಿ ಉಪದೇಶಿಸಿದ, ಏಕೆಂದರೆ ಇಲ್ಲಿ ಬ್ರಹ್ಮಶಬ್ದದ ಪುನರಾವೃತ್ತಿಯಿದೆ 'ಬ್ರಹ್ಮವು ಅಸತ್ ಎಂದು ತಿಳಿದುಕೊಂಡರೆ ಅವನು ಅಸತ್ ಆಗುತ್ತಾನೆ' (ತೈ ಉ ೨ ೬) ಎಂಬ ನಿಗಮನ ಶ್ಲೋಕದಲ್ಲಿ ಬ್ರಹ್ಮವನ್ನೇ ಪುನಃ ಪುನಃ ಹೇಳಿದೆ

**ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್** (೧ ೧ ೧೩) ಎಂಬಲ್ಲಿ ವಿಕಾರ ಶಬ್ದಕ್ಕೆ ಅವಯವವೆಂಬ ಅರ್ಥವಿದೆ ಪುಚ್ಛವೆಂಬ ಅವಯವ-ಶಬ್ದವಿರುವುದರಿಂದ ಬ್ರಹ್ಮವು ಸ್ವಪ್ರಧಾನವಲ್ಲವೆಂಬ ಪೂರ್ವಪಕ್ಷಕ್ಕೆ ಪರಿಹಾರವನ್ನು ಹೀಗೆ ಹೇಳಿದೆ ಇದು ದೋಷವಲ್ಲ, ಏಕೆಂದರೆ ಪ್ರಾಚುರ್ಯದಿಂದಲೂ ಅವಯವಶಬ್ದವು ಹೊಂದುತ್ತದೆ ಇಲ್ಲಿ ಪ್ರಾಚುರ್ಯವೆಂದರೆ ಅವಯವಗಳನ್ನು ಸೂಚಿಸುವ ಶಬ್ದಗಳಿಂದ ಪ್ರಚುರವಾಗಿರುವ ಪದವಿನ್ಯಾಸ, ಅವಯವ ಪ್ರಚುರವಾದ ವಚನ ಎಂದರ್ಥ [1] ಅನ್ನಮಯಾದಿಗಳಿಗೆ ಶಿರಸ್ಸಿನಿಂದ ಪ್ರಾರಂಭಿಸಿ ಪುಚ್ಛದವರೆಗೆ ಅವಯವಗಳನ್ನು ಹೇಳಿದ ಮೇಲೆ ಆನಂದಮಯನಿಗೂ ಶಿರಸ್ಸು ಮೊದಲಾದ ಅವಯವಗಳನ್ನು ಹೇಳಿ, ಇನ್ನೂ ಹೆಚ್ಚಾಗಿ ಅವಯವಗಳನ್ನು ಹೇಳಲು 'ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ' ಎಂದು ಹೇಳಿದೆಯೇ ವಿನಾ ಅವಯವವನ್ನೇ ವಿವಕ್ಷಿಸಲು ಹೇಳಿಲ್ಲ, ಏಕೆಂದರೆ **ಅಭ್ಯಾಸಾತ್** ಎಂದು ಬ್ರಹ್ಮಕ್ಕೆ ಸ್ವಪ್ರಧಾನತ್ವವನ್ನು ಹಿಂದಿನ ಸೂತ್ರದಲ್ಲಿಯೇ ಸಮರ್ಥಿಸಿದೆ

---

[1] ಪ್ರಾಚುರ್ಯಂ ಪ್ರಾಯಾಪತ್ತಿಃ, ಅವಯವಪ್ರಾಯೇ ವಚನಮಿತ್ಯರ್ಥಃ (ಸೂ ಭಾ ).

**ತದ್ಧೇತುವ್ಯಪದೇಶಾಚ್ಚ** (೧ ೧ ೧೪) 'ಇದೆಲ್ಲವನ್ನು—ಏನೇನಿದೆಯೊ—ಸೃಷ್ಟಿಸಿದನು' (ತೈ ಉ ೨ ೬) ಎಂಬ ಶ್ರುತಿಯಲ್ಲಿ ಬ್ರಹ್ಮವು ಆನಂದಮಯನೂ ಕೂಡಿರುವ ಕಾರ್ಯಸಮೂಹಕ್ಕೆಲ್ಲ ಕಾರಣವೆಂದು ಹೇಳಿದೆ ಕಾರಣವಾಗಿರುವ ಬ್ರಹ್ಮವು ತನ್ನ ಕಾರ್ಯವಾಗಿರುವ ಆನಂದಮಯನಿಗೆ ಅವಯವವೆಂಬುದು ಮುಖ್ಯಾರ್ಥದಿಂದ ಹೊಂದುವುದಿಲ್ಲ

ಉಳಿದ ಸೂತ್ರಗಳೂ ೧೫ರಿಂದ ೧೯ರ ವರೆಗೆ ಪುಚ್ಛವಾಕ್ಯದಲ್ಲಿ ನಿರ್ದಿಷ್ಟವಾದ ಬ್ರಹ್ಮವನ್ನೇ ಸ್ವಪ್ರಧಾನವಾಗಿ ಪ್ರತಿಪಾದಿಸುತ್ತವೆಯೆಂದು ಯಥಾಸಂಭವವಾಗಿ ತಿಳಿಯಬೇಕು [1]

**ವಿ.**—'ಆನಂದಮಯನಲ್ಲಿ ಜೀವಾತ್ಮನಿಗೆ ಆನಂದಯೋಗವನ್ನು ಶಾಸ್ತ್ರವು ಹೇಳಿರುತ್ತದೆ' ಎಂಬುದು ಸೂತ್ರಾರ್ಥ [2]

'ಅವನು ರಸವಾಗಿರುವನು ಜೀವನು ರಸರೂಪಿಯಾದ ಬ್ರಹ್ಮನನ್ನು ಹೊಂದಿ ಆನಂದಿಯಾಗುವನು' (ತೈ ಉ ೨ ೭) ಎಂಬ ವಾಕ್ಯವು ರಸ-ಶಬ್ದದಿಂದ ಕರೆಯಲ್ಪಟ್ಟ ಆನಂದಮಯನಲ್ಲಿ ಜೀವನು ಆನಂದವನ್ನು ಪಡೆಯುತ್ತಾನೆ ಎಂದು ಹೇಳುತ್ತದೆ, ಜೀವನು ಯಾವುದನ್ನು ಪಡೆದು ಆನಂದಿಯಾಗುತ್ತಾನೆಯೊ ಅದರೊಂದಿಗೆ ಐಕ್ಯನಾಗಿರುವನೆಂಬುದು ಸರಿಯಲ್ಲ [3] ಹೀಗೆ ಆನಂದಮಯನೇ ಪರಬ್ರಹ್ಮನೆಂದು ನಿಶ್ಚಿತವಾಗಿರುವುದರಿಂದ **ಯದೇಷ**

---

[1] ೧ ೧ ೧೫ ಯಾವುದು ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ ಎಂದು ಮಂತ್ರವರ್ಣದಿಂದ ಪ್ರತಿಪಾದಿಸಲ್ಪಟ್ಟಿದೆಯೊ ಅದೇ ಬ್ರಹ್ಮ ಪುಚ್ಛಂ ಎಂದು ಬ್ರಾಹ್ಮಣವಾಕ್ಯದಲ್ಲಿಯೂ ಸ್ವಪ್ರಧಾನತ್ವದಿಂದ ಹೇಳಲ್ಪಟ್ಟಿದೆ, ಏಕೆಂದರೆ ಮಂತ್ರಕ್ಕೂ ಬ್ರಾಹ್ಮಣಕ್ಕೂ ಏಕಾರ್ಥವಿದೆ

೧ ೧ ೧೬ ಇಲ್ಲಿ ಆನಂದಮಯನೆಂಬ ಜೀವನನ್ನು ಪ್ರತಿಪಾದಿಸಿಲ್ಲ, ಏಕೆಂದರೆ ಜಗತ್ತಿನ ಸೃಷ್ಟಿಯೇ ಮೊದಲಾದುವು ಆನಂದಮಯನಿಗೆ ಹೊಂದುವುದಿಲ್ಲ

೧ ೧ ೧೭ ರಸಂ ಹ್ಯೇವಾಯಂ ಲಬ್ಧ್ವಾಽಽನಂದೀ ಭವತಿ ಎಂಬಲ್ಲಿ ಆನಂದಮಯನೆಂಬ ಜೀವನು ಬ್ರಹ್ಮರಸವನ್ನು ಪಡೆದು ಆನಂದಿಯಾಗುತ್ತಾನೆ ಎಂದು ಭೇದವನ್ನು ಹೇಳಿರುವುದರಿಂದ ಅವನನ್ನು ಇಲ್ಲಿ ಪ್ರತಿಪಾದಿಸಿಲ್ಲ, ಏಕೆಂದರೆ ಪಡೆಯುವವನು ಪಡೆಯಲ್ಪಡತಕ್ಕವನಾಗುವುದಿಲ್ಲ

೧ ೧ ೧೮ ಕಾಮವೆಂದರೆ ಆನಂದ. ಭೃಗುವಲ್ಲಿಯಲ್ಲಿ ಆನಂದೋ ಬ್ರಹ್ಮೇತಿ ವ್ಯಜಾನಾತ್ ಎಂದು ಹೇಳಿರುವುದರಿಂದ ಆನಂದಮಯನೂ ಕೂಡ ಬ್ರಹ್ಮವೆಂದು ಅನುಮಾನಿಸಕೂಡದು, ಏಕೆಂದರೆ ಇಲ್ಲಿ ಮಯಟ್-ಪ್ರತ್ಯಯಕ್ಕೆ ವಿಕಾರಾರ್ಥವಾಗಿರುತ್ತದೆ

೧ ೧ ೧೯ ಆನಂದಮಯನೆಂಬ ಪ್ರಬುದ್ಧನಾದ ಜೀವನಿಗೆ ಪುಚ್ಛವಾಕ್ಯದಲ್ಲಿ ಹೇಳಲ್ಪಟ್ಟ ಬ್ರಹ್ಮದಲ್ಲಿ ಯದಾ ಹ್ಯೇವೈಷ ಪ್ರತಿಷ್ಠಾಂ ವಿಂದತೇ (ತೈ ಉ ೨ ೭) ಎಂದು ಶ್ರುತಿಯು ಐಕ್ಯವನ್ನು ಹೇಳಿರುವುದರಿಂದ ಈ ವಾಕ್ಯದಲ್ಲಿ ಪುಚ್ಛಬ್ರಹ್ಮವನ್ನೇ ಸ್ವಪ್ರಧಾನವಾಗಿ ಹೇಳಿರುತ್ತದೆಯೇ ಹೊರತು ಆನಂದಮಯನನ್ನು ಹೇಳಿಲ್ಲ

[2] ಅಸ್ಮಿನ್ ಆನಂದಮಯೇ, ಅಸ್ಯ ಜೀವಸ್ಯ, ತದ್ಯೋಗಮ್ ಆನಂದಯೋಗಂ ಶಾಸ್ತಿ ಶಾಸ್ತ್ರಮ್ (ಶ್ರೀಭಾಷ್ಯ)

[3] ಯಲ್ಲಾಭಾದ್ ಯ ಆನಂದೀ ಭವತಿ, ಸ ಸ ಏವೇತಿ ಅನುನ್ಮತ್ತಃ ಕೋ ಬ್ರವೀತಿ ಇತ್ಯರ್ಥಃ (ಶ್ರೀಭಾಷ್ಯ)

**ಆಕಾಶ ಆನಂದಃ** (ತೈ. ಉ. ೨. ೭), **ವಿಜ್ಞಾನಮಾನಂದಂ ಬ್ರಹ್ಮ** (ಬೃ. ಉ. ೩. ೯. ೨೮) ಇವೇ ಮೊದಲಾದ ಶ್ರುತಿವಾಕ್ಯಗಳಲ್ಲಿ ಆನಂದ-ಶಬ್ದವು ಆನಂದಮಯನನ್ನೇ ಸೂಚಿಸುತ್ತದೆ. ಆದುದರಿಂದ ಪ್ರಧಾನಕ್ಕಿಂತ ಭಿನ್ನನಾದ ಪರಬ್ರಹ್ಮನು ಜೀವನಿಗಿಂತಲೂ ಭಿನ್ನನೆಂದು ಈ ಅಧಿಕರಣದಲ್ಲಿ ಸಿದ್ಧವಾಗಿದೆ.

**ದ್ವೈ.**—'ಈ ಪ್ರಕರಣದಲ್ಲಿ ಜೀವನಿಗೆ ಆನಂದಮಯಾದಿ-ಶಬ್ದವಾಚ್ಯನಾದ ಬ್ರಹ್ಮನೊಂದಿಗೆ ಮುಕ್ತಿಯಲ್ಲಿಯೂ ಸಂಬಂಧವನ್ನು ಹೇಳಿರುವುದರಿಂದ ಆನಂದ-ಮಯಾದಿ-ಶಬ್ದವಾಚ್ಯನು ಬ್ರಹ್ಮನಲ್ಲ' ಎಂಬುದು ಸೂತ್ರಾರ್ಥ.

'ಅವನು ಸರ್ವಜ್ಞನಾದ ಬ್ರಹ್ಮನೊಂದಿಗೆ ನೇರಿಕೊಂಡು ಸಮಸ್ತಭೋಗವನ್ನೂ ಅನುಭವಿಸುತ್ತಾನೆ' **ಸಹ ಬ್ರಹ್ಮಣಾ ವಿಪಶ್ಚಿತಾ** (ತೈ. ಉ. ೨. ೧) ಎಂದು ಶ್ರುತಿಯು ಹೇಳುತ್ತದೆ. ಅಥವಾ **ಸ ಯ ಏವಂವಿತ್** (ತೈ. ಉ. ೩. ೧೦) ಎಂದು ಹೇಳಲ್ಪಟ್ಟ ಬ್ರಹ್ಮಜ್ಞಾನಿಗೆ ಅನ್ನಮಯವೇ ಮೊದಲಾದ ಬ್ರಹ್ಮರೂಪಗಳಿಂದ ಅನ್ನಮಯಾದಿಗಳ ಪ್ರಾಪ್ತಿಯನ್ನು ಬ್ರಹ್ಮವಲ್ಲಿಯಲ್ಲಿಯೂ ಭೃಗುವಲ್ಲಿಯಲ್ಲಿಯೂ ಶ್ರುತಿಯು ಹೇಳಿರುವುದರಿಂದ ಅನ್ನಮಯಾದಿ-ಶಬ್ದವಾಚ್ಯಗಳು ಕೋಶಗಳೆಂಬುದು ಅತಿ ಸಾಹಸವು.[1] ಬ್ರಹ್ಮವಿದ್ಯೆಯಿಂದ ಶರೀರಾದಿಕೋಶ-ಪ್ರಾಪ್ತಿಯು ಹೊಂದುವುದಿಲ್ಲವಾದುದರಿಂದ ಅನ್ನಮಯಾದಿ-ಶಬ್ದವಾಚ್ಯನು ಬ್ರಹ್ಮನೇ.

---

[1] ಯೋಗಮನ್ನಮಯಾದ್ಯೈರ್ಯತ್ಫಲತ್ವೇನಾಸ್ಯ ಶಂಸತಿ ।
ಸ್ಥಾನದ್ವಯೇಽಪ್ಯತಃ ಕೋಶಾ ಏತ ಇತ್ಯತಿಸಾಹಸಮ್ ॥ (ಅನುವ್ಯಾಖ್ಯಾನ)

## ೭. ಅಂತರಧಿಕರಣ

(ಸೂ ೨೦–೨೧)

### ಅಂತಸ್ತದ್ಧರ್ಮೋಪದೇಶಾತ್ ॥ ೨೦ ॥

೨೦ (ಆದಿತ್ಯನ ಮತ್ತು ಚಕ್ಷುಸ್ಸಿನ) ಒಳಗೆ ಇರುವವನು (ಪರಮೇಶ್ವರನೇ), ಏಕೆಂದರೆ ಅವನ ಗುಣಗಳನ್ನು (ಇಲ್ಲಿ) ಉಪದೇಶಿಸಿದೆ

ಶ್ರುತಿಗಳು ಹೀಗೆ ಹೇಳುತ್ತವೆ 'ಇನ್ನು ಆದಿತ್ಯಮಂಡಲದಲ್ಲಿ ಕಾಣುತ್ತಿರುವ ಜ್ಯೋತಿರ್ಮಯನಾದ ಈ ಪುರುಷನು ಜ್ಯೋತಿರ್ಮಯವಾದ ದಾಡಿಯುಳ್ಳವನು, ಕೇಶವುಳ್ಳವನು ಮತ್ತು ಉಗುರಿನ ವರೆಗೂ ಎಲ್ಲವೂ ಜ್ಯೋತಿರ್ಮಯನೇ ಆಗಿರುತ್ತಾನೆ ಅವನಿಗೆ ಕೆಂದಾವರೆಯಂತೆ ಕೆಂಪಗಿರುವ ಕಣ್ಣುಗಳಿರುವುವು ಅವನಿಗೆ ಉತ್ ಎಂದು ಹೆಸರು ಆ ಇವನು ಸಮಸ್ತ ಪಾಪಗಳನ್ನು ಬಿಟ್ಟು ಎದ್ದಿರುತ್ತಾನೆ ಯಾವನು ಹೀಗೆ ಅರಿತುಕೊಂಡಿರುವನೋ ಅವನು ಸಮಸ್ತ ಪಾಪಗಳನ್ನೂ ಬಿಟ್ಟು ಎದ್ದೇಳುತ್ತಾನೆ ಇದು ಆಧಿದೈವತ' (ಛಾಂ ಉ ೧ ೬ ೬ ೮) 'ಇನ್ನು ಅಧ್ಯಾತ್ಮೋಪಾಸನೆ ಇನ್ನು ಕಣ್ಣಿನಲ್ಲಿ ಕಾಣುತ್ತಿರುವ ಪುರುಷನೇ ಋಕ್ಕು '[1] (ಛಾಂ ಉ ೧ ೭ ೧ ಮತ್ತು ೫) ಇಲ್ಲಿ ಸಂಶಯವು ಹೀಗೆ ಒದಗುತ್ತದೆ ಉಪಾಸನೆ ಮತ್ತು ಕರ್ಮ ಇವುಗಳ ಅತಿಶಯದಿಂದ ಉತ್ಕರ್ಷವನ್ನು ಪಡೆದಿರುವ ಯಾವನೋ ಒಬ್ಬ ಸಂಸಾರಿಯನ್ನು ಸೂರ್ಯಮಂಡಲದಲ್ಲಿಯೂ ಚಕ್ಷುಸ್ಸಿನಲ್ಲಿಯೂ ಉಪಾಸ್ಯನೆಂದು ಶ್ರುತಿಯು ಹೇಳುತ್ತದೆಯೊ ಅಥವಾ ನಿತ್ಯಸಿದ್ಧನಾದ ಪರಮೇಶ್ವರನನ್ನು ಹೇಳುತ್ತದೆಯೊ ?

**ಪೂರ್ವಪಕ್ಷಿ**—ಸಂಸಾರಿಯನ್ನೇ ಹೇಳಿದೆ, ಏಕೆಂದರೆ ಇವನಿಗೆ ರೂಪವಿದೆಯೆಂದು ಶ್ರುತಿಯು ಹೇಳುತ್ತದೆ ಆದಿತ್ಯನಲ್ಲಿರುವ ಪುರುಷನಿಗೆ 'ಜ್ಯೋತಿರ್ಮಯವಾದ ದಾಡಿಯುಳ್ಳವನು' ಎಂಬ ರೂಪವನ್ನು ಹೇಳಿ, ಚಕ್ಷುಸ್ಸಿನಲ್ಲಿರುವ ಪುರುಷನಿಗೂ 'ಅವನ ರೂಪವೇ ಇವನ ರೂಪ,[2] (ಛಾಂ ಉ ೧ ೭ ೫) ಎಂದು ಅದನ್ನೇ ಅತಿದೇಶದಿಂದ[3] ಅನ್ವಯಿಸಿದೆ ಆದರೆ ಪರಮೇಶ್ವರನಿಗೆ ರೂಪವನ್ನು ಹೇಳುವುದು ಯುಕ್ತವಲ್ಲ, ಏಕಂದರೆ ಶ್ರುತಿಯು

---

[1] ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ ಸರ್ವ ಏವ ಸುವರ್ಣಃ । ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ । ಇತ್ಯಧಿದೈವತಮ್ । ಅಥಾಧ್ಯಾತ್ಮಮ್ ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ ॥

[2] ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಮ್ ।

[3] ಒಂದು ಕಡೆ ಹೇಳಿದ್ದನ್ನು ಇನ್ನೊಂದು ಕಡೆ ಸಂಬಂಧಿಸುವುದೇ ಅತಿದೇಶ.

'ಯಾವುದು ಶಬ್ದ ಸ್ಪರ್ಶ ರೂಪ ರಸ ಗಂಧ ಇವುಗಳಿಲ್ಲದುದೊ'[1] (ಕ ಉ ೧ ೩ ೧೫) ಎಂದು ಹೇಳುತ್ತದೆ ಇದಲ್ಲದೆ ಶ್ರುತಿಯು 'ಯಾವನು ಆದಿತ್ಯನಲ್ಲಿರುವನೊ', 'ಯಾವನು ಚಕ್ಷುಸ್ಸಿನಲ್ಲಿರುವನೊ' ಎಂದು ಆಧಾರವನ್ನು ಹೇಳುತ್ತದೆ ಆದರೆ ಯಾವ ಆಧಾರವೂ ಇಲ್ಲದ ತನ್ನ ಮಹಿಮೆಯಲ್ಲಿಯೇ ಪ್ರತಿಷ್ಠಿತನೂ ಸರ್ವವ್ಯಾಪಿಯೂ ಆದ ಪರಮೇಶ್ವರನಿಗೆ ಆಧಾರವನ್ನು ಹೇಳಲಾಗುವುದಿಲ್ಲ 'ಭಗವಂತನೆ, ಅವನು ಯಾವುದರಲ್ಲಿ ಪ್ರತಿಷ್ಠಿತನಾಗಿರುವನು ? ತನ್ನ ಮಹಿಮೆಯಲ್ಲಿ'[2] (ಛಾಂ ಉ ೭ ೨೪ ೧) ಎಂದು ಶ್ರುತಿಯು ಹೇಳುತ್ತದೆ ಇದಲ್ಲದೆ ಶ್ರುತಿಯು 'ಆ ಇವನು ಆದಿತ್ಯಮಂಡಲದ ಪರವರ್ತಿಯಾದ ಸಮಸ್ತ ಲೋಕಗಳನ್ನೂ ದೇವತೆಗಳ ಬಯಕೆಗಳನ್ನೂ ನಿಯಂತ್ರಿಸುತ್ತಾನೆ'[3] (ಛಾಂ ಉ ೧ ೬ ೮) ಎಂದು ಆದಿತ್ಯಪುರುಷನಿಗೂ, 'ಆ ಇವನು (ಎಂದರೆ ಅಕ್ಷಿ-ಪುರುಷನು) ಕೆಳಗೆ ಪ್ರಸಾರಿತವಾಗಿರುವ ಲೋಕಗಳನ್ನೂ ಮನುಷ್ಯಕಾಮಗಳನ್ನೂ ಆಳುತ್ತಾನೆ'[4] (ಛಾಂ ಉ ೧ ೭ ೬) ಎಂದು ಅಕ್ಷಿಪುರುಷನಿಗೂ ಅವಧಿಯುಳ್ಳ ಐಶ್ವರ್ಯವನ್ನು ಹೇಳುತ್ತದೆ ಆದರೆ ಪರಮೇಶ್ವರನಿಗೆ ಅವಧಿಯುಳ್ಳ ಐಶ್ವರ್ಯವನ್ನು ಹೇಳುವುದು ಸರಿಯಲ್ಲ, ಏಕೆಂದರೆ 'ಇವನು ಸರ್ವೇಶ್ವರನು, ಸರ್ವಪ್ರಾಣಿಗಳ ಅಧಿಪತಿಯು, ಸರ್ವಪ್ರಾಣಿಗಳ ಪಾಲಕನು ಈ ಲೋಕಗಳು ಪರಸ್ಪರ ಮಿಶ್ರಣವಾಗದಿರುವುದಕ್ಕೆ ಇವನು ವಿಧಾರಕವಾದ ಸೇತು'[5] (ಬೃ ಉ ೪ ೪ ೨೨) ಎಂದು ಶ್ರುತಿಯು ಪರಮೇಶ್ವರನಿಗೆ ಯಾವ ಅವಧಿಯನ್ನೂ ಹೇಳುವುದಿಲ್ಲ ಆದುದರಿಂದ ಚಕ್ಷುಸ್ಸು ಮತ್ತು ಆದಿತ್ಯ ಇವರ ಒಳಗಿರುವವನು ಪರಮೇಶ್ವರನಲ್ಲ

ಸಿದ್ಧಾಂತಿ—'ಯಾವನು ಆದಿತ್ಯನಲ್ಲಿರುವನೊ', 'ಯಾವನು ಚಕ್ಷುಸ್ಸಿನಲ್ಲಿರುವನೊ' ಎಂದು ಹೇಳಲ್ಪಟ್ಟಿರುವವನು ಪರಮೇಶ್ವರನೇ ಹೊರತು ಸಂಸಾರಿಯಲ್ಲ, ಏಕೆಂದರೆ ಇಲ್ಲಿ ಅವನ ಗುಣಗಳನ್ನು ಉಪದೇಶಿಸಿದೆ 'ಅವನಿಗೆ ಉತ್ ಎಂದು ಹೆಸರು' ಎಂದು ಹೇಳಿ, ಆ ಆದಿತ್ಯಪುರುಷನ ಹೆಸರನ್ನು ಅವನ ಸರ್ವಪಾಪರಹಿತತ್ವದ ಮೂಲಕ ಹೀಗೆ ನಿರ್ವಚನ ಮಾಡಿದೆ 'ಆ ಇವನು ಸಮಸ್ತಪಾಪಗಳನ್ನು ಬಿಟ್ಟು ಎದ್ದಿರುತ್ತಾನೆ' ನಿರ್ವಚನದಿಂದ ಬಂದ ಅದೇ ಹೆಸರನ್ನೇ ಅಕ್ಷಿಪುರುಷನಿಗೂ ಅತಿದೇಶದಿಂದ ಹೇಳಿದೆ 'ಅವನ ಹೆಸರೇ ಇವನ ಹೆಸರು'[6] ಸರ್ವಪಾಪರಾಹಿತ್ಯವು ಪರಮಾತ್ಮನಿಗೇ ಸಾಧ್ಯವೆಂದು ಶ್ರುತಿಯು ಹೇಳುತ್ತದೆ

---

1 ಅಶಬ್ದಮಸ್ಪರ್ಶಮರೂಪಮವ್ಯಯಮ್ ।

2 ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ।

3 ಸ ಏಷ ಯೇ ಚಾಮುಷ್ಮಾತ್ ಪರಾಂಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚ ।

4 ಸ ಏಷ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯ-ಕಾಮಾನಾಂ ಚ ।

5 ಏಷ ಸರ್ವೇಶ್ವರಃ, ಏಷ ಭೂತಾಧಿಪತಿಃ, ಏಷ ಭೂತಪಾಲಃ, ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ।

6 ಯನ್ನಾಮ ತನ್ನಾಮ ।

'ಯಾವ ಆತ್ಮನು ಪಾಪರಹಿತನೊ'[1] (ಛಾಂ. ಉ. ೮. ೭. ೧).

ಇದೇ ರೀತಿ ಅಕ್ಷಿಪುರುಷನ (ಎಂದರೆ ಕಣ್ಣಿನಲ್ಲಿರುವ ಪುರುಷನ) ವಿಷಯದಲ್ಲಿಯೂ ಅವನು ಋಕ್-ಸಾಮಾದಿಗಳ ಆತ್ಮನೆಂದು ನಿರ್ಧರಿಸಿದೆ: 'ಇನ್ನು ಕಣ್ಣಿನಲ್ಲಿ ಕಾಣುತ್ತಿರುವ ಪುರುಷನೇ ಋಕ್, ಸಾಮವು, ಉಕ್ಥ, ಯಜುಸ್ಸು ಮತ್ತು ವೇದಗಳು'[2] (ಛಾಂ. ಉ. ೧. ೭. ೫). ಇದು ಪರಮೇಶ್ವರನಿಗೆ ಹೊಂದುತ್ತದೆ; ಏಕೆಂದರೆ ಅವನು ಸರ್ವಕಾರಣನಾಗಿರುವುದರಿಂದ ಸರ್ವಾತ್ಮಕತ್ವವು ಒಪ್ಪುತ್ತದೆ. ಋಕ್ಸಾಮಗಳಿಗೆ ಅಧಿದೈವತವಾಗಿ ಪೃಥ್ವಿ ಅಗ್ನಿ ಮೊದಲಾದುವು ಆತ್ಮವೆಂದೂ, ಅಧ್ಯಾತ್ಮವಾಗಿ ವಾಕ್ ಪ್ರಾಣ ಮೊದಲಾದುವು ಆತ್ಮವೆಂದೂ ಶ್ರುತಿಯು ಅನುಕ್ರಮವಾಗಿ ಹೇಳುತ್ತದೆ 'ಋಕ್ಸಾಮಗಳು ಅವನ ಎರಡು ಗೇಷ್ಣಗಳು'[3] (ಛಾಂ. ಉ. ೧. ೬. ೭), 'ಅವನ ಗೇಷ್ಣಗಳೇ ಇವನ ಗೇಷ್ಣಗಳು'[4] (ಛಾಂ. ಉ ೧ ೭. ೫). ಇದು ಸರ್ವಾತ್ಮನಾದ ಪರಮೇಶ್ವರನಿಗೆ ಮಾತ್ರ ಹೊಂದುತ್ತದೆ. ಲೌಕಿಕ-ಸಂಗೀತದಲ್ಲಿಯೂ ಕೂಡ ಪರಮೇಶ್ವರನನ್ನೇ ಗಾನಮಾಡಿದೆಯೆಂದು ಶ್ರುತಿಯು ತಿಳಿಸುತ್ತದೆ: 'ಆದುದರಿಂದ ವೀಣಾಗಾಯಕರು ಇವನನ್ನೇ ಹಾಡುತ್ತಾರೆ; ಆದುದರಿಂದ ಅವರು ಧನವಂತರಾಗುತ್ತಾರೆ'[5] (ಛಾಂ. ಉ. ೧. ೭. ೬). ಇಲ್ಲಿಯೂ ಕೂಡ ಪರಮೇಶ್ವರನನ್ನೇ ಗ್ರಹಿಸಿದರೆ ಹೊಂದುತ್ತದೆ; ಏಕೆಂದರೆ 'ಯಾವ ಯಾವ ವಸ್ತುವು ವಿಭೂತಿಯುಳ್ಳದ್ದೊ ಶ್ರೀಯುಕ್ತವೊ ಅಥವಾ ಉತ್ಸಾಹದಿಂದ ಕೂಡಿದೆಯೊ ಅದೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದ ಉಂಟಾದುದೆಂದು ತಿಳಿದುಕೊ'[6] ಎಂದು ಗೀತೆಯಲ್ಲಿ (೧೦.೪೧) ಹೇಳಿದೆ. ಇದಲ್ಲದೆ ಲೋಕಗಳಿಗೂ ಕಾಮಗಳಿಗೂ ಅವನು ನಿರಂಕುಶವಾಗಿ ಈಶ್ವರನಾಗಿರುವನೆಂದು ಹೇಳಿರುವುದು ಪರಮೇಶ್ವರನನ್ನೇ ಸೂಚಿಸುತ್ತದೆ.

ಶ್ರುತಿಯಲ್ಲಿ ಹೇಳಿರುವ ಜ್ಯೋತಿರ್ಮಯವಾದ ದಾಡಿ ಮೊದಲಾದ ರೂಪವು ಪರಮೇಶ್ವರನಿಗೆ ಹೊಂದುವುದಿಲ್ಲವೆಂಬ ಪೂರ್ವಪಕ್ಷಕ್ಕೆ ಇದು ಉತ್ತರ: ಪರಮೇಶ್ವರನು ಇಚ್ಛಾವಶದಿಂದ ಮಾಯಾಮಯವಾದ ರೂಪವನ್ನು ಸಾಧಕರ ಅನುಗ್ರಹಕ್ಕಾಗಿ ಧರಿಸಬಹುದು.[7] ಸ್ಮೃತಿಯು ಹೀಗೆ ಹೇಳುತ್ತದೆ: 'ಎಲೈ ನಾರದ, ನೀನು ನಿನ್ನ ಮುಂದೆ ನೋಡುತ್ತಿರುವುದು ನನ್ನಿಂದ ಸೃಷ್ಟಿಸಲ್ಪಟ್ಟ ಮಾಯೆ. ನಾನು ಪ್ರಾಣಿಗಳ ಗುಣಗಳಿಂದ ಕೂಡಿರುವೆ

---

[1] ಯ ಆತ್ಮಾಽಪಹತಪಾಪ್ಮಾ ।

[2] ಸೈವರ್ಕ್ ತತ್ಸಾಮ ತದುಕ್ಥಂ ತದ್ಯಜುಸ್ ತದ್ಬ್ರಹ್ಮ ।

[3] ತಸ್ಯರ್ಕ್ ಚ ಸಾಮ ಚ ಗೇಷ್ಣೌ ।

[4] ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ।

[5] ತದ್ಯ ಇಮೇ ವೀಣಾಯಾಂ ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ ।

[6] ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥

[7] ಸ್ಯಾತ್ ಪರಮೇಶ್ವರಸ್ಯಾಪಿ ಇಚ್ಛಾವಶಾತ್ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್ (ಸೂ. ಭಾ.).

ನೆಂದು ತಿಳಿಯಬೇಡ'.[1] ಆದರೆ ಎಲ್ಲಿ ಸರ್ವವಿಶೇಷರಹಿತನಾದ ಪರಮೇಶ್ವರನ ರೂಪವನ್ನು ಹೇಳಿರುತ್ತದೆಯೊ ಅಲ್ಲಿ 'ಯಾವುದು ಶಬ್ದ ಸ್ಪರ್ಶ ರೂಪ ರಸ ಗಂಧ ಇವುಗಳಿಲ್ಲದುದೊ' [2] (ಕ. ಉ. ೧. ೩. ೧೫) ಎಂಬುದು ಶಾಸ್ತ್ರವು. ಆದರೆ ಪರಮೇಶ್ವರನು ಸರ್ವಕಾರಣ ನಾಗಿರುವುದರಿಂದ ತನ್ನದೇ ಆದ ಕೆಲವು ಕಾರ್ಯಗುಣಗಳಿಂದ ವಿಶಿಷ್ಟನಾದ ಅವನನ್ನು ಉಪಾಸ್ಯನನ್ನಾಗಿ ಶ್ರುತಿಯು ಹೀಗೆ ತಿಳಿಸುತ್ತದೆ: 'ಅವನು ಸರ್ವಕರ್ಮನು, ಸರ್ವ ಕಾಮನು, ಸರ್ವಗಂಧನು, ಸರ್ವರಸನು'[3] (ಛಾಂ. ಉ. ೩. ೧೪. ೨). ಇದೇ ರೀತಿ ಜ್ಯೋತಿರ್ಮಯವಾದ ದಾಡಿಮೊದಲಾದುವುಗಳಿಂದ ಪರಮಾತ್ಮನನ್ನು ನಿರ್ದೇಶಿಸಬಹುದು.

ಆಧಾರವನ್ನು ಹೇಳಿರುವುದರಿಂದ ಅವನು ಪರಮೇಶ್ವರನಲ್ಲವೆಂಬ ಪೂರ್ವಪಕ್ಷಕ್ಕೆ ಇದು ಉತ್ತರ: ಪರಮೇಶ್ವರನು ತನ್ನ ಮಹಿಮೆಯಲ್ಲಿ ಪ್ರತಿಷ್ಠಿತನಾಗಿದ್ದರೂ ಅವನಿಗೆ ಆಧಾರ ವನ್ನು ಹೇಳಿರುವುದು ಉಪಾಸನೆಗೋಸ್ಕರವೇ; ಏಕೆಂದರೆ ಬ್ರಹ್ಮವು ಸರ್ವಗತವಾಗಿರುವುದ ರಿಂದ ಆಕಾಶದಂತೆ ಎಲ್ಲದರ ಒಳಗಿರುವುದು ಯುಕ್ತವಾಗಿದೆ. ಅಧ್ಯಾತ್ಮ ಅಧಿದೈವತ ಎಂಬ ವಿಭಾಗಗಳ ಅಪೇಕ್ಷೆಯಿಂದ ಪರಮೇಶ್ವರನ ಐಶ್ವರ್ಯಕ್ಕೆ ಅವಧಿಯನ್ನು ಹೇಳಿರುವುದೂ ಉಪಾಸನೆಗೋಸ್ಕರವೇ. ಆದುದರಿಂದ ಚಕ್ಷುಸ್ಸಿನಲ್ಲಿಯೂ ಆದಿತ್ಯನಲ್ಲಿಯೂ ಇರುವವನನ್ನು ಪರಮೇಶ್ವರನೇ ಎಂದು ಉಪದೇಶಿಸಿದೆ.

ವಿ.—ಛಾಂದೋಗ್ಯೋಪನಿಷತ್ತಿನಲ್ಲಿ (೧. ೭) ಹೇಳಿರುವ ಅಕ್ಷಿ-ಆದಿತ್ಯ-ಮಂಡಲದಲ್ಲಿ ರುವ ಪುರುಷನು ಒಬ್ಬ ಜೀವವಿಶೇಷನೆಂಬುದು ಪೂರ್ವಪಕ್ಷ; ಏಕೆಂದರೆ ಅವನಿಗೆ ಶರೀರ ವನ್ನು ಶ್ರುತಿಯು ಹೇಳುತ್ತದೆ. ಶರೀರಸಂಬಂಧವು ಜೀವನಿಗೆ ಮಾತ್ರ ಉಂಟಾಗಲು ಸಾಧ್ಯ; ಏಕೆಂದರೆ ಅವನ ಕರ್ಮಫಲಕ್ಕೆ ಅನುಗುಣವಾಗಿ ಸುಖದುಃಖಗಳನ್ನು ಉಂಟುಮಾಡು ವುದೇ ಶರೀರಸಂಬಂಧದ ಪ್ರಯೋಜನ. ಶರೀರದಲ್ಲಿ ಇರುವ ವರೆಗೆ ಸುಖದುಃಖಗಳಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲವೆಂದು ಶ್ರುತಿಯು (ಛಾಂ. ಉ. ೮. ೧೨. ೧) ಹೇಳುತ್ತದೆ.[4] ಯಾವನೊ ಒಬ್ಬ ಜೀವವಿಶೇಷನು ಪುಣ್ಯಾತಿಶಯದಿಂದ ಜ್ಞಾನಾಧಿಕ್ಯವನ್ನೂ ಶಕ್ತ್ಯಾಧಿಕ್ಯ ವನ್ನೂ ಪಡೆದು ಲೋಕಗಳಿಗೂ ಕಾಮಗಳಿಗೂ ಒಡೆಯನಾಗಬಹುದು. ಈ ಪದವಿಯನ್ನು ಮನುಷ್ಯನಾಗಲಿ ಸಿದ್ಧನಾಗಲಿ ದೇವನಾಗಲಿ ಪಡೆಯಬಹುದು. ಆದುದರಿಂದ ಜೀವನಿಗಿಂತ ಭಿನ್ನನಾದ ಪರಮಾತ್ಮನೆಂಬ ಹೆಸರುಳ್ಳ ಯಾವನೂ ಇಲ್ಲ. ಶ್ರುತಿಗಳು ಅಸ್ಥೂಲ, ಅನಣು, ಅಹ್ರಸ್ವ ಎಂದು ಹೇಳಿರುವುದು ಜೀವಸ್ವರೂಪವನ್ನು ನಿರೂಪಿಸುವುದಕ್ಕಾಗಿಯೇ. ಜೀವ ಸ್ವರೂಪಪ್ರಾಪ್ತಿಯ ಸಾಧನಗಳು—ಇವುಗಳನ್ನು ಉಪದೇಶಿಸುವುದಕ್ಕಾಗಿಯೇ ಮೋಕ್ಷ

1 ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ ।
ಸರ್ವಭೂತಗುಣೈರ್ಯುಕ್ತಂ ನೈವಂ ಮಾಂ ಜ್ಞಾತುಮರ್ಹಸಿ ॥

2 ಅಪಿ ಚ ಯತ್ರ ತು ನಿರಸ್ತಸರ್ವವಿಶೇಷಂ ಪಾರಮೇಶ್ವರಂ ರೂಪಮುಪದಿಶ್ಯತೇ ಭವತಿ ತತ್ರ ಶಾಸ್ತ್ರಮ್ (ಸೂ. ಭಾ.).

3 ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ।

4 ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ ।

ಶಾಸ್ತ್ರಗಳು ಕೂಡ ಪ್ರವೃತ್ತವಾಗಿವೆ

ಆದಿತ್ಯನಲ್ಲಿಯೂ ಚಕ್ಷುಸ್ಸಿನಲ್ಲಿಯೂ ಇರುವ ಪುರುಷನು ಪರಮಾತ್ಮನೆಂಬುದೇ ಸಿದ್ಧಾಂತ, ಏಕೆಂದರೆ ಪಾಪರಾಹಿತ್ಯಾದಿ ಗುಣಗಳು ಪರಮಾತ್ಮನಿಗೆ ಸೇರಿವೆಯೇ ಹೊರತು ಜೀವನಿಗಲ್ಲ ಪಾಪರಾಹಿತ್ಯವೆಂದರೆ ಕರ್ಮರಾಹಿತ್ಯ ಇದು ಕರ್ಮಾಧೀನ-ಸುಖದುಃಖ-ಭಾಗಿಯಾದ ಜೀವನಿಗಿಂತ ಭಿನ್ನನಾದ ಪರಮಾತ್ಮನ ಧರ್ಮ ಇದೇ ರೀತಿ ಲೋಕ-ಕಾಮಗಳ ಈಶತ್ವ, ಸತ್ಯಸಂಕಲ್ಪತ್ವ, ಸರ್ವಾಂತರ್ಯಾಮಿತ್ವ ಇವೇ ಮೊದಲಾದ ಗುಣಗಳು ಪರಮಾತ್ಮನವೇ

ಶರೀರಸಂಬಂಧವಿರುವುದರಿಂದ ಅಕ್ಷಿ-ಆದಿತ್ಯರಲ್ಲಿರುವ ಪುರುಷನು ಜೀವನಿಗಿಂತ ಬೇರೆಯಲ್ಲವೆಂಬ ಮತವು ಸರಿಯಲ್ಲ ಸಶರೀರತ್ವವು ಕರ್ಮವಶ್ಯತ್ವವನ್ನು ಸಾಧಿಸುವುದಿಲ್ಲ, ಏಕಂದರೆ ಸತ್ಯಸಂಕಲ್ಪತ್ವಾದಿಗಳಿಂದ ಕೂಡಿರುವವನು ತನ್ನ ಇಚ್ಛೆಯಿಂದಲೇ ಶರೀರವನ್ನು ಪಡೆಯಬಹುದು [1] ಪರಮಾತ್ಮನ ಶರೀರವು ಗುಣತ್ರಯ-ಮಯವಾದ ಪ್ರಕೃತಿಯ ಕಾರ್ಯವಲ್ಲ ಅಸಂಖ್ಯೇಯ-ಕಲ್ಯಾಣಗುಣಗಳಿಂದ ಕೂಡಿರುವ ಭಗವಂತನಿಗೆ ಅನುರೂಪವಾದ ದಿವ್ಯರೂಪವಿದೆ ಅಪಾರ-ಕಾರುಣ್ಯ-ಸೌಶೀಲ್ಯ-ವಾತ್ಸಲ್ಯ-ಔದಾರ್ಯಗಳಿಗೆ ಜಲನಿಧಿಯೂ ಪರಮಾತ್ಮನೂ ಪರಬ್ರಹ್ಮನೂ ಪುರುಷೋತ್ತಮನೂ ಆದ ನಾರಾಯಣನು ಉಪಾಸಕರನ್ನು ಅನುಗ್ರಹಿಸಲು ಅವರವರ ಜ್ಞಾನಕ್ಕೆ ನಿಲುಕುವಂಥ ರೂಪವನ್ನು ಧರಿಸುತ್ತಾನೆ [2] ಸಾವಿರಾರು ಶ್ರುತಿಗಳು ಭಗವಂತನಿಗೆ ಪ್ರಾಕೃತದೇಹಸಂಬಂಧವನ್ನು ನಿಷೇಧಿಸಿ ಅವನ ಕಲ್ಯಾಣ-ಗುಣಗಳನ್ನೂ ಕಲ್ಯಾಣರೂಪವನ್ನೂ ತಿಳಿಸುತ್ತವೆ ಭಗವಂತನು ಗೀತೆಯಲ್ಲಿ ಹೀಗೆ ಹೇಳಿರುತ್ತಾನೆ 'ನಾನು ಜನ್ಮರಹಿತನೂ ಅವ್ಯಯಸ್ವಭಾವದವನೂ ಪ್ರಾಣಿಗಳಿಗೆ ನಿಯಾಮಕನೂ ಆಗಿದ್ದರೂ ನನ್ನ ಪ್ರಕೃತಿಯನ್ನು ಆಶ್ರಯಿಸಿ ನನ್ನ ಮಾಯೆಯ ಮೂಲಕ ಅವತರಿಸುತ್ತೇನೆ'[3] (ಗೀತಾ ೪ ೬) 'ನನ್ನ ಮಾಯೆಯ ಮೂಲಕ' ಎಂದರೆ ಸ್ವಸಂಕಲ್ಪರೂಪವಾದ ಜ್ಞಾನದ ಮೂಲಕ ಇದು ಮಾಯಾ, ಜ್ಞಾನ ಎಂಬ ಪದಗಳು ಸಮಾನಾರ್ಥಕವೆಂಬ ನೈಘಂಟುಕರ ಮತಕ್ಕೆ ಹೊಂದುತ್ತದೆ [4] ಮಹಾಭಾರತದಲ್ಲಿಯೂ ಕೂಡ ಭಗವಂತನ ಅವತಾರ ರೂಪವು ಪ್ರಾಕೃತವಲ್ಲವೆಂದು ಹೇಳಿದೆ: 'ಪರಮಾತ್ಮನ ದೇಹವು ಭೌತಿಕವಸ್ತುಗಳ

---

[1] ನ ಹಿ ಸಶರೀರತ್ವಂ ಕರ್ಮವಶ್ಯತಾಂ ಸಾಧಯತಿ, ಸತ್ಯಸಂಕಲ್ಪಸ್ಯ ಇಚ್ಛಯಾಽಪಿ ಶರೀರ-ಸಂಬಂಧಸಂಭವಾತ್ (ಶ್ರೀಭಾಷ್ಯ)

[2] ತದೇವ ಉಪಾಸಕಾನುಗ್ರಹೇಣ ತತ್ತತ್ಪ್ರತಿಪತ್ತ್ಯನುರೂಪಸಂಸ್ಥಾನಂ ಕರೋತಿ ಅಪಾರ-ಕಾರುಣ್ಯಸೌಶೀಲ್ಯವಾತ್ಸಲ್ಯೌದಾರ್ಯಜಲನಿಧಿಃ ನಿರಸ್ತನಿಖಿಲಹೇಯಗಂಧೋಽಪಹತಪಾಪ್ಮಾ ಪರಮಾತ್ಮಾ ಪರಂ ಬ್ರಹ್ಮ ಪುರುಷೋತ್ತಮೋ ನಾರಾಯಣ ಇತಿ (ಶ್ರೀಭಾಷ್ಯ)

[3] ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥

[4] ಮಾಯಾ ವಯುನಂ ಜ್ಞಾನಮಿತಿ ಜ್ಞಾನಪರ್ಯಾಯಮಪಿ ಮಾಯಾಶಬ್ದಂ ನೈಘಂಟುಕಾ ಅಧೀಯತೇ (ಶ್ರೀಭಾಷ್ಯ)

ಸಂಯೋಗವಲ್ಲ '[1] ಆದುದರಿಂದ ಅಕ್ಷಿ-ಆದಿತ್ಯರಲ್ಲಿ ಇರುವವನು ಜೀವವಿಶೇಷನಿಗಿಂತ ಭಿನ್ನನಾದ ಪರಮಾತ್ಮನೇ.

**ದ್ವೈ.**—'ಅಂತಃಶ್ರುತನಾದವನು ವಿಷ್ಣುವೇ ; ಏಕೆಂದರೆ ಶ್ರುತಿಗಳು ಅವನ ಗುಣಗಳನ್ನು ಉಪದೇಶಿಸಿವೆ' ಎಂಬುದು ಸೂತ್ರಾರ್ಥ.

ಶ್ರುತಿಗಳು ಹೀಗೆ ಹೇಳುತ್ತವೆ : 'ಸ್ವೇಚ್ಛೆಯಿಂದ ಸಮುದ್ರದಲ್ಲಿಇರುವವನನ್ನು ಬ್ರಹ್ಮನು ನೋಡಿದನು' (ತೈ. ಆ. ೩ ೨. ೧), 'ಸಮುದ್ರದಲ್ಲಿ ಇರುವವನೆಂದು ಕವಿಗಳು ಅರಿತಿರುತ್ತಾರೆ' (ತೈ. ಆ. ೩. ೨ ೧), 'ಯಾವನ ವೀರ್ಯದಿಂದ ಅಂಡಕೋಶವು ಬಂದಿದೆಯೊ' (ತೈ. ಆ. ೩. ೨. ೪). ಹೀಗೆ ಅಂತಃಪ್ರವಿಷ್ಟನಾಗಿರುವವನು ವಿಷ್ಣುವೇ, ಇಂದ್ರಾದಿಗಳಲ್ಲ. ಅವನು ಕ್ಷೀರಸಮುದ್ರಶಾಯಿ.[2] ಹೀಗೆ ಸಮುದ್ರದ ಒಳಗಿರುವುದು, ತನ್ನ ವೀರ್ಯದಿಂದ ಬ್ರಹ್ಮಾಂಡವನ್ನು ಉತ್ಪತ್ತಿ ಮಾಡುವುದು, ಬ್ರಹ್ಮನನ್ನು ಅನುಗ್ರಹಿಸುವುದು ಇವೇ ಮೊದಲಾದುವು ವಿಷ್ಣುವಿನ ಧರ್ಮಗಳೇ.

## ಭೇದವ್ಯಪದೇಶಾಚ್ಚಾನ್ಯಃ ॥ ೨೧ ॥

೨೧. ಮತ್ತು (ಶ್ರುತಿಯು) ಭೇದವನ್ನು ಹೇಳುವುದರಿಂದಲೂ (ಆದಿತ್ಯ-ಪುರುಷನು ಜೀವಾತ್ಮನಿಗಿಂತ) ಬೇರೆಯಾದವನು.

ಆದಿತ್ಯಾದಿ-ಶರೀರಗಳ ಅಭಿಮಾನಿಗಳಾದ ಜೀವಾತ್ಮರಿಗಿಂತ ಭಿನ್ನನಾದವನುಇದ್ದಾನೆ. ಇವನು ಅಂತರ್ಯಾಮಿಯಾದ ಈಶ್ವರನು ; ಏಕೆಂದರೆ ಮತ್ತೊಂದು ಶ್ರುತಿಯು[3] (ಬೃ. ಉ. ೩. ೭. ೯) ಭೇದವನ್ನು ಹೀಗೆ ಹೇಳುತ್ತದೆ : 'ಯಾವನು ಆದಿತ್ಯನಲ್ಲಿ ಇರುವವನಾಗಿ ಆದಿತ್ಯನ ಒಳಗಿರುವನೊ, ಯಾವನನ್ನು ಆದಿತ್ಯನು ತಿಳಿಯನೊ, ಯಾವನಿಗೆ ಆದಿತ್ಯನು ಶರೀರವೊ, ಯಾವನು ಒಳಗಿದ್ದುಕೊಂಡು ಆದಿತ್ಯನನ್ನು ನಿಯಮಿಸುವನೊ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು.' ಅಲ್ಲಿ 'ಆದಿತ್ಯನ ಒಳಗಿರುವನೊ, ಯಾವನನ್ನು ಆದಿತ್ಯನು ತಿಳಿಯನೊ' ಎಂದು ಅರಿಯುವವನೂ ಮತ್ತು ಆದಿತ್ಯ-ಶರೀರವನ್ನು ಪಡೆದಿರುವವನೂ ಆದ ಜೀವಾತ್ಮನಿಗಿಂತ ಭಿನ್ನನಾದ ಅಂತರ್ಯಾಮಿಯನ್ನು ಸ್ಪಷ್ಟವಾಗಿ ನಿರ್ದೇಶಿಸಿದೆ. ಹೀಗೆ ಶ್ರುತಿಗಳ ತಾತ್ಪರ್ಯವು ಸಮಾನವಾಗಿರುವುದರಿಂದ ಒಳಗಿರುವ ಪುರುಷನೇ ಆದಿತ್ಯನಲ್ಲಿರುವ ಪುರುಷನೆಂಬುದು ಯುಕ್ತವು. ಆದುದರಿಂದ ಇಲ್ಲಿ ಪರಮೇಶ್ವರನನ್ನೇ ಉಪದೇಶಿಸಿದೆ ಎಂಬುದು ಸಿದ್ಧವಾಗಿದೆ.

---

1 ನ ಭೂತಸಂಘಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ ।

2 ಸ ಹಿ ಕ್ಷೀರಸಮುದ್ರಶಾಯೀ (ಮ. ಭಾ.)

3 ಯ ಆದಿತ್ಯೇ ತಿಷ್ಠನ್ನಾದಿತ್ಯಾದಂತರಃ, ಯಮಾದಿತ್ಯೋ ನ ವೇದ, ಯಸ್ಯಾದಿತ್ಯಃ ಶರೀರಮ್, ಯ ಆದಿತ್ಯಮಂತರೋ ಯಮಯತಿ, ಏಷ ತ ಆತ್ಮಾಂತರ್ಯಾಮ್ಯಮೃತಃ ।

**ವಿ.**—ಪರಮಾತ್ಮನು ಆದಿತ್ಯನೇ ಮೊದಲಾದ ಜೀವರಿಗಿಂತ ಭಿನ್ನನೆಂದು ಅನೇಕ ಶ್ರುತಿಗಳು (ಬೃ. ಉ. ೩. ೭. ೯ ಮತ್ತು ಸು. ಉ. ೭ [1]) ಹೇಳುತ್ತವೆ. ಜೀವಾತ್ಮರೆಲ್ಲ ದೋಷರಹಿತನಾದ ಪರಮಾತ್ಮನ ಶರೀರವೆಂದೂ ಪರಮಾತ್ಮನು ಇವರೆಲ್ಲರ ಅಂತರಾತ್ಮನೆಂದೂ ಈ ಶ್ರುತಿಗಳು ತಿಳಿಸುತ್ತವೆ.

**ದ್ವೈ.**—ಶ್ರುತಿಗಳು ಭೇದವನ್ನು ಹೀಗೆ ಸಾರಿ ಹೇಳುತ್ತವೆ: 'ಇಂದ್ರನ ಆತ್ಮನೂ ಪಂಚೇಂದ್ರಿಯಗಳಿಗೆ ವಿಷಯಾನುಭವನನ್ನು ಉಂಟುಮಾಡುವವನೂ ಆದ ಪರಮಾತ್ಮನು ಎಲ್ಲರ ಹೃದಯದಲ್ಲಿಯೂ ಇರುವನು', [2] 'ಅವನು ವಾಯುವಿನ ಆತ್ಮನೆಂದು ಋಷಿಗಳು ಕಂಡುಹಿಡಿದರು' [3] ಇತ್ಯಾದಿ.

---

[1] ಯೋಽಕ್ಷರಮಂತರೇ ಸಂಚರನ್, ಯಸ್ಯಾಕ್ಷರಂ ಶರೀರಮ್, ಯಮಕ್ಷರಂ ನ ವೇದ, ಯೋ ಮೃತ್ಯುಮಂತರೇ ಸಂಚರನ್, ಯಸ್ಯ ಮೃತ್ಯುಶ್ಶರೀರಮ್, ಯಂ ಮೃತ್ಯುರ್ನ ವೇದ, ಏಷ ಸರ್ವಭೂತಾಂತರಾತ್ಮಾಽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ ।

[2] ಇಂದ್ರಸ್ಯಾಽತ್ಮಾ ನಿಹಿತಃ ಪಂಚಹೋತಾ ।

[3] ವಾಯೋರಾತ್ಮಾನಂ ಕವಯೋ ನಿಚಿಕ್ಯುಃ ।

## ೮. ಆಕಾಶಾಧಿಕರಣ

### ಆಕಾಶಸ್ತಲ್ಲಿಂಗಾತ್ ॥ ೨೨ ॥

೨೨ ಆಕಾಶವು (ಬ್ರಹ್ಮವೇ), ಏಕೆಂದರೆ ಅದರ (ಎಂದರೆ ಬ್ರಹ್ಮದ) ಲಿಂಗಗಳನ್ನು[1] ಹೇಳಿರುತ್ತದೆ

ಛಾಂದೋಗ್ಯೋಪನಿಷತ್ತಿನಲ್ಲಿ (೧ ೯-೧) ಈ ವಾಕ್ಯವು ಬರುತ್ತದೆ

ಶಿಲಕ 'ಈ ಲೋಕದ ಗತಿ ಯಾವುದು ?'

ಪ್ರವಾಹಣಜೈವಲಿ 'ಆಕಾಶ ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ಆಕಾಶದಲ್ಲಿಯೇ ಲಯವಾಗುತ್ತವೆ , ಏಕೆಂದರೆ ಆಕಾಶವೇ ಇವುಗಳಿಗಿಂತ ಮಹತ್ತರವು, ಆಕಾಶವೇ ಪರಾಯಣವು '[2]

ಇಲ್ಲಿ ಆಕಾಶ ಶಬ್ದವು ಪರಬ್ರಹ್ಮವನ್ನು ಸೂಚಿಸುತ್ತವೆಯೊ ಅಥವಾ ಭೂತಾಕಾಶವನ್ನು ಸೂಚಿಸುತ್ತದೆಯೊ ಎಂಬುದು ಸಂಶಯ ಇಲ್ಲಿ ಸಂಶಯಕ್ಕೆ ಕಾರಣವಿದೆ , ಏಕೆಂದರೆ ಎರಡು ಅರ್ಥಗಳಲ್ಲಿಯೂ ಆಕಾಶ-ಶಬ್ದವನ್ನು ಪ್ರಯೋಗಿಸಿರುವುದು ಕಂಡುಬರುತ್ತದೆ ಆಕಾಶವು ಭೂತಾಕಾಶವೆಂಬುದು ವೈದಿಕವಾಙ್ಮಯದಲ್ಲಿಯೂ ಸಂಸ್ಕೃತವಾಙ್ಮಯದಲ್ಲಿಯೂ ಪ್ರಸಿದ್ಧವಾಗಿದೆ ಮತ್ತೊಂದು ಕಡೆ ಈ ಶಬ್ದವು—ಯಾವುದೊ ಒಂದು ವಾಕ್ಯಶೇಷದ ಬಲದಿಂದಲೊ ಅಥವಾ ಬ್ರಹ್ಮದ ಅಸಾಧಾರಣಗುಣವನ್ನು ಹೇಳಿರುವುದರಿಂದಲೊ—ಪರ-ಬ್ರಹ್ಮವನ್ನು ಸೂಚಿಸಿರುವುದು ಕಂಡುಬರುತ್ತದೆ ಮುಂದಿನ ಶ್ರುತಿವಾಕ್ಯಗಳು ಆಕಾಶವೇ ಬ್ರಹ್ಮವೆಂದು ಹೇಳುತ್ತವೆ 'ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ'[3] (ತೈ ಉ ೨ ೭) ಮತ್ತು 'ಆಕಾಶವೆಂಬ ಹೆಸರಿನಿಂದ ಪ್ರಸಿದ್ಧವಾದ (ಬ್ರಹ್ಮವು) ನಾಮ ರೂಪಗಳನ್ನು ಬಿಂಗಡಿಸುತ್ತದ ಯಾವುದರಲ್ಲಿ ನಾಮ-ರೂಪಗಳು ಇವೆಯೊ ಅದು ಬ್ರಹ್ಮ'[4] (ಛಾಂ ಉ ೮ ೧೪, ೧)

**ಪೂರ್ವಪಕ್ಷ**—ಆಕಾಶವು ಭೂತಾಕಾಶವನ್ನು ಸೂಚಿಸುವುದೇ ಯುಕ್ತವು , ಏಕಂದರೆ ಈ ಅರ್ಥವೇ ಪ್ರಸಿದ್ಧತರವಾಗಿರುವುದರಿಂದ ಮನಸ್ಸಿಗೆ ಬೇಗ ಹೊಳೆಯುತ್ತದ ಆಕಾಶ-ಶಬ್ದಕ್ಕೆ ಭೂತಾಕಾಶ ಮತ್ತು ಬ್ರಹ್ಮ ಎಂಬ ಎರಡು ಅರ್ಥಗಳಲ್ಲಿಯೂ ಪ್ರಯೋಗವಿದ್ದರೆ ಒಂದೇ ಪದಕ್ಕೆ ಅನೇಕಾರ್ಥಗಳಿವೆಯೆಂಬ ಪ್ರಸಂಗವು ಬರುವುದು ಆದುದರಿಂದ

---

[1] ಲಿಂಗವೆಂದರೆ ಗುರುತು ಅಥವಾ ಚಿಹ್ನೆ

[2] ಅಸ್ಯ ಲೋಕಸ್ಯ ಕಾ ಗತಿರಿತಿ, ಆಕಾಶ ಇತಿ ಹೋವಾಚ, ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತ ಆಕಾಶಂ ಪ್ರತ್ಯಸ್ತಂ ಯಂತಿ, ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್, ಆಕಾಶಃ ಪರಾಯಣಮ್ ।

[3] ಯದೇಷ ಆಕಾಶ ಆನಂದೋ ನ ಸ್ಯಾತ್ ।

[4] ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ।

ಆಕಾಶವು ಬ್ರಹ್ಮ ಎಂಬ ಅರ್ಥವು ಗೌಣದೃಷ್ಟಿಯಿಂದ ಸಾಧ್ಯ ; ಏಕೆಂದರೆ ಬ್ರಹ್ಮದ ವಿಭುತ್ವವೇ ಮೊದಲಾದ ಧರ್ಮಗಳು ಆಕಾಶಕ್ಕೂ ಸಮಾನವಾಗಿರುತ್ತವೆ. ಮುಖ್ಯ ವಾದ ಅರ್ಥವು ಹೊಂದುತ್ತಿರುವಾಗ ಗೌಣಾರ್ಥವು ಸರಿಯಲ್ಲ. ಈ ಶ್ರುತಿವಾಕ್ಯದಲ್ಲಿ ಆಕಾಶ-ಶಬ್ದವು ಮುಖ್ಯಾರ್ಥದಿಂದಲೇ ಹೊಂದುತ್ತದೆ. ಈ ವಾಕ್ಯವನ್ನು ಭೂತಾಕಾಶಕ್ಕೆ ಅನ್ವಯಿಸಿದರೆ, 'ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ' (ಛಾಂ. ಉ. ೧. ೯ ೧) ಎಂಬ ವಾಕ್ಯಶೇಷವು ಹೊಂದುವುದಿಲ್ಲ ಎಂಬ ಆಕ್ಷೇಪಣೆಯು ಸರಿಯಲ್ಲ ; ಏಕೆಂದರೆ ಭೂತಾಕಾಶವು ವಾಯು ಅಗ್ನಿ ಮೊದಲಾದುವುಗಳಿಗೆ ಕಾರಣವಾಗಿರುತ್ತದೆ.[1] ಮಹತ್ತರತ್ವ, ಆಶ್ರಯತ್ವ ಇವೇ ಮೊದಲಾದ ಧರ್ಮಗಳು—ಇತರ ಭೂತಗಳ ಅಪೇಕ್ಷೆ ಯಿಂದ—ಭೂತಾಕಾಶಕ್ಕೂ ಅನ್ವಯಿಸುತ್ತವೆ ಆದುದರಿಂದ ಆಕಾಶ-ಶಬ್ದವು ಭೂತಾ-ಕಾಶವನ್ನೇ ಸೂಚಿಸುತ್ತದೆ.

**ಸಿದ್ಧಾಂತಿ**—ಆಕಾಶ-ಶಬ್ದವು ಬ್ರಹ್ಮವನ್ನೇ ಸೂಚಿಸುತ್ತದೆ ಎಂಬುದು ಯುಕ್ತ ವಾಗಿದೆ; ಏಕೆಂದರೆ ಶ್ರುತಿಯಲ್ಲಿ ಅದರ ಲಿಂಗಗಳನ್ನು ಹೇಳಿದೆ. 'ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ' (ಛಾಂ. ಉ. ೧. ೯. ೧) ಎಂಬುದು ಪರಬ್ರಹ್ಮದ ಲಿಂಗವು ; ಏಕೆಂದರೆ ಭೂತಗಳೆಲ್ಲವೂ ಪರಬ್ರಹ್ಮದಿಂದಲೇ ಉತ್ಪನ್ನವಾಗುತ್ತವೆ ಎಂದು ವೇದಾಂತವಾಕ್ಯಗಳೆಲ್ಲವೂ ಒಪ್ಪಿಕೊಳ್ಳುತ್ತವೆ.

ಭೂತಾಕಾಶವು ಕೂಡ ವಾಯು ಅಗ್ನಿ ಮೊದಲಾದುವುಗಳಿಗೆ ಕಾರಣವಾಗಿದೆ ಯೆಂಬ ಪೂರ್ವಪಕ್ಷವು ಸರಿಯಲ್ಲ ; ಏಕೆಂದರೆ ಮೂಲಕಾರಣವನ್ನು ಬ್ರಹ್ಮಕ್ಕೆ ಅನ್ವಯಿಸಿದ ಹೊರತು **ಆಕಾಶದಿಂದಲೇ** ಎಂದು ಒತ್ತಿ ಹೇಳಿರುವುದು. ಮತ್ತು **ಎಲ್ಲ** ಎಂದು ಭೂತ ಗಳಿಗೆ ಹೇಳಿರುವ ವಿಶೇಷಣ—ಇವು ಹೊಂದುವುದಿಲ್ಲ. ಹೀಗೆಯೇ 'ಆಕಾಶದಲ್ಲಿಯೇ ಲಯವಾಗುತ್ತವೆ' (ಛಾಂ. ಉ. ೧೯. ೧) ಮತ್ತು 'ಏಕೆಂದರೆ ಆಕಾಶವೇ ಇವುಗಳಿಗಿಂತ ಮಹತ್ತರವು, ಆಕಾಶವೇ ಪರಾಯಣವು' (ಛಾಂ. ಉ. ೧. ೯. ೧) ಎಂಬಿವೂ ಬ್ರಹ್ಮವನ್ನೇ ಸೂಚಿಸುತ್ತವೆ. ಮತ್ತೆ, ಯಾವುದನ್ನೂ ಸೂಚಿಸದ ಮಹತ್ತರತ್ವವು ಪರಮಾತ್ಮನೊಬ್ಬನ ವಿಷಯದಲ್ಲಿಯೇ ಅನ್ವಯವಾಗುತ್ತದೆಂದು ಶ್ರುತಿಯಲ್ಲಿಯೇ ಹೇಳಿದೆ : 'ಈ ಆತ್ಮನು ಪೃಥ್ವಿಗಿಂತಲೂ ದೊಡ್ಡವನು, ಅಂತರಿಕ್ಷಕ್ಕಿಂತಲೂ ದೊಡ್ಡವನು, ದ್ಯುಲೋಕಕ್ಕಿಂತಲೂ ದೊಡ್ಡವನು. ಈ ಎಲ್ಲ ಲೋಕಗಳಿಗಿಂತಲೂ ದೊಡ್ಡವನು'[2] (ಛಾಂ. ಉ. ೩. ೧೪. ೩). ಹೀಗೆಯೇ ಪರಾಯಣತ್ವವೂ ಕೂಡ ಪರಮಕಾರಣನಾದ ಪರಮಾತ್ಮನಿಗೇ ಹೆಚ್ಚಾಗಿ ಹೊಂದುತ್ತದೆ. ಶ್ರುತಿಯು ಇದನ್ನೇ ಸ್ಥಾಪಿಸಿದೆ : 'ವಿಜ್ಞಾನವೂ ಆನಂದವೂ ಆದ

---

[1] 'ಆ ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು. ಆಕಾಶದಿಂದ ವಾಯು, ವಾಯು ವಿನಿಂದ ಅಗ್ನಿ' ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ ವಾಯೋರಗ್ನಿಃ (ತೈ. ಉ. ೨. ೧).

[2] ಜ್ಯಾಯಾನ್ ಪೃಥಿವ್ಯಾ ಜ್ಯಾಯಾನ್ ಅಂತರಿಕ್ಷಾದ್, ಜ್ಯಾಯಾನ್ ದಿವೋ ಜ್ಯಾಯಾನ್ ಏಭ್ಯೋ ಲೋಕೇಭ್ಯಃ ।

ಬ್ರಹ್ಮವು, ಅದು ಧನವನ್ನು ಕೊಡುವವನಿಗೆ ಪರಾಯಣವು'[1] (ಬೃ ಉ ೩ ೯ ೨೮) ಇದಲ್ಲದೆ ಅಂತವತ್ತ್ವವೆಂಬ ದೋಷವಿರುವ ಶಾಲಾವತ್ಯನ ಪಕ್ಷವನ್ನು ನಿಂದಿಸಿ ಅನಂತವಾದುದನ್ನು ಹೇಳಬೇಕೆಂಬ ಬಯಕೆಯಿಂದ ಜೈವಲಿಯು ಆಕಾಶವನ್ನು ಆಯ್ದುಕೊಂಡಿರುತ್ತಾನೆ ಅನಂತರ ಉದ್ಗೀಥವೇ ಆಕಾಶವೆಂದು ಸಂಪಾದಿಸಿ, 'ಆ ಇದು ಪರೋವರೀಯವಾದ ಉದ್ಗೀಥವು, ಆ ಇದು ಅನಂತವು'[2] (ಛಾಂ ಉ ೧ ೯ ೨) ಎಂದು ಉಪಸಂಹರಿಸುತ್ತಾನೆ ಆ ಆನಂತ್ಯವೂ ಬ್ರಹ್ಮದ ಲಿಂಗವೇ

ಭೂತಾಕಾಶವು ಪ್ರಸಿದ್ಧಿ ಬಲದಿಂದ ಬ್ರಹ್ಮಕ್ಕಿಂತಲೂ ಮೊದಲು ಮನಸ್ಸಿಗೆ ಹೊಳೆಯುತ್ತದೆ ಎಂಬ ಪೂರ್ವಪಕ್ಷಕ್ಕೆ ಇದು ಪರಿಹಾರ ಭೂತಾಕಾಶವು ಮೊದಲು ಮನಸ್ಸಿಗೆ ತೋರಿದರೂ ಅದನ್ನು ಒಪ್ಪಿಕೊಳ್ಳಕೂಡದು, ಏಕೆಂದರೆ ಬ್ರಹ್ಮದ ಗುಣಗಳನ್ನು ವಾಕ್ಯಶೇಷಗಳಲ್ಲಿ ಹೇಳಿದೆ ಆಕಾಶ-ಶಬ್ದವು ಬ್ರಹ್ಮವನ್ನು ಸೂಚಿಸುತ್ತದೆಂದು ಹಿಂದೆಯೇ ತೋರಿಸಿದ (ಛಾಂ ಉ ೮ ೧೪ ೧) ಹೀಗೆಯೇ ಆಕಾಶದ ಸಮಾನಾರ್ಥಕ ಶಬ್ದಗಳನ್ನು ಕೂಡ ಪ್ರಯೋಗಿಸಿರುವುದು ಕಂಡುಬರುತ್ತದೆ 'ಯಾವ ಅಕ್ಷರವಾದ **ಪರಮವ್ಯೋಮದಲ್ಲಿ** ಋಕ್ಕುಗಳೂ ದೇವತೆಗಳೂ ಆಶ್ರಯವನ್ನು ಪಡೆದಿರುವರೊ'[3] (ಋ ವೇ ೧ ೧೬೪ ೩೯), 'ಆ ಈ ಭಾರ್ಗವೀ-ವಾರುಣೀ-ವಿದ್ಯೆಯು **ಪರಮವ್ಯೋಮದಲ್ಲಿ** ಪ್ರತಿಷ್ಠಿತವಾಗಿರುವುದು'[4] (ತೈ ಉ ೩ ೬) ಮತ್ತು 'ಓಂಕಾರವು ಆಕಾಶಬ್ರಹ್ಮವು, ಚಿರಂತನವಾದ ಆಕಾಶವು'[5] (ಬೃ ಉ ೫ ೧ ೧)

ಆಕಾಶ-ಶಬ್ದವು ವಾಕ್ಯದ ಪ್ರಾರಂಭದಲ್ಲಿ ಬಂದಿದ್ದರೂ ವಾಕ್ಯಶೇಷದ ಬಲದಿಂದ ಬ್ರಹ್ಮವನ್ನೇ ಸೂಚಿಸುತ್ತದೆ 'ಬೆಂಕಿಯು ಅನುವಾಕವನ್ನು ಅಧ್ಯಯನ-ಮಾಡುತ್ತದೆ' **ಅಗ್ನಿರಧೀತೇಽನುವಾಕಮ್** ಎಂಬಲ್ಲಿ ಅಗ್ನಿ-ಶಬ್ದವು ವಾಕ್ಯದ ಪ್ರಾರಂಭದಲ್ಲಿದ್ದರೂ ಬೆಂಕಿಯು ಅಧ್ಯಯನವನ್ನು ಮಾಡಲು ಸಾಧ್ಯವಿಲ್ಲದ್ದರಿಂದ, ಅಗ್ನಿಯಂತೆ ತೇಜಸ್ವಿಯಾದ ಬ್ರಹ್ಮಚಾರಿಯ ವಿಷಯದಲ್ಲಿ ಪ್ರಯುಕ್ತವಾಗಿರುವುದು ಕಂಡುಬರುತ್ತದೆ ಆದುದರಿಂದ ಆಕಾಶ-ಶಬ್ದವು ಬ್ರಹ್ಮವನ್ನೇ ಸೂಚಿಸುತ್ತದೆ

**ವಿ.**—ಆಕಾಶ-ಶಬ್ದದಿಂದ ನಿರ್ದಿಷ್ಟನಾದವನು ಚಿದ್-ಅಚಿದ್-ವಿಲಕ್ಷಣನೂ ಸರ್ವಜ್ಞನೂ ಆದ ಪರಬ್ರಹ್ಮನೇ ನಿಖಿಲ-ಜಗದೇಕ-ಕಾರಣತ್ವ, ಪರಮಜ್ಯಾಯಸ್ತ್ವ, ಪರಾಯಣತ್ವ—ಇವು ಪರಮಾತ್ಮನ ಲಿಂಗಗಳು ನಿಖಿಲಜಗತ್ಕಾರಣವು ಅಚಿದ್ವಸ್ತುವಾದ ಪ್ರಸಿದ್ಧಾಕಾಶಕ್ಕೆ ಉಂಟಾಗಲಾರದು, ಏಕೆಂದರೆ ಚೇತನವಸ್ತುಗಳು ಅಚೇತನವಸ್ತುವಿನ ಕಾರ್ಯವಾಗಲಾರವು ಅದು ಪರಾಯಣವೂ ಆಗಲಾರದು, ಏಕೆಂದರೆ

---

[1] ವಿಜ್ಞಾನಮಾನಂದಂ ಬ್ರಹ್ಮ ರಾತೇರ್ದಾತುಃ ಪರಾಯಣಮ್ ।

[2] ಸ ಏಷ ಪರೋವರೀಯಾನ್ ಉದ್ಗೀಥಃ, ಸ ಏಷೋಽನಂತಃ ।

[3] ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ ।

[4] ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್ ಪ್ರತಿಷ್ಠಿತಾ ।

[5] ಓಂ ಖಂ ಬ್ರಹ್ಮ, ಖಂ ಪುರಾಣಮ್ ।

ಅಚೇತನವು ಹೇಯವೂ ಸಕಲಪುರುಷಾರ್ಥಗಳ ವಿರೋಧಿಯೂ ಆಗಿದೆ ಅದು ಎಲ್ಲಕ್ಕಿಂತಲೂ ದೊಡ್ಡದಾಗಿಯೂ ಇರಲಾರದು , ಏಕೆಂದರೆ ಅಚಿದ್ವಸ್ತುವಿಗೆ ನಿರುಪಾಧಿಕವೂ ನಿರತಿಶಯವೂ ಆದ ಸರ್ವಕಲ್ಯಾಣಗುಣಗಳು ಸಂಭವಿಸುವುದಿಲ್ಲ ಪರಬ್ರಹ್ಮನನ್ನು ಆಕಾಶವೆಂದು ಕರೆಯಬಹುದು , ಏಕೆಂದರೆ ಪ್ರಕಾಶಸ್ವರೂಪನಾದುದರಿಂದ ಅವನು ಪ್ರಕಾಶಿಸುತ್ತಾನೆ **(ಆಕಾಶತೇ)**, ಇತರ ವಸ್ತುಗಳೂ ಪ್ರಕಾಶಿಸುವಂತೆ ಮಾಡುತ್ತಾನೆ **(ಆಕಾಶಯತಿ)** [1]

**ದ್ವೈತ** —ಆಕಾಶ-ಶಬ್ದದಿಂದ ವಾಚ್ಯನಾದವನು ವಿಷ್ಣುವೇ ನಿರವಕಾಶವಾದ ಪರೋವರೀಯಸ್ತ್ವ ಮೊದಲಾದ ಲಿಂಗಗಳಿಂದ ಆಕಾಶವೆಂಬ ಹೆಸರು ವಿಷ್ಣುವಿಗೇ ವಾಚಕವಾಗುವುದು ಯಾರ ನಿಯಮದಿಂದ ಶ್ವಾಸಮಾಡುವವರಿಗೆ ಈ ಆಕಾಶವು ಅವಕಾಶವನ್ನು ಕೊಡುತ್ತದೆಯೊ (ಅಂಥ ಆಕಾಶಕ್ಕೆ ಅವಕಾಶದಾತೃತ್ವವೂ ಸ್ವಾತಂತ್ರ್ಯವೂ ಇರಲಾರವು) [2] ಆದಕಾರಣ ಆಕಾಶ ಶಬ್ದದಿಂದ ಹರಿಯೇ ಪ್ರತಿಪಾದ್ಯನು

[1] ಸಂಭವತಿ ಚ ಪರಸ್ಯ ಬ್ರಹ್ಮಣಃ ಪ್ರಕಾಶಕತ್ವಾದ್ ಆಕಾಶಶಬ್ದಾಭಿಧೇಯತ್ವಮ್— ಆಕಾಶತೇ ಆಕಾಶಯತಿ ಚೇತಿ (ಶ್ರೀಭಾಷ್ಯ).

[2] ಪರತೋಽಪಿ ವರೀಯಸ್ತ್ವಪೂರ್ವಾಲ್ಲಿಂಗಾದ್ಧರೇರ್ಭವೇತ್ ।
ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ ॥ (ಅನುವ್ಯಾಖ್ಯಾನ)

# ೯. ಪ್ರಾಣಾಧಿಕರಣ

## ಅತ ಏವ ಪ್ರಾಣಃ ॥ ೨೩ ॥

೨೩ ಅದೇ ಕಾರಣದಿಂದಲೇ ಪ್ರಾಣವು (ಬ್ರಹ್ಮ).

ಉದ್ಗೀಥ-ಪ್ರಕರಣದಲ್ಲಿ 'ಪ್ರಸ್ತೋತೃವೆ, ಯಾವ ದೇವತೆಯು ಪ್ರಸ್ತಾವಕ್ಕೆ ಅನುಗತವಾಗಿರುವುದೋ '[1] (ಛಾಂ ಉ ೧ ೧೦ ೯) ಎಂದು ಉಪಕ್ರಮಿಸಿ, 'ಆ ದೇವತೆ ಯಾವುದು ?'[2] (ಛಾಂ ಉ ೧ ೧೧ ೪) ಎಂದು ಪ್ರಶ್ನಿಸಿದೆ, ಇದಕ್ಕೆ ಉಷಸ್ತಿ ಚಾಕ್ರಾಯಣನು ಹೀಗೆ ಉತ್ತರಕೊಡುತ್ತಾನೆ 'ಪ್ರಾಣನೇ ಆ ದೇವತೆ ಈ ಭೂತಗಳೆಲ್ಲ (ಪ್ರಲಯಕಾಲದಲ್ಲಿ) ಪ್ರಾಣನನ್ನೇ ಪ್ರವೇಶಿಸುತ್ತವೆ ಮತ್ತು (ಉತ್ಪತ್ತಿಕಾಲದಲ್ಲಿ) ಪ್ರಾಣನಿಂದಲೇ ಹೊರಬರುತ್ತವೆ ಪ್ರಸ್ತಾವಕ್ಕ ಅನುಗತವಾದ ದೇವತೆಯು ಇದೇ'[3] (ಛಾಂ ಉ ೧ ೧೧ ೫)

ಈ ಸಂದರ್ಭದಲ್ಲಿಯೂ ಸಂಶಯ-ನಿರ್ಣಯಗಳನ್ನು ಹಿಂದಿನ ಅಧಿಕರಣದಂತೆಯೇ ತಿಳಿದುಕೊಳ್ಳಬೇಕು 'ಸೋಮ್ಯ, ಮನಸ್ಸು ಪ್ರಾಣದಿಂದ ಬಂಧಿಸಲ್ಪಟ್ಟಿದೆ'[4] (ಛಾಂ ಉ ೬ ೮ ೨) ಮತ್ತು 'ಪ್ರಾಣದ ಪ್ರಾಣವನ್ನು'[5] (ಬೃ ಉ ೪ ೪ ೧೮) ಇವೇ ಮೊದಲಾದ ಶ್ರುತಿಗಳಲ್ಲಿ ಪ್ರಾಣ-ಶಬ್ದವು ಬ್ರಹ್ಮವನ್ನು ಸೂಚಿಸಿರುವುದು ಕಂಡುಬರುತ್ತದೆ ಪ್ರಾಣ-ಶಬ್ದವು ವಾಯುವಿನ ವಿಕಾರಗಳನ್ನು ಸೂಚಿಸುತ್ತದೆಯೆಂಬುದು ಲೋಕ-ವೇದಗಳಲ್ಲಿಯೂ ಇನ್ನೂ ಪ್ರಸಿದ್ಧವಾಗಿದೆ ಆದುದರಿಂದ ಈ ವಾಕ್ಯವು ಬ್ರಹ್ಮವನ್ನು ಸೂಚಿಸುತ್ತದೆಯೊ ಅಥವಾ ವಾಯುವಿಕಾರವನ್ನು ಸೂಚಿಸುತ್ತದೆಯೊ ಎಂಬ ಸಂಶಯವು ಒದಗುತ್ತದೆ

ಇಲ್ಲಿ ವಾಯುವಿಕಾರವಾದ ಪಂಚವೃತ್ತಿಗಳುಳ್ಳ ಪ್ರಾಣವನ್ನೇ ಗ್ರಹಿಸುವುದು ಯುಕ್ತವೆಂಬುದು ಪೂರ್ವಪಕ್ಷಿಯ ಮತವು, ಏಕೆಂದರೆ ಈ ಅರ್ಥದಲ್ಲಿಯೇ ಪ್ರಾಣಶಬ್ದವು ಪ್ರಸಿದ್ಧತರವಾಗಿರುತ್ತದೆ ಹಿಂದಿನ ಸೂತ್ರದಂತೆ ಬ್ರಹ್ಮದ ಲಿಂಗವು ಇಲ್ಲಿಯೂ ಇರುವುದರಿಂದ ಬ್ರಹ್ಮವನ್ನೇ ಗ್ರಹಿಸುವುದು ಯುಕ್ತವು ಮತ್ತು 'ಈ ಭೂತಗಳೆಲ್ಲ ಪ್ರಾಣನನ್ನೇ ಪ್ರವೇಶಿಸುತ್ತವೆ ಮತ್ತು ಪ್ರಾಣನಿಂದಲೇ ಹೊರಬರುತ್ತವೆ' (ಛಾಂ ಉ ೧ ೧೧ ೫) ಎಂದು ವಾಕ್ಯಶೇಷದಲ್ಲಿ ಹೇಳಿರುವುದು ಪರಮೇಶ್ವರನ ಕರ್ಮ—ಎಂಬ ವೇದಾಂತಿಯ

---

[1] ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ।

[2] ಕತಮಾ ಸಾ ದೇವತಾ ।

[3] ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ ।

[4] ಪ್ರಾಣಬಂಧನಂ ಹಿ ಸೋಮ್ಯ ಮನಃ ।

[5] ಪ್ರಾಣಸ್ಯ ಪ್ರಾಣಮ್ ।

ಆಕ್ಷೇಪಣೆ ಸರಿಯಲ್ಲ; ಏಕೆಂದರೆ ಭೂತಗಳು ಮುಖ್ಯಪ್ರಾಣನಲ್ಲಿಯೂ ಪ್ರವೇಶಿಸಿ ಹೊರ ಬರುತ್ತವೆ ಎಂದು ಶ್ರುತಿಯಲ್ಲಿ ಹೇಳಿದೆ: 'ಯಾವಾಗ ಪುರುಷನು ನಿದ್ರಿಸುವನೊ ಆಗ ಪ್ರಾಣನಲ್ಲಿ ವಾಕ್ಕು ಲಯವಾಗುವುದು, ಪ್ರಾಣನಲ್ಲಿಯೇ ಚಕ್ಷುಸ್ಸು ಶೋತ್ರ ಮನಸ್ಸು ಲಯವಾಗುವುವು. ಅವನು ಯಾವಾಗ ಎಚ್ಚರವಾಗುವನೋ ಆಗ ಪ್ರಾಣನಿಂದಲೇ ಅವು ಹೊರಬರುವುವು'[1] (ಶ. ಬ್ರಾ. ೧೦. ೩. ೩. ೬). ನಿದ್ರಾಕಾಲದಲ್ಲಿ ಪ್ರಾಣವೃತ್ತಿಗಳು ಕೆಲಸ ಮಾಡುತ್ತಿರುವಾಗ ಇಂದ್ರಿಯವೃತ್ತಿಗಳ ಕೆಲಸವು ನಿಂತುಹೋಗುವುದು ಮತ್ತು ಪ್ರಬೋಧಕಾಲದಲ್ಲಿ ಪುನಃ ವ್ಯಕ್ತವಾಗುವುದು ಎಲ್ಲರಿಗೂ ಪ್ರತ್ಯಕ್ಷವಾದ ವಿಷಯ ಇಂದ್ರಿಯಗಳು ಭೂತಗಳ ಸಾರವಾಗಿರುವುದರಿಂದ ಮುಖ್ಯಪ್ರಾಣನಲ್ಲಿ ಭೂತಗಳ ಪ್ರವೇಶ-ನಿರ್ಗಮನಗಳು ಉಂಟಾಗುವುವೆಂದು ತಿಳಿಸುವ ವಾಕ್ಯಶೇಷವು ಅದಕ್ಕೆ (ಎಂದರೆ ಮುಖ್ಯ ಪ್ರಾಣನಿಗೆ) ವಿರುದ್ಧವಾಗಿರುವುದಿಲ್ಲ. ಇದಲ್ಲದೆ ಪ್ರಸ್ತಾವದೇವತೆಯಾದ ಪ್ರಾಣನನ್ನು ಹೇಳಿದಮೇಲೆ ಆದಿತ್ಯ, ಅನ್ನ—ಇವು ಉದ್ಗೀಥ-ಪ್ರತಿಹಾರಗಳಿಗೆ ದೇವತೆಗಳೆಂದು ಹೇಳಿದೆ. ಅವುಗಳು ಬ್ರಹ್ಮವಲ್ಲದುದರಿಂದ ಅವುಗಳಿಗೆ ಸಮಾನವಾದ ಪ್ರಾಣವೂ ಬ್ರಹ್ಮವಲ್ಲ.

ಪ್ರಾಣ-ಶಬ್ದವು ಪರಬ್ರಹ್ಮವನ್ನೇ ಸೂಚಿಸುತ್ತದೆ ಎಂಬುದು ಸೂತ್ರಕಾರರ ಸಿದ್ಧಾಂತ. ಹಿಂದಿನ ಸೂತ್ರದಲ್ಲಿ ಹೇಳಿದ **ತಲ್ಲಿಂಗಾತ್** ('ಏಕೆಂದರೆ ಬ್ರಹ್ಮದ ಲಿಂಗಗಳು ಇವೆ') ಎಂಬುದನ್ನು ಇಲ್ಲಿಯೂ ನೇರಿಸಿಕೊಳ್ಳಬೇಕು ಪ್ರಾಣಕ್ಕೂ ಕೂಡ ಬ್ರಹ್ಮಲಿಂಗದ ಸಂಬಂಧವನ್ನು ಶ್ರುತಿಯು ಹೇಳುತ್ತದೆ: 'ಈ ಭೂತಗಳೆಲ್ಲ ಪ್ರಾಣನನ್ನೇ ಪ್ರವೇಶಿಸುತ್ತವೆ ಮತ್ತು ಪ್ರಾಣನಿಂದಲೇ ಹೊರಬರುತ್ತವೆ' (ಛಾಂ. ಉ. ೧. ೧೧. ೫). ಸರ್ವಭೂತಗಳು ತಮ್ಮ ಉತ್ಪತ್ತಿ-ಪ್ರಲಯಗಳಿಗೆ ಪ್ರಾಣವನ್ನೇ ಅವಲಂಬಿಸಿವೆ ಎಂಬುದು ಪ್ರಾಣನೇ ಬ್ರಹ್ಮವೆಂಬುದನ್ನು ತಿಳಿಸಿಕೊಡುತ್ತದೆ.

ಇಲ್ಲಿ ಮುಖ್ಯಪ್ರಾಣನನ್ನು ಗ್ರಹಿಸಿದರೂ ಭೂತಗಳ ಪ್ರವೇಶ-ನಿರ್ಗಮನಗಳು ವಿರುದ್ಧವಾಗುವುದಿಲ್ಲ, ಏಕೆಂದರೆ ನಿದ್ರೆ-ಎಚ್ಚರಗಳಲ್ಲಿಯೂ ಕೂಡ ಪ್ರವೇಶ-ನಿರ್ಗಮನಗಳು ಕಂಡುಬರುತ್ತವೆ ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ: ನಿದ್ರೆ-ಎಚ್ಚರಗಳಲ್ಲಿ ಕೇವಲ ಇಂದ್ರಿಯಗಳು ಮಾತ್ರ ಮುಖ್ಯಪ್ರಾಣನನ್ನು ಪ್ರವೇಶಿಸಿ ಹೊರಬರುತ್ತವೆಯೇ ವಿನಾ ಸರ್ವ ಭೂತಗಳಲ್ಲ. ಆದರೆ ಇಲ್ಲಿ (ಎಂದರೆ 'ಈ ಭೂತಗಳೆಲ್ಲ...' ಎಂಬಲ್ಲಿ) ಶರೀರೇಂದ್ರಿಯ ಗಳಿಂದ ಕೂಡಿದ, ಜೀವರಿಂದ ಪ್ರವಿಷ್ಟವಾದ, ಭೂತಗಳೆಲ್ಲ ಇದನ್ನು ಪ್ರವೇಶಿಸಿ ಹೊರ ಬರುವುವು ಎಂದು ಹೇಳಿದೆ. ಇಲ್ಲಿ ಭೂತಶಬ್ದವನ್ನು ಪಂಚಮಹಾಭೂತಗಳೆಂದು ಗ್ರಹಿಸಿ ದರೂ ಅದು ಬ್ರಹ್ಮದ ಲಿಂಗವೆಂದು ಅರಿತುಕೊಳ್ಳಲು ವಿರುದ್ಧವಾಗುವುದಿಲ್ಲ.

'ಯಾವಾಗ ನಿದ್ರಿಸುತ್ತಿರುವವನು ಯಾವ ಸ್ವಪ್ನವನ್ನೂ ಕಾಣದಿರುವನೊ ಆಗ ಈ ಪ್ರಾಣನಲ್ಲಿಯೇ ಒಂದಾಗುತ್ತಾನೆ, ಆಗ ಇವನಲ್ಲಿ ವಾಕ್ಕೂ ಎಲ್ಲ ಹೆಸರುಗಳೊಂದಿಗೆ ಲಯ

---

1 ಯದಾ ವೈ ಪುರುಷಃ ಸ್ವಪಿತಿ ಪ್ರಾಣಂ ತರ್ಹಿ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಂ ಶ್ರೋತ್ರಂ ಪ್ರಾಣಂ ಮನಃ ಸ ಯದಾ ಪ್ರಬುಧ್ಯತೇ ಪ್ರಾಣಾದೇವಾಧಿ ಪುನರ್ಜಾಯಂತೇ ।

ವಾಗುತ್ತದ'[1] (ಕೌ ಉ ೩ ೩) ಎಂಬ ಶ್ರುತಿಯ ಪ್ರಕಾರ ಪುರುಷನು ಸುಪ್ತನಾದಾಗ ಇಂದ್ರಿಯಗಳು ವಿಷಯಗಳೊಂದಿಗೆ ಪ್ರಾಣನನ್ನು ಪ್ರವೇಶಿಸುತ್ತವೆ, ಎಚ್ಚರವಾದಾಗ ಹೊರಬರುತ್ತವೆ ಎಂಬ ಆಕ್ಷೇಪವನ್ನು ಮಾಡಿದರೂ ಪ್ರಾಣಶಬ್ದವು—ಲಿಂಗವಿರುವುದರಿಂದ —ಬ್ರಹ್ಮವನ್ನೇ ಸೂಚಿಸುತ್ತದ

ಪ್ರಾಣ-ಶಬ್ದವು ಅನ್ನ, ಆದಿತ್ಯ—ಎಂಬ ಪದಗಳ ಸಾನ್ನಿಧ್ಯದಲ್ಲಿರುವುದರಿಂದ ಬ್ರಹ್ಮವನ್ನು ಸೂಚಿಸುವುದಿಲ್ಲ ಎಂಬ ಪೂರ್ವಪಕ್ಷವೂ ಸರಿಯಲ್ಲ, ಏಕೆಂದರೆ ವಾಕ್ಯ-ಶೇಷದ ಬಲದಿಂದ ಪ್ರಾಣ-ಶಬ್ದವು ಬ್ರಹ್ಮವನ್ನು ಸೂಚಿಸುತ್ತದೆಯೆಂದು ತಿಳಿದ ಮೇಲೆ ಸಾನ್ನಿಧ್ಯ ದಿಂದ ಯಾವ ಪ್ರಯೋಜನವೂ ಆಗುವುದಿಲ್ಲ

ಇನ್ನು ಪ್ರಾಣ-ಶಬ್ದವು ಪಂಚವೃತ್ತಿಗಳುಳ್ಳ ವಾಯುವಿಕಾರದ ಅರ್ಥದಲ್ಲಿ ಪ್ರಸಿದ್ಧ ತರವಾಗಿದೆ ಎಂಬ ಆಕ್ಷೇಪಣೆಗೆ ಹಿಂದಿನ ಸೂತ್ರದಲ್ಲಿ ಆಕಾಶ-ಶಬ್ದಕ್ಕೆ ಪರಿಹಾರವನ್ನು ಹೇಳಿರುವಂತೆಯೇ ಇಲ್ಲಿಯೂ ತಿಳಿದುಕೊಳ್ಳಬೇಕು

ಆದುದರಿಂದ ಪ್ರಸ್ತಾವದ ದೇವತೆಯಾದ ಪ್ರಾಣನು ಬ್ರಹ್ಮವೆಂದೇ ಸಿದ್ಧವಾಗುತ್ತದೆ

ಕೆಲವರು 'ಪ್ರಾಣದ ಪ್ರಾಣವನ್ನು' (ಬೃ ಉ ೪ ೪ ೧೮), 'ಮನಸ್ಸು ಪ್ರಾಣ ದಿಂದ ಬಂಧಿಸಲ್ಪಟ್ಟಿದೆ' (ಛಾಂ ಉ ೬ ೮ ೨) ಎಂಬ ವಾಕ್ಯಗಳನ್ನು ಈ ಅಧಿಕರಣಕ್ಕೆ ವಿಷಯವಾಗಿ ಉದಾಹರಿಸುತ್ತಾರೆ ಇಲ್ಲಿ ಸಂಶಯಕ್ಕೆ ಅವಕಾಶವೇ ಇಲ್ಲದುದರಿಂದ ಈ ಉದಾಹರಣೆಗಳು ಸರಿಯಲ್ಲ ಪ್ರಸ್ತಾವದೇವತೆಯಾದ ಪ್ರಾಣನ ವಿಷಯದಲ್ಲಾದರೆ ಸಂಶಯ ಪೂರ್ವಪಕ್ಷ ನಿರ್ಣಯ—ಇವುಗಳನ್ನೆಲ್ಲ ಹೇಳಲು ಸಾಧ್ಯವಾಗುತ್ತದ

ವಿ.—ಸಮಸ್ತಭೂತಸಮೂಹದ ಸ್ಥಿತಿ-ಪ್ರವೃತ್ತಿಗಳು ಪ್ರಾಣನನ್ನೇ ಅವಲಂಬಿ ಸಿರುವುದರಿಂದ ಈ ಪ್ರಸಿದ್ಧನಾದ ಪ್ರಾಣನೇ ಜಗತ್ಕಾರಣವೆಂಬ ಸಂಶಯವುಂಟಾಗ ಬಹುದು ಇದಕ್ಕ ಪರಿಹಾರ ಹೀಗಿದ ಶಿಲಾ-ಕಾಷ್ಠಾದಿ ಅಚೇತನಗಳಲ್ಲಿ ಪ್ರಾಣನಿಲ್ಲ, ಚೇತನಸ್ವರೂಪದಲ್ಲಿಯೂ ಪ್ರಾಣನಿಲ್ಲ ಆದುದರಿಂದ ಪ್ರಸಿದ್ಧನಾದ ಪ್ರಾಣನು ಜಗ ತ್ಕಾರಣನಾಗಲಾರನು ಪರಬ್ರಹ್ಮನು ಸಮಸ್ತ ಜೀವಿಗಳಿಗೂ ಪ್ರಾಣವನ್ನು ಕೊಡುವುದ ರಿಂದ ಅವನನ್ನೇ ಪ್ರಾಣನೆಂದು ಕರೆಯಲಾಗಿದೆ [2]

ದ್ವೈ —'ನೀನೇ ಆ ಪ್ರಾಣನಾಗಿದ್ದೀಯೆ'[3] ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಪ್ರಾಣನು ಪರಬ್ರಹ್ಮನೇ, ಪ್ರಸಿದ್ಧವಾದ ವಾಯುವಲ್ಲ ಈ ವಾಕ್ಯದಲ್ಲಿರುವ ಮಹಾ

---

[1] ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ತದೈನಂ ವಾಕ್ಸರ್ವೈರ್ನಾಮಭಿಃ ಸಹಾಪ್ಯೇತಿ ।

[2] ಅತಃ ಪ್ರಾಣಯತಿ ಸರ್ವಾಣಿ ಭೂತಾನೀತಿ ಕೃತ್ವಾ ಪರಂ ಬ್ರಹ್ಮೈವ ಪ್ರಾಣಶಬ್ದೇ ನಾಭಿಧೀಯತೇ (ಶ್ರೀಭಾಷ್ಯ)

[3] ತದ್ವೈ ತ್ವಂ ಪ್ರಾಣೋಽಭವಃ ಮಹಾನ್ಭೋಗಃ ಪ್ರಜಾಪತೇಃ । ಭುಜಃ ಕರಿಷ್ಯ- ಮಾಣಃ ಯದ್ದೇವಾನ್ ಪ್ರಾಣಯೋ ನವೇತಿ ಮಹಾಭೋಗಶಬ್ದೇನ ಪರಮಾನಂದತ್ವಂ ಪ್ರಾಣ- ಸ್ಯೋಕ್ತಮ್ (ಮ ಭಾ)

ಭೋಗ-ಶಬ್ದವು ಪ್ರಾಣನಿಗೆ ಪರಮಾನಂದತ್ವವನ್ನು ಸೂಚಿಸುತ್ತದೆ. ಆದುದರಿಂದ ವಿಷ್ಣುವೇ ಪ್ರಾಣನು;[1] ಮತ್ತು ಶ್ರೀ-ಲಕ್ಷ್ಮೀ-ಪತಿತ್ವಲಿಂಗದಿಂದಲೂ[2] ಪ್ರಾಣ-ಪದ ವಾಚ್ಯನು ವಿಷ್ಣುವೇ.

---

[1] ಯತೋ ವಿಷ್ಣುರೇವ ಪ್ರಾಣಃ (ಮ. ಭಾ.).

[2] ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ।

# ೧೦. ಜ್ಯೋತಿಶ್ಚರಣಾಧಿಕರಣ*

(ಸೂ. ೨೪-೨೭)

## ಜ್ಯೋತಿಶ್ಚರಣಾಭಿಧಾನಾತ್ ॥ ೨೪ ॥

೨೪. ಜ್ಯೋತಿಯು (ಬ್ರಹ್ಮವು) ; ಏಕೆಂದರೆ (ಪೂರ್ವವಾಕ್ಯದಲ್ಲಿ ಬ್ರಹ್ಮದ) ಪಾದವನ್ನು ಹೇಳಿರುತ್ತದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಈ ವಾಕ್ಯವು ಬರುತ್ತದೆ: 'ಇನ್ನು ಆ ದ್ಯುಲೋಕಕ್ಕಿಂತ ಆಚೆಗೆ, ಎಲ್ಲಕ್ಕಿಂತ ಮೇಲುಗಡೆ, ಎಂದರೆ ಪ್ರತಿಯೊಂದರ ಮೇಲುಗಡೆ, ಉತ್ಕೃಷ್ಟವಾದ ಉತ್ತಮಲೋಕಗಳಲ್ಲಿ ಯಾವ ಜ್ಯೋತಿಯು ಪ್ರಕಾಶಿಸುತ್ತಿರುವುದೊ ಅದೇ ಪುರುಷಶರೀರದಲ್ಲಿರುವ ಜ್ಯೋತಿಯು'[1] (೩. ೧೩. ೭) ಇಲ್ಲಿ ಸಂಶಯವು ತಲೆದೋರುತ್ತದೆ: ಜ್ಯೋತಿಃಶಬ್ದವು ಆದಿತ್ಯನೇ ಮೊದಲಾದ ಭೌತಜ್ಯೋತಿಯನ್ನು ಸೂಚಿಸುತ್ತದೆಯೆ ?

ಜ್ಯೋತಿಃಶಬ್ದವು ಭೌತಜ್ಯೋತಿಯನ್ನೇ ಸೂಚಿಸುತ್ತದೆ ಎಂಬುದು ಪೂರ್ವಪಕ್ಷ; ಏಕೆಂದರೆ ಇದು ಆ ಶಬ್ದದ ಪ್ರಸಿದ್ಧವಾದ ಅರ್ಥ. ಕತ್ತಲೆ-ಬೆಳಕುಗಳು ಒಂದಕ್ಕೊಂದು ವಿರುದ್ಧವಾಗಿರುತ್ತವೆ; ಆದುದರಿಂದ ಜ್ಯೋತಿಯೆಂದರೆ ಪ್ರಾಕೃತವಾದ ಬೆಳಕು ಎಂದೇ ಅರಿತುಕೊಳ್ಳಬೇಕು. 'ಪ್ರಕಾಶಿಸುತ್ತದೆ' **(ದೀಪ್ಯತೇ)** ಎಂಬ ಶಬ್ದವು ಆದಿತ್ಯಾದಿವಿಷಯದಲ್ಲಿಯೇ ಅನ್ವಯಿಸುತ್ತದೆ; ರೂಪಾದಿರಹಿತವಾದ ಬ್ರಹ್ಮವನ್ನು ಆ ಶಬ್ದವು ನಿರ್ದೇಶಿಸಲಾರದು. ಜ್ಯೋತಿಗೆ ಒಂದು ಪ್ರಾಕೃತ ಎಲ್ಲೆಯನ್ನು ಕಲ್ಪಿಸಿರುವುದರಿಂದ ('ದ್ಯುಲೋಕಕ್ಕಿಂತ ಆಚೆಗೆ') ಅದು ಸರ್ವಾತ್ಮಕವೂ ಚರಾಚರಬೀಜವೂ ಆದ ಬ್ರಹ್ಮವನ್ನು ಸೂಚಿಸಲಾರದು ತ್ರಿವೃತ್ಕೃತವಾಗದ ತೇಜಸ್ಸು (ಛಾಂ. ಉ. ೬. ೩) ಈ ಜ್ಯೋತಿಯಾಗಲೆಂದು ಹೇಳಲೂ ಆಗುವುದಿಲ್ಲ; ಏಕೆಂದರೆ ಅದು ಉಪಾಸ್ಯವಸ್ತುವೂ ಆಗಲಾರದು. ತಮಸ್ಸನ್ನು ನಾಶಮಾಡಲೂ ಶಕ್ತವಾಗಿರಲಾರದು. 'ದ್ಯುಲೋಕಕ್ಕಿಂತ ಆಚೆಗೆ' (ಛಾಂ. ಉ. ೩. ೧೪. ೭) ಎಂಬ ವಿಶೇಷವನ್ನು ಬ್ರಹ್ಮಕ್ಕೆ ಅನ್ವಯಿಸಲೂ ಸಾಧ್ಯವಿಲ್ಲ; ಏಕೆಂದರೆ ಬ್ರಹ್ಮಕ್ಕೆ ಪ್ರದೇಶಗಳೂ ಇಲ್ಲ, ಆಧಾರಗಳೂ ಇಲ್ಲ. ದ್ಯುಲೋಕಕ್ಕಿಂತ ಆಚೆಯಿರುವ ಜ್ಯೋತಿಯು ಮತ್ತೊಂದು ಕಾರಣದಿಂದಲೂ ಬ್ರಹ್ಮವಾಗಲಾರದು; ಏಕೆಂದರೆ ಅದೇ ಜಠರದಲ್ಲಿರುವ,

---

* ಇದನ್ನು ಮಧ್ವಭಾಷ್ಯದಲ್ಲಿ ಜ್ಯೋತಿರ್ಗಾಯತ್ರ್ಯಧಿಕರಣ ಎಂದು ಕರೆದಿದೆ.

1 ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು, ಸರ್ವತಃ ಪೃಷ್ಠೇಷು, ಅನುತ್ತಮೇಷು ಉತ್ತಮೇಷು ಲೋಕೇಷು ಇದಂ ವಾವ ತದ್ಯದಿದಮಸ್ಮಿನ್ನಂತಃ-ಪುರುಷೇ ಜ್ಯೋತಿಃ ।

ಎಂದರೆ ಪುರುಷಶರೀರದಲ್ಲಿರುವ, ಜ್ಯೋತಿಯೂ ಆಗಿರುವುದು ಈ ಜ್ಯೋತಿಯನ್ನು ಉಪಾಸನೆಮಾಡುವವನು 'ದರ್ಶನೀಯನೂ ವಿಶ್ರುತನೂ ಆಗುತ್ತಾನೆ' (ಛಾಂ ಉ ೩ ೧೩ ೭) ಎಂದು ಅಲ್ಪಫಲವನ್ನು ಹೇಳಿದ ಆದರೆ ಬ್ರಹ್ಮೋಪಾಸನೆಯ ಫಲವು ಮೋಕ್ಷವು ಈ ವಾಕ್ಯದಲ್ಲಿ ಬ್ರಹ್ಮದ ಯಾವ ಲಿಂಗವೂ ಕಂಡುಬರುತ್ತಿಲ್ಲ 'ಇಲ್ಲಿ ಏನೇನಿರುವುದೊ ಅದೆಲ್ಲವೂ ಗಾಯತ್ರಿಯೇ'[1] (ಛಾಂ ಉ ೩ ೧೨ ೧) ಎಂಬ ಹಿಂದಿನ ವಾಕ್ಯದಲ್ಲಿ ಬ್ರಹ್ಮವನ್ನು ನಿರ್ದೇಶಿಸಿಲ್ಲ, ಛಂದಸ್ಸನ್ನು ಮಾತ್ರ ನಿರ್ದೇಶಿಸಿದ

ಇಲ್ಲಿ ಜ್ಯೋತಿಃಶಬ್ದವು ಬ್ರಹ್ಮವನ್ನೇ ಸೂಚಿಸುತ್ತದ ಎಂಬುದು ಸಿದ್ಧಾಂತ, ಏಕೆಂದರೆ 'ಈ ಜಗತ್ತೆಲ್ಲ ಇವನ ಒಂದು ಪಾದವಾಗಿದೆ ಇವನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ'[2] (ಛಾಂ ಉ ೩ ೧೨ ೬) ಎಂಬ ವಾಕ್ಯದಲ್ಲಿ ಬ್ರಹ್ಮಕ್ಕೆ ನಾಲ್ಕು ಪಾದಗಳಿವೆಯೆಂದು ಹೇಳಿದ ಈ ಅಮೃತವಾದ ಪಾದಗಳು ಸಾಮಾನ್ಯವಾದ ಜ್ಯೋತಿಯವಾಗಲಾರವು

ಹಿಂದಿನ ವಾಕ್ಯದಲ್ಲಿ, ಈ ಜ್ಯೋತಿರ್ವಾಕ್ಯದಲ್ಲಿ ಮತ್ತು ಮುಂದ ಬರುವ ಶಾಂಡಿಲ್ಯ ವಿದ್ಯೆಯಲ್ಲಿ[3] ಒಂದೇ ವಿಷಯವನ್ನು ಹೇಳಲಾಗಿದೆ—ಅದು ಬ್ರಹ್ಮ ಪ್ರಕರಣದ ವಿಷಯವು ಬ್ರಹ್ಮವೇ ಆಗಿರುವಾಗ, 'ಜ್ಯೋತಿ' 'ಪ್ರಕಾಶಿಸುತ್ತದ' ಎಂಬ ಪದಗಳನ್ನು—ಬ್ರಹ್ಮವನ್ನು ಬಿಟ್ಟು—ಭೌತಜ್ಯೋತಿಗೆ ಮಾತ್ರ ಅನ್ವಯಿಸಬೇಕಾಗಿಲ್ಲ, ಏಕಂದರೆ ದೀಪ್ಯಮಾನವಾದ ಕಾರ್ಯಜ್ಯೋತಿಯಿಂದ ಉಪಲಕ್ಷಿತವಾದ ಬ್ರಹ್ಮವನ್ನೂ ಆ ಪದಗಳು ಸೂಚಿಸುತ್ತವೆ[4] ಅನೇಕ ಶ್ರುತಿವಾಕ್ಯಗಳಲ್ಲಿ[5] ಯಾವ ವಸ್ತುವಿಗೇ ಆಗಲಿ ಇನ್ನೊಂದನ್ನು ಪ್ರಕಾಶಿಸುವ ಶಕ್ತಿಯಿದ್ದರೆ ಅದನ್ನು ಜ್ಯೋತಿಯೆಂದು ಕರೆದಿದೆ, ಹೀಗಿರುವಾಗ ಚೈತನ್ಯರೂಪವುಳ್ಳ ಬ್ರಹ್ಮಕ್ಕೆ ಜ್ಯೋತಿಃಶಬ್ದವು ಹೊಂದುತ್ತದೆ, ಏಕೆಂದರೆ ಅದು ಜಗತ್ತೆಲ್ಲವನ್ನೂ ಪ್ರಕಾಶಿಸುತ್ತದ[6]

ಇನ್ನು ಸರ್ವಗತವಾದ ಬ್ರಹ್ಮಕ್ಕೆ ದ್ಯುಲೋಕವೆಂಬ ಎಲ್ಲೆಯು ಹೊಂದುವುದಿಲ್ಲವೆಂಬ ಪಕ್ಷಕ್ಕೆ ಇದು ಉತ್ತರ ಇಲ್ಲಿ ವಿರೋಧವೇನೂ ಕಂಡುಬರುವುದಿಲ್ಲ, ಏಕೆಂದರೆ

---

[1] ಗಾಯತ್ರೀ ವಾ ಇದಂ ಸರ್ವಂ ಭೂತಮ್ ।

[2] ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ।

[3] ಸರ್ವಂ ಖಲ್ವಿದಂ ಬ್ರಹ್ಮ (ಛಾಂ ಉ ೩ ೧೪, ೧)

[4] 'ಯಾವ ತೇಜಸ್ಸಿನಿಂದ ಹೊತ್ತಿಕೊಂಡು ಸೂರ್ಯನು ತಪಿಸುತ್ತಾನೆಯೊ' ಯೇನ ಸೂರ್ಯಸ್ತಪತಿ ತೇಜಸೇದ್ಧಃ (ತೈ ಬ್ರಾ ೩ ೧೨ ೯ ೭)

[5] 'ಶಬ್ದವೇ ಅವನ ಜ್ಯೋತಿಯಾಗಿರುತ್ತದೆ' ವಾಚೈವಾಯಂ ಜ್ಯೋತಿಷಾಽಽಸ್ತೇ (ಬೃ ಉ ೪ ೩ ೮), '(ಅಜ್ಯವನ್ನು) ಸೇವಿಸುವವರಿಗೆ ಮನಸ್ಸು ಪ್ರಕಾಶಕವು' ಮನೋ ಜ್ಯೋತಿರ್ಜುಷತಾಮ್ (ತೈ ಸಂ ೧ ೬ ೩ ೩)

[6] ತಥಾ ಸತಿ ಬ್ರಹ್ಮಣೋಽಪಿ ಚೈತನ್ಯರೂಪಸ್ಯ ಸಮಸ್ತಜಗದವಭಾಸಹೇತುತ್ವಾದ್ ಉಪಪನ್ನೋ ಜ್ಯೋತಿಃಶಬ್ದಃ (ಸೂ ಭಾ)

ಉಪಾಸನೆಗಾಗಿ ಸರ್ವಗತವಾದ ಬ್ರಹ್ಮಕ್ಕೂ ಒಂದು ಪ್ರದೇಶವನ್ನು ಪರಿಗ್ರಹಿಸಬಹುದು.[1] ಆದುದರಿಂದ ಶ್ರುತಿಯು 'ಹೃದಯದಲ್ಲಿ' 'ಆದಿತ್ಯನಲ್ಲಿ' 'ಕಣ್ಣಿನಲ್ಲಿ' ಎಂದು ಆಯಾ ಪ್ರದೇಶಸಂಬಂಧವುಳ್ಳ ಉಪಾಸನೆಗಳನ್ನು ಹೇಳುತ್ತದೆ. ಇದೇ ಕಾರಣದಿಂದ ಬ್ರಹ್ಮಕ್ಕೆ ಅನೇಕ ಆಧಾರಗಳನ್ನೂ ಹೇಳಬಹುದು. ಪರಬ್ರಹ್ಮಕ್ಕೆ ನಾಮವೇ ಮೊದಲಾದ ಪ್ರತೀಕಗಳಿರುವಂತೆ ಜಠರದಲ್ಲಿರುವ ಜ್ಯೋತಿಯನ್ನೂ ಪ್ರತೀಕವೆಂದು ಪರಿಗ್ರಹಿಸಬಹುದು. ಇದಲ್ಲದೆ 'ಇಷ್ಟು ಫಲಕ್ಕೆ ಬ್ರಹ್ಮವನ್ನು ಆಶ್ರಯಿಸಬೇಕು, ಇಷ್ಟಕ್ಕೆ ಕೂಡದು' ಎಂದು ನಿಯಮಿಸುವ ಕಾರಣವು ಯಾವುದೂ ಇಲ್ಲ. ಎಲ್ಲಿ ಸರ್ವವಿಶೇಷರಹಿತವಾದ ಪರಬ್ರಹ್ಮವನ್ನು ಉಪದೇಶಿಸಿರುತ್ತದೆಯೊ ಅಲ್ಲಿ ಮೋಕ್ಷವೇ ಫಲ ; ಎಲ್ಲಿ ಗುಣವಿಶೇಷಸಂಬಂಧವುಳ್ಳ ಅಥವಾ ಪ್ರದೇಶವಿಶೇಷಸಂಬಂಧವುಳ್ಳ ಬ್ರಹ್ಮವನ್ನು ಉಪದೇಶಿರುತ್ತದೆಯೊ ಅಲ್ಲಿ ಸಂಸಾರ-ಗೋಚರವಾದ ಸಣ್ಣ ದೊಡ್ಡ ಫಲಗಳನ್ನು ಹೇಳಿರುತ್ತದೆ. ಆದುದರಿಂದ ಜ್ಯೋತಿಃ-ಶಬ್ದವು ಬ್ರಹ್ಮವನ್ನೇ ಸೂಚಿಸುತ್ತದೆ.

**ವಿ.—ಅಥ ಯದತಃ ಪರೋ ದಿವೋ ಜ್ಯೋತಿಃ** ಎಂಬಲ್ಲಿ ಪರಮ-ಪುರುಷನ ಅಸಾಧಾರಣವಾದ ಲಿಂಗವನ್ನು ಹೇಳದಿದ್ದರೂ ಹಿಂದಿನ ವಾಕ್ಯವು **(ಪಾದೋಽಸ್ಯ ಸರ್ವಾ ಭೂತಾನಿ)** ದ್ಯುಲೋಕಸಂಬಂಧವುಳ್ಳ ಪರಮಪುರುಷನನ್ನೇ ನಿರ್ದೇಶಿಸಿರುವುದರಿಂದ ಅಮಿತ-ಭಾಸ್ವರೂಪನಾದ ಪುರುಷೋತ್ತಮನೇ ಆ ಜ್ಯೋತಿಯಾಗಿರುತ್ತಾನೆ. ತಾನು ಕುಕ್ಷಿಗತ-ಜ್ಯೋತಿಯ ಆತ್ಮನಾಗಿರುತ್ತಾನೆಂದು ಭಗವಂತನೇ ಹೇಳಿರುತ್ತಾನೆ : ' ನಾನು ಜಠರಾಗ್ನಿರೂಪದಿಂದ ' ಪ್ರಾಣಿಗಳ ಶರೀರವನ್ನು ಆಶ್ರಯಿಸಿ ...ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ'[2] (ಗೀತಾ ೧೫. ೧೪).

**ದ್ವೈ.**—ವಿಷ್ಣುವೇ ಜ್ಯೋತಿಯು ; ಏಕೆಂದರೆ ಕರ್ಣವೇ ಮೊದಲಾದ ಇಂದ್ರಿಯಗಳು ಇದಕ್ಕಿಂತ ಅತ್ಯಂತ ದೂರದಲ್ಲಿವೆ. 'ಇಂದ್ರಿಯಾತೀತವಾದ ಸ್ವರೂಪದಿಂದ ವೃದ್ಧಿಯನ್ನು ಹೊಂದಿರುವ ಎಲ್ಲೆ ವಿಷ್ಣುವೇ' [3] (ಋ. ವೇ. ೭. ೯೯. ೧) ಮೊದಲಾದ ವಾಕ್ಯಗಳಲ್ಲಿ ವಿಷ್ಣುವಿಗೆ ಕರ್ಣವೇ ಮೊದಲಾದ ಸರ್ವೇಂದ್ರಿಯಗಳ ವಿದೂರತ್ವವನ್ನು ಹೇಳಿದೆ.

---

[1] ಸರ್ವಗತಸ್ಯಾಪಿ ಬ್ರಹ್ಮಣ ಉಪಾಸನಾರ್ಥಃ ಪ್ರದೇಶವಿಶೇಷಪರಿಗ್ರಹೋ ನ ವಿರುಧ್ಯತೇ (ಸೂ. ಭಾ.).

[2] ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।

[3] ಪರೋ ಮಾತ್ರಯಾ ತನ್ವಾ ವೃಧಾನ ।

**ಛಂದೋಽಭಿಧಾನಾನ್ನೇತಿ ಚೇನ್ನ, ತಥಾ ಚೇತೋಽರ್ಪಣನಿಗದಾತ್,* ತಥಾ ಹಿ ದರ್ಶನಮ್ ॥ ೨೫ ॥**

೨೫. (ಗಾಯತ್ರೀ-) ಛಂದಸ್ಸನ್ನು ಹೇಳಿರುವುದರಿಂದ (ಬ್ರಹ್ಮವನ್ನು) ಸೂಚಿಸಿಲ್ಲವೆಂದರೆ ಅದು ಸರಿಯಲ್ಲ; ಏಕೆಂದರೆ (ಛಂದಸ್ಸಿನ ಮೂಲಕ) ಮನಸ್ಸನ್ನು (ಬ್ರಹ್ಮದಲ್ಲಿ) ಅರ್ಪಣಮಾಡಬೇಕೆಂದು ಹೇಳಿದೆ; ಹೀಗೆಯೇ ಇದು (ಬೇರೆ ವಾಕ್ಯಗಳಲ್ಲಿಯೂ) ಕಂಡುಬರುತ್ತದೆ.

ಹಿಂದಿನ ವಾಕ್ಯದಲ್ಲಿಯೂ ಬ್ರಹ್ಮವನ್ನು ಹೇಳಿಲ್ಲ, ಗಾಯತ್ರೀಛಂದಸ್ಸನ್ನೇ ಹೇಳಿದೆ[1] ಎಂಬ ಪೂರ್ವಪಕ್ಷಕ್ಕೆ ಇದು ಪರಿಹಾರ. ಈ ಬ್ರಾಹ್ಮಣವಾಕ್ಯವು (ಛಾಂ. ಉ. ೩. ೧೨. ೧) ಗಾಯತ್ರೀಛಂದಸ್ಸಿನ ಮೂಲಕ ಅದರಲ್ಲಿ ಅನುಗತವಾಗಿರುವ ಬ್ರಹ್ಮದಲ್ಲಿ ಚಿತ್ತವನ್ನು ಅರ್ಪಣಮಾಡಬೇಕೆಂದು ತಿಳಿಸುತ್ತದೆ. ಕೇವಲ ಅಕ್ಷರಗಳ ಸಮೂಹವಾಗಿರುವ ಗಾಯತ್ರಿಯು ಸರ್ವಾತ್ಮಕವಾಗಲಾರದು. ಆದುದರಿಂದ ಗಾಯತ್ರೀ ಎಂಬ ಕಾರ್ಯದಲ್ಲಿ ಅನುಗತವಾಗಿರುವ ಜಗತ್ಕಾರಣವಾದ ಬ್ರಹ್ಮವನ್ನೇ ಇಲ್ಲಿ 'ಎಲ್ಲವೂ' ಎಂದು ಹೇಳಿದೆ. ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲ ಎಂದು ಮುಂದೆ (೨. ೧. ೧೪) ಸೂತ್ರವೇ ತಿಳಿಸುತ್ತದೆ. ಬೇರೆ ಶ್ರುತಿಗಳಲ್ಲಿಯೂ[2] ಕಾರ್ಯದ ಮೂಲಕ ಬ್ರಹ್ಮೋಪಾಸನೆಯನ್ನು ವಿಧಿಸಿರುವುದು ಕಂಡುಬರುತ್ತದೆ.

ಗಾಯತ್ರೀ-ಶಬ್ದವು ಬ್ರಹ್ಮವನ್ನು ಸಾಕ್ಷಾತ್ತಾಗಿ ಸೂಚಿಸುತ್ತದೆ, ಏಕೆಂದರೆ ಗಾಯತ್ರಿಗೂ ಬ್ರಹ್ಮಕ್ಕೂ ಪಾದಗಳು ಸಮಾನವಾಗಿರುತ್ತವೆ—ಎಂದು ವೃತ್ತಿಕಾರರು ಹೇಳಿರುತ್ತಾರೆ. ಈ ಪಕ್ಷದಲ್ಲಿಯೂ ಬ್ರಹ್ಮವನ್ನೇ ಹೇಳಿರುತ್ತದೆಯೇ ಹೊರತು ಛಂದಸ್ಸನ್ನು ಹೇಳಿರುವುದಿಲ್ಲ. ಸರ್ವಥಾ ಹಿಂದಿನ ವಾಕ್ಯದಲ್ಲಿ ಬ್ರಹ್ಮವನ್ನೇ ಸೂಚಿಸಿರುತ್ತದೆ.

**ವಿ.**—ಇಲ್ಲಿ ಗಾಯತ್ರೀ-ಶಬ್ದವು ಛಂದಸ್ಸನ್ನು ಮಾತ್ರ ಸೂಚಿಸುವುದಿಲ್ಲ; ಏಕೆಂದರೆ ಇದು ಸರ್ವಾತ್ಮವಾಗಲಾರದು. ಗಾಯತ್ರಿಯು ಹಾಗೆ ನಾಲ್ಕು ಪಾದಗಳುಳ್ಳ ಪರಬ್ರಹ್ಮನನ್ನೂ ಧ್ಯಾನಿಸಬೇಕೆಂದು ಶ್ರುತಿಯು (ಛಾಂ. ಉ. ೩. ೧೨ ೬) ತಿಳಿಸುತ್ತದೆ. ಸಾಮಾನ್ಯವಾಗಿ ಗಾಯತ್ರಿಗೆ ಮೂರು ಪಾದಗಳಿದ್ದರೂ ನಾಲ್ಕು

---

* ಶ್ರೀಭಾಷ್ಯದಲ್ಲಿ ನಿಗದಾತ್ ಎಂಬ ಸ್ಥಾನದಲ್ಲಿ ನಿಗಮಾತ್ ಎಂಬ ಪಾಠಾಂತರವಿದೆ.

[1] 'ಇಲ್ಲಿ ಏನೇನಿದೆಯೋ ಅದೆಲ್ಲವೂ ಗಾಯತ್ರಿಯೇ' ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ (ಛಾಂ. ಉ. ೩. ೧೨. ೧).

[2] 'ಇವನನ್ನೇ ಬಹ್ವೃಚರು ದೊಡ್ಡದಾದ ಉಕ್ಥದಲ್ಲಿ ಮೀಮಾಂಸೆಮಾಡುತ್ತಾರೆ; ಅಧ್ವರ್ಯುಗಳು ಅಗ್ನಿಯಲ್ಲಿಯೂ ಛಂದೋಗರು ಮಹಾವ್ರತದಲ್ಲಿಯೂ ಇವನನ್ನೇ ಮೀಮಾಂಸೆಮಾಡುತ್ತಾರೆ' ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛಂದೋಗಾಃ । (ಐ. ಆ. ೩. ೨. ೩. ೧೨)

ಪಾದಗಳುಳ್ಳ ಗಾಯತ್ರಿಯೂ ಕಂಡುಬರುತ್ತದೆ **ಇಂದ್ರಶ್ಯಚೀಪತಿಃ, ಬಲೇನ ಪೀಡಿತಃ, ದುಶ್ಚ್ಯವನೋ ವೃಷಾ, ಸಮಿತ್ಸು ಸಾಸಹಿಃ ||**

**ದ್ವೈ**.—ಗಾಯತ್ರೀ-ಶಬ್ದದಿಂದ ವಾಚ್ಯನಾದವನು ವಿಷ್ಣುವೇ. ಅಗ್ನಿ ಗಾಯತ್ರೀ ಮೊದಲಾದ ಶಬ್ದಾರ್ಥಗಳಿಂದ ವಿಶಿಷ್ಟವಾದ ಪರಬ್ರಹ್ಮನನ್ನು ಮನಸ್ಸು ಉಪಾಸನೆ ಮಾಡಲಿ ಎಂದರ್ಥ.[1]

## ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ || ೨೬ ||

೨೬. ಭೂತಾದಿ-ಪಾದಗಳನ್ನು ಹೇಳಿರುವುದು ಹೊಂದುವುದರಿಂದಲೂ (ಬ್ರಹ್ಮವು ಹಿಂದಿನ ವಾಕ್ಯದ ವಿಷಯವೆಂಬುದನ್ನು) ಹೀಗೆ (ನಿರ್ಧರಿಸಿಕೊಳ್ಳಬೇಕು)

ಶ್ರುತಿಯು ಭೂತ ಪೃಥಿವೀ ಶರೀರ ಹೃದಯ—ಇವುಗಳನ್ನು ನಿರ್ದೇಶಿಸಿ, 'ಆ ಈ ಗಾಯತ್ರಿಯು ನಾಲ್ಕು ಪಾದಗಳನ್ನು ಹೊಂದಿದೆ ಮತ್ತು ಆರು ವಿಧವಾಗಿದೆ'[2] (ಛಾಂ. ಉ ೩. ೧೨ ೫) ಎಂದು ಹೇಳುತ್ತದೆ. ಬ್ರಹ್ಮಾಶ್ರಯವಿಲ್ಲದ ಕೇವಲ ಛಂದಸ್ಸಿಗೆ ಭೂತಾದಿಗಳು ಪಾದಗಳಾಗಲಾರವು. ಇಲ್ಲಿ ಬ್ರಹ್ಮವನ್ನು ಗ್ರಹಿಸದಿದ್ದರೆ, 'ಇದರ ಮಹಿಮೆಯು ಅಷ್ಟು'[3] (ಛಾಂ. ಉ. ೩ ೧೨. ೬) ಎಂಬುದು ಸಂಬದ್ಧವಾಗುತ್ತಿರಲಿಲ್ಲ; ಏಕೆಂದರೆ ಈ ಋಕ್ಕು ಬ್ರಹ್ಮವನ್ನು ಅದರ ಸ್ವರೂಪದಿಂದಲೇ ವರ್ಣಿಸುತ್ತದೆ; ಅನ್ಯಥಾ ಗಾಯತ್ರಿಯ ಸರ್ವಾತ್ಮತ್ವವನ್ನು ಹೀಗೆ ಹೇಳಲು ಆಗುತ್ತಿರಲಿಲ್ಲ: 'ಈ ಜಗತ್ತೆಲ್ಲ ಇವನ ಒಂದು ಪಾದವಾಗಿದೆ; ಇವನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ' (ಛಾಂ ಉ. ೩. ೧೨. ೬). ಪುರುಷಸೂಕ್ತದಲ್ಲಿಯೂ (೧೦. ೯೦) ಈ ಋಕ್ಕು ಬ್ರಹ್ಮಪರವಾಗಿರುತ್ತದೆ. 'ನಾನು ಈ ಜಗತ್ತೆಲ್ಲವನ್ನೂ ಒಂದೇ ಅಂಶದಿಂದ ಧರಿಸಿಕೊಂಡಿದ್ದೇನೆ'[4] ಎಂದು ಗೀತೆಯಲ್ಲಿಯೂ (೧೦. ೪೨) ಹೇಳಿದೆ.

**ವಿ**.—ಭೂತ-ಪೃಥಿವೀ-ಶರೀರ-ಹೃದಯಗಳು ಪರಬ್ರಹ್ಮನ ನಾಲ್ಕು ಪಾದಗಳೆಂದು ಸ್ಪಷ್ಟವಾಗಿ ನಿರ್ದೇಶಿಸಿರುವುದರಿಂದ ಗಾಯತ್ರೀ-ಶಬ್ದವು ಪರಬ್ರಹ್ಮನನ್ನೇ ಸೂಚಿಸುತ್ತದೆ

**ದ್ವೈ**.—ಪಾದವೆಂಬುದು ಪರಮಾತ್ಮನಿಗಿಂತ ಭಿನ್ನವಾದ ಮತ್ತು ಅತ್ಯಲ್ಪವಾದ ಒಂದು ದೇಶವೆಂದು ಶ್ರುತಿಗಳಿಂದ (ಛಾಂ. ಉ. ೩. ೧೨ ೬) ಅರಿತುಕೊಳ್ಳ

---

[1] ಅಗ್ನಿಗಾಯತ್ರ್ಯಾದಿಶಬ್ದಾರ್ಥರೂಪೋಽಸಾವಿತಿ ಚೇತೋಽರ್ಪಣಾರ್ಥಂ ಹಿ ನಿಗದ್ಯತೇ (ಮ. ಭಾ.).

[2] ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ।

[3] ತಾವಾನಸ್ಯ ಮಹಿಮಾ।

[4] ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್।

ಬೇಕು.[1] ಪುರುಷಸೂಕ್ತದ ವಿಷಯನಾದ ವಿಷ್ಣುವಿನ ಒಂದು ಪಾದವೇ ಈ ಜಗತ್ತಾಗಿರುತ್ತದೆ.

**ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ॥ ೨೭ ॥**

೨೭. ಉಪದೇಶಭೇದವಿರುವುದರಿಂದ (ಎರಡು ವಾಕ್ಯಗಳಲ್ಲಿಯೂ ಒಂದೇ ಬ್ರಹ್ಮವನ್ನು ಗುರುತಿಸಲು) ಆಗುವುದಿಲ್ಲವೆಂದು ಹೇಳಿದರೆ ಅದು ಸರಿಯಲ್ಲ, ಏಕೆಂದರೆ ಎರಡರಲ್ಲಿಯೂ ವಿರೋಧವಿಲ್ಲ.

'ಇವನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ' (ಛಾಂ. ಉ. ೩. ೧೨ ೬) ಎಂಬ ಮೊದಲನೆಯ ವಾಕ್ಯದಲ್ಲಿ ಸಪ್ತಮೀ-ವಿಭಕ್ತಿಯಿಂದ ದ್ಯುಲೋಕವನ್ನು ಆಧಾರವಾಗಿ ಹೇಳಿದೆ; ಆದರೆ 'ಇನ್ನು ಆ ದ್ಯುಲೋಕಕ್ಕಿಂತ ಆಚೆಗೆ' (ಛಾಂ. ಉ. ೩. ೧೩ ೭) ಎಂಬ ಎರಡನೆಯ ವಾಕ್ಯದಲ್ಲಿ ಪಂಚಮೀ-ವಿಭಕ್ತಿಯಿಂದ ಅದನ್ನೇ ಎಲ್ಲೆಯಾಗಿ ಹೇಳಿದೆ. ಹೀಗೆ ಈ ಎರಡು ವಾಕ್ಯಗಳಲ್ಲಿ ಭೇದವಿದ್ದರೂ ಅವೆರಡೂ ಬ್ರಹ್ಮವನ್ನೇ ಸೂಚಿಸುತ್ತವೆ. ವೃಕ್ಷಾಗ್ರದಲ್ಲಿ ಸಂಬದ್ಧವಾದ ಗಿಡುಗನನ್ನು 'ಮರದ ತುದಿಯಲ್ಲಿರುವ ಗಿಡುಗ', 'ಮರದ ತುದಿಯಿಂದಾಚೆಗೆ ಇರುವ ಗಿಡುಗ' ಎಂದು ಎರಡು ರೀತಿಯಲ್ಲಿ ಹೇಗೆ ಜನರು ಹೇಳುತ್ತಾರೆಯೊ ಹಾಗೆಯೇ ದ್ಯುಲೋಕದಲ್ಲಿರುವ ಬ್ರಹ್ಮವನ್ನು ದ್ಯುಲೋಕದಿಂದ ಆಚೆಗೆ ಇರುವುದೆಂದು ಹೇಳಿರುತ್ತದೆ. ಇದನ್ನು ಇನ್ನೊಂದು ವಿಧವಾಗಿಯೂ ಹೇಳಬಹುದು: ವೃಕ್ಷಾಗ್ರಕ್ಕೆ ಸಂಬದ್ಧವಾಗದ ಗಿಡುಗನನ್ನು 'ಮರದ ತುದಿಯಲ್ಲಿರುವ ಗಿಡುಗ', 'ಮರದ ತುದಿಯಿಂದಾಚೆ ಇರುವ ಗಿಡುಗ' ಎಂದು ಹೇಳುವಂತೆ ಬ್ರಹ್ಮವು ದ್ಯುಲೋಕದ ಆಚೆ ಗಿದ್ದರೂ ದ್ಯುಲೋಕದಲ್ಲಿದೆ ಎಂದು ಹೇಳಿರುತ್ತದೆ ಆದುದರಿಂದ ಪೂರ್ವನಿರ್ದಿಷ್ಟವಾದ ಬ್ರಹ್ಮವನ್ನು ಇಲ್ಲಿ ಗುರುತಿಸಬಹುದು.

ಪರಬ್ರಹ್ಮವನ್ನೇ ಜ್ಯೋತಿಃಶಬ್ದದಿಂದ ಹೇಳಿದೆ ಎಂಬುದು ಸಿದ್ಧವಾಯಿತು.

ವಿ.—ಎರಡು ವಾಕ್ಯಗಳಲ್ಲಿಯೂ ಅರ್ಥವು ಒಂದೇ ಆಗಿರುವುದರಿಂದ ಬ್ರಹ್ಮವನ್ನು ಗುರುತಿಸಲು ಯಾವ ಅಡಚಣೆಯೂ ಇರುವುದಿಲ್ಲ. ಆದುದರಿಂದ ನಿರತಿಶಯ-ತೇಜಸ್ಕನಾದ ಪರಮಪುರುಷನೇ ಜ್ಯೋತಿಯಾಗಿರುತ್ತಾನೆ.

ದ್ವೈ.—ಒಂದೇ ವಸ್ತುವನ್ನು ಎರಡು ಪ್ರಕಾರ ನಿರ್ದೇಶಿಸಿದ್ದರೂ ವಿವಕ್ಷಾಭೇದದಿಂದ ವಿರೋಧವನ್ನು ಪರಿಹರಿಸಬಹುದು. ಭೂರ್ಭುವಃಸ್ವರ್ಲೋಕಗಳೆಂದು ಮೂರು ಲೋಕಗಳನ್ನು ವಿವಕ್ಷೆಮಾಡಿಕೊಂಡರೆ ಭುವರ್ಲೋಕದಿಂದ ಮೇಲೆ ಇರುವುದೆಲ್ಲವೂ ದ್ಯುಲೋಕವೆನ್ನಿಸಿಕೊಂಡು ಅನಂತಾಸನ-ಶ್ವೇತದ್ವೀಪ-ವೈಕುಂಠ ಸ್ವರೂಪಗಳು ದ್ಯುಲೋಕ

[1] ಪಾದ ಇತಿ ಚೈಕದೇಶಪರಿಮಿತಂ ಚತುರ್ಭಾಗಬಲ ಇತಿವದ್ಭಿನ್ನಂ ಚ। (ಮ. ಭಾ.).

ದಲ್ಲಿರುವವುಗಳಾಗುತ್ತವೆ ; ಭೂರಾದಿ-ಸಪ್ತಲೋಕಗಳನ್ನು ವಿವಕ್ಷೆಮಾಡಿಕೊಂಡರೆ ಮೇರು ಪರ್ವತಾದಿಗಳು ದ್ಯುಲೋಕವೆನ್ನಿಸಿಕೊಂಡು ಅದರ ಮೇಲಿರುವ ಅನಂತಾಸನಾದಿಗಳು ದ್ಯುಲೋಕದ ಆಚೆಗೆ ಇರುವವುಗಳಾಗುತ್ತವೆ. ಆದುದರಿಂದ ಗಾಯತ್ರೀ, ಜ್ಯೋತಿ ಎಂಬ ಎರಡು ಶಬ್ದಗಳೂ ಪರಬ್ರಹ್ಮನನ್ನೇ ಸೂಚಿಸುತ್ತವೆ.

# ೧೧. ಪ್ರತರ್ದನಾಧಿಕರಣ

(ಸೂ. ೨೮–೩೧)

## ಪ್ರಾಣಸ್ತಥಾನುಗಮಾತ್ ॥ ೨೮ ॥

೨೮. ಪ್ರಾಣನು (ಬ್ರಹ್ಮವೇ); ಏಕೆಂದರೆ ಹಾಗೆ (ವಾಕ್ಯಗಳ) ಅನ್ವಯ-ವಿರುತ್ತದೆ.

ಈ ಅಧಿಕರಣದ ವಿಷಯವಾಕ್ಯವು ಕೌಷೀತಕಿ-ಬ್ರಾಹ್ಮಣೋಪನಿಷತ್ತಿನಲ್ಲಿ ಬರುತ್ತದೆ; ಇಂದ್ರನು ದಿವೋದಾಸನ ಮಗನಾದ ಪ್ರತರ್ದನನಿಗೆ ಹೀಗೆ ಉಪದೇಶಿಸುತ್ತಾನೆ: 'ನಾನು ಪ್ರಜ್ಞಾತ್ಮನಾದ ಪ್ರಾಣ; ಆ ನನ್ನನ್ನು ಆಯುಸ್ಸು, ಅಮೃತ ಎಂದು ಉಪಾಸಿಸು'[1] (೩. ೨); 'ಪ್ರಜ್ಞಾತ್ಮನಾದ ಪ್ರಾಣನೇ ಈ ಶರೀರವನ್ನು ಹಿಡಿದು ನಿಲ್ಲಿಸುತ್ತಾನೆ'[2] (೩. ೩); 'ಮಾತನ್ನು ವಿಚಾರಿಸಬಾರದು, ಮಾತಾಡುವವನನ್ನು ತಿಳಿದುಕೊಳ್ಳಬೇಕು'[3] (೩. ೮); 'ಆ ಈ ಪ್ರಾಣನೇ ಪ್ರಜ್ಞಾತ್ಮನು, ಆನಂದನು, ಅಜರನು, ಅಮೃತನು'[4] (೩. ೮).

ಇಲ್ಲಿ ಪ್ರಾಣ-ಶಬ್ದವು ಕೇವಲ ವಾಯುವನ್ನು ಸೂಚಿಸುತ್ತದೆಯೆ ಅಥವಾ ಯಾವುದೊ ಒಂದು ದೇವತೆಯ ಆತ್ಮನನ್ನು ಸೂಚಿಸುತ್ತದೆಯೆ ? ಅಥವಾ ಜೀವನನ್ನಾಗಲಿ ಪರಬ್ರಹ್ಮವನ್ನಾಗಲಿ ಸೂಚಿಸುತ್ತದೆಯೆ ?—ಎಂಬುದು ಸಂಶಯ; ಏಕೆಂದರೆ ಇಲ್ಲಿ ದೇವತಾತ್ಮ ಪ್ರಾಣ ಮತ್ತು ಜೀವ, ಇವರ ಲಿಂಗಗಳು ಕಂಡುಬರುತ್ತವೆ.

ಪ್ರಾಣ-ಶಬ್ದವು ಬ್ರಹ್ಮವನ್ನೇ ಸೂಚಿಸುತ್ತದೆ ಎಂಬುದು ಸಿದ್ಧಾಂತ: ಏಕೆಂದರೆ ಪ್ರಾಣ-ಪರವಾದ ವಾಕ್ಯಗಳನ್ನೆಲ್ಲ ಪರ್ಯಾಲೋಚನೆ ಮಾಡಿದರೆ ಪದಗಳ ಸಮನ್ವಯವು ಬ್ರಹ್ಮಪ್ರತಿಪಾದನದಲ್ಲಿಯೇ ತಾತ್ಪರ್ಯವನ್ನು ಹೊಂದಿರುತ್ತದೆ. ಮನುಷ್ಯನಿಗೆ ಹಿತ-ತಮನಾದ ಪ್ರಾಣನನ್ನು ಇಂದ್ರನು ಉಪದೇಶಿಸುತ್ತಾನೆ. ಪರಮಾತ್ಮಜ್ಞಾನವನ್ನು ಬಿಟ್ಟರೆ ಯಾವುದರಿಂದಲೂ ಹಿತ-ತಮದ ಪ್ರಾಪ್ತಿಯಾಗುವುದಿಲ್ಲ.[5] ಮತ್ತೆ ಜ್ಞಾನದಿಂದ ಕರ್ಮಗಳು ನಾಶವಾಗುವುದೆಂಬುದೂ ಬ್ರಹ್ಮಕ್ಕೇ ಹೊಂದುತ್ತದೆ.[6] ಪ್ರಾಣನು ಬ್ರಹ್ಮವಾಗಿದ್ದರೆ

---

[1] ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮ್ ಇತ್ಯುಪಾಸ್ಸ್ವ ।

[2] ಅಥ ಖಲು ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ ।

[3] ನ ವಾಚಂ ವಿಜಿಜ್ಞಾಸೀತ, ವಕ್ತಾರಂ ವಿದ್ಯಾತ್ ।

[4] ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽಽನಂದೋಽಜರೋಽಮೃತಃ ।

[5] ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ ।
(ಶ್ವೇ. ಉ. ೩. ೮)

[6] ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ (ಮು. ಉ. ೨. ೨. ೮).

ಮಾತ್ರ ಅವನನ್ನು ಪ್ರಜ್ಞಾತ್ಮನೆಂದು ಕರೆಯಬಹುದು; ಏಕೆಂದರೆ ಅಚೇತನವಾದ ವಾಯುವು ಪ್ರಜ್ಞಾತ್ಮವಾಗುವುದಿಲ್ಲ. ಹೀಗೆಯೇ ಕೊನೆಯಲ್ಲಿ ಹೇಳಿರುವ ಆನಂದತ್ವಾದಿಗಳು ಬ್ರಹ್ಮವನ್ನು ಬಿಟ್ಟರೆ ಇತರ ಕಡೆಗಳಲ್ಲಿ ಹೊಂದುವುದಿಲ್ಲ ಈ ವಾಕ್ಯಗಳೆಲ್ಲವೂ ಪರಬ್ರಹ್ಮವನ್ನು ಸೂಚಿಸುತ್ತವೆ ಎಂದು ಇಟ್ಟುಕೊಂಡರೆ ಮಾತ್ರ ಇವುಗಳನ್ನು ಅನ್ವಯ ಮಾಡಲು ಸಾಧ್ಯವಾಗುತ್ತದೆಯೇ ಹೊರತು ಮುಖ್ಯಪ್ರಾಣನೆಂದಿಟ್ಟುಕೊಂಡರೆ ಆಗುವುದಿಲ್ಲ.[1]

**ವಿ.**—ಈ ಇಂದ್ರ-ಪ್ರಾಣಾಧಿಕರಣದಲ್ಲಿ ಇಂದ್ರ-ಪ್ರಾಣ-ಶಬ್ದಗಳಿಂದ ನಿರ್ದಿಷ್ಟನಾದವನು ಜೀವಾತ್ಮನಾದ ಇಂದ್ರನಲ್ಲ, ಜೀವನಿಗಿಂತ ಬೇರೆಯವನಾದ ಪರಬ್ರಹ್ಮನು ಹೀಗೆ ಇಟ್ಟುಕೊಂಡರೆ ಮಾತ್ರ ಇಂದ್ರ-ಪ್ರಾಣ-ಶಬ್ದಗಳಿಂದ ನಿರ್ದಿಷ್ಟನಾದವನನ್ನು ಆನಂದ-ಅಜರ-ಅಮೃತ-ಶಬ್ದಗಳಿಗೆ ಸಂಬಂಧಿಸಲು ಸಾಧ್ಯವಾಗುತ್ತದೆ.

**ದ್ವೈ.**—'ಹೀಗೆಯೇ ಪ್ರಾಣನು (ಬ್ರಹ್ಮನೇ); ಏಕೆಂದರೆ (ಬ್ರಹ್ಮನ) ಲಿಂಗಗಳನ್ನು ಹೇಳಿದೆ' ಎಂಬುದು ಸೂತ್ರಾರ್ಥ

ಪ್ರಾಣನು ವಿಷ್ಣುವೆಂದು ಹೇಳಿದ್ದಾಯಿತು. 'ಕಣ್ಣು ಕಿವಿ ಮನಸ್ಸು ವಾಕ್ಕು ಪ್ರಾಣ—ಇವು ಶಿರಸ್ಸನ್ನು ಆಶ್ರಯಿಸಿರುತ್ತವೆ'[2] (ಐ. ಆ. ೨. ೧. ೪) ಎಂಬಲ್ಲಿ ಪ್ರಾಣನನ್ನು ಇಂದ್ರಿಯಗಳೊಂದಿಗೆ ಹೇಳಿರುವುದರಿಂದ ಪ್ರಾಣನನ್ನು ವಿಷ್ಣುವೆಂದು ಹೇಳಲು ಆಗುವುದಿಲ್ಲ ಎಂದು ಆಕ್ಷೇಪಿಸಿದರೆ ಈ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣುವೇ ಎಂಬುದು ಪರಿಹಾರ; ಏಕೆಂದರೆ ಈ ಪ್ರಕರಣದಲ್ಲಿ ಬ್ರಹ್ಮನ ಲಿಂಗಗಳೂ ಬ್ರಹ್ಮ-ಶಬ್ದದ ಆವೃತ್ತಿಯೂ ಕಂಡುಬರುತ್ತವೆ.

**ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ॥ ೨೯ ॥**

೨೯. ವಕ್ತೃವಿನ ಆತ್ಮನನ್ನು ಉಪದೇಶಿಸಿರುವುದರಿಂದ (ಪ್ರಾಣ-ಶಬ್ದವು ಬ್ರಹ್ಮವನ್ನು) ಸೂಚಿಸುವುದಿಲ್ಲ ಎಂದು ಹೇಳಿದರೆ (ಅದು ಸರಿಯಲ್ಲ); ಏಕೆಂದರೆ ಈ ಅಧ್ಯಾಯದಲ್ಲಿ ಪ್ರತ್ಯಗಾತ್ಮಸಂಬಂಧದ ಬಾಹುಲ್ಯವಿದೆ.

'ನನ್ನನ್ನೇ ಅರಿತುಕೊ'[3] (ಕೌ. ಉ. ೩ ೧.), 'ನಾನು ಪ್ರಜ್ಞಾತ್ಮನಾದ ಪ್ರಾಣ'[4]

---

[1] ಸರ್ವಮೇತತ್ ಪರಸ್ಮಿನ್ ಬ್ರಹ್ಮಣಿ ಆಶ್ರೀಯಮಾಣೇಽನುಗಂತುಂ ಶಕ್ಯತೇ ನ ಮುಖ್ಯೇ ಪ್ರಾಣೇ (ಸೂ. ಭಾ.).

[2] ತತ್ರ ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ ।

[3] ಮಾಮೇವ ವಿಜಾನೀಹಿ ।

[4] ಪ್ರಾಣೋಽಸ್ಮಿ ಪ್ರಜ್ಞಾತ್ಮಾ ।

(ಕೌ. ಉ ३. ೨) ಎಂಬ ಅಹಂಕಾರ-ವಾದದಿಂದ ಇಂದ್ರನು ತನ್ನ ಆತ್ಮನನ್ನೇ ಉಪ ದೇಶಿಸಿರುವುದರಿಂದ ಈ ಪ್ರಾಣನು ಬ್ರಹ್ಮನಾಗಲಾರನು 'ಅವಾಕ್ಕು, ಅಮನಸ್ಸು'[1] (ಬೃ. ಉ ३. ೮. ೮) ಎಂಬುದು ಬ್ರಹ್ಮವು ವಕ್ತೃವೂ ಆಗಲಾರದೆಂದು ತಿಳಿಸುತ್ತದೆ ಇಂದ್ರನು ಅನೇಕ ಗುಣಗಳಿಂದ ತನ್ನನ್ನು ಹೊಗಳಿಕೊಳ್ಳುವುದರಿಂದ ಪ್ರಾಣನು ಬ್ರಹ್ಮ ವಲ್ಲ, ದೇವತಾತ್ಮನು ಎಂದು ಅರಿತುಕೊಳ್ಳಬೇಕು.

ಈ ಆಕ್ಷೇಪಣೆಗೆ ಸಮಾಧಾನವು ಹೀಗಿದೆ: 'ಪ್ರಾಣನು ಎಲ್ಲಿಯವರೆಗೆ ಈ ಶರೀರ ದಲ್ಲಿರುವನೊ ಅಲ್ಲಿಯವರೆಗೇ ಆಯುಸ್ಸು'[2] (ಕೌ. ಉ. ३. ೨), 'ಅದಿದ್ದರೆ ಪ್ರಾಣಗಳ ನಿಃಶ್ರೇಯಸ್ಸು'[3] (ಕೌ. ಉ. ३. ೨), 'ಅವನನ್ನು "ನನ್ನ ಆತ್ಮನು" ಎಂದು ತಿಳಿದುಕೊಳ್ಳ ಬೇಕು'[4] (ಕೌ. ಉ. ३. ೯) ಇವೇ ಮೊದಲಾದ ಶ್ರುತಿಗಳು ಪ್ರತ್ಯಗಾತ್ಮನಿಗೆ ಹೊಂದುತ್ತ ವೆಯೇ ವಿನಾ ಒಂದು ದೇವತಾವಿಶೇಷಕ್ಕೆ ಹೊಂದುವುದಿಲ್ಲ ; ಏಕೆಂದರೆ ಆಯುಷ್ಪ್ರದಾನ, ಅದರ ಉಪಸಂಹಾರ—ಇವುಗಳಲ್ಲಿ ಪ್ರತ್ಯಗ್ಭೂತನಾದ ಪ್ರಾಣನಿಗೆ ಮಾತ್ರ ಸ್ವಾತಂತ್ರ್ಯ ವಿದೆಯೇ ಹೊರತು ಹೊರಗಿನ ದೇವತಾವಿಶೇಷಕ್ಕೆ ಅಲ್ಲ. ಆದುದರಿಂದ ಪ್ರಾಣ-ಶಬ್ದವು ಬ್ರಹ್ಮವನ್ನೇ ಸೂಚಿಸುತ್ತದೆ.

ವಿ.—'ಹೇಗೆ ಚಕ್ರದ ಆರೆಕಾಲುಗಳಲ್ಲಿ ನೇಮಿಯು ಅರ್ಪಿತವಾಗಿರುವುದೊ, ಚಕ್ರದ ನಾಭಿಯಲ್ಲಿ ಆರೆಕಾಲುಗಳು ಅರ್ಪಿತವಾಗಿರುವುವೊ ಹಾಗೆಯೇ ಪ್ರಜ್ಞಾಮಾತ್ರೆ ಗಳಲ್ಲಿ ಭೂತಮಾತ್ರೆಗಳು ಅರ್ಪಿತವಾಗಿರುವುವು, ಪ್ರಾಣನಲ್ಲಿ ಪ್ರಜ್ಞಾಮಾತ್ರೆಗಳು ಅರ್ಪಿತ ವಾಗಿರುವುವು. ಪ್ರಜ್ಞಾತ್ಮನಾದ ಪ್ರಾಣನೇ ಆನಂದನು, ಅಜರನು, ಅಮರನು'[5] (ಕೌ. ಉ. ३. ೯) ಎಂಬಲ್ಲಿ ಭೂತಮಾತ್ರೆಗಳು ಅಚೇತನ-ವಸ್ತುಗಳನ್ನೂ ಪ್ರಜ್ಞಾಮಾತ್ರೆ ಗಳು ಅಚೇತನವರ್ಗಕ್ಕೆ ಆಧಾರವಾದ ಚೇತನವರ್ಗವನ್ನೂ ಸೂಚಿಸುತ್ತವೆ. ಅನಂತರ ಶ್ರುತಿಯು ಇಂದ್ರ-ಪ್ರಾಣ-ಶಬ್ದಗಳಿಂದ ಕರೆಯಲ್ಪಟ್ಟವನು ಚೇತನವರ್ಗದ ಆಧಾರನೆಂದು ತಿಳಿಸಿ ಅವನನ್ನೇ ಆನಂದನು, ಅಜರನು, ಅಮೃತನು ಎಂದು ಹೇಳುತ್ತದೆ. ಸಮಸ್ತ-ಚೇತನಾಚೇತನ-ಜಗತ್ತಿನ ಆಧಾರತ್ವವು ಜೀವನಿಗಿಂತ ಭಿನ್ನನಾದ ಪರಮಾತ್ಮನಲ್ಲಿಯೇ ಹೊಂದುತ್ತದೆ

ದ್ವೈ.—'ವಕ್ತೃವು ತನ್ನನ್ನೇ ವಾಯುವೆಂದು ಹೇಳಿಕೊಂಡಿರುವುದರಿಂದ ವಾಯುವು ವಿಷ್ಣುವಲ್ಲ—ಎಂಬ ಆಕ್ಷೇಪಣೆಯು ಸರಿಯಲ್ಲ ; ಏಕೆಂದರೆ ಇಲ್ಲಿ ಪರಮಾತ್ಮನ ಬಹುದೇಹ ಸಂಬಂಧವನ್ನು ಹೇಳಿದೆ' ಎಂಬುದು ಸೂತ್ರಾರ್ಥ.

---

[1] ಅವಾಗಮನಾಃ ।

[2] ಯಾವದ್ಧ್ಯಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ ।

[3] ಅಸ್ತಿತ್ವೇ ಚ ಪ್ರಾಣಾನಾಂ ನಿಃಶ್ರೇಯಸಮ್ ।

[4] ಸ ಮ ಆತ್ಮೇತಿ ವಿದ್ಯಾತ್ ।

[5] ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽಽನಂದೋಽಜರೋಽಮೃತಃ ।

'ಹೇ ಋಷಿ, ನಾನೇ ಪ್ರಾಣನು'[1] (ಐ. ಆ. ೨. ೨. ೩) ಎಂಬಲ್ಲಿ ಇಂದ್ರನು ತನ್ನನ್ನೇ ಪ್ರಾಣನೆಂದು ಹೇಳಿರುವುದರಿಂದ ಪ್ರಾಣನು ವಿಷ್ಣುವಲ್ಲ ಎಂದು ಹೇಳಕೂಡದು ; ಏಕೆಂದರೆ 'ಪ್ರಾಣನೇ ನಾನು' ಎಂದು ಹೇಳಲ್ಪಟ್ಟ ಪ್ರಾಣ-ಶಬ್ದವಾಚ್ಯನಾದವನಿಗೆ 'ನೀನು ಪ್ರಾಣನು, ಈ ಭೂತಗಳೆಲ್ಲ ಪ್ರಾಣವು'[2] ಎಂದು ಬಹುದೇಹ-ಸಂಬಂಧವನ್ನು ಹೇಳಿದೆ ; ಆದುದರಿಂದ ಪ್ರಾಣಶಬ್ದವಾಚ್ಯನು ವಿಷ್ಣುವೇ.

## ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ॥ ೩೦ ॥

೩೦. ಆದರೆ (ಇಂದ್ರನು ಬ್ರಹ್ಮದೊಂದಿಗೆ ಐಕ್ಯನಾಗಿರುವನೆಂಬ) ಉಪದೇಶವು—ವಾಮದೇವನಂತೆ—ಶಾಸ್ತ್ರದೃಷ್ಟಿಯಿಂದ (ಒಪ್ಪುತ್ತದೆ.)

ಇಂದ್ರನೆಂಬ ದೇವತಾತ್ಮನು ಆರ್ಷದರ್ಶನದಿಂದ[3] ತನ್ನ ಆತ್ಮನನ್ನೇ ಪರಬ್ರಹ್ಮವೆಂದು ಶಾಸ್ತ್ರದಲ್ಲಿ ಹೇಳಿರುವಂತೆ ಅರಿತುಕೊಂಡು, ಪ್ರತರ್ದನನಿಗೆ 'ನನ್ನನ್ನೇ ಅರಿತುಕೊ' (ಕೌ. ಉ. ೩. ೧) ಎಂದು ಉಪದೇಶಿಸಿದನು. ಇದೇ ವಿಧವಾದ ಆರ್ಷದರ್ಶನದಿಂದ ಋಷಿಯಾದ ವಾಮದೇವನು 'ನಾನು ಮನುವಾಗಿದ್ದೆನು, ಸೂರ್ಯನಾಗಿದ್ದೆನು'[4] (ಬೃ. ಉ. ೧. ೪. ೧೦) ಎಂದು ಅರಿತುಕೊಂಡಿದ್ದನು.

ಇಂದ್ರನು ತ್ವಾಷ್ಟ್ರವಧೆಯೇ ಮೊದಲಾದ ಶರೀರಧರ್ಮಗಳಿಂದ ತನ್ನನ್ನು ಹೊಗಳಿಕೊಂಡರುವುದು ಬ್ರಹ್ಮಜ್ಞಾನದ ಸ್ತುತಿಗಾಗಿಯೇ ಹೊರತು ತನ್ನ ಸ್ತುತಿಗಲ್ಲ. ಆದುದರಿಂದ ಇಲ್ಲಿ ತಿಳಿದುಕೊಳ್ಳಬೇಕಾದುದು ಬ್ರಹ್ಮವೇ.

**ವಿ.**—ಪರಬ್ರಹ್ಮನು ತನ್ನ ಆತ್ಮನೆಂಬ ಇಂದ್ರನ ಉಪದೇಶವು ಶಾಸ್ತ್ರವನ್ನು ಅವಲಂಬಿಸಿರುವ ಸ್ವಾತ್ಮದೃಷ್ಟಿಯಿಂದ ಉತ್ಪನ್ನವಾಗಿದೆ. ಜೀವಾತ್ಮರೆಲ್ಲ ಪರಬ್ರಹ್ಮನ ಶರೀರವೆಂದು ವೇದವು ಉಪದೇಶಿಸುತ್ತದೆ. 'ನಾನು' 'ನೀನು' ಎಂದು ಜೀವನನ್ನು ಸೂಚಿಸುವ ಸಮಸ್ತಪದಗಳೂ ಪರಬ್ರಹ್ಮವನ್ನು ಸೂಚಿಸುವುದರಲ್ಲಿಯೇ ಪರ್ಯವಸಾನವಾಗುತ್ತವೆ. 'ನಾನು ಮನುವಾಗಿದ್ದೆನು, ಸೂರ್ಯನಾಗಿದ್ದೆನು' ಎಂಬುದರಲ್ಲಿ 'ನಾನು' ಎಂಬುದು ಅಂತರ್ಯಾಮಿಯಾದ ಪರಬ್ರಹ್ಮನನ್ನೇ ಸೂಚಿಸುತ್ತದೆ. 'ಅನಂತನು ಎಲ್ಲೆಲ್ಲಿಯೂ ಇರುವುದರಿಂದ ಅವನೇ "ನಾನು" ಕೂಡ ಆಗಿರುತ್ತಾನೆ. ನನ್ನಿಂದಲೇ ಎಲ್ಲವೂ ಪ್ರವರ್ತಿಸು

---

[1] ಪ್ರಾಣೋ ವಾ ಅಹಮಸ್ಮಿ ಋಷೇ !

[2] ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ ।

[3] 'ಜನ್ಮಾಂತರದಲ್ಲಿ ಮಾಡಿದ ಶ್ರವಣಾದಿಗಳಿಂದ ಈ ಜನ್ಮದಲ್ಲಿ ಉಂಟಾಗುವ ದರ್ಶನಕ್ಕೆ ಆರ್ಷವೆಂದು ಹೆಸರು' ಜನ್ಮಾಂತರಕೃತಶ್ರವಣಾದಿನಾ ಅಸ್ಮಿನ್ ಜನ್ಮನಿ ಸ್ವತಃಸಿದ್ಧಂ ದರ್ಶನಮಾರ್ಷಮ್ (ರ. ಪ್ರ.).

[4] ಅಹಂ ಮನುರಭವಂ ಸೂರ್ಯಶ್ಚೇತಿ ।

ತ್ತದೆ. ನಾನೇ ಎಲ್ಲವೂ ಆಗಿರುತ್ತೇನೆ, ನನ್ನಲ್ಲಿ ಎಲ್ಲವೂ ಇರುತ್ತದೆ'[1] (ವಿ. ಪು ೧. ೧೯ ೫೮) ಎಂದು ಪ್ರಹ್ಲಾದನು ಹೇಳಿರುತ್ತಾನೆ

ವ್ಯಾ.—'ನಾನೇ ಪ್ರಾಣನಾಗಿರುತ್ತೇನೆ' ಎಂಬ ಇಂದ್ರನ ಉಪದೇಶವೂ 'ನಾನೇ ಮನುವಾಗಿದ್ದೆನು, ಸೂರ್ಯನಾಗಿದ್ದೆನು' ಎಂಬ ವಾಮದೇವನ ಉಪದೇಶವೂ ಅಂತರ್ಯಾಮಿಯ ದೃಷ್ಟಿಯಿಂದಲೇ ಹೊಂದುತ್ತವೆ. ಶಾಸ್ತ್ರವೆಂದರೆ ಅಂತರ್ಯಾಮಿ.[2]

**ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥ ೩೧ ॥**

೩೧. ಜೀವ-ಮುಖ್ಯಪ್ರಾಣರ ಲಿಂಗಗಳನ್ನು ಹೇಳಿರುವುದರಿಂದ (ಬ್ರಹ್ಮವನ್ನು) ಸೂಚಿಸಿಲ್ಲವೆಂದರೆ, ಅದು ಸರಿಯಲ್ಲ ; ಏಕೆಂದರೆ (ಈ ಅಭಿಪ್ರಾಯವನ್ನೊಪ್ಪಿಕೊಂಡರೆ) ಮೂರು ವಿಧವಾದ ಉಪಾಸನೆಗಳು (ಒದಗುತ್ತವೆ), ಏಕೆಂದರೆ ನಮ್ಮ (ಅಭಿಪ್ರಾಯವು) ಬೇರೆ ಕಡೆಯಲ್ಲಿ ಸ್ವೀಕರಿಸಲ್ಪಟ್ಟಿದೆ, ಏಕೆಂದರೆ (ಬ್ರಹ್ಮದ ಲಿಂಗಗಳು ಈ ವಾಕ್ಯಗಳೊಂದಿಗೆ) ಸಂಬಂಧಿಸಲ್ಪಟ್ಟಿವೆ.

ಇಲ್ಲಿ ಜೀವೋಪಾಸನೆ ಮುಖ್ಯಪ್ರಾಣೋಪಾಸನೆ ಬ್ರಹ್ಮೋಪಾಸನೆ ಎಂಬ ಮೂರು ಬಗೆಯ ಉಪಾಸನೆಗಳನ್ನು ಹೇಳಿಲ್ಲ, ಒಂದೇ ಬಗೆಯ ಉಪಾಸನೆಯನ್ನು ಹೇಳಿದೆ. 'ನನ್ನನ್ನು ಅರಿತುಕೊ' (ಕೌ. ಉ. ೩. ೧) ಎಂದು ಪ್ರಾರಂಭಿಸಿ, 'ನಾನೇ ಪ್ರಜ್ಞಾತ್ಮನಾದ ಪ್ರಾಣನಾಗಿರುತ್ತೇನೆ, ಆ ನನ್ನನ್ನು ಆಯುಸ್ಸು ಅಮೃತವು ಎಂದು ಉಪಾಸಿಸು' (ಕೌ. ಉ. ೩. ೨) ಎಂದು ಹೇಳಿ, ಕೊನೆಯಲ್ಲಿ 'ಆ ಪ್ರಜ್ಞಾತ್ಮನಾದ ಪ್ರಾಣನೇ ಆನಂದನು, ಅಜರನು, ಅಮೃತನು' (ಕೌ. ಉ. ೩. ೯) ಎಂದು ಹೇಳಿದೆ. ಉಪಕ್ರಮ-ಉಪಸಂಹಾರಗಳು ಒಂದೇ ರೂಪದಲ್ಲಿರುವುದರಿಂದ ಇಡೀ ವಾಕ್ಯವು ಒಂದೇ ಉಪಾಸನೆಯನ್ನು ಸೂಚಿಸುತ್ತದೆ. ಪುನಃ ಪ್ರಾಣಾಧಿಕರಣದಲ್ಲಿಯೂ ಬ್ರಹ್ಮಲಿಂಗದ ವಶದಿಂದ ಪ್ರಾಣ-ಶಬ್ದಕ್ಕೆ ಬ್ರಹ್ಮವೆಂಬ ಅರ್ಥವನ್ನು ಹೇಳಿರುತ್ತದೆ.

ಜ್ಞಾನ, ಕ್ರಿಯೆ ಎಂಬ ಶಕ್ತಿದ್ವಯಕ್ಕೆ ಆಶ್ರಯವಾಗಿದ್ದು ಪ್ರತ್ಯಗಾತ್ಮನಿಗೆ ಉಪಾಧಿ

---

[1] ಸರ್ವಗತ್ವಾದನಂತಸ್ಯ ಸ ಏವಾಹಮವಸ್ಥಿತಃ ।
ಮತ್ತಃ ಸರ್ವಮಹಂ ಸರ್ವಂ ಮಯಿ ಸರ್ವಂ ಸನಾತನೇ ॥

[2] ಶಾಸ್ತ್ರಮಂತರ್ಯಾಮೀ ।

ಯಾಗಿರುವ ಬುದ್ಧಿ-ಪ್ರಾಣಗಳಿಗೆ ಭೇದವನ್ನು ಹೇಳಬಹುದು ; ಆದರೆ ಈ ಉಪಾಧಿದ್ವಯದಿಂದ ಉಪಹಿತನಾಗಿರುವ ಪ್ರತ್ಯಗಾತ್ಮನು ಸ್ವರೂಪೇಣ ಅಭಿನ್ನನಾಗಿರುವುದರಿಂದ 'ಪ್ರಾಣನೇ ಪ್ರಜ್ಞಾತ್ಮನು' ಎಂದು ಏಕೀಕರಣಮಾಡಿರುವುದು ಅವಿರುದ್ಧವಾಗಿದೆ.

ವೃತ್ತಿಕಾರರು ಈ ಸೂತ್ರಕ್ಕೆ ಬೇರೊಂದು ವಿಧವಾಗಿ ವ್ಯಾಖ್ಯಾನಮಾಡಿರುತ್ತಾರೆ : ಪ್ರಾಣಧರ್ಮದಿಂದ, ಪ್ರಜ್ಞಾಧರ್ಮದಿಂದ, ಸ್ವಧರ್ಮದಿಂದ—ಮೂರು ವಿಧವಾದ ಬ್ರಹ್ಮೋಪಾಸನೆಯನ್ನು ಹೇಳಿದೆ. ಆದುದರಿಂದ ಬ್ರಹ್ಮದ ಒಂದೇ ಉಪಾಸನೆಯನ್ನು—ಸ್ವ-ಧರ್ಮದಿಂದಲೂ ಉಪಾಧಿದ್ವಯ-ಧರ್ಮದಿಂದಲೂ—ಮೂರುಬಗೆಯಾಗಿ ಹೇಳಿದೆ.

ವಿ.—ಪರಮಾತ್ಮನ ಉಪಾಸನೆಯು ಮೂರು ವಿಧವಾಗಿದೆ : (೧) ನಿಖಿಲಜಗತ್ಕಾರಣನಾದ ಪರಬ್ರಹ್ಮನನ್ನು ಸ್ವರೂಪದಲ್ಲಿ ಅನುಸಂಧಾನಮಾಡುವುದು ; (೨) ಸಮಸ್ತ ಜೀವವರ್ಗವನ್ನು ಶರೀರವಾಗಿ ಪಡೆದಿರುವನೆಂದು ಅನುಸಂಧಾನ ಮಾಡುವುದು ; (೩) ಸಮಸ್ತಭೋಗ್ಯ-ಭೋಗೋಪಕರಣಗಳನ್ನು ಶರೀರವಾಗಿ ಪಡೆದಿರುವನೆಂದು ಅನುಸಂಧಾನ ಮಾಡುವುದು [1] 'ಬ್ರಹ್ಮನು ಸತ್ಯ ಜ್ಞಾನ ಅನಂತ' (ತೈ. ಉ. ೨. ೧), 'ಆನಂದವನ್ನು ಬ್ರಹ್ಮನೆಂದು ತಿಳಿದನು' (ತೈ. ಉ. ೩. ೬)—ಇವೇ ಮೊದಲಾದ ವಾಕ್ಯಗಳಲ್ಲಿ ಸ್ವರೂಪಾನುಸಂಧಾನವಿದೆ. 'ಹಾಗೆ ತಪಸ್ಸು ಮಾಡಿ ಈ ಎಲ್ಲವನ್ನೂ ಸೃಷ್ಟಿಸಿದನು....ಹಾಗೆ ಪ್ರವೇಶಿಸಿ ನಿರ್ವಿಕಾರಿ-ಚೇತನನೂ ವಿಕಾರಿ-ಅಚೇತನವೂ ಆದನು'[2] (ತೈ. ಉ. ೨. ೬) ಇವೇ ಮೊದಲಾದ ವಾಕ್ಯಗಳಲ್ಲಿ ಭೋಕ್ತೃವರ್ಗ, ಭೋಗ್ಯ-ಭೋಗೋಪಕರಣ—ಇವು ಪರಮಾತ್ಮನ ಶರೀರವೆಂಬ ಅನುಸಂಧಾನವನ್ನು ಹೇಳಿದೆ. ಈ ಪ್ರಕರಣದಲ್ಲಿಯೂ ಉಪಾಸನಾತ್ರೈವಿಧ್ಯವನ್ನು ಹೇಳಿದೆ. ಆದುದರಿಂದ ಇಂದ್ರ-ಪ್ರಾಣ-ಶಬ್ದಗಳಿಂದ ನಿರ್ದಿಷ್ಟನಾದವನು ಜೀವನಿಗಿಂತ ಭಿನ್ನನಾದ ಪರಮಾತ್ಮನೇ.

ದ್ವೈ.—ಪರಬ್ರಹ್ಮನ ಉಪಾಸನೆಯು ಅಂತರುಪಾಸನೆ, ವ್ಯಾಪ್ತ್ಯುಪಾಸನೆ, ಬಹಿರುಪಾಸನೆ ಎಂದು ಮೂರು ಬಗೆಯಾಗಿವೆ [3] 'ಅವನು ಅದೇ ಸೀಮೆಯನ್ನೇ ಸೀಳಿಕೊಂಡು, ಅದೇ ದ್ವಾರದ ಮೂಲಕ (ಬ್ರಹ್ಮನ ಹೃದಯವನ್ನು) ಪ್ರವೇಶಿಸಿದನು'[4] (ಐ. ಆ. ೨. ೨. ೩), 'ಅವನು ಅದೇ ಬ್ರಹ್ಮನನ್ನು ಎಲ್ಲೆಲ್ಲಿಯೂ ಇರುವಂತೆ ನೋಡಿ

---

[1] ನಿಖಿಲಕಾರಣಭೂತಸ್ಯ ಬ್ರಹ್ಮಣಃ ಸ್ವರೂಪೇಣಾನುಸಂಧಾನಂ ಭೋಕ್ತೃವರ್ಗ-ಶರೀರಕತ್ವಾನುಸಂಧಾನಂ ಭೋಗ್ಯಭೋಗೋಪಕರಣಶರೀರಕತ್ವಾನುಸಂಧಾನಂ ಚೇತಿ ತ್ರಿವಿಧಮನುಸಂಧಾನಮುಪದೇಷ್ಟುಮಿತ್ಯರ್ಥಃ (ಶ್ರೀಭಾಷ್ಯ).

[2] ಸ ತಪಸ್ತಪ್ತ್ವಾ ಇದಂ ಸರ್ವಮಸೃಜತ...ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್ ।

[3] ಅಂತರ್ಬಹಿಃ ಸರ್ವಗತತ್ವೇನೇತ್ಯುಪಾಸಾತ್ರೈವಿಧ್ಯಾದಿಹಾಽಶ್ರಿತತ್ವಾಚ್ಚ । (ಮ. ಭಾ.)

[4] ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ ।

ದನು’[1] (ಐ. ಆ. ೨. ೨. ೩), ‘ಜ್ಞಾನಿಯಾದ ಮಹಿದಾಸ ಐತರೇಯನು ಇದನ್ನೆಲ್ಲ ಹೇಳಿದ್ದಾನೆ’[2] (ಐ. ಆ ೨. ೧. ೮) ಎಂಬ ಶ್ರುತಿಗಳು ಮೇಲಿನ ಮೂರು ಉಪಾಸನೆಗಳನ್ನು ಕ್ರಮವಾಗಿ ಪ್ರತಿಪಾದಿಸುತ್ತವೆ. ಅಧಿಕಾರಿಭೇದದಿಂದ ತ್ರೈವಿಧ್ಯೋಪಾಸನೆಯು ಯುಕ್ತವಾಗಿರುತ್ತದೆ.

---

1 ಸ ಏತಮೇವ ಪುರುಷಂ ಬ್ರಹ್ಮ ತತಮಮಪಶ್ಯತ್ ।

2 ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ ।

## ಎರಡನೆಯ ಪಾದ

# ೧. ಸರ್ವತ್ರಪ್ರಸಿದ್ಧ್ಯಧಿಕರಣ

(ಸೂ ೧-೮)

**ಸರ್ವತ್ರ ಪ್ರಸಿದ್ಧೋಪದೇಶಾತ್ ॥೧॥**

೧. ಸರ್ವತ್ರ ಪ್ರಸಿದ್ಧವಾಗಿರುವುದನ್ನೇ ಉಪದೇಶಿಸಿರುವುದರಿಂದ (ಮನೋಮಯನು ಬ್ರಹ್ಮವೇ).

ಅಸ್ಪಷ್ಟವಾದ ಬ್ರಹ್ಮಲಿಂಗಗಳುಳ್ಳ ಕೆಲವು ವಾಕ್ಯಗಳ ತಾತ್ಪರ್ಯವನ್ನು ನಿರ್ಣಯಿಸಲು ಎರಡನೆಯ ಮತ್ತು ಮೂರನೆಯ ಪಾದಗಳನ್ನು ಪ್ರಾರಂಭಿಸಿರುತ್ತದೆ. ಈ ಅಧಿಕರಣದ ಎಂಟು ಸೂತ್ರಗಳು ಛಾಂದೋಗ್ಯೋಪನಿಷತ್ತಿನಲ್ಲಿ ವರ್ಣಿಸಲ್ಪಟ್ಟ ಮನೋಮಯನೂ ಪ್ರಾಣಶರೀರನೂ ಆದವನು ಪರಬ್ರಹ್ಮವೇ ಹೊರತು ಜೀವಾತ್ಮನಲ್ಲ ಎಂಬುದನ್ನು ತಿಳಿಸುತ್ತವೆ.

'ತಜ್ಜಲಾನ್ ಆಗಿರುವುದರಿಂದ ಇದೆಲ್ಲವೂ ಬ್ರಹ್ಮವೇ. (ಆದುದರಿಂದ) ಶಾಂತನಾಗಿ ಉಪಾಸಿಸಬೇಕು'[1] (ಛಾಂ. ಉ ೩ ೧೪. ೧), 'ಮನೋಮಯನು, ಪ್ರಾಣಶರೀರನು, ಭಾರೂಪನು'[2] (ಛಾಂ. ಉ. ೩. ೧೪. ೨)—ಎಂಬಲ್ಲಿ ಮನೋಮಯತ್ವವೇ ಮೊದಲಾದ ಧರ್ಮಗಳಿಂದ ಉಪಾಸ್ಯನೆಂದು ನಿರ್ದೇಶಿಸಲ್ಪಟ್ಟವನು ಜೀವನೆ ಅಥವಾ ಪರಬ್ರಹ್ಮವೆ ಎಂಬುದು ಸಂಶಯ

ಶರೀರೇಂದ್ರಿಯಗಳ ಒಡೆಯನಾದ ಜೀವಾತ್ಮನಿಗೆ ಮನಸ್ಸಿನ ಸಂಬಂಧವಿರುವುದೇ ಹೊರತು 'ಪ್ರಾಣ-ಮನಸ್ಸುಗಳಿಲ್ಲದವನು'[3] (ಮುಂ. ಉ. ೨. ೧. ೨) ಎನ್ನಿಸಿದ ಬ್ರಹ್ಮಕ್ಕೆ ಇರುವುದಿಲ್ಲ. ಮತ್ತೆ 'ಶಾಂತನಾಗಿ ಉಪಾಸಿಸಬೇಕು' ಎಂದು ವಿಧಿಸಿರುವುದರಿಂದ ಬ್ರಹ್ಮವು ಉಪಾಸ್ಯವಾಗಿ ಇರಬೇಕಾದುದಿಲ್ಲ. 'ಸರ್ವಕರ್ಮನು, ಸರ್ವಕಾಮನು'[4] (ಛಾಂ. ಉ. ೩. ೧೪. ೭) ಇವೇ ಮೊದಲಾದ ವಿಶೇಷಣಗಳು ಜೀವನಿಗೆ ಹೊಂದುವುವೇ ಹೊರತು ಅಪರಿಚ್ಛಿನ್ನವಾದ ಬ್ರಹ್ಮಕ್ಕಲ್ಲ. ಆದುದರಿಂದ ಮನೋ-ಮಯತ್ವಾದಿಧರ್ಮಗಳಿಂದ ಉಪಾಸ್ಯನಾಗಿರುವವನು ಜೀವನು ಎಂಬುದು ಪೂರ್ವಪಕ್ಷ.

---

[1] ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ ।

[2] ಮನೋಮಯಃ ಪ್ರಾಣಶರೀರೋ ಭಾರೂಪಃ ।

[3] ಅಪ್ರಾಣೋ ಹ್ಯಮನಾಃ ।

[4] ಸರ್ವಕರ್ಮಾ ಸರ್ವಕಾಮಃ ।

ಮನೋಮಯತ್ವಾದಿಧರ್ಮಗಳಿಂದ ಉಪಾಸ್ಯವೆಂದು ಹೇಳಲ್ಪಟ್ಟಿರುವುದು ಪರಬ್ರಹ್ಮವೇ ಎಂಬುದು ಸಿದ್ಧಾಂತ; ಏಕೆಂದರೆ ಸಮಸ್ತ ವೇದಾಂತವಾಕ್ಯಗಳಲ್ಲಿಯೂ ಯಾವುದು ಬ್ರಹ್ಮ-ಶಬ್ದಕ್ಕೆ ವಿಷಯವಾದ ಜಗತ್ಕಾರಣವೆಂದು ಪ್ರಸಿದ್ಧವಾಗಿರುವುದೊ, ಯಾವುದನ್ನು 'ಇದೆಲ್ಲವೂ ಬ್ರಹ್ಮವೇ' (ಛಾಂ. ಉ. ೩. ೧೪. ೧) ಎಂದು ವಾಕ್ಯದ ಉಪಕ್ರಮದಲ್ಲಿ ಹೇಳಿದೆಯೊ ಅದನ್ನೇ ಮನೋಮಯತ್ವಾದಿ ಧರ್ಮಗಳಿಂದ ಉಪಾಸನೆಗೋಸ್ಕರ ಹೇಳಿದೆ.

ವಿ.—'ಸರ್ವತ್ರ—**ಸರ್ವಂ ಖಲ್ವಿದಂ ಬ್ರಹ್ಮ** ಎಂಬುದರಲ್ಲಿ ಹೇಳಿರುವ ಸಮಸ್ತ ಜಗತ್ತು ಪರಬ್ರಹ್ಮನಿಗೆ ಶರೀರವಾಗಿರುವುದರಿಂದಲೂ ಅವನು ಅದಕ್ಕೆ ಆತ್ಮನಾಗಿರುವುದರಿಂದಲೂ ಈ ಜಗತ್ತೆಲ್ಲವೂ ಪರಬ್ರಹ್ಮನೆ ; ಏಕೆಂದರೆ **ತಜ್ಜಲಾನ್** (ಎಂದರೆ ಅವನಲ್ಲಿಯೇ ಜಗತ್ತು ಉತ್ಪತ್ತಿ-ಸ್ಥಿತಿ-ಲಯಗಳನ್ನು ಹೊಂದುತ್ತದೆ) ಎಂದು ಹೇಳಿದೆ' ಎಂಬುದು ಸೂತ್ರಾರ್ಥ.

ಪರಬ್ರಹ್ಮನಿಗೂ ಜಗತ್ತಿಗೂ ತಾದಾತ್ಮ್ಯವನ್ನು ಹೇಳಿದರೆ, ಚಿತ್-ಅಚಿತ್—ಇವುಗಳ ದೋಷದಿಂದ ಪರಬ್ರಹ್ಮನು ಲಿಪ್ತನಾಗುವನೆಂಬ ಸಂಶಯಕ್ಕೆ ಕಾರಣವಿಲ್ಲ. ಜಗತ್ತು ಪರಮಾತ್ಮನಿಂದ ಹುಟ್ಟಿ, ಜೀವಿಸಿ, ಅವನಲ್ಲಿಯೇ ಲಯವಾಗುವುದರಿಂದಲೂ, ಅವನನ್ನೇ ಆತ್ಮನನ್ನಾಗಿ ಹೊಂದಿರುವುದರಿಂದಲೂ ತಾದ್ಯಾತ್ಮ್ಯವು ಉಪಪನ್ನವಾಗುತ್ತದೆ. ಪ್ರಕಾರವಾದ ಶರೀರದಲ್ಲಿರುವ ದೋಷಗಳು ಪ್ರಕಾರಿಯಾದ ಆತ್ಮನನ್ನು ಲಿಪ್ತನನ್ನಾಗಿ ಮಾಡುವುದಿಲ್ಲ.[1]

**ಸರ್ವಂ ಖಲ್ವಿದಂ ಬ್ರಹ್ಮ** ಎಂಬುದರಲ್ಲಿ ಸರ್ವಾತ್ಮನೆಂದು ನಿರ್ದೇಶಿಸಿರುವ ಬ್ರಹ್ಮನೇ ಈಶ್ವರನಾಗಿರುತ್ತಾನೆ—ಎಂದು ವೃತ್ತಿಕಾರರು ಹೇಳುತ್ತಾರೆ.[2]

**ದ್ವೈ.**—'ಸರ್ವತ್ರ (ಇರುವುದೆಂದು ಹೇಳಿರುವುದೆಲ್ಲ ಬ್ರಹ್ಮನೇ); ಏಕೆಂದರೆ ಅವನನ್ನೇ ಸೂಚಿಸುವ (ಬ್ರಹ್ಮಶಬ್ದದ) ಪ್ರಯೋಗವಿದೆ' ಎಂಬುದು ಸೂತ್ರಾರ್ಥ.

ಅನ್ಯತ್ರ ಪ್ರಸಿದ್ಧವಾದ ಶಬ್ದಗಳಿಗೆ ಶ್ರೀನಾರಾಯಣನಲ್ಲಿಯೇ ಮುಖ್ಯವೃತ್ತಿಯಿರುವುದೆಂದು ಈ ಪಾದದಲ್ಲಿ ಸಮರ್ಥಿಸಲ್ಪಟ್ಟಿದೆ. 'ಬ್ರಹ್ಮನು ಸರ್ವವ್ಯಾಪಕನು'[3] ಎಂಬಲ್ಲಿ ವಿಷ್ಣುವಿನ ಸರ್ವಗತತ್ವವನ್ನು ಹೇಳಿದೆ; 'ಆ ಇವನಿಗೆ ಆದಿತ್ಯನು ರಸ'[4] (ಐ. ಆ ೩. ೨. ೩) ಎಂಬುದರಲ್ಲಿ ಆದಿತ್ಯನಿಗೆ ಸರ್ವಗತತ್ವವನ್ನು ಹೇಳಿರುವ ಹಾಗೆ ಕಾಣುತ್ತದೆ. ಆದರೆ 'ಯಾವನು ಅಶರೀರಿಯೊ ಪ್ರಜ್ಞಾತ್ಮನೊ'[5] (ಐ. ಆ. ೩. ೨. ೪) ಇವೇ ಮೊದಲಾದ

---

1 ಪ್ರಕಾರಭೂತಶರೀರಗತಾನಾಂ ದೋಷಾಣಾಂ ಪ್ರಕಾರಿಣಿ ಆತ್ಮನಿ ಅಪ್ರಸಂಗಾತ್. (ಶ್ರೀಭಾಷ್ಯ)।

2 ಯದಾಹ ವೃತ್ತಿಕಾರಃ—ಸರ್ವಂ ಖಲ್ವಿತಿ ಸರ್ವಾತ್ಮಾ ಬ್ರಹ್ಮೇಶ ಇತಿ (ಶ್ರೀಭಾಷ್ಯ).

3 ಬ್ರಹ್ಮ ತತಮ್ ।

4 ತಸ್ಯೈತಸ್ಯ ಅಸಾವಾದಿತ್ಯೋ ರಸಃ ।

5 ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ ।

ವಾಕ್ಯಗಳಲ್ಲಿ ಸರ್ವಗತನಾದವನು ನಾರಾಯಣನೆಂದೇ ಹೇಳಿದೆ. ಆದುದರಿಂದ ಬ್ರಹ್ಮ ಶಬ್ದವು ವಿಷ್ಣುವನ್ನು ಸೂಚಿಸುವುದರಲ್ಲಿಯೇ ಪ್ರಸಿದ್ಧವಾಗಿದೆ. ಇಲ್ಲಿಂದ ಸರ್ವಗತತ್ವಾಧಿಕರಣವು ಪ್ರಾರಂಭವಾಗುತ್ತದೆ

## ವಿವಕ್ಷಿತಗುಣೋಪಪತ್ತೇಶ್ಚ ॥ ೨ ॥

೨. ಮತ್ತು (ಪರಬ್ರಹ್ಮದಲ್ಲಿ) ವಿವಕ್ಷಿತವಾದ ಗುಣಗಳು ಹೊಂದುವುದರಿಂದ (ಪರಬ್ರಹ್ಮವನ್ನೇ ಉಪಾಸ್ಯವಾಗಿ ಉಪದೇಶಿಸಿದೆ).

ವಿವಕ್ಷಿತವಾದ ಎಂದರೆ ಉಪಾಸನೆಗೆ ಯೋಗ್ಯವಾದುದೆಂದು ಉಪದಿಷ್ಟವಾದ ಸತ್ಯಸಂಕಲ್ಪತ್ವಾದಿ ಗುಣಗಳು ಪರಬ್ರಹ್ಮದಲ್ಲಿಯೇ ಹೊಂದುತ್ತವೆ. ಪರಮಾತ್ಮನಿಗೆ ಸೃಷ್ಟಿ-ಸ್ಥಿತಿ-ಸಂಹಾರಗಳಲ್ಲಿ ಯಾವ ಪ್ರತಿಬಂಧವೂ ಇಲ್ಲದ ಶಕ್ತಿಯಿರುವುದರಿಂದ ಸತ್ಯಸಂಕಲ್ಪತ್ವವು ಅವನಿಗೇ ಹೊಂದುತ್ತದೆ. 'ಯಾವ ಆತ್ಮನು ಪಾಪರಹಿತನೊ'[1] (ಛಾಂ. ಉ ೮. ೭ ೧) ಎಂಬಲ್ಲಿ ಸತ್ಯವಾದ ಕಾಮಗಳು, ಸತ್ಯವಾದ ಸಂಕಲ್ಪಗಳು ಎಂಬ ಗುಣಗಳು ಪರಮಾತ್ಮನ ಗುಣಗಳೆಂದು ಹೇಳಿದೆ. 'ಆಕಾಶಾತ್ಮನು' (ಛಾಂ. ಉ. ೩. ೧೪. ೨) ಎಂದರೆ ಇವನ ಆತ್ಮನು ಆಕಾಶದಂತೆ ಸರ್ವಗತನಾಗಿರುವನು ಎಂದರ್ಥ.[2]

'ಮನೋಮಯನು ಪ್ರಾಣಶರೀರನು' (ಛಾಂ. ಉ. ೩. ೧೪. ೨) ಎಂಬ ವಾಕ್ಯವು ಸಗುಣಬ್ರಹ್ಮನನ್ನು ಸೂಚಿಸುತ್ತದೆ; 'ಪ್ರಾಣ-ಮನಸ್ಸುಗಳಿಲ್ಲದವನು' (ಮುಂ. ಉ. ೨ ೧. ೨) ಎಂಬುದು ಶುದ್ಧಬ್ರಹ್ಮವನ್ನು ಸೂಚಿಸುತ್ತದೆ.

**ವಿ.**—ಇಲ್ಲಿ ವಿವಕ್ಷಿತವಾದ ಮನೋಮಯತ್ವವೇ ಮೊದಲಾದ ಗುಣಗಳೆಲ್ಲ ಪರಮಾತ್ಮನಿಗೇ ಉಪಪನ್ನವಾಗುತ್ತವೆ. **ಮನೋಮಯನು** ಎಂದರೆ ಪರಿಶುದ್ಧವಾದ ಮನಸ್ಸಿನಿಂದಲೇ ಗ್ರಹಿಸಲ್ಪಡತಕ್ಕವನು. **ಪ್ರಾಣಶರೀರನು** ಎಂದರೆ ಜಗತ್ತಿನಲ್ಲಿರುವ ಪ್ರಾಣಗಳಿಗೆಲ್ಲ ಆಶ್ರಯನಾಗಿರುವವನು. **ಆಕಾಶಾತ್ಮನು** ಎಂದರೆ ಸಕಲವಸ್ತುಗಳಿಗೆ ಕಾರಣವಾದ ಆಕಾಶಕ್ಕೂ ಆತ್ಮನಾದವನು; ಅಥವಾ ತಾನೂ ಪ್ರಕಾಶಿಸುತ್ತ ಇತರ ವಸ್ತುಗಳನ್ನೂ ಪ್ರಕಾಶಗೊಳಿಸುವವನು.

**ದ್ವೈ.**—'ವ್ಯಾಪ್ತನಾದ ಯಾವನು ಅಶ್ರುತನೊ'[3] (ಐ. ಆ. ೩. ೨. ೪) ಇವೇ ಮೊದಲಾದ ಶ್ರುತಿಗಳಿಂದ ವಿವಕ್ಷಿತವಾದ ಅಶ್ರುತತ್ವಾದಿ ಧರ್ಮಗಳು ವಿಷ್ಣುವಿನಲ್ಲಿಯೇ ಹೊಂದುತ್ತವೆ; ಆದುದರಿಂದ ಪೃಥಿವ್ಯಾದಿಗಳಲ್ಲಿ ಹೇಳಲ್ಪಡತಕ್ಕವನು ಪರಬ್ರಹ್ಮನೇ.

---

1 ಯ ಆತ್ಮಾಽಪಹತಪಾಪ್ಮಾ ।

2 ಶ್ವೇ. ಉ. ೪. ೩, ಗೀತಾ ೩. ೧೩ ನೋಡಿ.

3 ಸಂಯೋಽತೋಽಶ್ರುತಃ ।

## ಅನುಪಪತ್ತೇಸ್ತು ನ ಶಾರೀರಃ ॥ ೩ ॥

೩. ಆದರೆ (ಈ ಗುಣಗಳು ಜೀವನಲ್ಲಿ) ಹೊಂದದೆ ಇರುವುದರಿಂದ (ಮನೋಮಯತ್ವಾದಿಗಳಿಂದ ಸೂಚಿಸಲ್ಪಟ್ಟವನು) ಜೀವನಲ್ಲ.

ಮನೋಮಯತ್ವಾದಿ ಗುಣಗಳು ಬ್ರಹ್ಮಕ್ಕೆ ಇರುವುವೇ ಹೊರತು ಶಾರೀರನಿಗೆ ಎಂದರೆ ಜೀವನಿಗೆ ಇರುವುದಿಲ್ಲ. ಈಶ್ವರನು ಶಾರೀರನಾಗಿದ್ದರೂ (ಎಂದರೆ ಶರೀರದಲ್ಲಿದ್ದರೂ) ಸರ್ವವ್ಯಾಪಿಯಾಗಿರುತ್ತಾನೆ. 'ಪೃಥಿವಿಗಿಂತಲೂ ದೊಡ್ಡವನು, ಅಂತರಿಕ್ಷಕ್ಕಿಂತಲೂ ದೊಡ್ಡವನು'[1] (ಛಾಂ ಉ. ೩. ೧೪. ೩) ಎಂದು ಶ್ರುತಿಯು ಹೇಳುತ್ತದೆ. ಆದರೆ ಜೀವನಿಗೆ ತನ್ನ ಭೋಗಾಶ್ರಯವಾಗಿರುವ ಶರೀರಕ್ಕಿಂತ ಬೇರೆ ಕಡೆ ಅಸ್ತಿತ್ವವಿರುವುದಿಲ್ಲ.

**ವಿ.**—ಶರೀರಸಂಬಂಧದಿಂದ ಅಪರಿಮಿತದುಃಖವನ್ನು ಅನುಭವಿಸಲು ಯೋಗ್ಯನಾದ ಜೀವನಲ್ಲಿ—ಅವನು ಬದ್ಧನಾಗಿರಲಿ ಅಥವಾ ಮುಕ್ತನಾಗಿರಲಿ—ಈ ಗುಣಗಳ ಗಂಧವೂ ಕೂಡ ಇರುವುದಿಲ್ಲ.

**ದ್ವೈ.**—ಆದಿತ್ಯ-ಶಬ್ದವು ಬರುವುದರಿಂದಲೂ 'ಕಣ್ಣಿನಲ್ಲಿರುವವನು' ಎಂಬ ವಿಶೇಷಣವನ್ನು ಹೇಳಿರುವುದರಿಂದಲೂ ಅಶ್ರುತನಾದವನು ಜೀವನೆಂದು ಹೇಳಲಾಗುವುದಿಲ್ಲ ; ಏಕೆಂದರೆ ಸರ್ವಗತತ್ವವು ಜೀವನಿಗೆ ಹೊಂದುವುದಿಲ್ಲ. ಒಬ್ಬನೇ ಎಲ್ಲ ಶರೀರಗಳಲ್ಲಿಯೂ ಏಕಕಾಲದಲ್ಲಿರಲು ಅಸಾಧ್ಯ.[2]

## ಕರ್ಮಕರ್ತೃವ್ಯಪದೇಶಾಚ್ಚ ॥ ೪ ॥

೪. ಕರ್ಮ, ಕರ್ತೃ—ಇವುಗಳನ್ನು (ಬೇರೆಯಾಗಿ) ಹೇಳಿರುವುದರಿಂದ (ಮನೋಮಯತ್ವಾದಿ ಗುಣಗಳಿಂದ ಕೂಡಿದವನು ಜೀವನಲ್ಲ).

'ಇಲ್ಲಿಂದ ಹೊರಟುಹೋಗಿ ಇವನನ್ನು ಹೊಂದುತ್ತೇನೆ'[3] (ಛಾಂ. ಉ. ೩. ೧೪. ೪) ಎಂಬಲ್ಲಿ ಮನೋಮಯತ್ವಾದಿ-ಗುಣಗಳಿಂದ ವಿಶಿಷ್ಟನಾದ ಆತ್ಮನನ್ನು ಉಪಾಸ್ಯನೆಂದೂ ಪ್ರಾಪ್ಯನೆಂದೂ ಹೇಳಿದೆ. ಒಂದೇ ವಸ್ತುವು ಕರ್ಮವೂ ಕರ್ತೃವೂ ಆಗಲಾರದು. ಉಪಾಸ್ಯ-ಉಪಾಸಕ-ಭಾವಗಳಿಗೆ ಬೇರೆ ಬೇರೆ ಆಶ್ರಯಗಳು ಬೇಕಾಗಿರುತ್ತವೆ.[4]

---

[1] ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾತ್ ।

[2] ಏಕಸ್ಯ ಸರ್ವಶರೀರಸ್ಥತ್ವಾನುಪಪತ್ತೇರೇವ (ಮ. ಭಾ.).

[3] ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ ।

[4] ತಥೋಪಾಸ್ಯೋಪಾಸಕಭಾವೋಽಪಿ ಭೇದಾಧಿಷ್ಠಾನ ಏವ (ಸೂ. ಭಾ.).

ವಿ.—ಉಪಾಸಕನೇ ಪ್ರಾಪ್ತೃವಾದ ಜೀವನು, ಉಪಾಸ್ಯನೇ ಪರಬ್ರಹ್ಮನು; ಆದುದರಿಂದ ಬ್ರಹ್ಮನು ಪ್ರಾಪ್ತೃವಾದ ಜೀವನಿಗಿಂತ ಬೇರೆಯಾದವನು.[1]

ದ್ವೈ.—'ಆತ್ಮನನ್ನು ಇನ್ನೊಬ್ಬನಿಗೆ ಉಪದೇಶಿಸುವವನಿಗೆ'[2] (ಐ. ಆ. ೩. ೨. ೩) ಎಂದು ಉಪದೇಶಕ್ರಿಯೆಯಲ್ಲಿ ಸರ್ವಗತನಾದ ಆತ್ಮನು ಕರ್ಮನೆಂದೂ ಜೀವನು ಕರ್ತೃವೆಂದೂ ಹೇಳಿರುವುದರಿಂದ ಜೀವನು ಸರ್ವಗತನಲ್ಲ. ಒಂದೇ ಕ್ರಿಯೆಯಲ್ಲಿ ಕರ್ಮ ಕರ್ತೃಗಳು ಬೇರೆಬೇರೆಯಾಗಿರಬೇಕು.

**ಶಬ್ದವಿಶೇಷಾತ್ ॥ ೫ ॥**

೫. ಶಬ್ದಗಳ ವಿಶೇಷವಿರುವುದರಿಂದಲೂ (ಮನೋಮಯತ್ವಾದಿಗಳಿಂದ ವಿಶಿಷ್ಟನಾದವನು ಜೀವನಲ್ಲ).

'ಬತ್ತದ ಕಾಳು ಅಥವಾ ಯವೆಯ ಕಾಳು ಅಥವಾ ಸಾವೆಯ ಕಾಳು ಅಥವಾ ಸಾವೆಯಕ್ಕಿಯ ಕಾಳು—ಇವು ಹೇಗೆ ಸೂಕ್ಷ್ಮವಾಗಿರುವುವೊ ಹಾಗೆಯೇ ಈ ಆತ್ಮನಲ್ಲಿರುವ ಹಿರಣ್ಮಯಪುರುಷನೂ ಇರುವನು'[3] (ಶ ಬ್ರಾ. ೧೦. ೬. ೩. ೨) ಎಂಬಲ್ಲಿ ಸಪ್ತಮ್ಯಂತವಾದ 'ಆತ್ಮನಲ್ಲಿ', **ಅಂತರಾತ್ಮನ್** ಎಂಬ ಶಬ್ದಕ್ಕಿಂತ ಬೇರೆಯಾದುದೂ ಪ್ರಥಮಾಂತವಾದುದೂ ಆದ ಪುರುಷ-ಶಬ್ದವು ಮನೋಮಯತ್ವಾದಿ-ವಿಶಿಷ್ಟನಾದ ಆತ್ಮನನ್ನು ಸೂಚಿಸುತ್ತದೆ.

ವಿ.—'ಹೃದಯದಲ್ಲಿರುವ ಈ ನನ್ನ ಆತ್ಮನು'[4] (ಛಾಂ. ಉ ೩. ೧೪. ೪) ಎಂಬಲ್ಲಿ ಜೀವನನ್ನು ಷಷ್ಠೀವಿಭಕ್ತಿಯಿಂದಲೂ ('ನನ್ನ' ಮೇ) ಉಪಾಸ್ಯನಾದ ಪರಮಾತ್ಮನನ್ನು ಪ್ರಥಮಾವಿಭಕ್ತಿಯಿಂದಲೂ ('ಆತ್ಮನು' ಆತ್ಮಾ) ಸೂಚಿಸಿದೆ.

ದ್ವೈ.—'ಅವನನ್ನೇ ಬ್ರಹ್ಮನೆಂದು ಕರೆಯುತ್ತಾರೆ'[5] (ಐ. ಆ ೩. ೨. ೩) ಎಂಬಲ್ಲಿ ಬ್ರಹ್ಮ-ಶಬ್ದಕ್ಕೆ ಸಾವಧಾರಣತ್ವರೂಪವಾದ ವಿಶೇಷವಿರುವುದರಿಂದ ಬ್ರಹ್ಮ-ಶಬ್ದವು ಜೀವನನ್ನು ಸೂಚಿಸುವುದಿಲ್ಲ

**ಸ್ಮೃತೇಶ್ಚ ॥ ೬ ॥**

೬ ಸ್ಮೃತಿಯಿಂದಲೂ (ಜೀವ–ಪರಮಾತ್ಮರ ಭೇದವು ಸಿದ್ಧವಾಗುತ್ತದೆ).

---

[1] ಅತಃ ಪ್ರಾಪ್ತಾ ಜೀವ ಉಪಾಸಕಃ, ಪ್ರಾಪ್ಯಂ ಪರಂ ಬ್ರಹ್ಮೋಪಾಸ್ಯಮಿತಿ ಪ್ರಾಪ್ತುರನ್ಯದೇವೇದಮಿತಿ ವಿಜ್ಞಾಯತೇ (ಶ್ರೀಭಾಷ್ಯ).

[2] ಆತ್ಮಾನಂ ಪರಸ್ಮೈ ಶಂಸತಿ ।

[3] ಯಥಾ ವ್ರೀಹಿರ್ವಾ ಯವೋ ವಾ ಶ್ಯಾಮಾಕೋ ವಾ ಶ್ಯಾಮಾಕತಂಡುಲೋ ವೈವಮಯಮಂತರಾತ್ಮನ್ಪುರುಷೋ ಹಿರಣ್ಮಯಃ ।

[4] ಏಷ ಮ ಆತ್ಮಾಂತರ್ಹೃದಯೇ ।

[5] ಏತಮೇವ ಬ್ರಹ್ಮೇತ್ಯಾಚಕ್ಷತೇ ।

ಸ್ಮೃತಿಯೂ ಕೂಡ ಜೀವ-ಪರಮಾತ್ಮರ ಭೇದವನ್ನು ಹೀಗೆ ತಿಳಿಸುತ್ತದೆ : 'ಎಲೈ ಅರ್ಜುನ, ಸರ್ವಪ್ರಾಣಿಗಳನ್ನೂ ಯಂತ್ರಾರೂಢವಾದ ಬೊಂಬೆಗಳಂತೆ ಮಾಯೆಯಿಂದ ತಿರುಗಿಸುತ್ತ ಈಶ್ವರನು ಸರ್ವಜೀವರ ಹೃದಯಪ್ರದೇಶದಲ್ಲಿ ನೆಲಸಿರುತ್ತಾನೆ'[1] (ಗೀತಾ ೧೮. ೬೧)

ಹಿಂದಿನ ಸೂತ್ರಗಳ ಪ್ರಕಾರ ನಿಷೇಧಿಸಲ್ಪಟ್ಟಿರುವ ಮತ್ತು ಪರಮಾತ್ಮನಿಗಿಂದ ಬೇರೆಯವನಾದ ಈ ಜೀವನು ಯಾರು ?—ಎಂದು ಪ್ರಶ್ನಿಸಬಹುದು ; ಏಕೆಂದರೆ ಶ್ರುತಿ-ಸ್ಮೃತಿಗಳು[2] ಪರಮಾತ್ಮನಿಗಿಂತ ಬೇರೆಯವನಾದ ಆತ್ಮನೇ ಇಲ್ಲವೆಂದು ಹೇಳುತ್ತವೆ. ಇದಕ್ಕೆ ಪರಿಹಾರ ಹೀಗಿದೆ : ಅಪರಿಚ್ಛಿನ್ನವಾದ ಆಕಾಶವು ಗಡಿಗೆ ಮೊದಲಾದ ಉಪಾಧಿಗಳ ವಶದಿಂದ ಪರಿಚ್ಛಿನ್ನವಾಗಿ ಕಾಣುವಂತೆ ಪರಮಾತ್ಮನೇ ದೇಹೇಂದ್ರಿಯ-ಮನೋಬುದ್ಧಿಗಳೆಂಬ ಉಪಾಧಿಗಳಿಂದ ಪರಿಚ್ಛಿನ್ನನಾಗಿ ಅಜ್ಞಾನಿಗಳಿಂದ 'ಜೀವ' ಎನ್ನಿಸಿಕೊಳ್ಳುತ್ತಾನೆ. ತತ್ತ್ವಮಸಿ ಮೊದಲಾದ ವಾಕ್ಯಗಳಿಂದ ಆತ್ಮನ ಏಕತ್ವವನ್ನು ಗ್ರಹಿಸುವುದಕ್ಕೆ ಮೊದಲು ಆತ್ಮನಲ್ಲಿ ಆರೋಪಿಸಲ್ಪಟ್ಟಿರುವ ಕರ್ಮ, ಕರ್ತೃ ಮೊದಲಾದ ಭೇದವ್ಯವಹಾರವು ವಿರುದ್ಧವಲ್ಲ ಆತ್ಮನ ಏಕತ್ವವನ್ನು ಗ್ರಹಿಸಿದ ಕೂಡಲೇ ಬಂಧ-ಮೋಕ್ಷವೇ ಮೊದಲಾದ ಸರ್ವವ್ಯವಹಾರವೂ ಕೊನೆಗೊಳ್ಳುತ್ತದೆ.[3]

ವಿ.—ಸ್ಮೃತಿಗಳು[4] ಕೂಡ ಜೀವನು ಉಪಾಸಕನೆಂದೂ ಪರಮಾತ್ಮನು ಉಪಾಸ್ಯನೆಂದೂ ತಿಳಿಸುತ್ತವೆ.

ಪ್ರೀತ.—'ಎಲೈ ಅರ್ಜುನ, ನಾನು ಸಮಸ್ತಪ್ರಾಣಿಗಳ ಹೃದಯದಲ್ಲಿರುವ ಆತ್ಮ'[5] (ಗೀತಾ ೧೦. ೨೦), 'ನಾನು ಭೂಮಿಯನ್ನು ಪ್ರವೇಶಿಸಿ ಪ್ರಾಣಿಗಳನ್ನು ಓಜಸ್ಸಿನಿಂದ ಧರಿಸಿರುತ್ತೇನೆ'[6] (ಗೀತಾ ೧೫ ೧೩) ಇವೇ ಮೊದಲಾದ ಸ್ಮೃತಿಗಳಿಂದ ಹೇಳಲ್ಪಟ್ಟವನು ವಿಷ್ಣುವೇ ; ಏಕೆಂದರೆ ಸರ್ವಭೂತಹೃದಯಸ್ಥತ್ವವೂ ಮತ್ತು ಸರ್ವಾಧಾರತ್ವವೂ ಪರಮಾತ್ಮನಿಗೇ ಹೊಂದುತ್ತವೆ.

**ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾ-ದೇವಂ ವ್ಯೋಮವಚ್ಚ ॥ ೭ ॥**

೭. ಆಶ್ರಯವು ಅಲ್ಪವಾದುದರಿಂದಲೂ (ಸೂಕ್ಷ್ಮನೆಂದು) ಹೇಳಿರುವುದ

---

1 ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥

2 ಬೃ. ಉ. ೩ ೭. ೨೩, ಗೀತಾ ೧೩. ೨.

3 ಗೃಹೀತೇ ತ್ವಾತ್ಮೈಕತ್ವೇ ಬಂಧಮೋಕ್ಷಾದಿಸರ್ವವ್ಯವಹಾರಪರಿಸಮಾಪ್ತಿರೇವ ಸ್ಯಾತ್ (ಸೂ. ಭಾ.).

4 ಗೀತಾ ೧೫. ೧೫, ೧೯, ೧೮. ೬೧.

5 ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।

6 ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।

ರಿಂದಲೂ (ಬ್ರಹ್ಮವನ್ನು) ಸೂಚಿಸಿಲ್ಲವೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ (ಬ್ರಹ್ಮವನ್ನು) ಹೀಗೆ ಧ್ಯಾನಿಸಬೇಕು; ಮತ್ತು ಆಕಾಶದಂತೆ (ಎಂಬ ದೃಷ್ಟಾಂತವೂ) ಇದೆ.

'ಹೃದಯದಲ್ಲಿರುವ ಇವನು ನನ್ನ ಆತ್ಮನು' (ಛಾಂ ಉ. ೩. ೧೪ ೩) ಎಂಬಲ್ಲಿ ಪರಿಚ್ಛಿನ್ನವಾದ ಆಶ್ರಯವನ್ನು ಹೇಳಿದೆ; 'ಬತ್ತದ ಕಾಳಿಗಿಂತಲೂ ಯವೆಗಿಂತಲೂ ಸಣ್ಣವನು'[1] (ಛಾಂ. ಉ ೩. ೧೪. ೩) ಎಂಬಲ್ಲಿ ಸೂಕ್ಷ್ಮನಾಗಿರುವನೆಂದು ಹೇಳಿದೆ. ಆದುದರಿಂದ ಅತಿಸೂಕ್ಷ್ಮವಾದ ಪರಿಮಿತಿಯುಳ್ಳ ಜೀವನನ್ನು ಇಲ್ಲಿ ಹೇಳಿದೆಯೇ ಹೊರತು ಸರ್ವಗತನಾದ ಆತ್ಮನನ್ನು ಹೇಳಿಲ್ಲ ಎಂಬ ಪೂರ್ವಪಕ್ಷಕ್ಕೆ ಪರಿಹಾರವು ಹೀಗಿದೆ ಪರಿಚ್ಛಿನ್ನ-ಪ್ರದೇಶವುಳ್ಳ ಜೀವನಿಗೆ ಸರ್ವಗತತ್ವವು ಹೊಂದುವುದಿಲ್ಲ; ಆದರೆ ಸರ್ವಗತನಾಗಿ ಸರ್ವಪ್ರದೇಶದಲ್ಲಿರುವ ಆತ್ಮನನ್ನು ಯಾವುದೊ ಒಂದು ಅಪೇಕ್ಷೆಯಿಂದ ಪರಿಚ್ಛಿನ್ನ-ಪ್ರದೇಶವುಳ್ಳವನೆಂದು ಹೇಳಬಹುದು; ಹೇಗೆ ಸಮಸ್ತ-ವಸುಧಾಧಿಪತಿಯನ್ನು 'ಅಯೋಧ್ಯಾಪತಿ' ಎಂದು ಕರೆಯುವರೊ ಹಾಗೆಯೇ.[2] ಯಾವ ಅಪೇಕ್ಷೆಯಿಂದ ಸರ್ವಗತನಾದ ಆತ್ಮನನ್ನು ಪರಿಚ್ಛಿನ್ನ-ಪ್ರದೇಶವುಳ್ಳವನೆಂದು ಹೇಳಿದೆ? ಸೂಕ್ಷ್ಮತ್ವಾದಿಗುಣಗಳಿಂದ ಈಶ್ವರನು ಹೃದಯಪುಂಡರೀಕದಲ್ಲಿ ಉಪಾಸ್ಯನಾಗಿರುವನೆಂಬ ಅಪೇಕ್ಷೆಯಿಂದ. ಸಾಲಗ್ರಾಮದಲ್ಲಿ ಹರಿಯು ಹೇಗೆ ಉಪಾಸ್ಯನಾಗಿರುವನೊ ಹಾಗೆಯೇ.[3] ಹೃದಯದಲ್ಲಿ ಪರಮಾತ್ಮನನ್ನು ಅಂತಃಕರಣವೃತ್ತಿಯಿಂದ ಸಾಕ್ಷಾತ್ಕರಿಸಲು ಸಾಧ್ಯವಾಗುತ್ತದೆ. ಈಶ್ವರನು ಸರ್ವಗತನಾಗಿದ್ದರೂ ಅಲ್ಲಿ ಉಪಾಸನೆಮಾಡಿದರೆ ಪ್ರಸನ್ನನಾಗುತ್ತಾನೆ.[4] ಆಕಾಶವು ಸರ್ವಗತವಾಗಿದ್ದರೂ ಸೂಜಿಯ ಕಣ್ಣಿನ ಅಪೇಕ್ಷೆಯಿಂದ ಅಲ್ಪವೂ ಸೂಕ್ಷ್ಮವೂ ಆಗಿರುವಂತೆ ಬ್ರಹ್ಮದ ಪರಿಚ್ಛಿನ್ನ-ಪ್ರದೇಶತ್ವವನ್ನೂ ಸೂಕ್ಷ್ಮತ್ವವನ್ನೂ ಕಲ್ಪಿಸಿಕೊಂಡಿದೆ.

ಉಪಾಸನೆಯ ಅಪೇಕ್ಷೆಯಿಂದ ಬ್ರಹ್ಮಕ್ಕೆ ಪರಿಚ್ಛಿನ್ನತ್ವವನ್ನು ಹೇಳಿದೆಯೇ ಹೊರತು ಪಾರಮಾರ್ಥಿಕದೃಷ್ಟಿಯಿಂದಲ್ಲ. ಆದುದರಿಂದ ಬ್ರಹ್ಮಕ್ಕೆ ಹೃದಯವು ಆಶ್ರಯವಾಗಿದ್ದರೆ, ಹೃದಯಾಶ್ರಯಗಳು ಪ್ರತಿ ಶರೀರದಲ್ಲಿಯೂ ಬೇರೆಬೇರೆಯಾಗಿರುವುದರಿಂದ ಆಯಾ ಆಶ್ರಯದೋಷಗಳಿಂದ ಬ್ರಹ್ಮವು ಲಿಪ್ತವಾಗುತ್ತದೆ ಎಂದು ಹೇಳಲಾಗುವುದಿಲ್ಲ.

ವಿ.—ಅತಿ ಸೂಕ್ಷ್ಮವಾಗಿರುವುದು ಪರಬ್ರಹ್ಮನ ಸ್ವರೂಪವಲ್ಲ; ಅವನು ಆಕಾಶದಂತೆ ಸರ್ವಗತನೆಂದು ಅವನ ಸ್ವಾಭಾವಿಕಮಹತ್ತ್ವವನ್ನು ಅಲ್ಲಿಯೇ (ಛಾಂ. ಉ. ೩.

---

1 ಅಣೀಯಾನ್ ವ್ರೀಹೇರ್ವಾ ಯವಾದ್ವಾ ।

2 ಯಥಾ ಸಮಸ್ತವಸುಧಾಧಿಪತಿರಪಿ ಹಿ ಸನ್ನಯೋಧ್ಯಾಪತಿರಿತಿ ವ್ಯಪದಿಶ್ಯತೇ । (ಸೂ. ಭಾ.).

3 ಯಥಾ ಸಾಲಗ್ರಾಮೇ ಹರಿಃ (ಸೂ. ಭಾ.).

4 ಸರ್ವಗತೋಽಪೀಶ್ವರಸ್ತತ್ರೋಪಾಸ್ಯಮಾನಃ ಪ್ರಸೀದತಿ (ಸೂ. ಭಾ.).

೧೪. ೩) ಹೇಳಿದೆ. ಅವನು ಅತಿಸೂಕ್ಷ್ಮನೆಂದು ಹೇಳಿರುವುದು ಉಪಾಸನೆಗಾಗಿಯೇ.[1]

ದ್ವೈ.—ವಿಷ್ಣುವು ಸರ್ವಗತನಾಗಿದ್ದರೂ ಹೃದಯದಲ್ಲಿರುವನೆಂದೂ ಇಂದ್ರಿಯೇಶನೆಂದೂ ಅವನನ್ನು ಧ್ಯಾನಿಸಬೇಕು.[2] ವ್ಯಾಪಕವಾದ ಆಕಾಶವು ಏಕದೇಶದಲ್ಲಿಯೂ ಇರುವಂತೆ ವಿಷ್ಣುವು ಸರ್ವಭೂತಗಳ ಹೃದಯದಲ್ಲಿರುವುದೂ ವಿರುದ್ಧವಲ್ಲ.

**ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ॥ ೮ ॥**

೮. (ಜೀವಾತ್ಮ-ಪರಮಾತ್ಮರು ಒಂದೇ ಆಗಿರುವುದರಿಂದ ಪರಮಾತ್ಮನಿಗೆ ಸುಖದುಃಖಗಳ) ಅನುಭವವುಂಟಾಗಬಹುದೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ (ಅವರಿಬ್ಬರ ಸ್ವರೂಪದಲ್ಲಿ) ಭೇದವಿದೆ.

ಒಬ್ಬನು ಕರ್ತೃವು, ಭೋಕ್ತೃವು, ಧರ್ಮಾಧರ್ಮಗಳೆಂಬ ಸಾಧನಗಳುಳ್ಳವನು ಮತ್ತು ಸುಖದುಃಖಾದಿಗಳುಳ್ಳವನು; ಇನ್ನೊಬ್ಬನು ಇದಕ್ಕೆ ವಿರುದ್ಧವಾಗಿ ಪಾಪರಹಿತತ್ವಾದಿ-ಗುಣಗಳಿಂದ ಕೂಡಿರುವವನು. ಜೀವ-ಪರಮಾತ್ಮರಿಗೆ ಹೀಗೆ ಭೇದವಿರುವುದರಿಂದ ಒಬ್ಬನ ಅನುಭವವು ಇನ್ನೊಬ್ಬನ ಅನುಭವವಾಗಲಾರದು.

ಸೂತ್ರದ ಉತ್ತರಾರ್ಧಕ್ಕೆ ಹೀಗೂ ಅರ್ಥವನ್ನು ಕಲ್ಪಿಸಬಹುದು: ಜೀವ-ಪರಮಾತ್ಮರು ಒಂದೇ ಆಗಿದ್ದರೂ ಒಬ್ಬನ ಅನುಭವದಿಂದ ಇನ್ನೊಬ್ಬನಿಗೆ ಅನುಭವವುಂಟಾಗುವುದಿಲ್ಲ; ಏಕೆಂದರೆ ಇವರಿಬ್ಬರಲ್ಲಿ ಮಿಥ್ಯಾಜ್ಞಾನ, ಸಮ್ಯಗ್‌ಜ್ಞಾನ ಎಂಬ ಭೇದವಿದೆ. ಅನುಭವವು ಮಿಥ್ಯಾಜ್ಞಾನದಿಂದ ಕಲ್ಪಿತವಾಗಿದ್ದರೆ ಏಕತ್ವವು ಸಮ್ಯಗ್‌ಜ್ಞಾನದಿಂದ ದೃಷ್ಟವಾಗಿದೆ. ಮಿಥ್ಯಾಜ್ಞಾನದಿಂದ ಕಲ್ಪಿತವಾದ ಅನುಭವವು ಸಮ್ಯಗ್‌ಜ್ಞಾನದಿಂದ ದೃಷ್ಟವಾದ ವಸ್ತುವನ್ನು ಸೋಂಕಲಾರದು.[3] ಆದುದರಿಂದ ಪರಮಾತ್ಮನಿಗೆ ಅನುಭವದ ಲೇಶವನ್ನು ಕೂಡ ಕಲ್ಪಿಸಲು ಸಾಧ್ಯವಿಲ್ಲ.

ವಿ.—ಸೂತ್ರದಲ್ಲಿರುವ **ವೈಶೇಷ್ಯಾತ್** ಎಂಬ ಶಬ್ದಕ್ಕೆ 'ಅನುಭವದ ಕಾರಣದಲ್ಲಿ ಭೇದವಿರುವುದರಿಂದ', **ಹೇತು-ವೈಶೇಷ್ಯಾತ್** ಎಂದರ್ಥ. ಕೇವಲ ಶರೀರದಲ್ಲಿರುವುದೇ ಸುಖದುಃಖವೇ ಮೊದಲಾದ ಅನುಭವಗಳಿಗೆ ಕಾರಣವಾಗುವುದಿಲ್ಲ, ಪುಣ್ಯ-ಪಾಪರೂಪವಾದ ಕರ್ಮಗಳಿಗೆ ವಶವಾಗಿರುವುದೇ ಅಂಥ ಅನುಭವಕ್ಕೆ ಕಾರಣವಾಗಿರುತ್ತದೆ;[4] ಪಾಪರಹಿತನಾದ ಪರಮಾತ್ಮನಿಗೆ ಕರ್ಮವಶತ್ವವು ಸಂಭವಿಸುವುದಿಲ್ಲ. 'ಅವುಗಳಲ್ಲಿ ಒಂದು

---

[1] ಅತ ಉಪಾಸನಾರ್ಥಮೇವಾಲ್ಪತ್ವವ್ಯಪದೇಶಃ (ಶ್ರೀಭಾಷ್ಯ).

[2] ಅರ್ಭಕೌಕಸ್ತ್ವೇನ ಚಕ್ಷುರ್ಮಯತ್ವಾದಿರೂಪೇಣ ಚ ತಸ್ಯೈವ ವಿಷ್ಣೋರ್ನಿಚಾಯ್ಯತ್ವಾತ್ (ಮ. ಭಾ.)

[3] ನ ಚ ಮಿಥ್ಯಾಜ್ಞಾನಕಲ್ಪಿತೇನೋಪಭೋಗೇನ ಸಮ್ಯಗ್‌ಜ್ಞಾನದೃಷ್ಟಂ ವಸ್ತು ಸಂಸ್ಪೃಶ್ಯತೇ (ಸೂ. ಭಾ.).

[4] ನ ಹಿ ಶರೀರಾಂತರ್ವರ್ತಿತ್ವಮೇವ ಸುಖದುಃಖೋಪಭೋಗಹೇತುಃ, ಅಪಿ-ತು ಪುಣ್ಯಪಾಪರೂಪಕರ್ಮಪರವಶತ್ವಮ್ (ಶ್ರೀಭಾಷ್ಯ).

ಪಕ್ವವಾದ ಪಿಪ್ಪಲವನ್ನು ಸೇವಿಸುತ್ತಿರುವುದು, ಮತ್ತೊಂದು ಏನನ್ನೂ ತಿನ್ನದೆ ಬೆಳಗು ತ್ತಿರುವುದು'[1] (ಮುಂ. ಉ ೩. ೧. ೧) ಎಂದು ಶ್ರುತಿಯು ಹೇಳುತ್ತದೆ.

**ದ್ವೈತ.**—ಒಂದೇ ಶರೀರದಲ್ಲಿರುವ ಜೀವ-ಪರಮಾತ್ಮರು ಆ ಶರೀರದ ಅನುಭವ ವನ್ನು ಸಮಾನವಾಗಿ ಹೊಂದಬೇಕೆಂಬ ಮತವನ್ನು ನಿರಾಕರಿಸಬೇಕು; ಏಕೆಂದರೆ ಆವ ರಿಬ್ಬರ ಸಾಮರ್ಥ್ಯದಲ್ಲಿ ಭೇದವಿದೆ [2]

1 ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ।

2 ಜೀವಪರಯೋರೇಕಶರೀರಸ್ಥತ್ವೇ ಸಮಾನಭೋಗಪ್ರಾಪ್ತಿರಿತಿ ಚೇನ್ನ, ಸಾಮರ್ಥ್ಯ-ವೈಶೇಷ್ಯಾತ್ (ಮ. ಭಾ.)

## ೨. ಅತ್ತ್ರಧಿಕರಣ

(ಸೂ. ೯–೧೦)

### ಅತ್ತಾ ಚರಾಚರಗ್ರಹಣಾತ್ ॥ ೯ ॥

೯. ಚರಾಚರಗಳನ್ನು ಗ್ರಹಿಸುವುದರಿಂದ ಅತ್ತೃವು (ಬ್ರಹ್ಮವೇ).

'ಯಾವನಿಗೆ ಬ್ರಾಹ್ಮಣ-ಕ್ಷತ್ರಿಯರಿಬ್ಬರೂ ಅನ್ನವಾಗಿರುವರೋ, ಯಾವನಿಗೆ ಮೃತ್ಯುವು ಉಪಸೇಚನವಾಗಿರುವುದೋ ಅವನು ಎಲ್ಲಿರುವನೆಂಬುದನ್ನು ಹೀಗೆ ಯಾವನು ಅರಿಯುವನು?'[1] (ಕ. ಉ. ೧. ೨. ೨೫) ಎಂಬುದು ವಿಷಯವಾಕ್ಯವು; ಇಲ್ಲಿ ಅತ್ತೃವು (ತಿನ್ನುವವನು ಅಥವಾ ಗ್ರಹಿಸುವವನು) ಅಗ್ನಿಯೋ, ಜೀವನೋ ಅಥವಾ ಪರಮಾತ್ಮನೋ ಎಂಬುದು ಸಂಶಯ. ಬೃಹದಾರಣ್ಯಕೋಪನಿಷತ್ತು (೧. ೪. ೬)[2] ಅಗ್ನಿಯು ಅನ್ನವನ್ನು ತಿನ್ನುವನು ಎಂದು ಹೇಳುತ್ತದೆ; ಅತ್ತೃವು ಜೀವನೂ ಆಗಬಹುದು; ಏಕೆಂದರೆ 'ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತದೆ'[3] ಎಂದು ಮುಂಡಕೋಪನಿಷತ್ತು (೩. ೧. ೧) ಹೇಳುತ್ತದೆ. ಇದು ಪರಮಾತ್ಮನಾಗಲಾರದು; ಏಕೆಂದರೆ ಅಲ್ಲೇ 'ಇನ್ನೊಂದು ತಿನ್ನದೆ ನೋಡುತ್ತಿದೆ'[4] ಎಂದು ಹೇಳಿದೆ. ಈ ಪೂರ್ವಪಕ್ಷಗಳಿಗೆ ವಿರುದ್ಧವಾಗಿ ಪರಮಾತ್ಮನೇ ಅತ್ತೃವೆಂಬುದು ಸಿದ್ಧಾಂತ. ಸ್ಥಾವರ-ಜಂಗಮಗಳನ್ನೂ ಮೃತ್ಯುವನ್ನೂ ಪರಿಪೂರ್ಣವಾಗಿ ತಿನ್ನಲು (ಎಂದರೆ ಕಾರ್ಯಸಮೂಹವನ್ನು ಉಪಸಂಹರಿಸಲು) ಪರಮಾತ್ಮನ ಹೊರತು ಬೇರೆ ಯಾರಿಗೂ ಸಾಧ್ಯವಿಲ್ಲ. ಸಮಸ್ತಜೀವರಾಶಿಯ ಉಪಲಕ್ಷಣವಾಗಿ ಬ್ರಾಹ್ಮಣ-ಕ್ಷತ್ರಿಯರನ್ನು ಹೇಳಿದೆ. 'ಇನ್ನೊಂದು ತಿನ್ನದೆ ನೋಡುತ್ತಿದೆ' ಎಂದು ಶ್ರುತಿಯು ಹೇಳಿರುವುದು ಪರಮಾತ್ಮನಿಗೆ ಕರ್ಮಫಲಭೋಗವನ್ನು ನಿರಾಕರಿಸುವುದಕ್ಕಾಗಿಯೇ ಹೊರತು ಕಾರ್ಯಸಂಹಾರದ ನಿಷೇಧಕ್ಕಲ್ಲ; ಏಕೆಂದರೆ ಬ್ರಹ್ಮವೇ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣವೆಂಬುದು ಎಲ್ಲ ವೇದಾಂತ ವಾಕ್ಯಗಳಲ್ಲಿಯೂ ಪ್ರಸಿದ್ಧವಾಗಿರುತ್ತದೆ.[5]

ವಿ.—ಪರಮಾತ್ಮನು ಭೋಕ್ತೃವಾಗದಿದ್ದರೆ ಎಲ್ಲೆಲ್ಲಿ ಭೋಕ್ತೃತ್ವವು ಕಂಡುಬರು

---

[1] ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥

[2] ಅಗ್ನಿರನ್ನಾದಃ ।

[3] ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ।

[4] ಅನಶ್ನನ್ನನ್ಯೋ ಅಭಿಚಾಕಶೀತಿ ।

[5] ಸರ್ವವೇದಾಂತೇಷು ಸೃಷ್ಟಿಸ್ಥಿತಿಸಂಹಾರಕಾರಣತ್ವೇನ ಬ್ರಹ್ಮಣಃ ಪ್ರಸಿದ್ಧತ್ವಾತ್ । (ಸೂ. ಭಾ.).

ವುದೊ ಅಲ್ಲಿಲ್ಲ ಜೀವನನ್ನೇ ಗ್ರಹಿಸಬೇಕೆಂಬ ಪೂರ್ವಪಕ್ಷಕ್ಕೆ ಈ ಅಧಿಕರಣವು ಉತ್ತರವನ್ನು ಕೊಡುತ್ತದೆ : ಸಮಸ್ತ ಚರಾಚರಗಳ ಅತ್ತೃತ್ವವು ಭಗವಂತನಿಗೇ ಸಂಭವಿಸುತ್ತದೆ ಇದು ಕರ್ಮನಿಮಿತ್ತದಿಂದ ಆಗುವ ಭೋಕ್ತೃತ್ವವಲ್ಲ, ಜಗತ್ತಿನ ಜನ್ಮ-ಸ್ಥಿತಿ-ಲಯಗಳಿಗೆ ಕಾರಣನಾದ ಪರಬ್ರಹ್ಮನೆನಿಸಿರುವ ವಿಷ್ಣುವಿನಿಂದಾಗುವ ಉಪಸಂಹಾರ[1] 'ಅವನು ಸಂಸಾರಗತಿಯ ಕೊನೆಯಾದ ಆ ವಿಷ್ಣುವಿನ ಪರಮಪದವನ್ನು ಹೊಂದುತ್ತಾನೆ'[2] (ಕ. ಉ. ೧. ೩. ೯) ಎಂದು ಶ್ರುತಿಯು ಅಲ್ಲೇ ಹೇಳಿರುತ್ತದೆ

ವ್ಯೆ.—'ಅವನು ಯಾವಯಾವುದನ್ನು ಸೃಷ್ಟಿಸಿದನೊ ಅದನ್ನೇ ತಿನ್ನಲು ಸಂಕಲ್ಪಿಸಿದನು ; ಅವನು ಎಲ್ಲವನ್ನೂ ತಿನ್ನುತ್ತಾನಾದುದರಿಂದ ಅವನಿಗೆ ಅದಿತಿ ಎಂಬ ಹೆಸರುಂಟಾಗಿದೆ'[3] (ಬೃ. ಉ. ೧. ೨. ೫) ಎಂಬಲ್ಲಿ ಅತ್ತೃ-ಶಬ್ದ-ವಾಚ್ಯನು ಪರಬ್ರಹ್ಮನೇ ಹೊರತು ಅದಿತಿಯಲ್ಲ ; ಏಕೆಂದರೆ ಸರ್ವಚರಾಚರಗಳನ್ನು 'ತಿನ್ನುವುದಕ್ಕೆ' ದೇವಮಾತೆಯಾದ ಅದಿತಿಗೆ ಸಾಧ್ಯವಿಲ್ಲ.[4]

## ಪ್ರಕರಣಾಚ್ಚ ॥ ೧೦ ॥

೧೦. ಮತ್ತು ಪ್ರಕರಣದಿಂದಲೂ (ಹೀಗೆಂದು ನಿರ್ಧರಿಸಬೇಕು).

'ಜ್ಞಾನಿಯು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ'[5] (ಕ. ಉ ೧. ೨. ೧೮) ಎಂಬ ವಾಕ್ಯವು ಪರಮಾತ್ಮನ ಪ್ರಕರಣವನ್ನು ಸೂಚಿಸುವುದರಿಂದ ಪರಮಾತ್ಮನೇ ಇಲ್ಲಿ ಅತ್ತೃವಾಗಿರಬೇಕೆಂದು ತಿಳಿದುಬರುತ್ತದೆ ಪ್ರಕೃತವಾದುದನ್ನು ಗ್ರಹಿಸುವುದು ಯುಕ್ತವು.

ವಿ.—ಪರಬ್ರಹ್ಮನೇ ಇಡೀ ಪ್ರಕರಣದ ವಿಷಯನಾಗಿರುತ್ತಾನೆ.[6] ಆ ಪರಮಾತ್ಮನು ಎಲ್ಲಿರುವನೆಂಬುದನ್ನು ಹೀಗೆಂದು ಯಾವನು ಅರಿಯುವನು ?' (ಕ. ಉ. ೧. ೨ ೨೫) ಎಂಬುದು ಅನುಗ್ರಹವಿಲ್ಲದಿದ್ದರೆ ಯಾವನನ್ನು ಅರಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಹಿಂದೆ ಹೇಳಿದೆಯೊ (ಕ. ಉ. ೧. ೨. ೨೩) ಅವನನ್ನೇ ಗುರುತಿಸಬೇಕೆಂದು ತಿಳಿಸುತ್ತದೆ.[7]

---

1 ನ ಚೇದಂ ಕರ್ಮನಿಮಿತ್ತಭೋಕ್ತೃತ್ವಮ್ ; ಅಪಿ ತು ಜಗಜ್ಜನ್ಮಸ್ಥಿತಿಲಯಹೇತುಭೂತಸ್ಯ ಪರಸ್ಯ ಬ್ರಹ್ಮಣೋ ವಿಷ್ಣೋಃ ಸಂಹರ್ತೃತ್ವಮ್ (ಶ್ರೀಭಾಷ್ಯ).

2 ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ।

3 ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ; ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್ । ( [illegible] )

4 ನ ಹಿ ಚರಾಚರಸ್ಯ ಸರ್ವಸ್ಯ ಅತ್ತೃತ್ವಮದಿತೇಃ (ಪು. ಭಾ.).

5 ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ।

6 ಕ. ಉ. ೧. ೨. ೨೨-೨೫ ನೋಡಿ.

7 ತತ್ಪ್ರಸಾದಾದೃತೇ ತಸ್ಯ ದುರವಬೋಧತ್ವಮೇವ ಪೂರ್ವಪ್ರಸ್ತುತಂ ಪ್ರತ್ಯಭಿಜ್ಞಾಯತೇ (ಶ್ರೀಭಾಷ್ಯ).

**ದ್ವೈ.**—ಸಂವತ್ಸರನೆಂಬ ಚತುರ್ಮುಖನ ಮತ್ತು ನೀರಿನ ಸೃಷ್ಟಿಯಲ್ಲಿ ಪ್ರವೃತ್ತನಾಗಿರುವ ವಿಷ್ಣುವೇ ಪ್ರಕರಣದ ವಿಷಯನಾಗಿರುವುದರಿಂದ ಅತ್ತೃ-ಶಬ್ದ-ವಾಚ್ಯನು ವಿಷ್ಣುವೇ.[1] 'ಇಲ್ಲಿ ಮೊದಲು ಯಾವುದೂ ಇರಲಿಲ್ಲ....ಅದೇ ವಾಕ್ಕಾಯಿತು'[2] (ಬೃ. ಉ. ೧. ೨. ೧-೪) ಎಂಬುದು ಪರಬ್ರಹ್ಮನ ಪ್ರಕರಣವಾಗಿದೆ.

---

[1] ಅಪ್‌ಸಂವತ್ಸರಸೃಷ್ಟ್ಯಾದಿನಾ ತತ್ಪ್ರಕರಣಾಚ್ಚ (ಮ. ಭಾ.).
[2] ನೈವೇಹ ಕಿಂಚನಾಗ್ರ ಆಸೀತ್....ಸೈವ ವಾಗಭವತ್ ।

## ೩. ಗುಹಾಧಿಕರಣ

(ಸೂ. ೧೧–೧೨)

**ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥ ೧೧ ॥**

೧೧. ಗುಹೆಯನ್ನು ಪ್ರವೇಶಿಸಿರುವವರು ಆತ್ಮರು: ಏಕೆಂದರೆ ಅದು ಕಂಡು ಬರುತ್ತದೆ.

'ಈ ಶರೀರದಲ್ಲಿ ಪರಮವಾದ ಹೃದಯಾಕಾಶದಲ್ಲಿರುವ ಬುದ್ಧಿಯಲ್ಲಿ ಸುಕೃತದ ಕರ್ಮಫಲವನ್ನು ಪಾನಮಾಡುತ್ತಿರುವ ಇಬ್ಬರು ಪ್ರವೇಶಿಸಿರುತ್ತಾರೆ ಇವರನ್ನು ನೆರಳು-ಬಿಸಿಲುಗಳೆಂದು ಬ್ರಹ್ಮಜ್ಞಾನಿಗಳೂ ಮೂರು ಸಲ ನಾಚಿಕೇತಾಗ್ನಿಯನ್ನು ಚಯನಮಾಡಿರುವ ಗೃಹಸ್ಥರೂ ಹೇಳುತ್ತಾರೆ'[1] (ಕ ಉ. ೧. ೩. ೧) ಎಂಬುದು ವಿಷಯವಾಕ್ಯ ಗುಹೆಯನ್ನು ಪ್ರವೇಶಿಸಿರುವ ಇವರಿಬ್ಬರು ಯಾರು ? ಬುದ್ಧಿ ಮತ್ತು ಜೀವಾತ್ಮ—ಇವರಿಬ್ಬರೊ ? ಅಥವಾ ಜೀವಾತ್ಮ ಮತ್ತು ಪರಮಾತ್ಮ—ಇವರಿಬ್ಬರೊ ? ಈ ಎರಡು ಪಕ್ಷಗಳಲ್ಲಿ ಯಾವುದಾದರೂ ಆಗಬಹುದು. ಗುಹೆಯನ್ನು ಪ್ರವೇಶಿಸಿರುವವರು ಬುದ್ಧಿ-ಜೀವರೆಂಬುದೇ ಪೂರ್ವಪಕ್ಷಿಯ ಅಭಿಪ್ರಾಯ: ಏಕೆಂದರೆ (೧) ಸರ್ವಗತವಾದ ಬ್ರಹ್ಮಕ್ಕೆ ಒಂದು ವಿಶಿಷ್ಟದೇಶವನ್ನು ಕಲ್ಪಿಸುವುದು ಯುಕ್ತವಲ್ಲ; (೨) ಕರ್ಮಫಲವನ್ನು ಅನುಭವಿಸುವುದು ಜೀವನಿಗೆ ಯುಕ್ತವಾಗಿದೆಯೇ ಹೊರತು ಪರಮಾತ್ಮನಿಗೆ ಹೊಂದುವುದಿಲ್ಲ; (೩) ಇವರನ್ನು 'ನೆರಳು-ಬಿಸಿಲುಗಳು' ಎಂದು ಕರೆದಿರುವುದು ಬುದ್ಧಿ-ಜೀವರಿಗೇ ಹೊಂದುತ್ತದೆ; ಏಕೆಂದರೆ ಜೀವಾತ್ಮನು ಚೇತನನು, ಬುದ್ಧಿಯು ಅಚೇತನವು.

ಇದಕ್ಕೆ ಪರಿಹಾರ ಹೀಗಿದೆ. (೧) ಆತ್ಮರಿಬ್ಬರೂ ಸಮಾನ-ಸ್ವಭಾವವವರೆಂದು ಹೇಳಿರುವುದರಿಂದ ಜೀವ-ಪರಮಾತ್ಮರೇ ಸೂಚಿಸಲ್ಪಟ್ಟಿದ್ದಾರೆ; (೨) ಸರ್ವಗತವಾದ ಬ್ರಹ್ಮಕ್ಕೆ ವಿಶಿಷ್ಟದೇಶವನ್ನು ಹೇಳಿರುವುದು ಅದರ ಉಪಲಬ್ಧಿಗಾಗಿ;[2] (೩) ಸುಕೃತವನ್ನು ಅನುಭವಿಸುವುದು ಜೀವಾತ್ಮನ ಲಕ್ಷಣವೇ ಹೊರತು ಪರಮಾತ್ಮನದಲ್ಲ; ಏಕೆಂದರೆ ಛತ್ರಿನ್ಯಾಯದಂತೆ[3] ಜೀವಾತ್ಮನ ಸುಕೃತದ ಅನುಭವವನ್ನು ಔಪಚಾರಿಕವಾಗಿ ಪರಮಾತ್ಮನಿಗೂ ಹೇಳಬಹುದು; (೪) ಜೀವ-ಪರಮಾತ್ಮರನ್ನು ನೆರಳು-ಬಿಸಿಲುಗಳೆಂದು ಹೇಳಿರುವುದು ಯುಕ್ತವು; ಏಕೆಂದರೆ ಇವರಿಬ್ಬರೂ ಅವಿದ್ಯಾಕೃತವಾದ ಸಂಸಾರಿತ್ವದಿಂದಲೂ

---

[1] ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ ॥

[2] ಕ ಉ. ೧ ೨. ೧೨; ತೈ ಉ ೨. ೧ ನೋಡಿ.

[3] ಒಂದು ಗುಂಪಿನಲ್ಲಿ ಒಬ್ಬನು ಛತ್ರಿಯನ್ನು ಹಿಡಿದುಕೊಂಡು ಹೋಗುತ್ತಿದ್ದರೆ 'ಛತ್ರಿ ಹಿಡಿದಿರುವವರು ಹೋಗುತ್ತಾರೆ' ಎಂದು ಇಡೀ ಗುಂಪಿಗೆ ಅನ್ವಯಿಸುವುದು ಛತ್ರಿನ್ಯಾಯ.

ಪಾರಮಾರ್ಥಿಕವಾದ ಅಸಂಸಾರಿತ್ವದಿಂದಲೂ ಬೇರೆ ಬೇರೆಯಾಗಿರುತ್ತಾರೆ. ಆದುದರಿಂದ ಗುಹೆಯನ್ನು ಪ್ರವೇಶಿಸಿರುವವರು ಜೀವ-ಪರಮಾತ್ಮರೆಂಬುದೇ ಸಿದ್ಧಾಂತ.

ವಿ.—ಹೃದಯಾಕಾಶವೆಂಬ ಗುಹೆಯನ್ನು ಪ್ರವೇಶಿಸಿ ಕರ್ಮಫಲವನ್ನು ಅನುಭವಿಸುತ್ತಿರುವವರು ಪ್ರಾಣದಿಂದ ಕೂಡಿದ ಜೀವನೂ ಇಲ್ಲ, ಬುದ್ಧಿಯಿಂದ ಕೂಡಿದ ಜೀವನೂ ಅಲ್ಲ. ಜೀವ-ಪರಮಾತ್ಮರೇ, ಏಕೆಂದರೆ ಈ ಪ್ರಕರಣದಲ್ಲಿಯೇ ಜೀವ-ಪರಮಾತ್ಮರು ಗುಹೆಯನ್ನು ಪ್ರವೇಶಿಸಿರುವರೆಂದು ಹೇಳಿದೆ[1] ಇಬ್ಬರು ಆತ್ಮರು ಕರ್ಮಫಲವನ್ನು ಅನುಭವಿಸುತ್ತಿರುವರೆಂದು ಹೇಳಿರುವುದು ಛತ್ರಿನ್ಯಾಯದಂತೆ ಎಂದು ಅರಿಯಬೇಕು. ಅಥವಾ ಕರ್ಮಫಲಭೋಕ್ತೃವಾದ ಜೀವನಿಗೆ ಕರ್ಮಫಲವನ್ನು ಅನುಭವಿಸುವಂತೆ ಪ್ರೇರಿಸುವುದರಿಂದ ಇವರಿಬ್ಬರಿಗೂ ಆ ಕ್ರಿಯೆಯಲ್ಲಿ ಕರ್ತೃತ್ವವನ್ನು ಕಲ್ಪಿಸಬಹುದು[2]

ದ್ವೈ.—'ಪುಣ್ಯದಿಂದ ನಿರ್ಮಿತವಾದ ಶರೀರದಲ್ಲಿ ಹೃದಯವನ್ನು ಪ್ರವೇಶಿಸಿರುವವನೂ ಸರ್ವಜೀವೋತ್ತಮನೂ ರುದ್ರಾದಿಗಳಿಂದ ಅಭಿವೃದ್ಧನಾಗಿರುವವನೂ ಆದ ವಾಯುವಿನಲ್ಲಿ ಸುಕೃತಫಲವನ್ನು ಭುಜಿಸತಕ್ಕ ಆತ್ಮ, ಅಂತರಾತ್ಮ ಎಂಬ ವಿಷ್ಣುವಿನ ಎರಡು ರೂಪಗಳು ಪ್ರವೇಶಿಸಿವೆ, ಈ ರೂಪಗಳು ಸಾಧು-ಅಸಾಧುಗಳಿಗೆ ಛಾಯಾ-ತಪಗಳಂತೆ ಸುಖ-ದುಃಖಗಳನ್ನು ಬ್ರಹ್ಮಜ್ಞಾನಿಗಳು ... ಹೇಳುತ್ತಾರೆ' (ಕ. ಉ. ೧. ೩. ೧) ಎಂಬುದು ವಿಷಯವಾಕ್ಯದ ತಾತ್ಪರ್ಯ ಹೃದಯದ ಗುಹೆಯನ್ನು ಪ್ರವೇಶಿಸಿ ಸುಕೃತ ಫಲವನ್ನು ಅನುಭವಿಸುತ್ತಿರುವವರು ವಿಷ್ಣುವಿನ ಎರಡು ರೂಪಗಳೇ,[3] ಜೀವೇಶ್ವರರಲ್ಲ. ಇದು ಋಕ್ಕಿನಲ್ಲಿಯೂ[4] (೧೦. ೧೧೪. ೧), ಉಪನಿಷತ್ತಿನಲ್ಲಿಯೂ[5] (ತೈ. ಉ. ೨. ೧) ಪ್ರಸಿದ್ಧವಾಗಿವೆ.

## ವಿಶೇಷಣಾಚ್ಚ ॥ ೧೨ ॥

೧೨. ವಿಶೇಷಣಗಳಿಂದಲೂ (ಜೀವ-ಪರಮಾತ್ಮರೆಂದೇ ತಿಳಿದುಕೊಳ್ಳಬೇಕು).

ಮುಂದಿನ ಶ್ರುತಿವಾಕ್ಯವು[6] (ಕ. ಉ. ೧. ೩. ೩) ಶರೀರವನ್ನು ರಥವೆಂದೂ ಆತ್ಮನನ್ನು ಸಂಸಾರದಿಂದ ಮೋಕ್ಷಕ್ಕೆ ಹೋಗುತ್ತಿರುವ ರಥಿಯೆಂದೂ ಹೇಳುತ್ತದೆ. ಮತ್ತೊಂದು

---

[1] ಪರಮಾತ್ಮನ ಪ್ರವೇಶವನ್ನು ಕ. ಉ. ೧. ೨. ೧೨ ರಲ್ಲಿಯೂ ಜೀವನ ಪ್ರವೇಶವನ್ನು ಕ. ಉ. ೧. ೪. ೭ ರಲ್ಲಿಯೂ ಹೇಳಿದೆ.

[2] ಯದ್ವಾ ಪ್ರಯೋಜ್ಯಪ್ರಯೋಜಕರೂಪೇಣ ಪಾನೇ ಕರ್ತೃತ್ವಂ ಜೀವಪರಯೋರುಪಪದ್ಯತೇ (ಶ್ರೀಭಾಷ್ಯ).

[3] ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ (ಮ. ಭಾ.).

[4] ಘರ್ಮಾ ಸಮಂತಾತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ ।

[5] ಯೋ ವೇದ ನಿಹಿತಂ ಗುಹಾಯಾಮ್ ।

[6] ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।

ವಾಕ್ಯವು[1] (ಕ. ಉ ೧. ೩ ೯) ಪರಮಾತ್ಮನನ್ನು ದಾರಿಯ ಗುರಿಯೆಂದು ತಿಳಿಸುತ್ತದೆ. ಮತ್ತೆ ಪಿಪ್ಪಲವನ್ನು ತಿನ್ನುತ್ತಿರುವ ಮತ್ತು ತಿನ್ನದೆ ನೋಡುತ್ತಿರುವ ಎರಡು ಪಕ್ಷಿಗಳನ್ನು ನಿರೂಪಿಸುವ ವಾಕ್ಯವೂ (ಮುಂ. ಉ. ೩. ೧. ೧) ಜೀವ-ಪರಮಾತ್ಮರನ್ನೇ ಸೂಚಿಸುತ್ತದೆ. ಮುಂದಿನ ವಾಕ್ಯವು ಕೂಡ (ಮು. ಉ ೩. ೧. ೨) ನೋಡುವವನು-ನೋಡಲ್ಪಡತಕ್ಕದ್ದು (ದ್ರಷ್ಟೃ-ದ್ರಷ್ಟವ್ಯ) ಎಂಬ ಭಾವದಿಂದ ಜೀವ-ಪರಮಾತ್ಮರನ್ನೇ ವಿಶೇಷಿಸಿರುತ್ತದೆ

ಪೈಂಗಿರಹಸ್ಯ-ಬ್ರಾಹ್ಮಣದ ಪ್ರಕಾರ ಕರ್ಮಫಲವನ್ನು ಅನುಭವಿಸುತ್ತಿರುವವರು ಜೀವ-ಪರಮಾತ್ಮರಲ್ಲ. ಅಂತಃಕರಣ-ಜೀವರು: 'ಯಾವುದರಿಂದ ಸ್ವಪ್ನವನ್ನು ನೋಡುತ್ತಾನೆಯೊ ಅದೇ ಸತ್ತ್ವವು (ಎಂದರೆ ಅಂತಃಕರಣವು), ನೋಡುತ್ತಿರುವ ಶಾರೀರನು ಕ್ಷೇತ್ರಜ್ಞನು ಇವೆರಡೂ ಸತ್ತ್ವ-ಕ್ಷೇತ್ರಜ್ಞರು.'[2] ಕರ್ತೃತ್ವ-ಭೋಕ್ತೃತ್ವವೇ ಮೊದಲಾದ ಸಂಸಾರಧರ್ಮಗಳಿಂದ ಕೂಡಿರುವ ಜೀವನನ್ನು ಹೇಳುವುದು ಪೈಂಗಿಶ್ರುತಿಯ ಉದ್ದೇಶವಲ್ಲ, ನಿರ್ಸಂಸಾರವನ್ನೂ ಹೇಳುವುದು ಅದರ ಉದ್ದೇಶ. ಚೇತನನಾದ ಜೀವನಿಗೆ ಅಭೋಕ್ತೃತ್ವವನ್ನೂ ಬ್ರಹ್ಮಸ್ವಭಾವತ್ವವನ್ನೂ ಹೇಳುವುದಕ್ಕಾಗಿ ಸುಖಾದಿ-ವಿಕಾರಗಳುಳ್ಳ ಅಂತಃಕರಣದಲ್ಲಿ ಭೋಕ್ತೃತ್ವವನ್ನು ಆರೋಪಿಸಿದೆ.

ವಿ.—ಇಲ್ಲಿ ಒಂದು ಹೊಸ ಪೂರ್ವಪಕ್ಷವು ಒದಗುತ್ತದೆ: 'ಮನುಷ್ಯನು ಸತ್ತಮೇಲೆ ಈ ಸಂಶಯವುಂಟು: "ಅವನು ಇದ್ದಾನೆ" ಎಂದು ಕೆಲವರು ಹೇಳುತ್ತಾರೆ, "ಅವನು ಇಲ್ಲ" ಎಂದು ಕೆಲವರು ಹೇಳುತ್ತಾರೆ'[3] (ಕ. ಉ. ೧. ೧. ೨೧) ಎಂಬಲ್ಲಿ ಜೀವನ ನಿಜಸ್ವರೂಪದ ವಿಷಯವಾಗಿ ಪ್ರಶ್ನಿಸಿರುವುದರಿಂದ ಈ ಇಡೀ ಪ್ರಕರಣವೇ ಜೀವ-ಪರವಾಗಿರಬೇಕು. ಇದು ಜೀವಪ್ರಕರಣವಲ್ಲ ಎಂಬುದು ಸಿದ್ಧಾಂತ; ಏಕೆಂದರೆ ಈ ವಾಕ್ಯದ ಅಭಿಪ್ರಾಯ ಶರೀರವಿಯೋಗವಲ್ಲ, ಜೀವನ ಸರ್ವಬಂಧವಿಮೋಕ್ಷ. ಮೋಕ್ಷಕ್ಕೆ ಅಧಿಕಾರಿಯಾದ ಮುಮುಕ್ಷುವು ಮೃತನಾದ ಮೇಲೆ, 'ಅವನು ಇರುವನೊ ಅಥವಾ ಇಲ್ಲವೊ?' ಎಂಬ ಸಂಶಯವು ಉಂಟಾಗುತ್ತದೆ; ತತ್ತ್ವವಾದಿಗಳಲ್ಲಿ ಮೋಕ್ಷವನ್ನು ಕುರಿತು ಒಮ್ಮತವಿಲ್ಲದಿರುವುದೇ ಇಂಥ ಸಂದೇಹಗಳಿಗೆ ಕಾರಣವಾಗಿರುವುದು· (೧) ಕೆಲವರು ಆತ್ಮನು ಜ್ಞಾನಸ್ವರೂಪನೆಂದೂ ಸ್ವರೂಪನಾಶವೇ ಮೋಕ್ಷವೆಂದೂ, (೨) ಇನ್ನು ಕೆಲವರು ಅದೇ ಸ್ವರೂಪದ ಆತ್ಮನಿಗೆ ಅವಿದ್ಯಾನಾಶವೇ ಮೋಕ್ಷವೆಂದೂ ಹೇಳುತ್ತಾರೆ; (೩) ಮತ್ತೆ ಕೆಲವರಿಗೆ ಆತ್ಮನು ಕಲ್ಲಿನಂತೆ ಜಡನು; ಅವನು ಸಂಸಾರದಲ್ಲಿರುವಾಗ ಜ್ಞಾನಾದಿ-ವಿಶೇಷಗಳನ್ನು ಹೊಂದಿರುತ್ತಾನೆ; ಈ ಗುಣಗಳ ನಾಶವೇ ಕೈವಲ್ಯ; (೪) ಇನ್ನು ಕೆಲವರಿಗೆ ದೋಷರಹಿತನಾದ ಆತ್ಮನು ಉಪಾಧಿಸಂಸರ್ಗದಿಂದ ಜೀವಭಾವವನ್ನು

1 ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ।

2 ತದೇತತ್ ಸತ್ತ್ವಂ ಯೇನ ಸ್ವಪ್ನಂ ಪಶ್ಯತಿ, ಅಥ ಯೋಽಯಂ ಶಾರೀರ ಉಪದ್ರಷ್ಟಾ ಸ ಕ್ಷೇತ್ರಜ್ಞಸ್ತಾವೇತೌ ಸತ್ತ್ವಕ್ಷೇತ್ರಜ್ಞೌ (ಸೂ. ಭಾ.).

3 ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।

ಪಡೆದಿರುತ್ತಾನೆ ; ಉಪಾಧಿಯು ನಾಶವಾದ ಮೇಲೆ ಇರುವ ಆತ್ಮಭಾವವೇ ಮೋಕ್ಷವು[1] ಸಿದ್ಧಾಂತದ ಪ್ರಕಾರ ಜೀವನ ಸ್ವರೂಪವು ಅನಾದಿಕರ್ಮರೂಪವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟಿದೆ ; ಈ ಅವಿದ್ಯೆಯು ನಾಶವಾದಮೇಲೆ ಅವನಿಗೆ ಸ್ವಾಭಾವಿಕವಾದ ಪರಮಾತ್ಮಾನುಭವವೆಂಬ ಮೋಕ್ಷವು ಸಿದ್ಧಿಸುತ್ತದೆ[2] ಆದುದರಿಂದ ಪರಮಾತ್ಮನೇ ಅತ್ತೃವು. ಇಲ್ಲಿಗೆ ಅತ್ತ್ರಧಿಕರಣವು ಮುಗಿಯುತ್ತದೆ

ಟಿಪ್ಪ.—'ಯಾವನು ಯಜ್ಞಾದಿಗಳನ್ನು ಮಾಡುವವರಿಗೆ ಅವಧಿಯೊ, ಯಾವನು ನಾಶರಹಿತನಾದ ಪರಬ್ರಹ್ಮನೊ'[3] (ಕ ಉ. ೧. ೩. ೨) ಎಂಬ ವಾಕ್ಯವು ಸೇತುತ್ವ-ಬ್ರಹ್ಮತ್ವವೇ ಮೊದಲಾದ ವಿಶೇಷಣಗಳಿಂದ ಸುಕೃತವನ್ನು ಅನುಭವಿಸುವವರು ವಿಷ್ಣುವಿನ ರೂಪಗಳೇ ಹೊರತು ಜೀವೇಶ್ವರರಲ್ಲ ಎಂಬುದನ್ನು ಸೂಚಿಸುತ್ತದೆ

---

[1] ಕೇಚಿದ್ ವಿತ್ತಿಮಾತ್ರಸ್ಯಾತ್ಮನಃ ಸ್ವರೂಪೋಚ್ಛಿತ್ತಿಲಕ್ಷಣಂ ಮೋಕ್ಷಮಾಚಕ್ಷತೇ । ಅನ್ಯೇ ವಿತ್ತಿಮಾತ್ರಸ್ಯೈವ ಸತೋಽವಿದ್ಯಾಸ್ತಮಯಮ್ । ಅಪರೇ ಪಾಷಾಣಕಲ್ಪಸ್ಯಾತ್ಮನೋ ಜ್ಞಾನಾದ್ಯಶೇಷವೈಶೇಷಿಕಗುಣೋಚ್ಛೇದಲಕ್ಷಣಂ ಕೈವಲ್ಯರೂಪಮ್ । ಅಪರೇ ತು ಅಪಹತಪಾಪ್ಮಾನಂ ಪರಮಾತ್ಮಾನಮಭ್ಯುಪಗಚ್ಛಂತಃ ತಸ್ಯೈವ ಉಪಾಧಿಸಂಸರ್ಗ-ನಿಮಿತ್ತಜೀವಭಾವಸ್ಯ ಉಪಾಧ್ಯಪಗಮೇನ ತದ್ಭಾವಲಕ್ಷಣಂ ಮೋಕ್ಷಮಾತಿಷ್ಠಂತೇ । (ಶ್ರೀಭಾಷ್ಯ).

[2] ಜೀವಸ್ಯ ಅನಾದಿಕರ್ಮರೂಪಾವಿದ್ಯಾತಿರೋಹಿತಸ್ವರೂಪಸ್ಯಾವಿದ್ಯೋಚ್ಛೇದಪೂರ್ವಕಸ್ವಾಭಾವಿಕಪರಮಾತ್ಮಾನುಭವಮೇವ ಮೋಕ್ಷಮಾಚಕ್ಷತೇ (ಶ್ರೀಭಾಷ್ಯ).

[3] ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ ಪರಮ್ ।

# ೪. ಅಂತರಾಧಿಕರಣ

(ಸೂ. ೧೩–೧೭)

**ಅಂತರ ಉಪಪತ್ತೇಃ || ೧೩ ||**

೧೩ (ಕಣ್ಣಿನ) ಒಳಗಿರುವ (ಪುರುಷನು ಬ್ರಹ್ಮವೇ); ಏಕೆಂದರೆ (ಇಲ್ಲಿ ಹೇಳಿರುವ ಗುಣಸಮೂಹವು ಅದರಲ್ಲಿಯೇ) ಹೊಂದುತ್ತದೆ

'"ಕಣ್ಣಿನಲ್ಲಿ ಯಾವ ಪುರುಷನು ಕಾಣಿಸಿಕೊಳ್ಳುತ್ತಾನೆಯೋ ಅವನೇ ಆತ್ಮನು. ಇದೇ ಅಮೃತ, ಅಭಯ ; ಇದು ಬ್ರಹ್ಮ. ಆದುದರಿಂದ (ಪುರುಷ-ಸ್ಥಾನವಾದ) ಕಣ್ಣಿನಲ್ಲಿ ತುಪ್ಪವನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೂ ಅದು ಕಣ್ಣಿನ ಅಂಚುಗಳಲ್ಲಿ ಹರಿದು ಹೋಗುತ್ತದೆ" ಎಂದು ಆಚಾರ್ಯನು ಹೇಳಿದನು'[1] (ಛಾಂ. ಉ. ೪ ೧೫. ೧) ಎಂಬುದು ವಿಷಯವಾಕ್ಯ. ಇಲ್ಲಿ ಕಣ್ಣಿನಲ್ಲಿ ಕಾಣುವ ಪ್ರತಿಬಿಂಬವನ್ನು ಹೇಳಿದೆಯೆ ಅಥವಾ ಜೀವನನ್ನಾಗಲಿ ಇಂದ್ರಿಯಕ್ಕೆ ಅಧಿಷ್ಠಾತೃವಾದ ದೇವತಾತ್ಮನನ್ನಾಗಲಿ ಹೇಳಿದೆಯೆ ಅಥವಾ ಈಶ್ವರನನ್ನು ಹೇಳಿದೆಯೆ—ಎಂಬುದು ಪ್ರಶ್ನೆ ಈಶ್ವರನನ್ನು ಬಿಟ್ಟರೆ ಉಳಿದ ಮೂವರಲ್ಲಿ ಯಾರಾದರೂ ಆಗಬಹುದೆಂಬುದು ಪೂರ್ವಪಕ್ಷ.

ಕಣ್ಣಿನಲ್ಲಿರುವ ಪುರುಷನು ಪರಮೇಶ್ವರನೇ—ಎಂದು ಸಿದ್ಧಾಂತ ; ಏಕೆಂದರೆ ಬ್ರಹ್ಮದ ಲಿಂಗಗಳಾದ ಅಮೃತತ್ವ, ಅಭಯತ್ವ ಇವೇ ಮೊದಲಾದುವು ಪರಮೇಶ್ವರನಿಗೇ ಹೊಂದುತ್ತವೆ ; ಮತ್ತು ಆತ್ಮತ್ವವು ಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿಯೇ ಉಪಪನ್ನವಾಗುತ್ತದೆ ; ಕಣ್ಣಿನಲ್ಲಿ ಸ್ಥಾನವನ್ನು ಹೇಳಿರುವುದೂ ಪರಮೇಶ್ವರನಿಗೆ ಅನುರೂಪವಾಗಿದೆ ; ಹೇಗೆಂದರೆ ಪರಮೇಶ್ವರನು 'ಅಪಹತಪಾಪ್ಮನು' ಎಂಬ ಶ್ರುತಿಯ ಪ್ರಕಾರ ಅವನು ಹೇಗೆ ಸರ್ವದೋಷರಹಿತನೊ ಹಾಗೆಯೇ ಕಣ್ಣೆಂಬ ಸ್ಥಾನವೂ ಸರ್ವಲೇಪ-ರಹಿತವಾಗಿದೆಯೆಂದು ಇಲ್ಲಿ ಉಪದೇಶಿಸಿದೆ. ಮತ್ತು ಸಂಯದ್ವಾಮತ್ವವೇ ಮೊದಲಾದ ಗುಣಗಳನ್ನು ಹೇಳಿರುವುದೂ (ಛಾಂ. ಉ. ೫. ೧೫. ೨–೪)[2] ಅವನಲ್ಲಿಯೇ ಹೊಂದುತ್ತದೆ.

ವಿ.—ಕಣ್ಣಿನಲ್ಲಿ ತೋರುತ್ತಿರುವವನು ಪರಮಾತ್ಮನೇ.

---

[1] ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ।

[2] 'ಇವನನ್ನು ಸಂಯದ್ವಾಮನೆಂದು ಕರೆಯುತ್ತಾರೆ' ಏತಂ ಸಂಯದ್ವಾಮ ಇತ್ಯಾಚಕ್ಷತೇ, 'ಇವನೇ ವಾಮನಿಯು' ಏಷ ಉ ಏವ ವಾಮನೀಃ; 'ಇವನೇ ಭಾಮನಿಯು' ಏಷ ಉ ಏವ ಭಾಮನೀಃ ।

ದ್ವೈ.—ಕಣ್ಣಿನಲ್ಲಿದ್ದು **ಕ್ರೀಡಿಸುತ್ತ** ಅಂತರನೆಂದು ಉದಾಹೃತನಾದವನು ವಿಷ್ಣುವೇ,[1] ಅಗ್ನಿಯಲ್ಲ. **ಏತದ್ ಅಮೃತಮ್ ಅಭಯಮ್ ಏತದ್ ಬ್ರಹ್ಮ** (ಛಾಂ. ಉ. ೪. ೧೫. ೧) ಎಂಬ ಲಿಂಗಗಳು ವಿಷ್ಣುವಿನಲ್ಲಿಯೇ ಉಪಪನ್ನವಾಗುತ್ತವೆ.

**ಸ್ಥಾನಾದಿವ್ಯಪದೇಶಾಚ್ಚ ॥ ೧೪ ॥**

೧೪. ಸ್ಥಾನವೇ ಮೊದಲಾದುವುಗಳನ್ನು ಹೇಳಿರುವುದರಿಂದ (ಹೀಗೆಂದು ಅರಿಯಬೇಕು.)

ಆಕಾಶದಂತೆ ಸರ್ವಗತವಾಗಿರುವ ಬ್ರಹ್ಮಕ್ಕೆ ಕಣ್ಣೆಂಬ ಅಲ್ಪಸ್ಥಾನವನ್ನು ಹೇಳಿರುವುದರಲ್ಲಿ ಅನೌಚಿತ್ಯವಿಲ್ಲ; ಏಕೆಂದರೆ ಕಣ್ಣೆಂಬ ಒಂದೇ ಸ್ಥಾನವನ್ನು ಹೇಳಿದ್ದರೆ ಮಾತ್ರ ಹೊಂದುತ್ತಿರಲಿಲ್ಲ. ಬ್ರಹ್ಮಕ್ಕೆ ಪೃಥ್ವಿಯೇ ಮೊದಲಾದ ಸ್ಥಾನವನ್ನೂ ಹೇಳಿದೆ.[2] ಸ್ಥಾನಮಾತ್ರವಲ್ಲದೆ ನಾಮರೂಪಗಳನ್ನೂ[3] ಹೇಳಿದೆ. ಬ್ರಹ್ಮವು ನಿರ್ಗುಣವಾಗಿದ್ದರೂ ಸಗುಣವಾಗಿದೆಯೆಂದು ಉಪಾಸನೆಗೋಸ್ಕರ ಅಲ್ಲಲ್ಲಿ ಹೇಳಿದೆ. ಆದುದರಿಂದ ಉಪಾಸನೆಗೆ ಒಂದು ಸ್ಥಾನವನ್ನು ಹೇಳಿರುವುದು ವಿರುದ್ಧವಲ್ಲ.

ವಿ.—ವಿಷಯವಾಕ್ಯದಲ್ಲಿ **ದೃಶ್ಯತೇ** (ಛಾಂ. ಉ. ೪. ೧೫. ೧) ಎಂಬುದರ ಮೂಲಕ ಸಾಕ್ಷಾತ್ಕಾರವನ್ನು ಹೇಳಿರುವುದೂ ಹೊಂದುತ್ತದೆ; ಏಕೆಂದರೆ ಯೋಗಿಗಳು ಪರಮಾತ್ಮನನ್ನು ಉಪಾಸನಾಕಾಲದಲ್ಲಿ ಸಾಕ್ಷಾತ್ಕರಿಸುತ್ತಾರೆ.[4] ಸೂತ್ರದ ಸ್ಥಾನ-ಶಬ್ದಕ್ಕೆ ಸ್ಥಿತಿ ಎಂಬುದು ಅರ್ಥ. ಪರಮಾತ್ಮನು ಕಣ್ಣಿನಲ್ಲಿದ್ದು ಅದನ್ನು ನಿಯಮಿಸುತ್ತಾನೆ ಎಂದಭಿಪ್ರಾಯ.[5]

ದ್ವೈ.—'ಕಣ್ಣಿನಲ್ಲಿ ತುಪ್ಪವನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೂ ಅದು ಕಣ್ಣಿನ ಅಂಚುಗಳಲ್ಲಿ ಹರಿದುಹೋಗುತ್ತದೆ' (ಛಾಂ. ಉ. ೪. ೧೫. ೧)—ಇವೇ ಮೊದಲಾದುವು ಪರಮಾತ್ಮನ ಸ್ಥಾನಶಕ್ತಿಯನ್ನೂ, 'ಇವನು ವಾಮನೀ' (ಛಾಂ. ಉ. ೪. ೧೫. ೩)—ಇವೇ ಮೊದಲಾದುವು ಅವನ ಆತ್ಮಶಕ್ತಿಯನ್ನೂ ತಿಳಿಸುತ್ತವೆ. ಇವು ವಿಷ್ಣುವಿನ ಲಿಂಗಗಳೇ.

---

1 ಅಂತಃ ಸ್ಥಿತ್ವಾ ರಮಣಕೃದಂತರಃ ಸ ಉದಾಹೃತಃ (ಅನುವ್ಯಾಖ್ಯಾನ).

2 'ಯಾವನು ಪೃಥ್ವಿಯಲ್ಲಿ ಇರುವವನಾಗಿ' ಯಃ ಪೃಥಿವ್ಯಾಂ ತಿಷ್ಠನ್ (ಬೃ. ಉ. ೩. ೭. ೩)

3 'ಅವನಿಗೆ ಉತ್ ಎಂದು ಹೆಸರು' ತಸ್ಯೋದಿತಿ ನಾಮ (ಛಾಂ. ಉ. ೧. ೬. ೭); 'ಜ್ಯೋತಿರ್ಮಯವಾದ ದಾಡಿಯುಳ್ಳವನು' ಹಿರಣ್ಯಶ್ಮಶ್ರುಃ (ಛಾಂ. ಉ. ೧. ೬. ೬).

4 ಸಾಕ್ಷಾತ್ಕಾರವ್ಯಪದೇಶೋಽಪಿ ಯೋಗಿಭಿರ್ದೃಶ್ಯಮಾನತ್ವಾದುಪಪದ್ಯತೇ । (ಶ್ರೀಭಾಷ್ಯ).

5 'ಯಾವನು ಕಣ್ಣಿನಲ್ಲಿ ಇರುವವನಾಗಿ' ಯಶ್ಚಕ್ಷುಷಿ ತಿಷ್ಠನ್ (ಬೃ. ಉ. ೩. ೭. ೧೮).

**ಸುಖವಿಶಿಷ್ಟಾಭಿಧಾನಾದೇವ ಚ ॥ ೧೫ ॥**

೧೫ ಮತ್ತು ಸುಖದಿಂದ ವಿಶಿಷ್ಟವಾದ (ಬ್ರಹ್ಮವನ್ನು) ಹೇಳಿರುವುದರಿಂದಲೇ

'ಪ್ರಾಣವು ಬ್ರಹ್ಮ, ಸುಖವು ಬ್ರಹ್ಮ, ಆಕಾಶವು ಬ್ರಹ್ಮ'[1] (ಛಾಂ ಉ ೪ ೧೦ ೫) ಎಂದು ಸುಖವಿಶಿಷ್ಟವಾದ ಬ್ರಹ್ಮವನ್ನು ವಾಕ್ಯದ ಉಪಕ್ರಮದಲ್ಲಿ ಹೇಳಿದೆ, ಅನಂತರ ಗಾರ್ಹಪತ್ಯವೇ ಮೊದಲಾದ ಅಗ್ನಿಗಳು ತಮ್ಮ ತಮ್ಮ ಮಹಿಮೆಯನ್ನು ಉಪದೇಶಿಸಿ, 'ಆದರೆ ಆಚಾರ್ಯನು ನಿನಗೆ ಗತಿಯನ್ನು ಉಪದೇಶಿಸುವನು'[2] (ಛಾಂ ಉ ೪ ೧೪ ೧) ಎಂದು ಉಪಸಂಹರಿಸುತ್ತವೆ, ಇದು ಹಿಂದಿನ ವಾಕ್ಯದಲ್ಲಿ ಹೇಳಿರುವ ಬ್ರಹ್ಮವನ್ನೇ ಸೂಚಿಸುತ್ತದೆ, 'ಆದರೆ ಆಚಾರ್ಯನು ನಿನಗೆ ಗತಿಯನ್ನು ಹೇಳುವನು' ಎಂಬುದು ಯಾವದೊಂದೂ ಹೊಸ ವಿಷಯವನ್ನು ಪ್ರಾರಂಭಿಸುವುದಿಲ್ಲ ಅನಂತರ ಅಕ್ಷಿಸ್ಥಾನದಲ್ಲಿರುವ ಪುರುಷನನ್ನು ಉಪಾಸಿಸುವವನಿಗೆ ಪಾಪವು ಅಂಟಿಕೊಳ್ಳುವುದಿಲ್ಲವೆಂದು ಹೇಳಿದೆ[3] ಅದುದರಿಂದ ಅಕ್ಷಿಸ್ಥಾನದಲ್ಲಿರುವ ಪುರುಷನು ಬ್ರಹ್ಮವೇ

**ವಿ.**—'ಪ್ರಾಣವು ಬ್ರಹ್ಮ, ಸುಖವು ಬ್ರಹ್ಮ, ಆಕಾಶವು ಬ್ರಹ್ಮ' (ಛಾಂ ಉ ೪ ೧೦ ೫) ಎಂಬಲ್ಲಿ ಯಾವನನ್ನು ಸುಖವಿಶಿಷ್ಟವಾಗಿ ಹೇಳಿದೆಯೊ ಅವನನ್ನೇ ಇಲ್ಲಿ ಅಕ್ಷ್ಯಾಧಾರನೆಂದು ಹೇಳಿದೆ ಆದುದರಿಂದ ಅಕ್ಷಿಸ್ಥಾನದಲ್ಲಿರುವ ಪುರುಷನು ಪರಬ್ರಹ್ಮನೇ

**ಕಮ್ ಬ್ರಹ್ಮ ಖಮ್ ಬ್ರಹ್ಮ** ಎಂದು ಹೇಳಿರುವುದು ಪ್ರಸಿದ್ಧವಾದ ಆಕಾಶವನ್ನೂ ಲೌಕಿಕಸುಖವನ್ನೂ ಸೂಚಿಸಬಹುದು—ಎಂಬ ಒಂದು ಹೊಸ ಪೂರ್ವಪಕ್ಷಕ್ಕೆ ಮುಂದಿನ ಸೂತ್ರವು[4] ಪರಿಹಾರವಾಗಿದೆ

ಅತ ಏವ ಚ ಸ ಬ್ರಹ್ಮ ॥ ೧ ೨ ೧೬ ॥

೧೬ ಆದುದರಿಂದ ಅವನು (ಎಂದರೆ ಖ-ಶಬ್ದವಾಚ್ಯನು) ಪರಬ್ರಹ್ಮನೇ

'ಪ್ರಾಣವು ಬ್ರಹ್ಮ, ಸುಖವು ಬ್ರಹ್ಮ, ಆಕಾಶವು ಬ್ರಹ್ಮ' (ಛಾಂ ಉ ೪ ೧೦ ೫) ಎಂದು ಅಗ್ನಿಗಳು ಉಪಕೋಸಲನಿಗೆ ಉಪದೇಶಮಾಡಿದಾಗ ಅವನು, 'ಪ್ರಾಣವು ಬ್ರಹ್ಮ-ಎಂಬುದನ್ನು ಅರಿತಿರುವೆನು, ಆದರೆ **ಕಮ್** ಎಂಬುದನ್ನೂ **ಖಮ್** ಎಂಬುದನ್ನೂ

---

[1] ಪ್ರಾಣೋ ಬ್ರಹ್ಮ, ಕಂ ಬ್ರಹ್ಮ, ಖಂ ಬ್ರಹ್ಮೇತಿ।

[2] ಆಚಾರ್ಯಸ್ತು ತೇ ಗತಿಂ ವಕ್ತಾ।

[3] ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತ (ಛಾಂ ಉ ೪ ೧೪ ೩)

[4] ಈ ಸೂತ್ರವು ಶಂಕರ ಭಾಸ್ಕರ ಮಧ್ವ—ಇವರ ಭಾಷ್ಯಗಳಲ್ಲಿ ಕಂಡುಬರುವುದಿಲ್ಲ, ನಿಂಬಾರ್ಕ ಶ್ರೀಕಂಠ—ಇವರ ಭಾಷ್ಯಗಳಲ್ಲಿ ಕಂಡುಬರುತ್ತದೆ

ಅರಿಯೆನು'[1] (ಛಾಂ ಉ ೪ ೧೦ ೫) ಎಂದು ಹೇಳುತ್ತಾನೆ ಆಗ ಅಗ್ನಿಗಳು ಉಪಕೋಸಲನ ಅಭಿಪ್ರಾಯವನ್ನು ಅರಿತುಕೊಂಡು, 'ಯಾವುದು **ಕಮ್** ಎಂಬುದೋ ಅದೇ **ಖಮ್**, ಯಾವುದು **ಖಮ್** ಎಂಬುದೋ ಅದೇ **ಕಮ್**'[2] (ಛಾಂ ಉ ೪ ೧೦ ೫) ಎಂದು ಉಪದೇಶಿಸುತ್ತವೆ, ಪರಬ್ರಹ್ಮನ ಸ್ವರೂಪವಾದ ಆನಂದವು ಅಪರಿಚ್ಛಿನ್ನವಾಗಿದೆ ಎಂದರ್ಥ[3] ಆದುದರಿಂದ ಯಾವ ಬ್ರಹ್ಮನು ಪ್ರಾಣವೇ ಶರೀರವಾಗಿರುವುದರಿಂದ ಪ್ರಾಣ-ವಿಶಿಷ್ಟನೆನಿಸಿರುವನೊ ಅವನೇ ಅಪರಿಚ್ಛಿನ್ನಸುಖನೂ ಸ್ವರೂಪನೂ ಆಗಿರುವನು

ದ್ವೈ.—'ಪ್ರಾಣವು ಬ್ರಹ್ಮ, ಸುಖವು ಬ್ರಹ್ಮ, ಆಕಾಶವು ಬ್ರಹ್ಮ' (ಛಾಂ ಉ ೪ ೧೦ ೫), 'ವಿಜ್ಞಾನವೂ ಆನಂದವೂ ಬ್ರಹ್ಮವೇ'[4] (ಬೃ ಉ ೩ ೯ ೨೮), 'ಆನಂದವನ್ನು ಪರಬ್ರಹ್ಮನನ್ನಾಗಿ ಸಾಕ್ಷಾತ್ಕರಿಸಿದನು'[5] (ತೈ ಉ ೩ ೬)—ಇವೇ ಮೊದಲಾದ ವಾಕ್ಯಗಳು ಆನಂದವು ಪರಬ್ರಹ್ಮನ ಲಕ್ಷಣವೆಂದು ತಿಳಿಸುತ್ತವೆ

## ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ॥ ೧೬ ॥

೧೬ ಮತ್ತು ಉಪನಿಷತ್ತುಗಳನ್ನು ಶ್ರವಣಮಾಡಿದವನ ಗತಿಯನ್ನು ಹೇಳಿರುವುದರಿಂದಲೂ (ಅಕ್ಷಿಸ್ಥಾನದಲ್ಲಿರುವ ಪುರುಷನು ಪರಮೇಶ್ವರನೇ)

ಉಪನಿಷತ್ತೆಂದರೆ ರಹಸ್ಯ-ವಿಜ್ಞಾನ, ಅದನ್ನು ಶ್ರವಣಮಾಡಿರುವವನು ಶ್ರುತೋಪನಿಷತ್ಕನು, ಎಂದರೆ ಬ್ರಹ್ಮಜ್ಞಾನಿಯು ಇವನ ಗತಿಯು ದೇವಯಾನವು ಇದು ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವುದು 'ಈಗ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ ಆತ್ಮನನ್ನು ಅನ್ವೇಷಿಸಿ ಉತ್ತರಮಾರ್ಗದಿಂದ ಆದಿತ್ಯಲೋಕವನ್ನು ಹೊಂದುತ್ತಾರೆ, ಇದೇ ಪ್ರಾಣಿಗಳಿಗೆ ಆಶ್ರಯವು ಇದು ಅಮೃತವು, ಅಭಯವು, ಇದು ಪರಮಗತಿ, ಇದರಿಂದ ಹಿಂತಿರುಗುವುದಿಲ್ಲ'[6] (ಪ್ರ ಉ ೧ ೧೦), 'ಅಗ್ನಿಜ್ಯೋತಿ ಹಗಲು ಶುಕ್ಲಪಕ್ಷ ಉತ್ತರಾಯಣದ ಆರು ಮಾಸಗಳು—ಈ ಮಾರ್ಗದಲ್ಲಿ

---

[1] ವಿಜಾನಾಮ್ಯಹಂ ಯತ್ ಪ್ರಾಣೋ ಬ್ರಹ್ಮ, ಕಂ ಚ ತು ಖಂ ಚ ನ ವಿಜಾನಾಮಿ ।

[2] ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಮ್ ।

[3] ತದೇವಾಪರಿಚ್ಛಿನ್ನಸುಖಸ್ವರೂಪಮ್ (ಶ್ರೀಭಾಷ್ಯ)

[4] ವಿಜ್ಞಾನಮಾನಂದಂ ಬ್ರಹ್ಮ ।

[5] ಆನಂದಂ ಬ್ರಹ್ಮೇತಿ ವ್ಯಜಾನಾತ್ ।

[6] ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾऽऽತ್ಮಾನಮನ್ವಿಷ್ಯಾ-ದಿತ್ಯಮಭಿಜಯಂತೇ । ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ ಪರಾ-ಯಣಮೇತಸ್ಮಾನ್ನ ಪುನರಾವರ್ತಂತೇ ।

ಪ್ರಯಾಣಮಾಡಿದ ಬ್ರಹ್ಮಜ್ಞಾನಿಗಳು ಬ್ರಹ್ಮವನ್ನು ಸೇರುತ್ತಾರೆ'[1] (ಗೀತಾ ೮. ೨೪). ಈ ಗತಿಯನ್ನೇ ಇಲ್ಲಿ ಅಕ್ಷಿಪುರುಷೋಪಾಸಕನಿಗೆ ಹೇಳಿದೆ: 'ಇನ್ನು ಇವರಿಗೆ ಶವದಹನ ಕರ್ಮವನ್ನು ಮಾಡಲಿ ಮಾಡದಿರಲಿ ಇವರು ಅರ್ಚಿರ್ದೇವತೆಯನ್ನೇ ಸೇರುತ್ತಾರೆ ...ಅಲ್ಲಿರುವ ಇವರನ್ನು ಅಮಾನವಪುರುಷನೊಬ್ಬನು ಬ್ರಹ್ಮದ ಬಳಿಗೆ ಸೇರಿಸುತ್ತಾನೆ. ಇದೇ ದೇವಪಥವು, ಬ್ರಹ್ಮಪಥವು'[2] (ಛಾಂ. ಉ. ೪ ೧೫. ೫). ಆದುದರಿಂದ ಈ ಅಕ್ಷಿಪುರುಷನು ಪರಮಾತ್ಮನೇ.

೮.—ಶ್ರುತಿಗಳಲ್ಲಿ ಹೇಳಿರುವ ಪರಮಪುರುಷನ ಯಾಥಾತ್ಮ್ಯವನ್ನು ಕೇಳಿ ಅರಿತುಕೊಂಡವನು ಶ್ರುತೋಪನಿಷತ್ಕನು. ಇವನು ಪಡೆಯುವ ಅಪುನರಾವೃತ್ತಿ-ಲಕ್ಷಣವುಳ್ಳ ಮತ್ತು ಪರಮಾತ್ಮನನ್ನು ಹೊಂದಿಸುವ ಅರ್ಚಿರಾದಿಗತಿಯನ್ನು ಇತರ ಶ್ರುತಿಗಳೂ ತಿಳಿಸುತ್ತವೆ. ಈ ಗತಿಯನ್ನೇ ಆಚಾರ್ಯನು ಅಕ್ಷಿಪುರುಷವಿದ್ಯೆಯನ್ನು ಕೇಳುತ್ತಿದ್ದ ಉಪಕೋಸಲನಿಗೆ ಉಪದೇಶಿಸಿರುತ್ತಾನೆ ಆದುದರಿಂದ ಈ ಅಕ್ಷಿಪುರುಷನು ಪರಮಾತ್ಮನೇ

ದ್ವೈ.—ಉಪನಿಷತ್ತುಗಳ ಶ್ರವಣಾದಿಗಳನ್ನು ಮಾಡಿದ ಪುರುಷನಿಗೆ 'ಅವನು ಬ್ರಹ್ಮದ ಬಳಿಗೆ ಸೇರಿಸುತ್ತಾನೆ' (ಛಾಂ. ಉ. ೪. ೧೫. ೫) ಎಂಬ ಶ್ರುತಿಯ ಪ್ರಕಾರ ವಾಯುವು ಪರಬ್ರಹ್ಮನನ್ನು ಪಡೆಯುವಂತೆ ಮಾಡುತ್ತಾನೆ ಎಂದು ಹೇಳಿರುವುದರಿಂದಲೂ ಅಕ್ಷಿಯ ಒಳಗೆ ಇರುವವನು ಬ್ರಹ್ಮನೇ

**ಅನವಸ್ಥಿತೇರಸಂಭವಾಚ್ಚ ನೇತರಃ ॥ ೧೭ ॥**

೧೭. (ಬೇರೆಯ ಆತ್ಮರು ಕಣ್ಣಿನಲ್ಲಿ) ಇಲ್ಲದಿರುವುದರಿಂದಲೂ (ಕಣ್ಣಿನಲ್ಲಿ ಕಂಡುಬರುವ ಪುರುಷನ ಗುಣಗಳು ಇತರ ಆತ್ಮರಲ್ಲಿ) ಅಸಂಭವವಾದುದರಿಂದಲೂ (ಅಕ್ಷಿಪುರುಷನು ಪರಮಪುರುಷನೇ ಹೊರತು) ಬೇರೆಯವನಲ್ಲ.

ಕಣ್ಣಿನಲ್ಲಿರುವ ಪುರುಷನು ಪ್ರತಿಬಿಂಬಾತ್ಮನೊ, ಜೀವಾತ್ಮನೊ ಅಥವಾ ದೇವತಾತ್ಮನೊ ಆಗಿರಬಹುದೆಂಬ ಪೂರ್ವಪಕ್ಷಕ್ಕೆ ಪರಿಹಾರವು ಹೀಗಿದೆ: ಮೇಲೆ ಹೇಳಿದ ಈ ಯಾವ ಆತ್ಮರಿಗೂ ಕಣ್ಣಿನಲ್ಲಿ ಅವಸ್ಥಾನವಿಲ್ಲ; ಏಕೆಂದರೆ ಕಣ್ಣಿನ ಮುಂದೆ ಯಾವನಾದರೂ ನಿಂತಿದ್ದರೆ ಮಾತ್ರ ಅವನ ಪ್ರತಿಬಿಂಬವು ಕಾಣಿಸುತ್ತದೆ, ಅವನು ಹೊರಟುಹೋದರೆ ಅದೂ ಹೋಗುತ್ತದೆ; ಮತ್ತೆ ಅಮೃತತ್ವಾದಿಗುಣಗಳೂ ಹೊಂದುವುದಿಲ್ಲ. ಆದುದರಿಂದ ಅಕ್ಷಿಪುರುಷನು ಪ್ರತಿಬಿಂಬವಲ್ಲ. ಜೀವಾತ್ಮನಿಗೆ ಸಮಸ್ತ ಶರೀರೇಂದ್ರಿಯ.

---

[1] ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥

[2] ಅಥ ಯದು ಚೈವಾಸ್ಮಿಂಛವ್ಯಂ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿಸಂಭವಂತಿ ...ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥಃ ।

ಗಳೊಡನೆ ಸಂಬಂಧವು ಸಮಾನವಾಗಿರುವಾಗ ಅವನು ಕಣ್ಣಿನಲ್ಲಿಯೇ ಇರುವನೆಂದು ಹೇಳುವುದು ಸರಿಯಲ್ಲ ಇವನಿಗೂ ಅಮೃತತ್ವಾದಿ ಗುಣಗಳ ಸಂಬಂಧವಿಲ್ಲ ಆದಿತ್ಯನೂ ಅಕ್ಷಿಪುರುಷನಾಗಲಾರನು ; ಏಕೆಂದರೆ ಆತ್ಮತ್ವ-ಅಮೃತತ್ವಾದಿಗಳು ಹೊರಗಿನವನಾದ ಅವನಿಗೂ ಹೊಂದುವುದಿಲ್ಲ ಆದುದರಿಂದ ಅಕ್ಷಿಸ್ಥಾನದಲ್ಲಿರುವವನು ಪರಮೇಶ್ವರನೇ.

**ವಿ.**—ಅಕ್ಷ್ಯಾಧಾರನಾಗಿ ಹೇಳಲ್ಪಟ್ಟವನು ಪರಮಾತ್ಮನಿಗಿಂತ ಬೇರೆಯವನಾದ ಯಾವ ಆತ್ಮನೂ ಆಗಲಾರನು , ಏಕೆಂದರೆ ಜೀವಾತ್ಮನೇ ಮೊದಲಾದವರಿಗೆ ಕಣ್ಣಿನಲ್ಲಿ ನಿಯಮದಿಂದ ಇರುವಿಕೆ ಮತ್ತು ಅಮೃತತ್ವ-ಸಂಯದ್ವಾಮತ್ವವೇ ಮೊದಲಾದ ಗುಣಗಳು ಅಸಂಭವವಾಗಿವೆ.

**ದ್ವೈ.**—ಮತ್ತು (ಕಣ್ಣಿನಲ್ಲಿರುವವನು ಬ್ರಹ್ಮನೇ), ಅಗ್ನ್ಯಾದಿಗಳಲ್ಲ ; ಏಕೆಂದರೆ ಅನವಸ್ಥಾದೋಷವು ಅಥವಾ ಅಸಂಭವವು (ಬರುವುದು)—ಎಂಬುದು ಸೂತ್ರಾರ್ಥ ಒಬ್ಬ ಜೀವನು ಇನ್ನೊಬ್ಬ ಜೀವನಿಗೆ ನಿಯಾಮಕನಾದರೆ ಅನವಸ್ಥಾ ದೋಷವು ಬರುವುದು . (ಏಕೆಂದರೆ ಎರಡನೆಯ ಜೀವನಿಗೆ ಮೂರನೆಯವನೂ, ಮೂರನೆಯವನಿಗೆ ನಾಲ್ಕನೆಯವನೂ ನಿಯಾಮಕನಾಗಬೇಕಾಗುತ್ತದೆ). ಒಬ್ಬ ಜೀವನು ಇನ್ನೊಬ್ಬನಿಗೆ ಸಮನಾಗಿರುವುದರಿಂದೂ ನಿಯಮ್ಯ-ನಿಯಾಮಕ-ಭಾವವು ಸಾಧ್ಯವಿರುವುದಿಲ್ಲ.[1]

[1] ಜೀವಸ್ಯ ಜೀವಾಂತರನಿಯಾಮಕತ್ವೇSನವಸ್ಥಿತೇಃ ಸಾಮ್ಯಾದಸಂಭವಾಚ್ಚ ನ ಜೀವಃ (ಮ. ಭಾ.).

# ೫. ಅಂತರ್ಯಾಮ್ಯಧಿಕರಣ

(ಸೂ. ೧೮–೨೦)

**ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥ ೧೮ ॥**

೧೮. ಅಧಿದೈವತವೇ ಮೊದಲಾದುವುಗಳಲ್ಲಿರುವ ಅಂತರ್ಯಾಮಿಯು (ಬ್ರಹ್ಮವು); ಏಕೆಂದರೆ ಅದರ ಧರ್ಮಗಳನ್ನು ಹೇಳಿದೆ.

'ಯಾವನು ಒಳಗಿದ್ದುಕೊಂಡು ಈ ಲೋಕವನ್ನೂ ಪರಲೋಕವನ್ನೂ ಸರ್ವಪ್ರಾಣಿಗಳನ್ನೂ ನಿಯಮಿಸುತ್ತಾನೆಯೊ ...ಯಾವನು ಪೃಥ್ವಿಯಲ್ಲಿರುವವನಾಗಿ ಪೃಥ್ವಿಯ ಒಳಗಿರುವನೊ, ಯಾವನನ್ನು ಪೃಥ್ವಿಯು ತಿಳಿಯದೊ, ಯಾವನಿಗೆ ಪೃಥ್ವಿಯು ಶರೀರವೊ, ಯಾವನು ಒಳಗಿದ್ದುಕೊಂಡು ಪೃಥ್ವಿಯನ್ನು ನಿಯಮಿಸುವನೊ ಅವನೇ ಅಂತರ್ಯಾಮಿ, ನಿನ್ನ ಅಮೃತನಾದ ಆತ್ಮನು'[1] (ಬೃ. ಉ ೩. ೭. ೧–೩) ಎಂಬುದು ವಿಷಯವಾಕ್ಯ. ಅಧಿದೈವತ, ಅಧಿಲೋಕ, ಅಧಿವೇದ, ಅಧಿಯಜ್ಞ, ಅಧಿಭೂತ, ಅಧ್ಯಾತ್ಮ[2]—ಇವುಗಳೊಳಗೆ ಇದ್ದುಕೊಂಡು ಇವುಗಳನ್ನು ನಿಯಮಿಸುವವನು ಯಾವನು ? 'ಅಂತರ್ಯಾಮಿ' ಎಂಬುದು ಅಪೂರ್ವವಾದ ಹೆಸರು ; ಆದುದರಿಂದ ಇವನು ಅಧಿದೈವತಾದಿಗಳ ಅಭಿಮಾನಿಯಾದ ಯಾವನೊ ಒಬ್ಬ ದೇವತಾತ್ಮನೆ ಅಥವಾ ಅಣಿಮಾದಿ-ಐಶ್ವರ್ಯಗಳನ್ನು ಹೊಂದಿರುವ ಯಾವನೊ ಒಬ್ಬ ಯೋಗಿಯೆ ಅಥವಾ ಪರಮಾತ್ಮನೆ ಅಥವಾ ಯಾವುದೊ ಒಂದು ಬೇರೆಯ ವಸ್ತುವೆ—ಎಂಬುದು ಸಂಶಯ.

ಅಂತರ್ಯಾಮಿಯು ಪರಮಾತ್ಮನೇ ಎಂಬುದು ಸಿದ್ಧಾಂತ ; ಏಕೆಂದರೆ ಅವನ ಧರ್ಮಗಳನ್ನೇ ಇಲ್ಲಿ ಹೇಳಿರುವುದು ಕಂಡುಬರುತ್ತದೆ. ಪೃಥ್ವಿಯೇ ಮೊದಲಾದ ಅಧಿದೈವಾದಿ-ರೂಪದಿಂದ ಭಿನ್ನಭಿನ್ನವಾಗಿರುವ ಕಾರ್ಯಸಮೂಹದ ಒಳಗಿದ್ದುಕೊಂಡು

---

[1] ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽಂತರೋ ಯಮಯತಿ ..ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ, ಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಮ್, ಯಃ ಪೃಥಿವೀಮಂತರೋ ಯಮಯತಿ, ಏಷ ತ ಆತ್ಮಾಽಂತರ್ಯಾಮ್ಯಮೃತಃ ।

[2] ಯಃ ಪೃಥಿವ್ಯಾಂ ತಿಷ್ಠನ್ (ಬೃ. ಉ. ೩. ೭. ೩) ಎಂದು ಮೊದಲಾಗಿ ಯಃ ಸ್ತನಯಿತ್ನೌ (ಮೂ.ಪಾ.) ಎಂಬುವ ವರೆಗೆ ಅಧಿದೈವತವು ; ಯಃ ಸರ್ವೇಷು ಲೋಕೇಷು ತಿಷ್ಠನ್ (ಮೂ. ಪಾ.) ಎಂಬುದು ಅಧಿಲೋಕವು ; ಯಃ ಸರ್ವೇಷು ವೇದೇಷು (ಮೂ. ಪಾ.) ಎಂಬುದು ಅಧಿವೇದವು; ಯಃ ಸರ್ವೇಷು ಯಜ್ಞೇಷು (ಮೂ. ಪಾ.) ಎಂಬುದು ಅಧಿಯಜ್ಞವು; ಯಃ ಸರ್ವೇಷು ಭೂತೇಷು (ಬೃ. ಉ. ೩. ೭. ೬) ಎಂಬುದು ಅಧಿಭೂತವು ; ಯಃ ಪ್ರಾಣೇ ತಿಷ್ಠನ್ (ಬೃ. ಉ. ೩. ೭. ೧೬) ಎಂದು ಮೊದಲಾಗಿ ಯಃ ಆತ್ಮನಿ ತಿಷ್ಠನ್ (ಮೂ. ಪಾ.) ಎಂಬುವ ವರೆಗೆ ಅಧ್ಯಾತ್ಮವು (ಭಾಮತೀ).

ನೇಮಿಸುವನೆಂಬ ನಿಯಮಯಿತೃತ್ವ-ಧರ್ಮವು ಪರಮಾತ್ಮನಿಗೇ ಹೊಂದುತ್ತದೆ. ಪುನಃ ಆತ್ಮತ್ವವೂ ಅಮೃತತ್ವವೂ (ಬೃ. ಉ. ೩. ೭. ೩) ಅವನಿಗೇ ಹೊಂದುತ್ತವೆ. 'ಯಾವನನ್ನು ಪೃಥ್ವಿಯು ತಿಳಿಯದೊ' (ಬೃ. ಉ. ೩. ೭. ೩) ಎಂಬುದು ಜೀವಾತ್ಮನಿಗಿಂತಲೂ ಅಂತರ್ಯಾಮಿಯು ಬೇರೆ ಎಂಬುದನ್ನು ತಿಳಿಸುತ್ತದೆ. ಅವನು ನೋಡಲ್ಪಡುವುದಿಲ್ಲ, **ಅದೃಷ್ಟಃ**, ಕೇಳಲ್ಪಡುವುದಿಲ್ಲ, **ಅಶ್ರುತಃ** (ಬೃ. ಉ. ೩ ೭. ೨೩) ಎಂದು ಹೇಳಿರುವುದೂ ರೂಪಾದಿರಹಿತನಾದ ಪರಮಾತ್ಮನಿಗೇ ಹೊಂದುತ್ತದೆ. ಕಾರ್ಯ-ಕರಣಗಳಿಲ್ಲದಿರುವುದರಿಂದ ಪರಮಾತ್ಮನಿಗೆ ನಿಯಮಯಿತೃತ್ವವು ಹೊಂದುವುದಿಲ್ಲವೆಂಬ ಆಕ್ಷೇಪಣೆಯು ಸರಿಯಲ್ಲ ; ಏಕೆಂದರೆ ಯಾರನ್ನು ನಿಯಮಿಸುತ್ತಾನೆಯೊ ಅವರ ಕಾರ್ಯಕರಣಗಳಿಂದಲೇ ಪರಮಾತ್ಮನು ಕಾರ್ಯ-ಕರಣವುಳ್ಳವನಾಗಿರುವನು. ಜೀವಾತ್ಮನಲ್ಲದೆ ಬೇರೊಬ್ಬ ಅಂತರ್ಯಾಮಿಯನ್ನು ಒಪ್ಪಿಕೊಂಡರೆ ಅನವಸ್ಥಾ-ದೋಷವುಂಟಾಗುವುದೆಂಬ ಆಕ್ಷೇಪಣೆಯೂ ಸರಿಯಲ್ಲ ; ಏಕೆಂದರೆ ಪರಮಾತ್ಮನನ್ನು ಬಿಟ್ಟರೆ ಬೇರೊಬ್ಬ ನಿಯಂತೃವಿರುವುದಿಲ್ಲ [1] ಆದುದರಿಂದ ಪರಮಾತ್ಮನೇ ಅಂತರ್ಯಾಮಿಯು

*ಅಂತರ್ಯಾಮ್ಯಧಿದೈವಾಧಿಲೋಕಾದಿಷು ತದ್ಧರ್ಮವ್ಯಪದೇಶಾತ್ ॥ ೧. ೨. ೧೯ ॥

೧೯. ಅಧಿದೈವ ಅಧಿಲೋಕ ಮೊದಲಾದ ಪದಗಳುಳ್ಳ ವಾಕ್ಯಗಳಲ್ಲಿ (ಸೂಚಿಸಲ್ಪಟ್ಟ) ಅಂತರ್ಯಾಮಿಯು (ಪರಮಪುರುಷನೇ) ; ಏಕೆಂದರೆ ಅವನ ಧರ್ಮಗಳನ್ನು ಹೇಳಿದೆ.

'ಮೊದಲು ಇಲ್ಲಿ ಏನೂ ಇರಲಿಲ್ಲ....ಒಬ್ಬನೇ ದೇವನಾದ ನಾರಾಯಣನು'[2] ಎಂಬ ಸುಬಾಲ-ಶ್ರುತಿಯು ಕೂಡ ಸರ್ವ-ಆತ್ಮತ್ವ ಸರ್ವ-ಶರೀರತ್ವ ಸರ್ವ-ನಿಯಂತೃತ್ವ—ಇವೇ ಮೊದಲಾದುವು ಪರಬ್ರಹ್ಮನಿಗೇ ಹೊಂದುತ್ತವೆಂದು ತಿಳಿಸುತ್ತದೆ. ಸ್ವಾಭಾವಿಕವಾದ ಅಮೃತತ್ವವು ಪರಮಾತ್ಮನ ಧರ್ಮವೇ. ಪರಮಾತ್ಮನ ದ್ರಷ್ಟೃತ್ವ ಮೊದಲಾದವು ಇಂದ್ರಿಯಗಳನ್ನು ಅವಲಂಬಿಸಿವೆಯೆಂದು ತಿಳಿಯಕೂಡದು. 'ಕಣ್ಣಿಲ್ಲದೆ ನೋಡುತ್ತಾನೆ, ಕಿವಿಗಳಿಲ್ಲದೆ ಕೇಳುತ್ತಾನೆ, ಕೈಕಾಲುಗಳಿಲ್ಲದೆ ಹಿಡಿಯುತ್ತಾನೆ, ಓಡುತ್ತಾನೆ'[3] (ಶ್ವೇ. ಉ. ೩. ೧೯) ಎಂದು ಶ್ರುತಿಯು ಹೇಳುತ್ತದೆ. ದರ್ಶನ ಶ್ರವಣ ಮೊದಲಾದ ಶಬ್ದಗಳು ಇಂದ್ರಿಯ-ಜನ್ಯವಾದ ಜ್ಞಾನವನ್ನು ಸೂಚಿಸುವುದಿಲ್ಲ, ರೂಪ ಶಬ್ದ ಮೊದಲಾದವುಗಳ ಸಾಕ್ಷಾತ್ಕಾರವನ್ನು ತಿಳಿಸುತ್ತವೆ. ಯಾವ ಜೀವನ ಸ್ವಾಭಾವಿಕ-ಜ್ಞಾನವು ಕರ್ಮದಿಂದ

---

[1] ನ ಚಾನವಸ್ಥಾ । ನ ಹಿ ನಿಯಂತ್ರಂತರಂ ತೇನ ನಿಯಮ್ಯತೇ, ಕಿಂತು ಯೋ ಜೀವೋ ನಿಯಂತಾ ಲೋಕಸಿದ್ಧಃ ಸ ಪರಮಾತ್ಮೈವೋಪಾಧ್ಯವಚ್ಛೇದಕಲ್ಪಿತಭೇದಃ । (ಭಾಮತೀ).

*ಸೂತ್ರದ ಅಧಿದೈವಾದಿಷು ಎಂಬಲ್ಲಿ ಅಧಿದೈವಾಧಿಲೋಕಾದಿಷು ಎಂಬ ಪಾಠಾಂತರವು ಶ್ರೀಭಾಷ್ಯದಲ್ಲಿ ಕಂಡುಬರುತ್ತದೆ.

[2] ನೈವೇಹ ಕಿಂಚನಾಗ್ರ ಆಸೀತ್...ದಿವ್ಯೋ ದೇವ ಏಕೋ ನಾರಾಯಣಃ ।

[3] ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಅಪಾಣಿಪಾದೋ ಜವನೋ ಗ್ರಹೀತಾ ।

ತಿರೋಹಿತವಾಗಿದೆಯೊ ಅವನಿಗೆ ಕಣ್ಣು ಮೊದಲಾದ ಇಂದ್ರಿಯಗಳ ಮೂಲಕವೇ ಸಾಕ್ಷಾತ್ಕಾರವುಂಟಾಗುತ್ತದೆ. ಆದರೆ ಪರಬ್ರಹ್ಮನಿಗೆ ಅವನ ಸ್ವರೂಪದಿಂದಲೇ ಸಾಕ್ಷಾತ್ಕಾರವುಂಟಾಗುತ್ತದೆ.[1]

ದ್ವೈ.—'ಇವನೇ ಅಂತರ್ಯಾಮಿಯು, ಅಮೃತನಾದ ಆತ್ಮನು' (ಬೃ. ಉ ೩. ೭. ೩) ಎಂಬಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ಪರಬ್ರಹ್ಮನೇ, ಪ್ರಕೃತಿಯೂ ಅಲ್ಲ, ಆಯಾ ಅಭಿಮಾನಿ-ಜೀವರೂ ಅಲ್ಲ : ಏಕೆಂದರೆ ಅಧಿದೈವ ಅಧಿಭೂತ ಮೊದಲಾದ ಪ್ರಕರಣಗಳಲ್ಲಿ ಅಂತರ್ಯಾಮಿಗೆ ಅಂತರತ್ವ, ಪೃಥಿವ್ಯಾದಿಗಳ ಅವಿದಿತತ್ವ ಇವೇ ಮೊದಲಾದ ಧರ್ಮಗಳನ್ನು ಹೇಳಿದೆ.

## ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ॥ ೧೯ ॥

೧೯. (ಅಂತರ್ಯಾಮಿಯು) ಸಾಂಖ್ಯ-ಸ್ಮೃತಿಯಲ್ಲಿ ಕಲ್ಪಿತವಾಗಿರುವ ಪ್ರಧಾನವಲ್ಲ ; ಏಕೆಂದರೆ ಅವಕ್ಕೆ ಸೇರದ ಧರ್ಮಗಳನ್ನು ಹೇಳಿರುತ್ತದೆ.

ಅದೃಷ್ಟತ್ವವೇ ಮೊದಲಾದ ಧರ್ಮಗಳು ಸಾಂಖ್ಯರ ಪ್ರಧಾನಕ್ಕೆ ಹೊಂದುವುದರಿಂದಲೂ, ಅದಕ್ಕೆ ರೂಪಾದಿಗಳು ಇಲ್ಲದಿರುವುದರಿಂದಲೂ ಅದು ಸಮಸ್ತ ಕಾರ್ಯಗಳಿಗೂ ಕಾರಣವಾಗಿರುವುದರಿಂದಲೂ ಅದಕ್ಕೂ ನಿಯಂತೃತ್ವವು ಹೊಂದುತ್ತದೆ ; ಆದುದರಿಂದ ಪ್ರಧಾನವನ್ನು ಅಂತರ್ಯಾಮಿಯೆಂದು ಕರೆಯಬಹುದು—ಎಂಬುದು ಪೂರ್ವಪಕ್ಷ. ಸಾಂಖ್ಯರ ಪ್ರಧಾನವು ಅಂತರ್ಯಾಮಿ-ಶಬ್ದಕ್ಕೆ ವಾಚ್ಯವಾಗಲಾರದು—ಎಂಬುದು ಸಿದ್ಧಾಂತ ; ಏಕೆಂದರೆ ಪ್ರಧಾನಕ್ಕೆ ಅದೃಷ್ಟತ್ವಾದಿಗಳನ್ನು ಹೇಳಿದ್ದರೂ ದ್ರಷ್ಟೃತ್ವವೇ ಮೊದಲಾದ ಧರ್ಮಗಳನ್ನು ಹೇಳಲಾಗುವುದಿಲ್ಲ ; ಏಕೆಂದರೆ ಅವರೇ ಪ್ರಧಾನವು ಅಚೇತನವೆಂದು ಒಪ್ಪಿಕೊಂಡಿರುತ್ತಾರೆ. ಆತ್ಮತ್ವವೂ ಪ್ರಧಾನಕ್ಕೆ ಹೊಂದುವುದಿಲ್ಲ.

ವಿ.—ಶ್ರೀಭಾಷ್ಯಕಾರರು ಈ ಸೂತ್ರಕ್ಕೆ ಮುಂದಿನ ಸೂತ್ರದ **ಶಾರೀರಶ್ಚ** ಎಂಬುದನ್ನೂ ಸೇರಿಸಿಕೊಂಡಿರುತ್ತಾರೆ ; ಆದುದರಿಂದ 'ಜೀವನೂ ಅಂತರ್ಯಾಮಿಯಲ್ಲ' ಎಂದಾಗುತ್ತದೆ. ಪರಮಾತ್ಮನಿಗೆ ಸ್ವಾಭಾವಿಕವಾಗಿರುವ ಸರ್ವದ್ರಷ್ಟೃತ್ವ, ಸರ್ವ-ನಿಯಂತೃತ್ವ, ಸರ್ವ-ಆತ್ಮತ್ವ, ಅಮೃತತ್ವ—ಇವುಗಳ ಗಂಧವೂ ಕೂಡ ಪ್ರಧಾನಕ್ಕಾಗಲಿ ಜೀವನಿಗಾಗಲಿ ಇರಲಾರದು

---

1 ನ ಚ ದರ್ಶನಶ್ರವಣಾದಿಶಬ್ದಾಃ ಚಕ್ಷುರಾದಿಕರಣಜನ್ಯಜ್ಞಾನಸ್ಯ ವಾಚಕಾಃ ; ಅಪಿ ತು ರೂಪಾದಿಸಾಕ್ಷಾತ್ಕಾರಸ್ಯ । ಸ ಚ ರೂಪಾದಿಸಾಕ್ಷಾತ್ಕಾರಃ ಕರ್ಮತಿರೋಹಿತ-ಸ್ವಾಭಾವಿಕಜ್ಞಾನಸ್ಯ ಜೀವಸ್ಯ ಚಕ್ಷುರಾದಿಕರಣಜನ್ಯಃ ; ಪರಸ್ಯ ತು ಸ್ವತ ಏವ । (ಶ್ರೀಭಾಷ್ಯ).

ವ್ಯೈ.—ತ್ರಿಗುಣತ್ವವೇ ಮೊದಲಾದ ಪ್ರಧಾನದ ಧರ್ಮಗಳನ್ನು ಹೇಳದಿರುವುದರಿಂದ ಸಾಂಖ್ಯ-ಸ್ಮೃತಿಯಲ್ಲಿ ಹೇಳಿರುವ ಪ್ರಧಾನವು ಅಂತರ್ಯಾಮಿಯಲ್ಲ[1]

**ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ॥ ೨೦ ॥**

೨೦ ಶರೀರದಲ್ಲಿರುವ ಜೀವನೂ (ಅಂತರ್ಯಾಮಿಯಲ್ಲ), ಏಕೆಂದರೆ ಎರಡು (ಶಾಖೆಯವರೂ) ಇವನನ್ನು (ಅಂತರ್ಯಾಮಿಗಿಂತ) ಭಿನ್ನನೆಂದು ಹೇಳುತ್ತಾರೆ

ಪ್ರಧಾನವು ಅಂತರ್ಯಾಮಿಯಾಗದಿದ್ದರೆ ಜೀವನು ಅಂತರ್ಯಾಮಿಯಾಗಲಿ, ಜೀವನು ಚೇತನನಾಗಿರುವುದರಿಂದ ದ್ರಷ್ಟೃವೂ ಶ್ರೋತೃವೂ ಮಂತೃವೂ ಆಗಿರುತ್ತಾನೆ, ಒಳಗಿರುವುದರಿಂದ ಆತ್ಮನೂ ಆಗಿರುತ್ತಾನೆ—ಎಂಬುದು ಪೂರ್ವಪಕ್ಷ ಜೀವನು ಅಂತರ್ಯಾಮಿಯಾಗಿರಲಾರನು ಎಂಬುದು ಸಿದ್ಧಾಂತ, ಏಕೆಂದರೆ ಕಾಣ್ವರು ಮತ್ತು ಮಾಧ್ಯಂದಿನರು ಇವನನ್ನು ಪೃಥಿವ್ಯಾದಿಗಳಂತೆ ಅಧಿಷ್ಠಾನವೆಂದೂ ನಿಯಮ್ಯನೆಂದೂ ಹೇಳುತ್ತಾರೆ 'ಯಾವನು ವಿಜ್ಞಾನದಲ್ಲಿ ಇರುವವನಾಗಿ'[2] (ಬೃ ಉ ೩ ೭ ೨೨) ಎಂದು ಕಾಣ್ವರು ಹೇಳುತ್ತಾರೆ 'ಯಾವನು ಆತ್ಮನಲ್ಲಿ ಇರುವವನಾಗಿ'[3] ಎಂದು ಮಾಧ್ಯಂದಿನರು ಹೇಳುತ್ತಾರೆ ವಿಜ್ಞಾನ-ಶಬ್ದವೂ ಆತ್ಮ-ಶಬ್ದವೂ ಜೀವನನ್ನೇ ಸೂಚಿಸುತ್ತವೆ

ನಿಜವಾಗಿ ನೋಡಿದರೆ ಅಂತರ್ಯಾಮಿ ಮತ್ತು ಜೀವ ಎಂಬ ಇಬ್ಬರಿಲ್ಲ ಅವಿದ್ಯೆಯಿಂದಾಗುವ ಕಾರ್ಯ-ಕರಣಗಳೆಂಬ ಉಪಾಧಿಯ ನಿಮಿತ್ತದಿಂದ ಈ ಜೀವ-ಅಂತರ್ಯಾಮಿಗಳ ಭೇದವನ್ನು ಹೇಳಿದೆಯೇ ಹೊರತು ಪರಮಾರ್ಥವಾಗಿ ಹೇಳಿಲ್ಲ ಪ್ರತ್ಯಗಾತ್ಮನು ಒಬ್ಬನೇ ಹೊರತು ಇಬ್ಬರಲ್ಲ ಘಟಾಕಾಶ ಮಹಾಕಾಶ ಎಂಬ ಭೇದವನ್ನು ಮಾಡುವಂತೆ ಉಪಾಧಿಯ ದೆಸೆಯಿಂದ ಒಬ್ಬ ಆತ್ಮನನ್ನೇ ಎರಡಾಗಿ ವಿಂಗಡಿಸಿದ[4]

---

[1] ತ್ರಿಗುಣತ್ವಾದಿಪ್ರಧಾನಧರ್ಮಾನುಕ್ತೇರ್ನ ಸ್ಮೃತ್ಯುಕ್ತಂ ಪ್ರಧಾನಮಂತರ್ಯಾಮಿ । (ಮ ಭಾ.)

[2] ಯೋ ವಿಜ್ಞಾನೇ ತಿಷ್ಠನ್ ।

[3] ಯ ಆತ್ಮನಿ ತಿಷ್ಠನ್ ।

[4] ಅವಿದ್ಯಾಪ್ರತ್ಯುಪಸ್ಥಾಪಿತಕಾರ್ಯಕರಣೋಪಾಧಿನಿಮಿತ್ತೋಽಯಂ ಶಾರೀರಾಂತರ್ಯಾಮಿಣೋರ್ಭೇದವ್ಯಪದೇಶೋ ನ ಪಾರಮಾರ್ಥಿಕಃ । ಏಕೋ ಹಿ ಪ್ರತ್ಯಗಾತ್ಮಾ ಭವತಿ, ನ ದ್ವೌ ಪ್ರತ್ಯಗಾತ್ಮಾನೌ ಸಂಭವತಃ, ಏಕಸ್ಯೈವ ತು ಭೇದವ್ಯವಹಾರ ಉಪಾಧಿಕೃತೋ ಯಥಾ ಘಟಾಕಾಶೋ ಮಹಾಕಾಶ ಇತಿ (ಸೂ ಭಾ )

ವಿ.—ಜೀವನು ಪರಮಾತ್ಮನಿಂದ ನಿಯಮ್ಯನು—ಎಂದು ಎರಡು ಶಾಖೆಗಳೂ ಹೇಳುತ್ತವೆ. ಆದುದರಿಂದ ಅಂತರ್ಯಾಮಿಯೂ ಪರಮಾತ್ಮನೂ ಅಪಹತ-ಪಾಪ್ಮನೂ ಆದ ನಾರಾಯಣನು ಜೀವನಿಗಿಂದ ಭಿನ್ನನು [1]

ದ್ವೈ.—ಎರಡು ಶಾಖೆಯವರೂ ಜೀವನು ಅಂತರ್ಯಾಮಿಗಿಂತ ಭಿನ್ನವೆಂದು ಹೇಳಿರುವುದರಿಂದ ಜೀವನು ಅಂತರ್ಯಾಮಿಯಲ್ಲ.

---

[1] ಅತೋಽಂತರ್ಯಾಮಿಪ್ರತ್ಯಗಾತ್ಮನೋ ವಿಲಕ್ಷಣೋಽಪಹತಪಾಪ್ಮಾ ಪರಮಾತ್ಮಾ ನಾರಾಯಣ ಇತಿ ಸಿದ್ಧಮ್ (ಶ್ರೀಭಾಷ್ಯ).

# ೬. ಅದೃಶ್ಯತ್ವಾಧಿಕರಣ

(ಸೂ. ೨೧–೨೩)

## ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ॥ ೨೧ ॥

೨೧. ಅದೃಶ್ಯತ್ವವೇ ಮೊದಲಾದ ಗುಣಗಳುಳ್ಳವನು (ಪರಮೇಶ್ವರನೇ); ಏಕೆಂದರೆ (ಅವನ) ಧರ್ಮಗಳನ್ನು ಹೇಳಿದೆ.

'ಈಗ ಪರಾವಿದ್ಯೆ—ಯಾವುದರಿಂದ ಅಕ್ಷರವು ಹೊಂದಲ್ಪಡುತ್ತದೆಯೊ (ಅದು ಪರಾವಿದ್ಯೆ). ಅದು ಅದೃಶ್ಯವಾದುದು, ಅಗ್ರಾಹ್ಯವಾದುದು, ಗೋತ್ರವಿಲ್ಲದುದು, ವರ್ಣವಿಲ್ಲದುದು, ಚಕ್ಷುಃಶ್ರೋತ್ರಗಳಿಲ್ಲದುದು, ಹಸ್ತಪಾದವಿಹೀನವಾದುದು; ಅದು ನಿತ್ಯ ವಿಭು ಸರ್ವಗತ ಅತ್ಯಂತಸೂಕ್ಷ್ಮ ಮತ್ತು ಅವ್ಯಯ. ಇಂಥ ಭೂತಯೋನಿಯನ್ನು ಧೀರರು ಎಲ್ಲೆಲ್ಲಿಯೂ ನೋಡುತ್ತಾರೆ'[1] (ಮುಂ. ಉ. ೧ ೧. ೫-೬) ಎಂಬುದು ವಿಷಯವಾಕ್ಯ. ಇಲ್ಲಿ ಅದೃಶ್ಯತ್ವಾದಿ ಗುಣಗಳುಳ್ಳ ಭೂತಯೋನಿಯು ಪ್ರಧಾನವೊ, ಜೀವನೊ ಅಥವಾ ಪರಮೇಶ್ವರನೊ—ಎಂಬುದು ಸಂಶಯ.

ಅಚೇತನವಾದ ಪ್ರಧಾನವೇ ಭೂತಯೋನಿ ಎಂಬುದು ಪೂರ್ವಪಕ್ಷ; ಏಕೆಂದರೆ 'ಹೇಗೆ ಜೇಡರಹುಳು (ನೂಲುಗಳನ್ನು) ಹೊರಕ್ಕೆ ತಂದು ಪುನಃ ಒಳಕ್ಕೆ ತೆಗೆದುಕೊಳ್ಳುತ್ತದೆಯೊ, ಹೇಗೆ ಭೂಮಿಯಲ್ಲಿ ಸಸ್ಯಗಳು ಹುಟ್ಟುತ್ತವೆಯೊ, ಹೇಗೆ ಜೀವಂತನಾದ ಮನುಷ್ಯನಿಂದ ಕೇಶಲೋಮಗಳು ಬೆಳೆಯುತ್ತವೆಯೊ ಹಾಗೆಯೇ ಅಕ್ಷರದಿಂದ ಇಲ್ಲಿ ಸಮಸ್ತ ಜಗತ್ತು ಉಂಟಾಗುತ್ತದೆ'[2] (ಮು. ಉ. ೧. ೧. ೭) ಎಂದು ಅಚೇತನ ವಸ್ತುಗಳನ್ನು—ಅವು ಚೇತನದ ಅಧೀನದಲ್ಲಿದ್ದರೂ—ಆ ಭೂತಯೋನಿಗೆ ದೃಷ್ಟಾಂತವಾಗಿ ಹೇಳಿದೆ. ಅದೃಶ್ಯತ್ವಾದಿ-ಗುಣಗಳು ಪ್ರಧಾನವನ್ನು ಸೂಚಿಸಬಹುದು, ಸರ್ವಜ್ಞತ್ವ ಸರ್ವವಿತ್ತ್ವ[3] ಮೊದಲಾದ ಗುಣಗಳು ಪ್ರಧಾನಕ್ಕಿಂತ ಶ್ರೇಷ್ಠವಾದು

---

[1] ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ॥ ಯತ್ ತದದ್ರೇಶ್ಯಮಗ್ರಾಹ್ಯ-ಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಮ್ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ ॥

[2] ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ । ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಮ್ ॥

[3] 'ಯಾವನು ಸರ್ವಜ್ಞನೊ ಸರ್ವವಿದನೊ' ಯಃ ಸರ್ವಜ್ಞಃ ಸರ್ವವಿತ್ । (ಮುಂ. ಉ. ೧. ೧. ೯).

ದನ್ನು[1] ಸೂಚಿಸಬಹುದು ಒಂದು ವೇಳೆ ಯೋನಿಶಬ್ದವು ನಿಮಿತ್ತ ಕಾರಣವನ್ನು ಸೂಚಿಸಿದರೆ ಜೀವನೇ ನಿಮಿತ್ತ ಕಾರಣನಾಗುತ್ತಾನೆ

ಸೂತ್ರವು ಈ ಪಕ್ಷವನ್ನು ನಿರಾಕರಿಸುತ್ತದೆ ಅಕ್ಷರವಾದ ಭೂತಯೋನಿಯನ್ನೇ ಸರ್ವಜ್ಞನೆಂದೂ ಸರ್ವವಿತ್ ಎಂದೂ ಹೇಳಿದೆ 'ದಿವ್ಯನೂ ಅಮೂರ್ತನೂ ಆದ ಪುರುಷನು ಪರವಾದ ಅಕ್ಷರಕ್ಕಿಂತಲೂ ಶ್ರೇಷ್ಠನು' (ಮುಂ ಉ. ೨ ೧ ೨) ಎಂಬಲ್ಲಿಯೂ ಕೂಡ ಪ್ರಕೃತವಾಗಿರುವ ಭೂತಯೋನಿಯಾದ ಅಕ್ಷರಕ್ಕಿಂತ ಶ್ರೇಷ್ಠನಾದ ಯಾವನನ್ನೂ ಹೇಳಿಲ್ಲ ಮುಂಡಕಶ್ರುತಿಯು ವಿದ್ಯೆಯನ್ನು ಪರಾ ಎಂದೂ ಅಪರಾ ಎಂದೂ ವಿಂಗಡಿಸಿದೆ ಪರಾವಿದ್ಯೆಯ ಗುರಿ ನಿಃಶ್ರೇಯಸ್ಸಾದರೆ ಅಪರಾವಿದ್ಯೆಯ ಗುರಿ ಅಭ್ಯುದಯ ವೈದಿಕ-ಕರ್ಮಗಳಿಂದ ಅಭ್ಯುದಯವೂ ಬ್ರಹ್ಮಜ್ಞಾನದಿಂದ ನಿಃಶ್ರೇಯಸ್ಸೂ ಆಗುತ್ತದೆ ಇಲ್ಲಿ ಪ್ರಕೃತವಾದದ್ದು ಬ್ರಹ್ಮವಿದ್ಯೆಯೇ ಬ್ರಹ್ಮವನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತಾಗ ವುದು [2] ಪ್ರಧಾನದ ಜ್ಞಾನವಾಗಲಿ, ಜೀವಾತ್ಮನ ಜ್ಞಾನವಾಗಲಿ ಸರ್ವಜ್ಞತ್ವವನ್ನು ಹೊಂದಿಸುವುದಿಲ್ಲ ಆದುದರಿಂದ ಅದೃಶ್ಯತ್ವಾದಿಗುಣಗಳುಳ್ಳ ಭೂತಯೋನಿಯು ಪರಮೇಶ್ವರನೇ [3]

ವಿ.—ಸಾಂಖ್ಯರ ಪ್ರಧಾನವಾಗಲಿ ಪುರುಷನಾಗಲಿ ಈ ಪ್ರಕರಣದ ವಿಷಯವಲ್ಲ ಅದೃಶ್ಯತ್ವಾದಿಗುಣಗಳಿಂದ ಕೂಡಿರುವವನೂ ಪ್ರಕೃತಿಗಿಂತ ಅಧಿಕನಾದ ಪುರುಷನಿಗಿಂತ ಅಧಿಕನೂ (**ಅಕ್ಷರಾತ್ ಪರತಃ ಪರಃ**) ಆದವನು ಪರಮಾತ್ಮನು , ಏಕೆಂದರೆ ಅವನಿಗೇ ಸರ್ವಜ್ಞತ್ವ ಮೊದಲಾದ ಧರ್ಮಗಳನ್ನು ಶ್ರುತಿಯು ಹೇಳುತ್ತದೆ

**ದ್ವೈ.**—'ಅದು ಅದೃಶ್ಯವಾದುದು, ಅಗ್ರಾಹ್ಯವಾದುದು' (ಮುಂ ಉ ೧ ೧ ೬) ಎಂಬಲ್ಲಿ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ವಿಷ್ಣುವೇ, ಜಡಪ್ರಕೃತಿಯೂ ಅಲ್ಲ, ಹಿರಣ್ಯಗರ್ಭನೂ ಅಲ್ಲ

**ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ॥ ೨೨ ॥**

೨೨ ವಿಶೇಷಣಗಳನ್ನೂ ಭೇದವನ್ನೂ ಹೇಳಿರುವುದರಿಂದ ಉಳಿದ ಇಬ್ಬರೂ ಭೂತಯೋನಿಯಲ್ಲ

ಪರಮೇಶ್ವರನೇ ಭೂತಯೋನಿಯು, ಜೀವಾತ್ಮನಾಗಲಿ ಪ್ರಧಾನವಾಗಲಿ ಅಲ್ಲ , 'ದಿವ್ಯನೂ ಅಮೂರ್ತನೂ ಆದ ಪುರುಷನು ಒಳಗೂ ಹೊರಗೂ ಇರುವವನು ಜನ್ಮರಹಿ

---

[1] 'ದಿವ್ಯನೂ ಅಮೂರ್ತನೂ ಆದ ಪುರುಷನು ಪರವಾದ ಅಕ್ಷರಕ್ಕಿಂತಲೂ ಶ್ರೇಷ್ಠನು' ದಿವ್ಯೋ ಹ್ಯಮೂರ್ತಃ ಪುರುಷಃ ಹ್ಯಕ್ಷರಾತ್ ಪರತಃ ಪರಃ । (ಮುಂ. ಉ ೨ ೧ ೨)

[2] ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ಎಂಬುದು ಶೌನಿಕನ ಪ್ರಶ್ನೆ

[3] ತಸ್ಮಾದದೃಶ್ಯತ್ವಾದಿಗುಣಕೋ ಭೂತಯೋನಿಃ ಪರಮೇಶ್ವರ ಏವ (ಸೂ ಭಾ )

ತನು'[1] (ಮುಂ. ಉ. ೨. ೧. ೨) ಎಂದು ದಿವ್ಯತ್ವವೇ ಮೊದಲಾದ ವಿಶೇಷಣಗಳನ್ನು ಹೇಳಿದೆ ; ಇವು ಉಪನಿಷತ್ತುಗಳಿಗೆಲ್ಲ ವಿಷಯನಾದ ಪುರುಷನನ್ನು ಸೂಚಿಸುತ್ತವೆಯೇ ಹೊರತು ನಾಮ-ರೂಪಗಳಿಂದ ಪರಿಚ್ಛಿನ್ನನೆಂದು ಎಣಿಸಿಕೊಂಡಿರುವ ಜೀವಾತ್ಮನನ್ನು ಸೂಚಿಸುವುದಿಲ್ಲ. ಹೀಗೆಯೇ 'ಪರವಾದ ಅಕ್ಷರಕ್ಕಿಂತಲೂ ಶ್ರೇಷ್ಠನು' (ಮುಂ. ಉ. ೨. ೧. ೨) ಎಂಬುದು ಭೂತಯೋನಿಯು ಪ್ರಧಾನಕ್ಕಿಂತ ಭಿನ್ನವೆಂದು ತಿಳಿಸುತ್ತದೆ. ನಾಮ-ರೂಪಗಳ ಬೀಜಶಕ್ತಿಯ ರೂಪದಲ್ಲಿರುವ ಸೂಕ್ಷ್ಮಭೂತವಾದ, ಈಶ್ವರನನ್ನು ಆಶ್ರಯಿಸಿ ಕೊಂಡು ಅವನಿಗೆ ಉಪಾಧಿಯಾಗಿರುವ ಅವ್ಯಕ್ತಕ್ಕೆ ಅಕ್ಷರವೆಂದು ಹೆಸರು ; ಇದು ಯಾವುದರ ಕಾರ್ಯವೂ ಆಗಿರದೆ ತನ್ನ ಕಾರ್ಯಗಳಿಗಿಂತ ಅಧಿಕವಾಗಿರುವುದು ; ಆದುದರಿಂದ **ಅಕ್ಷರಾತ್ ಪರತಃ ಪರಃ** ಎಂದು ಭೇದವನ್ನು ತಿಳಿಸುವ ವಾಕ್ಯವು ಪರಮಾತ್ಮನೇ ಇಲ್ಲಿ ವಿವಕ್ಷಿತನಾಗಿರುವನೆಂದು ತಿಳಿಸುತ್ತದೆ.[2]

**ವಿ.**—'ಭಗವಾನ್, ಯಾವ ವಸ್ತುವನ್ನು ತಿಳಿದುಕೊಂಡರೆ ಸರ್ವವನ್ನೂ ತಿಳಿದಂತಾಗುವುದು ?' (ಮುಂ. ಉ. ೧. ೧ ೩) ಎಂದು ಶೌನಕನು ಅಂಗಿರಸ್ಸನ್ನು ಪ್ರಶ್ನಿಸುತ್ತಾನೆ. ಜೀವಾತ್ಮನ ಅಥವಾ ಪ್ರಧಾನದ ಜ್ಞಾನದಿಂದ 'ಸರ್ವವನ್ನೂ' ತಿಳಿದಂತಾಗುವುದಿಲ್ಲ. 'ಸರ್ವವನ್ನೂ ತಿಳಿದಂತಾಗುವುದು' ಎಂಬ ವಿಶೇಷಣವು ಪರಮಾತ್ಮನಿಗೆ ಮಾತ್ರ ಅನ್ವಯಿಸುತ್ತದೆ, ಜೀವ-ಪ್ರಧಾನರಿಗಲ್ಲ. **ಅಕ್ಷರಾತ್ ಪರತಃ ಪರಃ** (ಮುಂ. ಉ. ೨. ೧. ೨) ಎಂಬುದು ಪರಮಾತ್ಮನು ಜೀವಾತ್ಮ-ಪ್ರಧಾನರಿಗಿಂತ ಭಿನ್ನನೆಂದು ತಿಳಿಸುತ್ತದೆ. ಈ ಪದಗಳ ಅರ್ಥವು ಹೀಗಿದೆ . ಅಕ್ಷರವೆಂದರೆ ಅವ್ಯಕ್ತವಾದ ಪ್ರಧಾನ ; ಪ್ರಧಾನಕ್ಕಿಂತಲೂ ಅಧಿಕನಾದವನು ಚೇತನನಾದ ಜೀವನು ; ಜೀವನಿಗಿಂತಲೂ ಶ್ರೇಷ್ಠನಾದವನು ಅದೃಶ್ಯತ್ವಾದಿಗುಣಗಳಿಂದ ಕೂಡಿರುವ ಪರಮಾತ್ಮನು.

**ದ್ವೈ.**—'ಯಾವನು ಸರ್ವಜ್ಞನೊ ಸರ್ವವನ್ನೂ ತಿಳಿದವನೊ' (ಮುಂ ಉ. ೧. ೧. ೯) ಎಂದು ಸರ್ವಜ್ಞತ್ವ-ವಿಶೇಷಣವಿರುವುದರಿಂದ ಜಡಪ್ರಕೃತಿಯು ಅದೃಶ್ಯತ್ವಾದಿ-ಗುಣಗಳಿಂದ ಕೂಡಿದ್ದಲ್ಲ ; 'ಯಾವನ ದೆಸೆಯಿಂದ ಚತುರ್ಮುಖ ಬ್ರಹ್ಮನೂ ನಾಮ-ರೂಪಗಳೂ-ಅನ್ನವೂ ಹುಟ್ಟುತ್ತವೆಯೊ'[3] (ಮುಂ. ಉ. ೧. ೧. ೯) ಎಂಬುದು ವಿರಿಂಚನು ಅದೃಶ್ಯತ್ವಾದಿಗುಣಗಳಿಂದ ಶೂನ್ಯನೆಂದು ತಿಳಿಸುತ್ತದೆ. ಜಡರೂಪವಾದ ಪ್ರಕೃತಿಗೆ ಕೆಳಗಿನ (**ಅಪರ**) ಅಕ್ಷರವೆಂದು ಹೆಸರು ; ವಿಷ್ಣುವನ್ನು ಆಶ್ರಯಿಸುವ ಚೇತನಕ್ಕೆ ಎಂದರೆ ಶ್ರೀ ತತ್ತ್ವಕ್ಕೆ ಪರಾಪ್ರಕೃತಿ ಅಥವಾ ಶ್ರೇಷ್ಠವಾದ ಅಕ್ಷರ ಎಂದು ಹೆಸರು. ಅಖಿಲಗುಣ

---

1 ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।

2 ಅಕ್ಷರಮವ್ಯಾಕೃತಂ ನಾಮರೂಪಬೀಜಶಕ್ತಿರೂಪಂ ಭೂತಸೂಕ್ಷ್ಮಮೀಶ್ವರಾಶ್ರಯಂ ತಸ್ಯೈವೋಪಾಧಿಭೂತಂ ಸರ್ವಸ್ಮಾದ್ವಿಕಾರಾತ್ ಪರೋ ಯೋಽವಿಕಾರಸ್ತಸ್ಮಾತ್ ಪರತಃ ಪರ ಇತಿ ಭೇದೇನ ವ್ಯಪದೇಶಾತ್ ಪರಮಾತ್ಮಾನಮಿಹ ವಿವಕ್ಷಿತಂ ದರ್ಶಯತಿ (ಸೂ. ಭಾ.).

3 ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ ।

ಗಳಿಂದ ಕೂಡಿರುವ ಹರಿಯನ್ನು ಶ್ರೇಷ್ಠಕ್ಕಿಂತ ಶ್ರೇಷ್ಠವಾದ ಅಕ್ಷರನೆಂದು ಕರೆಯುವರು ಹೀಗೆ ಮೂರು ಅಕ್ಷರಗಳನ್ನು ಹೇಳಿದೆ [1]

**ರೂಪೋಪನ್ಯಾಸಾಚ್ಚ || ೨೩ ||**

೨೩ ರೂಪವನ್ನು ಹೇಳಿರುವುದರಿಂದಲೂ (ಭೂತಯೋನಿಯು ಪರಮೇಶ್ವರನೇ)

'ಇವನಿಗೆ ಅಗ್ನಿಯು ತಲೆ, ಚಂದ್ರಸೂರ್ಯರು ಕಣ್ಣುಗಳು, ದಿಕ್ಕುಗಳು ಕಿವಿಗಳು, ಪ್ರಕಟವಾದ ವೇದಗಳು ವಾಕ್ಕು, ವಿಶ್ವವು ಹೃದಯ, ಇವನ ಪಾದಗಳಿಂದ ಪೃಥ್ವಿಯು ಹುಟ್ಟಿರುವುದು, ಇವನು ಸರ್ವಭೂತಗಳ ಅಂತರಾತ್ಮನು'[2] (ಮುಂ ಉ ೨ ೧ ೪), ಈ ವಾಕ್ಯದಲ್ಲಿ ಸರ್ವಕಾರ್ಯಗಳನ್ನೂ ಒಳಕೊಂಡಿರುವ ಭೂತಯೋನಿಯ ರೂಪವನ್ನು ಹೇಳಿದ ಪರಮೇಶ್ವರನು ಎಲ್ಲ ಕಾರ್ಯಗಳಿಗೂ ಕಾರಣನಾಗಿರುವುದರಿಂದ ಅವನಿಗೇ ಈ ರೂಪವು ಹೊಂದುತ್ತದೆಯೇ ಹೊರತು ಅಲ್ಪಮಹಿಮೆಯುಳ್ಳ ಜೀವಾತ್ಮನಿಗಾಗಲಿ ಭೂತಗಳ ಅಂತರಾತ್ಮನಾಗದ ಪ್ರಧಾನಕ್ಕಾಗಲಿ ಹೊಂದುವುದಿಲ್ಲ ಭೂತಯೋನಿಗೆ ಶರೀರಯುಕ್ತವಾದ ರೂಪವನ್ನು ಹೇಳಿರುವುದು ಅದು ಸರ್ವಾತ್ಮವಾಗಿದೆಯೆಂದು ತಿಳಿಸುವುದಕ್ಕೇ ಹೊರತು ಶರೀರವಿದೆಯೆಂದು ತಿಳಿಸುವುದಕ್ಕಲ್ಲ [3]

ಇನ್ನೊಂದು ಪಕ್ಷದ ಪ್ರಕಾರ ಕಾರ್ಯಪುರುಷನಾದ ಹಿರಣ್ಯಗರ್ಭನು ಅಥವಾ ಪ್ರಜಾಪತಿಯು ಸೃಷ್ಟಿಯ ಅಂತರಾತ್ಮನಾಗಿರುತ್ತಾನೆ, ಪರಮೇಶ್ವರನಲ್ಲ, ಏಕೆಂದರೆ, ಹಿರಣ್ಯಗರ್ಭನು ಮೊದಲು ಹುಟ್ಟಿದನು, ಹುಟ್ಟಿ, ಭೂತಗಳಿಗೆ ತಾನೊಬ್ಬನೇ ಪತಿಯಾದನು, ಆತನು ಪೃಥ್ವಿಯನ್ನೂ ದ್ಯುಲೋಕವನ್ನೂ ಧರಿಸಿದನು ಯಾವ ದೇವ

---

[1] ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ । ಶ್ರೀಃ ಪರಾಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ । ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್ । ಹರಿಮೇವಾಖಿಲಗುಣಮಕ್ಷರತ್ರಯಮೀರಿತಮ್ ಇತಿ ಸ್ಕಾಂದೇ । (ಮ ಭಾ)

[2] ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥

[3] ಇದು ವೃತ್ತಿಕಾರರ ಮತವೆಂದೂ ಮುಂದೆ ಬರುವ ಎರಡನೆಯ ಪಕ್ಷವು ಭಾಷ್ಯಕಾರರಿಗೆ ಸಮ್ಮತವಾದ ಅಭಿಪ್ರಾಯವೆಂದೂ ವಾಚಸ್ಪತಿಮಿಶ್ರ ಆನಂದಗಿರಿ ಗೋವಿಂದಾನಂದ ಮೊದಲಾದವರು ತಮ್ಮ ತಮ್ಮ ಟೀಕೆಗಳಲ್ಲಿ ಹೇಳಿರುತ್ತಾರೆ ವೃತ್ತಿಕೃನ್ಮತೇನಾದೌ ಸೂತ್ರಂ ವ್ಯಾಚಷ್ಟೇ ಮತ್ತು ವೃತ್ತಿಕೃದ್ವ್ಯಾಖ್ಯಾಂ ದೂಷಯತಿ (ರತ್ನಪ್ರಭಾ), ತದೇತತ್ ಪರಮತೇನಾಕ್ಷೇಪಸಮಾಧಾನಾಭ್ಯಾಂ ವ್ಯಾಖ್ಯಾಯ ಸ್ವಮತೇನ ವ್ಯಾಚಷ್ಟೇ (ಭಾಮತೀ), ವೃತ್ತಿಕಾರಮತೇನ ವ್ಯಾಕರೋತಿ ಮತ್ತು ಏಕದೇಶಿನಂ ದೂಷಯತಿ (ನ್ಯಾಯನಿರ್ಣಯ) ಮುಂಡಕೋಪನಿಷತ್ತಿನ ಭಾಷ್ಯದಲ್ಲಿಯೂ (೨ ೧ ೪) ಪ್ರಥಮಶರೀರಿಯಾದ ವಿರಾಟ್ಪುರುಷನೇ ಮೂರು ಲೋಕಗಳೆಂಬ ದೇಹವೇ ಉಪಾಧಿಯುಳ್ಳವನಾಗಿ ಸರ್ವಪ್ರಾಣಿಗಳಲ್ಲಿಯೂ ದ್ರಷ್ಟೃ ಶ್ರೋತೃ ಮಂತೃ ವಿಜ್ಞಾತೃ ಮತ್ತು ಸರ್ವಕರಣಗಳ ಆತ್ಮ ಆಗಿರುತ್ತಾನೆಂದು ಹೇಳಿದೆ

ನಿಗೆ ನಾವು ಹವಿಸ್ಸನ್ನು ಕೊಡಬೇಕು ?'[1] (ಋ. ವೇ. ೧೦ ೧೨೧. ೧) ಎಂಬುದು ಸೃಷ್ಟಿಯನ್ನೂ ಮತ್ತು ಆ ಸೃಷ್ಟಿಯ ಅಂತರಾತ್ಮನು ಹಿರಣ್ಯಗರ್ಭನೆಂಬುದನ್ನೂ ತಿಳಿಸುತ್ತದೆ. ಇವನನ್ನೇ ಅರ್ವಾಚೀನವೇದಾಂತದಲ್ಲಿ ಸೂತ್ರಾತ್ಮನೆಂದು ಕರೆದಿದೆ. ಇವನು ಪ್ರಾಣರೂಪದಿಂದ ಪ್ರಾಣಿಗಳ ಶರೀರದಲ್ಲಿರುತ್ತಾನೆ

'ಇವನಿಗೆ ಅಗ್ನಿಯು ತಲೆ' (ಮುಂ. ಉ. ೨. ೧. ೪) ಎಂಬ ವಾಕ್ಯವು ಪರಮೇಶ್ವರನನ್ನು ಸೂಚಿಸುವುದಿಲ್ಲ. ಮತ್ತು ಈ ಸೂತ್ರಕ್ಕೆ ಸಂಬಂಧಿಸಿಲ್ಲ ಎಂಬ ಈ ಎರಡನೆಯ ಪಕ್ಷವನ್ನು ಒಪ್ಪಿಕೊಂಡರೆ, 'ಕರ್ಮ ತಪಸ್ಸು—ಇವೆಲ್ಲವೂ ಪುರುಷನೇ'[2] (ಮುಂ. ಉ ೨. ೧. ೧೦) ಎಂಬುದೇ ವಿಷಯವಾಕ್ಯವಾಗಿ ಪರಮೇಶ್ವರನೇ ಭೂತಯೋನಿಯೆಂದು ತಿಳಿಸುತ್ತದೆ.[3]

**ವಿ.**—ಇಲ್ಲಿ (ಮುಂ ಉ. ೨. ೧. ೪) ವರ್ಣಿಸಿರುವ ರೂಪವು ಸರ್ವಪ್ರಾಣಿಗಳ ಅಂತರಾತ್ಮನಾದ ಪರಮಾತ್ಮನಿಗೇ ಸಂಭವಿಸುತ್ತದೆಯೇ ಹೊರತು ಮತ್ತಾರಿಗೂ ಅಲ್ಲ.

**ವೈ.**—'ಯಾವಾಗ ಜೀವನು ಚಿನ್ನದ ಬಣ್ಣವುಳ್ಳ, ಚತುರ್ಮುಖನಿಗೆ ಕಾರಣನಾದ, ಜಗತ್ಕರ್ತೃವಾದ ಈಶನನ್ನು ನೋಡುತ್ತಾನೆಯೊ'[4] (ಮುಂ. ಉ. ೩. ೧. ೩) ಎಂಬಲ್ಲಿ ಚಿನ್ನದ ಬಣ್ಣವನ್ನು ಹೇಳಿರುವುದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ಪರಬ್ರಹ್ಮನೇ.

---

1 ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥

2 ಪುರುಷ ಏವೇದಂ ವಿಶ್ವಂ ಕರ್ಮ ತಪಃ ।

3 ಈ ಸೂತ್ರದ ವಿಷಯವಾಕ್ಯವು ಯಾವುದು ಎಂಬುದು ಪ್ರಶ್ನೆ ; ಮೊದಲನೆಯ ಪಕ್ಷದ ಪ್ರಕಾರ ಮು. ಉ. ೨. ೧. ೪ ಆಗಬೇಕು ; ಎರಡನೆಯ ಪಕ್ಷದ ಪ್ರಕಾರ ಮುಂ. ಉ. ೨. ೧. ೪ ರಿಂದ ೨. ೧. ೯ರ ವರೆಗೆ ಭೂತಯೋನಿಯು ವಿವಕ್ಷಿತವಾಗಿಲ್ಲ ; ಏಕೆಂದರೆ ಈ ವಾಕ್ಯವೆಲ್ಲ ಸೃಷ್ಟಿಗೆ ಸಂಬಂಧಪಟ್ಟದ್ದಾಗಿರುತ್ತದೆ ಮತ್ತು ತಾನೇ ಕಾರ್ಯನಾಗಿರುವ ಹಿರಣ್ಯಗರ್ಭನು ಕಾರ್ಯಜಗತ್ತಿನ ಆತ್ಮನಾಗಿದ್ದಾನೆ. ಆದುದರಿಂದ ಈ ಸೂತ್ರದ ವಿಷಯವಾಕ್ಯವು ಪರಮೇಶ್ವರನನ್ನು ಸೂಚಿಸುವ (ಮುಂ. ಉ. ೨. ೧. ೧೦) ಆಗಿರಬೇಕು.

4 ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।

## ೭. ವೈಶ್ವಾನರಾಧಿಕರಣ

(ಸೂ. ೨೪–೩೨)

### ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ॥ ೨೪ ॥

೨೪. ವೈಶ್ವಾನರನು (ಪರಮೇಶ್ವರನೇ) ; ಏಕೆಂದರೆ ಸಾಧಾರಣ ಶಬ್ದಗಳಿಗೆ ವಿಶೇಷವಿದೆ.

‘ಆ ಈ ವೈಶ್ವಾನರಾತ್ಮನ ತಲೆಯೇ ಸುತೇಜಸ್ಸು, ಕಣ್ಣೇ ವಿಶ್ವರೂಪವು, ಪ್ರಾಣವೇ ಪೃಥಗ್ವರ್ತ್ಮಾತ್ಮನು, ಮುಂಡವೇ ಬಹುಲನು, ಮೂತ್ರಾಶಯವೇ ರಯಿಯು, ಪಾದಗಳೇ ಪೃಥ್ವಿಯು, ಎದೆಯೇ ವೇದಿಯು, (ಎದೆಯ ಮೇಲೆ ಹರಡಿಕೊಂಡಿರುವ) ರೋಮಗಳೇ ಬರ್ಹಿಯು, ಹೃದಯವೇ ಗಾರ್ಹಪತ್ಯವು, ಮನಸ್ಸೇ ದಕ್ಷಿಣಾಗ್ನಿಯು, ಬಾಯೇ ಆಹವನೀಯವು’[1] (ಛಾಂ. ಉ. ೫. ೧೮. ೨) ಎಂಬುದು ವಿಷಯವಾಕ್ಯವು ; ಇಲ್ಲಿ ವೈಶ್ವಾನರಶಬ್ದವು ಜಾಠರಾಗ್ನಿಯನ್ನು ಸೂಚಿಸುತ್ತದೆಯೊ ಅಥವಾ ಭೂತಾಗ್ನಿಯನ್ನಾಗಲಿ ಅದರ ಅಭಿಮಾನಿಯಾದ ದೇವತೆಯನ್ನಾಗಲಿ ಸೂಚಿಸುತ್ತದೆಯೊ ? ಅಥವಾ ಜೀವಾತ್ಮನನ್ನು ಇಲ್ಲವೇ ಪರಮೇಶ್ವರನನ್ನು ಸೂಚಿಸುತ್ತದೆಯೊ ?—ಎಂಬುದು ಸಂಶಯ.

ವೈಶ್ವಾನರನು ಪರಮಾತ್ಮನೆಂಬುದು ಸಿದ್ಧಾಂತ. ಆತ್ಮ, ವೈಶ್ವಾನರ ಎಂಬ ಶಬ್ದಗಳಿಗೆ ಅನೇಕ ಅರ್ಥಗಳಿದ್ದರೂ ‘ಆ ಈ ವೈಶ್ವಾನರನ ತಲೆಯೇ ಸುತೇಜಸ್ಸು’ (ಛಾಂ. ಉ. ೫. ೧೮. ೨) ಎಂಬ ವಿಶೇಷವು ಕಂಡುಬರುತ್ತದೆ ; ಆದುದರಿಂದ ಈ ಎರಡು ಪದಗಳೂ ಪರಮೇಶ್ವರನನ್ನೇ ಸೂಚಿಸುತ್ತವೆ.[2] ತಲೆ ಮೊದಲಾದವುಗಳಿಂದ ಕೂಡಿ ಅವಸ್ಥಾಂತರವನ್ನು ಪಡೆದಿರುವ ಪರಮೇಶ್ವರನನ್ನೇ ಉಪಾಸನೆಗಾಗಿ ಪ್ರತ್ಯಗಾತ್ಮನೆಂದು ಹೇಳಿದೆ. ಪರಮೇಶ್ವರನು ಜಗತ್ಕಾರಣನಾಗಿರುವುದರಿಂದ ತನ್ನ ಎಲ್ಲ ಕಾರ್ಯಗಳ ಅವಸ್ಥೆಗಳನ್ನೂ ಹೊಂದಿರುತ್ತಾನೆ ; ಆದುದರಿಂದ ದ್ಯುಲೋಕವೇ ಮೊದಲಾದ ಅವಯವಗಳನ್ನು ಅವನಿಗೆ ಹೇಳಿರುವುದು ಯುಕ್ತವೇ. ‘ಅವನು ಸರ್ವಲೋಕಗಳಲ್ಲಿಯೂ ಸರ್ವಪ್ರಾಣಿ

---

[1] ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ ।

[2] ಯದ್ಯಪಿ ಏತಾವುಭಾವಪ್ಯಾತ್ಮವೈಶ್ವಾನರಶಬ್ದೌ ಸಾಧಾರಣಶಬ್ದೌ, ವೈಶ್ವಾನರಶಬ್ದಸ್ತು ತ್ರಯಸ್ಯ ಸಾಧಾರಣಃ, ಆತ್ಮಶಬ್ದಶ್ಚ ದ್ವಯೋಃ, ತಥಾಪಿ ವಿಶೇಷೋ ದೃಶ್ಯತೇ, ಯೇನ ಪರಮೇಶ್ವರಪರತ್ವಂ ತಯೋರಭ್ಯುಪಗಮ್ಯತೇ (ಸೂ. ಭಾ.).

ಗಳಲ್ಲಿಯೂ ಸರ್ವಾತ್ಮಗಳಲ್ಲಿಯೂ ಅನ್ನವನ್ನು ತಿನ್ನುತ್ತಾನೆ'[1] (ಛಾಂ. ಉ. ೫. ೧೮. ೧) ಎಂಬ ವೈಶ್ವಾನರೋಪಾಸನೆಯ ಫಲಶ್ರುತಿಯು ಪರಮೇಶ್ವರನಿಗೆ ಮಾತ್ರ ಹೊಂದುತ್ತದೆ. ಹೀಗೆಯೇ 'ಅವನ ಎಲ್ಲ ಪಾಪಗಳೂ ಸುಟ್ಟುಹೋಗುತ್ತವೆ'[2] (ಛಾಂ. ಉ. ೫ ೨೪. ೩) ಎಂಬುದನ್ನೂ ಅರಿತುಕೊಳ್ಳಬೇಕು.

ವಿ.—'ಆತ್ಮನು ಯಾರು ? ಬ್ರಹ್ಮವು ಯಾವುದು ?'[3] (ಛಾಂ. ಉ. ೫. ೧೧. ೧) ಎಂಬಲ್ಲಿ ಆತ್ಮ-ಬ್ರಹ್ಮ-ಶಬ್ದಗಳಿಂದ ವೈಶ್ವಾನರ-ವಿದ್ಯೆಯು ಪ್ರಾರಂಭವಾಗುತ್ತದೆ ; ಅನಂತರ ಎಲ್ಲ ಕಡೆಗಳಲ್ಲಿಯೂ ಆತ್ಮ, ವೈಶ್ವಾನರ ಎಂಬ ಶಬ್ದಗಳನ್ನೇ ಪ್ರಯೋಗಿಸಿದೆ. ಬ್ರಹ್ಮ-ಶಬ್ದದ ಸ್ಥಾನದಲ್ಲಿ ಬಂದಿರುವ ವೈಶ್ವಾನರ-ಶಬ್ದವು ಪರಮಾತ್ಮನನ್ನೇ ಸೂಚಿಸುತ್ತದೆ. ಅದೂ ಅಲ್ಲದೆ ವೈಶ್ವಾನರಾತ್ಮನ ಜ್ಞಾನದಿಂದ ಉಂಟಾಗುವ ಫಲವೂ ಕೂಡ ಪರಬ್ರಹ್ಮನನ್ನೇ ಸೂಚಿಸುತ್ತದೆ.[4]

**ದ್ವೈ.**—ವೈಶ್ವಾನರ-ಶಬ್ದವು ಅಗ್ನಿ-ವಿಷ್ಣುಗಳಿಗೆ ಸಾಧಾರಣವಾಗಿದ್ದರೂ ಇಲ್ಲಿ ಆತ್ಮ-ಶಬ್ದವನ್ನು ವಿಶೇಷಣವಾಗಿ ಹೊಂದಿದೆ ; ಆತ್ಮ-ಶಬ್ದವು ವಿಷ್ಣುವನ್ನು ಸೂಚಿಸುವುದರಲ್ಲಿಯೇ ಪ್ರಸಿದ್ಧವಾಗಿರುವುದರಿಂದ ವೈಶ್ವಾನರನು ವಿಷ್ಣುವೇ.

## ಸ್ಮರ್ಯಮಾಣಮನುಮಾನಂ ಸ್ಯಾದಿತಿ ॥ ೨೫ ॥

೨೫. ಸ್ಮೃತಿಯಲ್ಲಿ ಹೇಳಿರುವುದು (ಇದಕ್ಕೆ) ಅನುಮಾನವಾಗಬಹುದಾದ್ದರಿಂದ (ವೈಶ್ವಾನರನು ಪರಮೇಶ್ವರನೇ).

'ಯಾವನಿಗೆ ಅಗ್ನಿಯು ಬಾಯೊ ದ್ಯುಲೋಕವು ತಲೆಯೊ ಆಕಾಶವು ನಾಭಿಯೊ ಭೂಮಿಯು ಕಾಲುಗಳೊ ಸೂರ್ಯನು ಕಣ್ಣೊ ದಿಕ್ಕುಗಳು ಕಿವಿಯೊ—ಅಂಥ ಲೋಕಾತ್ಮನಿಗೆ ನಮಸ್ಕಾರ'[5] ಎಂದು ಸ್ಮೃತಿಯು (ಶಾಂ. ಪ. ೪೭. ೬೯) ಹೇಳುತ್ತದೆ. ಇಲ್ಲಿ ಹೇಳಿರುವ ರೂಪವು ಮೂಲವಾಗಿರುವ ಛಾಂದೋಗ್ಯಶ್ರುತಿಯನ್ನು ಅನುಮಾನದ ಮೂಲಕ ತಿಳಿಸುವುದರಿಂದ ವೈಶ್ವಾನರಶಬ್ದವು ಪರಮೇಶ್ವರನನ್ನೇ ಸೂಚಿಸುತ್ತದೆ. ಈ ಸ್ಮೃತಿಯಲ್ಲಿ **ತಸ್ಮೈ ಲೋಕಾತ್ಮನೇ ನಮಃ** ಎಂಬ ಸ್ತುತಿಯಿದ್ದರೂ ಮೂಲವಾದ ವೇದವಾಕ್ಯವಿಲ್ಲದಿದ್ದರೆ ಈ ಸ್ತುತಿತ್ವವು ತನ್ನ ಅಂಥ ರೂಪದಿಂದ ಬರಲು ಸಾಧ್ಯವಾಗುತ್ತಿರಲಿಲ್ಲ.

---

1 ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ।

2 ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ।

3 ಕೋ ನ ಆತ್ಮಾ ಕಿಂ ಬ್ರಹ್ಮ ?

4 ಛಾಂ. ಉ. ೫. ೧೮. ೧ ಮತ್ತು ೫. ೨೪. ೩ ನೋಡಿ.

5 ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ ।
ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ ತಸ್ಮೈ ಲೋಕಾತ್ಮನೇ ನಮಃ ॥

ವಿ.—'ಶ್ರುತಿಯು ಹೀಗೆ ಸೂಚಿಸಿರುವುದು ಒಂದು ಅನುಮಾನವು' ಎಂಬುದು ಸೂತ್ರಾರ್ಥ.

ದ್ಯುಲೋಕದಿಂದ ಮೊದಲಾಗಿ ಪೃಥ್ವಿಯವರೆಗೆ ಎಲ್ಲವೂ ವೈಶ್ವಾನರನ ಅವಯವಗಳೆಂದು ಇಲ್ಲಿ (ಛಾಂ. ಉ. ೫. ೧೮. ೨) ಪ್ರಸಿದ್ಧವಾಗಿದೆ. ಇದೇ ರೂಪವು ಪರಮಪುರುಷನದೆಂದು ಶ್ರುತಿ-ಸ್ಮೃತಿಗಳು[1] ಹೇಳುತ್ತವೆ. ಸೂತ್ರದಲ್ಲಿರುವ ಇತಿ-ಶಬ್ದವು ಒಂದು ಪ್ರಕಾರವನ್ನು ಸೂಚಿಸುತ್ತದೆ; ಅವನು ಇಂಥ ರೂಪವುಳ್ಳವನೆಂದು ವಾಕ್ಯದಲ್ಲಿ ಗುರುತಿಸಿದಾಗ ವೈಶ್ವಾನರನು ಪರಮಾತ್ಮನೇ ಎಂಬುದಕ್ಕೆ ಅನುಮಾನವಾಗುತ್ತದೆ.

ದ್ವೈ.—'ನಾನು ವೈಶ್ವಾನರನಾಗಿ ಪ್ರಾಣಿಗಳ ಶರೀರವನ್ನು ಆಶ್ರಯಿಸಿದವನಾಗಿ'[2] (ಗೀತಾ ೧೫. ೧೪) ಎಂಬ ಸ್ಮೃತಿಯು ವೈಶ್ವಾನರ-ಶಬ್ದ-ವಾಚ್ಯನು ವಿಷ್ಣುವೇ ಎಂಬುದಕ್ಕೆ ಅನುಮಾಪಕವಾಗಿರುತ್ತದೆ.

**ಶಬ್ದಾದಿಭ್ಯೋಽಂತಃಪ್ರತಿಷ್ಠಾನಾಚ್ಚ ನೇತಿ ಚೇನ್ನ ತಥಾ ದೃಷ್ಟ್ಯುಪ-ದೇಶಾದಸಂಭವಾತ್ ಪುರುಷಮಪಿ ಚೈನಮಧೀಯತೇ || ೨೬ ||**

೨೬. ಶಬ್ದವೇ ಮೊದಲಾದುವುಗಳಿಂದಲೂ ಒಳಗೆ ಪ್ರತಿಷ್ಠಿತನಾಗಿರುವುದರಿಂದಲೂ (ಪರಮೇಶ್ವರನು) ಅಲ್ಲ ಎಂಬುದು ಸರಿಯಲ್ಲ; ಏಕೆಂದರೆ ಅಂಥ ದೃಷ್ಟಿಯನ್ನು ಉಪದೇಶಿಸಿರುತ್ತದೆ; (ದ್ಯುಲೋಕಾದಿಗಳು ಜಾಠರಾಗ್ನಿಗೆ ತಲೆ ಮೊದಲಾದುವುಗಳಾಗಿರುವುದು) ಅಸಂಭವವಾಗಿದೆ ಮತ್ತು (ವಾಜಸನೇಯಿಗಳು) ಇವನನ್ನು ಪುರುಷನೆಂದೂ ಪಠಿಸುತ್ತಾರೆ.

ವೈಶ್ವಾನರ-ಶಬ್ದವು ರೂಢಿಯಿಂದ ಪರಮೇಶ್ವರನಿಗೆ ಹೊಂದುವುದಿಲ್ಲವಾದುದರಿಂದಲೂ ಶ್ರುತಿಯು ವೈಶ್ವಾನರನಿಗೆ ಅಂತಃಪ್ರತಿಷ್ಠಾನವನ್ನು ಹೇಳಿರುವುದರಿಂದಲೂ[3] ವೈಶ್ವಾನರನ' ಜಾಠರಾಗ್ನಿಯೇ ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ: ಜಾಠರಾಗ್ನಿಯನ್ನು ತ್ಯಜಿಸದೆ ಇಂಥ ದೃಷ್ಟಿಯನ್ನು ಉಪದೇಶಿಸಿರುತ್ತದೆ; 'ಮನಸ್ಸನ್ನು ಬ್ರಹ್ಮವೆಂದು ಉಪಾಸಿಸಬೇಕು'[4] (ಛಾಂ. ಉ. ೩. ೧೮. ೧) ಮೊದಲಾದುವುಗಳ ಹಾಗೆ ಇಲ್ಲಿ ಜಾಠರ-ವೈಶ್ವಾನರಲ್ಲಿ ಪರಮೇಶ್ವರದೃಷ್ಟಿಯನ್ನೇ ಉಪದೇಶಿಸಿರುತ್ತದೆ. ಅಥವಾ 'ಮನೋಮಯನು, ಪ್ರಾಣಶರೀರನು, ಭಾರೂಪನು'[5] (ಛಾಂ. ಉ. ೩. ೧೪. ೨) ಮೊದಲಾದವುಗಳ ಹಾಗೆ ಜಾಠರ-

---

1 ಮುಂ. ಉ. ೨. ೧. ೪ ಮತ್ತು ಯಸ್ಯಾಗ್ನಿರಾಸ್ಯಮ್ ಇತ್ಯಾದಿ.

2 ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।

3 ಪುರುಷೇಽಂತಃಪ್ರತಿಷ್ಠಿತಂ ವೇದ (ಶ. ಬ್ರಾ. ೧೦. ೬. ೧. ೧೧).

4 ಮನೋ ಬ್ರಹ್ಮೇತ್ಯುಪಾಸೀತ ।

5 ಮನೋಮಯಃ ಪ್ರಾಣಶರೀರೋ ಭಾರೂಪಃ ।

ವೈಶ್ವಾನರ ಎಂಬ ಉಪಾಧಿಯುಳ್ಳ ಪರಮೇಶ್ವರನನ್ನೇ ಉಪಾಸಿಸಬೇಕೆಂದು ಹೇಳಿರುತ್ತದೆ.[1] ವಾಜಸನೇಯಿಗಳು ವೈಶ್ವಾನರನನ್ನು ಪುರುಷನೆಂದು ಕರೆಯುತ್ತಾರೆ;[2] ಪರಮೇಶ್ವರನು ಸರ್ವಾತ್ಮನಾಗಿರುವುದರಿಂದ ಅವನಿಗೆ ಪುರುಷತ್ವವೂ ಪುರುಷನಲ್ಲಿರುವುದೂ ಹೊಂದುತ್ತದೆ.

**ವಿ.**—ಸೂತ್ರದ ದೃಷ್ಟಿ-ಶಬ್ದಕ್ಕೆ ಉಪಾಸನೆ ಎಂದರ್ಥ. ತ್ರೈಲೋಕ್ಯಶರೀರನಾದ ಪರಬ್ರಹ್ಮನನ್ನು ಇತರ ವಸ್ತುಗಳಂತೆ ಅವನ ಶರೀರವಾಗಿರುವ ಜಾಠರಾಗ್ನಿಯಿಂದ ವಿಶಿಷ್ಟನಾಗಿರುವಂತೆ ಉಪಾಸಿಸಬೇಕು; ಏಕೆಂದರೆ ಅಗ್ನಿ-ಶಬ್ದವು ಜಾಠರಾಗ್ನಿಯನ್ನು ಸೂಚಿಸುವುದಲ್ಲದೆ ಜಾಠರಾಗ್ನಿ ವಿಶಿಷ್ಟನಾದ ಪರಮಾತ್ಮನನ್ನೂ ಸೂಚಿಸುತ್ತದೆ.[3] ಇದು ಹೇಗೆ ತಿಳಿದಿದೆಯೆಂದು ಪ್ರಶ್ನಿಸಿದರೆ ಕೇವಲ ಜಾಠರಾಗ್ನಿಗೆ ತ್ರೈಲೋಕ್ಯಶರೀರತ್ವವು ಅಸಂಭವವೆಂಬುದು ಉತ್ತರ. 'ನಾನು ಜಾಠರಾಗ್ನಿರೂಪದಿಂದ ಎಲ್ಲ ಪ್ರಾಣಿಗಳ ಶರೀರವನ್ನೂ ಆಶ್ರಯಿಸಿ. ..ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ' (ಗೀತಾ ೧೫. ೧೪) ಎಂದು ಭಗವಂತನು ಹೇಳಿರುತ್ತಾನೆ ಆದುದರಿಂದ ವೈಶ್ವಾನರನು ಪರಮಾತ್ಮನೇ

**ದ್ವೈ.**—**ಕೋ ನ ಆತ್ಮಾ ಕಿಂ ಬ್ರಹ್ಮ** (ಛಾಂ ಉ. ೫. ೧೧ ೧) ಎಂದು ಉಪಕ್ರಮದಲ್ಲಿ ಹೇಳಲ್ಪಟ್ಟ ಆತ್ಮತ್ವಾದಿ-ಗುಣಗಳು ಇತರರಿಗೆ ಹೊಂದುವುದಿಲ್ಲ. ಆದುದರಿಂದ ವೈಶ್ವಾನರನು ವಿಷ್ಣುವೇ

**ಅತ ಏವ ನ ದೇವತಾ ಭೂತಂ ಚ ॥ ೨೭ ॥**

೨೭. ಅದೇ ಕಾರಣದಿಂದಲೇ (ವೈಶ್ವಾನರನು) ಅಗ್ನಿದೇವತೆಯೂ ಅಲ್ಲ, ಭೂತಾಗ್ನಿಯೂ ಅಲ್ಲ.

ವೈಶ್ವಾನರನು ಜಾಠರಾಗ್ನಿಯಲ್ಲ ಎಂದು ಹಿಂದೆ ಹೇಳಿದ್ದಾಯಿತು; ಹೀಗೆಯೇ-ಔಷ್ಣ್ಯ-ಪ್ರಕಾಶ-ಸ್ವರೂಪವಾಗಿರುವ ಭೂತಾಗ್ನಿಗಾಗಲಿ ಐಶ್ವರ್ಯಯೋಗವಿರುವ ಅಗ್ನಿದೇವತೆಗಾಗಲಿ ದ್ಯುಲೋಕವು ತಲೆಯೇ ಮೊದಲಾದುದು ಎಂಬ ಕಲ್ಪನೆಯು ಹೊಂದುವುದಿಲ್ಲ. ಆದುದರಿಂದ ವೈಶ್ವಾನರನು ಪರಮೇಶ್ವರನೇ.

**ವಿ.**—ವೈಶ್ವಾನರನು ತ್ರೈಲೋಕ್ಯಶರೀರನೆಂದು ಹೇಳಿರುವುದರಿಂದಲೂ ನಿರುಪಾಧಿಕ-ಪುರುಷ-ಶಬ್ದದಿಂದ ನಿರ್ದಿಷ್ಟನಾಗಿರುವುದರಿಂದಲೂ ಅವನು ಅಗ್ನಿದೇವತೆಯೂ ಅಲ್ಲ, ಮೂರನೆಯ ಭೂತವಾದ ತೇಜಸ್ಸೂ ಅಲ್ಲ.

---

[1] ಮೊದಲನೆಯ ವ್ಯಾಖ್ಯಾನದ ಪ್ರಕಾರ ಜಾಠರಾಗ್ನಿಯು ಪರಮಾತ್ಮನಿಗೆ ಪ್ರತೀಕವಾದರೆ ಎರಡನೆಯದರ ಪ್ರಕಾರ ಅದು ಪರಮಾತ್ಮನಿಗೆ ಉಪಾಧಿಯಾಗುತ್ತದೆ.

[2] ಸ ಏಷೋಽಗ್ನಿರ್ವೈಶ್ವಾನರೋ, ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽಂತಃಪ್ರತಿಷ್ಠಿತಂ ವೇದ (ಶ. ಬ್ರಾ. ೧೦. ೬. ೧. ೧೧).

[3] ಅಗ್ನಿಶಬ್ದಾದಿಭಿರ್ಹಿ ನ ಕೇವಲೋ ಜಾಠರಃ ಪ್ರತಿಪಾದ್ಯತೇ, ಅಪಿ ತು ಜಾಠರಾಗ್ನಿವಿಶಿಷ್ಟಃ ಪರಮಾತ್ಮಾ (ಶ್ರೀಭಾಷ್ಯ).

ದ್ವೈ.—ಅಗ್ನಿ-ವೈಶ್ವಾನರಾದಿ-ಶಬ್ದಗಳು ತೇಜಸ್ಸು ಅಗ್ನಿದೇವತೆ ಎಂಬ ಅರ್ಥಗಳಲ್ಲಿ ಪ್ರಸಿದ್ಧವಾಗಿದ್ದರೂ ಮೇಲೆ ಹೇಳಿದ ಕಾರಣಗಳಿಂದ ವೈಶ್ವಾನರ-ಶಬ್ದವು ಇವೆರಡನ್ನೂ ಸೂಚಿಸುವುದಿಲ್ಲ

**ಸಾಕ್ಷಾದಪ್ಯವಿರೋಧಂ ಜೈಮಿನಿಃ ॥ ೨೮ ॥**

೨೮. ಸಾಕ್ಷಾತ್ತಾಗಿಯೇ (ಪರಮೇಶ್ವರೋಪಾಸನೆಯನ್ನು ಗ್ರಹಿಸಿದರೂ) ಯಾವ ವಿರೋಧವೂ ಇಲ್ಲವೆಂದು ಜೈಮಿನಿಯು (ಅಭಿಪ್ರಾಯಪಡು ತ್ತಾನೆ.)

ಹಿಂದೆ ಹೇಳಿದಂತೆ ಪ್ರತೀಕ, ಉಪಾಧಿ—ಇವುಗಳ ಕಲ್ಪನೆಗಳನ್ನು ಬಿಟ್ಟು ಸಾಕ್ಷಾತ್ತಾಗಿ ಪರಮೇಶ್ವರನ ಉಪಾಸನೆಯನ್ನು ಮಾಡಿದರೂ ಯಾವ ವಿರೋಧವೂ ಇಲ್ಲವೆಂಬುದು ಜೈಮಿನಿಯ ಅಭಿಪ್ರಾಯವು. ಪ್ರಕರಣದ ವಶದಿಂದ ಇಲ್ಲಿ ಪರಮಾತ್ಮನನ್ನೇ ಗ್ರಹಿಸಬೇಕೆಂದು ನಿರ್ಧರಿಸಿದಮೇಲೆ ವೈಶ್ವಾನರ-ಶಬ್ದವು ಪರಮಾತ್ಮನನ್ನು ಹೇಗಾದರೂ ಸೂಚಿಸಬೇಕಾಗುತ್ತದೆ. ವೈಶ್ವಾನರ-ಶಬ್ದಕ್ಕೆ ಮೂರು ಅರ್ಥಗಳಿವೆ: (೧) ವಿಶ್ವಕ್ಕೂ ಜೀವನಿಗೂ ಆತ್ಮನಾಗಿರುವವನು; (೨) ವಿಶ್ವಕ್ಕೆಲ್ಲ (ಎಂದರೆ ಕಾರ್ಯಕ್ಕೆಲ್ಲ) ನರನು (ಎಂದರೆ ಕರ್ತೃವು) ಆಗಿರುವವನು, (೩) ಸರ್ವಜೀವರನ್ನೂ ತನ್ನ ವಶದಲ್ಲಿ ಇಟ್ಟುಕೊಂಡಿರುವವನು.[1] ವೈಶ್ವಾನರ ಎಂಬ ರೂಪಕ್ಕೂ ವಿಶ್ವಾನರ ಎಂಬ ರೂಪಕ್ಕೂ ಅರ್ಥದಲ್ಲಿ ಯಾವ ಭೇದವೂ ಇಲ್ಲ; ಸ್ವಾರ್ಥದಲ್ಲಿ ತದ್ಧಿತ-ಪ್ರತ್ಯಯವು ಬಂದಿದೆ

ವಿ.—ವೈಶ್ವಾನರ-ಶಬ್ದದಂತೆ ಅಗ್ನಿಶಬ್ದವೂ ಪರಮಾತ್ಮನನ್ನೇ ಸಾಕ್ಷಾತ್ತಾಗಿ ಸೂಚಿಸುತ್ತದೆಂದು ಜೈಮಿನಿಯು ಹೇಳುತ್ತಾನೆ; ಎಂದರೆ, ವೈಶ್ವಾನರ-ಶಬ್ದವು ಸಾಧಾರಣವಾಗಿದ್ದರೂ ಪರಮಾತ್ಮನ ಅಸಾಧಾರಣ-ಧರ್ಮಗಳಿಂದ ವಿಶೇಷಿತವಾಗಿರುವಾಗ ಎಲ್ಲ ನರರನ್ನೂ ಆಳುವನೆಂಬ ಗುಣದಿಂದ ಕೂಡಿರುವ ಪರಮಾತ್ಮನನ್ನೇ ಸೂಚಿಸುವಂತೆ ಅಗ್ನಿಶಬ್ದವೂ ಕೂಡ ಪರಮಾತ್ಮನ ಅಸಾಧಾರಣಗುಣಗಳಿಂದ ವಿಶೇಷಿಸವಾಗಿರುವಾಗ ಪರಮಾತ್ಮನನ್ನೇ ಸೂಚಿಸುತ್ತದೆ.

ದ್ವೈ.—ಮುಖ್ಯವೃತ್ತಿಯಿಂದ ಬ್ರಹ್ಮನನ್ನೇ ಸೂಚಿಸುವ ಅಗ್ನಿಯೇ ಮೊದಲಾದ ಶಬ್ದಗಳು ವ್ಯವಹಾರಕ್ಕೋಸ್ಕರ ಅಥವಾ ಮುಖ್ಯವೃತ್ತಿಯ ಅಜ್ಞಾನದಿಂದ ಇತರ ಲೌಕಿಕ ವಸ್ತುಗಳನ್ನು ಸೂಚಿಸುತ್ತವೆ. ಹೀಗೆ ಶಬ್ದಗಳು ಎರಡು ವಿಭಿನ್ನವಸ್ತುಗಳನ್ನು ಸೂಚಿಸುವುದರಲ್ಲಿ ಯಾವ ವಿರೋಧವೂ ಇಲ್ಲವೆಂದು ಜೈಮಿನಿಯು ಹೇಳುತ್ತಾನೆ.

---

[1] ವಿಶ್ವಶ್ಚಾಯಂ ನರಶ್ಚೇತಿ, ವಿಶ್ವೇಷಾಂ ವಾಽಯಂ ನರಃ, ವಿಶ್ವೇ ವಾ ನರಾ ಅಸ್ಯೇತಿ। (ಸೂ. ಭಾ.)

## ಅಭಿವ್ಯಕ್ತೇರಿತ್ಯಾಶ್ಮರಥ್ಯಃ || ೨೯ ||

೨೯. ಅಭಿವ್ಯಕ್ತಿಯ ನಿಮಿತ್ತದಿಂದ (ಪರಮೇಶ್ವರನು ಪ್ರಾದೇಶಮಾತ್ರನು ಆಗಬಹುದು) ಎಂದು ಆಶ್ಮರಥ್ಯನು (ಅಭಿಪ್ರಾಯಪಡುತ್ತಾನೆ).

ವೈಶ್ವಾನರನು ಪರಮೇಶ್ವರನೆಂದು ಗ್ರಹಿಸಿದರೆ ಅವನು ಪ್ರಾದೇಶಮಾತ್ರನೆಂದು ಶ್ರುತಿಯು[1] (ಛಾಂ. ಉ. ೫. ೧೮. ೧) ಹೇಗೆ ಹೇಳುತ್ತದೆ ?—ಎಂಬುದಕ್ಕೆ ಈ ಸೂತ್ರವು ಉತ್ತರವಾಗಿದೆ. ಪರಮೇಶ್ವರನು ಪರಮಾಣವನ್ನು ಅತಿಕ್ರಮಿಸಿದ್ದರೂ ಉಪಾಸಕನಿಗೋಸ್ಕರ ಸಣ್ಣ ಪರಿಮಾಣದಿಂದ ಹೃದಯವೇ ಮೊದಲಾದ ಉಪಲಬ್ಧಿಸ್ಥಾನಗಳಲ್ಲಿ ಅಭಿವ್ಯಕ್ತನಾಗುತ್ತಾನೆ. ಇದು ಆಶ್ಮರಥ್ಯನ ಅಭಿಪ್ರಾಯ.

ವಿ.—ಉಪಾಸಕನ ಅಭಿವ್ಯಕ್ತಿಗಾಗಿ ಎಂದರೆ ಬುದ್ಧಿಯ ಸೌಕರ್ಯಕ್ಕಾಗಿ ಅಪರಿಚ್ಛಿನ್ನನಾದ ಪರಮಾತ್ಮನಿಗೆ ದ್ಯುಲೋಕದಿಂದ ಹಿಡಿದು ಪೃಥ್ವಿಯವರೆಗೆ ಅವಯವಗಳನ್ನು ಕಲ್ಪಿಸಿ ಅಂಥ ಪರಿಚ್ಛಿನ್ನರೂಪವನ್ನು ಹೇಳಿದೆ.

ದ್ವೈ.—'ಅಗ್ನ್ಯಾದಿಗಳ ಮೂಲಕ ಪರಬ್ರಹ್ಮನು ಅಭಿವ್ಯಕ್ತನಾಗುವುದರಿಂದ ಆಶ್ಮರಥ್ಯನು ಹೀಗೆ ಅಭಿಪ್ರಾಯಪಡುತ್ತಾನೆ' ಎಂಬುದು ಸೂತ್ರಾರ್ಥ.

ಅನೇಕಸೂಕ್ತಗಳಲ್ಲಿ ಅಗ್ನಿಯೇ ಮೊದಲಾದವರು ವಾಚ್ಯರಾಗದೆ ಬ್ರಹ್ಮನೇ ವಾಚ್ಯನಾಗಿದ್ದರೂ ಅಗ್ನ್ಯಾದಿಗಳ ಮೂಲಕ ವಿಷ್ಣುವು ಅಭಿವ್ಯಕ್ತನಾಗುವುದರಿಂದ ಅಗ್ನಿಸೂಕ್ತ, ವಾಯುಸೂಕ್ತ ಎಂಬ ಭೇದವಿದೆ.

## ಅನುಸ್ಮೃತೇರ್ಬಾದರಿಃ || ೩೦ ||

೩೦. ಅನುಸ್ಮೃತಿಯಿಂದ (ಪರಮೇಶ್ವರನು ಪ್ರಾದೇಶಮಾತ್ರನು) ಎಂದು ಬಾದರಿಯು (ಅಭಿಪ್ರಾಯಪಡುತ್ತಾನೆ).

ಪ್ರಾದೇಶಮಾತ್ರಪರಿಮಾಣವುಳ್ಳ[2] ಹೃದಯದಲ್ಲಿರುವ ಮನಸ್ಸಿನಿಂದ ಪರಮೇಶ್ವರನನ್ನು ಅನುಸ್ಮರಣಮಾಡುವುದರಿಂದ ಅವನು ಪ್ರಾದೇಶಮಾತ್ರನು ಎನಿಸಿಕೊಳ್ಳುತ್ತಾನೆ.[3]

---

[1] 'ಆದರೆ ಯಾವನು ಪ್ರಾದೇಶಮಾತ್ರನೂ ಅಭಿಮಾನಿಯೂ ಆದ ಈ ವೈಶ್ವಾನರಾತ್ಮನನ್ನು ಹೀಗೆ ಉಪಾಸಿಸುವನೋ' ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ।

[2] ಗೇಣನಷ್ಟು ಪರಿಮಾಣವುಳ್ಳ.

[3] ಪ್ರಾದೇಶಮಾತ್ರಹೃದಯಪ್ರತಿಷ್ಠೇನ ವಾಽಯಂ ಮನಸಾಽನುಸ್ಮರ್ಯತೇ ತೇನ ಪ್ರಾದೇಶಮಾತ್ರ ಇತ್ಯುಚ್ಯತೇ (ಸೂ. ಭಾ.).

ಅಥವಾ ಪರಮೇಶ್ವರನು ಪ್ರಾದೇಶಮಾತ್ರನಲ್ಲವಾದರೂ ಪ್ರಾದೇಶ-ಮಾತ್ರ-ಶ್ರುತಿಯು ಸಾರ್ಥಕ್ಯಕ್ಕಾಗಿ ಅವನನ್ನು ಪ್ರಾದೇಶಮಾತ್ರನೆಂದು ಅನುಸ್ಮರಣೆ ಮಾಡಬೇಕೆಂಬ ಅರ್ಥವನ್ನೂ ಮಾಡಬಹುದು ಇದು ಬಾದರಿಯ ಅಭಿಪ್ರಾಯ

ವಿ.—ಪರಬ್ರಹ್ಮನನ್ನು ಪುರುಷವಿಧನೆಂದು ಕಲ್ಪಿಸಿರುವುದು ಕೂಡ ಉಪಾಸನೆಗಾಗಿಯೇ

ದ್ವೈ.—ಅನೇಕ ಸೂಕ್ತಗಳಲ್ಲಿ ಉಕ್ತರಾದ ಅಗ್ನಿಯೇ ಮೊದಲಾದವರಲ್ಲಿ ವಿಷ್ಣುವನ್ನೇ ಅನುಸ್ಮರಣೆಮಾಡಬೇಕಾದುದರಿಂದ ಸೂಕ್ತಗಳನ್ನು ಬೇರೆಬೇರೆಯಾಗಿ ಹೇಳಿದೆ

**ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ॥ ೩೧ ॥**

೩೧. ಸಂಪತ್ತಿಯಿಂದ[1] (ಪರಮೇಶ್ವರನು ಪ್ರಾದೇಶಮಾತ್ರನು) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ), ಏಕೆಂದರೆ ಹಾಗೆಯೇ (ಶ್ರುತಿಯು) ಹೇಳುತ್ತದೆ

ಶತಪಥಬ್ರಾಹ್ಮಣದಲ್ಲಿ[2] ಮತ್ತು ಛಾಂದೋಗ್ಯೋಪನಿಷತ್ತಿನಲ್ಲಿ[3] ಹೇಳಿರುವ ವೈಶ್ವಾನರನ ವಿವರಣೆಯು ಒಂದೇ ಆಗಿರುತ್ತದೆ ; ಈ ಎರಡು ಶ್ರುತಿಗಳೂ ಅವನು ಪ್ರಾದೇಶಮಾತ್ರನೆಂದು ಹೇಳುತ್ತವೆ ಪ್ರಾದೇಶಮಾತ್ರ-ಶ್ರುತಿಯು ಸಂಪತ್ತಿಯನ್ನು ಮಾಡಲು ಬಂದಿರುವುದೆಂಬುದು ಯುಕ್ತತರವೆಂದು ಜೈಮಿನಿಯು ಹೇಳುತ್ತಾನೆ

ವಿ.—'ಪ್ರಾಣಾಹುತಿಯನ್ನು ಅಗ್ನಿಹೋತ್ರವನ್ನಾಗಿ ಮಾಡುವುದಕ್ಕೆ—ಎಂದು ಜೈಮಿನಿಯು ಹೇಳುತ್ತಾನೆ , ಶ್ರುತಿಯು ಇದನ್ನೇ ಹೇಳುತ್ತದೆ' ಎಂಬುದು ಸೂತ್ರಾರ್ಥ

ಅಗ್ನಿಹೋತ್ರದಲ್ಲಿ ಅಗ್ನಿ, ವೇದಿ—ಇವೇ ಮೊದಲಾದವು ಮುಖ್ಯವಾದ ದ್ರವ್ಯಗಳು ಆದುದರಿಂದ ಉಪಾಸಕನು ಪ್ರತಿದಿನವೂ ಮಾಡುವ ಪ್ರಾಣಾಹುತಿಯನ್ನು ಅಗ್ನಿಹೋತ್ರದೊಂದಿಗೆ ಸಂಪಾದಿಸಲು, ಅವನು 'ಎದೆಯೇ ವೇದಿ, ರೋಮಗಳೇ ಬರ್ಹಿ' (ಛಾಂ ಉ

---

[1] ಕಲ್ಪನೆಯ ಮೂಲಕ ಐಕ್ಯವನ್ನು ಹೇಳುವುದಕ್ಕೆ ಸಂಪತ್ತಿ ಎಂದು ಹೆಸರು- ಇಲ್ಲಿ ದ್ಯುಲೋಕವೇ ಮೊದಲಾಗಿ ಪೃಥ್ವಿಯ ವರೆಗೆ ಇರುವ ವೈಶ್ವಾನರನ ಅವಯವಗಳಿಗೆ ತಲೆಯೇ ಮೊದಲಾಗಿ ಗಲ್ಲದ ವರೆಗಿನ ಮನುಷ್ಯನ ಅವಯವಗಳೊಂದಿಗೆ ಐಕ್ಯವನ್ನು ಹೇಳಿ ಪರಮೇಶ್ವರನಿಗೆ ಪ್ರಾದೇಶಮಾತ್ರಸಂಪತ್ತಿಯನ್ನು ಹೇಳಿದೆ ಪ್ರದೇಶಗಳಿಂದ ವಿಶಿಷ್ಟನಾಗಿರುವವನಿಗೆ ಪ್ರಾದೇಶಮಾತ್ರನೆಂದು ಹೆಸರು

[2] 'ಪ್ರಾದೇಶಮಾತ್ರನಾಗಿರುವಂತೆ ಪರಮೇಶ್ವರನನ್ನು ದೇವತೆಗಳು ಚೆನ್ನಾಗಿ ಅರಿತುಕೊಂಡು ಅವನನ್ನು ಹೊಂದಿದರು , ಹಾಗೆಯೇ ಪ್ರಾದೇಶಮಾತ್ರನನ್ನಾಗಿ ಸಂಪಾದಿಸುವಂತೆ ನಿಮಗೆ ಹೇಳುತ್ತೇನೆ' ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಸ್ತಥಾ ನು ವ ಏತಾನ್ ವಕ್ಷ್ಯಾಮಿ ಯಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮಿ (೧೦. ೬, ೧, ೧೦,)

[3] ೫. ೧೧-೧೮.

೫. ೧೮. ೨) ಎಂದು ಕಲ್ಪಿಸಿಕೊಳ್ಳಬೇಕೆಂದು ಹೇಳಿದೆ. 'ಹೀಗೆ ವಿದ್ವಾಂಸನು ಅಗ್ನಿಹೋತ್ರವನ್ನು ಮಾಡುತ್ತಾನೆ' (ಛಾಂ. ಉ ೫. ೨೪. ೩) ಎಂಬಲ್ಲಿ ಪ್ರಾಣಾಹುತಿಯ ವಿಧಿಯು ಸ್ಪಷ್ಟವಾಗಿದೆ. ಪರಮಾತ್ಮೋಪಾಸನೆಯ ಫಲವನ್ನೂ ಪ್ರಾಣಾಹುತಿಯಿಂದ ಅಗ್ನಿಹೋತ್ರದೊಡನೆ ಮಾಡುವ ಸಂಪತ್ತಿಯ ಫಲವನ್ನೂ ಶ್ರುತಿಯು ಮುಂದೆ (ಛಾಂ ಉ. ೫. ೨೪. ೧ ೩) ಹೇಳುತ್ತದೆ. ಆದುದರಿಂದ ವೈಶ್ವಾನರನು ಪರಮಾತ್ಮನೇ

ದ್ವೈತ.—'ಉಪಾಸಕರು ಅಗ್ನ್ಯಾದಿಗಳನ್ನು ಹೊಂದುವರೆಂಬ ಕಾರಣದಿಂದ ಜೈಮಿನಿಯು ಸೂಕ್ತಗಳ ನಿಯಮವನ್ನು ಹೇಳಿರುತ್ತಾನೆ; ಏಕೆಂದರೆ ಹೀಗೆ ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ

ಶಬ್ದಗಳು ಸಾಕ್ಷಾತ್ತಾಗಿ ಪರಬ್ರಹ್ಮನನ್ನು ಸೂಚಿಸುವುದರಲ್ಲಿ ವಿರೋಧವನ್ನು ನೋಡದ ಜೈಮಿನಿಯು ಉಪಾಸಕರಿಗೆ ಅಗ್ನ್ಯಾದಿ-ಸೂಕ್ತಗಳಿಂದ ಅಗ್ನ್ಯಾದಿಗಳ ಪ್ರಾಪ್ತಿಯಾಗುವುದೆಂಬ ಕಾರಣದಿಂದ ಸೂಕ್ತಗಳ ನಿಯಮವಾಗಿದೆಯೆಂದು ಅಭಿಪ್ರಾಯಪಡುತ್ತಾನೆ. 'ಉಪಾಸಕನು ಅವನನ್ನು ಹೇಗೆ ಉಪಾಸಿಸುವನೊ ಹಾಗೆಯೇ ಅವನನ್ನು ಹೊಂದುತ್ತಾನೆ'[1] ಎಂಬ ಶ್ರುತಿಯು ಜೈಮಿನಿಯ ಅಭಿಪ್ರಾಯಕ್ಕೆ ಬೆಂಬಲಕೊಡುತ್ತದೆ.

## ಆಮನಂತಿ ಚೈನಮಸ್ಮಿನ್ ॥ ೩೨ ॥

**೩೨.** ಮತ್ತು (ಜಾಬಾಲರು) ಇವನನ್ನು ಇದರಲ್ಲಿ (ಎಂದರೆ ನೆತ್ತಿ, ಗಲ್ಲ ಇವುಗಳ ನಡುವೆ ಇರುವ ಗೇಣಿನಷ್ಟು ಪ್ರದೇಶದಲ್ಲಿ) ಹೇಳುತ್ತಾರೆ.

ನೆತ್ತಿ ಮತ್ತು ಗಲ್ಲ—ಇವುಗಳ ನಡುವೆ ಪರಮೇಶ್ವರನನ್ನು ಉಪಾಸಿಸಬೇಕೆಂದು **ಜಾಬಾಲರು** ಹೇಳುತ್ತಾರೆ: 'ಅನಂತನೂ ಅವ್ಯಕ್ತನೂ ಆದ ಆತ್ಮನು ಅವಿಮುಕ್ತನಲ್ಲಿ (ಎಂದರೆ ಜೀವನಲ್ಲಿ) ಇರುತ್ತಾನೆ. ಯಾವುದರಲ್ಲಿ ಆ ಅವಿಮುಕ್ತನು ಇರುತ್ತಾನೆ? ವರಣಾ, ನಾಸೀ—ಇವುಗಳ ನಡುವೆ ಇರುತ್ತಾನೆ. ವರಣಾ, ನಾಸೀ ಎಂದರೆ ಯಾವುವು? ...ಇವನ ಸ್ಥಾನವು ಯಾವುದು? ಹುಬ್ಬುಗಳೂ ನಾಸಿಕವೂ ಸಂಧಿಸುವ ಸ್ಥಾನ; ಇದೇ ದ್ಯುಲೋಕವೂ ಇನ್ನೊಂದೂ ಸಂಧಿಸುವ ಸ್ಥಾನ.'[2] ಆದುದರಿಂದ ಪರಮೇಶ್ವರನು ಪ್ರಾದೇಶಮಾತ್ರನು ಎಂಬ ಶ್ರುತಿಯು ಯುಕ್ತವಾಗಿದೆ.

ಅಭಿವಿಮಾನ ಎಂಬ ಶ್ರುತಿಗೆ ಪ್ರತ್ಯಗಾತ್ಮನೆಂಬುದು ಅಭಿಪ್ರಾಯ. ಎಲ್ಲ ಪ್ರಾಣಿಗಳೂ ಇವನನ್ನು ಪ್ರತ್ಯಗಾತ್ಮನೆಂದು ಅರಿಯುವುದರಿಂದ ಅಭಿವಿಮಾನನು; ಅಥವಾ

---

[1] ತಂ ಯಥಾ ಯಥೋಪಾಸತೇ ತದೇವ ಭವತೀತಿ ಹಿ ದರ್ಶಯತಿ ।

[2] ಯ ಏಷೋಽನಂತೋಽವ್ಯಕ್ತ ಆತ್ಮಾ ಸೋಽವಿಮುಕ್ತೇ ಪ್ರತಿಷ್ಠಿತ ಇತಿ । ಸೋಽವಿಮುಕ್ತಃ ಕಸ್ಮಿನ್ ಪ್ರತಿಷ್ಠಿತ ಇತಿ । ವರಣಾಯಾಂ ನಾಸ್ಯಾಂ ಚ ಮಧ್ಯೇ ಪ್ರತಿಷ್ಠಿತ ಇತಿ । ಕಾ ವೈ ವರಣಾ ಕಾ ಚ ನಾಸೀತಿ ।...ಕತಮಚ್ಚಾಸ್ಯ ಸ್ಥಾನಂ ಭವತೀತಿ । ಭ್ರುವೋರ್ಘ್ರಾಣಸ್ಯ ಚ ಯಃ ಸಂಧಿಃ ಸ ಏಷ ದ್ಯುಲೋಕಸ್ಯ ಪರಸ್ಯ ಚ ಸಂಧಿರ್ಭವತೀತಿ ॥

ಪ್ರತ್ಯಗಾತ್ಮನಾಗಿರುವುದರಿಂದ ಅಭಿಗತನು (ಎಂದರೆ ಅತ್ಯಂತ ಸಮೀಪದಲ್ಲಿರುವವನು); ಪರಿಮಾಣವಿಲ್ಲದಿರುವುದರಿಂದ ವಿಮಾನನು ; ಅಥವಾ ಜಗತ್ಕಾರಣನಾಗಿ ಎಲ್ಲರನ್ನೂ ಆಳೆಯುವುದರಿಂದ ಅಭಿವಿಮಾನನು [1]

ವಿ.—'ಈ ವೈಶ್ವಾನರನು ಉಪಾಸಕನ ಶರೀರದಲ್ಲಿರುವನೆಂದು ಹೇಳುತ್ತಾರೆ' ಎಂಬುದು ಸೂತ್ರಾರ್ಥ

ಈ ವೈಶ್ವಾನರ-ಪರಮಪುರುಷನನ್ನು ಪ್ರಾಣಾಗ್ನಿಹೋತ್ರದ ಆರಾಧನೆಗಾಗಿ ಶರೀರದಲ್ಲಿರುವನೆಂದು ಉಪಾಸಿಸಬೇಕೆಂದು ಹೇಳಿದೆ ಇದಕ್ಕಾಗಿ ಉಪಾಸಕನ ತಲೆ ಕಣ್ಣುಗಳು ಹೃದಯ ಪಾದಗಳು—ಇವೇ ಮೊದಲಾದುವನ್ನು ಪರಮಾತ್ಮನ ಅವಯವಗಳಾದ ದ್ಯುಲೋಕ ಮೊದಲಾದುವುಗಳನ್ನಾಗಿ ಉಪಾಸಿಸಬೇಕೆಂದು ಹೇಳಿದೆ [2] ಆದುದರಿಂದ ಪರಮಾತ್ಮನಾದ ಪುರುಷೋತ್ತಮನೇ ವೈಶ್ವಾನರನೆಂಬುದು ಸಿದ್ಧವಾಗಿದೆ.

ದ್ವೈ.—'ಅವನು (ಅಗ್ನ್ಯಾದಿಗಳಲ್ಲಿ) ಇರುವನೆಂದು ಶ್ರುತಿಗಳು ಹೇಳುತ್ತವೆ' ಎಂಬುದು ಸೂತ್ರಾರ್ಥ

'ಯಾವನು ಅಗ್ನಿಯಲ್ಲಿ ಇರುವನೊ'[3] (ಬೃ. ಉ ೩. ೭. ೫) ಇವೇ ಮೊದಲಾದ ಶ್ರುತಿಗಳು ವಿಷ್ಣುವು ಅಗ್ನ್ಯಾದಿಗಳಲ್ಲಿ ಇರುವನೆಂದು ಹೇಳುತ್ತವೆ. ಆದುದರಿಂದ ಅಗ್ನಿಯ ಮೂಲಕವೂ ಉಪಾಸಕರು ವಿಷ್ಣುವನ್ನೇ ಹೊಂದುತ್ತಾರೆ.

---

[1] ಪ್ರತ್ಯಗಾತ್ಮತಯಾ ಸರ್ವೈಃ ಪ್ರಾಣಿಭಿರಭಿವಿಮೀಯತ ಇತ್ಯಭಿವಿಮಾನಃ । ಅಭಿಗತೋಽಯಂ ಪ್ರತ್ಯಗಾತ್ಮತ್ವಾದ್ ವಿಮಾನಶ್ಚ ಮಾನವಿಯೋಗಾದಿತ್ಯಭಿವಿಮಾನಃ । ಅಭಿವಿಮಿಮೀತೇ ವಾ ಸರ್ವಂ ಜಗತ್ ಕಾರಣತ್ವಾದಿತ್ಯಭಿವಿಮಾನಃ (ಸೂ. ಭಾ.).

[2] ಛಾಂ. ಉ. ೫. ೧೮. ೨ ನೋಡಿ,

[3] ಯೋಽಗ್ನೌ ತಿಷ್ಠನ್ ।

## ಮೂರನೆಯ ಪಾದ

## ೧. ದ್ಯುಭ್ವಾದ್ಯಧಿಕರಣ

(ಸೂ. ೧–೭)

### ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ॥ ೧ ॥

೧. ದ್ಯುಲೋಕ ಭೂಮಿ ಮೊದಲಾದುವುಗಳಿಗೆ ಆಶ್ರಯವಾಗಿರುವುದು (ಬ್ರಹ್ಮವೇ); ಏಕೆಂದರೆ ಸ್ವ-ಶಬ್ದವಿದೆ.

'ದ್ಯುಲೋಕ, ಪೃಥ್ವಿ, ಅಂತರಿಕ್ಷ, ಎಲ್ಲ ಪ್ರಾಣಿಗಳ ಸಹಿತ ಮನಸ್ಸು—ಇವೆಲ್ಲವೂ ಯಾವನಲ್ಲಿ ಸಮರ್ಪಿತವಾಗಿರುವುವೊ ಆ ಆತ್ಮನೊಬ್ಬನನ್ನೇ ತಿಳಿದುಕೊಳ್ಳಿರಿ, ಬೇರೆ ಮಾತುಗಳನ್ನು ಬಿಡಿರಿ; ಇದು ಅಮೃತಕ್ಕೆ ಸೇತುವೆ'[1] (ಮುಂ. ಉ. ೨. ೨. ೫) ಎಂಬುದು ವಿಷಯವಾಕ್ಯ. ಇಲ್ಲಿ ದ್ಯುಲೋಕಾದಿಗಳಿಗೆ ಆಶ್ರಯವೆಂದು ಹೇಳಿರುವುದು ಪರಬ್ರಹ್ಮವೊ ಅಥವಾ ಬೇರೊಂದು ವಸ್ತುವೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—'ಇದು ಅಮೃತತ್ವಕ್ಕೆ ಸೇತುವೆ' ಎಂದು ಶ್ರುತಿಯು ಹೇಳುವುದರಿಂದ ಈ ಆಶ್ರಯವು ಬೇರೊಂದು ವಸ್ತುವಾಗಿರಬೇಕು; ಏಕೆಂದರೆ ಸೇತುವೆಗೆ ಇನ್ನೊಂದು ದಡವಿರುವುದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆದರೆ ಪರಬ್ರಹ್ಮದ ಆಚೆಗೆ ಮತ್ತೊಂದು ದಡವಿದೆಯೆಂದು ಹೇಳಲಾಗುವುದಿಲ್ಲ.[2] ಇನ್ನು ಬ್ರಹ್ಮಕ್ಕಿಂತ ಭಿನ್ನವಾದ ಮತ್ತೊಂದು ವಸ್ತುವನ್ನಿಟ್ಟುಕೊಳ್ಳುವುದಾದರೆ ಸ್ಮೃತಿ-ಪ್ರಸಿದ್ಧವಾದ ಪ್ರಧಾನವನ್ನು ಗ್ರಹಿಸಬೇಕು; ಏಕೆಂದರೆ ಅದು ಎಲ್ಲಕ್ಕೂ ಕಾರಣವಾಗಿರುವುದರಿಂದ ಆಶ್ರಯವಾಗಬಹುದು. ಅಥವಾ ಶ್ರುತಿಪ್ರಸಿದ್ಧವಾದ[3] ಎಲ್ಲವನ್ನೂ ಎತ್ತಿಹಿಡಿದಿರುವ ವಾಯುವೂ ಆಗಬಹುದು. ಅಥವಾ ಜೀವನೂ ಆಗಬಹುದು; ಏಕೆಂದರೆ ಭೋಕ್ತೃವಾಗಿರುವುದರಿಂದ ಅವನು ಭೋಗ್ಯ ಪ್ರಪಂಚಕ್ಕೆ ಆಶ್ರಯನಾಗಬಹುದು.

---

[1] ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ। ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥

[2] 'ಅನಂತವೂ ಅಪಾರವೂ' ಅನಂತಮಪಾರಮ್ (ಬೃ. ಉ. ೨. ೪. ೧೨).

[3] 'ಗೌತಮ, ವಾಯುವೇ ಆ ಸೂತ್ರವು. ವಾಯುವೆಂಬ ಆ ಸೂತ್ರದಿಂದಲೇ ಈ ಲೋಕವೂ ಪರಲೋಕವೂ ಎಲ್ಲ ಪ್ರಾಣಿಗಳೂ ಪೋಣಿಸಲ್ಪಟ್ಟಿವೆ' ವಾಯುರ್ವೈ ಗೌತಮ ತತ್ಸೂತ್ರಮ್; ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ (ಬೃ. ಉ. ೩. ೭. ೨).

ಸಿದ್ಧಾಂತಿ — ಸಮರ್ಪಿತವಾಗಿದೆಯೆಂದು ಹೇಳಲ್ಪಟ್ಟ ದ್ಯುಲೋಕಾದಿಗಳಿಗೆ ಆಶ್ರಯವು ಪರಬ್ರಹ್ಮವು ; ಏಕೆಂದರೆ ಸ್ವ-ಶಬ್ದವಿದೆ, ಎಂದರೆ ಆತ್ಮ-ಶಬ್ದವಿದೆ.[1] ಆತ್ಮ-ಶಬ್ದಕ್ಕೆ ಪರಮಾತ್ಮನೆಂಬ ಅರ್ಥವನ್ನು ಗ್ರಹಿಸಿದರೆ ಅದು ಚೆನ್ನಾಗಿ ಹೊಂದುತ್ತದೆಯೇ ಹೊರತು ಬೇರೊಂದು ವಸ್ತುವನ್ನು ಗ್ರಹಿಸಿದರೆ ಹೊಂದುವುದಿಲ್ಲ. ಮತ್ತೊಂದು ಶ್ರುತಿಯು ಸತ್-ಶಬ್ದದಿಂದಲೇ ಬ್ರಹ್ಮವು ಎಲ್ಲಕ್ಕೂ ಆಶ್ರಯವು ಎಂದು ಹೇಳುತ್ತದೆ : 'ಈ ಪ್ರಾಣಿಗಳೆಲ್ಲ ಸದ್ವಸ್ತುವನ್ನೇ ಮೂಲವಾಗಿ ಪಡೆದಿವೆ, ಸದ್ವಸ್ತುವನ್ನೇ ಆಶ್ರಯವಾಗಿ ಪಡೆದಿವೆ, ಸದ್ವಸ್ತುವನ್ನೇ ಲಯಸ್ಥಾನವಾಗಿ ಪಡೆದಿವೆ'[2] (ಛಾಂ. ಉ. ೬. ೮. ೪). ಆತ್ಮನು ಕಾರ್ಯ ಪ್ರಪಂಚದಿಂದ ವಿಶಿಷ್ಟನಾಗಿ ವಿಶಿಷ್ಟನಾಗಿರುವನೆಂದು ತಿಳಿಯಕೂಡದು. ಅವಿದ್ಯಾಕೃತವಾದ ಕಾರ್ಯಪ್ರಪಂಚವನ್ನು ವಿದ್ಯೆಯಿಂದ ಲಯಮಾಡಿಕೊಂಡು ಅದಕ್ಕೆ ಆಶ್ರಯನೂ ಏಕರಸನೂ ಆದ ಆತ್ಮನೊಬ್ಬನನ್ನೇ ಅರಿತುಕೊಳ್ಳಬೇಕು ಎಂದು ಅಭಿಪ್ರಾಯ 'ಧರಿಸುವುದು' ಎಂಬುದು ಸೇತು-ಶ್ರುತಿಯ ಅಭಿಪ್ರಾಯವೇ ಹೊರತು ಅದಕ್ಕೆ ಬೇರೊಂದು ದಡವಿದೆ ಎಂಬುದಲ್ಲ ;[3] ಏಕೆಂದರೆ ಸೇತು-ಶಬ್ದವು ಬಂಧನ-ಕ್ರಿಯೆಯನ್ನು ಹೇಳುವ ಷಿಞ್ ಎಂಬ ಧಾತುವಿನಿಂದ ಉತ್ಪನ್ನವಾಗಿದೆ ; ಅಮೃತತ್ವವನ್ನು ಹೊಂದಲು ಆತ್ಮಜ್ಞಾನವು ಸಾಧನ ಎಂದರ್ಥ.

ವಿ.—ದ್ಯುಲೋಕ ಪೃಥ್ವಿ ಮೊದಲಾದವುಗಳಿಗೆ ಆಧಾರನಾಗಿರುವವನು ಜೀವನೇ ಎಂಬುದು ಪೂರ್ವಪಕ್ಷ ; ಏಕೆಂದರೆ (೧) ಇವನು ಮನಸ್ಸು ಪ್ರಾಣ—ಇವುಗಳಿಗೆ ಆಧಾರನೆಂದೂ (ಮುಂ. ಉ. ೨. ೨. ೫), (೨) ನಾಡೀ-ಸಂಬಂಧವನ್ನು ಹೊಂದಿರುವನೆಂದೂ ಮತ್ತು (೩) ಬಹುವಿಧವಾಗಿ ಹುಟ್ಟುತ್ತಿರುವನೆಂದೂ ಹೇಳಿದೆ.[4] ಇವೆಲ್ಲವೂ ಜೀವಧರ್ಮಗಳೇ.

ದ್ಯುಲೋಕಾದಿಗಳಿಗೆ ಆಧಾರನಾಗಿರುವವನು ಪರಮಾತ್ಮನೇ ಎಂಬುದು ಸಿದ್ಧಾಂತ; ಏಕೆಂದರೆ 'ಇವನು ಅಮೃತಕ್ಕೆ ಸೇತುವೆ' ಎಂಬ ಪರಬ್ರಹ್ಮನ ಅಸಾಧಾರಣವಾದ ಶಬ್ದವಿದೆ. ಇದು ಉಪನಿಷತ್ತುಗಳಲ್ಲೆಲ್ಲ ಅಮೃತತ್ವಪ್ರಾಪ್ತಿಗೆ ಕಾರಣನೆಂದು ಹೇಳಲ್ಪಟ್ಟ ಪರಬ್ರಹ್ಮನಿಗೆ ಮಾತ್ರ ಅನ್ವಯಿಸುತ್ತದೆ.[5] ಒಂದು ಸೇತುವೆಯು ಮನುಷ್ಯನನ್ನು ಆಚೆಯ ದಡಕ್ಕೆ ಸೇರಿಸುವಂತೆ ಇವನು ಸಂಸಾರಪಾರಭೂತವಾದ ಅಮೃತಕ್ಕೆ ಸೇತುವೆಯಾಗಿರು

---

[1] ತಮೇವೈಕಂ ಜಾನಥ ಆತ್ಮಾನಮ್ ।

[2] ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ ।

[3] ವಿಧಾರಣತ್ವಮಾತ್ರಮತ್ರ ಸೇತುಶ್ರುತ್ಯಾ ವಿವಕ್ಷ್ಯತೇ ನ ಪಾರವತ್ತ್ವಾದಿ । (ಸೂ.ಭಾ.)

[4] 'ಅರಗಳು ಚಕ್ರದ ನಾಭಿಯಲ್ಲಿ ಸೇರಿರುವಂತೆ, ಹೃದಯದಲ್ಲಿ ನಾಡಿಗಳೆಲ್ಲ ಸೇರಿಕೊಂಡಿರುವುವು. ಬಹುವಿಧವಾಗಿ ಹುಟ್ಟುವ ಇವನು ಹೃದಯದಲ್ಲಿ ಅಂತರ್ವರ್ತಿಯಾಗಿರುವನು' (ಮುಂ. ಉ. ೨. ೨. ೬).

[5] ತಮೇವಂ ವಿದ್ವಾನ್ ಅಮೃತ ಇಹ ಭವತಿ, ನಾನ್ಯಃ ಪಂಥಾ ಅಯನಾಯ ವಿದ್ಯತೇ (ಶ್ವೇ. ಉ. ೩. ೮).

ವನು ಮತ್ತು ಇಲ್ಲಿರುವ ಆತ್ಮ-ಶಬ್ದವು ಪರಬ್ರಹ್ಮನನ್ನೇ ನಿರುಪಾಧಿಕವಾಗಿ ಸೂಚಿಸುತ್ತದೆ. ಪರಮಾತ್ಮನು ನಾಡಿಗಳಿಗೆ ಆಧಾರನೆಂದು ಶ್ರುತಿಯು ಹೇಳುತ್ತದೆ[1] ಬಹುವಿಧವಾಗಿ ಹುಟ್ಟುವುದೂ ಪರಮಾತ್ಮನಿಗೇ ಹೊಂದುತ್ತದೆ.[2] ಪರಮಪುರುಷನು ದೇವಾದಿಗಳಿಗೆ ಆಶ್ರಯನಾಗಲು ತನ್ನ ಸ್ವರೂಪವನ್ನು ಬಿಡದೆ ಆಯಾ ಜಾತಿಯ ರೂಪ-ಸಂಸ್ಥಾನ-ಗುಣ-ಕರ್ಮಗಳೊಂದಿಗೆ ಸಮನ್ವಿತನಾಗಿ ಸ್ವೇಚ್ಛೆಯಿಂದ ಬಹುವಿಧವಾಗಿ ಹುಟ್ಟುತ್ತಾನೆ.[3] ಜೀವನ ಮನಸ್ಸು ಮೊದಲಾದವುಗಳಿಗೆ ಆಧಾರನಾಗಿರುವುದು ಪರಮಪುರುಷನಿಗೇ ಹೊಂದುತ್ತದೆ ; ಅವನೇ ಸರ್ವಾಧಾರನು.

**ದ್ವೈ.**—ವಿಷ್ಣುವನ್ನೂ ಮತ್ತು ಇತರರನ್ನೂ ಸೂಚಿಸುವ ಶಬ್ದಗಳು ವಿಷ್ಣುವನ್ನೇ ಸೂಚಿಸುತ್ತವೆಂದು ಈ ಪಾದದಲ್ಲಿ ಹೇಳಿದೆ.[4] **ತಮೇವೈಕಂ ಜಾನಥ ಆತ್ಮಾನಮ್** ಎಂಬ ಶ್ರುತಿಯಲ್ಲಿ ಆತ್ಮ-ಶಬ್ದವಿರುವುದರಿಂದ ದ್ಯುಲೋಕಾದಿಗಳಿಗೆ ಆಶ್ರಯನಾದವನು ವಿಷ್ಣುವೇ, ವಾಯು-ರುದ್ರರಲ್ಲ. 'ಆತ್ಮ ಬ್ರಹ್ಮ ಮೊದಲಾದ ಶಬ್ದಗಳು ಅವ್ಯಯನಾದ ವಿಷ್ಣುವನ್ನು ಬಿಟ್ಟು ಬೇರೆ ಯಾರನ್ನೂ ಸೂಚಿಸುವುದಿಲ್ಲ ; ಏಕೆಂದರೆ ಗುಣಗಳ ಪೂರ್ಣತ್ವವು ಇತರರಲ್ಲಿ ಸಂಭವಿಸುವುದಿಲ್ಲ'[5] ಎಂದು ಬ್ರಹ್ಮ-ವೈವರ್ತದಲ್ಲಿ ಹೇಳಿದೆ.

## ಮುಕ್ತೋಪಸೃಪ್ಯವ್ಯಪದೇಶಾತ್ ॥ ೨ ॥

೨. ಮುಕ್ತರಿಗೆ ಪ್ರಾಪ್ಯನೆಂದು ಹೇಳಿರುವುದರಿಂದಲೂ (ದ್ಯುಲೋಕಾದಿಗಳಿಗೆ ಆಶ್ರಯವು ಪರಬ್ರಹ್ಮವೇ)

'ಆಗ ಮನುಷ್ಯನು ಅಮೃತನಾಗುತ್ತಾನೆ ಮತ್ತು ಈ ಶರೀರದಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ'[6] .(ಬೃ. ಉ. ೪. ೪. ೭) ಇವೇ ಮೊದಲಾದ ಶ್ರುತಿ

[1] 'ನಾಡಿಗಳಿಂದ ಆವೃತನಾಗಿ . ' ಸಂತತಂ ಸಿರಾಭಿಸ್ತು (ಮ. ನಾ. ಉ. ೧೩. ೮).

[2] 'ಹುಟ್ಟದಿದ್ದರೂ ಬಹುವಿಧವಾಗಿ ಹುಟ್ಟುತ್ತಾನೆ ; ಅವನ ಯೋನಿಯನ್ನು ಧೀರರು ಅರಿತಿರುತ್ತಾರೆ' ಅಜಾಯಮಾನೋ ಬಹುಧಾ ವಿಜಾಯತೇ, ತಸ್ಯ ಧೀರಾಃ ಪರಿಜಾನಂತಿ ಯೋನಿಮ್ (ಪುರುಷಸೂಕ್ತ ೨೧).

[3] ದೇವಾದೀನಾಂ ಸಮಾಶ್ರಯಣೀಯತ್ವಾಯ ತತ್ತಜ್ಜಾತೀಯರೂಪಸಂಸ್ಥಾನ-ಗುಣಕರ್ಮ-ಸಮನ್ವಿತಃ ಸ್ವಭಾವಮಜಹದೇವ ಸ್ವೇಚ್ಛಯಾ ಬಹುಧಾ ವಿಜಾಯತೇ ಪರಃ ಪುರುಷಃ (ಶ್ರೀ-ಭಾಷ್ಯ); ಭಗವದ್ಗೀತಾ ೪. ೬ ನೋಡಿ.

[4] ತತ್ರ ಚಾನ್ಯತ್ರ ಚ ಪ್ರಸಿದ್ಧಾನಾಂ ಶಬ್ದಾನಾಂ ವಿಷ್ಣೌ ಸಮನ್ವಯಮಸ್ಮಿನ್ ಪಾದೇ ದರ್ಶಯತಿ (ಮ. ಭಾ ).

[5] ಆತ್ಮಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್ । ನ ಸಂಭವಂತಿ ಯಸ್ಮಾತ್ ಶ್ಚೈನ್ಯಾಪ್ತಾ ಗುಣಪೂರ್ಣತೇತಿ ಹಿ ಬ್ರಹ್ಮವೈವರ್ತೇ (ಮ. ಭಾ ).

[6] ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ।

ಗಳಲ್ಲಿ[1] ಬ್ರಹ್ಮವು ಮುಕ್ತರಿಗೆ ಪ್ರಾಪ್ಯವೆಂಬುದು ಸಿದ್ಧವಾಗಿದೆ ಆದರೆ ಪ್ರಧಾನಾದಿಗಳು ಪ್ರಾಪ್ಯವೆಂದು ಎಲ್ಲಿಯೂ ಹೇಳಿಲ್ಲ

ವಿ.—ದ್ಯುಲೋಕಾದಿಗಳಿಗೆ ಆಧಾರನಾದ ಪುರುಷನನ್ನೇ ಸಂಸಾರಬಂಧಗಳಿಂದ ಮುಕ್ತರಾದವರು ಹೊಂದುತ್ತಾರೆಂದು ಶ್ರುತಿಯು ಹೇಳುತ್ತದೆ.[2] ನಾಮರೂಪಗಳನ್ನು ಹೊಂದುವುದೇ ಸಂಸಾರವು, ಇದು ಅಚಿದ್ವಸ್ತುಗಳ ಸಂಬಂಧದಿಂದ ಉಂಟಾಗುತ್ತದೆ, ಪುಣ್ಯಪಾಪಗಳೇ ಇಂಥ ಸಂಬಂಧಕ್ಕೆ ಕಾರಣವಾಗಿರುತ್ತವೆ. ಪುಣ್ಯಪಾಪಗಳಿಂದಲೂ ಪ್ರಕೃತಿಸಂಸರ್ಗದಿಂದಲೂ ಬಿಡುಗಡೆಯನ್ನು ಹೊಂದಿ ಪರಮಸಾಮ್ಯವನ್ನು ಪಡೆದವರಿಗೆ ಯಾವನು ಪ್ರಾಪ್ಯನೆಂದು ಶ್ರುತಿಯು ಹೇಳುತ್ತದೆಯೊ ಅವನು ದ್ಯುಲೋಕಾದಿಗಳಿಗೆ ಆಧಾರನಾದ ಪರಬ್ರಹ್ಮನೇ ಆಗಿರಬೇಕು.[3]

ದ್ವೈ.—'ಇವನು ಅಮೃತಕ್ಕೆ ಸೇತುವೆ' ಇವೇ ಮೊದಲಾದ ಶ್ರುತಿಗಳಲ್ಲಿ ವಿಷ್ಣುವೇ ಮುಕ್ತರಿಗೆ ಪ್ರಾಪ್ಯನೆಂದು ಹೇಳಿದೆ. ಆತ್ಮ-ಶಬ್ದವನ್ನು ರುದ್ರಾದಿಗಳನ್ನು ಸೂಚಿಸುವ ಅಮುಖ್ಯಾರ್ಥದಲ್ಲಿ ಪ್ರಯೋಗಿಸಿಲ್ಲ.

## ನಾನುಮಾನಮತಚ್ಛಬ್ದಾತ್* ॥ ೩ ॥

೩. (ದ್ಯುಲೋಕಾದಿಗಳಿಗೆ ಆಶ್ರಯವಾದದ್ದು) ಅನುಮಾನದಿಂದ ಸಿದ್ಧವಾದುದಲ್ಲ ; ಏಕೆಂದರೆ ಅದನ್ನು ಸೂಚಿಸುವ ಶಬ್ದವಿರುವುದಿಲ್ಲ.

ಬ್ರಹ್ಮವನ್ನು ಪ್ರತಿಪಾದಿಸಲು ವಿಶೇಷವಾದ ಹೇತುವಿದೆಯೆಂದು ಹೇಳಿರುವಾಗ ಮತ್ತೊಂದು ವಸ್ತುವನ್ನು ಪ್ರತಿಪಾದಿಸಲು ಯಾವ ವಿಶೇಷಹೇತುವೂ ಇರುವುದಿಲ್ಲ. ಅನುಮಾನದಿಂದ ಸಿದ್ಧವಾಗುವುದು ಸಾಂಖ್ಯರ ಪ್ರಧಾನ. ಇಲ್ಲಿ ಅಚೇತನವಾದ ಪ್ರಧಾನವನ್ನು ತಿಳಿಸುವ ಯಾವ ಶಬ್ದವೂ ಇಲ್ಲ; ಹಾಗೆ ಇದ್ದರೆ ಅಚೇತನವಾದ ಪ್ರಧಾನವು ಕಾರಣವೆಂದಾಗಲಿ ಆಶ್ರಯವೆಂದಾಗಲಿ ತಿಳಿಯಬಹುದಾಗಿತ್ತು ಆದರೆ ಅದಕ್ಕೆ ವಿರುದ್ಧವಾಗಿ ಚೇತನವನ್ನು ಪ್ರತಿಪಾದಿಸುವ ಶಬ್ದವಿದೆ.[4] ಆದುದರಿಂದ ವಾಯುವೂ ದ್ಯುಲೋಕಾದಿಗಳಿಗೆ ಆಶ್ರಯವಾಗಲಾರದು.

---

[1] ಮುಂ. ಉ. ೨. ೨. ೮. ೩. ೨. ೮ ಮತ್ತು ಬೃ. ಉ. ೪. ೪. ೨೧ ನೋಡಿ.

[2] ಮುಂ. ಉ, ೩ ೧, ೩ ಮತ್ತು ೩. ೨. ೮ ನೋಡಿ.

[3] ಪುಣ್ಯಪಾಪನಿಬಂಧನಾಚಿತ್ಸಂಸರ್ಗಪ್ರಯುಕ್ತನಾಮರೂಪಭಾಕ್ತ್ವಮೇವ ಹಿ ಸಂಸಾರಃ। ಅತೋ ವಿಧೂತಪುಣ್ಯಪಾಪೈರ್ನಿರಂಜನೈಃ ಪ್ರಕೃತಿಸಂಸರ್ಗರಹಿತೈಃ ಪರೇಣ ಬ್ರಹ್ಮಣಾ ಪರಮಂ ಸಾಮ್ಯಮಾಪನ್ನೈಃ ಪ್ರಾಪ್ಯತಯಾ ನಿರ್ದಿಷ್ಟೋ ದ್ಯುಪೃಥಿವ್ಯಾದ್ಯಾಯತನಭೂತಃ ಪುರುಷಃ ಪರಂ ಬ್ರಹ್ಮೈವ (ಶ್ರೀಭಾಷ್ಯ).

*ಶ್ರೀಭಾಷ್ಯದಲ್ಲಿ ಇದನ್ನೂ ಮುಂದಿನ ಸೂತ್ರವನ್ನೂ ಒಂದಾಗಿ ಮಾಡಿದೆ.

[4] 'ಯಾವನು ಸರ್ವಜ್ಞನೊ ಸರ್ವವಿದನೊ....' ಯಃ ಸರ್ವಜ್ಞಃ ಸರ್ವವಿತ್। (ಮುಂ. ಉ. ೧. ೧. ೯).

ವಿ.—'(ದ್ಯುಲೋಕಾದಿಗಳಿಗೆ ಆಧಾರವಾದದ್ದು) ಪ್ರಧಾನವೂ ಅಲ್ಲ; ಏಕೆಂದರೆ ಅದನ್ನು ಸೂಚಿಸುವ ಶಬ್ದವಿಲ್ಲ; ಹಾಗೆಯೇ ಪ್ರಾಣವನ್ನು ಧರಿಸಿರುವ (ಜೀವನೂ) ಅಲ್ಲ' ಎಂಬುದು ಸೂತ್ರಾರ್ಥ.

ದ್ವೈ.—ದ್ಯುಲೋಕಾದಿಗಳಿಗೆ ಆಶ್ರಯನಾದವನು ಅನುಮಾತ್ಮಕವಾದ ಆಗಮದಿಂದ ಸಿದ್ಧನಾದ ರುದ್ರನಲ್ಲ; ಏಕೆಂದರೆ 'ಭಸ್ಮಧರ' 'ಉಗ್ರ' ಮೊದಲಾದ ವಿಶೇಷಶಬ್ದಗಳಿಲ್ಲ.

## ಪ್ರಾಣಭೃಚ್ಚ ॥ ೪ ॥

೪. ಜೀವನೂ (ಅಲ್ಲ).

ಪ್ರಾಣವನ್ನು ಧರಿಸಿರುವ ಜೀವನಿಗೆ ಆತ್ಮತ್ವ-ಚೇತನತ್ವಗಳು ಸಂಭವಿಸಿದರೂ ಉಪಾಧಿಪರಿಚ್ಛಿನ್ನ-ಜ್ಞಾನವುಳ್ಳ ಅವನಿಗೆ ಸರ್ವಜ್ಞತ್ವಾದಿಗಳು ಸಂಭವಿಸುವುದಿಲ್ಲ. ಉಪಾಧಿಪರಿಚ್ಛಿನ್ನನೂ ಸರ್ವವ್ಯಾಪಕನಲ್ಲದವನೂ ಆಗಿರುವ ಜೀವನಿಗೆ ದ್ಯುಲೋಕಾದಿಗಳ ಆಶ್ರಯತ್ವವು ಸರಿಯಾಗಿ ಹೊಂದುವುದಿಲ್ಲ.

ದ್ವೈ.—ಜೀವ-ವಾಯುಗಳೂ ದ್ಯುಲೋಕಾದಿಗಳಿಗೆ ಆಶ್ರಯರಲ್ಲ; 'ಜನ್ಮರಹಿತನಾದ ಅವನು ಬಹುವಿಧವಾಗಿ ಹುಟ್ಟುತ್ತಾನೆ' (ಪುರುಷಸೂಕ್ತ ೨೧) ಎಂಬಲ್ಲಿರುವ ಬಹುಜನ್ಮೋಕ್ತಿಯು ವಿಷ್ಣುವಿಗೇ ಹೊಂದುತ್ತದೆ.

## ಭೇದವ್ಯಪದೇಶಾಚ್ಚ ॥ ೫ ॥

೫. ಭೇದವನ್ನು ಹೇಳಿರುವುದರಿಂದಲೂ (ಜೀವನಲ್ಲ).

'ಆ ಆತ್ಮನೊಬ್ಬನನ್ನೇ ತಿಳಿದುಕೊಳ್ಳಲಿ' (ಮುಂ. ಉ. ೩. ೨. ೫) ಎಂಬಲ್ಲಿ ಜ್ಞಾತೃವಿಗೂ ಜ್ಞೇಯಕ್ಕೂ ಇರುವ ಭೇದವನ್ನು ಹೇಳಿದೆ. ಇಲ್ಲಿ ಮುಮುಕ್ಷುವಾದ ಜೀವನು ಜ್ಞಾತೃವು, ಆತ್ಮ-ಶಬ್ದ-ವಾಚ್ಯವಾಗಿರುವ ಬ್ರಹ್ಮವು ಜ್ಞೇಯವು. ಆದುದರಿಂದ ಜೀವನು ದ್ಯುಲೋಕಾದಿಗಳಿಗೆ ಆಶ್ರಯನಲ್ಲ.

ವಿ.—'ಪುರುಷನು ಪ್ರಕೃತಿಯಿಂದ ಮೋಹಿತನಾಗಿ, ಅದೇ ವೃಕ್ಷದಲ್ಲಿ ನಿಮಗ್ನನಾಗಿ ದುಃಖವನ್ನನುಭವಿಸುತ್ತಿರುವನು. ಯಾವಾಗ ಅವನು ತನಗಿಂತ ಬೇರೆಯಾದ ಮತ್ತು ಪ್ರೀತನಾಗಿರುವ ಈಶ್ವರನನ್ನು ಮತ್ತು ಅವನ ಮಹಿಮೆಯನ್ನು ನೋಡುವನೊ ಆಗ ಶೋಕರಹಿತನಾಗುವನು'[1] (ಮುಂ. ಉ. ೩. ೧. ೨) ಎಂಬಲ್ಲಿ ಭೋಗ್ಯಭೂತವಾದ ಪ್ರಕೃತಿಯಿಂದ ಮೋಹಿತನಾದ ಜೀವನು ಶೋಕಿಸುತ್ತಿರುವನು; ಈಶ್ವರನಿಗಿಂತ ಭಿನ್ನನಾದ ಈ ಜೀವನು ದ್ಯುಲೋಕಾದಿಗಳಿಗೆ ಆಶ್ರಯನಲ್ಲ.

---

[1] ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥

ದ್ವೈ.—ಇಲ್ಲಿ ಜೀವ-ಪರಮಾತ್ಮರ ಐಕ್ಯವು ವಾಚ್ಯವಲ್ಲ; ಏಕೆಂದರೆ 'ಎಲ್ಲರಿಂದಲೂ ಸೇವಿಸಲ್ಪಟ್ಟ, ಜೀವನಿಗಿಂತ ಭಿನ್ನನಾದ ಪರಮಾತ್ಮನನ್ನು ಮತ್ತು ಅವನ ಮಹಿಮೆಯನ್ನು ಯಾವಾಗ ನೋಡುತ್ತಾನೆಯೊ' (ಮುಂ. ಉ. ೩. ೧. ೨) ಎಂಬಲ್ಲಿ ಭೇದವನ್ನು ಹೇಳಿದೆ

## ಪ್ರಕರಣಾತ್ ॥ ೬ ॥

೬ ಪ್ರಕರಣದಿಂದಲೂ (ಜೀವನಲ್ಲ).

ಇದು ಪರಮಾತ್ಮನ ಪ್ರಕರಣವಾಗಿರುವುದರಿಂದಲೂ ಜೀವನು ದ್ಯುಲೋಕಾದಿಗಳಿಗೆ ಆಶ್ರಯನಲ್ಲ. 'ಯಾವುದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದಂತಾಗುವುದು ?'[1] (ಮುಂ. ಉ. ೧. ೧. ೨) ಎಂಬಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವು ಉಂಟಾಗುತ್ತದೆಂದು ಹೇಳಿದೆ. ಸರ್ವಾತ್ಮಕನಾದ ಪರಮಾತ್ಮನನ್ನು ಅರಿತುಕೊಂಡರೆ ಇದೆಲ್ಲವನ್ನೂ ತಿಳಿದಂತಾದೀತೇ ಹೊರತು ಕೇವಲ ಜೀವನ ಜ್ಞಾನದಿಂದ ಆಗಲಾರದು.

ವಿ.—'ಯಾವ ವಿದ್ಯೆಯಿಂದ ಆ ಅಕ್ಷರವು ಸಾಕ್ಷಾತ್ಕೃತವಾಗುವುದೊ ಅದು ಪರಾವಿದ್ಯೆ' (ಮುಂ. ಉ. ೧. ೧. ೫) ಇವೇ ಮೊದಲಾದವುಗಳಲ್ಲಿ ಪರಮಾತ್ಮನೇ ಪ್ರಕೃತವಿಷಯನೆಂದು ತಿಳಿದುಬರುತ್ತದೆ. ಹಿಂದಿನ ಪಾದದ ೨೨ ನೆಯ ಸೂತ್ರದಲ್ಲಿಯೂ ಪರಬ್ರಹ್ಮನೇ ಪ್ರಕರಣದ ವಿಷಯನೆಂದು ಪ್ರದರ್ಶಿಸಿದೆ.

ದ್ವೈ.—ಜುಷ್ಟಂ ಯದಾ ಪಶ್ಯತಿ (ಮುಂ. ಉ. ೩. ೧. ೨) ಎಂಬಲ್ಲಿ ಈಶ-ಶಬ್ದ-ವಾಚ್ಯನಾಗಿರುವವನು ಪರಮಾತ್ಮನೇ. ಇವನನ್ನೇ ಪರಾವಿದ್ಯೆಯ ಮೂಲಕ ಅರಿತುಕೊಳ್ಳಬೇಕೆಂದು ಶ್ರುತಿಯು ಹೇಳುತ್ತದೆ.

## ಸ್ಥಿತ್ಯದನಾಭ್ಯಾಂ ಚ ॥ ೭ ॥

೭. ಸ್ಥಿತಿ, ತಿನ್ನುವುದು (ಎಂಬ ಎರಡು ಧರ್ಮ)ಗಳಿಂದಲೂ (ಜೀವನು ದ್ಯುಲೋಕಾದಿಗಳಿಗೆ ಆಶ್ರಯನಲ್ಲ).

'ಯಾವಾಗಲೂ ಜೊತೆಯಲ್ಲಿರುವ ಸಖರಾದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಲಿಂಗಿಸಿಕೊಂಡಿವೆ. ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತಿದೆ, ಇನ್ನೊಂದು ತಿನ್ನದೆ ನೋಡುತ್ತಿದೆ'[2] (ಮುಂ. ಉ. ೩. ೧. ೧) ಎಂಬಲ್ಲಿ ಒಂದು ಪಕ್ಷಿಯು ಕರ್ಮಫಲ

---

[1] ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ?

[2] ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥

ವನ್ನು ಅನುಭವಿಸುತ್ತಿರುವುದೆಂದೂ ಮತ್ತೊಂದು ಔದಾಸೀನ್ಯದಿಂದ ಇರುವುದೆಂದೂ ಹೇಳಿದೆ. ಇಲ್ಲಿ 'ತಿನ್ನುವುದು' ಜೀವನನ್ನೂ 'ಸ್ಥಿತಿಯು' ಈಶ್ವರನನ್ನೂ ಸೂಚಿಸುತ್ತದೆ. ಈಶ್ವರನು ದ್ಯುಲೋಕಾದಿಗಳಿಗೆ ಆಶ್ರಯನು ಎಂದು ಗ್ರಹಿಸಿದರೆ ಮಾತ್ರ ಪ್ರಕೃತನಾದ ಇವನನ್ನು ಜೀವನಿಗಿಂತ ಬೇರೆಯಾಗಿ ಹೇಳಿರುವುದು ಯುಕ್ತವಾಗಿರುತ್ತದೆ.

ಪ್ರತಿಯೊಂದು ಶರೀರದಲ್ಲಿಯೂ ಬುದ್ಧ್ಯಾದಿ-ಉಪಾಧಿಗಳಿಗೆ ಸಂಬದ್ಧನಾಗಿ ಕರ್ತೃವೆಂದೂ ಭೋಕ್ತೃವೆಂದೂ ಲೋಕಪ್ರಸಿದ್ಧನಾದ ಜೀವನನ್ನು ತಿಳಿಸಲು ಶ್ರುತಿಯು ಹೊರಟಿಲ್ಲ; ಆದರೆ ಲೋಕದೃಷ್ಟಿಯಿಂದ ಅಪ್ರಸಿದ್ಧನಾದ ಈಶ್ವರನನ್ನು ತಾತ್ಪರ್ಯದಿಂದ ತಿಳಿಸಲು ಶ್ರುತಿಯು ಹೊರಟಿದೆ.

ಪೈಂಗಿಶ್ರುತಿಯ ಪ್ರಕಾರ ಈ ಎರಡು ಪಕ್ಷಿಗಳು ಅಂತಃಕರಣವನ್ನೂ ಜೀವವನ್ನೂ ಸೂಚಿಸಿದರೂ, ಉಪಾಧಿಗಳಿಂದ ಪರಿಚ್ಛಿನ್ನನಾದ ಜೀವನು ದ್ಯುಲೋಕಾದಿಗಳಿಗೆ ಆಶ್ರಯನಾಗಲಾರನು; ನಿರುಪಾಧಿಕನಾದ ಪರಮಾತ್ಮನೇ ಆಶ್ರಯನಾಗಿರುತ್ತಾನೆ. ಗಡಿಗೆಯಿಂದ ಪರಿಚ್ಛಿನ್ನವಾದ ಆಕಾಶವು ಆ ಗಡಿಗೆ ಎಂಬ ಉಪಾಧಿ ಇಲ್ಲದಿರುವಾಗ ಮಹಾಕಾಶವೇ ಆಗಿರುವಂತೆ ಶರೀರವೇ ಮೊದಲಾದ ಉಪಾಧಿಗಳಿಂದ ಮುಕ್ತನಾದ ಜೀವನು ಪರಮಾತ್ಮನೇ ಆಗಿರುತ್ತಾನೆ.

ವಿ.—ಕರ್ಮಫಲವನ್ನು ಭುಜಿಸದೆ ದೀಪ್ಯಮಾನನಾಗಿರುವವನೂ ಸರ್ವಜ್ಞನೂ ಅಮೃತನೇತುವೂ ಸರ್ವಾತ್ಮನೂ ಆದ ಪರಮಪುರುಷನೇ ದ್ಯುಲೋಕಾದಿಗಳಿಗೆ ಆಧಾರನಾಗಲು ಅರ್ಹನಾಗಿರುತ್ತಾನೆ, ಕರ್ಮಫಲವನ್ನು ಭುಜಿಸುತ್ತ ಶೋಕಿಸುತ್ತ ಇರುವ ಜೀವನಲ್ಲ.

ದ್ವೈ.—ಈಶ್ವರನು ಕರ್ಮಫಲವನ್ನು ಉಪಜೀವಿಸದೆ ಪ್ರಕಾಶಮಾನನಾಗಿರುತ್ತಾನೆ, ಜೀವನು ಕರ್ಮಫಲವನ್ನು ಉಪಜೀವಿಸುತ್ತ ಇರುವನು ಎಂದು ಹೇಳಿರುವುದರಿಂದ ಜೀವ-ಈಶ್ವರರಿಗೆ ಐಕ್ಯವಿಲ್ಲ.

## ೨. ಭೂಮಾಧಿಕರಣ

(ಸೂ. ೮–೯)

**ಭೂಮಾ ಸಂಪ್ರಸಾದಾದಧ್ಯುಪದೇಶಾತ್ ॥ ೮ ॥**

೮. ಭೂಮವು (ಬ್ರಹ್ಮವೇ) ; ಏಕೆಂದರೆ ಸಂಪ್ರಸಾದಕ್ಕಿಂತ ಅಧಿಕವಾಗಿ ಉಪದೇಶಿಸಿದುತ್ತದೆ.

'ಯಾವುದು ಭೂಮವೊ ಅದು ಸುಖವು , ಅಲ್ಪದಲ್ಲಿ ಸುಖವಿಲ್ಲ. ಭೂಮವೇ ಸುಖವು. ಭೂಮವನ್ನೇ ತಿಳಿದುಕೊಳ್ಳಲು ಬಯಸಬೇಕು....ಎಲ್ಲಿ ಬೇರೊಂದನ್ನು ನೋಡುವುದಿಲ್ಲವೊ ಬೇರೊಂದನ್ನು ಕೇಳುವುದಿಲ್ಲವೊ ಬೇರೊಂದನ್ನು ಅರಿಯುವುದಿಲ್ಲವೊ ಅದು ಭೂಮವು ಎಲ್ಲಿ ಬೇರೊಂದನ್ನು ನೋಡುವನೊ ಬೇರೊಂದನ್ನು ಕೇಳುವನೊ ಬೇರೊಂದನ್ನು ಅರಿಯುವನೊ ಅದು ಅಲ್ಪವು'[1] (ಛಾಂ. ಉ. ೭. ೨೩–೨೪) ಎಂಬಲ್ಲಿ ಭೂಮವು ಪ್ರಾಣವೊ ಅಥವಾ ಪರಮಾತ್ಮನೊ ಎಂಬುದು ಸಂಶಯ.

ಪ್ರಾಣವೇ ಭೂಮವು ಎಂಬುದು ಪೂರ್ವಪಕ್ಷ; ಏಕೆಂದರೆ ಒಂದಕ್ಕಿಂತ ಒಂದು ಅಧಿಕವಾದುದರ ವಿಷಯದಲ್ಲಿ ಪ್ರಶ್ನೋತ್ತರಗಳ ಪರಂಪರೆಯು[2] ಮುಗಿದಮೇಲೆ ಪ್ರಾಣವೇ ಎಲ್ಲಕ್ಕಿಂತಲೂ ಅಧಿಕವಾದುದೆಂದು ಹೇಳಿದೆ. ಆದರೆ ಪ್ರಾಣಕ್ಕಿಂತ ಅಧಿಕವಾದುದು ಇದೆಯೆಂದು ಹೇಳಲಿಲ್ಲ, ಆದುದರಿಂದ ಭೂಮವೇ ಪ್ರಾಣವಾಗಿರಬೇಕು ; ಮತ್ತು ಪ್ರಾಣವನ್ನು ಅರಿತುಕೊಂಡವನು ಅತಿವಾದಿಯಾಗುವನೆಂದು (ಛಾಂ. ಉ. ೭. ೧೫–೪) ಹೇಳಿದೆ 'ಎಲ್ಲಿ ಬೇರೊಂದನ್ನು ನೋಡುವುದಿಲ್ಲವೊ ಕೇಳುವುದಿಲ್ಲವೊ ಅರಿಯುವುದಿಲ್ಲವೊ' ಎಂಬ ಭೂಮದ ಲಕ್ಷಣಪರವಾಗಿರುವ ವಚನವೂ ಕೂಡ ಪ್ರಾಣವು ಮಾತ್ರ ಎಚ್ಚರದಲ್ಲಿರುವ ಸುಷುಪ್ತಿಯ ಅವಸ್ಥೆಗೆ ಅನ್ವಯಿಸುತ್ತದೆ[3]. ಭೂಮವು ಸುಖವೆಂಬುದನ್ನೂ ಅಮೃತವೆಂಬುದನ್ನೂ ಪ್ರಾಣಕ್ಕೇ ಅನ್ವಯಿಸಬಹುದು.[4] ಪ್ರಾಣವು ಸರ್ವಾತ್ಮ

---

[1] ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾ ತ್ವೇವ ವಿಜಿಜ್ಞಾಸಿತವ್ಯ ಇತಿ....ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಽಥ ಯತ್ರಾನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಮ್ ।

[2] 'ಭಗವಂತನೆ ನಾಮಕ್ಕಿಂತ ಅಧಿಕವಾದುದು ಇದೆಯೆ ?' 'ವಾಕ್ಕು ನಾಮಕ್ಕಿಂತ ಅಧಿಕವಾದುದು'—ಇತ್ಯಾದಿ.

[3] ಪ್ರ ಉ. ೪. ೨-೩ ನೋಡಿ.

[4] 'ಆಗ ಈ ದೇವನು ಕನಸುಗಳನ್ನು ನೋಡುವುದಿಲ್ಲ ; ಆಗ ಈ ಶರೀರದಲ್ಲಿ ಸುಖವುಂಟಾಗುತ್ತದೆ' ಅತ್ರೈಷ ದೇವಃ ಸ್ವಪ್ನಾನ್ನ ಪಶ್ಯತ್ಯಥ ತದೈತಸ್ಮಿಂಶರೀರ ಏತತ್ ಸುಖಂ ಭವತಿ । (ಪ್ರ. ಉ. ೪ ೬) ; 'ಪ್ರಾಣವು ಅಮೃತವು' ಪ್ರಾಣೋ ವಾ ಅಮೃತಮ್ (ಕೌ. ಉ. ೩. ೨).

ನೆಂದು ಶ್ರುತಿಯು ಹೇಳುತ್ತದೆ [1] ಅರೆಕಾಲುಗಳು ಚಕ್ರನಾಭಿಯಲ್ಲಿ ಸೇರಿಕೊಂಡಿರುವಂತೆ ಈ ಪ್ರಾಣದಲ್ಲಿ ಎಲ್ಲವೂ ಸೇರಿಕೊಂಡಿರುತ್ತದೆ

ಪರಮಾತ್ಮನು ಭೂಮವೇ ಹೊರತು ಪ್ರಾಣವಲ್ಲ—ಎಂಬುದು ಸಿದ್ಧಾಂತ ಸಂಪ್ರಸಾದವು ಸುಷುಪ್ತಿಯ ಸ್ಥಾನವೆಂದು ಹೇಳಿದೆ, ಏಕೆಂದರೆ ಈ ಅವಸ್ಥೆಯಲ್ಲಿ ಜೀವನು ಚೆನ್ನಾಗಿ ಪ್ರಸನ್ನನಾಗುತ್ತಾನೆ,[2] ಮತ್ತು ಸಂಪ್ರಸಾದವನ್ನು ಬೃಹದಾರಣ್ಯಕದಲ್ಲಿ (೪ ೩ ೧೫) ಸ್ವಪ್ನ-ಜಾಗರಿತ-ಸ್ಥಾನಗಳೊಂದಿಗೆ ಹೇಳಿರುತ್ತದೆ ಈ ಅವಸ್ಥೆಯಲ್ಲಿ ಪ್ರಾಣವು ಎಚ್ಚರವಾಗಿರುವುದರಿಂದ ಅದನ್ನೇ ಸಂಪ್ರಸಾದವೆಂದು ಕರೆದಿದೆ,[3] ಮತ್ತು ಪ್ರಾಣವನ್ನು ಹೇಳಿದಮೇಲೆ ಭೂಮವನ್ನು ಹೇಳಿದೆ, ಆದುದರಿಂದ ಭೂಮವು ಪ್ರಾಣಕ್ಕಿಂತ ಭಿನ್ನನಾದ ಪರಮಾತ್ಮನನ್ನೇ ಸೂಚಿಸಬೇಕು ಪ್ರಾಣವನ್ನು ಅರಿತುಕೊಂಡವನು ಅತಿವಾದಿ[4] ಎಂಬ ವಚನವು ಸತ್ಯವನ್ನು ಅರಿತುಕೊಂಡಿರುವವನಿಗೂ ಅನ್ವಯಿಸುತ್ತದ ಇಲ್ಲಿ ಸತ್ಯವನ್ನೇ ಪರಬ್ರಹ್ಮವೆಂದು ಹೇಳಿದೆ ಸನತ್ಕುಮಾರನು ತನ್ನ ಶಿಷ್ಯನಾದ ನಾರದನನ್ನು—ಮೆಟ್ಟಿಲಿನಿಂದ ಮೆಟ್ಟಿಲಿಗೆ ಹತ್ತುವಂತೆ—ಪ್ರಾಣದಿಂದ ಭೂಮಕ್ಕೆ ಒಯ್ಯುತ್ತಾನೆ ಪ್ರಾಣಕ್ಕೆ ಮುಖ್ಯವೃತ್ತಿಯಿಂದ ಆತ್ಮತ್ವವಿರುವುದಿಲ್ಲ ಪ್ರಾಣವು ಕೇವಲ ಕಾರ್ಯವೇ, ಏಕಂದರೆ ಅದು ಆತ್ಮನಿಂದಲೇ ಉತ್ಪನ್ನವಾಗುತ್ತದ (ಛಾಂ. ಉ ೭ ೨೬ ೧) ಪ್ರಾಣದಲ್ಲಿಯೇ ಉಪದೇಶವು ಮುಗಿಯುವ ಹಾಗಿದ್ದರೆ ಪ್ರಾಣವು ಮತ್ತೊಂದರ ಅಧೀನದಲ್ಲಿರುತ್ತದೆಂದು ಹೇಳುತ್ತಿರಲಿಲ್ಲ ಭೂಮವು ತನ್ನ ಮಹಿಮೆಯಲ್ಲಿಯೇ ಪ್ರತಿಷ್ಠಿತವಾಗಿದೆ (ಛಾಂ. ಉ ೭ ೨೪ ೧) ಎಂದು ಹೇಳದ, ಈ ಪ್ರಕರಣವು ಮುಗಿಯುವವರೆಗೂ ಭೂಮದ ವಿಷಯವೇ ಮುಂದುವರಿಯುತ್ತದೆ ವಿಪುಲತ್ವ-ರೂಪವಾದ ಭೂಮಸ್ವರೂಪವು ಸರ್ವಕಾರಣವಾಗಿರುವುದರಿಂದ ಪರಮಾತ್ಮನಿಗೇ ಸುತರಾಂ ಹೊಂದುತ್ತದ

ಪೂ.—ಸನತ್ಕುಮಾರನ ಉಪದೇಶವು ನಾಮದ ಭೂಯಸ್ತ್ವದಿಂದ ಪ್ರಾರಂಭವಾಗಿ ಪ್ರಾಣದ ಭೂಯಸ್ತ್ವದಲ್ಲಿ ನಿಂತುಹೋಗಿರುವುದರಿಂದ ಪ್ರಾಣವಾಚ್ಯನಾದ ಜೀವನೇ ಭೂಮವೆಂಬುದು ಪೂರ್ವಪಕ್ಷ.

---

[1] 'ಪ್ರಾಣವೇ ತಂದೆ, ತಾಯಿ, ಸೋದರ, ಸೋದರಿ, ಆಚಾರ್ಯ, ಬ್ರಾಹ್ಮಣ' ಪ್ರಾಣೋ ಹ ಪಿತಾ ಪ್ರಾಣೋ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ । (ಛಾಂ ಉ ೭ ೧೫ ೧)

[2] ಸಂಪ್ರಸಾದ ಇತಿ ಸುಷುಪ್ತಂ ಸ್ಥಾನಮುಚ್ಯತೇ, ಸಮ್ಯಕ್ ಪ್ರಸೀದತ್ಯಸ್ಮಿನ್ನಿತಿ ನಿರ್ವಚನಾತ್, ಬೃಹದಾರಣ್ಯಕೇ ಚ ಸ್ವಪ್ನಜಾಗರಿತಸ್ಥಾನಾಭ್ಯಾಂ ಸಹ ಪಾಠಾತ್ । (ಸೂ. ಭಾ )

[3] ತಸ್ಯಾಂ ಚ ಸಂಪ್ರಸಾದಾವಸ್ಥಾಯಾಂ ಪ್ರಾಣೋ ಜಾಗರ್ತೀತಿ ಪ್ರಾಣೋಽತ್ರ ಸಂಪ್ರಸಾದೋಽಭಿಪ್ರೇಯತೇ (ಸೂ ಭಾ )

[4] ಬ್ರಹ್ಮದಿಂದ ಹಿಡಿದು ಹುಲ್ಲಿನ ವರೆಗಿನ ಜಗತ್ತಿಗೆಲ್ಲ ಆತ್ಮನಾದ ಪ್ರಾಣವೇ ತಾನೆಂದು ಹೇಳುವವನು ಪ್ರಾಣವಿದನು ನಿಜವಾದ ಅತಿವಾದಿಯಲ್ಲ, ಸತ್ಯದಿಂದ ಅತಿವಾದಮಾಡುವವನೇ ಅತಿವಾದಿಯು

ಸಂಪ್ರಸಾದ-ಶಬ್ದವು ಜೀವನನ್ನು ಸೂಚಿಸುತ್ತದೆ : 'ಈ ಸಂಪ್ರಸಾದನು ಶರೀರದಿಂದ ಎದ್ದು ಪರಮಜ್ಯೋತಿಯನ್ನು ಸೇರಿ, ತನ್ನ ಸ್ವರೂಪದಿಂದ ಪ್ರಕಾಶಿಸುತ್ತಾನೆ'[1] (ಛಾಂ. ಉ. ೮. ೩. ೪) ಎಂದು ಶ್ರುತಿಯು ಹೇಳುತ್ತದೆ. ಭೂಮಗುಣ-ವಿಶಿಷ್ಟನಾದವನು ಜೀವನಲ್ಲ, ಪರಮಾತ್ಮನು ಎಂಬುದು ಸಿದ್ಧಾಂತ ; ಏಕೆಂದರೆ ಜೀವನಿಗಿಂತ ಅಧಿಕನಾದ ವನೂ ಭೂಮಗುಣ-ವಿಶಿಷ್ಟನೂ ಸತ್ಯಶಬ್ದ-ವಾಚ್ಯನೂ ಆದ ಪರಬ್ರಹ್ಮನ-ವಿಷಯದಲ್ಲಿ ಉಪದೇಶವನ್ನು ಮಾಡಿದೆ. ವೃತ್ತಿಕಾರರು ಹೀಗೆ ಹೇಳುತ್ತಾರೆ : 'ಭೂಮವೇ ; ಭೂಮವು ಬ್ರಹ್ಮವು, ಏಕೆಂದರೆ ನಾಮಾದಿ-ಪರಂಪರೆಯಲ್ಲಿ ಜೀವಾತ್ಮನಾದಮೇಲೆ ಉಪದೇಶವನ್ನು ಮಾಡಿದೆ.'[2] ಪ್ರಾಣೋಪಾಸಕನು ಅತಿವಾದಿ ಎಂದು ಹೇಳಿದ್ದರೂ ನಿಜವಾಗಿ ಸತ್ಯೋಪಾಸಕನೇ ಅತಿವಾದಿಯಾಗಿರುತ್ತಾನೆ. ಆದುದರಿಂದ ಸತ್ಯಶಬ್ದ-ವಾಚ್ಯನಾದ ಪರಬ್ರಹ್ಮನೇ ಭೂಮವಿಶಿಷ್ಟನಾಗಿರುತ್ತಾನೆ

**ದ್ವೈ.**—'ಪ್ರಾಣರಹಿತರಾದ ಇವರನ್ನು' **ಉತ್ಕ್ರಾಂತಪ್ರಾಣಾನ್** (ಛಾಂ ಉ. ೭. ೧೫. ೩) ಎಂದು ವಾಯುಲಿಂಗವನ್ನು ಸೂಚಿಸುವ ವಾಕ್ಯದಿಂದ ಪ್ರಾಣವು ವಾಯುವನ್ನು ಸೂಚಿಸಬಹುದು ; ಆದುದರಿಂದ ಭೂಮನು ಪ್ರಾಣನೊ ಅಥವಾ ವಿಷ್ಣುವೊ ಎಂಬ ಸಂಶಯವನ್ನು ಪರಿಹರಿಸಲು ಈ ಸೂತ್ರವು ಬಂದಿದೆ. 'ಪೂರ್ಣಸುಖರೂಪತ್ವವನ್ನು ಹೇಳಿರುವುದರಿಂದಲೂ ಸರ್ವೋತ್ತಮನೆಂದು ಹೇಳಿರುವುದರಿಂದಲೂ ಭೂಮನು ವಿಷ್ಣುವೇ' ಎಂಬುದು ಸೂತ್ರಾರ್ಥ. **ಸಮ್ಯಕ್ ಪ್ರಸೀದತಿ ಅನೇನ** ಎಂಬ ವ್ಯುತ್ಪತ್ತಿಯಿಂದ ಸಂಪ್ರಸಾದ-ಶಬ್ದವು ಪೂರ್ಣಸುಖವನ್ನು ಸೂಚಿಸುತ್ತದೆ.

### ಧರ್ಮೋಪಪತ್ತೇಶ್ಚ ॥ ೯ ॥

೯. (ಶ್ರುತಿಯು ಹೇಳುವ) ಧರ್ಮಗಳು ಹೊಂದುವುದರಿಂದಲೂ (ಭೂಮವು ಪರಮಾತ್ಮನೇ).

ಭೂಮದ ವಿಷಯದಲ್ಲಿ ಶ್ರುತಿಯು ಹೇಳುವ ಧರ್ಮಗಳೆಲ್ಲ ಪರಮಾತ್ಮನಲ್ಲಿ ಹೊಂದುತ್ತವೆ.[3] ಸುಷುಪ್ತಾವಸ್ಥೆಯಲ್ಲಿ ನೋಡುವುದೇ ಮೊದಲಾದ ವ್ಯವಹಾರವಿಲ್ಲ ವೆಂದು ಹೇಳಿರುವುದು (ಪ್ರ. ಉ. ೪. ೨) ಆತ್ಮನು ಅಸಂಗನೆಂಬುದನ್ನು ತಿಳಿಸುವುದಕ್ಕೇ ಹೊರತು ಪ್ರಾಣದ ಸ್ವಭಾವವನ್ನು ತಿಳಿಸಬೇಕೆಂದಲ್ಲ ; ಏಕೆಂದರೆ ಅದು ಪರಮಾತ್ಮನ ಪ್ರಕರಣವಾಗಿದೆ. ಆ ಅವಸ್ಥೆಯಲ್ಲಿ ಸುಖವನ್ನು ಹೇಳಿರುವುದೂ ಕೂಡ (ಪ್ರ. ಉ. ೪.

---

1 ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

2 ತದಾಹ ವೃತ್ತಿಕಾರಃ—ಭೂಮಾ ತ್ವೇವೇತಿ ಭೂಮಾ ಬ್ರಹ್ಮ ನಾಮಾದಿಪರಂಪರಯಾ ಆತ್ಮನ ಊರ್ಧ್ವಮುಪದೇಶಾದಿತಿ ।

3 ಛಾಂ. ಉ. ೭. ೨೪. ೧, ಬೃ. ಉ. ೪. ೫. ೧೫ ನೋಡಿ.

೬) ಆತ್ಮನ ಆನಂದಸ್ವರೂಪವನ್ನು ಉಪದೇಶಿಸಲು ಹೇಳಿದೆ. ಆದುದರಿಂದ ಈ ಶ್ರುತಿಯಲ್ಲಿ ಹೇಳಿರುವ ಸತ್ಯತ್ವ (ಛಾಂ. ಉ ೭. ೧೬. ೧), ಸ್ವಮಹಿಮ-ಪ್ರತಿಷ್ಠಿತತ್ವ (ಛಾಂ. ಉ. ೭. ೨೪. ೧), ಸರ್ವಗತತ್ವ (ಛಾಂ ಉ. ೭. ೨೫. ೧), ಸರ್ವಾತ್ಮತ್ವ (ಛಾಂ. ಉ. ೭. ೨೫. ೨)—ಇವೇ ಮೊದಲಾದ ಧರ್ಮಗಳು ಪರಮಾತ್ಮನಿಗೇ ಹೊಂದುವುದರಿಂದ ಅವನೇ ಭೂಮವು.

ವಿ.—ಸ್ವಾಭಾವಿಕ-ಅಮೃತತ್ವ, ಸ್ವಮಹಿಮ-ಪ್ರತಿಷ್ಠಿತತ್ವ, ಸರ್ವಾತ್ಮತ್ವ, ಸರ್ವೋತ್ಪತ್ತಿಹೇತುತ್ವ—ಇವೇ ಮೊದಲಾದ ಧರ್ಮಗಳು ಪರಬ್ರಹ್ಮನಿಗೇ ಹೊಂದುವುದರಿಂದ ಅವನೇ ಭೂಮವು.

**ದ್ವೈ.—ಸ ಏವಾಧಸ್ತಾತ್ ಸ ಉಪರಿಷ್ಟಾತ್** (ಛಾಂ. ಉ. ೭. ೨೫. ೧)—ಇವೇ ಮೊದಲಾದ ವಾಕ್ಯಗಳಲ್ಲಿ ಹೇಳಿರುವ ಸರ್ವಗತತ್ವಾದಿ-ಧರ್ಮಗಳು ವಿಷ್ಣುವಿನಲ್ಲಿಯೇ ಹೊಂದುವುದರಿಂದ ಭೂಮಶಬ್ದವಾಚ್ಯನು ವಿಷ್ಣುವೇ.

## ೩. ಅಕ್ಷರಾಧಿಕರಣ

(ಸೂ. ೧೦–೧೨)

**ಅಕ್ಷರಮಂಬರಾಂತಧೃತೇಃ ॥ ೧೦ ॥**

೧೦. ಅಕ್ಷರವು (ಬ್ರಹ್ಮವೇ), ಏಕೆಂದರೆ ಅದು ಆಕಾಶದವರೆಗೆ (ಎಲ್ಲಕ್ಕೂ ಆಧಾರವಾಗಿರುತ್ತದೆ).

'ಅವ್ಯಕ್ತವಾದ ಆಕಾಶವು ಯಾವುದರಿಂದ ವ್ಯಾಪ್ತವಾಗಿದೆ ?' 'ಗಾರ್ಗಿ, "ಇದೇ ಆ ಅಕ್ಷರವು" ಎಂದು ಬ್ರಾಹ್ಮಣರು ಹೇಳುತ್ತಾರೆ. ಅದು ಅಸ್ಥೂಲವು, ಅನಣು'[1] (ಬೃ. ಉ. ೩. ೮. ೭. ೮) ಇತ್ಯಾದಿ ; ಇಲ್ಲಿ ಬಂದಿರುವ ಅಕ್ಷರ-ಶಬ್ದವು ವರ್ಣವನ್ನು ಸೂಚಿಸುತ್ತದೆಯೊ ಅಥವಾ ಪರಮೇಶ್ವರನನ್ನು ಸೂಚಿಸುತ್ತದೆಯೊ—ಎಂಬುದು ಸಂಶಯ.

ಅಕ್ಷರ-ಶಬ್ದವು ವರ್ಣವನ್ನೇ ಸೂಚಿಸುತ್ತದೆ ಎಂಬುದು ಪೂರ್ವಪಕ್ಷ; ಏಕೆಂದರೆ **ಅಕ್ಷರ-ಸಮಾಮ್ನಾಯಃ** ಎಂಬಲ್ಲಿ ಅಕ್ಷರ-ಶಬ್ದವು ವರ್ಣವಾಚಕವೆಂದು ಪ್ರಸಿದ್ಧವಾಗಿದೆ ; ಮತ್ತು 'ಓಂಕಾರವೇ ಇದೆಲ್ಲವೂ'[2] (ಛಾಂ. ಉ ೨. ೨೩. ೩) ಎಂಬ ಇನ್ನೊಂದು ಶ್ರುತಿಯೂ ಕೂಡ ಉಪಾಸ್ಯವಾಗಿರುವ ಅಕ್ಷರವನ್ನೇ ಸರ್ವಾತ್ಮಕವೆಂದು ಹೇಳಿದೆ.

ಅಕ್ಷರ-ಶಬ್ದವು ಪರಮಾತ್ಮನನ್ನೇ ಸೂಚಿಸುತ್ತದೆ—ಎಂಬುದು ಸಿದ್ಧಾಂತ. ಏಕೆಂದರೆ ಅಕ್ಷರವು ಪೃಥ್ವಿಯಿಂದ ಪ್ರಾರಂಭಿಸಿ ಆಕಾಶದ ವರೆಗಿನ ಕಾರ್ಯ-ಸಮೂಹಕ್ಕೆಲ್ಲ ಆಧಾರವಾಗಿರುತ್ತದೆ. ಪೃಥ್ವಿಯೇ ಮೊದಲಾದ ಕಾರ್ಯಸಮೂಹಕ್ಕೆಲ್ಲ ಆಕಾಶವು ಆಧಾರವಾಗಿರುವಾಗ ಆಕಾಶಕ್ಕೆ ಅಕ್ಷರವೇ ಆಧಾರವಾಗಿದೆ 'ಓಂಕಾರವೇ ಇದೆಲ್ಲವೂ' ಎಂಬುದು ಬ್ರಹ್ಮಜ್ಞಾನಕ್ಕೆ ಸಾಧನವಾಗಿರುವ ಓಂಕಾರದ ಸ್ತುತಿಗಾಗಿ ಬಂದಿದೆಯೆಂದು ತಿಳಿದುಕೊಳ್ಳಬೇಕು. ಯಾವುದಕ್ಕೆ ಕ್ಷಯವಿಲ್ಲವೊ **(ನ ಕ್ಷರತಿ)**, ಯಾವುದು ಸರ್ವವ್ಯಾಪಕವಾಗಿರುವುದೂ **(ಅಶ್ನುತೇ)** ಅದು ಅಕ್ಷರವು ; ನಿತ್ಯವೂ ಸರ್ವವ್ಯಾಪಿಯೂ ಆಗಿರುವ ಅಕ್ಷರವು ಪರಬ್ರಹ್ಮವೇ.

**ವಿ.**—'ಅಕ್ಷರ-ಶಬ್ದ-ವಾಚ್ಯನು ಪರಬ್ರಹ್ಮನು ; ಏಕೆಂದರೆ ಆಕಾಶಕ್ಕೆ ಅಂತವಾದುದನ್ನು, ಎಂದರೆ ಪ್ರಧಾನವನ್ನು ಧರಿಸಿರುತ್ತಾನೆ' ಎಂಬುದು ಸೂತ್ರಾರ್ಥ

ಇಲ್ಲಿ ಅಕ್ಷರವು ಪ್ರಧಾನವನ್ನು ಸೂಚಿಸುತ್ತದೆ ಎಂಬುದು ಪೂರ್ವಪಕ್ಷ ; ಏಕೆಂದರೆ 'ಅವ್ಯಾಕೃತ-ಪ್ರಕೃತಿಗಿಂತ ಅಧಿಕನಾದ ಸಮಷ್ಟಿಪುರುಷನಿಗಿಂತ ಅಧಿಕನು'[3] (ಮುಂ. ಉ.

---

[1] ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ । ಸ ಹೋವಾಚ, ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ, ಅಸ್ಥೂಲಮನಣು—ಇತ್ಯಾದಿ ಶ್ರೂಯತೇ ।

[2] ಓಂಕಾರ ಏವೇದಂ ಸರ್ವಮ್ ।

[3] ಅಕ್ಷರಾತ್ ಪರತಃ ಪರಃ ।

೨ ೧ ೨) ಎಂಬಲ್ಲಿ ಅಕ್ಷರ-ಶಬ್ದವು ಪ್ರಧಾನವನ್ನು ಸೂಚಿಸುತ್ತದೆ ಅಕ್ಷರವು ಪರಬ್ರಹ್ಮನನ್ನೇ ಸೂಚಿಸುತ್ತದ—ಎಂಬುದು ಸಿದ್ಧಾಂತ, ಏಕೆಂದರೆ ಅಂಬರಕ್ಕೆ ಅಂತವಾಗಿರುವುದನ್ನು ಎಂದರೆ ಆಕಾಶಕ್ಕೆ ಪಾರವಾಗಿರುವ ಅವ್ಯಾಕೃತವನ್ನು (ಪ್ರಧಾನವನ್ನು) ಧರಿಸಿರುತ್ತದೆ ಎಂದು ಶ್ರುತಿಯು ಹೇಳುತ್ತದೆ, ಆದುದರಿಂದ ಅವ್ಯಾಕೃತಕ್ಕೆ ಆಧಾರವಾಗಿರುವ ಅಕ್ಷರವು ತಾನೇ ಅವ್ಯಾಕೃತವಾಗಲಾರದು [1]

ದ್ವೈ.—ಇಲ್ಲಿ ಹೇಳಿರುವ ಅಕ್ಷರನು ಪರಬ್ರಹ್ಮನೇ ಹೊರತು ಶ್ರೀತತ್ತ್ವವಲ್ಲ ಅಕಾಶಾಖ್ಯವಾದ ಶ್ರೀತತ್ತ್ವವು ಸರ್ವಾಧಾರವಾಗಿದ, ಅಂಥ ಆಕಾಶಕ್ಕೆ ಆಧಾರನಾದವನು ಪರಬ್ರಹ್ಮನೇ

## ಸಾ ಚ ಪ್ರಶಾಸನಾತ್ ॥ ೧೧ ॥

೧೧. ಈ (ಆಧಾರತ್ವವು ಪರಮೇಶ್ವರನಿಗೇ ಸೇರಿದ್ದು), ಏಕೆಂದರೆ ಪ್ರಶಾಸನವನ್ನು ಹೇಳಿದೆ

ಅಕ್ಷರವೆಂಬ ಕಾರಣವು ತನ್ನ ಕಾರ್ಯಗಳನ್ನೆಲ್ಲ ಧರಿಸಿರುವುದು ಪ್ರಧಾನಕ್ಕೆ ಹೊಂದುತ್ತದೆ, ಬ್ರಹ್ಮಕ್ಕಲ್ಲ ಎಂದು ಆಕ್ಷೇಪಣೆ ಮಾಡಿದರೆ, ಆಕಾಶದ ವರೆಗೆ ಎಲ್ಲಕ್ಕೂ ಆಧಾರವಾಗಿರುವುದು ಪರಮೇಶ್ವರನ ಕರ್ಮವೇ ಎಂಬುದು ಉತ್ತರ, ಏಕೆಂದರೆ ಶ್ರುತಿಯಲ್ಲಿ ಪ್ರಶಾಸನವನ್ನು ಹೇಳಿದೆ 'ಈ ಅಕ್ಷರದ ಶಾಸನದಿಂದಲೇ, ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ'[2] (ಬೃ ಉ ೩ ೮ ೯), ಈ ಪ್ರಶಾಸನವು ಪರಮೇಶ್ವರನ ಕರ್ಮವೇ ಹೊರತು ಅಚೇತನವಾದ ಪ್ರಧಾನದ್ದಲ್ಲ, ಕಾರಣವಾಗಿರುವ ಅಚೇತನವಾದ ಮಣ್ಣು ಮೊದಲಾದವು ತಮ್ಮ ಕಾರ್ಯವಾದ ಗಡಿಗೆ ಮೊದಲಾದುವುಗಳ ವಿಷಯದಲ್ಲಿ ಆಜ್ಞೆಮಾಡಲು ಸಾಧ್ಯವಿಲ್ಲ [3]

ವಿ.—ಪ್ರಶಾಸನವೆಂದರೆ ಪ್ರಕೃಷ್ಟವಾದ ಶಾಸನ, ಉಲ್ಲಂಘಿಸಲಾಗದ ಆಜ್ಞೆ,[4] ತನ್ನ ಶಾಸನಕ್ಕೆ ಅಧೀನವಾಗಿರುವ ಇಂಥ ಸರ್ವವಸ್ತುಗಳ ನಿಯಮಶಕ್ತಿಯು—ಬದ್ಧಾವಸ್ಥೆಯಲ್ಲಾಗಲಿ ಮುಕ್ತಾವಸ್ಥೆಯಲ್ಲಾಗಲಿ—ಜೀವನಿಗೆ ಸೇರಿದ್ದಲ್ಲ, ಆದುದರಿಂದ

---

[1] ಅತಸ್ತಸ್ಯಾವ್ಯಾಕೃತಸ್ಯಾಪ್ಯಾಧಾರತ್ವೇನೋಚ್ಯಮಾನಮಕ್ಷರಂ ನಾವ್ಯಾಕೃತಂ ಭವಿತುಮರ್ಹತೀತಿ (ಶ್ರೀಭಾಷ್ಯ)

[2] ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ।

[3] ಪ್ರಶಾಸನಂ ಚ ಪಾರಮೇಶ್ವರಂ ಕರ್ಮ । ನಾಚೇತನಸ್ಯ ಪ್ರಧಾನಸ್ಯ ಪ್ರಶಾಸನಂ ಭವತಿ । ನ ಹ್ಯಚೇತನಾನಾಂ ಘಟಾದಿಕಾರಣಾನಾಂ ಮೃದಾದೀನಾಂ ಘಟಾದಿವಿಷಯಂ ಪ್ರಶಾಸನಮಸ್ತಿ (ಸೂ ಭಾ )

[4] ಪ್ರಶಾಸನಮ್—ಪ್ರಕೃಷ್ಟಂ ಶಾಸನಮ್, ಅಪ್ರತಿಹತಾಜ್ಞಾ (ವೇ ದೀ )

ಪುರುಷೋತ್ತಮನೇ ಪ್ರಶಾಸನಮಾಡುವ ಅಕ್ಷರನು.[1]

ದ್ವೈ.— ಅಂಬರದ ವರೆಗಿನ ಸರ್ವವಸ್ತುಗಳ ಆಧಾರತ್ವವು ಅಕ್ಷರನ ಆಜ್ಞೆಯಿಂದಲೇ ಆಗುತ್ತದೆಂದು ಶ್ರುತಿಯು (ಬೃ ಉ. ೩. ೮. ೯) ಹೇಳುತ್ತದೆ. ಈ ಪ್ರಶಾಸನವು ವಿಷ್ಣುವಿಗೇ ಸೇರಿದ್ದು.[2]

## ಅನ್ಯಭಾವವ್ಯಾವೃತ್ತೇಶ್ಚ ॥ ೧೨ ॥

೧೨. ಮತ್ತು ಇನ್ನೊಂದರ ಭಾವವನ್ನು ಪ್ರತ್ಯೇಕಿಸಿರುವುದರಿಂದಲೂ (ಅಕ್ಷರವು ಪರಬ್ರಹ್ಮವೇ).

ಬ್ರಹ್ಮಕ್ಕಿಂತ ಬೇರೆಯಾಗಿ ಅಕ್ಷರ-ಶಬ್ದವು ಏನೇನನ್ನು ಸೂಚಿಸುತ್ತದೆಂದು ಭಾವಿಸಲಾಗುತ್ತದೆಯೊ ಅದರ ಸ್ವರೂಪದಿಂದ ಅಂಬರದ ವರೆಗಿನದೆಲ್ಲವನ್ನೂ ಧರಿಸಿರುವ ಅಕ್ಷರವನ್ನು ಶ್ರುತಿಯು ಪ್ರತ್ಯೇಕಿಸುತ್ತದೆ.[3] 'ಗಾರ್ಗಿ, ಆ ಈ ಅಕ್ಷರವು ಅದೃಷ್ಟವು, ಆದರೆ ದ್ರಷ್ಟೃವು; ಅದು ಅಶ್ರುತವು, ಆದರೆ ಶ್ರೋತೃವು ; ಅದು ಮನಸ್ಸಿಗೆ ವಿಷಯವಲ್ಲ, ಆದರೆ ಮನನಮಾಡುವುದು ; ಅದು ಅವಿಜ್ಞಾತವು, ಆದರೆ ವಿಜ್ಞಾತೃವು'[4] (ಬೃ. ಉ. ೩. ೮. ೧೧) ಎಂಬಲ್ಲಿ ಅದೃಷ್ಟತ್ವವೇ ಮೊದಲಾದುವುಗಳನ್ನು ಹೇಳಿರುವುದು ಪ್ರಧಾನಕ್ಕೆ ಅನ್ವಯಿಸಬಹುದಾದರೂ ದ್ರಷ್ಟೃತ್ವಾದಿಗಳನ್ನು ಹೇಳಿರುವುದು ಅಚೇತನವಾದ ಪ್ರಧಾನಕ್ಕೆ ಆಗುವುದಿಲ್ಲ ಹೀಗೆಯೇ 'ಅದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ, ಅದಕ್ಕಿಂತ ಬೇರೆಯಾದ ಶ್ರೋತೃವಿಲ್ಲ, ಅದಕ್ಕಿಂತ ಬೇರೆಯಾದ ಮಂತೃವಿಲ್ಲ, ಅದಕ್ಕಿಂತ ಬೇರೆಯಾದ ವಿಜ್ಞಾತೃವಿಲ್ಲ'[5] (ಬೃ ಉ. ೩. ೮. ೧೧) ಎಂದು ಆತ್ಮನಿಗಿಂತ ಬೇರೆಯಾದುದನ್ನು ನಿಷೇಧಿಸಿರುವುದರಿಂದ ಉಪಾಧಿಯಿಂದ ಕೂಡಿರುವ ಜೀವನೂ ಅಕ್ಷರಶಬ್ದ-ವಾಚ್ಯನಲ್ಲ. ಮತ್ತೆ 'ಅದು ಅಚಕ್ಷುಸ್ಸು, ಅಶ್ರೋತ್ರವು, ಅವಾಕ್ಕು, ಅಮನಸ್ಸು'[6] (ಬೃ. ಉ ೩ ೭. ೮) ಎಂಬಲ್ಲಿ ಅಕ್ಷರಕ್ಕೆ ಉಪಾಧಿಯನ್ನು ನಿಷೇಧಿಸಿದೆ. ಉಪಾಧಿಯಿಲ್ಲದವನು ಜೀವನೆನಿಸ

---

1 ನ ಚೇದೃಶಂ ಸ್ವಶಾಸನಾಧೀನಸರ್ವವಸ್ತುವಿಧರಣಂ ಬದ್ಧಮುಕ್ತೋಭಯಾವಸ್ಥಸ್ಯಾಪಿ ಪ್ರತ್ಯಗಾತ್ಮನಃ ಸಂಭವತಿ (ಶ್ರೀಭಾಷ್ಯ).

2 ತಚ್ಚ ಪ್ರಶಾಸನಂ ವಿಷ್ಣೋರೇವ (ಮ. ಭಾ.).

3 ಯದನ್ಯದ್ಬ್ರಹ್ಮಣೋಽಕ್ಷರಶಬ್ದವಾಚ್ಯಮಿಹಾಶಂಕ್ಯತೇ ತದ್ಭಾವಾದಿದಮಂಬರಾಂತವಿಧಾರಣಮಕ್ಷರಂ ವ್ಯಾವರ್ತಯತಿ ಶ್ರುತಿಃ (ಸೂ. ಭಾ.).

4 ತದ್ವಾ ಏತದಕ್ಷರಂ ಗಾರ್ಗಿ, ಅದೃಷ್ಟಂ ದ್ರಷ್ಟೃ, ಅಶ್ರುತಂ ಶ್ರೋತೃ, ಅಮತಂ ಮಂತೃ, ಅವಿಜ್ಞಾತಂ ವಿಜ್ಞಾತೃ ।

5 ನಾನ್ಯದತೋಽಸ್ತಿ ದ್ರಷ್ಟೃ, ನಾನ್ಯದತೋಽಸ್ತಿ ಶ್ರೋತೃ, ನಾನ್ಯದತೋಽಸ್ತಿ ಮಂತೃ, ನಾನ್ಯದತೋಽಸ್ತಿ ವಿಜ್ಞಾತೃ ।

6 ಅಚಕ್ಷುಷ್ಕಮಶ್ರೋತ್ರಮವಾಗಮನಃ ।

ಲಾರನು.[1] ಆದುದರಿಂದ ಅಕ್ಷರವು ಪರಬ್ರಹ್ಮವೇ.

ವಿ.—ಅನ್ಯಭಾವವೆಂದರೆ ಅನ್ಯತ್ವವು ; ಈ ಅಕ್ಷರಕ್ಕೆ ಪರಮಪುರುಷನಿಗಿಂತ ಬೇರೆಯಾಗಿರುವಿಕೆಯನ್ನು ವಾಕ್ಯಶೇಷವು ನಿರಾಕರಿಸುತ್ತದೆ.[2] ಶ್ರುತಿಯ ಪ್ರಕಾರ (ಬೃ. ಉ. ೩. ೮. ೧೧) ಇಂಥ ಅಕ್ಷರನು ಜೀವನೂ ಅಲ್ಲ, ಪ್ರಕೃತಿಯೂ ಅಲ್ಲ; ಏಕೆಂದರೆ ಪ್ರಧಾನವು ದ್ರಷ್ಟೃವಾಗಲಾರದು, ಜೀವನು ಪರಮಾತ್ಮನಿಗೆ ಅದೃಷ್ಟನಾಗಲಾರನು.

ದ್ವೈ.—ಶ್ರುತಿಯು 'ಅದು ಅಸ್ಥೂಲವು, ಅನಣು' (ಬೃ. ಉ ೩. ೮. ೮) ಎಂದು ಸ್ಥೂಲತ್ವ ಅಣುತ್ವ ಮೊದಲಾದ ಅನ್ಯವಸ್ತುಸ್ವಭಾವವನ್ನು ನಿರಾಕರಿಸಿರುವುದರಿಂದ ಅಕ್ಷರಶಬ್ದ-ವಾಚ್ಯನು ಬ್ರಹ್ಮನೇ [3]

---

[1] ನ ಹಿ ನಿರುಪಾಧಿಕಃ ಶಾರೀರೋ ನಾಮ ಭವತಿ (ಸೂ. ಭಾ.).

[2] ಅನ್ಯಭಾವಃ ಅನ್ಯತ್ವಮ್ । ಅಸ್ಯಾಕ್ಷರಸ್ಯ ಪರಮಪುರುಷಾದನ್ಯತ್ವಂ ವ್ಯಾವರ್ತಯತಿ ವಾಕ್ಯಶೇಷಃ (ವೇ. ದೀ.).

[3] ಅಸ್ಥೂಲಮನಣ್ವಿತ್ಯಾದಿನಾ ಸ್ಥೂಲಾಣ್ವಾದೀನಾಮನ್ಯವಸ್ತು ಸ್ವಭಾವಾನಾಂ ವ್ಯಾವೃತ್ತೇಶ್ಚ (ಮ. ಭಾ.).

# ೪. ಈಕ್ಷತಿಕರ್ಮವ್ಯಪದೇಶಾಧಿಕರಣ

**ಈಕ್ಷತಿಕರ್ಮವ್ಯಪದೇಶಾತ್ ಸಃ || ೧೩ ||**

೧೩. ಈಕ್ಷಣಕ್ಕೆ ವಿಷಯವೆಂದು ಹೇಳಿರುವುದರಿಂದ ಆ (ಪರಬ್ರಹ್ಮವೇ ಧ್ಯೇಯವಾಗಿರುತ್ತದೆ)

'ಹೇ ಸತ್ಯಕಾಮ, ಓಂಕಾರವೇ ಪರಬ್ರಹ್ಮವೂ ಅಪರಬ್ರಹ್ಮವೂ ಆಗಿವೆ ಆದುದರಿಂದ ತಿಳಿದವನು ಈ ಆಲಂಬನದಿಂದಲೇ ಇವೆರಡರಲ್ಲಿ ಒಂದನ್ನು ಹೊಂದುತ್ತಾನೆ'[1] (ಪ್ರ ಉ ೫ ೨) ಎಂದು ಪ್ರಾರಂಭಿಸಿ ಶ್ರುತಿಯು ಮುಂದುವರಿಯುತ್ತದೆ 'ಆದರೆ ಯಾವನು ಮೂರು ಮಾತ್ರೆಗಳುಳ್ಳ ಓಂ ಎಂಬ ಈ ಅಕ್ಷರದಿಂದಲೇ ಈ ಪರಮಪುರುಷನನ್ನು ಅಭಿಧ್ಯಾನಿಸುವನೊ ಅವನು ಜ್ಯೋತಿರ್ಮಯನಾದ ಸೂರ್ಯನಲ್ಲಿ ಒಂದಾಗುತ್ತಾನೆ'[2] (ಪ್ರ ಉ ೫ ೫), ಇಲ್ಲಿ ಪರಬ್ರಹ್ಮವನ್ನು ಧ್ಯೇಯವೆಂದು ಹೇಳಿದೆಯೊ ಅಥವಾ ಅಪರಬ್ರಹ ವನ್ನು ಧ್ಯೇಯವೆಂದು ಹೇಳಿದೆಯೊ—ಎಂಬುದು ಸಂಶಯ, ಏಕೆಂದರೆ ೫ ೨ನೆಯ ಶ್ಲೋಕದ ಪ್ರಕಾರ ಪರಾಪರಬ್ರಹ್ಮಗಳಲ್ಲಿ ಒಂದನ್ನು ಹೊಂದಬಹುದು.

**ಪೂರ್ವಪಕ್ಷಿ**—ಅಪರಬ್ರಹ್ಮವೇ ಧ್ಯೇಯವು, ಏಕೆಂದರೆ 'ಸೂರ್ಯನಲ್ಲಿ ಒಂದಾಗುತ್ತಾನೆ' (ಪ್ರ ಉ ೫ ೫), 'ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ'[3] (ಪ್ರ ಉ ೫ ೫) ಎಂದು ದೇಶಪರಿಚ್ಛಿನ್ನವಾದ ಫಲವನ್ನು ಉಪಾಸಕನಿಗೆ ಹೇಳಿದೆ ಪರಬ್ರಹ್ಮವನ್ನು ಅರಿತುಕೊಂಡವನಿಗೆ ಇದು ಯೋಗ್ಯವಾದ ಫಲವಲ್ಲ, ಏಕೆಂದರೆ ಪರಬ್ರಹ್ಮವು ಸರ್ವಗತವಾಗಿರುತ್ತದೆ ಅಪರಬ್ರಹ್ಮವನ್ನು ಒಪ್ಪಿಕೊಂಡರೂ 'ಪರಮಪುರುಷನನ್ನು' ಎಂಬ ವಿಶೇಷಣದಲ್ಲಿ ಯಾವ ದೋಷವೂ ಇಲ್ಲ, ಏಕೆಂದರೆ ಸ್ಥೂಲದೇಹದ ಅಪೇಕ್ಷೆಯಿಂದ ಪ್ರಾಣನು[4] (ಸೂತ್ರಾತ್ಮನು ಅಥವಾ ಹಿರಣ್ಯಗರ್ಭನು) ಶ್ರೇಷ್ಠನಾಗಬಹುದು

**ಸಿದ್ಧಾಂತಿ**—ಪರಬ್ರಹ್ಮವೇ ಧ್ಯೇಯವು; ಏಕೆಂದರೆ ಈಕ್ಷಣವೆಂಬ (ಎಂದರೆ ದರ್ಶನವೆಂಬ) ಕ್ರಿಯೆಗೆ ಧ್ಯೇಯನಾದ ಪುರುಷನು ವಿಷಯನೆಂದು ಶ್ರುತಿಯು ಹೇಳುತ್ತದೆ

---

* ಮಧ್ವಭಾಷ್ಯದಲ್ಲಿ ಈ ಸೂತ್ರವನ್ನು ಸದಧಿಕರಣ ಎಂದು ಪರಿಗಣಿಸಿದೆ

[1] ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ ವಿದ್ವಾನೇತೇನೈವಾಯತನೇನೈಕತರಮನ್ವೇತಿ ।

[2] ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ, ಸ ತೇಜಸಿ ಸೂರ್ಯೇ ಸಂಪನ್ನಃ ।

[3] ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್ ।

[4] ಪಿಂಡಃ ಸ್ಥೂಲೋ ದೇಹಃ, ಪ್ರಾಣಃ ಸೂತ್ರಾತ್ಮಾ (ನ್ಯಾ. ನಿ ).

'ಅವನು ಶ್ರೇಷ್ಠನಾದ ಹಿರಣ್ಯಗರ್ಭನಿಗಿಂತಲೂ ಶ್ರೇಷ್ಠನಾದ ಮತ್ತು ಎಲ್ಲ ಶರೀರಗಳಲ್ಲಿಯೂ ಪ್ರವೇಶಿಸಿರುವ ಪುರುಷನನ್ನು ನೋಡುತ್ತಾನೆ'[1] (ಪ್ರ. ಉ. ೫. ೫). ಧ್ಯಾನಕ್ಕೆ ಮಿಥ್ಯಾಭೂತವಾದ ವಸ್ತುವು ವಿಷಯವಾಗಬಹುದಾದರೂ ದರ್ಶನಕ್ಕೆ (ಎಂದರೆ ನೋಡುವುದಕ್ಕೆ) ಸತ್ಯವಾದ ವಸ್ತುವೇ ವಿಷಯವಾಗಬೇಕು. ಆದುದರಿಂದ ಸಮ್ಯಗ್ದರ್ಶನಕ್ಕೆ ವಿಷಯವಾಗಿರುವ ಪರಮಾತ್ಮನನ್ನೇ ದರ್ಶನಕ್ಕೆ ವಿಷಯನೆಂದು ಹೇಳಿದೆ.[2] 'ಜೀವಘನನು' (ಪ್ರ. ಉ. ೫. ೫) ಎಂಬ ಶಬ್ದವು ಧ್ಯೇಯನಾದ ಪರಮಪುರುಷನನ್ನು ಸೂಚಿಸುವುದಿಲ್ಲ; ಹಾಗಿದ್ದರೆ ಧ್ಯೇಯನಾದ ಪರಮಪುರುಷನು ಬೇರೆ, ದರ್ಶನಕ್ಕೆ ವಿಷಯನಾದ ಪರಮಪುರುಷನು ಬೇರೆ ಎಂದಾಗುತ್ತಿತ್ತು. ಘನವೆಂದರೆ ರೂಪವು;[3] ಯಾವನ ರೂಪವು ಜೀವರಿಂದ ವಿಶಿಷ್ಟವಾಗಿದೆಯೊ ಅವನು ಜೀವಘನನು; ಪರಮಾತ್ಮನಿಗೆ ಉಪಾಧಿಯಿಂದ ಜೀವರೂಪವುಳ್ಳ ಪರಿಚ್ಛಿನ್ನರೂಪವುಂಟಾಗಿದೆ ಎಂದರ್ಥ.[4] ಜೀವಘನನು ವಿಷಯೇಂದ್ರಿಯಗಳಿಗಿಂತ ಉತ್ತಮನಾಗಿರುವುದರಿಂದ 'ಶ್ರೇಷ್ಠನು' (**ಪರಃ**) ಎನ್ನಿಸಿಕೊಳ್ಳುತ್ತಾನೆ.

ಇನ್ನೊಬ್ಬ ಭಾಷ್ಯಕಾರರ ಪ್ರಕಾರ ಬ್ರಹ್ಮಲೋಕವೇ ಜೀವಘನವೆನಿಸಬಹುದು;[5] ಏಕೆಂದರೆ ಇಂದ್ರಿಯಗಳಿಗೆಲ್ಲ ಆತ್ಮನೂ ಬ್ರಹ್ಮಲೋಕನಿವಾಸಿಯೂ ಆದ ಹಿರಣ್ಯಗರ್ಭನಲ್ಲಿ ಇಂದ್ರಿಯಗಳಿಂದ ಆವರಿಸಲ್ಪಟ್ಟ ಜೀವರು ಅಂತರ್ಗತರಾಗಿರುತ್ತಾರೆ. ಹೀಗೆ ಶ್ರೇಷ್ಠವಾದ ಜೀವಘನಕ್ಕಿಂತ ಶ್ರೇಷ್ಠನಾದ ಪರಮೇಶ್ವರನು ದರ್ಶನಕ್ಕೂ ಧ್ಯಾನಕ್ಕೂ ವಿಷಯನಾಗಿರುತ್ತಾನೆ.

'ಪರಮಪುರುಷನನ್ನು' ಎಂಬ ವಿಶೇಷಣವು ಪರಮಾತ್ಮನನ್ನು ಗ್ರಹಿಸಿದರೆ ಮಾತ್ರ ಹೊಂದುತ್ತದೆ; ಏಕೆಂದರೆ ಯಾವನಿಗಿಂತ ಅಧಿಕವಾದುದು ಯಾವುದೂ ಇಲ್ಲವೂ ಅವನೇ ಪರಮಾತ್ಮನಾಗಬೇಕು.[6] ಆದುದರಿಂದ ಶ್ರುತಿಯು ಪರ-ಅಪರ-ಬ್ರಹ್ಮಗಳನ್ನು ಮೊದಲು ಹಿಂಗಡಿಸಿ, ಅನಂತರ ಓಂಕಾರದ ಮೂಲಕ ಧ್ಯಾನಿಸಲ್ಪಡಬೇಕಾದ ಪರಮಪುರುಷನನ್ನು ಹೇಳಿ, ಪರಮಪುರುಷನೇ ಪರಬ್ರಹ್ಮನೆಂದು ತಿಳಿಸುತ್ತದೆ. ಪಾಪವಿಮೋಚನವೆಂಬ ಫಲವನ್ನು ಹೇಳುವ ವಚನದಿಂದಲೂ[7] ಪರಮಾತ್ಮನೇ ಧ್ಯೇಯನೆಂದು ಅರಿತುಕೊಳ್ಳಬಹುದು.

---

[1] ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ।

[2] ಅತಃ ಪರಮಾತ್ಮೈವಾಯಂ ಸಮ್ಯಗ್ದರ್ಶನವಿಷಯಭೂತ ಈಕ್ಷತಿಕರ್ಮತ್ವೇನ ವ್ಯಪದಿಷ್ಟ ಇತಿ ಗಮ್ಯತೇ (ಸೂ. ಭಾ.).

[3] ಮೂರ್ತೌ ಘನಃ (ಪಾಣಿನಿ, ೩. ೭. ೭೭).

[4] ಪರಮಾತ್ಮನೋ ಜೀವರೂಪಃ ಖಿಲ್ಯಭಾವ ಉಪಾಧಿಕೃತಃ (ಸೂ. ಭಾ.).

[5] 'ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ' (ಪ್ರ. ಉ. ೫. ೫).

[6] 'ಪುರುಷನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ; ಅದೇ ಕೊನೆ, ಅದೇ ಶ್ರೇಷ್ಠವಾದ ಗತಿ' ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ (ಕ. ಉ. ೧. ೩. ೧೧).

[7] ಸರ್ಪವು ಹೇಗೆ ಪರೆಯಿಂದ ಹೊರಕ್ಕೆ ಬರುತ್ತದೆಯೊ ಹಾಗೆಯೇ ಪಾಪದಿಂದ ಮುಕ್ತನಾಗುತ್ತಾನೆ' ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ (ಪ್ರ. ಉ. ೫. ೫).

ಪರಮಾತ್ಮನನ್ನು ಧ್ಯಾನಿಸುವವನಿಗೆ ದೇಶಪರಿಚ್ಛಿನ್ನವಾದ ಫಲವುಂಟಾಗುವುದೆಂಬ ಆಕ್ಷೇಪಣೆಯು ಸರಿಯಲ್ಲ, ಏಕೆಂದರೆ ಮೂರು ಮಾತ್ರೆಗಳುಳ್ಳ ಓಂಕಾರವೆಂಬ ಆಲಂಬನದಿಂದ ಪರಮಾತ್ಮನನ್ನು ಧ್ಯಾನಿಸುವವನಿಗೆ ಮೊದಲು ಬ್ರಹ್ಮಲೋಕಪ್ರಾಪ್ತಿಯೂ ಅನಂತರ ಕ್ರಮವಾಗಿ ಸಮ್ಯಗ್ದರ್ಶನವೂ ಉಂಟಾಗುತ್ತವೆ

ವಿ.—ಶ್ರುತಿಯಲ್ಲಿ (ಪ್ರ ಉ ೫ ೨) ನಿರ್ದಿಷ್ಟನಾದ ಪರಮಪುರುಷನು ಜೀವಸಮಷ್ಟಿರೂಪನಾದ ಚತುರ್ಮುಖಬ್ರಹ್ಮನೊ ಅಥವಾ ಸರ್ವೇಶ್ವರನಾದ ಪುರುಷೋತ್ತಮನೊ—ಎಂಬುದು ಸಂಶಯ, ಚತುರ್ಮುಖಬ್ರಹ್ಮನೇ—ಎಂಬುದು ಪೂರ್ವಪಕ್ಷ, ಏಕೆಂದರೆ ಒಂದು ಮಾತ್ರೆಯುಳ್ಳ ಪ್ರಣವವನ್ನು ಧ್ಯಾನಿಸುವವನು ಮನುಷ್ಯಲೋಕವನ್ನು ಹೊಂದುವನೆಂದೂ (ಪ್ರ ಉ ೫ ೩), ಎರಡು ಮಾತ್ರೆಗಳುಳ್ಳ ಪ್ರಣವವನ್ನು ಧ್ಯಾನಿಸುವವನು ಅಂತರಿಕ್ಷಲೋಕವನ್ನು ಹೊಂದುವನೆಂದೂ (ಪ್ರ ಉ ೫ ೪), ಮೂರು ಮಾತ್ರೆಗಳುಳ್ಳ ಪ್ರಣವವನ್ನು ಧ್ಯಾನಿಸುವವನು ಬ್ರಹ್ಮಲೋಕವನ್ನು ಹೊಂದುವನೆಂದೂ (ಪ್ರ ಉ ೫ ೫) ಶ್ರುತಿಯು ಹೇಳುತ್ತದೆ ಬ್ರಹ್ಮಲೋಕವಾಸಿಯೂ ಜೀವಸಮಷ್ಟಿರೂಪನೂ ಆದ ಬ್ರಹ್ಮನು ದೇಹೇಂದ್ರಿಯಗಳೊಂದಿಗೆ ಘನೀಭೂತರಾದ ವ್ಯಷ್ಟಿಜೀವರಿಗಿಂತ ಶ್ರೇಷ್ಠನು

ಪರಮಾತ್ಮನೇ ದರ್ಶನಕ್ಕೆ ವಿಷಯನು ಎಂಬುದು ಸಿದ್ಧಾಂತ, ಏಕೆಂದರೆ ಶ್ರುತಿಯು 'ಶಾಂತವೂ ಅಜರವೂ ಅಮೃತವೂ ಅಭಯವೂ ಪರವೂ ಆದುದನ್ನು ಜ್ಞಾನಿಯು ಓಂಕಾರದಿಂದಲೇ ಹೊಂದುತ್ತಾನೆ'[1] (ಪ್ರ ಉ ೫ ೭) ಎಂದು ಪರಮಾತ್ಮನ ಧರ್ಮಗಳನ್ನೇ ಹೇಳುತ್ತದೆ **ಏತಸ್ಮಾಜ್ಜೀವಘನಾತ್ ಪರಾತ್ ಪರಮ್**[2] ಎಂಬಲ್ಲಿರುವ ವಿಶೇಷಣವು ಪರಮಾತ್ಮನನ್ನೇ ಸೂಚಿಸುತ್ತದೆ, ಚತುರ್ಮುಖನನ್ನಲ್ಲ, ಏಕೆಂದರೆ ಚತುರ್ಮುಖನೇ ಜೀವಘನನಾಗಿದ್ದಾನೆ ಕರ್ಮನಿಮಿತ್ತದಿಂದ ದೇಹವನ್ನು ಹೊಂದಿದವರಿಗೆ ಜೀವಘನರೆಂದು ಹೆಸರು[3] 'ಯಾವನು ಪೂರ್ವದಲ್ಲಿ ಬ್ರಹ್ಮನನ್ನು ಸೃಷ್ಟಿಸಿದನೊ'[4] (ಶ್ವೇ ಉ ೬ ೧೮) ಎಂದು ಶ್ರುತಿಯೇ ಚತುರ್ಮುಖನ ಸೃಷ್ಟಿಯನ್ನು ಹೇಳಿದೆ ಭಕ್ತನು ನೋಡುವ ಬ್ರಹ್ಮಲೋಕವು ಕ್ಷಯಿಸಿಹೋಗುವ ಚತುರ್ಮುಖನ ಲೋಕವಾಗಲಾರದು[5]

'ಧ್ಯಾನಿಸುತ್ತಾನೆ', 'ನೋಡುತ್ತಾನೆ' ಎಂಬ ಶಬ್ದಗಳಿಗೆ ಒಂದೇ ಅರ್ಥವಿದೆ,

---

[1] ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ ।

[2] 'ಈ ಸಂಸಾರಿಮಂಡಲದಲ್ಲಿ ಇರುವವರಿಗೆ ಶ್ರೇಷ್ಠರಾದ ಪರಿಶುದ್ಧಾತ್ಮರಿಗಿಂತ ಶ್ರೇಷ್ಠನಾದ'

[3] ಯಸ್ಯ ಹಿ ಕರ್ಮನಿಮಿತ್ತಂ ದೇಹಿತ್ವಂ ಸ ಜೀವಘನ ಇತ್ಯುಚ್ಯತೇ (ಶ್ರೀಭಾಷ್ಯ)

[4] ಯೋ ಬ್ರಹ್ಮಾಣಂ ವಿದಧಾತಿ ಪೂರ್ವಮ್ ।

[5] ಈಕ್ಷಿತುಃ ಸ್ಥಾನತಯಾ ನಿರ್ದಿಷ್ಟೋ ಬ್ರಹ್ಮಲೋಕೋ ನ ಕ್ಷಯಿಷ್ಣುಶ್ಚತುರ್ಮುಖಲೋಕೋ ಭವಿತುಮರ್ಹತಿ (ಶ್ರೀಭಾಷ್ಯ)

ಏಕೆಂದರೆ ಧ್ಯಾನದ ಫಲವೇ ದರ್ಶನವು.[1]

**ದ್ವೈ.**—'(ಸತ್-ಶಬ್ದವಾಚ್ಯನು) ಅವನೇ; ಏಕೆಂದರೆ ಶ್ರುತಿಯು ಅವನಿಗೆ ಈಕ್ಷಣಕರ್ಮವನ್ನು ಹೇಳಿದೆ' ಎಂಬುದು ಸೂತ್ರಾರ್ಥ.

'ಅವನು ನೋಡಿದನು' (ಛಾಂ. ಉ. ೬. ೨. ೩) ಎಂಬಲ್ಲಿ ಈಕ್ಷಣವನ್ನೂ ಜಗತ್ಸೃಷ್ಟಿಯನ್ನೂ ಸದ್ವಸ್ತುವಿಗೆ ಹೇಳಿದೆ; ಈ ಸದ್ವಸ್ತುವು ವಿಷ್ಣುವೇ,[2] ಜಡಪ್ರಕೃತಿಯಲ್ಲ. 'ಅವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ'[3] (ಬೃ. ಉ. ೩. ೭. ೨೩) ಎಂದು ಶ್ರುತಿಯು ಅವನ ಲಕ್ಷಣವನ್ನು ತಿಳಿಸುತ್ತದೆ.

---

1 ಅತ್ರ ಧ್ಯಾಯತೀಕ್ಷತಿಶಬ್ದಾವೇಕವಿಷಯೌ ಧ್ಯಾನಫಲತ್ವಾದೀಕ್ಷಣಸ್ಯ (ಶ್ರೀಭಾಷ್ಯ).

2 ತದೈಕ್ಷತೇತೀಕ್ಷತಿಕರ್ಮವ್ಯಪದೇಶಾತ್ ಸ ಏವ ವಿಷ್ಣುರತ್ರೋಚ್ಯತೇ (ಮ. ಭಾ.).

3 ನಾನ್ಯೋಽತೋಽಸ್ತಿ ದ್ರಷ್ಟಾ।

## ೫. ದಹರಾಧಿಕರಣ

(ಸೂ. ೧೪–೨೧)

**ದಹರ ಉತ್ತರೇಭ್ಯಃ ॥ ೧೪ ॥**

೧೪. ಮುಂದಿನ (ವಾಕ್ಯಗಳಲ್ಲಿ ಸೂಚಿಸಿರುವ ಕಾರಣಗಳಿಂದ) ದಹರವಾದ * (ಆಕಾಶವು ಪರಮಾತ್ಮನೇ).

'ಈ ಬ್ರಹ್ಮಪುರದಲ್ಲಿ ಸಣ್ಣದಾದ ಹೃದಯಪದ್ಮವೆಂಬ ಒಂದು ಮನೆಯಿದೆ. ಅದರಲ್ಲಿ ಸಣ್ಣದಾದ ಒಂದು ಅಂತರಾಕಾಶವಿದೆ; ಅದರಲ್ಲಿ ಯಾವುದಿದೆಯೊ ಅದನ್ನು ಅನ್ವೇಷಿಸಬೇಕು, ಅದನ್ನೇ ಅರಿತುಕೊಳ್ಳಲು ಬಯಸಬೇಕು'[1] (ಛಾಂ. ಉ ೮. ೧. ೧) ಎಂಬುದು ವಿಷಯವಾಕ್ಯ; ಇಲ್ಲಿ ಹೇಳಿರುವ ದಹರಾಕಾಶವು ಭೂತಾಕಾಶವೊ ಅಥವಾ ಜೀವಾತ್ಮನೊ ಅಥವಾ ಪರಮಾತ್ಮನೊ—ಎಂಬುದು ಸಂಶಯ.

**ಪೂರ್ವಪಕ್ಷ**—ಆಕಾಶ-ಶಬ್ದವು ರೂಢಿಯಲ್ಲಿ ಭೂತಾಕಾಶವನ್ನೇ ಸೂಚಿಸುವುದರಿಂದ ದಹರವೆಂದರೆ ಭೂತಾಕಾಶವಾಗಬಹುದು. ಅದು ಸರ್ವವ್ಯಾಪಿಯಾಗಿದ್ದರೂ ಸಣ್ಣದಾದ ಹೃದಯದಲ್ಲಿರುವುದರಿಂದ ದಹರವೆನಿಸಿದೆ. ಆಕಾಶವು ಒಂದೇ ಆಗಿದ್ದರೂ, ಒಳಗಿನ ಆಕಾಶ ಹೊರಗಿನ ಆಕಾಶ ಎಂಬ ಭೇದವು ಸಾಧ್ಯವಾದುದರಿಂದ, 'ಆ ಆಕಾಶವು ಎಷ್ಟು ದೊಡ್ಡದಾಗಿರುವುದೊ ಹೃದಯದಲ್ಲಿರುವ ಈ ಆಕಾಶವೂ ಅಷ್ಟೇ ದೊಡ್ಡದಾಗಿದೆ'[2] (ಛಾಂ. ಉ. ೮. ೧. ೩) ಎಂಬಲ್ಲಿ ಆಕಾಶವನ್ನೇ ಆಕಾಶಕ್ಕೆ ಹೋಲಿಸಿದೆ. ಅಥವಾ ದಹರಾಕಾಶವು ಜೀವನನ್ನು ಸೂಚಿಸಬಹುದು; ಏಕೆಂದರೆ ಬ್ರಹ್ಮಪುರವೆಂಬ ಶಬ್ದವಿದೆ. ಶರೀರವು ಜೀವನ ಪುರವಾಗಿರುವುದರಿಂದ ಬ್ರಹ್ಮಪುರವೆನಿಸಿದೆ. ಜೀವನನ್ನು ಗೌಣವೃತ್ತಿಯಿಂದ ಬ್ರಹ್ಮವೆಂದು ಕರೆದಿದೆ. ಪರಬ್ರಹ್ಮವು ಶರೀರದ ಸ್ವಾಮಿಯಾಗಿ ಅದಕ್ಕೆ ಸಂಬಂಧಿಸಿಲ್ಲ. ಜೀವನು ಮನಸ್ಸೆಂಬ ಉಪಾಧಿಯುಳ್ಳವನು; ಮನಸ್ಸು ಮುಖ್ಯವಾಗಿ ಹೃದಯದಲ್ಲಿರುವುದೆಂದು ಹೇಳಿರುವುದರಿಂದ ಜೀವನು ಹೃದಯದಲ್ಲಿರುವನೆಂದು ಹೇಳಬಹುದು. ಶ್ವೇತಾಶ್ವತರೋಪನಿಷತ್ತು (೫. ೮) ಜೀವನನ್ನು ದಬ್ಬಳದ ತುದಿಗೆ ಹೋಲಿಸಿರುವುದರಿಂದ ಜೀವನು ದಹರನೆಂಬುದು ಹೊಂದುತ್ತದೆ. ಶ್ರುತಿಯು ದಹರವಾದ ಆಕಾಶವನ್ನೇ ಹುಡುಕಬೇಕೆಂದು ಹೇಳಿಲ್ಲ; ಅದರಲ್ಲಿ ಯಾವುದಿದೆಯೊ ಅದನ್ನೇ ಅನ್ವೇಷಿಸಬೇಕೆಂದು ಹೇಳಿದೆ.

---

* ಎಂದರೆ ಸಣ್ಣದಾದ.

1 ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ।

2 ಯಾವಾನ್ ವಾ ಅಯಮಾಕಾಶಃ, ತಾವಾನೇಷೋಽಂತರ್ಹೃದಯ ಆಕಾಶಃ ।

**ಸಿದ್ಧಾಂತಿ**—ದಹರವು ಭೂತಾಕಾಶವಾಗಲಾರದು ; ಏಕೆಂದರೆ ದಹರಾಕಾಶವನ್ನೇ ಅನ್ವೇಷಿಸಬೇಕು, ಅದನ್ನೇ ಅರಿತುಕೊಳ್ಳಲು ಬಯಸಬೇಕು, ಅದು ಹೊರಗಿನ ಆಕಾಶದಂತೆ ದೊಡ್ಡದಾಗಿದೆ, ಅದರಲ್ಲಿ ದ್ಯುಲೋಕ-ಪೃಥ್ವಿಗಳೆರಡೂ ಅಂತರ್ಗತವಾಗಿವೆ[1]—ಎಂದು ಶ್ರುತಿಯು ದಹರಾಕಾಶದ ಅಲ್ಪತ್ವವನ್ನು ನಿರಾಕರಿಸಿದೆ. 'ಇದು ಪಾಪ ಮುಪ್ಪು ಮೃತ್ಯು ಶೋಕ ಹಸಿವು ಬಾಯಾರಿಕೆ–ಇವುಗಳಿಲ್ಲದವನಾದ, ಸತ್ಯಕಾಮನಾದ, ಸತ್ಯಸಂಕಲ್ಪನಾದ ಆತ್ಮನು'[2] (ಛಾಂ. ಉ. ೮. ೧. ೫) ಎಂಬಲ್ಲಿ ಬ್ರಹ್ಮಕ್ಕೆ ಆತ್ಮತ್ವ, ಪಾಪರಹಿತತ್ವ ಮೊದಲಾದ ಗುಣಗಳನ್ನು ಹೇಳಿದೆ. ಇವು ಭೂತಾಕಾಶಕ್ಕೆ ಹೊಂದುವುದಿಲ್ಲ. ದಹರಾಕಾಶವನ್ನು ಅನ್ವೇಷಿಸಬೇಕಾಗಿಲ್ಲ, ಅದು ಮತ್ತೊಂದಕ್ಕೆ ವಿಶೇಷಣವಾಗಿದೆ ಎಂಬ ಆಕ್ಷೇಪಣೆಗೆ ಪರಿಹಾರ ಹೀಗಿದೆ: ದಹರಾಕಾಶದಲ್ಲಿರುವ ದ್ಯಾವಾಪೃಥಿವಿಗಳನ್ನು ಮಾತ್ರ ಅರಿತುಕೊಂಡರೆ ವಾಕ್ಯಶೇಷವು ಹೊಂದುವುದಿಲ್ಲ ; ಏಕೆಂದರೆ ಕಾಮಗಳಿಗೆ ಆಧಾರನಾದ ಆತ್ಮನನ್ನೂ ಅವನನ್ನು ಆಶ್ರಯಿಸಿರುವ ಕಾಮಗಳನ್ನೂ ಅರಿತುಕೊಳ್ಳಬೇಕೆಂದು ವಾಕ್ಯಶೇಷದಲ್ಲಿ ಹೇಳಿದೆ. ಆದುದರಿಂದ ವಿಷಯವಾಕ್ಯದ ಪ್ರಾರಂಭದಲ್ಲಿಯೂ ಹೃದಯಪುಂಡರೀಕವೆಂಬ ಆಧಾರದಲ್ಲಿರುವ ದಹರಾಕಾಶವನ್ನೇ—ಅದರೊಳಗಿರುವ ಪೃಥ್ವಿ, ಸತ್ಯವಾದ ಕಾಮ ಮೊದಲಾದುವುಗಳೊಂದಿಗೆ—ಅರಿತುಕೊಳ್ಳಬೇಕೆಂದು ಹೇಳಿದೆ.

ಆತ್ಮಶಬ್ದವು ಜೀವನಿಗೆ ಹೊಂದಬಹುದಾದರೂ ದಹರಾಕಾಶವು ಜೀವನಾಗಲಾರದು ; ಏಕೆಂದರೆ ದಬ್ಬಳದ ತುದಿಗೆ ಹೋಲಿಸಲ್ಪಟ್ಟ ಜೀವನು ಆಕಾಶದಂತೆ ಸರ್ವಗತನಾಗಲಾರನು. ಬ್ರಹ್ಮಪುರವೆಂದರೆ ಜೀವನಿರುವ ಪುರವೆಂದು ಆಗಬೇಕಾಗಿಲ್ಲ. ಪರಬ್ರಹ್ಮಕ್ಕೆ ಪುರವಾಗಿರುವುದರಿಂದ ಶರೀರವನ್ನು ಬ್ರಹ್ಮಪುರವೆಂದು ಕರೆದಿದೆ.[3] ಇಲ್ಲಿ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವನ್ನು ಗ್ರಹಿಸುವುದೇ ಯುಕ್ತವಾಗಿದೆ. ಬ್ರಹ್ಮದ ಉಪಲಬ್ಧಿಗೆ ದೇಹವು ಆಶ್ರಯವಾಗಿರುವುದರಿಂದ ಪರಬ್ರಹ್ಮವು ದೇಹಕ್ಕೆ ಸಂಬಂಧಿಸಿದೆ.[4] ಸಾಲಗ್ರಾಮದಲ್ಲಿ ವಿಷ್ಣುವು ಸಂನಿಹಿತನಾಗಿರುವಂತೆ ಜೀವಪುರದಲ್ಲಿ ಬ್ರಹ್ಮವು ಸಂನಿಹಿತವಾಗಿರುವುದೆಂದು ಹೇಳಬಹುದು.[5] ಕರ್ಮಗಳಿಗುಂಟಾಗುವ ಅನಿತ್ಯಫಲಕ್ಕೆ ದಹರವಿದ್ಯೆಯ ಅನಂತಫಲ

---

[1] ಉಭೇಽಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ (ಛಾಂ. ಉ. ೧. ೮. ೩).

[2] ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘಿತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ।

[3] 'ಅವನು ಶರೀರಗಳಲ್ಲಿ (ಪುರಗಳಲ್ಲಿ) ವಾಸಿಸುವುದರಿಂದ ಪುರುಷನೆನಿಸಿದ್ದಾನೆ' ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯಃ (ಬೃ. ಉ. ೨. ೫. ೧೮) ; ಪ್ರ. ಉ. ೫. ೫ ನೋಡಿ.

[4] ತಸ್ಯಾಪ್ಯಸ್ತಿ ಪುರೇಣಾನೇನ ಸಂಬಂಧಃ, ಉಪಲಬ್ಧ್ಯಧಿಷ್ಠಾನಾತ್ (ಸೂ. ಭಾ.).

[5] ಯಥಾ ಸಾಲಗ್ರಾಮೇ ವಿಷ್ಣುಃ ಸಂನಿಹಿತ ಇತಿ ತದ್ವತ್ (ಸೂ. ಭಾ.).

ವನ್ನು ಹೋಲಿಸಿದರೆ[1] ದಹರಾಕಾಶವು ಪರಮಾತ್ಮನೆಂಬುದು ಸ್ಪಷ್ಟವಾಗುತ್ತದೆ.

ವಿ.—ಈ ಪ್ರಕರಣದ ಸಂಬಂಧವು ಹೀಗಿದೆ: ಶ್ರುತಿಯು ಮೊದಲು ಉಪಾಸಕನ ಶರೀರವನ್ನು ಬ್ರಹ್ಮಪುರವೆಂದು ನಿರ್ದೇಶಿಸುತ್ತದೆ; ಏಕೆಂದರೆ ಪರಬ್ರಹ್ಮನು ಅಲ್ಲಿ ಉಪಾಸ್ಯನಾಗಿ ಸಂನಿಹಿತನಾಗಿದ್ದಾನೆ; ಅನಂತರ ಶರೀರದ ಒಂದು ಅವಯುವವನ್ನು—ಎಂದರೆ ಪುಂಡರೀಕದಂತೆ ಸಣ್ಣದಾಗಿರುವ ಹೃದಯುವನ್ನು—ಪರಬ್ರಹ್ಮನ ಮನೆಯೆಂದು ಹೇಳುತ್ತದೆ; ಆಮೇಲೆ ಸರ್ವಜ್ಞನೂ ಸರ್ವಶಕ್ತಿಮಂತನೂ ಆಶ್ರಿತವಾತ್ಸಲ್ಯೈಕಜಲಧಿಯೂ ಆದ ಪರಬ್ರಹ್ಮನು ಹೃದಯದಲ್ಲಿರುವ ದಹರಾಕಾಶನೆಂದು ಹೇಳುತ್ತದೆ; ಉಪಾಸಕರ ಅನುಗ್ರಹಕ್ಕಾಗಿ ಆ ಮನೆಯಲ್ಲಿ ಸಂನಿಹಿತನಾಗಿರುವ ಪರಬ್ರಹ್ಮವನ್ನು ಸೂಕ್ಷ್ಮರೂಪದಲ್ಲಿರುವಂತೆ ಧ್ಯಾನಿಸಬೇಕು ಎಂದರ್ಥ. ಕೊನೆಯಲ್ಲಿ 'ಅದನ್ನೇ ಅನ್ವೇಷಿಸಬೇಕು' ಎಂಬುದು ಬ್ರಹ್ಮನಲ್ಲಿರುವುದನ್ನು—ಅಪಹತ-ಪಾಪ್ಮತ್ವವೇ ಮೊದಲಾದುವನ್ನೂ ಸಮಸ್ತ-ಕಲ್ಯಾಣ ಗುಣ-ಸಮೂಹವನ್ನೂ ಸತ್ಯಕಾಮತ್ವಾದಿಗಳನ್ನೂ—ಧ್ಯೇಯವೆಂದು ವಿಧಿಸುತ್ತದೆ. ಹೀಗೆ ಮೂಲದಲ್ಲಿರುವ ತತ್-ಶಬ್ದವು ಪರಬ್ರಹ್ಮನನ್ನೂ ಅವನ ಗುಣಸಮೂಹವನ್ನು ಸೂಚಿಸುತ್ತದೆ.[2] '"ಅದರಲ್ಲಿ ಯಾವುದು ಒಳಗಿದೆಯೊ" ಎಂಬಲ್ಲಿ ಅಪೇಕ್ಷಣೀಯ-ಗುಣಗಳನ್ನು ಹೇಳಿದೆ' ಎಂದು ವಾಕ್ಯಕಾರರು ಸ್ಪಷ್ಟಪಡಿಸುತ್ತಾರೆ.[3] ಆದುದರಿಂದ ದಹರಾಕಾಶ ವಾಚ್ಯನು ಪರಬ್ರಹ್ಮನೇ, ಜೀವನೂ ಅಲ್ಲ, ಭೂತಾಕಾಶವೂ ಅಲ್ಲ.

ದ್ವೈ.—'ಮುಂದಿನ ವಾಕ್ಯಗಳಲ್ಲಿ ಹೇಳಿರುವ ಗುಣಗಳಿಂದ ದಹರಾಕಾಶದಲ್ಲಿರುವವನು (ಪರಬ್ರಹ್ಮನೇ)' ಎಂಬುದು ಸೂತ್ರಾರ್ಥ.

ಚಂದ್ರಾದಿಗಳಿಗೆ ವಿಷ್ಣುವೇ ಆಧಾರನೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದಾಯಿತು. ಛಾಂದೋಗ್ಯಶ್ರುತಿಯ ಪ್ರಕಾರ (೮. ೧. ೨. ೩) ಈ ಆಧಾರತ್ವ-ಗುಣವು ಆಕಾಶಕ್ಕೂ ಹೊಂದಬಹುದು. ಆದರೆ ಆಕಾಶವು ವಿಷ್ಣುವಾಗಲಾರದು;[4] ಏಕೆಂದರೆ 'ಅದರ ಮಧ್ಯದಲ್ಲಿ ಒಂದು ಛಿದ್ರವಿದೆ; ಅದರಲ್ಲಿ ಎಲ್ಲವೂ ಪ್ರತಿಷ್ಠಿತವಾಗಿದೆ'[5] (ಮ. ನಾ. ಉ. ೧೩. ೮) ಎಂದು ಶ್ರುತಿಯು ಹೇಳುತ್ತದೆ. 'ಯಾವ ಆತ್ಮನು ಪಾಪರಹಿತನೊ—ಅವನನ್ನೇ ಅನ್ವೇಷಿಸಬೇಕು, ಅವನನ್ನೇ ಅರಿತುಕೊಳ್ಳಲು ಬಯಸಬೇಕು' (ಛಾಂ. ಉ

---

[1] 'ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮಗಳನ್ನೂ ತಿಳಿದುಕೊಳ್ಳದೆ ಹೋಗುವರೋ ಅವರಿಗೆ ಯಾವ ಲೋಕದಲ್ಲಿಯೂ ಸ್ವತಂತ್ರಗತಿಯಿರುವುದಿಲ್ಲ. ಆದರೆ ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮಗಳನ್ನೂ ತಿಳಿದುಕೊಂಡು ಹೋಗುವರೋ ಅವರಿಗೆ ಎಲ್ಲ ಲೋಕಗಳಲ್ಲಿಯೂ ಸ್ವತಂತ್ರಗತಿಯಿರುತ್ತದೆ' (ಛಾಂ. ಉ. ೮. ೧. ೬).

[2] ಅತ್ರ ತದನ್ವೇಷ್ಟವ್ಯಮಿತಿ ತಚ್ಛಬ್ದೇನ ದಹರಾಕಾಶಂ ತದಂತರ್ವರ್ತಿ ಗುಣ-ಜಾತಂ ಚ ಪರಾಮೃಶ್ಯ ತದುಭಯಮನ್ವೇಷ್ಟವ್ಯಮಿತ್ಯುಪದಿಶ್ಯತೇ (ಶ್ರೀಭಾಷ್ಯ).

[3] ತದೇತದ್ವಾಕ್ಯಕಾರೋಽಪಿ ಸ್ಪಷ್ಟಯತಿ—ತಸ್ಮಿನ್ ಯದಂತರಿತಿ ಕಾಮವ್ಯಪದೇಶಃ ಇತ್ಯಾದಿನಾ (ಶ್ರೀಭಾಷ್ಯ).

[4] ಸ ಚಾಕಾಶೋ ನ ವಿಷ್ಣುಃ (ಮ. ಭಾ.).

[5] ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ಸರ್ವಂ ಪ್ರತಿಷ್ಠಿತಮ್ ।

೮ ೭ ೧) ಎಂದು ಉತ್ತರವಾಕ್ಯದಲ್ಲಿ ಹೇಳಿರುವ ಗುಣಗಳ ಪ್ರಕಾರ ದಹರದಲ್ಲಿರುವವನು ವಿಷ್ಣುವೇ[1]

**ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ॥ ೧೫ ॥**

೧೫ (ಬ್ರಹ್ಮವನ್ನು) ಸೇರುವುದರಿಂದಲೂ (ಬ್ರಹ್ಮಲೋಕವೆಂಬ) ಶಬ್ದವಿರುವುದರಿಂದಲೂ (ದಹರಾಕಾಶವು ಬ್ರಹ್ಮವು), ಹೀಗೆ (ಇತರ ಶ್ರುತಿಗಳಲ್ಲಿಯೂ) ಕಂಡುಬಂದಿದೆ ಮತ್ತು ಲಿಂಗವಿದೆ

'ನಿಧಿಕ್ಷೇತ್ರವನ್ನು ಅರಿಯದವರು ಪುನಃ ಪುನಃ ನಿಧಿಯ ಮೇಲೆಯೇ ನಡೆಯುತ್ತಿದ್ದರೂ ಅದನ್ನು ಹೇಗೆ ಪಡೆಯುವುದಿಲ್ಲವೊ ಹಾಗೆಯೇ ಈ ಪ್ರಜೆಗಳೆಲ್ಲ (ಹೃದಯಾಕಾಶವೆಂಬ) ಬ್ರಹ್ಮಲೋಕವನ್ನು ಪ್ರತಿದಿನವೂ (ಸುಷುಪ್ತಿಕಾಲದಲ್ಲಿ) ಹೋಗಿ ಸೇರುತ್ತಿದ್ದರೂ (ಅದನ್ನು) ಪಡೆದುಕೊಳ್ಳದೆ ಇರುವರು'[2] (ಛಾಂ ಉ ೮ ३ ೨) ಎಂಬಲ್ಲಿ 'ಪ್ರಜೆಗಳು' ಎಂಬ ಶಬ್ದವು ಜೀವರನ್ನೂ ಬ್ರಹ್ಮಲೋಕ-ಶಬ್ದವು ದಹರಾಕಾಶವನ್ನೂ ಸೂಚಿಸುತ್ತವೆ ಅದಕ್ಕೆ ಅನುಗುಣವಾಗಿ 'ಸೋಮ್ಯ, ಆಗ ಸದ್ವಸ್ತುವಿನೊಂದಿಗೆ ಏಕೀಭೂತನಾಗಿರುತ್ತಾನೆ'[3] (ಛಾಂ ಉ ೬ ೮ ೧) ಎಂಬ ಇನ್ನೊಂದು ಶ್ರುತಿಯು ಜೀವರು ಸುಷುಪ್ತಿಯಲ್ಲಿ ಪ್ರತಿದಿನವೂ ಬ್ರಹ್ಮವನ್ನು ಹೊಂದುತ್ತಾರೆಂದು ತಿಳಿಸುತ್ತದೆ ಬ್ರಹ್ಮಲೋಕವನ್ನು ಸೂಚಿಸುವುದಿಲ್ಲ, ಬ್ರಹ್ಮವೆಂಬ ಲೋಕವು ಬ್ರಹ್ಮಲೋಕವು ಎಂಬ ಸಾಮಾನಾಧಿಕರಣ್ಯವೃತ್ತಿಯಿಂದ ಪರಬ್ರಹ್ಮವನ್ನೇ ಸೂಚಿಸುತ್ತದೆ,[4] ಏಕೆಂದರೆ ಪ್ರತಿದಿನವೂ ಬ್ರಹ್ಮಲೋಕಕ್ಕೆ ಹೋಗುವುದೆಂಬುದೇ ಇದಕ್ಕೆ ಲಿಂಗವಾಗಿದೆ ಪ್ರತಿದಿನವೂ ಹಿರಣ್ಯಗರ್ಭನ ಲೋಕಕ್ಕೆ ಹೋಗುವುದು ಸಾಧ್ಯವಿಲ್ಲ ಆದುದರಿಂದಲೂ ದಹರವು ಪರಮೇಶ್ವರನೇ

ವಿ.—ಇಲ್ಲಿ ಉದಾಹರಿಸಿರುವ ವಿಷಯವಾಕ್ಯದಿಂದಲೇ ದಹರಾಕಾಶವು ಪರಬ್ರಹ್ಮನೆಂದು ಹೇಳಲು ಲಿಂಗವಿದೆ, ಹೊರಗಿನ ಉದಾಹರಣೆಗಳ ಅವಶ್ಯಕತೆಯಿಲ್ಲ, ಏಕೆಂದರೆ ಜೀವಾತ್ಮರೆಲ್ಲ ಸುಷುಪ್ತಿಕಾಲದಲ್ಲಿ—ಪ್ರಲಯಕಾಲದಲ್ಲಿ ಲಯವಾಗುವಂತೆ— ಪರಬ್ರಹ್ಮನಲ್ಲಿ

---

1 ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರಿತ್ಯಾದಿಭ್ಯ ಉತ್ತರೇಭ್ಯೋ ಗುಣೇಭ್ಯೋ ದಹರೋ ವಿಷ್ಣುರೇವ (ಮ ಭಾ )

2 ತದ್ಯಥಾಽಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ ।

3 ಸತಾ ಸೋಮ್ಯ ತದಾ ಸಂಪನ್ನೋ ಭವತಿ ।

4 ಸಾಮಾನಾಧಿಕರಣ್ಯವೃತ್ತ್ಯಾ ತು ವ್ಯುತ್ಪದ್ಯಮಾನೋ ಬ್ರಹ್ಮೈವ ಲೋಕೋ ಬ್ರಹ್ಮಲೋಕ ಇತಿ ಪರಮೇವ ಬ್ರಹ್ಮ ಗಮಯಿಷ್ಯತಿ (ಸೂ ಭಾ )

ಸೇರುವರೆಂದೂ ನಿಖಿಲ-ದುಃಖ-ರಹಿತವಾಗಿರುವರೆಂದೂ ಶ್ರುತಿಯು ಹೇಳಿರುವುದೇ ದಹರಾಕಾಶವು ಪರಬ್ರಹ್ಮನೆಂಬುದಕ್ಕೆ ಸಾಕಾದಷ್ಟು ಲಿಂಗವಾಗಿದೆ [1]

ಸುಷುಪ್ತಿಗಮನವನ್ನು ಬಿಟ್ಟು ಈ ಸೂತ್ರಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ಮಾಡಬಹುದು ಅಂತರಾತ್ಮನಾಗಿ ಎಲ್ಲೆಲ್ಲಿಯೂ ಇರುವ ದಹರಾಕಾಶನೆಂಬ ಪರಬ್ರಹ್ಮನಲ್ಲಿ ಜೀವಾತ್ಮರು ಸರ್ವಕಾಲದಲ್ಲಿಯೂ ಇರುತ್ತಿದ್ದರೂ ಅವನನ್ನು ಅರಿಯುವುದಿಲ್ಲ

ದ್ವೈ.—ಸುಪ್ತಜೀವನ ಗಮ್ಯತ್ವವೆಂಬ ಲಿಂಗ, ಬ್ರಹ್ಮಶಬ್ದ—ಇವು ಇದ್ದ ಕಾರಣ ದಹರದಲ್ಲಿರುವವನು ವಿಷ್ಣುವೇ ಇವು ಹೃತ್ಪದ್ಮಸ್ಥನಲ್ಲಿ ಇರುವಂತೆ ಅರಣ್ಯ, ಎಂಬ ಅಮೃತಸರೋವರರೂಪವಾದ ಲಿಂಗವೂ ಇವನಲ್ಲಿ ಇರುವುದೆಂದು ತಿಳಿದುಕೊಳ್ಳಬೇಕು [2]

## ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ॥ ೧೬ ॥

೧೬ ಧೃತಿ ಎಂಬ ಕಾರಣದಿಂದಲೂ (ದಹರವು ಪರಮೇಶ್ವರನೇ), ಏಕೆಂದರೆ ಈ ಮಹಿಮೆಯು ಇವನಲ್ಲಿ ಕಂಡುಬರುತ್ತದೆ

'ಈ ಲೋಕಗಳು ನಾಶವಾಗದಿರಲು ಆ ಆತ್ಮನು ಸೇತುವೂ ವಿಧೃತಿಯೂ ಆಗಿದ್ದಾನೆ'[3] (ಛಾಂ ಉ ೮ ೪ ೧) ಎಂಬಲ್ಲಿ ವಿಧೃತಿ ಎಂಬುದು ಧರಿಸಿರುವವನನ್ನು ಎಂದರೆ ಲೋಕಕ್ಕೆ ಆಧಾರವಾಗಿರುವವನನ್ನು ಸೂಚಿಸುತ್ತದೆ ಹೇಗೆ ಅಣೆಕಟ್ಟು ನೀರನ್ನು ತಡೆದು ನಿಲ್ಲಿಸಿ ಗದ್ದೆಗಳ ಸಂಪತ್ತು ನಾಶವಾಗದಿರಲು ಕಾರಣವಾಗುತ್ತದೆಯೊ ಹಾಗೆಯೇ ಈ ಆತ್ಮನು ಅಂತರ್ಬಹಿರ್ಭೇದಗಳಿಂದ ಭಿನ್ನವಾಗಿರುವ ಈ ಲೋಕಗಳೂ ವರ್ಣಾಶ್ರಮಾದಿಗಳೂ ಮಿಶ್ರಣವಾಗದಿರುವುದಕ್ಕೆ ವಿಧಾರಕನಾದ ಅಣೆಕಟ್ಟಾಗಿರುತ್ತಾನೆ ಹೀಗೆ ಈ ವಿಧಾರಣಲಕ್ಷಣವುಳ್ಳ ಮಹಿಮೆಯು ಪ್ರಕೃತವಾಗಿರುವ ದಹರಕ್ಕೆ ಸೇರಿದುದೆಂದು ಶ್ರುತಿಯು ಹೇಳುತ್ತದೆ ಈ ಮಹಿಮೆಯು ಪರಮೇಶ್ವರನಲ್ಲಿಯೇ ಇರುವುದೆಂದು ಇತರ ಶ್ರುತಿಗಳೂ ಹೇಳುತ್ತವೆ 'ಈ ಅಕ್ಷರದ ಸಾಹಸದಿಂದಲೇ, ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಸಲ್ಪಟ್ಟಿರುತ್ತಾರೆ'[4] (ಬೃ ಉ ೩ ೮ ೯), 'ಇವನು ಸರ್ವೇಶ್ವರನು, ಸರ್ವಪ್ರಾಣಿಗಳ ಅಧಿಪತಿಯು ಮತ್ತು ಪಾಲಕನು ಈ ಲೋಕಗಳು

---

[1] ಏತದೇವ ತು ದಹರಾಕಾಶೇ ಸರ್ವೇಷಾಂ ಕ್ಷೇತ್ರಜ್ಞಾನಾಂ ಪ್ರಲಯಕಾಲ ಇವ ನಿರಸ್ತನಿಖಿಲದುಃಖಾನಾಂ ಸುಷುಪ್ತಿಕಾಲೇಽವಸ್ಥಾನಂ ಶ್ರೂಯಮಾಣಮಸ್ಯ ಪರಬ್ರಹ್ಮತ್ವೇ ಪರ್ಯಾಪ್ತಂ ಲಿಂಗಮ್ (ಶ್ರೀಭಾಷ್ಯ)

[2] ಛಾಂ ಉ ೮ ೫ ೩ ನೋಡಿ

[3] ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ।

[4] ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ।

ಪರಸ್ಪರ ಮಿಶ್ರಣವಾಗದಿರುವುದಕ್ಕೆ ಇವನು ವಿಧಾರಕವಾದ ಸೇತು'[1] (ಬೃ. ಉ. ೪. ೪. ೨೨).

ವಿ.—ಪರಬ್ರಹ್ಮನ ಧೃತಿಯೆಂಬ ಮಹಿಮೆಯು ಈ ದಹರಾಕಾಶದಲ್ಲಿ ಕಂಡು ಬರುತ್ತದೆ ; ಆದುದರಿಂದ ದಹರಾಕಾಶನು ಪರಬ್ರಹ್ಮನು.

ದ್ವೈ.—ಛಾಂ. ಉ. ೮. ೪. ೧ರಲ್ಲಿ ಜಗತ್-ಧೃತಿಯನ್ನು ಹೇಳಿರುವುದ ರಿಂದಲೂ, ಬೃ. ಉ. ೩. ೮. ೯ ಮತ್ತು ೪. ೪. ೨೨ ಇವೇ ಮೊದಲಾದ ವಾಕ್ಯಗಳಲ್ಲಿ ಮಹಿಮೆಯನ್ನು ಹೇಳಿರುವುದರಿಂದಲೂ ದಹರದಲ್ಲಿರುವವನು ವಿಷ್ಣುವೇ.

## ಪ್ರಸಿದ್ಧೇಶ್ಚ ॥ ೧೭ ॥

೧೭. ಪ್ರಸಿದ್ಧವಾಗಿರುವುದರಿಂದಲೂ (ದಹರಾಕಾಶವು ಪರಮೇಶ್ವರನೇ).

ಆಕಾಶ-ಶಬ್ದವು ಪರಮೇಶ್ವರನಲ್ಲಿ ಪ್ರಸಿದ್ಧವಾಗಿರುವುದು ಈ ಶ್ರುತಿಗಳಿಂದ ಕಂಡು ಬರುತ್ತದೆ : 'ಆಕಾಶವೆಂಬ ಹೆಸರಿನಿಂದ ಪ್ರಸಿದ್ಧವಾದ (ಬ್ರಹ್ಮವು) ನಾಮ ರೂಪಗಳನ್ನು ವಿಂಗಡಿಸುತ್ತದೆ'[2] (ಛಾಂ. ಉ. ೮. ೧೪. ೧) ಮತ್ತು 'ಈ ಭೂತಗಳೆಲ್ಲವೂ ಆಕಾಶ ದಿಂದಲೇ ಉತ್ಪನ್ನವಾಗುತ್ತವೆ'[3] (ಛಾಂ. ಉ. ೧. ೯. ೧). ಆಕಾಶ-ಶಬ್ದವನ್ನು ಜೀವ ನಲ್ಲಿ ಪ್ರಯೋಗಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ.[4]

ವಿ.—ಆಕಾಶ-ಶಬ್ದವು ಪರಬ್ರಹ್ಮನಲ್ಲಿ ಪ್ರಸಿದ್ಧವಾಗಿರುವುದು. ಅಪಹತ-ಪಾಪ್ಮ ತ್ವವೇ ಮೊದಲಾದ ದಹರಾಕಾಶದ ಗುಣಗಳಿಂದ ಪರಬ್ರಹ್ಮನೆಂಬ ಅರ್ಥವು ಬಲವನ್ನು ಪಡೆದಿದೆ ; ಆದುದರಿಂದ ಭೂತಾಕಾಶವೆಂಬ ಅರ್ಥಕ್ಕಿಂತ ಇದು ಹೆಚ್ಚು ಬಲವನ್ನು ಪಡೆ ದಿದೆ.

ದ್ವೈ.—'ಅಲ್ಲಿ ದಹರಾಕಾಶವಿರುವುದು ; ಅದರಲ್ಲಿ ಶೋಕರಹಿತವಾದುದು ಯಾವು ದಿದೆಯೊ ಅದನ್ನೇ ಉಪಾಸಿಸಬೇಕು'[5] (ಮ. ನಾ. ಉ. ೧೨. ೧೭) ಎಂಬ ಶ್ರುತಿಯು ಪ್ರಕಾರ ಹೃತ್ಪದ್ಮದಲ್ಲಿರುವವನು ವಿಷ್ಣುವೇ ಎಂಬುದು ಪ್ರಸಿದ್ಧವಾಗಿದೆ.

---

[1] ಏಷ ಸರ್ವೇಶ್ವರಃ ; ಏಷ ಭೂತಾಧಿಪತಿಃ, ಏಷ ಭೂತಪಾಲಃ, ಏಷ ಸೇತುರ್ವಿಧ- ರಣ ಏಷಾಂ ಲೋಕಾನಾಮಸಂಭೇದಾಯ ।

[2] ಆಕಾಶೋ ವೈ ನಾಮರೂಪಯೋರ್ನಿರ್ವಹಿತಾ ।

[3] ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ।

[4] ಜೀವೇ ತು ನ ಕ್ವಚಿದಾಕಾಶಶಬ್ದಃ ಪ್ರಯುಜ್ಯಮಾನೋ ದೃಶ್ಯತೇ (ಸೂ. ಭಾ.).

[5] ತತ್ರಾಪಿ ದಹ್ರೇ ಗಗನಂ ವಿಶೋಕಂ ತಸ್ಮಿನ್ ಯದಂತಸ್ತದುಪಾಸಿತವ್ಯಮ್ ।

**ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ॥ ೧೮ ॥**

೧೮ (ಶ್ರುತಿಯಲ್ಲಿ) ಇನ್ನೊಬ್ಬನ (ಎಂದರೆ ಜೀವಾತ್ಮನ) ಪರಾಮರ್ಶವಿರುವುದರಿಂದ ಅವನು (ಆಕಾಶವು) ಎಂದರೆ ಅದು ಸರಿಯಲ್ಲ, ಏಕೆಂದರೆ ಅದು ಅಸಂಭವವಾಗಿದೆ

'ಇನ್ನು ಈ ಸಂಪ್ರಸಾದಗುಣವುಳ್ಳ ಆತ್ಮನು ಶರೀರದಿಂದ ಎದ್ದು, ಪರವು ಜ್ಯೋತಿಯನ್ನು ಸೇರಿ, ತನ್ನ ಸ್ವರೂಪದಲ್ಲಿ ಸ್ಥಿತಿಯನ್ನು ಪಡೆಯುತ್ತಾನೆ ಇವನೇ ಆತ್ಮನು— ಎಂದು (ಆಚಾರ್ಯನು) ಹೇಳಿದನು'[1] (ಛಾಂ ಉ ೮ ೩ ೪) ಎಂಬ ವಾಕ್ಯಶೇಷದಲ್ಲಿರುವ ಪರಾಮರ್ಶದ ಪ್ರಕಾರ ಸಂಪ್ರಸಾದಶಬ್ದವು ಜೀವನನ್ನು ಸೂಚಿಸುತ್ತದೆ ಆದುದರಿಂದ ಅವನೇ ದಹರವಾಗಬಹುದು ಎಂಬ ಹೊಸ ಆಕ್ಷೇಪಣೆ ಬಂದಿದೆ ಅದು ಸಂಭವಿಸುವುದಿಲ್ಲ ಎಂಬುದು ಉತ್ತರ, ಏಕೆಂದರೆ (೧) ಬುದ್ಧಿಯೇ ಮೊದಲಾದ ಪರಿಚ್ಛೇದದಲ್ಲಿ ಅಭಿಮಾನಿಯಾಗಿರುವ ಜೀವನನ್ನು ಆಕಾಶಕ್ಕೆ ಹೋಲಿಸಲು ಸಾಧ್ಯವಿಲ್ಲ, (೨) ಉಪಾಧಿಧರ್ಮಗಳಲ್ಲಿ ತಾದಾತ್ಮ್ಯವನ್ನು ಪಡೆದಿರುವ ಜೀವನಿಗೆ ಅಪಹತ-ಪಾಪ್ಮತ್ವವೇ ಮೊದಲಾದ ಧರ್ಮಗಳು ಸಂಭವಿಸುವುದಿಲ್ಲ ಆದುದರಿಂದ ದಹರಾಕಾಶವು ಜೀವನಲ್ಲ

**ವಿ.**—ದಹರಾಕಾಶವು ಜೀವನಲ್ಲ, ಏಕೆಂದರೆ ಅಪಹತಪಾಪ್ಮತ್ವಾದಿಗುಣಗಳು ಜೀವನಿಗೆ ಸಂಭವಿಸಲಾರವು

**ದ್ವೈ.**—ದಹರದಲ್ಲಿರುವವನು ಜೀವನಲ್ಲ, ಏಕೆಂದರೆ ಅಪಹತಪಾಪ್ಮತ್ವಾದಿಗುಣಗಳು ಅವನಿಗೆ ಸ್ವತಃ ಸಂಭವಿಸುವುದಿಲ್ಲ

**ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ॥ ೧೯ ॥**

೧೯. ಮುಂದಿನ (ವಾಕ್ಯದಿಂದ ದಹರವು ಜೀವನು) ಎಂದರೆ (ಆ ವಾಕ್ಯವು) ಆವಿರ್ಭೂತಸ್ವರೂಪನಾದ (ಜೀವನನ್ನೇ ಸೂಚಿಸುತ್ತದೆ ಎಂಬುದು ಉತ್ತರ)

ದಹರವೇ ಜೀವನು ಎಂಬುದನ್ನು ಸ್ಥಾಪಿಸುವುದಕ್ಕೆ ಈಗ ಒಂದು ಹೊಸ ಕಾರಣವನ್ನು ಕೊಡಲಾಗುತ್ತಿದೆ ಪ್ರಜಾಪತಿಯು ಪಾಪರಹಿತನೂ ಮುಪ್ಪಿಲ್ಲದವನೂ ಮರಣವಿಲ್ಲದವನೂ ಆದ ಆತ್ಮನ ಸ್ವರೂಪವನ್ನು ಹೇಳುವಾಗ (ಛಾಂ ಉ ೮ ೭ ೧) ಕಣ್ಣಿ

---

[1] ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚ ।

ನಲ್ಲಿ ಕಂಡುಬರುವ ಜೀವವನ್ನೂ, ಅವನ ಸ್ವಪ್ನವೇ ಮೊದಲಾದ ಅವಸ್ಥೆಗಳನ್ನೂ ಉಪದೇಶಿಸುತ್ತಾನೆ; ಈ ಸಂಪ್ರಸಾದಗುಣವುಳ್ಳ ಜೀವನೇ ಶರೀರದಿಂದ ಎದ್ದು, ಪರಂಜ್ಯೋತಿಯನ್ನು ನೇರಿ, ತನ್ನ ಸ್ವರೂಪದಿಂದಲೇ ತೋರುತ್ತಾನೆ (ಛಾಂ. ಉ. ೮. ೩. ೪).

ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥಾತ್ರಯದಿಂದ ಕೂಡಿರುವ ಜೀವನನ್ನು ಪ್ರಜಾಪತಿಯು ಉಪದೇಶಿಸುತ್ತಿಲ್ಲ, ಆವಿರ್ಭೂತ-ಸ್ವರೂಪನಾದ ಜೀವನನ್ನು ಹೇಳಿದ್ದಾನೆ —ಎಂಬುದು ಸೂತ್ರಕಾರರ ಉತ್ತರ. ಯಾವನ ಸ್ವರೂಪವು ವ್ಯಕ್ತವಾಗಿರುವುದೊ ಅವನು ಆವಿರ್ಭೂತ-ಸ್ವರೂಪನು; ಇವನನ್ನು ಜೀವನೆಂದು ಕರೆದಿರುವುದು ಜ್ಞಾನವುಂಟಾಗುವುದಕ್ಕೆ ಮೊದಲಿದ್ದ ಅವಸ್ಥೆಯ ಅಪೇಕ್ಷೆಯಿಂದ. ತಾನು ಬ್ರಹ್ಮವೆಂದು ಅರಿಯುವವರೆಗೆ ಜೀವನ ಜೀವತ್ವವಿರುತ್ತದೆ. ಜೀವನ ಸ್ವರೂಪವು ವ್ಯಕ್ತವಾದಾಗ ಅವನು ಜೀವನೇ ಅಲ್ಲ. 'ಯಾವನು ಆ ಪರಮಬ್ರಹ್ಮವನ್ನು ತಿಳಿದುಕೊಳ್ಳುವನೊ ಅವನು ಬ್ರಹ್ಮವೇ ಆಗುವನು'[1] (ಮುಂ. ಉ. ೩. ೨. ೯) ಎಂದು ಶ್ರುತಿಯಿರುತ್ತದೆ.

ಜೀವನ ಪಾರಮಾರ್ಥಿಕಸ್ವರೂಪವು ಬ್ರಹ್ಮವೇ ಆಗಿದ್ದರೆ ಶರೀರದಿಂದ ಎದ್ದು, ಪರಂಜ್ಯೋತಿಯನ್ನು ನೇರಿ, ತನ್ನ ರೂಪದಿಂದಲೇ ತೋರುತ್ತಾನೆ—ಇವೇ ಮೊದಲಾದ ಕ್ರಿಯೆಗಳು ಅನರ್ಥಕವಾಗುತ್ತವೆ ಎಂಬ ಆಕ್ಷೇಪಣೆಗೆ ಉತ್ತರ ಹೀಗಿದೆ: ಶುದ್ಧಸ್ಫಟಿಕದ ರೂಪವಾದ ಸ್ವಚ್ಛತ್ವವೂ ಶುಕ್ಲತ್ವವೂ—ವಿವೇಚಿಸಿ ಅರಿತುಕೊಳ್ಳುವುದಕ್ಕೆ ಮೊದಲು— ಕೆಂಪು ನೀಲಿ ಮೊದಲಾದ ಬಣ್ಣಗಳೆಂಬ ಉಪಾಧಿಗಳಿಂದ ವಿಂಗಡವಾಗದಂತೆ ಇರುತ್ತವೆ; ಹಾಗೆಯೇ ವಿವೇಕಜ್ಞಾನವುಂಟಾಗುವುದಕ್ಕೆ ಮೊದಲು ಶುದ್ಧವಾದ ಜೀವನು ಶರೀರೇಂದ್ರಿಯಗಳೇ ಮೊದಲಾದ ಉಪಾಧಿಗಳಿಂದ ಕೂಡಿ ನಾನಾ ಬಗೆಯಾದ ಕರ್ಮವನ್ನು ಮಾಡುತ್ತಾನೆ. ಆದರೆ ವಿವೇಕಜ್ಞಾನವು ಉತ್ಪನ್ನವಾದ ಕೂಡಲೇ—ಸ್ಫಟಿಕವು ಬೆಳ್ಳಗೆ ಕಾಣುವಂತೆ—ಜೀವನು ತನ್ನ ಪಾರಮಾರ್ಥಿಕ-ಸ್ವರೂಪದಿಂದ ಕಾಣುತ್ತಾನೆ. ವಿವೇಚನೆ, ವಿವೇಚನೆಮಾಡದಿರುವುದು—ಇವುಗಳಿಂದಲೇ ಆತ್ಮನ ಅಶರೀರತ್ವ-ಸಶರೀರತ್ವಗಳು ಉಂಟಾಗಿರುತ್ತವೆ.[2] ಬ್ರಹ್ಮಾತ್ಮೈಕ್ಯಜ್ಞಾನವಿದ್ದರೆ ಅಶರೀರತ್ವ-ಸಶರೀರತ್ವಗಳಿಗೆ ಯಾವ ಭೇದವೂ ಇರುವುದಿಲ್ಲ. 'ಅಶರೀರವಾದ ಶರೀರಗಳಲ್ಲಿ'[3] (ಕ. ಉ. ೧. ೨. ೨೨) ಎಂಬ ಮಂತ್ರವರ್ಣದಿಂದಲೂ 'ಶರೀರದಲ್ಲಿದ್ದರೂ ಮಾಡುವುದಿಲ್ಲ, ಲಿಪ್ತನಾಗುವುದಿಲ್ಲ'[4] (ಗೀತಾ ೧೩- ೩೧) ಎಂಬ ಸ್ಮೃತಿಯಿಂದಲೂ ಇದು ಸಿದ್ಧವಾಗುತ್ತದೆ. ವಿವೇಕಜ್ಞಾನವಿಲ್ಲದಿರು

---

[1] ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ।

[2] ತಥಾ ವಿವೇಕಾವಿವೇಕಮಾತ್ರೇಣೈವಾತ್ಮನೋಽಶರೀರತ್ವಂ ಸಶರೀರತ್ವಂ ಚ। (ಸೂ. ಭಾ.).

[3] ಅಶರೀರಂ ಶರೀರೇಷು।

[4] ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ।

ವಾಗ ಆವಿರ್ಭೂತವಾಗದ ಸ್ವರೂಪದವನಾಗಿದ್ದು ವಿವೇಕಜ್ಞಾನದಿಂದ ಆವಿರ್ಭೂತವಾದ ಸ್ವರೂಪದವನು ಎನಿಸಿಕೊಳ್ಳುತ್ತಾನೆ.[1]

ಅನೇಕ ವಾದಿಗಳು ಜೀವನ ರೂಪವು ಪಾರಮಾರ್ಥಿಕವೆಂದೇ ತಿಳಿಯುತ್ತಾರೆ ಆತ್ಮೈಕ್ಯ-ಪ್ರದರ್ಶನಕ್ಕೆ ವಿರುದ್ಧವಾಗಿರುವವರ ಬೋಧನೆಗಾಗಿ ಕೂಟಸ್ಥ-ನಿತ್ಯನೂ ವಿಜ್ಞಾನ-ಧಾತುವೂ ಆದ ಪರಮೇಶ್ವರನೊಬ್ಬನೇ ಅವಿದ್ಯೆಯಿಂದ ಅನೇಕವಿಧವಾಗಿ ಕಾಣುತ್ತಾನೆಯೇ ಹೊರತು ಬೇರೊಬ್ಬ ವಿಜ್ಞಾನಧಾತುವಿಲ್ಲ—ಎಂದು ಈ ಶಾರೀರಕ ಶಾಸ್ತ್ರವು ಪ್ರವೃತ್ತವಾಗಿರುತ್ತದೆ. ಕೂಟಸ್ಥನಿತ್ಯನಾಗಿರುವ ಪರಮಾತ್ಮನಲ್ಲಿ ಅವನಿಗೆ ವಿರುದ್ಧವಾಗಿರುವ ಜೀವರೂಪವನ್ನು ಕಲ್ಪಿಸಿದೆ; ಇಂಥ ಕಲ್ಪನೆಯನ್ನು ಹೋಗಲಾಡಿಸಲು ಸೂತ್ರಕಾರರು ಪರಮಾತ್ಮನು ಜೀವನಿಗಿಂತ ಭಿನ್ನನೆಂದು ಹೇಳಿದ್ದಾರೆಯೇ ಹೊರತು ಜೀವನು ಪರಮಾತ್ಮನಿಗಿಂತ ಬೇರೆಯೆಂದು ಪ್ರತಿಪಾದಿಸಿಲ್ಲ.[2]

ವಿ.—ಪ್ರಜಾಪತಿಯ ವಾಕ್ಯದಿಂದ (ಛಾಂ. ಉ. ೮. ೩. ೪) ಅಪಹತಪಾಪ್ಮತ್ವಾದಿ ಗುಣಗಳುಳ್ಳ ಜೀವನನ್ನೇ ಗ್ರಹಿಸಬೇಕು, ಅವನೇ ದಹರಾಕಾಶನು ಎಂಬುದು ಪೂರ್ವಪಕ್ಷ. ಇದಕ್ಕೆ ಪರಿಹಾರ ಹೀಗಿದೆ: ಇಲ್ಲಿ ಭಿನ್ನವಿಷಯಗಳುಳ್ಳ ಎರಡು ಭಾಗಗಳಿವೆ—ಪ್ರಜಾಪತಿಯ ವಾಕ್ಯ, ದಹರವಾಕ್ಯ. ಅಪಹತಪಾಪ್ಮತ್ವಾದಿ-ಗುಣಗಳುಳ್ಳ ಜೀವನ ಸ್ವರೂಪವು ಮೊದಲು ಅನೃತದಿಂದ ತಿರೋಹಿತವಾಗಿತ್ತು ; ಅನಂತರ ಜೀವನು ಕರ್ಮಬಂಧನದಿಂದ ವಿಮುಕ್ತನಾಗಿ, ಶರೀರದಿಂದ ಎದ್ದು, ಪರಂಜ್ಯೋತಿಯನ್ನು ಸೇರಿ, ಆವಿರ್ಭೂತವಾದ ಸ್ವರೂಪವುಳ್ಳವನಾಗಿ, ಅಪಹತಪಾಪ್ಮತ್ವಾದಿ-ಗುಣಗಳಿಂದ ವಿಶಿಷ್ಟನಾಗುತ್ತಾನೆ—ಎಂಬುದು ಪ್ರಜಾಪತಿವಾಕ್ಯದ ಉಪದೇಶ. ಎಂದಿಗೂ ತಿರೋಹಿತವಾಗದ ಸ್ವರೂಪವುಳ್ಳ, ನಿತ್ಯವೂ ಅಪಹತಪಾಪ್ಮತ್ವಾದಿ-ಗುಣಗಳಿಂದ ವಿಶಿಷ್ಟನಾದ ಪರಬ್ರಹ್ಮನು ದಹರವಿದ್ಯೆಯ ವಿಷಯನು. ಜೀವನು ಆವಿರ್ಭೂತಸ್ವರೂಪನಾದರೂ ಅವನಿಗೆ ಸೇತುತ್ವ ಸರ್ವಲೋಕ-ವಿಧರಣತ್ವ ಇವೇ ಮೊದಲಾದುವು ಸಂಭವಿಸುವುದಿಲ್ಲ ಎಂಬುದನ್ನು ೪. ೪. ೧೭ ನೇ ಸೂತ್ರದ ವ್ಯಾಖ್ಯಾನದಲ್ಲಿ ಸ್ಪಷ್ಟಮಾಡಿದೆ.[3]

---

1 ತಸ್ಮಾದ್ವಿವೇಕವಿಜ್ಞಾನಾಭಾವಾದ್ ಅನಾವಿರ್ಭೂತಸ್ವರೂಪಃ ಸನ್ ವಿವೇಕವಿಜ್ಞಾನಾದ್ ಆವಿರ್ಭೂತಸ್ವರೂಪ ಇತ್ಯುಚ್ಯತೇ (ಸೂ. ಭಾ ).

2 ಪರಮಾತ್ಮನೋ ಜೀವಾದನ್ಯತ್ವಂ ದ್ರಢಯತಿ, ಜೀವಸ್ಯ ತು ನ ಪರಸ್ಮಾದನ್ಯತ್ವಂ ಪ್ರತಿಪಿಪಾದಯಿಷತಿ (ಸೂ. ಭಾ.). ಆಧಾರನಾದ ಪರಮಾತ್ಮನು ತನ್ನಲ್ಲಿ ಆರೋಪಿತವಾಗಿರುವ ವಸ್ತುಗಳಿಗಿಂತ ಭಿನ್ನನಾಗಿದ್ದರೂ, ಆರೋಪಿತವಾದ ವಸ್ತುಗಳು ಆಧಾರನಾದ ಪರಮಾತ್ಮನಿಗಿಂತ ಭಿನ್ನವಾಗಿರಲಾರವು ; ನಿಜವಾದ ಹಗ್ಗವು ತನ್ನಲ್ಲಿ ಆರೋಪಿತವಾಗಿರುವ ಹಾವಿಗಿಂತ ಬೇರೆಯಾಗಿಯೇ ಇರುವುದು, ಆದರೆ ಆರೋಪಿತವಾದ ಹಾವು ಹಗ್ಗಕ್ಕಿಂತ ಬೇರೆಯಾಗಿರಲಾರದು.

3 ಸೇತುತ್ವಸರ್ವಲೋಕವಿಧರಣತ್ವಾದಯಃ ಆವಿರ್ಭೂತಸ್ವರೂಪಸ್ಯಾಪಿ ನ ಸಂಭವಂತೀತಿ ಜಗದ್ವ್ಯಾಪಾರವರ್ಜಮಿತ್ಯತ್ರೋಪಪಾದಯಿಷ್ಯಾಮಃ (ಶ್ರೀಭಾಷ್ಯ).

ದ್ವೈ.—'ಅವನು ಅಲ್ಲಿ ನಗುತ್ತ, ಕ್ರೀಡಿಸುತ್ತ.... ಸಂಚರಿಸುತ್ತಾನೆ'[1] (ಛಾಂ. ಉ. ೮. ೧೨. ೩) ಎಂದು ಸತ್ಯಕಾಮತ್ವವನ್ನು ಪ್ರತಿಪಾದಿಸುವ ಉತ್ತರವಚನದಿಂದಲೂ ದಹರದಲ್ಲಿರುವವನು ಜೀವನು ಎಂದು ಹೇಳಲಾಗುವುದಿಲ್ಲ; ಏಕೆಂದರೆ ಅಲ್ಲಿಯೂ ಕೂಡ ಪರಮೇಶ್ವರನ ಅನುಗ್ರಹದಿಂದ ಆವಿರ್ಭೂತಸ್ವರೂಪನಾದ ಮುಕ್ತನು ಹೇಳಲ್ಪಟ್ಟಿದ್ದಾನೆ. 'ಯಾವನ ಅನುಗ್ರಹದಿಂದ ಜೀವನು ಮುಕ್ತನಾಗುವನೊ ಆ ಭಗವಂತನನ್ನೇ ಪೂರ್ವ ವಾಕ್ಯದಲ್ಲಿ ಹೇಳಿದೆ'[2] ಎಂದು ಅಭಿಪ್ರಾಯ.

## ಅನ್ಯಾರ್ಥಶ್ಚ ಪರಾಮರ್ಶಃ ॥ ೨೦ ॥

೨೦. (ಜೀವನ) ಪರಾಮರ್ಶಕ್ಕೆ ಮತ್ತೊಂದು ಪ್ರಯೋಜನವಿದೆ.

ಜೀವನ ಪರಾಮರ್ಶವನ್ನು ಮಾಡಿರುವುದು ಅವನ ಸ್ವರೂಪವನ್ನು ನಿರ್ಣಯಿಸುವುದಕ್ಕಲ್ಲ, ಪರಮೇಶ್ವರನ ಸ್ವರೂಪವನ್ನು ನಿರ್ಣಯಿಸುವುದಕ್ಕೆ.[3] ಸಂಪ್ರಸಾದ-ಶಬ್ದದಿಂದ ಹೇಳಲ್ಪಟ್ಟ ಜೀವನು ಜಾಗರಿತ-ವ್ಯವಹಾರದಲ್ಲಿ ದೇಹೇಂದ್ರಿಯಗಳ ಪಂಜರಕ್ಕೆ ಅಧ್ಯಕ್ಷನಾಗಿರುತ್ತಾನೆ; ಅದರ ವಾಸನೆಯಿಂದ ಉಂಟಾಗಿರುವ ಸ್ವಪ್ನಗಳನ್ನು ನಾಡೀಚರನಾಗಿ ಅನುಭವಿಸುತ್ತಾನೆ; ಅನಂತರ ಆಯಾಸಗೊಂಡಾಗ ಶರಣುವನ್ನು ಬಯಸುತ್ತ, ಸ್ಥೂಲ-ಸೂಕ್ಷ್ಮ-ಶರೀರಗಳ ಅಭಿಮಾನವನ್ನು ಬಿಟ್ಟಿದ್ದು, ಸುಷುಪ್ತಾವಸ್ಥೆಯಲ್ಲಿ ಆಕಾಶವೆನಿಸಿದ ಪರಂಜ್ಯೋತಿಯನ್ನು ಹೊಂದಿ, ವಿಶೇಷ-ಜ್ಞಾನಗಳನ್ನು ಬಿಟ್ಟು, ತನ್ನ ರೂಪದಿಂದ ತೋರುತ್ತಾನೆ. ಹೀಗೆ ಜೀವನು ಸೇರಿಕೊಳ್ಳಬೇಕಾದ ಪರಂಜ್ಯೋತಿಯೇ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನು, ಅವನನ್ನೇ ಉಪಾಸಿಸಬೇಕು; ಈ ದೃಷ್ಟಿಯಿಂದ ಜೀವನ ಪರಾಮರ್ಶವು ಪರಮೇಶ್ವರವಾದಿಯ ಪಕ್ಷದಲ್ಲಿಯೂ ಹೊಂದುತ್ತದೆ.

ವಿ.—ಪ್ರಜಾಪತಿ-ವಾಕ್ಯದಲ್ಲಿ ಹೇಳಿರುವ ಮುಕ್ತನಾದ ಆತ್ಮನ ಸ್ವರೂಪದ ಯಥಾರ್ಥ-ವಿಜ್ಞಾನವು ದಹರವಿದ್ಯೆಗೆ ಸಹಕಾರಿಯಾಗಿದೆ. ಬ್ರಹ್ಮನನ್ನು ಹೊಂದಲು ಬಯಸುವವನು ಮೊದಲು ತನ್ನ ಸ್ವರೂಪವನ್ನು ತಿಳಿದುಕೊಳ್ಳಬೇಕು; ತಾನೇ ಕಲ್ಯಾಣಗುಣಗಳುಳ್ಳವನಾಗಿ ಅಸಂಖ್ಯೇಯ-ಕಲ್ಯಾಣಗುಣನಾದ ಬ್ರಹ್ಮನನ್ನು ಸಾಕ್ಷಾತ್ಕರಿಸುತ್ತಾನೆ; ಬ್ರಹ್ಮೋಪಾಸನ-ಫಲದಲ್ಲಿಯೇ ಜೀವಸ್ವರೂಪದ ಯಥಾರ್ಥ-ವಿಜ್ಞಾನವು ಅಂತರ್ಗತವಾಗಿದೆ.[4]

---

[1] ಸ ತತ್ರ ಪರ್ಯೇತಿ ಜಕ್ಷತ್ ಕ್ರೀಡನ್ ।

[2] ಯತ್ಪ್ರಸಾದಾತ್ ಸ ಮುಕ್ತೋ ಭವತಿ ಸ ಭಗವಾನ್ ಪೂರ್ವೋಕ್ತಃ (ಮ. ಭಾ.).

[3] ಅನ್ಯಾರ್ಥೋಽಯಂ ಜೀವಪರಾಮರ್ಶೋ ನ ಜೀವಸ್ವರೂಪಪರ್ಯವಸಾಯೀ, ಕಿಂ ತರ್ಹಿ? ಪರಮೇಶ್ವರಸ್ವರೂಪಪರ್ಯವಸಾಯೀ (ಸೂ. ಭಾ.).

[4] ಬ್ರಹ್ಮಪ್ರೇಪ್ಸೋರ್ಹಿ ಜೀವಾತ್ಮನಃ ಸ್ವರೂಪಂ ಚ ಜ್ಞಾತವ್ಯಮೇವ; ಸ್ವಯಮಪಿ ಕಲ್ಯಾಣಗುಣ ಏವ ಸನ್ ಅನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಗಣಂ ಪರಂ ಬ್ರಹ್ಮಾನುಭವಿಷ್ಯತಿ (ಶ್ರೀಭಾಷ್ಯ).

**ದ್ವೈ.—ಪರಂಜ್ಯೋತಿಃ** ಎಂದು ಹೇಳಲ್ಪಟ್ಟ ಬ್ರಹ್ಮನ ವಿಷಯದಲ್ಲಿಯೇ **ಏಷಃ** ಎಂದು ಪರಾಮರ್ಶವು. 'ಯಾವನನ್ನು ಹೊಂದಿ ಜೀವನು ತನ್ನ ಸ್ವರೂಪವನ್ನು ಪಡೆಯುತ್ತಾನೆಯೊ ಅವನೇ ಈ ಆತ್ಮನಾಗಿದ್ದಾನೆ'[1] ಎಂಬುದು ವಾಕ್ಯಾರ್ಥವು.

**ಅಲ್ಪಶ್ರುತೇರಿತಿ ಚೇತ್ತದುಕ್ತಮ್** ॥ ೨೧ ॥

೨೧. (ಆಕಾಶವು) ಸಣ್ಣದೆಂದು ಶ್ರುತಿಯು ಹೇಳಿರುವುದರಿಂದ (ಅದು ಪರಮೇಶ್ವರನಾಗಲಾರದು) ಎಂದರೆ ಅದನ್ನು ಹೇಳಿದ್ದಾಗಿದೆ (ಎಂಬುದು ಉತ್ತರ).

ಸೂ. ೧. ೨. ೭ರಲ್ಲಿ ಬ್ರಹ್ಮವು ಸರ್ವಗತವಾಗಿದ್ದರೂ ಹೃದಯಪುಂಡರೀಕದಲ್ಲಿ ಉಪಾಸ್ಯವಾಗಿದೆ ಎಂದು ಹೇಳಿದ್ದಾಗಿದೆ. ಪರಮೇಶ್ವರನಿಗೂ ಆಪೇಕ್ಷಿಕವಾದ ಅಲ್ಪತ್ವವು ಹೊಂದುತ್ತದೆ—ಎಂದು ಅಲ್ಲಿ ಹೇಳಿದ ಪರಿಹಾರವನ್ನು ಇಲ್ಲಿಯೂ ಅನುಸಂಧಾನ ಮಾಡಬೇಕು; ಮತ್ತೆ ಒಳಗಿರುವ ದಹರಾಕಾಶವು ಹೊರಗಿರುವ ಆಕಾಶದಷ್ಟೇ ದೊಡ್ಡದಾಗಿದೆ (ಛಾಂ. ಉ. ೮. ೧. ೩) ಎಂದೂ ಹೇಳಿದ್ದಾಯಿತು.

**ವಿ.**—ಉಪಾಸನೆಗೋಸ್ಕರ ಪರಬ್ರಹ್ಮನಿಗೆ ಅಲ್ಪಪರಿಮಿತಿಯುಳ್ಳ ಸ್ಥಳವನ್ನೂ ಅಣೀಯಸ್ತ್ವವನ್ನೂ ಕಲ್ಪಿಸಿದೆ ಎಂದು ಸೂ. ೧. ೨. ೭ ರಲ್ಲಿ ಹೇಳಿದ್ದಾಗಿದೆ.

**ದ್ವೈ.**—ಹೃದಯವೆಂಬ ಅಲ್ಪಸ್ಥಾನದಲ್ಲಿ ಪರಮಾತ್ಮನಿರುವನೆಂದೂ ಅವನನ್ನು ಹಾಗೆಯೇ ಉಪಾಸಿಸಬೇಕೆಂದೂ ಹಿಂದೆಯೇ ಹೇಳಿದೆ. ಆಕಾಶದಂತೆ ಸರ್ವವ್ಯಾಪಿಯಾಗಿರುವ ಅವನ ಸ್ವಭಾವಕ್ಕೆ ಇದು ವಿರುದ್ಧವಾಗಲಾರದು; ಏಕೆಂದರೆ ಹೃದಯಪುಂಡರೀಕದಲ್ಲಿರುವ ಆತ್ಮನು ಎಲ್ಲಕ್ಕಿಂತಲೂ ದೊಡ್ಡವನೆಂದು ಶ್ರುತಿಯು (ಛಾಂ. ಉ. ೩. ೧೪. ೩) ಹೇಳುತ್ತದೆ.

---

[1] ಯಂ ಪ್ರಾಪ್ಯ ಸ್ವೇನ ರೂಪೇಣ ಜೀವೋ ನಿಷ್ಪದ್ಯತೇ ಸ ಏಷ ಆತ್ಮೇತಿ ಪರಮಾರ್ಥಶ್ಚ ಪರಾಮರ್ಶಃ (ಮ. ಭಾ.).

## ೬. ಅನುಕೃತ್ಯಧಿಕರಣ*

(ಸೂ. ೨೨–೨೩)

**ಅನುಕೃತೇಸ್ತಸ್ಯ ಚ ॥ ೨೨ ॥**

೨೨. (ಪ್ರಕಾಶಿಸುತ್ತಿರುವ ಅವನನ್ನು) ಅನುಸರಿಸಿ (ಎಲ್ಲವೂ ಪ್ರಕಾಶಿಸುತ್ತಿರುವುದರಿಂದಲೂ) ಮತ್ತು ಅವನ (ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದರಿಂದಲೂ ಅವನು ಪ್ರಾಜ್ಞಾತ್ಮನೇ).

'ಅಲ್ಲಿ ಸೂರ್ಯನಾಗಲಿ ಚಂದ್ರನಾಗಲಿ ನಕ್ಷತ್ರಗಳಾಗಲಿ ಪ್ರಕಾಶಿಸುವುದಿಲ್ಲ, ಈ ಮಿಂಚುಗಳೂ ಪ್ರಕಾಶಿಸುವುದಿಲ್ಲ ; ಈ ಅಗ್ನಿಯು ಪ್ರಕಾಶಿಸುವುದೆಲ್ಲಿ ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುವು. ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು'[1] (ಮುಂ. ಉ. ೨. ೨. ೧೧) ಎಂಬಲ್ಲಿ ಪ್ರಕಾಶಿಸುತ್ತಿರುವ ವಸ್ತುವು ಯಾವುದೊ ಒಂದು ತೇಜೋಧಾತುವೊ ಅಥವಾ ಪ್ರಾಜ್ಞಾತ್ಮನೊ—ಎಂಬುದು ಸಂಶಯ. ತೇಜೋಧಾತುವೇ ಎಂಬುದು ಪೂರ್ವಪಕ್ಷ; ಏಕೆಂದರೆ ಒಂದೇ ಸ್ವಭಾವವುಳ್ಳ ಅನೇಕ ವಸ್ತುಗಳಿರುವಾಗ ಒಂದು ಮತ್ತೊಂದನ್ನು ಅನುಕರಣಮಾಡುವುದು ಸಾಧ್ಯವಾಗುತ್ತದೆ.

ಪ್ರಕಾಶಿಸುತ್ತಿರುವ ವಸ್ತುವು ಪ್ರಾಜ್ಞಾತ್ಮನೇ ಆಗಿರಬೇಕು—ಎಂಬುದು ಸಿದ್ಧಾಂತ. ಅನುಕೃತಿ ಎಂದರೆ ಅನುಕರಣವು; ಇಲ್ಲಿ ಪ್ರಾಜ್ಞಾತ್ಮನನ್ನೇ ಗ್ರಹಿಸಿದರೆ 'ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುವು' ಎಂಬುದು ಹೊಂದುತ್ತದೆ. 'ಪ್ರಕಾಶಸ್ವರೂಪನು' **ಭಾರೂಪಃ** (ಛಾಂ. ಉ. ೩. ೧೪. ೨) ಎಂದು ಶ್ರುತಿಯು ಹೇಳುತ್ತದೆ. ತೇಜೋಧಾತುಗಳು ಸ್ವಭಾವದಲ್ಲಿ ಸಮಾನವಾಗಿರುವುದರಿಂದ ಅವುಗಳಲ್ಲಿ ಒಂದು ತಾನು ಬೆಳಗಲು ಮತ್ತೊಂದನ್ನು ಅಪೇಕ್ಷಿಸುವುದಿಲ್ಲ. ಅನುಕರಣವನ್ನು ಮಾಡಲು ವಸ್ತುಗಳು ಸಮಾನಸ್ವಭಾವದವುಗಳಾಗಿರಬೇಕು ಎಂಬ ನಿಯಮವಿಲ್ಲ; ಕಾಯಿಸಿದ ಕಬ್ಬಿಣವು ಬೆಂಕಿಯು ಹಾಗೆ ಉರಿಯುವುದೂ, ಧೂಳು ಗಾಳಿಯನ್ನನುಸರಿಸುವುದೂ ವ್ಯವಹಾರದಲ್ಲಿ ಕಂಡುಬರುತ್ತವೆ.

---

* ಶ್ರೀಭಾಷ್ಯದ ಪ್ರಕಾರ ಇಲ್ಲಿಂದ ಒಂದು ಹೊಸ ಅಧಿಕರಣವು ಪ್ರಾರಂಭವಾಗುವುದಿಲ್ಲ. ಈ ಎರಡು ಸೂತ್ರಗಳೂ ಹಿಂದಿನ ಅಧಿಕರಣಕ್ಕೇ ಸೇರಿವೆ.

[1] ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥

ಸೂತ್ರದಲ್ಲಿರುವ 'ಅವನ', **ತಸ್ಯ** ಎಂಬ ಶಬ್ದವು ಸೂರ್ಯಚಂದ್ರಾದಿಗಳ ಜ್ಯೋತಿಗೆ ಕಾರಣನಾದ ಆತ್ಮನನ್ನು ಸೂಚಿಸುತ್ತದೆ. 'ಆ ಅಮೃತವಾದ ಜ್ಯೋತಿಗಳ ಜ್ಯೋತಿಯನ್ನು ದೇವತೆಗಳು ಆಯುಸ್ಸೆಂದು ಉಪಾಸಿಸುತ್ತಾರೆ'[1] (ಬೃ. ಉ. ೪. ೪. ೧೬) ಎಂದು ಶ್ರುತಿಯು ಸ್ವಪ್ರಕಾಶನಾದ ಆತ್ಮನನ್ನೇ ಹೇಳುತ್ತದೆ. ಆದುದರಿಂದ ಇದು ಭೌತ ತೇಜಸ್ಸಲ್ಲ ಎಂಬುದು ಸ್ಪಷ್ಟವಾಗಿದೆ. ವಿಷಯವಾಕ್ಯದಲ್ಲಿರುವ 'ಇದೆಲ್ಲವೂ' **ಸರ್ವಮಿದಮ್** ಎಂಬುದು ಕೇವಲ ಸೂರ್ಯಚಂದ್ರಾದಿಗಳನ್ನು ಸೂಚಿಸುವುದಿಲ್ಲ; ನಾಮ, ರೂಪ, ಕ್ರಿಯಾ, ಕಾರಕ, ಫಲ—ಇವೆಲ್ಲವೂ ಬ್ರಹ್ಮಜ್ಯೋತಿಯಿಂದಲೇ ಬೆಳಗುತ್ತವೆ. ಬ್ರಹ್ಮದ ವಿಷಯದಲ್ಲಿ ಸೂರ್ಯಚಂದ್ರಾದಿಗಳು ಬೆಳಗುವ ಸಂಭವವೇ ಇಲ್ಲ; ಯಾವ ಯಾವುದು ತೋರುತ್ತದೆಯೊ ಅದೆಲ್ಲವೂ ಬ್ರಹ್ಮಜ್ಯೋತಿಯಿಂದಲೇ ತೋರಿಬರುತ್ತದೆ; ಆದರೆ ಬ್ರಹ್ಮವು ಮತ್ತೊಂದು ಜ್ಯೋತಿಯಿಂದ ತೋರಿಬರುವುದಿಲ್ಲ; ಏಕೆಂದರೆ ಅದು ಸ್ವಯಂಜ್ಯೋತಿಃಸ್ವರೂಪವಾಗಿರುತ್ತದೆ.[2]

**ವಿ.**—'ಅವನನ್ನು ಅನುಕರಣಮಾಡುವುದರಿಂದ (ದಹರಾಕಾಶವು ಜೀವನಲ್ಲ)' ಎಂಬುದು ಸೂತ್ರಾರ್ಥ.

ಅಪಹತ-ಪಾಪ್ಮತ್ವಾದಿ-ಗುಣಗಳುಳ್ಳವನೂ ಸಂಸಾರಬಂಧದಿಂದ ವಿಮುಕ್ತನೂ ಆದ ಜೀವನು ದಹರಾಕಾಶನಲ್ಲ; ಏಕೆಂದರೆ ಅವನು ಪರಬ್ರಹ್ಮನನ್ನು ಅನುಕರಣಮಾಡುತ್ತಾನೆ. ಅನುಕರಣವೆಂದರೆ ಸಾಮ್ಯವನ್ನು ಹೊಂದುವುದು. ಮುಕ್ತಜೀವನ ಬ್ರಹ್ಮಾಕಾರವನ್ನು ಶ್ರುತಿಯು ಹೇಳುತ್ತದೆ: 'ಯಾವಾಗ ಬ್ರಹ್ಮದರ್ಶಿಯಾದ ಪುರುಷನು ಹಿರಣ್ಯವರ್ಣನೂ ಕರ್ತೃವೂ ಈಶ್ವರನೂ ಕಾರಣಭೂತನೂ ಮತ್ತು ಬ್ರಹ್ಮನೂ ಆದ ಪುರುಷನನ್ನು ನೋಡುವನೊ ಆ ವಿದ್ವಾಂಸನು ಪುಣ್ಯ ಪಾಪಗಳನ್ನು ತೊಲಗಿಸಿಕೊಂಡು ನಿರಂಜನನಾಗಿ ಪರಮ ಸಾಮ್ಯವನ್ನು ಹೊಂದುವನು'[3] (ಮುಂ. ಉ. ೩. ೧. ೩). ಪ್ರಜಾಪತಿಯ ಉಪದೇಶವು ಅನುಕರಣ-ಮಾಡುವವನನ್ನು ಎಂದರೆ ಜೀವನನ್ನು ನಿರ್ದೇಶಿಸಿರುತ್ತದೆ.[4] ಅನುಕರಣಮಾಡಲ್ಪಟ್ಟ ಪರಬ್ರಹ್ಮನೇ ದಹರಾಕಾಶವು.[5]

**ದ್ವೈ.**—ಅದೃಶ್ಯತ್ವಾದಿಗುಣಗಳು ಪರಮೇಶ್ವರನವೆಂದು ಹೇಳಿದ್ದಾಯಿತು. 'ಶಾಶ್ವತವಾದ ಸುಖವು ಅವರಿಗೆ, ಇತರರಿಗಲ್ಲ'[6] (ಕ. ಉ. ೨. ೫. ೧೨), 'ಆ ಈ ಬ್ರಹ್ಮ

---

[1] ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್ ।

[2] ಯತೋ ಯದುಪಲಭ್ಯತೇ ತತ್ಸರ್ವಂ ಬ್ರಹ್ಮಜ್ಯೈವ ಜ್ಯೋತಿಷೋಪಲಭ್ಯತೇ, ಬ್ರಹ್ಮ ತು ನಾನ್ಯೇನ ಜ್ಯೋತಿಷೋಪಲಭ್ಯತೇ ಸ್ವಯಂಜ್ಯೋತಿಃಸ್ವರೂಪತ್ವಾತ್ । (ಸೂ. ಭಾ.).

[3] ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮ-ಯೋನಿಮ್। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥

[4] ಅತೋಽನುಕರ್ತಾ ಪ್ರಜಾಪತಿವಾಕ್ಯನಿರ್ದಿಷ್ಟಃ (ಶ್ರೀಭಾಷ್ಯ).

[5] ಅನುಕಾರ್ಯಂ ಬ್ರಹ್ಮ ದಹರಾಕಾಶಃ (ಶ್ರೀಭಾಷ್ಯ).

[6] ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ।

ರೂಪವು ಅನಿರ್ದೇಶ್ಯವೆಂದೂ ಪರಮಸುಖವೆಂದೂ (ಜ್ಞಾನಿಗಳು) ತಿಳಿಯುತ್ತಾರೆ. ಅದನ್ನು ಹೇಗೆ ತಿಳಿದುಕೊಳ್ಳಲಿ ?'[1] (ಕ. ಉ. ೨. ೫. ೧೪) ಎಂಬಲ್ಲಿ ಭಗವಂತನ ಅನಿರ್ದೇಶ್ಯತ್ವ-ಅಜ್ಞೇಯತ್ವ-ಗುಣಗಳು ಜ್ಞಾನಿಯ ಸುಖಕ್ಕೆ ಹೇಳಿರುವ ಹಾಗೆ ಕಂಡುಬರುತ್ತದೆ. ಈ ಸಂದೇಹವನ್ನು ಹೋಗಲಾಡಿಸಲು ಈ ಸೂತ್ರವು ಬಂದಿರುತ್ತದೆ. ಶ್ರುತಿಯ ಪ್ರಕಾರ (ಕ. ಉ. ೨. ೫. ೧೫)[2] ಪರಮಾತ್ಮನೇ ಅನಿರ್ದೇಶ್ಯಸುಖಸ್ವರೂಪನು. ಸರ್ವವೂ ಜ್ಞಾನಿಯ ಸುಖವನ್ನನುಸರಿಸಿ ಪ್ರಕಾಶಿಸುವುದಿಲ್ಲ ; ಜ್ಞಾನಿಯ ಪ್ರಕಾಶದಿಂದ ಇದೆಲ್ಲವೂ ಬೆಳಗುವುದೂ ಇಲ್ಲ.[3]

**ಅಪಿ ಚ* ಸ್ಮರ್ಯತೇ ॥ ೨೩ ॥**

೨೩. ಇದಲ್ಲದೆ ಸ್ಮೃತಿಯಲ್ಲಿಯೂ ಹೇಳಿದೆ.

ಇದಲ್ಲದೆ ಪ್ರಾಜ್ಞಾತ್ಮನ ಇಂಥ ರೂಪವನ್ನು ಭಗವದ್ಗೀತೆಯಲ್ಲಿಯೂ ಹೇಳಿದೆ ; 'ಅದನ್ನು ಸೂರ್ಯನು ಬೆಳಗುವುದಿಲ್ಲ, ಚಂದ್ರನಾಗಲಿ ಅಗ್ನಿಯಾಗಲಿ ಬೆಳಗುವುದಿಲ್ಲ ; ಯಾವುದನ್ನು ಹೊಂದಿದರೆ ಹಿಂತಿರುಗುವುದಿಲ್ಲವೊ ಅದೇ ನನ್ನ ಶ್ರೇಷ್ಠವಾದ ಸ್ಥಾನ'[4] (೧೫. ೬); 'ಆದಿತ್ಯನನ್ನು ಹೊಂದಿರುವ ಯಾವ ತೇಜಸ್ಸು ಜಗತ್ತೆಲ್ಲವನ್ನೂ ಬೆಳಗುತ್ತಿರುವುದೊ, ಯಾವ ತೇಜಸ್ಸು ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಇರುವುದೊ ಆ ತೇಜಸ್ಸು ನನ್ನದೆಂದು ತಿಳಿ'[5] (೧೫. ೧೨).

**ವಿ.**—ಸಂಸರಿಸುತ್ತಿರುವ ಜೀವನು ಮುಕ್ತಾವಸ್ಥೆಯಲ್ಲಿ ಪರಬ್ರಹ್ಮನೊಂದಿಗೆ ಪರಮಸಾಮ್ಯವನ್ನು ಹೊಂದುವನೆಂದು ಸ್ಮೃತಿಯು ಹೇಳುತ್ತದೆ : 'ಈ ಜ್ಞಾನವನ್ನು ಆಶ್ರಯಿಸಿಕೊಂಡು ನನ್ನ ಸಾಮ್ಯವನ್ನು ಹೊಂದಿದವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ, ಪ್ರಲಯಕಾಲದಲ್ಲಿ ವ್ಯಥೆಪಡುವುದಿಲ್ಲ'[6] (ಗೀತಾ ೧೪. ೨).

**ದ್ವೈ.**—ಸ್ಮೃತಿಯ ಪ್ರಕಾರವೂ (ಗೀತಾ ೧೫. ೬ ಮತ್ತು ೧೨) ವಿಷ್ಣುವೇ ಸರ್ವಪ್ರಕಾಶಕನು.

---

[1] ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।
ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ ॥

[2] ಇದೇ ಮುಂಡಕೋಪನಿಷತ್ತಿನ ೨. ೨. ೧೧ ಆಗಿದೆ.

[3] ನ ಹಿ ಜ್ಞಾನಿಸುಖಮನುಭಾತಿ ಸರ್ವಮ್ । ನ ಚ ತದ್ಭಾಸಾ (ಮ. ಭಾ.).

*ಶ್ರೀಭಾಷ್ಯದ ಸೂತ್ರಪಾಠದಲ್ಲಿ ಚ-ಶಬ್ದವಿಲ್ಲ.

[4] ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥

[5] ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ।

[6] ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥

## ೭. ಪ್ರಮಿತಾಧಿಕರಣ *

(ಸೂ ೨೪—೨೫)

**ಶಬ್ದಾದೇವ ಪ್ರಮಿತಃ ॥ ೨೪ ॥**

೨೪ ಶಬ್ದದಿಂದಲೇ (ಎಂದರೆ ಈಶಾನ ಎಂಬ ಅಭಿಧಾನಶ್ರುತಿಯಿಂದಲೇ) (ಅಂಗುಷ್ಠ) ಪರಿಮಾಣವುಳ್ಳ (ಪುರುಷನು ಪರಮಾತ್ಮನೇ)

'ಅಂಗುಷ್ಠಪರಿಮಾಣವುಳ್ಳ ಪುರುಷನು ಶರೀರಮಧ್ಯದಲ್ಲಿ ಇರುತ್ತಾನೆ'[1] (ಕ ಉ ೨ ೪ ೧೨), 'ಅಂಗುಷ್ಠಪರಿಮಾಣವುಳ್ಳ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ, (ಅವನು) ಭೂತಭವಿಷ್ಯತ್ತುಗಳಿಗೆ ಒಡೆಯನು, ಇಂದೂ ಅವನೇ, ನಾಳೆಯೂ ಅವನೇ, ಇದೇ ಅದು'[2] (ಕ ಉ ೨ ೪ ೧೩), ಇಲ್ಲಿ ಅಂಗುಷ್ಠ-ಪರಿಮಾಣವುಳ್ಳವನು ಜೀವನೊ ಅಥವಾ ಪರಮಾತ್ಮನೊ—ಎಂಬುದು ಸಂಶಯ

**ಪೂರ್ವಪಕ್ಷ**—ಇಲ್ಲಿ ಪರಿಮಾಣವನ್ನು ಹೇಳಿರುವುದರಿಂದ ಜೀವಾತ್ಮನೇ ಆಗಿರಬೇಕು, ಅನಂತವಿಸ್ತಾರವುಳ್ಳ ಪರಮಾತ್ಮನಿಗೆ ಹೆಬ್ಬೆರಳಿನಷ್ಟು ಪರಿಮಾಣವು ಹೊಂದುವುದಿಲ್ಲ, ಉಪಾಧಿಸಂಬಂಧವನ್ನು ಪಡೆದಿರುವ ಜೀವಾತ್ಮನಿಗೆ ಯಾವುದಾದರೊಂದು ಕಲ್ಪನೆಯಿಂದ ಅಂಗುಷ್ಠಪರಿಮಾಣವುಳ್ಳವನು ಎಂದು ಹೇಳಬಹುದು 'ಅನಂತರ ಸತ್ಯವಂತನ ಶರೀರದಿಂದ ಅಂಗುಷ್ಠಮಾತ್ರನಾದ ಪುರುಷನನ್ನು ಯಮನು ಪಾಶದಿಂದ ವಶಪಡಿಸಿಕೊಂಡು ಬಲಾತ್ಕಾರದಿಂದ ಎಳೆದನು'[3] ಎಂದು ಸ್ಮೃತಿಯು (ಮಹಾಭಾರತ, ೩. ೨೯೭ ೧೭) ಹೇಳುತ್ತದೆ ಪರಮಾತ್ಮನನ್ನು ಹೀಗೆ ಎಳೆಯಲು ಅಸಾಧ್ಯವಾದುದರಿಂದ ಅಂಗುಷ್ಠಮಾತ್ರಪರಿಮಾಣವುಳ್ಳವನು ಜೀವನೇ

**ಸಿದ್ಧಾಂತಿ**—ಅಂಗುಷ್ಠಮಾತ್ರನು ಪರಮಾತ್ಮನೇ, ಏಕೆಂದರೆ 'ಭೂತಭವಿಷ್ಯತ್ತುಗಳಿಗೆ ಒಡೆಯನು' ಎಂಬ ಶಬ್ದವಿದೆ ಪರಮೇಶ್ವರನನ್ನು ಬಿಟ್ಟರೆ ಭೂತ-ಭವಿಷ್ಯಗಳನ್ನು ನಿರಂಕುಶವಾಗಿ ಆಳಲು ಯಾರಿಗೂ ಸಾಧ್ಯವಿಲ್ಲ 'ಇದೇ ಅದು' ಎಂಬ ವಾಕ್ಯವು ನಚಿಕೇತನು ಪ್ರಶ್ನಿಸಿದ್ದಕ್ಕೆ ಸಂಬಂಧಪಟ್ಟಿದೆ, ಬ್ರಹ್ಮವನ್ನು ಕುರಿತೇ ಅವನು ಪ್ರಶ್ನಿಸಿದ್ದು

---

* ಮಧ್ವಭಾಷ್ಯದಲ್ಲಿ ಇದನ್ನು ವಾಮನಾಧಿಕರಣ ಎಂದು ಕರೆದಿದೆ

1 ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।

2 ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।
ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ । ಏತದ್ವೈ ತತ್ ।

3 ಅಥ ಸತ್ಯವತಃ ಕಾಯಾತ್ ಪಾಶಬದ್ಧಂ ವಶಂ ಗತಮ್ ।
ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ॥

ವಿ.—ಅಂಗುಷ್ಠಮಾತ್ರನು ಪರಮಾತ್ಮನೇ; ಏಕೆಂದರೆ ಭೂತಭವಿಷ್ಯಗಳ ಒಡೆತನವು ಕರ್ಮಪರವಶನಾದ[1] ಜೀವನಿಗೆ ಹೊಂದುವುದಿಲ್ಲ.

ದ್ವೈ.—ಈಶಾನನು (ಕ. ಉ. ೨. ೪. ೧೩) ಮುಖ್ಯಪ್ರಾಣನಲ್ಲ, ವಿಷ್ಣುವೇ; '(ಪರಮಾತ್ಮನು) ಪ್ರಾಣನಾಮಕ-ವಾಯುವನ್ನು ಮೇಲಕ್ಕೆ ಎತ್ತುತ್ತಾನೆ, ಅಪಾನವನ್ನು ಕೆಳಕ್ಕೆ ಎಸೆಯುತ್ತಾನೆ; ಮಧ್ಯದಲ್ಲಿ ಕುಳಿತಿರುವ ವಾಮನನನ್ನು ಎಲ್ಲ ದೇವತೆಗಳೂ ಉಪಾಸಿಸುತ್ತಾರೆ'[2] (ಕ. ಉ. ೨. ೫. ೫) ಎಂಬಲ್ಲಿ ವಾಮನ-ಶಬ್ದದಿಂದ ಹೃದಯ ಮಧ್ಯದಲ್ಲಿರುವವನು ವಿಷ್ಣುವೇ ಎಂದು ತಿಳಿದುಬರುತ್ತದೆ.

## ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ॥ ೨೫ ॥

೨೫. ಆದರೆ ಹೃದಯದ ಅಪೇಕ್ಷೆಯಿಂದಲೇ (ಪರಮಾತ್ಮನು ಅಂಗುಷ್ಠ-ಮಾತ್ರನೆಂದು ಹೇಳಿದೆ); ಏಕೆಂದರೆ ಮನುಷ್ಯರಿಗೆ ಅಧಿಕಾರವಿದೆ.

ಸರ್ವಗತನಾದ ಪರಮಾತ್ಮನಿಗೆ ಒಂದು ಅಳತೆಯನ್ನು ಹೇಳುವುದು ಹೇಗೆ ಸಾಧ್ಯ? —ಎಂಬುದಕ್ಕೆ ಈ ಸೂತ್ರವು ಉತ್ತರವಾಗಿದೆ. ಪರಮಾತ್ಮನು ಸರ್ವಗತನಾಗಿದ್ದರೂ ಹೃದಯದಲ್ಲಿರುವವನು ಎಂಬ ಅಪೇಕ್ಷೆಯಿಂದ ಈ ಅಂಗುಷ್ಠ-ಮಾತ್ರತ್ವವನ್ನು ಹೇಳಿದೆ; ಅಳತೆಯನ್ನು ಮೀರಿರುವ ಪರಮಾತ್ಮನಿಗೆ ಮುಖ್ಯವೃತ್ತಿಯಿಂದ ಅಂಗುಷ್ಠಮಾತ್ರತ್ವವು ಹೊಂದುವುದಿಲ್ಲ

ಹೃದಯದ ಅಳತೆಯು ಬೇರೆ ಬೇರೆ ಪ್ರಾಣಿಗಳಲ್ಲಿ ಬೇರೆಬೇರೆಯಾಗಿರುವುದರಿಂದ ಹೃದಯದ ಅಪೇಕ್ಷೆಯಿಂದ ಅಂಗುಷ್ಠಮಾತ್ರತ್ವವು ಹೊಂದುವುದಿಲ್ಲ—ಎಂಬ ಆಕ್ಷೇಪಣೆಗೆ ಸೂತ್ರದ ಉತ್ತರಾರ್ಧದಲ್ಲಿ ಪರಿಹಾರವು ಹೀಗಿದೆ: 'ಮನುಷ್ಯರಿಗೆ ವೇದದಲ್ಲಿ ಅಧಿಕಾರವಿರುವುದರಿಂದ'; ಶಾಸ್ತ್ರವು ಪ್ರಾಣಿಗಳಿಗೆಲ್ಲ ಸಮಾನವಾಗಿ ಪ್ರವೃತ್ತವಾಗಿದ್ದರೂ ಮನುಷ್ಯರನ್ನೇ ತನ್ನ ಉಪದೇಶದಂತೆ ನಡೆಯಲು ಅಧಿಕರಿಸಿರುತ್ತದೆ; ಏಕೆಂದರೆ ಅವರು ಶಾಸ್ತ್ರೋಪದೇಶವನ್ನು ಅನುಷ್ಠಿಸಲು ಶಕ್ತರಾಗಿದ್ದಾರೆ,[3] ಶಾಸ್ತ್ರದಲ್ಲಿ ಹೇಳಿರುವ ಕರ್ಮಫಲಗಳನ್ನು ಬಯಸುವವರಾಗಿದ್ದಾರೆ,[4] ಶಾಸ್ತ್ರದಿಂದ ಬಹಿಷ್ಕೃತರಾಗಿಲ್ಲ ಮತ್ತು ಉಪನಯನವೇ ಮೊದ

---

[1] ಅಂಗುಷ್ಠಮಾತ್ರನೂ ರವಿತುಲ್ಯರೂಪನೂ ಆದ ಪ್ರಾಣಾಧಿಕನು ಸ್ವಕರ್ಮಗಳಿಂದ ಸಂಚರಿಸುತ್ತಾನೆ' (ಶ್ವೇತ. ಉ. ೫. ೭-೮).

[2] ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ॥

[3] ಪಶುಗಳು ದೇವತೆಗಳು ಋಷಿಗಳು—ಇವರನ್ನು ಅಧಿಕರಿಸಿಲ್ಲ ಎಂದಾಯಿತು; ಪಶ್ವಾದಿಗಳಿಗೆ ಶಾಸ್ತ್ರಾರ್ಥಜ್ಞಾನವೇ ಮೊದಲಾದ ಸಾಮಗ್ರಿಗಳಿಲ್ಲದರಿಂದ್ದ ಕರ್ಮವನ್ನು ನಡೆಸಲು ಶಕ್ತಿಯಿಲ್ಲ; ಇಂದ್ರಾದಿದೇವತೆಗಳು ತಮ್ಮನ್ನೇ ಉದ್ದೇಶಿಸಿಕೊಂಡು ಆಹುತಿಗಳನ್ನು ಕೊಡಬೇಕಾದುದರಿಂದ ಅವರೂ ಶಕ್ತರಲ್ಲ; ಯಾಗಮಾಡುವವನು ತನ್ನ ವಂಶದ ಋಷಿಗಳನ್ನೇ ಉದ್ದೇಶಿಸಬೇಕಾಗಿರುವುದರಿಂದ ಋಷಿಗಳಿಗೂ ಕರ್ಮದಲ್ಲಿ ಅಧಿಕಾರವಿಲ್ಲ.

[4] ಇದರಿಂದ ನಿಷ್ಕಾಮರಾದ ಮುಮುಕ್ಷುಗಳಿಗೆ ಅಧಿಕಾರವಿಲ್ಲ ಎಂದಾಯಿತು.

ಲಾದ ಸಂಸ್ಕಾರಗಳಿಗೆ ಅರ್ಹರಾಗಿರುತ್ತಾರೆ; ಈ ವಿಷಯವನ್ನು ಅಧಿಕಾರಲಕ್ಷಣದಲ್ಲಿ (ಜೈ. ಸೂ. ೬. ೧) ವರ್ಣಿಸಿದೆ.[1] ಮನುಷ್ಯನ ಶರೀರವು ಒಂದು ನಿಯತಪರಿಮಾಣ ವನ್ನು ಹೊಂದಿರುವಂತೆ ಅವನ ಹೃದಯವೂ ಒಂದು ನಿಯತವಾದ ಪರಿಮಾಣವುಳ್ಳ ದ್ದಾಗಿದೆ; ಆದುದರಿಂದ ಮನುಷ್ಯರಿಗೆ ಮಾತ್ರ ಶಾಸ್ತ್ರದ ಅಧ್ಯಯನ-ಅನುಷ್ಠಾನಗಳಲ್ಲಿ ಅಧಿಕಾರವಿರುವ ಪ್ರಯುಕ್ತ ಪರಮಾತ್ಮನು—ಅವರ ಹೃದಯದಲ್ಲಿರುವುದರ ಅಪೇಕ್ಷೆಯಿಂದ —ಅಂಗುಷ್ಠಮಾತ್ರನೆಂದು ಹೇಳಿದೆ.

ವೇದಾಂತವಾಕ್ಯಗಳಿಗೆ ತಾತ್ಪರ್ಯವು ಎರಡು ಬಗೆಯಾಗಿರುತ್ತದೆ; ಕೆಲವು ವಾಕ್ಯ ಗಳು ಪರಮಾತ್ಮನ ಸ್ವರೂಪವನ್ನೇ ನಿರೂಪಿಸುತ್ತವೆ, ಮತ್ತೆ ಕೆಲವು ಜೀವಾತ್ಮನಿಗೂ ಪರ ಮಾತ್ಮನಿಗೂ ಐಕ್ಯವನ್ನು ಉಪದೇಶಿಸುತ್ತವೆ.[2] ಇಲ್ಲಿ ವಿಷಯವಾಕ್ಯವು ಜೀವಪರ- ಮಾತ್ಮರ ಐಕ್ಯವನ್ನು ಉಪದೇಶಿಸುತ್ತದೆಯೇ ಹೊರತು ಯಾವ ಪರಿಮಾಣವನ್ನೂ ಹೇಳು ತ್ತಿಲ್ಲ. ಈ ಅರ್ಥವನ್ನೇ ಶ್ರುತಿಯು ಮುಂದೆ ಸ್ಪಷ್ಟಗೊಳಿಸಿದೆ: 'ಅಂಗುಷ್ಠಪರಿಮಾಣ ವುಳ್ಳವನೂ ಅಂತರಾತ್ಮನೂ ಆದ ಪುರುಷನು ಜನರ ಹೃದಯದಲ್ಲಿ ಯಾವಾಗಲೂ ಇರು ತ್ತಾನೆ. ಮುಂಜವೆಂಬ ಹುಲ್ಲಿನಿಂದ ದಂಟನ್ನು ತೆಗೆಯುವಂತೆ ಅವನನ್ನು ತನ್ನ ಶರೀರ ದಿಂದ ಧೈರ್ಯವಾಗಿ ಬೇರ್ಪಡಿಸಬೇಕು, ಅವನನ್ನು ಶುದ್ಧನೆಂದೂ ತಿಳಿದುಕೊಳ್ಳಬೇಕು'[3] (ಕ. ಉ. ೨. ೬. ೧೭).

ವಿ.—ಪರಮಾತ್ಮನು ಉಪಾಸನೆಗೋಸ್ಕರ ಉಪಾಸಕರ ಹೃದಯದಲ್ಲಿರುವುದ ರಿಂದಲೂ ಉಪಾಸಕರ ಹೃದಯವು ಅಂಗುಷ್ಠದಷ್ಟು ಪರಿಮಾಣವುಳ್ಳದ್ದರಿಂದಲೂ ಅವನು ಕೂಡ ಅಂಗುಷ್ಠಮಾತ್ರನೆಂದು ಹೇಳಿದೆ.[4] ಜೀವನು ಹೃದಯದಲ್ಲಿರುವುದರಿಂದ ಅವನೂ ಅಂಗುಷ್ಠಮಾತ್ರನೆಂದು ಹೇಳಬಹುದು. ಅವನು ದಬ್ಬಳದ ತುದಿಯಷ್ಟು ಸೂಕ್ಷ್ಮ ನಾಗಿರುವನೆಂದು ಶ್ರುತಿಯೇ (ಶ್ವೇ. ಉ ೫. ೮) ಹೇಳುತ್ತದೆ. ಮನುಷ್ಯರು ಮಾತ್ರ

---

[1] ಶಾಸ್ತ್ರಂ ಹ್ಯವಿಶೇಷಪ್ರವೃತ್ತಮಪಿ ಮನುಷ್ಯಾನೇವಾಧಿಕರೋತಿ, ಶಕ್ತತ್ವಾದ್ ಅರ್ಥಿ- ತ್ವಾದ್ ಅಪರ್ಯುದಸ್ತತ್ವಾದುಪನಯನಾದಿಶಾಸ್ತ್ರಾಚ್ಚೇತಿ ವರ್ಣಿತಮೇತದ್ ಅಧಿಕಾರಲಕ್ಷಣೇ (ಸೂ. ಭಾ.).

[2] ದ್ವಿರೂಪಾ ಹಿ ವೇದಾಂತವಾಕ್ಯಾನಾಂ ಪ್ರವೃತ್ತಿಃ ಕ್ವಚಿತ್ ಪರಮಾತ್ಮಸ್ವರೂಪ- ನಿರೂಪಣಪರಾ ಕ್ವಚಿದ್ವಿಜ್ಞಾನಾತ್ಮನಃ ಪರಮಾತ್ಮನೈಕತ್ವಮುಪದಿಶ್ಯತೇ ನಾಂಗುಷ್ಠ-ಮಾತ್ರತ್ವಂ ಕಸ್ಯಚಿತ್ (ಸೂ. ಭಾ.).

[3] ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ। ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ। ತಂ ವಿದ್ಯಾಚ್ಛುಕ್ರಮ- ಮೃತಮ್।

[4] ಪರಮಾತ್ಮನ ಉಪಾಸನಾರ್ಥಮುಪಾಸಕಹೃದಯೇ ವರ್ತಮಾನತ್ವಾದುಪಾಸಕ- ಹೃದಯಸ್ಯಾಂಗುಷ್ಠಪರಿಮಾಣತ್ವಾತ್ ತದಪೇಕ್ಷಯೇದಮಂಗುಷ್ಠಪ್ರಮಿತತ್ವಮುಪಪದ್ಯತೇ (ಶ್ರೀಭಾಷ್ಯ).

ಉಪಾಸಿಸಲು ಶಕ್ತರಾಗಿರುವುದರಿಂದಲೂ ಶಾಸ್ತ್ರವನ್ನು ಅನುಷ್ಠಿಸಲು ಅಧಿಕಾರಿಗಳಾಗಿರುವುದರಿಂದಲೂ ಇತರ ಪ್ರಾಣಿಗಳಿಗೂ ಅದೇ ಅಳತೆಯ ಹೃದಯವಿರುವುದೆಂಬ ಆಕ್ಷೇಪಣೆಯು ಯುಕ್ತವಲ್ಲ.

**ದ್ವೈ.**—ವಿಷ್ಣುವು ಸರ್ವಗತನಾಗಿದ್ದರೂ ಹೃದಯದಲ್ಲಿರುವ ಅವಕಾಶವನ್ನು ಅಪೇಕ್ಷಿಸಿಯೇ ಅವನು ಅಂಗುಷ್ಠಮಾತ್ರನು ಎಂಬುದು ಹೊಂದುತ್ತದೆ.[1] ಇತರ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ಈ ಉಪಾಸನೆಗೆ ಮನುಷ್ಯರು ಮಾತ್ರ ಅಧಿಕಾರಿಗಳಾಗಿರುವುದರಿಂದ ವಿಷ್ಣುವು ಅಂಗುಷ್ಠಮಾತ್ರನೆಂಬುದು ಯುಕ್ತವಾಗಿದೆ.[2]

---

[1] ಸರ್ವಗತಸ್ಯಾಪಿ ತಸ್ಯಾಂಗುಷ್ಠಮಾತ್ರತ್ವಂ ಹೃದ್ಯವಕಾಶಾಪೇಕ್ಷಯಾ ಯುಜ್ಯತೇ । (ಮ. ಭಾ.).

[2] ಇತರಪ್ರಾಣಿನಾಮಂಗುಷ್ಠಾಭಾವೇಽಪಿ ಮನುಷ್ಯಾಧಿಕಾರತ್ವಾನ್ನ ವಿರೋಧಃ । (ಮ. ಭಾ.).

## ೮. ದೇವತಾಧಿಕರಣ *

(ಸೂ. ೨೬–೩೩)

**ತದುಪರ್ಯಪಿ ಬಾದರಾಯಣಃ ಸಂಭವಾತ್ ॥ ೨೬ ॥**

೨೬. ಅವರ (ಎಂದರೆ ಮನುಷ್ಯರ) ಮೇಲಿರುವವರೂ ಕೂಡ ವೇದಕ್ಕೆ ಅಧಿಕಾರಿಗಳಾಗುವರು) ಎಂದು ಬಾದರಾಯಣರು (ಅಭಿಪ್ರಾಯಪಡು ತ್ತಾರೆ); ಏಕೆಂದರೆ ಅದು ಸಾಧ್ಯವಾಗುತ್ತದೆ.

ಹಿಂದಿನ ಅಧಿಕರಣದಲ್ಲಿ ಅಂಗುಷ್ಠಮಾತ್ರ-ಶ್ರುತಿಯು ಮನುಷ್ಯರ ಹೃದಯದ ಅಪೇಕ್ಷೆಯಿಂದ ಬಂದಿದೆ ; ಏಕೆಂದರೆ ಅವರಿಗೆ ಶಾಸ್ತ್ರಕ್ಕೆ ಅಧಿಕಾರವಿದೆ—ಎಂದು ಹೇಳಿದ್ದಾಗಿದೆ. ಇದು ಮುಂದೆ ಬರುವ ಪ್ರಸಂಗಕ್ಕೆ ಸಂದರ್ಭವನ್ನು ಒದಗಿಸಿದೆ: ಶಾಸ್ತ್ರವು ಮನುಷ್ಯರನ್ನು ಅಧಿಕರಿಸಿದೆ ಎಂಬುದು ನಿಜ ; ಆದರೆ ಮನುಷ್ಯರಿಗೆ ಮಾತ್ರ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆ ಎಂಬ ನಿಯಮವಿಲ್ಲ. ಮನುಷ್ಯರ ಮೇಲಿರುವ ದೇವಾದಿಗಳಿಗೂ ಇದರಲ್ಲಿ ಅಧಿಕಾರವಿದೆ ಎಂಬುದು ಬಾದರಾಯಣರ ಅಭಿಪ್ರಾಯ ; ಏಕೆಂದರೆ ಅವರಿಗೂ ಕೂಡ ಅರ್ಥಿತ್ವವೇ ಮೊದಲಾದ ಅಧಿಕಾರದ ಕಾರಣವು ಸಂಭವಿಸುತ್ತದೆ: (೧) ಕಾರ್ಯರೂಪವಾದ ವಿಭೂತಿಗಳು ಅನಿತ್ಯವು ಎಂಬ ಆಲೋಚನೆಯಿಂದ ದೇವತೆಗಳಿಗೆ ಮೋಕ್ಷದಲ್ಲಿ ಬಯಕೆಯುಂಟಾಗಬಹುದು ; (೨) ಇವರಿಗೆ ಸಾಮರ್ಥ್ಯವೂ ಇರಬಹುದು ; ಏಕೆಂದರೆ ಮಂತ್ರಾದಿಗಳಿಂದ ದೇವತೆಗಳಿಗೆ ಶರೀರಾದಿಗಳು ಇವೆ ಎಂದು ತಿಳಿದುಬರುತ್ತದೆ: (೩) ಇವರನ್ನು ಶಾಸ್ತ್ರವು ಬಹಿಷ್ಕರಿಸಿಲ್ಲ ; (೪) ಇವರಿಗೆ ವೇದವು ತಾನೇ ವ್ಯಕ್ತವಾಗಿರುವುದರಿಂದ ಉಪನಯನದ ಆವಶ್ಯಕತೆಯಿಲ್ಲ. ಇವರು ವಿದ್ಯಾರ್ಜನೆಗೋಸ್ಕರ ಶಿಷ್ಯವೃತ್ತಿಯನ್ನು ಅವಲಂಬಿಸಿದ್ದೂ ನಮಗೆ ತಿಳಿದುಬರುತ್ತದೆ. ಇಂದ್ರನು ನೂರೊಂದು ವರ್ಷಗಳವರೆಗೆ ಪ್ರಜಾಪತಿಯ ಶಿಷ್ಯನಾಗಿದ್ದನು (ಛಾಂ. ಉ. ೮. ೨. ೩). ಬ್ರಹ್ಮವಿದ್ಯೆಯನ್ನು ಪಡೆಯಲು ಭೃಗುವು ತನ್ನ ತಂದೆಯಾದ ವರುಣನನ್ನು ಬಳಿಸಾರಿದನು (ತೈ. ಉ. ೩. ೧). ದೇವತೆಗಳಿಗೂ ಋಷಿಗಳಿಗೂ ಕರ್ಮದಲ್ಲಿ ಅಧಿಕಾರವಿಲ್ಲದಿದ್ದರೂ (ಜೈ. ಸೂ. ೬. ೧. ೫) ಜ್ಞಾನದಲ್ಲಿ ಅಧಿಕಾರವಿದೆ ; ಏಕೆಂದರೆ ಬ್ರಹ್ಮಜ್ಞಾನಕ್ಕೋಸ್ಕರ ಅವರು ಯಾವ ಕರ್ಮವನ್ನೂ ಮಾಡಬೇಕಾಗಿಲ್ಲ. ದೇವಾದಿಗಳ ಅಧಿಕಾರವನ್ನು ಒಪ್ಪಿಕೊಂಡರೆ ಅಂಗುಷ್ಠಮಾತ್ರ-ಶ್ರುತಿಯೂ ಸಮಂಜಸವಾಗುತ್ತದೆ ; ಏಕೆಂದರೆ ಅವರವರ ಅಂಗುಷ್ಠದ ಅಪೇಕ್ಷೆಯಿಂದ ಪರಮಾತ್ಮನು ಅಂಗುಷ್ಠಮಾತ್ರನಾಗಿರುತ್ತಾನೆ.

---

* ಶ್ರೀಭಾಷ್ಯದಲ್ಲಿ ಮಧ್ವಾದಿಷು.... ಎಂಬ ಸೂತ್ರದಿಂದ ಭಾವಂ ತು... ಎಂಬ ಸೂತ್ರದ ವರೆಗೆ ಮಧ್ವಧಿಕರಣ ಎಂದು ಹೇಳಿದೆ. ಈ ಎರಡು ಅಧಿಕರಣಗಳು ಪ್ರಾಸಂಗಿಕವಾಗಿವೆ.

**ವಿ.**—ಬ್ರಹ್ಮೋಪಾಸನೆಯು ದೇವತೆಗಳಿಗೂ ಸಾಧ್ಯವಾಗುತ್ತದೆ; ಏಕೆಂದರೆ ಅರ್ಥಿತ್ವ-ಸಾಮರ್ಥ್ಯಗಳೆರಡೂ ಅವರಿಗೆ ಸಂಭವಿಸುತ್ತವೆ; ಆಧ್ಯಾತ್ಮಿಕವೇ ಮೊದಲಾದ ಸಹಿಸಲಾಗದ ದುಃಖಗಳಿಂದ ತಪ್ತರಾಗಿರುವುದರಿಂದಲೂ ನಿಖಿಲದೋಷ-ಗಂಧರಹಿತನೂ ಅಸಂಖ್ಯೇಯ-ಕಲ್ಯಾಣಗುಣ-ಸಮೂಹನೂ ಆದ ಪರಬ್ರಹ್ಮನಲ್ಲಿ ಮಾತ್ರ ನಿರತಿಶಯ-ಭೋಗ್ಯವಿದೆಯೆಂದು ಅರಿತಿರುವುದರಿಂದಲೂ ದೇವತೆಗಳಿಗೆ ಅರ್ಥಿತ್ವವು ಉಂಟಾಗುತ್ತದೆ.[1] ಪಟುತರವಾದ ದೇಹೇಂದ್ರಿಯಗಳಿಂದ ಕೂಡಿರುವುದರಿಂದ ಸಾಮರ್ಥ್ಯವು ಸಂಭವಿಸುತ್ತದೆ. ಹೀಗೆ ದೇಹಾದಿಗಳನ್ನು ಪಡೆದಿರುವುದರಿಂದ ದೇವತೆಗಳಿಗೂ ಉಪಾಸನೆಯಲ್ಲಿ ಅಧಿಕಾರ ವಿದೆ.

**ದ್ವೈ.**—ಮನುಷ್ಯರಾಗಿದ್ದು ವಿದ್ಯಾ-ಕರ್ಮಗಳಿಂದ ದೇವತ್ವವನ್ನು ಹೊಂದಿದ ಮೇಲೆಯೂ ವಿಶಿಷ್ಟವಾದ ಬುದ್ಧ್ಯಾದಿಗಳು ಇರುವುದರಿಂದ ಅವರಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ.[2] ತಿರ್ಯಗ್ಜಂತುಗಳಲ್ಲಿ ವಿಶಿಷ್ಟಬುದ್ಧ್ಯಾದಿಗಳು ಇಲ್ಲದಿರುವುದರಿಂದ ಅವುಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಬುದ್ಧ್ಯಾದಿಗಳಿದ್ದರೆ ಅವುಗಳಿಗೂ ಅಧಿಕಾರ ವಿದೆ ಎಂಬುದಕ್ಕೆ ಯಾವ ವಿರೋಧವೂ ಇಲ್ಲ.

**ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ॥ ೨೭ ॥**

೨೭. (ದೇವತೆಗಳ ಶರೀರತ್ವದಿಂದ) ಯಜ್ಞಕರ್ಮದಲ್ಲಿ ವಿರೋಧವು (ಬರುತ್ತದೆ) ಎಂದು ಹೇಳಿದರೆ, ಅದು ಸರಿಯಲ್ಲ; ಏಕೆಂದರೆ (ದೇವತೆಗಳು) ಅನೇಕ (ರೂಪಗಳನ್ನು) ಧರಿಸಿರುವುದು ಕಂಡುಬರುತ್ತದೆ.

ದೇವತೆಗಳಿಗೆ ಶರೀರವನ್ನು ಒಪ್ಪಿಕೊಂಡು ಅವರಿಗೆ ವಿದ್ಯೆಗಳಲ್ಲಿ ಅಧಿಕಾರವಿದೆಯೆಂದು ಹೇಳುವುದಾದರೆ ಅವರೂ ಋತ್ವಿಕ್ಕುಗಳಂತೆ ಯಜ್ಞಕಾಲದಲ್ಲಿ ಇದ್ದುಕೊಂಡು ಕರ್ಮಕ್ಕೆ ಅಂಗವಾಗಬೇಕಾಗುತ್ತದೆ. ಒಂದೇ ಕಾಲದಲ್ಲಿ ನಡೆಯುತ್ತಿರುವ ಅನೇಕ ಯಜ್ಞಗಳಲ್ಲಿ ಇಂದ್ರನು ಹೇಗೆ ಇರಬಲ್ಲನು ?—ಎಂಬುದು ಆಕ್ಷೇಪಣೆ. ಇದಕ್ಕೆ ಪರಿಹಾರ ಹೀಗಿದೆ: ಒಂದೇ ದೇವತೆಗೆ ಒಂದೇ ಕಾಲದಲ್ಲಿ ಅನೇಕ ರೂಪಗಳನ್ನು ಪಡೆಯುವುದು ಸಾಧ್ಯವಾಗುತ್ತದೆ. ಒಬ್ಬನೇ ದೇವತಾತ್ಮನು ಒಂದೇ ಕಾಲದಲ್ಲಿ ಅನೇಕ ರೂಪಗಳಿಂದ

---

[1] ತೇಷಾಮರ್ಥಿತ್ವಸಾಮರ್ಥ್ಯಯೋಃ ಸಂಭವಾತ್ । ಅರ್ಥಿತ್ವಂ ತಾವದಾಧ್ಯಾತ್ಮಿಕಾದಿ-ದುರ್ವಿಷಹದುಃಖಾಭಿತಾಪಾತ್ ಪರಸ್ಮಿನ್ ಬ್ರಹ್ಮಣಿ ಚ ನಿರಸ್ತನಿಖಿಲದೋಷಗಂಧೇಽನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಗಣೇ ನಿರತಿಶಯಭೋಗ್ಯತ್ವಾದಿಜ್ಞಾನಾಚ್ಚ ಸಂಭವತಿ (ಶ್ರೀಭಾಷ್ಯ).

[2] ತದುಪರಿ ಮನುಷ್ಯಾಣಾಂ ಸತಾಂ ದೇವಾದಿತ್ವಪ್ರಾಪ್ತ್ಯುಪರಿ। ಸಂಭವತಿ ಹಿ ತೇಷಾಂ ವಿಶಿಷ್ಟಬುದ್ಧ್ಯಾದಿಭಾವಾತ್ (ಮ. ಭಾ.).

ತೋರುತ್ತಾನೆಂದು ಶ್ರುತಿಯು (ಬೃ ಉ ३ ९ ೨) ಹೇಳುತ್ತದೆ ಅಣಿಮಾದ್ಯೈ-ಶ್ವರ್ಯಗಳನ್ನು ಪಡೆದುಕೊಂಡಿರುವ ಯೋಗಿಯು ಅನೇಕ ರೂಪಗಳನ್ನು ಪಡೆಯಬಹು ದೆಂದೂ ಅನೇಕ ಅನುಭವಗಳನ್ನು ಹೊಂದಬಹುದೆಂದೂ ಪುನಃ ಅವುಗಳನ್ನೆಲ್ಲ ತನ್ನಲ್ಲಿ ಎಳೆದುಕೊಳ್ಳಬಹುದೆಂದೂ ಮಹಾಭಾರತದಲ್ಲಿ[1] ಹೇಳಿದೆ ಯೋಗಿಗಳಿಗೇ ಇಂಥ ಶಕ್ತಿ ಯಿರುವಾಗ ಜನ್ಮದಿಂದಲೇ ಸಿದ್ಧರಾಗಿರುವ ದೇವತೆಗಳ ವಿಷಯದಲ್ಲಿ ಏನೂ ಹೇಳಬೇಕಾದು ದಿಲ್ಲ.

ಸೂತ್ರದ ಉತ್ತರಭಾಗಕ್ಕೆ ಇನ್ನೊಂದು ವಿಧದಿಂದಲೂ ವ್ಯಾಖ್ಯಾನವನ್ನು ಮಾಡ ಬಹುದು : ಒಬ್ಬನೇ ಬ್ರಾಹ್ಮಣನನ್ನು ಏಕಕಾಲದಲ್ಲಿ ಊಟಮಾಡಿಸಲು ಅನೇಕರಿಗೆ ಸಾಧ್ಯವಾಗದಿರಬಹುದು , ಆದರೆ ಏಕಕಾಲದಲ್ಲಿ ಅವನನ್ನು ಅನೇಕರು ನಮಸ್ಕರಿಸ ಬಹುದು ಹೀಗೆಯೇ ಯಾಗದಲ್ಲಿ ಒಂದೇ ದೇವತೆಯನ್ನು ಉದ್ದೇಶಿಸಿ ಅನೇಕರು ಏಕ ಕಾಲದಲ್ಲಿ ತಮ್ಮ ತಮ್ಮ ಆಹುತಿಗಳನ್ನು ಕೊಡಬಹುದು ಆದುದರಿಂದ ದೇವತೆಗಳ ಶರೀರತ್ವವು ಯಜ್ಞಕಾರ್ಯದಲ್ಲಿ ಅಡ್ಡಿಯಾಗಲಾರದು

**ವಿ.**—ಒಬ್ಬನಿಗೆ ಒಂದೇ ಕಾಲದಲ್ಲಿ ಅನೇಕ ಶರೀರಗಳನ್ನು ಪಡೆಯುವುದು ಸಾಧ್ಯ. ಏಕೆಂದರೆ ಸೌಭರಿಯಂತೆ ಶಕ್ತಿಯನ್ನು ಪಡೆದಿರುವ ಅನೇಕರು ಏಕಕಾಲದಲ್ಲಿ ಬಹುಶರೀರ ಗಳನ್ನು ಪಡೆದಿರುವುದು ಶಾಸ್ತ್ರದಿಂದ ತಿಳಿದುಬರುತ್ತದೆ [2]

**ದ್ವೈ.**—ಮನುಷ್ಯರೇ ದೇವತೆಗಳಾಗುತ್ತಾರೆಂದು ಹಿಂದೆ ಹೇಳಿದ್ದಾಯಿತು , ಇದನ್ನು ಒಪ್ಪಿಕೊಂಡರೆ ಮೊದಲು ದೇವತೆಗಳು ಇರಲಿಲ್ಲವೆಂದೂ ಅವರು ಇಲ್ಲದಿರುವಾಗ ಅವರನ್ನು ಉದ್ದೇಶಿಸಿ ಮಾಡಿದ ಕರ್ಮವು ವ್ಯರ್ಥವಾಗುತ್ತದೆಯೆಂದೂ ಆಕ್ಷೇಪಣೆಯು ಬರುತ್ತದೆ ಇದು ಸರಿಯಲ್ಲ , ಏಕಂದರೆ ಅನೇಕರು ಪೂರ್ವದಲ್ಲಿ ದೇವತಾಪದವಿಯನ್ನು ಹೊಂದಿದ್ದರೆಂದು ಶ್ರುತಿಯು ಹೇಳುತ್ತದೆ [3]

**ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್ ॥ ೨೮ ॥**

೨೮. (ದೇವತೆಗಳ ಶರೀರತ್ವದಿಂದ) (ವೈದಿಕ-) ಶಬ್ದದ (ವಿಷಯದಲ್ಲಿ ವಿರೋಧವು ಬರುತ್ತದೆ) ಎಂದು ಹೇಳಿದರೆ, ಅಲ್ಲ ಎಂಬುದು ನಮ್ಮ

---

[1] ಆತ್ಮನೋ ವೈ ಶರೀರಾಣಿ ಬಹೂನಿ ಭರತರ್ಷಭ ।
ಯೋಗೀ ಕುರ್ಯಾದ್ಬಲಂ ಪ್ರಾಪ್ಯ ತೈಶ್ಚ ಸರ್ವೈರ್ಮಹೀಂ ಚರೇತ್ ॥
ಪ್ರಾಪ್ನುಯಾದ್ವಿಷಯಾನ್ ಕೈಶ್ಚಿತ್ ಕೈಶ್ಚಿದುಗ್ರಂ ತಪಶ್ಚರೇತ್ ।
ಸಂಕ್ಷಿಪೇಚ್ಚ ಪುನಸ್ತಾನಿ ಸೂರ್ಯೋ ರಶ್ಮಿಗಣಾನಿವ ॥

[2] ದೃಶ್ಯತೇ ಹಿ ಸೌಭರಿಪ್ರಭೃತೀನಾಂ ಶಕ್ತಿಮತಾಂ ಯುಗಪದನೇಕಶರೀರಪ್ರತಿಪತ್ತಿಃ (ಶ್ರೀಭಾಷ್ಯ).

[3] ಅನೇಕೇಷಾಂ ದೇವತಾಪದಪ್ರತಿಪತ್ತೇರ್ದರ್ಶನಾದ್ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾ ಇತಿ (ಮ. ಭಾ )

ಉತ್ತರ; ಏಕೆಂದರೆ (ಜಗತ್ತು) ಅದರಿಂದಲೇ (ಎಂದರೆ ಶಬ್ದದಿಂದಲೇ) ಹುಟ್ಟುತ್ತದೆ ಎಂಬುದು ಪ್ರತ್ಯಕ್ಷ-ಅನುಮಾನಗಳಿಂದಲೇ (ತಿಳಿದು ಬರುತ್ತದೆ).

ದೇವತೆಗಳಿಗೆ ಶರೀರವಿದ್ದರೆ ಅವರು ಮನುಷ್ಯರಂತೆ ಜನನ-ಮರಣಗಳನ್ನು ಹೊಂದಬೇಕಾಗುತ್ತದೆ. ಪೂರ್ವಮೀಮಾಂಸೆಯ ಪ್ರಕಾರ ವೇದದ ಶಬ್ದಗಳೆಲ್ಲವೂ ನಿತ್ಯವು, ಅವುಗಳು ಸೂಚಿಸುವ ಅರ್ಥಗಳೂ ಎಂದರೆ ವಿಷಯಗಳೂ ನಿತ್ಯವು ಮತ್ತು ಶಬ್ದಾರ್ಥಗಳೆರಡರ ಸಂಬಂಧವೂ ನಿತ್ಯವು. ವೇದದಲ್ಲಿ ಇಂದ್ರಾದಿದೇವತೆಗಳ ಹೆಸರುಗಳು ಬರುತ್ತವೆ. ದೇವತೆಗಳು ಶರೀರವನ್ನು ಪಡೆದಿರುವ ಕಾರಣ ಅವರು ನಿತ್ಯರಾಗದಿದ್ದರೆ ಈ ಶಬ್ದಗಳಿಗೆ ನಿತ್ಯವಾದ ಅರ್ಥಗಳು ಇರುವುದಿಲ್ಲ. ಆದುದರಿಂದ ಶಬ್ದಾರ್ಥಗಳ ನಿತ್ಯಸಂಬಂಧವನ್ನು ಅಪೇಕ್ಷಿಸುವ ವೇದವು ತನ್ನ ನಿತ್ಯತ್ವವನ್ನೂ ಪ್ರಾಮಾಣ್ಯವನ್ನೂ ಕಳೆದುಕೊಳ್ಳುತ್ತದೆ—ಎಂಬುದು ಆಕ್ಷೇಪಣೆ.

ಇದಕ್ಕೆ ಪರಿಹಾರವು ಹೀಗಿದೆ: ವೈದಿಕ-ಶಬ್ದವು ಆಕೃತಿಯನ್ನು (type) ಸೂಚಿಸುತ್ತದೆಯೇ ಹೊರತು ವ್ಯಕ್ತಿಯನ್ನು (Individual) ಸೂಚಿಸುವುದಿಲ್ಲ ಗೋ ಎಂಬ ಶಬ್ದವು ಒಂದು ನಿತ್ಯವಾದ ಆಕೃತಿಯನ್ನು ಸೂಚಿಸುತ್ತದೆ. ದನಗಳು ಹುಟ್ಟಬಹುದು, ಸಾಯಬಹುದು, ಆಕೃತಿಗಳು ಹುಟ್ಟುವುದೂ ಇಲ್ಲ ಸಾಯುವುದೂ ಇಲ್ಲ. ಹೀಗೆಯೇ ಇಂದ್ರಾದಿ-ದೇವತೆಗಳನ್ನು ಸೂಚಿಸುವ ಶಬ್ದಗಳು; ದೇವತೆಗಳನ್ನು ಸೂಚಿಸುವ ಶಬ್ದಗಳಿಗೆ ಆಕೃತಿಗಳು ವಿಷಯಗಳೇ ಹೊರತು ವ್ಯಕ್ತಿಗಳಲ್ಲ, ಮತ್ತೆ ಇಂದ್ರಾದಿ-ಶಬ್ದಗಳು—ಸೇನಾಪತಿ ಮೊದಲಾದ ಶಬ್ದಗಳಂತೆ—ಆಯಾ ಸ್ಥಾನಗಳನ್ನು ಸೂಚಿಸುತ್ತವೆ. ಆದುದರಿಂದ ದೇವತೆಗಳಿಗೆ ಶರೀರವನ್ನು ಒಪ್ಪಿಕೊಂಡರೆ ವೈದಿಕಶಬ್ದಗಳಲ್ಲಿ ಯಾವ ವಿರೋಧವೂ ಕಂಡು ಬರುವುದಿಲ್ಲ.

ದೇವತೆಗಳ ಸಹಿತ ಈ ಜಗತ್ತೆಲ್ಲವೂ ವೈದಿಕಶಬ್ದಗಳಿಂದಲೇ ಉತ್ಪನ್ನವಾಗಿದೆ; ಆದರೆ ಬ್ರಹ್ಮವು ಜಗತ್ತಿಗೆ ಉಪಾದಾನಕಾರಣವಾಗಿರುವಂತೆ (೧. ೧. ೨) ಈ ಶಬ್ದಗಳು ಜಗತ್ತಿಗೆ ಉಪಾದಾನಕಾರಣವಾಗಿಲ್ಲ. ಹಾಗಾದರೆ ಇವು ಹೇಗೆ ಕಾರಣವಾಗಿವೆ? ನಿತ್ಯವಾದ ಶಬ್ದಗಳು ನಿತ್ಯವಾದ ಅರ್ಥಗಳನ್ನೇ ಸೂಚಿಸುತ್ತವೆ. ನಿತ್ಯವಾದ ಅರ್ಥಗಳು ವ್ಯಕ್ತಿಗಳಲ್ಲಿ ಕಂಡುಬರುವಾಗ ಆಯಾ ಶಬ್ದಗಳು ವ್ಯಕ್ತಿಗಳಿಗೆ ಅನ್ವಯಿಸಲ್ಪಡುತ್ತವೆ. ಈ ದೃಷ್ಟಿಯಿಂದ ವ್ಯಕ್ತಿಗಳು ಶಬ್ದಗಳಿಂದ ಹುಟ್ಟುತ್ತವೆ ಎಂದು ಹೇಳಬಹುದು.[1]

ಶಬ್ದದಿಂದಲೇ ಜಗತ್ತು ಉತ್ಪನ್ನವಾಗಿದೆ ಎಂಬುದಕ್ಕೆ ಪ್ರಮಾಣವೇನು? 'ಪ್ರತ್ಯಕ್ಷ, ಅನುಮಾನ—ಇವುಗಳಿಂದ' ಎಂಬುದು ಉತ್ತರ. ಪ್ರತ್ಯಕ್ಷವೆಂದರೆ ಶ್ರುತಿಯು; ಏಕೆಂದರೆ

[1] ಸ್ಥಿತೇ ವಾಚಕಾತ್ಮನಾ ನಿತ್ಯೇ ಶಬ್ದೇ ನಿತ್ಯಾರ್ಥಸಂಬಂಧಿನಿ ಶಬ್ದವ್ಯವಹಾರಯೋಗ್ಯಾರ್ಥವ್ಯಕ್ತಿನಿಷ್ಪತ್ತಿರತಃ ಪ್ರಭವ ಇತ್ಯುಚ್ಯತೇ (ಸೂ. ಭಾ.).

ಇದರ ಪ್ರಾಮಾಣ್ಯಕ್ಕೆ ಬೇರೆ ಪ್ರಮಾಣವು ಬೇಕಾಗುವುದಿಲ್ಲ ಅನುಮಾನವೆಂದರೆ ಸ್ಮೃತಿಯು, ಏಕೆಂದರೆ ಇದರ ಪ್ರಾಮಾಣ್ಯಕ್ಕೆ ಶ್ರುತಿಯು ಬೇಕಾಗಿರುತ್ತದೆ[1] ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸುವುದಕ್ಕೆ ಮೊದಲು ಅನೇಕ ಶಬ್ದಗಳನ್ನು ಉಚ್ಚರಿಸಿದನೆಂದು 'ವೇದವು ಹೇಳುತ್ತದೆ[2] 'ಅವನು ಮನಸ್ಸಿನೊಂದಿಗೆ ವಾಕ್ಕನ್ನು ಸೇರಿಸಿದನು'[3] (ಬೃ ಉ ೧ ೨ ೪) ಎಂದು ಶ್ರುತಿಯು ಹೇಳುತ್ತದೆ 'ಅವನು ಆದಿಯಲ್ಲಿ ವೇದಗಳ ಶಬ್ದಗಳಿಂದಲೇ ಬೇರೆಬೇರೆಯ ನಾಮಗಳನ್ನೂ ಕರ್ಮಗಳನ್ನೂ ಸ್ಥಿತಿಗಳನ್ನೂ ಸೃಷ್ಟಿಸಿದನು'[4] (ಮ ಸ್ಮೃ ೧ ೨೧) ಎಂದು ಸ್ಮೃತಿಯು ಹೇಳುತ್ತದೆ

ಜಗತ್ಕಾರಣವೆಂದು ಹೇಳಲ್ಪಟ್ಟ ಈ ಶಬ್ದದ ಸ್ವರೂಪವೇನು? ಈ ವಿಷಯದಲ್ಲಿ ವೈಯಾಕರಣರ ಅಭಿಪ್ರಾಯವು ಹೀಗಿದೆ ಮನಸ್ಸಿನಲ್ಲಿ ಹೊಳೆಯುವ ಸ್ಫೋಟವೇ ಶಬ್ದದ ಸ್ವರೂಪ; ಎಂದರೆ ಶಬ್ದವನ್ನು ಉಚ್ಚರಿಸಿದ ಕೂಡಲೇ ಅದರಿಂದ ಅರ್ಥವು ತಿಳಿದುಬರುತ್ತದೆ ಸ್ಫೋಟವು ನಿತ್ಯವಾದುದು, ಉಚ್ಚರಿಸಿದ ಕೂಡಲೇ ನಾಶವಾಗುವ ವರ್ಣಗಳಲ್ಲ ದೇವಾದಿಗಳು ಅನಿತ್ಯವಾದ ವರ್ಣಗಳಿಂದ ಹುಟ್ಟಲಾರರು, ನಿತ್ಯವಾದ ಸ್ಫೋಟದಿಂದಲೇ ಹುಟ್ಟುತ್ತಾರೆ ಸ್ಫೋಟರೂಪವಾದ ಅಭಿಧಾಯಕ ರೂಪವಾದ ನಿತ್ಯಶಬ್ದದಿಂದಲೇ ಅಭಿಧೇಯವಾದ ಕ್ರಿಯಾ-ಕಾರಕ-ಫಲರೂಪವಾದ ಜಗತ್ತು ಹುಟ್ಟುತ್ತದೆ ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ಭಗವಂತರಾದ ಉಪವರ್ಷರು ವರ್ಣಗಳೇ ಶಬ್ದಗಳು ಎಂದು ಹೇಳುತ್ತಾರೆ[5] ಸ್ಫೋಟವೆಂಬ ಭಿನ್ನವಸ್ತುವಿಲ್ಲ ವರ್ಣಗಳು ಹುಟ್ಟುತ್ತಲೇ ನಾಶವಾಗುವುದಿಲ್ಲ, ಏಕೆಂದರೆ 'ಅದೇ ಇದು' ಎಂದು ಗುರುತಿಸುತ್ತೇವೆ ಇವು ಬೇರೆಬೇರೆ ಸಂದರ್ಭಗಳಲ್ಲಿ ಬೇರೆಬೇರೆಯಾಗುವುದಿಲ್ಲ ವರ್ಣಗಳಿಂದಲೇ ಅರ್ಥವು ಗೊತ್ತಾಗುವುದರಿಂದ ಸ್ಫೋಟದ ಕಲ್ಪನೆಯು ವ್ಯರ್ಥವು[6]

ವಿ.—ಇಂದ್ರಾದಿ-ಶಬ್ದಗಳಿಂದ ಇಂದ್ರಾದಿಗಳು ಪುನಃ ಪುನಃ ಹುಟ್ಟುತ್ತಾರೆ, ಏಕೆಂದರೆ ದೇವದತ್ತಾದಿ-ಶಬ್ದಗಳಂತೆ ಇಂದ್ರನೇ ಮೊದಲಾದ ವೈದಿಕ-ಶಬ್ದಗಳು ವ್ಯಕ್ತಿ

---

[1] ಪ್ರತ್ಯಕ್ಷಂ ಶ್ರುತಿಃ, ಪ್ರಾಮಾಣ್ಯಂ ಪ್ರತ್ಯನಪೇಕ್ಷತ್ವಾತ್ । ಅನುಮಾನಂ ಸ್ಮೃತಿಃ, ಪ್ರಾಮಾಣ್ಯಂ ಪ್ರತಿ ಸಾಪೇಕ್ಷತ್ವಾತ್ (ಸೂ ಭಾ )

[2] ಏತೇ ಇತಿ ವೈ ಪ್ರಜಾಪತಿರ್ದೇವಾನಸೃಜತಾಸೃಗ್ರಮಿತಿ ಮನುಷ್ಯಾನಿಂದವ ಇತಿ ಪಿತೄಂಸ್ತಿರಃ ಪವಿತ್ರಮಿತಿ ಗ್ರಹಾನಾಶವ ಇತಿ ಸ್ತೋತ್ರಂ ವಿಶ್ವಾನೀತಿ ಶಸ್ತ್ರಮಭಿಸೌಭಗೇತ್ಯನ್ಯಾಃ ಪ್ರಜಾಃ (ಋ ವೇ ೯ ೬೨)

[3] ಸ ಮನಸಾ ವಾಚಂ ಮಿಥುನಂ ಸಮಭವತ್ ।

[4] ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್ಪೃಥಕ್ ।
ವೇದಶಬ್ದೇಭ್ಯ ಏವಾದೌ ಪೃಥಕ್ಸಂಸ್ಥಾಶ್ಚ ನಿರ್ಮಮೇ ॥

[5] ವರ್ಣಾ ಏವ ತು ಶಬ್ದ ಇತಿ ಭಗವಾನುಪವರ್ಷಃ (ಸೂ ಭಾ.)

[6] ಭಾಷ್ಯಕಾರರು ಉಪವರ್ಷರ ಅಭಿಪ್ರಾಯದ ಮೂಲಕ ವೈಯಾಕರಣರ ಮತವನ್ನು ಖಂಡಿಸಿರುತ್ತಾರೆ ಎಂದು ಅಭಿಪ್ರಾಯ

ಯನ್ನು ಸೂಚಿಸುವುದಿಲ್ಲ, ತಮ್ಮ ಶಕ್ತಿಯಿಂದಲೇ—ಗೋ-ಶಬ್ದದಂತೆ—ಆಕೃತಿಯನ್ನು ಸೂಚಿಸುತ್ತವೆ. ತನ್ನ ಮನಸ್ಸಿನಲ್ಲಿ ಹೊಳೆಯುತ್ತಿರುವ ಗಡಿಗೆ-ಶಬ್ದವನ್ನು ಅನುಸರಿಸಿ ಕುಂಬಾರನು ಗಡಿಗೆಯನ್ನು ಮಾಡುವಂತೆ ಸೃಷ್ಟಿಕರ್ತೃವು ಒಬ್ಬ ಇಂದ್ರನು ನಾಶವಾದ ಮೇಲೆ ಮನಸ್ಸಿನಲ್ಲಿ ಹೊಳೆಯುತ್ತಿರುವ ವೈದಿಕವಾದ ಇಂದ್ರ-ಶಬ್ದದಿಂದ ಅದು ಸೂಚಿಸುವ ಆಕೃತಿಯ ಲಕ್ಷಣಗಳನ್ನು ಅರಿತುಕೊಂಡು ಅದೇ ಲಕ್ಷಣಗಳುಳ್ಳ ಮತ್ತೊಬ್ಬ ಇಂದ್ರನನ್ನು ಸೃಷ್ಟಿಸುತ್ತಾನೆ. ಇದು ಶ್ರುತಿ-ಸ್ಮೃತಿಗಳಿಂದ ತಿಳಿದುಬರುತ್ತದೆ: 'ಪ್ರಜಾಪತಿಯು ವೇದದಲ್ಲಿ ಹೇಳಿರುವಂತೆ ಚಿದಚಿದ್ರೂಪಗಳನ್ನು ಸೃಷ್ಟಿಸಿದನು'[1] (ಋ. ವೇ. ೨. ೬. ೨. ೭).

ದ್ವೈ.—ವೇದವು ನಿತ್ಯವಾಗಿರುವಾಗ ವೇದದಿಂದ ಉತ್ಪನ್ನರಾಗುವ ದೇವಾದಿಗಳು ಅನಿತ್ಯರು ಎಂಬ ವಿರೋಧಕ್ಕೆ ಕಾರಣವಿಲ್ಲ; ಏಕೆಂದರೆ 'ಹಿಂದಿನಂತೆಯೇ ಬ್ರಹ್ಮನು ಸೂರ್ಯಚಂದ್ರರನ್ನು ಸೃಷ್ಟಿಸಿದನು'[2] (ಮ. ನಾ. ಉ. ೧. ೬೫) ಎಂದು ಶ್ರುತಿಯು ಹೇಳುತ್ತದೆ. ಪೂರ್ವ-ಪೂರ್ವ-ಪ್ರಕಾರದಿಂದ ದೇವತೆಗಳು ಹುಟ್ಟುವುದು ಶಬ್ದದಿಂದಲೇ ತಿಳಿದುಬರುತ್ತದೆ. ಇದನ್ನು ಮಹಾತ್ಮರು ಪ್ರತ್ಯಕ್ಷದಿಂದಲೂ ಇತರರು ಅನುಮಾನದಿಂದಲೂ ತಿಳಿದುಕೊಳ್ಳಬಹುದು.

## ಅತ ಏವ ಚ ನಿತ್ಯತ್ವಮ್ ॥ ೨೯ ॥

೨೯. ಮತ್ತು ಈ ಕಾರಣದಿಂದಲೂ (ವೇದವು) ನಿತ್ಯವು.

ನಿಯತವಾದ ಆಕೃತಿಯುಳ್ಳ ದೇವಾದಿಗಳಿಂದ ಕೂಡಿರುವ ಜಗತ್ತು ವೇದಶಬ್ದದಿಂದ ಹುಟ್ಟುವುದರಿಂದಲೂ ವೇದಶಬ್ದವು ನಿತ್ಯವು. ಮಂತ್ರವರ್ಣವು ಋಷಿಗಳು ಕಂಡುಹಿಡಿದ ವಾಕ್ಕು ನಿತ್ಯವೆಂದು ಹೇಳುತ್ತದೆ: 'ಯಜ್ಞದಿಂದ ವಾಕ್ಕನ್ನು ಪಡೆಯುವ ಯೋಗ್ಯತೆಯನ್ನು ಹೊಂದಿದನು; ಋಷಿಗಳಲ್ಲಿರುವ ಅದನ್ನು ಪಡೆದುಕೊಂಡರು'[3] (ಋ. ವೇ. ೧೦. ೭೧. ೩). ವೇದವ್ಯಾಸರು ಈ ವಿಷಯದಲ್ಲಿ ಹೀಗೆ ಹೇಳಿರುತ್ತಾರೆ: 'ಯುಗದ ಕೊನೆಯಲ್ಲಿ ಅಡಗಿಹೋಗಿದ್ದ ಇತಿಹಾಸ-ಸಹಿತವಾದ ವೇದಗಳನ್ನು ಮಹರ್ಷಿಗಳು ಪೂರ್ವಕಾಲದಲ್ಲಿ ಸ್ವಯಂಭುವಿನ ಅನುಜ್ಞೆಯಂತೆ ಪಡೆದುಕೊಂಡರು'[4] (ಮೋ. ಧ. ೨೧೦. ೧೯).

---

[1] ವೇದೇನ ರೂಪೇ ವ್ಯಾಕರೋತ್ ಸತಾಸತೀ ಪ್ರಜಾಪತಿಃ ।

[2] ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।

[3] ಯಜ್ಞೇನ ವಾಚಃ ಪದವೀಯಮಾಯಂತಾಮನ್ವವಿಂದನ್ ಋಷಿಷು ಪ್ರವಿಷ್ಟಾಮ್ ಇತಿ ಸ್ಥಿತಾಮೇವ ವಾಚಮನುವಿನ್ನಾಂ ದರ್ಶಯತಿ (ಸೂ. ಭಾ.).

[4] ಯುಗಾಂತೇಽಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ ।
ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ ॥

ವಿ.—ದೇವತೆಗಳನ್ನೂ ಋಷಿಗಳನ್ನೂ ಸೂಚಿಸುವ ಶಬ್ದಗಳು ಆಕೃತಿಗಳನ್ನು ಸೂಚಿಸುತ್ತವೆ ಮತ್ತು ಚತುರ್ಮುಖಬ್ರಹ್ಮನು ಆಯಾ ಶಬ್ದಗಳ ಮೂಲಕ ಆಯಾ ವಿಷಯಗಳನ್ನು ಸ್ಮರಿಸಿಕೊಂಡು ಅವರನ್ನು ಹಿಂದಿನಂತೆಯೇ ನೈಮಿತ್ತಿಕಪ್ರಲಯಾನಂತರ ಸೃಷ್ಟಿಸುತ್ತಾನೆ, ಈ ಕಾರಣದಿಂದಲೂ 'ಅವನು ಮಂತ್ರ-ನಿರ್ಮಾತೃಗಳನ್ನು ಆರಿಸಿಕೊಳ್ಳುತ್ತಾನೆ',[1] 'ಮಂತ್ರ-ನಿರ್ಮಾತೃಗಳಾದ ಋಷಿಗಳಿಗೆ ನಮಸ್ಕಾರ',[2] 'ಅವನು ಅಗ್ನಿ, ಇದು ವಿಶ್ವಾಮಿತ್ರನ ಸೂಕ್ತ'[3] ಎಂಬ ವಾಕ್ಯಗಳಲ್ಲಿ ಹೇಳಿರುವ ಮಂತ್ರ-ಕಾಂಡಗಳ ನಿರ್ಮಾತೃಗಳೊಂದಿಗೂ ಋಷಿಗಳೊಂದಿಗೂ ವೇದದ ನಿತ್ಯತ್ವವು ಹೊಂದುತ್ತದೆ ಪ್ರಜಾಪತಿಯಿಂದ ಶಕ್ತಿಯನ್ನು ಪಡೆದ ಈ ಋಷಿಗಳು ತಪಸ್ಸನ್ನು ಮಾಡಿ, ಹಿಂದುಹಿಂದಿನ ವಸಿಷ್ಠಾದಿಗಳು ನೋಡಿದ್ದ, ಸ್ವರದಿಂದಲೂ ವರ್ಣದಿಂದಲೂ ಅಸ್ಖಲಿತವಾದ ನಿತ್ಯಸಿದ್ಧವಾದ ಮಂತ್ರಗಳನ್ನು—ಇತರರಿಂದ ಕಲಿಯದೆಯೇ—ನೋಡುತ್ತಾರೆ[4] ಆದುದರಿಂದ ಮಂತ್ರಗಳ ನಿತ್ಯತ್ವಕ್ಕೂ ಋಷಿಗಳ ಮಂತ್ರಕೃತ್ತ್ವಕ್ಕೂ ಯಾವ ವಿರೋಧವೂ ಇಲ್ಲ

ದ್ವೈ.—ಶಬ್ದವು ನಿತ್ಯವಾಗಿದೆ ಎಂಬ ಕಾರಣದಿಂದಲೂ ದೇವ-ಪರಂಪರೆಗಳ ನಿತ್ಯತ್ವವನ್ನು ಒಪ್ಪಿಕೊಳ್ಳಬೇಕು[5]

**ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ॥ ೩೦ ॥**

೩೦ ನಾಮರೂಪಗಳು ಸಮಾನವಾಗಿರುವುದರಿಂದ (ಜಗತ್ತಿನ) ಆವೃತ್ತಿಯ ವಿಷಯದಲ್ಲಿಯೂ (ಶಬ್ದದ ನಿತ್ಯತ್ವಕ್ಕೆ) ಯಾವ ವಿರೋಧವೂ ಬರುವುದಿಲ್ಲ, ಏಕೆಂದರೆ ಶ್ರುತಿಯಿಂದಲೂ ಸ್ಮೃತಿಯಿಂದಲೂ (ಇದು ತಿಳಿದುಬರುತ್ತದೆ)

ಹೊಸ ಇಂದ್ರಾದಿದೇವತೆಗಳ ಸಹಿತ ಹೊಸ ಸೃಷ್ಟಿಗಳು ಉತ್ಪನ್ನವಾದರೂ ವೇದದ ನಿತ್ಯತ್ವಕ್ಕೆ ವಿರೋಧವು ಉಂಟಾಗುವುದಿಲ್ಲ, ಏಕೆಂದರೆ ಹೊಸ ಸೃಷ್ಟಿಯ ನಾಮರೂಪಗಳು ಹಿಂದಿನ ಸೃಷ್ಟಿಯವುಗಳೇ ಆಗಿರುತ್ತವೆ ಸೃಷ್ಟಿಪ್ರಲಯಗಳು ಪ್ರತಿಯೊಂದು ಕಲ್ಪದಲ್ಲಿ ಆಗುತ್ತಿದ್ದರೂ ಸಂಸಾರಕ್ಕೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ ನಿದ್ರೆಯಿಂದ

---

1 ಮಂತ್ರಕೃತೋ ವೃಣೀತೇ ।

2 ನಮ ಋಷಿಭ್ಯೋ ಮಂತ್ರಕೃದ್ಭ್ಯಃ ।

3 ಅಯಂ ಸೋಽಗ್ನಿರಿತಿ ವಿಶ್ವಾಮಿತ್ರಸ್ಯ ಸೂಕ್ತಂ ಭವತಿ ।

4 ತೇಽಪಿ ಪ್ರಜಾಪತಿನಾ ಆಹಿತಶಕ್ತಯಸ್ತತ್ತದನುಗುಣಂ ತಪಸ್ತಪ್ತ್ವಾ ನಿತ್ಯಸಿದ್ಧಾನ್ ಪೂರ್ವಪೂರ್ವವಸಿಷ್ಠಾದಿದೃಷ್ಟಾನ್ ತಾನೇವ ಮಂತ್ರಾದೀನನಧೀತ್ಯೈವ ಸ್ವರತೋ ವರ್ಣತಶ್ಚಾಸ್ಖಲಿತಾನ್ ಪಶ್ಯಂತಿ (ಶ್ರೀಭಾಷ್ಯ)

5 ಅತ ಏವ ಶಬ್ದಸ್ಯ ನಿತ್ಯತ್ವಾದೇವ ಚ ದೇವಪ್ರವಾಹನಿತ್ಯತ್ವಂ ಭವತಿ । (ಮ. ಭಾ.)

ಎಚ್ಚತ್ತ ಮನುಷ್ಯನು ನಿದ್ರೆಯು ಬರುವುದಕ್ಕೆ ಮೊದಲು ಹೇಗೊ ಹಾಗೆ ತನ್ನ ವ್ಯವಹಾರಗಳಲ್ಲಿ ಪ್ರವೃತ್ತನಾಗುತ್ತಾನೆ[1] ಇದೇ ರೀತಿ ಸೃಷ್ಟಿ ಪ್ರಲಯಗಳು ಸಂಸಾರಪ್ರವಾಹವನ್ನು ಛೇದಿಸುವುದಿಲ್ಲ

**ಆಕ್ಷೇಪಣೆ**—ನಿದ್ರೆಯ ವಿಷಯದಲ್ಲಿ ಯಾವ ವಿರೋಧವೂ ಬರದಿರಬಹುದು, ಏಕೆಂದರೆ ಒಬ್ಬನು ನಿದ್ರಿಸುತ್ತಿರುವಾಗ ಇತರ ಜನರ ವ್ಯವಹಾರವು ನಿಂತುಹೋಗುವುದಿಲ್ಲ, ಮತ್ತು ಎಚ್ಚತ್ತಮೇಲೆ ಅವನು ನಿದ್ರೆಗೆ ಮೊದಲಿದ್ದಂತೆಯೇ ವ್ಯವಹಾರವನ್ನು ನಡಸಬಹುದು, ಆದರೆ ಮಹಾಪ್ರಲಯವು ಬೇರೆಯ ಬಗೆಯಾಗಿದೆ, ಏಕೆಂದರೆ ಆಗ ವ್ಯವಹಾರವೆಲ್ಲ ನಾಶವಾಗುತ್ತದೆ ಮತ್ತು ಏನನ್ನೂ ಸ್ಮರಿಸಿಕೊಳ್ಳುವುದಕ್ಕೆ ಆಗುವುದಿಲ್ಲ

**ಪರಿಹಾರ**—ಮಹಾಪ್ರಲಯವು ಸರ್ವವ್ಯವಹಾರವನ್ನೂ ನಾಶಗೊಳಿಸಿದರೂ ಪರಮೇಶ್ವರನ ಅನುಗ್ರಹದಿಂದ ಈಶ್ವರರಾಗಿರುವ ಹಿರಣ್ಯಗರ್ಭಾದಿಗಳಿಗೆ ಹಿಂದಿನ ಕಲ್ಪದ ವ್ಯವಹಾರದ ಸ್ಮೃತಿಯು ಇರುತ್ತದೆ 'ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಸಿದನೊ ಮತ್ತು ಅವನಿಗೆ ವೇದಗಳನ್ನು ಕೊಟ್ಟನೊ ಅಂಥ ಆತ್ಮಬುದ್ಧಿಪ್ರಕಾಶನಾದ ದೇವನನ್ನು ಮುಮುಕ್ಷುವಾದ ನಾನು ಶರಣುಹೊಂದುತ್ತೇನೆ'[2] (ಶ್ವೇ ಉ ೬ ೧೮) ಎಂದು ಶ್ರುತಿಯು ಹೇಳುತ್ತದೆ

ಮನುಷ್ಯನು ಸುಖನನ್ನು ಪಡೆಯಲು ಮತ್ತು ದುಃಖವನ್ನು ನಿವಾರಿಸಿಕೊಳ್ಳಲು ಶಾಸ್ತ್ರವು ಧರ್ಮವನ್ನು ವಿಧಿಸಿ, ಅಧರ್ಮವನ್ನು ನಿಷೇಧಿಸುತ್ತದೆ ಅನುಭವದಿಂದಾಗಲಿ ಶಾಸ್ತ್ರದಿಂದಾಗಲಿ ಅರಿತುಕೊಂಡ ಸುಖದುಃಖಗಳ ವಿಷಯದಲ್ಲಿ ಮನುಷ್ಯನಿಗೆ ರಾಗದ್ವೇಷಾದಿಗಳು ಉಂಟಾಗುತ್ತವೆಯೇ ಹೊರತು ತಿಳಿಯದ ವಿಷಯಗಳಲ್ಲಿ ಆಗುವುದಿಲ್ಲ ಆದುದರಿಂದ ಧರ್ಮಾಧರ್ಮಗಳ ಫಲವಾಗಿ ಮುಂದೆ ಉಂಟಾಗುವ ಸೃಷ್ಟಿಯು ಹಿಂದಿನಂತೆಯೇ ಉಂಟಾಗುತ್ತದೆ[3] ಮನುಷ್ಯರು ತಮ್ಮ ಹಿಂದಿನ ಸೃಷ್ಟಿಯ ಕರ್ಮಗಳಂತೆಯೇ ಮುಂದಿನ

---

[1] 'ನಿದ್ರಿಸಿದವರು ಯಾವಾಗ ಕನಸನ್ನು ನೋಡುವುದಿಲ್ಲವೊ ಆಗ ಪ್ರಾಣದಲ್ಲಿ ಒಂದಾಗುತ್ತಾನೆ, ಆಗ ವಾಕ್ಕು ಎಲ್ಲ ನಾಮಗಳೊಡನೆ ಇವನನ್ನು ಸೇರುತ್ತದೆ, ಹೀಗೆ ಕಣ್ಣು ಎಲ್ಲ ರೂಪಗಳಿಂದಲೂ ಕಿವಿಯು ಎಲ್ಲ ಶಬ್ದಗಳಿಂದಲೂ ಮನಸ್ಸು ಎಲ್ಲ ಪ್ರತ್ಯಯಗಳಿಂದಲೂ ಇವನಲ್ಲಿ ಲಯವಾಗುತ್ತವೆ ಅವನು ಎಚ್ಚತ್ತಾಗ—ಬೆಂಕಿಯಿಂದ ಕಿಡಿಗಳು ಹಾರುವಂತೆ—ಈ ಆತ್ಮನಿಂದ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಹೋಗುವುವು ಪ್ರಾಣಗಳಿಂದ ದೇವತೆಗಳೂ ದೇವತೆಗಳಿಂದ ಲೋಕಗಳೂ ಹೊರಟುಬರುವುವು' (ಕೌ ಉ ೩ ೩).

[2] ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ।
ತಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ॥

[3] ಪ್ರಾಣಿನಾಂ ಚ ಸುಖಪ್ರಾಪ್ತಯೇ ಧರ್ಮೋ ವಿಧೀಯತೇ, ದುಃಖಪರಿಹಾರಾಯ ಚಾಧರ್ಮಃ ಪ್ರತಿಷಿಧ್ಯತೇ। ದೃಷ್ಟಾನುಶ್ರವಿಕಸುಖದುಃಖವಿಷಯೌ ಚ ರಾಗದ್ವೇಷೌ ಭವತೋ ನ ವಿಲಕ್ಷಣವಿಷಯೌ, ಇತ್ಯತೋ ಧರ್ಮಾಧರ್ಮಫಲಭೂತೋತ್ತರಾ ಸೃಷ್ಟಿರ್ನಿಷ್ಪದ್ಯಮಾನಾ ಪೂರ್ವಸೃಷ್ಟಿಸದೃಶ್ಯೇವ ನಿಷ್ಪದ್ಯತೇ (ಸೂ. ಭಾ).

ಸೃಷ್ಟಿಯಲ್ಲಿಯೂ ಅದೇ ಕರ್ಮಗಳನ್ನೂ ಧರ್ಮಾಧರ್ಮಗಳನ್ನೂ ಸತ್ಯಾನೃತಗಳನ್ನೂ ಹೊಂದುತ್ತಾರೆಂದು ಸ್ಮೃತಿಯು (ವಿ. ಪು. ೧ ೫. ೬೧. ೬೨) ಹೇಳುತ್ತದೆ. ಮಹಾ ಪ್ರಲಯದಲ್ಲಿ ಜಗತ್ತು ಲಯವಾದಾಗಲೂ ತನ್ನ ಶಕ್ತಿಯನ್ನು ಉಳಿಸಿಕೊಂಡೇ ಲಯವಾಗುತ್ತದೆ.[1] ಹೀಗೆ ಮಹಾಸರ್ಗ-ಮಹಾಪ್ರಲಯಗಳು ಉಂಟಾಗುತ್ತಿದ್ದರೂ ವೇದದ ವಿಷಯದಲ್ಲಿ ಯಾವ ವಿರೋಧವೂ ಬರುವುದಿಲ್ಲ.

ನಾಮರೂಪಗಳು ಪ್ರತಿಯೊಂದು ಕಲ್ಪದಲ್ಲಿಯೂ ಸಮಾನವಾಗಿ ಇರುವುವೆಂದು ಶ್ರುತಿ-ಸ್ಮೃತಿಗಳು[2] ತಿಳಿಸುತ್ತವೆ : 'ಸೃಷ್ಟಿಕರ್ತೃವು ಹಿಂದಿನಂತೆಯೇ ಸೂರ್ಯಚಂದ್ರರನ್ನೂ ದ್ಯುಲೋಕವನ್ನೂ ಪೃಥ್ವಿಯನ್ನೂ ಅಂತರಿಕ್ಷವನ್ನೂ ಸ್ವರ್ಲೋಕವನ್ನೂ ಸೃಷ್ಟಿಸಿದನು'[3] (ಋ. ವೇ. ೧೦. ೧೯೦. ೩).

ವಿ.—ಪ್ರಾಕೃತಪ್ರಲಯವಾದರೂ ಕೂಡ ಭಗವಂತನು ಹಿಂದಿನ ಕಲ್ಪಕ್ಕೆ ಸಮಾನವಾದ ನಾಮರೂಪಗಳನ್ನು ಹೊಂದಿಸುವುದರಿಂದ ಜಗದುತ್ಪತ್ತಿಯಲ್ಲಿ ಯಾವ ವಿರೋಧವೂ ಇರುವುದಿಲ್ಲ. ಹಿಂದುಹಿಂದಿನ ಉಚ್ಚಾರಣಕ್ರಮದಿಂದ ಉಂಟಾದ ಸಂಸ್ಕಾರದಿಂದ ಆ ಕ್ರಮವನ್ನೇ ಸ್ಮರಿಸಿಕೊಂಡು ಅದರ ಪ್ರಕಾರವೇ ವೇದವನ್ನು ಉಚ್ಚರಿಸುವುದು ವೇದದ ಅಪೌರುಷೇಯತ್ವವು ಮತ್ತು ನಿತ್ಯತ್ವವು; ಇದು ಮನುಷ್ಯರಿಗೂ ಸರ್ವೇಶ್ವರನಿಗೂ ಸಮಾನವಾಗಿದ್ದರೂ ಈ ವಿಶೇಷವಿದೆ : ಸರ್ವೇಶ್ವರನು ಪೂರ್ವಸಂಸ್ಕಾರವನ್ನು ಅಪೇಕ್ಷಿಸದೆ ವೇದವನ್ನು ಸ್ಮರಿಸಿಕೊಳ್ಳುತ್ತಾನೆ.[4]

ದ್ವೈ.—ಮುಕ್ತರಾದ ದೇವತೆಗಳು ತಮ್ಮ ತಮ್ಮ ಪದವಿಗಳನ್ನು ಬಿಡಬೇಕಾದರೂ ಹಿಂದಿದ್ದ ದೇವತೆಗಳಿಗೂ ಮುಂದೆ ಬರುವ ದೇವತೆಗಳಿಗೂ ನಾಮರೂಪಗಳು ಸಮಾನವಾಗಿರುವುದರಿಂದ ವೇದದ ವಿಷಯದಲ್ಲಿ ಯಾವ ವಿರೋಧವೂ ಬರುವುದಿಲ್ಲ.[5]

---

[1] ಪ್ರಲೀಯಮಾನಮಪಿ ಚೇದಂ ಜಗಚ್ಛಕ್ತ್ಯವಶೇಷಮೇವ ಪ್ರಲೀಯತೇ । (ಸೂ. ಭಾ.).

[2] ವಿ. ಪು. ೧. ೫. ೬೧–೬೩ ನೋಡಿ.

[3] ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।
ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ ।

[4] ಏತದೇವ ಚ ವೇದಸ್ಯಾಪೌರುಷೇಯತ್ವಂ ನಿತ್ಯತ್ವಂ ಚ, ಯತ್ಪೂರ್ವಪೂರ್ವೋಚ್ಚಾರಣಕ್ರಮಜನಿತಸಂಸ್ಕಾರೇಣ ತಮೇವ ಕ್ರಮವಿಶೇಷಂ ಸ್ಮೃತ್ವಾ ತೇನೈವಕ್ರಮೇಣೋಚ್ಚಾರ್ಯತ್ವಮ್ । ತದಸ್ಮಾಸು ಸರ್ವೇಶ್ವರೇಽಪಿ ಸಮಾನಮ್ । ಇಯಾಂಸ್ತು ವಿಶೇಷಃ—ಸಂಸ್ಕಾರಾನಪೇಕ್ಷಮೇವ ಸ್ವಯಮೇವಾನುಸಂಧತ್ತೇ ಪುರುಷೋತ್ತಮಃ (ಶ್ರೀಭಾಷ್ಯ).

[5] ಅತೀತಾನಾಗತಾನಾಂ ದೇವಾನಾಂ ಸಮಾನನಾಮರೂಪತ್ವಾತ್ಪ್ರಾಪ್ತಪದಾನಾಂ ಮುಕ್ತ್ಯಾಽಽವೃತ್ತಾವಪ್ಯವಿರೋಧಃ (ಮ. ಭಾ.).

**ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ * ॥ ೩೧ ॥**

೩೧. ಮಧುವಿದ್ಯಾದಿಗಳಲ್ಲಿ (ದೇವತೆಗಳಿಗೆ ಅಧಿಕಾರವು) ಅಸಂಭವವಾದುದರಿಂದ (ಅವರಿಗೆ ಬ್ರಹ್ಮವಿದ್ಯೆಯಲ್ಲಿ) ಅಧಿಕಾರವಿಲ್ಲ—ಎಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ).

ದೇವಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ ಎಂಬುದಕ್ಕೆ ಒಂದು ಹೊಸ ಆಕ್ಷೇಪಣೆಯನ್ನು ತರಲಾಗುತ್ತಿದೆ: ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂದು ಒಪ್ಪಿಕೊಂಡರೆ—ವಿದ್ಯೆಗಳೆಲ್ಲವೂ ಸಮಾನವಾಗಿರುವುದರಿಂದ—ಅವರಿಗೆ ಮಧುವಿದ್ಯಾದಿಗಳಲ್ಲಿಯೂ ಅಧಿಕಾರವನ್ನು ಒಪ್ಪಿಕೊಳ್ಳಬೇಕಾಗುತ್ತದೆ; ಆದರೆ ಇದು ಸಾಧ್ಯವಿಲ್ಲ; ಏಕೆಂದರೆ 'ಆ ಆದಿತ್ಯನೇ ದೇವತೆಗಳ ಮಧು'[1] (ಛಾಂ. ಉ. ೩. ೧. ೧) ಎಂಬ ಶ್ರುತಿಯ ಪ್ರಕಾರ ಮನುಷ್ಯರು ಆದಿತ್ಯನನ್ನು ಮಧುವೆಂದು ಉಪಾಸಿಸಬೇಕು. ದೇವತೆಗಳೇ ಉಪಾಸಕರೆಂದು ಒಪ್ಪಿಕೊಂಡರೆ ಆದಿತ್ಯನು ಬೇರೆ ಯಾವ ಆದಿತ್ಯನನ್ನು ಉಪಾಸಿಸಬೇಕು? ಹೀಗೆಯೇ ಅಗ್ನಿ ವಾಯು ಆದಿತ್ಯ ದಿಕ್ಕುಗಳು—ಇವು ಬ್ರಹ್ಮದ ಪಾದಗಳೆಂದು (ಛಾಂ. ಉ. ೩. ೧೮. ೨) ಹೇಳಿದೆ; ಈ ದೇವತಾತ್ಮೋಪಾಸನೆಗಳಲ್ಲಿ ದೇವತೆಗಳು ತಮ್ಮನ್ನೇ ಉಪಾಸಿಸಲು ಸಾಧ್ಯವಿಲ್ಲ. ಇದೇ ರೀತಿ 'ಈ ಎರಡು (ಕಿವಿಗಳೇ) ಗೋತಮ ಮತ್ತು ಭರದ್ವಾಜ: ಇದೇ ಗೋತಮ, ಇದೇ ಭರದ್ವಾಜ'[2] (ಬೃ. ಉ. ೨. ೨. ೪) ಎಂದು ಹೇಳಿದೆ; ಋಷಿಸಂಬಂಧವುಳ್ಳ ಈ ಉಪಾಸನೆಗಳಲ್ಲಿ ಋಷಿಗಳಿಗೇ ಅಧಿಕಾರವಿರಲಾರದು.

ವಿ.—ತಾವೇ ಉಪಾಸ್ಯರಾಗಿರುವ ಉಪಾಸನೆಗಳಲ್ಲಿ ದೇವಾದಿಗಳಿಗೆ ಅಧಿಕಾರವಿದೆಯೆ?—ಎಂಬುದು ಪ್ರಶ್ನೆ: ಮಧುವಿದ್ಯಾದಿಗಳಲ್ಲಿ ವಸ್ವಾದಿ-ಲೋಕಪ್ರಾಪ್ತಿಯನ್ನು ಹೇಳಿರುವುದರಿಂದ ಆ ಪ್ರಾಪ್ತಿಯನ್ನೇ ಪಡೆದಿರುವ ವಸ್ವಾದಿಗಳಿಗೆ ಅಧಿಕಾರವಿಲ್ಲ

ದ್ವೈಪ.—ಮಧುವಿದ್ಯೆಯ ಫಲವಾದ ವಸ್ವಾದಿ-ಪದಗಳನ್ನು ಹೊಂದಿರುವ ದೇವತೆಗಳಿಗೆ ಮಧುವಿದ್ಯಾದಿಗಳಲ್ಲಿ ಅಧಿಕಾರವಿಲ್ಲ.

**ಜ್ಯೋತಿಷಿ ಭಾವಾಚ್ಚ ॥ ೩೨ ॥**

೩೨. ಜ್ಯೋತಿರ್ಮಂಡಲದಲ್ಲಿ (ದೇವತಾ-ವಾಚಕಗಳಾದ ಶಬ್ದಗಳನ್ನು) ಪ್ರಯೋಗಿಸಿರುವುದರಿಂದ (ದೇವಾದಿಗಳಿಗೆ ಅಧಿಕಾರವಿಲ್ಲ).

---

*ಈ ಸೂತ್ರ ಮತ್ತು ಮುಂದಿನ ಸೂತ್ರ—ಇವೆರಡೂ ಪೂರ್ವಪಕ್ಷದ ಸೂತ್ರಗಳು.

[1] ಅಸೌ ವಾ ಆದಿತ್ಯೋ ದೇವಮಧು।

[2] ಇಮಾವೇವ ಗೋತಮಭರದ್ವಾಜೌ, ಅಯಮೇವ ಗೋತಮಃ, ಅಯಂ ಭರದ್ವಾಜಃ

ಆಕಾಶದಲ್ಲಿ ಹಗಲೂ ರಾತ್ರಿಯೂ ಸಂಚರಿಸುತ್ತ ಜಗತ್ತನ್ನು ಪ್ರಕಾಶಿಸುತ್ತಿರುವ ಜ್ಯೋತಿರ್ಮಂಡಲದಲ್ಲಿ ದೇವತಾ-ವಾಚಕಗಳಾದ ಆದಿತ್ಯಾದಿ-ಶಬ್ದಗಳನ್ನು ಪ್ರಯೋಗಿಸಿರುತ್ತದೆ ಇದಕ್ಕೆ ಹೃದಯಾದಿಗಳಿಂದ ಕೂಡಿದ ಶರೀರವಾಗಲಿ ಚೇತನತ್ವವಾಗಲಿ ಅರ್ಥಿತ್ವವಾಗಲಿ ಇದೆಯೆಂದು ಹೇಳಲಾಗುವುದಿಲ್ಲ : ಏಕೆಂದರೆ ಮಣ್ಣು ಮೊದಲಾದುವಂತೆ ಇದೂ ಅಚೇತನವು ದೇವಾದಿಗಳಿಗೆ ಶರೀರವಿದೆಯೆಂದು ತಿಳಿಸುವ ಮಂತ್ರ ಅರ್ಥವಾದ ಇತಿಹಾಸಪುರಾಣಗಳು ಎಂಬ ಪ್ರಮಾಣಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ ಆದುದರಿಂದ ದೇವಾದಿಗಳಿಗೆ ಅಧಿಕಾರವಿಲ್ಲ

ವಿ.—'(ದೇವಾದಿಗಳಿಗೆ ಉಪಾಸನೆಯು) ಜ್ಯೋತಿಯಲ್ಲಿಯೇ (ಎಂಬುದು ಶ್ರುತಿಯ) ಭಾವವಾದುದರಿಂದ (ಅವರಿಗೆ ಮಧುವಿದ್ಯೆಯಲ್ಲಿ ಅಧಿಕಾರವಿಲ್ಲ)' ಎಂಬುದು ಸೂತ್ರಾರ್ಥ

'ಆ ಜ್ಯೋತಿಗಳ ಜ್ಯೋತಿಯನ್ನು ದೇವತೆಗಳು ಅಮೃತವಾದ ಆಯುಸ್ಸೆಂದು ಉಪಾಸಿಸುತ್ತಾರೆ'[1] (ಬೃ ಉ ೪ ೪ ೧೬) ಎಂಬ ಶ್ರುತಿಯು ದೇವತೆಗಳು ಪರಬ್ರಹ್ಮನನ್ನೇ ಉಪಾಸಿಸಬೇಕೆಂದು ತಿಳಿಸುತ್ತದೆ ಹೀಗೆ ದೇವ-ಮನುಷ್ಯರಿಬ್ಬರಿಗೂ ಪರಬ್ರಹ್ಮೋಪಾಸನೆಯನ್ನು ಮಾಡಬೇಕೆಂದು ಹೇಳಿರುವುದು ಇತರ ದೇವತೋಪಾಸನೆಗಳನ್ನು ನಿಷೇಧಿಸುತ್ತದೆ ಆದುದರಿಂದ ವಸ್ವಾದಿಗಳಿಗೆ ವಸ್ವಾದಿ-ದೇವತೆಗಳ ಉಪಾಸನೆಯಿಲ್ಲ ಎಂಬುದು ಸಿದ್ಧವಾಗುತ್ತದೆ

ದ್ವೈ.—ದೇವತೆಗಳು ಸರ್ವಜ್ಞರು ಆದಿತ್ಯಪ್ರಕಾಶದಲ್ಲಿ ಇತರ ಪ್ರಕಾಶಗಳೆಲ್ಲ ಅಂತರ್ಗತವಾಗಿರುವಂತೆ ದೇವತೆಗಳ ಜ್ಞಾನದಲ್ಲಿ ಸಮಸ್ತವಸ್ತುಗಳೂ ಅಂತರ್ಗತವಾಗಿರುತ್ತವೆ ಮತ್ತೆ ವಿದ್ಯೆಗಳೆಲ್ಲ ಇವರಲ್ಲಿ ನಿತ್ಯಸಿದ್ಧವಾಗಿವೆ[2] ಆದುದರಿಂದ ಮಧುವಿದ್ಯಾದಿಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ

### ಭಾವಂ ತು ಬಾದರಾಯಣೋಽಸ್ತಿ ಹಿ ॥ ೩೩ ॥

೩೩ ಆದರೆ ಬಾದರಾಯಣನು (ದೇವಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು) ಇದೆ ಎಂದು (ಅಭಿಪ್ರಾಯಪಡುತ್ತಾನೆ), ಏಕೆಂದರೆ ಅರ್ಥಿತ್ವವೇ ಮೊದಲಾದ ಅಧಿಕಾರ-ಕಾರಣವು) ಇದೆ

ಹಿಂದಿನ ಎರಡು ಸೂತ್ರಗಳಲ್ಲಿ ಪ್ರತಿಪಾದಿಸಿದ ಪೂರ್ವಪಕ್ಷವನ್ನು ಈ ಸೂತ್ರವು ನಿರಾಕರಿಸುತ್ತದೆ ಮಧುವಿದ್ಯಾದಿಗಳಲ್ಲಿ ದೇವತೆಗಳೇ ಸೇರಿರುವುದರಿಂದ ಅವರಿಗೆ ಆ ವಿದ್ಯೆಗಳಲ್ಲಿ ಅಧಿಕಾರವಿಲ್ಲದಿರಬಹುದು, ಆದರೆ ಶುದ್ಧವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರ

---

1 ತಂ ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್ ।

2 ಆದಿತ್ಯಪ್ರಕಾಶೇಽಂತರ್ಭಾವವತ್ ಜ್ಞಾನೇ ಸರ್ವವಸ್ತೂನಾಮಂತರ್ಭಾವಾನ್ನಿತ್ಯಸಿದ್ಧತ್ವಾದ್ವಿದ್ಯಾನಾಮ್ (ಪು ಭಾ )

ಇದೆ.[1] ಯಾವುದೊ ಒಂದರಲ್ಲಿ ಅಧಿಕಾರವಿಲ್ಲದಿದ್ದರೆ ಅಧಿಕಾರವಿರುವೆಡೆಯಲ್ಲಿಯೂ ಅಧಿಕಾರವಿಲ್ಲವೆಂದು ಹೇಳಲಾಗುವುದಿಲ್ಲ. ಮನುಷ್ಯರಲ್ಲಿ ಎಲ್ಲರಿಗೂ ಎಲ್ಲದರಲ್ಲಿಯೂ ಅಧಿಕಾರವಿರುವುದಿಲ್ಲ. ಉದಾಹರಣೆಗೆ ಬ್ರಾಹ್ಮಣರಿಗೆ ರಾಜಸೂಯಾದಿಗಳಲ್ಲಿ ಅಧಿಕಾರವಿರುವುದಿಲ್ಲ. ಹೀಗೆಯೇ ದೇವತೆಗಳ ವಿಷಯದಲ್ಲಿಯೂ ಅರಿತುಕೊಳ್ಳಬೇಕು. ಶ್ರುತಿಗಳು ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೆಂದು ತಿಳಿಸುತ್ತವೆ. 'ದೇವತೆಗಳಲ್ಲಿ ಯಾವಯಾವನು ಅದನ್ನು ತಿಳಿದುಕೊಂಡನೊ ಅವನೇ ಅದಾದನು: ಹಾಗೆಯೇ ಋಷಿಗಳಲ್ಲಿಯೂ ಮತ್ತು ಮನುಷ್ಯರಲ್ಲಿಯೂ'[2] (ಬೃ. ಉ. ೧. ೪. ೧೦); "ನಾವು, ಯಾವ ಆತ್ಮನನ್ನು ಹುಡುಕಿದರೆ ಸರ್ವಲೋಕಗಳನ್ನೂ ಸರ್ವಕಾಮಗಳನ್ನೂ ಹೊಂದುತ್ತಾನೆಯೊ ಆ ಆತ್ಮನನ್ನು ಅನ್ವೇಷಿಸೋಣ"—ಎಂದು ಅವರು ಹೇಳಿಕೊಂಡರು. ದೇವತೆಗಳಲ್ಲಿ ಇಂದ್ರನೇ ಹೊರಟನು, ಅಸುರರಲ್ಲಿ ವಿರೋಚನನು ಹೊರಟನು'[3] (ಛಾಂ. ಉ. ೮. ೭. ೩). ಆದಿತ್ಯನೇ ಮೊದಲಾದ ದೇವತಾವಾಚಕ-ಶಬ್ದಗಳು ಜ್ಯೋತಿಯೇ ಮೊದಲಾದುವುಗಳ ವಿಷಯಕ್ಕೆ ಸಂಬಂಧಪಟ್ಟಿದ್ದರೂ ಚೇತನವುಳ್ಳ ಮತ್ತು ಐಶ್ವರ್ಯಾದಿಗಳಿಂದ ಕೂಡಿದ ದೇವತಾತ್ಮರನ್ನೇ ಸೂಚಿಸುತ್ತವೆ. ಐಶ್ವರ್ಯ-ಯೋಗದಿಂದ ದೇವತೆಗಳಿಗೆ ಜ್ಯೋತಿರಾದಿ-ರೂಪದಿಂದ ಇರುವುದಕ್ಕೂ ತಮ್ಮ ಇಷ್ಟಾನುಸಾರವಾಗಿ ಶರೀರಗಳನ್ನು ಧರಿಸುವುದಕ್ಕೂ ಸಾಮರ್ಥ್ಯವಿರುತ್ತದೆ.[4] ದೇವಾದಿಗಳ ಶರೀರತ್ವಕ್ಕೆ ಮತ್ತೊಂದು ಕಾರಣವೂ ಇದೆ: ಇಂದ್ರಾದಿ-ದೇವತೆಗಳಿಗೆ ಹವಿಸ್ಸನ್ನು ಕೊಡಬೇಕೆಂದು ಹೇಳುವ ವಿಧಿಗಳೇ ಆ ದೇವತೆಗಳಿಗೆ ರೂಪವನ್ನು ಅಪೇಕ್ಷಿಸುತ್ತವೆ: ಏಕೆಂದರೆ ರೂಪರಹಿತವಾದ ಇಂದ್ರಾದಿಗಳನ್ನು ಮನಸ್ಸಿಗೆ ತಂದುಕೊಳ್ಳಲು ಆಗುವುದಿಲ್ಲ, ಮನಸ್ಸಿಗೆ ತಂದುಕೊಳ್ಳಲಾಗದ ದೇವತೆಗಳಿಗೆ ಹವಿಸ್ಸನ್ನು ಕೊಡುವುದಕ್ಕೂ ಆಗುವುದಿಲ್ಲ.[5] ಲೋಕಾದಿಗಳನ್ನು ಪಡೆದಿರುವವರಿಗೆ ಕ್ರಮಮುಕ್ತಿಯನ್ನು ಶ್ರುತಿಯಲ್ಲಿ ಹೇಳಿರುವುದರಿಂದ ಅವರಿಗೆ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆಯೆಂಬುದು ಯುಕ್ತವು.

---

[1] ಯದ್ಯಪಿ ಮಧ್ವಾದಿವಿದ್ಯಾಸು ದೇವತಾದಿವ್ಯಾಮಿಶ್ರತ್ವಸಂಭವೋಽಧಿಕಾರಸ್ಯ ತಥಾಪ್ಯಸ್ತಿ ಹಿ ಶುದ್ಧಾಯಾಂ ಬ್ರಹ್ಮವಿದ್ಯಾಯಾಂ ಸಂಭವಃ (ಸೂ. ಭಾ).

[2] ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್, ತಥರ್ಷೀಣಾಂ, ತಥಾ ಮನುಷ್ಯಾಣಾಮ್ ।

[3] ತೇ ಹೋಚುರ್ಹಂತ ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ ಇತಿ ಇಂದ್ರೋ ಹ ವೈ ದೇವಾನಾಮಭಿಪ್ರವವ್ರಾಜ ವಿರೋಚನೋಽಸುರಾಣಾಮ್ ।

[4] ಮೇಧಾತಿಥೇರ್ಮೇಷೇತಿ ಮೇಧಾತಿಥಿಂ ಹ ಕಾಣ್ವಾಯನಮಿಂದ್ರೋ ಮೇಷೋ ಭೂತ್ವಾ ಜಹಾರ (ಷ. ಬ್ರಾ. ೧. ೧).

[5] ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ ತಾಂ ಧ್ಯಾಯೇದ್ವಷಟ್ಕರಿಷ್ಯನ್ (ಐ. ಬ್ರಾ. ೩. ೮. ೧).

ಪಿ.—ಆದಿತ್ಯ-ವಸ್ವಾದಿಗಳಿಗೂ ಕೂಡ ಮಧು-ವಿದ್ಯಾದಿಗಳಲ್ಲಿ ಅಧಿಕಾರವಿದೆ; ಏಕೆಂದರೆ ಅವರಿಗೂ ಬ್ರಹ್ಮವಿದ್ಯೆಯಲ್ಲಿ ಅರ್ಥಿತ್ವ-ಸಾಮರ್ಥ್ಯಗಳಿವೆ. ಈಗ ವಸ್ವಾದಿಗಳಾಗಿದ್ದರೂ ತಮಗೆ ಆತ್ಮನಾಗಿರುವ ಪರಬ್ರಹ್ಮನನ್ನು ಉಪಾಸಿಸಿದರೆ ಮುಂದಿನ ಸೃಷ್ಟಿಗಳಲ್ಲಿಯೂ ವಸ್ವಾದಿಲೋಕಪ್ರಾಪ್ತಿಯುಂಟಾಗಿ, ಕಲ್ಪಾಂತರದಲ್ಲಿ ಮೋಕ್ಷವನ್ನು ಹೊಂದಬಹುದು. 'ಯಾವನು ಈ ಬ್ರಹ್ಮೋಪನಿಷತ್ತನ್ನು ಹೀಗೆ ಅರಿತುಕೊಂಡಿರುವನೊ ಅವನಿಗೆ ಆದಿತ್ಯನು ಉದಯಿಸುವುದೇ ಇಲ್ಲ, ಅಸ್ತಮಿಸುವುದೇ ಇಲ್ಲ. ಅವನಿಗೆ ಯಾವಾಗಲೂ ಹಗಲೇ ಇರುತ್ತದೆ'[1] (ಛಾಂ. ಉ. ೩. ೧೧. ೩) ಎಂಬಲ್ಲಿ ಇಡೀ ಮಧು-ವಿದ್ಯೆಯನ್ನು ಬ್ರಹ್ಮೋಪನಿಷತ್ ಎಂದು ಕರೆದಿದೆ. ಪರಬ್ರಹ್ಮನೇ ನಿಜವಾಗಿ ಉಪಾಸ್ಯನಾದುದರಿಂದ 'ದೇವತೆಗಳು ಆ ಜ್ಯೋತಿಗಳ ಜ್ಯೋತಿಯನ್ನು ಆಯುಸ್ಸೆಂದು ಉಪಾಸಿಸುತ್ತಾರೆ' (ಬೃ. ಉ. ೪. ೪. ೧೬) ಎಂಬುದು ಹೊಂದುತ್ತದೆ. ವೃತ್ತಿಕಾರರು ಹೀಗೆಯೇ ಹೇಳಿರುತ್ತಾರೆ: 'ಪರಬ್ರಹ್ಮನೇ ಎಲ್ಲೆಲ್ಲಿಯೂ ಉಪಾಸ್ಯನಾಗಿರುವುದರಿಂದ ಮಧುವಿದ್ಯಾದಿಗಳಲ್ಲಿ ಸಂಭವವಿದೆ'[2]

ದ್ವೈ.—ವಸ್ವಾದಿ-ಸ್ಥಾನಗಳನ್ನು ಹೊಂದಿರುವ ದೇವತೆಗಳು ಇನ್ನೂ ಅತಿಶಯವಾದ ಫಲಗಳನ್ನು ಪಡೆಯಬೇಕಾದುದರಿಂದ ಅವರಿಗೆ ಮಧುವಿದ್ಯಾದಿಗಳಲ್ಲಿ ಅಧಿಕಾರವಿದೆ; ಏಕೆಂದರೆ ಅವುಗಳಿಂದ ಅತಿಶಯ-ಪ್ರಕಾಶವು ಲಭಿಸುತ್ತದೆ. ಈಗ ಪಡೆದಿರುವ ಫಲದ ವಿಷಯದಲ್ಲಿ ಅಧಿಕಾರವಿಲ್ಲವೆಂಬುದು ಜೈಮಿನಿಯ ಅಭಿಪ್ರಾಯವು; ಆದುದರಿಂದ ಜೈಮಿನಿಯ ಅಭಿಪ್ರಾಯಕ್ಕೂ ಬಾದರಾಯಣರ ಅಭಿಪ್ರಾಯಕ್ಕೂ ಯಾವ ವಿರೋಧವೂ ಇಲ್ಲ.[3] 'ಸರ್ವಜ್ಞನಾದ ಕೃಷ್ಣದ್ವೈಪಾಯನನ ಉಪದೇಶದ ಅಲ್ಪಾಂಶವನ್ನು ತೆಗೆದುಕೊಂಡು ಇತರ ಮುನಿಗಳು ಹೇಳಿರುತ್ತಾರೆ'[4] ಎಂದು ಬ್ರಹ್ಮಪುರಾಣವು ಹೇಳುತ್ತದೆ.

---

1 ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ।

2 ತದಾಹ ವೃತ್ತಿಕಾರಃ—ಅಸ್ತಿ ಹಿ ಮಧ್ವಾದಿಷು ಸಂಭವೋ ಬ್ರಹ್ಮಣ ಏವ ಸರ್ವತ್ರ ನಿಚಾಯ್ಯತ್ವಾತ್ ಇತಿ (ಶ್ರೀಭಾಷ್ಯ).

3 ಉಕ್ತಫಲಾನಧಿಕಾರಮಾತ್ರಂ ಜೈಮಿನಿಮತಮ್। ಅತೋ ನ ಮತವಿರೋಧಃ (ಮ. ಭಾ.).

4 ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶವಿಚಿಂತಿತಮ್।
ಸ್ವೀಕೃತ್ಯ ಮುನಯೋ ಬ್ರೂಯುಸ್ತನ್ಮತಂ ನ ವಿರುಧ್ಯತೇ॥
ಇತಿ ಚ ಬ್ರಾಹ್ಮೇ (ಮ. ಭಾ.)

# ೯. ಅಪಶೂದ್ರಾಧಿಕರಣ

(ಸೂ. ೩೪–೩೮)

**ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ॥ ೩೪ ॥**

೩೪. (ತನ್ನ ವಿಷಯದಲ್ಲಿ) ಅನಾದರವಾದ ಮಾತುಗಳನ್ನು ಕೇಳಿದ ಪ್ರಯುಕ್ತ ಇವನಿಗೆ (ಎಂದರೆ ಜಾನಶ್ರುತಿಗೆ) ಶೋಕವು (ಉಂಟಾಯಿತು); ಏಕೆಂದರೆ ಶೋಕವನ್ನು ಹೊಂದಿದನು—ಎಂಬುದರಿಂದ (ಅವನಿಗೆ ಶೋಕವುಂಟಾಯಿತೆಂಬುದು) ಸೂಚಿಸಲ್ಪಟ್ಟಿದೆ.

ಹಿಂದಿನ ಅಧಿಕರಣದಲ್ಲಿ ದೇವತೆಗಳಿಗೂ ಕೂಡ ವಿದ್ಯೆಗಳಲ್ಲಿ ಅಧಿಕಾರವಿದೆಯೆಂದು ಹೇಳಿದ್ದಾಯಿತು. ಈ ಅಧಿಕರಣದಲ್ಲಿ ಶೂದ್ರರಿಗೂ ಅಧಿಕಾರವಿದೆಯೋ ಅಥವಾ ಇಲ್ಲವೆ—ಎಂಬುದು ಚರ್ಚಿಸಲ್ಪಟ್ಟಿದೆ.

**ಪೂರ್ವಪಕ್ಷಿ**—ಶೂದ್ರನಿಗೂ ಅಧಿಕಾರವಿದೆ; ಏಕೆಂದರೆ ಇವನಿಗೂ ಅರ್ಥಿತ್ವ-ಸಾಮರ್ಥ್ಯಗಳಿವೆ. 'ಆದುದರಿಂದ ಶೂದ್ರನು ಯಜ್ಞಕ್ಕೆ ಅರ್ಹನಲ್ಲ'[1] (ತೈ. ಸಂ. ೭. ೧೧. ೬) ಎಂದು ಹೇಳಿರುವಂತೆ 'ಶೂದ್ರನು ವಿದ್ಯೆಗೆ ಅರ್ಹನಲ್ಲ' ಎಂಬ ನಿಷೇಧವು ಶ್ರುತಿಯಲ್ಲಿಲ್ಲ. ಶೂದ್ರನಿಗೆ ಯಜ್ಞಕರ್ಮಗಳಲ್ಲಿ ಅಧಿಕಾರವಿಲ್ಲದಿರುವುದಕ್ಕೆ ಅವನ ಅನಗ್ನಿತ್ವವೇ ಕಾರಣವಾಗಿದೆ; ಆದರೆ ಈ ಕಾರಣದಿಂದ ಅವನ ವಿದ್ಯೆಯ ಅಧಿಕಾರಕ್ಕೆ ಹಾನಿಯುಂಟಾಗುವುದಿಲ್ಲ. ಇದಲ್ಲದೆ ಶೂದ್ರನಿಗೆ ಅಧಿಕಾರವಿದೆಯೆಂಬುದಕ್ಕೆ ಶ್ರುತಿಯಲ್ಲಿ ಲಿಂಗವೂ ಇದೆ. ರೈಕ್ವನು ಉಪದೇಶವನ್ನು ಪಡೆಯಲು ಬಂದಿರುವ ಜಾನಶ್ರುತಿಯನ್ನು ಕುರಿತು 'ಅಹ, ಶೂದ್ರ ! ಈ ಗೋವುಗಳಿಂದ ಕೂಡಿದ ಹಾರವೂ ರಥವೂ ನಿನಗೇ ಇರಲಿ'[2] (ಛಾಂ. ಉ. ೪. ೨. ೩) ಎಂದು ಶೂದ್ರಶಬ್ದದಿಂದ ಸೂಚಿಸಿರುತ್ತಾನೆ. ವಿದುರರೇ ಮೊದಲಾದವರು ಶೂದ್ರಯೋನಿಯಲ್ಲಿ ಹುಟ್ಟಿದ್ದರೂ ವಿಶಿಷ್ಟಜ್ಞಾನವನ್ನು ಪಡೆದಿದ್ದರೆಂದು ಸ್ಮೃತಿಯಲ್ಲಿ ಹೇಳಿದೆ.

**ಸಿದ್ಧಾಂತಿ**—ಶೂದ್ರರಿಗೆ ಅಧಿಕಾರವಿಲ್ಲ; ಏಕೆಂದರೆ ಅವನಿಗೆ ವೇದಾಧ್ಯಯನವಿಲ್ಲ. ವೇದಾಧ್ಯಯನವನ್ನು ಮಾಡಿ ವೇದಾರ್ಥವನ್ನು ತಿಳಿದುಕೊಂಡಿರುವವನು ವೈದಿಕವಿಷಯಗಳಲ್ಲಿ ಅಧಿಕಾರಿಯಾಗಿರುತ್ತಾನೆ. ವೇದಾಧ್ಯಯನವು ಉಪನಯನ-ಪೂರ್ವಕವಾಗಿ ಆಗತಕ್ಕದ್ದು ಮತ್ತು ವರ್ಣತ್ರಯದವರಿಗೆ ಮಾತ್ರ ಉಪನಯನವಿದೆ. ಇನ್ನು ಅರ್ಥಿತ್ವದ ವಿಷಯ : ಸಾಮರ್ಥ್ಯವಿಲ್ಲದಿದ್ದರೆ ಅರ್ಥಿತ್ವವು ಅಧಿಕಾರಕ್ಕೆ ಕಾರಣವಾಗುವುದಿಲ್ಲ. ಇದಲ್ಲದೆ

---

[1] ತಸ್ಮಾಚ್ಛೂದ್ರೋ ಯಜ್ಞೇಽನವಕ್ಲೃಪ್ತಃ ।

[2] ಅಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು ।

ಕೇವಲ ಲೌಕಿಕಸಾಮರ್ಥ್ಯವು ಅಧಿಕಾರಕ್ಕೆ ಕಾರಣವಾಗುವುದಿಲ್ಲ. ಶಾಸ್ತ್ರೀಯವಿಷಯದಲ್ಲಿ ಶಾಸ್ತ್ರೀಯಸಾಮರ್ಥ್ಯವು ಬೇಕಾಗಿರುತ್ತದೆ. ಅಧ್ಯಯನಕ್ಕೆ ಅಧಿಕಾರವನ್ನು ನಿರಾಕರಿಸಿದ್ದರಿಂದ ಶಾಸ್ತ್ರೀಯ-ಸಾಮರ್ಥ್ಯವನ್ನೂ ನಿರಾಕರಿಸಿದ್ದಾಗಿದೆ. ಸಂವರ್ಗವಿದ್ಯೆಯಲ್ಲಿ ಬಂದಿರುವ ಶೂದ್ರಶಬ್ದವು ಲಿಂಗವಾಗಿಲ್ಲ; ಏಕೆಂದರೆ ಅದಕ್ಕೆ ಬೆಂಬಲವಾಗಿರುವ ಯುಕ್ತಿಗಳಿಲ್ಲ. ಯುಕ್ತಿಗಳಿದ್ದರೆ ಮಾತ್ರ ಲಿಂಗವು 'ತಿಳಿಸುವ' ಶಕ್ತಿಯನ್ನು ಪಡೆದಿರುತ್ತದೆ. ಇಲ್ಲಿ ಶೂದ್ರ-ಶಬ್ದವನ್ನು ಅಧಿಕೃತನಾದವನ ವಿಷಯದಲ್ಲಿಯೇ ಹೊಂದಿಸಲು ಸಾಧ್ಯವಾಗಿರುತ್ತದೆ. ಜಾನಶ್ರುತಿ ಪೌತ್ರಾಯಣನು ಹಂಸದಿಂದ ತನ್ನ ವಿಷಯದಲ್ಲಿ ಅನಾದರವಾದ ಮಾತುಗಳನ್ನು[1] ಕೇಳಿದ ಕೂಡಲೇ ಶೋಕವುಂಟಾಯಿತು. ರೈಕ್ವನು ತಾನು ಸರ್ವಜ್ಞನೆಂದು ಪ್ರದರ್ಶಿಸಲು ಶೋಕವನ್ನು ಶೂದ್ರ-ಶಬ್ದದಿಂದ ಸೂಚಿಸಿದ್ದಾನೆ. ಇಲ್ಲಿ ಶೂದ್ರ-ಶಬ್ದವು ಜಾತಿಯನ್ನು ಸೂಚಿಸುವುದಿಲ್ಲ. ಈ ಶಬ್ದವು ಶೋಕೋತ್ಪತ್ತಿಯನ್ನು ಹೀಗೆ ತಿಳಿಸುತ್ತದೆ: 'ಅವನು ಓಡಿಬಂದು ಶೋಕವನ್ನು ಸೇರಿದನು' **ಶುಚಮಭಿದುದ್ರಾವ**, 'ಶೋಕವು ಇವನ ಬಳಿಗೆ ಬಂದಿತು' **ಶುಚಾ ವಾ ಅಭಿದುದ್ರುವೇ**, 'ಶೋಕದಿಂದ ರೈಕ್ವನನ್ನು ಬಳಿಸಾರಿದನು' **ಶುಚಾ ವಾ ರೈಕ್ವಮಭಿದುದ್ರಾವ.** ಇಲ್ಲಿ ಅವಯವಾರ್ಥವನ್ನು ತೆಗೆದುಕೊಳ್ಳಬೇಕೇ ಹೊರತು ರೂಢ್ಯರ್ಥವನ್ನು ತೆಗೆದುಕೊಳ್ಳಕೂಡದು.

**ವಿ.**—ಸಾಮರ್ಥ್ಯವಿಲ್ಲದಿರುವುದರಿಂದ ಶೂದ್ರನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರಣವಿಲ್ಲ; ಏಕೆಂದರೆ ಬ್ರಹ್ಮಸ್ವರೂಪ, ಉಪಾಸನೆಯ ಪ್ರಕಾರಗಳು, ಉಪಾಸನಾಂಗಗಳಾದ ಅಧ್ಯಯನ-ಯಜ್ಞಾದಿಗಳು—ಇವುಗಳನ್ನು ಅರಿಯದವನಿಗೆ ಸಾಮರ್ಥ್ಯವಿರುವುದಿಲ್ಲ ಹಂಸವಾಕ್ಯವನ್ನು ಕೇಳಿ ಜಾನಶ್ರುತಿಗೆ ಶೋಕವುಂಟಾಗಿತ್ತು. ಆದುದರಿಂದಲೇ ರೈಕ್ವನು ಅವನನ್ನು ಶೂದ್ರದೆಂದು ಕರೆದನು. ಯಾವನು ಶೋಕಿಸುತಾನೆಯೊ ಅವನು ಶೂದ್ರನು, **ಶೋಚತೀತಿ ಶೂದ್ರಃ.**

**ದ್ವೈ.**—ಪೌತ್ರಾಯಣನು ಶೋಕದಿಂದ ಬಂದದ್ದರಿಂದ ಶೂದ್ರನೆನಿಸಿದ್ದಾನೆ, ರೂಢಿಯಿಂದಲ್ಲ. 'ಅವನು ಹಾಸಿಗೆಯಿಂದ ಎದ್ದ ಕೂಡಲೇ ಕ್ಷತ್ತೃವನ್ನು ಕೇಳಿದನು'[2] (ಛಾಂ. ಉ. ೪. ೧. ೫) ಎಂಬುದು ಅವನ ಶೋಕವನ್ನು ಸೂಚಿಸುತ್ತದೆ. ಆದುದರಿಂದ ವೇದವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರವಿಲ್ಲ.

**ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್* ॥ ೩೫ ॥**

೩೫. ಮತ್ತು ಮುಂದೆ ಚೈತ್ರರಥನೊಂದಿಗೆ (ಹೇಳಲ್ಪಟ್ಟಿರುವನು) ಎಂಬ

---

[1] 'ಎಲಾ! ಹೀಗಿರುವ ಇವನನ್ನು ಗಾಡಿಯೊಂದಿಗೆ ಇರುವ ರೈಕ್ವನಂತೆ—ಯಾವನೆಂದು ಹೇಳುತ್ತೀಯೆ?' ಕಮ್ವರ ಏನಮೇತತ್ ಸಂತಂ ಸಯುಗ್ವಾನಮಿವ ರೈಕ್ವಮಾತ್ಥ (ಛಾಂ. ಉ. ೪. ೧. ೩).

[2] ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ।

* ಶ್ರೀಭಾಷ್ಯದಲ್ಲಿ ಇದನ್ನು ಎರಡು ಸೂತ್ರಗಳಾಗಿ ವಿಭಾಗಿಸಿದೆ.

ಲಿಂಗದಿಂದ (ಅವನ) ಕ್ಷತ್ರಿಯತ್ವವು ತಿಳಿಯಲ್ಪಟ್ಟಿರುವುದರಿಂದ (ಜಾನಶ್ರುತಿಯು ಶೂದ್ರನಲ್ಲ)

ಈ ಕಾರಣದಿಂದಲೂ ಜಾನಶ್ರುತಿಯು ಶೂದ್ರನಲ್ಲ 'ಒಂದು ಸಲ ಶೌನಕ ಕಾಪೇಯ ಮತ್ತು ಅಭಿಪ್ರತಾರಿ ಕಾಕ್ಷಸೇನಿ—ಇವರು (ಪರಿಚಾರಕರಿಂದ) ಬಡಿಸಿಕೊಳ್ಳುತ್ತಿರುವಾಗ ಒಬ್ಬ ಬ್ರಹ್ಮಚಾರಿಯು ಭಿಕ್ಷೆ ಬೇಡಿದನು'[1] (ಛಾಂ ೪ ೩ ೫) ಎಂದು ಮುಂದೆ ಸಂವರ್ಗವಿದ್ಯೆಯ ವಾಕ್ಯಶೇಷದಲ್ಲಿ ಕ್ಷತ್ರಿಯನಾದ ಚೈತ್ರರಥಿ ಅಭಿಪ್ರತಾರಿಯನ್ನು ಹೇಳಿದೆ ಈ ಅಭಿಪ್ರತಾರಿಯು ಕ್ಷತ್ರಿಯನೆಂಬುದು ಶ್ರುತಿಯಿಂದ ತಿಳಿದುಬರುತ್ತದೆ[2] ಒಂದೇ ವಿದ್ಯೆಯಲ್ಲಿ ಜಾನಶ್ರುತಿಯನ್ನು ಕ್ಷತ್ರಿಯನಾದ ಅಭಿಪ್ರತಾರಿಯೊಂದಿಗೆ ಹೇಳಿರುವುದು ಜಾನಶ್ರುತಿಯು ಕ್ಷತ್ರಿಯನೆಂಬುದನ್ನು ತಿಳಿಸುತ್ತದೆ ಸಾಮಾನ್ಯವಾಗಿ ಸಮಾನರಾದವರನ್ನೇ ಒಟ್ಟಿಗೆ ಹೇಳುವುದು ವಾಡಿಕೆ ಜಾನಶ್ರುತಿಯು ಕ್ಷತ್ತೃವನ್ನು ಕಳುಹಿಸುವುದೇ ಮೊದಲಾದ ಐಶ್ವರ್ಯಯೋಗದಿಂದಲೂ ಅವನು ಕ್ಷತ್ರಿಯನೆಂಬುದು ಸಿದ್ಧವಾಗುತ್ತದೆ

ವಿ.— ಕ್ಷತ್ರಿಯತ್ವಗತೇಶ್ಚ ॥ ೧ ೩ ೩೪ ॥

೩೪ ಜಾನಶ್ರುತಿಯು ಕ್ಷತ್ರಿಯನೆಂದು ತಿಳಿದುಬರುವುದರಿಂದಲೂ (ಅವನು ಶೂದ್ರನಲ್ಲ)

ಸಂವರ್ಗವಿದ್ಯೆಯ ಮೊದಲನೆಯ ಖಂಡವು ಜಾನಶ್ರುತಿಯು ಬಹಳ ದೊಡ್ಡ ದಾನಿಯೆಂದು ತಿಳಿಸುತ್ತದೆ, ಅನಂತರ ಕ್ಷತ್ತೃವನ್ನು ಕೆಲಸದ ಮೇಲೆ ಕಳಿಸುತ್ತಾನೆಂದು ತಿಳಿಸಿದೆ ಕೊನೆಯಲ್ಲಿ ರೈಕ್ವನಿಗೆ ಬಹುಗ್ರಾಮಗಳನ್ನು ದಾನಮಾಡಿದನೆಂದು ಹೇಳಿದೆ ಇವೆಲ್ಲವೂ ಅವನು ಕ್ಷತ್ರಿಯನೆಂಬುದನ್ನು ತಿಳಿಸುತ್ತವೆ

ಉತ್ತರತ್ರ ಚೈತ್ರರಥೇನ ಲಿಂಗಾತ್ ॥ ೧ ೩ ೩೫ ॥

೩೫ ಮುಂದೆ ಚೈತ್ರರಥನಿಂದ ತೋರಿಬರುವ ಲಿಂಗದಿಂದಲೂ (ಅವನು ಶೂದ್ರನಲ್ಲ)

ಸಂವರ್ಗವಿದ್ಯೆಯ ಪ್ರಕಾರ (ಛಾಂ ೪ ೩ ೫) ಅಭಿಪ್ರತಾರಿಯು ಕ್ಷತ್ರಿಯನೂ, ಶೌನಕಕಾಪೇಯ-ಬ್ರಹ್ಮಚಾರಿಗಳಿಬ್ಬರೂ ಬ್ರಾಹ್ಮಣರು ಆಗಿರುತ್ತಾರೆ ಹೀಗೆಯೇ ಪೂರ್ವಭಾಗದಲ್ಲಿಯೂ ಬ್ರಾಹ್ಮಣನಾದ ರೈಕ್ವನನ್ನು ಬಿಟ್ಟರೆ ಇನ್ನೊಬ್ಬನು (ಎಂದರೆ ಜಾನಶ್ರುತಿಯು) ಕ್ಷತ್ರಿಯನು ಎಂಬುದನ್ನು ಊಹಿಸುವುದು ಯುಕ್ತವಾಗಿರುತ್ತದೆ ಅಭಿಪ್ರತಾರಿಯು ಕ್ಷತ್ರಿಯನಾದ ಚೈತ್ರರಥನೆಂದು ಈ ಪ್ರಕರಣದಲ್ಲಿ ತಿಳಿಯಬರದಿದ್ದರೂ ಕಾಪೇಯ ಮತ್ತು ಅಭಿಪ್ರತಾರಿ—ಇವರಿಬ್ಬರೂ ಊಟ ಮಾಡಿದರೆಂಬ ಲಿಂಗದಿಂದ ಅಭಿ

---

1 ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಪರಿವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ ।

2 'ಅವನಿಂದ ಚೈತ್ರರಥಿಯೆಂಬ ಕ್ಷತ್ತ್ರಪತಿಯು ಹುಟ್ಟಿದನು' ತಸ್ಮಾಚ್ಚೈತ್ರರಥಿರ್ನಾಮೈಕಃ ಕ್ಷತ್ತ್ರಪತಿರಜಾಯತ ।

ಪ್ರತಾರಿಗೂ ಕಾಪೇಯನಿಗೂ ಇರುವ ಸಂಬಂಧವು ಕಂಡುಬರುತ್ತದೆ

ದ್ವೈ.—'ಇದು ಅಶ್ವತರೀರಥ' (ಛಾಂ ಉ ೪ ೩ ೪) ಎಂಬ ಚಿತ್ರರಥ ಸಂಬಂಧಿತ್ವವಾದ ಲಿಂಗದಿಂದ ಪೌತ್ರಾಯಣನು ಕ್ಷತ್ರಿಯನೆಂದು ತಿಳಿದುಬರುತ್ತದೆ[1] 'ಹೇಸರಗತ್ತೆಯಿಂದ ಯುಕ್ತವಾದ ರಥಕ್ಕೆ ಚಿತ್ರವೆಂದು ಹೆಸರು' ಎಂದು ಬ್ರಹ್ಮಪುರಾಣವು ಹೇಳುತ್ತದೆ[2]

**ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ ॥ ೩೬ ॥**

೩೬ (ದ್ವಿಜರಿಗೆ) ಸಂಸ್ಕಾರವನ್ನು ಹೇಳಿರುವುದರಿಂದಲೂ (ನಾಲ್ಕನೆಯ ವರ್ಣದವರಿಗೆ) ಅದಿಲ್ಲವೆಂದು ಹೇಳಿರುವುದರಿಂದಲೂ (ಶೂದ್ರನಿಗೆ ಅಧಿಕಾರವಿಲ್ಲ)

ವಿದ್ಯೆಗಳನ್ನು ಉಪದೇಶಿಸುವ ಅನೇಕ ಸ್ಥಳಗಳಲ್ಲಿ ದ್ವಿಜರಿಗೆ ಉಪನಯನವೇ ಮೊದಲಾದ ಸಂಸ್ಕಾರಗಳನ್ನು ಹೇಳಿದೆ· 'ಅವನಿಗೆ ಉಪನಯನವನ್ನು ಮಾಡಿಸಿದನು'[3] (ಶ ಬ್ರಾ ೧೧ ೫ ೩ ೧೩) ಶೂದ್ರನಿಗೆ ಸಂಸ್ಕಾರವಿಲ್ಲವೆಂಬುದು ಅನೇಕ ಸ್ಮೃತಿಗಳಿಂದ ತಿಳಿದುಬರುತ್ತದೆ[4]

ವಿ.—ಶೂದ್ರನ ಅನಧಿಕಾರವನ್ನು ಶ್ರುತಿ-ಸ್ಮೃತಿಗಳು ತಿಳಿಸುತ್ತವೆ

ದ್ವೈ.—ಸಂಸ್ಕಾರಭಾವದಿಂದ ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ ಶೂದ್ರರಂತೆ ಉತ್ತಮರಾದ ಸ್ತ್ರೀಯರಿಗೆ ಅನಧಿಕಾರವಿಲ್ಲ.[5] ಸಂಸ್ಕಾರಾಭಾವದಿಂದ ಅಧಿಕಾರಾಭಾವವು ಉಂಟಾಗುತ್ತದೆ ಸ್ತ್ರೀಯರಿಗೆ ಸಂಸ್ಕಾರವಿರುವುದನ್ನು ಸ್ಮೃತಿಯಲ್ಲಿ ಹೇಳಿದೆ : 'ಪುರುಷರಿಗೆ ಉಪನಯನವು ಹೇಗೊ ಹಾಗೆ ಸ್ತ್ರೀಯರಿಗೆ ವಿವಾಹವು'[6]

**ತದಭಾವನಿರ್ಧಾರಣೇ ಚ ಪ್ರವೃತ್ತೇಃ ॥ ೩೭ ॥**

೩೭ ಅವನು (ಶೂದ್ರ)ನಲ್ಲವೆಂದು ನಿರ್ಧರಿಸಿದ ಮೇಲೆ (ಗೌತಮನು ಉಪನಯನಕ್ಕೆ) ಪ್ರವೃತ್ತನಾದುದರಿಂದ (ಶೂದ್ರನಿಗೆ ಅಧಿಕಾರವಿಲ್ಲ).

ಜಾಬಾಲನು ಸತ್ಯವನ್ನು ಹೇಳಿದ್ದರಿಂದ ಶೂದ್ರನಲ್ಲವೆಂದು ಗೌತಮನು ನಿರ್ಧರಿಸಿ ಅವನಿಗೆ ಉಪನಯನ-ಉಪದೇಶಗಳನ್ನು ಮಾಡುವುದಕ್ಕೆ ಪ್ರವೃತ್ತನಾದನು 'ಅಬ್ರಾಹ್ಮ

---

[1] ಅಯಮಶ್ವತರೀರಥ ಇತಿ ಚಿತ್ರರಥಸಂಬಂಧಿತ್ವೇನ ಲಿಂಗೇನ ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಶ್ಚ (ಮ ಭಾ )

[2] ರಥಸ್ತ್ವಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತ ಇತಿ ಬ್ರಾಹ್ಮೇ (ಮ ಭಾ.)

[3] ತಂ ಹೋಪನಿನ್ಯೇ । ಛಾಂ ಉ ೭ ೧. ೧, ಪ್ರ ಉ ೧. ೧ ನೋಡಿ

[4] ಮ ಸ್ಮೃ ೧೦ ೪, ೧೦ ೧೨೬ ನೋಡಿ

[5] ಉತ್ತಮಾನಾಂ ತು ಸ್ತ್ರೀಣಾಂ ನ ಶೂದ್ರವತ್ (ಮ ಭಾ )

[6] ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥೇತಿ (ಮ. ಭಾ ).

ಣನು ಇದನ್ನು ಹೇಳಲಾರನು, ಸೋಮ್ಯ, ಸಮಿತ್ತನ್ನು ತೆಗೆದುಕೊಂಡು ಬಾ, ನಿನಗೆ ಉಪನಯನಮಾಡಿಸುವೆನು ; ನೀನು ಸತ್ಯದಿಂದ ಚಲಿಸಲಿಲ್ಲ'[1] (ಛಾಂ. ಉ. ೪. ೪. ೫) ಎಂಬ ಶ್ರುತಿವಾಕ್ಯವೂ ಲಿಂಗವಾಗಿದೆ

ವಿ. ಮತ್ತು ದ್ವೈ.—ಜಾಬಾಲನು ಶೂದ್ರನಲ್ಲವೆಂದು ನಿರ್ಧರಿಸಿದ ಬಳಿಕ ಗೌತಮನು ವಿದ್ಯೋಪದೇಶವನ್ನು ಮಾಡಲು ಪ್ರವೃತ್ತನಾದುದರಿಂದಲೂ ಶೂದ್ರನಿಗೆ ಅಧಿಕಾರವಿಲ್ಲ.

**ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ * ॥ ೩೮ ॥**

೩೮. ಸ್ಮೃತಿಯಲ್ಲಿಯೂ ಶ್ರವಣ-ಅಧ್ಯಯನ-ಅರ್ಥ ಇವುಗಳನ್ನು ನಿಷೇಧಿಸಿರುವುದರಿಂದ ಶೂದ್ರನಿಗೆ ಅಧಿಕಾರವಿಲ್ಲ).

ಶ್ರವಣ ಅಧ್ಯಯನ—ಇವುಗಳ ನಿಷೇಧದಿಂದಲೇ ಜ್ಞಾನ, ಅನುಷ್ಠಾನ—ಇವುಗಳನ್ನೂ ನಿಷೇಧಿಸಿದಂತಾಗುತ್ತದೆ.

ಹಿಂದೆ ಮಾಡಿದ ಕರ್ಮಗಳ ಸಂಸ್ಕಾರವಶದಿಂದ ಜ್ಞಾನವನ್ನು ಪಡೆದ ವಿದುರ, ಧರ್ಮವ್ಯಾಧ ಮೊದಲಾದವರಿಗೆ ಫಲಪ್ರಾಪ್ತಿಯನ್ನು ನಿಲ್ಲಿಸಲು ಸಾಧ್ಯವಿಲ್ಲ ; ಏಕೆಂದರೆ ಜ್ಞಾನಕ್ಕೆ ಫಲವು ಇದ್ದೇ ಇದೆ.[2] 'ನಾಲ್ಕು ವರ್ಣದವರಿಗೂ ಶ್ರವಣವನ್ನು ಮಾಡಿಸಬೇಕು'[3] (ಮೋ. ಧ. ೩೨೭. ೪೯) ಎಂದು ಸ್ಮೃತಿಯು ನಾಲ್ಕು ವರ್ಣಗಳಿಗೂ ಇತಿಹಾಸ-ಪುರಾಣಗಳ ಜ್ಞಾನದಲ್ಲಿ ಅಧಿಕಾರವನ್ನು ಹೇಳಿದೆ. ವೇದಪೂರ್ವಕವಾಗಿ ಮಾತ್ರ ಶೂದ್ರನಿಗೆ ಅಧಿಕಾರವಿಲ್ಲ.

**ವಿ.—ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ॥ ೧. ೩. ೩೮ ॥**

ಯಾವನು ಶ್ರವಣಮಾಡಲಾರನೊ ಅವನಿಗೆ ಅದರ ಅಧ್ಯಯನ-ಅರ್ಥಜ್ಞಾನ ಅನುಷ್ಠಾನಗಳು ಸಂಭವಿಸುವುದಿಲ್ಲ.

**ಸ್ಮೃತೇಶ್ಚ ॥ ೧. ೩. ೩೯ ॥**

ಶ್ರವಣ-ಅಧ್ಯಯನಾದಿಗಳನ್ನು ಸ್ಮೃತಿಯಲ್ಲಿಯೂ ಶೂದ್ರನಿಗೆ ನಿಷೇಧಿಸಿದೆ.

ದ್ವೈ.—ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವನ್ನು ಸ್ಮೃತಿಯು ನಿಷೇಧಿಸಿದೆ.

---

1 ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪ ತ್ವಾನೇಷ್ಯೇ ನ ಸತ್ಯಾದಗಾಃ ।

* ಶ್ರೀಭಾಷ್ಯದಲ್ಲಿ ಇದನ್ನು ಎರಡು ಸೂತ್ರಗಳಾಗಿ ವಿಭಾಗಿಸಿದೆ.

2 ಪೂರ್ವಕೃತಸಂಸ್ಕಾರವಶಾದ್ ವಿದುರಧರ್ಮವ್ಯಾಧಪ್ರಭೃತೀನಾಂ ಜ್ಞಾನೋತ್ಪತ್ತಿಸ್ತೇಷಾಂ ನ ಶಕ್ಯತೇ ಫಲಪ್ರಾಪ್ತಿಃ ಪ್ರತಿಷೇದ್ಧುಮ್, ಜ್ಞಾನಸ್ಯೈಕಾಂತಿಕಫಲತ್ವಾತ್ (ಸೂ ಭಾ.).

3 ಶ್ರಾವಯೇಚ್ಚತುರೋ ವರ್ಣಾನ್ ।

# ೧೦. ಕಂಪನಾಧಿಕರಣ

## ಕಂಪನಾತ್ ॥ ೩೯ ॥

೩೯. (ಜಗತ್ತು) ಕಂಪಿಸುವುದರಿಂದ (ಪ್ರಾಣವು ಬ್ರಹ್ಮವೇ).

ಪ್ರಾಸಂಗಿಕವಾಗಿ ಬಂದ ಅಧಿಕಾರದ ವಿಚಾರವು ಮುಗಿದಮೇಲೆ ವೇದಾಂತವಾಕ್ಯದ ಅರ್ಥವಿಚಾರವು ಮುಂದುವರಿಯುತ್ತದೆ.

'ಪ್ರಾಣವಿರುವಾಗ ಈ ಜಗತ್ತೆಲ್ಲವೂ ಹೊರಗೆ ಬಂದು ಕಂಪಿಸುತ್ತದೆ. ಎತ್ತಿದ ವಜ್ರಾಯುಧದಂತಿರುವ ಇದು ದೊಡ್ಡ ಭಯವು. ಯಾರು ಇದನ್ನು ತಿಳಿದುಕೊಳ್ಳುವರೊ ಅವರು ಅಮೃತರಾಗುವರು'[1] (ಕ. ಉ. ೨. ೬. ೨) ಎಂಬುದು ವಿಷಯವಾಕ್ಯ; ಇಲ್ಲಿ ಜಗತ್ತೆಲ್ಲವೂ ಪ್ರಾಣವನ್ನೇ ಆಶ್ರಯಿಸಿಕೊಂಡು ಕಂಪಿಸುತ್ತಿದೆಯೆಂದೂ, ಭಯ ಕಾರಣವೂ ವಜ್ರಶಬ್ದಿತವೂ ಆದ ಯಾವುದೊ ಒಂದು ಮೇಲಕ್ಕೆ ಎತ್ತಲ್ಪಟ್ಟಿದೆಯೆಂದೂ ಮತ್ತು ಅದರ ಜ್ಞಾನದಿಂದ ಅಮೃತತ್ವವು ಉಂಟಾಗುತ್ತದೆಯೆಂದೂ ಹೇಳಿದೆ. ಈ ಪ್ರಾಣವು ಯಾವುದು ? ಈ ಭಯಂಕರವಾದ ವಜ್ರಾಯುಧವು ಯಾವುದು ?—ಎಂಬುದು ತಿಳಿಯದಿರುವುದರಿಂದ ವಿಚಾರಕ್ಕೆ ಅವಕಾಶವು ಒದಗಿದೆ

**ಪೂರ್ವಪಕ್ಷಿ**—ಪಂಚವೃತ್ತಿಗಳುಳ್ಳ ವಾಯುವೇ ಪ್ರಾಣವು, ಸಿಡಿಲೇ ವಜ್ರಾಯುಧವು. ಈ ಜಗತ್ತೆಲ್ಲವೂ ಪ್ರಾಣಶಬ್ದಿತವಾದ ಪಂಚವೃತ್ತಿಗಳುಳ್ಳ ವಾಯುವಿನಲ್ಲಿಯೇ ಇದ್ದುಕೊಂಡು ಕಂಪಿಸುತ್ತದೆ. 'ವಾಯುವೇ ವ್ಯಷ್ಟಿ, ವಾಯುವೇ ಸಮಷ್ಟಿ. ಯಾವನು ಹೀಗೆ ಅರಿತುಕೊಳ್ಳುತ್ತಾನೆಯೊ ಅವನು ಪುನರ್ಮೃತ್ಯುವನ್ನು ಜಯಿಸುತ್ತಾನೆ' (ಬೃ. ಉ. ೩. ೩. ೨) ಎಂದು ಶ್ರುತಿಯು ಹೇಳುತ್ತದೆ.

**ಸಿದ್ಧಾಂತಿ**—ಪ್ರಾಣವನ್ನು ಬ್ರಹ್ಮವೆಂದೇ ಅರಿಯಬೇಕು; ಏಕೆಂದರೆ ಈ ಅಧ್ಯಾಯದ ಪೂರ್ವೋತ್ತರಭಾಗಗಳಲ್ಲಿ ಬ್ರಹ್ಮವನ್ನೇ ನಿರ್ದೇಶಿಸಿದೆ; ಆದುದರಿಂದ ನಡುವೆ ವಾಯುವು ಬರಲಾರದು. ಬ್ರಹ್ಮವು 'ಪ್ರಾಣದ ಪ್ರಾಣ' ಎಂದು ಶ್ರುತಿಯು (ಬೃ. ಉ. ೪. ೪. ೧೮) ಹೇಳುತ್ತದೆ. ಪ್ರಾಣಾಪಾನಗಳು ಇನ್ನೊಬ್ಬನನ್ನು ಆಶ್ರಯಿಸಿಕೊಂಡು ಜೀವಿಸುತ್ತವೆಯೆಂದು ಮತ್ತೊಂದು ಶ್ರುತಿಯು[2] (ಕ. ಉ. ೨. ೫. ೫) ಹೇಳುತ್ತದೆ. ಭಯಕ್ಕೆ ಕಾರಣವೆನಿಸಿದ ವಜ್ರಾಯುಧದಲ್ಲಿ ಬ್ರಹ್ಮದ ಒಂದು ಗುಣವನ್ನು ಗುರುತಿಸಬಹುದು. ಬ್ರಹ್ಮದ ಭಯದಿಂದ ಇಡೀ ಜಗತ್ತು ತನ್ನ ಕಾರ್ಯದಲ್ಲಿ ಪ್ರವೃತ್ತವಾಗಿದೆಯೆಂದು ತೈತ್ತಿರೀಯಶ್ರುತಿಯು (೨. ೮) ಹೇಳುತ್ತದೆ. ವಾಯುವಿನ ಉಪಾಸನೆಯಿಂದ

---

[1] ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ ।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥

[2] ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ।

ಅಮೃತತ್ವವು ಪ್ರಾಪ್ತವಾಗುವುದೆಂದು ಶ್ರುತಿಯಲ್ಲಿ ಹೇಳಿರುವುದು ಆಪೇಕ್ಷಿಕವಾದದ್ದು ಬ್ರಹ್ಮಜ್ಞಾನದಿಂದಲೇ ಅಮೃತತ್ವವು ಪ್ರಾಪ್ತವಾಗುತ್ತದೆ 'ಅವನನ್ನೇ ಅರಿತುಕೊಂಡು ಮೃತ್ಯುವನ್ನು ದಾಟುತ್ತಾನೆ, ಮೋಕ್ಷಕ್ಕೆ ಬೇರೆ ದಾರಿಯಿರುವುದಿಲ್ಲ'[1] (ಶ್ವೇ ಉ ೬ ೧೫)

ವಿ.—ಪ್ರಾಸಂಗಿಕವಾಗಿ ಬಂದ ಮೂರು ಅಧಿಕರಣಗಳನ್ನು ಚರ್ಚಿಸಿದ ಬಳಿಕ ಹಿಂದೆ ಪ್ರಾರಂಭಿಸಿದ್ದ ಪ್ರಮಿತಾಧಿಕರಣವನ್ನು (೧. ೩. ೨೪) ಇಲ್ಲಿ ಮತ್ತು ಮುಂದಿನ ಸೂತ್ರದಲ್ಲಿ ಸಮಾಪ್ತಿಗೊಳಿಸಿದೆ

'ಅಂಗುಷ್ಠಪರಿಮಾಣವುಳ್ಳ ಪುರುಷನು ಶರೀರದ ಮಧ್ಯದಲ್ಲಿ ಇರುತ್ತಾನೆ' (ಕ ಉ ೨ ೪ ೧೨) ಮತ್ತು 'ಅಂಗುಷ್ಠಪರಿಮಾಣವುಳ್ಳವನೂ ಅಂತರಾತ್ಮನೂ ಆದ ಪುರುಷನು ಜನರ ಹೃದಯದಲ್ಲಿ ಯಾವಾಗಲೂ ಇರುವನು' (ಕ ಉ ೨ ೬ ೧೭) ಎಂಬ ಈ ವಾಕ್ಯಗಳೆರಡರ ಮಧ್ಯದಲ್ಲಿ 'ಪ್ರಾಣದಲ್ಲಿರುವ ಮತ್ತು ಅದರಿಂದ ಹೊರಕ್ಕೆ ಬಂದಿರುವ ಈ ಜಗತ್ತೆಲ್ಲವೂ ಎತ್ತಿದ ವಜ್ರಾಯುಧದಿಂದ ಉಂಟಾದ ಮಹದ್ಭಯದಿಂದ[2] ಕಂಪಿಸುತ್ತದೆ ' (ಕ ಉ ೨ ೬ ೨) ಎಂಬ ವಾಕ್ಯವು ಬರುತ್ತದೆ. ಪ್ರಾಣಶಬ್ದನಿರ್ದಿಷ್ಟನಾದ ಅಂಗುಷ್ಠಪರಿಮಾಣವುಳ್ಳ ಪುರುಷನಲ್ಲಿರುವ ಈ ಸಮಸ್ತ ಜಗತ್ತೂ ಅಗ್ನಿಸೂರ್ಯಾದಿಗಳೂ ಅವನಿಂದ ಹೊರಕ್ಕೆ ಬಂದು ಅವನ ಭಯದಿಂದ ಕಂಪಿಸುತ್ತಾರೆಂದು ಈ ಶ್ರುತಿಯು ಹೇಳುತ್ತದೆ ಇಲ್ಲಿ ಪರಬ್ರಹ್ಮನ ಸ್ವಭಾವವನ್ನೇ ಹೇಳಿದೆ[3] ಇಂಥ ಐಶ್ವರ್ಯವು ಪುರುಷೋತ್ತಮನಿಗೇ ಸೇರಿದ್ದೆಂದು ಶ್ರುತಿಗಳು ತಿಳಿಸುತ್ತವೆ[4] 'ಈ ಅಕ್ಷರದ ಶಾಸನದಿಂದಲೇ, ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ' (ಬೃ ಉ ೩. ೮ ೯)

ದ್ವೈತ.—ಕಠಶ್ರುತಿಯಲ್ಲಿ (೨ ೬ ೨) ವಜ್ರ-ಜ್ಞಾನದಿಂದ ಮೋಕ್ಷವು ಉಂಟಾಗುವ ಹಾಗೆ ಕಂಡುಬರುತ್ತದೆ 'ಕಂಪಿಸುತ್ತದೆ' ಏಜತಿ ಎಂಬ ಶಬ್ದದಿಂದ ಉದ್ಯತವಾದ ವಜ್ರವು ಭಗವಂತನೇ ಆಗಿರಬೇಕು ಎಂಬುದು ತಿಳಿದುಬರುತ್ತದೆ[5] (ಜೀವರನ್ನು) ಪ್ರಚೋದಿಸುವುದರಿಂದ ಚಕ್ರನೆಂದೂ (ದೈತ್ಯರಿಂದ) ವರ್ಜಿಸಲ್ಪಟ್ಟವನಾದುದರಿಂದ ವಜ್ರನೆಂದೂ (ದುಷ್ಟರನ್ನು) ಖಂಡಿಸುವುದರಿಂದ ಖಡ್ಗನೆಂದೂ ಭಗವಂತನು ಎನಿಸಿದ್ದಾನೆ, ಹೀಗೆ ಆಯುಧಗಳ ಹೆಸರಿನಿಂದ ಹರಿಯೇ ಹೇಳಲ್ಪಟ್ಟಿದ್ದಾನೆ' ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ[6]

---

[1] ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ ।

[2] ಮಹದ್ಭಯಂ ವಜ್ರಮುದ್ಯತಮಿತಿ ಪಂಚಮ್ಯರ್ಥೇ ಪ್ರಥಮಾ (ಶ್ರೀಭಾಷ್ಯ)

[3] ಅಯಂ ಚ ಪರಸ್ಯ ಬ್ರಹ್ಮಣಃ ಸ್ವಭಾವಃ (ಶ್ರೀಭಾಷ್ಯ)

[4] ತೈ. ಉ ೨ ೮. ೧ ನ್ನು ನೋಡಿ.

[5] ಏಜತೀತಿ ಕಂಪನವಚನಾದುದ್ಯತವಜ್ರೋ ಭಗವಾನ್ (ಮ. ಭಾ )

[6] ಚಕ್ರಂ ಚಂಕ್ರಮಣಾದೇಷ ವರ್ಜನಾದ್ವಜ್ರಮುಚ್ಯತೇ। ಖಂಡನಾತ್ಖಡ್ಗ ಏವೈಷ ಹೇತಿನಾಮಾ ಸ್ವಯಂ ಹರಿರಿತಿ ಹಿ ಬ್ರಹ್ಮವೈವರ್ತೇ (ಮ ಭಾ )

# ೧೧. ಜ್ಯೋತಿರಧಿಕರಣ

## ಜ್ಯೋತಿರ್ದರ್ಶನಾತ್ ॥ ೪೦ ॥

೪೦. ಜ್ಯೋತಿಯು (ಬ್ರಹ್ಮವೇ); ಏಕೆಂದರೆ (ಶ್ರುತಿಯಲ್ಲಿ) ಕಂಡುಬಂದಿದೆ.

'ಸಂಪ್ರಸಾದಗುಣವುಳ್ಳ ಆತ್ಮನು ಈ ಶರೀರದಿಂದ ಎದ್ದು ಪರಂಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಕಾಣಿಸಿಕೊಳ್ಳುತ್ತಾನೆ'[1] (ಛಾಂ. ಉ. ೮. ೧೨. ೩) ಎಂಬುದು ವಿಷಯವಾಕ್ಯ. ಇಲ್ಲಿ ಹೇಳಿರುವ ಜ್ಯೋತಿಯು ಕಣ್ಣಿಗೆ ವಿಷಯವಾಗಿರುವ ಮತ್ತು ಕತ್ತಲೆಯನ್ನು ಹೋಗಲಾಡಿಸುವ ಭೌತತೇಜಸ್ಸೋ ಅಥವಾ ಪರಬ್ರಹ್ಮವೋ ?....ಎಂಬುದು ಸಂಶಯ.

**ಪೂರ್ವಪಕ್ಷ**—ಜ್ಯೋತಿಃಶಬ್ದವು ಪ್ರಸಿದ್ಧವಾದ ಬೆಳಕನ್ನೇ ಸೂಚಿಸುತ್ತದೆ; ಏಕೆಂದರೆ ಈ ಅರ್ಥವು ರೂಢಿಯಲ್ಲಿದೆ. **ಜ್ಯೋತಿಶ್ಚರಣಾಭಿಧಾನಾತ್** (೧. ೧ ೨೪) ಎಂಬ ಸೂತ್ರದಲ್ಲಿರುವಂತೆ ಇಲ್ಲಿ ಪ್ರಕರಣವಶದಿಂದ ಅರ್ಥವನ್ನು ಬಿಡಬೇಕಾಗಿಲ್ಲ. ಇದಲ್ಲದೆ ನಾಡೀಖಂಡದಲ್ಲಿ[2] (ಛಾಂ. ಉ. ೮. ೬. ೫) ಮುಮುಕ್ಷುವಿಗೆ ಆದಿತ್ಯಪ್ರಾಪ್ತಿಯನ್ನು ಹೇಳಿದೆ. ಆದುದರಿಂದ ಜ್ಯೋತಿಃಶಬ್ದವು ಪ್ರಸಿದ್ಧವಾದ ಬೆಳಕನ್ನೇ ಸೂಚಿಸುತ್ತದೆ.

**ಸಿದ್ಧಾಂತಿ**—ಜ್ಯೋತಿಃಶಬ್ದವು ಪರಬ್ರಹ್ಮವನ್ನೇ ಸೂಚಿಸುತ್ತದೆ; ಏಕೆಂದರೆ ಶ್ರುತಿಯಲ್ಲಿ (ಛಾಂ. ಉ. ೮. ೭. ೧) ಅಪಹತ-ಪಾಪ್ಮತ್ವವೇ ಮೊದಲಾದ ಗುಣಗಳುಳ್ಳ ಆತ್ಮವನ್ನೇ ಅನ್ವೇಷಿಸಬೇಕೆಂದೂ ಅರಿತುಕೊಳ್ಳಬೇಕೆಂದೂ ಪ್ರತಿಜ್ಞೆಮಾಡಿದೆ. ಅನಂತರ 'ಈ ಆತ್ಮನನ್ನು ನಿನಗೆ ಇನ್ನೂ ಸ್ಪಷ್ಟವಾಗಿ ಹೇಳುತ್ತೇನೆ' (ಛಾಂ. ಉ. ೮. ೯. ೩) ಎಂದು ಅನುಸಂಧಾನಮಾಡಿದೆ. ಆಮೇಲೆ ಅಶರೀರತ್ವವು ಆತ್ಮನಿಗೆ ಸೇರಿದೆಯೆಂದು ತಿಳಿಸಲು (ಛಾಂ. ಉ. ೮. ೧೨. ೧) ಜ್ಯೋತಿಃಸಂಪತ್ತಿಯನ್ನು ಹೇಳಿವೆ; ಬ್ರಹ್ಮಭಾವವನ್ನು ಬಿಟ್ಟರೆ ಅಶರೀರತ್ವವು ಹೊಂದುವುದಿಲ್ಲ. ಈ ಜ್ಯೋತಿಗೆ **ಪರಂಜ್ಯೋತಿಃ** (ಛಾಂ. ಉ. ೮. ೧೨. ೩), **ಸ ಉತ್ತಮಃ ಪುರುಷಃ** (ಛಾಂ. ಉ. ೮. ೧೨. ೩) ಎಂಬ ವಿಶೇಷಣಗಳನ್ನೂ ಕೊಟ್ಟಿದೆ. ನಾಡೀಖಂಡದಲ್ಲಿ ಹೇಳಿರುವ ಆದಿತ್ಯಪ್ರಾಪ್ತಿಯು ಆತ್ಯಂತಿಕ-ಮೋಕ್ಷವಲ್ಲ; ಏಕೆಂದರೆ ಅಲ್ಲಿ 'ಹೋಗುವುದು' 'ಬರುವುದು'—ಇವುಗಳ ಸಂಬಂಧವಿರುತ್ತದೆ. ಆತ್ಯಂತಿಕ-ಮೋಕ್ಷದಲ್ಲಿ ಇವುಗಳು ಇರುವುದಿಲ್ಲ.

---

[1] ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

[2] 'ಇನ್ನು ಯಾವಾಗ ಈ ಶರೀರದಿಂದ ಉತ್ಕ್ರಮಿಸುವನೊ ಆಗ ಈ ರಶ್ಮಿಗಳಿಂದಲೇ ಮೇಲಕ್ಕೆ ಹೋಗುತ್ತಾನೆ' ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ ।

ವಿ.—ಅಂಗುಷ್ಠ-ಪರಿಮಾಣವುಳ್ಳ ಪುರುಷನನ್ನು ಸೂಚಿಸುವ ಎರಡು ವಾಕ್ಯಗಳ ಮಧ್ಯದಲ್ಲಿ ಇನ್ನೊಂದು ವಾಕ್ಯವಿದೆ; ಆ ಪುರುಷನು ಸರ್ವತೇಜಸ್ಸನ್ನೂ ಮೀರಿ ಅದಕ್ಕೆ ಕಾರಣವೂ ಸಹಾಯಕನೂ ಆಗಿರುವನೆಂದು ಈ ವಾಕ್ಯವು ತಿಳಿಸುತ್ತದೆ; ಅಂಥ ತೇಜಸ್ಸು ಪರಬ್ರಹ್ಮನ ಅಸಾಧಾರಣ-ಲಕ್ಷಣವು: 'ಅಲ್ಲಿ ಸೂರ್ಯನಾಗಲಿ ಚಂದ್ರನಾಗಲಿ ಮಿಂಚುಗಳಾಗಲಿ ಪ್ರಕಾಶಿಸುವುದಿಲ್ಲ; ಈ ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುದು; ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು' (ಕ. ಉ. ೨. ೫. ೧೫). ಎಲ್ಲೆಲ್ಲಿಯೂ ಶ್ರುತಿಗಳು ಪರಂಜ್ಯೋತಿಷ್ಟ್ವವನ್ನು ಪರಬ್ರಹ್ಮನಿಗೆ ಹೇಳುತ್ತವೆ.[1] ಆದುದರಿಂದ ಅಂಗುಷ್ಠ-ಪ್ರಮಿತನಾದವನು ಪರಬ್ರಹ್ಮನೇ.

ದ್ವೈ.—ಹೃದಯದಲ್ಲಿರುವ ಜ್ಯೋತಿಯು ಪರಮಾತ್ಮನೇ ಎಂದು ಹೇಳಿದ್ದಾಯಿತು; ಆದರೆ 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಬುದ್ಧಿಯಲ್ಲಿರುವ ಜ್ಯೋತಿಯೂ ಆದ ಪುರುಷನು ...ಅವನು ಎರಡು ಲೋಕಗಳಲ್ಲಿಯೂ ಸಂಚರಿಸುತ್ತಾನೆ'[2] (ಬೃ. ಉ. ೪. ೩. ೭) ಎಂದೂ ಹೇಳಿದೆ. ಈ ವಾಕ್ಯದಿಂದ ಇವನು ಜೀವನಿರಬಹುದೊ ಎಂಬ ಸಂಶಯವುಂಟಾಗುತ್ತದೆ; ಇದನ್ನು ಪರಿಹರಿಸಲು ಜ್ಯೋತಿಃಶಬ್ದವಾಚ್ಯನು ಪರಬ್ರಹ್ಮನೇ ಎಂದು ಸೂತ್ರಕಾರರು ಹೇಳುತ್ತಾರೆ. 'ವಿಷ್ಣುವೇ ಜ್ಯೋತಿಯು ವಿಷ್ಣುವೇ ಬ್ರಹ್ಮನು, ವಿಷ್ಣುವೇ ಆತ್ಮನು, ವಿಷ್ಣುವೇ ಬಲವು, ವಿಷ್ಣುವೇ ಯಶಸ್ಸು, ವಿಷ್ಣುವೇ ಆನಂದ' ಎಂದು ಚತುರ್ವೇದಶಿಖೆಯಲ್ಲಿ ಹೇಳಿದೆ.

---

[1] ಪರಜ್ಯೋತಿಷ್ಟ್ವಂ ಚ ಸರ್ವತ್ರ ಪರಸ್ಯ ಬ್ರಹ್ಮಣಃ ಶ್ರೂಯತೇ (ಶ್ರೀಭಾಷ್ಯ) ಛಾಂ. ಉ. ೮ ೧೨. ೩ನ್ನೂ ಬೃ ಉ. ೪. ೪. ೧೬ನ್ನೂ ಛಾಂ. ಉ. ೩. ೧೩. ೭ನ್ನೂ ನೋಡಿ.

[2] ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ; ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ।

# ೧೨. ಅರ್ಥಾಂತರತ್ವವ್ಯಪದೇಶಾಧಿಕರಣ*

**ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ॥ ೪೧ ॥**

೪೧. ಆಕಾಶವು (ಬ್ರಹ್ಮವೇ), ಏಕೆಂದರೆ ಅರ್ಥಾಂತರತ್ವವೇ ಮುಂತಾದುದನ್ನು (ಎಂದರೆ ನಾಮರೂಪಗಳಿಗಿಂತ ಭಿನ್ನವು ಎಂದು) ಹೇಳಿದೆ.

ಆಕಾಶವೆಂಬ ಹೆಸರಿನಿಂದ ಪ್ರಸಿದ್ಧವಾದ (ಬ್ರಹ್ಮವು) ನಾಮರೂಪಗಳನ್ನು ಅಭಿವ್ಯಕ್ತಪಡಿಸುತ್ತದೆ ನಾಮರೂಪಗಳು ಯಾವುದರಲ್ಲಿ ಇವೆಯೊ ಅದು ಬ್ರಹ್ಮವು ಅದು ಅಮೃತವು, ಅದು ಆತ್ಮನು'[1] (ಛಾಂ: ಉ ೮ ೧೪ ೧) ಎಂಬುದು ವಿಷಯವಾಕ್ಯ. ಇಲ್ಲಿ ಆಕಾಶ-ಶಬ್ದವು ಪರಬ್ರಹ್ಮವನ್ನು ಸೂಚಿಸುತ್ತದೆಯೊ ಅಥವಾ ಭೂತಾಕಾಶವನ್ನು ಸೂಚಿಸುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಭೂತಾಕಾಶವನ್ನು ಗ್ರಹಿಸುವುದೇ ಯುಕ್ತವು, ಏಕೆಂದರೆ ಇದು ರೂಢಿಯಲ್ಲಿರುವ ಅರ್ಥ ಎರಡನೆಯದಾಗಿ ನಾಮರೂಪಗಳ ಅಭಿವ್ಯಕ್ತಿಯನ್ನು ಆಕಾಶಕ್ಕೆ ಹೊಂದಿಸಬಹುದು, ಏಕೆಂದರೆ ಆಕಾಶವು ಎಲ್ಲ ವಸ್ತುಗಳಿಗೂ ಅವಕಾಶವನ್ನು ಕೊಡುತ್ತದೆ ಇದಲ್ಲದೆ ಸ್ರಷ್ಟೃತ್ವವೇ ಮೊದಲಾದ ಬ್ರಹ್ಮಲಿಂಗವು ಈ ವಾಕ್ಯದಲ್ಲಿಲ್ಲ

**ಸಿದ್ಧಾಂತಿ**—ಆಕಾಶವು ಪರಬ್ರಹ್ಮವನ್ನೇ ಸೂಚಿಸುತ್ತದೆ, ಏಕಂದರೆ ಇದು ನಾಮರೂಪಗಳನ್ನೆಲ್ಲ ಒಳಕೊಂಡಿದೆ ನಾಮರೂಪಗಳಿಗಿಂತ ಭಿನ್ನವಾದ ವಸ್ತುವೆಂದರೆ ಬ್ರಹ್ಮವೊಂದೇ, ಏಕಂದರೆ ಕಾರ್ಯಸಮೂಹವೆಲ್ಲ ನಾಮರೂಪಗಳಿಂದಲೇ ವ್ಯಕ್ತವಾಗಿದೆ[2] ನಾಮರೂಪಗಳನ್ನು ನಿರಂಕುಶವಾಗಿ ವ್ಯಕ್ತಮಾಡುವ ಶಕ್ತಿಯು ಬ್ರಹ್ಮಕ್ಕೆ ಸಂಭವಿಸುತ್ತದೆ. 'ಈ ಜೀವಾತ್ಮನ ರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸುತ್ತೇನೆ'[3] (ಛಾಂ. ಉ ೬. ೩. ೨) ಎಂಬ ವಾಕ್ಯವು ಬ್ರಹ್ಮವೇ ಜೀವರೂಪದಿಂದ ನಾಮರೂಪಗಳನ್ನು ವ್ಯಕ್ತಮಾಡುತ್ತದೆ ಎಂದು ತಿಳಿಸುತ್ತದೆ ಇಲ್ಲಿ ವಿವಕ್ಷಿತವಾಗಿರುವುದು ಜೀವ-ಪರಮಾತ್ಮರ ಅಭೇದವೇ ಹೊರತು ಜೀವನಿಗೂ ನಾಮರೂಪಗಳನ್ನು ವ್ಯಕ್ತಪಡಿಸುವ ಶಕ್ತಿಯಿದೆಯೆಂದು ತಿಳಿಸುವುದಕ್ಕಲ್ಲ. ವಾಕ್ಯದಲ್ಲಿರುವ 'ಅದು ಬ್ರಹ್ಮವು, ಅದು ಅಮೃತವು, ಅದು ಆತ್ಮನು' ಎಂಬ ಶಬ್ದಗಳು ಬ್ರಹ್ಮವನ್ನೇ ಸೂಚಿಸುತ್ತವೆ

---

* ಇದನ್ನು ಮಧ್ವಭಾಷ್ಯದಲ್ಲಿ ಆಕಾಶಾಧಿಕರಣ ಎಂದು ಕರೆದಿದೆ

1 ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ।

2 ನ ಚ ಬ್ರಹ್ಮಣೋಽನ್ಯನ್ನಾಮರೂಪಾಭ್ಯಾಮರ್ಥಾಂತರಂ ಸಂಭವತಿ, ಸರ್ವಸ್ಯ ವಿಕಾರಜಾತಸ್ಯ ನಾಮರೂಪಾಭ್ಯಾಮೇವ ವ್ಯಾಕೃತತ್ವಾತ್ (ಸೂ ಭಾ )

3 ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ।

ವಿ.—ಇಲ್ಲಿ (ಛಾಂ. ಉ. ೮. ೧೪. ೧) ಆಕಾಶ-ಶಬ್ದವು ಪರಮಾತ್ಮನನ್ನು ಸೂಚಿಸುತ್ತದೆಯೊ ಅಥವಾ ಮುಕ್ತಾತ್ಮನನ್ನು ಸೂಚಿಸುತ್ತದೆಯೊ ?—ಎಂಬುದು ಸಂಶಯ. ಮುಕ್ತಾತ್ಮನನ್ನು—ಎಂಬುದು ಪೂರ್ವಪಕ್ಷ; ಏಕೆಂದರೆ ಹಿಂದಿನ ಖಂಡದಲ್ಲಿ ಮುಕ್ತಾತ್ಮನೇ ವಿಷಯನೆಂದು ಹೇಳಿದೆ: 'ಕುದುರೆಯು ತನ್ನ ರೋಮಗಳನ್ನು ಒದರುವಂತೆ ಪಾಪವನ್ನು ಹೋಗಲಾಡಿಸಿಕೊಂಡು ರಾಹುವಿನಿಂದ ಮುಕ್ತನಾದ ಚಂದ್ರನಂತೆ ಶರೀರದಿಂದ ಬಿಡಿಸಿಕೊಂಡು ಕೃತಕೃತ್ಯನಾಗಿ ನಿತ್ಯವಾದ ಬ್ರಹ್ಮಲೋಕವನ್ನು ಹೊಂದುತ್ತೇನೆ' (ಛಾಂ. ಉ. ೮. ೧೩. ೧).

ಆಕಾಶ-ಶಬ್ದವಾಚ್ಯನು ಪರಮಾತ್ಮನೇ ಎಂಬುದು ಸಿದ್ಧಾಂತ; ಏಕೆಂದರೆ ಶ್ರುತಿಯು ಜೀವಾತ್ಮನಿಗಿಂತ ಬೇರೆಯಾದವನನ್ನೇ ಹೇಳುತ್ತದೆ. ನಾಮ-ರೂಪಗಳ ನಿರ್ವಾಹಕತ್ವವು ಬದ್ಧ-ಜೀವನಿಗಾಗಲಿ ಮುಕ್ತಾತ್ಮನಿಗಾಗಲಿ ಇರುವುದಿಲ್ಲ. ಬದ್ಧಾವಸ್ಥೆಯಲ್ಲಿರುವ ಜೀವನು ಕರ್ಮವಶನಾಗಿ ತಾನೇ ನಾಮ-ರೂಪಗಳನ್ನು ಹೊಂದುತ್ತಾನೆ; ಮುಕ್ತಾವಸ್ಥೆಯಲ್ಲಿ ಅವನಿಗೆ ಜಗದ್ವ್ಯಾಪಾರವೇ ಇಲ್ಲವೆಂದು ಸೂತ್ರಕಾರರು ಮುಂದೆ (४. ४. ೧೭) ಹೇಳುತ್ತಾರೆ. ಆದುದರಿಂದ ಇವರಿಬ್ಬರಿಗೂ ನಾಮ-ರೂಪಗಳನ್ನುಂಟುಮಾಡುವ ಶಕ್ತಿಯಿಲ್ಲ.[1] ಇದಲ್ಲದೆ ಈ ಆಕಾಶ-ಶಬ್ದದಿಂದ ಹಿಂದೆ ಹೇಳಲ್ಪಟ್ಟ (ಛಾಂ. ಉ. ೮. ೧. ೧) ದಹರಾಕಾಶವನ್ನೇ ಈ ಅಧ್ಯಾಯದ ವಿಷಯವೆಂದು ಗುರುತಿಸಬಹುದು.

ದ್ವೈ.—ಇಲ್ಲಿ (ಛಾಂ. ಉ. ೫. ೧४. ೧) ಆಕಾಶ-ಶಬ್ದವಾಚ್ಯನಾದವನು ಹರಿಯೇ, ಅವ್ಯಾಕೃತವಾದ ಆಕಾಶವಲ್ಲ; ಏಕೆಂದರೆ ನಾಮ-ರೂಪಗಳಿಗಿಂತ ಬೇರೆಯಾಗಿ ಅವುಗಳನ್ನು ಪಡೆಯದಿರುವುದು ವಿಷ್ಣುವಿಗೇ ಹೊಂದುತ್ತದೆ; 'ಅಪ್ರಸಿದ್ಧನಾದುದರಿಂದ ನಾಮವಿಲ್ಲದವನು, ಭೂತಗಳಿಂದ ಅಸಂಸ್ಪೃಷ್ಟನಾದುದರಿಂದ ರೂಪವಿಲ್ಲದವನು' ಎಂದು ಬ್ರಹ್ಮಪುರಾಣವು ಹೇಳುತ್ತದೆ.

---

[1] ಬದ್ಧಾವಸ್ಥಃ ಸ್ವಯಂ ಕರ್ಮವಶಾನ್ನಾಮರೂಪೇ ಭಜಮಾನೋ ನ ನಾಮರೂಪೇ ನಿರ್ವೋಢುಂ ಶಕ್ನುಯಾತ್; ಮುಕ್ತಾವಸ್ಥಸ್ಯ ಜಗದ್ವ್ಯಾಪಾರಾಸಂಭವಾತ್ ನ ನಿತರಾಂ ನಾಮರೂಪನಿರ್ವೋಢೃತ್ವಮ್ (ಶ್ರೀಭಾಷ್ಯ).

## ೧೩. ಸುಷುಪ್ತ್ಯುತ್ಕ್ರಾಂತ್ಯಧಿಕರಣ *

**ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ॥ ೪೨ ॥**

೪೨. ಸುಷುಪ್ತಿ, ಉತ್ಕ್ರಾಂತಿ—ಎಂಬ ಎರಡು ಅವಸ್ಥೆಗಳಲ್ಲಿ (ಜೀವನಿಗಿಂತ ಪರಮಾತ್ಮನು) ಭಿನ್ನನು (ಎಂದು ಹೇಳಿರುವುದರಿಂದ ಈ ವಾಕ್ಯವು ಪರಮೇಶ್ವರನನ್ನೇ ತಿಳಿಸುತ್ತದೆ).

ಬೃಹದಾರಣ್ಯಕೋಪನಿಷತ್ತಿನ ಆರನೆಯ ಪ್ರಪಾಠಕದಲ್ಲಿ 'ಆ ಆತ್ಮನು ಯಾರು ?' ಎಂಬ ಪ್ರಶ್ನೆಗೆ ಆತ್ಮಸ್ವರೂಪದ ವಿಷಯದಲ್ಲಿ ಒಂದು ದೀರ್ಘವಾದ ವಿವರಣೆಯನ್ನು ಕೊಟ್ಟಿದೆ : 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಬುದ್ಧಿಯಲ್ಲಿರುವ ಸ್ವಯಂಜ್ಯೋತಿಯೂ ಆದ ಈ ಪುರುಷನು'[1] (ಬೃ. ಉ. ೪. ೩. ೭); ಇದು ಆತ್ಮನ ಸಂಸಾರಿ-ಸ್ವರೂಪವನ್ನು ಅನುವಾದಮಾಡುತ್ತದೆಯೊ ಅಥವಾ ಅಸಂಸಾರಿ-ಸ್ವರೂಪವನ್ನು ಪ್ರತಿಪಾದಿಸುತ್ತದೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಈ ವಾಕ್ಯವು ಸಂಸಾರಿ-ಸ್ವರೂಪವನ್ನು ಮಾತ್ರ ಸೂಚಿಸುತ್ತದೆ ; ಏಕೆಂದರೆ ಉಪಕ್ರಮದಲ್ಲಿಯೂ (ಬೃ. ಉ. ೪. ೩. ೭) ಉಪಸಂಹಾರದಲ್ಲಿಯೂ[2] (ಬೃ. ಉ. ೪. ೪. ೨೨) ಜೀವನ ಲಿಂಗವನ್ನೇ ಹೇಳಿದೆ ; ಮಧ್ಯದಲ್ಲಿಯೂ ಜಾಗರಿತಾದಿ-ಅವಸ್ಥೆಗಳನ್ನು ಹೇಳಿರುವುದರಿಂದ ಜೀವನೇ ಇಲ್ಲಿ ವಿವಕ್ಷಿತನಾಗಿದ್ದಾನೆ.

**ಸಿದ್ಧಾಂತಿ**—ಈ ವಾಕ್ಯವು ಪರಮೇಶ್ವರನನ್ನು ನಿರೂಪಿಸುತ್ತದೆಯೇ ಹೊರತು ಜೀವನನ್ನು ಅನುವಾದಮಾಡುತ್ತಿಲ್ಲ : ಏಕೆಂದರೆ ಸುಷುಪ್ತಿಯಲ್ಲಿಯೂ ಉತ್ಕ್ರಾಂತಿಯಲ್ಲಿಯೂ ಪರಮೇಶ್ವರನನ್ನು ಜೀವನಿಗಿಂತ ಬೇರೆಯಾಗಿ ಹೇಳಿದೆ : 'ಈ ಪುರುಷನು ಪ್ರಾಜ್ಞನಾದ ಆತ್ಮನಿಂದ ಆಲಿಂಗಿತನಾಗಿ ಹೊರಗಿನ ಅಥವಾ ಒಳಗಿನ ಯಾವುದನ್ನೂ ತಿಳಿಯದಿರುವನು'[3] (ಬೃ. ಉ. ೪. ೩. ೨೧) ಎಂಬಲ್ಲಿ ಪುರುಷನೆಂದರೆ ಜೀವನೇ. ಇವನ ವಿಷಯದಲ್ಲಿ ಅರಿಯುವಿಕೆಯನ್ನು ಅಲ್ಲಗಳೆಯಬಹುದು : ಏಕೆಂದರೆ ಜ್ಞಾತೃವಾಗಿರುವುದರಿಂದ ಇವನಿಗೆ ಒಳಗೂ ಹೊರಗೂ ಅರಿಯಲು ಸಾಧ್ಯವಾಗುತ್ತದೆ. ಪ್ರಾಜ್ಞನೆಂದರೆ ಪರಮೇಶ್ವರನೇ ; ಏಕೆಂದರೆ ಸರ್ವಜ್ಞತ್ವ-ಸ್ವರೂಪವಾದ ಪ್ರಜ್ಞೆಗಿಂತ ಇವನು ಯಾವಾ

---

* ಶ್ರೀಭಾಷ್ಯದ ಪ್ರಕಾರ ಈ ಅಧಿಕರಣಕ್ಕೆ ಸೇರಿದ ಎರಡು ಸೂತ್ರಗಳೂ ಹಿಂದಿನ ಅಧಿಕರಣಕ್ಕೇ ಸೇರಿವೆ. ಮಧ್ವಭಾಷ್ಯದಲ್ಲಿ ಈ ಅಧಿಕರಣವನ್ನು ಸುಷುಪ್ತ್ಯಧಿಕರಣ ಎಂದು ಕರೆದಿದೆ.

[1] ಕತಮ ಆತ್ಮೇತಿ ; ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ।

[2] ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ।

[3] ಅಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ. ನಾಂತರಮ್ ।

ಗಲೂ ಬೇರೆಯಾಗಿರುವುದಿಲ್ಲ ಹೀಗೆಯೇ ಉತ್ಕ್ರಾಂತಿಯನ್ನು ತಿಳಿಸುವ ವಾಕ್ಯವೂ ಪರಮೇಶ್ವರನು ಜೀವನಿಗಿಂತ ಭಿನ್ನನೆಂದು ತಿಳಿಸುತ್ತದೆ. 'ಈ ಶಾರೀರನು ಪರಮಾತ್ಮನಿಂದ ಅಧಿಷ್ಠಿತನಾಗಿ ಸಂಕಟಪಡುತ್ತ ಹೋಗುತ್ತಾನೆ'[1] (ಬೃ. ಉ. ೪. ೩. ೩೫) ಎಂಬಲ್ಲಿಯೂ ಶಾರೀರನೆಂದರೆ ಶರೀರಕ್ಕೆ ಒಡೆಯನಾದ ಜೀವನು ; ಪ್ರಾಜ್ಞನು ಪರಮೇಶ್ವರನೇ.

ಉಪಕ್ರಮವಾಕ್ಯದಲ್ಲಿ ಸಂಸಾರಿ-ಸ್ವರೂಪವು ವಿವಕ್ಷಿತವಾಗಿಲ್ಲ ; ಈ ವಾಕ್ಯವು ಮೊದಲೇ ತಿಳಿದಿರುವ ಸಂಸಾರಿ-ಸ್ವರೂಪವನ್ನು ಅನುವಾದಮಾಡುತ್ತ ಜೀವನಿಗೂ ಪರಬ್ರಹ್ಮಕ್ಕೂ ಇರುವ ಐಕ್ಯವನ್ನು ಹೇಳುತ್ತದೆ. ಹೀಗೆಯೇ ಉಪಸಂಹಾರ ವಾಕ್ಯದ ಅರ್ಥವನ್ನೂ ತಿಳಿದುಕೊಳ್ಳಬೇಕು. ಮಧ್ಯದಲ್ಲಿ ಜಾಗರಿತಾದಿ-ಅವಸ್ಥೆಗಳನ್ನು ಹೇಳುವ ವಾಕ್ಯವು ಜೀವನ ಅವಸ್ಥೆಗಳನ್ನಾಗಲಿ ಸಂಸಾರಿತ್ವವನ್ನಾಗಲಿ ತಿಳಿಸಲು ಹೊರಟಿಲ್ಲ, ಅವನು ಅವಸ್ಥಾರಹಿತನೆಂದೂ ಅಸಂಸಾರಿಯೆಂದೂ ತಿಳಿಸಲು ಹೊರಟಿದೆ[2]

**ವಿ.**—ಜೀವಾತ್ಮನಿಗಿಂತ ಭಿನ್ನನಾದ ಆತ್ಮನಿಲ್ಲ ; ಏಕೆಂದರೆ ಶ್ರುತಿಯು ದ್ವೈತವನ್ನು ನಿರಾಕರಿಸಿ ಐಕ್ಯವನ್ನು ಉಪದೇಶಿಸಿರುತ್ತದೆ. ಪರಮಾತ್ಮ, ಪರಬ್ರಹ್ಮ, ಪರಮೇಶ್ವರ ಎಂಬ ಶಬ್ದಗಳು ಮೋಕ್ಷವನ್ನು ಪಡೆದಿರುವ ಜೀವನ ಹೆಸರುಗಳು. ಮುಕ್ತಿಹೊಂದುತ್ತಿರುವ ಜೀವನನ್ನು ಬಿಟ್ಟರೆ ಹೊಂದಬೇಕಾದ ಬ್ರಹ್ಮಲೋಕವು ಇರುವುದಿಲ್ಲ. ಆದುದರಿಂದ ನಾಮ-ರೂಪಗಳನ್ನು ನಿರ್ವಹಿಸುತ್ತಿರುವ ಆಕಾಶವು ಜೀವನೇ ಆಗಿರಬೇಕು—ಎಂಬ ಪೂರ್ವಪಕ್ಷಕ್ಕೆ ಈ ಸೂತ್ರವು ಉತ್ತರವಾಗಿದೆ. ಸುಷುಪ್ತಿಯಲ್ಲಿಯೂ (ಬೃ. ಉ. ೪. ೩. ೨೧) ಉತ್ಕ್ರಾಂತಿಯಲ್ಲಿಯೂ (ಬೃ. ಉ. ೪. ೩. ೩೫) ಜೀವನಿಗೆ ಜ್ಞಾನವಿರುವುದಿಲ್ಲ. ಜ್ಞಾನರಹಿತನಾದ ಜೀವನು ಸುಷುಪ್ತಿಯಲ್ಲಾಗಲಿ ಉತ್ಕ್ರಾಂತಿಯಲ್ಲಾಗಲಿ ಸರ್ವಜ್ಞನಾದ ತನ್ನಿಂದ ಆಲಿಂಗಿಸಲ್ಪಡಲು ಅಥವಾ ಅಧಿಷ್ಠಿತನಾಗಲು ಸಾಧ್ಯವಿಲ್ಲ ; ಬೇರೊಬ್ಬ ಜೀವನಿಂದ ಆಲಿಂಗಿಸಲ್ಪಡಲೂ ಸಾಧ್ಯವಿಲ್ಲ ; ಏಕೆಂದರೆ ಬೇರೊಬ್ಬ ಜೀವನಿಗೆ ಸರ್ವಜ್ಞತ್ವವಿರುವುದಿಲ್ಲ.[3]

**ದ್ವೈ.**—'ಸುಷುಪ್ತಿ-ಉತ್ಕ್ರಾಂತಿಗಳಲ್ಲಿ (ಜೀವ-ಪರಮಾತ್ಮರ) ಭೇದವನ್ನು ಹೇಳಿರುವುದರಿಂದ (ಸ್ವಪ್ನವನ್ನು ನೋಡುವವನು ಬ್ರಹ್ಮನೇ)' ಎಂಬುದು ಸೂತ್ರಾರ್ಥ.

ಶ್ರುತಿಯು (ಬೃ. ಉ. ೪. ೩. ೨೧, ೪. ೩. ೩೫) ಜೀವ-ಪರಮಾತ್ಮರಿಗೆ ಭೇದವನ್ನು ಹೇಳುತ್ತದೆ. ಪರಮಾತ್ಮನು ಅಸಂಗನು, ಜೀವನಲ್ಲ. ಸ್ವಪ್ನಾದಿಗಳನ್ನು ನೋಡುವುದು ಪರಮೇಶ್ವರನಿಗೇ ಹೊಂದುತ್ತದೆ ; ಏಕೆಂದರೆ ಅವನು ಸರ್ವಜ್ಞನು.[4]

---

[1] ಅಯಂ ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾನ್ವಾರೂಢ ಉತ್ಸರ್ಜನ್ ಯಾತಿ ।

[2] ಬೃ. ಉ. ೪. ೩. ೧೪. ೧೬ ನೋಡಿ.

[3] ನ ಚ ಸ್ವಪತ ಉತ್ಕ್ರಾಮತೋ ವಾಽಸ್ಯ ಕಿಂಚಿಜ್ಞಸ್ಯ ತದಾನೀಮೇವ ಸ್ವೇನೈವ ಸರ್ವಜ್ಞೇನ ಸತಾ ಪರಿಷ್ವಂಗಾನ್ವಾರೋಹೌ ಸಂಭವತಃ ; ನ ಚ ಕ್ಷೇತ್ರಜ್ಞಾಂತರೇಣ, ತಸ್ಯಾಪಿ ಸರ್ವಜ್ಞತ್ವಾಸಂಭವಾತ್ (ಶ್ರೀಭಾಷ್ಯ).

[4] ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ ತಸ್ಯೈವ ಯುಜ್ಯತೇ (ಮ. ಭಾ.).

## ಪತ್ಯಾದಿಶಬ್ದೇಭ್ಯಃ * ॥ ೪೩ ॥

೪೩ ಪತಿ ಮೊದಲಾದ ಶಬ್ದಗಳಿಂದ (ಅಸಂಸಾರಿ-ಸ್ವರೂಪವನ್ನೇ ಪ್ರತಿಪಾದಿಸಿದೆ).

ಕೆಲವು ಶಬ್ದಗಳು ಅಸಂಸಾರಿ-ಸ್ವರೂಪವನ್ನು ಪ್ರತಿಪಾದಿಸುತ್ತವೆ, ಮತ್ತೆ ಕೆಲವು ಸಂಸಾರಿ-ಸ್ವಭಾವವನ್ನು ನಿರಾಕರಿಸುತ್ತವೆ 'ಅವನು ಎಲ್ಲರ ನಿಯಾಮಕನು' ಪ್ರಭುವು ಅಧಿಪತಿಯು'[1] (ಬೃ ಉ ೪ ೪ ೨೨) ಎಂಬೀ ವಾಕ್ಯವು ಮೊದಲನೆಯ ಜಾತಿಗೆ ಸೇರಿದ್ದು 'ಅವನು ಶಾಸ್ತ್ರವಿಹಿತವಾದ ಕರ್ಮದಿಂದ ವರ್ಧಿಸುವುದಿಲ್ಲ, ಶಾಸ್ತ್ರಪ್ರತಿಷಿದ್ಧ ಕರ್ಮದಿಂದ ಅಲ್ಪನಾಗುವುದಿಲ್ಲ'[2] (ಬೃ ಉ ೪ ೪ ೨೨) ಎಂಬೀ ವಾಕ್ಯವು ಎರಡನೆಯ ಜಾತಿಗೆ ಸೇರಿದ್ದು ಆದ್ದರಿಂದ ಅಸಂಸಾರಿಯಾದ ಪರಮೇಶ್ವರನನ್ನೇ ಇಲ್ಲಿ ಹೇಳಿದೆ.

**ವಿ.—ಸರ್ವಸ್ಯಾಧಿಪತಿಃ, ಸರ್ವಸ್ಯ ವಶೀ, ಸರ್ವಸ್ಯೇಶಾನಃ**—ಇವೇ ಮೊದಲಾದ ಶಬ್ದಗಳು ಪರಮೇಶ್ವರನನ್ನೇ ಸೂಚಿಸುತ್ತವೆ ಪತಿತ್ವ, ಜಗದ್ವಿಧರಣತ್ವ ಸರ್ವೇಶ್ವರತ್ವ ಮೊದಲಾದ ಗುಣಗಳು ಮುಕ್ತಾತ್ಮನಿಗೂ ಸಂಭವಿಸುವುದಿಲ್ಲ ಆದ್ದರಿಂದ ನಾಮ-ರೂಪಗಳನ್ನು ನಿರ್ವಹಿಸುವ ಆಕಾಶವು ಜೀವನಿಗಿಂತ ಭಿನ್ನವಾದುದು

ಚಿತ್-ಅಚಿತ್-ವಸ್ತುಗಳು ಬ್ರಹ್ಮನ ಕಾರ್ಯವಾಗಿರುವುದರಿಂದ ಅವನು ಅವುಗಳ ಆತ್ಮನು—ಎಂಬುದೇ ಐಕ್ಯೋಪದೇಶದ[3] ತಾತ್ಪರ್ಯ , ದ್ವೈತನಿಷೇಧನನ್ನೂ ಹೀಗೆಯೆ ತಿಳಿದುಕೊಳ್ಳಬೇಕು

**ದ್ವೈ.**—'ಇದು ಬ್ರಾಹ್ಮಣನ ನಿತ್ಯವಾದ ಮಹಿಮೆ'[4] (ಬೃ. ಉ ೪ ೪ ೨೩) ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಾಹ್ಮಣಶಬ್ದವು ವಿಷ್ಣುವನ್ನು ಸೂಚಿಸುತ್ತದೆಯೇ ಹೊರತು ವಿರಿಂಚನನ್ನು ಸೂಚಿಸುವುದಿಲ್ಲ ; ಏಕೆಂದರೆ **ಸರ್ವಸ್ಯಾಧಿಪತಿಃ, ಸರ್ವಸ್ಯೇಶಾನಃ** ಮೊದಲಾದ ಶಬ್ದಗಳು ನಿತ್ಯಮಹಿಮೆಯುಳ್ಳ ವಿಷ್ಣುವನ್ನೇ ಸೂಚಿಸುತ್ತವೆ

---

*ಮಧ್ವಭಾಷ್ಯದಲ್ಲಿ ಈ ಸೂತ್ರವು ಬ್ರಾಹ್ಮಣಾಧಿಕರಣ ಎಂಬ ಹೊಸ ಅಧಿಕರಣದಲ್ಲಿ ಅಂತರ್ಗತವಾಗಿದೆ.

1 ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ।

2 ಸ ನ ಸಾಧುನಾ ಕರ್ಮಣಾ ಭೂಯಾನ್, ನೋ ಏವಾಸಾಧುನಾ ಕನೀಯಾನ್ ।

3 ತತ್ತ್ವಮಸಿ, ಸರ್ವಂ ಖಲ್ವಿದಂ ಬ್ರಹ್ಮ—ಮೊದಲಾದ ಉಪದೇಶಗಳು.

4 ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ।

## ನಾಲ್ಕನೆಯ ಪಾದ

# ೧. ಆನುಮಾನಿಕಾಧಿಕರಣ

[ಸೂ ೧–೭]

**ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀ-ತೇರ್ದರ್ಶಯತಿ ಚ ॥ ೧ ॥**

೧ ಆನುಮಾನಿಕವನ್ನೂ (ಎಂದರೆ ಪ್ರಧಾನವನ್ನೂ) ಕೆಲವರ (ಶಾಖೆಯಲ್ಲಿ ಹೇಳಿದೆ) ಎಂದರೆ, ಇಲ್ಲ (ಎಂದು ಹೇಳುತ್ತೇವೆ), ಏಕೆಂದರೆ (ಕಠ ಶ್ರುತಿಯಲ್ಲಿ ಬರುವ ಅವ್ಯಕ್ತ-ಶಬ್ದವು) ರೂಪಕದಲ್ಲಿ ಹೇಳಿರುವ ಶರೀರ ವನ್ನೇ ಸೂಚಿಸುತ್ತದೆ, (ಶ್ರುತಿಯೂ ಇದನ್ನೇ) ತಿಳಿಸುತ್ತದೆ.

ಮೊದಲು **ಜನ್ಮಾದ್ಯಸ್ಯ ಯತಃ** (೧ ೧ ೨) ಎಂದು ಬ್ರಹ್ಮದ ಲಕ್ಷಣವನ್ನು ಹೇಳಿದ್ದಾಯಿತು ; ಅನಂತರ ಆ ಲಕ್ಷಣವು ಪ್ರಧಾನಕ್ಕೂ ಹೊಂದಬಹುದೆಂಬ ಪೂರ್ವಪಕ್ಷ ವನ್ನು—ಶಬ್ದಪ್ರಮಾಣವಿಲ್ಲವೆಂಬ ಕಾರಣದಿಂದ—**ಈಕ್ಷತೇರ್ನಾಶಬ್ದಮ್** (೧. ೧ ೫) ಎಂಬಲ್ಲಿ ನಿರಾಕರಿಸಿದ್ದಾಯಿತು ಅನಂತರ ಮುಂದಿನ ಸೂತ್ರಗಳಲ್ಲಿ ವೇದಾಂತವಾಕ್ಯಗಳ ಸಾಮಾನ್ಯ-ತಾತ್ಪರ್ಯವು ಬ್ರಹ್ಮಕಾರಣವಾದದಲ್ಲಿ ಹೊಂದುತ್ತದೆಯೇ ವಿನಾ ಪ್ರಧಾನ ಕಾರಣವಾದದಲ್ಲಿ ಅಲ್ಲ ಎಂದು ತೋರಿಸಿದ್ದಾಯಿತು ಈಗ ಪ್ರಧಾನಕ್ಕೆ ಶಬ್ದಪ್ರಮಾಣ ವಿಲ್ಲವೆಂಬುದು ಸರಿಯಾಗಿ ಸಿದ್ಧವಾಗಿಲ್ಲವೆಂದು ಪೂರ್ವಪಕ್ಷಿಯು ಹೇಳುತ್ತಾನೆ ಕೆಲವು ಶಾಖೆಗಳಲ್ಲಿ ಪ್ರಧಾನಪರವೆಂದು ಕಂಡುಬರುವ ಶಬ್ದಗಳಿಗೂ ಕೂಡ ಬೇರೆ ಅರ್ಥವಿದೆ ಯೆಂದು ಈ ಪಾದದಲ್ಲಿ ಹೇಳಲಾಗುತ್ತದೆ

**ಪೂರ್ವಪಕ್ಷಿ** *—ಪ್ರಧಾನಕ್ಕೂ ಶಬ್ದಪ್ರಮಾಣವಿದೆ, ಏಕೆಂದರೆ ಕೆಲವು ಶಾಖೆ ಗಳಲ್ಲಿ ಪ್ರಧಾನವನ್ನು ಹೇಳಿರುವುದು ಕಂಡುಬರುತ್ತದೆ—'ಮಹತ್ತಿಗಿಂತ ಅವ್ಯಕ್ತವು ಶ್ರೇಷ್ಠ ವಾದುದು, ಅವ್ಯಕ್ತಕ್ಕಿಂತ ಪುರುಷನು ಶ್ರೇಷ್ಠನು' (ಕ ಉ ೧ ೩ ೧೧) ಎಂದು ಕಾಠಕದಲ್ಲಿದೆ ಸಾಂಖ್ಯಸ್ಮೃತಿಯಲ್ಲಿ ಯಾವ ಹೆಸರಿನಿಂದ ಯಾವ ಕ್ರಮದಲ್ಲಿ ಮಹತ್-ಅವ್ಯಕ್ತ-ಪುರುಷರು ಪ್ರಸಿದ್ಧರಾಗಿರುವರೊ ಅದೇ ಹೆಸರಿನಿಂದ ಅದೇ ಕ್ರಮದಲ್ಲಿ ಇಲ್ಲಿಯೂ ಹೇಳಿರುವ ಕಾರಣ ಅವರನ್ನೇ ಇಲ್ಲಿ ಗುರುತಿಸಬಹುದು ಶಬ್ದವೇ ಮೊದಲಾದವು ಇಲ್ಲದ್ದರಿಂದ ವ್ಯಕ್ತವಲ್ಲದ್ದು ಅವ್ಯಕ್ತವು, ಈ ಅವ್ಯಕ್ತವಾದ ಪ್ರಧಾನವೇ ಸಾಂಖ್ಯಸ್ಮೃತಿ ಯಲ್ಲಿ ಪ್ರಸಿದ್ಧವಾಗಿದೆ ಶ್ರುತಿ-ಸ್ಮೃತಿ-ನ್ಯಾಯಗಳಿಂದ ಪ್ರಸಿದ್ಧವಾಗಿರುವ ಪ್ರಧಾನವೇ ಜಗತ್ಕಾರಣವು.

---

* ಈ ಪಾದದಲ್ಲಿ ಪೂರ್ವಪಕ್ಷವೆಲ್ಲ ಸಾಂಖ್ಯರದೇ ಆಗಿದೆ.

**ಸಿದ್ಧಾಂತಿ**—ತ್ರಿಗುಣವುಳ್ಳ ಸ್ವತಂತ್ರ-ಕಾರಣವೆನಿಸಿದ ಪ್ರಧಾನವು ಇಲ್ಲಿ ಕಂಡುಬರುವುದಿಲ್ಲ; ಅವ್ಯಕ್ತವೆಂಬ ಶಬ್ದವೊಂದೇ ಇಲ್ಲಿ ಕಂಡುಬರುತ್ತದೆ. ರಥ ರೂಪಕದಲ್ಲಿ ಹೇಳಿರುವ ಶರೀರವನ್ನೇ ಅವ್ಯಕ್ತ-ಶಬ್ದದಿಂದ ಗ್ರಹಿಸಬೇಕು; ಇದು ಪ್ರಕರಣದಿಂದಲೂ ಪರಿಶೇಷದಿಂದಲೂ ತಿಳಿದುಬರುತ್ತದೆ. ಈ ವಾಕ್ಯಕ್ಕೆ ಸ್ವಲ್ಪ ಹಿಂದೆ ಮತ್ತೊಂದು ವಾಕ್ಯದಲ್ಲಿ ಆತ್ಮ-ಶರೀರಾದಿಗಳನ್ನು ರಥಿ-ರಥ ಎಂಬ ರೂಪಕದ ಮೂಲಕ ಹೇಳಿದೆ: 'ಆತ್ಮನನ್ನು ರಥಿಯೆಂದೂ ಶರೀರವನ್ನು ರಥವೆಂದೂ ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಕಡಿವಾಣವೆಂದೂ ತಿಳಿ. ಇಂದ್ರಿಯಗಳನ್ನು ಕುದುರೆಗಳೆಂದು ಹೇಳುತ್ತಾರೆ, ವಿಷಯಗಳನ್ನು ಅವುಗಳ ಮಾರ್ಗಗಳೆಂದು ಹೇಳುತ್ತಾರೆ; ಶರೀರ ಇಂದ್ರಿಯ ಮನಸ್ಸು—ಇವುಗಳಿಂದ ಕೂಡಿದ (ಆತ್ಮನನ್ನು) ಭೋಕ್ತೃ ಎಂದು ವಿವೇಕಿಗಳು ಹೇಳುತ್ತಾರೆ'[1] (ಕ. ಉ. ೧ ३. ३. ४); ಇಲ್ಲಿ ಹೇಳಿರುವುದೆಲ್ಲ ಮುಂದೆ ಬರುವ ವಿಷಯವಾಕ್ಯದಲ್ಲಿ ಕಂಡುಬರುತ್ತದೆ: 'ಇಂದ್ರಿಯಗಳಿಗಿಂತ ವಿಷಯಗಳು ಶ್ರೇಷ್ಠವಾದುವು, ವಿಷಯಗಳಿಗಿಂತ ಮನಸ್ಸು ಶ್ರೇಷ್ಠವಾದುದು, ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವಾದುದು, ಬುದ್ಧಿಗಿಂತ ಮಹತ್ ಎಂಬ ಆತ್ಮನು ಶ್ರೇಷ್ಠನು. ಮಹತ್ತಿಗಿಂತ ಅವ್ಯಕ್ತವು ಶ್ರೇಷ್ಠವಾದುದು, ಅವ್ಯಕ್ತಕ್ಕಿಂತ ಪುರುಷನು ಶ್ರೇಷ್ಠನು, ಪುರುಷನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ; ಅದೇ ಕೊನೆ, ಅದೇ ಶ್ರೇಷ್ಠವಾದ ಗತಿ'[2] (ಕ. ಉ. ೧. ३. ೧೦. ೧೧).

ಈ ಎರಡು ವಾಕ್ಯಗಳನ್ನು ಹೋಲಿಸಿ ನೋಡಬಹುದು: ಇಂದ್ರಿಯಗಳು ಮನಸ್ಸು ಬುದ್ಧಿ—ಇವು ಈ ಎರಡು ವಾಕ್ಯಗಳಲ್ಲಿಯೂ ಒಂದೇ ಹೆಸರಿನಿಂದ ಹೇಳಲ್ಪಟ್ಟಿವೆ; ಪೂರ್ವವಾಕ್ಯದಲ್ಲಿ ಆತ್ಮನೆನಿಸಿರುವವನೇ ಉತ್ತರವಾಕ್ಯದಲ್ಲಿ ಪುರುಷನೆನಿಸಿದ್ದಾನೆ; ಪೂರ್ವವಾಕ್ಯದಲ್ಲಿ ಹೇಳಿರುವ ಬುದ್ಧಿಯೇ ಉತ್ತರವಾಕ್ಯದಲ್ಲಿ ಮಹತ್-ಆತ್ಮವೆನಿಸಿದೆ; ಇದಕ್ಕೆ ಹಿರಣ್ಯಗರ್ಭನ ಬುದ್ಧಿ ಎಂದರ್ಥ, ಇದು ಎಲ್ಲ ಬುದ್ಧಿಗಳಿಗೂ ಆಶ್ರಯವಾಗಿರುತ್ತದೆ. ಇನ್ನು ಉಳಿದಿರುವುದು ಪೂರ್ವವಾಕ್ಯದಲ್ಲಿ ಹೇಳಿರುವ ಶರೀರ ಮತ್ತು ಉತ್ತರವಾಕ್ಯದಲ್ಲಿ ಹೇಳಿರುವ ಅವ್ಯಕ್ತ; ಆದುದರಿಂದ ಅವ್ಯಕ್ತವೆಂದರೆ ಶರೀರವೇ ಹೊರತು ಸಾಂಖ್ಯರ ಪ್ರಧಾನವಲ್ಲ.

---

[1] ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥
ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥

[2] ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ಪರಃ ॥
ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥

ಶರೀರ ಇಂದ್ರಿಯ ಮನಸ್ಸು ಬುದ್ಧಿ ವಿಷಯಗಳು ವೇದನೆಗಳು—ಇವುಗಳಿಂದ ಕೂಡಿರುವ ಮತ್ತು ಅವಿದ್ಯೆಗೆ ವಶನಾಗಿರುವ ಜೀವನ ಶರೀರಾದಿಗಳನ್ನು ರಥವೇ ಮೊದಲಾದುವಾಗಿ ಕಲ್ಪಿಸಿ, ಸಂಸಾರ-ಮೋಕ್ಷಗಳ ಗತಿಯನ್ನು ನಿರೂಪಿಸುವುದರ ಮೂಲಕ ಪ್ರತ್ಯಗಾತ್ಮ ಬ್ರಹ್ಮರ ಐಕ್ಯವನ್ನು ನಿರ್ಧರಿಸುವುದೇ—ಈ ವಾಕ್ಯಗಳ ಉದ್ದೇಶವಾಗಿರುತ್ತದೆ.[1] ರಥ-ರೂಪಕದಿಂದ ಜೀವನ ಗುರಿಯು ವಿಷ್ಣುವಿನ ಪರಮಪದವೆಂಬುದು (ಕ. ಉ. ೧ ಇ. ೧೨) ತಿಳಿದುಬರುತ್ತದೆ. ಇದನ್ನು ಯೋಗದ ಮೂಲಕ ಸೇರಬೇಕಾಗಿರುತ್ತದೆ. ಆದುದರಿಂದ ಸಾಂಖ್ಯರು ಕಲ್ಪಿಸಿರುವ ಪ್ರಧಾನಕ್ಕೆ ಇಲ್ಲಿ ಅವಕಾಶವಿಲ್ಲ.

ವಿ.—ಕಠವಲ್ಲಿಯಲ್ಲಿ (೧. ಇ. ೧೧) ಬಂದಿರುವ ಅವ್ಯಕ್ತ-ಶಬ್ದವು ಕಾಪಿಲತಂತ್ರದಲ್ಲಿ ಸಿದ್ಧವಾದ ಮತ್ತು ಬ್ರಹ್ಮನನ್ನು ಆತ್ಮನನ್ನಾಗಿ ಹೊಂದಿರದ ಪ್ರಧಾನವನ್ನು ಸೂಚಿಸುತ್ತದೆ—ಎಂಬುದು ಪೂರ್ವಪಕ್ಷ. ಅವ್ಯಕ್ತ-ಶಬ್ದವು ಅಬ್ರಹ್ಮಾತ್ಮಕವಾದ ಪ್ರಧಾನವನ್ನು ಸೂಚಿಸುವುದಿಲ್ಲ, ರಥ-ರೂಪಿತವಾದ ಶರೀರವನ್ನು ಸೂಚಿಸುತ್ತದೆ—ಎಂಬುದು ಸಿದ್ಧಾಂತ. ಹಯ-ರೂಪಿತವಾದ ಇಂದ್ರಿಯಗಳಿಗಿಂತ ಮಾರ್ಗರೂಪಿತವಾದ ವಿಷಯಗಳು ಪ್ರಧಾನವಾದುವು; ವಿಷಯಗಳಿಗಿಂತ ಪ್ರಗ್ರಹ-ರೂಪಿತವಾದ ಮನಸ್ಸು ಪ್ರಧಾನವಾದುದು; ಮನಸ್ಸಿಗಿಂತ ಸಾರಥಿ-ರೂಪಿತವಾದ ಬುದ್ಧಿಯು ಪ್ರಧಾನವಾದುದು; ಬುದ್ಧಿಗಿಂತ ರಥಿತ್ವ-ರೂಪಿತನಾದ ಮಹತ್ ಎಂಬ ಆತ್ಮನು ಪ್ರಧಾನನು; ಜೀವಾತ್ಮನು ಕರ್ತೃವಾಗಿರುವುದರಿಂದ ಎಲ್ಲವೂ ಅವನ ಇಚ್ಛೆಯಂತೆ ನಡೆಯುತ್ತದೆ. ಆದುದರಿಂದ ಅವನನ್ನು ಮಹತ್ ಎಂಬ ವಿಶೇಷಣದಿಂದ ಕರೆದಿದೆ; ಮಹತ್-ಆತ್ಮನಿಗಿಂತ ಅವ್ಯಕ್ತವು ಪ್ರಧಾನವಾದುದು. ಅವ್ಯಕ್ತವೆಂದರೆ ರಥ-ರೂಪಿತವಾದ ಶರೀರವು. ಜೀವಾತ್ಮನು ಸಾಧಿಸಬೇಕಾದ ಸಕಲ ಪುರುಷಾರ್ಥಗಳ ಪ್ರವೃತ್ತಿಗಳು ಶರೀರವನ್ನೇ ಆಶ್ರಯಿಸಿರುವುದರಿಂದ ಶರೀರವು ಜೀವಾತ್ಮನಿಗಿಂತ ಪ್ರಧಾನವೆನಿಸಿದೆ.[2] ಅವ್ಯಕ್ತವೆನಿಸಿದ ಶರೀರಕ್ಕಿಂತ ಪುರುಷನು ಪ್ರಧಾನನು; ಈ ಪರಮ ಪುರುಷನೇ ಉಪಾಸಕರಿಗೆ ಉಪಾಸನೆಯನ್ನುಂಟುಮಾಡುತ್ತಾನೆ.[3] ಜೀವಾತ್ಮನ ಕರ್ತೃತ್ವವು ಪರಮಪುರುಷನನ್ನೇ ಅವಲಂಬಿಸಿದೆಯೆಂದು ಮುಂದೆ (೨. ಇ. ೪೧) ಸೂತ್ರಕಾರರೇ ಹೇಳುತ್ತಾರೆ.

ಕಾಪಿಲತಂತ್ರಸಿದ್ಧವಾದ ಪ್ರಧಾನವು ಇಲ್ಲಿ ಕಂಡುಬರುವುದಿಲ್ಲ: ವಿಷಯಗಳು ಇಂದ್ರಿಯಗಳಿಗಿಂತ ಪ್ರಧಾನವಾದುವೆಂದು ಶ್ರುತಿಯು ಹೇಳುತ್ತದೆ; ಶಬ್ದಾದಿ ವಿಷಯಗಳು ಇಂದ್ರಿಯಗಳಿಗೆ ಕಾರಣವೆಂದು ಕಾಪಿಲತಂತ್ರದಲ್ಲಿ ಹೇಳಿಲ್ಲ. ಇದೇ ಕಾರಣದಿಂದ

---

[1] ಶರೀರೇಂದ್ರಿಯಮನೋಬುದ್ಧಿ ವಿಷಯವೇದನಾಸಂಯುಕ್ತಸ್ಯ ಹ್ಯವಿದ್ಯಾವತೋ ಭೋಕ್ತುಃ ಶರೀರಾದೀನಾಂ ರಥಾದಿರೂಪಕಕಲ್ಪನಯಾ ಸಂಸಾರಮೋಕ್ಷಗತಿನಿರೂಪಣೇನ ಪ್ರತ್ಯಗಾತ್ಮ ಬ್ರಹ್ಮಾವಗತಿರಿಹ ವಿವಕ್ಷಿತಾ (ಸೂ. ಭಾ.).

[2] ತಸ್ಮಾದಪಿ ರಥರೂಪಿತಂ ಶರೀರಂ ಪರಮ್, ತದಾಯತ್ತತ್ವಾಜ್ಜೀವಾತ್ಮನಃ ಸಕಲಪುರುಷಾರ್ಥಸಾಧನಪ್ರವೃತ್ತೀನಾಮ್ (ಶ್ರೀಭಾಷ್ಯ).

[3] ಸ ಖಲ್ವಂತರ್ಯಾಮಿತಯಾ ಉಪಾಸನಸ್ಯಾಪಿ ನಿರ್ವರ್ತಕಃ (ಶ್ರೀಭಾಷ್ಯ).

ವಿಷಯಗಳಿಗಿಂತ ಮನಸ್ಸು ಪ್ರಧಾನವೆಂಬುದು ಆ ತಂತ್ರಕ್ಕೆ ಹೊಂದುವುದಿಲ್ಲ 'ಬುದ್ಧಿಗಿಂತ ಪ್ರಧಾನವಾದುದು ಮಹತ್ ಎಂಬ ಆತ್ಮ' ಎಂಬುದು ಆ ಮತಕ್ಕೆ ಹೊಂದುವುದಿಲ್ಲ, ಏಕೆಂದರೆ ಮಹತ್ತೇ ಬುದ್ಧಿಯು, 'ಮಹತ್ತಿಗಿಂತ ಮಹತ್ತಿದೆ' ಎಂಬುದು ಸರಿಯಾಗುವುದಿಲ್ಲ ಮತ್ತೆ ಅವರ ಮತದಲ್ಲಿ ಆತ್ಮನನ್ನು ಮಹತ್ ಎಂದು ಕರೆಯಲಾಗುವುದಿಲ್ಲ ವಿಷಯವಾಕ್ಯದಲ್ಲಿ ಹೇಳಿರುವುದೆಲ್ಲ ಹಿಂದಿನ ರೂಪಕದಲ್ಲಿ ಬಂದಿದ್ದೇ [1]

ಇಂದ್ರಿಯಗಳಿಂದೆ ಪ್ರಾರಂಭಿಸಿ ಮುಂದೆ ಮುಂದೆ ಬರುವುದನ್ನೆಲ್ಲ ವಶಪಡಿಸಿಕೊಳ್ಳಬೇಕಾಗಿದೆ ಪರಮಪುರುಷನನ್ನು ವಶಪಡಿಸಿಕೊಳ್ಳುವುದು ಹೇಗೆ? ಅವನಲ್ಲಿ ಮಾಡುವ ಶರಣಾಗತಿಯಿಂದಲೇ ಅವನು ವಶನಾಗುತ್ತಾನೆ [2] ವಶೀಕಾರದ ಪ್ರಕಾರವನ್ನು ಕ ಉ ೧ ೩ ೧ರಲ್ಲಿ ಹೇಳಿದೆ

**ದ್ವೈ.**—'ಕೆಲವರ ಶಾಖೆಗಳಲ್ಲಿ ಅವ್ಯಕ್ತ-ಜೀವ-ಬುದ್ಧ್ಯಾದಿ-ಶಬ್ದಗಳು ಪ್ರಧಾನಾದಿಗಳನ್ನು ಸೂಚಿಸುತ್ತವೆಂದು ಹೇಳಕೂಡದು, ಶ್ರುತಿಗಳು ತೋರಿಸುವಂತೆ (ಈ ಶಬ್ದಗಳು ಪರಬ್ರಹ್ಮನನ್ನೇ ಸೂಚಿಸುತ್ತವೆ), ಶರೀರದಂತಿರುವ ಪ್ರಧಾನಾದಿಗಳಲ್ಲಿ ಪರಬ್ರಹ್ಮನೇ ನಿಯಾಮಕನಾಗಿರುವುದರಿಂದ ಅವುಗಳಲ್ಲಿ ಅವ್ಯಕ್ತಾದಿ-ಶಬ್ದಗಳ ಪ್ರಯೋಗವು' ಎಂಬುದು ಸೂತ್ರಾರ್ಥ

ಸೂತ್ರದಲ್ಲಿರುವ ಕಪ್ರತ್ಯಯವು ಪ್ರಧಾನದ ತುಚ್ಛತ್ವವನ್ನು ಸೂಚಿಸುತ್ತದೆ,[3] ಇದು ಜಗತ್ಕಾರಣವಾಗಲಾರದು ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಸೂಚಿಸುವ ಅವ್ಯಕ್ತ-ಶಬ್ದವು ಪ್ರಧಾನವನ್ನೂ ತಿಳಿಸುತ್ತದೆ, ಏಕೆಂದರೆ ಪರಮಾತ್ಮನ ಅಧೀನದಲ್ಲಿದ್ದು ಅವನನ್ನೇ ಆಶ್ರಯಿಸಿಕೊಂಡಿರುವ ಪ್ರಧಾನವು ಅವನಂತೆಯೇ ರೂಪವನ್ನು ಪಡೆದಿರುತ್ತದೆ [4] 'ತುಚ್ಛವಾದ ಪ್ರಧಾನದಿಂದ ಅವನು ಆಚ್ಛಾದಿತನಾಗಿದ್ದನು'[5] (ಋ ವೇ ೧೦ ೧೨೯.೩) ಎಂದು ಶ್ರುತಿಯಲ್ಲಿ ಹೇಳಿದೆ ಅವ್ಯಕ್ತಾದಿ-ಶಬ್ದ-ವಾಚ್ಯನು ಪರಬ್ರಹ್ಮನೆಂದು ಸ್ಮೃತಿಯೂ

---

[1] ನ ಚಾತ್ರ ತತ್ತಂತ್ರಸಿದ್ಧಪ್ರಕ್ರಿಯಾಪ್ರತ್ಯಭಿಜ್ಞಾ, ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಇತೀಂದ್ರಿಯೇಭ್ಯೋಽರ್ಥಾನಾಂ ಶಬ್ದಾದೀನಾಂ ಪರತ್ವಕೀರ್ತನಾತ್। ನ ಹಿ ಶಬ್ದಾದಯ ಇಂದ್ರಿಯಾಣಾಂ ಕಾರಣಭೂತಾಸ್ತದ್ದರ್ಶನೇ। ಅರ್ಥೇಭ್ಯಶ್ಚ ಪರಂ ಮನಃ ಇತ್ಯಪಿ ನ ತತ್ತಂತ್ರ-ಸಂಗತಮ್, ಅಕಾರಣತ್ವಾದೇವ। ತಥಾ ಬುದ್ಧೇರಾತ್ಮಾ ಮಹಾನ್ ಪರಃ ಇತ್ಯಪ್ಯಸಂಗತಮ್, ಬುದ್ಧಿಶಬ್ದೇನ ಮಹತ್ತತ್ತ್ವಸ್ಯಾಭಿಧಾನಾಭ್ಯುಪಗಮಾತ್। ನ ಹಿ ಮಹತೋ ಮಹಾನ್ ಪರಃ ಸಂಭವತಿ। ಮಹತ ಆತ್ಮಶಬ್ದೇನ ವಿಶೇಷಣಂ ಚ ನ ಸಂಗಚ್ಛತೇ। ಅತೋ ರೂಪಕವಿನ್ಯಸ್ತಾನಾಮೇವ ಗ್ರಹಣಮ್ (ಶ್ರೀಭಾಷ್ಯ)

[2] ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ (ಶ್ರೀಭಾಷ್ಯ)

[3] ಕ—ಪ್ರತ್ಯಯಃ ಕುತ್ಸನೇ (ಮ ಭಾ)

[4] ಪರಮಾತ್ಮನ ಏವಾವ್ಯಕ್ತಶಬ್ದಃ। ತತ್ತಂತ್ರತ್ವೇನ ತಚ್ಛರೀರರೂಪತ್ವಾದಿತರಸ್ಯಾವ್ಯಕ್ತ-ಶಬ್ದಃ (ಮ. ಭಾ)

[5] ತುಚ್ಛ್ಯೇನಾಭ್ವಪಿಹಿತಂ ಯದಾಸೀದಿತಿ ದರ್ಶಯತಿ ಚ (ಮ ಭಾ.)

ಹೇಳುತ್ತದೆ. 'ಅಕ್ಷರವು ಪರನು ಬ್ರಹ್ಮ' ಅಕ್ಷರಂ ಬ್ರಹ್ಮ ಪರಮಮ್ (ಗೀತಾ ೮ ೩), 'ಅಕ್ಷರವು ಅವ್ಯಕ್ತವೆನಿಸಿದೆ' ಅವ್ಯಕ್ತೋಽಕ್ಷರಃ (ಗೀತಾ ೮ ೨೧)

## ಸೂಕ್ಷ್ಮಂ ತು ತದರ್ಹತ್ವಾತ್ ॥ ೨ ॥

೨. ಆದರೆ ಸೂಕ್ಷ್ಮಶರೀರವನ್ನೇ (ಇಲ್ಲಿ ಅವ್ಯಕ್ತವೆಂದು ಕರೆದಿದೆ,) ಏಕೆಂದರೆ ಇದು ಆ (ಶಬ್ದಕ್ಕೆ) ಯೋಗ್ಯವಾದ (ಅರ್ಥ)

ಪ್ರಕರಣದಿಂದಲೂ ಪರಿಶೇಷದಿಂದಲೂ ಅವ್ಯಕ್ತ-ಶಬ್ದವು ಶರೀರವನ್ನೇ ಸೂಚಿಸುತ್ತದೆಂದು ಹೇಳಿದ್ದಾಯಿತು ಸ್ಥೂಲವಾಗಿಯೂ ಸ್ಪಷ್ಟತರವಾಗಿಯೂ ಇರುವ ಶರೀರವು ಅವ್ಯಕ್ತ-ಶಬ್ದದಿಂದ ಹೇಗೆ ಸೂಚಿಸಲ್ಪಡುತ್ತದೆ ? ಅದನ್ನು ವ್ಯಕ್ತವೆಂದೇ ಕರೆಯಬೇಕಲ್ಲವೆ? —ಎಂಬ ಸಂಶಯವು ಇಲ್ಲಿ ಉಂಟಾಗುತ್ತದೆ

ಇದಕ್ಕೆ ಪರಿಹಾರವು ಹೀಗಿದೆ ಅವ್ಯಕ್ತ-ಶಬ್ದವು ಸೂಕ್ಷ್ಮವಾದ ಕಾರಣ ಶರೀರವನ್ನು ಸೂಚಿಸುತ್ತದೆ, ಸೂಕ್ಷ್ಮವಾದ ಯಾವುದನ್ನೇ ಆಗಲಿ ಅವ್ಯಕ್ತ-ಶಬ್ದದಿಂದ ಕರೆಯಬಹುದು. ಸ್ಥೂಲಶರೀರವನ್ನು ಅವ್ಯಕ್ತ-ಶಬ್ದದಿಂದ ಕರೆಯಲಾಗದಿದ್ದರೂ ಅದಕ್ಕೆ ಕಾರಣವಾದ ಭೂತ-ಸೂಕ್ಷ್ಮಗಳಿಂದ ಕರೆಯಬಹುದು.[1] ಕಾರಣ-ವಾಚಕ-ಶಬ್ದವನ್ನು ಕಾರ್ಯದಲ್ಲಿ ಪ್ರಯೋಗಿಸಿರುವುದು ಕಂಡುಬರುತ್ತದೆ, 'ಗೋವುಗಳೊಡನೆ (ಎಂದರೆ ಹಾಲಿನೊಂದಿಗೆ) ಸೋಮವನ್ನು ಸೇರಿಸು'[2] (ಋ ವೇ ೯ ೪೬ ೪) 'ಆ ಈ ಜಗತ್ತು ಅವ್ಯಕ್ತವಾಗಿತ್ತು'[3] (ಬೃ ಉ ೧ ೪ ೭) ಎಂಬ ಶ್ರುತಿಯು ನಾಮ-ರೂಪಗಳಿಂದ ವ್ಯಕ್ತವಾದ ಜಗತ್ತು ತನ್ನ ಹಿಂದಿನ ನಾಮ-ರೂಪಗಳಿಲ್ಲದ ಅವಸ್ಥೆಯಲ್ಲಿ ಅವ್ಯಕ್ತವೆಂಬ ಶಬ್ದಕ್ಕೆ ಯೋಗ್ಯವಾಗಿತ್ತು ಎಂದು ತಿಳಿಸುತ್ತದೆ

ವಿ.—ಸೂಕ್ಷ್ಮಾವಸ್ಥೆಯಲ್ಲಿರುವ ಭೂತವೇ ಅವ್ಯಕ್ತವೆನಿಸಿದೆ, ಇದು ಒಂದು ವಿಶೇಷಾವಸ್ಥೆಯನ್ನು ಪಡೆದಾಗ ಶರೀರವೆನಿಸುತ್ತದೆ ಅವ್ಯಾಕೃತವಾದ ಅಚಿದ್ವಸ್ತುವು ವಿಶೇಷಾವಸ್ಥೆಯನ್ನು ಹೊಂದಿದಾಗ ರಥದಂತೆ ಪುರುಷಾರ್ಥ-ಸಾಧನದ ಪ್ರವೃತ್ತಿಗೆ ಯೋಗ್ಯವಾಗುತ್ತದೆ[4]

---

[1] ಯದ್ಯಪಿ ಸ್ಥೂಲಮಿದಂ ಶರೀರಂ ನ ಸ್ವಯಮವ್ಯಕ್ತಶಬ್ದಮರ್ಹತಿ, ತಥಾಽಪಿ ತಸ್ಯ ತ್ವಾರಂಭಕಂ ಭೂತಸೂಕ್ಷ್ಮಮವ್ಯಕ್ತಶಬ್ದಮರ್ಹತಿ (ಸೂ ಭಾ.)

[2] ಗೋಭಿಃ ಶ್ರೀಣೀತ ಮತ್ಸರಮ್ ।

[3] ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ।

[4] ತಸ್ಯಾವ್ಯಾಕೃತಸ್ಯಾಚಿದ್ವಸ್ತುನ ಏವ ವಿಕಾರಾಪನ್ನಸ್ಯ ರಥವತ್ ಪುರುಷಾರ್ಥಸಾಧನ-ಪ್ರವೃತ್ತ್ಯರ್ಹತ್ವಾತ್ (ಶ್ರೀಭಾಷ್ಯ)

**ದ್ವೈ**—ಅವ್ಯಕ್ತ-ಶಬ್ದವು ಸೂಕ್ಷ್ಮವಸ್ತುವನ್ನೇ ಸೂಚಿಸುತ್ತದೆ ಸೂಕ್ಷ್ಮವಾದ ವಸ್ತುವೇ ಅವ್ಯಕ್ತವಾಗಲು ಯೋಗ್ಯವಾಗುತ್ತದೆ ಪರಬ್ರಹ್ಮನು ಅತ್ಯಂತ-ಸೂಕ್ಷ್ಮನಾಗಿರುವುದರಿಂದ ಅವನೇ ಅವ್ಯಕ್ತ-ಶಬ್ದ-ವಾಚ್ಯನು

**ತದಧೀನತ್ವಾದರ್ಥವತ್ ॥ ೩ ॥**

೩ (ಈ ಜಗತ್ತಿನ ಹಿಂದಿನ ಅವಸ್ಥೆಯು) ಅವನಿಗೆ ಅಧೀನವಾಗಿರುವುದರಿಂದ ಅದು ಅರ್ಥವತ್ತಾಗಿರುತ್ತದೆ.

**ಆಕ್ಷೇಪಣೆ**—ಶರೀರವು ಅವ್ಯಕ್ತವೆಂಬುದನ್ನು ಸಿದ್ಧಪಡಿಸಲು ಈ ಜಗತ್ತು—ನಾಮರೂಪಗಳು ವ್ಯಕ್ತವಾಗುವುದಕ್ಕ ಮೊದಲು—ಬೀಜರೂಪವಾದ ಹಿಂದಿನ ಅವಸ್ಥೆಯಲ್ಲಿರುವಾಗ ಅವ್ಯಕ್ತ-ಶಬ್ದಕ್ಕೆ ಯೋಗ್ಯವಾಗಿರುವುದೆಂದು ಒಪ್ಪಿಕೊಂಡರೆ ಪ್ರಧಾನ-ಕಾರಣ-ವಾದವೇ ಬಂದೊದಗುವುದು, ಏಕೆಂದರೆ ಈ ಜಗತ್ತಿನ ಹಿಂದಿನ ಅವಸ್ಥೆಯನ್ನೇ ಸಾಂಖ್ಯರು ಪ್ರಧಾನವೆನ್ನುತ್ತಾರೆ

**ಪರಿಹಾರ**—ಜಗತ್ತಿನ ಹಿಂದಿನ ಅವಸ್ಥೆಯನ್ನು ಒಂದು ಸ್ವತಂತ್ರ-ಕಾರಣವೆಂದು ನಾವು ಒಪ್ಪಿಕೊಂಡಿದ್ದರೆ ಪ್ರಧಾನ-ಕಾರಣ-ವಾದವನ್ನು ಒಪ್ಪಿಕೊಂಡಂತೆ ಆಗುತ್ತಿತ್ತು ನಾವು ಪರಮೇಶ್ವರನಿಗೆ ಅಧೀನವಾಗಿರುವ ಜಗತ್ತಿನ ಹಿಂದಿನ ಅವಸ್ಥೆಯನ್ನು ಒಪ್ಪಿಕೊಳ್ಳುತ್ತೇವೆಯೋ ಹೊರತು ಸ್ವತಂತ್ರವಾದ ಅವಸ್ಥೆಯನ್ನು ಒಪ್ಪಿಕೊಳ್ಳುವುದಿಲ್ಲ, ಹೀಗೆ ಒಪ್ಪಿಕೊಂಡರೆ ಅದು ಅರ್ಥವುಳ್ಳದ್ದಾಗುತ್ತದೆ ಅದಿಲ್ಲದೆ ಪರಮೇಶ್ವರನಿಗೆ ಸ್ರಷ್ಟೃತ್ವವು ಸಿದ್ಧಿಸುವುದಿಲ್ಲ, ಏಕೆಂದರೆ ಅವನು ಶಕ್ತಿರಹಿತನಾದರೆ ಸೃಷ್ಟಿಯಲ್ಲಿ ಪ್ರವೃತ್ತನಾಗಲಾರನು ಈ ಬೀಜಶಕ್ತಿಯು ಅವಿದ್ಯಾತ್ಮಕವಾಗಿದೆ, ಅವ್ಯಕ್ತ-ಶಬ್ದದಿಂದ ಸೂಚಿಸಲ್ಪಟ್ಟಿದೆ, ಪರಮೇಶ್ವರನೇ ಇದಕ್ಕೆ ಆಶ್ರಯ, ಇದು ಮಾಯಾಮಯವಾದ ಮಹಾಸುಷುಪ್ತಿ, ಇದರಲ್ಲಿಯೇ ಸಂಸಾರಿಗಳಾದ ಜೀವರು ತಮ್ಮ ಸ್ವರೂಪ-ಜ್ಞಾನವಿಲ್ಲದೆ ನಿದ್ರಿಸುತ್ತಾರೆ [1]

ಈ ಅವ್ಯಕ್ತವನ್ನೇ ಆಕಾಶ-ಶಬ್ದದಿಂದ ಹೇಳಿದೆ 'ಗಾರ್ಗಿ, ಈ ಅಕ್ಷರದಿಂದಲೇ (ಅವ್ಯಕ್ತವಾದ) ಆಕಾಶವು ವ್ಯಾಪ್ತವಾಗಿದೆ'[2] (ಬೃ ಉ ೩. ೮ ೧೧) ಇದೇ ಇನ್ನೊಂದು ಕಡೆಯಲ್ಲಿ ಅಕ್ಷರ ಶಬ್ದದಿಂದ ನಿರ್ದಿಷ್ಟವಾಗಿದೆ 'ಪರವಾದ ಅಕ್ಷರಕ್ಕಿಂತಲೂ ಶ್ರೇಷ್ಠನು'[3] (ಮುಂ. ಉ ೨ ೧ ೨) ಮತ್ತೊಂದು ಕಡೆಯಲ್ಲಿ ಇದನ್ನೇ ಮಾಯೆ

---

[1] ಅವಿದ್ಯಾತ್ಮಿಕಾ ಹಿ ಬೀಜಶಕ್ತಿರವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ ಮಹಾಸುಷುಪ್ತಿಃ, ಯಸ್ಯಾಂ ಸ್ವರೂಪಪ್ರತಿಬೋಧರಹಿತಾಃ ಶೇರತೇ ಸಂಸಾರಿಣೋ ಜೀವಾಃ (ಸೂ ಭಾ )

[2] ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ ।

[3] ಅಕ್ಷರಾತ್ಪರತಃ ಪರಃ ।

ಯೆಂದು ಹೇಳಿದೆ : ಪ್ರಕೃತಿಯನ್ನು ಮಾಯೆಯೆಂದೂ ಮಹೇಶ್ವರನನ್ನು ಮಾಯಿಯೆಂದೂ ಅರಿಯಬೇಕು'[1] (ಶ್ವೇ. ಉ. ೪, ೨೬). ಮಾಯೆಯೇ ಅವ್ಯಕ್ತವು ; ಏಕೆಂದರೆ ಇದು ಅನಿರ್ವಚನೀಯವಾಗಿದೆ ;[2] ಮಹತ್ತಿಗಿಂತ ಶ್ರೇಷ್ಠವಾಗಿರುವುದು ಅವ್ಯಕ್ತದ ಅಥವಾ ಮಾಯೆಯ ಗುಣವಾಗಿದ್ದರೂ ಶರೀರಕ್ಕೇ ಹೇಳಿದೆ ; ಏಕೆಂದರೆ ಶರೀರವು ಮಾಯೆಯ ಕಾರ್ಯವು.

ಕೆಲವರು ಇಲ್ಲಿ ಅವ್ಯಕ್ತ-ಶಬ್ದವು ಸೂಕ್ಷ್ಮಶರೀರವನ್ನು ಸೂಚಿಸುತ್ತದೆಂದು ಹೇಳುತ್ತಾರೆ. ಈ ಅಭಿಪ್ರಾಯವು ಸರಿಯಲ್ಲ ; ರಥಶಬ್ದವು ಸ್ಥೂಲಸೂಕ್ಷ್ಮಶರೀರಗಳನ್ನು ಸೂಚಿಸುವಂತೆ ಅವ್ಯಕ್ತ-ಶಬ್ದವು ಎರಡು ಶರೀರಗಳನ್ನೂ ಸೂಚಿಸುತ್ತದೆ. ಒಂದು ವೇಳೆ ಇಲ್ಲಿ ಸೂಕ್ಷ್ಮಶರೀರವೇ ಸೂಚಿತವಾಗಿದ್ದರೂ ಕಠಶ್ರುತಿಯು ಪ್ರಧಾನವನ್ನು ಸೂಚಿಸುವುದಿಲ್ಲವೆಂಬುದು ಸ್ಪಷ್ಟವಾಗಿದೆ.

ವಿ.—ಪರಮಕಾರಣವಾದ ಪರಮಪುರುಷನ ಅಧೀನದಲ್ಲಿರುವುದರಿಂದ ಸೂಕ್ಷ್ಮಭೂತವು ಪ್ರಯೋಜನವುಳ್ಳದ್ದಾಗಿರುತ್ತದೆ.[3] ಅವ್ಯಕ್ತಕ್ಕೂ ಅದರ ಪರಿಣಾಮಗಳಿಗೂ ಪರಮಪುರುಷನು ಆತ್ಮನಲ್ಲನೆಂಬ ಅಭಿಪ್ರಾಯವನ್ನು ನಿರಾಕರಿಸಿದೆಯೇ ಹೊರತು ಅವುಗಳನ್ನು ಸ್ವರೂಪೇಣ ನಿರಾಕರಿಸಿಲ್ಲ. ನಿಜವಾಗಿಯೂ ಅವನು ಅವುಗಳ ಆತ್ಮನಾಗಿರುತ್ತಾನೆ; ಅವು ಅವನ ಶರೀರವಾಗಿರುತ್ತವೆ ; ಈ ಸಂಬಂಧದಿಂದಲೇ ಪ್ರಕೃತಿ ಮೊದಲಾದುವು ತಮ್ಮ ಪ್ರಯೋಜನವನ್ನು ಸಾಧಿಸುತ್ತವೆ. ಅನ್ಯಥಾ ಅವುಗಳ ಸ್ವರೂಪ-ಸ್ಥಿತಿ-ಪ್ರವೃತ್ತಿಗಳು ಉಂಟಾಗುತ್ತಿರಲಿಲ್ಲ. ಅಥವಾ ಅಂತರ್ಯಾಮಿ-ರೂಪದಿಂದಿರುವ ಪರಮಪುರುಷನ ಅಧೀನದಲ್ಲಿರುವುದರಿಂದ ರಥಿ-ರಥತ್ವಾದಿಗಳಿಂದ ರೂಪಿತವಾದ ಆತ್ಮ-ಶರೀರಾದಿಗಳು ಉಪಾಸನೆಗೆ ಪ್ರಯೋಜನವುಳ್ಳದ್ದಾಗುತ್ತವೆ.[4] ಆದುದರಿಂದಲೇ **ಸಾ ಕಾಷ್ಠಾ ಸಾ ಪರಾ ಗತಿಃ** ; ವಶಪಡಿಸಿಕೊಳ್ಳಬೇಕಾಗುವ ವಸ್ತುಗಳಲ್ಲಿ ಅವನೇ ಅತ್ಯಂತ ಪ್ರಧಾನನು ಎಂದರ್ಥ.

ದ್ವೈ.—ಅವ್ಯಕ್ತತ್ವ ಪರಾವರತ್ವ ಮೊದಲಾದುವು ಪರಮಾತ್ಮನನ್ನೇ ಸೂಚಿಸುತ್ತವೆಂದು ಅರಿತುಕೊಂಡಾಗ ಅವನ ಅಧೀನದಲ್ಲಿರುವ ಅವ್ಯಕ್ತತ್ವಾದಿಗಳು ಅರ್ಥವತ್ತಾಗುತ್ತವೆ.

---

[1] ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್ ।

[2] ಅವ್ಯಕ್ತಾ ಹಿ ಸಾ ಮಾಯಾ, ತತ್ತ್ವಾನ್ಯತ್ವನಿರೂಪಣಸ್ಯಾಶಕ್ಯತ್ವಾತ್ (ಸೂ. ಭಾ.)

[3] ಪರಮಕಾರಣಭೂತಪರಮಪುರುಷಾಧೀನತ್ವಾತ್ ಪ್ರಯೋಜನವದ್ಭೂತಸೂಕ್ಷ್ಮಮ್ (ಶ್ರೀಭಾಷ್ಯ).

[4] ಈ ಎರಡನೆಯ ವ್ಯಾಖ್ಯಾನವನ್ನು ವೇದಾಂತದೀಪದಲ್ಲಿ (೧. ೪. ೩) ಹೇಳಿದೆ : ಅಂತರ್ಯಾಮಿರೂಪೇಣಾವಸ್ಥಿತಪುರುಷಾಧೀನತ್ವಾತ್ ರಥಿರಥತ್ವಾದಿನಾ ರೂಪಿತಮ್ ಅರ್ಥವತ್ ಪ್ರಯೋಜನವದ್ಭವತಿ ।

## ಜ್ಞೇಯತ್ವಾವಚನಾಚ್ಚ || ೪ ||

೪. (ಅವ್ಯಕ್ತವು) ಜ್ಞೇಯವೆಂದು ಹೇಳದಿರುವುದರಿಂದಲೂ (ಅದು ಪ್ರಧಾನವಲ್ಲ).

ಸಾಂಖ್ಯರು ಪ್ರಧಾನವನ್ನು ಜ್ಞೇಯವೆಂದು ಹೇಳುತ್ತಾರೆ; ಏಕೆಂದರೆ ಪ್ರಧಾನದ ಗುಣಗಳಿಗೂ ಪುರುಷನಿಗೂ ಇರುವ ಭೇದವನ್ನು ಅರಿತುಕೊಂಡರೆ ಕೈವಲ್ಯವು ಸಿದ್ಧಿಸುವುದು. ಇನ್ನೊಂದು ಕಡೆ ವಿಭೂತಿಪ್ರಾಪ್ತಿಗಾಗಿ ಪ್ರಧಾನವನ್ನರಿತುಕೊಳ್ಳಬೇಕೆಂದು ಹೇಳಿದ್ದಾರೆ. ಆದರೆ ವಿಷಯವಾಕ್ಯದಲ್ಲಿ ಅವ್ಯಕ್ತವು ಜ್ಞೇಯವೆಂದು ಹೇಳಿಲ್ಲ. ಅವ್ಯಕ್ತ-ಶಬ್ದವು ಪದಮಾತ್ರವೇ. ಅವ್ಯಕ್ತವನ್ನು ಅರಿತುಕೊಳ್ಳಬೇಕು ಅಥವಾ ಉಪಾಸಿಸಬೇಕು ಎಂಬ ವಾಕ್ಯವಿಲ್ಲ.[1] ರಥ-ರೂಪಕದಲ್ಲಿ ಕಲ್ಪಿಸಿರುವ ಶರೀರಾದಿಗಳ ಅನುಸರಣದ ಮೂಲಕ ವಿಷ್ಣುವಿನ ಪರಮಪದವನ್ನು ತಿಳಿಸಲು ಅವ್ಯಕ್ತವೆನಿಸಿದ ಶರೀರವನ್ನು ಹೇಳಿದೆ.

**ವಿ.**—ಸಾಂಖ್ಯತಂತ್ರದ ಪ್ರಕಾರ ವ್ಯಕ್ತ, ಅವ್ಯಕ್ತ, ಜೀವ–ಇವರ ಜ್ಞಾನದಿಂದ ಮೋಕ್ಷವು ಸಿದ್ಧಿಸುತ್ತದೆ; ಆದರೆ ಅವ್ಯಕ್ತವನ್ನು ಜ್ಞೇಯವೆಂದು ವಿಷಯವಾಕ್ಯದಲ್ಲಿ ಹೇಳದಿರುವುದರಿಂದ ಸಾಂಖ್ಯರ ಪ್ರಧಾನವನ್ನು ಇಲ್ಲಿ ಗ್ರಹಿಸಲಾಗುವುದಿಲ್ಲ.

**ದ್ವೈ.**—ಅವ್ಯಕ್ತವೇ ಮೊದಲಾದ ಶಬ್ದಗಳಿಂದ ವಾಚ್ಯನಾದವನು ಪರಬ್ರಹ್ಮನೇ ಹೊರತು ಪ್ರಧಾನಾದಿಗಳಲ್ಲ. ಪರಬ್ರಹ್ಮನೇ ಜ್ಞೇಯನು.

## ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್* || ೫ ||

೫. (ಪ್ರಧಾನವನ್ನು ಜ್ಞೇಯವಾಗಿ) ಹೇಳುತ್ತಿದೆ ಎಂದರೆ, ಅಲ್ಲ; ಏಕೆಂದರೆ ಪ್ರಕರಣದಿಂದ (ಅವನು) ಪ್ರಾಜ್ಞನೇ.

**ಆಕ್ಷೇಪಣೆ**—'ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳಿಲ್ಲದ, ಅವ್ಯಯವೂ ನಿತ್ಯವೂ ಅನಾದಿಯೂ ಅನಂತವೂ ಆದ, ಬುದ್ಧಿಯೆಂಬ ಮಹತ್-ತತ್ತ್ವಕ್ಕಿಂತ ವಿಲಕ್ಷಣವಾದ, ಧ್ರುವವಾದ ಅದನ್ನು ಅರಿತುಕೊಂಡು ಮೃತ್ಯುಮುಖದಿಂದ ಮುಕ್ತನಾಗುತ್ತಾನೆ' (ಕ. ಉ. ೧. ೩. ೧೫) ಎಂಬಲ್ಲಿ ಅವ್ಯಕ್ತ-ಶಬ್ದದಿಂದ ಹೇಳಲ್ಪಟ್ಟ ಪ್ರಧಾನವೇ ಜ್ಞೇಯ

---

[1] ಪದಮಾತ್ರಂ ಹ್ಯವ್ಯಕ್ತಶಬ್ದಃ। ನೇಹಾವ್ಯಕ್ತಂ ಜ್ಞಾತವ್ಯಮುಪಾಸಿತವ್ಯಂ ಚೇತಿ ವಾಕ್ಯಮಸ್ತಿ (ಸೂ. ಭಾ.).

* ಪ್ರಕರಣಾತ್ ಎಂಬ ಶಬ್ದವು ಮಧ್ವಭಾಷ್ಯದಲ್ಲಿ ಬೇರೆ ಸೂತ್ರವಾಗಿದೆ.

[2] ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾऽರಸಂ ನಿತ್ಯಮಗಂಧವಚ್ಚ ಯತ್।
ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತನ್ಮೃತ್ಯುಮುಖಾತ್ಪ್ರಮುಚ್ಯತೇ।

ವೆಂದು ಹೇಳಿದೆ. ಸಾಂಖ್ಯಸ್ಮೃತಿಯಲ್ಲಿ ಶಬ್ದಾದಿ-ರಹಿತವಾದ, ಮಹತ್ತಿಗಿಂತ ಅಧಿಕ ವಾದ, ಯಾವ ಪ್ರಧಾನವನ್ನು ಹೇಳಿದೆಯೊ ಅದನ್ನೇ ಅರಿತುಕೊಳ್ಳಬೇಕೆಂದು ಇಲ್ಲಿ ಹೇಳಿದೆ. ಆದುದರಿಂದ ಅವ್ಯಕ್ತಶಬ್ದವೂ ಪ್ರಧಾನವನ್ನೇ ಸೂಚಿಸುತ್ತದೆ.

**ಪರಿಹಾರ**—ಪ್ರಧಾನವನ್ನು ಅರಿತುಕೊಳ್ಳಬೇಕೆಂದು ಹೇಳಿಲ್ಲ, ಪ್ರಾಜ್ಞನಾದ ಪರಮಾತ್ಮನನ್ನೇ ಅರಿತುಕೊಳ್ಳಬೇಕೆಂದು ಇಲ್ಲಿ ಹೇಳಿದೆ. ಇದು ಪ್ರಕರಣದಿಂದ ತಿಳಿದು ಬರುತ್ತದೆ : (೧) ಕ. ಉ. ೧. ३. ೧೧ರಲ್ಲಿ ಪರಮಾತ್ಮನನ್ನೇ ಸೂಚಿಸಿದೆ ; (೨) ಕ. ಉ. ೧. ३. ೧೨ರಲ್ಲಿ ಅವನೇ ಜ್ಞೇಯನೆಂಬ ಆಕಾಂಕ್ಷೆಯಿದೆ ; [1] (३) ಕ. ಉ. ೧. ३. ೧३ರಲ್ಲಿ ಆತ್ಮಜ್ಞಾನಕ್ಕೋಸ್ಕರ ವಾಗಾದಿಗಳ ಸಂಯಮವನ್ನು ವಿಧಿಸಿದೆ ; [2] (೪) ಮತ್ತು ಮೃತ್ಯು ಮುಖದಿಂದ ಬಿಡುಗಡೆಯನ್ನು ಹೊಂದುವುದೇ ಫಲವೆಂದು ಹೇಳಿದೆ.

ಕೇವಲ ಪ್ರಧಾನವನ್ನು ಅರಿತುಕೊಂಡದ್ದರಿಂದಲೇ ಸಂಸಾರಿಯು ಮುಕ್ತನಾಗು ತ್ತಾನೆಂದು ಸಾಂಖ್ಯರೂ ಒಪ್ಪುವುದಿಲ್ಲ ; ಚೇತನಾತ್ಮನ ಜ್ಞಾನದಿಂದಲೇ ಈ ಫಲವುಂಟಾ ಗುವುದೆಂಬುದು ಅವರ ಸಿದ್ಧಾಂತ. ಪ್ರಾಜ್ಞನಾದ ಆತ್ಮನಲ್ಲಿಯೇ ಅಶಬ್ದಾದಿ-ಗುಣಗಳು ಹೊಂದುವುವೆಂದು ಎಲ್ಲ ವೇದಾಂತವಾಕ್ಯಗಳಲ್ಲಿಯೂ ಹೇಳಿದೆ.

**ವಿ.**—ಶ್ರುತಿಯು (ಕ. ಉ. ೧. ३. ೧೫) ಪರಮಾತ್ಮನೇ ಜ್ಞೇಯನೆಂದು ಪ್ರತಿ ಪಾದಿಸುತ್ತದೆ ; ಏಕೆಂದರೆ ಹಿಂದಿನ ಎರಡು ವಾಕ್ಯಗಳಲ್ಲಿ (ಕ. ಉ. ೧. ३. ೯, ೧. ३. ೧೨) ಪರಮಾತ್ಮನೇ ಪ್ರಕೃತನಾಗಿದ್ದಾನೆ. 'ಪುರುಷನಿಗಿಂತ ಪ್ರಧಾನವಾದುದು ಯಾವುದೂ ಇಲ್ಲ' (ಕ. ಉ. ೧. ३. ೧೧) ಎಂಬಲ್ಲಿ ಸಾಂಖ್ಯರ ಪುರುಷನಿಗಿಂತ ಪ್ರಧಾನವಾದುದು ಯಾವುದೂ ಇಲ್ಲ ಎಂದು ಹೇಳಿಲ್ಲ. ಅಶಬ್ದಾದಿ-ಧರ್ಮಗಳು ಪರಮಪುರುಷನಿಗೇ ಸೇರಿದು ವೆಂದು ಮತ್ತೊಂದು ಶ್ರುತಿಯೂ (ಮುಂ. ಉ. ೧. ೧. ೬) ತಿಳಿಸುತ್ತದೆ.

**ದ್ವೈ.**—ಈ ಶ್ರುತಿಯಲ್ಲಿ (ಕ. ಉ. ೧. ३. ೧೫) ಪ್ರಾಜ್ಞನೆನಿಸಿದ ಪರಮಾತ್ಮನೇ ಉಕ್ತನಾಗಿದ್ದಾನೆ ; ಕಠಶ್ರುತಿಯ ಪ್ರಕಾರ (೧. ೨. ೨೦) ದೊಡ್ಡದಾಗಿರುವುದಕ್ಕಿಂತಲೂ ಅತ್ಯಂತ ದೊಡ್ಡದಾಗಿರುವುದು ಪರಮಾತ್ಮನಿಗೇ ಹೊಂದುತ್ತನೆ. ಸರ್ವಕ್ಕಿಂತಲೂ ದೊಡ್ಡವನಾಗಿರುವವನು ಮಹತ್ತಿಗಿಂತಲೂ ದೊಡ್ಡವನಾಗಿರುವುದೆಂಬುದು ಹೊಂದುತ್ತದೆ.[3]

---

[1] ಏಷ ಸರ್ವೇಷು ಭೂತೇಷು ಗೂಢೋऽऽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥

[2] ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾಂತ ಆತ್ಮನಿ ॥

[3] ಸರ್ವಸ್ಮಾತ್ ಪರಮಸ್ಯ ಮಹತೋऽಪಿ ಪರತ್ವಂ ಯುಜ್ಯತೇ (ಮ. ಭಾ.).

ಪ್ರಕರಣಾತ್ ॥ ೧. ೪. ೬ ॥

೬. ಪ್ರಕರಣದಿಂದ (ಹೀಗೆ ತಿಳಿದುಬರುತ್ತದೆ)

**ಸೋಽಧ್ವನಃ....ಪರಮಂ ಪದಮ್** ಎಂಬ ವಾಕ್ಯವು ಪ್ರಾಜ್ಞನಾದ ವಿಷ್ಣುವೇ ಪ್ರಕರಣದ ವಿಷಯನು ಎಂಬುವನ್ನು ಸೂಚಿಸುತ್ತದೆ.

**ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ॥ ೬ ॥**

೬. **ಹೀಗೆ ಮೂರು (ಪದಾರ್ಥಗಳನ್ನೇ) ಹೇಳಿದೆ; (ಅವುಗಳ ವಿಷಯದಲ್ಲಿಯೇ) ಪ್ರಶ್ನೆಯನ್ನೂ ಮಾಡಿದೆ.**

ಕಠವಲ್ಲಿಯಲ್ಲಿ ಅಗ್ನಿ ಜೀವ ಪರಮಾತ್ಮ—ಎಂಬ ಮೂರು ವಿಷಯಗಳನ್ನೇ ಹೇಳಿದೆ. ಯಮನು ನಚಿಕೇತನಿಗೆ ವರಗಳನ್ನು ಅನುಗ್ರಹಿಸಿ ಈ ಮೂರು ವಿಷಯಗಳನ್ನೇ ವಿವರಿಸುತ್ತಾನೆ. ಇವುಗಳನ್ನೇ ಕುರಿತು ಪ್ರಶ್ನೆಯನ್ನು ಮಾಡಿರುವುದೇ ಹೊರತು ಬೇರೆ ಯಾವ ಪ್ರಶ್ನೆಯಾಗಲಿ ಉತ್ತರವಾಗಲಿ ಕಂಡುಬರುವುದಿಲ್ಲ. 'ಹೇ ಮೃತ್ಯು, ನೀನು ಸ್ವರ್ಗಪ್ರಾಪ್ತಿಗೆ ಸಾಧನವಾದ ಅಗ್ನಿಯನ್ನು ತಿಳಿದಿರುವೆ. ಶ್ರದ್ಧೆಯುಳ್ಳ ನನಗೆ ಅದನ್ನು ಹೇಳಿಕೊಡು' (ಕ. ಉ. ೧. ೧. ೧೩), ಮತ್ತು 'ಲೋಕಗಳಿಗೆ ಆದಿಯಾದ ಅಗ್ನಿಯನ್ನು ಅವನಿಗೆ ಹೇಳಿಕೊಟ್ಟನು' (ಕ. ಉ. ೧. ೧. ೧೫)—ಎಂಬಲ್ಲಿ ಅಗ್ನಿವಿಷಯವಾದ ಪ್ರಶ್ನೋತ್ತರಗಳು ಇವೆ. 'ಮನುಷ್ಯನು ಸತ್ತಮೇಲೆ ಈ ಸಂಶಯವುಂಟು: ಕೆಲವರು ಅವನು ಇದ್ದಾನೆ ಎಂದು ಹೇಳುತ್ತಾರೆ. ಕೆಲವರು ಇಲ್ಲವೆಂದು ಹೇಳುತ್ತಾರೆ' (ಕ. ಉ. ೧ ೧. ೨೦) ಮತ್ತು 'ಹೇ ಗೌತಮ, ಈಗ ಈ ರಹಸ್ಯವಾದ ಸನಾತನಬ್ರಹ್ಮವನ್ನು ಹೇಳುತ್ತೇನೆ. ಮೃತ್ಯುವನ್ನು ಹೊಂದಿ ಆತ್ಮನು ಹೇಗೆ ಆಗುವನೋ ಅದನ್ನು ಹೇಳುತ್ತೇನೆ. ಕರ್ಮಕ್ಕೆ ಅನುಸಾರವಾಗಿ ಕೆಲವರು ದೇಹಿಗಳು ಶರೀರಗ್ರಹಣಕ್ಕಾಗಿ ಯೋನಿಯನ್ನೂ ಇನ್ನು ಕೆಲವರು ಸ್ಥಾವರಜನ್ಮವನ್ನೂ ಹೊಂದುತ್ತಾರೆ' [ಕ. ಉ. ೨. ೫ ೬ ೭]—ಎಂಬಲ್ಲಿ ಆತ್ಮವಿಷಯವಾದ ಪ್ರಶ್ನೋತ್ತರಗಳಿವೆ. 'ಧರ್ಮಕ್ಕಿಂತ ಭಿನ್ನವೂ ಅಧರ್ಮಕ್ಕಿಂತ ಭಿನ್ನವೂ ಈ ಕಾರ್ಯಕರಣಗಳಿಗಿಂತ ಭಿನ್ನವೂ ಈ ಭೂತಭವಿಷ್ಯತ್ಕಾಲಗಳಿಗಿಂತ ಭಿನ್ನವೂ ಆದ ಯಾವುದನ್ನು ನೋಡಿರುವೆಯೊ ಅದನ್ನು ಹೇಳು; (ಕ. ಉ. ೧ ೩. ೧೪) ಮತ್ತು 'ಜ್ಞಾನಿಯು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ' (ಕ. ಉ. ೧ ೨ ೧೮) —ಎಂಬಲ್ಲಿ ಪರಮಾತ್ಮವಿಷಯವಾದ ಪ್ರಶ್ನೋತ್ತರಗಳಿವೆ. ಪ್ರಧಾನವಿಷಯವಾದ ಪ್ರಶ್ನೆಯೇ ಇಲ್ಲ; ಪ್ರಶ್ನೆಯಿಲ್ಲದಿರುವಾಗ ಉತ್ತರವೂ ಇಲ್ಲ.

ಅವಿದ್ಯಾಕಲ್ಪಿತನಾದ ಜೀವಾತ್ಮ ಮತ್ತು ಪರಮಾತ್ಮ—ಇವರ ಭೇದದ ಅಪೇಕ್ಷೆಯಿಂದ ಈ ಸೂತ್ರವನ್ನು ಹೊಂದಿಸಿಕೊಳ್ಳಬೇಕು. ಆತ್ಮವಿಷಯದ ಪ್ರಶ್ನೆಯು ಒಂದೇ ಆಗಿದ್ದರೂ ಕ. ಉ ೧. ೧. ೨೦ರಲ್ಲಿ ಜೀವನ ಪ್ರಶ್ನೆಯನ್ನು ಎತ್ತಿದೆ; ಏಕೆಂದರೆ ಮರಣಕಾಲದಲ್ಲಿ ದೇಹಕ್ಕಿಂತ ಬೇರೆಯಾದವನಾದ ಆತ್ಮನಿರುವನೇ ಎಂಬ ಸಂಶಯವುಂಟಾಗಿದೆ;

ಇದಲ್ಲದೆ ಕರ್ತೃತ್ವಾದಿ-ಸಂಸಾರಸ್ವಭಾವವನ್ನು ಅವನಿಗೆ ನಿರಾಕರಿಸಿಲ್ಲ. ಆದರೆ ಕ. ಉ. ೧. ೨. ೧೪ರಲ್ಲಿ ಎತ್ತಿರುವ ಪ್ರಶ್ನೆಯು ಧರ್ಮಾದಿಗಳನ್ನು ಮೀರಿರುವ ಪರಮಾತ್ಮನ ವಿಷಯವಾಗಿದೆ.

ವಿ.—ಮೋಕ್ಷಸ್ವರೂಪದ ಪ್ರಶ್ನೆಯ ಮೂಲಕ ನಚಿಕೇತನು ಯಮನಿಂದ ಮೂರನೆಯ ವರವನ್ನು ಬೇಡುತ್ತಾನೆ; ಈ ಪ್ರಶ್ನೆಯಲ್ಲಿ ಮೂರು ವಿಷಯಗಳು ಅಂತರ್ಗತವಾಗಿವೆ: (೧) ಉಪೇಯ-ಸ್ವರೂಪ (ಎಂದರೆ ಮೋಕ್ಷ), (೨) ಉಪೇತೃ-ಸ್ವರೂಪ (ಎಂದರೆ ಮುಮುಕ್ಷುವಿನ ಸ್ವರೂಪ), (೩) ಉಪಾಯ-ಸ್ವರೂಪ (ಎಂದರೆ ಕರ್ಮದಿಂದ ಅನುಗೃಹೀತವಾದ ಉಪಾಸನದ ಸ್ವರೂಪ).[1] ಅನಂತರ ಯಮನು ನಚಿಕೇತನ ಯೋಗ್ಯತೆಯನ್ನು ಪರೀಕ್ಷಿಸಿ ಅವನಿಗೆ ಉಪದೇಶಿಸುತ್ತಾನೆ. 'ದುರ್ದರ್ಶನೂ ಗೂಢನೂ ಸರ್ವಭೂತಗಳ ಹೃದಯಗುಹೆಯಲ್ಲಿರುವವನೂ ಗಹ್ವರದಲ್ಲಿರುವವನೂ ಪುರಾಣನೂ ಆದ ದೇವನನ್ನು ಅಧ್ಯಾತ್ಮಯೋಗಪ್ರಾಪ್ತಿಯಿಂದ ತಿಳಿದುಕೊಂಡು ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ' (ಕ. ಉ. ೧. ೨. ೧೨); ಇಲ್ಲಿ 'ದೇವನನ್ನು ತಿಳಿದುಕೊಂಡು' ಎಂಬುದು ಉಪಾಸ್ಯನಾದ ಭಗವಂತನನ್ನು ಸೂಚಿಸುತ್ತದೆ; 'ಅಧ್ಯಾತ್ಮಯೋಗಪ್ರಾಪ್ತಿಯಿಂದ'[2] ಎಂಬುದು ಮುಮುಕ್ಷುವನ್ನು ಸೂಚಿಸುತ್ತದೆ; ಮತ್ತು 'ತಿಳಿದುಕೊಂಡು ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ' ಎಂಬುದು ಬ್ರಹ್ಮೋಪಾಸನವನ್ನು ಸೂಚಿಸುತ್ತದೆ. ಇಲ್ಲಿ ಅವ್ಯಕ್ತದ ಪ್ರಶ್ನೆಯೇ ಇಲ್ಲ.

ದ್ವೈ.—ತಂದೆಯ ಸೌಮನಸ್ಯ, ಸ್ವರ್ಗಕ್ಕೆ ಒಯ್ಯುವ ಅಗ್ನಿ ಮತ್ತು ಪರಮಾತ್ಮ—ಈ ಮೂರರ ವಿಷಯವಾದ ಪ್ರಶ್ನೋತ್ತರಗಳೇ ಕಠೋಪನಿಷತ್ತಿನಲ್ಲಿ ಬಂದಿವೆ.[3]

## ಮಹದ್ವಚ್ಚ ॥ ೭ ॥

೭. ಮತ್ತು ಮಹತ್-ಶಬ್ದದಂತೆ (ಅವ್ಯಕ್ತ-ಶಬ್ದವೂ).

ಸಾಂಖ್ಯರ ಪ್ರಕಾರ ಮಹತ್-ಶಬ್ದವು ಮೊದಲು ಹುಟ್ಟುವ ಸತ್ತಾಮಾತ್ರವನ್ನು[4] ಸೂಚಿಸುತ್ತದೆ; ಆದರೆ ವೈದಿಕಪ್ರಯೋಗದಲ್ಲಿ ಅದು ಆತ್ಮಶಬ್ದಕ್ಕೆ ಸಂಬಂಧಪಟ್ಟಿದೆ. 'ಬುದ್ಧಿಗಿಂತ ಮಹತ್ ಎಂಬ ಆತ್ಮನು ಶ್ರೇಷ್ಠನು' (ಕ. ಉ. ೧. ೩. ೧೦)—ಇವೇ

---

[1] ತೃತೀಯೇನ ವರೇಣ ಮೋಕ್ಷಸ್ವರೂಪಪ್ರಶ್ನದ್ವಾರೇಣೋಪೇಯಸ್ವರೂಪಮುಪೇತೃಸ್ವರೂಪಮುಪಾಯಭೂತಕರ್ಮಾನುಗೃಹೀತೋಪಾಸನಸ್ವರೂಪಂ ಚ ಪೃಷ್ಟಮ್ (ಶ್ರೀಭಾಷ್ಯ).

[2] ಮನಸ್ಸನ್ನು ವಿಷಯದಿಂದ ಸೆಳೆದು ತನ್ನ ಆತ್ಮನ ಮೇಲೆ ಧ್ಯಾನಮಾಡುವುದಕ್ಕೆ ಅಧ್ಯಾತ್ಮಯೋಗವೆಂದು ಹೆಸರು.

[3] ತ್ರಯಾಣಾಮೇವ ಪಿತೃಸೌಮನಸ್ಯಸ್ವರ್ಗ್ಯಾಗ್ನಿಪರಮಾತ್ಮನಾಂ ಪ್ರಶ್ನ ಉಪನ್ಯಾಸಶ್ಚ (ಮ. ಭಾ.).

[4] ಸತ್ತ್ವಪ್ರಧಾನವಾದ ಪ್ರಕೃತಿಯ ಮೊದಲನೆಯ ಪರಿಣಾಮ, ನಿರ್ವಿಕಲ್ಪ-ಬುದ್ಧಿ; ಸತ್ತ್ವಪ್ರಧಾನಪ್ರಕೃತೇರಾದ್ಯಪರಿಣಾಮೋ, ನಿರ್ವಿಕಲ್ಪಕಬುದ್ಧ್ಯಾತ್ಮಕಃ (ರತ್ನಪ್ರಭಾ).

ಮೊದಲಾದ ವಾಕ್ಯಗಳಲ್ಲಿ ಇದು ಬುದ್ಧಿಗಿಂತ ಬೇರೆ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆಯೆಂದೂ ಆತ್ಮನನ್ನು ಸೂಚಿಸುತ್ತದೆಯೆಂದೂ ತಿಳಿದುಬರುತ್ತದೆ. ಹೀಗೆಯೇ ಅವ್ಯಕ್ತ-ಶಬ್ದವು ಸಾಂಖ್ಯದರ್ಶನದಲ್ಲಿ ಪ್ರಧಾನವನ್ನು ಸೂಚಿಸಿದರೂ ವೇದಾಂತವಾಕ್ಯಗಳಲ್ಲಿ ಶರೀರವನ್ನು ಸೂಚಿಸುತ್ತದೆ. ಆದುದರಿಂದ ಆನುಮಾನಿಕವಾದ ಪ್ರಧಾನವು ಶಬ್ದಪ್ರಮಾಣವುಳ್ಳದ್ದಲ್ಲ.

**ವಿ.—ಬುದ್ಧೇರಾತ್ಮಾ ಮಹಾನ್ ಪರಃ** (ಕ. ಉ. ೧. ೩. ೧೦) ಎಂಬಲ್ಲಿ ಮಹತ್-ಶಬ್ದವು ಆತ್ಮನಿಗೆ ವಿಶೇಷಣವಾಗಿರುವುದರಿಂದ ಅಲ್ಲಿ ಜೀವಾತ್ಮನು ಸೂಚಿತನಾಗಿರುವನೇ ಹೊರತು ಸಾಂಖ್ಯರ ಮಹತ್ತಲ್ಲ; ಹೀಗೆಯೇ **ಅವ್ಯಕ್ತಾತ್ಪುರುಷಃ ಪರಃ** (ಕ. ಉ. ೧. ೩. ೧೧) ಎಂಬಲ್ಲಿ ಅವ್ಯಕ್ತ-ಶಬ್ದವು ಸಾಂಖ್ಯರ ಪ್ರಧಾನವನ್ನು ಸೂಚಿಸುವುದಿಲ್ಲ.

**ದ್ವೈತ.**—ಮಹತ್-ತತ್ತ್ವವನ್ನು ಸೂಚಿಸುವ ಮಹತ್-ಶಬ್ದವು ಪರಮಾತ್ಮನನ್ನು ಸೂಚಿಸುವಂತೆ, ಅವ್ಯಕ್ತಾದಿ-ಶಬ್ದಗಳೂ ಬೇರೆ ಅರ್ಥದಲ್ಲಿ ಪ್ರಸಿದ್ಧವಾಗಿದ್ದರೂ ಪರಮಾತ್ಮನಲ್ಲಿ ಮುಖ್ಯವಾಗಿವೆ.

## ೨. ಚಮಸಾಧಿಕರಣ

(ಸೂ. ೮-೧೦)

**ಚಮಸವದವಿಶೇಷಾತ್* ॥ ೮ ॥**

೮. ಚಮಸದ ಹಾಗೆ ಅವಿಶೇಷವಾಗಿರುವುದರಿಂದ (ಅಜಾ-ಶಬ್ದವು ಪ್ರಧಾನವನ್ನು ಸೂಚಿಸುವುದಿಲ್ಲ).

ಪ್ರಧಾನಕ್ಕೆ ಶಬ್ದಪ್ರಮಾಣವಿಲ್ಲವೆಂಬುದು ಇನ್ನೂ ಸಿದ್ಧವಾಗಿಲ್ಲ—ಎಂದು ಪ್ರಧಾನವಾದಿಯು ಮುಂದುವರಿಯುತ್ತಾನೆ; ಏಕೆಂದರೆ 'ತನ್ನ ಬಣ್ಣದವುಗಳೇ ಆದ ಬಹು-ಸಂತಾನವನ್ನು ಸೃಷ್ಟಿಸುತ್ತಿರುವ ಲೋಹಿತ-ಶುಕ್ಲ-ಕೃಷ್ಣವಾದ ಬಣ್ಣಗಳುಳ್ಳ ಒಂದು ಅಜಾ ಇದೆ'[1] (ಶ್ವೇ. ಉ. ೪. ೫) ಎಂದು ಶ್ರುತಿಯು ಹೇಳುತ್ತದೆ. ಈ ಮಂತ್ರದಲ್ಲಿರುವ ಲೋಹಿತ-ಶುಕ್ಲ-ಕೃಷ್ಣಗಳೆಂಬ ಶಬ್ದಗಳು ರಜಃ-ಸತ್ತ್ವ-ತಮಸ್ಸುಗಳನ್ನು ಎಂದರೆ ಪ್ರಧಾನವನ್ನು ಸೂಚಿಸುತ್ತವೆ. ಆದುದರಿಂದ ಕಾಪಿಲರ ಪ್ರಧಾನಕ್ಕೆ ಶ್ರುತಿಯ ಆಧಾರವಿದೆ.

ಇದಕ್ಕೆ ಪರಿಹಾರವು ಹೀಗಿದೆ: ಈ ಮಂತ್ರವು ಸ್ವತಂತ್ರವಾಗಿ ಯಾವ ವಾದವನ್ನೂ ಸಮರ್ಥಿಸಲಾರದು; ಏಕೆಂದರೆ ಯಾವುದಾದರೂ ಒಂದು ಕಲ್ಪನೆಯಿಂದ ಅಜಾತ್ವಾದಿಗಳನ್ನು ಯಾವ ವಾದಕ್ಕಾದರೂ ಹೊಂದಿಸಲು ಸಾಧ್ಯ. ಆದುದರಿಂದ ಸಾಂಖ್ಯವಾದವೇ ಇಲ್ಲಿ ಅಭಿಪ್ರೇತವಾಗಿದೆ ಎಂದು ಹೇಳಲು ಕಾರಣವಿರುವುದಿಲ್ಲ. ಇದನ್ನು 'ಕೆಳಗಡೆ ಬಾಯುಳ್ಳ ಮೇಲುಗಡೆ ಉಬ್ಬುಳ್ಳ ಚಮಸವಿದೆ'[2] (ಬೃ. ಉ. ೨. ೨. ೩) ಎಂಬ ಮಂತ್ರದಲ್ಲಿ ಹೇಳಿರುವ ಚಮಸಕ್ಕೆ ಹೋಲಿಸಬಹುದು. ಇಲ್ಲಿ ಈ ಚಮಸವು ಇಂತಹುದೆಂದು ಸ್ವತಂತ್ರವಾಗಿ ಹೇಳಲು ಆಗುವುದಿಲ್ಲ; ಇದರ ಅರ್ಥವನ್ನು ಮುಂದಿನ ವಾಕ್ಯದಿಂದ ಅದು ತಲೆ ಎಂದು ತಿಳಿಯಬಹುದು: 'ಕೆಳಗಡೆ ಬಾಯುಳ್ಳ, ಮೇಲುಗಡೆ ಉಬ್ಬುಳ್ಳ ಚಮಸವು ನಮ್ಮ ಈ ತಲೆ'[3] (ಬೃ. ಉ. ೨. ೨. ೩). ಹೀಗೆಯೇ ಯಾವ ವಿಶೇಷವೂ ಇಲ್ಲದಿರುವುದರಿಂದ ಅಜಾ-ಶಬ್ದವು ಏನನ್ನು ಸೂಚಿಸುತ್ತದೆಯೆಂದು ನಿರ್ಧರಿಸಲು ಆಗುವುದಿಲ್ಲ. ಅಜಾ-ಶಬ್ದದ ಅರ್ಥವನ್ನು ಅರಿತುಕೊಳ್ಳಲು ವಾಕ್ಯಶೇಷದ ಸಹಾಯವನ್ನು ಪಡೆಯಬೇಕಾಗಿದೆ.

ವಿ.—ಇಲ್ಲಿ (ಶ್ವೇ. ಉ. ೪. ೫) ಕಾಪಿಲತಂತ್ರದ ಪ್ರಕೃತಿಯನ್ನು ಹೇಳಿದೆಯೋ ಅಥವಾ ಬ್ರಹ್ಮಾತ್ಮಿಕವಾದ ಪ್ರಕೃತಿಯನ್ನು ಹೇಳಿದೆಯೋ?—ಎಂಬುದು ಸಂಶಯ.

---

* ಮಧ್ವಭಾಷ್ಯದ ಪ್ರಕಾರ ಈ ಸೂತ್ರವು ಆನುಮಾನಿಕಾಧಿಕರಣಕ್ಕೆ ಸೇರಿದೆ.

1 ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ ।

2 ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ ।

3 ಇದಂ ತಚ್ಛಿರಃ, ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ ।

ಕಾಪಿಲತಂತ್ರ-ಸಿದ್ಧವಾದ ಪ್ರಕೃತಿ—ಎಂಬುದು ಪೂರ್ವಪಕ್ಷ. ಸೂತ್ರಕಾರರು ಇದನ್ನು ನಿರಾಕರಿಸಿರುತ್ತಾರೆ; ಏಕೆಂದರೆ ಅಬ್ರಹ್ಮಾತ್ಮಿಕವಾದ ಪ್ರಕೃತಿಯನ್ನು ಒಪ್ಪಿಕೊಳ್ಳುವುದಕ್ಕೆ ಯಾವ ವಿಶೇಷವೂ ಇರುವುದಿಲ್ಲ. ಅದು ಅಜಾ (ಜನ್ಮರಹಿತವು) ಎಂಬ ಮಾತ್ರಕ್ಕೆ ಒಂದು ವಿಶೇಷಲಕ್ಷಣವಾಗಲಿಲ್ಲ. ಚಮಸ-ಶಬ್ದಕ್ಕೆ ಶಿರಸ್ಸೆಂಬ ಅರ್ಥವು ವಾಕ್ಯಶೇಷದಿಂದ ತಿಳಿಸುಬರುವಂತೆ ಅಜಾ ಎಂಬುದು ಸಾಂಖ್ಯತಂತ್ರದ ಪ್ರಕೃತಿಯನ್ನು ಸೂಚಿಸುತ್ತದೆ ಎಂದು ಸಿದ್ಧಪಡಿಸಲು ಯಾವ ಸಹಾಯವೂ ಇರುವುದಿಲ್ಲ. ಇದು ಸ್ವತಂತ್ರವಾಗಿ ಸೃಷ್ಟಿಸುತ್ತದೆ ಎಂಬುದಕ್ಕೂ ಯಾವ ಪ್ರಮಾಣವೂ ಕಂಡುಬರುವುದಿಲ್ಲ. ಆದುದರಿಂದ ಬ್ರಹ್ಮಾತ್ಮಿಕವಲ್ಲದ ಅಜಾ ಎಂಬುದನ್ನು ಈ ಮಂತ್ರವು ತಿಳಿಸುವುದಿಲ್ಲ.[1] ಬ್ರಹ್ಮಾತ್ಮಿಕವಾದ ಅಜಾ ಎಂಬುವನ್ನು ಗ್ರಹಿಸಲು ವಿಶೇಷ ಹೇತುವಿದೆಯೆಂಬುದು ಮುಂದಿನ ಸೂತ್ರದಿಂದ ತಿಳಿದುಬರುತ್ತದೆ.

ಇಲ್ಲಿ ಕಾಪಿಲತಂತ್ರಸಿದ್ಧವಾದ ಪ್ರಕ್ರಿಯೆಯನ್ನು ಖಂಡಿಸಿದೆಯೇ ಹೊರತು ಬ್ರಹ್ಮಾತ್ಮಕವಾದ ಪ್ರಕೃತಿ-ಮಹತ್-ಅಹಂಕಾರಾದಿಗಳ ಸ್ವರೂಪವನ್ನು ನಿರಾಕರಿಸಿಲ್ಲ. ಇವೆಲ್ಲ ಬ್ರಹ್ಮಾತ್ಮಕವೆಂದು ಶ್ರುತಿಸ್ಮೃತಿಗಳು ಹೇಳುತ್ತವೆ.[2]

ದ್ವೈ.—ಚಮಸ-ಶಬ್ದವು ಯಜ್ಞಪಾತ್ರದಲ್ಲಿ ಪ್ರಸಿದ್ಧವಾಗಿದ್ದರೂ ಶ್ರುತಿವಾಕ್ಯದಿಂದ (ಬೃ. ಉ. ೨. ೨. ೩) ಶಿರಸ್ಸನ್ನು ಸೂಚಿಸುತ್ತದೆ; ಹಾಗೆಯೇ ಅವ್ಯಕ್ತಾದಿ-ಶಬ್ದಗಳು ಬೇರೆಯ ಅರ್ಥಗಳಲ್ಲಿ ಪ್ರಸಿದ್ಧವಾಗಿದ್ದರೂ 'ಎಲ್ಲ ಹೆಸರುಗಳು ವಿಷ್ಣುವನ್ನೇ ಸೂಚಿಸುತ್ತವೆ—ಎಂದು ಹೇಳುತ್ತಾರೆ' ಎಂಬ ಶ್ರುತಿಯಂತೆ ಪರಮಾತ್ಮನನ್ನೇ ಸೂಚಿಸುತ್ತವೆ.[3] ಇದಂ ತಚ್ಛಿರಃ ಎಂಬ ಶ್ರುತಿಯಂತೆಯೇ ಈ ಶ್ರುತಿಯೂ ಪ್ರಮಾಣವುಳ್ಳದ್ದಾಗಿದೆ.

**ಜ್ಯೋತಿರುಪಕ್ರಮಾ ತು ತಥಾ ಹ್ಯಧೀಯತ ಏಕೇ * ॥ ೯॥**

೯. (ಅಜಾ ಎಂದರೆ) ಜ್ಯೋತಿಯೇ (ಎಂದರೆ ತೇಜಸ್ಸೇ) ಮೊದಲಾದ (ಭೂತಗಳು); ಏಕೆಂದರೆ ಕೆಲವರು ಹಾಗೆ ಅಧ್ಯಯನಮಾಡುತ್ತಾರೆ.

ಪರಮೇಶ್ವರನಿಂದ ಉತ್ಪನ್ನವಾದ, ತೇಜಸ್ಸು ನೀರು ಭೂಮಿ—ಇವುಗಳನ್ನು ಒಳಕೊಂಡಿರುವ, ನಾಲ್ಕು ಬಗೆಯ ಭೂತಗಳಿಗೆ[4] ಕಾರಣವಾಗಿರುವ ವಸ್ತುವನ್ನೇ ಅಜಾ

---

[1] ಅತೋಽನೇನ ಮಂತ್ರೇಣ ನಾಬ್ರಹ್ಮಾತ್ಮಿಕಾಽಜಾಽಭಿಧೀಯತೇ (ಶ್ರೀಭಾಷ್ಯ).

[2] ಚೂಲಿಕೋಪನಿಷತ್, ಶ್ವೇ. ಉ. ೧. ೮. ೧೦, ೫. ೯. ೧೦, ೬. ೧೬, ಗೀತಾ ೧೩. ೧೯. ೨೧, ೧೪. ೫ ೯. ೭. ೮ ನೋಡಿ.

[3] ಏವಮವ್ಯಕ್ತಾದಿಶಬ್ದಾಃ ಸರ್ವೇಽನ್ಯತ್ರ ಪ್ರಸಿದ್ಧಾ ಅಪಿ ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮುದಾಹರಂತೀತ್ಯಾದಿಶ್ರುತೇಃ ಪರಮಾತ್ಮಾಭಿಧಾಯಕಾ ಏವ (ಮ. ಭಾ.).

* ಈ ಸೂತ್ರ ಮತ್ತು ಮುಂದಿನದು ಮಧ್ವಭಾಷ್ಯದಲ್ಲಿ ಜ್ಯೋತಿರಧಿಕರಣಕ್ಕೆ ಸೇರಿವೆ.

[4] ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ.

ಎಂದು ಅರಿತುಕೊಳ್ಳಬೇಕು.[1] ಇದು ಭೂತತ್ರಯ-ಸ್ವರೂಪವಾಗಿರುವುದೇ ಹೊರಳು ಗುಣತ್ರಯ-ಸ್ವರೂಪವಾಗಿಲ್ಲ. ಇದರ ಅರ್ಥವು ಮತ್ತೊಂದು ಶಾಖೆಯಿಂದ ತಿಳಿದು ಬರುತ್ತದೆ. ಈ ಶಾಖೆಯು ತೇಜಸ್ಸೇ ಮೊದಲಾದುವು ಪರಮೇಶ್ವರನಿಂದ ಉತ್ಪನ್ನ ವಾಗಿವೆಯೆಂದು ತಿಳಿಸಿ, ಅವುಗಳಿಗೆ ಲೋಹಿತಾದಿ-ವರ್ಣಗಳನ್ನು ಹೇಳುತ್ತದೆ : 'ಯಾವುದು ಅಗ್ನಿಯ ಕೆಂಪು ಬಣ್ಣವೊ ಅದು ತೇಜಸ್ಸಿನ ಬಣ್ಣ ; ಯಾವುದು (ಅಗ್ನಿಯ) ಬಿಳಿಯ ಬಣ್ಣವೊ ಅದು ನೀರಿನ ಬಣ್ಣ ; ಯಾವುದು (ಅಗ್ನಿಯ) ಕಪ್ಪು ಬಣ್ಣವೊ ಅದು ಪೃಥ್ವಿಯ ಬಣ್ಣ'[2] (ಛಾಂ. ಉ. ೬. ೪. ೧). ಈ ಭೂತತ್ರಯವನ್ನೇ ವಿಷಯವಾಕ್ಯ ದಲ್ಲಿ ಗುರುತಿಸಬಹುದು ; ಏಕೆಂದರೆ ಲೋಹಿತಾದಿ-ಶಬ್ದಗಳು ಎರಡು ವಾಕ್ಯಗಳಿಗೂ ಸಮಾನವಾಗಿರುತ್ತವೆ ; ಮತ್ತು ಬಣ್ಣವನ್ನು ಮುಖ್ಯವೃತ್ತಿಯಿಂದ ತಿಳಿಸುವುದರಿಂದ ಅವು ಸಾಂಖ್ಯರ ಸತ್ತ್ವಾದಿಗುಣಗಳನ್ನು ಗೌಣವಾಗಿ ತಿಳಿಸುತ್ತವೆ. ಸಂಶಯಾಸ್ಪದವಾದ ಅರ್ಥವಿರುವ ವಾಕ್ಯವನ್ನು ಸಂಶಯವಿಲ್ಲದ ವಾಕ್ಯದಿಂದ ನಿರ್ಧರಿಸುವುದು ನ್ಯಾಯ ವೆಂಬುದು ಸಾಮಾನ್ಯನಿಯಮವಾಗಿದೆ.[3]

ಅವ್ಯಾಕೃತವಾದ ನಾಮರೂಪಗಳುಳ್ಳ, ನಾಮರೂಪಗಳ ಹಿಂದಿನ ಅವಸ್ಥೆಯಾದ ದೈವೀಶಕ್ತಿಯೇ ಈ ಮಂತ್ರದಿಂದಲೂ ಹೇಳಲ್ಪಟ್ಟಿದೆ—ಎಂದು ಪ್ರಕರಣದಿಂದ ಹೇಳ ಬಹುದು.[4] ಈ ದೈವೀಶಕ್ತಿಗೆ ಮೂರು ಬಣ್ಣಗಳಿವೆಯೆಂದು ಹೇಳಿದೆ ; ಏಕೆಂದರೆ ಅದರ ಕಾರ್ಯಗಳಾದ ತೇಜಸ್ಸು ಪೃಥ್ವಿ ನೀರು—ಇವುಗಳಿಗೂ ಮೂರು ಬಣ್ಣಗಳಿವೆ.

**ವಿ.**—'(ಅಜಾ ಎಂಬುದು) ಜ್ಯೋತಿಯಿಂದ ಉತ್ಪನ್ನವಾಗಿದೆ ; ಏಕೆಂದರೆ ಹಾಗೆ ಕೆಲವರು ಅಧ್ಯಯನಮಾಡುತ್ತಾರೆ' ಎಂಬುದು ಸೂತ್ರಾರ್ಥ.

ಸೂತ್ರದಲ್ಲಿರುವ ಜ್ಯೋತಿಃಶಬ್ದಕ್ಕೆ ಪರಬ್ರಹ್ಮನು ಎಂದರ್ಥ, **ತಂ ದೇವಾ ಜ್ಯೋತಿಷಾಂ ಜ್ಯೋತಿಃ** ಎಂದು ಮಾಧ್ಯಂದಿನ-ಪಾಠವು (೧೦. ೪. ೧೬) ಹೇಳು ತ್ತದೆ. 'ಜ್ಯೋತಿಯಿಂದ ಉತ್ಪನ್ನವಾಗಿದೆ' ಎಂಬುದಕ್ಕೆ 'ಬ್ರಹ್ಮನಿಂದ ಉತ್ಪನ್ನವಾಗಿದೆ' ಎಂದರ್ಥ.[5] ತೈತ್ತಿರೀಯರು ಹೀಗೆ ಅಧ್ಯಯನಮಾಡುತ್ತಾರೆ : **ಅಣೋರಣೀಯಾನ್ಮ-ಹತೋ ಮಹೀಯಾನ್** (ಮ. ನಾ. ಉ. ೧೨. ೧) ಎಂಬ ವಾಕ್ಯದಿಂದ ಬ್ರಹ್ಮನನ್ನು ಉಪಪಾದಿಸಿ, ಎಲ್ಲ ಲೋಕಗಳೂ ಎಲ್ಲ ದೇವತೆಗಳೂ ಅವನಿಂದಲೇ ಉತ್ಪನ್ನರಾಗುತ್ತಾರೆ

---

[1] ಪರಮೇಶ್ವರಾದುತ್ಪನ್ನಾ ಜ್ಯೋತಿಃಪ್ರಮುಖಾ ತೇಜೋಽಬನ್ನಲಕ್ಷಣಾ ಚತುರ್ವಿಧಸ್ಯ ಭೂತಗ್ರಾಮಸ್ಯ ಪ್ರಕೃತಿಭೂತೇಯಮಜಾ ಪ್ರತಿಪತ್ತವ್ಯಾ (ಸೂ. ಭಾ.).

[2] ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯ ।

[3] ಅಸಂದಿಗ್ಧೇನ ಚ ಸಂದಿಗ್ಧಸ್ಯ ನಿಗಮನಂ ನ್ಯಾಯ್ಯಂ ಮನ್ಯಂತೇ (ಸೂ. ಭಾ.).

[4] ಪ್ರಕರಣಾತ್ತು ಸೈವ ದೈವೀ ಶಕ್ತಿರವ್ಯಾಕೃತನಾಮರೂಪಯೋಃ ಪ್ರಾಗವಸ್ಥಾ ನೇನಾಪಿ ಮಂತ್ರೇಣಾಮ್ನಾಯತ ಇತ್ಯುಚ್ಯತೇ (ಸೂ. ಭಾ.).

[5] ಜ್ಯೋತಿರುಪಕ್ರಮಾ ಬ್ರಹ್ಮಕಾರಣಿಕೇತ್ಯರ್ಥಃ (ಶ್ರೀಭಾಷ್ಯ).

ಎಂದು ತಿಳಿಸಿ, ಸರ್ವಕ್ಕೂ ಕಾರಣವಾದ ಅಜಾ ಎಂಬುದು ಅವನಿಂದಲೇ ಉತ್ಪನ್ನವಾಗುತ್ತದೆ—ಎಂದು ಹೇಳುತ್ತಾರೆ[1] ಬ್ರಹ್ಮನಿಗಿಂತ ಭಿನ್ನವಾದ ವಸ್ತುಸಮೂಹವೆಲ್ಲ ಅವನಿಂದಲೇ ಹುಟ್ಟಿ, ಅವನನ್ನೇ ಆತ್ಮನನ್ನಾಗಿ ಹೊಂದಿದೆ ಎಂಬುದು ಈ ಪ್ರಕರಣದ ಉಪದೇಶ ಆದುದರಿಂದ ವಿಷಯವಾಕ್ಯದಲ್ಲಿ ಬಂದಿರುವ ಅಜಾ ಎಂಬುದು ಬ್ರಹ್ಮಾತ್ಮಿಕವೇ

**ದ್ವೈ.**—'ಮತ್ತು ಜ್ಯೋತಿಃ (ಶಬ್ದವು) ಬ್ರಹ್ಮನನ್ನೇ ಸೂಚಿಸುತ್ತದೆ, ಕೆಲವರು ಮೊದಲಿನಿಂದಲೂ ಹಾಗೆಯೇ ಅಧ್ಯಯನಮಾಡುತ್ತಾರೆ' ಎಂಬುದು ಸೂತ್ರಾರ್ಥ.

**ವಸಂತೇ ವಸಂತೇ ಜ್ಯೋತಿಷಾ ಯಜೇತ** ಎಂಬಲ್ಲಿ ಯಜ್ಞಕರ್ಮಗಳನ್ನು ಸೂಚಿಸುವ ಶಬ್ದಗಳು ಬ್ರಹ್ಮನನ್ನು ಸೂಚಿಸುವುದಿಲ್ಲ, ಹಾಗೆ ಸೂಚಿಸಿದರೆ ಕರ್ಮಾನುಷ್ಠಾನಕ್ಕೆ ವಿರೋಧವುಂಟಾಗುತ್ತದೆ—ಎಂಬ ಆಕ್ಷೇಪಣೆಯನ್ನು ಪರಿಹರಿಸಲು ಈ ಸೂತ್ರವು ಬಂದಿದೆ ಜ್ಯೋತಿಷ್ಟೋಮಾದಿಗಳನ್ನು ಸಾಮಾನ್ಯವಾಗಿ ಸೂಚಿಸುವ ಶಬ್ದಗಳೂ ವಿಷ್ಣುವನ್ನೇ ಸೂಚಿಸುತ್ತವೆ[2] 'ಇವನು ಬ್ರಹ್ಮನ ಶರೀರವನ್ನು ಪ್ರವೇಶಿಸಿ' ಎಂದು ಉಪಕ್ರಮಿಸಿ 'ಎಲ್ಲ ಋಕ್ಕುಗಳೂ ವೇದಗಳೂ ಘೋಷಗಳೂ ಬ್ರಹ್ಮನನ್ನೇ ಸೂಚಿಸುತ್ತವೆ ಅವನೇ ಪ್ರಾಣನು ಪ್ರಾಣನೇ ಋಕ್ಕುಗಳು ಎಂದು ತಿಳಿದುಕೊಳ್ಳಲಿ' (ಐ ಆ ೨. ೨ ೨) ಎಂದು ಕೆಲವು ಶಾಖೆಯವರು ಅಧ್ಯಯನಮಾಡುತ್ತಾರೆ

## ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ॥ ೧೦ ॥

೧೦ ಮಧ್ವಾದಿಗಳ ಹಾಗೆ (ಇದೂ) ಕಲ್ಪನೆಯ ಉಪದೇಶವಾದುದರಿಂದ ವಿರೋಧವಿಲ್ಲ

**ಆಕ್ಷೇಪಣೆ**— ಶ್ರುತಿಯಲ್ಲಿ ಹೇಳಿರುವಂತೆ (ಛಾಂ ಉ ೬ ೪. ೧) ಅಜಾಶಬ್ದವು ಭೂತತ್ರಯವನ್ನು ಸೂಚಿಸಿದರೆ ಅದು ಮೂರು ಬಣ್ಣಗಳುಳ್ಳ ಆಡೆಂದಾಗಲಿ ಅಥವಾ ಜನ್ಮರಹಿತವೆಂದಾಗಲಿ ಹೇಗೆ ತಿಳಿದುಕೊಳ್ಳುವುದು? ಏಕೆಂದರೆ ತೇಜಸ್ಸೇ ಮೊದಲಾದ ಭೂತಗಳಿಗೆ ಶ್ರುತಿಯು ಉತ್ಪತ್ತಿಯನ್ನು ಹೇಳುತ್ತದೆ

**ಪರಿಹಾರ**—ಅಜಾಶಬ್ದವು ಅಜಾಕೃತಿಯ ನಿಮಿತ್ತದಿಂದ ಬಂದದ್ದೂ ಅಲ್ಲ, 'ಜನ್ಮರಹಿತ' ಎಂಬುದನ್ನೂ ಸೂಚಿಸುವುದಿಲ್ಲ. ಇದು ಕಲ್ಪನೆಯ ಮೂಲಕ ಮಾಡಿದ ಉಪದೇಶ ಚರಾಚರಪ್ರಾಣಿಗಳಿಗೆ ಕಾರಣವಾಗಿರುವ ಭೂತತ್ರಯವನ್ನು ಆಡಿನ ರೂಪಕದಿಂದ ಕಲ್ಪಿಸಿದೆ ಲೋಕದಲ್ಲಿ ಕೆಂಪು ಮೊದಲಾದ ಬಣ್ಣಗಳಿಂದ ಕೂಡಿರುವ ಆಡಿಗೆ ಅದೇ ಬಣ್ಣಗಳಿರುವ ಮರಿಗಳು ಹುಟ್ಟುವಂತೆ, ತೇಜಸ್ಸು ನೀರು ಭೂಮಿ—ಇವುಗಳನ್ನು

---

[1] ಸರ್ವಕಾರಣೀಭೂತಾऽಜಾ ತತ ಉತ್ಪನ್ನಾऽಭಿಧೀಯತೇ—ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಮ್ । ಅಜೋ ಹ್ಯೇಕೋ ಜುಷಮಾಣೋऽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋऽನ್ಯಃ (ಶ್ರೀಭಾಷ್ಯ).

[2] ಜ್ಯೋತಿರಾದಿಕರ್ಮವಾಚಕತ್ವೇನ ಪ್ರಸಿದ್ಧಾಭಿಧೇಯೋऽಪಿ ಸ ಏವ (ಮ. ಭಾ.).

ಒಳಕೊಂಡಿರುವುದರಿಂದ ಮೂರು ಬಣ್ಣಗಳುಳ್ಳ ಭೂತಪ್ರಕೃತಿಯು ತನ್ನ ಬಣ್ಣವುಳ್ಳ ಚರಾಚರ-ರೂಪವಾದ ಕಾರ್ಯಸಮೂಹವನ್ನು ಹುಟ್ಟಿಸುತ್ತದೆ.

ಆದಿತ್ಯನನ್ನು ಮಧುವಿನಂತೆ (ಛಾ. ಉ ೩. ೧. ೧), ವಾಕ್ಕನ್ನು ಧೇನುವಿನಂತೆ (ಬೃ. ಉ. ೫ ೮. ೧), ದ್ಯುಲೋಕಾದಿಗಳನ್ನು ಅಗ್ನಿಯಂತೆ (ಬೃ. ಉ. ೬. ೨. ೯) ಕಲ್ಪಿಸಿರುವ ಹಾಗೆ ಭೂತಪ್ರಕೃತಿಯನ್ನು—ಅದು ಆಡಲ್ಲದಿದ್ದರೂ—ಆಡು ಎಂದು ಕಲ್ಪಿಸಿದೆ. ಆದುದರಿಂದ ಅಜಾ-ಶಬ್ದವು ಭೂತತ್ರಯವನ್ನು ಸೂಚಿಸುವುದರಲ್ಲಿ ಯಾವ ವಿರೋಧವೂ ಇಲ್ಲ.

ವಿ.—'ಮಧ್ವಾದಿಗಳಂತೆ ಸೃಷ್ಟಿಯ ಉಪದೇಶವಾದುದರಿಂದ ವಿರೋಧವಿಲ್ಲ' ಎಂಬುದು ಸೂತ್ರಾರ್ಥ.

ಪ್ರಕೃತಿಯು ಬ್ರಹ್ಮನಿಂದ ಹುಟ್ಟುವುದಾದರೆ ಅದನ್ನು ಅಜಾ ಎಂದು ಹೇಗೆ ಕರೆಯಬಹುದು? ಅಥವಾ ಅದು ಜನ್ಮರಹಿತವಾಗಿದ್ದರೆ ಬ್ರಹ್ಮನಿಂದ ಹುಟ್ಟಿದೆ ಎಂದು ಹೇಗೆ ಹೇಳಬಹುದು?—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ: ಕಲ್ಪನೆಯೆಂದರೆ ಸೃಷ್ಟಿ.[1] '**ಅದರಿಂದ** ಮಾಯಿಯು ವಿಶ್ವವೆಲ್ಲವನ್ನೂ ಸೃಷ್ಟಿಸುತ್ತಾನೆ' (ಶ್ವೇ. ಉ. ೪. ೯) ಎಂಬಲ್ಲಿ **ಅದರಿಂದ** ಎಂದರೆ ಇನ್ನೂ ವಿಭಕ್ತವಾಗದ ಪ್ರಕೃತಿಯ ಸೂಕ್ಷ್ಮಾವಸ್ಥೆಯಿಂದ. ಪ್ರಕೃತಿಗೆ ಕಾರ್ಯರೂಪ, ಕಾರಣರೂಪ—ಎಂಬ ಎರಡು ಅವಸ್ಥೆಗಳಿವೆ. ಪ್ರಲಯಕಾಲದಲ್ಲಿ ಅದು ಬ್ರಹ್ಮನಲ್ಲಿ ನಾಮರೂಪಗಳಿಲ್ಲದೆ ಇರುವಾಗ ಅವ್ಯಕ್ತವೆಂದೂ, ಸೃಷ್ಟಿಯ ಕಾಲದಲ್ಲಿ ಸತ್ತ್ವಾದಿಗುಣಗಳು ವ್ಯಕ್ತವಾಗಿ ನಾಮರೂಪಗಳು ವಿಂಗಡವಾದಾಗ ವ್ಯಕ್ತವೆಂದೂ ಎನಿಸಿದೆ. ಕಾರಣಾವಸ್ಥೆಯಲ್ಲಿ ಅದು ಅಜಾ, ಕಾರ್ಯಾವಸ್ಥೆಯಲ್ಲಿ ಅದು ಬ್ರಹ್ಮನಿಂದ ಹುಟ್ಟುತ್ತದೆ; ಆದುದರಿಂದ ಯಾವ ವಿರೋಧವೂ ಇಲ್ಲ.[2] ಆದಿತ್ಯನು ತನ್ನ ಕಾರಣಾವಸ್ಥೆಯಲ್ಲಿ ಒಬ್ಬನೇ ಆಗಿದ್ದರೂ, ಈಶ್ವರನು ಅವನನ್ನು ಕಾರ್ಯಾವಸ್ಥೆಯಲ್ಲಿ ವಸ್ವಾದಿದೇವತೆಗಳ ಭೋಗಕ್ಕೆ ಮಧುವಾಗಿ ಮಾಡಿ, ಅವನಿಗೆ ಉದಯಾಸ್ತಗಳನ್ನುಂಟುಮಾಡುತ್ತಾನೆ. ಈ ಎರಡು ಅವಸ್ಥೆಗಳಲ್ಲಿ ಯಾವ ವಿರೋಧವೂ ಇಲ್ಲ.

**ದ್ವೈ.**—ಮಧುವಿದ್ಯೆಯೇ ಮೊದಲಾದವುಗಳಲ್ಲಿ ಮಧ್ವಾದಿ-ಶಬ್ದಗಳು ಪರಬ್ರಹ್ಮನನ್ನು ಸೂಚಿಸುವಂತೆ ಯಜ್ಞಗಳನ್ನು ವಿವರಿಸುವ ಎಲ್ಲ ಶಬ್ದಗಳೂ ಪರಬ್ರಹ್ಮನನ್ನೇ ಸೂಚಿಸುತ್ತವೆ; ಏಕೆಂದರೆ ಉಪಾಸನೆಗೋಸ್ಕರ ಮಧುಶಬ್ದವಾಚ್ಯನಾದ ವಿಷ್ಣುವನ್ನೇ ಹೇಳಿವೆ. ಆದುದರಿಂದ ಯಜ್ಞಾದಿಗಳನ್ನು ಸೂಚಿಸುವ ಶಬ್ದಗಳ ವಿಷಯದಲ್ಲಿ ಯಾವ ವಿರೋಧವೂ ಇರುವುದಿಲ್ಲ.[3]

---

[1] ಕಲ್ಪನಂ ಕ್ಲೃಪ್ತಿಃ ಸೃಷ್ಟಿಃ (ಶ್ರೀಭಾಷ್ಯ).

[2] ಅತಃ ಕಾರಣಾವಸ್ಥಾಽಜಾ, ಕಾರ್ಯಾವಸ್ಥಾ ಜ್ಯೋತಿರುಪಕ್ರಮೇತಿ ನ ವಿರೋಧಃ (ಶ್ರೀಭಾಷ್ಯ).

[3] ಮಧುವಿದ್ಯಾದಿವತ್ ಸರ್ವಶಬ್ದಾರ್ಥತ್ವೇನ ಪರಸ್ಯ ಕಲ್ಪನೋಪದೇಶಾನ್ನ ಕರ್ಮಕಮಾವಿವಿರೋಧಃ (ಮಾ. ಭಾ.).

## ೩. ಸಂಖ್ಯೋಪಸಂಗ್ರಹಾಧಿಕರಣ *

(ಸೂ. ೧೧-೧೩)

**ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ॥ ೧೧ ॥**

೧೧. ಸಂಖ್ಯೆಯನ್ನು ಹೇಳಿರುವುದರಿಂದಲೂ (ಪ್ರಧಾನಕ್ಕೆ ಶಬ್ದಪ್ರಮಾಣವಿದೆಯೆಂದು ಹೇಳಲು) ಆಗುವುದಿಲ್ಲ ; ಏಕೆಂದರೆ ನಾನಾಭಾವವಿದೆ ಮತ್ತು ಅತಿರೇಕವಿದೆ.

**ಆಕ್ಷೇಪಣೆ**—'ಯಾವುದರಲ್ಲಿ ಪಂಚ ಪಂಚಜನರೂ ಆಕಾಶವೂ ಪ್ರತಿಷ್ಠಿತವಾಗಿಯೊ ಆ ಆತ್ಮನನ್ನೇ ಅಮೃತ-ಬ್ರಹ್ಮವೆಂದು ತಿಳಿಯುತ್ತೇನೆ. ಅರಿತುಕೊಂಡು ಅಮೃತನಾಗಿದ್ದೇನೆ'[1] (ಬೃ. ಉ. ೪. ೪. ೧೭); ಇಲ್ಲಿ ಪಂಚಜನರನ್ನು ಸೂಚಿಸುವ ಒಂದು ಶಬ್ದವೂ ಅದಕ್ಕೆ ವಿಶೇಷಣವಾಗಿರುವ ಪಂಚ ಎಂಬ ಮತ್ತೊಂದು ಶಬ್ದವೂ ಇವೆ. ಈ ಎರಡು ಶಬ್ದಗಳು ಇಪ್ಪತ್ತೈದನ್ನು ಸೂಚಿಸುತ್ತವೆ. ಸಾಂಖ್ಯದರ್ಶನದಲ್ಲಿಯೂ ಕೂಡ ಇಪ್ಪತ್ತೈದು-ತತ್ತ್ವಗಳನ್ನು[2] ಹೇಳಿವೆ. ಶ್ರುತಿಯಲ್ಲಿ ಹೇಳಿರುವ ಇಪ್ಪತ್ತೈದು, ಸಾಂಖ್ಯರ ಇಪ್ಪತ್ತೈದು-ತತ್ತ್ವಗಳನ್ನು ಸೂಚಿಸುವುದರಿಂದ ಪ್ರಧಾನಕ್ಕೆ ಶಬ್ದಪ್ರಮಾಣವಿದೆ.

**ಪರಿಹಾರ**—ಶ್ರುತಿಯಲ್ಲಿ ಬಂದಿರುವ ಸಂಖ್ಯಾಬಲದಿಂದ ಪ್ರಧಾನಕ್ಕೆ ಶಬ್ದ-ಪ್ರಮಾಣವಿದೆಯೆಂದು ಹೇಳಲಾಗುವುದಿಲ್ಲ ; ಏಕೆಂದರೆ ಸಾಂಖ್ಯರ ಇಪ್ಪತ್ತೈದು ತತ್ತ್ವಗಳು ಒಂದಕ್ಕಿಂತ ಒಂದು ಬೇರೆಯಾಗಿವೆ. ಇವರ ಇಪ್ಪತ್ತೈದು ತತ್ತ್ವಗಳನ್ನು ಐದೈದಾಗಿ ವಿಂಗಡಿಸಲು ಯಾವ ಸಾಮಾನ್ಯಧರ್ಮವೂ ಇರುವುದಿಲ್ಲ. ಮತ್ತೆ ಪಂಚ ಪಂಚ ಎಂದು ಎರಡು ಸಲ ಬಂದಿರುವುದರಿಂದ ಅವು ಇಪ್ಪತ್ತೈದನ್ನು ಸೂಚಿಸುತ್ತವೆ ಎನ್ನುವುದಕ್ಕೂ ಕಾರಣವಿಲ್ಲ ; ಏಕೆಂದರೆ ಮುಖ್ಯಾರ್ಥವು ಹೊಂದುವಾಗ ಲಕ್ಷಣೆಯನ್ನು ಅನುಸರಿಸಬೇಕಾಗಿಲ್ಲ. **ಪಂಚಾನಾಂ ತ್ವಾ ಪಂಚಜನಾನಾಮ್**[3] (ತೈ. ಸಂ. ೧. ೬. ೨. ೨) ಎಂಬಲ್ಲಿರುವ ಪ್ರಯೋಗದಂತೆ ಇಲ್ಲಿ ಎರಡನೆಯ ಪಂಚ-ಶಬ್ದವು ಜನಶಬ್ದದೊಡನೆ **ಪಂಚಜನಾಃ** ಎಂದು ಸಮಾಸವಾಗುತ್ತದೆ. ಆದುದರಿಂದ ಪಂಚ-ಶಬ್ದವು ಎರಡು ಸಲ

---

* ಇದನ್ನು ಮಧ್ವಭಾಷ್ಯದಲ್ಲಿ ಪಂಚಜನಾಧಿಕರಣ ಎಂದು ಕರೆದಿದೆ.

[1] ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ ।
ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥

[2] ಮೂಲಪ್ರಕೃತಿ, ಮಹತ್ತು, ಅಹಂಕಾರ, ಪಂಚತನ್ಮಾತ್ರಗಳು, ಪಂಚಭೂತಗಳು, ಏಕಾದಶೇಂದ್ರಿಯಗಳು ಮತ್ತು ಪುರುಷ. ಸಾಂಖ್ಯಕಾರಿಕಾ ೩ನ್ನು ನೋಡಿ.

[3] 'ಐವರು ಪಂಚಜನ (ದೇವತೆಗಳಿಗಾಗಿ) ನಿನ್ನನ್ನು (ಸ್ವೀಕರಿಸುತ್ತೇನೆ).

ಬಂದಿದೆಯೆಂದು ಹೇಳಲಾಗುವುದಿಲ್ಲ. **ಪಂಚಜನಾಃ** ಎಂಬ ಶಬ್ದವು ಐವರು ಬೇರೆ ಬೇರೆ ಜನರನ್ನು ಸೂಚಿಸುತ್ತದೆಯೇ ಹೊರತು ಪಂಚಕಗಳನ್ನು ಸೂಚಿಸುವುದಿಲ್ಲ. ಸಾಂಖ್ಯರ ಇಪ್ಪತ್ತೈದು ತತ್ತ್ವಗಳಲ್ಲಿ ಆತ್ಮ ಮತ್ತು ಆಕಾಶ ಎಂಬ ಇವೆರಡೂ ಅಂತರ್ಗತವಾಗಿವೆ. ಆದರೆ ಇಲ್ಲಿ ಇವೆರಡನ್ನೂ ಬೇರೆಯಾಗಿ ಹೇಳಿರುವುದರಿಂದ ಸಾಂಖ್ಯರ ತತ್ತ್ವಗಳು ಇಪ್ಪತ್ತೈದಕ್ಕಿಂತ ಹೆಚ್ಚಾಗುತ್ತವೆ. **ಪಂಚ ಪಂಚಜನಾಃ** ಎಂಬುದಕ್ಕೆ ಅರ್ಥವು ಹೀಗಿದೆ: ಪಾಣಿನಿಯ ಪ್ರಕಾರ[1] ಸಂಖ್ಯಾಶಬ್ದದಿಂದ ಕೂಡಿರುವ ಸಮಾಸಗಳು ಸಂಜ್ಞೆಯನ್ನು ಸೂಚಿಸುತ್ತವೆ. ಇಲ್ಲಿ ಪಂಚ-ಶಬ್ದವು ಜನಶಬ್ದದೊಂದಿಗೆ ಸಮಾಸವಾಗಿ ಸಂಜ್ಞೆಯನ್ನು (ಎಂದರೆ ಹೆಸರನ್ನು) ಸೂಚಿಸುತ್ತದೆ. ಆದುದರಿಂದ **ಪಂಚಜನಾಃ** ಎಂಬುದು ಸಂಖ್ಯೆಯನ್ನು ತಿಳಿಸದೆ ವಿಶಿಷ್ಟಜನರನ್ನು ತಿಳಿಸುತ್ತದೆ; 'ಸಪ್ತರ್ಷಿಗಳು ಏಳು ಮಂದಿ' ಎಂದು ಹೇಳುವಂತೆ ಪಂಚಜನರೆಂಬ ಐವರು ಇದ್ದಾರೆ ಎಂದರ್ಥ.

**ವಿ.—ಪಂಚ ಪಂಚಜನಾಃ** ಎಂಬುದು ಕಾಪಿಲತಂತ್ರದಲ್ಲಿ ಸಿದ್ಧವಾದ ತತ್ತ್ವಗಳನ್ನು ಸೂಚಿಸುವುದಿಲ್ಲ ವಿಷಯವಾಕ್ಯದಲ್ಲಿರುವ 'ಯಾವನಲ್ಲಿ' **ಯಸ್ಮಿನ್** ಎಂಬ ಶಬ್ದವು ಈ ಐದು ಪಂಚಜನರು ಬ್ರಹ್ಮನಲ್ಲಿ ಪ್ರತಿಷ್ಠಿತರಾಗಿರುವರೆಂಬ ಕಾರಣದಿಂದ ಬ್ರಹ್ಮಾತ್ಮಕರೆಂದು ತಿಳಿಸುತ್ತದೆ; ಮತ್ತು ಮುಂದಿನ ವಾಕ್ಯದಲ್ಲಿ ಬರುವ 'ಅವನನ್ನು' **ತಮ್** ಎಂಬುದೂ **ಯಸ್ಮಿನ್**-ಶಬ್ದಕ್ಕೆ ಸಂಬಂಧಪಟ್ಟು ಬ್ರಹ್ಮನನ್ನೇ ತಿಳಿಸುತ್ತದೆ. ಆದುದರಿಂದ ಸರ್ವತತ್ತ್ವಾಶ್ರಯನಾದ ಪರಮಪುರುಷನನ್ನೇ ಶ್ರುತಿಯು ಇಲ್ಲಿ ಹೇಳುತ್ತದೆ ಎಂದರ್ಥ.

**ದ್ವೈ.—ಯಸ್ಮಿನ್ ಪಂಚ ಪಂಚಜನಾಃ** ಎಂಬ ಶ್ರುತಿಯಲ್ಲಿ ಶಬ್ದಗಳು ಬಹುತ್ವಸಂಖ್ಯೆಯನ್ನು ಸೂಚಿಸಿದರೂ ವಿರೋಧವಿಲ್ಲ; ಏಕೆಂದರೆ ವಿಷ್ಣುವಿಗೆ ಅನೇಕ ರೂಪಗಳಿವೆ. ಅವನೇ ಆಕಾಶಾದಿಗಳಲ್ಲಿ ಬಹುರೂಪಗಳನ್ನು ಹೊಂದಿರುತ್ತಾನೆ. ಇವು ಅವನ ಅತಿರಿಕ್ತವಾದ ರೂಪಗಳು[2].

## ಪ್ರಾಣಾದಯೋ ವಾಕ್ಯಶೇಷಾತ್ ॥ ೧೨ ॥

೧೨. ವಾಕ್ಯಶೇಷದಿಂದ ಪ್ರಾಣಾದಿಗಳೇ (ಪಂಚಜನರೆಂದು ತಿಳಿದು ಬರುತ್ತದೆ.)

ಪಂಚಜನರು ಯಾರೆಂಬುದನ್ನು ಮುಂದಿನ ಮಂತ್ರವೇ ತಿಳಿಸುತ್ತದೆ: 'ಯಾರು ಪ್ರಾಣದ ಪ್ರಾಣವನ್ನು ಕಣ್ಣಿನ ಕಣ್ಣನ್ನು ಕಿವಿಯ ಕಿವಿಯನ್ನು ಅನ್ನದ ಅನ್ನವನ್ನು ಮನಸ್ಸಿನ ಮನಸ್ಸನ್ನು ಅರಿತುಕೊಂಡಿರುವರೊ ಅವರು....ಬ್ರಹ್ಮವನ್ನು ಸಾಕ್ಷಾತ್ಕರಿಸು

[1] ದಿಕ್‌ಸಂಖ್ಯೇ ಸಂಜ್ಞಾಯಾಮ್ (೨. ೧. ೫೦).

[2] ತಸ್ಯೈವಾಕಾಶಾದಿಷು ನಾನಾಭಾವಾತ್ ತದತಿರಿಕ್ತಸ್ವರೂಪವತ್ತ್ವಾಚ್ಚ (ಮ. ಭಾ.).

ತ್ತಾರೆ [1] ಅಥವಾ ಪಂಚಜನರೆಂದರೆ ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು, ಅಥವಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ, ಎಂಬ ಐದು ವರ್ಣಗಳು—ಇವರೂ ಆಗಬಹುದು ಪಂಚಜನರು ಯಾರೇ ಆಗಿರಲಿ ಸಾಂಖ್ಯರ ತತ್ತ್ವಗಳಂತೂ ಆಗುವುದಿಲ್ಲ

ವಿ.—ಬ್ರಹ್ಮಾತ್ಮಕವಾಗಿರುವ ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ ಮತ್ತು ಮನಸ್ಸು—ಇವೇ ಪಂಚಜನರು

ದ್ವೈ.—ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು—ಈ ಶಬ್ದಗಳಿಂದ ವಾಚ್ಯನಾದವನು ಭಗವಂತನೇ, ಏಕೆಂದರೆ ಇವನೇ ಪ್ರಾಣಾದಿಗಳಲ್ಲಿ ಇರುತ್ತಾನೆ

## ಜ್ಯೋತಿಷೈಕೇಷಾಮಸತ್ಯನ್ನೇ ॥ ೧೩ ॥

೧೩ ಕೆಲವರ (ಶಾಖೆಯಲ್ಲಿ) ಅನ್ನವನ್ನು ಹೇಳಿಲ್ಲದಿರುವಾಗ ಜ್ಯೋತಿಯಿಂದ (ಪಂಚಜನಸಂಖ್ಯೆಯನ್ನು ಪೂರೈಸಿಕೊಳ್ಳಬೇಕು)

ಕಾಣ್ವರ ಪಾಠದಲ್ಲಿ (ಬೃ. ಉ. ೪ ೪ ೧೮) ಅನ್ನವನ್ನು ಹೇಳದಿದ್ದರೂ ಹಿಂದಿನ ಮಂತ್ರದಲ್ಲಿ (ಬೃ ಉ ೪ ೪ ೧೬) ಹೇಳಿರುವ ಜ್ಯೋತಿಯಿಂದ ಪಂಚಜನಸಂಖ್ಯೆಯನ್ನು ಪೂರೈಸಿಕೊಳ್ಳಬೇಕು

ವಿ.—ಕಾಣ್ವಪಾಠದಲ್ಲಿ ಪಂಚೇಂದ್ರಿಯಗಳನ್ನು ಪೂರೈಸಲು ಹಿಂದಿನ ಮಂತ್ರದಲ್ಲಿ ಬರುವ ಜ್ಯೋತಿಯನ್ನು[2] ಸೇರಿಸಿಕೊಳ್ಳಬೇಕು ಪ್ರಾಣವು ಸ್ಪರ್ಶನೇಂದ್ರಿಯವನ್ನೂ ಚಕ್ಷುಸ್ಸು ಚಕ್ಷುರಿಂದ್ರಿಯವನ್ನೂ ಶ್ರೋತ್ರವು ಶ್ರೋತ್ರೇಂದ್ರಿಯವನ್ನೂ ಅನ್ನವು ಘ್ರಾಣ ರಸನೇಂದ್ರಿಯಗಳನ್ನೂ ಮನಸ್ಸು ಅಂತಃಕರಣವನ್ನೂ ಸೂಚಿಸುತ್ತವೆ

ದ್ವೈ.—ಕಾಣ್ವರ ಪಾಠದಲ್ಲಿ ಜ್ಯೋತಿಯನ್ನು ಸೇರಿಸಿಕೊಂಡು ಪಂಚತ್ವವನ್ನು ಅರಿತುಕೊಳ್ಳಬೇಕು

---

1 ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಯೇ ಮನೋ ವಿದುಃ । ಇದು ಮಾಧ್ಯಂದಿನ-ಪಾಠ, ಕಾಣ್ವರ ಪಾಠದಲ್ಲಿ ಅನ್ನಸ್ಯಾನ್ನಮ್ ಎಂಬುದಿರುವುದಿಲ್ಲ

2 'ಜ್ಯೋತಿಗಳಿಗೆ ಜ್ಯೋತಿ' ಎಂಬಲ್ಲಿ ಈ ಜ್ಯೋತಿಗಳು ಯಾವುವು '—ಎಂಬ ಪ್ರಶ್ನೆ ಏಳುತ್ತದೆ. ಬ್ರಹ್ಮನಿಗೆ ಅಧೀನವಾಗಿ ತಮ್ಮ ವಿಷಯಗಳಲ್ಲಿ ಪ್ರವೃತ್ತವಾಗಿರುವ ಇಂದ್ರಿಯಗಳೇ ಈ ಜ್ಯೋತಿಗಳೆಂದು ತಿಳಿದುಬರುತ್ತದೆ

## ೪. ಕಾರಣತ್ವಾಧಿಕರಣ

(ಸೂ. ೧೪–೧೫)

**ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ * ॥ ೧೪ ॥**

೧೪. ಆಕಾಶಾದಿಗಳ ವಿಷಯದಲ್ಲಿ (ಶ್ರುತಿಗಳು ಪರಸ್ಪರ ವಿರುದ್ಧವಾಗಿದ್ದರೂ ಸೃಷ್ಟಿಕರ್ತೃವಿನ ವಿಷಯದಲ್ಲಿ ಯಾವ ವಿರೋಧವೂ ಇಲ್ಲ); ಏಕೆಂದರೆ ಕಾರಣವಾಗಿ (ಒಂದು ಶ್ರುತಿಯಲ್ಲಿ) ಹೇಳಿವಂತೆಯೇ (ಇತರ ಶ್ರುತಿಗಳಲ್ಲಿಯೂ) ಹೇಳಿದೆ.

ಹಿಂದೆ ಬ್ರಹ್ಮದ ಲಕ್ಷಣವನ್ನು ಹೇಳಿದ್ದಾಯಿತು; ಶ್ರುತಿಗಳಿಗೆಲ್ಲ ಬ್ರಹ್ಮವೇ ಸಾಮಾನ್ಯವಿಷಯವೆಂದೂ ಪ್ರತಿಪಾದಿಸಿದ್ದಾಯಿತು; ಮತ್ತು ಪ್ರಧಾನಕ್ಕೆ ಶಬ್ದ-ಪ್ರಮಾಣವಿಲ್ಲವೆಂದೂ ಸಿದ್ಧಪಡಿಸಿದ್ದಾಯಿತು. ಈಗ ಒಂದು ಹೊಸ ಆಕ್ಷೇಪಣೆಯನ್ನು ಮಾಡಲಾಗುತ್ತಿದೆ.

**ಆಕ್ಷೇಪಣೆ**—ಬ್ರಹ್ಮವು ಜಗತ್ಕಾರಣವೆಂದಾಗಲಿ ಶ್ರುತಿಗಳೆಲ್ಲ ಬ್ರಹ್ಮವನ್ನೇ ಸೂಚಿಸುತ್ತವೆಯೆಂದಾಗಲಿ ಹೇಳಲಾಗುವುದಿಲ್ಲ; ಏಕೆಂದರೆ ಸೃಷ್ಟಿಯ ಕ್ರಮವನ್ನು ಒಂದೊಂದು ಶ್ರುತಿಯಲ್ಲಿ ಒಂದೊಂದು ವಿಧವಾಗಿ ಹೇಳಿದೆ. ಆತ್ಮನಿಂದ ಆಕಾಶವು ಹುಟ್ಟಿತೆಂದು ತೈತ್ತಿರೀಯದಲ್ಲಿ (೨ ೧) ಹೇಳಿದೆ; ತೇಜಸ್ಸಿನಿಂದ ಸೃಷ್ಟಿಯು ಪ್ರಾರಂಭವಾಯಿತೆಂದು ಛಾಂದೋಗ್ಯವು (೬. ೨. ೩) ಹೇಳುತ್ತದೆ; ಪ್ರಾಣದಿಂದ ಸೃಷ್ಟಿಯು ಉತ್ಪನ್ನವಾಯಿತೆಂದು ಪ್ರಶ್ನವು (೬. ೪) ಹೇಳುತ್ತದೆ. ಇನ್ನು ಕೆಲವು ಕಡೆಗಳಲ್ಲಿ (ತೈ. ಉ. ೨. ೭ ಮತ್ತು ಛಾಂ ಉ ೩. ೧೯. ೧) ಅಸತ್ತಿನಿಂದ ಸೃಷ್ಟಿಯನ್ನು ಹೇಳಿದೆ. ಒಂದೇ ಬಗೆಯಾದ ಕ್ರಮವು ಶ್ರುತಿಗಳಲ್ಲಿ ಕಂಡುಬರುತ್ತಿಲ್ಲ. ಆದುದರಿಂದ ಸ್ಮೃತಿ ಮತ್ತು ನ್ಯಾಯ, ಇವುಗಳನ್ನು ಆಧಾರವಾಗಿ ಹೊಂದಿರುವ ಮತ್ತೊಂದು ಜಗತ್ಕಾರಣವನ್ನು ಗ್ರಹಿಸಬೇಕು.

**ಪರಿಹಾರ**—ಸೃಷ್ಟಿಸಲ್ಪಡುವ ಆಕಾಶಾದಿಗಳ ವಿಷಯದಲ್ಲಿ ಶ್ರುತಿಗಳು ಬೇರೆ ಬೇರೆ ಕ್ರಮವನ್ನು ಹೇಳಿದ್ದರೂ ಸೃಷ್ಟಿಕರ್ತೃವಿನ ವಿಷಯದಲ್ಲಿ ಯಾವ ವಿರೋಧೋಕ್ತಿಯೂ ಕಂಡುಬರುವುದಿಲ್ಲ. ಅವನೇ ಎಲ್ಲ ವೇದಾಂತವಾಕ್ಯಗಳಲ್ಲಿಯೂ ಸರ್ವಜ್ಞನೆಂದೂ ಸರ್ವೇಶ್ವರನೆಂದೂ ಸರ್ವಾತ್ಮನೆಂದೂ ಅದ್ವಿತೀಯನೆಂದೂ ಏಕಕಾರಣನೆಂದೂ ಹೇಳಲ್ಪಟ್ಟಿದ್ದಾನೆ.[1]

---

* ಮಧ್ವಭಾಷ್ಯದ ಪ್ರಕಾರ ಈ ಸೂತ್ರವು ಆಕಾಶಾಧಿಕರಣಕ್ಕೆ ಸೇರಿದೆ.

[1] ಯಥಾಭೂತೋ ಹ್ಯೇಕಸ್ಮಿನ್ ವೇದಾಂತೇ ಸರ್ವಜ್ಞಃ ಸರ್ವೇಶ್ವರಃ ಸರ್ವಾತ್ಮೈಕೋಽದ್ವಿತೀಯಃ ಕಾರಣತ್ವೇನ ವ್ಯಪದಿಷ್ಟಸ್ತಥಾಭೂತ ಏವ ವೇದಾಂತಾಂತರೇಷ್ವಪಿ ವ್ಯಪದಿಶ್ಯತೇ (ಸೂ. ಭಾ.).

ಕಾರ್ಯವೆನಿಸಿದ ಸೃಷ್ಟಿಕ್ರಮದ ವಿಷಯದಲ್ಲಿ ಹೇಳಿರುವ ವಿರೋಧೋಕ್ತಿಗಳು ಕಾರಣವಾದ ಬ್ರಹ್ಮವನ್ನು ತಿಳಿಸುವ ವಾಕ್ಯಗಳಿಗೆ ವಿರುದ್ಧವಾಗಿರುವುದೆಂದು ಹೇಳುವುದು ಅತಿಪ್ರಸಂಗ ವಾಗಿರುತ್ತದೆ ಸೃಷ್ಟಿಯನ್ನು ಪ್ರತಿಪಾದಿಸುವುದು ಶ್ರುತಿಯ ಅಭಿಪ್ರಾಯವಲ್ಲ, ಏಕೆಂದರೆ ಅದರಿಂದಾಗುವ ಪುರುಷಾರ್ಥವು ಕಂಡುಬರುವುದೂ ಇಲ್ಲ, ಶ್ರುತಿಯಲ್ಲಿಯೂ ಹೇಳಿಲ್ಲ, ಹಾಗೆ ಕಲ್ಪಿಸಿಕೊಳ್ಳಲೂ ನಮಗೆ ಅಧಿಕಾರವಿಲ್ಲ [1] ಸೃಷ್ಟ್ಯಾದಿಗಳನ್ನು ತಿಳಿಸುವ ವಾಕ್ಯ ಗಳಿಗೆ ಬ್ರಹ್ಮದ ಉಪದೇಶವೇ ತಾತ್ಪರ್ಯವೆಂದು ಶ್ರುತಿಯೇ (ಛಾಂ ಉ ೬ ೮ ೪) ಹೇಳುತ್ತದೆ ಇದಲ್ಲದೆ ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲವೆಂದು ತಿಳಿಸಲು ಸೃಷ್ಟ್ಯಾದಿ ವಿವರಗಳನ್ನು ಶ್ರುತಿಯಲ್ಲಿ ಹೇಳಿದಯೆಂದು ಮಣ್ಣು ಮೊದಲಾದ ದೃಷ್ಟಾಂತಗಳಿಂದ ತಿಳಿಯಬರುತ್ತದೆ [2]

ವಿ —'ಸೃಷ್ಟಿಯು ಒಬ್ಬನಿಂದಲೇ ಉಂಟಾಗಿದೆಯೆಂದು ಶ್ರುತಿಗಳು ಹೇಳುವುದಿಲ್ಲ, ಆದುದರಿಂದ ಪರಬ್ರಹ್ಮನು ಜಗತ್ಕಾರಣನೆಂದು ಹೇಳಲಾಗವುದಿಲ್ಲ ಒಂದು ಕಡೆ (ಛಾಂ ಉ ೬ ೨ ೧) ಸದ್ವಸ್ತುವಿನಿಂದ ಸೃಷ್ಟಿಯು ಉಂಟಾಗಿದಯೆಂದು ಹೇಳಿವೆ, ಇನ್ನೊಂದು ಕಡೆ (ತೈ ಉ ೨ ೭) ಅಸದ್ವಸ್ತುವಿನಿಂದ ಜಗತ್ತು ಉತ್ಪನ್ನವಾಗಿದೆ ಎಂದು ಹೇಳಿವೆ, ಮತ್ತೊಂದು ಕಡೆ (ಬೃ ಉ ೧ ೪ ೭) ಅವ್ಯಾಕೃತದಿಂದಲೇ ಸೃಷ್ಟಿಯು ಹೊರಟಿದೆಯೆಂದು ಹೇಳಿದೆ ಈ ವಾಕ್ಯಗಳಿಂದಲೇ ಪ್ರಧಾನವು ಜಗತ್ಕಾರಣ ವೆಂದು ನಿರ್ಧರಿಸಬಹುದು' ಎಂದು ಪ್ರಧಾನವಾದಿಯು ಒಂದು ಹೊಸ ಆಕ್ಷೇಪಣೆಯನ್ನು ಎತ್ತುತ್ತಾನೆ

ಇದಕ್ಕೆ ಪರಿಹಾರವು ಹೀಗಿದೆ: ಸರ್ವಜ್ಞನೂ ಸರ್ವೇಶ್ವರನೂ ಸತ್ಯ ಸಂಕಲ್ಪನೂ ಆದ ಪರಬ್ರಹ್ಮನಿಂದಲೇ ಜಗತ್ತು ಉತ್ಪನ್ನವಾಗಿದೆಯೆಂದು ಶ್ರುತಿಗಳಿಂದ ನಿರ್ಧರಿಸ ಬಹುದು, ಏಕೆಂದರೆ ಹಿಂದೆ ನಿರ್ದೇಶಿಸಿರುವಂತೆ ಪರಬ್ರಹ್ಮನೇ ಆಕಾಶಾದಿಗಳಿಗೆ ಕಾರಣ ನಾಗಿರುತ್ತಾನೆ 'ಹಿಂದೆ ನಿರ್ದೇಶಿಸಿರುವಂತೆ' ಎಂದರೆ **ಜನ್ಮಾದ್ಯಸ್ಯ ಯತಃ** (೧ ೧ ೨) ಮೊದಲಾದ ಕಡೆಗಳಲ್ಲಿ ನಿರ್ದಿಷ್ಟನಾದ, ಸರ್ವಜ್ಞತ್ವಾದಿ-ವಿಶಿಷ್ಟನಾದ ಪರಬ್ರಹ್ಮನೇ, ಆಕಾಶಾದಿಗಳಿಗೆ ಕಾರಣನಾಗಿರುತ್ತಾನೆ' ಎಂದರೆ 'ಆ ಆತ್ಮನಿಂದ ಆಕಾಶವು ಹುಟ್ಟಿತು' (ತೈ ಉ ೨ ೧), 'ಅದು ತೇಜಸ್ಸನ್ನು ಸೃಷ್ಟಿಸಿತು' (ಛಾಂ ಉ ೬ ೨ ೩) ಇವೇ ಮೊದಲಾದ ವಾಕ್ಯಗಳಲ್ಲಿ ಹೇಳಿರುವ ಜಗತ್ಕಾರಣವೇ ಸರ್ವಜ್ಞನಾದ ಪರಬ್ರಹ್ಮನು.

ದ್ವೈ.—'ಆಕಾಶಾದಿಗಳಲ್ಲಿ (ಬ್ರಹ್ಮನು) ಕಾರಣನಾಗಿರುತ್ತಾನೆ, ಏಕೆಂದರೆ ಯಾವ ಪ್ರಕಾರದಿಂದ ನಿರ್ದಿಷ್ಟನಾಗಿದ್ದಾನೆಯೊ ಆ ಪ್ರಕಾರದಿಂದಲೇ ಹೇಳಲ್ಪಟ್ಟಿದ್ದಾನೆ' ಎಂಬುದು ಸೂತ್ರಾರ್ಥ

---

[1] ನ ಹ್ಯಯಂ ಸೃಷ್ಟ್ಯಾದಿಪ್ರಪಂಚಃ ಪ್ರತಿಪಿಪಾದಯಿಷಿತಃ । ನ ಹಿ ತತ್ಪ್ರತಿಬದ್ಧಃ ಕಶ್ಚಿತ್ಪುರುಷಾರ್ಥೋ ದೃಶ್ಯತೇ ಶ್ರೂಯತೇ ವಾ । ನ ಚ ಕಲ್ಪಯಿತುಂ ಶಕ್ಯತೇ (ಸೂ ಭಾ).

[2] ಮೃಲ್ಲೋಹವಿಸ್ಫುಲಿಂಗಾದ್ಯೈಃ ಸೃಷ್ಟಿರ್ಯಾ ಚೋದಿತಾಽನ್ಯಥಾ ।
ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಂಚನ (ಮಾ ಕಾ ೩. ೧೫).

ಆಕಾಶಾದಿಗಳಲ್ಲಿ ವಿಷ್ಣುವೇ ಅವಾಂತರ-ಕಾರಣನಾಗಿ ಇರುತ್ತಾನೆ, **ಸ ಯೋಽ-ತೋಽಶ್ರುತಃ** ಇತ್ಯಾದಿ ಶ್ರುತಿಗಳಲ್ಲಿ ಹೇಗೆ ನಿರ್ದಿಷ್ಟನಾಗಿದ್ದಾನೆಯೊ ಹಾಗೆಯೇ **ಯ ಆಕಾಶೇ ತಿಷ್ಠನ್** (ಬೃ. ಉ. ೩. ೭. ೧೨) ಇವೇ ಮೊದಲಾದ ಶ್ರುತಿಗಳಿಂದ ಆಕಾಶಾದಿಗಳಲ್ಲಿ ಸ್ಥಿತನಾಗಿದ್ದಾನೆಂದು ಹೇಳಿದೆ.

**ಸಮಾಕರ್ಷಾತ್** * || ೧೫ ||

೧೫. (ಬ್ರಹ್ಮವನ್ನು ತಿಳಿಸುವ ವಾಕ್ಯಗಳಿಗೆ) ಸಂಬಂಧವಿರುವುದರಿಂದ (ಇದು ಅಸತ್ತಲ್ಲ).

'ಇದು ಮೊದಲು ಅಸದ್ವಸ್ತುವೇ ಆಗಿತ್ತು'[1] (ತೈ. ಉ. ೨. ೭) ಎಂಬ ಶ್ರುತಿಯು ನಿರಾತ್ಮಕವಾದ ಅಸತ್ತನ್ನು ಜಗತ್ಕಾರಣವೆಂದು ತಿಳಿಸುವುದಿಲ್ಲ; ಏಕೆಂದರೆ ಹಿಂದೆ (ತೈ. ಉ. ೨ ೬) ಅಸದ್ವಾದವನ್ನು ತಿರಸ್ಕರಿಸಿ ಅಸ್ತಿತ್ವಲಕ್ಷಣವುಳ್ಳ ಬ್ರಹ್ಮವನ್ನು ಅನ್ನಮಯಾದಿಕೋಶಗಳ ಪರಂಪರೆಯ ಮೂಲಕ ಪ್ರತ್ಯಗಾತ್ಮನೆಂದು ನಿರ್ಧರಿಸಿದೆ. ಸತ್-ಶಬ್ದವು ನಾಮರೂಪಗಳಿಂದ ವಿಂಗಡವಾದುದನ್ನು ತಿಳಿಸುತ್ತದೆ, ಅಸತ್-ಶಬ್ದವು ನಾಮರೂಪಗಳು ವಿಂಗಡವಾಗುವುದಕ್ಕೆ ಮುಂಚೆ ಇದ್ದ ಅದೇ ವಸ್ತುವನ್ನು ಸೂಚಿಸುತ್ತದೆ; ಬ್ರಹ್ಮವು ಸದ್ವಸ್ತುವಾಗಿದ್ದರೂ ಸೃಷ್ಟಿಗೆ ಮೊದಲು ಅಸದ್ವಸ್ತುವಿನಂತೆ ಇತ್ತು ಎಂದರ್ಥ.[2] ಹೀಗೆಯೇ ಛಾಂ. ಉ. ೩. ೧೯. ೧, ಬೃ. ಉ. ೧. ೪. ೭—ಇವುಗಳನ್ನೂ ಅರಿತುಕೊಳ್ಳಬೇಕು. ಛಾಂದೋಗ್ಯಶ್ರುತಿಯ (೬. ೩. ೨) ಪ್ರಕಾರ ಜಗತ್ತಿನ ನಾಮರೂಪಗಳ ವಿಂಗಡವು ಸಾಧ್ಯಕ್ಷನಾಗಿಯೇ ಆಗುತ್ತದೆ.

ವಿ.—' "ನಾನು ಬಹುವಾಗುವೆನು, ಅದಕ್ಕೋಸ್ಕರ ಸೃಷ್ಟಿಸುವೆನು" ಎಂದು ಆತ್ಮನು ಸಂಕಲ್ಪಿಸಿದನು' (ತೈ. ಉ. ೨. ೬) ಎಂಬ ಹಿಂದಿನ ಶ್ಲೋಕವು ಪರಬ್ರಹ್ಮನು ಬಹುವಾಗಲು ಸಂಕಲ್ಪಿಸಿದನೆಂದು ತಿಳಿಸುತ್ತದೆ. ಆದುದರಿಂದ ಈ ವಾಕ್ಯವು ತನ್ನ ಸಂಕಲ್ಪದಿಂದ ಸೃಷ್ಟಿಸುತ್ತಿರುವ ಸರ್ವಜ್ಞನಾದ ಪರಮಪುರುಷನನ್ನು ಸೂಚಿಸುತ್ತದೆ. ಆದಕಾರಣ ಪ್ರಧಾನವು ಜಗತ್ಕಾರಣವಾಗಲಾರದು. ಉಪನಿಷತ್ತು ಮುಂದುವರಿದು 'ಇದು ಮೊದಲು ಅಸತ್ತೇ ಆಗಿತ್ತು' (ತೈ. ಉ. ೨. ೭) ಎಂದು ಹೇಳುತ್ತದೆ. ಇಲ್ಲಿ ಅಸತ್-ಶಬ್ದವು ಪರಬ್ರಹ್ಮನನ್ನೇ ತನ್ನ ಅರ್ಥವಾಗಿ ಗ್ರಹಿಸುತ್ತದೆ. ನಾಮರೂಪಗಳು

---

* ಈ ಸೂತ್ರದಿಂದ ಪ್ರಾರಂಭಿಸಿ ಅವಸ್ಥಿತೇರಿತಿ ಕಾಶಕೃತ್ಸ್ನಃ (೨೨) ಎಂಬ ಸೂತ್ರದ ವರೆಗೆ ಮಧ್ವಭಾಷ್ಯದಲ್ಲಿ ಒಂದು ಹೊಸ ಅಧಿಕರಣವಾಗಿ, ಸಮಾಕರ್ಷಾಧಿಕರಣ ಎನ್ನಿಸಿದೆ.

[1] ಅಸದ್ವಾ ಇದಮಗ್ರ ಆಸೀತ್ ।

[2] ತಸ್ಮಾನ್ನಾಮರೂಪವ್ಯಾಕೃತವಸ್ತುವಿಷಯಃ ಪ್ರಾಯೇಣ ಸಚ್ಛಬ್ದಃ ಪ್ರಸಿದ್ಧ ಇತಿ ತದ್ವ್ಯಾಕರಣಾಭಾವಾಪೇಕ್ಷಯಾ ಪ್ರಾಗುತ್ಪತ್ತೇಃ ಸದೇವ ಬ್ರಹ್ಮಾಸದಿವಾಸೀದಿತ್ಯುಪಚರ್ಯತೇ (ಸೂ. ಭಾ.).

ಬಿಂಗಡವಾಗುವುದಕ್ಕೆ ಮೊದಲು ಇದ್ದ ಬ್ರಹ್ಮನ ಸೂಕ್ಷ್ಮಾವಸ್ಥೆಯನ್ನು ಅಸತ್-ಶಬ್ದವು ಸೂಚಿಸುತ್ತದೆ.

**ದ್ವೈತ.**—ಶಬ್ದಗಳೆಲ್ಲ ಪರಮೇಶ್ವರನನ್ನೇ ಸೂಚಿಸುವುದಾದರೆ ಅವು ಇತರ ವಸ್ತುಗಳನ್ನು ಹೇಗೆ ತಿಳಿಸುತ್ತವೆ?—ಎಂಬ ಪೂರ್ವಪಕ್ಷಕ್ಕೆ ಈ ಸೂತ್ರವು ಉತ್ತರವಾಗಿದೆ. ಪರಮಾತ್ಮನನ್ನು ಸೂಚಿಸುವ ಶಬ್ದಗಳೆಲ್ಲ ಅವನಿಂದ ಆಕರ್ಷಿಸಲ್ಪಟ್ಟು ಇತರ ವಸ್ತುಗಳನ್ನು ಸೂಚಿಸಲು ಪ್ರಯೋಗಿಸಲ್ಪಟ್ಟಿವೆ.[1]

---

[1] ಪರಮಾತ್ಮವಾಚಿನಃ ಶಬ್ದಾ ಆನೀತ ಸಮಾಕೃಷ್ಯ ಪ್ರವರ್ತ್ಯಂತೇ (ಮ. ಭಾ.).

# ೫. ಬಾಲಾಕ್ಯಧಿಕರಣ *

(ಸೂ. ೧೬–೧೮)

## ಜಗದ್ವಾಚಿತ್ವಾತ್ ॥ ೧೬ ॥

೧೬. (ಕರ್ಮಶಬ್ದವು) ಜಗತ್ತನ್ನು ಸೂಚಿಸುವುದರಿಂದ (ಇಲ್ಲಿ ಪರಮಾತ್ಮನನ್ನೇ ಉಪದೇಶಿಸಿದೆ).

ಕೌಷೀತಕಿ-ಬ್ರಾಹ್ಮಣದಲ್ಲಿರುವ ಬಾಲಾಕಿ, ಅಜಾತಶತ್ರು—ಇವರ ಸಂವಾದದಲ್ಲಿ ಈ ಶ್ರುತಿಯಿದೆ : 'ಎಲೈ ಬಾಲಾಕಿ, ಯಾವನು ಈ ಪುರುಷರ ಕರ್ತೃವೊ, ಇದು ಯಾವನ ಕರ್ಮವೊ ಅವನನ್ನು ಅರಿಯತಕ್ಕದ್ದು'' (ಕೌ. ಉ. ೪. ೧೯). ಇಲ್ಲಿ ಜ್ಞೇಯವಾಗಿರುವವನು ಜೀವನೊ ಅಥವಾ ಮುಖ್ಯಪ್ರಾಣನೊ ಅಥವಾ ಪರಮಾತ್ಮನೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಪ್ರಾಣವೇ ಜ್ಞೇಯವು ; ಏಕೆಂದರೆ 'ಇದು ಯಾವನ ಕರ್ಮವೊ' ಎಂಬಲ್ಲಿ ಹೇಳಿರುವ ಚಲನರೂಪವಾದ ಕರ್ಮವು ಪ್ರಾಣವನ್ನೇ ಆಶ್ರಯಿಸಿದೆ. ವಾಕ್ಯಶೇಷದಲ್ಲಿ[2] (ಕೌ. ಉ. ೪. ೨೦) ಪ್ರಾಣಶಬ್ದವೂ ಬರುತ್ತದೆ. ಆದುದರಿಂದ ಮುಖ್ಯಪ್ರಾಣವೇ ಆದಿತ್ಯ-ಚಂದ್ರರಲ್ಲಿರುವ ಪುರುಷರ ಕರ್ತೃವು.[3] ಅಥವಾ ಜೀವನು ಜ್ಞೇಯವಾಗಬಹುದು ; ಅವನಿಗೆ ಧರ್ಮಾಧರ್ಮರೂಪವಾದ ಕರ್ಮವಿದೆ. ಜೀವನು ಭೋಕ್ತೃವಾಗಿರುವುದರಿಂದ ಭೋಗಕ್ಕೆ ಉಪಕರಣರಾಗಿರುವ ಈ ಪುರುಷರ ಕರ್ತೃವೆಂದೂ ಹೇಳಬಹುದು. ಅಜಾತಶತ್ರುವು ಬಾಲಾಕಿಗೆ ಉಪದೇಶಮಾಡಲು, ಮಲಗಿದ್ದ ಒಬ್ಬ ಮನುಷ್ಯನನ್ನು ಎಚ್ಚರಿಸಲು ಪ್ರಯತ್ನಿಸಿದಾಗ ಅವನು ಏಳಲಿಲ್ಲ ; ಕೋಲಿನಿಂದ ತಿವಿದಾಗ ಮಾತ್ರ ಅವನಿಗೆ ಎಚ್ಚರವಾಯಿತು. ಇದರಿಂದ ಪ್ರಾಣಾದಿಗಳು ಭೋಕ್ತೃವಲ್ಲವೆಂದೂ ಅವುಗಳಿಗಿಂತ ಬೇರೆಯಾದ ಜೀವನು ಭೋಕ್ತೃವೆಂದೂ ತಿಳಿದುಬರುತ್ತದೆ. ವಾಕ್ಯಶೇಷದಲ್ಲಿ (ಕೌ. ಉ. ೪. ೨೦) ಜೀವನ ಗುರುತೂ ಇದೆ: ಜೀವಾತ್ಮನೂ ಮತ್ತು ಆದಿತ್ಯ-ಚಂದ್ರರಲ್ಲಿರುವ ಪುರುಷರೂ ಪರಸ್ಪರ ಸಹಾಯಕರಾಗಿರುತ್ತಾರೆ. ಜೀವನು ಪ್ರಾಣಕ್ಕೆ ಆಶ್ರಯನಾಗಿರುವುದರಿಂದ ಅವನನ್ನೇ ಪ್ರಾಣವೆಂದು ಕರೆಯಬಹುದು.

---

* ಇದನ್ನು ಶ್ರೀಭಾಷ್ಯದಲ್ಲಿ ಜಗದ್ವಾಚಿತ್ವಾಧಿಕರಣ ಎಂದು ಕರೆದಿದೆ.

1 ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ವೈ ತತ್ ಕರ್ಮ ವೈ ಸ ವೇದಿತವ್ಯಃ ।

2 'ಆಗ ಈ ಪ್ರಾಣದಲ್ಲಿ ಒಂದಾಗುತ್ತಾನೆ' ಅಥಾಸ್ಮಿನ್ ಪ್ರಾಣ ಏವೈಕಧಾ ಭವತಿ ।

3 ಬೃ. ಉ. ೩. ೯. ೯ ನೋಡಿ.

ಸಿದ್ಧಾಂತಿ—'ನಿನಗೆ ಬ್ರಹ್ಮವನ್ನು ಉಪದೇಶಿಸುತ್ತೇನೆ'[1] (ಕೌ. ಉ. ೪. ೧) ಎಂದು ಅಜಾತಶತ್ರುವು ಸಂವಾದವನ್ನು ಪ್ರಾರಂಭಿಸುತ್ತಾನೆ. ಪರಬ್ರಹ್ಮಕ್ಕಿಂತ ಬೇರೆಯಾಗಿರುವ ಅಮುಖ್ಯನಾದ ಯಾವನೂ ಈ ಪುರುಷರ ಕರ್ತೃವಾಗಲಾರನು; ಹಾಗಾದರೆ ಉಪಕ್ರಮವಾಕ್ಯವು ಬಾಧಿತವಾಗುತ್ತದೆ ಈ ಪುರುಷರ ಕರ್ತೃತ್ವವು ಪರಮೇಶ್ವರನನ್ನು ಬಿಟ್ಟರೆ ಯಾವನಿಗೂ ಸ್ವತಂತ್ರವಾಗಿ ಹೊಂದುವುದಿಲ್ಲ.[2] ಕರ್ಮ-ಶಬ್ದವು ಚಲನರೂಪವಾದ ಅಥವಾ ಧರ್ಮಾಧರ್ಮರೂಪವಾದ ಕರ್ಮವನ್ನು ಸೂಚಿಸುವುದಿಲ್ಲ. ಆದುದರಿಂದ ಅದು ಪ್ರಾಣವನ್ನಾಗಲಿ ಜೀವನನ್ನಾಗಲಿ ಸೂಚಿಸಲಾರದು ಇದು ಆದಿತ್ಯಾದಿಗಳಲ್ಲಿರುವ ಪುರುಷರನ್ನೂ ಸೂಚಿಸುವುದಿಲ್ಲ; ಏಕೆಂದರೆ ಪುರುಷಶಬ್ದವು ಪುಲ್ಲಿಂಗ-ಬಹುವಚನದಲ್ಲಿದೆ, ಕರ್ಮಶಬ್ದವು ನಪುಂಸಕಲಿಂಗ-ಏಕವಚನದಲ್ಲಿದೆ ಕರ್ಮಶಬ್ದವು ಪುರುಷೋತ್ಪತ್ತಿಯೆಂಬ ಕ್ರಿಯೆಯನ್ನಾಗಲಿ ಆ ಕ್ರಿಯಾಫಲವನ್ನಾಗಲಿ ಸೂಚಿಸುವುದಿಲ್ಲ; ಏಕೆಂದರೆ ಕರ್ತೃ-ಶಬ್ದದಿಂದ ಅವೆರಡನ್ನೂ ಗ್ರಹಿಸಿದ್ದಾಗಿದೆ. ಹೀಗೆ ಪರಿಶೇಷನ್ಯಾಯದಿಂದ 'ಇದು' ಎಂಬ ಸರ್ವನಾಮವು ಪ್ರತ್ಯಕ್ಷವಾಗಿ ಸನ್ನಿಹಿತವಾಗಿರುವ ಜಗತ್ತನ್ನೇ ಸೂಚಿಸುತ್ತದೆ. ಪರಮೇಶ್ವರನು ಆದಿತ್ಯಾದಿಗಳಲ್ಲಿರುವ ಪುರುಷರಿಗೆಲ್ಲ—ಏಕೆ, ಇಡೀ ಜಗತ್ತಿಗೆಲ್ಲ—ಕರ್ತೃವಾಗಿರುತ್ತಾನೆ.

ವಿ.—ಪ್ರಕೃತಿಯಿಂದ ವಿಯುಕ್ತನಾದ ಪುರುಷನನ್ನೇ ಅರಿತುಕೊಳ್ಳಬೇಕು ಎಂಬುದು ಪೂರ್ವಪಕ್ಷ. ಕರ್ಮವೆಂದರೆ ಪುಣ್ಯಪಾಪರೂಪವಾದ ಕರ್ಮ. ಇದು ಜೀವಾತ್ಮನಿಗೇ ಸೇರಿದ್ದು. ಜೀವಾತ್ಮರ ಈ ನಾನಾವಿಧವಾದ ಕರ್ಮಗಳಿಂದಲೇ ಜಗತ್ತು ಉತ್ಪನ್ನವಾಗಿದೆ. ಇದಕ್ಕೆ ಪರಿಹಾರವು ಹೀಗಿದೆ: ಇಲ್ಲಿ ಕರ್ಮವೆಂದರೆ ಸೃಷ್ಟಿಸಲ್ಪಟ್ಟ ಜಗತ್ತೇ ಹೊರತು ಪುಣ್ಯಪಾಪರೂಪವಾದ ಕರ್ಮವಲ್ಲ. ಪರಮಪುರುಷನೇ ಜಗತ್ಕರ್ತೃವು. ಜಗದುತ್ಪತ್ತಿಗೆ ಜೀವರ ಕರ್ಮವೆಂಬ ನಿಬಂಧನವಿದ್ದರೂ ಅವರು ತಮ್ಮ ಅನುಭವಕ್ಕೆ ಬೇಕಾದ ಉಪಕರಣಗಳನ್ನು ಉತ್ಪಾದಿಸಲಾರರು; ಈಶ್ವರನು ತಮ್ಮ ಕರ್ಮಕ್ಕೆ ಅನುಗುಣವಾಗಿ ಏನೇನನ್ನು ಸೃಷ್ಟಿಸಿದ್ದಾನೆಯೊ ಅದನ್ನು ಮಾತ್ರ ಅನುಭವಿಸುತ್ತಾರೆ.[3] ಆದುದರಿಂದ ಉಪನಿಷತ್ತುಗಳಲ್ಲೆಲ್ಲ ಪರಮಕಾರಣನೆಂದು ಪ್ರಸಿದ್ಧನಾದ ಪರಬ್ರಹ್ಮನನ್ನೇ ಅರಿತುಕೊಳ್ಳಬೇಕು.

ದ್ವೈ.—ಹಾಗಾದರೆ ಅಂಥ ಶಬ್ದಗಳು ಜಗತ್ತಿನ ವಸ್ತುಗಳನ್ನು ಹೇಗೆ ಸೂಚಿಸುತ್ತವೆ? ಜನರು ಸಾಮಾನ್ಯವಾಗಿ ಜಗತ್ತಿನ ವಿಷಯದಲ್ಲಿ ವ್ಯವಹರಿಸುತ್ತಾರೆಯೇ ಹೊರತು

---

1 ಬ್ರಹ್ಮ ತೇ ಬ್ರವಾಣಿ।

2 ಕರ್ತೃತ್ವಂ ಚೈತೇಷಾಂ ಪುರುಷಾಣಾಂ ನ ಪರಮೇಶ್ವರಾನ್ಯಸ್ಯ ಸ್ವಾತಂತ್ರ್ಯೇಣಾವಕಲ್ಪತೇ (ಸೂ. ಭಾ.).

3 ಜಗದುತ್ಪತ್ತೇರ್ಜೀವಕರ್ಮನಿಬಂಧನತ್ವೇಽಪಿ ನ ಜೀವಃ ಸ್ವಭೋಗ್ಯಭೋಗೋಪಕರಣಾದೇಃ ಸ್ವಯಮುತ್ಪಾದಕಃ, ಅಪಿ ತು ಸ್ವಕರ್ಮಾನುಗುಣ್ಯೇನೇಶ್ವರಸೃಷ್ಟಂ ಸರ್ವಂ ಭುಂಕ್ತೇ (ಶ್ರೀಭಾಷ್ಯ).

ಪರಮಾತ್ಮನ ವಿಷಯದಲ್ಲಲ್ಲ; ಆದುದರಿಂದ ಶಬ್ದಗಳಿಗೆ ಜಗತ್ತಿನಲ್ಲಿಯೇ ಪ್ರಸಿದ್ಧಿಯು ಯುಕ್ತವಾಗುತ್ತದೆ[1]

**ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇತ್ತದ್ವ್ಯಾಖ್ಯಾತಮ್ ॥ ೧೭ ॥**

೧೭. ಜೀವ ಮುಖ್ಯಪ್ರಾಣ—ಇವುಗಳ ಲಿಂಗವೂ ಇರುವುದರಿಂದ (ಪರಮೇಶ್ವರನನ್ನು ಗ್ರಹಿಸುವುದು) ಯುಕ್ತವಲ್ಲವೆಂದರೆ, ಅದನ್ನು ಆಗಲೇ ಹೇಳಿದ್ದಾಗಿದೆ

ವಾಕ್ಯಶೇಷದಲ್ಲಿರುವ ಜೀವಲಿಂಗದಿಂದಲೂ ಮುಖ್ಯಪ್ರಾಣಲಿಂಗದಿಂದಲೂ ಅವುಗಳಲ್ಲಿ ಒಂದನ್ನು ಗ್ರಹಿಸುವುದು ಯುಕ್ತವೇ ಹೊರತು ಪರಮೇಶ್ವರನನ್ನು ಗ್ರಹಿಸುವುದು ಯುಕ್ತವಲ್ಲ—ಎಂದು ಆಕ್ಷೇಪಿಸಿದರೆ ಇದಕ್ಕೆ ಪರಿಹಾರವನ್ನು ೧. ೧. ೩೧ರಲ್ಲಿಯೇ ಹೇಳಿದ್ದಾಗಿದೆ ಉಪಕ್ರಮ-ಉಪಸಂಹಾರಗಳಿಂದ ಈ ವಾಕ್ಯವು ಬ್ರಹ್ಮವಿಷಯಕವೆಂದು ನಿರ್ಣಯವಾಗುತ್ತದೆ. ಉಪಕ್ರಮವಾಕ್ಯವು ಬ್ರಹ್ಮವಿಷಯಕವೆಂದು ಮೊದಲೇ ಹೇಳಿದೆ. ಉಪಸಂಹಾರವೂ ಹೀಗೆಯೇ: 'ಹೀಗೆ ತಿಳಿದುಕೊಂಡವನು ಸರ್ವಪಾಪಗಳನ್ನೂ ನಾಶಮಾಡಿಕೊಂಡು ಸರ್ವಭೂತಗಳಲ್ಲಿ ಶ್ರೇಷ್ಠತ್ವವನ್ನೂ ಸ್ವಾರಾಜ್ಯವನ್ನೂ ಆಧಿಪತ್ಯವನ್ನೂ ಹೊಂದುತ್ತಾನೆ'[2] (ಕೌ. ಉ. ೪. ೨೦) ಎಂದು ನಿರತಿಶಯಫಲವನ್ನು ಹೇಳುವುದರಿಂದ ಇದು ಬ್ರಹ್ಮವಿಷಯಕವಾಗಿಯೇ ಇದೆ. ಉಪಕ್ರಮ-ಉಪಸಂಹಾರಗಳು ಬ್ರಹ್ಮವಿಷಯಕವಾಗಿರುವುದರಿಂದ ಜೀವಲಿಂಗವನ್ನು—ಜೀವ-ಪರಮಾತ್ಮರ ಅಭೇದದ ಅಭಿಪ್ರಾಯದಿಂದ—ಪರಮಾತ್ಮನಿಗೇ ಹೊಂದಿಸಬೇಕು.[3]

ವಿ.—ಉಪಕ್ರಮ-ಉಪಸಂಹಾರಗಳ ಪರ್ಯಾಲೋಚನೆಯಿಂದ ವಾಕ್ಯವು ಬ್ರಹ್ಮಪರವೆಂದು ನಿಷ್ಕರ್ಷಿಸಿದಮೇಲೆ ಇತರ ವಿಷಯಗಳನ್ನು ತಿಳಿಸುವ ಲಿಂಗಗಳಿದ್ದರೂ ಅವುಗಳನ್ನು ಮುಖ್ಯವಿಷಯವನ್ನು ತಿಳಿಸುವಂತೆ ವ್ಯಾಖ್ಯಾನಮಾಡಬೇಕು—ಎಂದು ಹಿಂದೆಯೇ ಹೇಳಿದ್ದಾಗಿದೆ.[4] ಈ ವಾಕ್ಯವು ಬ್ರಹ್ಮಪರವಾದುದರಿಂದ ಜೀವ-ಮುಖ್ಯಪ್ರಾಣರ ಲಿಂಗಗಳನ್ನೂ ಕೂಡ ಬ್ರಹ್ಮಪರವಾಗಿಯೇ ವ್ಯಾಖ್ಯಾನ ಮಾಡಬೇಕು.

---

[1] ಜಗತಿ ಹಿ ವ್ಯವಹಾರೋ ಲೋಕಸ್ಯ। ನ ತು ಪರಮಾತ್ಮನಿ ತಥಾ। ಅತೋ ಜಗತಿ ಪ್ರಸಿದ್ಧಿಃ ಶಬ್ದಾನಾಮ್ (ಮ ಭಾ.).

[2] ಸರ್ವಾನ್ ಪಾಪ್ಮನೋಽಪಹತ್ಯ ಸರ್ವೇಷಾಂ ಚ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ಯ ಏವಂ ವೇದ।

[3] ಜೀವಲಿಂಗಮುಪ್ರಕ್ರಮೋಪಸಂಹಾರಯೋರ್ಬ್ರಹ್ಮವಿಷಯತ್ವಾದಭೇದಾಭಿಪ್ರಾಯೇಣ ಯೋಜಯಿತವ್ಯಮ್ (ಸೂ. ಭಾ.).

[4] ಯತ್ರೋಪಕ್ರಮೋಪಸಂಹಾರಪರ್ಯಾಲೋಚನಯಾ ಬ್ರಹ್ಮಪರಂ ವಾಕ್ಯಮ್ ಇತಿ ನಿಶ್ಚಿತಮ್, ತತ್ರಾನ್ಯ ಲಿಂಗಾನಿ ತದನುರೋಧೇನ ವರ್ಣನೀಯಾನೀತಿ ತತ್ರ ಪ್ರತಿಪಾದಿತಮ್ (ಶ್ರೀಭಾಷ್ಯ).

ದ್ವೈತ—ಲಿಂಗಗಳಿರುವುದರಿಂದ ಶಬ್ದಗಳು ಜೀವ, ಮುಖ್ಯಪ್ರಾಣ—ಇವರನ್ನೇ ಸೂಚಿಸುತ್ತವೆ ಎಂದರೆ, ಅದು ಸರಿಯಲ್ಲ. ಜೀವ-ಮುಖ್ಯಪ್ರಾಣ-ಲಿಂಗಗಳು ಅಂತ-ರ್ಯಾಮಿದೃಷ್ಟಿಯಿಂದ ಉಪಪನ್ನವಾಗಿವೆ.

**ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ**
**|| ೧೮ ||**

೧೮. ಆದರೆ (ಜೀವ-ಪರಾಮರ್ಶಕ್ಕೆ) ಬೇರೆಯ ಪ್ರಯೋಜನವಿದೆ; ಏಕೆಂದರೆ ಪ್ರಶ್ನೋತ್ತರಗಳಿಂದ (ಹಾಗೆ ತಿಳಿದುಬರುತ್ತದೆ) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ). ಹೀಗೆಯೇ ಕೆಲವರೂ (ಪಠಿಸುತ್ತಾರೆ).

ಈ ವಾಕ್ಯವು ಜೀವಪರವಾಗಿದೆಯೊ ಅಥವಾ ಬ್ರಹ್ಮಪರವಾಗಿದೆಯೊ ಎಂಬ ಚರ್ಚೆಗೆ ಅವಕಾಶವೇ ಇಲ್ಲ; ಏಕೆಂದರೆ ಈ ವಾಕ್ಯದಲ್ಲಿರುವ ಜೀವ-ಪರಾಮರ್ಶಕ್ಕೆ ಬೇರೆಯ ಪ್ರಯೋಜನವಿದೆ, ಎಂದರೆ ಬ್ರಹ್ಮಜ್ಞಾನವೇ ಪ್ರಯೋಜನವಾಗಿದೆ. ಇದು ಪ್ರಶ್ನೆಯಿಂದಲೂ ಅದಕ್ಕೆ ಕೊಟ್ಟ ಉತ್ತರದಿಂದಲೂ ತಿಳಿದುಬರುತ್ತದೆ. ಅಜಾತಶತ್ರುವು ನಿದ್ರಿಸುತ್ತಿದ್ದ ಮನುಷ್ಯನನ್ನು ಎಚ್ಚರಿಸಿ 'ಈ ಮನುಷ್ಯನು ಎಲ್ಲಿ ನಿದ್ರಿಸಿದನು ? ಎಲ್ಲಿದ್ದನು ? ಎಲ್ಲಿಂದ ಹೀಗೆ ಬಂದನು ?' (ಕೌ. ಉ. ೪. ೧೯) ಎಂದು ಬಾಲಾಕಿಯನ್ನು ಪ್ರಶ್ನಿಸಿ, 'ಯಾವಾಗ ನಿದ್ರಿಸಿದವನು ಯಾವ ಕನಸನ್ನೂ ನೋಡುವುದಿಲ್ಲವೊ ಆಗ ಈ ಪ್ರಾಣದಲ್ಲಿ (ಎಂದರೆ ಬ್ರಹ್ಮದಲ್ಲಿ) ಒಂದಾಗುತ್ತಾನೆ....ಈ ಆತ್ಮನಿಂದ ಪ್ರಾಣಗಳು ತಮ್ಮ ಸ್ಥಾನಕ್ಕೆ ಸೇರುತ್ತವೆ, ಪ್ರಾಣದಿಂದ ದೇವತೆಗಳು, ದೇವತೆಗಳಿಂದ ಲೋಕಗಳು ಹೊರಟುಬರುತ್ತವೆ' (ಕೌ. ಉ. ೪. ೨೦) ಎಂದು ತಾನೇ ಉತ್ತರಿಸುತ್ತಾನೆ. ಸುಷುಪ್ತಿಕಾಲದಲ್ಲಿ ಜೀವನು ಪರಬ್ರಹ್ಮದೊಡನೆ ಏಕತ್ವವನ್ನು ಹೊಂದುತ್ತಾನೆ, ಮತ್ತು ಪರಬ್ರಹ್ಮದಿಂದಲೇ ಪ್ರಾಣಾದಿಗಳಿಂದ ಕೂಡಿದ ಜಗತ್ತು ಉತ್ಪನ್ನವಾಗುತ್ತದೆ—ಎಂಬುದು ವೇದಾಂತದ ಸಿದ್ಧಾಂತ.[1] ಆದುದರಿಂದ ಯಾವುದರಲ್ಲಿ ಜೀವನಿಗೆ ವಿಶೇಷಜ್ಞಾನವಿಲ್ಲದ ಸ್ವಚ್ಛತಾರೂಪವಾದ ನಿದ್ರೆಯುಂಟಾಗುತ್ತದೆಯೊ, ಎಂದರೆ ಉಪಾಧಿಯಿಂದುಂಟಾದ ವಿಶೇಷಜ್ಞಾನವಿಲ್ಲದ ಅವಸ್ಥೆಯಿರುವುದೊ, ಮತ್ತು ನಿದ್ರಾಭಂಗವಾದ ಮೇಲೆ ಯಾವುದರಿಂದ ಹಿಂತಿರುಗುವನೊ ಆ ಪರಮಾತ್ಮನೇ ಅರಿಯತಕ್ಕವನು ಎಂದು ಶ್ರುತಿಯು ಹೇಳುತ್ತದೆ.[2]

---

[1] ಸುಷುಪ್ತಿಕಾಲೇ ಚ ಪರೇಣ ಬ್ರಹ್ಮಣಾ ಜೀವ ಏಕತಾಂ ಗಚ್ಛತಿ। ಪರಸ್ಮಾಚ್ಚ ಬ್ರಹ್ಮಣಃ ಪ್ರಾಣಾದಿಕಂ ಜಗಜ್ಜಾಯತ ಇತಿ ವೇದಾಂತಮರ್ಯಾದಾ (ಸೂ. ಭಾ).

[2] ತಸ್ಮಾದ್ಯತ್ರಾಸ್ಯ ಜೀವಸ್ಯ ನಿಃಸಂಬೋಧತಾ ಸ್ವಚ್ಛತಾರೂಪಃ ಸ್ವಾಪ ಉಪಾಧಿಜನಿತ-ವಿಶೇಷವಿಜ್ಞಾನರಹಿತಂ ಸ್ವರೂಪಮ್, ಯತಸ್ತದ್ಭ್ರಂಶರೂಪಮಾಗಮನಮ್, ಸೋऽತ್ರ ಪರಮಾತ್ಮಾ ವೇದಿತವ್ಯತಯಾ ಶ್ರಾವಿತಃ (ಸೂ. ಭಾ.).

ಮತ್ತೆ ವಾಜಸನೇಯ-ಶಾಖೆಯಲ್ಲಿಯೂ (ಬೃ. ಉ ೨. ೧, ೧೬-೧೭) ಪರಮಾತ್ಮನಿಗಿಂತ ಭಿನ್ನನಾದ ಜೀವನು ಹೃದಯದಲ್ಲಿರುವ ಆಕಾಶದಲ್ಲಿ ಮಲಗಿರುತ್ತಾನೆ ಎಂದು ಹೇಳಿದೆ. ಛಾಂದೋಗ್ಯಶ್ರುತಿಯು (೮. ೧. ೧) ದಹರಾಕಾಶವೇ ಪರಬ್ರಹ್ಮವೆಂದು ಹೇಳುತ್ತದೆ. 'ಆತ್ಮನಿಂದ ಇವರೆಲ್ಲ ಹೊರಕ್ಕೆ ಬರುತ್ತಾರೆ'[1] ಎಂಬ ಶ್ರುತಿಯ ಪ್ರಕಾರ ಪರಮಾತ್ಮನೇ ಇವರಿಗೆಲ್ಲ ಕಾರಣನೆಂಬುದು ತಿಳಿದುಬರುತ್ತದೆ.

ವಿ.—ಜೀವನಿಗಿಂತ ಬೇರೆಯವನಾದ, ಎಂದರೆ ನಿಖಿಲಜಗತ್ಕಾರಣನಾದ ಪರಬ್ರಹ್ಮನೇ ಅರಿಯಲ್ಪಡತಕ್ಕವನು—ಎಂದು ಈ ಕೌಷೀತಕಿ-ವಾಕ್ಯವು ನಿರ್ಧರಿಸುತ್ತದೆ, ಆದುದರಿಂದ ಜಗತ್ಕಾರಣತ್ವವು ಕಾಪಿಲತಂತ್ರಸಿದ್ಧನಾದ ಪುರುಷನಿಗಾಗಲಿ ಅಥವಾ ಅವನಿಂದ ಅಧಿಷ್ಠಿತವಾದ ಪ್ರಧಾನಕ್ಕಾಗಲಿ ಸೇರಿದೆಯೆಂದು ವೇದಾಂತವು ಎಲ್ಲಿಯೂ ಹೇಳುವುದಿಲ್ಲ.[2]

ದ್ವೈತ.—ಪರಮಾತ್ಮನ ಜ್ಞಾನಕ್ಕೋಸ್ಕರ ಶ್ರುತಿಗಳು ಕರ್ಮಗಳನ್ನು ಹೇಳುತ್ತವೆ—ಎಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ.[3] 'ಭಗವಂತನೆ, ಯಾವುದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದಂತಾಗುವುದು?'[4] ಎಂಬ ಪ್ರಶ್ನೆಗೆ 'ಎರಡು ವಿದ್ಯೆಗಳನ್ನು (ಭಗವತ್ಪ್ರತಿಪಾದಕವಾದ ವಿದ್ಯೆಯನ್ನು ಮತ್ತು ಕರ್ಮಪ್ರತಿಪಾದಕವಾದ ವಿದ್ಯೆಯನ್ನು) ತಿಳಿದುಕೊಳ್ಳಬೇಕು' (ಮುಂ. ಉ. ೧. ೧. ೩. ೪) ಎಂದು ಹೇಳಿದೆ. 'ಯಾವನು ಬ್ರಹ್ಮವನ್ನು ಅರಿತುಕೊಂಡಿಲ್ಲವೊ ಅವನು ಈ ಋಕ್ಕಿನಿಂದ ಏನು ಮಾಡುತ್ತಾನೆ?'[5] (ಋ. ವೇ. ೧. ೧೬೪. ೩೦) ಎಂದು ಇನ್ನೊಂದು ಶಾಖೆಯು ಹೇಳುತ್ತದೆ.

---

[1] ಸರ್ವ ಏತ ಆತ್ಮನೋ ವ್ಯುಚ್ಚರಂತಿ।

[2] ತಸ್ಮಾದಸ್ಮಿನ್ವಾಕ್ಯೇ ಪುರುಷಾದರ್ಥಾಂತರಭೂತಸ್ಯ ನಿಖಿಲಜಗತ್ಕಾರಣಸ್ಯ ಪರಸ್ಯೈವ ಬ್ರಹ್ಮಣೋ ವೇದಿತವ್ಯತಯಾಭಿಧಾನಾನ್ನ ತಂತ್ರಸಿದ್ಧಸ್ಯ ಪುರುಷಸ್ಯ ತದಧಿಷ್ಠಿತಸ್ಯ ವಾ ಪ್ರಧಾನಸ್ಯ ಕಾರಣತ್ವಂ ಕ್ವಚಿದಪಿ ವೇದಾಂತೇ ಪ್ರತೀಯತ ಇತಿ ಸಿದ್ಧಮ್ (ಶ್ರೀಭಾಷ್ಯ).

[3] ಪರಮಾತ್ಮಜ್ಞಾನಾರ್ಥಂ ಕರ್ಮಾದಿಕಮಪಿ ವದತೀತಿ ಜೈಮಿನಿಃ (ಮ. ಭಾ.).

[4] ಛಾಂ. ಉ. ೬. ೧. ೪ನ್ನೂ ನೋಡಿ.

[5] ಯಸ್ತನ್ನ ವೇದ ಕಿಂ ಋಚಾ ಕರಿಷ್ಯತಿ।

## ೬. ವಾಕ್ಯಾನ್ವಯಾಧಿಕರಣ

(ಸೂ. ೧೯–೨೨)

**ವಾಕ್ಯಾನ್ವಯಾತ್ ॥ ೧೯ ॥**

೧೯ ವಾಕ್ಯಗಳ ಅನ್ವಯದಿಂದ (ದ್ರಷ್ಟವ್ಯ, ಶ್ರೋತವ್ಯ—ಮೊದಲಾದ ರೂಪದಿಂದ ಹೇಳಲ್ಪಟ್ಟ ಆತ್ಮನು ಪರಮಾತ್ಮನೇ).

'ಎಲೆ ಮೈತ್ರೇಯಿ, ಆತ್ಮನನ್ನು ನೋಡಬೇಕು, ಶ್ರವಣಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನಮಾಡಬೇಕು. ಎಲೆ ಮೈತ್ರೇಯಿ. ಆತ್ಮನನ್ನು ನೋಡಿದರೆ ಕೇಳಿದರೆ ಮನನಮಾಡಿದರೆ ತಿಳಿದುಕೊಂಡರೆ ಇದೆಲ್ಲವೂ ತಿಳಿಯಲ್ಪಡುತ್ತದೆ'[1] (ಬೃ. ಉ ೪. ೫ ೬) ಎಂಬುದು ವಿಷಯವಾಕ್ಯ. ಇಲ್ಲಿ 'ನೋಡಬೇಕು ಶ್ರವಣಮಾಡಬೇಕು' ಇತ್ಯಾದಿಯಾಗಿ ಹೇಳಲ್ಪಟ್ಟವನು ಜೀವಾತ್ಮನೊ ಅಥವಾ ಪರಮಾತ್ಮನೊ ಎಂಬುದು ಸಂಶಯ.

**ಪೂರ್ವಪಕ್ಷಿ**—ಇಲ್ಲಿ ಹೇಳಲ್ಪಟ್ಟಿರುವವನು ಜೀವಾತ್ಮನೇ ; ಏಕೆಂದರೆ ಉಪಕ್ರಮ ವಾಕ್ಯದ ಸಾಮರ್ಥ್ಯವಿದೆ.[2] ಪತಿ ಪತ್ನಿ ಪುತ್ರ ವಿತ್ತ—ಇವೇ ಮೊದಲಾದ ಭೋಗ್ಯ ವಸ್ತುಗಳೆಲ್ಲ ಆತ್ಮನಿಗೋಸ್ಕರವೇ ಪ್ರಿಯವಾಗಿರುತ್ತವೆ. ಆದುದರಿಂದ ಪ್ರಿಯಸೂಚಿತನೂ ಭೋಕ್ತೃವೂ ಆದ ಜೀವಾತ್ಮನೇ ಇಲ್ಲಿ ಹೇಳಲ್ಪಟ್ಟಿದ್ದಾನೆ. 'ವಿಜ್ಞಾತೃವನ್ನು ಯಾವುದ ರಿಂದ ತಿಳಿದುಕೊಂಡಾನು ?'[3] (ಬೃ. ಉ. ೪. ೫. ೧೫) ಎಂಬ ವಾಕ್ಯವು ಕರ್ತೃವಾದ ಜೀವನನ್ನೇ ಸೂಚಿಸುತ್ತದೆ. ಆತ್ಮಜ್ಞಾನದಿಂದ ಎಲ್ಲವನ್ನೂ ಅರಿತಂತಾಗುವುದು ಎಂದು ಹೇಳಿರುವುದು ಭೋಗ್ಯವಸ್ತುಗಳು ಭೋಕ್ತೃವಿಗೋಸ್ಕರ ಇವೆ ಎಂಬ ಕಾರಣದಿಂದ

**ಸಿದ್ಧಾಂತಿ**—ವಾಕ್ಯಗಳ ಅನ್ವಯದಿಂದ ಪರಮಾತ್ಮನನ್ನೇ ಉಪದೇಶಿಸಿದೆ—ಎಂದು ತಿಳಿದುಕೊಳ್ಳಬೇಕು. ಯಾವುದರಿಂದ ಅಮೃತಳಾಗಬಹುದೊ ಅದನ್ನು ತಿಳಿದುಕೊಳ್ಳ ಬೇಕೆಂದು ಮೈತ್ರೇಯಿಯು ಬಯಸುತ್ತಾಳೆ ಶ್ರುತಿಸ್ಮೃತಿಗಳ ಪ್ರಕಾರ ಪರಮಾತ್ಮ-ಜ್ಞಾನವನ್ನು ಬಿಟ್ಟರೆ ಅಮೃತತ್ವಕ್ಕೆ ಬೇರೆ ದಾರಿಯಿಲ್ಲ. 'ಯಾವನು ಬ್ರಾಹ್ಮಣತ್ವವನ್ನು

---

[1] ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯಿ ; ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಮ್ :

[2] ಹಿಂದಿನ ಅಧಿಕರಣದಲ್ಲಿ ಬ್ರಹ್ಮದಿಂದ ವಾಕ್ಯವು ಪ್ರಾರಂಭವಾಗಿದ್ದರಿಂದ ('ನಿನಗೆ ಬ್ರಹ್ಮ ವನ್ನು ಉಪದೇಶಿಸುತ್ತೇನೆ') ಅಲ್ಲಿ ಬ್ರಹ್ಮವೇ ಸೂಚಿಸಲ್ಪಟ್ಟಿದೆಯೆಂದು ನಿರ್ಧರಿಸಿದ್ದಾಯಿತು ; ಹಾಗೆಯೇ ಇಲ್ಲಿ ವಾಕ್ಯವು ಆತ್ಮನಿಂದ ಪ್ರಾರಂಭವಾಗುವುದರಿಂದ ಆತ್ಮಶಬ್ದವು ಜೀವಾತ್ಮನನ್ನೇ ಸೂಚಿಸಬೇಕೆಂದು ನಿರ್ಧರಿಸಬೇಕು.

[3] ವಿಜ್ಞಾತಾರಮರೇ ಕೇನ ವಿಜಾನೀಯಾತ್ !

ಆತ್ಮನಿಗಿಂತ ಭಿನ್ನವೆಂದು ಅರಿಯುತ್ತಾನೆಯೊ ಅವನನ್ನು ಬ್ರಾಹ್ಮಣತ್ವವು ನಿರಾಕರಿಸುವುದು'[1] (ಬೃ. ಉ. ೪. ೫. ೭) ಎಂದು ಹೇಳಿದೆ. ಇವು ಯಾವುವೂ ಆತ್ಮನಿಗಿಂತ ಬೇರೆಯಾಗಿ ಇರಲಾರವು ಎಂದರ್ಥ. 'ಇದೆಲ್ಲವೂ ಈ ಆತ್ಮನೇ' (ಬೃ ಉ. ೪. ೫ ೭) ಎಂದು ಮುಂದಿನ ವಾಕ್ಯವು ಸಮಸ್ತವಸ್ತುಸಮೂಹವೂ ಆತ್ಮನಿಗಿಂತ ಅಭಿನ್ನವು ಎಂದು ತಿಳಿಸುತ್ತದೆ. ದುಂದುಭಿ ಮೊದಲಾದ ದೃಷ್ಟಾಂತಗಳು (ಬೃ. ಉ. ೪. ೫. ೮. ೧೦) ಅಭೇದವನ್ನೇ ದೃಢಪಡಿಸುತ್ತವೆ. ನಾಮ ರೂಪ ಕರ್ಮ ಎಂಬ ಪ್ರಪಂಚಕ್ಕೆ ಪರಮಾತ್ಮನೇ ಕಾರಣನೆಂದು (ಬೃ. ಉ. ೪. ೫. ೧೧) ಯಾಜ್ಞವಲ್ಕ್ಯನು ಒತ್ತಿಹೇಳುತ್ತಾನೆ.[2] ಹೀಗೆಯೇ ಇಂದ್ರಿಯದಿಂದಲೂ ಅಂತಃಕರಣದಿಂದಲೂ ಕೂಡಿರುವ ಪ್ರಪಂಚಕ್ಕೆ ಒಂದೇ ಅಯನವಾಗಿರುವ ಎಂದರೆ ಲಯಸ್ಥಾನವಾಗಿರುವ ಪರಮಾತ್ಮನು ಒಳಗು ಹೊರಗು ಎಂಬುದಿಲ್ಲದೆ ಪೂರ್ಣನೂ ಪ್ರಜ್ಞಾನಘನನೂ ಆಗಿರುವನೆಂದು ಯಾಜ್ಞವಲ್ಕ್ಯನು ಏಕಾಯನಪ್ರಕ್ರಿಯೆಯಲ್ಲಿ ಉಪಸಂಹರಿಸುತ್ತಾನೆ.[3]

ವಿ.—ಈ ವಾಕ್ಯವು ಸರ್ವೇಶ್ವರನನ್ನೇ ಸೂಚಿಸುತ್ತದೆ; ಹೀಗೆ ಅರಿತುಕೊಂಡರೆ ವಾಕ್ಯಾವಯವಗಳ ಅನ್ಯೋನ್ಯಾನ್ವಯವು ಸಮಂಜಸವಾಗುತ್ತದೆ. ಯಾಜ್ಞವಲ್ಕ್ಯನು ಮೈತ್ರೇಯಿಗೆ ದ್ರಷ್ಟವ್ಯನೆಂದು (ಎಂದರೆ ಜ್ಞೇಯನೆಂದು) ಉಪದೇಶಿಸುವ ಆತ್ಮನು ಪರಮಾತ್ಮನೇ. 'ಅವನನ್ನು ಅರಿತುಕೊಂಡೇ ಮೃತ್ಯುವನ್ನು ದಾಟುತ್ತಾನೆ. ಸಂಸಾರವನ್ನು ದಾಟುವುದಕ್ಕೆ ಬೇರೆ ದಾರಿಯಿಲ್ಲ'[4] (ಶ್ವೇ. ಉ. ೩. ೮) ಎಂದು ಮತ್ತೊಂದು ಶ್ರುತಿಯು ಹೇಳುತ್ತದೆ. ಪರಮಪುರುಷನ ವಿಭೂತಿಯೂ ಮೋಕ್ಷವನ್ನು ಹೊಂದುವವನೂ ಆದ ಜೀವನ ಆತ್ಮಯಾಥಾತ್ಮ್ಯಜ್ಞಾನವು ಮೋಕ್ಷವನ್ನು ಹೊಂದಿಸುವ ಪರಮಪುರುಷನನ್ನು ಅರಿತುಕೊಳ್ಳಲು ಉಪಯುಕ್ತವಾಗಿರುವುದೇ ಹೊರತು ಸ್ವತಃ ಮೋಕ್ಷಕ್ಕೆ ಸಾಧನವಾಗಿರುವುದಿಲ್ಲ.[5] ಇಡೀ ಜಗತ್ತಿನ ಕಾರಣತ್ವವು ಪರಮಪುರುಷನಿಗೆ ಮಾತ್ರ ಸೇರಿದೆ, ಸಂಸಾರದಲ್ಲಿ ಕರ್ಮವಶನಾದ ವ್ಯಾಪಾರರಹಿತನಾದ ಜೀವನಿಗೆ ಸೇರಿಲ್ಲ. ಮತ್ತೆ ಒಬ್ಬ ಜೀವಾತ್ಮನನ್ನು ಅರಿತುಕೊಂಡದ್ದರಿಂದ ಎಲ್ಲವನ್ನೂ ಅರಿತುಕೊಂಡಂತೆ ಆಗುವುದಿಲ್ಲ; ಸರ್ವಾತ್ಮನಾದ ಪರಮಾತ್ಮನ ಜ್ಞಾನದಿಂದಲೇ ಇದು ಸಾಧ್ಯ. ಪತಿ ಪತ್ನಿ ಮೊದಲಾದ

---

1 ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮ ವೇದ ।

2 ಋಗ್ವೇದಾದಿಗಳೇ ನಾಮವು, ಯಜ್ಞ-ಆಹುತಿಗಳು ಕರ್ಮವು, ಈ ಲೋಕ ಪರಲೋಕ —ಇವು ರೂಪವು (ರತ್ನಪ್ರಭಾ).

3 ತಥೈವೈಕಾಯನಪ್ರಕ್ರಿಯಾಯಾಮಪಿ (ಬೃ. ಉ. ೪. ೫. ೧೩) ಸವಿಷಯಸ್ಯ ಸೇಂದ್ರಿಯಸ್ಯ ಸಾಂತಃಕರಣಸ್ಯ ಪ್ರಪಂಚಸ್ಯೈಕಾಯನಮನಂತರಮಬಾಹ್ಯಂ ಕೃತ್ಸ್ನಂ ಪ್ರಜ್ಞಾನಘನಂ ವ್ಯಾಚಕ್ಷಾಣಃ ಪರಮಾತ್ಮಾನಮೇನಂ ಗಮಯತಿ (ಸೂ. ಭಾ.).

4 ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ ।

5 ಪರಮಪುರುಷವಿಭೂತಿಭೂತಸ್ಯ ಪ್ರಾಪ್ತುರಾತ್ಮನಃ ಸ್ವರೂಪಯಾಥಾತ್ಮ್ಯಮಪವರ್ಗಸಾಧನಪರಮಪುರುಷವೇದನೋಪಯೋಗಿತಯಾಽವಗಂತವ್ಯಮ್; ನ ಸ್ವತಃ ಉಪಾಯತ್ವೇನ । (ಶ್ರೀಭಾಷ್ಯ)

ಪ್ರಿಯವಸ್ತುಗಳ ಅನ್ವೇಷಣೆಯನ್ನು ಬಿಟ್ಟು ಆತ್ಮನನ್ನೇ ಅನ್ವೇಷಿಸಬೇಕು. ವಸ್ತುಗಳು ಸ್ವರೂಪೇಣ ಪ್ರಿಯಾಪ್ರಿಯಗಳಾಗಿಲ್ಲ.[1] 'ನಮಗೆ ಪ್ರೀತಿಯನ್ನುಂಟುಮಾಡುವ ವಸ್ತುವೇ ಪುನಃ ದುಃಖಕ್ಕೆ ಕಾರಣವಾಗಿರುತ್ತದೆ. ಯಾವುದು ಕೋಪಕ್ಕೆ ಕಾರಣವಾಗಿತ್ತೊ ಅದೇ ಶಾಂತಿಯನ್ನುಂಟುಮಾಡುತ್ತದೆ. ಆದುದರಿಂದ ದುಃಖರೂಪವಾದದ್ದಾಗಲಿ ಸುಖರೂಪವಾದದ್ದಾಗಲಿ ಯಾವುದೂ ಇಲ್ಲ'[2] ಎಂದು ವಿಷ್ಣುಪುರಾಣವು (೩. ೬. ೪೬. ೪೭) ಹೇಳುತ್ತದೆ.

ದ್ವೈ.—ವಾಕ್ಯಗಳಿಗೆ ಬೇರೆ ಬೇರೆ ಅರ್ಥಗಳಿದ್ದರೂ ಪರಮಾತ್ಮನನ್ನು ಸೂಚಿಸುವಂತೆ ಅವುಗಳಿಗೆ ಅನ್ವಯವನ್ನು ಮಾಡಬಹುದು.[3]

## ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ॥ ೨೦ ॥

೨೦ ಪ್ರತಿಜ್ಞೆಯ ಸಿದ್ಧಿಗಾಗಿ ಲಿಂಗವಿದೆಯೆಂದು ಆಶ್ಮರಥ್ಯನು (ಅಭಿಪ್ರಾಯಪಡುತ್ತಾನೆ)

'ಆತ್ಮನನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತೆ ಆಗುತ್ತದೆ'[4] ಮತ್ತು 'ಇದೆಲ್ಲವೂ ಈ ಆತ್ಮನೇ'[5] (ಬೃ. ಉ. ೪. ೫. ೭)—ಎಂಬುದು ಪ್ರತಿಜ್ಞೆ. ಪ್ರಿಯನೆಂದು ಸೂಚಿಸಲ್ಪಟ್ಟ ಆತ್ಮನನ್ನು 'ನೋಡಬೇಕು' ಇತ್ಯಾದಿಯಾಗಿ ಹೇಳಿರುವ ಲಿಂಗವು ಆ ಪ್ರತಿಜ್ಞೆಯ ಸಿದ್ಧಿಯನ್ನು ಸೂಚಿಸುತ್ತದೆ. ಜೀವಾತ್ಮನು ಪರಮಾತ್ಮನಿಗಿಂತ ಬೇರೆಯವನಾಗಿದ್ದರೆ ಪರಮಾತ್ಮನನ್ನು ಅರಿತುಕೊಂಡರೂ ಜೀವಾತ್ಮನನ್ನು ಅರಿತಂತೆ ಆಗುತ್ತಿರಲಿಲ್ಲ; ಆಗ ಒಂದನ್ನು ಅರಿತದ್ದರಿಂದ ಎಲ್ಲವನ್ನೂ ಅರಿಯಬಹುದು ಎಂಬ ಪ್ರತಿಜ್ಞೆಗೆ ಹಾನಿಯಾಗುತ್ತಿತ್ತು.[6] ಆದುದರಿಂದ ಪ್ರತಿಜ್ಞೆಯ ಸಿದ್ಧಿಗಾಗಿ ಉಪಕ್ರಮ

---

1 ನ ತು ತತ್ತದ್ವಸ್ತು ಸ್ವರೂಪೇಣ ಪ್ರಿಯಾಪ್ರಿಯಂ ವಾ (ಶ್ರೀಭಾಷ್ಯ).

2 ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ ।
ತದೇವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ ॥
ತಸ್ಮಾದ್ದುಃಖಾತ್ಮಕಂ ನಾಸ್ತಿ ನ ಚ ಕಿಂಚಿತ್ಸುಖಾತ್ಮಕಮ್ ॥

3 ವಾಕ್ಯಸ್ಯಾಪ್ಯೇವಮನ್ವಯೋ ಯುಜ್ಯತೇ ಪೃಥಕ್ಪೃಥಕ್ಸ್ಥಿತಸ್ಯಾಪಿ ಪರಮಾತ್ಮನಾ (ಮ. ಭಾ.).

4 ಬೃ. ಉ. ೪. ೫. ೬ರ ಭಾವ.

5 ಇದಂ ಸರ್ವಂ ಯದಯಮಾತ್ಮಾ ।

6 ಯದಿ ಹಿ ವಿಜ್ಞಾನಾತ್ಮಾ ಪರಮಾತ್ಮನೋಽನ್ಯಃ ಸ್ಯಾತ್ ತತಃ ಪರಮಾತ್ಮವಿಜ್ಞಾನೇಽಪಿ ವಿಜ್ಞಾನಾತ್ಮಾ ನ ವಿಜ್ಞಾತ ಇತ್ಯೇಕವಿಜ್ಞಾನೇನ ಸರ್ವವಿಜ್ಞಾನಂ ಯತ್ಪ್ರತಿಜ್ಞಾತಂ ತದ್ಧೀಯೇತ (ಸೂ. ಭಾ.).

ವಾಕ್ಯವು ಜೀವ-ಪರಮಾತ್ಮರ ಅಭೇದಾಂಶವನ್ನು ತೋರಿಸುತ್ತದ ಹೀಗೆ ಆಶ್ಮರಥ್ಯಾಚಾರ್ಯನು ಅಭಿಪ್ರಾಯಪಡುತ್ತಾನೆ[1]

ವಿ.—ಇತರ ಮತಗಳ ಪ್ರಕಾರವೂ ಜೀವನನ್ನು ಸೂಚಿಸುವ ಶಬ್ದಗಳು ಪರಮಾತ್ಮನನ್ನೂ ಸೂಚಿಸುತ್ತವೆ ಎಂದು ಸೂತ್ರಕಾರರು ಇಲ್ಲಿ ಮತ್ತು ಮುಂದಿನ ಸೂತ್ರದಲ್ಲಿ ತಿಳಿಸುತ್ತಾರೆ ಜೀವಸೂಚಕವಾದ ಶಬ್ದಗಳು ಪರಮಾತ್ಮನನ್ನೂ ಸೂಚಿಸುತ್ತವೆ ಎಂಬ ಲಿಂಗವು ಏಕವಿಜ್ಞಾನದಿಂದ ಸರ್ವವಿಜ್ಞಾನವುಂಟಾಗುತ್ತದೆ ಎಂಬ ಪ್ರತಿಜ್ಞೆಯನ್ನು ಸಿದ್ಧಪಡಿಸುತ್ತದೆ ಪರಮಾತ್ಮನ ಕಾರ್ಯವಾದ ಜೀವನು ಪರಮಾತ್ಮನೇ ಆಗದಿದ್ದರೆ ಪರಮಾತ್ಮನಿಗಿಂತ ತಾನು ಭಿನ್ನನೆಂಬ ಜ್ಞಾನವು ಪರಮಾತ್ಮಜ್ಞಾನದಿಂದ ಉಂಟಾಗುತ್ತಿರಲಿಲ್ಲ[2] 'ಮೊದಲು ಆತ್ಮನೊಬ್ಬನೇ ಇದಾಗಿದ್ದನು'[3] (ಐ ಆ ೨ ೪. ೧ ೧) ಎಂಬುದು ಸೃಷ್ಟಿಗೆ ಮೊದಲು ಬ್ರಹ್ಮನ ಏಕತ್ವವನ್ನು ತಿಳಿಸುತ್ತದೆ ಮುಂಡಕಶ್ರುತಿಯು (೨ ೧ ೧) ಜೀವರೆಲ್ಲ ಬ್ರಹ್ಮನಲ್ಲಿಯೇ ಉತ್ಪನ್ನರಾಗಿ ಲಯವಾಗುತ್ತಾರೆಂದು ತಿಳಿಸುತ್ತದ ಆದುದರಿಂದ ಜೀವಶಬ್ದವು ಪರಮಾತ್ಮನನ್ನು ಸೂಚಿಸುತ್ತದೆ

ದ್ವೈ.—'ಶಾಸ್ತ್ರವು ಇತರ ವಿಷಯಗಳನ್ನೂ ಹೇಳಿರುವುದು ಎಂಬ ಲಿಂಗವು ಪ್ರತಿಜ್ಞಾವಾಕ್ಯವನ್ನು ಸಿದ್ಧಪಡಿಸುತ್ತದೆ ಹೀಗೆ ಆಶ್ಮರಥ್ಯನು ಅಭಿಪ್ರಾಯಪಡುತ್ತಾನೆ' ಎಂಬುದು ಸೂತ್ರಾರ್ಥ

**ನಾನ್ಯಃ ಪಂಥಾ ವಿದ್ಯತೇಽಯನಾಯ** (ಶ್ವೇ ಉ ೩ ೮) ಎಂಬ ಪ್ರತಿಜ್ಞಾವಾಕ್ಯವನ್ನು ಸಿದ್ಧಪಡಿಸಲು ಶಾಸ್ತ್ರವು ಕರ್ಮವೇ ಮೊದಲಾದುವನ್ನು ವಿವರಿಸುತ್ತದೆ, ಇದರಿಂದ ಇವೆಲ್ಲಕ್ಕೂ ಅನಿತ್ಯಫಲವಿದೆಯೆಂದು ಜನರು ಅರಿತುಕೊಂಡು ಪ್ರತಿಜ್ಞಾವಾಕ್ಯದ ತತ್ತ್ವವನ್ನು ತಿಳಿಯುತ್ತಾರೆ[4]

---

[1] ಆಶ್ಮರಥ್ಯನು ಭೇದಾಭೇದವಾದಿ ಇವನ ಮತವನ್ನು ಭಾಮತೀಕಾರರು ಹೀಗೆ ತಿಳಿಸಿರುತ್ತಾರೆ ಉರಿಯುತ್ತಿರುವ ಬೆಂಕಿಯಿಂದ ಹಾರುವ ಕಿಡಿಗಳು ಅದಕ್ಕಿಂತ ಬೇರೆಯಾಗಿಲ್ಲ, ಏಕೆಂದರೆ ಕಿಡಿಗಳು ಅಗ್ನಿಯ ರೂಪವೇ ಆಗಿರುತ್ತವೆ, ಇನ್ನೊಂದು ದೃಷ್ಟಿಯಿಂದ ನೋಡಿದರೆ ಕಿಡಿಗಳು ಬೆಂಕಿಗಿಂತ ಬೇರೆಯಾಗಿಲ್ಲ ಎಂದೂ ಹೇಳಲಾಗುವುದಿಲ್ಲ, ಹಾಗಾಗಿದ್ದರೆ ಬೆಂಕಿಯಿಂದಾಗಲಿ ಅಥವಾ ಪರಸ್ಪರವಾಗಿಯಾಗಲಿ ಕಿಡಿಗಳನ್ನು ವಿಂಗಡಿಸುವುದಕ್ಕೆ ಆಗುತ್ತಿರಲಿಲ್ಲ ಹೀಗೆಯೇ ಬ್ರಹ್ಮದ ಕಾರ್ಯವಾದ ಜೀವಾತ್ಮರು ಅದಕ್ಕಿಂತ ಬೇರೆಯಾಗಿಲ್ಲ, ಹಾಗಾಗಿದ್ದರೆ ಅವರಿಗೆ ಚಿತ್ಸ್ವರೂಪದ ಅಭಾವವುಂಟಾಗುತ್ತಿತ್ತು ಜೀವರು ಬ್ರಹ್ಮಕ್ಕಿಂತ ಬೇರೆಯಾಗಿಲ್ಲವೆಂದೂ ಹೇಳಲಾಗುವುದಿಲ್ಲ, ಹಾಗಾಗಿದ್ದರೆ ಒಬ್ಬರಿಂದ ಒಬ್ಬರನ್ನು ವಿಂಗಡಿಸಲು ಆಗುತ್ತಿರಲಿಲ್ಲ, ಇವರು ಬ್ರಹ್ಮೈಕ್ಯದಿಂದ ಸರ್ವಜ್ಞರಾಗುವುದರಿಂದ ಇವರಿಗೆ ಉಪದೇಶವು ವ್ಯರ್ಥವಾಗುತ್ತಿತ್ತು ಆದುದರಿಂದ ಜೀವರು ಹೇಗೋ ಬ್ರಹ್ಮಕ್ಕಿಂತ ಭಿನ್ನರಾಗಿಯೂ ಅಭಿನ್ನರಾಗಿಯೂ ಇರುತ್ತಾರೆ

[2] ಯದ್ಯಯಂ ಜೀವಃ ಪರಮಾತ್ಮಕಾರ್ಯತಯಾ ಪರಮಾತ್ಮೈವ ನ ಭವೇತ್, ತದಾ ತದ್ವ್ಯತಿರಿಕ್ತತಯಾ ಪರಮಾತ್ಮವಿಜ್ಞಾನಾದೇತದ್ವಿಜ್ಞಾನಂ ನ ಸೇತ್ಸ್ಯತಿ (ಶ್ರೀಭಾಷ್ಯ)

[3] ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ।

[4] ಯಸ್ಮಾದೇವಮನಿತ್ಯಫಲಮನ್ಯತ್ತಸ್ಮಾನ್ನಾನ್ಯಃ ಪಂಥಾ ಇತಿ (ಮ. ಭಾ.)

**ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ॥ ೨೧ ॥**

೨೧ (ಶರೀರದಿಂದ) ಹೋಗುವವನಿಗೆ ಈ ಭಾವವಿರುವುದರಿಂದ (ಜೀವ-ಪರಮಾತ್ಮರ ಐಕ್ಯವನ್ನು ಉಪಕ್ರಮವಾಕ್ಯದಲ್ಲಿ ಹೇಳಿದೆ) ಎಂದು ಔಡುಲೋಮಿಯು (ಅಭಿಪ್ರಾಯಪಡುತ್ತಾನೆ).

ದೇಹೇಂದ್ರಿಯ-ಮನೋಬುದ್ಧಿಗಳ ಸಂಘಾತವೆಂಬ ಉಪಾಧಿಯ ಸಂಪರ್ಕದಿಂದ ಕಲುಷಿತನಾದ ಜೀವಾತ್ಮನು ಜ್ಞಾನ ಧ್ಯಾನ—ಇವೇ ಮೊದಲಾದ ಸಾಧನಗಳ ಅನುಷ್ಠಾನದಿಂದ ಶುದ್ಧನಾಗಿ ದೇಹಾದಿಸಂಘಾತದಿಂದ ಹೊರಡುವಾಗ ಪರಮಾತ್ಮನೊಂದಿಗೆ ಐಕ್ಯವನ್ನು ಪಡೆಯಲು ಸಮರ್ಥನಾಗುತ್ತಾನೆ ; ಆದುದರಿಂದ ಜೀವ-ಪರಮಾತ್ಮರ ಅಭೇದವನ್ನು ತಿಳಿಸುವ ಉಪಕ್ರಮವಾಕ್ಯವು ಬಂದಿದೆ ಇದು ಔಡುಲೋಮಿಯ ಅಭಿಪ್ರಾಯ.[1] ಶ್ರುತಿಗಳು ಇದನ್ನೇ ಹೇಳುತ್ತವೆ: 'ಈ ಸಂಪ್ರಸಾದಗುಣವುಳ್ಳ ಆತ್ಮನು ಶರೀರದಿಂದ ಎದ್ದು ಪರಮಾತ್ಮನ ಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಕಾಣಿಸಿಕೊಳ್ಳುತ್ತಾನೆ'[2] (ಛಾಂ. ಉ. ೮. ೧೨. ೩); 'ಹೇಗೆ ಹರಿಯುತ್ತಿರುವ ನದಿಗಳು ನಾಮರೂಪಗಳನ್ನು ಬಿಟ್ಟು ಸಮುದ್ರದಲ್ಲಿ ಅದೃಶ್ಯವಾಗುವುವೊ ಹಾಗೆಯೇ ವಿದ್ವಾಂಸನು ನಾಮರೂಪಗಳಿಂದ ಬಿಡುಗಡೆಯನ್ನು ಹೊಂದಿ ಪರಾತ್ಪರನೂ ದಿವ್ಯನೂ ಆದ ಪುರುಷನನ್ನು ಹೊಂದುವನು'[3] (ಮುಂ. ಉ. ೩. ೨ ೮) ಎಂಬಲ್ಲಿ ಜೀವನನ್ನೇ ಆಶ್ರಯಿಸಿಕೊಂಡಿರುವ ನಾಮರೂಪಗಳನ್ನು ನದೀದೃಷ್ಟಾಂತದಿರದ ಹೇಳಿದೆ.[4]

---

[1] ವಿಜ್ಞಾನಾತ್ಮನ ಏವ ದೇಹೇಂದ್ರಿಯಮನೋಬುದ್ಧಿಸಂಘಾತೋಪಾಧಿಸಂಪರ್ಕಾತ್ ಕಲುಷೀಭೂತಸ್ಯ ಜ್ಞಾನಧ್ಯಾನಾದಿಸಾಧನಾನುಷ್ಠಾನಾತ್ ಸಂಪ್ರಸನ್ನಸ್ಯ ದೇಹಾದಿಸಂಘಾತಾದುತ್ಕ್ರಮಿಷ್ಯತಃ ಪರಮಾತ್ಮೈಕ್ಯೋಪಪತ್ತೇರಿದಮಭೇದೇನೋಪಕ್ರಮಣಮಿತ್ಯೌಡುಲೋಮಿರಾಚಾರ್ಯೋ ಮನ್ಯತೇ (ಸೂ. ಭಾ.).

[2] ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

[3] ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥

[4] ಜೀವನು ಪರಮಾತ್ಮನಿಂದ ಅತ್ಯಂತ ಭಿನ್ನನಾಗಿದ್ದಾನೆ ; ಉಪಾಧಿಗಳಿಂದ ಸರ್ವದಾ ಕಲುಷಿತನಾಗಿದ್ದಾನೆ. ಆದರೆ ಜೀವನು ಪರಮಾತ್ಮನಿಂದ ಅಭಿನ್ನನೆಂದು ಶ್ರುತಿಯು ಹೇಳುತ್ತದೆ ; ಏಕೆಂದರೆ ಜ್ಞಾನಧ್ಯಾನಾದಿಗಳಿಂದ ಶುದ್ಧನಾದ ಜೀವನು ಶರೀರವನ್ನು ಬಿಟ್ಟು ಪರಮಾತ್ಮನೊಂದಿಗೆ ಐಕ್ಯವನ್ನು ಪಡೆಯಬಹುದು. ಶ್ರುತಿಯು ಮುಂದೆ ಉಂಟಾಗಬಹುದಾದ ಅಭೇದವನ್ನು ಭೇದಕಾಲದಲ್ಲಿ ಹೇಳುತ್ತದೆ, ಭವಿಷ್ಯಂತಮಭೇದಮುಪಾದಾಯ ಭೇದಕಾಲೇಽಪ್ಯಭೇದ ಉಕ್ತಃ. 'ಮುಕ್ತಿಯವರೆಗೆ ಜೀವಪರಮಾತ್ಮರಿಗೆ ಭೇದವಿದೆ. ಆದರೆ ಮುಕ್ತನು ಪರಮಾತ್ಮನಿಗಿಂತ ಭಿನ್ನನಲ್ಲ ; ಏಕೆಂದರೆ ಭೇದಕ್ಕೆ ಯಾವ ಕಾರಣವೂ ಇಲ್ಲ' ಆಮುಕ್ತೇರ್ಭೇದ ಏವ ಸ್ಯಾಜ್ಜೀವಸ್ಯ ಚ ಪರಸ್ಯ ಚ । ಮುಕ್ತಸ್ಯ ತು ನ ಭೇದೋಽಸ್ತಿ ಭೇದಹೇತೋರಭಾವತಃ ॥ ಎಂದು ಪಾಂಚರಾತ್ರಿಕರು ಹೇಳುತ್ತಾರೆ (ಭಾಮತೀ). ಔಡುಲೋಮಿಯ ಮತಕ್ಕೆ ಸತ್ಯಭೇದವಾದ ಎಂದು ಹೆಸರು.

ವಿ.—ಔಡುಲೋಮಿಯು ಮತದ ಪ್ರಕಾರ ಜೀವನು ಶರೀರವನ್ನು ಬಿಟ್ಟಮೇಲೆ ಪರಮಾತ್ಮಭಾವನನ್ನು ಹೊಂದುವುದರಿಂದ ಜೀವ-ವಾಚಕ-ಶಬ್ದಗಳು ಪರಮಾತ್ಮನನ್ನೂ ಸೂಚಿಸುತ್ತವೆ.[1]

ದ್ವೈ.—ಶಬ್ದಗಳಿಗೆ ಜಗದ್ವಾಚಿತ್ವವಿರುವುದು ಬ್ರಹ್ಮಜ್ಞಾನಕ್ಕಾಗಿ; ಏಕೆಂದರೆ ಶರೀರವನ್ನು ಬಿಡುತ್ತಿರುವ ಮುಮುಕ್ಷುವಿಗೆ ಜ್ಞಾನಕ್ಕೆ ಸಾಧನವಾದ ಕರ್ಮಾದಿಗಳ ಆವಶ್ಯಕತೆಯಿದೆ

**ಅವಸ್ಥಿತೇರಿತಿ ಕಾಶಕೃತ್ಸ್ನಃ ॥ ೨೨ ॥**

೨೨ (ಪರಮಾತ್ಮನು ಜೀವಾತ್ಮರೂಪದಲ್ಲಿ) ಅವಸ್ಥಿತನಾಗಿರುವುದರಿಂದ (ಜೀವ-ಪರಮಾತ್ಮರ ಅಭೇದವನ್ನು ಉಪಕ್ರಮವಾಕ್ಯದಲ್ಲಿ ಹೇಳಿದೆ) ಎಂದು ಕಾಶಕೃತ್ಸ್ನನು (ಅಭಿಪ್ರಾಯಪಡುತ್ತಾನೆ)

'ಈ ಜೀವಾತ್ಮರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸುವೆನು' (ಛಾಂ. ಉ. ೬. ೩. ೨) ಎಂಬ ಶ್ರುತಿಯು ಪರಮಾತ್ಮನೇ ಜೀವಭಾವದಿಂದ ಅವಸ್ಥಿತನಾಗಿರುವನೆಂದು ತಿಳಿಸುತ್ತದೆ. ತೇಜಸ್ಸೇ ಮೊದಲಾದುವುಗಳ ಸೃಷ್ಟಿಯನ್ನು ಹೇಳುವಾಗ ಶ್ರುತಿಯು ಜೀವಸೃಷ್ಟಿಯನ್ನು ಬೇರೆಯಾಗಿ ಹೇಳಿಲ್ಲ; ಹಾಗಿದ್ದರೆ ಜೀವನು ಪರಮಾತ್ಮನಿಗಿಂತ ಬೇರೆಯಾಗಿ ಅವನ ಕಾರ್ಯವಾಗುತ್ತಿದ್ದನು.

ಕಾಶಕೃತ್ಸ್ನಮತದ ಪ್ರಕಾರ ಜೀವನು ಅವಿಕಾರಿಯಾದ ಪರಮೇಶ್ವರನೇ.[2] ಆಶ್ಮರಥ್ಯನ ಪ್ರಕಾರ ಜೀವನು ಪರಮೇಶ್ವರನಿಗಿಂತ ಬೇರೆಯಲ್ಲವಾದರೂ ಅಭೇದವು ಅಪೇಕ್ಷಿಕವಾಗಿದೆ; ಏಕೆಂದರೆ ಇವನ ಮತದಲ್ಲಿ ಜೀವನು ಪರಮಾತ್ಮನ ಕಾರ್ಯ. ಔಡುಲೋಮಿಯ ಪಕ್ಷದಲ್ಲಿ ಸಂಸಾರಕಾಲದಲ್ಲಿ ಭೇದವನ್ನೂ ಮೋಕ್ಷಕಾಲದಲ್ಲಿ ಅಭೇದವನ್ನೂ ಒಪ್ಪಿಕೊಂಡಿದೆ. ಇವುಗಳಲ್ಲಿ ಕಾಶಕೃತ್ಸ್ನೀಯಮತವೇ ಶ್ರುತಿಯನ್ನು ಅನುಸರಿಸಿದೆ; ಏಕೆಂದರೆ **ತತ್ತ್ವಮಸಿ** (ಛಾಂ. ಉ. ೬. ೭. ೮) ವಾಕ್ಯಕ್ಕೆ ಇದು ಸರಿಯಾದ ಅರ್ಥವನ್ನು ಕಲ್ಪಿಸುತ್ತದೆ ಪರಮಾತ್ಮನೇ ಜೀವಾತ್ಮರೂಪದಲ್ಲಿರುವುದರಿಂದ ಈ ಅಭೇದವನ್ನು ಹೇಳಿರುವುದು

[1] ಉತ್ಕ್ರಮಿಷ್ಯತಃ ಪರಮಾತ್ಮಭಾವಾಜ್ಜೀವಶಬ್ದೇನ ಪರಮಾತ್ಮನೋಽಭಿಧಾನಮಿತ್ಯೌಡುಲೋಮಿರಾಚಾರ್ಯೋ ಮನ್ಯತೇ ಸ್ಮ (ಶ್ರೀಭಾಷ್ಯ).

[2] ಕಾಶಕೃತ್ಸ್ನಸ್ಯಾಚಾರ್ಯಸ್ಯಾವಿಕೃತಃ ಪರಮೇಶ್ವರೋ ಜೀವೋ ನಾನ್ಯ ಇತಿ ಮತಮ್ (ಸೂ. ಭಾ.).

ಹೊಂದುತ್ತದೆ.[1] ಜೀವ-ಪರಮಾತ್ಮರಿಗೆ ಹೆಸರಿಗೆ ಮಾತ್ರ ಭೇದವಿರುವಾಗ, ಇವರಿಬ್ಬರ ಅಭೇದವೇ ಸಮ್ಯಗ್ದರ್ಶನದ ವಿಷಯವು ಎಂದು ನಿರ್ಧರಿಸಲ್ಪಟ್ಟಿದೆ ; ಆದುದರಿಂದ ಜೀವನು ಪರಮಾತ್ಮನಿಗಿಂತ ಬೇರೆಯವನು. ಪರಮಾತ್ಮನು ಜೀವನಿಗಿಂತ ಬೇರೆಯವನು ಎಂಬ ನಿರ್ಬಂಧವು ನಿರರ್ಥಕವು ; ಏಕೆಂದರೆ ಆತ್ಮನು ಒಬ್ಬನೇ ಆಗಿದ್ದು ಕೇವಲ ನಾಮಭೇದ ದಿಂದ ಬಗೆಬಗೆಯಾಗಿ ಕರೆಯಲ್ಪಡುತ್ತಾನೆ.[2] ಜೀವ-ಪರಮಾತ್ಮರು ಬೇರೆ ಬೇರೆಯೆಂದು ನಿರ್ಬಂಧವನ್ನು ಮಾಡುವವರು ವೇದಾಂತಾರ್ಥವನ್ನು ವಿರೋಧಿಸುತ್ತ, ಮೋಕ್ಷದ್ವಾರ ವಾದ ಸಮ್ಯಗ್ದರ್ಶನವನ್ನೇ ಬಾಧಿಸುತ್ತಾರೆ ; ಮೋಕ್ಷವು ಕೃತಕವು, ಅನಿತ್ಯವು ಎಂದು ಕಲ್ಪಿಸುತ್ತಾರೆ.[3]

ವಿ.—'(ಪರಮಾತ್ಮನು ಜೀವನಲ್ಲಿ ಅಂತರಾತ್ಮನಾಗಿ) ಇರುವುದರಿಂದ (ಜೀವ-ವಾಚಕ-ಶಬ್ದಗಳಿಂದ ಪರಮಾತ್ಮನೇ ಹೇಳಲ್ಪಡುತ್ತಾನೆ) ಎಂಬುದು ಕಾಶಕೃತ್ಸ್ನನ (ಅಭಿಪ್ರಾಯ)'—ಎಂಬುದು ಸೂತ್ರಾರ್ಥ.

ಉತ್ಕ್ರಮಿಸುತ್ತಿರುವ ಜೀವನು ಬ್ರಹ್ಮವಾಗುವುದರಿಂದ ಜೀವವಾಚಕಶಬ್ದಗಳು ಬ್ರಹ್ಮವನ್ನೇ ಸೂಚಿಸುತ್ತವೆ—ಎಂಬ ಔಡುಲೋಮಿಯ ಅಭಿಪ್ರಾಯವು ಸರಿಯಲ್ಲ. ಉತ್ಕ್ರಾಂತಿಗೆ ಮೊದಲು ಜೀವನು ಬ್ರಹ್ಮವಾಗಿದ್ದರೆ ಇದಕ್ಕೆ ಸ್ವರೂಪವು ಕಾರಣವೊ ಅಥವಾ ಉಪಾಧಿಯು ಕಾರಣವೊ ? ಸ್ವರೂಪವು ಕಾರಣವಾಗಿದ್ದರೆ ಅದು ಬ್ರಹ್ಮವೇ ಆಗುವುದಿಲ್ಲ ; ಏಕೆಂದರೆ ಜೀವನ ಸ್ವರೂಪವು ನಾಶವಾಗುತ್ತದೆ. ಭೇದಕ್ಕೆ ಉಪಾಧಿಯು ಕಾರಣವಾಗಿದ್ದರೆ ಉತ್ಕ್ರಾಂತಿಗೆ ಮೊದಲೂ ಜೀವನು ಬ್ರಹ್ಮವೇ ಆಗಿರುತ್ತಾನೆ ; ಆದುದ ರಿಂದ ಉತ್ಕ್ರಮಿಸಿದ ಮೇಲೆ ಬ್ರಹ್ಮವಾಗುತ್ತಾನೆ ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಈ ಮತದ ಪ್ರಕಾರ ಅವಯವರಹಿತವಾದ ಬ್ರಹ್ಮದಲ್ಲಿ ಉಪಾಧಿಗಳು ಭೇದವನ್ನು ತರ ಲಾರವು. ಭೇದವು ಉಪಾಧಿಯಲ್ಲಿಯೇ ಇರುವುದರಿಂದ ಜೀವನು ಉತ್ಕ್ರಾಂತಿಗೆ ಮೊದಲೂ ಬ್ರಹ್ಮವೇ ಆಗಿರುತ್ತಾನೆ. ಮತ್ತೆ ಉಪಾಧಿಯಿಂದುಂಟಾಗುವ ಭೇದವು ನಿಜವಾಗದಿದ್ದರೆ ಉತ್ಕ್ರಾಂತಿಯಾದ ಮೇಲೆ ಯಾವುದು ಬ್ರಹ್ಮವಾಗುತ್ತದೆ ?[4] ಬ್ರಹ್ಮದ ಸ್ವರೂಪವೇ ಅವಿದ್ಯೆಯಿಂದ ತಿರೋಹಿತವಾಗಿದೆಯೆಂದು ಹೇಳಿದರೆ ನಿತ್ಯಮುಕ್ತ-ಸ್ವಪ್ರಕಾಶ-

---

[1] ಅಸ್ಯೈವ ಪರಮಾತ್ಮನೋಽನೇನಾಪಿ ವಿಜ್ಞಾನಾತ್ಮಭಾವೇನಾವಸ್ಥಾನಾದುಪಪನ್ನಮಿದ-ಮಭೇದಾಭಿಧಾನಮಿತಿ ಕಾಶಕೃತ್ಸ್ನ ಆಚಾರ್ಯೋ ಮನ್ಯತೇ (ಸೂ. ಭಾ.).

[2] ಏಕೋ ಹ್ಯಯಮಾತ್ಮಾ ನಾಮಮಾತ್ರಭೇದೇನ ಬಹುಧಾಽಭಿಧೀಯತ ಇತಿ (ಸೂ. ಭಾ.)

[3] ಯೇ ತು ನಿರ್ಬಂಧಂ ಕುರ್ವಂತಿ ತೇ ವೇದಾಂತಾರ್ಥಂ ಬಾಧಮಾನಾಃ ಶ್ರೇಯೋದ್ವಾರಂ ಸಮ್ಯಗ್ದರ್ಶನಮೇವ ಬಾಧಂತೇ। ಕೃತಕಮನಿತ್ಯಂ ಚ ಮೋಕ್ಷಂ ಕಲ್ಪಯಂತಿ (ಸೂ. ಭಾ.).

[4] ಔಪಾಧಿಕಸ್ಯ ಭೇದಸ್ಯಾಪಾರಮಾರ್ಥಿಕತ್ವೇ ಕಸ್ಯಾಯಮುತ್ಕ್ರಾಂತೌ ಬ್ರಹ್ಮಭಾವ ಇತಿ ವಕ್ತವ್ಯಮ್ (ಶ್ರೀಭಾಷ್ಯ).

ಜ್ಞಾನಸ್ವರೂಪವು ಅವಿದ್ಯೆಯೆಂಬ ಉಪಾಧಿಯಿಂದ ತಿರೋಹಿತವಾಗಲಾರದು.[1] ವಸ್ತುವಿನ ಸ್ವರೂಪಕ್ಕೆ ಸೇರಿದ ಪ್ರಕಾಶವು ನಿಂತುಹೋದರೆ ತಿರೋಧಾನವೆನಿಸುವುದು ಆದುದರಿಂದ ಬ್ರಹ್ಮಸ್ವರೂಪವು ನಿತ್ಯಪ್ರಕಾಶವಾಗಿರುವಾಗ ಬ್ರಹ್ಮವಾಗಲು ಕಾರಣವಾಗುವ ಯಾವ ವಿಶೇಷವೂ ಇರಲಾರದು.[2]

ತನ್ನ ಶರೀರವಾದ ಜೀವಾತ್ಮನಲ್ಲಿ ಪರಬ್ರಹ್ಮನು ಆತ್ಮನಾಗಿ ಅವಸ್ಥಿತನಾಗಿರುವುದರಿಂದ ಜೀವವಾಚಕಶಬ್ದಗಳು ಪರಬ್ರಹ್ಮನನ್ನೂ ಸೂಚಿಸುತ್ತವೆ ಎಂದು ಕಾಶಕೃತ್ಸ್ನನು ಅಭಿಪ್ರಾಯಪಡುತ್ತಾನೆ.[3] ಜೀವಶಬ್ದವು ಜೀವನನ್ನು ಸೂಚಿಸುವುದಲ್ಲದೆ ಪರಮಾತ್ಮನನ್ನೂ ಸೂಚಿಸುತ್ತದೆ ಎಂದು ಹಿಂದೆಯೇ ಹೇಳಿದೆ. ಈ ಅಭಿಪ್ರಾಯವು ಶ್ರುತಿಗಳಿಗೆ ಸರಿಯಾಗಿ ಹೊಂದುತ್ತದೆ.[4]

ದ್ವೈ.—ಕರ್ಮಾದಿಗಳೆಲ್ಲವೂ ಪರಬ್ರಹ್ಮನಲ್ಲಿಯೇ ಇರುವುದರಿಂದ ಅವುಗಳ ವಿವರಣೆಯು ಶಾಸ್ತ್ರದಲ್ಲಿ ಬಂದಿದೆ ಎಂಬುದು ಕಾಶಕೃತ್ಸ್ನನ ಅಭಿಪ್ರಾಯ.[5] ಕೃಷ್ಣ-ದ್ವೈಪಾಯನರ ಮತದ ಒಂದಂಶವನ್ನು ಅರಿತುಕೊಂಡು ಎಲ್ಲ ಋಷಿಗಳು ತಮ್ಮ ಜ್ಞಾನಕ್ಕೆ ಅನುಗುಣವಾಗಿ ಹೇಳುತ್ತಾರೆ; ಆದುದರಿಂದ ಯಾವ ವಿರೋಧವೂ ಇಲ್ಲ—ಎಂದು ಪದ್ಮಪುರಾಣವು ಹೇಳುತ್ತದೆ.

---

[1] ಬ್ರಹ್ಮಣ ಏವಾವಿದ್ಯೋಪಾಧಿತಿರೋಹಿತಸ್ವರೂಪಸ್ಯೇತಿ ಚೇನ್ನ; ನಿತ್ಯಮುಕ್ತ-ಸ್ವಪ್ರಕಾಶಸ್ವರೂಪಸ್ಯಾವಿದ್ಯೋಪಾಧಿತಿರೋಧಾನಾಸಂಭವಾತ್ (ಶ್ರೀಭಾಷ್ಯ).

[2] ಅತೋ ನಿತ್ಯಾವಿರ್ಭೂತಸ್ವಸ್ವರೂಪತ್ವಾತ್ ತಸ್ಯೋತ್ಕ್ರಾಂತಾ ಬ್ರಹ್ಮಭಾವೇ ನ ಕಶ್ಚಿದ್ವಿಶೇಷ ಇತಿ ಉತ್ಕ್ರಮಿಷ್ಯತ ಇತಿ ವಿಶೇಷಣಂ ವ್ಯರ್ಥಮೇವ (ಶ್ರೀಭಾಷ್ಯ).

[3] ಸ್ವಶರೀರಭೂತೇ ಜೀವಾತ್ಮನ್ಯಾತ್ಮತಯಾವಸ್ಥಿತೇರ್ಜೀವಶಬ್ದೇನ ಬ್ರಹ್ಮಪ್ರತಿಪಾದನ-ಮಿತಿ ಕಾಶಕೃತ್ಸ್ನ ಆಚಾರ್ಯೋ ಮನ್ಯತೇ ಸ್ಮ (ಶ್ರೀಭಾಷ್ಯ).

[4] ಛಾಂ. ಉ. ೬. ೩. ೨; ಬೃ. ಉ. ೩. ೭. ೨೨.

[5] ಸರ್ವಂ ಪರಮಾತ್ಮನ್ಯವಸ್ಥಿತಮಿತಿ ವಕ್ತುಂ ತದ್ವಚನಮಿತಿ ಕಾಶಕೃತ್ಸ್ನಃ (ಮ. ಭಾ.).

## ೭. ಪ್ರಕೃತ್ಯಧಿಕರಣ

(ಸೂ. ೨೩–೨೭)

### ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ॥ ೨೩ ॥

೨೩. (ಬ್ರಹ್ಮವು) ಉಪಾದಾನಕಾರಣವೂ (ಆಗಿದೆ); ಏಕೆಂದರೆ ಈ ಅಭಿಪ್ರಾಯವು) ಪ್ರತಿಜ್ಞೆಗೂ ದೃಷ್ಟಾಂತಕ್ಕೂ ವಿರೋಧವಾಗಿಲ್ಲ.

ಬ್ರಹ್ಮವು ನಿಃಶ್ರೇಯಸ್ಸಿಗೆ ಕಾರಣವಾಗಿರುವುದರಿಂದ ಅದನ್ನು ಜಿಜ್ಞಾಸೆ ಮಾಡಬೇಕು ಎಂದು ಹೇಳಿದ್ದಾಯಿತು. ಬ್ರಹ್ಮವೇ ಜಗತ್ತಿನ ಜನ್ಮಸ್ಥಿತಿಲಯಗಳಿಗೆ ಕಾರಣವೆಂದು ಅದರ ಲಕ್ಷಣವನ್ನೂ ಹೇಳಿದ್ದಾಯಿತು ಆದರೆ ಬ್ರಹ್ಮವು ಉಪಾದಾನಕಾರಣವೋ ಅಥವಾ ನಿಮಿತ್ತಕಾರಣವೋ ಎಂಬ ಸಂಶಯವು ಇಲ್ಲಿ ಒದಗುತ್ತದೆ.

**ಪೂರ್ವಪಕ್ಷಿ**—ಬ್ರಹ್ಮವು ನಿಮಿತ್ತಕಾರಣವೇ ಆಗಿರುತ್ತದೆ; ಏಕೆಂದರೆ ಯೋಚಿಸಿ ನೋಡುವುದರ ಮೂಲಕ (ಎಂದರೆ ಈಕ್ಷಣೆಯ ಮೂಲಕ) ಬ್ರಹ್ಮವು ಕರ್ತೃವಾಗಿರುವುದೆಂದು ಶ್ರುತಿಗಳು ಹೇಳುತ್ತವೆ.[1] ಒಂದು ಕ್ರಿಯೆಗೆ ಫಲವುಂಟಾಗಲು ಅನೇಕ ಕಾರಕಗಳು ಬೇಕಾಗುತ್ತವೆ ರಾಜರು ಮೈನಸ್ವತ ಮೊದಲಾದವರು ನಿಮಿತ್ತಕಾರಣರೆಂದು ಪ್ರಸಿದ್ಧರಾಗಿರುವಂತೆ ಪರಮೇಶ್ವರನು ನಿಮಿತ್ತಕಾರಣನೆಂದು ತಿಳಿಯುವುದು ಯುಕ್ತವಾಗಿರುತ್ತದೆ ಕಾರ್ಯವು ತನ್ನ ಉಪಾದಾನಕಾರಣಕ್ಕೆ ಹೋಲಬೇಕು ಇಲ್ಲಿ ಕಾರ್ಯವಾದ ಜಗತ್ತು ಸಾವಯವವೂ ಅಚೇತನವೂ ಅಶುದ್ಧವೂ ಆಗಿದ್ದರೆ ಕಾರಣವಾದ ಬ್ರಹ್ಮವು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ನಿರಂಜನವೂ ಆಗಿರುತ್ತದೆ.[2] ಆದುದರಿಂದ ಬ್ರಹ್ಮಕ್ಕಿಂತ ಬೇರೆಯಾದ, ಅಶುದ್ಧ್ಯಾದಿಗುಣಗಳುಳ್ಳ, ಸಾಂಖ್ಯಸ್ಮೃತಿಪ್ರಸಿದ್ಧವಾದ ಉಪಾದಾನಕಾರಣವನ್ನು ಒಪ್ಪಿಕೊಳ್ಳಬೇಕು.

**ಸಿದ್ಧಾಂತಿ**—ಬ್ರಹ್ಮವು ಕೇವಲ ನಿಮಿತ್ತಕಾರಣವೇ ಅಲ್ಲ, ಉಪಾದಾನಕಾರಣವೂ ಆಗಿರುತ್ತದೆ. ಹೀಗಾದರೆ ಶ್ರುತಿಯಲ್ಲಿ ಹೇಳಿರುವ ಪ್ರತಿಜ್ಞಾ-ದೃಷ್ಟಾಂತಗಳಿಗೆ ವಿರೋಧವಾಗುವುದಿಲ್ಲ: 'ಯಾವುದರಿಂದ ಅಶ್ರುತವು ಶ್ರುತವಾಗುವುದೋ ಅಮತವು ಮತವಾಗುವುದೋ ಅವಿಜ್ಞಾತವು ವಿಜ್ಞಾತವಾಗುವುದೋ—ಆ ಆದೇಶವನ್ನು ಕೇಳಿದೆಯ ?'[3] (ಛಾಂ. ಉ. ೬. ೧. ೩) ಎಂಬುದು ಪ್ರತಿಜ್ಞೆ. ಒಂದನ್ನು ಅರಿತುಕೊಂಡರೆ ಅರಿಯದ

---

[1] 'ಅವನು ಆಲೋಚಿಸಿದನು' ಸ ಈಕ್ಷಾಂಚಕ್ರೇ; 'ಅವನು ಪ್ರಾಣವನ್ನು ಸೃಷ್ಟಿಸಿದನು' ಸ ಪ್ರಾಣಮಸೃಜತ (ಪ್ರ. ಉ. ೬. ೩. ೪).

[2] ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಮ್ (ಶ್ವೇ. ಉ. ೬. ೧೯).

[3] ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್ ।

ಇರುವ ಎಲ್ಲವನ್ನೂ ಅರಿತಂತಾಗುತ್ತದೆ ಎಂಬುದು ಈ ವಾಕ್ಯದಿಂದ ತಿಳಿದುಬರುತ್ತದೆ.[1] ಉಪಾದಾನ-ಕಾರಣವನ್ನು ಅರಿತುಕೊಂಡರೆ ಮಾತ್ರ ಎಲ್ಲವನ್ನೂ ಅರಿತಂತಾಗುತ್ತದೆ; ಏಕೆಂದರೆ ಕಾರ್ಯವು ಉಪಾದಾನಕಾರಣಕ್ಕಿಂತ ಬೇರೆಯಲ್ಲ. ಆದರೆ ಕಾರ್ಯವು ನಿಮಿತ್ತಕಾರಣಕ್ಕಿಂತ ಬೇರೆಯಾಗಿರುತ್ತದೆ. ಬಡಗಿ ಕಟ್ಟಿದ ಮನೆಯು ಅವನಿಗಿಂತ ಬೇರೆಯಾಗಿರುವುದು ಎಲ್ಲರಿಗೂ ತಿಳಿದ ವಿಷಯವೇ. 'ಸೋಮ್ಯ, ಹೇಗೆ ಒಂದು ಮಣ್ಣು ಮುದ್ದೆಯನ್ನು ತಿಳಿದುಕೊಂಡದ್ದರಿಂದ ಮಣ್ಣಿನಿಂದ ಮಾಡಿದುದೆಲ್ಲ ತಿಳಿಯಲ್ಪಟ್ಟದ್ದಾಗುವುದೊ—ಏಕೆಂದರೆ ವಸ್ತುವಿನ ಪರಿಣಾಮವು ವಾಕ್ಕನ್ನು ಅವಲಂಬಿಸಿರುವ ಕೇವಲ ಹೆಸರೇ, ಮಣ್ಣೆಂಬುದೇ ಸತ್ಯವು' (ಛಾಂ ಉ. ೬. ೧. ೪) ಎಂಬುದು ದೃಷ್ಟಾಂತ. ಇದೂ ಉಪಾದಾನಕಾರಣವನ್ನೇ ಸೂಚಿಸುತ್ತದೆ 'ಯಾವುದರಿಂದ ಈ ಪ್ರಾಣಿಗಳು ಹುಟ್ಟುತ್ತವೆಯೊ' (ತೈ. ಉ. ೩. ೧) ಎಂಬಲ್ಲಿ **ಯತಃ** ('ಯಾವುದರಿಂದ') ಎಂಬ ಪಂಚಮಿಯು ಉಪಾದಾನಕಾರಣವನ್ನೇ ಸೂಚಿಸುತ್ತದೆ.

ಲೋಕದಲ್ಲಿ ಮಣ್ಣು, ಚಿನ್ನ ಮೊದಲಾದುವುಗಳನ್ನು ಗಡಿಗೆ ಆಭರಣ ಮೊದಲಾದುವುಗಳನ್ನಾಗಿ ಮಾಡಲು ಕುಂಬಾರ, ಅಕ್ಕಸಾಲಿಗ ಮೊದಲಾದ ನಿಮಿತ್ತಕಾರಣಗಳು ಬೇಕಾಗುತ್ತವೆ. ಬ್ರಹ್ಮವನ್ನು ಬಿಟ್ಟರೆ ಜಗತ್ತಿಗೆ ಬೇರೆ ನಿಮಿತ್ತಕಾರಣವಿರುವುದಿಲ್ಲ; ಏಕೆಂದರೆ ಸೃಷ್ಟಿಗಿಂತಲೂ ಮೊದಲು ಸದ್ವಸ್ತುವೊಂದೇ ಇತ್ತೆಂದು ಶ್ರುತಿಯು ಹೇಳುತ್ತದೆ. ಉಪಾದಾನಕಾರಣಕ್ಕಿಂತ ಬೇರೆಯಾದ ನಿಮಿತ್ತಕಾರಣವಿದ್ದರೆ ಮೇಲೆ ಹೇಳಿದ ಪ್ರತಿಜ್ಞಾ-ದೃಷ್ಟಾಂತಗಳಿಗೆ ವಿರೋಧವಾಗುತ್ತದೆ. ಬೇರೆ ಯಾವ ಅಧಿಷ್ಠಾತೃವೂ ಇಲ್ಲದಿರುವುದರಿಂದ ಆತ್ಮನೇ ಜಗತ್ತಿನ ನಿಮಿತ್ತಕಾರಣವು, ಜಗತ್ತನ್ನು ಸೃಷ್ಟಿಸಲು ಮತ್ತೊಂದು ವಸ್ತುವು ಇಲ್ಲದಿರುವುದರಿಂದ ಆತ್ಮನೇ ಉಪಾದಾನಕಾರಣವು'[2]

ವಿ.—ಶ್ರುತಿಗಳು ಸರ್ವಜ್ಞನಾದ ಈಶ್ವರನನ್ನೇ ಜಗತ್ಕಾರಣನೆಂದು ಹೇಳುತ್ತವೆ ಎಂಬುದು ಒಪ್ಪಿಕೊಳ್ಳಬೇಕು; ಏಕೆಂದರೆ ಅವು ಅವನಿಗೆ ಈಕ್ಷಣಾದಿಗುಣಗಳ ಯೋಗವನ್ನು ಹೇಳುತ್ತವೆ. ಆದರೆ ಅದೇ ಶ್ರುತಿಗಳಿಂದಲೇ ಪ್ರಧಾನವು ಉಪಾದಾನಕಾರಣವೆಂಬುದೂ ತಿಳಿದುಬರುತ್ತದೆ. ಆದುದರಿಂದ ಬ್ರಹ್ಮನು ನಿಮಿತ್ತಕಾರಣನೇ, ಬ್ರಹ್ಮನಿಂದ ಅಧಿಷ್ಠಿತವಾದ ಪ್ರಕೃತಿಯೇ ಉಪಾದಾನಕಾರಣವು[3]—ಎಂಬುದು ಈಶ್ವರನನ್ನು ಒಪ್ಪಿಕೊಂಡಿರುವ ಸಾಂಖ್ಯವಾದಿಯ ಪೂರ್ವಪಕ್ಷ.

---

[1] ತತ್ರ ಚೈಕೇನ ವಿಜ್ಞಾತೇನ ಸರ್ವಮನ್ಯದವಿಜ್ಞಾತಮಪಿ ವಿಜ್ಞಾತಂ ಭವತೀತಿ ಪ್ರತೀಯತೇ (ಸೂ. ಭಾ.).

[2] ತಸ್ಮಾದ್ ಅಧಿಷ್ಠಾತ್ರಂತರಾಭಾವಾದ್ ಆತ್ಮನಃ ಕರ್ತೃತ್ವಮ್, ಉಪಾದಾನಾಂತರಾಭಾವಾಚ್ಚ ಪ್ರಕೃತಿತ್ವಮ್ (ಸೂ. ಭಾ.).

[3] ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್, ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್। ಶ್ವೇ. ಉ. ೪. ೯–೧೦; ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್॥ (ಗೀತಾ. ೯. ೧೦)—ನೋಡಿ.

ಇದಕ್ಕೆ ಪರಿಹಾರ ಹೀಗಿದೆ. ಪರಬ್ರಹ್ಮನು ಕೇವಲ ನಿಮಿತ್ತಕಾರಣನಾಗಿದ್ದರೆ ಬ್ರಹ್ಮಜ್ಞಾನದಿಂದ ಜಗತ್ತೆಲ್ಲವನ್ನೂ ಅರಿತಂತೆ ಆಗುತ್ತಿರಲಿಲ್ಲ; ಪ್ರತಿಜ್ಞಾ-ದೃಷ್ಟಾಂತಗಳಿಗೆ ವಿರೋಧವಾಗುತ್ತಿತ್ತು. ಚೂಲಿಕೋಪನಿಷತ್ತೇ ಮೊದಲಾದ ಶ್ರುತಿಗಳಲ್ಲಿ ಆದ್ಯಂತರಹಿತವಾದ ಪ್ರಕೃತಿಯು ಉಪಾದಾನಕಾರಣವೆಂದು ಹೇಳಿದ್ದರೂ ಅಲ್ಲಿ ಪ್ರಕೃತಿಶಬ್ದವು ನಾಮರೂಪಗಳೆಂಬ ವಿಂಗಡವನ್ನು ಹೊಂದದೆ ಕಾರಣಾವಸ್ಥೆಯಲ್ಲಿರುವ ಬ್ರಹ್ಮನನ್ನು ಸೂಚಿಸುತ್ತದೆ. ಏಕೆಂದರೆ ಬ್ರಹ್ಮನಿಗಿಂತ ಬೇರೆಯಾದ ವಸ್ತುವಿಲ್ಲ.[1] ಚಿದಚಿದ್ವಸ್ತುಗಳನ್ನು ಶರೀರವಾಗಿ ಹೊಂದಿರುವ ಪರಬ್ರಹ್ಮನೇ ಎಲ್ಲ ವಸ್ತುಗಳ ಆತ್ಮನಾಗಿದ್ದಾನೆ; ಕೆಲವು ವೇಳೆ ನಾಮರೂಪಗಳು ವಿಂಗಡವಾಗಿರುವಾಗ ಬ್ರಹ್ಮನು ಕಾರ್ಯನೆಂದೂ ಬಹುವಾಗಿರುವನೆಂದೂ ಕರೆಯುತ್ತೇವೆ ನಾಮರೂಪಗಳು ವಿಂಗಡವಾಗದಿರುವಾಗ ಅವನು ಏಕನು ಅದ್ವಿತೀಯನು ಕಾರಣನು ಎಂದು ಕರೆಯುತ್ತೇವೆ.[2] ಪರಬ್ರಹ್ಮನಿಗೇ ಉಪಾದಾನ-ನಿಮಿತ್ತ-ಕಾರಣಗಳೆರಡೂ ಇರುವುದರಲ್ಲಿ ವಿರೋಧವಿಲ್ಲ; ಏಕೆಂದರೆ ಸಕಲವಸ್ತುಗಳಿಗಿಂತ ವಿಲಕ್ಷಣನೂ ಸರ್ವಶಕ್ತನೂ ಸರ್ವಜ್ಞನೂ ಏಕನೂ ಆದ ಪರಬ್ರಹ್ಮನಿಗೆ ಎಲ್ಲವೂ ಸಾಧ್ಯವಾಗುತ್ತದೆ.[3] ಇವನಿಗೆ ಲೋಕದೃಷ್ಟಾಂತವು ಹೊಂದುವುದಿಲ್ಲ. ಚಿದಚಿದ್ವಸ್ತು-ಶರೀರಕನಾದ ಪರಬ್ರಹ್ಮನು ಉಪಾದಾನಕಾರಣನಾಗಿದ್ದರೂ ಚಿದಚಿದ್ವಸ್ತುಗಳು ಮಾತ್ರ ವಿಕಾರವನ್ನು ಹೊಂದುತ್ತವೆಯೇ ಹೊರತು ಬ್ರಹ್ಮನಿಗೆ ವಿಕಾರವಿಲ್ಲ.

ದ್ವೈ.—'ಪ್ರತಿಜ್ಞಾ-ದೃಷ್ಟಾಂತಗಳಿಗೆ ಅನುಗುಣವಾಗಿ ಈಶ್ವರನು ಪ್ರಕೃತಿಶಬ್ದ-ವಾಚ್ಯನೂ ಆಗಿರುತ್ತಾನೆ' ಎಂಬುದು ಸೂತ್ರಾರ್ಥ.

ಸ್ತ್ರೀಶಬ್ದಗಳೂ ಕೂಡ ಈಶ್ವರನನ್ನೇ ಸೂಚಿಸುತ್ತವೆ. 'ಎಲ್ಲ ಹೆಸರುಗಳೂ ಈ ಪುರುಷನನ್ನೇ ಹೇಳುತ್ತವೆ'[4] ಎಂಬುದು ಪ್ರತಿಜ್ಞೆ. 'ಸಮುದ್ರಗಾಮಿಗಳಾದ ನದಿಗಳೆಲ್ಲ ಸಮುದ್ರದ ಕಡೆಗೆ ಹರಿದು ಅದನ್ನು ಸೇರುವಂತೆ ಎಲ್ಲ ಹೆಸರುಗಳೂ ಪುರುಷನನ್ನೇ ಪ್ರವೇಶಿಸುತ್ತವೆ' ಎಂಬುದು ದೃಷ್ಟಾಂತ; ಹೀಗೆ ಪ್ರತಿಜ್ಞಾ-ದೃಷ್ಟಾಂತಗಳಿಗೆ ಅನುಗುಣ

---

[1] ತತ್ರಾಪ್ಯವಿಭಕ್ತನಾಮರೂಪಂ ಕಾರಣಾವಸ್ಥಂ ಬ್ರಹ್ಮೈವ ಪ್ರಕೃತಿಶಬ್ದೇನಾಭಿಧೀಯತೇ, ಬ್ರಹ್ಮವ್ಯತಿರಿಕ್ತವಸ್ತ್ವಂತರಾಭಾವಾತ್ (ಶ್ರೀಭಾಷ್ಯ).

[2] ಸರ್ವಚಿದಚಿದ್ವಸ್ತುಶರೀರತಯಾ ಸರ್ವದಾ ಸರ್ವಾತ್ಮಭೂತಂ ಪರಂ ಬ್ರಹ್ಮ ಕದಾಚಿದ್ ವಿಭಕ್ತನಾಮರೂಪಂ ಕದಾಚಿಚ್ಚಾವಿಭಕ್ತನಾಮರೂಪಮ್; ಯದಾ ವಿಭಕ್ತನಾಮರೂಪಂ ತದಾ ತದೇವ ಬಹುತ್ವೇನ ಕಾರ್ಯತ್ವೇನ ಚೋಚ್ಯತೇ; ಯದಾ ಚಾವಿಭಕ್ತನಾಮರೂಪಂ ತದೈಕಮದ್ವಿತೀಯಂ ಕಾರಣಮಿತಿ ಚ (ಶ್ರೀಭಾಷ್ಯ).

[3] ಸಕಲೇತರವಿಲಕ್ಷಣಸ್ಯ ಪರಸ್ಯ ಬ್ರಹ್ಮಣಃ ಸರ್ವಶಕ್ತೇಃ ಸರ್ವಜ್ಞಸ್ಯೈಕಸ್ಯೈವ ಸರ್ವಮುಪಪದ್ಯತೇ (ಶ್ರೀಭಾಷ್ಯ).

[4] ಹಂತ್ಯೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ (ಮ. ಭಾ.).

ವಾಗಿ ಈಶ್ವರನು ಪ್ರಕೃತಿಶಬ್ದ-ವಾಚ್ಯನೂ ಆಗಿರುತ್ತಾನೆ.[1]

**ಅಭಿಧ್ಯೋಪದೇಶಾಚ್ಚ || ೨೪ ||**

೨೪ ಸೃಷ್ಟಿಸಂಕಲ್ಪವನ್ನು* ಉಪದೇಶಿಸಿರುವುದರಿಂದಲೂ (ಬ್ರಹ್ಮವು ಉಪಾದಾನನಿಮಿತ್ತಕಾರಣಗಳಾಗಿದೆ).

'ನಾನು ಬಹುವಾಗುವೆನು, ಹುಟ್ಟುವೆನು—ಎಂದು ಆತ್ಮನು ಸಂಕಲ್ಪಿಸಿದನು'[2] (ತೈ. ಉ. ೨. ೬). 'ಬಹುವಾಗುವೆನು, ಉತ್ಪನ್ನನಾಗುವೆನು—ಎಂದು ಅದು ಯೋಚಿಸಿತು'[3] (ಛಾಂ. ಉ. ೬. ೨. ೩) ಎಂಬಲ್ಲಿ ಸೃಷ್ಟಿಸಂಕಲ್ಪವನ್ನು ಉಪದೇಶಿಸಿರುವುದರಿಂದ ಬ್ರಹ್ಮವು ಉಪಾದಾನ-ನಿಮಿತ್ತ-ಕಾರಣಗಳೆಂದು ತಿಳಿದುಬರುತ್ತದೆ. ಇಲ್ಲಿ ಬ್ರಹ್ಮವು ಸಂಕಲ್ಪಪೂರ್ವವಾಗಿ ಸ್ವಾತಂತ್ರ್ಯ-ಪ್ರವೃತ್ತಿಯ ಕರ್ತೃವೆಂದು (ಎಂದರೆ ನಿಮಿತ್ತಕಾರಣವೆಂದು) ತಿಳಿದುಬರುತ್ತದೆ. 'ಬಹುವಾಗುವೆನು' ಎಂಬುದು ಬಹುವಾಗುವ ಸಂಕಲ್ಪಕ್ಕೆ ಪ್ರತ್ಯಗಾತ್ಮನೇ ವಿಷಯನಾಗಿರುವುದರಿಂದ ಅದೇ ಉಪಾದಾನಕಾರಣವೆಂದು ಸೂಚಿಸುತ್ತದೆ.

**ವಿ.**—ಸೃಷ್ಟಿಸಲು ಪ್ರಯುಕ್ತನಾದ ಪರಬ್ರಹ್ಮನು ತಾನೇ ಬಹುವಾಗುವನೆಂದು ಸಂಕಲ್ಪಿಸಿದನು ಎಂದು ಶ್ರುತಿಗಳು (ತೈ. ಉ. ೨. ೬; ಛಾಂ. ಉ. ೬. ೨. ೩) ಹೇಳುತ್ತವೆ. ಆದುದರಿಂದ ಬ್ರಹ್ಮನು ಉಪಾದಾನ-ನಿಮಿತ್ತಕಾರಣಗಳಾಗಿರುತ್ತಾನೆ.

**ದ್ವೈ.**—'ಈಶ್ವರೇಚ್ಛೆಯನ್ನು ಅಥವಾ ಈಶ್ವರನ ಸ್ವರೂಪವನ್ನು ಪ್ರಕೃತಿ ಎಂದು ಕರೆದಿರುವುದರಿಂದ ಪರಬ್ರಹ್ಮನೇ ಪ್ರಕೃತಿಶಬ್ದವಾಚ್ಯನು' ಎಂಬುದು ಸೂತ್ರಾರ್ಥ.

**ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್** (ಶ್ವೇ. ಉ. ೪. ೧೦) ಎಂಬ ಶ್ರುತಿಯ ಪ್ರಕಾರ ಈಶ್ವರನ ಇಚ್ಛೆಗೆ ಪ್ರಕೃತಿ ಎಂದು ಹೆಸರು. 'ಅವನು ಇಚ್ಛೆ, ಅವನು ಪ್ರೇರಣೆ, ಅವನು ಪ್ರಜ್ಞೆ, ಅವನು ಆನಂದ' ಎಂಬ ಶ್ರುತಿಯು ಅವನ ಇಚ್ಛೆಯೇ ಅವನ ಸ್ವರೂಪವೆಂದು ತಿಳಿಸುತ್ತದೆ.[4]

---

[1] ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತ್ಯೇವಮೇವೈತಾನಿ ನಾಮಾನಿ ಸರ್ವಾಣಿ ಪುರುಷಮಭಿವಿಶಂತೀತಿ ಶ್ರುತಿಜ್ಞಾ ದೃಷ್ಟಾಂತಾನುಪರೋಧಾತ್ ಪ್ರಕೃತಿಶಬ್ದವಾಚ್ಯೋಽಪಿ ಸ ಏವ (ಮ. ಭಾ.).

* ಸೃಷ್ಟಿಯ ಸಂಕಲ್ಪಕ್ಕೆ ಅಭಿಧ್ಯಾ ಎಂದು ಹೆಸರು (ರತ್ನಪ್ರಭಾ).

[2] ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ ।

[3] ತದೈಕ್ಷತ । ಬಹು ಸ್ಯಾಂ ಪ್ರಜಾಯೇಯ ।

[4] ಸೋಽಭಿಧ್ಯಾ ಸ ಪ್ರಜ್ಞಾ ಸ ಆನಂದ ಇತಿ ಶ್ರುತೇರಭಿಧ್ಯಾ ಚ ಸ್ವರೂಪಮೇವ ।

**ಸಾಕ್ಷಾಚ್ಚೋಭಯಾಮ್ನಾನಾತ್ ॥ ೨೫ ॥**

೨೫ ಸಾಕ್ಷಾತ್ತಾಗಿ ಎರಡನ್ನೂ (ಎಂದರೆ ಸೃಷ್ಟಿಪ್ರಲಯಗಳನ್ನು) ಹೇಳಿರುವುದರಿಂದ (ಬ್ರಹ್ಮವು ಉಪಾದಾನಕಾರಣವು)

ಜಗತ್ತಿನ ಸೃಷ್ಟಿ-ಪ್ರಲಯಗಳಿಗೆ ಬ್ರಹ್ಮವೇ ಕಾರಣವೆಂದು ಶ್ರುತಿಯು ಸಾಕ್ಷಾತ್ತಾಗಿ ಹೇಳುವುದರಿಂದಲೂ ಬ್ರಹ್ಮವೇ ಉಪಾದಾನಕಾರಣವು 'ಈ ಭೂತಗಳೆಲ್ಲವೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ, ಆಕಾಶದಲ್ಲಿಯೇ ಲಯವಾಗುತ್ತವೆ'[1] (ಛಾಂ. ಉ ೧ ೯ ೧) ಯಾವುದರಿಂದ ಯಾವುದೊ ಒಂದು ವಸ್ತುವು ಉತ್ಪನ್ನವಾಗಿ ಯಾವುದರಲ್ಲಿ ಲಯವಾಗುವುದೊ ಅದು ಆ ವಸ್ತುವಿಗೆ ಉಪಾದಾನವೆಂದು ಪ್ರಸಿದ್ಧವಾಗಿದೆ[2] ಕಾರ್ಯವು ತನ್ನ ಉಪಾದಾನಕಾರಣವನ್ನು ಬಿಟ್ಟರೆ ಬೇರೆಲ್ಲಿಯೂ ಲಯವಾಗುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ

ವಿ. —ಕೇವಲ ಪ್ರತಿಜ್ಞೆ ದೃಷ್ಟಾಂತ ಸಂಕಲ್ಪ—ಇವುಗಳನ್ನು ತಿಳಿಸುವ ವಾಕ್ಯಗಳಿಂದ ಸಿದ್ಧಾಂತವು ನಿಶ್ಚಯವಾಗಿಲ್ಲ ಪರಬ್ರಹ್ಮನೇ ಉಪಾದಾನ-ನಿಮಿತ್ತ-ಕಾರಣನೆಂದು ಶ್ರುತಿಯು ಸಾಕ್ಷಾತ್ತಾಗಿ ತಿಳಿಸುತ್ತದೆ 'ಬ್ರಹ್ಮವೆಂಬ ವನದಿಂದ, ಬ್ರಹ್ಮವೆಂಬ ವೃಕ್ಷದಿಂದ ದ್ಯುಲೋಕ-ಪೃಥ್ವಿಗಳನ್ನು ನಿರ್ಮಿಸಿದರು ಬ್ರಹ್ಮನು ಲೋಕಗಳನ್ನು ಧರಿಸಿ ಅಧಿಷ್ಠಾತೃವಾಗಿದ್ದನು'[3] (ತೈ ಬ್ರಾ ೨ ೮ ೯ ೭)

ದ್ವೈ—'ಈಶ್ವರನು ಉಭಯನೆಂದು ಹೇಳಿರುವುದರಿಂದ ಅವನೇ ಪ್ರಕೃತಿಶಬ್ದವಾಚ್ಯನು' ಎಂಬುದು ಸೂತ್ರಾರ್ಥ

'ಇವನು ಸ್ತ್ರೀ, ಇವನು ಪುರುಷ, ಇವನು ಪ್ರಕೃತಿ, ಇವನು ಆತ್ಮ, ಇವನು ಬ್ರಹ್ಮ ಇವನು ಲೋಕ, ಇವನು ಜ್ಯೋತಿ, ಇವನು ಎಲ್ಲಕ್ಕೂ ಆದಿಯೂ ಅಂತ್ಯವೂ ಆದ ಹರಿ, ಇವನು ಅನಾದಿ ಮತ್ತು ಅನಂತ , ಇವನು ಪರಕ್ಕಿಂತಲೂ ಶ್ರೇಷ್ಠನು , ಇವನು ವಿಶ್ವರೂಪನು' ಎಂಬ ಪೈಂಗಿಶ್ರುತಿಯು ಈಶ್ವರನು ಪ್ರಕೃತಿಯೂ ಪುರುಷನೂ ಆಗಿರುವನೆಂದು ಸಾಕ್ಷಾತ್ತಾಗಿ ತಿಳಿಸುತ್ತದೆ[4]

---

[1] ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ, ಆಕಾಶಂ ಪ್ರತ್ಯಸ್ತಂ ಯಂತಿ ।

[2] ಯದ್ಧಿ ಯಸ್ಮಾತ್ಪ್ರಭವತಿ ಯಸ್ಮಿಂಶ್ಚ ಪ್ರಲೀಯತೇ ತತ್ತಸ್ಯೋಪಾದಾನಂ ಪ್ರಸಿದ್ಧಮ್ (ಸೂ ಭಾ )

[3] ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ । ಮನೀಷಿಣೋ ಮನಸಾ ವಿಬ್ರವೀಮಿ ವೋ ಬ್ರಹ್ಮಾಧ್ಯತಿಷ್ಠದ್ ಭುವನಾನಿ ಧಾರಯನ್ ॥

[4] ಏಷ ಸ್ತ್ರ್ಯೇಷ ಪುರುಷ ಪ್ರಕೃತಿರೇಷ ಆತ್ಮೈಷ ಬ್ರಹ್ಮೈಷ ಲೋಕ ಏಷ ಆಲೋಕೋ ಯೋಽಸೌ ಹರಿರಾದಿರನಂತೋಽಂತಃ ಸಾಕ್ಷಾದ್ವಿಶ್ವರೂಪ ಇತಿ ಪೈಂಗಿಶ್ರುತೌ ಸಾಕ್ಷಾದೇವ ಪ್ರಕೃತಿಪುರುಷತ್ವಾಮ್ನಾನಾತ್ (ಮ ಭಾ )

## ಆತ್ಮಕೃತೇಃ ಪರಿಣಾಮಾತ್ * ॥ ೨೬ ॥

೨೬ (ಬ್ರಹ್ಮವು) ತನ್ನನ್ನು ತಾನೇ ಮಾಡಿಕೊಳ್ಳುವುದರಿಂದ (ಉಪಾದಾನ ಕಾರಣ), ಪರಿಣಾಮದಿಂದ (ಇದು ಸಾಧ್ಯ)

'ಅದು ತನ್ನನ್ನು ತಾನೇ ಮಾಡಿಕೊಂಡಿತು'[1] (ತೈ ಉ ೨ ೭) ಶ್ರುತಿಯು ಆತ್ಮನಿಗೆ ಕರ್ಮತ್ವವನ್ನೂ ಕರ್ತೃತ್ವವನ್ನೂ ತಿಳಿಸುತ್ತದೆ 'ತನ್ನನ್ನು' (ಆತ್ಮಾನಮ್) ಎಂಬುದು ಕರ್ಮತ್ವ 'ತಾನೇ ಮಾಡಿಕೊಂಡಿತು' (ಸ್ವಯಮಕುರುತ) ಎಂಬ ದು ಕರ್ತೃತ್ವ ಆತ್ಮನು ಮೊದಲೇ ಸಿದ್ಧನಾಗಿದ್ದರೂ ವಿಶೇಷಕಾರ್ಯರೂಪದಿಂದ ತನ್ನನ್ನು ತಾನೇ ಪರಿಣಮಿಸಿಕೊಳ್ಳುತ್ತಾನೆ[2] ಮಣ್ಣು ಮೊದಲಾದ ಕಾರಣಗಳು ಗಡಿಗೆಯೇ ಮೊದಲಾದ ಕಾರ್ಯರೂಪದಿಂದ ಪರಿಣಾಮವನ್ನು ಹೊಂದುವುದು ಕಂಡುಬರುತ್ತದೆ 'ತಾನೇ', ಸ್ವಯಮ್ ಎಂಬ ವಿಶೇಷಣವು ಬೇರೆ ನಿಮಿತ್ತವು ಬೇಕಿಲ್ಲವೆಂದು ತಿಳಿಸುತ್ತದೆ.

ವಿ.—ಆತ್ಮಕೃತೇಃ ॥ ೧ ೪. ೨೬ ॥

೨೬ (ಬ್ರಹ್ಮವು) ತನ್ನನ್ನು ತಾನೇ ಮಾಡಿಕೊಳ್ಳುವುದರಿಂದ (ಉಪಾದಾನನಿಮಿತ್ತಕಾರಣಗಳಾಗಿದೆ)

**ತದಾತ್ಮಾನಂ ಸ್ವಯಮಕುರುತ**—ಎಂಬ ಶ್ರುತಿಯು ಪರಬ್ರಹ್ಮನೇ ಜಗತ್ಕಾರಣ ಮತ್ತು ಜಗತ್ತು, ಎರಡೂ ಆಗಿರುವನೆಂದು ತಿಳಿಸುತ್ತದೆ ನಾಮರೂಪಗಳು ವಿಂಗಡವಾಗದಾಗ ಆತ್ಮನೇ ಕಾರಣನು, ವಿಂಗಡವಾದಾಗ ಆತ್ಮನೇ ಕಾರ್ಯನು, ಒಬ್ಬನೇ ಆತ್ಮನೇ ಕರ್ಮ ಮತ್ತು ಕರ್ತೃ—ಎರಡೂ ಆಗುವುದರಲ್ಲಿ ಯಾವ ವಿರೋಧವೂ ಇಲ್ಲ.[3]

ಪರಿಣಾಮಾತ್ ॥ ೧ ೪. ೨೭ ॥

೨೭ ಪರಿಣಾಮದಿಂದಲೂ

ಪರಬ್ರಹ್ಮನೇ ಜಗತ್ತಾದರೆ ಸರ್ವಜ್ಞನೂ ನಿರತಿಶಯ-ಜ್ಞಾನಾನಂದಸ್ವರೂಪನೂ ಅಪಹತ-ಪಾಪ್ಮತ್ವಾದಿಗುಣಗಳುಳ್ಳವನೂ ಆದ ಬ್ರಹ್ಮನಿಗೆ ಜಗತ್ತಿನ ದೋಷಗಳು ಸೋಂಕುವುದಿಲ್ಲವೆ ?—ಎಂಬ ಪೂರ್ವಪಕ್ಷಕ್ಕೆ ಸೂತ್ರವು ಉತ್ತರವಾಗಿದೆ

---

* ಪರಿಣಾಮಾತ್ ಎಂಬುದು ಶ್ರೀಭಾಷ್ಯದಲ್ಲಿ ಬೇರೆ ಸೂತ್ರವಾಗಿದೆ

1 ತದಾತ್ಮಾನಂ ಸ್ವಯಮಕುರುತ ।

2 ಪೂರ್ವಸಿದ್ಧೋಽಪಿ ಹಿ ಸನ್ನಾತ್ಮಾ ವಿಶೇಷೇಣ ವಿಕಾರಾತ್ಮನಾ ಪರಿಣಮಯಾಮಾಸಾತ್ಮಾನಮಿತಿ (ಸೂ ಭಾ)

3 ಅವಿಭಕ್ತನಾಮರೂಪ ಆತ್ಮಾ ಕರ್ತಾ, ಸ ಏವ ವಿಭಕ್ತನಾಮರೂಪಃ ಕಾರ್ಯಮಿತಿ ಕರ್ತೃತ್ವಕರ್ಮತ್ವಯೋರ್ನ ವಿರೋಧಃ (ಶ್ರೀಭಾಷ್ಯ).

ಇಲ್ಲಿ ಉಪದೇಶಿಸಿರುವ ಪರಿಣಾಮವು ಪರಬ್ರಹ್ಮನಲ್ಲಿ ದೋಷವನ್ನುಂಟುಮಾಡುವುದಿಲ್ಲ, ನಿರತಿಶಯವಾದ ಐಶ್ವರ್ಯವನ್ನೇ ಉಂಟುಮಾಡುತ್ತದೆ.[1] ಪರಬ್ರಹ್ಮನಿಗೆ ಚಿದಚಿದ್ರೂಪವಾದ ಜಗತ್ತು ಶರೀರವಾಗಿದೆ. ಅವನು ಈ ಶರೀರದ ಆತ್ಮನಾಗಿದ್ದಾನೆ. ಈ ಜಗತ್ತು ಬ್ರಹ್ಮನಲ್ಲಿ ಲಯವನ್ನು ಹೊಂದುವಾಗ ಪ್ರತಿಯೊಂದು ಅಂಶವೂ ತನ್ನ ತನ್ನ ಕಾರಣದಲ್ಲಿ ಅಡಗಿಹೋಗುತ್ತದೆ ; ಆಗ ಉಳಿಯುವುದು ಶ್ರುತಿಗಳಲ್ಲಿ ತಮಸ್ಸೆನಿಸಿದ ಸೂಕ್ಷ್ಮವಸ್ತುವು ಮಾತ್ರ. ಅತ್ಯಂತ ಸೂಕ್ಷ್ಮವಾದ ಈ ತಮಸ್ಸು ಬ್ರಹ್ಮನಲ್ಲಿ ಒಂದಾಗುತ್ತದೆ; ಆಗ ಅದು ಬ್ರಹ್ಮನಿಂದ ಬೇರೆಯಾಗಿರುವುದು ಎಂದು ಹೇಳಲು ಅರ್ಹವಾಗಿರುವುದಿಲ್ಲ. ಸೂಕ್ಷ್ಮಶರೀರದಿಂದ ಕೂಡಿದ ಬ್ರಹ್ಮನು ಹಿಂದಿನ ಸೃಷ್ಟಿಯಂತೆ ನಾಮರೂಪಗಳಿಂದ ವಿಂಗಡವಾಗಿ ಬಹುವಾಗುವೆನೆಂದು ಸಂಕಲ್ಪಿಸಿದಾಗ ಲಯಕ್ರಮದಿಂದ ಪುನಃ ಜಗಚ್ಛರೀರವು ವ್ಯಕ್ತವಾಗುತ್ತದೆ. ಎಲ್ಲ ಉಪನಿಷತ್ತುಗಳೂ ಈ ಪರಿಣಾಮವನ್ನೇ ಉಪದೇಶಿಸುತ್ತವೆ. ಹೀಗೆ ಚಿದಚಿದ್ರೂಪವಾದ ಜಗದಾಕಾರದಿಂದ ಪರಬ್ರಹ್ಮನು ಪರಿಣಮಿಸುವಾಗ ಎಲ್ಲ ದೋಷಗಳೂ ಅವನ ಶರೀರವಾದ ಚಿದಂಶಕ್ಕೇ ಸೇರಿರುತ್ತವೆ. ವಿಕಾರಗಳೆಲ್ಲವೂ ಅಚಿದಂಶಕ್ಕೇ ಸೇರಿರುತ್ತವೆ. ಚಿದಚಿತ್ತುಗಳ ಸ್ಥೂಲದಶೆಯಲ್ಲಿ ನಿಯಂತೃವೂ ಆತ್ಮನೂ ಆಗಿರುವ ಮಟ್ಟಿಗೆ ಪರಬ್ರಹ್ಮನು ಕಾರ್ಯವೆನಿಸಿರುತ್ತಾನೆ. ಅವನು ಅವುಗಳ ನಿಯಂತೃವೂ ಆತ್ಮನೂ ಆಗಿರುವನೆಂಬ ಕಾರಣದಿಂದ ಅವುಗಳ ದೋಷಗಳು ಅವನನ್ನು ಸೋಂಕುವುದಿಲ್ಲ.[2]

ಮೈ—'ಪ್ರಕೃತಿಯಲ್ಲಿ ಪರಿಣಾಮವನ್ನುಂಟುಮಾಡಿ, ಪರಿಣಮಿಸಿದ ವಸ್ತುಗಳಲ್ಲಿ ಇರಲು ತಾನೂ ಬಹುರೂಪಗಳನ್ನುಂಟುಮಾಡಿಕೊಳ್ಳುವುದರಿಂದ ಪ್ರಕೃತಿಶಬ್ದವಾಚ್ಯನು ಪರಬ್ರಹ್ಮನೇ' ಎಂಬುದು ಸೂತ್ರಾರ್ಥ.

'ಚೆನ್ನಾಗಿ ಕೆಲಸಮಾಡುತ್ತಾನೆ' ಎಂಬ ಶಬ್ದನಿಷ್ಪತ್ತಿಯಿಂದ ಬ್ರಹ್ಮನು ಪ್ರಕೃತಿಶಬ್ದವಾಚ್ಯನು.[3] ಅವನು ಪ್ರಕೃತಿಯನ್ನು ಪ್ರವೇಶಿಸಿ ಅದರಲ್ಲಿ ಪರಿಣಾಮವನ್ನುಂಟುಮಾಡಿ, ಅದರಲ್ಲಿರಲು ಬಹುರೂಪಗಳನ್ನು ಪಡೆಯುತ್ತಾನೆ.

**ಯೋನಿಶ್ಚ ಹಿ ಗೀಯತೇ ॥ ೨೭ ॥**

೨೭. ಮತ್ತೆ (ಬ್ರಹ್ಮವು) ಯೋನಿಯೆಂದೂ ಹೇಳಲ್ಪಟ್ಟಿದೆ.

ಶ್ರುತಿಗಳು ಬ್ರಹ್ಮವನ್ನು ಯೋನಿಯೆಂದು ಕರೆದಿರುವುದರಿಂದಲೂ ಅದು ಉಪಾದಾನ

---

[1] ನಾತ್ರೋಪದಿಶ್ಯಮಾನಸ್ಯ ಪರಿಣಾಮಸ್ಯ ಪರಸ್ಮಿನ್ ಬ್ರಹ್ಮಣಿ ದೋಷಾವಹತ್ವಂ ಸ್ವಭಾವಃ, ಪ್ರತ್ಯುತ ನಿರಂಕುಶೈಶ್ವರ್ಯಾವಹತ್ವಮೇವೇತ್ಯಭಿಪ್ರಾಯಃ (ಶ್ರೀಭಾಷ್ಯ).

[2] ಏವಂ ಪರಮಾತ್ಮಚಿದಚಿತ್ಸಂಘಾತರೂಪಜಗದಾಕಾರಪರಿಣಾಮೇ ಪರಮಾತ್ಮಶರೀರಭೂತಚಿದಂಶಗತಾಃ ಸರ್ವ ಏವಾಪುರುಷಾರ್ಥಾಃ; ತಥಾಭೂತಾಚಿದಂಶಗತಾಶ್ಚ ಸರ್ವೇ ವಿಕಾರಾಃ; ಪರಮಾತ್ಮನಿ ಕಾರ್ಯತ್ವಂ ತದವಸ್ಥಯೋಸ್ತಯೋರ್ನಿಯಂತೃತ್ವೇನಾತ್ಮತ್ವಮ್ (ಶ್ರೀಭಾಷ್ಯ).

[3] ಪ್ರಕರ್ಷೇಣ ಕರೋತೀತಿ ಪ್ರಕೃತಿರಿತಿ ಯೋಗಾಚ್ಚ (ಮ. ಭಾ.)

ಕಾರಣವು: 'ಕರ್ತೃವೂ ಈಶನೂ ಬ್ರಹ್ಮಯೋನಿಯೂ ಆದ ಪುರುಷನನ್ನು'[1] (ಮುಂ.ಉ ೩. ೧. ೩) 'ಇಂಥ, ಭೂತಯೋನಿಯನ್ನು ಧೀರರು ಎಲ್ಲೆಲ್ಲಿಯೂ ನೋಡುತ್ತಾರೆ'[2] (ಮುಂ ಉ.೧.೧ ೬). 'ಗಿಡ ಮರಗಳಿಗೆ ಭೂಮಿಯು ಯೋನಿಯು' ಎಂದು ಹೇಳುವಂತೆ ಯೋನಿ-ಶಬ್ದವು ಲೋಕದಲ್ಲಿಯೂ ಉಪಾದಾನಕಾರಣವನ್ನು ಸೂಚಿಸುತ್ತದೆ.

ಆಲೋಚನಾಪೂರ್ವಕವಾಗಿರುವ ಕರ್ತೃತ್ವವು ನಿಮಿತ್ತ-ಕಾರಣಗಳಾಗಿರುವ ಕುಂಬಾರರೇ ಮೊದಲಾದವರಲ್ಲಿ ಕಂಡುಬರುತ್ತದೆಯೇ ಹೊರತು ಉಪಾದಾನ ಕಾರಣಗಳಲ್ಲಿ ಕಂಡುಬರುವುದಿಲ್ಲ—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ. ಇಲ್ಲಿ ಲೋಕದಲ್ಲಿರುವಂತೆಯೇ ಇರಬೇಕೆಂಬ ನಿಯಮವಿಲ್ಲ; ಏಕೆಂದರೆ ಈ ಅರ್ಥವನ್ನು ಅನುಮಾನದಿಂದ ಅರಿಯಲು ಸಾಧ್ಯವಿಲ್ಲ. ಇದನ್ನು ಶಾಸ್ತ್ರದಿಂದಲೇ ತಿಳಿಯಬೇಕಾದುದರಿಂದ ನಾವು ಶಾಸ್ತ್ರವನ್ನೇ ಅವಲಂಬಿಸಬೇಕು.[3] ಈಕ್ಷಿತೃವಾದ ಈಶ್ವರನಿಗೆ ಶಾಸ್ತ್ರವು ಉಪಾದಾನಕಾರಣತ್ವವನ್ನೂ ಪ್ರತಿಪಾದಿಸುತ್ತದೆ ಎಂದು ಹಿಂದೆಯೇ ಹೇಳಿದೆ.

ವಿ.—ಶ್ರುತಿಗಳು (ಮುಂ. ಉ. ೩. ೧ ೩, ೧. ೧. ೬.) ಪರಬ್ರಹ್ಮನನ್ನು ಯೋನಿ ಎಂದು ಕರೆಯುವುದರಿಂದಲೂ ಅವನು ಉಪಾದಾನ-ನಿಮಿತ್ತ-ಕಾರಣಗಳಾಗಿದ್ದಾನೆ.' ಹೇಗೆ ಜೇಡರಹುಳು ನೂಲುಗಳನ್ನು ಹೊರಕ್ಕೆ ತಂದು ಪುನಃ ಒಳಕ್ಕೆ ತೆಗೆದುಕೊಳ್ಳುತ್ತದೆಯೋ'[4] (ಮುಂ. ಉ. ೧. ೧. ೭.) ಎಂಬ ವಾಕ್ಯಶೇಷದಿಂದಲೂ ಯೋನಿಶಬ್ದವು ಉಪಾದಾನ ಕಾರಣವನ್ನು ಸೂಚಿಸುತ್ತದೆ.

ದ್ವೈ.—ನೇರವಾಗಿ ಉತ್ಪತ್ತಿಗೆ ದ್ವಾರವಾಗಿರುವುದು ಪ್ರಕೃತಿತ್ವವು.[5] ಇದನ್ನೇ ಮುಂಡಕಶ್ರುತಿಯು (೧. ೧. ೬ ) ತಿಳಿಸುತ್ತದೆ ಆದುದರಿಂದ ಪ್ರಕೃತಿಶಬ್ದವಾಚ್ಯನು ಪರಬ್ರಹ್ಮನೇ.

---

[1] ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।

[2] ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ ।

[3] ಶಬ್ದಗಮ್ಯತ್ವಾತ್ತ್ವಸ್ಯಾರ್ಥಸ್ಯ ಯಥಾಶಬ್ದಮಿಹ ಭವಿತವ್ಯಮ್ (ಸೂ. ಭಾ).

[4] ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ।

[5] ಅವ್ಯವಧಾನೇನೋತ್ಪತ್ತಿದ್ವಾರತ್ವಂ ಚ ಪ್ರಕೃತಿತ್ವಮ್ (ಮ. ಭಾ.).

## ೮. ಸರ್ವವ್ಯಾಖ್ಯಾನಾಧಿಕರಣ

**ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ || ೨೮ ||**

೨೮ ಇದರಿಂದ (ವೇದಾಂತಕ್ಕೆ ವಿರುದ್ಧವಾದ) ಎಲ್ಲ (ಮತಗಳೂ) ವ್ಯಾಖ್ಯಾನಮಾಡಲ್ಪಟ್ಟವು, ವ್ಯಾಖ್ಯಾನಮಾಡಲ್ಪಟ್ಟವು.

**ಈಕ್ಷತೇರ್ನಾಶಬ್ದಮ್** (೧. ೧. ೫) ಎಂಬ ಸೂತ್ರದಿಂದ ಪ್ರಾರಂಭಿಸಿ ಪ್ರಧಾನ ಕಾರಣವಾದವನ್ನು ಸೂತ್ರಗಳಿಂದಲೇ ಪುನಃ ಪುನಃ ನಿರಾಕರಿಸಿದೆ: ಏಕೆಂದರೆ ಆ ಪಕ್ಷಕ್ಕೆ ಬಲವನ್ನು ಕೊಡುವ ಕೆಲವು ಲಿಂಗಾಭಾಸಗಳು ವೇದಾಂತವಾಕ್ಯಗಳಲ್ಲಿ ಕಂಡುಬರುತ್ತವೆ.[1] ಪ್ರಧಾನವಾದವು ಕಾರ್ಯ-ಕಾರಣಗಳ ಅನನ್ಯತ್ವವನ್ನು ಅಂಗೀಕರಿಸಿರುವುದರಿಂದ ವೇದಾಂತವಾದಕ್ಕೆ ಸಮೀಪವಾಗಿದೆ.[2] ಮತ್ತೆ ದೇವಲನೇ ಮೊದಲಾದ ಧರ್ಮಸೂತ್ರ-ಕಾರರು ಇದನ್ನು ತಮ್ಮ ಗ್ರಂಥಗಳಲ್ಲಿ ಆಶ್ರಯಿಸಿರುತ್ತಾರೆ. ಪ್ರಧಾನಕಾರಣವಾದವನ್ನು ಖಂಡಿಸಿರುವುದರಿಂದ ಅಣ್ವಾದಿ-ಕಾರಣವಾದಗಳೆಲ್ಲವನ್ನೂ ಖಂಡಿಸಿದಂತೆಯೇ ಆಯಿತು; ಏಕೆಂದರೆ ಅವೂ ಪ್ರಧಾನವಾದದಂತೆ ಶಾಸ್ತ್ರವನ್ನು ಅವಲಂಬಿಸದೆ, ಶಾಸ್ತ್ರಕ್ಕೆ ವಿರೋಧಿಗಳಾಗಿವೆ. **ವ್ಯಾಖ್ಯಾತಾ ವ್ಯಾಖ್ಯಾತಾಃ** ಎಂಬ ಪುನರುಕ್ತಿಯು ಅಧ್ಯಾಯದ ಪರಿಸಮಾಪ್ತಿಯನ್ನು ಸೂಚಿಸುತ್ತದೆ.

**ವಿ.**—ಮೊದಲನೆಯ ಅಧ್ಯಾಯದ ನಾಲ್ಕು ಪಾದಗಳಲ್ಲಿ ಹೇಳಿರುವ ವಾದಗಳಿಂದ ಜಗತ್ಕಾರಣವನ್ನು ಸೂಚಿಸುವ ವೇದಾಂತವಾಕ್ಯಗಳೆಲ್ಲವೂ ಚೇತನಾಚೇತನಗಳಿಗಿಂತ ವಿಲಕ್ಷಣನೂ ಸರ್ವಜ್ಞನೂ ಸರ್ವಶಕ್ತನೂ ಆದ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ ಎಂದು ವ್ಯಾಖ್ಯಾನಮಾಡಿದ್ದಾಯಿತು

**ದ್ವೈ.**—'ಎಲ್ಲ ವಸ್ತುಗಳೂ ಅವನ ಅಧೀನದಲ್ಲೇ ಇರುವುದರಿಂದ ಅವನ ಹೆಸರಿನಿಂದಲೇ ಎಲ್ಲವೂ ಸೂಚಿಸಲ್ಪಟ್ಟಿವೆ'—ಇವೇ ಮೊದಲಾದ ಹೇತುಗಳ ಸಮುದಾಯದಿಂದ ಶೂನ್ಯವೇ ಮೊದಲಾದ ಶಬ್ದಗಳೂ ಕೂಡ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ—ಎಂದು ವ್ಯಾಖ್ಯಾನಮಾಡಿದ್ದಾಯಿತು.[3]

---

[1] ತಸ್ಯ ಹಿ ಪಕ್ಷಸ್ಯೋಪೋದ್ಬಲಕಾನಿ ಕಾನಿಚಿಲ್ಲಿಂಗಾಭಾಸಾನಿ ವೇದಾಂತೇಷ್ವಾಪಾತೇನ ಮಂದಮತೀನ್ ಪ್ರತಿಭಾಸಂತೀತಿ (ಸೂ. ಭಾ.)

[2] ಸ ಚ ಕಾರ್ಯಕಾರಣಾನನ್ಯತ್ವಾಭ್ಯುಪಗಮಾತ್ ಪ್ರತ್ಯಾಸನ್ನೋ ವೇದಾಂತವಾದಸ್ಯ (ಸೂ. ಭಾ.).

[3] ಏತೇನ ಸರ್ವೇ ಶೂನ್ಯಾದಿಶಬ್ದಾ ಅಪಿ ವ್ಯಾಖ್ಯಾತಾಃ । ಏತೇನ ತದಧೀನತ್ವಾದ್ಯುಕ್ತ-ಯುಕ್ತಿಸಮುದಾಯೇನ (ಮ. ಭಾ.) .

# ಎರಡನೆಯ ಅಧ್ಯಾಯ

## ಮೊದಲನೆಯ ಪಾದ

### ೧. ಸ್ಮೃತ್ಯಧಿಕರಣ

(ಸೂ. ೧—೨)

**ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶ-ದೋಷಪ್ರಸಂಗಾತ್ ॥ ೧ ॥**

೧. (ಬ್ರಹ್ಮವು ಜಗತ್ಕಾರಣ ಎಂಬ ಸಿದ್ಧಾಂತದಿಂದ ಕೆಲವು) ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವ ದೋಷವು ಸಂಭವಿಸುವುದು ಎಂದು ಹೇಳಿದರೆ (ನಾವು) ಒಪ್ಪಿಕೊಳ್ಳುವುದಿಲ್ಲ ; ಏಕೆಂದರೆ (ನಮ್ಮ ಸಿದ್ಧಾಂತದ ನಿರಾಕರಣೆಯಿಂದ) ಇತರ ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವ ದೋಷವು ಬರುವುದು.

ಮಣ್ಣು ಗಡಿಗೆಗೆ, ಚಿನ್ನವು ಒಡವೆಗೆ, ಕಾರಣವಾಗಿರುವಂತೆ ಸರ್ವಜ್ಞನಾದ ಸರ್ವೇಶ್ವರನು ಜಗತ್ತಿಗೆ ಉತ್ಪತ್ತಿಕಾರಣನು; ಮಾಟಗಾರನು ತಾನು ಹರಡಿರುವ ಮಾಯೆಗೆ ಕಾರಣವಾಗಿರುವಂತೆ ಸರ್ವೇಶ್ವರನು ಉತ್ಪನ್ನವಾದ ಜಗತ್ತಿಗೆ ತನ್ನ ನಿಯಂತೃತ್ವದ ಮೂಲಕ ಸ್ಥಿತಿಕಾರಣನು; ಮತ್ತು ಪ್ರಾಣಿಗಳು ಭೂಮಿಯಲ್ಲಿ ಲಯವಾಗುವಂತೆ ಪ್ರಸಾರಿತವಾದ ಜಗತ್ತಿಗೆ ಅವನೇ ಉಪಸಂಹಾರಕಾರಣನು ; ಮತ್ತು ವೇದಾಂತವಾಕ್ಯಗಳ ಸಮನ್ವಯವನ್ನು ಪ್ರತಿಪಾದಿಸುವುದರ ಮೂಲಕ ಅವನೇ ನಮ್ಮೆಲ್ಲರ ಆತ್ಮನು ಎಂದು ಮೊದಲನೆಯ ಅಧ್ಯಾಯದಲ್ಲಿ ತೋರಿಸಿಕೊಟ್ಟಿದ್ದಾಯಿತು. ಇವುಗಳಲ್ಲದೆ ಪ್ರಧಾನವೇ ಮೊದಲಾವುಗಳು ಜಗತ್ಕಾರಣವೆಂಬ ವಾದಗಳು ಅಶಾಸ್ತ್ರೀಯವಾಗಿವೆ ಎಂದು ನಿರಾಕರಿಸಿದ್ದಾಯಿತು.

ಈಗ (೧) ಸ್ವಪಕ್ಷದಲ್ಲಿ ಸ್ಮೃತಿ ಮತ್ತು ತರ್ಕ—ಇವುಗಳಿಗೆ ವಿರೋಧವನ್ನು ಪರಿಹರಿಸುವುದು ; (೨) ಪ್ರಧಾನಾದಿಗಳು ಜಗತ್ಕಾರಣವೆಂಬ ವಾದಗಳಿಗೆ ಆಧಾರವಾಗಿರುವುವು ತರ್ಕಾಭಾಸಗಳು ಮತ್ತು (೩) ಸೃಷ್ಟ್ಯಾದಿಗಳ ವಿಷಯದಲ್ಲಿ ಬೇರೆ ಬೇರೆ ವೇದಾಂತವಾಕ್ಯಗಳು ಪರಸ್ಪರವಾಗಿ ವಿರೋಧಿಸುವುದಿಲ್ಲ—ಎಂಬುದನ್ನು ಪ್ರತಿಪಾದಿಸಲು ಎರಡನೆಯ ಅಧ್ಯಾಯವನ್ನು ಪ್ರಾರಂಭಿಸಿದೆ. ಈಗ ಸ್ಮೃತಿಯನ್ನವಲಂಬಿಸಿ ಬಂದಿರುವ ವಿರೋಧವನ್ನು ಪರಿಹರಿಸುವುದು ಮೊದಲನೆಯದು.

ಪೂರ್ವಪಕ್ಷಿ—ಸರ್ವಜ್ಞವಾದ ಬ್ರಹ್ಮವೇ ಜಗತ್ಕಾರಣವೆಂಬ ವಾದವು ಯುಕ್ತವಲ್ಲ. ಏಕೆಂದರೆ ಪರಮರ್ಷಿ-ಕಪಿಲಪ್ರಣೀತವಾದ ತಂತ್ರವೆಂಬ ಸ್ಮೃತಿಗೂ ಅದನ್ನು ಅನುಸರಿಸಿರುವ ಆಸುರಿ, ಪಂಚಶಿಖ ಮೊದಲಾದವರ ಸ್ಮೃತಿಗಳಿಗೂ ಅವಕಾಶವಿಲ್ಲದೆ[1] ಹೋಗುತ್ತದೆ. ಅವುಗಳಲ್ಲಿ ಅಚೇತನವಾದ ಪ್ರಧಾನವು ಜಗತ್ಕಾರಣವೆಂದು ಹೇಳಿದೆ. ಚೋದನಾಲಕ್ಷಣವಾದ ಧರ್ಮವನ್ನು,[2] ಎಂದರೆ ಕ್ರತ್ವರ್ಥವನ್ನು ತಿಳಿಸುವ ಮತ್ತು ಪುರುಷಾರ್ಥ-ಧರ್ಮಗಳನ್ನು ವಿವರಿಸಿರುವ ಮನುಸ್ಮೃತಿ ಮೊದಲಾದವುಗಳಿಗೆ ಅವಕಾಶ ವಿರುವುದು ನಿಜ. ಆದರೆ ಕಪಿಲಾದಿಸ್ಮೃತಿಗಳಿಗೆ ಅನುಷ್ಠೇಯವಾದ ಕರ್ಮದ ವಿಷಯದಲ್ಲಿ ಅವಕಾಶವಿಲ್ಲ; ಏಕೆಂದರೆ ಮೋಕ್ಷಸಾಧನವಾದ ಸಮ್ಯಗ್ದರ್ಶನವನ್ನು ಕುರಿತು ಅವುಗಳನ್ನು ರಚಿಸಿದೆ; ಆದುದರಿಂದ ಅವುಗಳಿಗೆ ಆನರ್ಥಕ್ಯವುಂಟಾಗದಂತೆ ಶ್ರುತಿಗಳಿಗೆ ವ್ಯಾಖ್ಯಾನಮಾಡಬೇಕು. ಕೆಲವು ಸ್ಮೃತಿಗಳಿಗೆ ಆನರ್ಥಕ್ಯವೆಂಬ ದೋಷವು ಬಂದೀತು ಎಂದು ಬ್ರಹ್ಮಕಾರಣವಾದವನ್ನು ನಿಶ್ಚಯಿಸಿರುವ ಶ್ರುತ್ಯರ್ಥವನ್ನು ಆಕ್ಷೇಪಿಸುವುದು ಹೇಗೆ? ಈ ವಾದವು ಸ್ವತಂತ್ರಬುದ್ಧಿಯುಳ್ಳವರಿಗೆ ಆಕ್ಷೇಪಣೆಯಾಗಲಾರದು; ಏಕೆಂದರೆ ಸ್ವತಂತ್ರವಾಗಿ ಶ್ರುತ್ಯರ್ಥವನ್ನು ನಿರ್ಧರಿಸಲಾರದ ಜನರು ಪ್ರಖ್ಯಾತಸ್ಮೃತಿಗಳನ್ನು ಆಶ್ರಯಿಸಿ, ಅವುಗಳ ಸಹಾಯದಿಂದ ಶ್ರುತ್ಯರ್ಥವನ್ನು ತಿಳಿದುಕೊಳ್ಳಬಹುದು. ಸ್ಮೃತಿಕಾರರಲ್ಲಿ ಅವರಿಗಿರುವ ಗೌರವದಿಂದ ನಮ್ಮ ವ್ಯಾಖ್ಯಾನದಲ್ಲಿ ವಿಶ್ವಾಸವಿಲ್ಲದೆಯೇ ಹೋಗಬಹುದು. ಕಪಿಲಾದಿಗಳ ಜ್ಞಾನವು ಶ್ರುತಿಗಳಲ್ಲಿಯೂ[3] ಸ್ಮೃತಿಗಳಲ್ಲಿಯೂ ಹೇಳಿದೆ. ಅವರ ಮತವು ಯಥಾರ್ಥವಾದುದರಿಂದಲೂ ತರ್ಕಬದ್ಧವಾಗಿರುವುದರಿಂದಲೂ ಸ್ಮೃತಿ ಬಲದಿಂದಲೇ ವೇದಾಂತವಾಕ್ಯಗಳನ್ನು ವ್ಯಾಖ್ಯಾನಮಾಡಬೇಕು.

ಸಿದ್ಧಾಂತಿ—ಈ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಸಾಂಖ್ಯಸ್ಮೃತಿಯು ನಿರರ್ಥಕವಾಗುವುದೆಂಬ ಕಾರಣದಿಂದ ಈಶ್ವರಕಾರಣವಾದವನ್ನು ಆಕ್ಷೇಪಿಸಿದರೆ ಈಶ್ವರಕಾರಣವಾದವನ್ನು ಪ್ರತಿಪಾದಿಸುವ ಬೇರೆ ಸ್ಮೃತಿಗಳಿಗೆ ಅರ್ಥವಿಲ್ಲದೆ ಹೋಗುವುದು: 'ನಾನು ಸಮಸ್ತಜಗತ್ತಿನ ಸೃಷ್ಟಿಲಯಗಳಿಗೆ ಕಾರಣನಾಗಿರುವೆನು'[4] (ಗೀತಾ ೭. ೬); 'ಅವನಿಂದ ಎಲ್ಲ ಶರೀರಗಳೂ ಉತ್ಪನ್ನವಾಗುತ್ತವೆ; ಅವನೇ ಮೂಲವು, ಕೂಟಸ್ಥನು ಮತ್ತು ನಿತ್ಯನು'[5] (ಆ. ಧ. ಸೂ. ೧. ೮. ೨೩. ೨). ಸ್ಮೃತಿಬಲದಿಂದ ಎದುರಿಸು

---

[1] ಅನವಕಾಶಾಃ ನಿರರ್ಥಕಾಃ, ಅನವಕಾಶ ಎಂದರೆ ನಿರರ್ಥಕವು ಎಂದಭಿಪ್ರಾಯ.

[2] 'ಕ್ರಿಯೆಗಳನ್ನು ಪ್ರವರ್ತಿಸುವ ವೈದಿಕವಚನಗಳಿಂದ ವಿಧಿಸಲ್ಪಟ್ಟದ್ದು ಧರ್ಮ' ಚೋದನಾಲಕ್ಷಣೋಽರ್ಥೋ ಧರ್ಮಃ (ಜೈ. ಸೂ. ೧. ೧. ೨).

[3] 'ಯಾವನು ಮೊದಲು ಹುಟ್ಟಿದ ಋಷಿಯಾದ ಕಪಿಲನನ್ನು ಜ್ಞಾನಗಳಿಂದ ಪೋಷಿಸುವನೊ ಮತ್ತು ಹುಟ್ಟುತ್ತಿರುವ ಅವನನ್ನು ನೋಡುವನೊ' ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ (ಶ್ವೇ. ಉ. ೫. ೨)

[4] ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ।

[5] ತಸ್ಮಾತ್ ಕಾಯಾಃ ಪ್ರಭವಂತಿ ಸರ್ವೇ ಸ ಮೂಲಂ ಶಾಶ್ವತಿಕಃ ಸ ನಿತ್ಯಃ ।

ವವನಿಗೆ ಸ್ಮೃತಿಬಲದಿಂದಲೇ ಈ ಸೂತ್ರದ ವ್ಯಾಖ್ಯಾನವನ್ನು ಮಾಡಿದೆ. ಶ್ರುತಿಗಳಿಗೆ ಈಶ್ವರಕಾರಣವಾದದಲ್ಲಿ ತಾತ್ಪರ್ಯವಿದೆಯೆಂದು ಹಿಂದೆ ಹೇಳಿದ್ದಾಯಿತು ; ಸ್ಮೃತಿಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿರುವಾಗ ಒಂದು ಅಭಿಪ್ರಾಯವನ್ನು ತೆಗೆದುಕೊಂಡು ಮತ್ತೊಂದನ್ನು ಬಿಡಬೇಕಾಗಿರುವುದರಿಂದ ಶ್ರುತ್ಯನುಸಾರಿಯಾದ ಸ್ಮೃತಿಗಳು ಪ್ರಮಾಣವಾಗುವುವು, ಉಳಿದವು ಆಗುವುದಿಲ್ಲ. ಜೈಮಿನಿಸೂತ್ರಗಳ ಪ್ರಮಾಣಲಕ್ಷಣಾಧ್ಯಾಯದಲ್ಲಿ (೧. ೩. ೩) ಹೀಗೆ ಹೇಳಿದೆ: '(ಶ್ರುತಿಗೂ ಸ್ಮೃತಿಗೂ) ವಿರೋಧವುಂಟಾದಾಗ (ಸ್ಮೃತಿಯನ್ನು) ನಿರಾಕರಿಸಬೇಕು ; (ವಿರೋಧವು) ಇಲ್ಲದಿದ್ದರೆ (ಸ್ಮೃತಿಯು ಶ್ರುತಿಯನ್ನು ಅನುಸರಿಸಿದೆ)—ಎಂಬ ಅನುಮಾನದಿಂದ (ಸ್ಮೃತಿಯನ್ನು ಪರಿಗ್ರಹಿಸಬೇಕು).'[1] ಶ್ರುತಿಯಿಲ್ಲದೆ ಅತೀಂದ್ರಿಯವಿಷಯಗಳನ್ನು ಯಾವನು ಅರಿತುಕೊಳ್ಳಬಲ್ಲನು ಎಂದು ಭಾವಿಸಿಕೊಳ್ಳಲು ಸಾಧ್ಯವಿಲ್ಲ ; ಏಕೆಂದರೆ ಹಾಗೆ ತಿಳಿಯಲು ಯಾವ ನಿಮಿತ್ತಕಾರಣವೂ ಇರುವುದಿಲ್ಲ.[2] ಕಪಿಲರೇ ಮೊದಲಾದ ಸಿದ್ಧರಿಗೆ ಅಪ್ರತಿಹತ-ಜ್ಞಾನವಿರುವುದರಿಂದ ಅವರಿಗೆ ಅತೀಂದ್ರಿಯ ಜ್ಞಾನವು ಸಾಧ್ಯವೆಂದು ಹೇಳಲಾಗುವುದಿಲ್ಲ ; ಏಕೆಂದರೆ ಸಿದ್ಧಿಯು ಧರ್ಮಾನುಷ್ಠಾನವನ್ನು ಅವಲಂಬಿಸಿರುತ್ತದೆ, ಧರ್ಮವು ಚೋದನಾರೂಪವಾಗಿರುತ್ತದೆ. ಆದುದರಿಂದ ಮೊದಲೇ ಸಿದ್ಧವಾದ ಚೋದನಾರೂಪವಾದ ವೇದಪ್ರಮಾಣದ ಅರ್ಥವನ್ನು ಅನಂತರ ಸಿದ್ಧವಾದ ಪುರುಷವಚನಬಲದಿಂದ ವ್ಯಾಖ್ಯಾನಮಾಡಕೂಡದು. ಮತ್ತೆ ಸಿದ್ಧೋಕ್ತಿಯು ಪ್ರಮಾಣವಾಗಿದ್ದರೂ ಸಿದ್ಧರು ಅನೇಕರಾಗಿರುವುದರಿಂದ—ಸ್ಮೃತಿಗಳಲ್ಲಿ ಪರಸ್ಪರ ವಿರೋಧವಿರುವಾಗ—ಶ್ರುತಿಯನ್ನು ಬಿಟ್ಟರೆ ತತ್ತ್ವವನ್ನು ನಿರ್ಣಯಿಸಲು ಬೇರೆ ಕಾರಣವಿರುವುದಿಲ್ಲ.[3]

ಕಪಿಲನ ಜ್ಞಾನಾತಿಶಯವನ್ನು ಸೂಚಿಸಲು ಉದ್ಧರಿಸಿದ ಶ್ರುತಿಯು ಶ್ರುತಿವಿರುದ್ಧವಾದ ಕಾಪಿಲಮತವನ್ನು ನಂಬುವುದಕ್ಕೆ ಬೆಂಬಲಕೊಡುವುದಿಲ್ಲ ; ಏಕೆಂದರೆ ಆ ಶ್ರುತಿಯು ಕಪಿಲನು ಯಾರೆಂದು ಹೇಳುವುದಿಲ್ಲ ಇನ್ನೊಂದು ಸ್ಮೃತಿಯಲ್ಲಿ ಸಗರಪುತ್ರರನ್ನು ನಾಶಮಾಡಿದ ವಾಸುದೇವ-ಕಪಿಲನ ಹೆಸರು ಬಂದಿದೆ. ಈಶ್ವರ-ಪ್ರತಿಪತ್ತಿಗಾಗಿ ಬಂದಿರುವ ಆ ಶ್ರುತಿಯು ಪ್ರಮಾಣಶೂನ್ಯವಾದ ಸಾಂಖ್ಯಕಪಿಲನ ಸರ್ವಜ್ಞತ್ವವನ್ನು ತಿಳಿಸಲು ಬಂದಿಲ್ಲ. 'ಮನುವು ಏನೇನು ಹೇಳಿರುವನೊ ಅದೆಲ್ಲಾ ಭೇಷಜ'[4] (ತೈ. ಸಂ. ೨. ೨. ೧೦. ೨) ಎಂಬ ಶ್ರುತಿಯು ಮನುವಿನ ಮಾಹಾತ್ಮ್ಯವನ್ನು ತಿಳಿಸುತ್ತದೆ. 'ಸರ್ವಪ್ರಾಣಿಗಳಲ್ಲಿ ತನ್ನನ್ನೂ ತನ್ನಲ್ಲಿ ಸರ್ವಪ್ರಾಣಿಗಳನ್ನೂ ನೋಡುವ ಆತ್ಮಯಾಜಿಯು ಸ್ವಾರಾಜ್ಯವನ್ನು

---

1 ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್ ।

2 ನ ಚ ಅತೀಂದ್ರಿಯಾನ್ ಅರ್ಥಾನ್ ಶ್ರುತಿಮಂತರೇಣ ಕಶ್ಚಿದುಪಲಭ್ಯತ ಇತಿ ಶಕ್ಯಂ ಸಂಭಾವಯಿತುಂ ನಿಮಿತ್ತಾಭಾವಾತ್ (ಸೂ. ಭಾ.).

3 ಶ್ರುತಿರುಪಾಶ್ರಯಂ ವಿನಾ ಸಿದ್ಧೋಕ್ತಿಮಾತ್ರಂ ನ ತತ್ತ್ವನಿರ್ಣಯಕಾರಣಮಿತಿ ಅಕ್ಷರಾರ್ಥಃ (ಭಾಮತೀ.)

4 ಯದ್ವೈ ಕಿಂಚ ಮನುರವದತ್ ತದ್ಭೇಷಜಮ್ ।

ಪಡೆಯುತ್ತಾನೆ'[1] (ಮ. ಸ್ಮೃ. ೧೨. ೯೧) ಎಂಬಲ್ಲಿ ಮನುವೇ ಕಾಪಿಲಮತವನ್ನು ನಿಂದಿಸಿರುತ್ತಾನೆ. ಕಪಿಲನು ಆತ್ಮಭೇದವನ್ನು ಒಪ್ಪಿಕೊಂಡಿರುವುದರಿಂದ ಏಕಾತ್ಮತ್ವವನ್ನು ಒಪ್ಪಿಕೊಳ್ಳುವುದಿಲ್ಲ. ಮಹಾಭಾರತದಲ್ಲಿಯೂ[2] ಏಕಾತ್ಮತ್ವವನ್ನೇ ನಿಶ್ಚಯಿಸಿದೆ. ಶ್ರುತಿಯೂ[3] ಇದನ್ನೇ ಹೇಳುತ್ತದೆ. ಆದುದರಿಂದ ಸ್ವತಂತ್ರ-ಪ್ರಕೃತಿಯನ್ನು ಕಲ್ಪಿಸಿರುವುದಲ್ಲದೆ ಆತ್ಮಭೇದವನ್ನು ಕಲ್ಪಿಸಿರುವ ಕಾಪಿಲತಂತ್ರವು ವೇದಾನುಸಾರಿಯಾದ ಮನುವಚನಕ್ಕೆ ವಿರುದ್ಧವಾಗಿರುತ್ತದೆ. ಆಕಾರ-ವರ್ಣಾದಿಗಳನ್ನು ಗ್ರಹಿಸುವಾಗ ರವಿಯು ನಮಗೆ ಸಾಕ್ಷಾತ್ಪ್ರಮಾಣವಾಗಿರುವಂತೆ ಯಾವ ಪ್ರಮಾಣವನ್ನೂ ಅಪೇಕ್ಷಿಸದ ವೇದವು ತನ್ನ ಅರ್ಥದಲ್ಲಿ ಸಾಕ್ಷಾತ್ಪ್ರಮಾಣವಾಗಿರುತ್ತದೆ ; ಆದರೆ ಪುರುಷವಚನವು ಮತ್ತೊಂದನ್ನು ಆಶ್ರಯಿಸಬೇಕಾದುದರಿಂದಲೂ ಆಚಾರ್ಯಾದಿಗಳ ಮೂಲಕ ಪರೋಕ್ಷವಾಗಿರುವುದರಿಂದಲೂ ಬೇರೆ ತರಹವಾಗಿರುತ್ತದೆ ಈ ಕಾರಣದಿಂದ ವೇದವಿರುದ್ಧವಾದ ವಿಷಯದಲ್ಲಿ ಸ್ಮೃತಿಗೆ ಅನವಕಾಶವಾಗಬಹುದೆಂಬ ದೋಷವು ಬರುವುದಿಲ್ಲ.

ವಿ.—ಮೊದಲನೆಯ ಅಧ್ಯಾಯದಲ್ಲಿ ಚೇತನಾಚೇತನ-ವಸ್ತುಗಳಿಗಿಂತ ಭಿನ್ನನೂ ಸಮಸ್ತದೋಷರಹಿತನೂ ನಿಖಿಲ-ಕಲ್ಯಾಣ-ಗುಣಗಳುಳ್ಳವನೂ ಜಗದೇಕಕಾರಣನೂ ಸರ್ವಾಂತರಾತ್ಮಭೂತನೂ ಆದ ಪರಬ್ರಹ್ಮನೇ ವೇದಾಂತವೇದ್ಯನೆಂದು ಹೇಳಿದ್ದಾಯಿತು ಈ ಅಭಿಪ್ರಾಯವನ್ನು ಖಂಡಿಸಲು ಯಾವ ವಾದಗಳಿಂದಲೂ ಸಾಧ್ಯವಿಲ್ಲವೆಂದು ತೋರಿಸಲು ಎರಡನೆಯ ಅಧ್ಯಾಯವನ್ನು ಪ್ರಾರಂಭಿಸಿದೆ. ಕಾಪಿಲ-ಸ್ಮೃತಿಗೆ ವಿರೋಧವಾಗಿರುವುದರಿಂದ ವೇದಾಂತವಾಕ್ಯಗಳು ಬ್ರಹ್ಮಕಾರಣವಾದವನ್ನು ಪ್ರತಿಪಾದಿಸುವುದಿಲ್ಲ ಎಂಬ ಮತವನ್ನು ಸೂತ್ರಕಾರರು ಮೊದಲು ನಿರಾಕರಿಸುತ್ತಾರೆ.

ಮನ್ವಾದಿ-ಸ್ಮೃತಿಗಳು[4] ಪರಬ್ರಹ್ಮನೇ ಏಕಕಾರಣನೆಂದು ತಿಳಿಸುವುದರಿಂದ ಮೂಲಪ್ರಕೃತಿಯು ಜಗತ್ಕಾರಣವೆಂಬ ಕಾಪಿಲಮತವು ಸರಿಯಲ್ಲ ಎಂಬುದು ಸಿದ್ಧಾಂತ. ಕಪಿಲಸ್ಮೃತಿಯಿಂದ ವೇದಾಂತವಾಕ್ಯಗಳಿಗೆ ಅರ್ಥವನ್ನು ನಿರ್ಣಯಿಸುವುದಾದರೆ ಮನ್ವಾದಿಸ್ಮೃತಿಗಳಿಗೆ ಅವಕಾಶವೇ ಇರುವುದಿಲ್ಲ. ಶ್ರುತ್ಯರ್ಥವನ್ನು ಸ್ಪಷ್ಟವಾಗಿ ಮಾಡುವುದಕ್ಕೆ ಸ್ಮೃತಿಯು ಬೇಕಾಗಿದೆ ; ಆದರೆ ಶ್ರುತಿಗೆ ವಿರುದ್ಧವಾದ ಸ್ಮೃತಿಯಿಂದ ಇದು ಸಾಧ್ಯ

---

[1] ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಂಪಶ್ಯನ್ನಾತ್ಮಯಾಜೀ ವೈ ಸ್ವಾರಾಜ್ಯಮಧಿಗಚ್ಛತಿ ।

[2] ಮೋ. ಧ. ೩೫೦. ೧-೩.

[3] 'ಯಾವಾಗ ತಿಳಿದವನಿಗೆ ಎಲ್ಲ ಪ್ರಾಣಿಗಳೂ ತನ್ನ ಆತ್ಮನೇ ಆಗಿದೆಯೊ ಅಲ್ಲಿ ಏಕತ್ವವನ್ನು ನೋಡುತ್ತಿರುವವನಿಗೆ ಶೋಕವೆಲ್ಲಿ ? ಮೋಹವೆಲ್ಲಿ?' ಯಸ್ಮಿನ್ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ । ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥ (ಈ. ಉ. ೭).

[4] ಮ. ಸ್ಮೃ. ೧. ೫-೮ ; ಗೀತಾ ೭. ೬ ; ೧೦. ೮ ; ಆ. ಧ. ಸೂ. ೧. ೮. ೨೨. ೪, ೨೩. ೨.

ವಾಗದು.[1] ಮನ್ವಾದಿ-ಸ್ಮೃತಿಗಳ ಉದ್ದೇಶ ಕೇವಲ ಕರ್ಮಕಾಂಡದ ವಿಶದೀಕರಣವಲ್ಲ, ಕರ್ಮಗಳ ಆರಾಧ್ಯನಾದ ಪರಮಪುರುಷ. ಸಮಸ್ತಕರ್ಮಗಳ ಉದ್ದೇಶ ಪರಮಪುರುಷನ ಆರಾಧನೆ ಎಂಬುದನ್ನು ಸ್ಮೃತಿಗಳೇ ವಿಧಿಸಿವೆ: 'ಯಾವನಿಂದ ಪ್ರಾಣಿಗಳ ಪ್ರವೃತ್ತಿ ಯುಂಟಾಗುವುದೊ, ಯಾವನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೊ ಅವನನ್ನು ಸ್ವಕರ್ಮದಿಂದ ಆರಾಧಿಸಿ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ'[2] (ಗೀತಾ೧೮.೪೬); 'ಸ್ನಾನಾದಿಕರ್ಮಗಳನ್ನು ಮಾಡುವಾಗ ನಾರಾಯಣನನ್ನು ಧ್ಯಾನಿಸಬೇಕು; ಅವನು ಬ್ರಹ್ಮಲೋಕವನ್ನು ಪಡೆಯುತ್ತಾನೆ, ಹಿಂತಿರುಗುವುದಿಲ್ಲ'[3] (ದಕ್ಷಸ್ಮೃತಿ). ಕಪಿಲನು ಆಪ್ತನೆಂದು ಶ್ವೇತಾಶ್ವತರ ಶ್ರುತಿಯು ಹೇಳಿರುವುದರಿಂದ ಅವನ ಸ್ಮೃತಿಯ ಪ್ರಕಾರ ವೇದಾಂತವಾಕ್ಯಗಳನ್ನು ಅರ್ಥಮಾಡಿಕೊಳ್ಳಬೇಕು—ಎಂಬುದು ಸರಿಯಲ್ಲ; ಹಾಗೆ ಮಾಡಿದರೆ ಲೋಕಾಯತಮತದ ಪ್ರಕಾರವೂ ಶ್ರುತಿಗಳಿಗೆ ಅರ್ಥವನ್ನು ಕಲ್ಪಿಸಬೇಕಾಗುತ್ತದೆ: ಏಕೆಂದರೆ ಶ್ರುತಿ-ಸ್ಮೃತಿಗಳಲ್ಲಿ ಬೃಹಸ್ಪತಿಯು ದೊಡ್ಡ ಜ್ಞಾನಿಯೆಂದು ಪ್ರಸಿದ್ಧನಾಗಿದ್ದಾನೆ.[4]

**ದ್ವೈ.**—ಮೊದಲನೆಯ ಅಧ್ಯಾಯದಲ್ಲಿ ಸರ್ವಸೃಷ್ಟ್ಯಾದಿಗಳಿಗೆ ಕರ್ತೃವಾದ ಸರ್ವಗುಣಪರಿಪೂರ್ಣನಾದ ನಾರಾಯಣನಲ್ಲಿ ಸರ್ವಶಾಸ್ತ್ರಗಳಿಗೂ ಮುಖ್ಯವೃತ್ತಿಯಿಂದಲೇ ಸಮನ್ವಯವನ್ನು ಸಾಧಿಸಿದ್ದಾಯಿತು. ಹಿಂದೆ ಹೇಳಿದ್ದರಲ್ಲಿ ಯಾವ ವಿರೋಧವೂ ಇಲ್ಲವೆಂದು ಸೂತ್ರಕಾರರು ಎರಡನೆಯ ಅಧ್ಯಾಯದಲ್ಲಿ ತೋರಿಸಿಕೊಡುತ್ತಾರೆ. ಯುಕ್ತಿಯ ವಿರೋಧವಿಲ್ಲವೆಂದು ಮೊದಲನೆಯ ಪಾದದಲ್ಲಿಯೂ ಸ್ಮೃತಿಯ ವಿರೋಧವಿಲ್ಲವೆಂದು ಮೊದಲನೆಯ ಅಧಿಕರಣದಲ್ಲಿಯೂ ಹೇಳಿದೆ.

ರುದ್ರ-ಕಪಿಲ-ಕಣಾದಾದಿಗಳು ಸರ್ವಜ್ಞರಾಗಿರುವುದರಿಂದ ಅವರ ವಚನಕ್ಕೆ ವಿರೋಧವಾಗಿರುವ (ಮತ್ತು ವಿಷ್ಣು-ಕರ್ತೃತ್ವಾದಿಗಳನ್ನು ತಿಳಿಸಿಕೊಡತಕ್ಕ) ಶ್ರುತಿಗಳಿಗೆ ಅಪ್ರಾಮಾಣ್ಯದೋಷವುಂಟಾಗುವುದೆಂಬುದು ಸರಿಯಲ್ಲ; ಏಕೆಂದರೆ ಪೂರ್ಣಸರ್ವಜ್ಞರಾದ ವಿಷ್ಣು ಮೊದಲಾದವರ (ಪಂಚರಾತ್ರಾದಿ) ಸ್ಮೃತಿಗಳಿವೆ. ಆದುದರಿಂದ ಶ್ರುತಿಯ ಆಧಿಕ್ಯವು ಸಿದ್ಧಿಸುತ್ತದೆ.[5]

---

[1] ಉಪಬೃಂಹಣಂ ಚ ಶ್ರುತಿಪ್ರತಿಪನ್ನಾರ್ಥವಿಶದೀಕರಣಮ್; ತಚ್ಚ ವಿರುದ್ಧಾರ್ಥಯಾ ಸ್ಮೃತ್ಯಾ ನ ಶಕ್ಯತೇ ಕರ್ತುಮ್ (ಶ್ರೀಭಾಷ್ಯ).

[2] ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥

[3] ಧ್ಯಾಯೇನ್ನಾರಾಯಣಂ ದೇವಂ ಸ್ನಾನಾದಿಷು ಚ ಕರ್ಮಸು ।
ಬ್ರಹ್ಮಲೋಕಮವಾಪ್ನೋತಿ ನ ಚೇಹಾವರ್ತತೇ ಪುನಃ ॥

[4] ಬೃಹಸ್ಪತೇಶ್ಶ್ರುತಿಸ್ಮೃತಿಷು ಸರ್ವೇಷಾಮತಿಶಯಿತಜ್ಞಾನಾನಾಂ ನಿದರ್ಶನತ್ವೇನ ಸಂಕೀರ್ತನಾತ್ ತತ್ಪ್ರಣೀತೇನ ಲೋಕಾಯತೇನ ಶ್ರುತ್ಯರ್ಥವ್ಯವಸ್ಥಾಪನಪ್ರಸಕ್ತೇರಿತಿ (ಶ್ರೀಭಾಷ್ಯ).

[5] ಅನ್ಯಸ್ಮೃತೀನಾಂ ವಿಷ್ಣ್ವಾದಿಭಿರ್ನಿಖಿಲಾಂ ಸರ್ವಜ್ಞೈರೇವ ಕೃತತ್ವಾಚ್ಛ್ರುತೇರಾಧಿಕ್ಯಂ ಚ ಸಿದ್ಧ್ಯತಿ (ಮ. ಭಾ.).

ಇತರೇಷಾಂ ಚಾನುಪಲಬ್ಧೇಃ ॥ ೨ ॥

೨. (ಸಾಂಖ್ಯರ ಮಹತ್ತೇ ಮೊದಲಾದ) ಇತರ ತತ್ತ್ವಗಳು (ನಮಗೆ) ಗೋಚರವಾಗದೆ ಇರುವುದರಿಂದಲೂ (ದೋಷವಿಲ್ಲ).

ಪ್ರಧಾನಕ್ಕಿಂತ ಬೇರೆಯಾಗಿ, ಅದರ ಪರಿಣಾಮವೆಂದು ಸಾಂಖ್ಯಸ್ಮೃತಿಯಲ್ಲಿ ಕಲ್ಪಿತವಾದ ಮಹತ್ತೇ ಮೊದಲಾದುವು ವೇದದಲ್ಲಾಗಲಿ ಲೋಕದಲ್ಲಾಗಲಿ ಕಂಡು ಬರುವುದಿಲ್ಲ. ಭೂತಗಳೂ ಇಂದ್ರಿಯಗಳೂ ಲೋಕ-ವೇದಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಅವುಗಳನ್ನು ಸ್ಮರಿಸಿಕೊಳ್ಳಲು ಸಾಧ್ಯವಾಗುತ್ತದೆ. ಆದರೆ ಮಹತ್ತೇ ಮೊದಲಾದುವು ಲೋಕ-ವೇದಗಳಲ್ಲಿ ಅಪ್ರಸಿದ್ಧವಾಗಿರುವುದರಿಂದ—ಜ್ಞಾನೇಂದ್ರಿಯಕ್ಕೆ ವಿಷಯವಿದೆ ಯೆಂದು ಕಲ್ಪಿಸಲು ಹೇಗೆ ಅಸಾಧ್ಯವೋ ಹಾಗೆಯೇ ಅವುಗಳನ್ನು ಸ್ಮರಿಸಿಕೊಳ್ಳಲು ಸಾಧ್ಯವಿಲ್ಲ. ಮಹದಾದಿಗಳನ್ನು ಸೂಚಿಸುವಂತೆ ಕಂಡುಬರುವ ಕೆಲವು ಶ್ರುತಿಗಳಿಗೆ ಬೇರೆ ತಾತ್ಪರ್ಯವಿದೆಯೆಂದು ೧. ೪. ೧ರಲ್ಲಿಯೇ ಹೇಳಲ್ಪಟ್ಟಿದೆ. ಮಹದಾದಿ-ಕಾರ್ಯಗಳನ್ನು ಕಲ್ಪಿಸಿರುವ ಸ್ಮೃತಿಯು ಅಪ್ರಮಾಣವಾಗಿದ್ದರೆ ಕಾರಣವಾದ ಪ್ರಧಾನವನ್ನು ಕಲ್ಪಿಸಿರುವ ಸ್ಮೃತಿಯೂ ಅಪ್ರಮಾಣವಾಗುತ್ತದೆ.[1] ಆದುದರಿಂದ ಕೆಲವು ಸ್ಮೃತಿಗಳಿಗೆ ಅನವಕಾಶ ವುಂಟಾದೀತು ಎಂಬುದು ಈ ಕಾರಣದಿಂದಲೂ ನಮ್ಮ ಸಿದ್ಧಾಂತಕ್ಕೆ ವಿರುದ್ಧವಾಗು ವುದಿಲ್ಲ. ಕೇವಲ ಯುಕ್ತಿಯ ಜೊಳ್ಳನ್ನು ಮುಂದೆ ೨. ೧. ೪ರಿಂದ ಖಂಡಿಸಿದೆ.

ವಿ.—ಅತೀಂದ್ರಿಯ-ವಸ್ತುಗಳನ್ನು ಸಾಕ್ಷಾತ್ಕರಿಸಲು ಸಮರ್ಥರೂ ವೇದ-ವಿದರಲ್ಲಿ ಅಗ್ರೇಸರರೂ ಆದ ಮನು ಮೊದಲಾದವರು ಪ್ರಧಾನವು ಜಗತ್ಕಾರಣವು ಎಂದು ತಿಳಿಯ ಲಿಲ್ಲ, ಪರಬ್ರಹ್ಮನೇ ಜಗತ್ಕಾರಣನೆಂದು ಗ್ರಹಿಸಿದರು; ಪರಬ್ರಹ್ಮನನ್ನೇ ಶ್ರುತಿಗಳು ಹೇಳುತ್ತವೆ ಎಂಬುದು ಸಿದ್ಧಾಂತ.[2] ಹೀಗೆ ವೇದಾಂತದ ಅರ್ಥಕ್ಕೆ ಕಪಿಲನ ಜ್ಞಾನವು ವಿರುದ್ಧವಾಗುವುದರಿಂದ ಅವನ ಅಭಿಪ್ರಾಯಕ್ಕೆ ಭ್ರಾಂತಿಯೇ ಮೂಲವೆಂದು ತಿಳಿಯ ಬೇಕು.

ದ್ವೈ.—ಪ್ರತ್ಯಕ್ಷಕ್ಕೆ ಯೋಗ್ಯವಾದ ಫಲಗಳು ಇತರ ಸ್ಮೃತಿಗಳಲ್ಲಿ ಕಾಣದಿರು ವುದರಿಂದ ಅವುಗಳಿಗೆ ಪ್ರಾಮಾಣ್ಯವಿಲ್ಲ.[3]

---

[1] ಕಾರ್ಯಸ್ಮೃತೇರಪ್ರಾಮಾಣ್ಯಾತ್ ಕಾರಣಸ್ಮೃತೇರಪ್ಯಪ್ರಾಮಾಣ್ಯಂ ಯುಕ್ತಮಿತ್ಯಭಿ- ಪ್ರಾಯಃ (ಸೂ. ಭಾ.).

[2] ಇತರೇಷಾಂ ಮನ್ವಾದೀನಾಂ ವೇದವಿದಗ್ರೇಸರಾಣಾಂ ಸರ್ವಾತೀಂದ್ರಿಯಾರ್ಥಸಾಕ್ಷಾ- ತ್ಕಾರಸಮರ್ಥಾನಾಂ ಪ್ರಧಾನಪರತ್ವಾನುಪಲಬ್ಧೇರ್ಬ್ರಹ್ಮಪರತ್ವೋಪಲಬ್ಧೇಶ್ಚ ಬ್ರಹ್ಮಪರತ್ವ- ಮೇವಾಶ್ರಯಣೀಯಮ್ (ವೇ. ದೀ.).

[3] ಇತರೇಷಾಂ ಚ ತಾಸು ಸ್ಮೃತಿಷೂಕ್ತಾನಾಂ ಫಲಾನಾಂ ಪ್ರತ್ಯಕ್ಷತೋಽನುಪಲಬ್ಧೇರ- ಪ್ರಾಮಾಣ್ಯಂ ತಾಸಾಂ ಯುಕ್ತಮ್ (ಮ. ಭಾ.).

## ೨. ಯೋಗಪ್ರತ್ಯುಕ್ತ್ಯಧಿಕರಣ*

### ಏತೇನ ಯೋಗಃ ಪ್ರತ್ಯುಕ್ತಃ ॥ ೩ ॥

೩. ಇದರಿಂದ ಯೋಗವನ್ನೂ ಖಂಡಿಸಿದಂತೆ ಆಯಿತು

ಯೋಗಸ್ಮೃತಿಯೂ ಪ್ರಧಾನವು ಸ್ವತಂತ್ರವಾದ ಜಗತ್ಕಾರಣವೆಂದೂ ಲೋಕದಲ್ಲಿಯೂ ವೇದದಲ್ಲಿಯೂ ಪ್ರಸಿದ್ಧವಲ್ಲದ ಮಹತ್ತೇ ಮೊದಲಾದುವು ಅದರ ಕಾರ್ಯವೆಂದೂ ಶ್ರುತಿವಿರುದ್ಧವಾಗಿ ಕಲ್ಪಿಸಿರುತ್ತದೆ. ಈ ಮತವನ್ನು ಹಿಂದಿನ ಅಧಿಕರಣದಲ್ಲಿಯೇ ಖಂಡಿಸಿರುವುದರಿಂದ ಈ ಸೂತ್ರದಲ್ಲೇಕೆ ವಿಸ್ತರಿಸಿದೆ?— ಎಂಬ ಆಕ್ಷೇಪವು ಬರುತ್ತದೆ. ವೇದದಲ್ಲಿ[1] (ಬೃ. ಉ. ೨. ೪. ೫) ಯೋಗವನ್ನು ಸಮ್ಯಗ್ದರ್ಶನಕ್ಕೆ ಉಪಾಯವಾಗಿ ವಿಧಿಸಿರುವುದರಿಂದ ಇಲ್ಲಿ ಸಂಶಯಕ್ಕೆ ಹೆಚ್ಚು ಕಾರಣವಿದೆ. ಇದಲ್ಲದೆ ಇತರ ಶ್ರುತಿಗಳಲ್ಲಿಯೂ[2] (ಶ್ವೇ. ಉ. ೨. ೮. ; ಕ. ಉ. ೨. ೬. ೧೧) ಯೋಗವಿಷಯಕವಾದ ಲಿಂಗಗಳು ಕಂಡುಬರುತ್ತವೆ. ಯೋಗಶಾಸ್ತ್ರವೂ ಕೂಡ ಯೋಗವನ್ನು ಸಮ್ಯಗ್ದರ್ಶನಕ್ಕೆ ಉಪಾಯವಾಗಿ ಅಂಗೀಕರಿಸಿರುತ್ತದೆ. ಶಾಸ್ತ್ರದ ಒಂದಂಶವು (ಎಂದರೆ ಇಲ್ಲಿ ಯೋಗಾನುಷ್ಠಾನವು) ಪ್ರಮಾಣವಾಗಿರುವುದರಿಂದ— ಅಷ್ಟಕಾದಿಸ್ಮೃತಿಗಳಂತೆ[3] — ಯೋಗಸ್ಮೃತಿಯನ್ನು ನಿರಾಕರಿಸಲು ಆಗುವುದಿಲ್ಲವೆಂಬುದು ಸಂಶಯವನ್ನು ಇನ್ನೂ ಹೆಚ್ಚಿಸುತ್ತದೆ.

ಸಾಂಖ್ಯ-ಯೋಗಗಳು ಪರಮಪುರುಷಾರ್ಥಕ್ಕೆ ಸಾಧನಗಳೆಂದು ಲೋಕದಲ್ಲಿ ಪ್ರಸಿದ್ಧವಾಗಿದ್ದರೂ, ಶಿಷ್ಟರು ಅವನ್ನು ಪರಿಗ್ರಹಿಸಿದ್ದರೂ ಶ್ರುತಿಯಿಂದ[4] (ಶ್ವೇ. ಉ.

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ಸ್ಮೃತ್ಯಧಿಕರಣದಲ್ಲಿಯೇ ಅಂತರ್ಗತವಾಗಿದೆ.

1 'ಆತ್ಮನನ್ನು ಶ್ರವಣ ಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನ ಮಾಡಬೇಕು' ಆತ್ಮಾ... ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ।

2 'ಉನ್ನತವಾದ ಮೂರು ಅಂಗಗಳುಳ್ಳ ಶರೀರವನ್ನು ಸರಿಯಾಗಿ ನಿಲ್ಲಿಸಿ' ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಮ್ ।

'ಸ್ಥಿರವಾದ ಇಂದ್ರಿಯಧಾರಣೆ ಎಂಬ ಇದನ್ನೇ ಯೋಗವೆಂದು ತಿಳಿಯುತ್ತಾರೆ' ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।

3 ಹೇಮಂತ-ಶಿಶಿರ-ಋತುಗಳಲ್ಲಿ ಪೂರ್ಣಿಮೆಯಾದ ಮೇಲೆ ಮಾಡುವ ವಿಶಿಷ್ಟ ಯಾಗಕ್ಕೆ 'ಅಷ್ಟಕಾ' ಎಂದು ಹೆಸರು. ಪೂರ್ವಮೀಮಾಂಸೆಯ ಪ್ರಕಾರ ಶ್ರುತಿಯನ್ನು ಅವಲಂಬಿಸಿರುವ ಅಷ್ಟಕಾದಿಸ್ಮೃತಿಗಳು ಪ್ರಮಾಣವಾಗಿವೆ.

4 'ಸಾಂಖ್ಯ-ಯೋಗಗಳಿಂದ ಹೊಂದಲ್ಪಡುವವನೂ ಸರ್ವಕಾರಣನೂ ಆದ ಆ ದೇವನನ್ನು ಅರಿತುಕೊಂಡವನು ಸರ್ವಪಾಶಗಳಿಂದಲೂ ಮುಕ್ತನಾಗುತ್ತಾನೆ' ತತ್ಕಾರಣಂ ಸಾಂಖ್ಯ-ಯೋಗಾಧಿಗಮ್ಯಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ।

೬. ೧೩) ಬೆಂಬಲವನ್ನು ಹೊಂದಿದ್ದರೂ ಅವುಗಳನ್ನು ನಿರಾಕರಿಸಿರುತ್ತೇವೆ; ಏಕೆಂದರೆ ವೇದನಿರಪೇಕ್ಷವಾದ ಸಾಂಖ್ಯಜ್ಞಾನದಿಂದಾಗಲಿ ಯೋಗಮಾರ್ಗದಿಂದಾಗಲಿ ಶ್ರೇಯಸ್ಸು ಉಂಟಾಗುವುದಿಲ್ಲ; ವೇದವು ಉಪದೇಶಿಸುವ ಆತ್ಮೈಕತ್ವ-ವಿಜ್ಞಾನಕ್ಕಿಂತ ನಿಃಶ್ರೇಯಸಕ್ಕೆ ಬೇರೆ ಯಾವ ಸಾಧನವೂ ಇಲ್ಲವೆಂದು ಶ್ರುತಿಯೇ[1] (ಶ್ವೇ. ಉ. ೩.೮) ಹೇಳುತ್ತದೆ. ಸಾಂಖ್ಯ-ಯೋಗ-ದರ್ಶನಗಳು ದ್ವೈತವನ್ನು ಪ್ರತಿಪಾದಿಸುತ್ತವೆಯೇ ಹೊರತು ಆತ್ಮೈಕತ್ವವನ್ನು ತಿಳಿಸುವುದಿಲ್ಲ. ಶ್ವೇ. ಉ. ೬. ೧೩ರಲ್ಲಿ ಸಾಂಖ್ಯ-ಯೋಗ-ಶಬ್ದಗಳು ವೈದಿಕಜ್ಞಾನವನ್ನೂ ಧ್ಯಾನವನ್ನೂ ಸೂಚಿಸುತ್ತವೆ. ಆದರೆ ಸಾಂಖ್ಯ-ಯೋಗಗಳಲ್ಲಿ ಯಾವ ಅಂಶವು ವೇದಕ್ಕೆ ವಿರುದ್ಧವಾಗಿಲ್ಲವೊ ಅದಕ್ಕೇ ಅವಕಾಶವನ್ನು ಕೊಡುತ್ತೇವೆ.[2] ಇದರಿಂದ ಇತರ ತರ್ಕರೂಪವಾದ ಸ್ಮೃತಿಗಳನ್ನೂ ನಿರಾಕರಿಸಿದಂತಾಯಿತು. ಇತರ ಸ್ಮೃತಿಗಳು ತರ್ಕ-ಉಪಪತ್ತಿಗಳಿಂದ ತತ್ತ್ವಜ್ಞಾನಕ್ಕೆ ಸಹಾಯಕವಾಗಿವೆಯೆಂದು ಹೇಳಿದರೆ, ಅವು ಸಹಾಯಕವಾಗಿರಬಹುದು; ತತ್ತ್ವಜ್ಞಾನವಾದರೋ ವೇದಾಂತವಾಕ್ಯಗಳಿಂದಲೇ ಉಂಟಾಗುತ್ತದೆ.[3] 'ವೇದವನ್ನು ಅರಿಯದವನು ಆ ದೊಡ್ಡ ಆತ್ಮನನ್ನು ಅರಿತುಕೊಳ್ಳಲಾರನು'[4] ಎಂದು ಶ್ರುತಿಯು (ತೈ. ಬ್ರಾ. ೩. ೧೨. ೯. ೭) ಹೇಳುತ್ತದೆ.

ವಿ.—ಯೋಗಸ್ಮೃತಿಯು (೧) ಈಶ್ವರನನ್ನು ಅಂಗೀಕರಿಸಿರುವುದರಿಂದಲೂ (೨) ವೇದಾಂತವಾಕ್ಯಗಳು ಯೋಗವನ್ನು ಮೋಕ್ಷೋಪಾಯವೆಂದು ವಿಧಿಸಿರುವುದರಿಂದಲೂ ಮತ್ತು (೩) ಯೋಗಸ್ಮೃತಿಯ ಪ್ರಣೇತೃವಾದ ಹಿರಣ್ಯಗರ್ಭನು ವೇದಾಂತವನ್ನು ಪ್ರವರ್ತಿಸಲು ಅಧಿಕಾರಿಯಾಗಿರುವುದರಿಂದಲೂ ವೇದಾಂತಕ್ಕೆ ಯೋಗದ ಬೆಂಬಲ ಬೇಕು ಎಂಬ ಸಂಶಯವು ಉಂಟಾಗುತ್ತದೆ. ಈ ವಾದಗಳಲ್ಲಿ ಯಾವ ಹುರುಳೂ ಇಲ್ಲ: (೧) ಈ ಸ್ಮೃತಿಯ ಪ್ರಕಾರ ಬ್ರಹ್ಮಾತ್ಮಕವಲ್ಲದ ಪ್ರಧಾನವು ಉಪಾದಾನಕಾರಣವಾಗಿರುವುದರಿಂದ ಈಶ್ವರನು ಕೇವಲ ನಿಮಿತ್ತಕಾರಣನಾಗಿರುತ್ತಾನೆ; (೨) ಯೋಗದ ಪ್ರಕಾರ ಧ್ಯಾನಕ್ಕೆ ಎರಡು ವಿಷಯಗಳಿವೆ: ಜೀವ ಮತ್ತು ಈಶ್ವರ; ಜೀವನು ಅಬ್ರಹ್ಮಾತ್ಮಕನಾಗಿರುವುದರಿಂದಲೂ ಈಶ್ವರನು ಉಪಾದಾನಕಾರಣನಾಗದೆ ಪರಬ್ರಹ್ಮನ ಕಲ್ಯಾಣಗುಣಗಳಿಂದ ವಿರಹಿತನಾಗಿರುವುದರಿಂದಲೂ ಯೋಗಸ್ಮೃತಿಯು ವೈದಿಕವಲ್ಲ; (೩) ಹಿರಣ್ಯಗರ್ಭನೂ ಜೀವಾತ್ಮನಾಗಿರುವುದರಿಂದ ರಜಸ್ತಮೋಗುಣಗಳ ಸಂಪರ್ಕವನ್ನು

---

1 'ಅವನನ್ನೇ ಅರಿತುಕೊಂಡವನು ಮೃತ್ಯುವನ್ನು ದಾಟುತ್ತಾನೆ. ಮೋಕ್ಷಕ್ಕೆ ಇದಕ್ಕಿಂತ ಬೇರೆ ದಾರಿಯಿಲ್ಲ' ತಮೇವ ವಿದಿತ್ವಾಽತಿ ಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ ।

2 ಯೇನ ತ್ವಂಶೇನ ನ ವಿರುಧ್ಯೇತೇ ತೇನೇಷ್ಟಮೇವ ಸಾಂಖ್ಯಯೋಗಸ್ಮೃತ್ಯೋಃ ಸಾವಕಾಶತ್ವಮ್ (ಸೂ. ಭಾ.).

3 ತತ್ತ್ವಜ್ಞಾನಂ ತು ವೇದಾಂತವಾಕ್ಯೇಭ್ಯ ಏವ ಭವತಿ (ಸೂ. ಭಾ.).

4 ನಾವೇದವಿನ್ಮನುತೇ ತಂ ಬೃಹಂತಮ್ ।

ಹೊಂದಿರುತ್ತಾನೆ ; ಆದುದರಿಂದ ಅವನ ಸ್ಮೃತಿಯು ಭ್ರಾಂತಿಯಲ್ಲಿ ಹುಟ್ಟಿದ ಆದುದರಿಂದ ಯೋಗಸ್ಮೃತಿಯು ವೇದಾಂತಕ್ಕೆ ಬೆಂಬಲವನ್ನು ಕೊಡಲಾರದು.

ದ್ವೈ.—ಯೋಗಶಾಸ್ತ್ರದಲ್ಲಿ ಹೇಳಿರುವ ಯೋಗಾಭ್ಯಾಸದ ಫಲವು ಪ್ರತ್ಯಕ್ಷವಾಗಿ ಉಪಲಬ್ಧವಾಗುತ್ತದೆಯೆಂದು ತಿಳಿಯಕೂಡದು ; ಏಕೆಂದರೆ ಆ ಶಾಸ್ತ್ರದಲ್ಲಿ ಹೇಳಿದಂತೆ ಅಭ್ಯಾಸವನ್ನು ಮಾಡಿದರೂ ಆಯಾ ಕಾಲದಲ್ಲಿ ಫಲವುಂಟಾಗುವುದಿಲ್ಲ.[1]

[1] ಯೋಗಫಲಂ ಪ್ರತ್ಯಕ್ಷೋಪಲಭ್ಯಮಿತಿ ನ ಮಂತವ್ಯಮ್ । ಉಕ್ತಾಭ್ಯಾಸೇ ತತ್ಕಾಲ ಏವ ಫಲಾದೃಷ್ಟೇಃ (ಮ. ಭಾ.).

## ೩. ವಿಲಕ್ಷಣತ್ವಾಧಿಕರಣ

(ಸೂ. ೪-೧೧)

**ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್* ॥ ೪ ॥**

೪ (ಬ್ರಹ್ಮವು ಜಗತ್ತಿಗೆ ಕಾರಣವು) ಅಲ್ಲ; ಏಕೆಂದರೆ ಇದು (ಎಂದರೆ ಜಗತ್ತು) (ಬ್ರಹ್ಮಕ್ಕಿಂತ) ವಿಲಕ್ಷಣವಾಗಿದೆ ಮತ್ತು ಹಾಗಿರುವುದು (ಎಂದರೆ ಬ್ರಹ್ಮಕ್ಕಿಂತ ವಿಲಕ್ಷಣವಾಗಿರುವುದು) ಶಾಸ್ತ್ರದಿಂದ (ತಿಳಿದು ಬರುತ್ತದೆ).

ಬ್ರಹ್ಮಕಾರಣವಾದಕ್ಕೆ ಯುಕ್ತಿಯಿಂದಲೂ ಆಕ್ಷೇಪಿಸಬಹುದು ಶ್ರುತಿಯು ಇತರ ಪ್ರಮಾಣಕ್ಕೆ ವಿರುದ್ಧವಾಗಿದ್ದರೆ ಅದನ್ನು ಆ ಪ್ರಮಾಣಕ್ಕೆ ತಕ್ಕಂತೆ ಅರ್ಥಮಾಡಬೇಕು. ನಮಗೆ ಕಾಣಿಸುವ ವಸ್ತುವಿನ ಹೋಲಿಕೆಯಿಂದ ಕಾಣಲಾಗದ ವಸ್ತುವನ್ನು ಸಮರ್ಥಿಸುವ ಯುಕ್ತಿಯು ಅನುಭವಕ್ಕೆ ಹತ್ತಿರವಾಗಿರುತ್ತದೆ. ಆದರೆ ಪರೋಕ್ಷವಾಗಿ ತನ್ನ ಅರ್ಥವನ್ನು ಹೇಳುವ ಶ್ರುತಿಯು ಅನುಭವಕ್ಕೆ ದೂರವಾಗಿರುತ್ತದೆ.[1] 'ಆತ್ಮನನ್ನು ಶ್ರವಣಮಾಡಬೇಕು, ಮನನಮಾಡಬೇಕು' ಎಂದು ಶ್ರುತಿಯು (ಬೃ. ಉ. ೨. ೪. ೫), ಶ್ರವಣಕ್ಕಿಂತ ಬೇರೆಯಾಗಿ ಮನನವನ್ನು ವಿಧಿಸಿರುವುದರಿಂದ, ತರ್ಕವನ್ನು ಆಶ್ರಯಿಸಬೇಕೆಂದು ತಿಳಿಸುತ್ತದೆ. ಚೇತನವಾದ ಬ್ರಹ್ಮವು ಜಗತ್ತಿಗೆ ಮೂಲಕಾರಣವಾಗಿರುವುದೆಂಬ ವೇದಾಂತಿಯ ಮತವು ಹೊಂದುವುದಿಲ್ಲ; ಏಕೆಂದರೆ ಕಾರಣವಾದ ಬ್ರಹ್ಮವು ಕಾರ್ಯವಾದ ಜಗತ್ತಿಗಿಂತ ವಿಲಕ್ಷಣವಾಗಿದೆ. ಬ್ರಹ್ಮವು ಚೇತನವೂ ಶುದ್ಧವೂ ಆಗಿದ್ದರೆ ಜಗತ್ತು ಅಚೇತನವೂ ಅಶುದ್ಧವೂ ಆಗಿದೆ. ಪರಸ್ಪರ ಭಿನ್ನವಾಗಿರುವ ವಸ್ತುಗಳಲ್ಲಿ ಕಾರ್ಯ-ಕಾರಣ-ಭಾವವು ಇರುವುದಿಲ್ಲ; ಚಿನ್ನದ ಆಭರಣಗಳು ಚಿನ್ನದಿಂದ ಆಗುತ್ತವೆಯೇ ಹೊರತು ಮಣ್ಣಿನಿಂದ ಆಗುವುದಿಲ್ಲ. ಇದೇ ರೀತಿ ಅಚೇತನವೂ ಸುಖ-ದುಃಖ-ಮೋಹಾತ್ಮಕವೂ ಆದ ಜಗತ್ತು ಅಚೇತನವಾದ ಕಾರಣದ ಕಾರ್ಯವಾಗಿರಬೇಕೇ ಹೊರತು ವಿಲಕ್ಷಣ ಬ್ರಹ್ಮದ ಕಾರ್ಯವಾಗಲಾರದು.[2] ಈ ಜಗತ್ತು ಅಚೇತನನಾಗಿದೆ; ಏಕೆಂದರೆ ಇದು

---

* ಶಂಕರಭಾಷ್ಯದ ಮತ್ತು ಶ್ರೀಭಾಷ್ಯದ ಪ್ರಕಾರ ಈ ಸೂತ್ರ ಮತ್ತು ಮುಂದಿನದು ಪೂರ್ವಪಕ್ಷಕ್ಕೆ ಸೇರಿವೆ; ಮಧ್ವಭಾಷ್ಯದ ಪ್ರಕಾರ ಈ ಸೂತ್ರ ಮತ್ತು ದೃಶ್ಯತೇ ತು ಎಂಬ ೬ನೇ ಸೂತ್ರ ಸೇರಿ ಶ್ರುತಿನಿತ್ಯತ್ವಾಧಿಕರಣ ಎಂಬ ಹೊಸ ಅಧಿಕರಣವೇ ಆಗಿದೆ.

[1] ದೃಷ್ಟಸಾಮ್ಯೇನ ಚಾದೃಷ್ಟಮರ್ಥಂ ಸಮರ್ಥಯಂತೀ ಯುಕ್ತಿರನುಭವಸ್ಯ ಸಂನಿಕೃಷ್ಯತೇ । ವಿಪ್ರಕೃಷ್ಯತೇ ತು ಶ್ರುತಿರೈತಿಹ್ಯಮಾತ್ರೇಣ ಸ್ವಾರ್ಥಾಭಿಧಾನಾತ್ (ಸೂ. ಭಾ.).

[2] ತಥೇದಮಪಿ ಜಗದಚೇತನಂ ಸುಖದುಃಖಮೋಹಾನ್ವಿತಂ ಸದಚೇತನಸ್ಯೈವ ಸುಖದುಃಖಮೋಹಾತ್ಮಕಸ್ಯ ಕಾರಣಸ್ಯ ಕಾರ್ಯಂ ಭವಿತುಮರ್ಹತೀತಿ ನ ವಿಲಕ್ಷಣಸ್ಯ ಬ್ರಹ್ಮಣಃ (ಸೂ. ಭಾ.).

ಚೇತನವಸ್ತುವಿನ ಕರಣವಾಗಿರುತ್ತದೆ. ಜಗತ್ತೂ ಚೇತನವಾಗಿದ್ದರೆ—ಒಂದು ದೀಪದಿಂದ ಇನ್ನೊಂದು ದೀಪಕ್ಕೆ ಪ್ರಯೋಜನವಾಗುವಂತೆ—ಚೇತನನಾದ ಆತ್ಮನಿಗೆ ಅದರಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ

ಜಗತ್ತೂ ಚೇತನವಾಗಿರಬಹುದು ; ಆದರೆ ಚೈತನ್ಯವು ತನ್ನ ಪರಿಣಾಮವಶದಿಂದ ನಿದ್ರಾಮೂರ್ಛಾದಿಗಳಲ್ಲಿ ಕಂಡುಬರದಂತೆ ಜಗತ್ತಿನ ವಸ್ತುಗಳಲ್ಲಿ ವ್ಯಕ್ತವಾಗದಿರಬಹುದು; ಚೈತನ್ಯವು ಕೆಲವು ವಸ್ತುಗಳಲ್ಲಿ ಪ್ರಕಾಶವಾಗಿರುವುದು, ಕೆಲವಲ್ಲಿ ಆಗದಿರುವುದು ಎಂಬ ಕಾರಣದಿಂದ—ಕರಣಗಳು ಮತ್ತು ಆತ್ಮ ಇವೆರಡೂ ಚೇತನವಾಗಿದ್ದರೂ—ಕರಣಗಳಾದ ವಸ್ತುಗಳು ಪ್ರಧಾನವಾದ ಆತ್ಮನಿಗೆ ಅಧೀನವಾಗಿರಬಹುದು ಎಂದು ಹೇಳಿದರೆ ಚೇತನಾಚೇತನ-ದೃಷ್ಟಿಯಿಂದ ಬ್ರಹ್ಮಕ್ಕೂ ಜಗತ್ತಿಗೂ ಇರುವ ಭೇದವು ಸ್ವಲ್ಪ ಹೋಗಬಹುದು; ಆದರೆ ಶುದ್ಧಾಶುದ್ಧತ್ವದೃಷ್ಟಿಯಿಂದ ಇವೆರಡಕ್ಕೂ ಇರುವ ವಿಲಕ್ಷಣತ್ವವನ್ನು ಪರಿಹರಿಸುವುದು ಅಸಾಧ್ಯ. ನಿಜವಾಗಿ ನೋಡಿದರೆ ಬ್ರಹ್ಮಕ್ಕೂ ಜಗತ್ತಿಗೂ ಇರುವ ಮೊದಲನೆಯ ಭೇದವೇ ಹೋಗುವುದಿಲ್ಲವೆಂಬುದು **ತಥಾತ್ವಂ ಚ ಶಬ್ದಾತ್** ಎಂಬ ಸೂತ್ರದ ಉತ್ತರಭಾಗದಿಂದಲೇ ತಿಳಿದುಬರುತ್ತದೆ. ಶ್ರುತಿಯೇ (ತೈ. ಉ. ೨. ೬) ಚೇತನವಾದ ಬ್ರಹ್ಮಕ್ಕಿಂತ ಅಚೇತನವಾದ ಜಗತ್ತು ವಿಲಕ್ಷಣವೆಂದು ಹೇಳುತ್ತದೆ.[1]

'ಭೂಮಿಯು ಮಾತನಾಡಿತು, ನೀರು ಮಾತನಾಡಿತು' (ಶ. ಬ್ರಾ. ೬. ೧. ೩. ೨. ಮತ್ತು ೪),[2] 'ನೀನು ನಮಗೋಸ್ಕರ ಉದ್ಗೀಥವನ್ನು ಹಾಡು—ಎಂದು ದೇವತೆಗಳು ವಾಕ್ಕಿಗೆ ಹೇಳಿದರು'[3] (ಬೃ. ಉ. ೧. ೩. ೨) ಮೊದಲಾದ ಶ್ರುತಿಗಳ ಪ್ರಕಾರ ಅಚೇತನವಾದ ಭೂತಗಳೂ ಇಂದ್ರಿಯಗಳೂ ಚೇತನವೆಂದು ಹೇಳಿದರೆ, ಇದಕ್ಕೆ ಮುಂದಿನ ಸೂತ್ರವು ಪೂರ್ವಪಕ್ಷಿಯ ಪರಿಹಾರವಾಗಿದೆ

೬.—ಪರಸ್ಪರ ವಿಲಕ್ಷಣವಾದ ವಸ್ತುಗಳಲ್ಲಿಯೂ ಕಾರ್ಯ-ಕಾರಣ-ಭಾವವನ್ನು ನೋಡಬಹುದು: [4] ಚೇತನವಾದ ಮನುಷ್ಯನಿಂದ ಅಚೇತನವಾದ ಕೇಶ-ನಖ-ದಂತ ಲೋಮಗಳು ಹುಟ್ಟುತ್ತವೆ ಮತ್ತು ಅಚೇತನವಾದ ಸಗಣಿಯಿಂದ ಚೇತನವಾದ ಕ್ರಿಮಿಗಳು ಹುಟ್ಟುತ್ತವೆ—ಎಂಬ ಆಕ್ಷೇಪವು ಸರಿಯಲ್ಲ; ಏಕೆಂದರೆ ಮೇಲೆ ಹೇಳಿದ ಉದಾಹರಣೆಗಳಲ್ಲಿ ಅಚೇತನಾಂಶಗಳಲ್ಲಿಯೇ ಕಾರ್ಯ-ಕಾರಣ-ಭಾವವು ಕಂಡುಬರುತ್ತದೆ;[5] ಎಂದರೆ ಅಚೇತನವಾದ ಶರೀರದಿಂದ ಅಚೇತನವಾದ ವಸ್ತುಗಳು ಹುಟ್ಟುತ್ತವೆ.

---

[1] 'ವಿಜ್ಞಾನ ಮತ್ತು ಅವಿಜ್ಞಾನ.... ಆದನು' ವಿಜ್ಞಾನಂ ಚಾವಿಜ್ಞಾನಂ ಚ.... ಅಭವತ್।

[2] ಮೃದಬ್ರವೀತ್, ಆಪೋಽಬ್ರುವನ್ ।

[3] ತೇ ಹ ವಾಚಮೂಚುಃ, ತ್ವಂ ನ ಉದ್ಗಾಯೇತಿ ।

[4] ನನು ಚ ವೈಲಕ್ಷಣ್ಯೇಽಪಿ ಕಾರ್ಯಕಾರಣಭಾವೋ ದೃಶ್ಯತೇ (ಶ್ರೀಭಾಷ್ಯ).

[5] ಯತಸ್ತತ್ರಾಪ್ಯಚೇತನಾಂಶ ಏವ ಕಾರ್ಯಕಾರಣಭಾವಃ (ಶ್ರೀಭಾಷ್ಯ).

ದ್ವೈ.—ಶ್ರುತಿಯ ವಿಷಯದಲ್ಲಿಯೂ ಶ್ರುತಿಯನ್ನು ಅನುಸರಿಸುವ ಸ್ಮೃತಿಗಳ ವಿಷಯದಲ್ಲಿಯೂ ಅಪ್ರಾಮಾಣ್ಯವಿಲ್ಲ; ಏಕೆಂದರೆ ಇತರ ಸ್ಮೃತಿಗಳ ಹಾಗೆ ಫಲಗಳ ಅನುಪಲಬ್ಧಿಯಿಲ್ಲ.[1] ಶ್ರುತಿಯು ನಿತ್ಯವಾಗಿರುವುದರಿಂದ ಅದೂ, ಅದನ್ನು ಅನುಸರಿಸುವ ಸ್ಮೃತಿಗಳೂ ವಿಲಕ್ಷಣವಾಗಿವೆ. ನಿತ್ಯವಾದುವು ದೋಷರಹಿತವಾಗಿಯೂ ಸ್ವತಃ ಪ್ರಾಮಾಣ್ಯವಾಗಿಯೂ ಇರುತ್ತವೆ. ಹಾಗಾಗದಿದ್ದರೆ ಅನವಸ್ಥಾದೋಷವು ಒದಗುತ್ತದೆ. ಶ್ರುತಿಯ ನಿತ್ಯತ್ವವು ಶಾಸ್ತ್ರದಿಂದಲೇ ತಿಳಿದುಬರುತ್ತದೆ: 'ಹೇ ವಿರೂಪ, ಶಾಶ್ವತವಾದ ವಾಕ್ಕನ್ನು (ಹೊಗಳು)'[2] (ಋ. ವೇ ೮. ೭೫. ೬).

ಓಂ ದೃಶ್ಯತೇ ತು ಓಂ ॥ ೨. ೧. ೫ ॥

'ಆದರೆ (ಫಲವು) ಕಂಡುಬರುತ್ತದೆ' ಎಂಬುದು ಸೂತ್ರಾರ್ಥ. ಶ್ರುತ್ಯಾದಿಗಳಲ್ಲಿ ಉಕ್ತವಾದ ಫಲವು ಅಧಿಕಾರಿಗಳಿಗೆ ಲಭಿಸುತ್ತದೆ.[3] ಭವಿಷ್ಯತ್ಪುರಾಣದ ಪ್ರಕಾರ ಋಗಾದಿ-ಮಂತ್ರಗಳಿಗೂ ಮೂಲರಾಮಾಯಣ-ಭಾರತ-ಪಂಚರಾತ್ರಗಳಿಗೂ ವೇದವೆಂದು ಹೆಸರು; ಇವೆಲ್ಲವೂ ಸ್ವತಃಪ್ರಾಮಾಣ್ಯಗಳಾದುದರಿಂದ ಇವುಗಳ ವಿಷಯದಲ್ಲಿ ಯಾವ ವಿಚಾರವನ್ನೂ ಮಾಡಲಾಗುವುದಿಲ್ಲ. ಇವುಗಳಲ್ಲಿ ಉಕ್ತವಾದ ಫಲವು ಉಂಟಾಗದಿದ್ದರೆ ಮನುಷ್ಯನ ಪೂರ್ವಕರ್ಮವೇ ಕಾರಣವಾಗಿರುತ್ತದೆ. ಅಧಿಕಾರಿಗಳಿಗೆ ಫಲವುಂಟಾಗುವುದರಿಂದ ಇವುಗಳ ಪ್ರಾಮಾಣ್ಯವು ಹೋಗುವುದಿಲ್ಲ. ಸ್ವತಃಪ್ರಾಮಾಣ್ಯವಲ್ಲದ ಇತರ ಸ್ಮೃತಿಗಳು ನಮ್ಮ ಅನುಭವಕ್ಕೆ ಬರದ ಫಲಗಳನ್ನು ಹೇಳಿದರೆ ಅವುಗಳ ಅಪ್ರಾಮಾಣ್ಯವು ಸಂಶಯವಿಲ್ಲದೆ ತಿಳಿದುಬರುತ್ತದೆ.

ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್* ॥ ೫ ॥

೫. ಆದರೆ ಅಭಿಮಾನಿ (ದೇವತೆಗಳನ್ನು) ಹೇಳಿದೆ; ಏಕೆಂದರೆ ವಿಶೇಷ-ಅನುಗತಿಗಳಿವೆ.

'ಆದರೆ' ಎಂಬ ಶಬ್ದವು ಹಿಂದೆ ಸೂಚಿಸಲ್ಪಟ್ಟ ಸಂಶಯವನ್ನು ನಿರಾಕರಿಸುತ್ತದೆ. 'ಭೂಮಿಯು ಮಾತನಾಡಿತು', 'ಅಗ್ನಿಯು ಯೋಚಿಸಿತು' (ಛಾಂ. ಉ. ೬. ೨. ३) ಎಂಬಲ್ಲಿ ಭೂಮಿ-ಅಗ್ನಿಗಳ ಅಭಿಮಾನಿಗಳೂ ಚೇತನರೂ ಆದ ದೇವತೆಗಳನ್ನು ಸೂಚಿಸಿ

---

[1] ನೈವಂ ಶ್ರುತೇಸ್ತದನುಸಾರಿಸ್ಮೃತೇಶ್ಚ ತದುಕ್ತಾನುಪಲಬ್ಧೇರಪ್ರಾಮಾಣ್ಯಮ್ (ಮ. ಭಾ.).

[2] ವಾಚಾ ವಿರೂಪ ನಿತ್ಯಯೇತ್ಯಾದೇಃ (ಮ. ಭಾ.).

[3] ಅಧಿಕಾರಿಣಾಂ ಫಲಮ್ (ಮ. ಭಾ.).

* ಮಧ್ವಭಾಷ್ಯದ ಪ್ರಕಾರ ಈ ಸೂತ್ರವೂ ಮತ್ತು ದೃಶ್ಯತೇ ಚ ಎಂಬ ಇನ್ನೊಂದು ಹೊಸ ಸೂತ್ರವೂ ಸೇರಿ ಅಭಿಮಾನ್ಯಧಿಕರಣ ಎನಿಸಿದೆ.

ದೆಯೇ ಹೊರತು ಜಡವಸ್ತುಗಳನ್ನು ಹೇಳಿಲ್ಲ.[1] ಚೇತನ-ಅಚೇತನ ಎಂಬ ವಿಭಾಗದ ಪ್ರಕಾರ ಭೋಕ್ತೃಗಳಿಗೂ ಭೂತೇಂದ್ರಿಯಗಳಿಗೂ ಇರುವ ವ್ಯತ್ಯಾಸಕ್ಕೆ **ವಿಶೇಷ** ಎಂದು ಹೆಸರು. ಎಲ್ಲವೂ ಚೇತನವಾದರೆ ಇಂಥ ಭೇದವು ಹೊಂದುವುದಿಲ್ಲ. ಮಂತ್ರಗಳು ಅರ್ಥವಾದಗಳು ಇತಿಹಾಸಗಳು ಪುರಾಣಗಳು—ಇವೆಲ್ಲ ಚೇತನರಾದ ಅಭಿಮಾನಿದೇವತೆಗಳು ಪ್ರತಿಯೊಂದರೊಂದಿಗೂ ಅನುಗತರಾಗಿದ್ದರೆಂದು ಹೇಳುತ್ತವೆ; ಇದೇ **ಅನುಗತಿ**. ಆದುದರಿಂದ ಈ ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವಾಗಿದೆ. ಈ ಕಾರಣದಿಂದ ಬ್ರಹ್ಮವು ಅದರ ಉಪಾದಾನ ಕಾರಣವಾಗಲಾರದು.

ವಿ.—'ವಿಶೇಷ' ಎಂದರೆ ವಿಶೇಷಣ. ಛಾಂದೋಗ್ಯಶ್ರುತಿಯು[2] (೬. ೩. ೨) ಪೃಥ್ವಿ-ನೀರು-ಭೂಮಿಗಳನ್ನು ದೇವತೆಗಳೆಂದು ಕರೆದಿದೆ. 'ಅನುಗತಿ' ಎಂದರೆ ಅನುಪ್ರವೇಶ. ಅಗ್ನ್ಯಾದಿ-ದೇವತೆಗಳು ವಾಕ್ಕೇ ಮೊದಲಾದ ಇಂದ್ರಿಯಗಳನ್ನು ಅವುಗಳ ಅಭಿಮಾನಿದೇವತೆಗಳಾಗಿ ಪ್ರವೇಶಿಸಿದರು ಎಂದು ಐತರೇಯಾರಣ್ಯಕವು (೨. ೪. ೨. ೪) ಹೇಳುತ್ತದೆ ಆದುದರಿಂದ ತರ್ಕಾನುಗೃಹೀತವಾದ ಸ್ಮೃತಿಯ ಪ್ರಕಾರ ವೇದಾಂತ ವಾಕ್ಯಗಳು ಪ್ರಧಾನವೇ ಜಗತ್ತಿನ ಉಪಾದಾನಕಾರಣವೆಂದು ತಿಳಿಸುತ್ತದೆ.

ದ್ವೈ.—'ಭೂಮಿಯು ಮಾತನಾಡಿತು', 'ನೀರುಗಳು ಮಾತನಾಡಿದುವು' ಎಂಬಲ್ಲಿ ಶಾಸ್ತ್ರವು ಯುಕ್ತಿಗೆ ವಿರುದ್ಧವಾಗಿರುವಂತೆ ಕಂಡುಬರುತ್ತದೆ. ಈ ಶ್ರುತಿಗಳಲ್ಲಿ ಭೂಮಿ ಮೊದಲಾದ ಶಬ್ದಗಳು ಆಯಾ ಅಭಿಮಾನಿಚೇತನಗಳನ್ನೇ ಸೂಚಿಸುತ್ತವೆ; ಏಕೆಂದರೆ ಇತರರಿಗಿಂತ ಭಿನ್ನರಾದ ಈ ದೇವತೆಗಳಿಗೆ ವಿಶಿಷ್ಟಸಾಮರ್ಥ್ಯವೂ ಸರ್ವಗತತ್ವವೂ ಇರುತ್ತವೆ.[3] ಆದುದರಿಂದ ಅವುಗಳ ವಿಷಯದಲ್ಲಿ ಹೇಳಿದ್ದೆಲ್ಲವೂ ಯುಕ್ತವು

ಓಂ ದೃಶ್ಯತೇ ಚ ಓಂ ॥ ೨. ೧. ೭ ॥

'ಈ ಅಭಿಮಾನಿದೇವತೆಗಳ ಸಾಮರ್ಥ್ಯವನ್ನು ನೋಡಲು ಮಹಾವ್ಯಕ್ತಿಗಳಿಗೇ ಸಾಧ್ಯ[4]' ಎಂಬುದು ಸೂತ್ರಾರ್ಥ.

---

[1] 'ಈ ದೇವತೆಗಳು ನಾನು ಹೆಚ್ಚು ತಾನು ಹೆಚ್ಚು ಎಂದು ವಾದಿಸುತ್ತ....', 'ಆ ಈ ದೇವತೆಗಳೆಲ್ಲ ಪ್ರಾಣನಲ್ಲಿಯೇ ಶ್ರೇಷ್ಠತ್ವವನ್ನು ಅರಿತುಕೊಂಡು ..' ಏತಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ...., ತಾ ವಾ ಏತಾಃ ಸರ್ವಾ ದೇವತಾಃ ಪ್ರಾಣೇ ನಿಃಶ್ರೇಯಸತ್ವಂ ವಿದಿತ್ವಾ....(ಕೌ. ಉ. ೨. ೧೪); ಅಗ್ನಿಯು ವಾಗಿಂದ್ರಿಯವಾಗಿ ಬಾಯನ್ನು ಪ್ರವೇಶಿಸಿತು' ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ (ಐ. ಉ. ೧. ೨. ೪) ಇತ್ಯಾದಿ.

[2] 'ನಾನು ಜೀವಾತ್ಮರೂಪದಿಂದ (ತೇಜಸ್ಸು ನೀರು ಮತ್ತು ಪೃಥ್ವಿ ಎಂಬ) ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸುವೆನು' ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ।

[3] ತಾಸಾಂ ಚೇತರೇಭ್ಯೋ ವಿಶಿಷ್ಟಂ ಸಾಮರ್ಥ್ಯಮನುಗತಿಶ್ಚ ಸರ್ವತ್ರ (ಮ. ಭಾ.).

[4] ತಾಸಾಂ ಸಾಮರ್ಥ್ಯಂ ಮಹದ್ಭಿಃ (ಮ. ಭಾ.).

## ದೃಶ್ಯತೇ ತು ॥ ೬ ॥

೬. ಆದರೆ (ಅದು) ಕಂಡುಬರುತ್ತದೆ.

'ಆದರೆ' ಎಂಬ ಶಬ್ದವು ೨. ೧ ೪. ೫ನೇ ಸೂತ್ರಗಳಲ್ಲಿ ಎತ್ತಿದ ಪೂರ್ವಪಕ್ಷವನ್ನು ನಿರಾಕರಿಸುತ್ತದೆ. ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವಾಗಿರುವುದರಿಂದ ಅದು ಬ್ರಹ್ಮದಿಂದ ಉತ್ಪನ್ನವಾಗಿಲ್ಲ—ಎಂಬುದು ಸರಿಯಲ್ಲ; ಏಕೆಂದರೆ ಚೇತನವಾದ ಮನುಷ್ಯನಿಂದ ಕೂದಲು ಉಗುರು ಮೊದಲಾದ ಅಚೇತನವಸ್ತುಗಳು ಉತ್ಪನ್ನವಾಗುತ್ತವೆ ಮತ್ತು ಸಗಣಿಯೇ ಮೊದಲಾದ ವಸ್ತುಗಳಿಂದ ಚೇಳು ಮೊದಲಾದುವು ಉತ್ಪನ್ನವಾಗುತ್ತವೆ. ಅಚೇತನವಾದ ಶರೀರಗಳು ಅಚೇತನವಾದ ಕೂದಲು ಮೊದಲಾದುವುಗಳಿಗೆ ಕಾರಣವಾಗಿವೆ, ಚೇಳು ಮೊದಲಾದುವುಗಳ ಅಚೇತನ ಶರೀರಗಳು ಅಚೇತನವಾದ ಸಗಣಿ ಮೊದಲಾದುವುಗಳ ಕಾರ್ಯವಾಗಿವೆ—ಎಂದು ಆಕ್ಷೇಪಿಸಿದರೂ ಕಾರಣ-ಕಾರ್ಯಗಳಿರುವ ವೈಲಕ್ಷಣ್ಯವು ಹೋಗುವುದಿಲ್ಲ; ಏಕೆಂದರೆ ಅಚೇತನವಾದ ಶರೀರವು ಚೇತನವಾದ ಆತ್ಮತತ್ತ್ವಕ್ಕೆ ಆಶ್ರಯವಾಗಿದೆಯೇ ಹೊರತು ಅಚೇತನವಾದ ಸಗಣಿ ಮೊದಲಾದುವುಗಳಲ್ಲ. ಮನುಷ್ಯ-ಶರೀರಗಳಿಗೂ ಕೂದಲು ಉಗುರು ಮೊದಲಾದುವುಗಳಿಗೂ—ಸ್ವರೂಪಾದಿಗಳು ಬೇರೆಬೇರೆಯಾಗಿರುವುದರಿಂದ—ಪರಿಣಾಮದಿಂದ ಉಂಟಾಗುವ ಸ್ವಭಾವಭೇದವು ಇದ್ದೇ ಇರುತ್ತದೆ. ಹೀಗೆಯೇ ಸಗಣಿ ಮೊದಲಾದುವುಗಳಿಗೂ ಚೇಳು ಮೊದಲಾದುವುಗಳಿಗೂ ಪರಿಣಾಮದ ಸ್ವಭಾವಭೇದವು ಇರುತ್ತದೆ. ಎರಡೂ ಒಂದೇ ಆಗಿದ್ದರೆ ಕಾರ್ಯ-ಕಾರಣ-ಭಾವವೇ ಹೋದೀತು! ಮನುಷ್ಯಶರೀರಗಳಿಗೂ ಕೂದಲು ಮೊದಲಾದುವುಗಳಿಗೂ, ಪಾರ್ಥಿವತ್ವಾದಿ-ಸ್ವಭಾವವು ಸಾಮಾನ್ಯವಾಗಿದೆಯೆಂದು ಪೂರ್ವಪಕ್ಷಿಯು ಹೇಳಿದರೆ, ಬ್ರಹ್ಮದ ಸತ್ತಾಲಕ್ಷಣವಾದ ಸ್ವಭಾವವು ಆಕಾಶಾದಿಗಳಲ್ಲಿಯೂ ಕಂಡುಬರುತ್ತದೆ—ಎಂಬುದು ನಮ್ಮ ಉತ್ತರ.

ಬ್ರಹ್ಮಕ್ಕೂ ಜಗತ್ತಿಗೂ ಇರುವ ವೈಲಕ್ಷಣ್ಯವೇನು? (೧) ಅಶೇಷಬ್ರಹ್ಮಸ್ವಭಾವವು ಜಗತ್ತಿನಲ್ಲಿಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯವೆ? ಅಥವಾ (೨) ಯಾವುದೋ ಒಂದು ಸ್ವಭಾವವು ಜಗತ್ತಿನಲ್ಲಿಲ್ಲವೆಂದು ಹೇಳುತ್ತಾನೆಯೆ? ಅಥವಾ (೩) ಚೈತನ್ಯವು ಮಾತ್ರ ಇಲ್ಲಿಲ್ಲವೆಂಬುದು ಅವನ ಮತವೆ? ಮೊದಲನೆಯನ್ನು ಒಪ್ಪಿಕೊಂಡರೆ ಕಾರ್ಯ-ಕಾರಣ-ವಾದವು ನಾಶವಾಗುವುದು; ಏಕೆಂದರೆ ಕಾರ್ಯದಲ್ಲಿ ಕಾರಣಕ್ಕಿಂತ ಹೆಚ್ಚಾದ ಯಾವ ವಿಶೇಷವೂ ಇಲ್ಲದಿದ್ದರೆ ಕಾರಣ, ಕಾರ್ಯ ಎಂಬ ವ್ಯವಹಾರವೇ ಆಗುವುದಿಲ್ಲ. ಎರಡನೆಯದು ಸಿದ್ಧವೇ ಆಗುವುದಿಲ್ಲ; ಏಕೆಂದರೆ ಸತ್ತಾಲಕ್ಷಣವು ಜಗತ್ತಿನಲ್ಲಿಯೂ ಇದೆ. ಮೂರನೆಯದಕ್ಕೆ ದೃಷ್ಟಾಂತವೇ ಇಲ್ಲ.

ಬ್ರಹ್ಮವು ಪರಿನಿಷ್ಪನ್ನವಸ್ತುವಾಗಿರುವುದರಿಂದ[1] ಇತರ ಪ್ರಮಾಣಗಳೂ ಬ್ರಹ್ಮ-ವಿಷಯದಲ್ಲಿ ಆಗಬಹುದೆಂಬ ಪೂರ್ವಪಕ್ಷಿಯ ಕಲ್ಪನೆಯು ಮನೋರಥಮಾತ್ರವಾಗಿದೆ;

---

[1] ಎಂದರೆ ಬ್ರಹ್ಮವು ಸಿದ್ಧವಾದ ವಸ್ತು; ಧರ್ಮಾದಿಗಳಂತೆ ಅದನ್ನು ಸಾಧಿಸಬೇಕಾಗಿಲ್ಲ.

ಏಕೆಂದರೆ ರೂಪಾದಿಗಳಿಲ್ಲದುದರಿಂದ ಬ್ರಹವು ಪ್ರತ್ಯಕ್ಷಕ್ಕೆ ಗೋಚರವಲ್ಲ ;[1] ಲಿಂಗಾದಿಗಳು ಇಲ್ಲದಿರುವುದರಿಂದ ಅನುಮಾನಾದಿಗಳಿಗೂ ಗೋಚರವಲ್ಲ;[2] ಇದನ್ನು ಧರ್ಮದಂತೆ ಕೇವಲ ಆಗಮದಿಂದಲೇ ಅರಿತುಕೊಳ್ಳಬೇಕು :[3] 'ಈ ಆತ್ಮಜ್ಞಾನವು ತರ್ಕದಿಂದ ಪಡೆಯ ತಕ್ಕದ್ದಲ್ಲ ; ಆಚಾರ್ಯನಿಂದಲೇ ಹೇಳಲ್ಪಟ್ಟರೆ ಸುಜ್ಞಾನವನ್ನುಂಟುಮಾಡುವುದು.'[4] (ಕ. ಉ. ೧. ೨. ೯) ; 'ಯಾವನು ಅದನ್ನು ಯಥಾರ್ಥವಾಗಿ ತಿಳಿದಿರುತ್ತಾನೆ ? ಯಾವನು ಅದನ್ನು ಇಲ್ಲಿ ಹೇಳಬಲ್ಲನು ?[5] (ಋ. ವೇ. ೧೦. ೧೨೯. ೬) ; 'ನಾನು ದೇವತೆಗಳಿಗೂ ಮಹರ್ಷಿಗಳಿಗೂ ಸರ್ವಪ್ರಕಾರದಿಂದಲೂ ಆದಿಯಾಗಿರುತ್ತೇನೆ'[6] (ಗೀತಾ ೧೦. ೨).

ಶ್ರವಣಕ್ಕಿಂತ ಬೇರೆಯಾಗಿ ಮನನವನ್ನು ವಿಧಿಸುವ ಶ್ರುತಿಯೇ ತರ್ಕವನ್ನೂ ಆದರಿಸಬೇಕೆಂದು ತಿಳಿಸುತ್ತದೆ—ಎಂದು ಪೂರ್ವಪಕ್ಷಿಯು ಹೇಳಿದರೆ, ಈ ವ್ಯಾಜದಿಂದ ಶುಷ್ಕತರ್ಕವನ್ನು ಸ್ವೀಕರಿಸಕೂಡದು—ಎಂಬುದು ನಮ್ಮ ಉತ್ತರ ; ಏಕೆಂದರೆ ಶ್ರುತಿಯು ತಿಳಿಸಿರುವ ಮತ್ತು ಅದಕ್ಕೆ ಅನುಗುಣವಾದ ತರ್ಕವನ್ನೇ ಇಲ್ಲಿ ಅನುಭವದ ಅಂಗವಾಗಿ ಹೇಳಿರುತ್ತದೆ.[7] ಶ್ರುತ್ಯನುಗೃಹೀತವಾದ ತರ್ಕದಿಂದ ಇಂಥ ಸಿದ್ಧಾಂತಕ್ಕೆ ಬರಬಹುದು: ಎಚ್ಚರ-ಕನಸುಗಳು ಒಂದನ್ನೊಂದು ಪ್ರತ್ಯೇಕಿಸುವುದರಿಂದ ಆತ್ಮನು ಈ ಎರಡು ಅವಸ್ಥೆಗಳಿಗೂ ಸಂಬಂಧಿಸಿಲ್ಲ; ಜೀವಾತ್ಮನು ಸುಷುಪ್ತಿಯಲ್ಲಿ ಪ್ರಪಂಚವನ್ನು ಬಿಟ್ಟು ಸತ್-ಸ್ವರೂಪನಾದ ಆತ್ಮನಲ್ಲಿಯೇ ಲಯವಾಗುವುದರಿಂದ ನಿಷ್ಪ್ರಪಂಚವಾದ ಸತ್‌ಸ್ವರೂಪವೇ ಆಗಿರುವನು ; ಪ್ರಪಂಚವು ಬ್ರಹ್ಮದಿಂದ ಉತ್ಪನ್ನವಾಗಿರುವುದರಿಂದ—ಕಾರ್ಯಕಾರಣಗಳು ಅಭಿನ್ನವೆಂಬ ನ್ಯಾಯದಂತೆ—ಬ್ರಹ್ಮಕ್ಕಿಂತ ಬೇರೆಯಲ್ಲ.

ಚೇತನವು ಜಗತ್ಕಾರಣವೆಂದು ಶ್ರುತಿಯು ಹೇಳಿರುವುದರಿಂದ ಸಮಸ್ತ ಜಗತ್ತೂ ಚೇತನವಾಗಿರಬೇಕೆಂದು ಯಾವನಾದರೂ ಊಹಿಸಿದರೆ ಅವನಿಗೆ, 'ಅವನು ವಿಜ್ಞಾನವೂ ಅವಿಜ್ಞಾನವೂ ಆದನು'[8] (ತೈ. ಉ. ೨. ೬) ಎಂಬ ಚೇತನಾಚೇತನ-ವಿಭಾಗವನ್ನು ತಿಳಿಸುವ ಶ್ರುತಿಯಲ್ಲಿಯೇ ಅವಕಾಶ ಸಿಕ್ಕುತ್ತದೆ ; ಏಕೆಂದರೆ ಚೇತನವು ಒಮ್ಮೆ ವ್ಯಕ್ತವಾಗುತ್ತದೆ, ಒಮ್ಮೆ ವ್ಯಕ್ತವಾಗುವುದಿಲ್ಲ—ಎಂಬ ತತ್ತ್ವದ ಸಹಾಯವನ್ನು ಪಡೆಯಬಹುದು. ಅಚೇತನವಾದ ಪ್ರಧಾನವು ಜಗತ್ಕಾರಣವೆಂದು ಒಪ್ಪಿಕೊಳ್ಳುವ ಸಾಂಖ್ಯವಾದಿಗೆ ಈ ಶ್ರುತಿಯು ಯಾವ ಅರ್ಥವನ್ನೂ ಕೊಡುವುದಿಲ್ಲ. ನಾವು ವೈಲಕ್ಷಣ್ಯವನ್ನು

1 ರೂಪಾದ್ಯಭಾವಾದ್ಧಿ ನಾಯಮರ್ಥಃ ಪ್ರತ್ಯಕ್ಷಸ್ಯ ಗೋಚರಃ (ಸೂ. ಭಾ.).
2 ಲಿಂಗಾದ್ಯಭಾವಾಚ್ಚ ನಾನುಮಾನಾದೀನಾಮ್ (ಸೂ. ಭಾ.).
3 ಆಗಮಮಾತ್ರಸಮಧಿಗಮ್ಯ ಏವ ತ್ವಯಮರ್ಥೋ ಧರ್ಮವತ್ (ಸೂ. ಭಾ.).
4 ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ ।
5 ಕೋ ಅದ್ಧಾ ವೇದ ಕ ಇಹ ಪ್ರವೋಚತ್ ।
6 ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ।
7 ಶ್ರುತ್ಯನುಗೃಹೀತ ಏವ ಹ್ಯತ್ರ ತರ್ಕೋಽನುಭವಾಂಗತ್ವೇನಾಶ್ರೀಯತೇ (ಸೂ. ಭಾ.).
8 ವಿಜ್ಞಾನಂ ಚಾವಿಜ್ಞಾನಂ ಚ ।

ತಿರಸ್ಕರಿಸುವುದರಿಂದ ಶ್ರುತಿಯ ಪ್ರಕಾರ ಚೇತನವೇ ಜಗತ್ಕಾರಣವೆಂದು ಗ್ರಹಿಸಬೇಕಾಗುತ್ತದೆ

ವಿ.—ಕಾರಣಕ್ಕೂ ಕಾರ್ಯಕ್ಕೂ ಇರುವ ವೈಲಕ್ಷಣ್ಯವನ್ನು ಜಗತ್ತಿನಲ್ಲಿ ಸಾಮಾನ್ಯವಾಗಿ ನೋಡಬಹುದು ಆದುದರಿಂದ ಜಗತ್ತು ಪರಬ್ರಹ್ಮನಿಗಿಂತ ವಿಲಕ್ಷಣವಾಗಿದ್ದರೂ ಅವನ ಕಾರ್ಯವಾಗಲು ಸಂಭವವಿದೆ [1]

## ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್* ॥ ೭ ॥

೭ (ಕಾರ್ಯವು ತನ್ನ ಉತ್ಪತ್ತಿಗೆ ಮೊದಲು) ಇರಲಿಲ್ಲವೆಂದು ಹೇಳಿದರೆ, ಅದು ಸರಿಯಲ್ಲ· ಏಕೆಂದರ (ಇದು) ಕೇವಲ ಪ್ರತಿಷೇಧವಾಗಿದೆ

ಕಾರ್ಯವು ಉತ್ಪತ್ತಿಗೆ ಮೊದಲೇ ಕಾರಣದಲ್ಲಿರುವುದೆಂಬುದು ವೇದಾಂತಿಯ ಸಿದ್ಧಾಂತ, ಎಂದರೆ ಇವನು ಸತ್ಕಾರ್ಯವಾದಿ ಸತ್ಕಾರ್ಯವಾದವು ದೂಷಿತವಾಯಿತೆಂದು ಪೂರ್ವಪಕ್ಷಿಯು ಹೇಳುತ್ತಾನೆ, ಏಕೆಂದರೆ ಅಚೇತನವೂ ಅಶುದ್ಧವೂ ಕಾರ್ಯವೂ ಆದ ಜಗತ್ತು ಚೇತನವೂ ಶುದ್ಧವೂ ಆದ ಬ್ರಹ್ಮದಲ್ಲಿ ಇರಲಾರದು ಈ ಆಕ್ಷೇಪಣೆಗೆ ಪರಿಹಾರವು ಸೂತ್ರದಲ್ಲಿದೆ ಹುಟ್ಟುವುದಕ್ಕೆ ಮೊದಲೇ ಕಾರ್ಯವನ್ನು ಪ್ರತಿಷೇಧಿಸಿದರೆ ಇಲ್ಲದಿರುವ ವಸ್ತುವನ್ನು ಪ್ರತಿಷೇಧಿಸಿದಂತಾಗುತ್ತದೆ [2] ಉತ್ಪತ್ತಿಗಿಂತ ಮೊದಲಿರುವ ಕಾರ್ಯವು ಈ ಪ್ರತಿಷೇಧದ ವಿಷಯವಾಗಲಾರದು, ಏಕೆಂದರೆ ಕಾರ್ಯವು ಹೇಗೆ ಕಾರಣರೂಪದ ಮೂಲಕವೇ 'ಸತ್' ಎನಿಸಿರುವುದೊ ಹಾಗೆಯೇ ಉತ್ಪತ್ತಿಗಿಂತ ಮೊದಲೂ 'ಸತ್' ಆಗಿದೆ ಎಂದು ನಿರ್ಧರಿಸಬೇಕು ಈಗಲೂ ಈ ಕಾರ್ಯವು ಕಾರಣರೂಪವನ್ನು ಬಿಟ್ಟು ಸ್ವತಂತ್ರವಾಗಿರುವುದಿಲ್ಲ, ಏಕೆಂದರೆ 'ಯಾವನು ಎಲ್ಲವನ್ನು ಆತ್ಮನಿಗಿಂತ ಭಿನ್ನವೆಂದು ಅರಿಯುತ್ತಾನೆಯೊ ಅವನನ್ನು ಎಲ್ಲವೂ ನಿರಾಕರಿಸುವುವು'[3] (ಬೃ ಉ ೨ ೪ ೬) ಎಂದು ಶ್ರುತಿಯು ಹೇಳುತ್ತದೆ

ವಿ.—ಕಾರ್ಯವಾದ ಜಗತ್ತಿಗಿಂತ ಕಾರಣನಾದ ಬ್ರಹ್ಮನು ವಿಲಕ್ಷಣನಾಗಿದ್ದರೆ ಕಾರ್ಯಕಾರಣಗಳು ಬೇರೆ ಬೇರೆ ದ್ರವ್ಯಗಳಾಗಿ ಕಾರಣನಾದ ಬ್ರಹ್ಮನಲ್ಲಿ ಕಾರ್ಯವಾದ ಜಗತ್ತು ಇರುವುದಿಲ್ಲ, ಎಂದರೆ ಅಸತ್ತಿನಿಂದ ಜಗತ್ತು ಉತ್ಪನ್ನವಾಗುತ್ತದೆ—ಎಂಬುದು ಪೂರ್ವಪಕ್ಷ ಇದು ಸರಿಯಲ್ಲ, ಏಕೆಂದರೆ ಕಾರ್ಯ ಕಾರಣಗಳಿಗೆ ಒಂದೇ ಲಕ್ಷಣವಿದೆ ಎಂಬುದನ್ನು ಪ್ರತಿಷೇಧಿಸಿದೆಯೇ ಹೊರತು ಕಾರಣಕ್ಕಿಂತ ಕಾರ್ಯವು ಭಿನ್ನವಾದ ದ್ರವ್ಯ

[1] ಅತೋ ಬ್ರಹ್ಮವಿಲಕ್ಷಣಸ್ಯಾಪಿ ಜಗತಸ್ತತ್ಕಾರ್ಯತ್ವಂ ಸಂಭವತಿ (ವೇ ದೀ).

* ಮಧ್ವಭಾಷ್ಯದ ಪ್ರಕಾರ ಈ ಸೂತ್ರದಿಂದ ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ) ೨ ೧ ೧೨) ಎಂಬ ಸೂತ್ರದ ವರೆಗೆ ಅಸದಧಿಕರಣ ಎನಿಸಿದೆ

[2] ಪ್ರತಿಷೇಧಮಾತ್ರಂ ಹೀದಂ ನಾಸ್ಯ ಪ್ರತಿಷೇಧಸ್ಯ ಪ್ರತಿಷೇಧ್ಯಮಸ್ತಿ (ಸೂ ಭಾ).

[3] ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದ ।

ವೆಂದು ಹೇಳಲಿಲ್ಲ. ಕಾರಣನಾದ ಬ್ರಹ್ಮನು ತನಗಿಂತ ವಿಲಕ್ಷಣವಾದ ಜಗದಾಕಾರದಿಂದ ಪರಿಣಮಿಸುತ್ತಾನೆಂಬ ಅಭಿಪ್ರಾಯವನ್ನು ನಾವು ಬಿಟ್ಟಿಲ್ಲ. ಚಿನ್ನಕ್ಕೂ ಚಿನ್ನದ ಆಭರಣಕ್ಕೂ ಭೇದವಿರುವಂತೆ ವೈಲಕ್ಷಣ್ಯವಿರಬಹುದು, ದ್ರವ್ಯವು ಒಂದೇ ಆಗಿರುತ್ತದೆ.[1]

ದ್ವೈ.—'ಅಸತ್ (ಪ್ರಾಕ್-ಅಭಾವ) ಜಗತ್ಕಾರಣವೆಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಅದು ಕೇವಲ ಪ್ರತಿಷೇಧವಾಗುವುದು' ಎಂಬುದು ಸೂತ್ರಾರ್ಥ.

'ಮೊದಲು ಅಸತ್ತೇ ಇತ್ತು'[2] (ಛಾಂ. ಉ. ೬. ೨. ೧), 'ಅಸತ್ತಿನಿಂದ ಸದ್ವಸ್ತುವು ಹುಟ್ಟಿತು'[3] (ಋ. ವೇ. ೧೦. ೭೨. ૩)—ಮೊದಲಾದ ವಾಕ್ಯಗಳಿಂದ ಶೂನ್ಯವು ಕಾರಣವು ಎಂದು ಅರ್ಥವನ್ನು ಮಾಡಿದರೆ ಅಂಥ ಅಭಿಪ್ರಾಯವು ಶ್ರುತಿಗೆ ವಿರೋಧವಾಗಿರುವುದರಿಂದ ಸೂತ್ರಕಾರರು ಉತ್ತರಿಸಿದ್ದಾರೆ. ಅಸತ್ ಅಥವಾ ಶೂನ್ಯವು ಜಗತ್ಕಾರಣವಾಗಿರಲಾರದು ; ಏಕೆಂದರೆ ಅದು ಎಲ್ಲವನ್ನೂ ಪ್ರತಿಷೇಧಿಸುತ್ತದೆ.[4] ಅಸತ್ತು ಸದ್ವಸ್ತುವಿಗೆ ಕಾರಣ ಎಂಬುದು ಶ್ರುತಿಪ್ರಾಪ್ತವಾಗಿದೆ—ಎಂಬ ಅಭಿಪ್ರಾಯವನ್ನು ಇಲ್ಲಿ ಖಂಡಿಸಿದೆ.

**ಅಪೀತೌ ತದ್ವತ್ಪ್ರಸಂಗಾದಸಮಂಜಸಮ್ ॥ ೮ ॥**

೮. ಪ್ರಲಯದಲ್ಲಿ (ಬ್ರಹ್ಮವು) ಅದರಂತೆ ಆಗಬೇಕಾಗುವುದರಿಂದ (ಬ್ರಹ್ಮ-ಕಾರಣ-ವಾದವು) ಅಸಮಂಜಸವು.

ಬ್ರಹ್ಮವು ಜಗತ್ಕಾರಣವೆಂಬ ವಾದಕ್ಕೆ ಇನ್ನೊಂದು ಆಕ್ಷೇಪವನ್ನು ಈ ಸೂತ್ರವು ತರುತ್ತದೆ : ಸ್ಥೂಲತ್ವ ಸಾವಯವತ್ವ ಅಚೇತನತ್ವ ಪರಿಚ್ಛಿನ್ನತ್ವ ಅಶುದ್ಧತ್ವ—ಮೊದಲಾದ ಧರ್ಮಗಳಿಂದ ಕೂಡಿದ ಕಾರ್ಯಕ್ಕೆ ಬ್ರಹ್ಮವು ಕಾರಣವೆಂದು ಒಪ್ಪಿಕೊಂಡರೆ, ಪ್ರಲಯಕಾಲದಲ್ಲಿ ಕಾರ್ಯವು ಕಾರಣದಲ್ಲಿ ಒಂದಾದಾಗ, ಕಾರ್ಯವು ತನ್ನ ಧರ್ಮಗಳಿಂದ ಕಾರಣವನ್ನು ಕೆಡಿಸುತ್ತದೆ. ಇದಲ್ಲದೆ ಲಯಕಾಲದಲ್ಲಿ ಭೇದಗಳೆಲ್ಲ ಅಭೇದವನ್ನು ಹೊಂದಿದಾಗ ನವಸೃಷ್ಟಿಯ ಕಾಲದಲ್ಲಿ ವಿಶೇಷ-ಕಾರಣಗಳೇ ಇಲ್ಲದಿರುವುದರಿಂದ ಭೋಕ್ತೃಭೋಗ್ಯ ಎಂಬ ವಿಭಾಗದಿಂದ ಮಾಡಿದ ನವಸೃಷ್ಟಿಯು ಉತ್ಪನ್ನವಾಗುವುದಿಲ್ಲ. ಮತ್ತೆ, ಪರಬ್ರಹ್ಮದಲ್ಲಿ ಅಭೇದವನ್ನು ಪಡೆಯುವ ಭೋಕ್ತೃಗಳ ಕರ್ಮವೇ ಮೊದಲಾದುವು ನಾಶವಾದಮೇಲೂ ಹೊಸ ಜಗತ್ತು ಉತ್ಪನ್ನವಾಗುತ್ತದೆಂದು ಒಪ್ಪಿಕೊಂಡರೂ ಮುಕ್ತರೂ ಕೂಡ ಪುನರ್ ಹುಟ್ಟಬೇಕಾಗುತ್ತದೆ! ಈ ಕಷ್ಟಗಳಿಂದ ತಪ್ಪಿಸಿಕೊಳ್ಳಲು 'ಪ್ರಲಯ

---

[1] ಕಾರಣಭೂತಂ ಬ್ರಹ್ಮೈವ ಸ್ವಸ್ಮಾದ್ ವಿಲಕ್ಷಣಜಗದಾಕಾರೇಣ ಪರಿಣಮತ ಇತ್ಯೇತತ್ತು ನ ಪರಿತ್ಯಕ್ತಮ್ । ಕ್ರಿಮಿಮಾಕ್ಷಿಕಯೋರಪಿ ಹಿ ಸತಿ ಚ ವೈಲಕ್ಷಣ್ಯೇ ಕುಂಡಲ-ಹಿರಣ್ಯಯೋರಿವ ದ್ರವ್ಯೈಕಮಸ್ತ್ಯೇವ (ಶ್ರೀಭಾಷ್ಯ).

[2] ಅಸದೇವೇದಮಗ್ರ ಆಸೀತ್ ।

[3] ಅಸತಃ ಸದಜಾಯತ ।

[4] ಪ್ರತಿಷೇಧಮಾತ್ರತ್ವಾನ್ನಾಸತಃ ಕಾರಣತ್ವಂ ಯುಕ್ತಮ್ (ಮ. ಭಾ.).

ದಲ್ಲಿಯೂ ಜಗತ್ತು ಬ್ರಹ್ಮಕ್ಕಿಂತ ಬೇರೆಯಾಗಿ ಉಳಿಯಲಿ' ಎಂದು ಹೇಳಿದರೆ, ಪ್ರಲಯವೇ ಆಗುವುದಿಲ್ಲ ಮತ್ತು ಕಾರ್ಯವು ಕಾರಣಕ್ಕಿಂತ ಅಭಿನ್ನವೆಂಬುದೂ ಆಗುವುದಿಲ್ಲ. ಆದುದರಿಂದ ವೇದಾಂತದರ್ಶನವು ಅಸಮಂಜಸವೇ.

ವಿ.—ಕಾರ್ಯ-ಕಾರಣಗಳ ದ್ರವ್ಯೈಕ್ಯವನ್ನು ಒಪ್ಪಿಕೊಂಡರೆ ಜಗತ್ತಿನ ಪ್ರಲಯ ಸೃಷ್ಟಿ ಮೊದಲಾದ ಅವಸ್ಥೆಗಳು ಪರಬ್ರಹ್ಮನಲ್ಲಿಯೇ ಇರುವುದರಿಂದ, ಜಗತ್ತಿನ ಅವಸ್ಥೆಗಳೆಲ್ಲ ಬ್ರಹ್ಮನಿಗೇ ಅನ್ವಯವಾಗಿ, ಅದರ ದೋಷಗಳು ಬ್ರಹ್ಮನಿಗೆ ಸಂಭವಿಸುತ್ತವೆ. ಹೀಗಾದರೆ, 'ಯಾವನು ಸರ್ವಜ್ಞನೊ ಸರ್ವವಿದನೊ'[1] (ಮುಂ ಉ. ೧. ೧. ೯), 'ಇವನು ಪಾಪರಹಿತನು, ಜರಾಮೃತ್ಯುಗಳಿಲ್ಲದವನು'[2] (ಛಾಂ. ಉ. ೮. ೧. ೫), 'ಅವನಿಗೆ ಶರೀರವಾಗಲಿ ಇಂದ್ರಿಯವಾಗಲಿ ಇಲ್ಲ'[3] (ಶ್ವೇ. ಉ. ೬. ೮)—ಮೊದಲಾದ ಶ್ರುತಿಗಳಲ್ಲಿ ಹೇಳಿರುವ ಪರಸ್ಪರ ವಿರುದ್ಧಧರ್ಮಗಳನ್ನು ಒಂದೇ ವಸ್ತುವಿಗೆ ಅನ್ವಯಿಸಬೇಕಾಗುತ್ತದೆ. ಮತ್ತೆ, ಪರಬ್ರಹ್ಮನು ತನ್ನ ಕಾರ್ಯ-ಕಾರಣಾವಸ್ಥೆಗಳಲ್ಲಿ ಚಿದಚಿದ್ವಸ್ತುಗಳನ್ನು ಶರೀರವಾಗಿ ಹೊಂದಿದ್ದಾನೆ, ದೋಷಗಳೆಲ್ಲ ಶರೀರಗತವಾಗಿರುತ್ತವೆ, ಶರೀರಿಯಾದ ಬ್ರಹ್ಮನ ಕಾರ್ಯ-ಕಾರಣಾವಸ್ಥೆಗಳಲ್ಲಿಯೂ ಅವು ಇರುವುದಿಲ್ಲ—ಎಂಬುದನ್ನೂ ನಾವು ಒಪ್ಪಿಕೊಳ್ಳುವುದಿಲ್ಲ; ಏಕೆಂದರೆ ಜಗತ್ತಿಗೂ ಪರಬ್ರಹ್ಮನಿಗೂ ಕಾರ್ಯ-ಕಾರಣ-ಸಂಬಂಧವಿರುವುದಿಲ್ಲ; ಅಂಥ ಸಂಬಂಧವಿದ್ದರೆ ಶರೀರದ ದೋಷಗಳು ಅವನಿಗೂ ಅಂಟಿಕೊಳ್ಳುತ್ತಿದ್ದುವು. ಚಿದಚಿದ್ವಸ್ತುಗಳು ಬ್ರಹ್ಮನಿಗೆ ಶರೀರವಾಗಲಾರವು; ಏಕೆಂದರೆ ಶರೀರವು ಕರ್ಮದಿಂದುಂಟಾಗುತ್ತದೆ; ಪರಮಾತ್ಮನು ಕರ್ಮರಹಿತನಾಗಿದ್ದಾನೆ. ಅವನಿಗೆ ಇಂದ್ರಿಯಗಳಾಗಲಿ ಪ್ರಾಣಗಳಾಗಲಿ ಇರುವುದಿಲ್ಲ- ಸ್ವತಃಸಿದ್ಧ-ನಿತ್ಯನಿರತಿಶಯಾನಂದ-ಸ್ವರೂಪನಾದ ಈಶ್ವರನಿಗೆ ಭೋಗಕ್ಕಾಗಿ ಚಿದಚಿದ್ವಸ್ತುಗಳನ್ನುಳ್ಳ ಶರೀರವು ಬೇಕಾಗಿರುವುದಿಲ್ಲ.

ಯಾವನ ಇಚ್ಛೆಗೆ ಸ್ವರೂಪ-ಸ್ಥಿತಿ-ಪ್ರವೃತ್ತಿಗಳು ಅಧೀನವಾಗಿವೆಯೊ ಅವು ಅವನ ಶರೀರವಾಗಿವೆ; ಎಲ್ಲರ ಸ್ವರೂಪ-ಸ್ಥಿತಿ-ಪ್ರವೃತ್ತಿಗಳು ಈಶ್ವರನ ಇಚ್ಛೆಗೆ ಅಧೀನವಾಗಿರುವುದರಿಂದ ಅವನಿಗೆ ಶರೀರವಿದೆ—ಎಂದೂ ಹೇಳಲಾಗುವುದಿಲ್ಲ; ಏಕೆಂದರೆ ಶರೀರದ ಸ್ವರೂಪವು ಅದಕ್ಕೆ ಸಂಬಂಧಿಸಿರುವ ಚೇತನನ ಇಚ್ಛೆಗೆ ಅಧೀನವಾಗಿವೆಯೆಂಬುದು ಸರಿಯಲ್ಲ. ಗಾಯಗೊಂಡ ಶರೀರವು ತನ್ನ ಪ್ರವೃತ್ತಿಯಲ್ಲಿ ಶರೀರಿಯ ಇಚ್ಛೆಗೆ ಒಳಗಾಗುವುದಿಲ್ಲ. ಮೃತಶರೀರವು ಅದರಲ್ಲಿ ವಾಸಿಸಿದ್ದ ಜೀವನನ್ನು ಅವಲಂಬಿಸುವುದಿಲ್ಲ. ಚೇತನನಾದ ಜೀವನು ಸೂತ್ರದ ಬೊಂಬೆಗಳನ್ನು ನಿಯಂತ್ರಿಸಬಹುದು; ಆದರೆ ಅವು ಅವನ ಶರೀರವಾಗುವುದಿಲ್ಲ. ಚೇತನನೂ ನಿತ್ಯನೂ ಆದ ಜೀವನ ಸ್ವರೂಪವು ಈಶ್ವರೇಚ್ಛೆಗೆ ಅಧೀನವಾಗಿಲ್ಲದಿರುವುದರಿಂದ ಅದು ಅವನ ಶರೀರವಾಗಲಾರದು. ಯಾವುದನ್ನು ನಿಯಮಿಸಬಹುದೊ, ಯಾವುದನ್ನು ಧರಿಸಿದ್ದೇವೆಯೊ, ಯಾವುದು ಶೇಷವಾಗಿದೆಯೊ ಅದು ಶರೀರ—ಎಂದೂ ಹೇಳ

[1] ಯಃ ಸರ್ವಜ್ಞಃ ಸರ್ವವಿತ್ ।

[2] ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ ।

[3] ನ ತಸ್ಯ ಕಾರಣಂ ಚ ವಿದ್ಯತೇ ।

ಲಾಗುವುದಿಲ್ಲ; ಏಕೆಂದರೆ ಈ ಲಕ್ಷಣವು ಕ್ರಿಯೆಗಳನ್ನು ತ್ಯಜಿಸಬೇಕಾಗುತ್ತದೆ. ಪುನಃ ಅನೇಕ ಶ್ರುತಿಗಳು ಈಶ್ವರನಿಗೆ ಶರೀರವಿಲ್ಲವೆಂದು ಹೇಳುತ್ತವೆ.

ದ್ವೈ.—ಜಗತ್ತು ಅಸತ್ತಿನಿಂದ ಹುಟ್ಟಿದ್ದರೆ, ಪ್ರಲಯಕಾಲದಲ್ಲಿ ವಸ್ತುಗಳು ತಮ್ಮ ಮೂಲರೂಪಕ್ಕೆ ಹಿಂತಿರುಗುವಾಗ ಅಸತ್ತೇ ಇರುತ್ತದೆ.[1] ಆದುದರಿಂದ ಜಗತ್ತನ್ನು ಅಭಾವವು ಸೃಷ್ಟಿಸಿದೆ—ಎಂಬ ಮತವು ಅಸಮಂಜಸವು.

## ನ ತು ದೃಷ್ಟಾಂತಭಾವಾತ್ ॥ ೯ ॥

೯. ಹಾಗಲ್ಲ; ಏಕೆಂದರೆ ದೃಷ್ಟಾಂತಗಳಿವೆ.

ಕಾರ್ಯವು ಕಾರಣದಲ್ಲಿ ಲಯವಾಗುವಾಗ ತನ್ನ ಧರ್ಮದಿಂದ ಕಾರಣವನ್ನು ಕೆಡಿಸೀತೆಂಬ ಪೂರ್ವಪಕ್ಷವು ನಮ್ಮ ಸಿದ್ಧಾಂತದ ದೂಷಣವಲ್ಲ; ಏಕೆಂದರೆ ದೃಷ್ಟಾಂತಗಳಿವೆ: ಮಣ್ಣಿನಿಂದ ಮಾಡಿದ ವಸ್ತುಗಳಿಗೆ ನಾನಾ ಬಗೆಯಾದ ಆಕಾರಗಳೂ ಪರಿಮಾಣಗಳೂ ಇವೆ; ಆದರೆ ಇವು ಪುನಃ ಮಣ್ಣೇ ಆದಾಗ ಅದನ್ನು ತಮ್ಮ ಧರ್ಮಗಳಿಂದ ಕೆಡಿಸುವುದಿಲ್ಲ. ಹೀಗೆಯೇ ಭೂಮಿಯಿಂದ ಹುಟ್ಟಿದ ಪ್ರಾಣಿಗಳು ಭೂಮಿಗೆ ಹಿಂದಿರುಗಿದಾಗ ತಮ್ಮ ಧರ್ಮಗಳನ್ನು ಅದಕ್ಕೆ ಸೋಂಕಿಸುವುದಿಲ್ಲ. ಇದಕ್ಕೆ ವಿರುದ್ಧವಾಗಿ ಪೂರ್ವಪಕ್ಷಿಗೆ ಯಾವ ದೃಷ್ಟಾಂತವೂ ಇಲ್ಲ. ಕಾರ್ಯವು ಕಾರಣದಲ್ಲಿ ತನ್ನ ಧರ್ಮದೊಂದಿಗೆ ಇದ್ದುಕೊಂಡರೆ ಪ್ರಲಯವೇ ಸಂಭವಿಸುವುದಿಲ್ಲ. ಕಾರ್ಯ-ಕಾರಣಗಳು ಅನನ್ಯವಾಗಿದ್ದರೂ ಕಾರ್ಯವು ಕಾರಣ-ರೂಪದಲ್ಲಿರುವುದೇ ಹೊರತು, ಕಾರಣವು ಕಾರ್ಯರೂಪದಲ್ಲಿರುವುದಿಲ್ಲ.[2] ಇದಲ್ಲದೆ ಎಲ್ಲ ಕಾಲಗಳಲ್ಲಿಯೂ ಕಾರ್ಯವು ಕಾರಣಕ್ಕಿಂತ ಬೇರೆಯಾಗಿರುವುದಿಲ್ಲ.[3] ಕಾರ್ಯವೂ ಅದರ ಧರ್ಮಗಳೂ ಅವಿದ್ಯೆಯಿಂದ ಅಧ್ಯಾರೋಪಿತವಾಗಿರುವುದರಿಂದ ಅವು ಕಾರಣವನ್ನು ಸ್ಥಿತಿಕಾಲದಲ್ಲಾಗಲಿ ಲಯಕಾಲದಲ್ಲಾಗಲಿ ಸೋಂಕಲಾರವು. ಗಾರುಡಿಗನು ಇತರರಿಗಾಗಿ ಹರಡಿರುವ ಮಾಯೆಯಿಂದ ತಾನು ಸೋಂಕಲ್ಪಡದಂತೆ ಅಥವಾ ಕನಸು ಕಂಡವನು ಕನಸಿನ ಮಾಯೆಯಿಂದ ತನ್ನ ಎಚ್ಚರ-ನಿದ್ರೆಗಳಲ್ಲಿ ಸೋಂಕಲ್ಪಡದಂತೆ ಅವಸ್ಥಾತ್ರಯ-ಸಾಕ್ಷಿಯಾದವನು ಅವಸ್ಥಾತ್ರಯದ ಸ್ಪರ್ಶವಿಲ್ಲದೆ ಇರುತ್ತಾನೆ. ಕತ್ತಲಿನಲ್ಲಿ ಹಗ್ಗವು ಹಾವಾಗಿ ಕಂಡುಬರುವಂತೆ ಪರಮಾತ್ಮನು

---

[1] ಅಸತ ಉತ್ಪತ್ತೌ ಪ್ರಲಯೇಽಪಿ ಸರ್ವಾಸತ್ತ್ವಮೇವ ಸ್ಯಾತ್ (ಮ. ಭಾ.).

[2] ಅನನ್ಯತ್ವೇಽಪಿ ಕಾರ್ಯಕಾರಣಯೋಃ ಕಾರ್ಯಸ್ಯ ಕಾರಣಾತ್ಮತ್ವಂ ನ ತು ಕಾರಣಸ್ಯ ಕಾರ್ಯಾತ್ಮತ್ವಮ್ 'ಆರಂಭಣಶಬ್ದಾದಿಭ್ಯಃ' ಇತಿ ವಕ್ಷ್ಯಾಮಃ (ಸೂ. ಭಾ.).

[3] 'ಇವೆಲ್ಲ—ಈ ಆತ್ಮನೇ' ಇದಂ ಸರ್ವಂ ಯದಯಮಾತ್ಮಾ (ಬೃ. ಉ. ೨. ೪. ೬); 'ಮುಂದಿರುವ ಇದು ಅಮೃತವಾದ ಬ್ರಹ್ಮವೇ' ಬ್ರಹ್ಮೈವೇದಮಮೃತಂ ಪುರಸ್ತಾತ್ (ಮುಂ. ಉ. ೨. ೨. ೧೨); ಆತ್ಮನೇ ಇದೆಲ್ಲವೂ ಆಗಿರುವನು' ಆತ್ಮೈವೇದಂ ಸರ್ವಮ್ (ಛಾಂ. ಉ. ೭. ೨೫. ೨) ಇತ್ಯಾದಿ.

ಅವಸ್ಥಾತ್ರಯದಲ್ಲಿ ಕಂಡುಬರುತ್ತಾನೆ. ಈ ವಿಷಯದಲ್ಲಿ ವೇದಾಂತಾರ್ಥದ ಸಂಪ್ರದಾಯವನ್ನು ತಿಳಿದ ಆಚಾರ್ಯರು ಹೀಗೆ ಹೇಳಿರುತ್ತಾರೆ: 'ಅನಾದಿಮಾಯೆಯಿಂದ ಸುಪ್ತನಾದ ಜೀವನು ಯಾವಾಗ ಎಚ್ಚರಗೊಳ್ಳುವನೊ ಆಗ ಅಜವೂ ನಿದ್ರಾಸ್ವಪ್ನರಹಿತವೂ ಆದ ಅದ್ವೈತವನ್ನು ಅರಿತುಕೊಳ್ಳುತ್ತಾನೆ'[1] (ಮಾಂ. ಕಾ. ೧. ೧೬).

ಪ್ರಲಯದಲ್ಲಿ ಎಲ್ಲ ಭೇದಗಳೂ ಹೋಗಿ ಅವಿಭಾಗವಾಗುವುದರಿಂದ ಹೊಸ ಜಗತ್ತು ಹುಟ್ಟಲು ಯಾವ ವಿಶೇಷಕಾರಣವೂ ಇಲ್ಲವೆಂಬ ಪೂರ್ವಪಕ್ಷದ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಇಲ್ಲಿಯೂ ದೃಷ್ಟಾಂತವಿದೆ; ಜೀವಾತ್ಮನು ಸುಷುಪ್ತಿಯಲ್ಲಿ ಅಥವಾ ಸಮಾಧಿಯಲ್ಲಿ ಭೇದವಿಲ್ಲದೆ ಲಯವನ್ನು ಹೊಂದಿದ್ದರೂ ಮಿಥ್ಯಾಜ್ಞಾನವು ಹೋಗದೆ ಇರುವುದರಿಂದ ಅವನು ಎಚ್ಚರಕ್ಕೆ ಬಂದಕೂಡಲೇ ಹಿಂದಿನಂತೆಯೇ ದ್ವೈತಭಾವವು ಪ್ರಕಟವಾಗುತ್ತದೆ.[2] ಹೀಗೆಯೇ ಪ್ರಲಯದಿಂದ ಹಿಂತಿರುಗಿದ ಜಗತ್ತೂ ಕೂಡ ಭೇದಭಾವವನ್ನು ಹೊಂದುತ್ತದೆ. ಆದರೆ ಮುಕ್ತರು ಪುನಃ ಹುಟ್ಟುವುದಿಲ್ಲ; ಏಕೆಂದರೆ ಸಮ್ಯಗ್ಜ್ಞಾನದಿಂದ ಇವರ ಮಿಥ್ಯಾಜ್ಞಾನವು ನಾಶವಾಗಿರುತ್ತದೆ.

ವಿ.—ಚಿದಚಿದ್ವಸ್ತುಗಳನ್ನು ಶರೀರವಾಗಿ ಉಳ್ಳ ಪರಬ್ರಹ್ಮನು ಅವುಗಳ ಆತ್ಮನಾಗಿರುವುದರಿಂದ ಸಂಕೋಚ-ವಿಕಾಸಗಳನ್ನುಳ್ಳ ಕಾರ್ಯ-ಕಾರಣವೆಂಬ ಅವಸ್ಥೆಗಳಿಗೆ ಸಂಬಂಧಿಸಿದ್ದಾನೆ; ಸಂಕೋಚ-ವಿಕಾಸಗಳು ಚಿದಚಿದ್ವಸ್ತುಗಳಿಗೆ ಅನ್ವಯವಾಗಿವೆಯೇ ಹೊರತು ಪರಬ್ರಹ್ಮನಿಗೆ ಸಂಬಂಧಿಸಿಲ್ಲ. ಶರೀರಗತವಾದ ದೋಷಗಳು ಪರಬ್ರಹ್ಮನನ್ನು ಸೋಂಕುವುದಿಲ್ಲ, ಪರಬ್ರಹ್ಮನ ಗುಣಗಳು ಶರೀರಕ್ಕೆ ಬರುವುದಿಲ್ಲ. ಇದಕ್ಕೆ ಉದಾಹರಣೆ: ದೇವ-ಮನುಷ್ಯಾದಿಗಳ ಶರೀರಕ್ಕೆ ಸಂಬಂಧಪಟ್ಟ ಬಾಲ್ಯ-ಯೌವನ-ವಾರ್ಧಕ್ಯಾದಿಗಳು ಆತ್ಮನಿಗೆ ಸಂಬಂಧಿಸಿಲ್ಲ; ಹೀಗೆಯೇ ಆತ್ಮಗತವಾದ ಜ್ಞಾನಸುಖಾದಿಗಳು ಶರೀರಕ್ಕೆ ಸಂಬಂಧಿಸಿಲ್ಲ.[3]

ಚಿದಚಿದ್ರೂಪವಾದ ಜಗತ್ತು ಸ್ಥೂಲಾವಸ್ಥೆಯಲ್ಲಾಗಲಿ ಸೂಕ್ಷ್ಮಾವಸ್ಥೆಯಲ್ಲಾಗಲಿ ಪರಮಾತ್ಮನಿಗೆ ಶರೀರಭಾವದಿಂದ ಇರಲಾರದೆಂಬ ಅಭಿಪ್ರಾಯವು ಸರಿಯಲ್ಲ. ಚೇತನಾ-

---

[1] ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।
ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥

[2] 'ಈ ಪ್ರಾಣಿಗಳೆಲ್ಲ ಸದ್ವಸ್ತುವಿನಲ್ಲಿ ಲಯವಾಗಿ "ಸದ್ವಸ್ತುವಿನಲ್ಲಿ ಲಯವಾಗಿರುವೆವು" ಎಂದು ಅರಿಯವು' ಇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ (ಛಾಂ. ಉ. ೬. ೯. ೨).

[3] ಚಿದಚಿದ್ವಸ್ತುಶರೀರತಯಾ ತದಾತ್ಮಭೂತಸ್ಯ ಪರಸ್ಯ ಬ್ರಹ್ಮಣಃ ಸಂಕೋಚ-ವಿಕಾಸಾತ್ಮಕಕಾರ್ಯಕಾರಣಭಾವಾವಸ್ಥಾದ್ವಯಾನ್ವಯೇಽಪಿ ನ ಕಶ್ಚಿದ್ವಿರೋಧಃ; ಯತಃ ಸಂಕೋಚವಿಕಾಸೌ ಪರಬ್ರಹ್ಮಶರೀರಭೂತಚಿದಚಿದ್ವಸ್ತುಗತೌ, ಶರೀರಗತಾಸ್ತು ದೋಷಾ ನಾತ್ಮನಿ ಪ್ರಸಜ್ಯಂತೇ, ಆತ್ಮಗತಾಶ್ಚ ಗುಣಾ ನ ಶರೀರೇ; ಯಥಾ ದೇವಮನುಷ್ಯಾದೀನಾಂ ಸಶರೀರಾಣಾಂ ಕ್ಷೇತ್ರಜ್ಞಾನಾಂ ಶರೀರಗತಾ ಬಾಲತ್ವಯುವತ್ವಸ್ಥವಿರತ್ವಾದಯೋ ನಾತ್ಮನಿ ಸಂಬಧ್ಯಂತೇ, ಆತ್ಮಗತಾಶ್ಚ ಜ್ಞಾನಸುಖಾದಯೋ ನ ಶರೀರೇ (ಶ್ರೀಭಾಷ್ಯ).

ಚೇತನವಾದ ಜಗತ್ತು ಪರಮಾತ್ಮನಿಗೆ ಶರೀರವಾಗಿದೆಯೆಂದು ಅನೇಕ ಶ್ರುತಿಗಳು ಹೇಳುತ್ತವೆ [1] ವ್ಯವಹಾರದಲ್ಲಿ ಗಡಿಗೆ ಎಂಬ ಶಬ್ದವನ್ನು ನಾವು ಒಂದೇ ಅರ್ಥದಲ್ಲಿ ಪ್ರಯೋಗಿಸುವಂತೆ ಶರೀರಶಬ್ದವನ್ನು ಪ್ರಯೋಗಿಸಿಲ್ಲ ಕರ್ಮಫಲದ ಭೋಗಕ್ಕೆ ಕಾರಣವಾದುದು ಶರೀರ—ಎಂಬ ಪೂರ್ವಪಕ್ಷಿಯ ಲಕ್ಷಣವು ಸರಿಯಲ್ಲ, ಏಕೆಂದರೆ ಈ ಲಕ್ಷಣವು ಈಶ್ವರನ ಶರೀರವೆನಿಸಿದ ಪೃಥಿವ್ಯಾದಿಗಳಿಗಾಗಲಿ ಅಥವಾ ಅವನ ಸ್ವೇಚ್ಛಾಶರೀರಗಳಿಗಾಗಲಿ ಅಥವಾ ಮುಕ್ತರ ಶರೀರಗಳಿಗಾಗಲಿ ಅನ್ವಯಿಸುವುದಿಲ್ಲ ಈ ಶರೀರಗಳು ಕರ್ಮಫಲಭೋಗಕ್ಕೆ ಉತ್ಪನ್ನವಾಗಿಲ್ಲ ಇದಲ್ಲದೆ ಪರಮಪುರುಷನ ಸ್ವೇಚ್ಛಾಶರೀರಗಳು ಪೃಥಿವ್ಯಾದಿಭೂತಗಳ ಸಂಘಾತವಿಶೇಷವಲ್ಲ [2] ಪಂಚವೃತ್ತಿಗಳುಳ್ಳ ಪ್ರಾಣಗಳನ್ನು ತನ್ನ ಜೀವನಕ್ಕಾಗಿ ಅವಲಂಬಿಸಿರುವುದು ಶರೀರವು—ಎಂಬ ಲಕ್ಷಣದಲ್ಲಿಯೂ ಅವ್ಯಾಪ್ತಿಯಿದೆ ಏಕೆಂದರೆ ಇದು ಸ್ಥಾವರಶರೀರಕ್ಕೆ ಅನ್ವಯಿಸುವುದಿಲ್ಲ ಸ್ಥಾವರಗಳಲ್ಲಿ ಪ್ರಾಣವಿದ್ದರೂ ಅದು ಪಂಚವೃತ್ತಿಯ ಮೂಲಕ ಶರೀರವನ್ನು ಧರಿಸುವುದಿಲ್ಲ ಇಂದ್ರಿಯಗಳಿಗೆ ಆಶ್ರಯವಾಗಿರುವುದು ಶರೀರ ಅಥವಾ ಸುಖ-ದುಃಖಗಳಿಗೆ ಕಾರಣವಾಗಿರುವುದು ಶರೀರ—ಎಂಬ ಲಕ್ಷಣವೂ ಸರಿಯಲ್ಲ ಏಕೆಂದರೆ ಇದು ಅಹಲ್ಯಾದಿಗಳಿಗೆ ಕರ್ಮದಿಂದುಂಟಾದ ಶಿಲಾಕಾಷ್ಠಾದಿಶರೀರಗಳಿಗೆ ಅನ್ವಯಿಸುವುದಿಲ್ಲ ಆದುದರಿಂದ ಶರೀರದ ಸರಿಯಾದ ಲಕ್ಷಣವು ಹೀಗಿದೆ ಚೇತನನಾದ ಜೀವನು ಯಾವ ದ್ರವ್ಯವನ್ನು ತನ್ನ ಪ್ರಯೋಜನಕ್ಕಾಗಿ ನಿಯಂತ್ರಿಸಬಲ್ಲನೊ ಧರಿಸಬಲ್ಲನೊ, ಯಾವುದು ಇವನಿಗೆ ಶೇಷವಾಗಿರುವುದೊ ಅದು ಶರೀರ [3] ಘಾಸಿಹೊಂದಿದ ಶರೀರದಲ್ಲಿ ನಿಯಮನಶಕ್ತಿಯು ಪ್ರತಿಬದ್ಧವಾಗಿದೆ, ಚೇತನನು ಶರೀರವನ್ನು ಬಿಟ್ಟಕೂಡಲೇ ಅದು ಕೊಳೆಯಲು ಪ್ರಾರಂಭಿಸುವುದು, ಅದು ಹಿಂದೆ ಶರೀರವೆನಿಸಿದ್ದ ಭೂತಸಂಘಾತದ ಒಂದು ಭಾಗವಾಗಿರುವುದರಿಂದ ಶರೀರವೆಂದು ಕರೆಯುತ್ತೇವೆ ಈ ಅರ್ಥದಲ್ಲಿ ಚೇತನಾಚೇತನವಸ್ತುಗಳೆಲ್ಲ ಪರಮಪುರುಷನ ಶರೀರವಾಗಿವೆ, ಏಕೆಂದರೆ ಅವನು ತನಗೆ ಶೇಷವಾಗಿರುವ ಇವೆಲ್ಲವನ್ನೂ ತನ್ನ ಪ್ರಯೋಜನಕ್ಕಾಗಿ ನಿಯಂತ್ರಿಸುತ್ತಾನೆ ಮತ್ತು ಧರಿಸುತ್ತಾನೆ [4] ಶ್ರುತಿಗಳು (ಕ ಉ ೧ ೨ ೨೨) ಅವನನ್ನು ಅಶರೀರಿಯೆಂದು ಹೇಳುವಾಗ ಕರ್ಮನಿಮಿತ್ತವಾದ ಶರೀರವನ್ನು ಮಾತ್ರ ಪ್ರತಿಷೇಧಿಸುತ್ತವೆ ಜಗತ್ತೇ ಅವನ ಶರೀರವೆಂದು ಶ್ರುತಿಗಳು ಸಾರುತ್ತವೆ

---

[1] 'ಯಾವನಿಗೆ ಪೃಥ್ವಿಯು ಶರೀರವೊ' ಯಸ್ಯ ಪೃಥಿವೀ ಶರೀರಮ್ (ಬೃ ಉ ೩ ೭ ೩) ಇತ್ಯಾದಿ

[2] ಪರಮಪುರುಷೇಚ್ಛಾವಿಗ್ರಹಾಶ್ಚ ನ ಪೃಥಿವ್ಯಾದಿಭೂತಸಂಘಾತವಿಶೇಷಾಃ (ಶ್ರೀಭಾಷ್ಯ).

[3] ಅತೋ ಯಸ್ಯ ಚೇತನಸ್ಯ ಯದ್ದ್ರವ್ಯಂ ಸರ್ವಾತ್ಮನಾ ಸ್ವಾರ್ಥೇ ನಿಯಂತುಂ-ಧಾರಯಿತುಂ ಚ ಶಕ್ಯಮ್, ತಚ್ಛೇಷತೈಕಸ್ವರೂಪಂ ಚ, ತತ್ತಸ್ಯ ಶರೀರಮಿತಿ ಶರೀರಲಕ್ಷಣ-ಮಾಸ್ಥೇಯಮ್ (ಶ್ರೀಭಾಷ್ಯ)

[4] ಅತಃ ಸರ್ವಂ ಪರಮಪುರುಷೇಣ ಸರ್ವಾತ್ಮನಾ ಸ್ವಾರ್ಥೇ ನಿಯಾಮ್ಯಂ ಧಾರ್ಯಂ ತಚ್ಛೇಷತೈಕಸ್ವರೂಪಮಿತಿ ಸರ್ವಂ ಚೇತನಾಚೇತನಂ ತಸ್ಯ ಶರೀರಮ್ (ಶ್ರೀಭಾಷ್ಯ)

ದ್ವೈ.—ಪ್ರಲಯದಲ್ಲಿ ಎಲ್ಲವೂ ಲಯವಾಗುವುವು ಎಂಬ ಅಭಿಪ್ರಾಯ ಸರಿಯಲ್ಲ, ಏಕೆಂದರೆ ಆಗಲೂ ಕೂಡ ವಸ್ತುಗಳ ಅಸ್ತಿತ್ವವನ್ನು ಅನುಮಾನಿಸಬಹುದು.[1] ಅಸ್ತಿತ್ವವಿರುವ ವಸ್ತುಗಳಿಂದಲೇ ಉತ್ಪತ್ತಿಯಾಗುವುದು ಮತ್ತು ನಾಶವು ತನ್ನ ಹಿಂದ ಶೇಷವನ್ನು ಬಿಡುತ್ತದೆ—ಎಂಬುದು ಲೋಕದಲ್ಲಿ ಕಂಡುಬರುತ್ತದೆ.

## ಸ್ವಪಕ್ಷದೋಷಾಚ್ಚ ॥ ೧೦ ॥

೧೦ ತನ್ನ ಪಕ್ಷದಲ್ಲಿಯೂ ದೋಷವಿರುವುದರಿಂದ (ಈ ಆಕ್ಷೇಪವು ಯುಕ್ತವಲ್ಲ)

ವೇದಾಂತಕ್ಕೆ ವಿರುದ್ಧವಾಗಿ ಹೇಳಿದ ದೋಷಗಳು ಪ್ರಧಾನವನ್ನು ಜಗತ್ಕಾರಣವೆಂದು ಹೇಳುವ ಸಾಂಖ್ಯವಾದಕ್ಕೂ ಅನ್ವಯಿಸುತ್ತವೆ ಮೊದಲನೆಯದಾಗಿ ಜಗತ್ತು ವಿಲಕ್ಷಣವಾಗಿರುವುದರಿಂದ ಬ್ರಹ್ಮದಿಂದ ಉತ್ಪನ್ನವಾಗಿಲ್ಲವೆಂಬ ಅಭಿಪ್ರಾಯವು ಸಾಂಖ್ಯಕ್ಕೂ ಸಮಾನವಾಗಿದೆ , ಏಕೆಂದರೆ ಶಬ್ದಾದಿಗುಣಗಳಿಲ್ಲದ ಪ್ರಧಾನದಿಂದ ಶಬ್ದಾದಿ ಗುಣಗಳುಳ್ಳ ಜಗತ್ತು ಹುಟ್ಟುತ್ತದೆ ಎಂದು ಸಾಂಖ್ಯರೂ ಹೇಳುತ್ತಾರೆ ಕಾರಣಕ್ಕಿಂತ ವಿಲಕ್ಷಣವಾದ ಕಾರ್ಯದ ಉತ್ಪತ್ತಿಯನ್ನು ಒಪ್ಪಿರುವುದರಿಂದ ಉತ್ಪತ್ತಿಗೆ ಮೊದಲು ಕಾರ್ಯವು ಅಸತ್ತಾಗಿರುವುದೆಂಬ ಪ್ರಸಂಗವು ಅವರಿಗೂ ಒದಗುತ್ತದೆ ಹೀಗೆಯೇ ಲಯದಲ್ಲಿ ಕಾರ್ಯವು ಕಾರಣಕ್ಕಿಂತ ಬೇರೆಯಾಗಿಲ್ಲದಿರುವುದರಿಂದ ಸಾಂಖ್ಯರ ಮತ್ತು ವೇದಾಂತಿಗಳ ಅಭಿಪ್ರಾಯಗಳು ಒಂದೇ ಆಗಿರುತ್ತವೆ ಪ್ರಲಯದಲ್ಲಿ ವಿಶೇಷಗಳೆಲ್ಲ ನಾಶವಾಗಿ, ವಿಕಾರಗಳು ಅವಿಭಾಗಸ್ಥಿತಿಯನ್ನು ಹೊಂದುವಾಗ ಪ್ರಲಯಕ್ಕೆ ಮೊದಲು ಜೀವರ ಸುಖದುಃಖಾದಿಗಳಿಗೆ ಕಾರಣವಾಗಿದ್ದ ನಿಯತಭೇದಗಳು ಹೊಸ ಸೃಷ್ಟಿಯಲ್ಲಿ ಹಾಗೆಯೇ ಇರಬೇಕೆಂದು ನಿರ್ಣಯಿಸಲು ಯಾವ ಕಾರಣವೂ ಇರುವುದಿಲ್ಲ ಯಾವ ಕಾರಣವೂ ಇಲ್ಲದೆ ಹೊಸ ಸೃಷ್ಟಿಯನ್ನು ಒಪ್ಪಿಕೊಂಡರೆ ಮುಕ್ತರಾದವರೂ ಪುನಃ ಹುಟ್ಟಬಹುದು ಮತ್ತೆ ಲಯದಲ್ಲಿ ಕೆಲವು ಭೇದಗಳು ಲಯಹೊಂದುವುದಿಲ್ಲ ಎಂದು ಹೇಳಿದರೆ ಲಯವಾಗದ ಭೇದಗಳು ಪ್ರಧಾನದ ಕಾರ್ಯವೇ ಆಗುವುದಿಲ್ಲ ಹೀಗೆ ದೋಷಗಳು ಎರಡು ಪಕ್ಷಗಳಿಗೂ ಸಮಾನವಾಗಿರುವುದರಿಂದ ಅವು ಒಂದು ಪಕ್ಷಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಆದುದರಿಂದ ಈ ದೋಷಗಳು ನಿಜವಾದುವಲ್ಲ ಎಂಬ ಅಭಿಪ್ರಾಯವು ದೃಢವಾಗುತ್ತದೆ

ವಿ.—ಬ್ರಹ್ಮಕಾರಣವಾದವು ನಿರ್ದುಷ್ಟವಾಗಿರುವುದರಿಂದಲೂ ಪ್ರಧಾನ ಕಾರಣವಾದವು ದೋಷಯುಕ್ತವಾಗಿರುವುದರಿಂದಲೂ ಸಾಂಖ್ಯಮತವನ್ನು ತ್ಯಜಿಸಿ ಬ್ರಹ್ಮಕಾರಣವಾದವನ್ನೇ ಒಪ್ಪಿಕೊಳ್ಳಬೇಕು ಪ್ರಧಾನಕಾರಣವಾದವು ಜಗತ್ಪ್ರವೃತ್ತಿಯನ್ನು ಸರಿ

[1] ಪ್ರಲಯೇ ಸರ್ವಾಸತ್ತ್ವಂ ಭಾವೇ ದೃಷ್ಟಾಂತಾಭಾವಾದೇವ ನ ಯುಜ್ಯತೇ (ಮ. ಭಾ )

ಯಾಗಿ ಮಂಡಿಸುವುದಿಲ್ಲ. ನಿರ್ವಿಕಾರನೂ ಚಿನ್ಮಾತ್ರೈಕರಸನೂ ಆದ ಪುರುಷನಿಗೆ ಪ್ರಕೃತಿಸಂನಿಧಾನದಿಂದ ಪ್ರಕೃತಿಧರ್ಮಗಳ ಅಧ್ಯಾಸವು ಉಂಟಾಗಿದೆ ; ಇದನ್ನು ಜಗತ್ಪ್ರವೃತ್ತಿಯು ಅವಲಂಬಿಸಿದೆ. ಈ ಸಂನಿಧಾನದ ಸ್ವರೂಪವೇನು ? ಪ್ರಕೃತಿಯಲ್ಲಿ ವಿಕಾರವು ಉಂಟಾಗುತ್ತದೆಯೆ ಅಥವಾ ಪುರುಷನಲ್ಲಿ ಉಂಟಾಗುತ್ತದೆಯೆ ? ಪುರುಷನಲ್ಲಿ ಸಾಧ್ಯವಿಲ್ಲ ; ಏಕೆಂದರೆ ಅವನು ನಿರ್ವಿಕಾರನು. ಪ್ರಕೃತಿಯಲ್ಲಿಯೂ ವಿಕಾರವು ಸಾಧ್ಯವಿಲ್ಲ ; ಏಕೆಂದರೆ ಸಾಂಖ್ಯತಂತ್ರದ ಪ್ರಕಾರ ಪ್ರಕೃತಿಯಲ್ಲುಂಟಾಗುವ ವಿಕಾರವು ಅಧ್ಯಾಸದ ಕಾರ್ಯವಾಗುತ್ತದೆಯೇ ಹೊರತು ಅದರ ಕಾರಣವಾಗುವುದಿಲ್ಲ. ಪ್ರಕೃತಿಯ ಕೇವಲ ಸದ್ಭಾವವು ಸಂನಿಧಾನವೆನಿಸಿದರೆ ಮುಕ್ತರಿಗೂ ಅಧ್ಯಾಸವುಂಟಾಗುವ ಪ್ರಸಂಗವಾದೀತು.

**ದ್ವೈತ.**—ಅಸದ್ವಾದಿಗಳ ಪಕ್ಷದಲ್ಲಿ ದೃಷ್ಟಾಂತವು ಇಲ್ಲದಿರುವುದರಿಂದ ಪ್ರಲಯದಲ್ಲಿ ಅಸತ್ತನ್ನು ಅಂಗೀಕರಿಸಲು ಸಾಧ್ಯವಿಲ್ಲ.

**ತರ್ಕಾಪ್ರತಿಷ್ಠಾನಾದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯವಿಮೋಕ್ಷಪ್ರಸಂಗಃ * ॥ ೧೧ ॥**

೧೧. ತರ್ಕವು ಅಪ್ರತಿಷ್ಠಿತವಾಗಿರುವುದರಿಂದಲೂ (ಆಗಮಗಮ್ಯವಾದ ವಿಷಯದಲ್ಲಿ ಕೇವಲ ತರ್ಕವನ್ನು ಆಶ್ರಯಿಸಕೂಡದು). ಬೇರೆ ಪ್ರಕಾರವಾಗಿ ಅನುಮಾನಿಸಬೇಕೆಂದು ಹೇಳಿದರೆ ಹಾಗೂ ಅವಿಮೋಕ್ಷದ ಪ್ರಸಂಗವು ಬರುವುದು.

ಆಗಮಗಮ್ಯವಾದ ವಿಷಯದಲ್ಲಿ ಕೇವಲ ತರ್ಕಬಲವನ್ನು ಆಶ್ರಯಿಸಕೂಡದು. ತರ್ಕವು ವೈಯಕ್ತಿಕ ಅಭಿಪ್ರಾಯವನ್ನು ಅವಲಂಬಿಸಿದೆ. ಒಬ್ಬ ಬುದ್ಧಿವಂತನ ವಾದವನ್ನು ಇನ್ನೊಬ್ಬನು ಖಂಡಿಸಬಹುದು. ಹೀಗೆ ಮನುಷ್ಯರಲ್ಲಿ ಭಿನ್ನಾಭಿಪ್ರಾಯಗಳಿರುವುದರಿಂದ ತರ್ಕವು ಸರಿಯಾದ ಅವಲಂಬನವಲ್ಲ. ಇದಲ್ಲದೆ ಶಾಸ್ತ್ರಕಾರರಾದ ಕಪಿಲ-ಕಣಾದರು ಪರಸ್ಪರ ಖಂಡಿಸಿರುವುದು ಕಂಡುಬರುತ್ತದೆ.

**ಪೂರ್ವಪಕ್ಷಿ**—ಈಗ ನಾವು ಬೇರೆ ಪ್ರಕಾರವಾಗಿ ಅನುಮಾನಿಸುತ್ತೇವೆ: ಪ್ರತಿಷ್ಠೆಯಿರುವ ತರ್ಕವೇ ಇಲ್ಲವೆಂದು ಹೇಳಲಾಗುವುದಿಲ್ಲ: ಏಕೆಂದರೆ ಇದೂ ಕೂಡ ತರ್ಕದಿಂದಲೇ ತಿಳಿದುಬಂದಿದೆ. ಕೆಲವು ತರ್ಕಗಳಿಗೆ ಪ್ರತಿಷ್ಠೆಯಿಲ್ಲದಿದ್ದರೆ ಅದೇ ಜಾತಿಯ ಬೇರೆ ತರ್ಕಗಳಿಗೂ ಪ್ರತಿಷ್ಠೆಯಿಲ್ಲವೆಂದು ನೀವು ಕಲ್ಪಿಸಿದ್ದೀರಿ. ಯಾವ ತರ್ಕಕ್ಕೂ ಪ್ರತಿಷ್ಠೆಯಿಲ್ಲದಿದ್ದರೆ ಲೋಕವ್ಯವಹಾರವೇ ನಿಂತುಹೋಗುತ್ತದೆ. ಮನುಷ್ಯರು ಭೂತ-ವರ್ತಮಾನ-ಕಾಲಗಳ ಹೋಲಿಕೆಯಿಂದ ಭವಿಷ್ಯದಲ್ಲಿ ಸುಖಪ್ರಾಪ್ತಿಗೂ ದುಃಖಪರಿ

---

* ಇದು ಶ್ರೀಭಾಷ್ಯದಲ್ಲಿ ತರ್ಕಾಪ್ರತಿಷ್ಠಾನಾದಪಿ, ಅನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ಎಂದು ಎರಡು ಸೂತ್ರಗಳಾಗಿದೆ.

ಹಾರಕ್ಕೂ ಪ್ರವರ್ತಿಸುತ್ತಿರುವುದು ಕಂಡುಬರುತ್ತದೆ. ಶ್ರುತ್ಯರ್ಥದ ವಿಷಯದಲ್ಲಿ ವಿರುದ್ಧಾಭಿಪ್ರಾಯವುಂಟಾದಾಗ ಅರ್ಥಾಭಾಸವನ್ನು ನಿರಾಕರಿಸಿ ಸರಿಯಾದ ಅರ್ಥವನ್ನು ನಿರ್ಧರಿಸುವುದು ವಾಕ್ಯತಾತ್ಪರ್ಯವನ್ನು ಪರೀಕ್ಷಿಸುವ ರೂಪದಿಂದಲೇ ಆಗತಕ್ಕದ್ದಾಗಿದೆ. ಶ್ರುತಿಗೆ ಅವಿರುದ್ಧವಾಗಿ ತರ್ಕದ ಸಹಾಯದಿಂದ ಧರ್ಮವನ್ನು ಅರಿತುಕೊಳ್ಳಬೇಕೆಂದು ಮನುವು ಹೇಳಿರುತ್ತಾನೆ (೧೨ ೧೦೫. ೧೦೬). ತರ್ಕಕ್ಕೆ ಪ್ರತಿಷ್ಠೆಯಿಲ್ಲವೆಂಬುದೇ ಅವರ ಅಲಂಕಾರವಾಗಿದೆ : ಏಕೆಂದರೆ ಹೀಗಾದರೆ ಮಾತ್ರ ದೋಷಯುಕ್ತವಾದ ತರ್ಕ ವನ್ನು ಬಿಟ್ಟು ನಿರವದ್ಯವಾದ ತರ್ಕವನ್ನು ಪಡೆಯಬಹುದು.

ಸಿದ್ಧಾಂತಿ—ಹೀಗಾದರೂ ಅನಿರ್ಮೋಕ್ಷದ ಪ್ರಸಂಗವೊದಗುತ್ತದೆ : ಏಕೆಂದರೆ ಇತರ ವಿಷಯಗಳಲ್ಲಿ ತರ್ಕದ ಪ್ರತಿಷ್ಠೆಯಿರಬಹುದು, ಆದರೆ ಪ್ರಕೃತವಿಷಯದಲ್ಲಿ ತರ್ಕಕ್ಕೆ ಪ್ರತಿಷ್ಠೆಯಿಲ್ಲವೆಂಬ ದೋಷದಿಂದ ಅದಕ್ಕೆ ಪರಿಹಾರವೇ ಇರುವುದಿಲ್ಲ. ಅತಿಗಂಭೀರವೂ ಮುಕ್ತಿಗೆ ಕಾರಣವೂ ಆದ ವಸ್ತುಯಾಥಾತ್ಮ್ಯವನ್ನು ಆಗಮದ ಸಹಾಯವಿಲ್ಲದೆ ಊಹಿಸುವುದಕ್ಕೂ ಸಾಧ್ಯವಿಲ್ಲ ;[1] ಏಕೆಂದರೆ ಈ ಪರಮವಸ್ತುವು ರೂಪಾದಿಗಳಿಲ್ಲದುದ ರಿಂದ ಪ್ರತ್ಯಕ್ಷಕ್ಕೆ ವಿಷಯವಲ್ಲ, ಲಿಂಗಾದಿಗಳಿಲ್ಲದುದರಿಂದ ಅನುಮಾನಾದಿಗಳಿಗೂ ವಿಷಯ ವಲ್ಲ.

ಇದಲ್ಲದೆ ಸಮ್ಯಗ್‌ಜ್ಞಾನದಿಂದ ಮೋಕ್ಷವಾಗುವುದೆಂದು ಮೋಕ್ಷವಾದಿಗಳೆಲ್ಲ ಒಪ್ಪಿ ಕೊಂಡಿರುತ್ತಾರೆ. ಸಮ್ಯಗ್‌ಜ್ಞಾನವು ವಸ್ತುತಂತ್ರವಾಗಿರುವುದರಿಂದ ಒಂದೇ ರೂಪ ದಲ್ಲಿರುತ್ತದೆ. ಏಕರೂಪದಿಂದಿರುವ ವಸ್ತುವೇ ಪರಮಾರ್ಥವೆನಿಸುವುದು. ಲೋಕದಲ್ಲಿ ಅದರ ವಿಷಯವಾದ ಜ್ಞಾನವೇ ನಿಜವಾದ ಜ್ಞಾನವೆನಿಸುವುದು. ಉದಾಹರಣೆಗೆ 'ಅಗ್ನಿಯು ಉಷ್ಣ' ಎಂಬ ಜ್ಞಾನದಂತೆ.[2] ಹೀಗಿರುವಾಗ ಸಮ್ಯಗ್‌ಜ್ಞಾನದ ವಿಷಯದಲ್ಲಿ ವಿರುದ್ಧಾಭಿಪ್ರಾಯವುಂಟಾಗಲಾರದು. ಆದರೆ ತರ್ಕಜ್ಞಾನದ ವಿಷಯದಲ್ಲಿ ಪರಸ್ಪರ ವಿರೋಧವು ಪ್ರಸಿದ್ಧವಾಗಿರುತ್ತದೆ. ಒಬ್ಬ ತಾರ್ಕಿಕನು ಸಮ್ಯಗ್‌ಜ್ಞಾನವೆಂದು ಪ್ರತಿ ಪಾದಿಸಿದುದನ್ನು ಇನ್ನೊಬ್ಬನು ಖಂಡಿಸಬಹುದು. ಏಕರೂಪದಲ್ಲಿರದ ವಿಷಯವುಳ್ಳ ತರ್ಕಜ್ಞಾನವು ಹೇಗೆ ಸಮ್ಯಗ್‌ಜ್ಞಾನವಾಗುವುದು ? ತರ್ಕವಾದಿಗಳಲ್ಲಿ ಪ್ರಧಾನವಾದಿಯು ಶ್ರೇಷ್ಠನೆಂದು ತಾರ್ಕಿಕರೆಲ್ಲರೂ ಒಪ್ಪಿಕೊಂಡಿಲ್ಲ. ವೇದವು ನಿತ್ಯವಾಗಿರುವುದರಿಂದಲೂ ವಿಜ್ಞಾನೋತ್ಪತ್ತಿಗೆ ಕಾರಣವಾಗಿರುವುದರಿಂದಲೂ ವ್ಯವಸ್ಥಿತವಾದ ವಸ್ತುಗಳೇ ಅದರ ವಿಷಯವಾಗಿರುತ್ತವೆ ; ಈ ಸಮ್ಯಗ್‌ಜ್ಞಾನವನ್ನು ನಿರಾಕರಿಸಲು ಯಾವ ತಾರ್ಕಿಕನಿಗೂ ಸಾಧ್ಯವಿಲ್ಲ. ಆದುದರಿಂದ ಔಪನಿಷದಜ್ಞಾನವೇ ಸಮ್ಯಗ್‌ಜ್ಞಾನವೆಂಬುದು ಸಿದ್ಧ.

---

[1] ನ ಹೀದಮತಿಗಂಭೀರಂ ಭಾವಯಾಥಾತ್ಮ್ಯಂ ಮುಕ್ತಿನಿಬಂಧನಮಾಗಮ-ಮಂತರೇಣೋತ್ಪ್ರೇಕ್ಷಿತುಮಪಿ ಶಕ್ಯಮ್ (ಸೂ. ಭಾ.).

[2] ತಚ್ಚ ಸಮ್ಯಗ್‌ಜ್ಞಾನಮೇಕರೂಪಂ ವಸ್ತುತಂತ್ರತ್ವಾತ್ । ಏಕರೂಪೇಣ ಹ್ಯವಸ್ಥಿತೋ ಯೋಽರ್ಥಃ ಸ ಪರಮಾರ್ಥಃ । ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್‌ಜ್ಞಾನಮಿತ್ಯುಚ್ಯತೇ ಯಥಾಗ್ನಿರುಷ್ಣ ಇತಿ (ಸೂ. ಭಾ.).

ಇದನ್ನು ಬಿಟ್ಟರೆ ಬೇರೆ ಸಮ್ಯಗ್‌ಜ್ಞಾನವಿಲ್ಲ, ಸಂಸಾರದಿಂದ ಮೋಕ್ಷವೂ ಆಗುವುದಿಲ್ಲ ಆಗಮವಶದಿಂದಲೂ ಆಗಮಾನುಸಾರಿಯಾದ ತರ್ಕದ ವಶದಿಂದಲೂ ಚೇತನವಾದ ಬ್ರಹ್ಮವೇ ಜಗತ್ಕಾರಣವೂ ಪ್ರಕೃತಿಯೂ ಆಗಿದೆ

ವಿ.—ತರ್ಕಾಪ್ರತಿಷ್ಠಾನಾದಪಿ ॥ ೨ ೧ ೧೧ ॥

ತರ್ಕವು ಅಪ್ರತಿಷ್ಠಿತವಾಗಿರುವುದರಿಂದಲೂ (ಪ್ರಧಾನ-ಕಾರಣವಾದವು ಗ್ರಾಹ್ಯವಲ್ಲ) ಕೇವಲ ತರ್ಕಕ್ಕ ಪ್ರತಿಷ್ಠೆಯಿಲ್ಲದಿರುವುದರಿಂದ ಶ್ರುತಿಯೇ ಮೂಲವಾಗಿರುವ ಬ್ರಹ್ಮಕಾರಣವಾದವನ್ನು ಮಾತ್ರ ಒಪ್ಪಿಕೊಳ್ಳಬೇಕೇ ಹೊರತು ಪ್ರಧಾನಕಾರಣವಾದವನ್ನಲ್ಲ ಬುದ್ಧ, ಕಣಾದ ಅಕ್ಷಪಾದ, ಜಿನ, ಕಪಿಲ, ಪತಂಜಲಿ—ಇವರ ಪರಸ್ಪರ ವಿರುದ್ಧವಾದ ವಾದಗಳಿಂದ ತರ್ಕದ ಅಪ್ರತಿಷ್ಠೆಯು ತಿಳಿದುಬರುತ್ತದೆ

ಅನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ॥ ೨ ೧ ೧೨ ॥

ಪುರುಷಬುದ್ಧಿಯನ್ನು ಅವಲಂಬಿಸಿರುವ ತರ್ಕವು ಯಾವುದೋ ದೇಶದಲ್ಲಿ ಯಾವುದೂ ಕಾಲದಲ್ಲಿ ಅದಕ್ಕಿಂತ ಅಧಿಕವಾದ ಕುತರ್ಕಕುಶಲತೆಯಿಂದ ಖಂಡಿಸಲ್ಪಡಬಹುದು ಆದುದರಿಂದ ಪ್ರತಿಷ್ಠೆಯಿಲ್ಲದ ತರ್ಕದ ದೋಷವನ್ನು ಪರಿಹರಿಸಿಕೊಳ್ಳುವುದು ಅಸಾಧ್ಯವಾಗಿದೆ ಅತೀಂದ್ರಿಯವಿಷಯಗಳಲ್ಲಿ ಶಾಸ್ತ್ರವೇ ಪ್ರಮಾಣವು ಶಾಸ್ತ್ರಕ್ಕೆ ಬೆಂಬಲ ಕೊಡಲು ಮಾತ್ರ ತರ್ಕವು ಉಪಯುಕ್ತವಾಗಿರುತ್ತದ[1] 'ಯಾವನು ಋಷಿಗಳ ಉಪದೇಶವನ್ನೂ ಧರ್ಮವನ್ನೂ ವೇದಕ್ಕ ವಿರುದ್ಧವಲ್ಲದ ತರ್ಕದಿಂದ ಬೆಂಬಲಕೊಡುವನೋ ಅವನೇ ವೇದವನ್ನು ಬಲ್ಲವನು, ಇನ್ನೊಬ್ಬನಲ್ಲ'[2] ಎಂದು ಮನುವು (೧೨ ೧೦೬) ಹೇಳಿರುತ್ತಾನೆ ಆದುದರಿಂದ ವೇದವಿರುದ್ಧವಾದ ಸಾಂಖ್ಯಸ್ಮೃತಿಯನ್ನು ವೇದಾರ್ಥವನ್ನು ವಿಶದೀಕರಿಸುವುದಕ್ಕಾಗಲಿ ಅಥವಾ ನಿರ್ಧರಿಸುವುದಕ್ಕಾಗಲಿ ಉಪಯೋಗಿಸಕೂಡದು

ದ್ವೈ.—"ತರ್ಕವು ಇಲ್ಲಿಯವರೆಗೆ, ಮುಂದೆ ಹೋಗಲು ಆಗುವುದಿಲ್ಲ"—ಎಂದು ತರ್ಕಕ್ಕೆ ಮಿತಿಯನ್ನು ಕಲ್ಪಿಸಲು ಯಾರಿಗೂ ಆಗುವುದಿಲ್ಲ. ಆದುದರಿಂದ ವಾದವನ್ನು ಒಂದು ಪ್ರಕಾರವಾಗಿ ಮಾಡಿದರೆ ಅದಕ್ಕೆ ವಿರುದ್ಧವಾಗಿ ಅನುಮಾನಿಸಬಹುದು' ಎಂಬ ಪೂರ್ವಪಕ್ಷದ ಅಭಿಪ್ರಾಯವನ್ನು ಒಪ್ಪಿಕೊಳ್ಳಲು ಆಗುವುದಿಲ್ಲ ಹಾಗಾದರೆ ಪ್ರಮಾಣಸಿದ್ಧವಾದ ಮೋಕ್ಷವು ಇಲ್ಲವೆಂದಾಗುವುದು, ಏಕೆಂದರೆ ಅದಕ್ಕೆ ವಿರುದ್ಧವಾಗಿ ಅನುಮಾನಿಸಬಹುದು ಆದುದರಿಂದ ಯಾವುದು ಪ್ರಮಾಣಸಿದ್ಧವೊ ಅದನ್ನೇ ಅಂಗೀಕರಿಸಬೇಕು,[3] ಇನ್ನೇನನ್ನೂ ಅನುಮಾನಿಸಕೂಡದು.

---

[1] ಅತೋಽತೀಂದ್ರಿಯೇಽರ್ಥೇ ಶಾಸ್ತ್ರಮೇವ ಪ್ರಮಾಣಮ್, ತದುಪಬೃಂಹಣಾಯೈವ ತರ್ಕ ಉಪಾದೇಯಃ (ಶ್ರೀಭಾಷ್ಯ)

[2] ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।
ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥

[3] ಅತೋ ಯಾವತ್ಪ್ರಮಾಣಸಿದ್ಧಂ ತಾವದೇವಾಂಗೀಕರ್ತವ್ಯಮ್ (ಮ. ಭಾ).

## ೪. ಶಿಷ್ಟಾಪರಿಗ್ರಹಾಧಿಕರಣ

**ಏತೇನ ಶಿಷ್ಟಾಽಪರಿಗ್ರಹಾ ಅಪಿ ವ್ಯಾಖ್ಯಾತಾಃ ॥ ೧೨ ॥**

೧೨. ಇದರಿಂದ ಶಿಷ್ಟರು ಪರಿಗ್ರಹಿಸದ (ವಾದಗಳನ್ನೆಲ್ಲ) ವ್ಯಾಖ್ಯಾನ ಮಾಡಿದಂತೆ ಆಯಿತು.

ಇದುವರೆಗೆ ವೇದಾಂತದರ್ಶನಕ್ಕೆ ಅತಿ ಸಮೀಪದಲ್ಲಿರುವ, ಗುರುತರತರ್ಕಬಲದಿಂದ ಕೂಡಿರುವ, ಕೆಲವು ಅಂಶಗಳಲ್ಲಿ ಶಿಷ್ಟರಿಂದ ಪರಿಗೃಹೀತವಾದ ಸಾಂಖ್ಯರ ಪ್ರಧಾನ-ಕಾರಣ-ವಾದವನ್ನು ಖಂಡಿಸಿದ್ದಾಯಿತು. ಈಗ ಅಲ್ಪಬುದ್ಧಿಯುಳ್ಳ ಕೆಲವರು ಅಣ್ವಾದಿ-ವಾದಗಳನ್ನು ಆಶ್ರಯಿಸಿ ವೇದಾಂತಕ್ಕೆ ವಿರುದ್ಧವಾದ ಆಕ್ಷೇಪಗಳನ್ನು ಮಾಡಬಹುದೆಂದು ಭಾವಿಸಬಹುದು ದೊಡ್ಡ ಶತ್ರುವನ್ನು ಗೆದ್ದಮೇಲೆ ಸಣ್ಣ ಶತ್ರುವನ್ನೂ ಗೆದ್ದಂತೆಯೇ ಆಯಿತೆಂಬ ನ್ಯಾಯದಂತೆ ಸೂತ್ರಕಾರರು ಸಾಂಖ್ಯರ ಖಂಡನೆಯನ್ನೇ ಅಣ್ವಾದಿ-ವಾದಿಗಳ ತರ್ಕಕ್ಕೂ ಅನ್ವಯಿಸುತ್ತಾರೆ.

ಅಣ್ವಾದಿ-ಕಾರಣ-ವಾದಗಳಲ್ಲಿ ಶಿಷ್ಟರಾದ ಮನು ವ್ಯಾಸ ಮೊದಲಾದವರು ಯಾವ ಅಂಶವನ್ನೂ ಪರಿಗ್ರಹಿಸದೆ ಇರುವುದರಿಂದೆ ಪ್ರಧಾನಕಾರಣವಾದವನ್ನು ನಿರಾಕರಿಸಲು ಯಾವ ಪರಿಹಾರವನ್ನು ಹೇಳಿದೆಯೊ ಅದರಿಂದಲೇ ಇವನ್ನೂ ನಿರಾಕರಿಸಿದಂತಾಯಿತು ; ಏಕೆಂದರೆ ನಿರಾಕರಣದ ವಾದಗಳು ಸಮಾನವಾಗಿವೆ. ಅವು ಯಾವುವೆಂದರೆ : (೧) ಪರಮಗಂಭೀರವಾದ ಜಗತ್ಕಾರಣವು ತರ್ಕಕ್ಕೆ ನಿಲುಕತಕ್ಕದ್ದಲ್ಲ, (೨) ತರ್ಕದ ಅಪ್ರತಿಷ್ಠೆ, (೩) ಅನ್ಯಥಾನುಮಾನದಿಂದ ವಿಮೋಕ್ಷವಿಲ್ಲದಿರುವುದು ಮತ್ತು (೪) ಆಗಮವಿರೋಧ.

ವಿ.—'ಇದರಿಂದ (ವೇದದಲ್ಲಿ) ಪರಿಗೃಹೀತವಾಗದ ಉಳಿದ (ವಾದಗಳನ್ನೂ) ವ್ಯಾಖ್ಯಾನಮಾಡಿದಂತೆ ಆಯಿತು' ಎಂಬುದು ಸೂತ್ರಾರ್ಥ.

ವೇದದಲ್ಲಿ ಅಪರಿಗೃಹೀತವಾದ ಸಾಂಖ್ಯಪಕ್ಷದ ನಿರಾಕರಣದಿಂದ ಕಣಾದ ಅಕ್ಷಪಾದ ಜಿನ ಬುದ್ಧ ಮೊದಲಾದವರ ಉಳಿದ ಅವೈದಿಕವಾದಗಳನ್ನೂ ನಿರಾಕರಿಸಿದಂತೆಯೇ ಆಯಿತು. ತರ್ಕಗಳಿಗೆ ನಿಜವಾದ ಪ್ರತಿಷ್ಠೆಯಿಲ್ಲದಿರುವುದರಿಂದ ಕೇವಲ ತರ್ಕವನ್ನವ ಲಂಬಿಸಿರುವ ಯಾವ ವಾದವನ್ನೂ ಒಪ್ಪಿಕೊಳ್ಳಲು ಆಗುವುದಿಲ್ಲ. ಪರಮಾಣುಕಾರಣ ವಾದಿಗಳಲ್ಲೇ ಭಿನ್ನಾಭಿಪ್ರಾಯಗಳಿವೆ : ಒಬ್ಬನು ಅಣುವು ಶೂನ್ಯ ಅದ್ರವ್ಯ ಎಂದು ಹೇಳಿದರೆ ಮತ್ತೊಬ್ಬನು ಅದು ಅಸ್ತಿತ್ವವುಳ್ಳ ದ್ರವ್ಯ ಎಂದು ಕರೆಯುತ್ತಾನೆ. ಇವರ ವಾದಗಳೆಲ್ಲ ತಪ್ಪೆಂದು ಇವರಿವರ ಭಿನ್ನಾಭಿಪ್ರಾಯಗಳಿಂದಲೇ ತಿಳಿದುಬರುತ್ತದೆ.

ದ್ವೈ.—ಸತ್ಕಾರಣತ್ವವಿಷಯದಲ್ಲಿ ದೃಷ್ಟಾಂತವಿರುವುದರಿಂದಲೂ ಪರಪಕ್ಷದಲ್ಲಿ ದೃಷ್ಟಾಂತವಿಲ್ಲದಿರುವುದರಿಂದಲೂ 'ಜಗತ್ತಿಗೆ ಕರ್ತೃವಿಲ್ಲ, ಅಚೇತನವು ಕರ್ತೃ, ಜೀವನು ಕರ್ತೃ' ಇವೇ ಮೊದಲಾದ ವೇದವಿರುದ್ಧವಾದ ಉಳಿದ ಮತಗಳನ್ನೂ ನಿರಾಕರಿಸಿದಂತೆಯೇ ಆಯಿತು.

## ೫. ಭೋಕ್ತ್ರಾಪತ್ತ್ಯಧಿಕರಣ

**ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ॥ ೧೩ ॥**

೧೩. ಭೋಕ್ತೃವು (ಭೋಗ್ಯತ್ವವನ್ನು ಹೊಂದಿದರೆ) ಅಭೇದವು ಉಂಟಾಗುವುದು—ಎಂದು ಹೇಳಿದರೆ ಲೋಕದಲ್ಲಿರುವಂತೆ (ಭೇದವು) ಇರಬಹುದು (ಎಂಬುದು ನಮ್ಮ ಉತ್ತರ).

**ಪೂರ್ವಪಕ್ಷ**—ಭೋಕ್ತೃಗಳೆಂದರೆ ಚೇತನರಾದ ಜೀವಾತ್ಮರು, ಭೋಗ್ಯಗಳೆಂದರೆ ಶಬ್ದವೇ ಮೊದಲಾದ ವಿಷಯಗಳು ; ಈ ಭೋಕ್ತೃ-ಭೋಗ್ಯಗಳ ವಿಭಾಗವು ಲೋಕದಲ್ಲಿ ಪ್ರಸಿದ್ಧವಾಗಿದೆ. ಭೋಕ್ತೃವು ಭೋಗ್ಯತ್ವವನ್ನು ಹೊಂದಿದರೆ ಅಥವಾ ಭೋಗ್ಯವು ಭೋಕ್ತೃತ್ವವನ್ನು ಹೊಂದಿದರೆ ಇಂಥ ವಿಭಾಗವೇ ಹೋಗುತ್ತದೆ. ಜಗತ್ತು ಅದರ ಕಾರಣವಾದ ಬ್ರಹ್ಮವೂ ಅಭಿನ್ನವಾಗಿರುವುದರಿಂದ ಒಂದು ಇನ್ನೊಂದಾಗುವ ಸಂಭವವಿದೆ. ಆದರೆ ಪ್ರಸಿದ್ಧವಾದ ಈ ವಿಭಾಗವನ್ನು ಬಾಧಿಸುವುದು ಸರಿಯಲ್ಲ. ಆದುದರಿಂದ ಇಂಥ ಅಭೇದಕ್ಕೆ ನಿಮಿತ್ತವಾದ ಬ್ರಹ್ಮಕಾರಣವಾದವನ್ನು ಬಿಡಬೇಕು.

**ಸಿದ್ಧಾಂತಿ**—ಲೋಕದಲ್ಲಿ ಕಂಡುಬರುವ ದೃಷ್ಟಾಂತಗಳಂತೆ ಇಂಥ ಭೇದವು ಇರಬಹುದು. ಸಮುದ್ರದ ನೀರಿಗಿಂತ ನಿಜವಾದ ಬೇರೆಯಾಗದ ಅದರ ವಿಕಾರಗಳಾದ ನೊರೆ ಅಲೆ ಮೊದಲಾದುವು ಬೇರೆಬೇರೆಯಾಗಿಯೂ ಒಟ್ಟಾಗಿಯೂ ಇರುವುದು ಕಂಡುಬರುತ್ತದೆ. ಇವು ಸಮುದ್ರದ ನೀರಿಗಿಂತ ಬೇರೆಯಾಗಿಲ್ಲದಿದ್ದರೂ ಒಂದು ಮತ್ತೊಂದಾಗುವುದಿಲ್ಲ; ಮತ್ತೆ ಒಂದು ಮತ್ತೊಂದಾಗದಿದ್ದರೂ ಸಮುದ್ರದ ನೀರಿಗಿಂತ ಬೇರೆಯಾಗುವುದಿಲ್ಲ. ಹೀಗೆಯೇ ಇಲ್ಲಿಯೂ ಭೋಕ್ತೃ-ಭೋಗ್ಯಗಳು ಒಂದು ಮತ್ತೊಂದಾಗದಿದ್ದರೂ ಪರಬ್ರಹ್ಮಕ್ಕಿಂತ ಬೇರೆಯಾಗಿರುವುದಿಲ್ಲ.[1] ನಿಜವಾಗಿ ನೋಡಿದರೆ ಭೋಕ್ತೃವು ಬ್ರಹ್ಮದ ವಿಕಾರವೇ ಅಲ್ಲ ; ಸ್ರಷ್ಟೃವೂ ಅವಿಕಾರಿಯೂ ಆದ ಬ್ರಹ್ಮವೇ ಕಾರ್ಯವನ್ನು ಪ್ರವೇಶಿಸಿ ಭೋಕ್ತೃವಾಗಿದೆ ಎಂದು ಶ್ರುತಿಯು[2] ಹೇಳುತ್ತದೆ. ಆದರೂ ಗಡಿಗೆ ಮೊದಲಾದ ಉಪಾಧಿಗಳ ನಿಮಿತ್ತದಿಂದ ಆಕಾಶವು ವಿಭಾಗವನ್ನು ಹೊಂದುವಂತೆ ಕಾರ್ಯವನ್ನು ಪ್ರವೇಶಿಸಿರುವ ಬ್ರಹ್ಮಕ್ಕೆ ಉಪಾಧಿನಿಮಿತ್ತದಿಂದ ವಿಭಾಗವುಂಟಾಗುತ್ತದೆ. ಆದುದರಿಂದ

---

[1] ಏವಮಿಹಾಪಿ ನ ಚ ಭೋಕ್ತೃಭೋಗ್ಯಯೋರಿತರೇತರಭಾವಾಪತ್ತಿಃ, ನ ಚ ಪರಸ್ಮಾದ್ಬ್ರಹ್ಮಣೋಽನ್ಯತ್ವಂ ಭವಿಷ್ಯತಿ (ಸೂ. ಭಾ.).

[2] 'ಅದನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿದನು' ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ. ಉ. ೨. ೬).

ಪರಮಕಾರಣವಾದ ಬ್ರಹ್ಮಕ್ಕಿಂತ ಅನನ್ಯವಾದ ಭೋಕ್ತೃ-ಭೋಗ್ಯ-ಲಕ್ಷಣವುಳ್ಳ ಈ ವಿಭಾಗವು ಸಮುದ್ರ-ತರಂಗಾದಿ-ನ್ಯಾಯದಂತೆ ಹೊಂದುತ್ತದೆ.[1]

ವಿ.—'(ಪರಬ್ರಹ್ಮನು) ಭೋಕ್ತೃವಾಗಿರುವುದರಿಂದ (ಜೀವ-ಬ್ರಹ್ಮರ) ಅಭೇದ ವುಂಟಾಗುವುದೆಂದು ಹೇಳಿದರೆ, ಲೋಕದಲ್ಲಿರುವಂತೆ (ಭೇದವು ಉಳಿಯುವುದು ಎಂಬುದು ನಮ್ಮ ಉತ್ತರ)'; ಇದು ಸೂತ್ರಾರ್ಥ.

**ಪೂರ್ವಪಕ್ಷಿ**—ಸ್ಥೂಲಸೂಕ್ಷ್ಮಗಳಾದ ಚಿದಚಿದ್ವಸ್ತುಗಳನ್ನು ಶರೀರವಾಗಿ ಹೊಂದಿರುವ ಪರಬ್ರಹ್ಮನಿಗೆ ಕಾರ್ಯ-ಕಾರಣ-ರೂಪವಿರುವುದರಿಂದ ಜೀವಬ್ರಹ್ಮರ ಸ್ವಭಾವ ವಿಭಾಗವು ಹೊಂದುತ್ತದೆಯೆಂದು ನೀವು ಹೇಳುತ್ತೀರಿ ಆದರೆ ಸಶರೀರನಾದ ಬ್ರಹ್ಮನು ಭೋಕ್ತೃವಾದರೆ ಅಂಥ ವಿಭಾಗವು ಉಳಿಯುವುದಿಲ್ಲ ಬ್ರಹ್ಮನಿಗೆ ಶರೀರವಿದ್ದರೆ ಜೀವ ನಂತೆ ಅವನಿಗೂ ಶರೀರತ್ವಪ್ರಯುಕ್ತ ಸುಖದುಃಖಾದಿಗಳ ಅನುಭವವುಂಟಾಗುತ್ತದೆ. ಇದೇ ಶ್ರುತಿಯ ಅಭಿಪ್ರಾಯವೂ ಆಗಿರುತ್ತದೆ[2] ಮತ್ತೆ ಸಶರೀರ-ಬ್ರಹ್ಮಕಾರಣವಾದ ವನ್ನು ಒಪ್ಪಿಕೊಂಡರೆ ಜೀವೇಶ್ವರರ ಸ್ವಭಾವವಿಭಾಗವು ಹೋಗುತ್ತದೆ, ಕೇವಲ-ಬ್ರಹ್ಮ ಕಾರಣವಾದವನ್ನು ಒಪ್ಪಿಕೊಂಡರೆ—ಚಿನ್ನದ ಅಥವಾ ಮಣ್ಣಿನ ವಿಕಾರಗಳಿಂದ ಉಂಟಾ ಗುವ ದೋಷಗಳು ಚಿನ್ನಕ್ಕೂ ಮಣ್ಣಿಗೂ ಅಂಟಿಕೊಳ್ಳುವಂತೆ—ಜಗತ್ತಿನ ದೋಷಗಳೆಲ್ಲ ಬ್ರಹ್ಮನಿಗೆ ಬರುತ್ತವೆ; ಆದುದರಿಂದ ಪ್ರಧಾನಕಾರಣವಾದವೇ ಯುಕ್ತವಾಗಿದೆ.

**ಸಿದ್ಧಾಂತಿ**—ಜೀವನಿಗೆ ಶರೀರದ ನಾನಾ ಅವಸ್ಥೆಗಳಿಂದ ಸುಖದುಃಖಗಳುಂಟಾ ದರೆ ಅವು ಶರೀರತ್ವದಿಂದ ಉಂಟಾದುವಲ್ಲ, ಪುಣ್ಯಪಾಪರೂಪವಾದ ಕರ್ಮಗಳಿಂದ ಉಂಟಾದುವು. ಶರೀರವು ಕರ್ಮದಿಂದಲೇ ಉತ್ಪನ್ನವಾಗಿದೆ. ಯಾವನು ಕರ್ಮದಿಂದ ಮುಕ್ತನಾಗಿ ತನ್ನ ಸ್ವರೂಪವನ್ನು ವ್ಯಕ್ತಮಾಡಿಕೊಂಡಿದ್ದಾನೆಯೊ ಅವನಿಗೆ ಶರೀರವಿದ್ದರೂ ಅಪುರುಷಾರ್ಥದ ಗಂಧವೂ ಸೋಂಕುವುದಿಲ್ಲ ಅಪಹತಪಾಪ್ಮನಾದ ಪರಮಾತ್ಮನಿಗೆ ಸ್ಥೂಲಸೂಕ್ಷ್ಮರೂಪವಾದ ಸಮಸ್ತಜಗತ್ತೂ ಶರೀರವಾಗಿದೆ ; ಅವನಿಗೆ ಕರ್ಮದ ಸಂಬಂಧವೇ ಇಲ್ಲದುದರಿಂದ ಅಪುರುಷಾರ್ಥದ ಗಂಧವೇ ಇಲ್ಲ. ಲೋಕದಲ್ಲಿ ರಾಜಶಾಸನ ವನ್ನು ಅನುವರ್ತಿಸುವವನಿಗೆ ಅಥವಾ ಅತಿವರ್ತಿಸುವವನಿಗೆ ರಾಜನ ಅನುಗ್ರಹ-ನಿಗ್ರಹ- ರೂಪವಾದ ಸುಖದುಃಖಾದಿಗಳು ಉಂಟಾಗುವುದು ಕಂಡುಬರುತ್ತದೆ. ಆದರೆ ರಾಜನಿಗೆ ಶರೀರವಿದ್ದ ಮಾತ್ರಕ್ಕೆ ಅವನ ಆಜ್ಞೆಯನ್ನು ಅನುವರ್ತಿಸಿದ್ದರಿಂದ ಅಥವಾ ಅತಿವರ್ತಿಸಿದ್ದ ರಿಂದ ಉಂಟಾಗುವ ಸುಖದುಃಖಗಳು ಬರುವುದಿಲ್ಲ. 'ರಾಜನಾದವನು ಸೊಳ್ಳೆ ಮೊದ

---

1 ಅತಃ ಪರಮಕಾರಣಾದ್ ಬ್ರಹ್ಮಣೋಽನನ್ಯತ್ವೇಽಪ್ಯುಪಪದ್ಯತೇ ಭೋಕ್ತೃ-ಭೋಗ್ಯ- ಲಕ್ಷಣೋ ವಿಭಾಗಃ ಸಮುದ್ರತರಂಗಾದಿನ್ಯಾಯೇನೇತ್ಯುಕ್ತಮ್ (ಸೂ ಭಾ.).

2 'ಶರೀರವುಳ್ಳವನಿಗೆ ಪ್ರಿಯಾಪ್ರಿಯಗಳ ವಿನಾಶವು ಇಲ್ಲವೇ ಇಲ್ಲ. ಶರೀರವಿಲ್ಲದವ ನನ್ನು ಪ್ರಿಯಾಪ್ರಿಯಗಳು ಸೋಂಕುವುದೇ ಇಲ್ಲ' ನ ಹ ವಾ ಸಶರೀರಸ್ಯ ಸತಃ ಪ್ರಿಯಾಪ್ರಿಯ- ಯೋರಪಹತಿರಸ್ತಿ, ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ (ಛಾಂ. ಉ. ೩. ೮. ೧).

ಲಾದುವುಗಳಿಂದ ಕೂಡಿದ ಅನರ್ಥಸಂಕಟವಾದ ಪ್ರದೇಶದಲ್ಲಿದ್ದರೂ, ಬೀಸಣಿಗೆ ವೊದಲಾದ ಉಪಕರಣಗಳಿಂದ ತನ್ನ ಶರೀರದ ದಣಿವಾರಿಸಿಕೊಂಡು, ತನಗೆ ಅಭಿಪ್ರೇತವಾದ ದೇಶಗಳನ್ನು ಪರಿಪಾಲಿಸಿ ಸಮಸ್ತಭೋಗಗಳನ್ನು ಹೊಂದುವಂತೆ, ತನ್ನ ಶಕ್ತಿಯೇ ಚಲಿಸುತ್ತಿರುವ ಚಾಮರವಾಗಿ ಉಳ್ಳ ಲೋಕೇಶ್ವರನು, ಲೋಕದೋಷಗಳಿಂದ ನೋಂಕಲ್ಪಡದೆ, ಬ್ರಹ್ಮಲೋಕಾದಿಗಳನ್ನು ಕಾಪಾಡುತ್ತ ಸಮಸ್ತಭೋಗಗಳನ್ನೂ ಅನುಭವಿಸುತ್ತಾನೆ' ಎಂದು ದ್ರಮಿಡಭಾಷ್ಯಕಾರರು ಹೇಳಿರುತ್ತಾರೆ.[1] ಮೃತ್-ಸುವರ್ಣಾದಿಗಳಂತೆ ಪರಬ್ರಹ್ಮನ ಸ್ವರೂಪದಲ್ಲಿ ಪರಿಣಾಮವುಂಟಾಗುವುದಿಲ್ಲ; ಬ್ರಹ್ಮನಲ್ಲಿ ವಿಕಾರಗಳೂ ದೋಷಗಳೂ ಇಲ್ಲವೆಂದು ಶ್ರುತಿಗಳು ಹೇಳುತ್ತವೆ.

ವ್ಯಾ.—'ಶ್ರುತಿಗಳ ಪ್ರಕಾರ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮತ್ವವು ಬರುತ್ತದೆಯೆಂದು ಹೇಳಿದರೆ ನಾವು ಇದನ್ನು ನಿರಾಕರಿಸುತ್ತೇವೆ; ಏಕೆಂದರೆ ಲೋಕದಲ್ಲಿ ಇದ್ದಂತೆಯೇ ಶ್ರುತಿಯ ಪ್ರಯೋಗವು ಹೊಂದುತ್ತದೆ' ಎಂಬುದು ಸೂತ್ರಾರ್ಥ.

**ಪೂರ್ವಪಕ್ಷ**—'ಕರ್ಮಗಳು, ವಿಜ್ಞಾನಮಯನಾದ ಆತ್ಮನು—ಇವರೆಲ್ಲರೂ ಅವ್ಯಯನಾದ ಪರಮಾತ್ಮನಲ್ಲಿ ಒಂದಾಗುವರು'[2] (ಮುಂ. ಉ. ೩. ೨. ೭) ಎಂಬಲ್ಲಿ ಮುಕ್ತನೂ ಪರಮಾತ್ಮನೂ ಒಂದಾಗುವರೆಂದು ಹೇಳಿದೆ. ಆದುದರಿಂದ ಮುಕ್ತಿಗೆ ಮೊದಲು ಜೀವನು ಪರಮಾತ್ಮನೇ ಆಗಿದ್ದಾನೆಂದು ಒಪ್ಪಿಕೊಳ್ಳಬೇಕು; ಏಕೆಂದರೆ ಒಬ್ಬನು ತನಗಿಂತ ಭಿನ್ನನಾಗಿರುವ ಇನ್ನೊಬ್ಬನಾಗಲಾರನು

**ಸಿದ್ಧಾಂತಿ**—ಇದನ್ನು ನಾವು ನಿರಾಕರಿಸುತ್ತೇವೆ. ಈ ಶ್ರುತಿಯಲ್ಲಿ ಹೇಳಿರುವ ಏಕೀಭಾವವು ಲೋಕದಲ್ಲಿ ಕಂಡುಬರುವ ದೃಷ್ಟಾಂತಗಳಂತೆ ಹೊಂದುವುದು ಒಂದು ಅಳತೆಯ ನೀರು ಇನ್ನೊಂದು ಅಳತೆಯ ನೀರಿನೊಂದಿಗೆ ಒಂದಾಯಿತು ಎಂಬ ಪ್ರಯೋಗವು ಲೋಕದಲ್ಲಿದ್ದರೂ ಅಂತರ್ಭೇದಗಳು ಹಾಗೆಯೇ ಉಳಿಯುತ್ತವೆ.[3] ಸ್ಕಂದಪುರಾಣದ ಪ್ರಕಾರ ನೀರನ್ನು ನೀರಿಗೆ ನೇರಿಸಿದಾಗ ನೀರು ಹೆಚ್ಚಾಗುವುದು ಕಂಡುಬರುತ್ತದೆ; ಇದೇ ರೀತಿ ಜೀವನು ಪರಮಾತ್ಮನೊಂದಿಗೆ ತಾದಾತ್ಮ್ಯವನ್ನು ಹೊಂದಿದರೂ ಪರಮಾತ್ಮನೇ ಆಗುವುದಿಲ್ಲ; ಏಕೆಂದರೆ ಪರಮಾತ್ಮನ ಸ್ವಾತಂತ್ರ್ಯಾದಿ ವಿಶೇಷಣಗಳು ಜೀವನಿಗೆ ಉಂಟಾಗುವುದಿಲ್ಲ.

---

[1] ಯಥಾऽऽಹ ದ್ರಮಿಡಭಾಷ್ಯಕಾರಃ_ಯಥಾ ಲೋಕೇ ರಾಜಾ ಪ್ರಚುರದಂದಶೂಕೇ ಘೋರೇऽನರ್ಥಸಂಕಟೇऽಪಿ ಪ್ರದೇಶೇ ವರ್ತಮಾನೋ ವ್ಯಜನಾದ್ಯವಧೂತದೇಹೋ ದೋಷೈರ್ನ ಸ್ಪೃಶ್ಯತೇ,' ಅಭಿಪ್ರೇತಾಂಶ್ಚ ಲೋಕಾನ್ ಪರಿಪಾಲಯತಿ, ಭೋಗಾಂಶ್ಚ ಗಂಧಾದೀನ್ ವಿಶ್ವಜನೋಪಭೋಗ್ಯಾನ್ ಧಾರಯತಿ, ತಥಾऽಸೌ ಲೋಕೇಶ್ವರೋ ಭ್ರಮತ್ಸ್ವಸಾಮರ್ಥ್ಯಚಾಮರೋ ದೋಷೈರ್ನ ಸ್ಪೃಶ್ಯತೇ, ರಕ್ಷತಿ ಚ ಲೋಕಾನ್ ಬ್ರಹ್ಮಲೋಕಾದೀನ್, ಭೋಗಾಂಶ್ಚ ವಿಶ್ವಜನೋಪಭೋಗ್ಯಾನ್ ಧಾರಯತಿ (ಶ್ರೀಭಾಷ್ಯ).

[2] ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇऽವ್ಯಯೇ ಸರ್ವ ಏಕೀಭವಂತಿ।

[3] ಯಥಾ ಲೋಕ ಉದಕ ಉದಕಾಂತರಸ್ಯೈಕೀಭಾವವ್ಯವಹಾರೇऽಪ್ಯಂತರ್ಭೇದೋऽಸ್ತ್ಯೇವ, ಏವಂ ಸ್ಯಾದತ್ರಾಪಿ (ಮ. ಭಾ.).

## ೬. ಆರಂಭಣಾಧಿಕರಣ*

(ಸೂ. ೧೪–೨೦)

**ತದನನ್ಯತ್ವಮಾರಂಭಣಶಬ್ದಾದಿಭ್ಯಃ ॥ ೧೪ ॥**

೧೪ ಅವುಗಳ (ಎಂದರೆ ಕಾರ್ಯ-ಕಾರಣಗಳ) ಅನನ್ಯತ್ವವು 'ಆರಂಭಣ ಮೊದಲಾದ ಶಬ್ದಗಳಿಂದ (ಸಿದ್ಧವಾಗುತ್ತದೆ)

ಹಿಂದಿನ ಸೂತ್ರದಲ್ಲಿ ಭೋಕ್ತೃ-ಭೋಗ್ಯಗಳ ವಿಭಾಗವನ್ನು ವ್ಯವಹಾರದೃಷ್ಟಿಯಿಂದ ಒಪ್ಪಿಕೊಂಡದ್ದಾಯಿತು. ಆದರೆ ಈ ವಿಭಾಗವು ಪರಮಾರ್ಥವಾಗಿ ಇರುವುದಿಲ್ಲ; ಏಕೆಂದರೆ ಕಾರ್ಯವಾದ ಜಗತ್ತು ಕಾರಣವಾದ ಬ್ರಹ್ಮದೊಂದಿಗೆ ಅನನ್ಯವಾಗಿದೆ. ಇದು ಶ್ರುತಿಯಲ್ಲಿ ಬರುವ 'ಆರಂಭಣ' ಮೊದಲಾದ ಶಬ್ದಗಳಿಂದ ತಿಳಿದುಬರುತ್ತದೆ. 'ಸೋಮ್ಯ, ಹೇಗೆ ಒಂದು ಮೃತ್ಪಿಂಡವನ್ನು ತಿಳಿದುಕೊಂಡದ್ದರಿಂದ ಮಣ್ಣಿನಿಂದ ಮಾಡಿದುದೆಲ್ಲ ತಿಳಿಯಲ್ಪಟ್ಟದ್ದಾಗಿರುವುದೊ—ಏಕೆಂದರೆ ವಸ್ತುವಿನ ಪರಿಣಾಮವು ವಾಕ್ಕನ್ನು ಅವಲಂಬಿಸಿರುವ ಕೇವಲ ಹೆಸರೇ; ಮಣ್ಣೆಂಬುದೇ ಸತ್ಯವು'[1] ಎಂದು ಶ್ರುತಿಯು (ಛಾಂ. ಉ. ೬ ೧. ೪) ಹೇಳುತ್ತದೆ. ಒಂದು ಮೃತ್ಪಿಂಡವನ್ನು ಮಣ್ಣಿನ ಮುದ್ದೆಯೆಂದೇ ಅರಿತುಕೊಂಡರೆ ಅದರಿಂದಾಗುವ ವಸ್ತುಗಳೆಲ್ಲವೂ ಮಣ್ಣಿನವೆಂದೇ ತಿಳಿದುಬರುತ್ತದೆ; ಏಕೆಂದರೆ ಗಡಿಗೆ ಮೊದಲಾದ ಪರಿಣಾಮಗಳು ಕೇವಲ ಹೆಸರುಗಳಾಗಿ ವಾಕ್ಕನ್ನೇ ಅವಲಂಬಿಸಿವೆ; ನಿಜವಾಗಿ ನೋಡಿದರೆ ಪರಿಣಾಮವೆಂಬುದೇ ಇಲ್ಲ.[2] ಹೆಸರು ಮಾತ್ರ ಅನೃತವು, ಮಣ್ಣೆಂಬುದೇ ಸತ್ಯ. ಬ್ರಹ್ಮಕ್ಕಿಂತ ಭಿನ್ನವಾದ ಕಾರ್ಯಸಮೂಹವೇ ಇಲ್ಲ ಎಂದಭಿಪ್ರಾಯ. ಹೀಗೆ ಕಾರ್ಯ-ಕಾರಣಗಳ ಅನನ್ಯತ್ವವನ್ನು ಒಪ್ಪಿಕೊಳ್ಳದಿದ್ದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವು ಉಂಟಾಗುವುದು ಎಂಬುದು ಸಿದ್ಧಿಸುವುದಿಲ್ಲ.

**ಆಕ್ಷೇಪಣೆ†**—ಬ್ರಹ್ಮವು ಅನೇಕಾತ್ಮಕವಾಗಿದೆ. ಮರಕ್ಕೆ ಅನೇಕ ಕೊಂಬೆಗಳಿರುವಂತೆ ಬ್ರಹ್ಮಕ್ಕೆ ಅನೇಕ ಶಕ್ತಿಗಳೂ ಪ್ರವೃತ್ತಿಗಳೂ ಇವೆ. ಆದುದರಿಂದ ಏಕತ್ವವೂ ಸತ್ಯ, ನಾನಾತ್ವವೂ ಸತ್ಯ. ಮರವನ್ನು ಮರವೆಂದೇ ಭಾವಿಸಿದಾಗ ಅದು ಒಂದಾಗಿರುತ್ತದೆ, ಕೊಂಬೆಗಳ ದೃಷ್ಟಿಯಿಂದ ನಾನಾತ್ವವನ್ನು ಹೊಂದಿದೆ. ಸಮುದ್ರವು ಒಂದಾಗಿದ್ದರೂ ನೊರೆ-ಅಲೆಗಳಿಂದ ಅನೇಕವಾಗಿದೆ. ಮಣ್ಣು ಒಂದಾಗಿದ್ದರೂ ಗಡಿಗೆ ಮೊದಲಾದುವುಗಳ

---

* ಇದನ್ನು ಮಧ್ವಭಾಷ್ಯದಲ್ಲಿ ತದನನ್ಯತ್ವಾಧಿಕರಣ ಎಂದು ಕರೆದಿದೆ.

[1] ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ।

[2] ವಾಚೈವ ಕೇವಲಮಸ್ತೀತ್ಯಾರಭ್ಯತೇ ವಿಕಾರೋ ಘಟಃ ಶರಾವ ಉದಂಚನಂ ಚೇತಿ । ನ ತು ವಸ್ತುವೃತ್ತೇನ ವಿಕಾರೋ ನಾಮ ಕಶ್ಚಿದಸ್ತಿ (ಸೂ. ಭಾ.).

† ಇದು ಭೇದಾಭೇದವಾದಿಗಳ ಮತ.

ಮೂಲಕ ಅನೇಕವಾಗಿದೆ. ಇಲ್ಲಿ ಜ್ಞಾನದಿಂದ ಮೋಕ್ಷವಾಗುವುದು ಎಂಬುದು ಏಕತ್ವಾಂಶದಿಂದ ಸಿದ್ಧಿಸುವುದು, ಕರ್ಮಕಾಂಡವನ್ನು ಆಶ್ರಯಿಸಿರುವ ಲೌಕಿಕ-ವೈದಿಕ-ವ್ಯವಹಾರಗಳು ಅನೇಕಾಂಶದಿಂದ ಸಿದ್ಧಿಸುವುವು.

**ಪರಿಹಾರ**—ಹೀಗೆ ಆಗಲಾರದು. ಪರಮಕಾರಣವಾದ ಬ್ರಹ್ಮವೊಂದೇ ಸತ್ಯವೆಂದು ಶ್ರುತಿಗಳು ಹೇಳುತ್ತವೆ. ಬ್ರಹ್ಮಕ್ಕಿಂತ ಬೇರೆಯಾದ ಜೀವರನ್ನೂ ಜಗತ್ತನ್ನೂ ಶ್ರುತಿಗಳು ನಿರಾಕರಿಸಿವೆ. ಏಕತ್ವ, ಅನೇಕತ್ವ—ಇವೆರಡೂ ಸತ್ಯವಾಗಿದ್ದರೆ ವ್ಯವಹಾರದಲ್ಲಿರುವ ಜೀವನು ಅನೃತಾಭಿಸಂಧನು[1] ಎಂದು ಹೇಗೆ ತಾನೇ ಹೇಳಬಹುದು ? 'ಇಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ'[2] (ಬೃ. ಉ. ೪. ೪. ೧೯) ಎಂಬ ಶ್ರುತಿಯು ಇದನ್ನೇ ಹೇಳಿ ಭೇದದೃಷ್ಟಿಯನ್ನು ನಿಂದಿಸುತ್ತದೆ. ಪುನಃ ಏಕತ್ವ-ಅನೇಕತ್ವ-ತತ್ತ್ವವು ನಿಜವಾದರೆ ಜ್ಞಾನದಿಂದ ಮೋಕ್ಷವು ಉಂಟಾಗುವುದಿಲ್ಲ ; ಏಕೆಂದರೆ ಸಮ್ಯಗ್ಜ್ಞಾನದಿಂದ ನಿವಾರಿಸಬೇಕಾಗಿರುವ ಯಾವ ಮಿಥ್ಯಾಜ್ಞಾನವೂ ಸಂಸಾರಕ್ಕೆ ಕಾರಣವೆಂದು ಈ ದರ್ಶನವು ಒಪ್ಪಿಕೊಂಡಿರುವುದಿಲ್ಲ ; ಇವೆರಡೂ ಸತ್ಯವಾಗಿದ್ದರೆ ಏಕತ್ವಜ್ಞಾನದಿಂದ ನಾನಾತ್ವಜ್ಞಾನವು ತೊಲಗುವುದೆಂದು ಹೇಗೆ ತಾನೇ ಹೇಳಲಾದೀತು ?

**ಆಕ್ಷೇಪಣೆ**—ಏಕತ್ವವೇ ಸತ್ಯವಾಗಿದ್ದರೆ, ನಾನಾತ್ವವು ಹೋಗುವುದರಿಂದ ಪ್ರತ್ಯಕ್ಷವೇ ಮೊದಲಾದ ಲೌಕಿಕಪ್ರಮಾಣಗಳು ಬಾಧಿತವಾಗುತ್ತವೆ; ಕತ್ತಲಿನಲ್ಲಿ ಮೋಟುಮರವನ್ನು ಮನುಷ್ಯನೆಂದು ಭಾವಿಸಿರುವವನು ಸರಿಯಾದ ಜ್ಞಾನದಿಂದ ಅದು ಮನುಷ್ಯನೆಂಬ ಭ್ರಾಂತಿಯನ್ನು ತೊಲಗಿಸಿಕೊಂಡಂತೆ. ಹೀಗೆಯೇ ಭೇದವಿಲ್ಲದಿದ್ದರೆ ವಿಧಿನಿಷೇಧಗಳನ್ನು ತಿಳಿಸುವ ಶಾಸ್ತ್ರವೂ ಬಾಧಿತವಾಗುತ್ತದೆ. ಪುನಃ ಗುರುಶಿಷ್ಯಾದಿಭೇದಗಳನ್ನು ಅಪೇಕ್ಷಿಸುವ ಮೋಕ್ಷಶಾಸ್ತ್ರವೂ ಬಾಧಿತವಾಗುತ್ತದೆ. ಮತ್ತೆ ಅನೃತವಾದ ಮೋಕ್ಷಶಾಸ್ತ್ರವು ಪ್ರತಿಪಾದಿಸುವ ಆತ್ಮನ ಏಕತ್ವವು ಸತ್ಯವೆಂಬುದು ಹೇಗೆ ತಾನೇ ಆಗುವುದು ?

**ಪರಿಹಾರ**—ನಮ್ಮ ಪಕ್ಷದಲ್ಲಿ ದೋಷವಿಲ್ಲ; ಏಕೆಂದರೆ ಬ್ರಹ್ಮವು ಎಲ್ಲರ ಆತ್ಮ ಎಂಬುದನ್ನು ಅರಿತುಕೊಳ್ಳುವುದಕ್ಕೆ ಮೊದಲು ವ್ಯವಹಾರಗಳೆಲ್ಲ—ಎಚ್ಚರವಾಗುವುದಕ್ಕೆ ಮೊದಲು ಸ್ವಪ್ನವು ನಿಜವಾಗಿರುವಂತೆ—ಸತ್ಯವಾಗಿರುವುವು.[3] ಎಲ್ಲಿಯವರೆಗೆ ಸತ್ಯವಾದ ಆತ್ಮೈಕತ್ವಜ್ಞಾನವಾಗುವುದಿಲ್ಲವೊ ಅಲ್ಲಿಯವರೆಗೆ ಪ್ರಮಾಣ-ಪ್ರಮೇಯ-ಫಲರೂಪವಾದ ಕಾರ್ಯಜಗತ್ತು ಅನೃತವೆಂಬ ಬುದ್ಧಿಯು ಹುಟ್ಟುವುದಿಲ್ಲ ; ಇದಲ್ಲದೆ ಅವಿದ್ಯೆಯಿಂದ

---

[1] ಉಭಯಸತ್ಯತಾಯಾಂ ಹಿ ಕಥಂ ವ್ಯವಹಾರಗೋಚರೋಽಪಿ ಜಂತುರನೃತಾಭಿಸಂಧ ಇತ್ಯುಚ್ಯೇತ ? (ಸೂ. ಭಾ.). ಛಾಂ. ಉ. ೬ ೧೬ರಲ್ಲಿ ತಸ್ಕರದೃಷ್ಟಾಂತವನ್ನು ನೋಡಿ.

[2] ನೇಹ ನಾನಾಽಸ್ತಿ ಕಿಂಚನ ।

[3] ನೈಷ ದೋಷಃ । ಸರ್ವವ್ಯವಹಾರಾಣಾಮೇವ ಪ್ರಾಗ್ ಬ್ರಹ್ಮಾತ್ಮತಾವಿಜ್ಞಾನಾತ್ ಸತ್ಯತ್ವೋಪಪತ್ತೇಃ । ಸ್ವಪ್ನವ್ಯವಹಾರಸ್ಯೇವ ಪ್ರಾಕ್ ಪ್ರಬೋಧಾತ್ (ಸೂ. ಭಾ.).

ಸ್ವಾಭಾವಿಕವಾದ ಬ್ರಹ್ಮದ ಆತ್ಮತ್ವವನ್ನು ಮರೆತು ಕಾರ್ಯಗಳನ್ನೇ 'ನಾನು, ನನ್ನದು' ಎಂದು ಭಾವಿಸುತ್ತಾನೆ

**ಆಕ್ಷೇಪಣೆ**—ಆದರೆ ವ್ಯವಹಾರಜಗತ್ತಿಗೆ ಒಳಪಟ್ಟ ಶ್ರುತಿವಾಕ್ಯಗಳು ಸತ್ಯವಾದ ಬ್ರಹ್ಮಾತ್ಮದ ಜ್ಞಾನವನ್ನು ಹೇಗೆ ಉತ್ಪನ್ನಮಾಡುತ್ತವೆ ? ಹಾವಿನಂತೆ ಕಾಣುವ ಹಗ್ಗದಿಂದ ಕಡಿಯಲ್ಪಟ್ಟವನು ಸಾಯುವುದಿಲ್ಲ, ಅಥವಾ ಬಿಸಿಲ್ಗುದುರೆಯ ನೀರಿನಿಂದ ಸ್ನಾನ ಪಾನಾದಿಗಳು ಆಗುವುದಿಲ್ಲ

**ಪರಿಹಾರ**—ಈ ಆಕ್ಷೇಪದಲ್ಲಿ ಯಾವ ಯುಕ್ತಿಯೂ ಇಲ್ಲ ; ವಿಷಸರ್ಪವು ಕಡಿದಿದೆ ಎಂಬ ಕೇವಲ ಶಂಕೆಯಿಂದಲೂ ಮೃತ್ಯುವುಂಟಾಗುವುದು ಜಗತ್ತಿನಲ್ಲಿ ಕಂಡುಬರುತ್ತದೆ. ಕನಸು ಮುಗಿದಮೇಲೂ ಅದರ ಜ್ಞಾನವು ಎಚ್ಚರದಲ್ಲಿ ಹೋಗದಿರುವುದು ಕಂಡುಬರುತ್ತದೆ. ಇದಲ್ಲದೆ ಸ್ವಪ್ನದಲ್ಲಿ ನೋಡಿದ ಘಟನೆಗಳು ಮಿಥ್ಯೆಯಾಗಿದ್ದರೂ ಅವು ಭವಿಷ್ಯವನ್ನು ಸೂಚಿಸುತ್ತವೆಂದು ಶ್ರುತಿಗಳು ತಿಳಿಸುತ್ತವೆ.[1]

**ಆಕ್ಷೇಪಣೆ**—ಮಣ್ಣು ಮೊದಲಾದ ದೃಷ್ಟಾಂತಗಳ ಮೂಲಕ ಬ್ರಹ್ಮಕ್ಕೆ ಪರಿಣಾಮವಿದೆಯೆಂದು ಶಾಸ್ತ್ರವೇ ತಿಳಿಸುತ್ತದೆಯಲ್ಲವೆ ?

**ಪರಿಹಾರ**—ಹಾಗಲ್ಲ ;[2] ಶ್ರುತಿಗಳು ಬ್ರಹ್ಮಕ್ಕೆ ಸಮಸ್ತವಿಕಾರಗಳನ್ನೂ ಪ್ರತಿಷೇಧಿಸಿ ಅದು ಕೂಟಸ್ಥವೆಂದು ತಿಳಿಸುತ್ತವೆ.[3] ಒಂದೇ ಬ್ರಹ್ಮಕ್ಕೆ ಪರಿಣಾಮಧರ್ಮ, ಪರಿಣಾಮರಹಿತತ್ವ—ಇವೆರಡನ್ನೂ ಹೇಳಲು ಸಾಧ್ಯವಿಲ್ಲ

**ಆಕ್ಷೇಪಣೆ**—ಬ್ರಹ್ಮವು ಕೂಟಸ್ಥವೆಂದು ಹೇಳುವವನು ಈಶ್ವರನು ಜಗತ್-ಕಾರಣವೆಂಬ ಪ್ರತಿಜ್ಞೆಯನ್ನು ವಿರೋಧಿಸುತ್ತಾನೆ ; ಏಕೆಂದರೆ ಇವನ ಮತದಲ್ಲಿ ಏಕತ್ವವೇ ಸಂಮತವಾದುದರಿಂದ ಆಳುವವನು ಆಳಲ್ಪಟ್ಟವನು ಎಂಬ ಭೇದಕ್ಕೆ ಅವಕಾಶವಿರುವುದಿಲ್ಲ.

**ಪರಿಹಾರ**—ಅವಿದ್ಯಾಸ್ವರೂಪವಾದ ನಾಮರೂಪಗಳೆಂಬ ಬೀಜವನ್ನು ವ್ಯಕ್ತಮಾಡುವುದರ ಅಪೇಕ್ಷೆಯಿಂದ ಬ್ರಹ್ಮಕ್ಕೆ ಸರ್ವಜ್ಞತ್ವವನ್ನು ಹೇಳಿದೆ[4] ಸರ್ವಜ್ಞನಾದ

---

[1] 'ಕಾಮ್ಯಕರ್ಮಗಳನ್ನು ಅನುಷ್ಠಾನಮಾಡುವ ಕಾಲದಲ್ಲಿ ಯಾವಾಗ ಸ್ತ್ರೀಯನ್ನು ಸ್ವಪ್ನದಲ್ಲಿ ನೋಡುವನೊ ಆಗ ಅಲ್ಲಿ ಆ ಸ್ವಪ್ನದರ್ಶನದಲ್ಲಿ ಕರ್ಮಫಲವುಂಟಾಗುವುದೆಂದು ಅರಿತುಕೊಳ್ಳಬೇಕು' (ಛಾಂ. ಉ. ೫. ೨. ೮) ಇತ್ಯಾದಿ.

[2] ಕಾರ್ಯಕಾರಣಗಳ ಅನನ್ಯತ್ವವನ್ನು ತೋರಿಸಲು ಈ ದೃಷ್ಟಾಂತವನ್ನು ಹೇಳಿದೆಯೇ ಹೊರತು ಬ್ರಹ್ಮದ ಪರಿಣಾಮಿತ್ವವನ್ನು ತಿಳಿಸುವುದಕ್ಕಲ್ಲ, ಕಾರ್ಯಕಾರಣಯೋರನನ್ಯತ್ವಾಂಶೇಽಯಂ ದೃಷ್ಟಾಂತಃ, ನ ಪರಿಣಾಮಿತ್ವೇ ಬ್ರಹ್ಮಣಃ (ರ. ಭಾ.).

[3] 'ಅದು ಅಸ್ಥೂಲವು, ಅನಣು' ಅಸ್ಥೂಲಮನಣು (ಬೃ. ಉ. ೩. ೮. ೮) ; 'ಮಹಾಂತನೂ ಜನ್ಮರಹಿತನೂ ಜರಾಶೂನ್ಯನೂ ಮೃತ್ಯುರಹಿತನೂ ಆದ ಆ ಈ ಆತ್ಮನೇ ಬ್ರಹ್ಮ ; ಬ್ರಹ್ಮವೇ ಅಭಯವು' ಸ ವಾ ಏಷ ಮಹಾನಜ ಆತ್ಮಾಽಜರೋಽಮೃತೋಽಭಯೋ ಬ್ರಹ್ಮ ; ಅಭಯಂ ವೈ ಬ್ರಹ್ಮ (ಬೃ. ಉ. ೪. ೪. ೨೫).

[4] ಬ್ರಹ್ಮವು ಜಗತ್ತಿಗೆ ಸಂಬಂಧಿಸಿರುವ ಮಟ್ಟಿಗೆ ಸರ್ವಜ್ಞತ್ವಾದಿಗುಣಗಳನ್ನು ಹೊಂದಿದೆಯೆಂದು ಅಭಿಪ್ರಾಯ.

ಈಶ್ವರನ ಆತ್ಮಕ್ಕೆ ಸೇರಿದ್ದಂತೆ ಅವಿದ್ಯೆಯಿಂದ ಕಲ್ಪಿತವಾದ ನಾಮರೂಪಗಳಿವೆ ಇವೇ ಬ್ರಹ್ಮವೆಂದಾಗಲಿ ಅಥವಾ ಅದಕ್ಕಿಂತ ಭಿನ್ನವೆಂದಾಗಲಿ ಹೇಳಲಾಗುವುದಿಲ್ಲ.[1] ಸಂಸಾರಕ್ಕೆ ಕಾರಣವಾದ ಈ ನಾಮರೂಪಗಳನ್ನು ಸರ್ವಜ್ಞನಾದ ಈಶ್ವರನ ಮಾಯೆ. ಶಕ್ತಿ, ಪ್ರಕೃತಿ ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಿದೆ.[2] ಅವಿದ್ಯಾಕೃತವಾದ ಉಪಾಧಿಗಳಿಂದ ಬ್ರಹ್ಮವು 'ಈಶ್ವರ ಸರ್ವಜ್ಞ ಸರ್ವಶಕ್ತ' ಆಗಿದೆಯೇ ಹೊರತು ಪರಮಾರ್ಥವಾಗಿ ಸರ್ವೋಪಾಧಿ ರಹಿತವಾದ ಸ್ವರೂಪದಲ್ಲಿ 'ಆಳುವವನು', 'ಆಳಲ್ಪಟ್ಟವನು' ಎಂದು ಆಗಿಲ್ಲ. ಹೀಗೆ ಪರ ಮಾರ್ಥದ ಸ್ಥಿತಿಯನ್ನು ಹೊಂದಿರುವವನಿಗೆ ಯಾವ ವ್ಯವಹಾರವೂ ಇಲ್ಲವೆಂದು ಶ್ರುತಿ ಗಳೂ ಸ್ಮೃತಿಗಳೂ ತಿಳಿಸುತ್ತವೆ.[3] ಸೂತ್ರಕಾರರೂ ಕೂಡ ಪರಮಾರ್ಥದ ಅಭಿಪ್ರಾಯ ದಿಂದ ಕಾರ್ಯ-ಕಾರಣಗಳ ಅಭೇದವನ್ನು ಹೇಳಿರುತ್ತಾರೆ ಆದರೆ ಹಿಂದಿನ ಸೂತ್ರದಲ್ಲಿ ವ್ಯವಹಾರದ ಅಭಿಪ್ರಾಯದಿಂದ ಬ್ರಹ್ಮವನ್ನು ಮಹಾಸಮುದ್ರಕ್ಕೆ ಹೋಲಿಸಿರುತ್ತಾರೆ. ಅವರು ಕಾರ್ಯಪ್ರಪಂಚವನ್ನು ನಿಷೇಧಿಸದೆ ಅದು ಸಗುಣೋಪಾಸನೆಗಳಲ್ಲಿ ಉಪಯೋಗ ವಾಗಲೆಂದು ಬ್ರಹ್ಮವು ಜಗತ್ತಾಗಿ ಪರಿಣಮಿಸಿದೆ ಎಂಬ ತತ್ತ್ವವನ್ನು ಅಂಗೀಕರಿ ಸಿರುತ್ತಾರೆ.[4]

ವಿ.—ಬ್ರಹ್ಮಕಾರ್ಯವಾದ ಜಗತ್ತು ಪರಬ್ರಹ್ಮನಿಗಿಂತ ಭಿನ್ನವೊ ಅಥವಾ ಅಭಿನ್ನವೊ ಎಂಬುದು ಸಂಶಯ; ಭಿನ್ನವೆಂಬುದು ಪೂರ್ವಪಕ್ಷ, ಏಕೆಂದರೆ ಕಾರ್ಯ-ಕಾರಣ ಗಳು ಬೇರೆಬೇರೆಯಾಗಿರುವುದು ನಮ್ಮ ಅನುಭವದಿಂದ ತಿಳಿದುಬರುತ್ತದೆ. ಕಾರಣದ

---

[1] ಏಕೆಂದರೆ ನಾಮರೂಪಗಳು ಜಡವಾಗಿರುವುದರಿಂದ ಅವುಗಳಿಗೆ ಈಶ್ವರತ್ವವನ್ನು ಹೇಳಲು ಸಾಧ್ಯವಿಲ್ಲ; ಬ್ರಹ್ಮಕ್ಕಿಂತ ಬೇರೆಯಾಗಿರಲು ಸಾಧ್ಯವಲ್ಲದುದರಿಂದ ಅವು ಈಶ್ವರನಿ ಗಿಂತ ಭಿನ್ನವಾಗಿವೆಯೆಂದು ಹೇಳಲೂ ಆಗುವುದಿಲ್ಲ' ನಾಮರೂಪಯೋರೀಶ್ವರತ್ವಂ ವಕ್ತುಮ- ಶಕ್ಯಂ ಜಡತ್ವಾತ್, ನಾಪೀಶ್ವರಾದನ್ಯತ್ವಂ ಕಲ್ಪಿತಸ್ಯ ಪೃಥಕ್ ಸತ್ತಾಸ್ಫೂರ್ತ್ಯೋರಭಾವಾದಿ- ತ್ಯರ್ಥಃ (ರ. ಪ್ರ.).

[2] ಸರ್ವಜ್ಞಸ್ಯೇಶ್ವರಸ್ಯಾತ್ಮಭೂತೇ ಇವಾವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾ- ಭ್ಯಾಮನಿರ್ವಚನೀಯೇ ಸಂಸಾರಪ್ರಪಂಚಬೀಜಭೂತೇ ಸರ್ವಜ್ಞಸ್ಯೇಶ್ವರಸ್ಯ ಮಾಯಾಶಕ್ತಿಃ ಪ್ರಕೃತಿರಿತಿ ಚ ಶ್ರುತಿಸ್ಮೃತ್ಯೋರಭಿಲಪ್ಯೇತೇ (ಸೂ. ಭಾ.).

[3] 'ಆತ್ಮನು ಜನರಿಗೆ ಕರ್ತೃತ್ವವನ್ನಾಗಲಿ ಕರ್ಮಗಳನ್ನಾಗಲಿ ಕರ್ಮಫಲಸಂಬಂಧವನ್ನಾ ಗಲಿ ಸೃಷ್ಟಿಸಿರುವುದಿಲ್ಲ. ಆದರೆ ಸ್ವಭಾವವೇ ಕೆಲಸಮಾಡುವುದು' ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ । ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ (ಗೀತಾ ೫. ೧೪).

[4] ಸೂತ್ರಕಾರೋಽಪಿ ಪರಮಾರ್ಥಾಭಿಪ್ರಾಯೇಣ ತದನನ್ಯತ್ವಮಿತ್ಯಾಹ । ವ್ಯವಹಾರಾಭಿ- ಪ್ರಾಯೇಣ ತು ಸ್ಯಾಲ್ಲೋಕವದಿತಿ ಮಹಾಸಮುದ್ರಸ್ಥಾನೀಯತಾಂ ಬ್ರಹ್ಮಣಃ ಕಥಯತಿ । ಅಪ್ರತ್ಯಾಖ್ಯಾಯೈವ ಕಾರ್ಯಪ್ರಪಂಚಂ ಪರಿಣಾಮಪ್ರಕ್ರಿಯಾಂ ಚಾಶ್ರಯತಿ ಸಗುಣೇಷೂ- ಪಾಸನೇಷೂಪಯೋಕ್ಷ್ಯತ ಇತಿ (ಸೂ. ಭಾ.).

ಜ್ಞಾನವೇ ಬೇರೆ, ಕಾರ್ಯದ ಜ್ಞಾನವೇ ಬೇರೆ  ಕಾರಣವು ಪೂರ್ವಕಾಲಕ್ಕೆ ಸೇರಿದ್ದು, ಕಾರ್ಯವು ಉತ್ತರಕಾಲಕ್ಕೆ ಸೇರಿದ್ದು  ಮತ್ತೆ ಕಾರಣಕ್ಕೂ ಕಾರ್ಯಕ್ಕೂ ಸಂಖ್ಯಾಭೇದವಿದೆ, ಆಕಾರಭೇದವಿದೆ , ಮಣ್ಣು ಒಂದಾಗಿದ್ದರೆ ಕಾರ್ಯಗಳು ಬಹುವಾಗಿರುತ್ತವೆ, ಮಣ್ಣು ಮುದ್ದೆಯಾಗಿದ್ದರೆ ಅಥವಾ ಹುಡಿಯಾಗಿದ್ದರೆ ಅದರ ಕಾರ್ಯಗಳಾದ ಗಡಿಗೆ ಮೊದಲಾದುವು ವಿವಿಧವಾದ ಆಕಾರವನ್ನು ಪಡೆದಿರುತ್ತವೆ

ಕಾರಣನಾದ ಪರಬ್ರಹ್ಮನೂ ಕಾರ್ಯವಾದ ಜಗತ್ತೂ ಅಭಿನ್ನವೆಂದು ನೂರಾರು ಶ್ರುತಿಗಳು ಸಾರುತ್ತವೆ[1]—ಎಂಬುದು ಸಿದ್ಧಾಂತ, ಕಾರ್ಯ-ಕಾರಣಗಳಿಗೆ ವಿರೋಧದ ಗಂಧವೂ ಇಲ್ಲ  ಕಾರ್ಯ-ಕಾರಣಗಳಲ್ಲಿ ಭೇದವು ಕಂಡುಬರುವುದು ಅವಸ್ಥೆಯಿಂದಲೇ ಹೊರತು ವಸ್ತುದೃಷ್ಟಿಯಿಂದಲ್ಲ  ಮಣ್ಣನ್ನು ಗಡಿಗೆಯ ಆಕಾರಕ್ಕೆ ತಂದಾಗಲೂ ಮಣ್ಣಾಗಿಯೇ ಇರುತ್ತದೆ  ಕಾರಕದ (ಎಂದರೆ ವಸ್ತುವನ್ನು ಕಾರ್ಯಕ್ಕೆ ತರುವವನ) ವ್ಯಾಪಾರವೂ ಕೂಡ ವ್ಯರ್ಥವಾಗುವುದಿಲ್ಲ[2]  ಹೀಗೆ ಕಾರ್ಯ-ಕಾರಣಗಳ ಅನನ್ಯತ್ವವು ನಮಗೆ ಅನುಭವದಿಂದ ತಿಳಿದಿರುವಾಗ ಶಬ್ದಭೇದ-ಜ್ಞಾನಭೇದಗಳು ಅವಸ್ಥೆಗಳಿಂದಲೇ ಉಪಪನ್ನವಾಗಿರುವಾಗ ದ್ರವ್ಯಾಂತರ ಕಲ್ಪನೆಯನ್ನು ಏಕೆ ಮಾಡಬೇಕು ? ಆದುದರಿಂದ ಬ್ರಹ್ಮ, ಕಾರ್ಯವಾದ ಜಗತ್ತು ಬ್ರಹ್ಮನಿಗಿಂತ ಬೇರೆಯಲ್ಲ

ವಾಚಾರಂಭಣವೆಂದರೆ ವಾಕ್ಕಿನಿಂದ ಸ್ಪರ್ಶಿಸಲ್ಪಟ್ಟದ್ದು ಎಂದರ್ಥ[3]  ನೀರನ್ನು ತರುವುದು ಮೊದಲಾದ ವ್ಯವಹಾರಕ್ಕಾಗಿ ಮೃದ್ದ್ರವ್ಯವೇ ಹೊಸ ಆಕಾರವನ್ನೂ ಹೆಸರನ್ನೂ ಪಡೆಯುತ್ತದೆ  ಆದುದರಿಂದ ಘಟಾದಿಗಳು ಮೃತ್ತೆಂಬುದೇ ಸತ್ಯ[4]

---

[1] 'ಸೋಮ್ಯ, ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್‌ಸ್ವರೂಪವೇ ಆಗಿತ್ತು' ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ (ಛಾಂ ಉ ೬ ೨ ೧), 'ಆದರಲ್ಲಿ ಇವೆಲ್ಲ ಆತ್ಮವನ್ನು ಹೊಂದಿದೆ, ಅದು ಸತ್ಯ, ಅದು ಆತ್ಮನು, ಓ ಶ್ವೇತಕೇತು, ನೀನು ತದಾತ್ಮಕನಾಗಿದ್ದೀಯೆ' ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ (ಛಾಂ ಉ ೬ ೮ ೭), 'ತಜ್ಜಲಾನ್ ಆಗಿರುವುದರಿಂದ ಇವೆಲ್ಲವೂ ಪರಬ್ರಹ್ಮನೇ ಆದುದರಿಂದ ಶಾಂತನಾಗಿ ಉಪಾಸಿಸಬೇಕು' ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ (ಛಾಂ ಉ ೩ ೧೪ ೧) ಇತ್ಯಾದಿ

[2] ನ ಚಾತ್ರ ವಸ್ತುವಿರೋಧಗಂಧಃ, ಕಾರಣೀಭೂತಮೃದಾದಿದ್ರವ್ಯಸ್ಯೈವ ಪೃಥುಬುಧ್ನೋದರಾದ್ಯವಸ್ಥಾಂತರಾಪತ್ತ್ಯಾ ಬುದ್ಧಿಶಬ್ದಾಂತರಾದಯೋऽಪ್ಯುಪಪದ್ಯಂತೇ। ತತ ಏವ ಕಾರಕವ್ಯಾಪಾರಾದ್ಯರ್ಥವತ್ತ್ವಂ ಚ (ವೇ ದೀ )

[3] ಆರಭ್ಯತೇ ಆಲಭ್ಯತೇ ಸ್ಪೃಶ್ಯತೇ ಇತ್ಯಾರಂಭಣಮ್ (ಶ್ರೀಭಾಷ್ಯ). ಆಲಂಭಃ, ಸ್ಪರ್ಶಹಿಂಸಯೋಃ (ಪಾಣಿನಿ ೩ ೩ ೧೧೩) ನೋಡಿ

[4] ಉದಕಾಹರಣಾದಿವ್ಯವಹಾರವಿಶೇಷಸಿಧ್ಯರ್ಥಂ ಮೃದ್ದ್ರವ್ಯಮೇವ ಸಂಸ್ಥಾನಾಂತರನಾಮಧೇಯಾಂತರಭಾಗ್ಭವತಿ। ಅತೋ ಘಟಾದ್ಯಪಿ ಮೃತ್ತಿಕೇತ್ಯೇವ ಸತ್ಯಮ್ (ಶ್ರೀಭಾಷ್ಯ)

**ದ್ವೈ.**—ಜಗತ್ತಿನಲ್ಲಿ ನಿಮಿತ್ತಕಾರಣಗಳಿಗಿಂತ ಸ್ವತಂತ್ರವಾದ ಸಾಧನಗಳಿಂದ ಸೃಷ್ಟಿಯಾಗುತ್ತಿರುವುದು ಕಂಡುಬರುತ್ತದೆ. ಆದರೆ ಪರಬ್ರಹ್ಮನ ವಿಚಾರದಲ್ಲಿ ಹೀಗಾಗುವುದಿಲ್ಲ. ಅವನ ಸ್ವರೂಪಸಾಮರ್ಥ್ಯದಿಂದಲೇ ಸೃಷ್ಟಿಯು ಹೊರಡುತ್ತದೆ.[1] 'ಆಗ ಯಾವ ಅಧಿಷ್ಠಾನವಿತ್ತು ? ಯಾವ ಸಾಧನಗಳಿದ್ದವು ? ಸಾಧನಗಳು ಯಾವ ರೂಪದಲ್ಲಿದ್ದವು ?'[2] (ಋ. ವೇ. ೧೦. ೧೨೯. ೩)—ಇವೇ ಮೊದಲಾದ ಶ್ರುತಿಗಳು ಸ್ವತಂತ್ರಸಾಧನಗಳನ್ನು ಆಕ್ಷೇಪಿಸುತ್ತವೆ. ಪರತಂತ್ರನಿಗೆ ಸಾಧನಗಳ ಅಪೇಕ್ಷೆಯಿದೆ. ಸ್ವತಂತ್ರನಾದ ಈಶ್ವರನು ಯಾವುದನ್ನೂ ಅಪೇಕ್ಷಿಸುವುದಿಲ್ಲ. ಅವನೇ ಸಾಧನಗಳಿಗೆ ಸಾಧನತ್ವವನ್ನು ಅನುಗ್ರಹಿಸಿರುತ್ತಾನೆ. ಆದ್ದರಿಂದ ಅವನಿಗೆ ಸಾಧನಗಳಿಂದ ಏನು ಪ್ರಯೋಜನ ?

**ಭಾವೇ ಚೋಪಲಬ್ಧೇಃ || ೧೫ ||**

೧೫ (ಕಾರಣವು) ಇದ್ದರೆ (ಕಾರ್ಯವು) ಕಂಡುಬರುವುದರಿಂದಲೂ (ಕಾರ್ಯವು ಕಾರಣಕ್ಕಿಂತ ಅನನ್ಯವಾಗಿದೆ)

ಕಾರಣವಿದ್ದರೆ ಕಾರ್ಯವು ಕಂಡುಬರುತ್ತದೆ, ಕಾರಣವಿಲ್ಲದಿದ್ದರೆ ಕಾರ್ಯವಿರುವುದಿಲ್ಲ ; ಮಣ್ಣಿದ್ದರೆ ಗಡಿಗೆ ಇರುತ್ತದೆ. ಆದರೆ ಈ ನಿಯಮವು ನಿಮಿತ್ತ-ಕಾರಣ-ಕಾರ್ಯಗಳಲ್ಲಿ ಕಂಡುಬರುವುದಿಲ್ಲ ; ಕುಂಬಾರನಿದ್ದರೆ ಗಡಿಗೆ ಇರಬೇಕೆಂಬ ನಿಯಮವಿಲ್ಲ. ಬೆಂಕಿ ಇದ್ದರೇ ಹೊಗೆ ಇರುವಂತೆ ಎರಡು ಬೇರೆಬೇರೆ ವಸ್ತುಗಳಿರುವುದು ಕಂಡುಬರುತ್ತದೆ—ಎಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಬೆಂಕಿಯನ್ನು ಆರಿಸಿದಮೇಲೂ ಒಂದು ಪಾತ್ರೆಯಲ್ಲಿ ಹೊಗೆಯನ್ನು ಸಂಗ್ರಹಿಸಬಹುದು

ಅಥವಾ 'ಉಪಲಬ್ಧಿಯು ಇರುವುದರಿಂದಲೂ' **ಭಾವಾಚ್ಚ ಉಪಲಬ್ಧೇಃ** ಎಂದೂ ಸೂತ್ರವನ್ನು ಗ್ರಹಿಸಬಹುದು ಕಾರ್ಯಕಾರಣಗಳ ಅನನ್ಯತ್ವವು ಶಾಸ್ತ್ರದಿಂದಲ್ಲದೆ ಪ್ರತ್ಯಕ್ಷದಿಂದಲೂ ತಿಳಿದುಬರುತ್ತದೆ. ಉದಾಹರಣೆಗೆ—ನೂಲುಗಳ ರಚನೆಯಾದ ಬಟ್ಟೆಯಲ್ಲಿ ನೂಲುಗಳನ್ನು ಬಿಟ್ಟರೆ 'ಬಟ್ಟೆ' ಎಂಬ ಕಾರ್ಯವೇ ಕಂಡುಬರುವುದಿಲ್ಲ. ಹೀಗೆಯೇ ನೂಲಿನಲ್ಲಿ ಅಂಶಗಳು, ಅಂಶಗಳಲ್ಲಿ ಅವಯವಗಳು ಕಂಡುಬರುತ್ತವೆ. ಪ್ರತ್ಯಕ್ಷದ ಅನುಭವದಿಂದ ಕೆಂಪು ಬಿಳುಪು ಕಪ್ಪು ಎಂಬ ಮೂರು ಬಣ್ಣಗಳು,[3] ಅವುಗಳಿಂದ

---

[1] ಸ್ವತಂತ್ರಬಹುಸಾಧನಸೃಷ್ಟಿರ್ಲೋಕೇ ದೃಷ್ಟಾ । ನೈವಂ ಬ್ರಹ್ಮಣಃ । ಸ್ವರೂಪ-ಸಾಮರ್ಥ್ಯಾದೇವ ತಸ್ಯ ಸೃಷ್ಟಿಃ (ಮ. ಭಾ.).

[2] ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಽಽಸೀದಿತಿ ಹ್ಯಾಪೇಕ್ಷಃ (ಮ. ಭಾ.).

[3] ಛಾಂ ಉ. ೬. ೪ರ ಪ್ರಕಾರ ಲೋಹಿತ-ಶುಕ್ಲ-ಕೃಷ್ಣಗಳು ಅಗ್ನಿ-ನೀರು-ಭೂಮಿಗಳ ಬಣ್ಣಗಳು.

ವಾಯು, ಅದರಿಂದ ಆಕಾಶ—ಎಂದು ಅನುಮಾನಿಸಬಹುದು. ಅದರಿಂದ ಏಕಮೇವಾ-ದ್ವಿತೀಯವಾದ ಪರಬ್ರಹ್ಮವು ಸಿದ್ಧವಾಗುವುದು, ಅದರಲ್ಲಿ ಸರ್ವಪ್ರಮಾಣಗಳೂ ಕೊನೆಗಾಣುವುವು [1]

ವಿ.—ಚಿನ್ನದ ಕರ್ಣಕುಂಡಲವನ್ನು ನೋಡಿದಾಗ ಅದರ ಕಾರಣವಾದ ಚಿನ್ನವು ಕಂಡುಬರುತ್ತದೆ ಚಿನ್ನವೇ ಮೊದಲಾದ ದ್ರವ್ಯಗಳಲ್ಲಿ ಮಣ್ಣು ಮೊದಲಾದ ದ್ರವ್ಯಗಳನ್ನು ನಾವು ನೋಡುವುದಿಲ್ಲ. ಕಾರಣ, ಕಾರ್ಯ ಎಂದರೆ ಬಾಲಕನು ಯುವಕನಾಗುವಂತೆ. ಕಾರಣವಾದ ದ್ರವ್ಯವು ಬೇರೆ ಅವಸ್ಥೆಯನ್ನು ಹೊಂದುವುದೇ ಕಾರ್ಯವೆನಿಸುವುದು.[2] ಅಗ್ನಿಯ ಕಾರ್ಯವಾದ ಹೊಗೆಯಲ್ಲಿ ನಾವು ಅಗ್ನಿಯನ್ನು ಗುರುತಿಸದಿದ್ದರೂ ನಮ್ಮ ಪಕ್ಷಕ್ಕೆ ಹಾನಿಯಾಗುವುದಿಲ್ಲ; ಅಗ್ನಿಯು ಹೊಗೆಗೆ ಕೇವಲ ನಿಮಿತ್ತಕಾರಣವಾಗಿದೆ; ಏಕೆಂದರೆ ಅಗ್ನಿಯಿಂದ ಕೂಡಿದ ಹಸಿಸೌದೆಯಿಂದಲೇ ಹೊಗೆಯು ಏಳುತ್ತದೆ ಕಾರ್ಯದಲ್ಲಿ ಕಾರಣವಾದ ದ್ರವ್ಯವೇ ಕಂಡುಬರುವುದರಿಂದ ಬೇರೆಬೇರೆ ಶಬ್ದಗಳಿಗೂ ಭಾವನೆಗಳಿಗೂ ಅವಸ್ಥೆಯ ಭೇದಗಳೇ ಕಾರಣಗಳೆಂದು ತಿಳಿದುಬರುತ್ತದೆ.[3]

ದ್ವೈ.—ಪರಬ್ರಹ್ಮನಿಗಿಂತ ಬೇರೆಯಾದ ಸ್ವತಂತ್ರಸಾಧನಗಳಿದ್ದರೆ ಅವು ಪ್ರಮಾಣಗಳಿಂದ ತಿಳಿದುಬರುತ್ತಿದ್ದವು [4] ಐದು ವೇದಗಳಿಂದ ಹೇಳಲ್ಪಡದೆ ಇರುವ ಯಾವ ವಸ್ತುವೂ ಇಲ್ಲ.

**ಸತ್ತ್ವಾಚ್ಚಾವರಸ್ಯ* ॥ ೧೬ ॥**

೧೬. ಈಚಿನದು ಇರುವುದರಿಂದಲೂ (ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ).

ಉತ್ತರಕಾಲೀನವಾದದ್ದು, ಎಂದರೆ ಕಾರ್ಯವು, ತನ್ನ ಉತ್ಪತ್ತಿಗೆ ಮೊದಲು ಕಾರಣರೂಪದಿಂದಲೇ ಕಾರಣದಲ್ಲಿತ್ತೆಂದು ಶ್ರುತಿಗಳು ಹೇಳುತ್ತವೆ. 'ಸೋಮ್ಯ, ಮೊದಲು ಇದು ಸದ್ವಸ್ತುವೇ ಆಗಿತ್ತು' (ಛಾಂ. ಉ. ೬. ೨. ೧);[5] 'ಮೊದಲು ಇದು ಆತ್ಮನೊಬ್ಬನೇ

---

[1] ತತಃ ಪರಂ ಬ್ರಹ್ಮೈಕಮೇವಾದ್ವಿತೀಯಮ್, ತತ್ರ ಸರ್ವಪ್ರಮಾಣಾನಾಂ ನಿಷ್ಠಾಮ-ವೋಚಾಮ (ಸೂ. ಭಾ.).

[2] ಬಾಲಯುವಾದಿವತ್ ಕಾರಣಭೂತಮೇವ ದ್ರವ್ಯಮವಸ್ಥಾಂತರಾಪನ್ನಂ ಕಾರ್ಯಮಿತಿ ಗೀಯತೇ (ಶ್ರೀಭಾಷ್ಯ).

[3] ಅತಃ ಕಾರ್ಯಭಾವೇ ಚ ತದೇವೇದಮಿತ್ಯುಪಲಬ್ಧೇರ್ಬುದ್ಧಿಶಬ್ದಾಂತರಾದಯೋಽವ-ಸ್ಥಾಭೇದಮಾತ್ರನಿಬಂಧನಾ ಇತ್ಯವಗಮ್ಯತೇ (ಶ್ರೀಭಾಷ್ಯ).

[4] ಸ್ವತಂತ್ರಸಾಧನಭಾವೇ ಪ್ರಮಾಣೈರುಪಲಭ್ಯೇತ (ಮ. ಭಾ).

* ಶ್ರೀಭಾಷ್ಯದಲ್ಲಿ ಸತ್ತ್ವಾಚ್ಚಾಪರಸ್ಯ ಎಂದು ಸೂತ್ರವು ಉಪಲಬ್ಧವಾಗಿದೆ.

[5] ಸದೇವ ಸೋಮ್ಯೇದಮಗ್ರ ಆಸೀತ್ ।

ಆಗಿತ್ತು'[1] (ಐ. ಆ ೨. ४. ೧. ೧). ಯಾವುದು ಯಾವುದರ ರೂಪದಿಂದ ಯಾವುದರಲ್ಲಿ ಇರುವುದಿಲ್ಲವೊ ಅದು ಅದರಿಂದ ಉತ್ಪನ್ನವಾಗುವುದಿಲ್ಲ ; ಉದಾಹರಣೆಗೆ—ಮರಳಿನಿಂದ ಎಣ್ಣೆಯು ಬರುವುದಿಲ್ಲ[2] ಹೇಗೆ ಕಾರಣವಾದ ಬ್ರಹ್ಮವು ತ್ರಿಕಾಲಗಳಲ್ಲಿಯೂ ಸತ್ತ್ವವನ್ನು (ಎಂದರೆ ಇರುವಿಕೆಯನ್ನು) ಬಿಡುವುದಿಲ್ಲವೊ ಹಾಗೆಯೇ ಕಾರ್ಯವಾದ ಜಗತ್ತು ತ್ರಿಕಾಲಗಳಲ್ಲಿಯೂ ಸತ್ತ್ವವನ್ನು ಬಿಡುವುದಿಲ್ಲ. ಸತ್ತ್ವವು ಒಂದೇ ಆಗಿರುವುದರಿಂದಲೂ ಕಾರ್ಯವು ಕಾರಣದಿಂದ ಬೇರೆಯಾಗಿಲ್ಲ.

ವಿ.—ಲೋಕದಲ್ಲಿಯೂ ವೇದದಲ್ಲಿಯೂ ಕಾರ್ಯವನ್ನೇ ಕಾರಣವೆಂದು ಹೇಳಿದೆ; ಉದಾಹರಣೆಗೆ—'ಈ ಗಡಿಗೆ ಮೊದಲಾದುವೆಲ್ಲ ಬೆಳಗ್ಗೆ ಮಣ್ಣೇ ಆಗಿತ್ತು'; ವೇದದಲ್ಲಿ—'ಸೋಮ್ಯ, ಮೊದಲು ಇದು ಸದ್ವಸ್ತುವೇ ಆಗಿತ್ತು' (ಛಾಂ. ಉ. ೬. ೨. ೧).

ದ್ವೈತ.—'ನೀರು ಭೂಮಿ ಮೊದಲಾದುವುಗಳೊಂದಿಗೆ ಪುರುಷನು ಹುಟ್ಟಿದನು' (ತೈ. ಆ. ೩. ೧೩)—ಇವೇ ಮೊದಲಾದ ಶ್ರುತಿಗಳ ಪ್ರಕಾರ ಬೇರೆ ಸಾಧನಗಳಿರುವಾಗ ಸಾಧನಗಳಿಲ್ಲವೆಂದು ಹೇಗೆ ಹೇಳಲಾಗುತ್ತದೆ ?—ಎಂದು ಆಕ್ಷೇಪಿಸಿದರೆ, ಅಂಥ ಕೀಳುತರದ ಸಾಧನಗಳು ಈಶ್ವರನ ಅಧೀನದಲ್ಲಿಯೇ ಇವೆ'[3]—ಎಂಬುದು ಉತ್ತರ.

**ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್* ॥ ೧೭ ॥**

೧೭ ಅಸತ್ತನ್ನು ನಿರ್ದೇಶಿಸಿರುವುದರಿಂದ (ಕಾರ್ಯವು ಉತ್ಪತ್ತಿಗೆ ಮೊದಲು) ಇರಲಿಲ್ಲವೆಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಬೇರೆ ಧರ್ಮದ ದೃಷ್ಟಿಯಿಂದ (ಹಾಗೆ ಹೇಳಿರುತ್ತದೆ) , ಇದು ವಾಕ್ಯಶೇಷದಿಂದ ತಿಳಿದು ಬರುತ್ತದೆ

ಕೆಲವು ಶ್ರುತಿಗಳ ಆಧಾರದ ಮೇಲೆ ಇನ್ನೊಂದು ಆಕ್ಷೇಪವನ್ನು ಎತ್ತಿದೆ ; 'ಇದೆಲ್ಲವೂ ಮೊದಲು ಅಸತ್ತೇ ಆಗಿತ್ತು'[4] (ಛಾಂ. ಉ. ೩. ೧೯. ೧), 'ಇದು ಮೊದಲು ಅಸತ್ತೇ

---

[1] ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ।

[2] ಯಚ್ಚ ಯದಾತ್ಮನಾ ಯತ್ರ ನ ವರ್ತತೇ ನ ತತ್ ತತ ಉತ್ಪದ್ಯತೇ, ಯಥಾ ಸಿಕತಾಭ್ಯಸ್ತೈಲಮ್ (ಸೂ. ಭಾ.).

[3] ಅವರಸ್ಯ ತದಧೀನಸ್ಯ ಸಾಧನಸ್ಯ ಸತ್ತ್ವಾತ್ (ಮ. ಭಾ.).

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನ ಸೂತ್ರ ಎರಡೂ ಸೇರಿ ಒಂದಾಗಿವೆ.

[4] ಅಸದೇವೇದಮಗ್ರ ಆಸೀತ್ ।

ಆಗಿತ್ತು[1]' (ತೈ. ಉ. ೨. ೭)[2]; ಈ ಶ್ರುತಿಗಳ ಪ್ರಕಾರ ಉತ್ಪತ್ತಿಗೆ ಮೊದಲು ಕಾರ್ಯಕ್ಕೆ ಅಸ್ತಿತ್ವವನ್ನು ಹೇಳಲು ಸಾಧ್ಯವಿಲ್ಲ. ಇದಕ್ಕೆ ಪರಿಹಾರ ಹೀಗಿದೆ ; ಉತ್ಪತ್ತಿಗೆ ಮೊದಲು ಕಾರ್ಯವು ಅಸತ್ತಾಗಿತ್ತು ಎಂದರೆ ಅತ್ಯಂತವಾಗಿ ಅಸತ್ ಆಗಿತ್ತು ಎಂಬುದು ಅರ್ಥವಲ್ಲ; ವ್ಯಕ್ತವಾದ ನಾಮ-ರೂಪತ್ವವೆಂಬ ಧರ್ಮಕ್ಕಿಂತ ಬೇರೆಯಾದ ಅವ್ಯಕ್ತ-ನಾಮ-ರೂಪತ್ವ ವೆಂಬ ಬೇರೆ ಧರ್ಮವನ್ನು ಪಡೆದಿತ್ತು ಎಂದಭಿಪ್ರಾಯ. ಈ ಧರ್ಮದ ಅಥವಾ ಅವಸ್ಥೆಯ ದೃಷ್ಟಿಯಿಂದ ಉತ್ಪತ್ತಿಗೆ ಮೊದಲು ಕಾರಣದೊಂದಿಗೆ ಅನನ್ಯವಾಗಿದ್ದ ಕಾರ್ಯವನ್ನು ಅಸತ್ ಎಂದು ಕರೆದಿದೆ.[3] ಇದು ಮುಂದೆ ಬರುವ ವಾಕ್ಯಭಾಗದಿಂದ[4] ತಿಳಿದುಬರುತ್ತದೆ.

ವಿ.—'(ಉತ್ಪತ್ತಿಗೆ ಮೊದಲು ಏನೂ ಇರಲಿಲ್ಲವೆಂದು ಶ್ರುತಿಗಳು) ಅಸತ್ ಶಬ್ದದ ಮೂಲಕ ನಿರ್ದೇಶಿಸಿರುವುದರಿಂದ (ಕಾರ್ಯವು ಕಾರಣದಲ್ಲಿ) ಇಲ್ಲ ಎಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ (ಇಂಥ ನಿರ್ದೇಶಕ್ಕೆ) ಬೇರೊಂದು ಧರ್ಮವು (ಕಾರಣವಾಗಿರುತ್ತದೆ). ಇದು ವಾಕ್ಯಶೇಷದಿಂದಲೂ ಯುಕ್ತಿಯಿಂದಲೂ ಬೇರೆ ಶ್ರುತಿಯಿಂದಲೂ ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ.

ಕಾರ್ಯದ್ರವ್ಯವನ್ನು ಅಸತ್ ಎಂದು ನಿರ್ದೇಶಿಸುವುದಕ್ಕೆ ಒಂದು ಕಾರಣವಿದೆ : ಅದು ಹಿಂದಿನ ಕಾಲದಲ್ಲಿ ಬೇರೆ ಧರ್ಮದಿಂದ, ಎಂದರೆ ಸಂಸ್ಥಾನದಿಂದ ಕೂಡಿತ್ತು ; ಕೇವಲ ಶೂನ್ಯವಾಗಿರಲಿಲ್ಲ. ಸತ್ತ್ವ (ಇರುವಿಕೆ) ಎಂಬ ಧರ್ಮದಿಂದ ಭಿನ್ನವಾಗಿರುವ ಧರ್ಮವು ಅಸತ್ತ್ವವು (ಇಲ್ಲದಿರುವಿಕೆ) 'ಇದು' ಎಂದು ನಿರ್ದಿಷ್ಟವಾದ ಜಗತ್ತಿನ ಸತ್ತ್ವ ಧರ್ಮವು ನಾಮರೂಪಗಳುಳ್ಳದ್ದಾಗಿದೆ, ಅಸತ್ತ್ವಧರ್ಮವು ನಾಮ-ರೂಪಗಳಿಗೆ ವಿರುದ್ಧ ವಾದ ಸೂಕ್ಷ್ಮಾವಸ್ಥೆ [4] ಇದು ವಾಕ್ಯಶೇಷದಿಂದಲೂ ಯುಕ್ತಿಯಿಂದಲೂ ಮತ್ತೊಂದು ಶ್ರುತಿಯಿಂದಲೂ ತಿಳಿದುಬಂದಿದೆ.

(೧) 'ಮೊದಲು ಇದೇನೂ ಆಗಿರಲಿಲ್ಲ'[5] ಎಂಬ ವಾಕ್ಯಕ್ಕೆ 'ಅಸತ್ತು "ನಾನು ಆಗುವೆನು" ಎಂದು ಸಂಕಲ್ಪಿಸಿತು'[6] ಎಂಬುದು ವಾಕ್ಯಶೇಷ 'ಅಸತ್' ಎಂದು ನಿರ್ದೇ

---

[1] ಅಸದ್ವಾ ಇದಮಗ್ರ ಆಸೀತ್ ।

[2] ವ್ಯಾಕೃತನಾಮರೂಪತ್ವಾದ್ ಧರ್ಮಾದವ್ಯಾಕೃತನಾಮರೂಪತ್ವಂ ಧರ್ಮಾಂತರಂ ತೇನ ಧರ್ಮಾಂತರೇಣಾಯಮಸದ್ವ್ಯಪದೇಶಃ ಪ್ರಾಗುತ್ಪತ್ತೇಃ ಸತ ಏವ ಕಾರ್ಯಸ್ಯ ಕಾರಣರೂಪೇಣಾ-ನನ್ಯಸ್ಯ (ಸೂ ಭಾ.).

[3] 'ಅದು ಸತ್ ಆಯಿತು' ತತ್ ಸದಾಸೀತ್ (ಛಾಂ. ಉ. ೩. ೧೯. ೧); 'ಅದು ತನ್ನನ್ನು ತಾನೇ ಉತ್ಪತ್ತಿಮಾಡಿಕೊಂಡಿತು' ತದಾತ್ಮಾನಂ ಸ್ವಯಮಕುರುತ (ತೈ. ಉ. ೨. ೭.).

[4] ಇದಂಶಬ್ದನಿರ್ದಿಷ್ಟಸ್ಯ ಜಗತಃ ಸತ್ತ್ವಧರ್ಮೋ ನಾಮರೂಪೇ, ಅಸತ್ತ್ವಧರ್ಮಸ್ತು ತದ್ವಿರೋಧಿನೀ ಸೂಕ್ಷ್ಮಾವಸ್ಥಾ (ಶ್ರೀಭಾಷ್ಯ).

[5] ಇದಂ ವಾ ಅಗ್ರೇ ನೈವ ಕಿಂಚನಾಸೀತ್ ।

[6] ತದಸದೇವ ಸನ್ಮನೋಽಕುರುತ ಸ್ಯಾಮಿತಿ ।

ಶಿಸಲ್ಪಟ್ಟದ್ದೇ ಸಂಕಲ್ಪವನ್ನು ಮಾಡಿದೆ. ಇದು ಕೇವಲ ಶೂನ್ಯವಾಗಿದ್ದರೆ ಇಂಥ ಮನನ ಕಾರ್ಯವನ್ನು ಮಾಡಲು ಶಕ್ಯವಾಗುತ್ತಿರಲಿಲ್ಲ. ಆದುದರಿಂದ ಅಸತ್-ಶಬ್ದವು ಹಿಂದೆ ಇದ್ದ ಸೂಕ್ಷ್ಮಾವಸ್ಥೆಯನ್ನು ಸೂಚಿಸುತ್ತದೆ.

(೨) ಸತ್, ಅಸತ್ ಎಂಬಿವು ವಸ್ತುಗಳ ಧರ್ಮಗಳೆಂದು ಯುಕ್ತಿಯೂ ತಿಳಿಸುತ್ತದೆ ಮಣ್ಣು ಒಂದು ವಿಶಿಷ್ಟವಾದ ಆಕಾರವನ್ನು ಪಡೆದಿರುವಾಗ 'ಗಡಿಗೆ ಇದೆ' ಎಂದು ಹೇಳುತ್ತೇವೆ; ಇದಕ್ಕಿಂತ ವಿರುದ್ಧವಾದ ಅವಸ್ಥೆಯನ್ನು ಪಡೆದಿರುವಾಗ 'ಗಡಿಗೆ ಇಲ್ಲ' ಎಂದು ಹೇಳುತ್ತೇವೆ. 'ಗಡಿಗೆ ಇಲ್ಲ' ಎಂದು ಹೇಳಿದಾಗ ಗಡಿಗೆಯೇ ಇಲ್ಲ ಎಂಬುದು ಅರ್ಥವಲ್ಲ, ಅದು ಚೂರುಚೂರಾಗಿ ಬೇರೆ ಅವಸ್ಥೆಯಲ್ಲಿದೆ ಎಂದರ್ಥ. ಅತ್ಯಂತಾಭಾವವು ನಮ್ಮ ವ್ಯವಹಾರಕ್ಕೆ ಗೋಚರಿಸುವುದಿಲ್ಲ.

(೩) **ಸದೇವ ಸೋಮ್ಯೇದಮಗ್ರ ಆಸೀತ್** (ಛಾಂ. ಉ. ೬. ೨. ೧) ಎಂಬ ಪ್ರಸಿದ್ಧವಾಕ್ಯವೇ ಇನ್ನೊಂದು ಶ್ರುತಿ ಇದು ಪ್ರಳಯಕಾಲದಲ್ಲಿರುವ ವಸ್ತುವನ್ನು ಸತ್-ಶಬ್ದದಿಂದ ಸೂಚಿಸುತ್ತದೆ. ಹೀಗೆ ಶ್ರುತಿಗಳಲ್ಲಿ ಬರುವ ಸತ್ ಅಸತ್ ಶಬ್ದಗಳು ಒಂದೇ ಕಾಲದಲ್ಲಿರುವ ಒಂದೇ ವಸ್ತುವನ್ನು ಸೂಚಿಸುತ್ತವೆ.

**ಧ್ವೈ.**—'ಅಸತ್-ನಿರ್ದೇಶನದ ಪ್ರಕಾರ ಸೃಷ್ಟಿಗೆ ಮೊದಲು (ಪರಬ್ರಹ್ಮನನ್ನು ಬಿಟ್ಟರೆ) ಯಾವ ಸಾಧನವೂ ಇರಲಿಲ್ಲವೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಧರ್ಮಾಂತರದಿಂದ ಇನ್ನು ಕೆಲವು ವಸ್ತುಗಳನ್ನು ಹೇಳಿದೆ; ಇದು ವಾಕ್ಯಶೇಷದಿಂದ ತಿಳಿದು ಬರುತ್ತದೆ' ಎಂಬುದು ಸೂತ್ರಾರ್ಥ.

'ಅಸತ್ತೂ ಇರಲಿಲ್ಲ'[1] (ಋ. ವೇ. ೧೦. ೧೨೯ ೧) ಎಂಬಲ್ಲಿ ಏನೂ ಇರಲಿಲ್ಲ ಎಂದು ತಿಳಿಯಕೂಡದು; ಏಕೆಂದರೆ ಅವ್ಯಕ್ತತ್ವ ಪಾರತಂತ್ರ್ಯ ಮೊದಲಾದ ಧರ್ಮಾಂತರದಿಂದ ಅಸತ್ತ್ವವನ್ನು ಹೇಳಿದೆ,[2] ಸ್ವರೂಪತಃ ಅಲ್ಲ. 'ತಮಸ್ಸಿತ್ತು'[3] (ಋ. ವೇ. ೧೦. ೧೨೯. ೩) ಎಂಬುದು ವಾಕ್ಯಶೇಷವು. ಇದರ ಪ್ರಕಾರ ಪ್ರಕೃತ್ಯಾದಿಗಳು ಇದ್ದುವು ಎಂದು ತಿಳಿದುಬರುತ್ತದೆ

## ಯುಕ್ತೇಃ ಶಬ್ದಾಂತರಾಚ್ಚ ॥ ೧೮ ॥

೧೮. ಯುಕ್ತಿಯಿಂದ ಮತ್ತು ಬೇರೆ ಶ್ರುತಿಯಿಂದ (ಉತ್ಪತ್ತಿಗೆ ಮೊದಲು ಕಾರ್ಯವು ಇರುವುದೆಂದೂ ಅದು ಕಾರಣಕ್ಕೆ ಅನನ್ಯವಾಗಿರುವುದೆಂದೂ ತಿಳಿದುಬರುತ್ತದೆ).

---

[1] ನಾಸದಾಸೀತ್ (ಮ. ಭಾ.).

[2] ಅವ್ಯಕ್ತತ್ವಪಾರತಂತ್ರ್ಯಾದಿಧರ್ಮಾಂತರೇಣ ಹಿ ತದುಚ್ಯತೇ (ಮ. ಭಾ.).

[3] ತಮ ಆಸೀತ್ (ಮ. ಭಾ.).

ಮೊಸರು, ಗಡಿಗೆ, ಚಿನ್ನದ ಆಭರಣ—ಇವೇ ಮೊದಲಾದ ಕಾರ್ಯಗಳನ್ನು ತಯಾರಿಸಬೇಕಾಗಿರುವವರು ಹಾಲು, ಮಣ್ಣು, ಚಿನ್ನ ಮೊದಲಾದ ಕಾರಣಗಳನ್ನು ಉಪಯೋಗಿಸಬೇಕಾಗುತ್ತದೆ. ಮೊಸರನ್ನು ತಯಾರಿಸುವವರು ಮಣ್ಣನ್ನು ಉಪಯೋಗಿಸುವುದಿಲ್ಲ, ಗಡಿಗೆಯನ್ನು ತಯಾರಿಸುವವರು ಹಾಲನ್ನು ಉಪಯೋಗಿಸುವುದಿಲ್ಲ. ಕಾರ್ಯವು ಕಾರಣದಲ್ಲಿ ಇಲ್ಲದಿದ್ದರೆ ಇವೆಲ್ಲಾ ಸಾಧ್ಯವಾಗುತ್ತಿತ್ತು. ಕಾರಣದಲ್ಲಿ ಯಾವ ಕಾರ್ಯವೂ ಇಲ್ಲದಿದ್ದರೂ ಹಾಲಿನಲ್ಲಿ ಮೊಸರಿನ ಒಂದು ಅತಿಶಯವಿರುತ್ತದೆ,[1] ಮಣ್ಣಿನಲ್ಲಿ ಗಡಿಗೆಯ ಒಂದು ಅತಿಶಯವಿರುತ್ತದೆ—ಎಂದು ಹೇಳಿದರೆ, ಹಿಂದಿನ ಅವಸ್ಥೆಯಲ್ಲಿ ಒಂದು ಕಾರ್ಯದ ಅತಿಶಯವನ್ನು ಒಪ್ಪಿಕೊಳ್ಳುವುದರಿಂದ ಅಸತ್ಕಾರ್ಯವಾದವು ಹೋಗುತ್ತದೆ ಮತ್ತು ಸತ್ಕಾರ್ಯವಾದವು ಸಿದ್ಧಿಸುತ್ತದೆ. ಒಂದು ವಿಶಿಷ್ಟವಾದ ಕಾರ್ಯವು ಕಾರಣದಿಂದ ಉತ್ಪನ್ನವಾಗುತ್ತದೆ ಎಂಬುದನ್ನು ಸಾಧಿಸುವುದಕ್ಕಾಗಿ ಕಾರಣದಲ್ಲಿ ಒಂದು ಶಕ್ತಿಯನ್ನು ಕಲ್ಪಿಸಿಕೊಂಡರೂ ಅದು ಕಾರ್ಯ-ಕಾರಣಗಳಿಂದ ಬೇರೆಯಾಗಿರಬೇಕು ಅಥವಾ ಅಸತ್ತಾಗಿರಬೇಕು ಎಂದು ಒಪ್ಪಿಕೊಳ್ಳಬೇಕಾಗುತ್ತದೆ ; ಆ ಶಕ್ತಿಯು ಈ ಎರಡರಲ್ಲಿ ಒಂದಾಗಿದ್ದರೂ ಕಾರ್ಯವನ್ನು ನಿರ್ಧರಿಸಲಾರದು ಆದುದರಿಂದ ಶಕ್ತಿಯು ಕಾರಣದ ಸ್ವರೂಪವು, ಕಾರ್ಯವು ಶಕ್ತಿಯ ಸ್ವರೂಪವು ಎಂದಾಯಿತು.

ಕಾರ್ಯ-ಕಾರಣಗಳು ಬೇರೆಬೇರೆಯಾಗಿದ್ದರೂ ಸಮವಾಯ-ಸಂಬಂಧದಿಂದ[2] ಅವು ಹಾಗೆ ಕಾಣುವುದಿಲ್ಲ ಎಂದು ಹೇಳಿದರೆ ಸಮವಾಯಕ್ಕೂ ಸಮವಾಯಿಗಳಿಗೂ[3] ಸಂಬಂಧವನ್ನು ಒಪ್ಪಿಕೊಳ್ಳಬೇಕಾಗುತ್ತದೆ ; ಹಾಗೆ ಒಪ್ಪಿಕೊಂಡರೆ ಅದಕ್ಕದಕ್ಕೆ ಇನ್ನೊಂದು ಇನ್ನೊಂದು ಸಂಬಂಧವನ್ನು ಕಲ್ಪಿಸಬೇಕಾಗಿ ಅನವಸ್ಥಾ-ದೋಷವು ಬರುತ್ತದೆ. ಹಾಗೆ ಒಪ್ಪಿಕೊಳ್ಳದಿದ್ದರೆ ಸಮವಾಯ-ಸಮವಾಯಿಗಳಿಗೆ ವಿಚ್ಛೇದವುಂಟಾಗುತ್ತದೆ. ದ್ರವ್ಯ, ಗುಣ ಇವೇ ಮೊದಲಾದುವುಗಳ ತಾದಾತ್ಮ್ಯವು ಕಂಡುಬರುತ್ತಿರುವುದರಿಂದ ಸಮವಾಯ-ಕಲ್ಪನೆಯು ವ್ಯರ್ಥ. ಕಾರ್ಯ-ಕಾರಣ-ಸಂಬಂಧವು ಅವಯವಿ-ಅವಯವ-ಸಂಬಂಧದ ಹಾಗೆ ಎಂದು ಹೇಳಿದರೆ, ಅದು ಎಲ್ಲ ಅವಯವಗಳಲ್ಲಿ ಒಟ್ಟಾಗಿರುತ್ತದೆಯೊ ಅಥವಾ ಒಂದೊಂದು ಅವಯವದಲ್ಲಿ ಇರುತ್ತದೆಯೊ ಎಂದು ಕೇಳಬೇಕಾಗುತ್ತದೆ. ಮೊದಲನೆಯದಾಗಿದ್ದರೆ ಅವಯವಿಯು ಕಂಡುಬರುವುದಿಲ್ಲ ; ಏಕೆಂದರೆ ಒಂದು ವಸ್ತುವಿನ ಎಲ್ಲ ಅವಯವಗಳೊಂದಿಗೆ ಇಂದ್ರಿಯದ ಸಂಕರ್ಷವು ಸಾಧ್ಯವಿಲ್ಲ. ಹೀಗಲ್ಲದೆ ಅವಯವಿಯು ತನ್ನ ಅವಯವಗಳಿಂದ ಎಲ್ಲ ಅವಯವಗಳಲ್ಲಿ ಇರುವುದೆಂದರೆ ಆಗಲೂ ಕೂಡ ಆರಂಭಕವಾದ,

---

[1] ಅತಿಶಯ ಎಂದರೆ ಒಂದಾನೊಂದು ಶಕ್ತಿ.

[2] ಅವಯವಿ-ಅವಯವ, ದ್ರವ್ಯ-ಗುಣ, ಕಾರಣ-ಕಾರ್ಯ—ಇವೇ ಮೊದಲಾದುವುಗಳಲ್ಲಿರುವ ನಿತ್ಯಸಂಬಂಧಕ್ಕೆ ಸಮವಾಯ ಎಂದು ಹೆಸರು.

[3] ಸಮವಾಯಸಂಬಂಧವಿರುವ ಎರಡು ವಸ್ತುಗಳು.

ಎಂದರೆ ಕಾರಣವಾಗಿರುವ, ಅವಯುವಗಳಲ್ಲದೆ ಇತರ ಅವಯುವಗಳನ್ನೂ ಅವಯುವಿಗಳಿಗೆ ಕಲ್ಪಿಸಬೇಕಾಗುವುದು ; ಅಂಥ ಬೇರೆ ಅವಯುವಗಳಿಂದ ಅವಯುವಿಯು ಆರಂಭಕವಾದ ಅವಯುವಗಳಲ್ಲಿ ಇದೆ ಎಂದು ಹೇಳಬೇಕಾಗುವುದು. ಒರೆಯು ಅವಯುವಿಗಳಿಗಿಂತ ಬೇರೆಯಾದ ಅವಯುವಗಳಿಂದಲೇ ಕತ್ತಿಯು ಒರೆಯನ್ನು ವ್ಯಾಪಿಸಿಕೊಂಡಿದೆ. ಹಾಗಾದರೂ ಅನವಸ್ಥೆಯೇ ಬಂದೊದಗುವುದು ; ಏಕೆಂದರೆ ಅವಯುವಿಯು ಆಯಾ ಅವಯುವಗಳಲ್ಲಿರಲು ಬೇರೆ ಬೇರೆ ಅವಯುವಗಳನ್ನು ಕಲ್ಪಿಸಬೇಕಾಗುವುದು. ಅವಯುವಿಯು ಒಂದೊಂದು ಅವಯವದಲ್ಲಿಯೂ ಇದೆ ಎಂಬ ಎರಡನೆಯ ಅಭಿಪ್ರಾಯವನ್ನೂ ಒಪ್ಪಿಕೊಳ್ಳಲಾಗುವುದಿಲ್ಲ ; ಏಕೆಂದರೆ ಒಂದು ಕಡೆ ವ್ಯಾಪಾರವಿದ್ದರೆ ಇನ್ನೊಂದು ಕಡೆಯಲ್ಲಿ ವ್ಯಾಪಾರವಿರುವುದಿಲ್ಲ.[1] ಒಬ್ಬನೇ ಮನುಷ್ಯನು ಎರಡು ಊರುಗಳಲ್ಲಿ ಒಂದೇ ಕಾಲದಲ್ಲಿ ಇರಲಾರನು ; ಹಾಗಿರಲು ಇಬ್ಬರು ವ್ಯಕ್ತಿಗಳಿಗೆ ಸಾಧ್ಯವಾಗುತ್ತದೆ.

ದನದ ಜಾತಿ ಅಥವಾ ಸಾಮಾನ್ಯ (ಎಂದರೆ ಗೋತ್ವ) ಪ್ರತಿಯೊಂದು ದನದಲ್ಲಿಯೂ ಇರುವಂತೆ ಅವಯುವಿಯು ಅವಯುವದಲ್ಲಿ ಪೂರ್ಣವಾಗಿರುವುದು ಎಂಬ ಅಭಿಪ್ರಾಯವೂ ಸರಿಯಲ್ಲ ; ಏಕೆಂದರೆ ಗೋತ್ವವು ಪ್ರತಿಯೊಂದು ಗೋವಿನಲ್ಲಿಯೂ ಪ್ರತ್ಯಕ್ಷವಾಗಿ ಕಾಣುವಂತೆ ಅವಯುವಿಯು ಒಂದೊಂದು ಅವಯುವದಲ್ಲಿಯೂ ಪ್ರತ್ಯಕ್ಷವಾಗಿ ಕಾಣುವುದಿಲ್ಲ. ಮತ್ತೆ ಅವಯುವಿಯು ಪ್ರತಿಯೊಂದು ಅವಯುವದಲ್ಲಿಯೂ ಪೂರ್ಣವಾಗಿದ್ದರೆ ಗೋವಿನ ಕೊಂಬಿನಿಂದ ಅಥವಾ ಬಾಲದಿಂದ ಹಾಲು ಬರಬಹುದಾಗಿತ್ತು !

ಮತ್ತೆ ಉತ್ಪತ್ತಿಗೆ ಮೊದಲು ಕಾರ್ಯವಿಲ್ಲದಿದ್ದರೆ ಉತ್ಪತ್ತಿಗೆ ಕರ್ತೃವಿಲ್ಲವೆಂದೂ ಅದು ನಿರಾತ್ಮಕವೆಂದೂ ಆಗುವುದು. ಉತ್ಪತ್ತಿಯೆಂಬುದು ಒಂದು ಕ್ರಿಯೆ ; ಅದು ಕರ್ತೃವನ್ನು ಯಾವಾಗಲೂ ಅಪೇಕ್ಷಿಸುತ್ತದೆ. ಕರ್ತೃವಿಲ್ಲದೆ ಕ್ರಿಯೆಯು ವಿಪ್ರತಿಷಿದ್ಧವಾಗಿರುತ್ತದೆ. ಉತ್ಪತ್ತಿಗೆ ಮೊದಲು ಮಣ್ಣಿನ ಆಕಾರದಲ್ಲಿ ಗಡಿಗೆಯ ಸತ್ತ್ವವನ್ನು (ಎಂದರೆ ಇರುವಿಕೆಯನ್ನು) ಒಪ್ಪಿಕೊಳ್ಳದಿದ್ದರೆ 'ಗಡಿಗೆಯು ಉತ್ಪನ್ನವಾಯಿತು' ಎಂಬುದಕ್ಕೆ ಅರ್ಥವೇ ಇರುವುದಿಲ್ಲ ತನ್ನ ಕಾರಣದ ಸತ್ತಾಸಂಬಂಧವೇ ಕಾರ್ಯದ ಉತ್ಪತ್ತಿ ಮತ್ತು ಸ್ವರೂಪಸಿದ್ಧಿ ಎಂದು ಹೇಳಿದರೆ, ಇನ್ನೂ ಉತ್ಪನ್ನವಾಗದೆ ಇದ್ದದ್ದು ಸಂಬಂಧವನ್ನು ಹೇಗೆ ಪಡೆಯುತ್ತದೆ ?—ಎಂದು ಪ್ರಶ್ನಿಸಬೇಕಾಗುವುದು. ಇರುವ ಎರಡು ವಸ್ತುಗಳಿಗೆ ಸಂಬಂಧವಾಗುವುದೇ ಹೊರತು ಒಂದು ಇದ್ದು ಮತ್ತೊಂದು ಇಲ್ಲದಿರುವ ಅಥವಾ ಎರಡೂ ಇಲ್ಲದಿರುವ ವಸ್ತುಗಳಿಗೆ ಸಂಬಂಧವಾಗಲಾರದು. ಇರುವ ವಸ್ತುಗಳಿಗೆ ಮಾತ್ರ ಮಿತಿಯನ್ನು ಕಲ್ಪಿಸಲು ಸಾಧ್ಯವಾಗುತ್ತದೆ. ಎಂದಿಗೂ ಇಲ್ಲದೆ ಇರುವ ವಸ್ತುವಿಗೆ 'ಉತ್ಪತ್ತಿಗೆ ಮೊದಲು' ಎಂದು ಹೇಳಲಾಗುವುದಿಲ್ಲ. ಬಂಜೆಯ ಮಗನು ಪೂರ್ಣವರ್ಮನಿಗೆ ಮೊದಲು ರಾಜನಾಗಿದ್ದನು ಎಂಬುದು ಅಸಂಬದ್ಧವಾದ ಮಾತು ; ಏಕೆಂದರೆ ಎಂದಿಗೂ

[1] ಒಂದು ನೂಲಿನಲ್ಲಿ ಬಟ್ಟೆಯಿರುವಾಗ ಬೇರೊಂದು ನೂಲಿನಲ್ಲಿ ಇರುವುದಿಲ್ಲ.

ಹುಟ್ಟದೆ ಇರುವ ಬಂಜೆಯ ಮಗನಿಗೆ ಕಾಲದ ಮಿತಿಯನ್ನು ಕಲ್ಪಿಸುವುದು ಅಸಂಗತ ವಾಗಿರುತ್ತದೆ. ಹೀಗೆಯೇ ಕಾರ್ಯವು ಕಾರಣದಲ್ಲಿಲ್ಲದಿದ್ದರೆ ಉತ್ಪತ್ತಿಯನ್ನು ಹೊಂದುವು ದಿಲ್ಲ.

ಅಸತ್ಕಾರ್ಯವಾದಿಯು ಪುನಃ ಆಕ್ಷೇಪಿಸುತ್ತಾನೆ; ಅಸತ್ತು ಸದ್ವಸ್ತುವಾಗದಿದ್ದರೆ ಕುಂಬಾರ ಮೊದಲಾದ ಕಾರಕಗಳ ವ್ಯಾಪಾರವು ವ್ಯರ್ಥವಾಗುವುದಲ್ಲ? ಮೊದಲೇ ಸಿದ್ಧ ವಾಗಿರುವ ಕಾರಣದ ಸ್ವರೂಪಸಿದ್ಧಿಗೆ ಯಾವನೂ ಪ್ರಯತ್ನಿಸದಂತೆ ಮೊದಲೇ ಸಿದ್ಧವಾಗಿ ರುವ ಮತ್ತು ಕಾರಣಕ್ಕೆ ಅನನ್ಯವಾದ ಕಾರ್ಯದ ಸ್ವರೂಪಸಿದ್ಧಿಗಾಗಿ ಯಾವನೂ ಪ್ರಯ ತ್ನಿಸುವುದಿಲ್ಲ. ಆದರೆ ಜನರು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ ಆದುದರಿಂದ ಕಾರಕವ್ಯಾಪಾರವು ಸಾರ್ಥಕವಾಗಬೇಕಾದರೆ ಉತ್ಪತ್ತಿಗೆ ಮೊದಲು ಕಾರ್ಯವು ಇರ ಕೂಡದು. ಇದಕ್ಕೆ ಪರಿಹಾರ ಹೀಗಿದೆ: ಕಾರಣವನ್ನು ಕಾರ್ಯದ ಆಕಾರದಲ್ಲಿ ಸ್ಥಾಪಿಸು ವುದಕ್ಕಾಗಿ ಕಾರಕವ್ಯಾಪಾರವು ಸಾರ್ಥಕವಾಗುತ್ತದೆ; ಆಕಾರವೂ ಹೊಸದಲ್ಲ. ಕಾರ್ಯದ ಆಕಾರವು ಕೂಡ ಕಾರಣದ ಸ್ವರೂಪವೇ ಆಗಿರುತ್ತದೆ; ಏಕೆಂದರೆ ಅನಾತ್ಮ ವಾದದ್ದು ಆರಂಭಿಸುವುದಿಲ್ಲ ಎಂದು ಹಿಂದೆಯೇ ಹೇಳಿದೆ. ವಿಶೇಷವಿದ್ದ ಮಾತ್ರಕ್ಕೆ ವಸ್ತು ಬೇರೆಯಾಗುವುದಿಲ್ಲ. ಮನುಷ್ಯನು ಪ್ರತಿದಿನವೂ ತನ್ನ ಆಕಾರಾದಿಗಳಲ್ಲಿ ಬದಲಾಗು ತ್ತಿದ್ದರೂ ಅವನು ಬೇರೆಯವನಾಗುವುದಿಲ್ಲ. ಮೃತ್ಪಿಂಡವು ನಾಶವಾಗಿ ಮಡಕೆಯಾಗು ವಂತೆ ಮನುಷ್ಯನ ಸ್ಥಿತಿಯು ಮೃತ್ಯುವಿನಿಂದ ನಾಶವಾಗುವುದರಿಂದ ಅವನು ಅವನೇ ಆಗಿರುತ್ತಾನೆ—ಎಂದು ಹೇಳಿದರೆ ಈ ಉಪಮೆಯು ಸರಿಯಲ್ಲ; ಏಕೆಂದರೆ 'ಹಾಲು ಮೊಸರಾಗಿದೆ' ಎಂದು ಹೇಳಿದಾಗಲೂ ಹಾಲು ಬೇರೆ ಅವಸ್ಥೆಯಲ್ಲಿರುವುದು ಪ್ರತ್ಯಕ್ಷ ವಾಗಿರುತ್ತದೆ. ಕಾರಣದ ಸತ್ತ್ವವು ನಮಗೆ ಕಾಣದೆ ಇರುವಾಗಲೂ, ಎಂದರೆ ಆಲದ ಬೀಜವು ಮರದಲ್ಲಿ ಕಾಣದೆ ಇರುವಾಗಲೂ ಮೊಳಕೆ ಮೊದಲಾದುವು ಬೀಜದ ಉತ್ತರಾ ವಸ್ಥೆ ಎಂದು ತಿಳಿದುಬರುತ್ತದೆ; ಸಮಾನಜಾತೀಯವಾದ ಅವಯವಗಳು ಸೇರಿಕೊಂಡು ಬೀಜವೇ ಮರವಾಗಿರುವುದು ನಮಗೆ ಕಂಡುಬರುತ್ತದೆ ಅವೇ ಅವಯವಗಳು ಕ್ಷೀಣವಾಗಿ ಕಾರಣವು ಕಾಣದೆಹೋದರೆ 'ನಾಶವಾಯಿತು' ಎಂದು ಹೇಳುತ್ತೇವೆ. ಇದರಿಂದ ಬೌದ್ಧರ ಕ್ಷಣಭಂಗುರವಾದವನ್ನೂ ತಿರಸ್ಕರಿಸಿದಂತೆಯೇ ಆಯಿತು.

ಅಸತ್ಕಾರ್ಯವಾದಿಯ ಮತದಲ್ಲಿ ಕಾರಕವ್ಯಾಪಾರವು ವ್ಯರ್ಥವಾಗುತ್ತದೆ. ಆಕಾಶ ವನ್ನು ಹೊಡೆಯಲು ಉಪಯೋಗಿಸಿದ ಕತ್ತಿಯ ಪ್ರಯೋಗವು ವ್ಯರ್ಥವಾಗುವಂತೆ ಅಭಾ ವವು ಯಾವ ಪ್ರವೃತ್ತಿಗೂ ವಿಷಯವಾಗಲಾರದು. ಆದುದರಿಂದ ಹಾಲು ಮೊದಲಾದ ದ್ರವ್ಯಗಳು ಮೊಸರು ಮೊದಲಾದುವುಗಳ ರೂಪದಲ್ಲಿ ನಿಂತಾಗ 'ಕಾರ್ಯ' ಎಂಬ ಹೆಸರನ್ನು ಪಡೆಯುತ್ತವೆ. ಈ ರೀತಿ ಮೂಲಕಾರಣವೇ[1] ಅಂತ್ಯಕಾರ್ಯದವರೆಗೂ ಆಯಾ

---

[1] ಮೂಲಕಾರಣಂ ಬ್ರಹ್ಮ (ಭಾಮತೀ).

ಕಾರ್ಯಾಕಾರವನ್ನು ಹೊಂದಿ ನಟನಂತೆ ಎಲ್ಲ ವ್ಯವಹಾರಗಳಿಗೂ ಆಸ್ಪದವಾಗಿರುತ್ತದೆ.[1]

'ಸೋಮ್ಯ, ಸೃಷ್ಟಿಗೆ ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್ ಸ್ವರೂಪವೇ ಆಗಿತ್ತು' (ಛಾಂ. ಉ. ೬. ೨. ೧) ಎಂಬ ಶ್ರುತಿಯೇ ಶಬ್ದಾಂತರ. ಇದು 'ಅಸತ್ತಿನಿಂದ ಸದ್ವಸ್ತುವು ಹೇಗೆ ಹುಟ್ಟೀತು ?'[2] (ಛಾಂ. ಉ. ೬. ೨. ೨) ಎಂಬ ಆಧಾರದ ಮೇಲೆ ಅಸತ್ಪಕ್ಷವನ್ನು ಖಂಡಿಸುತ್ತದೆ. ಹೀಗೆ ಕಾರ್ಯವು ಉತ್ಪತ್ತಿಗೆ ಮೊದಲು ಇರುವುದೆಂದೂ ಅದು ಕಾರಣಕ್ಕೆ ಅನನ್ಯವಾಗಿರುವುದೆಂದೂ ನಿರ್ಧರಿಸಿರುವುದರಿಂದ 'ಯಾವುದರಿಂದ ಅಶ್ರುತವು ಶ್ರುತವಾಗುವುದೊ'[3] (ಛಾಂ ಉ. ೬. ೧. ೩) ಎಂಬ ಪ್ರತಿಜ್ಞೆಯನ್ನು ಸಮರ್ಥನೆಮಾಡಿದಂತೆ ಆಯಿತು.

ದ್ವೈ.— ಸಾಧನೆಗಳ ಸಾಧನತ್ವವು ಪರಮಾತ್ಮನ ಅಧೀನದಲ್ಲಿಯೇ ಇದೆ ಎಂದು ಒಪ್ಪಿಕೊಂಡಮೇಲೆ ಸಾಧನೆಗಳ ಸಂಪತ್ತಿಯೂ ಕೂಡ ಪರಮಾತ್ಮನ ಐಶ್ವರ್ಯವನ್ನೇ ಸೂಚಿಸುತ್ತದೆ ; ಸಾಧನಾಂತರಗಳಿಂದ ಅವನು ಸೃಷ್ಟಿಸುತ್ತಾನೆ ಎಂಬುದೂ ಸಿದ್ಧವಾಗುತ್ತದೆ.[4] 'ನೀರಿನೊಂದಿಗೆ ಹಿರಣ್ಯಗರ್ಭನು ಹುಟ್ಟಿದನು. ಹೀಗೆಯೇ ಅಷ್ಟಲೋಕಪಾಲಕರೂ ಹುಟ್ಟಿದನು'[5] (ಮ. ನಾ. ಉ.) ಎಂಬುದು ಶಬ್ದಾಂತರ.

## ಪಟವಚ್ಚ ॥ ೧೯ ॥

೧೯. ಮತ್ತು ಬಟ್ಟೆಯು ಹಾಗೆ.

ಒಂದು ಬಟ್ಟೆಯನ್ನು ಮಡಿಸಿದಾಗಲೂ ಬಿಚ್ಚಿದಾಗಲೂ ಒಂದೇ ಆಗಿರುವಂತೆ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ. ಬಟ್ಟೆಯನ್ನು ಮಡಿಸಿದ್ದಾಗ ಅದರ ಉದ್ದ ಅಗಲ ಇವೇ ಮೊದಲಾದುವು ತಿಳಿದುಬರುವುದಿಲ್ಲ, ಆದರೆ ಅದನ್ನು ಬಿಚ್ಚಿದಾಗ ಆ ವಿವರಗಳೆಲ್ಲ ತಿಳಿದುಬರುತ್ತವೆ ಕಾರಣದಲ್ಲಿ ವ್ಯಕ್ತವಾಗದೆ ಇರುವುದು ಕಾರ್ಯದಲ್ಲಿ ವ್ಯಕ್ತವಾಗುತ್ತದೆ. ನೂಲೇ ಮೊದಲಾದ ಕಾರಣಾವಸ್ಥೆಯಲ್ಲಿ ವ್ಯಕ್ತವಾಗದ ಬಟ್ಟೆಯು ಲಾಳಿ ಮಗ್ಗ ನೇಯ್ಗೆಕಾರ ಮೊದಲಾದ ಕಾರಕಗಳಿಂದ ವ್ಯಕ್ತವಾಗುತ್ತದೆ.

---

[1] ತಥಾ ಮೂಲಕಾರಣಮೇವಾಂತ್ಯಾತ್ಕಾರ್ಯಾತ್ ತೇನ ತೇನ ಕಾರ್ಯಾಕಾರೇಣ ನಟವತ್ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ (ಸೂ. ಭಾ.).

[2] ಕಥಮಸತಃ ಸಜ್ಜಾಯೇತ ?

[3] ಯೇನಾಶ್ರುತಂ ಶ್ರುತಂ ಭವತಿ ।

[4] ಸಾಧನಾನಾಂ ಸಾಧನತ್ವಂ ಯದಾಽಽತ್ಮಾಧೀನಮಿಷ್ಯತೇ । ತದಾ ಸಾಧನಸಂಪತ್ತಿ. ರೈಶ್ವರ್ಯದ್ಯೋತಿಕಾ ಭವೇದಿತ್ಯಾದೇಃ ಸಾಧನಾಂತರೇಣ ಹಿ ಸೃಷ್ಟಿರ್ಯುಕ್ತಾ (ಮ. ಭಾ.).

[5] ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ ।

ವಿ.—ನೂಲುಗಳನ್ನು ವಿಶೇಷರೀತಿಯಿಂದ ಸಂಯೋಜಿಸಿದಾಗ ಅವು ಬಟ್ಟೆ ಎನಿಸಿಕೊಂಡು ಹೊಸದಾದ ನಾಮ-ರೂಪ ಕ್ರಿಯೆಗಳನ್ನು ಹೊಂದುತ್ತವೆ, ಹೀಗೆಯೇ ಸೃಷ್ಟಿಕಾಲದಲ್ಲಿ ಪರಬ್ರಹ್ಮನೂ ಕೂಡ

ದ್ವೈ.—ಕರ್ತೃವಿಗಿಂತ ಬೇರೆಯಾದ ಸಾಧನಗಳಿಂದ ಬಟ್ಟೆಯನ್ನು ತಯಾರಿಸುವಂತೆ ಕರ್ತೃಭಿನ್ನವಾದ ಸಾಧನದಿಂದ ಸೃಷ್ಟಿಯು ಸಾಧ್ಯವಾಗುತ್ತದೆ

**ಯಥಾ ಚ ಪ್ರಾಣಾದಿ || ೨೦ ||**

೨೦　ಮತ್ತು ಪ್ರಾಣಾದಿಗಳ ಹಾಗೆ

ಪ್ರಾಣಾಯಾಮದಿಂದ ಪ್ರಾಣಾಪಾನಾದಿಗಳ ಗತಿಯನ್ನು ತಡೆಯಬಹುದು ಆಗ ಅವು ತಮ್ಮ ಕಾರಣರೂಪದಲ್ಲಿದ್ದುಕೊಂಡು ಶರೀರವು ಬದುಕಿರುವಂತೆ ಮಾತ್ರ ಮಾಡುತ್ತವೆ ಆದರೆ ಅವೇ ಪ್ರಾಣಗಳು ತಮ್ಮ ತಮ್ಮ ವ್ಯಾಪಾರಗಳಲ್ಲಿ ತೊಡಗಿದರೆ—ಬದುಕಿರುವುದಕ್ಕಿಂತಲೂ ಅಧಿಕವಾದ—ಕೈಕಾಲುಗಳನ್ನು ಮಡಿಸಿಕೊಳ್ಳುವುದು, ನೀಡುವುದು ಇವೇ ಮೊದಲಾದ ಇತರ ಕಾರ್ಯಗಳು ನಡೆಯುತ್ತವೆ ಪ್ರಾಣದ ಕಾರಣಾವಸ್ಥೆಯಲ್ಲಿ ವ್ಯಕ್ತವಾಗದ ವ್ಯಾಪಾರವು ಕಾರ್ಯಾವಸ್ಥೆಯಲ್ಲಿ ವ್ಯಕ್ತವಾಗುತ್ತದ ಹೀಗೆಯೇ ಬ್ರಹ್ಮದ ಕಾರ್ಯವಾದ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ ಆದುದರಿಂದ ಬ್ರಹ್ಮವನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಆಗುತ್ತದೆ

ವಿ.—ಒಂದೇ ವಾಯುವು ಶರೀರದಲ್ಲಿ ವೃತ್ತಿವಿಶೇಷಗಳನ್ನು ಹೊಂದಿ ಪ್ರಾಣಾಪಾನಾದಿ-ನಾಮಗಳನ್ನೂ ರೂಪಗಳನ್ನೂ ಕ್ರಿಯೆಗಳನ್ನೂ ಹೊಂದುವಂತೆ ಒಬ್ಬನೇ ಆದ ಪರಬ್ರಹ್ಮನು ವಿಚಿತ್ರಚರಾಚರಗಳಿಂದ ಕೂಡಿದ ಜಗತ್ತಾಗುತ್ತಾನೆ ಪರಮಕಾರಣನಾದ ಪರಬ್ರಹ್ಮನಿಂದ ಜಗತ್ತು ಬೇರೆಯಲ್ಲವೆಂದು ಸಿದ್ಧವಾಯಿತು

ದ್ವೈ.—'ಪ್ರಾಣಾದಿಗಳು ಸ್ವತಂತ್ರವಾಗಿರದಂತೆ ಸಾಧನಗಳೂ ಕೂಡ ಸ್ವತಂತ್ರವಲ್ಲ' ಎಂಬುದು ಸೂತ್ರಾರ್ಥ

ಶರೀರೇಂದ್ರಿಯ-ಪ್ರಾಣಾದಿಗಳಲ್ಲಿ ಈಶ್ವರನು ಪ್ರವೇಶಿಸಿರುವಂತೆ ಸಾಧನಾಂತರಗಳೂ ಕೂಡ ಅವನ ಪ್ರವೇಶದಿಂದ ಸ್ವತಂತ್ರವಾಗಿಲ್ಲ. 'ಭಗವಂತನಾದ ಪುರುಷೋತ್ತಮನು ಜಗತ್ತಿನ ಸೃಷ್ಟಿಗಾಗಿ ಪ್ರಕೃತಿಪುರುಷರನ್ನು ಪ್ರವೇಶಿಸಿ ಅವುಗಳನ್ನು ಕ್ಷೋಭೆಗೊಳಿಸುವನು'[1] ಎಂದು ಕೂರ್ಮಪುರಾಣವು ಹೇಳುತ್ತದೆ

---

[1] ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ । ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುರಿತಿ ಚ ಕೌರ್ಮೇ (ಮ ಭಾ )

# ೭. ಇತರವ್ಯಪದೇಶಾಧಿಕರಣ*

(ಸೂ. ೨೧–೨೩)

**ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ॥ ೨೧ ॥**

೨೧. ಇನ್ನೊಬ್ಬನಾದ (ಜೀವನು ಬ್ರಹ್ಮಕ್ಕಿಂತ ಬೇರೆಯಲ್ಲವೆಂದು) ಹೇಳಿರುವುದರಿಂದ ಹಿತವನ್ನು ಮಾಡದಿರುವುದೇ ಮೊದಲಾದ ದೋಷಗಳು (ಬ್ರಹ್ಮಕ್ಕೆ) ಉಂಟಾಗುವುವು.

ಇದು ಪೂರ್ವಪಕ್ಷದ ಸೂತ್ರ. ಜೀವನಿಗೂ ಬ್ರಹ್ಮಕ್ಕೂ ಭೇದವಿಲ್ಲವೆಂದು ಶ್ರುತಿಯು ಹೇಳುತ್ತದೆ: 'ಶ್ವೇತಕೇತು, ಅದು ನೀನಾಗಿರುವೆ'[1] (ಛಾಂ. ಉ ೬. ೮ ೭). 'ಇನ್ನೊಂದಾದ ಬ್ರಹ್ಮವು ಜೀವನ ಆತ್ಮವಾಗಿದೆ—ಎಂದು ವ್ಯಪದೇಶವಿದೆ' ಎಂಬುದು ಸೂತ್ರದ ಇನ್ನೊಂದು ಅರ್ಥ. 'ಅದನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿದನು'[2] (ತೈ. ಉ. ೨. ೬) ಎಂಬ ಶ್ರುತಿಯು ಸ್ರಷ್ಟೃವೂ ಅವಿಕಾರಿಯೂ ಆದ ಬ್ರಹ್ಮವೇ ತನ್ನ ಕಾರ್ಯವನ್ನು ಪ್ರವೇಶಿಸಿ ಜೀವನ ಆತ್ಮವಾಗಿದೆ ಎಂದು ಹೇಳುತ್ತದೆ.[3] ಆದುದರಿಂದ ಬ್ರಹ್ಮದ ಸ್ರಷ್ಟೃತ್ವವು ಜೀವನಿಗೂ ಸೇರಿದೆ. ಹೀಗೆ ಸ್ವತಂತ್ರನಾದ ಜೀವನು ತನಗೆ ಹಿತವನ್ನು ಮಾಡಿಕೊಳ್ಳುತ್ತಾನೆಯೇ ಹೊರತು ಅಹಿತವಾದ ಜನ್ಮಮರಣಜರಾರೋಗಾದಿಗಳೆಂಬ ಅನರ್ಥಗಳ ಬಲೆಯನ್ನು ಕಟ್ಟಿಕೊಳ್ಳಲಾರನು ; ಯಾವ ಸ್ವತಂತ್ರವ್ಯಕ್ತಿಯೂ ತನಗಾಗಿ ಒಂದು ಬಂಧನಾಗಾರವನ್ನು ಕಟ್ಟಿಕೊಂಡು ಅದರಲ್ಲಿ ವಾಸಿಸುವುದಿಲ್ಲ. ಸ್ವಯಂ ಅತ್ಯಂತ ನಿರ್ಮಲನಾದವನು ಅತ್ಯಂತ ಮಲಿನವಾದ ದೇಹವನ್ನು ಆತ್ಮನೆಂದು ಒಪ್ಪಿಕೊಳ್ಳಲಾರನು. ಅವನು ದುಃಖಕರವಾದುದನ್ನು ಬಿಟ್ಟು ಸುಖಕರವಾದುದನ್ನೇ ಸ್ವೀಕರಿಸುವನು. ತಾನೇ ಈ ಜಗತ್ತಿನ ಸ್ರಷ್ಟೃ ಎಂಬುದು ನೆನಪಿಗೆ ಬಂದಾಗ ಈ ಸೃಷ್ಟಿಯನ್ನು ಉಪಸಂಹರಿಸಲು ಬಯಸುವನು. ಆದರೆ, ಜೀವನು ತನ್ನ ಶರೀರವನ್ನೇ ಅನಾಯಾಸವಾಗಿ ಉಪಸಂಹರಿಸಿಕೊಳ್ಳಲು ಅಶಕ್ತನಾಗಿರುವನು. ಹೀಗೆ ಹಿತಕ್ರಿಯೆಯು ಕಾಣದೆ ಇರುವ ಕಾರಣ ಚೇತನದಿಂದ ಜಗತ್ತು ಉತ್ಪನ್ನವಾಗಿದೆ ಎಂಬುದನ್ನು ಒಪ್ಪಿಕೊಳ್ಳುವುದು ಸರಿಯಲ್ಲ.

**ವಿ.**—ಜೀವನು ಬ್ರಹ್ಮವಾದರೆ ಕೆಲವು ದೋಷಗಳು ಬ್ರಹ್ಮಕ್ಕೆ ಅಂಟಿಕೊಳ್ಳುತ್ತವೆ; ಎಂದರೆ ಸಾರ್ವಜ್ಞ-ಸತ್ಯಸಂಕಲ್ಪತ್ವಾದಿ-ಗುಣಗಳುಳ್ಳ ಬ್ರಹ್ಮವು ತನಗೆ ಹಿತವಾದ ಜಗತ್ತನ್ನು ಸೃಷ್ಟಿಸದೆ ಅಹಿತವಾದ ಜಗತ್ತನ್ನು ಸೃಷ್ಟಿಸುತ್ತದೆ. ಸ್ವತಂತ್ರನಾದ ಯಾವ ಬುದ್ಧಿ

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ೨೩ನೆಯ ಸೂತ್ರದವರೆಗೆ ಮುಂದುವರಿಯುತ್ತದೆ.

[1] ತತ್ತ್ವಮಸಿ ಶ್ವೇತಕೇತೋ ।

[2] ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ।

[3] ಛಾಂ. ಉ, ೬. ೩. ೨ ನೋಡಿ.

ವಂತನೂ ತನಗೆ ಅನರ್ಥವಾದುದನ್ನು ಮಾಡಿಕೊಳ್ಳುವುದಿಲ್ಲ. ಭೇದಶ್ರುತಿಗಳು ಔಪಾಧಿಕ ಭೇದಗಳನ್ನು ತಿಳಿಸುತ್ತವೆ, ಅಭೇದಶ್ರುತಿಗಳು ಸ್ವಾಭಾವಿಕವಾದ ಅಭೇದವನ್ನು ತಿಳಿಸುತ್ತವೆ—ಎಂದು ಹೇಳಿದರೆ ಅನುಪಹಿತವಾದ ಬ್ರಹ್ಮವು ತನಗಿಂತ ಅಭಿನ್ನವಾದ ಜೀವನನ್ನು ಅರಿತಿದೆಯೆ ಅಥವಾ ಇಲ್ಲವೆ?—ಎಂದು ಕೇಳಬೇಕಾಗುವುದು. ಅರಿಯದಿದ್ದರೆ ಸರ್ವಜ್ಞತ್ವಕ್ಕೆ ಹಾನಿಯುಂಟಾಗುತ್ತದೆ, ಅರಿತಿದ್ದರೆ ತನಗಿಂತ ಅಭಿನ್ನವಾದ ಜೀವನ ದುಃಖವು ತನ್ನ ದುಃಖವೇ ಎಂದು ತಿಳಿಯಬೇಕಾಗುತ್ತದೆ. ಇದರಿಂದ ಸ್ವಹಿತದ ಅಕರಣ, ಅಹಿತದ ಕರಣ ಎಂಬ ದೋಷಪ್ರಸಕ್ತಿಯು ಅನಿವಾರ್ಯವಾಗುತ್ತದೆ. ಜೀವಬ್ರಹ್ಮರ ಭೇದಕ್ಕೆ ಅವರ ಅಜ್ಞಾನವೇ ಕಾರಣವೆಂದು ಹೇಳಿದರೆ ಆಗಲೂ ಜೀವನಲ್ಲಿ ಅಜ್ಞಾನವನು ಆರೋಪಿಸಿರುವುದರಿಂದ ಹಿಂದೆ ಹೇಳಿದ ವಿಕಲ್ಪಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಅಜ್ಞಾನವು ಬ್ರಹ್ಮಕ್ಕೆ ಸೇರಿದೆಯೆಂದು ಹೇಳಿದರೆ ಸ್ವಪ್ರಕಾಶಸ್ವರೂಪವಾದ ಬ್ರಹ್ಮಕ್ಕೆ ಅಜ್ಞಾನದ ಸಾಕ್ಷಿತ್ವವು ತತ್ಕೃತ-ಜಗತ್ಸೃಷ್ಟಿಯೂ ಸಂಭವಿಸುವುದಿಲ್ಲ [1] ಆದುದರಿಂದ ಬ್ರಹ್ಮಕ್ಕೆ ಜಗತ್-ಕಾರಣತ್ವವು ಅಸಂಗತವಾಗಿದೆ.

**ದ್ವೈ.**—ಇತರನಾದ ಜೀವನು ಸ್ವಯಂಕರ್ತೃವು ಎಂದಾದರೆ ಹಿತಾಕರಣ ಅಹಿತ ಕರಣ ಎಂಬ ದೋಷಗಳು ಅವನಿಗೆ ಉಂಟಾಗುವುವು.[2]

**ಅಧಿಕಂ ತು ಭೇದನಿರ್ದೇಶಾತ್ ॥ ೨೨ ॥**

೨೨. ಆದರೆ ಬೇರೆಯಾದ (ಬ್ರಹ್ಮವು ಸ್ರಷ್ಟೃವಾಗಿರುತ್ತದೆ), ಏಕೆಂದರೆ ಭೇದದ ನಿರ್ದೇಶವಿರುತ್ತದೆ

ಸೂತ್ರದಲ್ಲಿರುವ 'ಆದರೆ' ಎಂಬ ಪದವು ಹಿಂದಿನ ಸೂತ್ರದಲ್ಲಿ ಹೇಳಿದ ಪೂರ್ವಪಕ್ಷದ ನಿರಾಕರಣೆಯನ್ನು ಸೂಚಿಸುತ್ತದೆ. ಸರ್ವಜ್ಞವೂ ಸರ್ವಶಕ್ತಿಯೂ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವಭಾವವುಳ್ಳದ್ದೂ ಆದ ಬ್ರಹ್ಮವು ಜೀವನಿಗಿಂತ ಅಧಿಕವಾಗಿದೆ, ಎಂದರೆ ಬೇರೆಯಾಗಿದೆ. ಬ್ರಹ್ಮಕ್ಕೆ ಹಿತಾಕರಣಾದಿದೋಷಗಳು ಸೋಂಕುವುದಿಲ್ಲ; ಅದು ನಿತ್ಯ ಮುಕ್ತಸ್ವಭಾವವುಳ್ಳದ್ದಾದುದರಿಂದ ಅದಕ್ಕೆ ಮಾಡಿಕೊಳ್ಳಬೇಕಾದ ಹಿತವಿಲ್ಲ, ಬಿಡಬೇಕಾದ ಅಹಿತವಿಲ್ಲ. ಆದರೆ ಜೀವನು ಇಂಥವನಲ್ಲ; ಅವನಿಗೆ ಹಿತಾಕರಣಾದಿ ದೋಷಗಳು ಸೋಂಕಬಹುದು. ಜೀವನು ಜಗತ್ತಿನ ಸ್ರಷ್ಟೃವೆಂದು ನಾವು ಹೇಳುವುದಿಲ್ಲ.[3] ಏಕೆಂದರೆ ಶ್ರುತಿಯು ಇವರಿಬ್ಬರಿಗೂ ಇರುವ ಭೇದವನ್ನು ತಿಳಿಸುತ್ತದೆ: 'ಆತ್ಮನನ್ನು

---

[1] ನ ಜಾನಾತಿ ಚೇತ್, ಸರ್ವಜ್ಞತ್ವಹಾನಿಃ; ಜಾನಾತಿ ಚೇತ್, ಸ್ವಸ್ಮಾದಭಿನ್ನಸ್ಯ ಜೀವಸ್ಯ ದುಃಖಂ ಸ್ವದುಃಖಮಿತಿ ಜಾನತೋ ಬ್ರಹ್ಮಣೋ ಹಿತಾಕರಣಾಹಿತಕರಣಾದಿದೋಷ. ಪ್ರಸಕ್ತಿರನಿವಾರ್ಯಾ (ಶ್ರೀಭಾಷ್ಯ).

[2] ಜೀವಕರ್ತೃತ್ವೇ ಹಿತಾಕರಣಮಹಿತಕರಣಂ ಚ ನ ಸ್ಯಾತ್ (ಮ. ಭಾ.).

[3] ನ ತು ತಂ ವಯಂ ಜಗತಃ ಸ್ರಷ್ಟಾರಂ ಬ್ರೂಮಃ (ಸೂ.ಭಾ.).

ನೋಡಬೇಕು, ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು'[1] (ಬೃ. ಉ. ೨. ೪. ೫); 'ಅವನನ್ನೇ ಅನ್ವೇಷಿಸಬೇಕು, ಅವನನ್ನೇ ಅರಿತುಕೊಳ್ಳಲು ಬಯಸಬೇಕು'[2] (ಛಾಂ ಉ. ೮. ೭. ೧); 'ಅಗ ಸದ್ವಸ್ತುವಿನೊಂದಿಗೆ ಏಕೀಭೂತ ನಾಗಿರುತ್ತಾನೆ'[3] (ಛಾಂ. ಉ. ೬. ೮. ೧); 'ಈ ಆತ್ಮನು ಪರಮಾತ್ಮನಿಂದ ಅಧಿಷ್ಠಿತ ನಾಗಿರುತ್ತಾನೆ'[4] (ಬೃ. ಉ. ೪. ೩. ೩೫) ಇತ್ಯಾದಿ. ಈ ಶ್ರುತಿಗಳಲ್ಲಿ ಶ್ರವಣಾದಿಗಳ ಕರ್ತೃವು ಜೀವನೆಂದೂ ಕರ್ಮವು ಬ್ರಹ್ಮವೆಂದೂ ತಿಳಿದುಬರುತ್ತದೆ. ತತ್ತ್ವಮಸ್ಯಾದಿ ವಾಕ್ಯಗಳು ಜೀವಪರಮಾತ್ಮರ ಅಭೇದವನ್ನು ನಿರ್ದೇಶಿಸುತ್ತವೆಯೆಂದು ಹೇಳಿದರೆ ನಮ್ಮ ಪಕ್ಷದಲ್ಲಿ ದೋಷವಿಲ್ಲ ; ಏಕೆಂದರೆ ಸಮ್ಯಗ್‍ಜ್ಞಾನವು ಉದಯಿಸುವವರೆಗೆ ಭೇದವು ನಿಜ ವಾಗಿರುತ್ತದೆ ಆ ಅವಸ್ಥೆಯಲ್ಲಿ ತಿಳಿದುಕೊಳ್ಳಬೇಕಾದ ಬ್ರಹ್ಮವು ಸಂಸಾರಿಜೀವಕ್ಕಿಂತ ಬೇರೆಯಾಗಿರುತ್ತದೆ ಆದುದರಿಂದ ಹಿತಾಕರಣಾದಿದೋಷಗಳು ಬ್ರಹ್ಮಕ್ಕೆ ಸೋಂಕುವುದಿಲ್ಲ.

ವಿ.—ಆಧ್ಯಾತ್ಮಿಕಾದಿದುಃಖಗಳಿಗೆ ಸಂಬಂಧಪಟ್ಟಿರುವ ಜೀವನಿಗಿಂತ ಪರಬ್ರಹ್ಮನು ಅಧಿಕನಾಗಿರುವನು ಎಂಬುದು ಭೇದನಿರ್ದೇಶದಿಂದ ತಿಳಿದುಬರುತ್ತದೆ : 'ಯಾವನು ಆತ್ಮನಲ್ಲಿರುವವನಾಗಿ ಆತ್ಮನಲ್ಲಿರುವನೊ, ಯಾನನನ್ನು ಆತ್ಮನು ತಿಳಿಯುವುದಿಲ್ಲವೊ, ಯಾವನಿಗೆ ಆತ್ಮನು ಶರೀರವೊ, ಯಾವನು ಒಳಗಿದ್ದುಕೊಂಡು ಆತ್ಮನನ್ನು ನಿಯಮಿಸುವನೊ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು'[5] (ಬೃ. ಉ ಮಾಧ್ಯಂದಿನ ಪಾಠ ೩. ೭. ೨೨); 'ಆತ್ಮನನ್ನೂ ಪ್ರೇರಕನನ್ನೂ ಬೇರೆಬೇರೆಯೆಂದು ತಿಳಿದುಕೊಂಡು ಅವನಿಂದ ಅನುಗ್ರಹಿಸಲ್ಪಟ್ಟು ಅಮೃತತ್ವವನ್ನು ಹೊಂದುತ್ತಾನೆ'[6] (ಶ್ವೇ. ಉ. ೧ ೬); 'ಅವನು ಕಾರಣನು, ಇಂದ್ರಿಯಾಧೀಶರಿಗೆ ಒಡೆಯನು'[7] (ಶ್ವೇ. ಉ. ೬. ೯); 'ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತಿದೆ, ಇನ್ನೊಂದು ತಿನ್ನದೆ ನೋಡುತ್ತಿದೆ'[8] (ಶ್ವೇ ಉ. ೪. ೬); 'ಇಬ್ಬರಿದ್ದಾರೆ—ಒಬ್ಬನು ಸರ್ವಜ್ಞನು, ಇನ್ನೊಬ್ಬನು ಅಜ್ಞನು ; ಇಬ್ಬರೂ ಜನ್ಮರಹಿತರು, ಒಬ್ಬನು ಈಶ್ವರನು, ಇನ್ನೊಬ್ಬನು ಈಶ್ವರನಲ್ಲ'[9] (ಶ್ವೇ. ಉ ೧. ೯)ಇತ್ಯಾದಿ.[10]

---

1 ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ, ನಿದಿಧ್ಯಾಸಿತವ್ಯಃ ।

2 ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ।

3 ಸತಾ ಸೋಮ್ಯ ತದಾ ಸಂಪನ್ನೋ ಭವತಿ ।

4 ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾನ್ವಾರೂಢಃ ।

5 ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಽಂತರ್ಯಾಮ್ಯಮೃತಃ ।

6 ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ ।

7 ಸ ಕಾರಣಂ ಕರಣಾಧಿಪಾಧಿಪಃ ।

8 ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ।

9 ಜ್ಞಾಜ್ಞೌ ದ್ವಾವಜಾವೀಶಾನೀಶೌ ।

10 ಬೃ. ಉ. ೪. ೩. ೩೫, ಶ್ವೇ. ಉ. ೪. ೯, ಶ್ವೇ. ಉ. ೬. ೧೬ ಮತ್ತು ೧೭ ನೋಡಿ.

ವ್ಯಾ.—'ಆದರೆ ಬ್ರಹ್ಮನು ಅಧಿಕಶಕ್ತಿಯುಳ್ಳವನು; ಏಕೆಂದರೆ ವಿಶೇಷಗಳ ನಿರ್ದೇಶವಿದೆ' ಎಂಬುದು ಸೂತ್ರಾರ್ಥ. ಪರಬ್ರಹ್ಮನಿಗೆ ಶ್ರಮ ಚಿಂತೆ ಮೊದಲಾದುವಿಲ್ಲ; ಏಕೆಂದರೆ ಅವನಿಗೆ ಅಧಿಕಶಕ್ತಿಯಿದೆ.[1] ಅವನ ಅಖಿಲಶ್ರೋತೃತ್ವ-ಅಂತರ್ಯಾಮಿತ್ವಾದಿ ವಿಶೇಷಗಳ ನಿರ್ದೇಶವನ್ನು ಶ್ರುತಿಗಳು ತಿಳಿಸುತ್ತವೆ. 'ಅವನು ಕೇಳುವವನು, ಚಿಂತಿಸುವವನು, ನೋಡುವವನು, ಆದೇಶಿಸುವವನು, ಘೋಷಿಸುವವನು, ಅರಿಯುವವನು, ಪ್ರಜ್ಞಾತೃವು, ಸರ್ವಪ್ರಾಣಿಗಳ ಅಂತರ್ಯಾಮಿ'[2] (ಐ. ಆ. ೩. ೨ ೪) ಇತ್ಯಾದಿ.

## ಅಶ್ಮಾದಿವಚ್ಚ ತದನುಪಪತ್ತಿಃ || ೨೩ ||

೨೩. ಮತ್ತು (ಇದು) ಕಲ್ಲು ಮೊದಲಾದುವುಗಳ ಹಾಗೆ; (ಆದುದರಿಂದ ದೋಷವು) ಹೊಂದುವುದಿಲ್ಲ.

ಖನಿಜಗಳು ಭೂಮಿಯ ವಿಕಾರಗಳಾಗಿದ್ದರೂ ಅವುಗಳಲ್ಲಿ ವೈವಿಧ್ಯವು ಕಂಡುಬರುತ್ತದೆ: ಕೆಲವು ವಜ್ರವೈಢೂರ್ಯಾದಿಗಳಂತೆ ಅಮೂಲ್ಯವಾದುವು, ಕೆಲವು ಅಗ್ಗವಾದುವು. ಒಂದೇ ಭೂಪ್ರದೇಶದಲ್ಲಿ ಹುಟ್ಟಿದ ಚಂದನ ಕಿಂಪಾಕ ಮೊದಲಾದ ಸಸ್ಯಗಳಲ್ಲಿ ಬಗೆಬಗೆಯಾದ ಎಲೆ-ಹೂ ಹಣ್ಣುಗಳು ಕಂಡುಬರುತ್ತವೆ. ಒಂದೇ ಅನ್ನರಸವು ರಕ್ತ ಕೂದಲು ಮೊದಲಾದುವನ್ನು ಉತ್ಪನ್ನಮಾಡುತ್ತದೆ. ಹೀಗೆ ಒಂದೇ ಬ್ರಹ್ಮದಲ್ಲಿ ಜೀವ-ಪ್ರಾಜ್ಞ ಎಂಬ ವಿಂಗಡವೂ ಕಾರ್ಯಗಳ ವೈಚಿತ್ರ್ಯವೂ ಆಗಬಹುದು.[3] ಆದುದರಿಂದ ಪೂರ್ವಪಕ್ಷವು ಕಲ್ಪಿಸಿದ ದೋಷವು ಹೊಂದುವುದಿಲ್ಲ. ಇದಲ್ಲದೆ (೧) ಶ್ರುತಿಯು ಪ್ರಮಾಣವಾಗಿದೆ, (೨) ವಿಕಾರವು ವಾಕ್ಕನ್ನೇ ಅವಲಂಬಿಸಿದೆ ಮತ್ತು (೩) ಕನಸುಕಾಣುವವನು ಒಬ್ಬನೇ ಆಗಿದ್ದರೂ ಸ್ವಪ್ನದ ಅನುಭವಗಳು ವಿಚಿತ್ರವಾಗಿರುತ್ತವೆ ಎಂಬ ಯುಕ್ತಿಗಳನ್ನೂ ಸೇರಿಸಿಕೊಳ್ಳಬಹುದು.[4]

ವಿ.—ಕಲ್ಲು, ಕಟ್ಟಿಗೆ, ಮಣ್ಣಿನ ಹೆಂಟೆ, ಹುಲ್ಲು ಮೊದಲಾದುವುಗಳಿಗೂ ಪರಬ್ರಹ್ಮನಿಗೂ ಹೇಗೆ ಸ್ವರೂಪೈಕ್ಯವು ಕೂಡುವುದಿಲ್ಲವೋ ಹಾಗೆಯೇ ಅನಂತ ದುಃಖಕ್ಕೆ ಈಡಾಗಬಹುದಾದ ಜೀವನಿಗೂ ನಿರತಿಶಯಾನಂದಸ್ವರೂಪನೂ ಸತ್ಯಸಂಕಲ್ಪನೂ ಆದ ಪರಬ್ರಹ್ಮನಿಗೂ ಐಕ್ಯವು ಕೂಡುವುದಿಲ್ಲ.[5] ಅಭೇದಶ್ರುತಿಗಳನ್ನು ಶರೀರ-ಶರೀರಿ-ಭಾವದಿಂದ

---

1 ನ ಚ ಬ್ರಹ್ಮಣಃ ಶ್ರಮಚಿಂತಾದಿದೋಷಪ್ರಸಕ್ತಿಃ । ಅಧಿಕಶಕ್ತಿತ್ವಾತ್ (ಮ. ಭಾ.).

2 ಶ್ರೋತಾ ಮಂತಾ ದ್ರಷ್ಟಾऽऽದೇಷ್ಟಾऽऽಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಂತರಪುರುಷಃ (ಮ. ಭಾ.).

3 ಏವಮೇಕಸ್ಯಾಪಿ ಬ್ರಹ್ಮಣೋ ಜೀವಪ್ರಾಜ್ಞಪೃಥಕ್ತ್ವಂ ಕಾರ್ಯವೈಚಿತ್ರ್ಯಂ ಚೋಪಪದ್ಯತ ಇತ್ಯತಸ್ತನುಪಪತ್ತಿಃ (ಸೂ. ಭಾ.).

4 ಇದು ಸೂತ್ರದಲ್ಲಿರುವ ಚಕಾರದ ಅರ್ಥ.

5 ಅಶ್ಮಕಾಷ್ಠಲೋಷ್ಟತೃಣಾದೇರಚೇತನಸ್ಯೇವಾನಂತದುಃಖಾಕರಜೀವಸ್ಯ ನಿರತಿಶಯಾನಂದಸತ್ಯಸಂಕಲ್ಪಬ್ರಹ್ಮಭಾವಾನುಪಪತ್ತಿಶ್ಚ (ವೇ. ದೀ.).

ಅರಿತುಕೊಳ್ಳಬೇಕೆಂದು ಹಿಂದೆಯೇ ಹೇಳಿದೆ. ಜೀವನು ಶರೀರವೂ ಪ್ರಕಾರವೂ ಆಗಿದ್ದಾನೆ, ಪರಬ್ರಹ್ಮನು ಜೀವನ ಆತ್ಮನಾಗಿದ್ದಾನೆ.

**ದ್ವೈತ.**—ಜೀವನಿಗೆ ಚೇತನತ್ವವಿದ್ದರೂ ಕಲ್ಲು ಮೊದಲಾದುವುಗಳಂತೆ ಅಸ್ವಾತಂತ್ರ್ಯವಿರುವುದರಿಂದ ಕರ್ತೃತ್ವವು ಕೂಡುವುದಿಲ್ಲ [1]

1. ಚೇತನತ್ವೇಽಪ್ಯಶ್ಮಾದಿವದಸ್ವತಂತ್ರತ್ವಾತ್ ಸ್ವತಃ ಕರ್ತೃತ್ವಾನುಪಪತ್ತಿರ್ಜೀವಸ್ಯ (ಮ. ಭಾ.).

## ೮. ಉಪಸಂಹಾರದರ್ಶನಾಧಿಕರಣ

(ಸೂ ೨೪–೨೫)

**ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ ॥ ೨೪ ॥**

೨೪ (ಸಾಧನಗಳ) ಸಂಗ್ರಹವು ಕಂಡುಬರುವುದರಿಂದ (ಬ್ರಹ್ಮವು ಜಗತ್ಕಾರಣ) ವಲ್ಲವೆಂದು ಹೇಳಿದರೆ, ಅದು ಸರಿಯಲ್ಲ, ಏಕೆಂದರೆ (ಬ್ರಹ್ಮವು ಹಾಲಿನಂತೆ (ಪರಿಣಮಿಸುವುದು)

**ಪೂರ್ವಪಕ್ಷ**—ಅದ್ವಿತೀಯಬ್ರಹ್ಮವು ಜಗತ್ಕಾರಣವೆಂಬುದು ಹೊಂದುವುದಿಲ್ಲ, ಏಕೆಂದರೆ ಲೋಕದಲ್ಲಿ ಕುಂಬಾರ ನೇಯ್ಗೆಕಾರ ಮೊದಲಾದವರು ಗಡಿಗೆ ಬಟ್ಟೆ ಮೊದಲಾದುವನ್ನು ಮಾಡುವುದಕ್ಕೆ ಮಣ್ಣು ಚಕ್ರ ನೂಲು ಮೊದಲಾದುವುಗಳನ್ನು ಸಂಗ್ರಹಿಸುವುದು ಕಂಡುಬರುತ್ತದೆ, ನಿನ್ನ ಅಭಿಪ್ರಾಯದ ಪ್ರಕಾರ ಬ್ರಹ್ಮಕ್ಕೆ ಯಾವ ಸಹಾಯವೂ ಇಲ್ಲ ಸಾಧನಗಳಿಲ್ಲದಿದ್ದರೆ ಬ್ರಹ್ಮವು ಹೇಗೆ ಜಗತ್ಕಾರಣವಾದೀತು ?

**ಸಿದ್ಧಾಂತಿ**—ದ್ರವ್ಯದ ಒಂದು ವಿಶೇಷಸ್ವಭಾವದಿಂದ ಕಾರಣತ್ವವು ಹೊಂದುತ್ತದೆ ಹಾಲು ಅಥವಾ ನೀರು ಬಾಹ್ಯಸಾಧನವನ್ನು ಅಪೇಕ್ಷಿಸದೆ ಮೊಸರು ಅಥವಾ ಮಂಜುಗಡ್ಡೆ ಆಗುವಂತೆ ಬ್ರಹ್ಮವೂ ಪರಿಣಮಿಸುತ್ತದೆ ಹಾಲು ಮೊಸರಾಗಬೇಕಾದರೆ ಉಷ್ಣವೇ ಮೊದಲಾದ ಬಾಹ್ಯಸಾಧನಗಳನ್ನು ಅಪೇಕ್ಷಿಸುತ್ತದೆಯೆಂದು ಹೇಳಿದರೆ, ಹಾಲೇ ಸ್ವತಃ ಪರಿಣಾಮವನ್ನು ಹೊಂದುತ್ತದೆ ಎಂಬುದು ನಮ್ಮ ಉತ್ತರ, ಉಷ್ಣಾದಿಗಳು ಪರಿಣಾಮವನ್ನು ತ್ವರೆಗೊಳಿಸುತ್ತವೆ ಸಂಪೂರ್ಣ ಶಕ್ತಿಯುಳ್ಳ ಬ್ರಹ್ಮಕ್ಕೆ ಬಾಹ್ಯಸಾಧನದ ಅವಶ್ಯಕತೆಯಿಲ್ಲ 'ಅವನಿಗೆ ಶರೀರವಾಗಲಿ ಇಂದ್ರಿಯವಾಗಲಿ ಇಲ್ಲ ಅವನಿಗಿಂತ ಅಧಿಕನಾಗಲಿ, ಅವನಿಗೆ ಸಮಾನವಾಗಲಿ ಕಂಡುಬರುವುದಿಲ್ಲ ಅವನ ಪರಾಶಕ್ತಿಯನ್ನು ವಿವಿಧಪ್ರಕಾರವಾಗಿ ಹೇಳಿದೆ ಅದು ಸ್ವಾಭಾವಿಕವೂ ಜ್ಞಾನಕ್ರಿಯೆಯೂ ಬಲಕ್ರಿಯೆಯೂ ಆಗಿದೆ'[1] (ಶ್ವೇ ಉ ೬ ೮) ಎಂದು ಶ್ರುತಿಯು ಹೇಳಿರುತ್ತದೆ ಆದುದರಿಂದ ಬ್ರಹ್ಮವು ಏಕವಾಗಿದ್ದರೂ ತನ್ನ ವಿವಿಧಶಕ್ತಿಗಳಿಂದ ಹಾಲಿನಂತೆ ವಿಚಿತ್ರಪರಿಣಾಮವನ್ನು ಹೊಂದಲು ಶಕ್ತವಾಗಿದೆ[2]

ವಿ —ಹಾಲು ಏನನ್ನೂ ಅಪೇಕ್ಷಿಸದೆ ಮೊಸರಾಗುವಂತೆ ಬ್ರಹ್ಮನಿಗೆ ಯಾವುದರ ಅಪೇಕ್ಷೆಯೂ ಇಲ್ಲದೆ ಕಾರಣತ್ವವು ಸಂಭವಿಸುತ್ತಿದೆ

---

[1] ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।
ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥

[2] ತಸ್ಮಾದೇಕಸ್ಯಾಪಿ ಬ್ರಹ್ಮಣೋ ವಿಚಿತ್ರಶಕ್ತಿಯೋಗಾತ್ ಕ್ಷೀರಾದಿವದ್ ವಿಚಿತ್ರಪರಿಣಾಮ ಉಪಪದ್ಯತೇ (ಸೂ ಭಾ )

ದ್ವೈ.—ಜೀವನು ತಾನು ಪ್ರಾರಂಭಿಸಿದ ಕಾರ್ಯಗಳನ್ನು ಉಪಸಂಹರಿಸುವುದು ಕಂಡುಬರುವುದರಿಂದ ಅವನಿಗೆ ಸ್ವತಂತ್ರಕರ್ತೃತ್ವವಿದೆಯೆಂದು ಹೇಳಿದರೆ, ಅದು ಸರಿಯಲ್ಲ, ಏಕೆಂದರೆ ಗೋವಿನಲ್ಲಿರುವ ಹಾಲು ಪ್ರಾಣದಿಂದ ಉತ್ಪನ್ನವಾಗುವ ಹಾಗೆ, ಜೀವನು ಪ್ರಾರಂಭಿಸಿದ ಕಾರ್ಯದ ಉಪಸಂಹಾರವು ಪರಮಾತ್ಮನಿಂದಲೇ ಆಗುತ್ತದೆ ಇದಕ್ಕೆ ಕಾರಣ ಜೀವನ ಅಸ್ವಾತಂತ್ರ್ಯ [1]

### ದೇವಾದಿವದಪಿ ಲೋಕೇ ‖ ೨೫ ‖

೨೫ ಲೋಕದಲ್ಲಿ ದೇವತಾದಿಗಳ ಹಾಗೆ (ಬ್ರಹ್ಮವು ಬಾಹ್ಯಸಾಧನವನ್ನು ಅಪೇಕ್ಷಿಸದೆ ಜಗತ್ತನ್ನು ಸೃಷ್ಟಿಸುತ್ತದೆ)

ಹಾಲೇ ಮೊದಲಾದ ಅಚೇತನವಸ್ತುಗಳು ಬಾಹ್ಯಸಾಧನವಿಲ್ಲದ ಮೊಸರೇ ಮೊದಲಾಗಿ ಪರಿಣಮಿಸಿದರೂ ಚೇತನವಾದ ಬ್ರಹ್ಮವು ಕುಂಬಾರನ ಹಾಗೆ ಸಾಧನ ಸಾಮಗ್ರಿಗಳಿಲ್ಲದಿದ್ದರೆ ಸೃಷ್ಟಿಸಲಾರದು ಎಂಬುದು ಪೂರ್ವಪಕ್ಷ ಇದಕ್ಕೆ ಪರಿಹಾರ ಹೀಗಿದೆ ಲೋಕದಲ್ಲಿ ದೇವತೆಗಳು ಪಿತೃಗಳು ಋಷಿಗಳು—ಇವರೇ ಮೊದಲಾದ ಮಹಾಪ್ರಭಾವವುಳ್ಳವರು ಚೇತನರಾಗಿದ್ದರೂ ಬಾಹ್ಯಸಾಧನಗಳನ್ನು ಅಪೇಕ್ಷಿಸದೆ ತಮ್ಮ ಐಶ್ವರ್ಯವಿಶೇಷದ ಯೋಗದಿಂದ ಸಂಕಲ್ಪಮಾತ್ರದಿಂದಲೇ ಅರಮನೆ ರಥ ಮೊದಲಾದುವನ್ನು ಸೃಷ್ಟಿಸುವಂತೆ ಚೇತನವಾದ ಬ್ರಹ್ಮವು ಬಾಹ್ಯಸಾಧನವನ್ನು ಅಪೇಕ್ಷಿಸದೆ ಜಗತ್ತನ್ನು ಸೃಷ್ಟಿಸಲು ಶಕ್ತವಾಗಿರುತ್ತದೆ

ವಿ.—ದೇವಾದಿಗಳು ತಮ್ಮ ತಮ್ಮ ಲೋಕಗಳಲ್ಲಿ ತಾವು ಬಯಸಿದುದನ್ನು ಸಂಕಲ್ಪಮಾತ್ರದಿಂದಲೇ ಸೃಷ್ಟಿಸುವಂತೆ ಪುರುಷೋತ್ತಮನು ಸಂಕಲ್ಪಮಾತ್ರದಿಂದಲೇ ಸಮಸ್ತ ಜಗತ್ತನ್ನೂ ಸೃಷ್ಟಿಸುತ್ತಾನೆ

ದ್ವೈ.—ಕರ್ತೃವಾಗಿರುವ ಈಶ್ವರನು ನಮಗೆ ಅದೃಶ್ಯನಾಗಿರುವನೆಂಬುದು ವಿರೋಧವಲ್ಲ ದೇವಾದಿಗಳಂತೆ ಶಕ್ತಿಯುಕ್ತನಾದ ಈಶ್ವರನು ಅದೃಶ್ಯವಾಗಿಯೇ ಎಲ್ಲವನ್ನೂ ಮಾಡಬಲ್ಲನು ಲೋಕದಲ್ಲಿಯೂ ಪಿಶಾಚಾದಿಗಳಿಗೆ ಅದೃಶ್ಯತ್ವಾದಿಶಕ್ತಿಯಿರುವುದು ಕಂಡುಬರುತ್ತದೆ ಈಶ್ವರನಿಗೆ ಇಂಥ ಶಕ್ತಿಗಳಿರುವುದು ಆಶ್ಚರ್ಯವಲ್ಲ

---

[1] ಯಥಾ ಕ್ಷೀರಂ ಗೋಷು ದೃಶ್ಯಮಾನಮಪಿ ಪ್ರಾಣಾದೇವ ಜಾಯತೇ , ಏವಂ ಜೀವೇ ದೃಶ್ಯಮಾನೋಽಪಿ ಕಾರ್ಯೋಪಸಂಹಾರೋಽಸ್ವಾತಂತ್ರ್ಯಾತ್ ಪರಕೃತ ಏವ (ಮ ಭಾ ).

## ೯. ಕೃತ್ಸ್ನಪ್ರಸಕ್ತ್ಯಧಿಕರಣ*

(ಸೂ. ೨೬–೨೯)

### ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ ॥ ೨೬ ॥

೨೬. (ಬ್ರಹ್ಮ)ವೆಲ್ಲವೂ (ಪರಿಣಮಿಸಿದೆ) ಎಂದು ಒಪ್ಪಿಕೊಳ್ಳಬೇಕು, ಅಥವಾ ನಿರವಯವ-ಶ್ರುತಿಗೆ ವಿರೋಧವಾಗುವುದು

ಈ ಸೂತ್ರವು ಒಂದು ಹೊಸ ಆಕ್ಷೇಪವನ್ನು ತರುತ್ತದೆ : ಬ್ರಹ್ಮವೆಲ್ಲವೂ ಕಾರ್ಯರೂಪದಿಂದ ಪರಿಣಮಿಸಿದೆ ಎಂದಾಗಬೇಕು ; ಏಕೆಂದರೆ ಬ್ರಹ್ಮಕ್ಕೆ ಅವಯವವಿಲ್ಲ. ಬ್ರಹ್ಮವು ಸಾವಯವವಾಗಿದ್ದರೆ ಒಂದು ಭಾಗವು ಪರಿಣಮಿಸಿ ಮತ್ತೊಂದು ಭಾಗವು ಹಾಗೆಯೇ ಉಳಿಯಬಹುದಾಗಿತ್ತು. ಆದರೆ ಬ್ರಹ್ಮವು ನಿರವಯವವೆಂದು ಶ್ರುತಿಗಳು ನಿಶ್ಚಯವಾಗಿ ಹೇಳುತ್ತವೆ : 'ನಿರವಯವನೂ ನಿಷ್ಕ್ರಿಯನೂ ಶಾಂತನೂ ಅನಿಂದ್ಯನೂ ನಿರಂಜನನೂ'[1] (ಶ್ವೇ. ಉ ೬. ೧೯); 'ದಿವ್ಯನೂ ಅಮೂರ್ತನೂ ಆದ ಪುರುಷನು ಒಳಗೂ ಹೊರಗೂ ಇರುವವನು, ಅಜನು'[2] (ಮುಂ. ಉ' ೨. ೧ ೨); ‹ಅನಂತವೂ ಅಪಾರವೂ ಆದ ಈ ಮಹತ್ ಪರಮಾರ್ಥವು ವಿಜ್ಞಾನಘನವೇ ಆಗಿದೆ'[3] (ಬೃ ಉ. ೨ ೪ ೧೨); 'ಅಸ್ಥೂಲವು, ಅನಣು'[4] (ಬೃ. ಉ. ೩. ೮. ೯) ಇತ್ಯಾದಿ. ಒಂದು ಭಾಗದ ಪರಿಣಾಮವು ಅಸಂಭವವಾದುದರಿಂದ ಬ್ರಹ್ಮದ ಪೂರ್ಣಪರಿಣಾಮವನ್ನು ಒಪ್ಪಿಕೊಳ್ಳಬೇಕಾಗುವುದು ; ಹಾಗೆ ಒಪ್ಪಿಕೊಂಡರೆ ಮೂಲವನ್ನೇ ಕತ್ತರಿಸಬೇಕಾಗುವುದು. ಮತ್ತೆ ಆತ್ಮನು ದ್ರಷ್ಟವ್ಯನೆಂಬ ಶ್ರುತ್ಯುಪದೇಶವೂ ವ್ಯರ್ಥವಾಗುತ್ತದೆ ; ಏಕೆಂದರೆ ಕಾರ್ಯವಾದ ಪ್ರಪಂಚವನ್ನು ಪ್ರಯತ್ನವಿಲ್ಲದೆಯೇ ನೋಡಬಹುದು ಮತ್ತು ಅದಕ್ಕಿಂತ ಬೇರೆ ಯಾವ ಬ್ರಹ್ಮವೂ ಇರುವುದಿಲ್ಲ. ಇದಲ್ಲದೆ ಬ್ರಹ್ಮವು 'ಅಜ' ಎಂದು ಹೇಳುವ ಶ್ರುತಿಗಳಿಗೂ ಈ ಅಭಿಪ್ರಾಯವು ವಿರೋಧವಾಗಿರುತ್ತದೆ. ಈ ಕಷ್ಟಗಳಿಂದ ತಪ್ಪಿಸಿಕೊಳ್ಳಲು ಬ್ರಹ್ಮವು ಸಾವಯವವೆಂದು ಒಪ್ಪಿಕೊಂಡರೆ ಬ್ರಹ್ಮವು ನಿರವಯವವೆಂದು ಹೇಳುವ ಶ್ರುತಿಗಳಿಗೆ ವಿರೋಧವಾಗುತ್ತದೆ. ಬ್ರಹ್ಮವು ಸಾವಯವವಾದರೆ ಅನಿತ್ಯತ್ವ-ಪ್ರಸಂಗವೂ ಒದಗುತ್ತದೆ.

ವಿ.—ಇಲ್ಲಿ ಆಕ್ಷೇಪವು ಹೀಗಿದೆ : ಪರಬ್ರಹ್ಮನ ಚಿದಂಶವು ಜೀವವಾಗಿ ಅಚಿದಂಶವು ಆಕಾಶಾದಿಭೂತವಾಗಿ, ಅವನು ಸಂಪೂರ್ಣವಾಗಿ ಕಾರ್ಯಾವಸ್ಥೆಗೆ ಪರಿಣಮಿಸಿದರೆ

---

* ಶ್ರೀಭಾಷ್ಯದಲ್ಲಿ ಈ ಅಧಿಕರಣವು ೨೯ನೆಯ ಸೂತ್ರದಲ್ಲಿ ಮುಗಿಯದೆ ವಿಕರಣತ್ವಾನ್ನೇತಿ ಚೇತ್ತದುಕ್ತಮ್ ಎಂಬ ಸೂತ್ರದವರೆಗೂ ಮುಂದುವರಿಯುತ್ತದೆ.

[1] ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಮ್ ।

[2] ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।

[3] ಇದಂ ಮಹದ್ಭೂತಮನಂತಮಪಾರಂ ವಿಜ್ಞಾನಘನ ಏವ ।

[4] ಅಸ್ಥೂಲಮನಣು ।

ಪರಬ್ರಹ್ಮನು ಕಾರಣಾವಸ್ಥೆಯಲ್ಲಿ ನಿರವಯವನೆಂಬ ಶ್ರುತಿಗೆ ವಿರೋಧವಾಗಿರುತ್ತದೆ ಬ್ರಹ್ಮನು ನಿರವಯವನಾದರೆ ಅವನು ಬಹುವಾಗಲಾರನು ಕಾರ್ಯವಾಗುವುದಕ್ಕೆ ಉಪಯೋಗವಾಗದ ಒಂದು ಅಂಶವಿದೆಯೆಂದು ಒಪ್ಪಿಕೊಳ್ಳಲು ಆಗುವುದಿಲ್ಲ ಆದುದರಿಂದ ಬ್ರಹ್ಮಕಾರಣತ್ವವು ಹೊಂದುವುದಿಲ್ಲ

**ದ್ವೈ.**—ಜೀವಕರ್ತೃತ್ವಪಕ್ಷದಲ್ಲಿ ಇನ್ನೊಂದು ದೋಷವು ಬರುತ್ತದ ಅವನು ಬೆರಳಿನಿಂದ ಕೆಲಸವನ್ನು ಮಾಡಲು ಪ್ರವರ್ತಿಸಿದರೆ ಅವನು ತನ್ನ ಪೂರ್ಣಶಕ್ತಿಯಿಂದ ಮಾಡಿದನೆಂದಾಗುವುದು ಆದರೆ ಇದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ, ಏಕೆಂದರೆ ಅವನ ಸಾಮರ್ಥ್ಯದ ಒಂದಂಶವೇ ಕೆಲಸದಲ್ಲಿರುವುದು ಕಂಡುಬರುತ್ತದ ಅವನು ನಿರವಯವನಾದುದರಿಂದ ಏಕದೇಶದಿಂದ ಪ್ರವರ್ತಿಸುವನೆಂದು ಹೇಳಲಾಗುವುದಿಲ್ಲ ಇದನ್ನು ಅಂಗೀಕರಿಸದಿದ್ದರೆ 'ಜೀವನು ನಿತ್ಯನು ನಿರವಯವನು ಜ್ಞಾತೃವು ಅಜ್ಞಾತೃವು ಸುಖಿಯು ದುಃಖಿಯು ಶರೀರೇಂದ್ರಿಯಗಳಲ್ಲಿರುವವನು' ಎಂಬ ಭಾಲ್ಲವೇಯ-ಶ್ರುತಿಗೆ ವಿರೋಧವಾಗುತ್ತದೆ [1] ಆದುದರಿಂದ ಜೀವನು ಸ್ವತಂತ್ರಕರ್ತೃವಲ್ಲ. ಈಶಾಧೀನಕರ್ತೃವು ಎಂದಾಯಿತು

## ಶ್ರುತೇಸ್ತು ಶಬ್ದಮೂಲತ್ವಾತ್* ॥ ೨೭ ॥

೨೭ ಆದರೆ ಶ್ರುತಿಯಿರುವುದರಿಂದ (ಇದು ಹೀಗಲ್ಲ), ಏಕೆಂದರ (ಬ್ರಹ್ಮಕ್ಕೆ) ಶ್ರುತಿಯೇ ಪ್ರಮಾಣವಾಗಿರುತ್ತದೆ

ಸೂತ್ರದಲ್ಲಿರುವ **ತು** (ಆದರೆ) ಎಂಬ ಪದವು ಹಿಂದ ಹೇಳಿದ ಆಕ್ಷೇಪವನ್ನು ಪರಿಹರಿಸುತ್ತದೆ ಬ್ರಹ್ಮವು ಸಂಪೂರ್ಣವಾಗಿ ಪರಿಣಮಿಸುವುದಿಲ್ಲ, ಏಕೆಂದರೆ ಶ್ರುತಿಗಳು ಬ್ರಹ್ಮದಿಂದ ಜಗದುತ್ಪತ್ತಿಯನ್ನು ಹೇಳುವಂತೆ ಬ್ರಹ್ಮವು ತನ್ನ ವಿಕಾರಗಳಿಗಿಂತಲೂ ಬೇರೆಯಾಗಿದೆಯೆಂದು **ತಿಳಿ**ಸುತ್ತವೆ 'ಆ ಈ ದೇವತೆಯು ಯೋಚಿಸಿತು, "ಸರಿ, ನಾನು ಈ ಜೀವಾತ್ಮರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮ-ರೂಪಗಳನ್ನು ವಿಂಗಡಿಸುತ್ತೇನೆ"[2] (ಛಾಂ ಉ ೬ ೩ ೨), 'ಇದರ ಮಹಿಮೆಯು ಅಷ್ಟು ಆದರೆ ಪುರುಷನು ಅದಕ್ಕಿಂತಲೂ ದೊಡ್ಡವನು ಈ ಜಗತ್ತೆಲ್ಲ ಇವನ ಒಂದು ಪಾದವಾಗಿದ ಇವನ

---

[1] ಅಥ ಯಃ ಸ ಜೀವಃ ಸ ನಿತ್ಯೋ ನಿರವಯವೋ ಜ್ಞಾತಾಽಜ್ಞಾತಾ ಸುಖೀ ದುಃಖೀ ಶರೀರೇಂದ್ರಿಯಸ್ಥ ಇತಿ ಹಿ ಭಾಲ್ಲವೇಯ ಶ್ರುತಿಃ (ಮ ಭಾ)

* ಈ ಸೂತ್ರದಿಂದ ವಿಕರಣತ್ವಾನ್ನೇತಿ ಚೇತ್ತದುಕ್ತಮ್ ಎಂಬ ಸೂತ್ರದವರೆಗೆ ಮಧ್ವಭಾಷ್ಯದಲ್ಲಿ ಶಬ್ದಮೂಲತ್ವಾಧಿಕರಣ ಎಂಬ ಹೊಸ ಅಧಿಕರಣವಾಗಿದೆ

[2] ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ।

ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ'[1] (ಛಾಂ ಉ ೩ ೧೨ ೬) ಮತ್ತೆ 'ಸದ್ವಸ್ತುವಿನೊಂದಿಗೆ ಏಕೀಭೂತನಾಗಿರುತ್ತಾನೆ'[2] (ಛಾಂ ಉ ೬ ೮ ೧) ಎಂಬ ಸುಷುಪ್ತಿಗತವಾದ ವಿಶೇಷಣವು ಹೊಂದುವುದಿಲ್ಲ, ಏಕೆಂದರೆ ಆ ಪಕ್ಷದಲ್ಲಿ ಜೀವನು ಬ್ರಹ್ಮದ ವಿಕಾರಗಳೊಡನೆ ಒಂದಾಗುತ್ತಾನೆ ಮತ್ತು ವಿಕಾರವನ್ನು ಹೊಂದದಿರುವ ಬ್ರಹ್ಮವು ಇರುವುದಿಲ್ಲ ಆದುದರಿಂದ ವಿಕಾರವನ್ನು ಹೊಂದದಿರುವ ಬ್ರಹ್ಮವು ಇದೆಯೆಂದು ತಿಳಿಯಬೇಕು ಬ್ರಹ್ಮವು ನಿರವಯವವೆಂದು ಶ್ರುತಿಯು ಹೇಳುವುದರಲ್ಲಿ ಯಾವ ವಿರುದ್ಧತೆಯೂ ಇಲ್ಲ, ಏಕೆಂದರೆ ಬ್ರಹ್ಮದ ನಿರವಯವತ್ವವು ಶ್ರುತಿಯಿಂದಲೇ ತಿಳಿದುಬರುತ್ತದೆ ಬ್ರಹ್ಮಕ್ಕೆ ಶ್ರುತಿಯೇ ಪ್ರಮಾಣವು, ಇಂದ್ರಿಯಾದಿಗಳಲ್ಲ, ಆದುದರಿಂದ ಶ್ರುತಿಯು ಹೇಳುವಂತೆಯೇ ಅರಿತುಕೊಳ್ಳಬೇಕು ಬೇರೆಬೇರೆ ಸಮಯಗಳಲ್ಲಿ ಬೇರೆಬೇರೆ ಕಾರ್ಯಗಳನ್ನುಂಟುಮಾಡುವ ಮಣಿ ಮಂತ್ರ ಔಷಧ—ಇವುಗಳ ವಿಷಯದಲ್ಲಿಯೂ ಕೂಡ ನಾವು ಇತರರಿಂದ ಕಲಿಯಬೇಕಾಗಿರುತ್ತದೆ ಹೀಗಿರುವಾಗ ಅಚಿಂತ್ಯಸ್ವಭಾವವುಳ್ಳ ಬ್ರಹ್ಮದ ಸ್ವರೂಪವನ್ನು ಶ್ರುತಿಯ ಸಹಾಯವಿಲ್ಲದೆ ನಿರೂಪಿಸಲು ಆಗುವುದಿಲ್ಲವೆಂದು ಹೇಳುವುದೇನು ?[3] 'ಅಚಿಂತ್ಯವಸ್ತುಗಳ ವಿಷಯದಲ್ಲಿ ತರ್ಕವನ್ನು ಪ್ರಯೋಗಿಸಕೂಡದು ಪ್ರತ್ಯಕ್ಷವಾಗಿ ಕಾಣುವ ವಸ್ತುಗಳ ಸ್ವಭಾವಗಳಿಗಿಂತ ಬೇರೆಯಾಗಿರುವುದು ಅಚಿಂತ್ಯದ ಲಕ್ಷಣವು'[4] ಎಂದು ಪೌರಾಣಿಕರು ಹೇಳುತ್ತಾರೆ

ಈಗ ಒಂದು ಆಕ್ಷೇಪವು ಬರುತ್ತದೆ ಬ್ರಹ್ಮವು ನಿರವಯವವಾಗಿರಬೇಕಾದರೆ ಒಂದು ಭಾಗದಲ್ಲಿ ಪರಿಣಮಿಸಬೇಕು, ಬ್ರಹವು ನಿರವಯವವಾಗಿದ್ದು ಪರಿಣಮಿಸುವುದೇ ಇಲ್ಲ ಅಥವಾ ಸಂಪೂರ್ಣವಾಗಿ ಪರಿಣಮಿಸುತ್ತದ ಒಂದು ಭಾಗದಲ್ಲಿ ಪರಿಣಮಿಸುತ್ತದೆ, ಮತ್ತೊಂದು ಭಾಗದಲ್ಲಿ ಪರಿಣಮಿಸುವುದಿಲ್ಲ—ಎಂದು ಹೇಳಿದರೆ ಅದು ಸಾವಯವವಾಗುತ್ತದ ಇದಕ್ಕೆ ಪರಿಹಾರ ಹೀಗಿದ ಅವಿದ್ಯಾಕಲ್ಪಿತವಾದ ಭೇದವನ್ನು ಮಾತ್ರ ಅಂಗೀಕರಿಸಿದ ಇಂಥ ಕಲ್ಪಿತವಾದ ಭೇದದಿಂದ ವಸ್ತುವು ಸಾವಯವವಾಗುವುದಿಲ್ಲ ಬ್ರಹ್ಮವೆಂದಾಗಲಿ ಅನ್ಯವೆಂದಾಗಲಿ ನಿರ್ಧರಿಸುವುದಕ್ಕಾಗದಿರುವ ಅವಿದ್ಯಾಕಲ್ಪಿತವಾದ ವ್ಯಾಕೃತ-ಅವ್ಯಾಕೃತವಾದ ನಾಮರೂಪಗಳೆಂಬ ಭೇದದಿಂದ ಬ್ರಹ್ಮವು ಪರಿಣಾಮವೇ ಮೊದಲಾದ ಸರ್ವವ್ಯವಹಾರಗಳಿಗೆ ಆಧಾರವಾಗಿರುತ್ತದ ಆದರೆ ಬ್ರಹ್ಮವು ತನ್ನ ಪಾರಮಾರ್ಥಿಕರೂಪ

---

[1] ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ।

[2] ಸತಾ ಸೋಮ್ಯ ತದಾ ಸಂಪನ್ನೋ ಭವತಿ ।

[3] ಕಿಮುತಾಚಿಂತ್ಯಸ್ವಭಾವಸ್ಯ ಬ್ರಹ್ಮಣೋ ರೂಪಂ ವಿನಾ ಶಬ್ದೇನ ನ ನಿರೂಪ್ಯೇತ ।

[4] ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್ ।
ಪ್ರಕೃತಿಭ್ಯಃ ಪರಂ ಯಚ್ಚ ತದಚಿಂತ್ಯಸ್ಯ ಲಕ್ಷಣಮ್ ॥

ದಲ್ಲಿ ಸರ್ವವ್ಯವಹಾರಗಳನ್ನೂ ಮೀರಿ ಪರಿಣಾಮವನ್ನು ಹೊಂದದೆ ಇರುತ್ತದೆ. [1]ಅವಿದ್ಯಾ-ಕಲ್ಪಿತವಾದ ನಾಮರೂಪಗಳ ಭೇದವು ವಾಕ್ಕಿನಿಂದಲೇ ಹುಟ್ಟಿರುವುದರಿಂದ ಬ್ರಹ್ಮದ ನಿರವಯವತ್ವಕ್ಕೆ ವಿರುದ್ಧತೆಯುಂಟಾಗುವುದಿಲ್ಲ. ಪರಿಣಾಮಶ್ರುತಿಯು ಪರಿಣಾಮವನ್ನು ಪ್ರತಿಪಾದಿಸುವುದಕ್ಕೆ ಬಂದಿರುವುದಿಲ್ಲ; ಏಕೆಂದರೆ ಅಂಥ ಜ್ಞಾನಕ್ಕೆ ಯಾವ ಫಲವಿದೆ ಯೆಂಬುದು ತಿಳಿದಿಲ್ಲ [2] ಸರ್ವವ್ಯವಹಾರರಹಿತವಾದ ಬ್ರಹ್ಮಾಭಾವನನ್ನು ಪ್ರತಿಪಾದಿಸಲು ಈ ಶ್ರುತಿಯು ಬಂದಿದೆ; ಇಂಥ ಜ್ಞಾನಕ್ಕೆ ಫಲವಿದೆಯೆಂದು ಶ್ರುತಿಯೇ ಹೇಳುತ್ತದೆ: 'ಜನಕ, ಅಭಯವನ್ನು ಪಡೆದಿರುತ್ತೀಯೆ'[3] (ಬೃ. ಉ. ೪. ೨. ೪).

ವಿ.—ಶ್ರುತಿಯು ಪರಬ್ರಹ್ಮನ ನಿರವಯವತ್ವವನ್ನೂ ವಿಚಿತ್ರಸೃಷ್ಟಿಯನ್ನೂ ತಿಳಿಸುತ್ತದೆ. ಶ್ರುತಿಯು ಪ್ರತಿಪಾದಿಸುವ ವಿಷಯಗಳನ್ನು ಶ್ರುತಿಯು ಹೇಳುವಂತೆಯೇ ಅರಿತುಕೊಳ್ಳಬೇಕು.[4] ಪರಬ್ರಹ್ಮನ ವಿಚಿತ್ರಶಕ್ತಿಯೋಗಕ್ಕೆ ಶ್ರುತಿಯೊಂದೇ ಪ್ರಮಾಣವಾಗಿರುವುದರಿಂದ ಅಂಥ ಶಕ್ತಿಯನ್ನು ಒಪ್ಪಿಕೊಳ್ಳುವುದರಲ್ಲಿ ವಿರುದ್ಧತೆಯಿಲ್ಲ.

ದ್ವೈ.—'ಶ್ರುತಿಯ ವಚನದಿಂದಲೂ ಮತ್ತು ಶ್ರುತಿಯಿಂದಲೇ ಈಶನು ತಿಳಿದು ಬರುವುದರಿಂದಲೂ ಅವನ ಪಕ್ಷದಲ್ಲಿ ವಿರುದ್ಧತ್ವವು ಬರುವುದಿಲ್ಲ' ಎಂಬುದು ಸೂತ್ರಾರ್ಥ.

ಜೀವಾತ್ಮನಿಗೆ ಹೇಳಿದ ಆಕ್ಷೇಪವು ಈಶನ ಕರ್ತೃತ್ವವನ್ನು ಅಂಗೀಕರಿಸಿದರೆ ಇರುವುದಿಲ್ಲ.[5] ಈಶನು ಸ್ವತಃಪ್ರಾಮಾಣ್ಯವಾದ ಶ್ರುತಿಗಳಿಂದಲೇ ತಿಳಿದುಬರುವುದರಿಂದ ಯುಕ್ತಿಯ ವಿರುದ್ಧತೆಯಿರುವುದಿಲ್ಲ.[6]

**ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ॥ ೨೮ ॥**

೨೮. ಏಕೆಂದರೆ ಹೀಗೆ ಆತ್ಮನಲ್ಲಿಯೂ (ದೇವಾದಿಗಳಲ್ಲಿಯೂ) ವಿಚಿತ್ರ (ಸೃಷ್ಟಿಗಳು) ಇರುತ್ತವೆ.

ಒಂದೇ ಬ್ರಹ್ಮದಲ್ಲಿ ಸ್ವರೂಪನಾಶವಾಗದೆಯೇ ಅನೇಕಾಕಾರವಾದ ಸೃಷ್ಟಿಯು ಹೇಗೆ ಆದೀತು ?—ಎಂದು ವಿವಾದಮಾಡಬೇಕಾಗಿಲ್ಲ. ಕನಸುನೋಡುತ್ತಿರುವ ಒಬ್ಬನೇ ಆತ್ಮ

---

[1] ಅವಿದ್ಯಾಕಲ್ಪಿತೇನ ಚ ನಾಮರೂಪಲಕ್ಷಣೇನ ಸ್ವರೂಪಭೇದೇನ ವ್ಯಾಕೃತಾವ್ಯಾಕೃತಾತ್ಮಕೇನ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇನ ಬ್ರಹ್ಮ ಪರಿಣಾಮಾದಿಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ। ಪಾರಮಾರ್ಥಿಕೇನ ಚ ರೂಪೇಣ ಸರ್ವವ್ಯವಹಾರಾತೀತಮಪರಿಣತಮವತಿಷ್ಠತೇ (ಸೂ. ಭಾ.).

[2] ನ ಚೇಯಂ ಪರಿಣಾಮಶ್ರುತಿಃ ಪರಿಣಾಮಪ್ರತಿಪಾದನಾರ್ಥಾ, ತತ್ಪ್ರತಿಪತ್ತೌ ಫಲಾನವಗಮಾತ್ (ಸೂ. ಬಾ.).

[3] ಅಭಯಂ ವೈ ಜನಕ ಪ್ರಾಪ್ತೋಽಸಿ।

[4] ಶ್ರೌತೇಷ್ವರ್ಥೇಷು ಯಥಾಶ್ರುತಿ ಪ್ರತಿಪತ್ತವ್ಯಮಿತ್ಯರ್ಥಃ (ಶ್ರೀಭಾಷ್ಯ).

[5] ನ ಚೇಶ್ವರಪಕ್ಷೇಽಯಂ ವಿರೋಧಃ (ಮ. ಭಾ.).

[6] ಶಬ್ದಮೂಲತ್ವಾಚ್ಚ ನ ಯುಕ್ತಿವಿರೋಧಃ (ಮ. ಭಾ.).

ನಲ್ಲಿ ಅವನ ಸ್ವರೂಪವು ನಾಶವಾಗದೆಯೇ ಅನೇಕಾಕಾರವಾದ ಸೃಷ್ಟಿಯಿರುವುದೆಂದು ಶ್ರುತಿಯೂ ಹೇಳುತ್ತದೆ. 'ಸ್ವಪ್ನದಲ್ಲಿ ರಥಗಳಾಗಲಿ ಅವುಗಳಿಗೆ ಕಟ್ಟಲ್ಪಡುವ ಕುದುರೆಯೇ ಮೊದಲಾದ ಪ್ರಾಣಿಗಳಾಗಲಿ ಪಥಗಳಾಗಲಿ ಇರುವುದಿಲ್ಲ, ಆದರೆ ಅವನು ರಥಗಳನ್ನೂ ಪ್ರಾಣಿಗಳನ್ನೂ ಪಥಗಳನ್ನೂ ಸೃಷ್ಟಿಸಿಕೊಳ್ಳುತ್ತಾನೆ'[1] (ಬೃ. ಉ. ೪. ೩. ೧೦). ಹೀಗೆಯೇ ದೇವಾದಿಗಳಲ್ಲಿಯೂ ಗಾರುಡಿಗರಲ್ಲಿಯೂ ಅವರವರ ಸ್ವರೂಪವು ನಾಶವಾಗದೆಯೇ ಅನೇಕಾಕಾರಸೃಷ್ಟಿಯಿರುವುದು ಕಂಡುಬರುತ್ತದೆ. ಇದೇ ರೀತಿ ಒಂದೇ ಬ್ರಹ್ಮದಲ್ಲಿ ಅದರ ಸ್ವರೂಪನಾಶವಾಗದೆಯೇ ಅನೇಕಾಕಾರಸೃಷ್ಟಿಯು ಉಂಟಾಗಬಹುದು.[2]

ವಿ.—'ಮತ್ತು ಹೀಗೆ ಆತ್ಮನಲ್ಲಿ; ಏಕೆಂದರೆ ಅಲ್ಲಿ ವಿಚಿತ್ರಶಕ್ತಿಗಳಿರುತ್ತವೆ' ಎಂಬುದು ಸೂತ್ರಾರ್ಥ.

ಬೇರೆಬೇರೆ ಜಾತಿಗಳಿಗೆ ಸೇರಿದ ಅಗ್ನಿಜಲಾದಿಗಳಲ್ಲಿ ಉಷ್ಣತೆಯೇ ಮೊದಲಾದ ಬೇರೆ ಬೇರೆ ಶಕ್ತಿಗಳಿರುವುದು ಕಂಡುಬರುತ್ತದೆ; ಹೀಗೆಯೇ ಲೋಕದಲ್ಲಿರುವ ಸಮಸ್ತವಸ್ತುಗಳಿಗಿಂತ ಭಿನ್ನನಾದ ಪರಮಾತ್ಮನಲ್ಲಿ ಸಾವಿರಾರು ಅದೃಷ್ಟಶಕ್ತಿಗಳಿರುತ್ತವೆ. 'ಯಾವ ವನದಿಂದ, ಯಾವ ವೃಕ್ಷದಿಂದ, ದ್ಯುಲೋಕಪೃಥ್ವಿಗಳನ್ನು ನಿರ್ಮಿಸಿದರು ?...ಪರಬ್ರಹ್ಮನೇ ಆ ವನ, ಪರಬ್ರಹ್ಮನೇ ಆ ವೃಕ್ಷ'[3] (ಋ ವೇ. ೧೦. ೮೧) ಎಂದು ಶ್ರುತಿಯು ಹೇಳುತ್ತದೆ.

ದ್ವೈ.—ಪರಮಾತ್ಮನಲ್ಲಿಯೇ ವಿಚಿತ್ರವಾದ ಶಕ್ತಿಗಳಿವೆ, ಇತರರಲ್ಲಿಲ್ಲ.[4]

## ಸ್ವಪಕ್ಷದೋಷಾಚ್ಚ ॥ ೨೯ ॥

೨೯. ಮತ್ತು ಪೂರ್ವಪಕ್ಷಿಯ ಪಕ್ಷದಲ್ಲಿ ದೋಷವಿರುವುದರಿಂದಲೂ.

ಪ್ರಧಾನವಾದಿಯ ಮತದಲ್ಲಿಯೂ ನಿರವಯವವೂ ಅಪರಿಚ್ಛಿನ್ನವೂ ಶಬ್ದಾದಿರಹಿತವೂ ಆದ ಪ್ರಧಾನವು ಸಾವಯವವೂ ಪರಿಚ್ಛಿನ್ನವೂ ಶಬ್ದಾದಿಗಳುಳ್ಳದ್ದೂ ಆದ ಕಾರ್ಯಕ್ಕೆ ಕಾರಣವು ಇವನ ಪಕ್ಷದಲ್ಲಿಯೂ ನಿರವಯವವಾದ ಪ್ರಧಾನವು ಪೂರ್ಣವಾಗಿ ಪರಿಣಾಮವನ್ನು ಹೊಂದುತ್ತದೆ—ಎಂಬ ಪ್ರಸಂಗವು ಒದಗುತ್ತದೆ; ಅಥವಾ ಪ್ರಧಾನವು ನಿರವಯವ—ಎಂಬುದನ್ನು ಬಿಡಬೇಕಾಗುತ್ತದೆ. ಪ್ರಧಾನವು ನಿರವಯವವಲ್ಲ, ಸತ್ತ್ವರಜಸ್ತಮಸ್ಸುಗಳ ಸಾಮ್ಯಾವಸ್ಥೆಯು ಪ್ರಧಾನ—ಎಂದು ಪ್ರಧಾನಕಾರಣವಾದಿಯು

---

[1] ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ, ಅಥ ರಥಾನ್ ರಥಯೋಗಾನ್ ಪಥಃ ಸೃಜತೇ।

[2] ತಥೈಕಸ್ಮಿನ್ನಪಿ ಬ್ರಹ್ಮಣಿ ಸ್ವರೂಪಾನುಪಮರ್ದೇನೈವಾನೇಕಾಕಾರಾ ಸೃಷ್ಟಿರ್ಭವಿಷ್ಯತೀತಿ (ಸೂ. ಭಾ.)

[3] ಕಿಂ ಸ್ವಿದ್ವನಂ ಕ ಉ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ........ ಬ್ರಹ್ಮ ವನಂ ಬ್ರಹ್ಮ ಸ ವೃಕ್ಷ ಆಸೀದ್ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ।

[4] ಪರಮಾತ್ಮನೋ ವಿಚಿತ್ರಾಶ್ಚ ಶಕ್ತಯಃ ಸಂತಿ ನಾನ್ಯೇಷಾಮ್ (ಮ. ಭಾ.).

ಹೇಳಿದರೂ ಪ್ರಕೃತದೋಷವು ಹೋಗುವುದಿಲ್ಲ ; ಏಕೆಂದರೆ ಪ್ರತಿಯೊಂದು ಗುಣವೂ ನಿರವಯವವಾಗಿದೆ. ಮತ್ತೆ ಪ್ರತಿಯೊಂದು ಗುಣವೂ ಉಳಿವ ಎರಡು ಗುಣಗಳ ಸಹಾಯದಿಂದ ತನ್ನ ಜಾತಿಗೆ ಸೇರಿದ ಪ್ರಪಂಚದ ಆಯಾ ಭಾಗಕ್ಕೆ ಉಪಾದಾನಕಾರಣವಾಗಿರುತ್ತದೆ ; ಆದುದರಿಂದ ಈ ಪಕ್ಷಕ್ಕೂ ದೋಷವು ಸಮಾನವಾಗಿರುತ್ತದೆ. ಪುನಃ ಪ್ರಧಾನವು ಸಾವಯವವೆಂದು ಅವನು ಹೇಳಿದರೆ ಪ್ರಧಾನದ ನಿತ್ಯತ್ವವನ್ನು ತ್ಯಜಿಸಬೇಕಾಗುತ್ತದೆ. ಕಾರ್ಯವೈಚಿತ್ರ್ಯದಿಂದ ಸೂಚಿತವಾಗಿರುವ ಪ್ರಧಾನದ ಶಕ್ತಿಗಳೇ ಪ್ರಧಾನದ ಅವಯವಗಳು—ಎಂದು ಹೇಳಿದರೆ, ಅಂಥ ಅಭಿಪ್ರಾಯವು ವೇದಾಂತಿಗಳಿಗೂ ಸಮಾನವಾಗಿರುತ್ತದೆ.

ಅಣುವಾದಿಯ ಪಕ್ಷದಲ್ಲಿಯೂ ಇದೇ ದೋಷವಿದೆ. ನಿರವಯವವಾದ ಅಣುಗಳು ಒಂದರಲ್ಲೊಂದು ಸೇರಿಕೊಂಡು ಅದೇ ಗಾತ್ರದಲ್ಲಿರುವುದರಿಂದ ಒಂದೇ ಅಣುವಾಗುತ್ತವೆ. ಒಂದು ಅಣುವು ಇನ್ನೊಂದು ಅಣುವಿನ ಒಂದು ಭಾಗದಲ್ಲಿ ಮಾತ್ರ ಸೇರಿಕೊಂಡಿದೆಯೆಂದು ಹೇಳಿದರೆ ಅಣುವಿನ ನಿರವಯವತ್ವವನ್ನು ತ್ಯಜಿಸಬೇಕಾಗುತ್ತದೆ.

**ವಿ.**—ಪ್ರಧಾನವು ಜಗತ್ಕಾರಣವೆಂದು ಅಂಗೀಕರಿಸಿದರೆ ಲೌಕಿಕವಸ್ತುಗಳಲ್ಲಿ ಕಂಡುಬರುವ ದೋಷಗಳು ಪ್ರಧಾನಕ್ಕೂ ಬರುತ್ತವೆ ; ಏಕೆಂದರೆ ಪ್ರಧಾನವು ಆ ವಸ್ತುಗಳಿಗಿಂತ ಬೇರೆಯಾಗಿಲ್ಲ. ಆದುದರಿಂದ ಸಕಲೇತರವಿಲಕ್ಷಣನಾದ ಪರಬ್ರಹ್ಮನೇ ಜಗತ್ಕಾರಣನೆಂಬುದು ಸಿದ್ಧವಾಯಿತು.

**ದ್ವೈ.**—'ಜೀವಪಕ್ಷದಲ್ಲಿಯೂ ಈ ದೋಷಗಳಿರುವುದರಿಂದ ಯುಕ್ತಿವಿರೋಧವಿದೆ' ಎಂಬುದು ಸೂತ್ರಾರ್ಥ.

'ಜೀವದಲ್ಲಿರುವ ದೋಷಗಳು ಈಶನಲ್ಲಿ ಕಂಡುಬಂದರೆ ಅವು ಗುಣಗಳೇ ಆಗುತ್ತವೆ; ಏಕೆಂದರೆ ನಿರತಿಶಯಗುಣಪೂರ್ಣನಾದ ಈಶನಲ್ಲಿ ಯಾವುದೂ ದೋಷವಾಗುವುದಿಲ್ಲ' ಎಂಬ ವಚನದ ಪ್ರಕಾರ ಜೀವಪಕ್ಷದ ದೋಷಗಳು ಪರಮಾತ್ಮನ ಪಕ್ಷದಲ್ಲಿ ಬರುವುದಿಲ್ಲ.[1]

---

[1] ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ । ನ ದೋಷಃ ಪರಮೇ ಕಶ್ಚಿದ್ಗುಣಾ ಏವ ನಿರಂತರಾ ಇತಿ ವಚನಾಜ್ಜೀವಪಕ್ಷ ಏವ ದೋಷೋ ನ ಪರಪಕ್ಷೇ (ಮ. ಭಾ.).

# ೧೦. ಸರ್ವೋಪೇತಾಧಿಕರಣ

(ಸೂ. ೩೦–೩೧)

**ಸರ್ವೋಪೇತಾ ಚ ತದ್ದರ್ಶನಾತ್ ॥ ೩೦ ॥**

೩೦. ಮತ್ತು (ಬ್ರಹ್ಮವು) ಎಲ್ಲ (ಶಕ್ತಿಗಳಿಂದ) ಕೂಡಿರುತ್ತದೆ, ಏಕೆಂದರೆ ಅದು (ಶ್ರುತಿಗಳಲ್ಲಿ) ಕಂಡುಬರುತ್ತದೆ

ಪರಬ್ರಹ್ಮವು ಎಲ್ಲ ಶಕ್ತಿಗಳಿಂದಲೂ ಕೂಡಿದೆ ಎಂಬುದು ಶ್ರುತಿಗಳಿಂದ ತಿಳಿದುಬರುತ್ತದೆ: '(ಈಶ್ವರನು) ಸರ್ವಕರ್ಮನು ಸರ್ವಕಾಮನು ಸರ್ವಗಂಧನು ಸರ್ವವ್ಯಾಪಿಯು ಸರ್ವೇಂದ್ರಿಯರಹಿತನು ಮತ್ತು ಸಂಭ್ರಮರಹಿತನು'[1] (ಛಾಂ. ಉ. ೩. ೧೪. ೪); 'ಸತ್ಯಕಾಮನು ಸತ್ಯಸಂಕಲ್ಪನು'[2] (ಛಾಂ. ಉ ೮. ೭. ೧.); 'ಸರ್ವಜ್ಞನು ಸರ್ವವಿದನು'[3] (ಮುಂ. ಉ. ೧. ೧. ೯); 'ಈ ಅಕ್ಷರದ ಶಾಸನದಿಂದಲೇ ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ'[4] (ಬೃ. ಉ. ೩. ೮. ೯) ಇತ್ಯಾದಿ.

ವಿ.—ಸಮಸ್ತವಸ್ತುಗಳಿಗಿಂತ ವಿಲಕ್ಷಣನಾದ ಪರಬ್ರಹ್ಮನು ಸರ್ವಶಕ್ತಿಗಳಿಂದ ಕೂಡಿರುವನೆಂದು ಶ್ರುತಿಯು ಹೇಳುತ್ತದೆ. 'ಅವನ ಪರಾಶಕ್ತಿಯನ್ನು ವಿವಿಧ ಪ್ರಕಾರವಾಗಿ ಹೇಳಿದೆ. ಅದು ಸ್ವಾಭಾವಿಕವೂ ಜ್ಞಾನಕ್ರಿಯೆಯೂ ಬಲಕ್ರಿಯೆಯೂ ಆಗಿದೆ'[5] (ಶ್ವೇ. ಉ. ೬. ೮).

ದ್ವೈ.—'ಯಾವನು ಸರ್ವಶಕ್ತಿಗಳಿಂದ ಯುಕ್ತನಾಗಿರುವನೊ, ಯಾವನನ್ನು ಅಜಸ್ರಶಕ್ತಿಯುಳ್ಳವನು ನಿತ್ಯಾನಂದನು ನಿತ್ಯರೂಪನು ಮುಪ್ಪಿಲ್ಲದವನು ಶಾಶ್ವತಾತ್ಮನು ಎಂದು ಹೇಳುವರೊ ಅವನೇ ಪರದೇವತೆ' ಎಂದು ಚತುರ್ವೇದಶಿಖೆಯು ಹೇಳುತ್ತದೆ[6] ಆದುದರಿಂದ ಈಶನು ವಿಚಿತ್ರಶಕ್ತಿಗಳಿಂದ ಯುಕ್ತನಾಗಿರುವುದಲ್ಲದೆ ಸರ್ವಶಕ್ತಿಯುಳ್ಳವನಾಗಿದ್ದಾನೆ.

---

[1] ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ ।

[2] ಸತ್ಯಕಾಮಃ ಸತ್ಯಸಂಕಲ್ಪಃ ।

[3] ಯಃ ಸರ್ವಜ್ಞಃ ಸರ್ವವಿತ್ ।

[4] ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ।

[5] ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ।

[6] ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಮ್ । ನಿತ್ಯಾನಂದಾ ನಿತ್ಯರೂಪಾಽಜರಾ ಚ ಯಾ ಶಾಶ್ವತಾತ್ಮೇತಿ ಚ ಯಾಂ ವದಂತೀತಿ ಚ ಚತುರ್ವೇದಶಿಖಾಯಾಮ್ (ಮ. ಭಾ.).

## ವಿಕರಣತ್ವಾನ್ನೇತಿ ಚೇತ್ತದುಕ್ತಮ್ ॥ ೩೧ ॥

೩೧. (ಬ್ರಹ್ಮಕ್ಕೆ ಕರಣಗಳಿಲ್ಲದಿರುವುದರಿಂದ (ಕಾರ್ಯವನ್ನು) ಉತ್ಪಾದಿಸಲಾರದು ಎಂದು ಹೇಳಿದರೆ ಅದನ್ನು (ಹಿಂದೆಯೇ) ಹೇಳಿದ್ದೇವೆ (ಎಂದು ಉತ್ತರಿಸುತ್ತೇವೆ)

ಪರಬ್ರಹ್ಮಕ್ಕೆ ಕರಣಗಳಿಲ್ಲವೆಂದು ಶ್ರುತಿಯು ಹೇಳುತ್ತದೆ: 'ಅದಕ್ಕೆ ಕಣ್ಣಿಲ್ಲ. ಕಿವಿಯಿಲ್ಲ ವಾಗಿಂದ್ರಿಯವಿಲ್ಲ ಮನಸ್ಸಿಲ್ಲ'[1] (ಬೃ. ಉ. ೩ ೮. ೮). ಹೀಗಿರುವಾಗ ಅದು ಸರ್ವಶಕ್ತಿಗಳಿಂದ ಕೂಡಿದ್ದರೂ ಕಾರ್ಯವನ್ನು ಹೇಗೆ ಉತ್ಪಾದಿಸೀತು ? ಮತ್ತೆ **ನೇತಿ ನೇತಿ** (ಬೃ. ಉ ೩. ೯. ೨೬) ಎಂದು ಸರ್ವವಿಶೇಷಗಳನ್ನೂ ಬ್ರಹ್ಮಕ್ಕೆ ಪ್ರತಿಷೇಧಿಸಿರುವುದರಿಂದ ಅದಕ್ಕೆ ಸರ್ವಶಕ್ತಿಗಳ ಸಂಬಂಧವು ಹೇಗೆ ಉಂಟಾದೀತು ? ಇದಕ್ಕೆ ಉತ್ತರವನ್ನು ಹಿಂದೆಯೇ ಹೇಳಿದೆ.[2] ಅತಿ ಗಂಭೀರವಾದ ಬ್ರಹ್ಮವನ್ನು ಶ್ರುತಿಯಿಂದ ಅರಿತುಕೊಳ್ಳಬೇಕೇ ಹೊರತು ತರ್ಕದಿಂದಲ್ಲ ; ಬ್ರಹ್ಮಕ್ಕೆ ಸರ್ವ ವಿಶೇಷಗಳನ್ನು ಪ್ರತಿಷೇಧಿಸಿದ್ದರೂ ಅದಕ್ಕೆ ಸರ್ವಶಕ್ತಿಗಳ ಸಂಬಂಧವು ಸಂಭವಿಸುತ್ತದೆ ಎಂಬುದನ್ನು ಅವಿದ್ಯಾಕಲ್ಪಿತವಾದ ರೂಪಭೇದದ ಉಪನ್ಯಾಸದ ಮೂಲಕ ಹೇಳಿಯೇ ಇದೆ[3] ಕರಣರಹಿತವಾದ ಬ್ರಹ್ಮಕ್ಕೆ ಸರ್ವಸಾಮರ್ಥ್ಯಯೋಗವನ್ನು ಶಾಸ್ತ್ರವು ಹೀಗೆ ಹೇಳುತ್ತದೆ . 'ಅವನು ಕಾಲುಗಳಿಲ್ಲದಿದ್ದರೂ ವೇಗವಾಗಿ ದೂರ ಹೋಗಬಲ್ಲನು, ಕೈಗಳಿಲ್ಲದಿದ್ದರೂ ಎಲ್ಲವನ್ನೂ ತೆಗೆದುಕೊಳ್ಳಬಲ್ಲನು, ಕಣ್ಣಿಲ್ಲದಿದ್ದರೂ ನೋಡಬಲ್ಲನು, ಕಿವಿಯಿಲ್ಲದಿದ್ದರೂ ಕೇಳಬಲ್ಲನು'[4] (ಶ್ವೇ. ಉ. ೩. ೧೯).

ವಿ.—ಪರಬ್ರಹ್ಮನಿಗೆ ಕಾರಣವಿಲ್ಲವೆಂಬ ಆಕ್ಷೇಪಕ್ಕೆ **ಶಬ್ದಮೂಲತ್ವಾತ್** (೨ ೧. ೨೭) ಮತ್ತು **ವಿಚಿತ್ರಾಶ್ಚ ಹಿ** . . (೨. ೧. ೨೮) ಎಂಬ ಸೂತ್ರಗಳಲ್ಲಿಯೇ ಪರಿಹಾರವನ್ನು ಹೇಳಿದೆ. ಯಾವನು ಶ್ರುತಿಯಿಂದಲೇ ತಿಳಿದುಬರತಕ್ಕವನೊ ಯಾವನು ಸಕಲೇತರವಿಲಕ್ಷಣನೊ ಅವನು ಆಯಾ ಕರಣರಹಿತನಾಗಿದ್ದರೂ ಆಯಾ ಕಾರ್ಯವನ್ನು ಉತ್ಪಾದಿಸಲು ಸಮರ್ಥನಾಗುತ್ತಾನೆ[5] ಇದನ್ನೇ ಶ್ವೇತಾಶ್ವತರಶ್ರುತಿಯು (೩. ೧೯ ) ಹೇಳಿರುತ್ತದೆ.

**ದ್ವೈ.**—ಚಕ್ಷುರಿಂದ್ರಿಯವೇ ಮೊದಲಾದ ಕರಣಗಳಿಲ್ಲದುದರಿಂದ ಈಶ್ವರನಿಗೆ ಕರ್ತೃತ್ವವಿಲ್ಲವೆಂದು ಹೇಳಲಾಗುವುದಿಲ್ಲ. ಅವನಲ್ಲಿರುವ ಶಕ್ತಿಗಳನ್ನು **ಅಪಾಣಿಪಾದೋ ಜವನಃ** (ಶ್ವೇ ಉ. ೩. ೧೯) ಮೊದಲಾದ ಶ್ರುತಿಗಳು ತಿಳಿಸುತ್ತವೆ.

---

1 ಅಚಕ್ಷುಷ್ಕಮಶ್ರೋತ್ರಮವಾಗಮನಃ ।

2 ೧, ೨, ೧೪–೨೦, ೨. ೧. ೪ ನೋಡಿ

3 ಪ್ರತಿಷಿದ್ಧಸರ್ವವಿಶೇಷಸ್ಯಾಪಿ ಬ್ರಹ್ಮಣಃ ಸರ್ವಶಕ್ತಿಯೋಗಃ ಸಂಭವತೀತ್ಯೇತದಪಿ ಅವಿದ್ಯಾಕಲ್ಪಿತರೂಪಭೇದೋಪನ್ಯಾಸೇನೋಕ್ತಮೇವ (ಸೂ. ಭಾ.).

4 ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ ।

5 ಶಬ್ದೈಕಪ್ರಮಾಣಕಂ ಸಕಲೇತರವಿಲಕ್ಷಣಂ ತತ್ತತ್ಕರಣವಿರಹೇಣಾಪಿ ತತ್ತತ್ಕಾರ್ಯಸಮರ್ಥಮಿತ್ಯರ್ಥಃ (ಶ್ರೀಭಾಷ್ಯ).

## ೧೧. ಪ್ರಯೋಜನವತ್ತ್ವಾಧಿಕರಣ

(ಸೂ. ೩೨–೩೩)

**ನ ಪ್ರಯೋಜನವತ್ತ್ವಾತ್ ॥ ೩೨ ॥**

೩೨. (ಬ್ರಹ್ಮವು ಜಗತ್ತನ್ನು) ಸೃಷ್ಟಿಸಿಲ್ಲ; ಏಕೆಂದರೆ (ಪ್ರವೃತ್ತಿಗಳಿಗೆ) ಪ್ರಯೋಜನವಿದೆ.

ಇದು ಪೂರ್ವಪಕ್ಷಿಯ ಆಕ್ಷೇಪ: ಚೇತನನಾದ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸಲಾರನು; ಏಕೆಂದರೆ ಪ್ರವೃತ್ತಿಗಳಿಗೆ ಪ್ರಯೋಜನವಿರಬೇಕು ಲೋಕದಲ್ಲಿ ಬುದ್ಧಿವಂತನಾದ ಯಾವ ಮನುಷ್ಯನೂ ಪ್ರಯೋಜನವಿಲ್ಲದೆ ಕೆಲಸಮಾಡುವುದಿಲ್ಲ ಈ ಸೃಷ್ಟಿಯು ಪರಮಾತ್ಮನ ಸ್ವಪ್ರಯೋಜನಕ್ಕೆ ಆಗಿದೆಯೆಂದು ಹೇಳಿದರೆ ಅವನು ಪರಿತೃಪ್ತನೆಂಬ ಶ್ರುತಿಗೆ ಬಾಧೆಯಾಗುವುದು. ಪರಮಾತ್ಮನಿಗೆ ಸ್ವಪ್ರಯೋಜನವಿಲ್ಲವೆಂದರೆ ಅವನಿಗೆ ಪ್ರವೃತ್ತಿಯ ಅಭಾವವನ್ನೂ ಹೇಳಬೇಕಾಗುತ್ತದೆ. ಲೋಕದಲ್ಲಿ ಉನ್ಮತ್ತನಾದವನು ಪ್ರಯೋಜನವಿಲ್ಲದೆ ಕೆಲಸಮಾಡುವಂತೆ ಪರಮಾತ್ಮನು ಪ್ರವರ್ತಿಸಿರುವನೆಂದು ಹೇಳಿದರೆ ಅವನ ಸರ್ವಜ್ಞತ್ವಕ್ಕೆ ಬಾಧೆಯಾಗುತ್ತದೆ.

ವಿ.—ಬುದ್ಧಿಪೂರ್ವಕವಾಗಿ ಕೆಲಸಮಾಡುವವರಲ್ಲಿ ಎರಡು ಪ್ರಯೋಜನಗಳು ಕಂಡುಬರುತ್ತವೆ: ಸ್ವಾರ್ಥ ಅಥವಾ ಪರಾರ್ಥ. ಸ್ವಭಾವತಃ ಪೂರ್ಣಕಾಮನಾದ ಪರಬ್ರಹ್ಮನಿಗೆ ಜಗತ್‌ಸೃಷ್ಟಿಯಿಂದ ಹಿಂದೆ ಹೊಂದದ ಯಾವ ಪ್ರಯೋಜನವೂ ಆಗುವುದಿಲ್ಲ. ಅವನಿಗೆ ಪರಾರ್ಥವೂ ಇಲ್ಲ; ಏಕೆಂದರೆ ಪೂರ್ಣಕಾಮನಾದವನು ಪರಹಿತಕ್ಕೆ ಕೆಲಸ ಮಾಡುತ್ತಾನೆ ಜನ್ಮ-ಜರಾ-ಮರಣವೇ ಮೊದಲಾದ ಅನಂತದುಃಖಗಳಿಂದ ಕೂಡಿರುವ ಜಗತ್ತನ್ನು ಯಾವ ಕರುಣಾಳುವೂ ಸೃಷ್ಟಿಸುವುದಿಲ್ಲ; ಒಂದು ವೇಳೆ ಸೃಷ್ಟಿಸಿದ್ದರೆ ಕರುಣೆಯಿಂದ ಸುಖಮಯವಾದ ಮತ್ತೊಂದು ಜಗತ್ತನ್ನು ಸೃಷ್ಟಿಸುತ್ತಿದ್ದನು. ಆದುದರಿಂದ ಪರಬ್ರಹ್ಮನು ಪ್ರಯೋಜನಾಭಾವದಿಂದ ಜಗತ್ಕಾರಣನಲ್ಲ.

ದ್ವೈ.—'ಈಶನೊಬ್ಬನೇ ಪರಮಾನಂದಮಯನು' (ಬೃ. ಉ. ೪. ೩. ೩೨) ಎಂದು ಶ್ರುತಿಯು ಹೇಳಿರುವುದರಿಂದ ಕೃತಕೃತ್ಯನಾದ ಪರಮಾತ್ಮನಿಂದ ಯಾವ ಪ್ರಯೋಜನಕ್ಕಾಗಿಯೂ ಸೃಷ್ಟಿಯು ಹೊರಡುವುದಿಲ್ಲ.[1]

**ಲೋಕವತ್ತು ಲೀಲಾಕೈವಲ್ಯಮ್ ॥ ೩೩ ॥**

೩೩. ಆದರೆ (ಬ್ರಹ್ಮದ ಸೃಷ್ಟಿಯು) ಲೋಕದ ಹಾಗೆ ಲೀಲೆಯು ಮಾತ್ರ.

---

[1] ಅಥೈಷ ಏವ ಪರಮ ಆನಂದ ಇತ್ಯಾದಿನಾ ಕೃತಕೃತ್ಯತ್ವಾನ್ನ ಪ್ರಯೋಜನಾಯ ಸೃಷ್ಟಿಃ (ಮ. ಭಾ.).

ಸೂತ್ರದಲ್ಲಿರುವ 'ಆದರೆ' ತು ಎಂಬ ಶಬ್ದವು ಹಿಂದಿನ ಸೂತ್ರದಲ್ಲಿ ಎತ್ತಿದ ಆಕ್ಷೇಪವನ್ನು ನಿರಾಕರಿಸುತ್ತದೆ. ಲೋಕದಲ್ಲಿ ಮಹಾನ್-ವ್ಯಕ್ತಿಗಳು ತಮಗೆ ಪೂರ್ಣವಾಗದ ಬಯಕೆಗಳಿಲ್ಲದಿದ್ದರೂ ಕ್ರೀಡೆಗಾಗಿ ಪ್ರವರ್ತಿಸುತ್ತಿರುವುದು ಕಂಡುಬರುತ್ತದೆ. ಯಾವ ಪ್ರಯೋಜನವೂ ಇಲ್ಲದೆ ಉಚ್ಛ್ವಾಸ-ನಿಃಶ್ವಾಸಗಳು ಕೆಲಸಮಾಡುತ್ತಿರುವಂತೆ ಈಶ್ವರನಿಗೂ ಯಾವ ಪ್ರಯೋಜನವೂ ಇಲ್ಲದೆ ಸ್ವಭಾವದಿಂದಲೇ ಕೇವಲ ಲೀಲಾರೂಪವಾದ ಪ್ರವೃತ್ತಿಯು ಆಗಬಹುದು.[1] ಅವನ ಸ್ವಭಾವವನ್ನು ಪ್ರಶ್ನಿಸುವುದಕ್ಕೂ ಆಗುವುದಿಲ್ಲ.[2] ಸೃಷ್ಟಿಕಾರ್ಯವು ನಮಗೆ ಬಹು ಕಷ್ಟಸಾಧ್ಯವಾಗಿದ್ದರೆ ಅಪರಿಮಿತಶಕ್ತಿಗಳುಳ್ಳ ಪರಮೇಶ್ವರನಿಗೆ ಕೇವಲಲೀಲೆಯಾಗಿರುತ್ತದೆ. ಲೋಕದ ಕ್ರೀಡೆಗಳಲ್ಲಿ ಯಾವುದಾದರೊಂದು ಸೂಕ್ಷ್ಮ ಪ್ರಯೋಜನವಿದ್ದರೂ ಅದು ಪರಮೇಶ್ವರನ ಸೃಷ್ಟಿಯಲ್ಲಿದೆಯೆಂದು ಹೇಳಲಾಗುವುದಿಲ್ಲ. ಅವನಿಗೆ ಪ್ರವೃತ್ತಿಯಿಲ್ಲ ಅಥವಾ ಉನ್ಮತ್ತನಂತೆ ಕೆಲಸಮಾಡುತ್ತಾನೆ—ಎಂದು ಹೇಳಲಾಗುವುದಿಲ್ಲ; ಏಕೆಂದರೆ ಅವನು ಸೃಷ್ಟಿಕರ್ತೃವೆಂದೂ ಸರ್ವಜ್ಞನೆಂದೂ ಶ್ರುತಿಯು ಹೇಳುತ್ತದೆ; ಮತ್ತೆ, ಈ ಸೃಷ್ಟಿಶ್ರುತಿಯು ಪರಮಾರ್ಥವನ್ನು ಸೂಚಿಸುವುದಿಲ್ಲ, ಅವಿದ್ಯಾಕಲ್ಪಿತವೂ ನಾಮರೂಪವೂ ಆದ ಜಗತ್ತನ್ನು ಮಾತ್ರ ಸೂಚಿಸುತ್ತದೆ ಮತ್ತು ಬ್ರಹ್ಮಾತ್ಮಭಾವವನ್ನು ಪ್ರತಿಪಾದಿಸುವುದು ಇದರ ತಾತ್ಪರ್ಯ—ಎಂಬುದನ್ನು ಮರೆಯಬಾರದು.[3]

ನಿ.—ಪೂರ್ಣಕಾಮನೂ ಪರಿಪೂರ್ಣನೂ ಆದ ಪರಬ್ರಹ್ಮನಿಗೆ ಕೇವಲ ಲೀಲೆಯನ್ನು ಬಿಟ್ಟರೆ ಸ್ವಸಂಕಲ್ಪಾಧೀನವಾದ ಚಿದಚಿದ್ವಸ್ತುಗಳನ್ನು ಒಳಕೊಂಡಿರುವ ಜಗತ್ತಿನ ಸೃಷ್ಟಿಗೆ ಬೇರೆ ಪ್ರಯೋಜನವಿರುವುದಿಲ್ಲ.

**ದ್ವೈ.**—ಲೋಕದಲ್ಲಿ ಮತ್ತನಾದವನು ಸುಖೋದ್ರೇಕದಿಂದ ಯಾವ ಪ್ರಯೋಜನವನ್ನೂ ಅಪೇಕ್ಷಿಸದೆ ಹಾಡುವಂತೆ ಕುಣಿಯುವಂತೆ ಪರಮಾತ್ಮನು ಕೇವಲ ಆನಂದದಿಂದ ಸೃಷ್ಟಿಕರ್ತೃವಾಗಿರುತ್ತಾನೆ.[4]

---

1 ಏವಮೀಶ್ವರಸ್ಯಾಪ್ಯನಪೇಕ್ಷ್ಯ ಕಿಂಚಿತ್ ಪ್ರಯೋಜನಾನಂತರಂ ಸ್ವಭಾವಾದೇವ ಕೇವಲಂ ಲೀಲಾರೂಪಾ ಪ್ರವೃತ್ತಿರ್ಭವಿಷ್ಯತಿ (ಸೂ. ಭಾ.).

2 'ಅನಿರ್ವಾಚ್ಯವಾದ ಅವಿದ್ಯೆಯೇ ಪರಮೇಶ್ವರನ ಸ್ವಭಾವ ಮತ್ತು ಲೀಲೆ' ಅನಿರ್ವಾಚ್ಯಾ ಖಲ್ವವಿದ್ಯಾ ಪರಮೇಶ್ವರಸ್ಯ ಸ್ವಭಾವೋ ಲೀಲೇತಿ ಚೋಚ್ಯತೇ (ನ್ಯಾ. ನಿ.).

3 ನ ಚೇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ, ಅವಿದ್ಯಾಕಲ್ಪಿತನಾಮರೂಪವ್ಯವಹಾರಗೋಚರತ್ವಾತ್, ಬ್ರಹ್ಮಾತ್ಮಭಾವಪ್ರತಿಪಾದನಪರತ್ವಾಚ್ಚೇತ್ಯೇತದಪಿ ನೈವ ವಿಸ್ಮರ್ತವ್ಯಮ್ (ಸೂ. ಭಾ.).

4 ಯಥಾ ಲೋಕೇ ಮತ್ತಸ್ಯ ಸುಖೋದ್ರೇಕಾದೇವ ನೃತ್ತಗಾನಾದಿಲೀಲಾ ನ ಪ್ರಯೋಜನಾಪೇಕ್ಷಯಾ ಏವಮೇವೇಶ್ವರಸ್ಯ (ಮ. ಭಾ.).

# ೧೨. ವೈಷಮ್ಯನೈರ್ಘೃಣ್ಯಾಧಿಕರಣ

(ಸೂ. ೩೪–೩೬)

**ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾಹಿ ದರ್ಶಯತಿ ॥ ೩೪ ॥**

೩೪. (ಈಶ್ವರನಿಗೆ) ವೈಷಮ್ಯ-ಕ್ರೂರತ್ವಗಳಿಲ್ಲ; ಏಕೆಂದರೆ (ಅವನು ಧರ್ಮಾಧರ್ಮಗಳನ್ನು ಅಪೇಕ್ಷಿಸುತ್ತಾನೆ. ಹೀಗೆಂದು (ಶ್ರುತಿಯು) ತೋರಿಸುತ್ತದೆ.

**ಪೂರ್ವಪಕ್ಷಿ**—ಈಶ್ವರನು ಜಗತ್ಕಾರಣನೆಂಬುದು ಹೊಂದುವುದಿಲ್ಲ; ಏಕೆಂದರೆ ಅವನಿಗೆ ವೈಷಮ್ಯ-ಕ್ರೂರತ್ವಗಳು ಪ್ರಾಪ್ತವಾಗುತ್ತವೆ: ಅವನು ದೇವಾದಿಗಳನ್ನು ಸುಖಭಾಜರನ್ನಾಗಿ ಮಾಡುತ್ತಾನೆ, ಪಶ್ವಾದಿಗಳನ್ನು ದುಃಖಭಾಜರನ್ನಾಗಿ ಮಾಡುತ್ತಾನೆ, ಮನುಷ್ಯರನ್ನು ಮಧ್ಯಮಭಾಜರನ್ನಾಗಿ ಮಾಡುತ್ತಾನೆ. ಹೀಗೆ ವಿಷಮಸೃಷ್ಟಿಯನ್ನು ಮಾಡುವ ಈಶ್ವರನಿಗೆ ರಾಗದ್ವೇಷಗಳನ್ನು ಆಪಾದಿಸಬೇಕಾಗಿರುವುದರಿಂದ ಶ್ರುತಿಸ್ಮೃತಿಗಳಿಂದ[1] ಸ್ವಚ್ಛವೆಂದು ನಿರ್ಧರಿಸಲ್ಪಟ್ಟ ಈಶ್ವರಸ್ವಭಾವವೇ ಲೋಪವಾಗುತ್ತದೆ. ಹೀಗೆ ಜನರಿಗೆ ದುಃಖವನ್ನು ಉಂಟುಮಾಡುವುದರಿಂದಲೂ ಅವರನ್ನು ಸಂಹರಿಸುವುದರಿಂದಲೂ ಈಶ್ವರನಿಗೆ ಅತಿಕ್ರೂರತ್ವವು ಪ್ರಾಪ್ತವಾಗುವುದು.

**ಸಿದ್ಧಾಂತಿ**—ಇದು ಸರಿಯಲ್ಲ, ಏಕೆಂದರೆ ಈಶ್ವರನು ಜೀವರ ಧರ್ಮಾಧರ್ಮಗಳನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುತ್ತಾನೆ. ಸೃಷ್ಟಿಸಬೇಕಾಗಿರುವ ಪ್ರಾಣಿಗಳ ಧರ್ಮಾಧರ್ಮಗಳ ಅಪೇಕ್ಷೆಯಿಂದ ಸೃಷ್ಟಿಯುಂಟಾಗಿದೆ; ಆದುದರಿಂದ ಇದು ಈಶ್ವರನ ಅಪರಾಧವಲ್ಲ. ಈಶ್ವರನು ಮಳೆಯ ಹಾಗೆ.[2] ಮಳೆಯು ಬತ್ತ ಯವೆ ಗೋಧಿ ಮೊದಲಾದುವುಗಳ ಉತ್ಪತ್ತಿಗೆ ಸಾಮಾನ್ಯಕಾರಣವಾಗಿರುತ್ತದೆ; ಆದರೆ ಅವುಗಳ ವೈಷಮ್ಯಕ್ಕೆ ಆಯಾ ಬೀಜಗಳಲ್ಲಿರುವ ಅಸಾಧಾರಣ-ಸಾಮರ್ಥ್ಯಗಳೇ ಕಾರಣವಾಗರುತ್ತವೆ. ಇದೇ ರೀತಿ ಈಶ್ವರನು ದೇವಮನುಷ್ಯಾದಿಗಳ ಸೃಷ್ಟಿಗೆ ಸಾಮಾನ್ಯಕಾರಣನಾಗಿರುತ್ತಾನೆ; ಆದರೆ ಅವರ ವೈಷಮ್ಯಕ್ಕೆ ಆಯಾ ಜೀವರಲ್ಲಿರುವ ಅಸಾಧಾರಣಕರ್ಮಗಳೇ ಕಾರಣಗಳಾಗಿರುತ್ತವೆ.[3] ಈ ಅಭಿಪ್ರಾಯಕ್ಕೆ ಅನೇಕ ಶ್ರುತಿಗಳ ಬೆಂಬಲವಿದೆ: 'ಮನುಷ್ಯನು ಪುಣ್ಯ

---

1 ನಿರವದ್ಯಂ ನಿರಂಜನಮ್ (ಶ್ವೇ. ಉ. ೬. ೧೯); ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ (ಗೀತಾ ೯. ೨೯).

2 ಈಶ್ವರಸ್ತು ಪರ್ಜನ್ಯವದ್ದ್ರಷ್ಟವ್ಯಃ (ಸೂ. ಭಾ.).

3 ಏವಮೀಶ್ವರೋ ದೇವಮನುಷ್ಯಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ। ದೇವಮನುಷ್ಯಾದಿವೈಷಮ್ಯೇ ತು ತತ್ತಜ್ಜೀವಗತಾನ್ಯೇವಾಸಾಧಾರಣಾನಿ ಕರ್ಮಾಣಿ ಕಾರಣಾನಿ ಭವಂತಿ (ಸೂ. ಭಾ.).

ಕರ್ಮದಿಂದ ಪುಣ್ಯನಾಗುತ್ತಾನೆ, ಪಾಪಕರ್ಮದಿಂದ ಪಾಪಿಯಾಗುತ್ತಾನೆ'[1] (ಬೃ ಉ ೩ ೨ ೧೩)

ವಿ —ದೇವಾದಿಜೀವರ ದೇವಾದಿಶರೀರಸಂಬಂಧವು ಅವರವರ ಕರ್ಮಗಳನ್ನೇ ಅವಲಂಬಿಸಿದೆಯೆಂದು ಶ್ರುತಿಸ್ಮೃತಿಗಳು ತೋರಿಸುತ್ತವೆ[2] ಜೀವಾತ್ಮರ ವೈಷಮ್ಯಕ್ಕೆ ಅವರವರ ಪ್ರಾಚೀನಕರ್ಮವೇ ಕಾರಣವೆಂದು ಶ್ರೀಪರಾಶರರು ಹೇಳಿರುತ್ತಾರೆ 'ಸೃಷ್ಟಿಸಬೇಕಾದ ಸೃಷ್ಟಿಕರ್ಮದಲ್ಲಿ ಈಶ್ವರನು ನಿಮಿತ್ತನು ಮಾತ್ರ ಜೀವಾತ್ಮರ ಶಕ್ತಿಗಳೇ ಅವರ ವೈವಿಧ್ಯಕ್ಕೆ ಕಾರಣವಾಗಿರುತ್ತವೆ ಹುಟ್ಟಬೇಕಾಗಿರುವ ಜೀವನಿಗೆ ನಿಮಿತ್ತಕಾರಣವಲ್ಲದೆ ಮತ್ತಾವುದೂ ಬೇಕಾಗಿರುವುದಿಲ್ಲ ಅವರ ಶಕ್ತಿಯೇ ಅವರನ್ನು ಅವರ ವಸ್ತುತ್ವಕ್ಕೆ ಒಯ್ಯುತ್ತದೆ'[3] (ವಿ ಪು ೧ ४ ೫೧-೫೨) ಇಲ್ಲಿ ದೇವಾದಿಗಳ ಸ್ವಕರ್ಮವನ್ನೇ ಸ್ವಶಕ್ತಿಯೆಂದು ಹೇಳಿದೆ

ದ್ವೈ.—ಈಶ್ವರನು ಜೀವರಿಗೆ ಅವರವರ ಕರ್ಮಕ್ಕನುಸಾರವಾಗಿ ಫಲಗಳನ್ನು ಕೊಡುವುದರಿಂದ ಅವನಿಗೆ ವೈಷಮ್ಯ-ಕ್ರೂರತ್ವಗಳಿಲ್ಲ[4]

## ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್* ॥ ೩೫ ॥

೩೫ (ಮೊದಲು) ಅವಿಭಾಗವಾಗಿರುವುದರಿಂದ ಕರ್ಮವಿಲ್ಲ ಎಂದು ಹೇಳಿದರೆ ಅದು ಸರಿಯಲ್ಲ, ಏಕೆಂದರೆ ಸಂಸಾರವು ಅನಾದಿಯಾಗಿರುತ್ತದೆ

**ಪೂರ್ವಪಕ್ಷ**—'ಸೋಮ್ಯ, ಸೃಷ್ಟಿಗೆ ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್ಸ್ವರೂಪವೇ ಆಗಿತ್ತು' (ಛಾಂ ಉ ೬ ೨ ೧) ಎಂಬ ಶ್ರುತಿಯ ಪ್ರಕಾರ ಸೃಷ್ಟಿಯಾಗುವುದಕ್ಕೆ ಮೊದಲು ಅಪೇಕ್ಷಿಸಬೇಕಾದ ಕರ್ಮವೇ ಇರುವುದಿಲ್ಲ ವಿಭಾಗವಾದಮೇಲೆ ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡಬಹುದು,

---

1 ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ । ಕಾ ಉ ३ ८, ಗೀತಾ ४ ೧೧ ನೋಡಿ

2 ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋ ಭವತಿ (ಬೃ ಉ ४ ४ ೫),
ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ ।
ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ ॥
ನಿಮಿತ್ತಮಾತ್ರಂ ಮುಕ್ತ್ವೈವ ನಾನ್ಯತ್ ಕಿಂಚಿದಪೇಕ್ಷತೇ ॥
ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತು ವಸ್ತುತಾಮ್ ॥

4 ಕರ್ಮಾಪೇಕ್ಷಯಾ ಫಲದಾತೃತ್ವಾನ್ನ ತಸ್ಯ ವೈಷಮ್ಯನೈರ್ಘೃಣ್ಯೇ (ಮ ಭಾ) ಪ್ರ ಉ ३ ೫ ನೋಡಿ

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನ ಸೂತ್ರ ಒಟ್ಟುಗೂಡಿ ಒಂದೇ ಸೂತ್ರವಾಗಿದೆ

ಅದಕ್ಕೆ ಮೊದಲು ವೈಚಿತ್ರ್ಯಕ್ಕೆ ಕಾರಣವಾದ ಕರ್ಮವೇ ಇಲ್ಲದುದರಿಂದ ಮೊದಲಿನ ಸೃಷ್ಟಿಯು ಸಮಾನವಾಗಿಯೇ ಇರುತ್ತದೆ.

ಸಿದ್ಧಾಂತಿ—ಇದರಲ್ಲಿ ದೋಷವಿಲ್ಲ ; ಏಕೆಂದರೆ ಸಂಸಾರವು ಅನಾದಿಯಾಗಿರುತ್ತದೆ. ಸಂಸಾರಕ್ಕೆ ಆದಿಯಿದ್ದರೆ ಈ ದೋಷವುಂಟಾಗುತ್ತಿತ್ತು. ಸಂಸಾರವು ಅನಾದಿಯಾಗಿರುವುದರಿಂದ ಕರ್ಮವೂ ಸೃಷ್ಟಿವೈಷಮ್ಯವೂ ಬೀಜಾಂಕುರದಂತಿದ್ದು ಕಾರಣವೂ ಫಲವೂ ಆಗಿರುತ್ತದೆ.

**ವಿ.—ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇ ಚ ॥ ೨. ೧. ೩೫ ॥**

'ಇದು ಸಮಂಜಸವಾಗಿದೆ ಮತ್ತು ಕಂಡುಬರುತ್ತದೆ' ಎಂಬುದನ್ನು ಮೇಲಿನ ಸೂತ್ರಾರ್ಥಕ್ಕೆ ಸೇರಿಸಿಕೊಳ್ಳಬೇಕು.

ಜೀವಾತ್ಮರು ಮತ್ತು ಅವರ ಕರ್ಮಪ್ರವಾಹವು ಅನಾದಿಯಾಗಿರುವುದರಿಂದ ಅವಿಭಾಗವು ಸಮಂಜಸವಾಗಿರುತ್ತದೆ ; ಏಕೆಂದರೆ ಜೀವಾತ್ಮರು ಸೃಷ್ಟಿಗೆ ಮೊದಲು ನಾಮರೂಪಗಳಿಲ್ಲದೆ ಸೂಕ್ಷ್ಮಾವಸ್ಥೆಯಲ್ಲಿದ್ದು ಪರಬ್ರಹ್ಮನ ಶರೀರವಾಗಿದ್ದರೂ ಅವನಿಗಿಂತ ಬೇರೆ ಎಂದು ನಿರ್ದೇಶಿಸಲ್ಪಡಲು ಅನರ್ಹರಾಗಿರುತ್ತಾರೆ. ಹೊಸ ಸೃಷ್ಟಿಯಲ್ಲಿರುವ ಭೇದಗಳು ಕರ್ಮಕೃತವಾದುವು ಎಂಬುದನ್ನು ಒಪ್ಪಿಕೊಳ್ಳದಿದ್ದರೆ ಮಾಡದಿದ್ದಕ್ಕೆ ಫಲವನ್ನೂ ಮಾಡಿದ್ದಕ್ಕೆ ಫಲನಾಶವನ್ನೂ ಹೊಂದಬೇಕಾಗುತ್ತದೆ.[1] ಹೀಗೆ ಪರಬ್ರಹ್ಮನು ಜೀವಾತ್ಮರ ಕರ್ಮದ ಪ್ರಕಾರ ವಿಚಿತ್ರಸೃಷ್ಟಿಯನ್ನು ಮಾಡುವುದರಿಂದ ಅವನೊಬ್ಬನೇ ಜಗತ್ಕಾರಣನಾಗಿರುತ್ತಾನೆ.

ದ್ವೈ.—'ಈಶ್ವರನು ಜೀವರ ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುವುದಿಲ್ಲ ; ಏಕೆಂದರೆ ಅವನು ಅಂಥ ಪ್ರವೃತ್ತಿಗೂ ಕಾರಣನಾಗಿರುತ್ತಾನೆ—ಎಂಬುದು ಸರಿಯಲ್ಲ ; ಏಕೆಂದರೆ ಕರ್ಮಗಳು ಅನಾದಿಯಾಗಿವೆ' ಎಂಬುದು ಸೂತ್ರಾರ್ಥ.

ಯಾವುದರಿಂದ ಈಶ್ವರನು ಫಲವನ್ನು ಕೊಡುವನೊ ಅದು ಜೀವನ ಕರ್ಮವಲ್ಲ ; ಏಕೆಂದರೆ ಅಂಥ ಕರ್ಮವೂ ಈಶ್ವರನಿಂದಲೇ ಉಂಟಾಗುತ್ತದೆ—ಎಂಬುದು ಸರಿಯಲ್ಲ ; ಏಕೆಂದರೆ ಮುಂದಿನ ಕರ್ಮಗಳಿಗೆಲ್ಲ ಒಂದು ಹಿಂದಿನ ಕರ್ಮವು ಕಾರಣವಾಗಿರುವುದರಿಂದ ಕರ್ಮವು ಅನಾದಿಯಾಗಿರುತ್ತದೆ.[2]

## ಉಪಪದ್ಯತೇ ಚಾಪ್ಯುಪಲಭ್ಯತೇ ಚ ॥ ೩೬ ॥

೩೬. (ಸಂಸಾರದ ಅನಾದಿತ್ವವು) ಯುಕ್ತವಾಗಿದೆ ಮತ್ತು (ಶ್ರುತಿಸ್ಮೃತಿಗಳಲ್ಲಿ) ಕಂಡುಬರುತ್ತದೆ.

---

[1] ತಥಾಽನಭ್ಯುಪಗಮೇ ಅಕೃತಾಭ್ಯಾಗಮಕೃತವಿಪ್ರಣಾಶಪ್ರಸಂಗಶ್ಚ (ಶ್ರೀಭಾಷ್ಯ).

[2] ತಸ್ಯಾಪಿ ಪೂರ್ವಂ ಕರ್ಮ ಕಾರಣಮಿತ್ಯನಾದಿತ್ವಾತ್ ಕರ್ಮಣಃ (ಮ. ಭಾ.).

ಸಂಸಾರಕ್ಕೆ ಆದಿಯಿದ್ದರೆ ಜಗತ್ತು ಕಾರಣವಿಲ್ಲದೆ ಹುಟ್ಟಬಹುದೆಂದೂ ಮುಕ್ತರಾದವರು ಕೂಡ ಸಂಸಾರಕ್ಕೆ ಪ್ರವೇಶಿಸಬಹುದೆಂದೂ ಆಗುತ್ತದೆ ; ಮತ್ತೆ ಮಾಡದೆ ಇದ್ದ ಕರ್ಮಕ್ಕೆ ಫಲವೂ ಉಂಟಾಗಬಹುದು ; ಏಕೆಂದರೆ ಸುಖದುಃಖಾದಿಗಳ ವೈಷಮ್ಯಕ್ಕೆ ಯಾವ ನಿಯಮವೂ ಇರುವುದಿಲ್ಲ. ಈಶ್ವರನು ಇಂಥ ವೈಷಮ್ಯಕ್ಕೆ ಕಾರಣನಲ್ಲವೆಂದು ಹಿಂದೆಯೇ ಹೇಳಿದೆ. ಕೇವಲ ಅವಿದ್ಯೆಯೂ ಈ ವೈಷಮ್ಯಕ್ಕೆ ಕಾರಣವಲ್ಲ ; ಏಕೆಂದರೆ ಅದರ ಸ್ವಭಾವವು ಏಕರೂಪವಾಗಿದೆ. ರಾಗವೇ ಮೊದಲಾದ ಕ್ಲೇಶಗಳ ವಾಸನೆಯಿಂದ ಉತ್ಪನ್ನವಾದ ಕರ್ಮವನ್ನು ಅಪೇಕ್ಷಿಸಿದರೆ ಅವಿದ್ಯೆಯು ವೈಷಮ್ಯಕ್ಕೆ ಕಾರಣವಾಗಬಹುದು. ಕರ್ಮವಿಲ್ಲದಿದ್ದರೆ ಶರೀರವುಂಟಾಗುವುದಿಲ್ಲ, ಶರೀರವಿಲ್ಲದಿದ್ದರೆ ಕರ್ಮವುಂಟಾಗುವುದಿಲ್ಲ— ಎಂಬ ಅನ್ಯೋನ್ಯಾಶ್ರಯತ್ವವು ಒದಗುವುದು.[1] ಆದರೆ ಸಂಸಾರವು ಅನಾದಿಯೆಂದು ಒಪ್ಪಿಕೊಂಡರೆ ಬೀಜಾಂಕುರನ್ಯಾಯದಂತೆ ಯುಕ್ತವಾಗುವುದು. ಸಂಸಾರದ ಅನಾದಿತ್ವವು ಶ್ರುತಿ-ಸ್ಮೃತಿಗಳಲ್ಲಿಯೂ ಕಂಡುಬರುತ್ತದೆ. 'ನಾನು ಈ ಜೀವಾತ್ಮರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮರೂಪಗಳನ್ನು ವಿಂಗಡಿಸುವೆನು'[2] (ಛಾಂ. ಉ ೬. ೩. ೨); ಇಲ್ಲಿ ಸೃಷ್ಟಿಯ ಪ್ರಾರಂಭದಲ್ಲಿ ಶರೀರದಲ್ಲಿರುವ ಆತ್ಮನನ್ನು ಪ್ರಾಣಧಾರಣ ನಿಮಿತ್ತವುಳ್ಳ ಜೀವ-ಶಬ್ದದಿಂದ ಕರೆದಿರುವುದು ಸಂಸಾರದ ಅನಾದಿತ್ವವನ್ನು ತೋರಿಸುತ್ತದೆ. 'ಧಾತೃವು ಸೂರ್ಯಚಂದ್ರರನ್ನು ಹಿಂದಿನಂತೆಯೇ ಕಲ್ಪಿಸಿದನು'[3] (ಋ. ವೇ. ೧೦. ೧೯೦. ೩) ಎಂಬ ಮಂತ್ರವರ್ಣವು ಪೂರ್ವಸೃಷ್ಟಿಯು ಇತ್ತೆಂಬುದನ್ನು ತಿಳಿಸುತ್ತದೆ. 'ಈ ಸಂಸಾರದಲ್ಲಿ ಇದರ ರೂಪವು ಮೇಲೆ ಹೇಳಿರುವ ಪ್ರಕಾರ ಕಾಣುವುದಿಲ್ಲ. ಇದರ ಆದಿಯಾಗಲಿ ಮಧ್ಯವಾಗಲಿ ಅಂತವಾಗಲಿ ಕಾಣುವುದಿಲ್ಲ'[4] (ಗೀತಾ ೧೫. ೩) ಎಂದು ಸ್ಮೃತಿಯಲ್ಲಿಯೂ ಸಂಸಾರದ ಅನಾದಿತ್ವವು ಕಂಡುಬರುತ್ತದೆ.

**ಟಿಪ್ಪ.**—ಈಶ್ವರನು ಕರ್ಮವನ್ನು ಅಪೇಕ್ಷಿಸುವುದರಿಂದ ಅವನು ಅಸ್ವತಂತ್ರನೆಂದು ತಿಳಿಯಕೂಡದು.[5] ಆ ಕರ್ಮವು ಅವನ ಅಧೀನದಲ್ಲಿಯೇ ಇದೆ.

---

[1] ನ ಚಾವಿದ್ಯಾ ಕೇವಲಾ ವೈಷಮ್ಯಸ್ಯ ಕಾರಣಮ್, ಏಕರೂಪತ್ವಾತ್ । ರಾಗಾದಿ-ಕ್ಲೇಶವಾಸನಾಕ್ಷಿಪ್ತಕರ್ಮಾಪೇಕ್ಷಾ ತ್ವವಿದ್ಯಾ ವೈಷಮ್ಯಕರೀ ಸ್ಯಾತ್ । ನ ಚ ಕರ್ಮಾಂತರೇಣ ಶರೀರಂ ಸಂಭವತಿ, ನ ಚ ಶರೀರಮಂತರೇಣ ಕರ್ಮ ಸಂಭವತೀತೀತರೇತರಾಶ್ರಯತ್ವಪ್ರಸಂಗಃ (ಸೂ. ಭಾ.).

[2] ಅನೇನಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ ।

[3] ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।

[4] ನ ರೂಪಮಸ್ಯೇಹ ತಥೋಪಲಭ್ಯತೇ ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।

[5] ನ ಚ ಕರ್ಮಾಪೇಕ್ಷತ್ವೇನೇಶ್ವರಸ್ಯಾಸ್ವಾತಂತ್ರ್ಯಮ್ (ಮು. ಭಾ.).

## ೧೩. ಸರ್ವಧರ್ಮೋಪಪತ್ತ್ಯಧಿಕರಣ

**ಸರ್ವಧರ್ಮೋಪಪತ್ತೇಶ್ಚ || ೩೭ ||**

೩೭. ಮತ್ತು (ಜಗತ್ಸೃಷ್ಟಿಗೆ ಬೇಕಾದ) ಧರ್ಮಗಳೆಲ್ಲವೂ (ಬ್ರಹ್ಮದಲ್ಲಿ) ಹೊಂದುವುದರಿಂದ (ವೇದಾಂತದರ್ಶನದಲ್ಲಿ ದೋಷವಿಲ್ಲ.)

ಬ್ರಹ್ಮವು ಜಗತ್ಕಾರಣವೆಂದು ಒಪ್ಪಿಕೊಂಡರೆ—ಅದು ಸರ್ವಜ್ಞವೂ ಸರ್ವಶಕ್ತವೂ ಮಹಾಮಾಯವೂ ಆಗಿರುವುದರಿಂದ—ಅದರಲ್ಲಿ ಕಾರಣಧರ್ಮಗಳೆಲ್ಲ ಹೊಂದುತ್ತವೆ. ಆದುದರಿಂದ ಔಪನಿಷದ-ದರ್ಶನದ ವಿಷಯದಲ್ಲಿ ಯಾವ ಶಂಕೆಯನ್ನೂ ಮಾಡುವಹಾಗಿಲ್ಲ

**ವಿ.**—ಕಾರಣತ್ವಕ್ಕೆ ಬೇಕಾದ ಧರ್ಮಗಳು ಪ್ರಧಾನ, ಪರಮಾಣು ಮೊದಲಾದುವುಗಳಲ್ಲಿ ಇಲ್ಲವೆಂದು ಹೇಳಿರುವುದರಿಂದ ಮತ್ತು ಅವು ಪರಬ್ರಹ್ಮನಲ್ಲಿಯೇ ಉಪಪನ್ನವಾಗುವುದರಿಂದ ಪರಬ್ರಹ್ಮನು ಜಗತ್ಕಾರಣವೆಂಬುದು ಸಿದ್ಧವಾಯಿತು.

**ದ್ವೈ.**—'ಜ್ಞಾನಾನಂದಾದಿ-ಸದ್ಗುಣಗಳೂ ದುಃಖದ್ವೇಷಾದಿ-ದೋಷಾಭಾವಗಳೂ ಈಶನಲ್ಲಿ ಹೊಂದುವುದರಿಂದ' ಎಂಬುದು ಸೂತ್ರಾರ್ಥ.

'ಶ್ರುತಿಯು ಹೇಳುವ ಮತ್ತು ಹೇಳದಿರುವ ಗುಣಗಳೂ ವಿರುದ್ಧವಾದ ಗುಣಗಳೂ ಈಶನಲ್ಲಿವೆ. ಅವು ಚಿಂತ್ಯವೊ ಅಥವಾ ಅಚಿಂತ್ಯವೊ ಎಂದು ಸಂಶಯಪಡಬೇಕಾಗಿಲ್ಲ; ಆದರೆ ಅಜ್ಞಾನಿಗಳು ಕೇಳಿರುವ ದೋಷಗಳು ಅವನಲ್ಲಿಲ್ಲ' ಎಂದು ಶ್ರುತಿಯು ಈಶನಲ್ಲಿ ಸರ್ವಗುಣಗಳ ಉಪಪತ್ತಿಯನ್ನು ತಿಳಿಸುತ್ತದೆ.[1]

---

1 ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ। ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾ ಇತಿ ಸರ್ವಗುಣೋಪಪತ್ತಿಶ್ರುತೇಶ್ಚ (ಮ. ಭಾ.).

## ಎರಡನೆಯ ಪಾದ

## ೧. ರಚನಾನುಪಪತ್ತ್ಯಧಿಕರಣ

(ಸೂ. ೧–೧೦)

**ರಚನಾನುಪಪತ್ತೇಶ್ಚ ನಾನುಮಾನಮ್ || ೧ ||**

೧. ರಚನೆಯು ಅನುಪಪನ್ನವಾದುದರಿಂದ ಅನುಮಾನವು (ಎಂದರೆ ಸಾಂಖ್ಯರು ಅನುಮಾನಿಸುವ ಪ್ರಧಾನವು) ಜಗತ್ಕಾರಣವಲ್ಲ

ಈ ಶಾಸ್ತ್ರವು ವೇದಾಂತವಾಕ್ಯಗಳ ಬ್ರಹ್ಮಪರತ್ವವನ್ನು ನಿರೂಪಿಸಲು ಪ್ರವೃತ್ತವಾಗಿದೆಯೇ ಹೊರತು ತರ್ಕಶಾಸ್ತ್ರದಂತೆ ಕೇವಲ ಯುಕ್ತಿಗಳಿಂದ ಯಾವುದೊ ಒಂದು ಸಿದ್ಧಾಂತವನ್ನು ಸಾಧಿಸುವುದಕ್ಕಾಗಲಿ ಅಥವಾ ದೂಷಿಸುವುದಕ್ಕಾಗಲಿ ಪ್ರವೃತ್ತವಾಗಿಲ್ಲ. ಆದರೂ ವೇದಾಂತ ವಾಕ್ಯಗಳನ್ನು ವ್ಯಾಖ್ಯಾನಮಾಡುವುದರಲ್ಲಿ ನಿಪುಣರಾದವರು ಸಮ್ಯಗ್ದರ್ಶನಕ್ಕೆ ಪ್ರತಿಪಕ್ಷವಾಗಿರುವ ಸಾಂಖ್ಯವೇ ಮೊದಲಾದ ದರ್ಶನಗಳನ್ನು ಖಂಡಿಸಬೇಕಾಗಿದೆ; ಆದುದರಿಂದ ಈ ಎರಡನೆಯ ಪಾದವು ಪ್ರಾರಂಭವಾಗಿದೆ. ವೇದಾಂತಾರ್ಥದ ನಿರ್ಣಯಕ್ಕೆ ಸಮ್ಯಗ್ದರ್ಶನವು ಪ್ರಯೋಜನವಾಗಿರುವುದರಿಂದ ಅದರ ನಿರ್ಣಯದ ಮೂಲಕ ಮೊದಲು ಸ್ವಪಕ್ಷಸ್ಥಾಪನೆಯನ್ನು ಮಾಡಿದ್ದಾಯಿತು; ಏಕೆಂದರೆ ಪರಪಕ್ಷಖಂಡನೆಗಿಂತ ಇದು ಮುಖ್ಯವಾಗಿದೆ.[1]

ಪರಪಕ್ಷನಿರಾಕರಣದಿಂದ ಪ್ರಯೋಜನವಿಲ್ಲವೆಂದು ತಿಳಿಯಕೂಡದು; ಏಕೆಂದರೆ ಮಹಾನ್-ವ್ಯಕ್ತಿಗಳಿಂದ ಪರಿಗ್ರಹಿಸಲ್ಪಟ್ಟ ಸಾಂಖ್ಯಾದಿಶಾಸ್ತ್ರಗಳು ಸಮ್ಯಗ್-ದರ್ಶನವೆಂಬ ಹೆಸರಿನಿಂದ ಪ್ರವೃತ್ತವಾಗಿರುವುದನ್ನು ನೋಡಿ ಮಂದಮತಿಗಳು ಅವುಗಳನ್ನು ಸಮ್ಯಗ್ದರ್ಶನಕ್ಕಾಗಿ ಗ್ರಹಿಸಬಹುದು; ಆದುದರಿಂದ ಅವುಗಳ ಅಸಾರವನ್ನು ತೋರಿಸಲು ನಾವು ಪ್ರಯತ್ನಿಸಬೇಕು. ಹಿಂದೆ ಸಾಂಖ್ಯರು ವೇದಾಂತ-ವಾಕ್ಯಗಳನ್ನು ತಮ್ಮ ಪಕ್ಷಕ್ಕೆ ಅನುಗುಣವಾಗಿ ಹೊಂದಿಸಿಕೊಂಡು ವ್ಯಾಖ್ಯಾನ ಮಾಡಿದ್ದು ವ್ಯಾಖ್ಯಾನಾಭಾಸವೆಂದು ತೋರಿಸಿದ್ದಾಯಿತು. ಈಗ ವೇದಾಂತವಾಕ್ಯಗಳನ್ನು ಅಪೇಕ್ಷಿಸದೆ ಸ್ವತಂತ್ರವಾಗಿ ಅವರ ಯುಕ್ತಿಗಳು ಖಂಡಿಸಲ್ಪಡುತ್ತವೆ.[2]

---

*ಶ್ರೀಭಾಷ್ಯದಲ್ಲಿ ಈ ಸೂತ್ರ ಮುಂದಿನ ಸೂತ್ರ ಸೇರಿ ಒಂದೇ ಸೂತ್ರವಾಗಿದೆ.

[1] ವೇದಾಂತಾರ್ಥನಿರ್ಣಯಸ್ಯ ಚ ಸಮ್ಯಗ್ದರ್ಶನಾರ್ಥತ್ವಾತ್ ತನ್ನಿರ್ಣಯೇನ ಸ್ವಪಕ್ಷಸ್ಥಾಪನಂ ಪ್ರಥಮಂ ಕೃತಮ್, ತದ್ಧಿ ಅಭ್ಯರ್ಹಿತಂ ಪರಪಕ್ಷಪ್ರತ್ಯಾಖ್ಯಾನಾದಿತಿ (ಸೂ. ಭಾ).

[2] ಇಹ ತು ವಾಕ್ಯನಿರಪೇಕ್ಷಃ ಸ್ವತಂತ್ರಸ್ತದ್ಯುಕ್ತಿಪ್ರತಿಷೇಧಃ ಕ್ರಿಯತ ಇತ್ಯೇಷ ವಿಶೇಷಃ (ಸೂ. ಭಾ.).

**ಪೂರ್ವಪಕ್ಷಿ**—ಮಣ್ಣಿನಿಂದ ಮಾಡಲ್ಪಟ್ಟ ವಸ್ತುಗಳಿಗೆ ಮಣ್ಣೇ ಸಾಮಾನ್ಯ ಕಾರಣವಾಗಿರುತ್ತದೆ ; ಇದೇ ರೀತಿ ಸುಖದುಃಖಮೋಹಗಳಿಂದ ಅನುಗತವಾಗಿರುವ ಕಾರ್ಯಗಳಿಗೆ ಅದೇ ಗುಣಗಳುಳ್ಳ ಒಂದು ಕಾರಣವಿರಬೇಕು. ಸುಖದುಃಖ-ಮೋಹಗಳು ಒಟ್ಟಿಗೆ ಸೇರಿ ಪ್ರಧಾನವಾಗಿರುತ್ತದೆ. ಪ್ರಧಾನವು ಮಣ್ಣಿನ ಹಾಗೆ ಅಚೇತನವಾಗಿದ್ದು ಚೇತನನಾದ ಪುರುಷನ ಪ್ರಯೋಜನಕ್ಕಾಗಿ ಸ್ವಭಾವದಿಂದಲೇ ವಿಚಿತ್ರವಿಕಾರರೂಪದಿಂದ ಪರಿಣಮಿಸುತ್ತದೆ. ಇದಲ್ಲದೆ ಪರಿಮಾಣವೇ ಮೊದಲಾದ ಲಿಂಗಗಳಿಂದಲೂ ಪ್ರಧಾನವನ್ನು ಅನುಮಾನಿಸಬಹುದು.[1]

**ಸಿದ್ಧಾಂತಿ**—ಸಾಂಖ್ಯರು ಕೇವಲದೃಷ್ಟಾಂತದ ಬಲದಿಂದ ತಮ್ಮ ಪಕ್ಷವನ್ನು ನಿರೂಪಿಸಿದರೆ ನಮ್ಮ ಉತ್ತರ ಹೀಗಿದೆ: ಚೇತನವಸ್ತುವಿನಿಂದ ಅಧಿಷ್ಠಿತವಾಗದ ಅಚೇತನವಸ್ತುವು ತಾನೇ ಸ್ವತಂತ್ರವಾಗಿ ಒಂದು ವಿಶಿಷ್ಟಪುರುಷಾರ್ಥವನ್ನುಂಟುಮಾಡುವ ಸಾಮರ್ಥ್ಯಗಳುಳ್ಳ ಕಾರ್ಯಗಳನ್ನು ರಚಿಸುವುದು ಕಂಡು ಬರುವುದಿಲ್ಲ.[2] ಅರಮನೆ, ಉದ್ಯಾನ, ಇವೇ ಮೊದಲಾದುವು ತಮಗೆ ತಾವೇ ಉತ್ಪನ್ನವಾಗುವುದಿಲ್ಲ ; ಬುದ್ಧಿವಂತರಾದ ಶಿಲ್ಪಿಗಳು ಇವುಗಳನ್ನು ಸುಖಪ್ರಾಪ್ತಿಗೂ ದುಃಖಪರಿಹಾರಕ್ಕೂ ರಚಿಸುತ್ತಾರೆ. ನಾನಾಕರ್ಮಫಲಭೋಗಕ್ಕೆ ಯೋಗ್ಯವಾದ ಹೊರಗಿನ ಪೃಥಿವ್ಯಾದಿಜಗತ್ತನ್ನೂ ಕರ್ಮಫಲದ ಅನುಭವಕ್ಕೆ ಆಧಾರವಾದ ಆಧ್ಯಾತ್ಮಿಕಜಗತ್ತನ್ನೂ ಅಚೇತನವಾದ ಪ್ರಧಾನವು ಹೇಗೆ ರಚಿಸೀತು ? ಕುಂಬಾರನಿದ್ದರೆ ಮಣ್ಣು ಗಡಿಗೆಯಾಗುತ್ತದೆ. ಚೇತನದಿಂದ ಅಧಿಷ್ಠಿತವಾಗಿದ್ದರೆ ಮಾತ್ರ ಪ್ರಧಾನವು ಪರಿಣಮಿಸುತ್ತದೆ. ಚೇತನವು ಜಗತ್ಕಾರಣವೆಂದು ಹೇಳುವ ಶ್ರುತಿಯ ಅಭಿಪ್ರಾಯಕ್ಕೆ ಇದು ಹೊಂದುತ್ತದೆ. 'ರಚನೆಯ ಅನುಪಪತ್ತಿ' ಎಂಬ ಕಾರಣದಿಂದ ಪ್ರಧಾನವು ಜಗತ್ಕಾರಣವೆಂದು ಅನುಮಾನಿಸಲು ಆಗುವುದಿಲ್ಲ.

ಸೂತ್ರದಲ್ಲಿರುವ ಚ-ಶಬ್ದವು ಪ್ರಧಾನವು ಜಗತ್ಕಾರಣವಲ್ಲವೆಂಬುದಕ್ಕೆ ಇತರ ಕಾರಣಗಳನ್ನು ಸೂಚಿಸುತ್ತದೆ. ಜಗತ್ತಿನಲ್ಲಿರುವ ಹೊರಗಿನ ಮತ್ತು ಒಳಗಿನ ವಸ್ತುಗಳು ಸುಖದುಃಖಮೋಹಗಳಿಂದ ಅನುಗತವಾಗಿವೆಯೆಂದು ಹೇಳಲಾಗುವುದಿಲ್ಲ; ಏಕೆಂದರೆ ಅವು ಮನುಷ್ಯನ ಭಾವನೆಯ ಪ್ರಕಾರ ಸುಖದುಃಖಾದಿಗಳನ್ನು ಉಂಟುಮಾಡುತ್ತವೆ. ಹೀಗೆಯೇ ಪರಿಮಿತವಾದ ಬೇರು, ಮೊಳಕೆ ಮೊದಲಾದುವು ಅನೇಕ ವಸ್ತುಗಳ ಸಂಸರ್ಗವನ್ನು ಅಪೇಕ್ಷಿಸುವುದರಿಂದ ಒಳಗಿನ ಮತ್ತು ಹೊರಗಿನ ಕಾರ್ಯಗಳೂ ಕೂಡ ಸಂಸರ್ಗಪೂರ್ವಕವಾಗಿರಬೇಕು ಎಂದು ಹೇಳಿದರೆ ಅನು

---

[1] ಭೇದಾನಾಂ ಪರಿಮಾಣಾತ್ ಸಮನ್ವಯಾತ್ ಶಕ್ತಿತಃ ಪ್ರವೃತ್ತೇಶ್ಚ ।
ಕಾರಣಕಾರ್ಯವಿಭಾಗಾದವಿಭಾಗಾದ್ ವೈಶ್ವರೂಪ್ಯಸ್ಯ (ಸಾಂ. ಕಾ. ೧೫).

[2] ಯದಿ ದೃಷ್ಟಾಂತಬಲೇನೈವೈತನ್ನಿರೂಪ್ಯೇತ, ನಾಚೇತನಂ ಲೋಕೇ ಚೇತನಾನಧಿಷ್ಠಿತಂ ಸ್ವತಂತ್ರಂ ಕಿಂಚಿದ್ವಿಶಿಷ್ಟಪುರುಷಾರ್ಥನಿರ್ವರ್ತನಸಮರ್ಥಾನ್ ವಿಕಾರಾನ್ ವಿರಚಯದ್ದೃಷ್ಟಮ್ (ಸೂ. ಭಾ.).

ಮಾನಿಸಬೇಕಾಗಿರುವ ಸತ್ತ್ವರಜಸ್ತಮಸ್ಸುಗಳೂ ಕೂಡ ಸಂಸರ್ಗಪೂರ್ವಕವಾಗಿರ ಬೇಕೆಂಬ ಪ್ರಸಂಗವು ಬರುತ್ತದೆ, ಏಕೆಂದರೆ ಅವು ಕೂಡ ಪರಿಮಿತವಾಗಿರುತ್ತವೆ ಮತ್ತೆ ಕಾರ್ಯಕಾರಣಭಾವವೆಂಬ ಯುಕ್ತಿಯಿಂದ ಒಳಗಿನ ಮತ್ತು ಹೊರಗಿನ ಕಾರ್ಯಗಳೆಲ್ಲ ಅಚೇತನಕಾರಣದಿಂದ ಉಂಟಾಗಿವೆ ಎಂದು ಕಲ್ಪಿಸಲು ಆಗುವುದಿಲ್ಲ

ವಿ.—'ಪ್ರಧಾನವು ಜಗತ್ಕಾರಣವಲ್ಲ, ಏಕೆಂದರೆ ರಚನಾಸಾಮರ್ಥ್ಯವೂ ಇಲ್ಲ, ಪ್ರವೃತ್ತಿಯೂ ಇಲ್ಲ' ಎಂಬುದು ಸೂತ್ರಾರ್ಥ

ಪ್ರಧಾನವು ಜಗತ್ಕಾರಣವಲ್ಲ, ಏಕೆಂದರೆ ಅದಕ್ಕೆ ಈ ವಿಚಿತ್ರಜಗತ್ತನ್ನು ರಚಿಸುವ ಸಾಮರ್ಥ್ಯವಿಲ್ಲ, ಮತ್ತೆ ಅಚೇತನವಾದ ಪ್ರಧಾನವು ಅದರ ಸ್ವಭಾವ ವನ್ನರಿತಿರುವ ಚೇತನನಿಂದ ಅಧಿಷ್ಠಿತವಾಗಿಲ್ಲ[1] ಉದಾಹರಣೆ. ಮರ ಮೊದಲಾದುವು ತಾವೇ ಸ್ವತಂತ್ರವಾಗಿ ರಥ-ಪ್ರಾಸಾದಗಳನ್ನು ರಚಿಸಲಾರವು ಇನ್ನು **ಚ-ಕಾರದ** ಅರ್ಥ ಸತ್ತ್ವಾದಿಗಳು ದ್ರವ್ಯದ ಗುಣಗಳಾಗಿರುವುದರಿಂದ ಜಗತ್ತಿಗೆ ಉಪಾದಾನ-ಕಾರಣವಾಗಲಾರವು ಉದಾಹರಣೆ· ಬಿಳಿಯ ಬಟ್ಟೆಗೆ ಶುಕ್ಲಗುಣವು ಉಪಾದಾನ-ಕಾರಣವಲ್ಲ, ಶುಕ್ಲವರ್ಣವುಳ್ಳ ಹತ್ತಿಯೇ ಕಾರಣವು

**ದ್ವೈ** —ಮೊದಲು ಅಚೇತನಕ್ಕೆ ಪ್ರವೃತ್ತಿಯಿದೆ ಎಂಬ ಮತವನ್ನು ನಿರಾಕರಿಸಿದೆ ಅನುಮಾನದಿಂದ ಕಲ್ಪಿತವಾದ ಪ್ರಧಾನವು ಜಗತ್ಕರ್ತೃವಲ್ಲ, ಏಕೆಂದರೆ ಅಚೇತನವಾದ ಅದಕ್ಕೆ ಸ್ವತಃಪ್ರವೃತ್ತಿಯಿಲ್ಲ[2] ಚ-ಶಬ್ದವು ಪ್ರಮಾಣದ ಅಭಾವವನ್ನು ತೋರಿಸುತ್ತದೆ

## ಪ್ರವೃತ್ತೇಶ್ಚ ॥ ೨ ॥

೨ (ಅಚೇತನವಾದ ಪ್ರಧಾನಕ್ಕೆ) ಪ್ರವೃತ್ತಿಯೂ ಹೊಂದುವುದಿಲ್ಲ

ತ್ರಿಗುಣಗಳು ಕಾರ್ಯೋನ್ಮುಖವಾಗಬೇಕಾದರೆ ತಮ್ಮ ಸಾಮ್ಯಾವಸ್ಥೆಯನ್ನು ಬಿಟ್ಟು ಅಂಗಾಂಗೀಭಾವವನ್ನು ಹೊಂದಬೇಕಾಗುತ್ತದೆ, ಇಂಥ ಪ್ರವೃತ್ತಿಯೂ ಕೂಡ ಅಚೇತನವಾದ ಪ್ರಧಾನಕ್ಕೆ ಸ್ವತಂತ್ರವಾಗಿ ಹೊಂದುವುದಿಲ್ಲ ಕುಂಬಾರ ನಿಲ್ಲದಿದ್ದರೆ ಮಣ್ಣು ಗಡಿಗೆಯಾಗುವುದಿಲ್ಲ, ಕುದುರೆಯಿಲ್ಲದಿದ್ದರೆ ರಥವು ಅಲ್ಲಾಡು ವುದಿಲ್ಲ ದೃಷ್ಟವಾದುದರಿಂದ ಅದೃಷ್ಟವಾದುದು ಸಿದ್ಧಿಸುತ್ತದೆ ಆದುದರಿಂದ ಅಚೇತನವಾದ ಜಗತ್ಕಾರಣವನ್ನು ಅನುಮಾನಿಸುವುದು ಯುಕ್ತವಲ್ಲ, ಏಕೆಂದರೆ ಅದಕ್ಕೆ ಪ್ರವೃತ್ತಿಯೂ ಹೊಂದುವುದಿಲ್ಲ

ಕೇವಲ ಚೇತನದಲ್ಲಿಯೂ ಪ್ರವೃತ್ತಿಯು ಕಂಡುಬರುವುದಿಲ್ಲವೆಂದು ಆಕ್ಷೇಪಿಸ ಬಹುದು, ನಿಜ ಚೇತನಾಯುಕ್ತವಾದ ಅಚೇತನ-ರಥಾದಿಗಳಲ್ಲಿ ಪ್ರವೃತ್ತಿಯು ಕಂಡು

---

[1] ನ ಭವದುಕ್ತಂ ಪ್ರಧಾನಂ ವಿಚಿತ್ರಜಗದ್ರಚನಾಸಮರ್ಥಮ್, ಅಚೇತನತ್ವೇ ಸತಿ ತತ್ಸ್ವಭಾವಾಭಿಜ್ಞಾನಧಿಷ್ಠಿತತ್ವಾತ್ (ಶ್ರೀಭಾಷ್ಯ)

[2] ಅಚೇತನಸ್ಯ ಸ್ವತಃಪ್ರವೃತ್ತ್ಯನುಪಪತ್ತೇರ್ನಾನುಮಾನಪರಿಕಲ್ಪಿತಂ ಪ್ರಧಾನಂ ಜಗತ್ಕರ್ತೃ (ಮ ಭಾ)

ಬರುತ್ತದೆಯೇ ಹೊರತು ಅಚೇತನಯುಕ್ತವಾಗಿರುವ ಚೇತನದಲ್ಲಿ ಪ್ರವೃತ್ತಿಯು ಕಂಡು ಬರುವುದಿಲ್ಲ—ಎಂಬುದು ಪರಿಹಾರ.

ಹಾಗಾದರೆ ಇಲ್ಲಿ ಯಾವುದು ಯುಕ್ತವಾಗಿದೆ ? ಯಾವುದರಲ್ಲಿ ಪ್ರವೃತ್ತಿಯು ಕಂಡುಬರುತ್ತದೆಯೊ ಆ ಅಚೇತನಕ್ಕೆ ಪ್ರವೃತ್ತಿಯು ಸೇರಿದ್ದೊ ಅಥವಾ ಅಚೇತನ ದಿಂದ ಯುಕ್ತವಾಗಿರುವ ಚೇತನಕ್ಕೆ ಅದು ಸೇರಿದ್ದೊ ?—ಎಂದು ಮೂರನೆಯವ ನೊಬ್ಬನು ಪ್ರಶ್ನಿಸಬಹುದು.

ಇದಕ್ಕೆ ಪ್ರಧಾನವಾದಿಯು ಹೀಗೆ ಉತ್ತರಿಸುತ್ತಾನೆ: ಯಾವುದರಲ್ಲಿ ಪ್ರವೃತ್ತಿಯು ಕಂಡುಬರುತ್ತದೆಯೊ ಅದಕ್ಕೇ ಅದು ಸೇರಿದ್ದು; ಏಕೆಂದರೆ ಪ್ರವೃತ್ತಿಯೂ ಅದಕ್ಕೆ ಆಶ್ರಯವಾದ ರಥವೇ ಮೊದಲಾದುವೂ ಕಂಡುಬರುತ್ತವೆ. ಆದರೆ ಕೇವಲ ಚೇತನವು ರಥಾದಿಗಳ ಹಾಗೆ ಪ್ರವೃತ್ತಿಗೆ ಆಶ್ರಯವೆಂದು ಪ್ರತ್ಯಕ್ಷವಾಗುವುದಿಲ್ಲ. ಮತ್ತೆ ಪ್ರವೃತ್ತಿಗೆ ಆಶ್ರಯವಾಗಿರುವ ದೇಹಾದಿಗಳಿಂದ ಕೂಡಿರುವ ಚೇತನದ ಅಸ್ತಿತ್ವವು ಅನುಮಾನದಿಂದಲೇ ಸಿದ್ಧಿಸುತ್ತದೆ; ಅಚೇತನವಾದ ರಥಾದಿಗಳಿಗೂ ಬದುಕಿರುವ ದೇಹಕ್ಕೂ ಇರುವ ಭೇದವನ್ನೇ ಇಂಥ ಅನುಮಾನವು ಅವಲಂಬಿಸುತ್ತದೆ. ಶರೀರವು ಕಂಡುಬಂದಾಗ ಚೇತನವು ಕಂಡುಬರುವುದರಿಂದಲೂ ಶರೀರವಿಲ್ಲದಿರುವಾಗ ಚೇತನವು ಕಂಡುಬರದೆಯಿರುವುದರಿಂದಲೂ ಲೋಕಾಯತಿಕರು ಚೈತನ್ಯವು ದೇಹಕ್ಕೆ ಸೇರಿದ್ದೆಂದು ಹೇಳುತ್ತಾರೆ. ಆದುದರಿಂದ ಪ್ರವೃತ್ತಿಯು ಅಚೇತನಕ್ಕೇ ಸೇರಿದ್ದು.

ಇದಕ್ಕೆ ಸಿದ್ಧಾಂತಿಯ ಪರಿಹಾರ ಹೀಗಿದೆ. ಅಚೇತನದಲ್ಲಿ ಕಂಡುಬರುವ ಪ್ರವೃತ್ತಿಯು ಚೇತನದಿಂದಲೇ ಆಗುತ್ತದೆ. ಉದಾಹರಣೆ: ಕಾಷ್ಠಾದಿಗಳನ್ನು ಆಶ್ರಯಿಸಿಕೊಂಡಿರುವ ಸುಡುವಿಕೆ, ಪ್ರಕಾಶ ಮೊದಲಾದುವು ಕೇವಲ ಅಗ್ನಿಯಲ್ಲಿಯೇ ಕಂಡುಬರುವುದಿಲ್ಲವಾದರೂ ಕಾಷ್ಠಾದಿ-ಸಂಯುಕ್ತವಾಗಿರುವ ಅಗ್ನಿಯಿಂದಲೇ ಆಗು ತ್ತವೆ. ಚೇತನವಾದ ದೇಹವೇ ಅಚೇತನವಾದ ರಥಾದಿಗಳ ಪ್ರವರ್ತಕವೆಂದು ಲೋಕಾಯತಿಕರೂ ಒಪ್ಪಿಕೊಂಡಿರುತ್ತಾರೆ. ವೇದಾಂತದ ಪ್ರಕಾರ ಶುದ್ಧಚೈತನ್ಯಕ್ಕೆ ಪ್ರವೃತ್ತಿಯಿಲ್ಲದಿರುವುದರಿಂದ ಅದು ಪ್ರವರ್ತಕವಾಗಲಾರದೆಂದು ಆಕ್ಷೇಪಿಸಬಹುದು. ತನ್ನಲ್ಲಿ ಪ್ರವೃತ್ತಿಯಿಲ್ಲದಿದ್ದರೂ ಇತರ ವಸ್ತುಗಳಿಗೆ ಪ್ರವರ್ತಕವಾಗಬಹುದೆಂಬುದು ನಮ್ಮ ಪರಿಹಾರ. ಅಯಸ್ಕಾಂತಶಿಲೆಯು ತಾನು ಅಲ್ಲಾಡದೆ ಕಬ್ಬಿಣವನ್ನು ಎಳೆಯು ತ್ತದೆ. ಈಶ್ವರನು ಪ್ರವೃತ್ತಿರಹಿತನಾದರೂ ಸರ್ವಗತನೂ ಸರ್ವಾತ್ಮನೂ ಸರ್ವಜ್ಞನೂ ಸರ್ವಶಕ್ತಿಯೂ ಆಗಿ ಎಲ್ಲವನ್ನೂ ಪ್ರವರ್ತಿಸುತ್ತಾನೆ ಎಂಬುದು ಯುಕ್ತವಾಗಿದೆ.[1] ಈಶ್ವರನೊಬ್ಬನೇ ಇರುವುದರಿಂದ ಪ್ರವೃತ್ತಿಯಿಲ್ಲ; ಆದುದರಿಂದ ಪ್ರವರ್ತಕತ್ವವೂ

---

[1] ಏವಂ ಪ್ರವೃತ್ತಿರಹಿತೋಽಪೀಶ್ವರಃ ಸರ್ವಗತಃ ಸರ್ವಾತ್ಮಾ ಸರ್ವಜ್ಞಃ ಸರ್ವ-ಶಕ್ತಿಶ್ಚ ಸನ್ ಸರ್ವಂ ಪ್ರವರ್ತಯೇದಿತ್ಯುಪಪನ್ನಮ್ (ಸೂ. ಭಾ.).

ಸಾಧ್ಯವಿಲ್ಲ ಎಂದು ಹೇಳಿದರೆ, ಅವಿದ್ಯೆಯಿಂದ ಉತ್ಪನ್ನವಾದ ನಾಮ-ರೂಪಗಳೆಂಬ ಮಾಯೆಯ ಆವೇಶದಿಂದ ಇವು ಆಗಿವೆ ಎಂದು ಇಂಥ ಆಕ್ಷೇಪಗಳನ್ನು ಅನೇಕ ಸಲ ಪರಿಹರಿಸಿರುತ್ತೇವೆ. ಆದುದರಿಂದ ಸರ್ವಜ್ಞಕಾರಣಕ್ಕೆ ಪ್ರವೃತ್ತಿಯು ಹೊಂದುತ್ತದೆಯೇ ಹೊರತು ಅಚೇತನಕಾರಣಕ್ಕೆ ಹೊಂದುವುದಿಲ್ಲ.[1]

**ದ್ವೈ.**—ಚೇತನದಲ್ಲಿಯೂ ಪ್ರವೃತ್ತಿಯು ಕಂಡುಬರುತ್ತದೆ.[2]

## ಪಯೋಂಬುವಚ್ಚೇತ್ತತ್ರಾಪಿ ॥ ೩ ॥

೩. ಹಾಲು-ನೀರುಗಳಂತೆ (ಪ್ರಧಾನವು ಪ್ರವರ್ತಿಸಬಹುದು) ಎಂದು ಹೇಳಿದರೆ ಅಲ್ಲಿಯೂ ಕೂಡ (ಚೇತನದ ಅಧಿಷ್ಠಿತತ್ವವಿದೆ).

ಹೇಗೆ ಅಚೇತನವಾದ ಹಾಲು ಸ್ವಭಾವದಿಂದಲೇ ಕರುವಿನ ಪೋಷಣೆಗಾಗಿ ಹರಿಯುತ್ತದೆಯೊ, ಹೇಗೆ ಅಚೇತನವಾದ ನೀರು ಸ್ವಭಾವದಿಂದಲೇ ಲೋಕೋಪಕಾರಕ್ಕಾಗಿ ಹರಿಯುತ್ತದೆಯೊ ಹಾಗೆಯೇ ಅಚೇತನವಾದ ಪ್ರಧಾನವು ಸ್ವಭಾವದಿಂದಲೇ ಪುರುಷಾರ್ಥಗಳ ಸಿದ್ಧಿಗೋಸ್ಕರ ಪ್ರವರ್ತಿಸಬಹುದು—ಎಂದು ಸಾಂಖ್ಯನು ಹೇಳಬಹುದು. ಈ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಹಾಲು-ನೀರುಗಳು ಅಧಿಷ್ಠಿತವಾಗಿಯೇ ಹರಿಯುತ್ತವೆ ಎಂದು ಅನುಮಾನಿಸುತ್ತೇವೆ. ಉಭಯವಾದಿಗಳಿಗೂ ಸಿದ್ಧವಾಗಿರುವ ರಥವೇ ಮೊದಲಾದ ಕೇವಲ ಅಚೇತನಗಳಲ್ಲಿ ಪ್ರವೃತ್ತಿಯು ಕಂಡುಬರುವುದಿಲ್ಲ. ಮತ್ತೆ, ಶ್ರುತಿಗಳು ಲೋಕದ ಪರಿಸ್ಪಂದನವೆಲ್ಲ ಈಶ್ವರನಿಂದ ಅಧಿಷ್ಠಿತವಾಗಿವೆಯೆಂದು ಹೇಳುತ್ತವೆ. 'ಯಾವನು ನೀರಿನಲ್ಲಿ ಇರುವವನಾಗಿ ... ಒಳಗಿದ್ದುಕೊಂಡು ನೀರನ್ನು ನಿಯಮಿಸುವನೊ'[3] (ಬೃ. ಉ. ೩. ೭. ೪.); 'ಈ ಅಕ್ಷರದ ಪ್ರಶಾಸನದಿಂದಲೇ ಗಾರ್ಗಿ, ಕೆಲವು ನದಿಗಳು ಪೂರ್ವವಾಹಿನಿಗಳಾಗಿಯೂ ಇನ್ನು ಕೆಲವು ಪಶ್ಚಿಮವಾಹಿನಿಗಳಾಗಿಯೂ ಹರಿಯುತ್ತವೆ'[4] (ಬೃ ಉ ೩.೮.೯). ಇದಲ್ಲದೆ ಚೇತನವಾದ ಹಸು ಸ್ನೇಹೇಚ್ಛೆಯಿಂದ ಹಾಲು ಹರಿಯುವಂತೆ ಮಾಡುತ್ತದೆ ಮತ್ತು ಕರುವು ಹೀರುವುದರಿಂದಲೂ ಹಾಲು ಬರುತ್ತದೆ. ನೀರು ಕೂಡ ಸ್ವತಂತ್ರವಾಗಿ ಹರಿಯುವುದಿಲ್ಲ; ಏಕೆಂದರೆ ಅದು ತಗ್ಗುನೆಲ ಮೊದಲಾದುವನ್ನು ಅಪೇಕ್ಷಿಸುತ್ತದೆ. ಈ ಸೂತ್ರಕ್ಕೂ ೨ ೧ ೨೪ನೆಯ ಸೂತ್ರಕ್ಕೂ ಯಾವ ವಿರೋಧವೂ ಇಲ್ಲ; ಏಕೆಂದರೆ ಅಲ್ಲಿ ಬಾಹ್ಯನಿಮಿತ್ತವನ್ನು ಅಪೇಕ್ಷಿಸದೆಯೇ ತನ್ನನ್ನು ಆಶ್ರಯಿಸಿರುವ ಕಾರ್ಯವು ಆಗಬಹುದು ಎಂದು

[1] ತಸ್ಮಾತ್ ಸಂಭವತಿ ಪ್ರವೃತ್ತಿಃ ಸರ್ವಜ್ಞಕಾರಣತ್ವೇ, ನ ತ್ವಚೇತನಕಾರಣತ್ವೇ (ಸೂ. ಭಾ.).

[2] ಚೇತನಸ್ಯ ಪ್ರವೃತ್ತಿದರ್ಶನಾಚ್ಚ (ಮ. ಭಾ).

[3] ಯೋಽಪ್ಸು ತಿಷ್ಠನ್ ಯೋಽಪ್ಸೋಽಂತರೋ ಯಮಯತಿ ।

[4] ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ।

ಲೋಕದೃಷ್ಟಿಯಿಂದ ಹೇಳಿರುತ್ತದೆ; ಆದರೆ ಶಾಸ್ತ್ರದೃಷ್ಟಿಯಿಂದ ಕಾರ್ಯಗಳೆಲ್ಲ ಈಶ್ವರನನ್ನು ಅಪೇಕ್ಷಿಸುತ್ತವೆ ಎಂಬ ಸಿದ್ಧಾಂತವನ್ನು ಅಲ್ಲಿ ತಿರಸ್ಕರಿಸಿಲ್ಲ.

ವಿ.—ಪ್ರಧಾನವು ಹಾಲು-ನೀರುಗಳಂತೆ ಪ್ರವರ್ತಿಸಬಹುದು : ಹಾಲು ಮೊಸರಾಗುವಾಗ ತಾನಾಗಿಯೇ ಪರಿಣಾಮವನ್ನು ಹೊಂದುತ್ತದೆ. ಮಳೆಯ ನೀರು ತಾನಾಗಿಯೇ ತೆಂಗು, ಮಾವು ಮೊದಲಾದ ಮರಗಳ ವಿಚಿತ್ರರಸವಾಗಿ ಪರಿಣಮಿಸುತ್ತದೆ. ಇದೇ ರೀತಿ ಪರಿಣಾಮಸ್ವಭಾವವುಳ್ಳ ಪ್ರಧಾನವೂ ಕೂಡ ಯಾವುದರಿಂದಲೂ ಅಧಿಷ್ಠಿತವಾಗದೆ ಎರಡು ಸರ್ಗಗಳ ಮಧ್ಯದಲ್ಲಿ ಸಮಭಾವದಿಂದಿದ್ದು ಸೃಷ್ಟಿಕಾಲದಲ್ಲಿ ಗುಣವೈಷಮ್ಯದಿಂದ ವಿಚಿತ್ರಪರಿಣಾಮವನ್ನು ಹೊಂದಬಹುದು[1]—ಎಂದು ಪ್ರಧಾನಕಾರಣವಾದಿಯು ಹೇಳಿದರೆ ಅದಕ್ಕೆ ಪರಿಹಾರವು ಹೀಗಿದೆ : ಈ ದೃಷ್ಟಾಂತಗಳಲ್ಲಿಯೂ ಕೂಡ ಚೇತನವು ಇಲ್ಲದಿದ್ದರೆ ಪ್ರವೃತ್ತಿಯು ಸಾಧ್ಯವಾಗುತ್ತಿರಲಿಲ್ಲ ೨. ೧. ೨೪ರಲ್ಲಿ ಚೇತನಕ್ಕೆ ದೃಷ್ಟವಾದ ಕರಣಗಳಿಲ್ಲದಿದ್ದರೂ ಅಸಾಧಾರಣ-ಪರಿಣಾಮವು ಸಾಧ್ಯವಾಗುತ್ತದೆಯೆಂದು ಹೇಳಿದೆಯೇ ಹೊರತು ಅದರ ಅಧಿಷ್ಠಿತತ್ವವನ್ನು ನಿರಾಕರಿಸಿಲ್ಲ. ಚೇತನವು ನೀರಿನಲ್ಲಿಯೂ ಇದೆ ಎಂಬುದನ್ನು ಶ್ರುತಿಯೇ (ಬೃ. ಉ. ೩. ೭ ೪) ಹೇಳಿರುತ್ತದೆ.

ದ್ವೈ.—ಹಾಲು ಮೊಸರಾಗುವಂತೆ, ನೀರು ಹರಿಯುವಂತೆ, ಅಚೇತನವಾದ ಪ್ರಧಾನವು ಪ್ರವರ್ತಿಸಬಹುದು ಎಂದು ಹೇಳಲಾಗುವುದಿಲ್ಲ ; ಏಕೆಂದರೆ 'ಇವನಿಂದಲೇ ಹಾಲು ಮೊಸರಾಗುತ್ತದೆ' ಎಂದು ಶ್ರುತಿಯು ಹೇಳುವಂತೆ ಹಾಲು-ನೀರುಗಳಲ್ಲಿಯೂ ಕೂಡ ಈಶ್ವರನಿಮಿತ್ತವಾದ ಪ್ರವೃತ್ತಿಯಿದೆ.[2]

ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್* ॥ ೪ ॥

೪. (ಪ್ರಧಾನವು ತನಗೆ) ಬೇರೆಯಾಗಿರುವುದು ಇಲ್ಲದಿರುವುದರಿಂದ (ಮತ್ತೊಂದನ್ನು) ಅಪೇಕ್ಷಿಸುವುದಿಲ್ಲವಾದುದರಿಂದಲೂ (ಪ್ರವೃತ್ತಿಯನ್ನು ಹೊಂದಿಲ್ಲ).

ಸಾಂಖ್ಯರ ದರ್ಶನದಲ್ಲಿ ಮೂರು ಗುಣಗಳ ಸಾಮ್ಯಾವಸ್ಥೆಯೇ ಪ್ರಧಾನವೆನಿಸುವುದು ; ಇದನ್ನು ಬಿಟ್ಟರೆ ಪ್ರಧಾನವನ್ನು ಪ್ರವರ್ತಿಸುವ ಅಥವಾ ನಿವರ್ತಿಸುವ ಬೇರೆ ಯಾವ

---

[1] 'ಆಯಾ ಗುಣದಲ್ಲಿರುವ ಆಶ್ರಯವಿಶೇಷದಿಂದ ಪ್ರಧಾನವು ನೀರಿನಂತೆ ಪರಿಣಮಿಸಿ ವರ್ತಿಸುತ್ತದೆ', ಪರಿಣಾಮತಃ ಸಲಿಲವತ್ ಪ್ರತಿಪ್ರತಿಗುಣಾಶ್ರಯವಿಶೇಷಾತ್ (ಸಾಂ. ಕಾ. ೧೬).

[2] ಏತೇನ ಹ ವಾವ ಪಯೋ ಮಂಡಂ ಭವತೀತ್ಯಾದಿ ತತ್ರಾಪೀಶ್ವರನಿಮಿತ್ತಪ್ರವೃತ್ತಿಶ್ರುತೇಃ (ಮ. ಭಾ.).

* ಮಧ್ವಭಾಷ್ಯದ ಪ್ರಕಾರ ಇಲ್ಲಿಗೆ ರಚನಾನುಪಪತ್ತ್ಯಧಿಕರಣವು ಮುಗಿಯುತ್ತದೆ. ✗

ಬಾಹ್ಯನಿಮಿತ್ತವೂ ಇರುವುದಿಲ್ಲ. ಪುರುಷನು ಉದಾಸೀನನು, ಪ್ರವರ್ತಕನೂ ಅಲ್ಲ, ನಿವರ್ತಕನೂ ಅಲ್ಲ. ಪ್ರಧಾನವು ಏನನ್ನೂ ಅಪೇಕ್ಷಿಸದಿರುವುದರಿಂದ ಅದು ಒಂದು ವೇಳೆ ಮಹತ್ತೇ ಮೊದಲಾದ ಆಕಾರದಿಂದ ಪರಿಣಮಿಸುತ್ತದೆ. ಒಂದು ವೇಳೆ ಪರಿಣಮಿಸುವುದಿಲ್ಲ—ಎಂದು ಹೇಳುವುದು ಯುಕ್ತವಲ್ಲ. ಈಶ್ವರನು ಸರ್ವಜ್ಞನೂ ಸರ್ವಶಕ್ತನೂ ಮಹಾಮಾಯನೂ ಆಗಿರುವುದರಿಂದ ಪ್ರವೃತ್ತಿ-ನಿವೃತ್ತಿಗಳು ವಿರುದ್ಧವಾಗುವುದಿಲ್ಲ.[1]

ವಿ.—'ಪ್ರಧಾನವು ಸೃಷ್ಟಿಗೆ ಏನನ್ನೂ ಅಪೇಕ್ಷಿಸದಿರುವುದರಿಂದ ವ್ಯತಿರೇಕವು, ಎಂದರೆ ಪ್ರಲಯವು ಆಗುವುದೇ ಇಲ್ಲ' ಎಂಬುದು ಸೂತ್ರಾರ್ಥ.

ಸತ್ಯಸಂಕಲ್ಪನಾದ ಈಶ್ವರನ ಅಧಿಷ್ಠಿತತ್ವವನ್ನು ಪ್ರಧಾನವು ಅಪೇಕ್ಷಿಸದಿದ್ದರೆ ಸೃಷ್ಟಿಗಿಂತ ಬೇರೆಯಾದ ಪ್ರಲಯವು ಇರುವುದೇ ಇಲ್ಲ. ಆದರೆ ಈಶ್ವರನ ಅಧಿಷ್ಠಿತತ್ವವಿದ್ದರೆ ಅವನ ಸತ್ಯಸಂಕಲ್ಪತ್ವದಿಂದ ಸೃಷ್ಟಿ-ಪ್ರಳಯಗಳೆಂಬ ಅವಸ್ಥೆಗಳು ಉಂಟಾಗುತ್ತವೆ.[2]

ದ್ವೈ.—'ಈಶನಿಲ್ಲದಿದ್ದರೆ ಯಾವ ಕರ್ಮವೂ ಇರುವುದಿಲ್ಲ; ಆದುದರಿಂದ ಅಚೇತನವಾದಿಗಳ ಮತವನ್ನು ಆದರಿಸಬೇಕಾಗಿಲ್ಲ' ಎಂಬುದು ಸೂತ್ರಾರ್ಥ.

'ನಿನ್ನ ಹೊರತು ಯಾರೂ ಏನನ್ನೂ ಮಾಡುವುದಿಲ್ಲ' (ಋ. ವೇ. ೧೦. ೧೧೨.೯) ಎಂಬ ಶ್ರುತಿಯ ಪ್ರಕಾರ ಈಶ್ವರನಿಲ್ಲದಿದ್ದರೆ ಯಾವ ಕರ್ಮವೂ ಸಾಧ್ಯವಿಲ್ಲ; ಆದುದರಿಂದ ಅಚೇತನವು ಜಗತ್ಕಾರಣವೆಂಬ ಮತವನ್ನು ಆದರಿಸಬೇಕಾಗಿಲ್ಲ.[3]

## ಅನ್ಯತ್ರಾಭಾವಾಚ್ಚ ನ ತೃಣಾದಿವತ್* ॥ ೫ ॥

೫. ಹುಲ್ಲು ಮೊದಲಾದವುಗಳ ಹಾಗೆ (ಪ್ರಧಾನವು ಪರಿಣಾಮವನ್ನು) ಹೊಂದುವುದಿಲ್ಲ; ಏಕೆಂದರೆ (ಹಾಲು) ಮತ್ತೊಂದು ಸ್ಥಾನದಲ್ಲಿರುವುದಿಲ್ಲ.

**ಆಕ್ಷೇಪಣೆ**—ಹುಲ್ಲು ಚಿಗುರು ನೀರು ಮೊದಲಾದುವು ಯಾವ ನಿಮಿತ್ತವನ್ನೂ ಅಪೇಕ್ಷಿಸದೆ ಸ್ವಭಾವದಿಂದಲೇ ಹಾಲಾಗುತ್ತವೆ. ಅಂಥ ನಿಮಿತ್ತವಿದ್ದರೆ ಮನುಷ್ಯರು ಅದರಿಂದ ತಮಗೆ ಬೇಕಾದ ಹಾಗೆ ಹಾಲನ್ನು ಉತ್ಪಾದಿಸುತ್ತಿದ್ದರು. ಆದರೆ ಹಾಗೆ

---

[1] ಈಶ್ವರಸ್ಯ ತು ಸರ್ವಜ್ಞತ್ವಾತ್ ಸರ್ವಶಕ್ತಿತ್ವಾನ್ಮಹಾಮಾಯತ್ವಾಚ್ಚ ಪ್ರವೃತ್ತ್ಯಪ್ರವೃತ್ತೀ ನ ವಿರುಧ್ಯೇತೇ (ಸೂ. ಭಾ.).

[2] ಪ್ರಾಜ್ಞಾಧಿಷ್ಠಿತತ್ವೇ ತಸ್ಯ ಸತ್ಯಸಂಕಲ್ಪತ್ವೇನ ಸರ್ಗಪ್ರತಿಸರ್ಗವಿಚಿತ್ರಸೃಷ್ಟಿವ್ಯವಸ್ಥಾಸಿದ್ಧಿಃ (ಶ್ರೀಭಾಷ್ಯ).

[3] ನ ಋತೇ ತ್ವತ್ ಕ್ರಿಯತೇ ಕಿಂಚನಾರ ಇತಿ ತದ್ವ್ಯತಿರೇಕೇಣ ಕಸ್ಯಾಪಿ ಕರ್ಮಣೋಽನವಸ್ಥಿತೇರನಪೇಕ್ಷಿತಮೇವಾಚೇತನವಾದಿಮತಮ್ (ಮ. ಭಾ.)

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅನ್ಯತ್ರಭಾವಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

ಮಾಡಲು ಆಗುವುದಿಲ್ಲ. ಇದೇ ರೀತಿ ಪ್ರಧಾನವೂ ಕೂಡ ಮಹತ್ತೇ ಮೊದಲಾದುವುಗಳ ಆಕಾರದಿಂದ ಪರಿಣಮಿಸಬಹುದು.

**ಪರಿಹಾರ**—ಹುಲ್ಲು ಸ್ವಾಭಾವಿಕವಾಗಿಯೇ ಪರಿಣಮಿಸುತ್ತಿದ್ದರೆ ಪ್ರಧಾನಕ್ಕೂ ಸ್ವಾಭಾವಿಕಪರಿಣಾಮವನ್ನು ಒಪ್ಪಿಕೊಳ್ಳಬಹುದಾಗಿತ್ತು. ಆದರೆ ಹಾಗೆ ನಾವು ಒಪ್ಪಿಕೊಳ್ಳುವುದಿಲ್ಲ; ಏಕೆಂದರೆ ಬೇರೊಂದು ನಿಮಿತ್ತವಿದೆ. ಹಸುವು ತಿಂದ ಹುಲ್ಲು ಹಾಲಾಗುತ್ತದೆಯೇ ಹೊರತು ಎತ್ತು ತಿಂದ ಹುಲ್ಲು ಹಾಲಾಗುವುದಿಲ್ಲ. ಪರಿಣಾಮಕ್ಕೆ ಒಂದು ವಿಶೇಷನಿಮಿತ್ತವಿಲ್ಲದಿದ್ದರೆ ಹುಲ್ಲು ಹಸುವಿನ ಶರೀರದಲ್ಲಲ್ಲದೆ ಬೇರೆ ಕಡೆಯಲ್ಲಿಯೂ ಹಾಲಾಗಬಹುದಾಗಿತ್ತು. ಮನುಷ್ಯರು ತಾವು ಬಯಸಿದಂತೆ ಹಾಲನ್ನು ಉತ್ಪಾದಿಸದಿದ್ದರೆ ನಿಮಿತ್ತವಿಲ್ಲವೆಂದು ಹೇಳಲಾಗುವುದಿಲ್ಲ. ಕೆಲವು ಕಾರ್ಯಗಳು ಮನುಷ್ಯರಿಂದ ಆಗಬಹುದಾಗಿದ್ದರೆ ಇನ್ನು ಕೆಲವು ಕಾರ್ಯಗಳು ದೈವದಿಂದ ಆಗುತ್ತವೆ.[1] ಮನುಷ್ಯರಿಗೆ ಹೆಚ್ಚು ಹಾಲು ಬೇಕಾಗಿದ್ದರೆ ಅವರು ಹಸುವಿಗೆ ಹುಲ್ಲು ಮೊದಲಾದುವನ್ನು ಹೆಚ್ಚಾಗಿ ತಿನ್ನಿಸಬೇಕಾಗುತ್ತದೆ. ಆದುದರಿಂದ ಹುಲ್ಲು ಮೊದಲಾದ ದೃಷ್ಟಾಂತಗಳ ಹಾಗೆ ಪ್ರಧಾನಕ್ಕೆ ಸ್ವಾಭಾವಿಕ ಪರಿಣಾಮವನ್ನು ಹೇಳುವುದು ಸರಿಯಲ್ಲ.

ವಿ.—ಪ್ರಧಾನಕಾರಣವಾದಿಯ ತರ್ಕವು ಸರಿಯಲ್ಲ. ಚೇತನದ ಅಧಿಷ್ಠಿತತ್ತ್ವವಿಲ್ಲದಿದ್ದರೆ ಹುಲ್ಲು ಮೊದಲಾದುವು ಹಾಲಾಗುವುದಿಲ್ಲ. ಎತ್ತು ಹುಲ್ಲನ್ನು ತಿಂದಾಗ ಅಥವಾ ತಿನ್ನದಿದ್ದಾಗ ಹಾಲಾಗುತ್ತಿದ್ದರೆ ಚೇತನದ ಅಧಿಷ್ಠಿತತ್ವವಿಲ್ಲದೆ ಅವುಗಳಿಗೆ ಪರಿಣಾಮವಾಗುತ್ತಿತ್ತು ಎಂದು ಒಪ್ಪಿಕೊಳ್ಳಬಹುದಾಗಿತು. ಆದರೆ ಹಾಗಾಗುವುದಿಲ್ಲ. ಆದುದರಿಂದ ಚೇತನದ ಅಧಿಷ್ಠಿತತ್ವದಿಂದಲೇ ಹುಲ್ಲು ಹಾಲಾಗುತ್ತದೆ.

ದ್ವೈ.—'ಈಶನ ಪ್ರೇರಣೆಯಿಲ್ಲದಿದ್ದರೆ ಯಾವುದೊಂದು ವಸ್ತುವಿಗೂ ಸತ್ತ್ವವಿಲ್ಲದಿರುವುದರಿಂದ ತೃಣಾದಿಗಳಿಗೆ ಪರ್ಜನ್ಯನಂತೆ ಅವನು ಅನುಗ್ರಾಹಕ ಮಾತ್ರನಲ್ಲ' ಎಂಬುದು ಸೂತ್ರಾರ್ಥ.

ಈ ಅಧಿಕರಣದಲ್ಲಿ ಈಶ್ವರನನ್ನು ಒಪ್ಪಿಕೊಳ್ಳುವ ಸಾಂಖ್ಯಮತವನ್ನು ನಿರಾಕರಿಸಿದೆ. ಪರ್ಜನ್ಯನ ಅನುಗ್ರಹದ ಮೂಲಕ ಭೂಮಿಯಿಂದ ತೃಣಾದಿಗಳು ಹುಟ್ಟುವಂತೆ ಈಶ್ವರನ ಅನುಗ್ರಹದ ಮೂಲಕ ಪ್ರಧಾನದಿಂದ ಜಗತ್ತು ಹುಟ್ಟುತ್ತದೆ ಎಂಬುದು ಅವರ ಮತ.

'ಈ ಜಗತ್ತಿನಲ್ಲಿ ನೋಡಬಹುದಾದ ಕೇಳಬಹುದಾದ ಯಾವ ವಸ್ತುವೇ ಇರಲಿ

---

[1] 'ಹುಲ್ಲು ಹಾಲಾಗಲು ಧೇನುದೇಹದಲ್ಲಿರುವ ಜಠರಾಗ್ನಿಯ ಹೊರತು ಬೇರೆ ನಿಮಿತ್ತವು ಬೇಕಾಗಿಲ್ಲವೆಂದು ಹೇಳಬಹುದು; ಆದರೆ ಬುದ್ಧಿವಂತನಾದವನು ಸರ್ವಜ್ಞನಾದ ಈಶ್ವರನೂ ಕೂಡ ಇದಕ್ಕೆ ಕಾರಣನಾಗಿದ್ದಾನೆ ಎಂಬುದನ್ನು ಒಪ್ಪಿಕೊಳ್ಳುತ್ತಾನೆ' ಧೇನುದೇಹಸ್ಥಸ್ಯಾದರ್ಯಸ್ಯ ವಹ್ನ್ಯಾದಿಭೇದಸ್ಯ ನಿಮಿತ್ತಾಂತರಸ್ಯ ಸಂಭವಾತ್। ಬುದ್ಧಿಪೂರ್ವಕಾರೀ ತು ತತ್ರಾಪೀಶ್ವರ ಏವ ಸರ್ವಜ್ಞಃ ಸಂಭವತೀತಿ ಶಂಕಾನಿರಾಕರಣಸ್ಯಾರ್ಥಃ (ಭಾಮತೀ).

ಅದೆಲ್ಲವನ್ನೂ ನಾರಾಯಣನೇ ಒಳಗೂ ಹೊರಗೂ ವ್ಯಾಪಿಸಿಕೊಂಡು ಇರುವನು'[1] (ಮ ನಾ ಉ ೧೩ ೫) ಮೊದಲಾದ ಶ್ರುತಿಗಳ ಪ್ರಕಾರ ಜಗತ್ತು ಈಶ್ವರನನ್ನೇ ಅವಲಂಬಿಸಿದೆ ಆದುದರಿಂದ ಅವನು ಪರ್ಜನ್ಯನಂತೆ ಅನುಗ್ರಾಹಕ ಮಾತ್ರನಲ್ಲ

## ಅಭ್ಯುಪಗಮೇಽಪ್ಯರ್ಥಾಭಾವಾತ್* ॥ ೬ ॥

೬ (ಪ್ರಧಾನಕ್ಕೆ ಸ್ವಾಭಾವಿಕಪ್ರವೃತ್ತಿಯಿದೆಯೆಂದು) ಒಪ್ಪಿಕೊಂಡರೂ ಪ್ರಯೋಜನವಿಲ್ಲದಿರುವುದರಿಂದ (ದೋಷವುಂಟಾಗುತ್ತದೆ)

ಪ್ರಧಾನದ ಸ್ವಾಭಾವಿಕಪ್ರವೃತ್ತಿಯು ಏನನ್ನೂ ಅಪೇಕ್ಷಿಸುವುದಿಲ್ಲ ಎಂದು ಹೇಳಿದರೆ, ಅದು ಯಾವ ಸಹಕಾರಿಯನ್ನೂ ಅಪೇಕ್ಷಿಸುವುದಿಲ್ಲವಲ್ಲದೆ ಯಾವ ಪ್ರಯೋಜನವನ್ನೂ ಅಪೇಕ್ಷಿಸುವುದಿಲ್ಲ ಎಂದಾಗುವುದು ಆದುದರಿಂದ ಪ್ರಧಾನವು ಪುರುಷನ ಪ್ರಯೋಜನ ವನ್ನು ಸಾಧಿಸುವುದಕ್ಕೆ ಪ್ರವೃತ್ತವಾಗಿರುತ್ತದೆ ಎಂಬ ಪ್ರತಿಜ್ಞೆಯನ್ನು ತ್ಯಜಿಸಬೇಕಾಗು ತ್ತದೆ ಪ್ರಧಾನವು ಸಹಕಾರಿಯನ್ನು ಅಪೇಕ್ಷಿಸುವುದಿಲ್ಲ, ಪ್ರಯೋಜನವನ್ನು ಅಪೇಕ್ಷಿಸು ತ್ತದೆ ಎಂದು ಹೇಳಿದರೆ, ಪ್ರಧಾನ-ಪ್ರವೃತ್ತಿಯ ಪ್ರಯೋಜನವು ಎಂತಹುದು ?—ಎಂದು ವಿವೇಚಿಸಬೇಕಾಗುತ್ತದೆ ಅದು ಭೋಗವಾಗಿರುತ್ತದೆಯೆ ಅಥವಾ ಎರಡೂ ಆಗಿರುತ್ತ ದೆಯೋ ? ಅದು ಭೋಗವಾಗಿದ್ದರೆ ಸುಖದುಃಖಗಳ ಪ್ರಾಪ್ತಿ, ಪರಿಹಾರ- ಇವೇ ಮೊದಲಾದ ಅತಿಶಯವನ್ನು ಉಂಟುಮಾಡಿಕೊಳ್ಳಲು ಶಕ್ಯನಲ್ಲದ ಪುರುಷನಿಗೆ ಎಂಥ ಭೋಗವಾದೀತು ? ಮತ್ತೆ, ಪುರುಷನಿಗೆ ಮೋಕ್ಷವೂ ಆಗುವುದಿಲ್ಲ ಅದು ಮೋಕ್ಷವಾಗಿದ್ದರೆ ಪ್ರಧಾನದ ಪ್ರವೃತ್ತಿಯು ವ್ಯರ್ಥವಾಗುತ್ತದೆ , ಏಕೆಂದರೆ ಪ್ರಧಾನವು ಪ್ರವರ್ತಿಸುವದಕ್ಕೂ ಮೊದಲೇ ಪುರುಷನಿಗೆ ಮೋಕ್ಷವು ಸಿದ್ಧವಾಗಿದ್ದಿತು ಭೋಗಮೋಕ್ಷಗಳೆರಡೂ ಆಗಿದ್ದರೆ, ಪುರುಷನು ಭೋಗಿಸಬೇಕಾಗಿರುವ ಪ್ರಧಾನದ ವಸ್ತುಗಳು ಅನಂತವಾಗಿರುವುದರಿಂದ ಅನಿರ್ಮೋಕ್ಷ ಪ್ರಸಂಗವು ಒದಗುತ್ತದೆ ಇಚ್ಛೆಯ ತೃಪ್ತಿಗಾಗಿ ಪ್ರಧಾನವು ಪ್ರವರ್ತಿಸುತ್ತದೆ ಎಂಬುದೂ ಸರಿಯಲ್ಲ , ಏಕೆಂದರೆ ಅಚೇತನವಾದ ಪ್ರಧಾನಕ್ಕಾಗಲಿ ನಿರ್ಮಲನೂ ನಿಷ್ಕಲನೂ ಆದ ಪುರುಷನಿಗಾಗಲಿ ಇಚ್ಛೆಯುಂಟಾಗಲಾರದು.

ಪುರುಷನ ದೃಕ್-ಶಕ್ತಿಯೂ ಪ್ರಧಾನದ ಸೃಷ್ಟಿಶಕ್ತಿಯೂ ವ್ಯರ್ಥವಾಗುತ್ತವೆ ಎಂಬ ಕಾರಣದಿಂದ ಪ್ರಧಾನಕ್ಕೆ ಪ್ರವೃತ್ತಿಯುಂಟಾಗುತ್ತದೆ ಎಂದು ಹೇಳಿದರೆ, ಪುರುಷನ ದೃಕ್-ಶಕ್ತಿಯೂ ಪ್ರಧಾನದ ಸೃಷ್ಟಿಶಕ್ತಿಯೂ ನಿತ್ಯವಾಗಿರುವುದರಿಂದ ಸಂಸಾರವು ನಾಶವಾಗು

---

1 ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ।

* ಇದು ಶ್ರೀಭಾಷ್ಯದಲ್ಲಿ ೨ ೨, ೮ ಆಗಿದೆ ಮಧ್ವಭಾಷ್ಯದಲ್ಲಿ ಈ ಸೂತ್ರವು ಅಭ್ಯು-ಪಗಮಾಧಿಕರಣ ಎನಿಸಿದೆ.

ವುದಿಲ್ಲ; ಆಗಲೂ ಅನಿರ್ಮೋಕ್ಷಪ್ರಸಂಗವು ಒದಗುತ್ತದೆ.[1] 'ಆದುದರಿಂದ ಪುರುಷಾರ್ಥ ಕ್ಕೋಸ್ಕರ ಪ್ರಧಾನವು ಪ್ರವರ್ತಿಸುತ್ತದೆ ಎಂಬುದು ಯುಕ್ತವಲ್ಲ.

ವಿ.—ಅನುಮಾನದಿಂದ ಪ್ರಧಾನವು ಸಿದ್ಧವಾಗಿದೆಯೆಂದು ಒಪ್ಪಿಕೊಂಡರೂ ಸಾಂಖ್ಯವಾದವನ್ನು ಬಿಡಬೇಕಾಗುತ್ತದೆ; ಏಕೆಂದರೆ ಪ್ರಧಾನಕ್ಕೆ ಯಾವ ಪ್ರಯೋಜನವೂ ಇರುವುದಿಲ್ಲ. 'ಕುಂಟ–ಕುರುಡರಂತಿರುವ ಪುರುಷಪ್ರಕೃತಿಗಳ ಸಂಯೋಗವು ಪುರುಷನ ಜ್ಞಾನಕ್ಕಾಗಿಯೂ ಕೈವಲ್ಯಕಾಗಿಯೂ ಉಂಟಾಗಿದೆ ಈ ಸಂಯೋಗ ದಿಂದ ಸೃಷ್ಟಿಯು ಪ್ರವೃತ್ತವಾಗುತ್ತದೆ'[2] (ಸಾಂ. ಕಾ. ೨೧) ಎಂಬ ವಾಕ್ಯದ ಪ್ರಕಾರ ಪ್ರಧಾನದ ಪ್ರಯೋಜನವು ಪುರುಷನ ಭೋಗಾಪವರ್ಗಗಳಾಗಿರುತ್ತವೆ, ಆದರೆ ಇವೆರಡೂ ಆಗುವುದಿಲ್ಲ. ಚೈತನ್ಯಮಾತ್ರನೂ ನಿಷ್ಕ್ರಿಯನೂ ನಿರ್ವಿಕಾರನೂ ನಿರ್ಮಲನೂ ನಿತ್ಯ-ಮುಕ್ತನೂ ಆದ ಪುರುಷನಿಗೆ ಪ್ರಕೃತಿಜ್ಞಾನರೂಪವಾದ ಭೋಗವಾಗಲಿ ಪ್ರಕೃತಿ ವಿಯೋಗ ರೂಪವಾದ ಮೋಕ್ಷವಾಗಲಿ ಸಂಭವಿಸುವುದಿಲ್ಲ. ಇಂಥ ಪುರುಷನಿಗೆ ಪ್ರಧಾನದ ಸಾನ್ನಿಧ್ಯ ದಿಂದ ಅದರ ಪರಿಣಾಮಗಳಾದ ಸುಖದುಃಖಗಳ ಭೋಗವುಂಟಾಗುತ್ತದೆಂದು ಹೇಳಿದರೆ ಪ್ರಧಾನದ ಸಾನ್ನಿಧ್ಯವು ನಿತ್ಯವಾಗಿರುವುದರಿಂದ ಮೋಕ್ಷವು ಯಾವಾಗಲೂ ಸಿದ್ಧಿಸುವುದಿಲ್ಲ.

ದ್ವೈ.—'ಲೋಕಾಯತಿಕಪಕ್ಷವನ್ನು ಸಿದ್ಧಾಂತವೆಂದು ಒಪ್ಪಿಕೊಂಡರೂ ಪ್ರಯೋ-ಜನಗಳು ಇಲ್ಲದಿರುವುದರಿಂದ ಅದು ಯುಕ್ತವಲ್ಲ' ಎಂಬುದು ಸೂತ್ರಾರ್ಥ

ಇಲ್ಲಿ ಲೋಕಾಯತಿಕಪಕ್ಷವನ್ನು ನಿರಾಕರಿಸಿದೆ. ಧರ್ಮಾಧರ್ಮಗಳನ್ನು ಒಪ್ಪಿ ಕೊಳ್ಳದ ಸಿದ್ಧಾಂತದಿಂದ ಏನು ಪ್ರಯೋಜನ? ಸ್ವ–ವಿರೋಧವು ಒದಗುವುದರಿಂದ ಈ ಪಕ್ಷವನ್ನು ನಿರಾಕರಿಸಿದೆ.[3]

## ಪುರುಷಾಶ್ಮವದಿತಿ ಚೇತ್ತಥಾಽಪಿ* ॥ ೭ ॥

೭. (ಹೆಳವನಾದ) ಮನುಷ್ಯನು (ಕುರುಡನನ್ನು ಪ್ರವರ್ತಿಸುವಂತೆ), ಸೂಜಿ ಗಲ್ಲು (ಕಬ್ಬಿಣವನ್ನು ಪ್ರಚೋದಿಸುವಂತೆ ಪುರುಷನು ಪ್ರಧಾನವನ್ನು ಪ್ರವರ್ತಿಸಬಹುದು) ಎಂದರೂ (ದೋಷವು ಹೋಗುವುದಿಲ್ಲ).

---

[1] ದೃಕ್‌ಶಕ್ತಿಸರ್ಗಶಕ್ತಿವೈಯರ್ಥ್ಯಭಯಾಚ್ಚೇತ್ ಪ್ರವೃತ್ತಿಸ್ತರ್ಹಿ ದೃಕ್ಶಕ್ತ್ಯನುಚ್ಛೇದ-ವತ್ ಸರ್ಗಶಕ್ತ್ಯನುಚ್ಛೇದಾತ್ ಸಂಸಾರಾನುಚ್ಛೇದಾದನಿರ್ಮೋಕಪ್ರಸಂಗ ಏವ (ಸೂ. ಭಾ.).

[2] ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾ ಪ್ರಧಾನಸ್ಯ ।
ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಃ ಸರ್ಗಃ ॥

[3] ಯಸ್ಯ ಧರ್ಮಾಧರ್ಮೌ ನ ಸ್ತಃ ತತ್ಸಿದ್ಧಾಂತೇ ಕಿಂ ಪ್ರಯೋಜನಮ್ ಅತಃ ಸ್ವವ್ಯಾಹತೇರೇವೋಪೇಕ್ಷ್ಯಃ (ಮ. ಭಾ.).

* ಇದು ಶ್ರೀಭಾಷ್ಯದಲ್ಲಿ ೨. ೨. ೫ ಆಗಿದೆ. ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಸೇರಿಕೊಂಡು ಪುರುಷಾಶ್ಮಾಧಿಕರಣ ಎನಿಸಿದೆ.

ಪ್ರವೃತ್ತಿಶಕ್ತಿಯಿಲ್ಲದ ಹೆಳವನು ಪ್ರವೃತ್ತಿಶಕ್ತಿಯುಳ್ಳವನೂ ದೃಕ್ಶಕ್ತಿಯಿಲ್ಲದವನೂ ಆದ ಕುರುಡನನ್ನು ಪ್ರವರ್ತಿಸುವಂತೆ ಅಥವಾ ತಾನೇ ಪ್ರವರ್ತಿಸಲು ಶಕ್ತಿಯಿಲ್ಲದ ಸೂಜಿಗಲ್ಲು ಕಬ್ಬಿಣವನ್ನು ಪ್ರವರ್ತಿಸುವಂತೆ ಪುರುಷನು ಪ್ರಧಾನವನ್ನು ಪ್ರವರ್ತಿಸಬಹುದು—ಎಂದು ಸಾಂಖ್ಯನು ಹೇಳಿದರೂ ಆ ವಾದದ ದೋಷವು ಹೋಗುವುದಿಲ್ಲ ಮೊದಲನೆಯದಾಗಿ ಪ್ರಧಾನವು ತಾನಾಗಿಯೇ ಪ್ರವರ್ತಿಸುತ್ತದೆ ಎಂಬ ಅಭಿಪ್ರಾಯವನ್ನು ಬಿಡಬೇಕಾಗುತ್ತದೆ. ಮತ್ತೆ ಉದಾಸೀನನಾದ ಪುರುಷನು ಪ್ರಧಾನವನ್ನು ಪ್ರವರ್ತಿಸುವಂತೆ ಹೇಗೆ ತಾನೇ ಮಾಡಿಯಾನು ? ಹೆಳವನು ಕುರುಡನನ್ನು ಮಾತುಗಳಿಂದ ಪ್ರವರ್ತಿಸುವಂತೆ ಪುರುಷನಿಗೆ ಪ್ರವರ್ತನವ್ಯಾಪಾರವಿಲ್ಲ ; ಏಕೆಂದರೆ ಅವನು ನಿರ್ಗುಣನೂ ನಿಷ್ಕ್ರಿಯನೂ ಆಗಿರುತ್ತಾನೆ ಸೂಜಿಗಲ್ಲಿನ ಸಾನ್ನಿಧ್ಯದಿಂದ ಕಬ್ಬಿಣವು ಪ್ರವರ್ತಿಸುವಂತೆ ಪ್ರಧಾನವು ಪುರುಷನ ಸಾನ್ನಿಧ್ಯದಿಂದ ಪ್ರವರ್ತಿಸುತ್ತದೆ ; ಎಂದೂ ಹೇಳಲಾಗುವುದಿಲ್ಲ ಏಕೆಂದರೆ ಸಾನ್ನಿಧ್ಯವು ನಿತ್ಯವಾಗಿರುವುದರಿಂದ ಪ್ರವೃತ್ತಿಯೂ ನಿತ್ಯವಾಗಬೇಕಾಗುತ್ತದೆ ಸೂಜಿಗಲ್ಲಿಗಾದರೋ ಕಬ್ಬಿಣದ ಕಡೆಗೆ ಅನಿತ್ಯವಾದ ಸಾನ್ನಿಧ್ಯವು ಸೂಜಿಗಲ್ಲಿನ ವಿಶೇಷ ಪ್ರವೃತ್ತಿಯನ್ನೂ ಆದಿರುವ ವಿಶೇಷಸ್ಥಾನವನ್ನೂ ಅವಲಂಬಿಸಿರುತ್ತದೆ. ಆದುದರಿಂದ ಹೆಳವ, ಸೂಜಿಗಲ್ಲು —ಇವುಗಳ ದೃಷ್ಟಾಂತಗಳು ಇಲ್ಲಿ ಅನ್ವಯಿಸುವುದಿಲ್ಲ. ಪ್ರಧಾನವು ಅಚೇತನವಾದುದರಿಂದಲೂ ಪುರುಷನು ಉದಾಸೀನನಾಗಿರುವುದರಿಂದಲೂ ಇವೆರಡನ್ನೂ ಸಂಬಂಧಿಸುವ ಮೂರನೆಯ ವಸ್ತುವಿಲ್ಲದಿರುವುದರಿಂದಲೂ ಪ್ರಧಾನಕ್ಕೂ ಪುರುಷನಿಗೂ ಸಂಬಂಧವಾಗುವುದಿಲ್ಲ. ಚೇತನನಾದ ಪುರುಷನು ದ್ರಷ್ಟೃ, ಅಚೇತನವಾದ ಪ್ರಧಾನವು ಅದಕ್ಕೆ ದೃಶ್ಯ ಎಂಬ ಯೋಗ್ಯತೆಯಿಂದ ಸಂಬಂಧವಾಗುವುದಾದರೆ ಈ ಯೋಗ್ಯತೆಯು ನಿತ್ಯವಾಗಿರುವುದರಿಂದ ಅನಿರ್ಮೋಕ್ಷಪ್ರಸಂಗವು ಒದಗುವುದು ಆದರೆ ಸ್ವರೂಪವನ್ನು ಆಶ್ರಯಿಸಿಕೊಂಡು ಉದಾಸೀನನೂ ಮಾಯೆಯನ್ನು ಆಶ್ರಯಿಸಿಕೊಂಡು ಪ್ರವರ್ತಕನೂ ಆದ ಪರಮೇಶ್ವರನು ಸಾಂಖ್ಯರ ಪುರುಷನಿಂಗಿತ ಶ್ರೇಷ್ಠನಾಗಿರುತ್ತಾನೆ [1]

ವಿ.—ಹೆಳವನಿಗೆ ನಡೆಯುವುದಕ್ಕೆ ಆಗದಿದ್ದರೂ ತಾನು ದಾರಿಯನ್ನು ನೋಡಿ ಇತರರಿಗೆ ಉಪದೇಶಿಸುವ ಶಕ್ತಿಯಿರುತ್ತದೆ. ಕುರುಡನು ಬುದ್ಧಿವಂತನಾದುದರಿಂದ ಹೆಳವನ ಉಪದೇಶದ ಪ್ರಕಾರ ನಡೆಯುತ್ತಾನೆ. ಕೆಲವು ಸಂದರ್ಭಗಳಲ್ಲಿ ಸೂಜಿಗಲ್ಲಿಗೂ ಕಬ್ಬಿಣದ ಸಾನ್ನಿಧ್ಯದಲ್ಲಿ ಪ್ರವೃತ್ತಿಯಿರುವುದು ಕಂಡುಬರುತ್ತದೆ. ನಿಷ್ಕ್ರಿಯನಾದ ಪುರುಷನಿಗೆ ಇಂಥ ವಿಕಾರಗಳು ಸಂಭವಿಸುವುದೇ ಇಲ್ಲ. ಪ್ರಧಾನಕ್ಕೆ ಪುರುಷನ ಸನ್ನಿಧಿಯು ಮಾತ್ರ ನಿತ್ಯವಾಗಿರುವುದರಿಂದ ಸೃಷ್ಟಿಯು ನಿತ್ಯವಾಗಬೇಕಾಗುತ್ತದೆ; ಪುರುಷನು ನಿತ್ಯಮುಕ್ತ

---

[1] ಪರಮಾತ್ಮನಸ್ತು ಸ್ವರೂಪವ್ಯಪಾಶ್ರಯಮೌದಾಸೀನ್ಯಮ್, ಮಾಯಾವ್ಯಪಾಶ್ರಯಂ ಚ ಪ್ರವರ್ತಕತ್ವಮಿತ್ಯಸ್ತ್ಯತಿಶಯಃ (ಸೂ. ಭಾ.).

ನಾಗಿದ್ದರೆ ಬಂಧ-ಮೋಕ್ಷಗಳಿರುವುಲ್ಲ.[1]

ದ್ವೈ.—'ಪುರುಷ-ಕಲ್ಲುಗಳಂತೆ ಪ್ರಧಾನವು ಪ್ರವರ್ತಿಸುವುದೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಆಗಲೂ ಕೂಡ ವಿರೋಧವು ಹೋಗುವುದಿಲ್ಲ' ಎಂಬುದು ಸೂತ್ರಾರ್ಥ.

ಪುರುಷನೊಂದಿಗೆ ಪ್ರಕೃತಿಗೆ ಕರ್ತೃತ್ವವಿದೆ ಎಂಬ ಸಾಂಖ್ಯಪಕ್ಷವನ್ನು ಇಲ್ಲಿ ನಿರಾಕರಿಸಿದೆ. ಚೇತನದ ಸಂಬಂಧದಿಂದ ಅಚೇತನಶರೀರವು ಕಲ್ಲನ್ನು ಎತ್ತುವುದು, ತರುವುದು ಮೊದಲಾದ ಕೆಲಸಗಳನ್ನು ಮಾಡುವಂತೆ ಅಚೇತನವಾದ ಪ್ರಧಾನವೂ ಪುರುಷನ ಸಂಬಂಧದಿಂದ ಪ್ರವರ್ತಿಸುತ್ತದೆ—ಎಂಬುದು ಸರಿಯಲ್ಲ ; ಏಕೆಂದರೆ 'ನಿನ್ನ ಹೊರತು ಯಾರೂ ಏನನ್ನೂ ಮಾಡುವುದಿಲ್ಲ' ಎಂಬ ಶ್ರುತಿಯ (ಋ. ವೇ. ೧೦. ೧೧೨ ೯) ಪ್ರಕಾರ ಶರೀರ ಪ್ರವೃತ್ತಿಯೂ ಕೂಡ ಈಶನ ಅಧೀನವಾಗಿರುವುದರಿಂದ ಸಾಂಖ್ಯರ ಯುಕ್ತಿಯು ದೃಷ್ಟಾಂತಾಭಾವದಿಂದ ಹೊಂದುವುದಿಲ್ಲ

ಅಂಗಿತ್ವಾನುಪಪತ್ತೇಶ್ಚ *　|| ೮ ||

೮. ಅಂಗಿತ್ವವು ಹೊಂದುವುದಿಲ್ಲವಾದುದರಿಂದಲೂ (ಪ್ರಧಾನಕ್ಕೆ ಪ್ರವೃತ್ತಿಯಿಲ್ಲ).

ಸತ್ತ್ವರಜಸ್ತಮೋಗುಣಗಳು ಒಂದಕ್ಕೊಂದು ಮುಖ್ಯವಾಗಿ ಅಥವಾ ಅಧೀನವಾಗಿ ಇರದೆ ತಮ್ಮತಮ್ಮಲ್ಲಿ ಸಮಭಾವದಿಂದಿರುವುದೇ ಪ್ರಧಾನಾವಸ್ಥೆ ಆ ಅವಸ್ಥೆಯಲ್ಲಿ ಮತ್ತೊಂದನ್ನು ಅಪೇಕ್ಷಿಸದ ಗುಣಗಳು ಅಂಗ-ಅಂಗಿ ಭಾವವನ್ನು ಹೊಂದುವುದಿಲ್ಲ; ಹಾಗಾದರೆ ಅವುಗಳ ಸ್ವರೂಪವೇ ನಾಶವಾಗುವುದು. ಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡಲು ಯಾವ ಬಾಹ್ಯವಸ್ತುವೂ ಇಲ್ಲದಿರುವುದರಿಂದ ಗುಣ-ವೈಷಮ್ಯದಿಂದ ಆಗಬೇಕಾದ ಮಹತ್ತೇ ಮೊದಲಾದುವುಗಳ ಉತ್ಪತ್ತಿಯು ಆಗುವುದೇ ಇಲ್ಲ.

ವಿ.—ಪ್ರಲಯಾವಸ್ಥೆಯಲ್ಲಿ ಗುಣಗಳು ಸಾಮ್ಯಾವಸ್ಥೆಯಲ್ಲಿರುವುದರಿಂದ ಅವುಗಳಿಗೆ ಆಧಿಕ್ಯವಾಗಲಿ ನ್ಯೂನತ್ವವಾಗಲಿ ಇರುವುದಿಲ್ಲ; ಆದುದರಿಂದ ಜಗತ್ತು ಹುಟ್ಟುವುದಿಲ್ಲ ಪ್ರಲಯಾವಸ್ಥೆಯಲ್ಲಿಯೂ ವೈಷಮ್ಯವಿದೆಯೆಂದು ಒಪ್ಪಿಕೊಂಡರೆ ಸೃಷ್ಟಿಯು ನಿತ್ಯವಾಗಬೇಕಾಗುವುದು [2] ಆದುದರಿಂದ ಚೇತನದಿಂದ ಅಧಿಷ್ಠಿತವಾಗದ ಪ್ರಧಾನವು ಜಗತ್ಕಾರಣವಾಗಲಾರದು.

---

[1] ಸಂನಿಧಾನಮಾತ್ರಸ್ಯ ನಿತ್ಯತ್ವೇನ ನಿತ್ಯಸರ್ಗಪ್ರಸಂಗಃ, ನಿತ್ಯಮುಕ್ತತ್ವೇನ ಬಂಧಾಭಾವೋಽಪವರ್ಗಾಭಾವಶ್ಚ (ಶ್ರೀಭಾಷ್ಯ).

* ಇದು ಶ್ರೀಭಾಷ್ಯದಲ್ಲಿ ೨. ೨. ೬. ಆಗಿದೆ

[2] ತದಾಽಪಿ ವೈಷಮ್ಯಾಭ್ಯುಪಗಮೇ ನಿತ್ಯಸರ್ಗಪ್ರಸಂಗಃ (ಶ್ರೀಭಾಷ್ಯ).

ವ್ಯಾಖ್ಯೆ — 'ಪುರುಷನು ಅಂಗವೆಂದು ಹೇಳಿದರೆ ಅಂಗಿತ್ವವು ಹೊಂದುವುದಿಲ್ಲ' ಎಂಬುದು ಸೂತ್ರಾರ್ಥ

ಶರೀರಪ್ರವೃತ್ತಿಯಲ್ಲಿ ಪುರುಷನು ಅಂಗಿ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ ಪುರುಷನು ಅಂಗವೆಂದು ಹೇಳಿದರೆ ಈ ಅಂಗಿತ್ವ–ವನ್ನುಹಾರಕ್ಕೆ ವಿರೋಧವಾಗುತ್ತದೆ

**ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್*** || ೯ ||

೯ ಬೇರೊಂದು ಬಗೆಯಿಂದ ಅನುಮಾನಿಸಿದರೂ (ಪ್ರಧಾನಕ್ಕೆ) ಜ್ಞಾನ-ಶಕ್ತಿಯು ಇಲ್ಲದಿರುವುದರಿಂದ (ಹಿಂದೆ ಹೇಳಿದ ದೋಷಗಳು ಹೋಗುವುದಿಲ್ಲ)

**ಆಕ್ಷೇಪಣೆ**— ನಾವು ಬೇರೊಂದು ಬಗೆಯಿಂದ ಅನುಮಾನಿಸುತ್ತೇವೆ ಗುಣಗಳು ಏನನ್ನೂ ಅಪೇಕ್ಷಿಸುವುದಿಲ್ಲವೆಂದೂ ಕೂಟಸ್ಥವಾಗಿರುವುವೆಂದೂ ನಾವು ಒಪ್ಪಿಕೊಳ್ಳಲು ಪ್ರಮಾಣವಿಲ್ಲ ಕಾರ್ಯದಿಂದಲೇ ಗುಣಗಳ ಸ್ವಭಾವವನ್ನು ಅನುಮಾನಿಸುತ್ತೇವೆ ಗುಣಗಳ ಸ್ವಭಾವವು ಚಲನಾತ್ಮಕವಾಗಿರುತ್ತದೆ ಆದುದರಿಂದ ಗುಣಗಳು ಸಾಮ್ಯಾವಸ್ಥೆಯಲ್ಲಿರುವಾಗಲೂ ವೈಷಮ್ಯವನ್ನು ಹೊಂದಲು ಯೋಗ್ಯವಾಗಿರುತ್ತವೆ

**ಪರಿಹಾರ**— ಹೀಗಿದ್ದರೂ ಪ್ರಧಾನಕ್ಕೆ ಜ್ಞಾನಶಕ್ತಿಯು ಇಲ್ಲದುದರಿಂದ ರಚನಾನುಪಪತ್ತಿಯೇ ಮೊದಲಾದ ಹಿಂದೆ ಹೇಳಿದ ದೋಷಗಳು ಹೋಗುವುದಿಲ್ಲ ಆದರೆ ಪ್ರಧಾನಕ್ಕೆ ಜ್ಞಾನಶಕ್ತಿಯನ್ನು ಅನುಮಾನಿಸುವವನು ಪ್ರತಿವಾದಿತ್ವವನ್ನೇ ಬಿಡಬೇಕಾಗುವುದು, ಏಕಂದರೆ ಅನೇಕಭೇದಗಳುಳ್ಳ ಈ ಪ್ರಪಂಚಕ್ಕೆ ಚೇತನವೊಂದೇ ಉಪಾದಾನವು ಎಂಬ ಬ್ರಹ್ಮವಾದಪ್ರಸಂಗವು ಒದಗುತ್ತದೆ[1] ಸಾಮ್ಯಾವಸ್ಥೆಯಲ್ಲಿರುವಾಗಲೂ ವಿಷಮಾವಸ್ಥೆಯನ್ನು ಹೊಂದಲು ಗುಣಗಳಿಗೆ ಸಾಧ್ಯವಾಗದ ಯಾವ ನಿಮಿತ್ತವೂ ಇಲ್ಲದಿರುವುದರಿಂದ ಅವು ವೈಷಮ್ಯವನ್ನು ಹೊಂದಲಾರವು, ಒಂದು ವೇಳೆ ಹೊಂದಿದರೂ ನಿಮಿತ್ತಾಭಾವವು ಸಮಾನವಾಗಿರುವುದರಿಂದ ಯಾವಾಗಲೂ ವೈಷಮ್ಯವನ್ನು ಹೊಂದಬೇಕಾಗುತ್ತದೆ

ವಿ — ಪ್ರಧಾನಕ್ಕೆ ಜ್ಞಾತೃತ್ವಶಕ್ತಿಯಿಲ್ಲದಿರುವುದುದರಿಂದ ಯಾವ ವಿಧವಾಗಿ ಅನುಮಾನಿಸಿದರೂ ಪೂರ್ವೋಕ್ತವಾದ ದೋಷಗಳು ಹೋಗುವುದಿಲ್ಲ ಆದುದರಿಂದ ಯಾವ ವಿಧವಾದ ಅನುಮಾನದಿಂದಲೂ ಪ್ರಧಾನವು ಸಿದ್ಧಿಸುವುದಿಲ್ಲ

---

* ಇದು ಶ್ರೀಭಾಷ್ಯದಲ್ಲಿ ೨ ೨ ೭ ಆಗಿದೆ ಈ ಸೂತ್ರ ಮತ್ತು ಮುಂದಿನದು ಮಧ್ವ-ಭಾಷ್ಯದಲ್ಲಿ ಅನ್ಯಥಾಽನುಮಿತ್ಯಧಿಕರಣ ಎಂಬ ಬೇರೆ ಅಧಿಕರಣವಾಗಿದೆ

[1] ಚೇತನಮೇಕಮನೇಕಪ್ರಪಂಚಸ್ಯ ಜಗತ ಉಪಾದಾನಮಿತಿ ಬ್ರಹ್ಮವಾದಪ್ರಸಂಗಾತ್ (ಸೂ ಭಾ)

ದ್ವೈ.—ಶರೀರಸಂಬಂಧದಿಂದ ಪುರುಷನು ಪ್ರವರ್ತಿಸುವನೆಂದು ಅಂಗೀಕರಿಸಿದರೂ ಅವನಿಗೆ ಸ್ವ-ಸಾಮರ್ಥ್ಯವು ಇಲ್ಲದಿರುವುದರಿಂದ ಶರೀರಸಂಬಂಧವು ಸಾಧ್ಯವಾಗುವುದಿಲ್ಲ.[1]

## ವಿಪ್ರತಿಷೇಧಾಚ್ಚಾಸಮಂಜಸಮ್* || ೧೦ ||

೧೦. ಪರಸ್ಪರ-ವಿರುದ್ಧವಾಗಿರುವುದರಿಂದಲೂ (ಸಾಂಖ್ಯದರ್ಶನವು) ಅಸ-ಮಂಜಸವು

ಸಾಂಖ್ಯರು ಕೆಲವು ಕಡೆಗಳಲ್ಲಿ ಇಂದ್ರಿಯಗಳು ಏಳೆಂದೂ[2] ಕೆಲವು ಕಡೆಗಳಲ್ಲಿ ಹನ್ನೊಂದೆಂದೂ[3] ಹೇಳುತ್ತಾರೆ ಒಂದು ಕಡೆ ತನ್ಮಾತ್ರಗಳು ಮಹತ್ತಿನಿಂದ ಹುಟ್ಟುತ್ತವೆಂದೂ ಇನ್ನೊಂದು ಕಡೆ ಅಹಂಕಾರದಿಂದ ಹುಟ್ಟುತ್ತವೆಂದೂ ಹೇಳುತ್ತಾರೆ. ಒಂದು ಕಡೆ ಅಂತಃಕರಣಗಳು ಮೂರೆಂದು[4] ಹೇಳಿದರೆ ಇನ್ನೊಂದು ಕಡೆ ಒಂದೇ[5] ಎಂದು ಹೇಳುತ್ತಾರೆ ಮತ್ತೆ ಈಶ್ವರನು ಜಗತ್ಕಾರಣನೆಂದು ಹೇಳುವ ಶ್ರುತಿಗೂ ಅದನ್ನು ಅನುಸರಿಸಿರುವ ಸ್ಮೃತಿಗೂ ಇದು ವಿರುದ್ಧವಾಗಿರುತ್ತದೆ.

ಸಾಂಖ್ಯರು ಪ್ರತಿದೋಷಾರೋಪಣೆಯನ್ನು ಮಾಡುತ್ತಾರೆ : ವೇದಾಂತದರ್ಶನವೂ ಅಸಮಂಜಸವಾಗಿದೆ ; ಏಕೆಂದರೆ ಅದು ತಪ್ಯ-ತಾಪಕಗಳಿಗೆ[6] ಭೇದವನ್ನೇ ಹೇಳಿಲ್ಲ. ಒಂದೇ ಬ್ರಹ್ಮವು ಸರ್ವಾತ್ಮಕವಾದುದರಿಂದಲೂ ಜಗತ್ಕಾರಣವಾದುದರಿಂದಲೂ ತಪ್ಯ-ತಾಪಕಗಳು ಒಬ್ಬನೇ ಆತ್ಮನ ವಿಶೇಷಗಳಾಗಿದ್ದರೆ ಮೋಕ್ಷವು ಸಿದ್ಧಿಸುವುದಿಲ್ಲ. ಇವು ಬೇರೆ ಬೇರೆ ಎಂದು ಒಪ್ಪಿಕೊಂಡಿದ್ದರೆ ಮೋಕ್ಷವು ಸಿದ್ಧಿಸಬಹುದು ಇದಕ್ಕೆ ಪರಿಹಾರವು ಹೀಗಿದೆ : ಈ ತಪ್ಯ-ತಾಪಕಭಾವವು ಅವಿದ್ಯೆಯಿಂದ ಉಂಟಾಗಿದೆಯೇ ಹೊರತು ಅದು ಪಾರಮಾರ್ಥಿಕವಲ್ಲ.[7]

---

[1] ಶರೀರಸಂಬಂಧಾತ್ ಪುರುಷಃ ಪ್ರವರ್ತತ ಇತ್ಯಂಗೀಕಾರೇಽಪಿ ಸ್ವತಸ್ತಸ್ಯಾಸಾಮರ್ಥ್ಯಾಚ್ಛರೀರಸಂಬಂಧ ಏವಾಯುಕ್ತಃ (ಮ. ಭಾ.).

* ಇದು ಶ್ರೀಭಾಷ್ಯದಲ್ಲಿ ೨. ೨. ೯ ಆಗಿದೆ

[2] ತ್ವಕ್-ಮಾತ್ರವಾದ ಜ್ಞಾನೇಂದ್ರಿಯಗಳೆಲ್ಲ ಸೇರಿ ಒಂದು, ಕರ್ಮೇಂದ್ರಿಯಗಳು ಐದು ಮತ್ತು ಮನಸ್ಸು ಒಂದು.

[3] ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಮತ್ತು ಮನಸ್ಸು.

[4] ಬುದ್ಧಿ, ಅಹಂಕಾರ, ಮನಸ್ಸು

[5] ಬುದ್ಧಿ ಮಾತ್ರ.

[6] ತಪಿಸುತ್ತಿರುವ ಜೀವ ಮತ್ತು ತಾಪವನ್ನುಂಟುಮಾಡುವ ವಸ್ತು.

[7] ಅತಶ್ಚಾವಿದ್ಯಾಕೃತೋಽಯಂ ತಪ್ಯತಾಪಕಭಾವೋ ನ ಪಾರಮಾರ್ಥಿಕ ಇತ್ಯಭ್ಯುಪಗಂತವ್ಯಮಿತಿ (ಸೂ. ಭಾ ).

ವ್ಯವಹಾರದಲ್ಲಿ ಕಂಡುಬರುವ ತಪ್ಯ-ತಾಪಕ ಭಾವವನ್ನು ನಾವು ಆಕ್ಷೇಪಿಸುವುದೂ ಇಲ್ಲ, ಪರಿಹರಿಸುವುದೂ ಇಲ್ಲ[1]

೩.—ಸಾಂಖ್ಯರ ಪ್ರಕಾರ ಪ್ರಕೃತಿಯಿರುವುದು ಪರಾರ್ಥಕ್ಕಾಗಿ ಪುರುಷನು ದ್ರಷ್ಟೃವೂ ಅಧಿಷ್ಠಾತೃವೂ ಆಗಿರುತ್ತಾನೆ ಪುರುಷನಿಗೆ ಭೋಗಾಪವರ್ಗಗಳನ್ನು ಉಂಟು ಮಾಡುವುದೇ ಪ್ರಕೃತಿಯ ಸ್ವಪ್ರಯೋಜನ ಆದರೆ ಪುರುಷನು ಚೈತನ್ಯಮಾತ್ರನೆಂದೂ ದ್ರಷ್ಟೃ-ಭೋಕ್ತೃಗಳಲ್ಲವೆಂದೂ ಇವರೇ ಹೇಳುತ್ತಾರೆ ಅವನಿಗೆ ಬಂಧವೂ ಇಲ್ಲ, ಮೋಕ್ಷವೂ ಇಲ್ಲ ಬಂಧಮೋಕ್ಷಗಳಿರುವುದು ಪ್ರಕೃತಿಗೆ ಮಾತ್ರ, ಏಕೆಂದರೆ ಪ್ರಕೃತಿಯು ಪುರುಷಸಂನಿಧಾನದಿಂದ ಪುರುಷಧರ್ಮವಾದ ಚೈತನ್ಯವನ್ನು ತನ್ನಲ್ಲಿ ಆರೋಪಿಸಿಕೊಂಡು, ತನ್ನ ಧರ್ಮವಾದ ಕರ್ತೃತ್ವವನ್ನು ಪುರುಷನಿಗೆ ಆರೋಪಿಸುತ್ತದೆ[2] ಅಧ್ಯಾಸವನ್ನು ಆರೋಪಿಸುವುದು ಚೇತನದ ಧರ್ಮ, ಅಚೇತನದ್ದಲ್ಲ ಹೀಗೆ ಸಾಂಖ್ಯರು ಅನ್ಯೋನ್ಯ ವಿರುದ್ಧವಾಗಿ ತಮ್ಮ ದರ್ಶನವನ್ನು ಪ್ರತಿಪಾದಿಸುತ್ತಾರೆ

ಬ್ರಹ್ಮವು ಕೂಟಸ್ಥ–ನಿತ್ಯ–ನಿರ್ವಿಶೇಷ–ಸ್ವಪ್ರಕಾಶ–ಚಿನ್ಮಾತ್ರವು, ಅದು ಅವಿದ್ಯೆಗೆ ಸಾಕ್ಷಿಯಾಗಿರುವುದರಿಂದ ಪಾರಮಾರ್ಥಿಕವಲ್ಲದ ಬಂಧಮೋಕ್ಷಗಳನ್ನು ಅನುಭವಿಸುತ್ತದೆ–ಎಂದು ಹೇಳುವ ವೇದಾಂತಿಗಳ ದರ್ಶನದಲ್ಲಿ ಕೂಡ ಸಾಂಖ್ಯರ ವಿಪ್ರತಿಷೇಧವು ಕಂಡು ಬರುತ್ತದೆ ಆದರೆ ಇವರಿಬ್ಬರ ದರ್ಶನಗಳಲ್ಲಿ ವಿಶೇಷವು ಇಷ್ಟುಮಾತ್ರ ಜನನ-ಮರಣಾದಿಗಳ ವ್ಯವಸ್ಥಾಸಿದ್ಧಿಗಾಗಿ ಸಾಂಖ್ಯರು ಜೀವರು ಅನೇಕರೆಂದು ಒಪ್ಪಿಕೊಂಡಿರುತ್ತಾರೆ ಇದನ್ನೂ ಒಪ್ಪಿಕೊಳ್ಳದ ವೇದಾಂತಿಗಳ ಮತವು ಸುತರಾಂ ಅಸಮಂಜಸವಾಗಿರುತ್ತದೆ[3]

ದ್ವೈ.—ಸಕಲ–ಶ್ರುತಿ–ಸ್ಮೃತಿ–ಯುಕ್ತಿಗಳಿಗೆ ವಿರುದ್ಧವಾದ ಅನೀಶ್ವರಮತವು ಅಸಮಂಜಸವಾಗಿದೆ[4]

---

[1] ವ್ಯವಹಾರೇ ತು ಯತ್ರ ಯಥಾ ದೃಷ್ಟಸ್ತಪ್ಯತಾಪಕಭಾವಸ್ತತ್ರ ತಥೈವ ಸ ಇತಿ ನ ಚೋದಯಿತವ್ಯಃ ಪರಿಹರ್ತವ್ಯೋ ವಾ ಭವತಿ (ಸೂ ಭಾ )

[2] ಪ್ರಕೃತಿರಚೇತನಭೂತೈವ ಪುರುಷಸಂನಿಧಾನಾತ್ ಪುರುಷಧರ್ಮಂ ಚೈತನ್ಯಂ ಸ್ವಸ್ಮಿನ್ ಸ್ವಧರ್ಮಂ ಕರ್ತೃತ್ವಂ ಪುರುಷೇ ಚಾನುಸಂಧಾಯ ಬಧ್ಯತೇ, ಮೋಕ್ಷಸಾಧನಮನುತಿಷ್ಠತಿ ಮುಚ್ಯತ ಇತಿ ಚಾಹುಃ (ವೇ ದೀ )

[3] ಇಯಾಂಸ್ತು ವಿಶೇಷಃ–ಸಾಂಖ್ಯಾ ಜನನಮರಣಪ್ರತಿನಿಯಮಾದಿವ್ಯವಸ್ಥಾಸಿದ್ಧ್ಯರ್ಥಂ-ಪುರುಷಬಹುತ್ವಮಿಚ್ಛಂತಿ, ತೇ ತು ತದಪಿ ನೇಚ್ಛಂತೀತಿ ಸುತರಾಮಸಾಮಂಜಸ್ಯಮ್(ಶ್ರೀಭಾಷ್ಯ)

[4] ಸಕಲಶ್ರುತಿಸ್ಮೃತಿಯುಕ್ತಿವಿರುದ್ಧತ್ವಾಚ್ಚಾನೀಶ್ವರಮತಮಸಮಂಜಸಮ್ (ಮ ಭಾ )

## ೨. ಮಹದ್ದೀರ್ಘಾಧಿಕರಣ*

### ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್ ॥ ೧೧ ॥

೧೧. ಅಥವಾ ಮಹತ್ತೂ ದೀರ್ಘವೂ ಆದದ್ದು ಹ್ರಸ್ವವೂ ಗೋಳಾಕೃತಿಯೂ ಆದದ್ದರಿಂದ (ಹುಟ್ಟುವಂತೆ ಜಗತ್ತು ಬ್ರಹ್ಮದಿಂದ ಹುಟ್ಟಬಹುದು).

ಪ್ರಧಾನಕಾರಣವಾದವನ್ನು ನಿರಾಕರಿಸಿದಮೇಲೆ ಪರಮಾಣುಕಾರಣವಾದವನ್ನು ನಿರಾಕರಿಸಬೇಕಾಗಿದೆ. ವೈಶೇಷಿಕರು ಹೀಗೆ ವಾದಮಾಡುತ್ತಾರೆ: ಕಾರಣ-ದ್ರವ್ಯದಲ್ಲಿ ಸಮವಾಯಿಗಳಾಗಿರುವ[1] ಗುಣಗಳು ಕಾರ್ಯದ್ರವ್ಯದಲ್ಲಿ ಸಮಾನ ಜಾತೀಯಗುಣಗಳನ್ನು ಉತ್ಪಾದಿಸುತ್ತವೆ ಉದಾಹರಣೆ. ಬಿಳಿಯ ನೂಲುಗಳಿಂದ ಬಿಳಿಯ ಬಟ್ಟೆಯೇ ಉತ್ಪನ್ನವಾಗುತ್ತದೆ ಆದುದರಿಂದ ಚೇತನವಾದ ಬ್ರಹ್ಮವು ಜಗತ್ಕಾರಣವಾಗಿದ್ದರೆ ಜಗತ್ತಿನಲ್ಲಿ ಚೈತನ್ಯವು ಸಮವೇತವಾಗಿರಬೇಕಾಗಿತ್ತು. ಆದರೆ ಹಾಗೆ ಕಂಡುಬರುವುದಿಲ್ಲ. ಆದುದರಿಂದ ಬ್ರಹ್ಮವು ಜಗತ್ಕಾರಣವಲ್ಲ. ಈ ವಾದವು ತಪ್ಪೆಂದು ವೈಶೇಷಿಕ-ಪ್ರಕ್ರಿಯೆಯಿಂದಲೇ ಸೂತ್ರಕಾರರು ತೋರಿಸುತ್ತಾರೆ.

ವೈಶೇಷಿಕರ-ಪ್ರಕ್ರಿಯೆಯ ಪ್ರಕಾರ ಗೋಳಾಕಾರದಲ್ಲಿಯೂ ಪರಮಾಣುಗಳಿಂದ ಸೂಕ್ಷ್ಮವೂ ಹ್ರಸ್ವವೂ ಆದ ದ್ವ್ಯಣುಕಗಳೂ,[2] ಮಹತ್ತೂ ದೀರ್ಘವೂ ಆದ ತ್ರ್ಯಣುಕಗಳೂ[3] ಹುಟ್ಟುತ್ತವೆ, ಗೋಳಾಕಾರದ ಅಣುಗಳು ಹುಟ್ಟುವುದಿಲ್ಲ; ಅಥವಾ ಸೂಕ್ಷ್ಮವೂ ಹ್ರಸ್ವವೂ ಆದ ದ್ವ್ಯಣುಕಗಳಿಂದ ಮಹತ್ತೂ ದೀರ್ಘವೂ ಆದ ತ್ರ್ಯಣುಕಗಳು ಹುಟ್ಟುತ್ತವೆ, ಸೂಕ್ಷ್ಮವೂ ಹ್ರಸ್ವವೂ ಆದ ಅಣುಗಳು ಹುಟ್ಟುವುದಿಲ್ಲ. ಹೀಗೆಯೇ ಚೇತನವಾದ ಬ್ರಹ್ಮದಿಂದ ಅಚೇತನವಾದ ಜಗತ್ತು ಹುಟ್ಟಬಹುದು.

ಈಗ ವೈಶೇಷಿಕರು ಹೀಗೆ ವಾದಿಸಬಹುದು: ದ್ವ್ಯಣುಕಗಳೇ ಮೊದಲಾದ ಕಾರ್ಯದ್ರವ್ಯಗಳು ಕಾರಣದ್ರವ್ಯಕ್ಕೆ ವಿರೋಧಿಯಾದ ಪರಿಮಾಣಾಂತರದಿಂದ ಆಕ್ರಾಂತವಾಗಿರುವುದರಿಂದ ಕಾರಣಗತವಾದ ಗೋಳಾಕಾರವೇ ಮೊದಲಾದುವು ಸಮಾನಜಾತೀಯ ಗುಣಗಳನ್ನು ಉತ್ಪಾದಿಸಲಾರವು ಆದರೆ ಚೇತನಕ್ಕೆ ವಿರೋಧಿಯಾದ ಬೇರೆ ಗುಣದಿಂದ ಜಗತ್ತು ಆಕ್ರಾಂತವಾಗಿಲ್ಲ; ಹಾಗಾಗದಿದ್ದರೆ ಕಾರಣಗತವಾದ ಚೇತನವು ಕಾರ್ಯದಲ್ಲಿ

---

* ಶ್ರೀಭಾಷ್ಯದಲ್ಲಿ ಈ ಸೂತ್ರದಿಂದ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಎಂಬ ಸೂತ್ರದವರೆಗೆ ಈ ಅಧಿಕರಣದ ವಿಷಯವಾಗಿದೆ. ಮಧ್ವಭಾಷ್ಯದಲ್ಲಿಯೂ ಕೂಡ ಈ ಸೂತ್ರದಿಂದ ಅಪರಿಗ್ರಹಾತ್ . . . ಎಂಬ ಸೂತ್ರದವರೆಗೆ ವೈಶೇಷಿಕಾಧಿಕರಣವೆನಿಸಿದೆ.

[1] ಎಂದರೆ ನಿತ್ಯಸಂಬಂಧದಿಂದ ನೆಲಸಿರುವ.

[2] ದ್ವಯಾತ್ಮಕವಾದ ಅಣುಗಳು.

[3] ತ್ರಯಾತ್ಮಕವಾದ ಅಣುಗಳು.

ಬೇರೊಂದು ಚೇತನವನ್ನು ಉತ್ಪಾದಿಸದೆ ಇರಬಹುದಾಗಿತ್ತು. ಅಚೇತನವು ಚೇತನಕ್ಕೆ ವಿರೋಧಿಯಲ್ಲ. ಆದುದರಿಂದ ಬ್ರಹ್ಮವು ತನ್ನ ಚೇತನತ್ವವನ್ನು ಜಗತ್ತಿನಲ್ಲಿ ಉತ್ಪಾದಿಸಬಹುದು.

ಮೇಲೆ ಹೇಳಿದ ಆಕ್ಷೇಪಕ್ಕೆ ಪರಿಹಾರ ಹೀಗಿದೆ : ಎರಡು ದೃಷ್ಟಾಂತಗಳೂ ಸಮಾನವಾಗಿವೆ. ಹೇಗೆ ಕಾರಣದ್ರವ್ಯದಲ್ಲಿರುವ ಗೋಳಾಕಾರವೇ ಮೊದಲಾದವು ಕಾರ್ಯದ್ರವ್ಯದಲ್ಲಿ ಅದೇ ಗುಣಗಳನ್ನು ಉತ್ಪಾದಿಸುವುದಿಲ್ಲವೋ ಹಾಗೆಯೇ ಚೈತನ್ಯವೂ ಕೂಡ. ಕಾರ್ಯವು ಬೇರೊಂದು ಪರಿಮಾಣದಿಂದ ಆಕ್ರಾಂತವಾಗಿರುವುದೇ ಗೋಳಾಕಾರವೇ ಮೊದಲಾದವು ಉತ್ಪನ್ನವಾಗದೆ ಇರುವುದಕ್ಕೆ ಕಾರಣವೆಂದು ಹೇಳುವ ಹಾಗಿಲ್ಲ ; ಏಕೆಂದರೆ ಪರಿಮಾಣವು ಆರಂಭವಾಗುವುದಕ್ಕೆ ಮೊದಲೇ ಗೋಳಾಕಾರಾದಿಗಳಿಗೆ ಕಾರ್ಯವನ್ನುಂಟುಮಾಡುವ ಶಕ್ತಿಯಿರುತ್ತದೆ. ಕಾರ್ಯದ್ರವ್ಯವು ಪ್ರಾರಂಭವಾದಮೇಲೂ ಗುಣವು ಪ್ರಾರಂಭವಾಗುವುದಕ್ಕೆ ಮೊದಲು ಒಂದು ಕ್ಷಣದವರೆಗೆ ನಿರ್ಗುಣವಾಗಿರುತ್ತದೆಂದು ನೀವೇ ಒಪ್ಪಿಕೊಂಡಿರುತ್ತೀರಿ. ಬೇರೆ ಪರಿಮಾಣವು ಉತ್ಪನ್ನವಾಗುವುದಕ್ಕೆ ಮತ್ತೊಂದು ಹೇತುವನ್ನೂ ಒಪ್ಪಿಕೊಂಡಿರುತ್ತೀರಿ : 'ಕಾರಣಗಳ ಬಹುತ್ವದಿಂದಲೂ ಕಾರಣದ ಮಹತ್ತ್ವದಿಂದಲೂ ಸಂಚಯವಿಶೇಷದಿಂದಲೂ ಮಹತ್ಪರಿಮಾಣವು ಆರಂಭವಾಗುತ್ತದೆ'[1] (ವೈ. ಸೂ. ೭. ೧. ೯), 'ಅದಕ್ಕೆ ವಿಪರೀತವಾದದ್ದು ಅಣು'[2] (ವೈ. ಸೂ. ೭. ೧. ೧೦); 'ಇದರಿಂದ ದೀರ್ಘಹ್ರಸ್ವತ್ವಗಳನ್ನು ವ್ಯಾಖ್ಯಾನಮಾಡಿದಂತಾಯಿತು'[3] (ವೈ. ಸೂ. ೭. ೧೧. ೩). ಆದುದರಿಂದ ಗೋಳಾಕಾರಾದಿಗಳು ಸಮಾನಜಾತೀಯ ಕಾರ್ಯವನ್ನು ಉತ್ಪಾದಿಸದಿದ್ದರೆ ಅವುಗಳ ಸ್ವಭಾವವೇ ಕಾರಣವಾಗಿರಬೇಕು. ಇದರಂತೆಯೇ ಚೇತನವಾದ ಬ್ರಹ್ಮವು ಅಚೇತನವಾದ ಜಗತ್ತನ್ನು ಉತ್ಪಾದಿಸಬಹುದು. ಇದಲ್ಲದೆ ಸಂಯೋಗದಿಂದ ಭಿನ್ನಜಾತೀಯದ್ರವ್ಯಗಳ ಉತ್ಪತ್ತಿಯಾಗುವುದು ಕಂಡುಬರುತ್ತದೆ ; ಆದುದರಿಂದ ಕಾರಣವು ಸಮಾನಜಾತೀಯವಾದ ಕಾರ್ಯವನ್ನೇ ಉತ್ಪಾದಿಸಬೇಕೆಂಬ ನಿಯಮವಿಲ್ಲ.

**ವಿ.**—'ಮತ್ತು ಹ್ರಸ್ವವೂ ಗೋಳಾಕಾರವೂ ಆದುದರಿಂದ ಮಹತ್ತೂ ದೀರ್ಘವೂ ಆದುದು ಉತ್ಪನ್ನವಾಗುವಂತೆ (ವೈಶೇಷಿಕರು ಹೇಳುವುದೆಲ್ಲ ಅಸಮಂಜಸವಾಗಿದೆ), ಎಂಬುದು ಸೂತ್ರಾರ್ಥ.

ಪ್ರಧಾನಕಾರಣವಾದವು ಅಸಮಂಜಸವೆಂದು ಹಿಂದೆ ತೋರಿಸಿದ ಹಾಗೆ ಈಗ ಪರಮಾಣುಕಾರಣವಾದವೂ ಅಸಮಂಜಸವೆಂದು ತೋರಿಸಲಾಗುತ್ತದೆ. ಬ್ರಹ್ಮಕಾರಣವಾದದ ದೂಷಣೆಯ ಪರಿಹಾರಕ್ಕಾಗಿ ಈ ಸೂತ್ರವು ಬಂದಿಲ್ಲ. ಪರಮಾಣುಗಳಿಗೆ ಅವಯವಗಳಿದ್ದರೆ ಆ ಅವಯವಗಳಿಗೂ ಅವಯವಗಳನ್ನು ಒಪ್ಪಿಕೊಳ್ಳಬೇಕಾಗಿ ಅನವಸ್ಥಾದೋಷವು ಪ್ರಾಪ್ತವಾಗುತ್ತದೆ. ಅವುಗಳಿಗೆ ಅವಯವಗಳು ಇಲ್ಲದಿದ್ದರೆ ಸಹಸ್ರ

---

[1] ಕಾರಣಬಹುತ್ವಾತ್ ಕಾರಣಮಹತ್ವಾತ್ ಪ್ರಚಯವಿಶೇಷಾಚ್ಚ ಮಹತ್ ।

[2] ತದ್ವಿಪರೀತಮಣು ।

[3] ಏತೇನ ದೀರ್ಘಹ್ರಸ್ವತ್ವೇ ವ್ಯಾಖ್ಯಾತೇ ।

ಪರಮಾಣುಗಳ ಪರಿಮಾಣಕ್ಕೂ ಒಂದು ಪರಮಾಣುವಿನ ಪರಿಮಾಣಕ್ಕೂ ಭೇದವೇ ಇರುವುದಿಲ್ಲ. ಈ ಯುಕ್ತ್ಯಾಭಾಸಗಳಿಂದ ತಪ್ಪಿಸಿಕೊಳ್ಳಲು ವೈದಿಕಪಕ್ಷವನ್ನೇ ಒಪ್ಪಿಕೊಳ್ಳಬೇಕಾಗುತ್ತದೆ.

**ದ್ವೈ.**—ಪರಮಾಣುಗಳು ಜಗತ್ಕಾರಣವೆಂಬ ಮತವನ್ನು ಇಲ್ಲಿ ನಿರಾಕರಿಸಿದೆ. ಮಹತ್ವಪರಿಮಾಣದ ದೆಸೆಯಿಂದಲೂ ದೀರ್ಘತ್ವಪರಿಮಾಣದ ದೆಸೆಯಿಂದಲೂ ಚತುರಣುಕಾದಿಗಳಿಂದ ಕಾರ್ಯವು ಉತ್ಪನ್ನವಾಗುವಂತೆ ಹ್ರಸ್ವತ್ವಪರಿಮಾಣದ ದೆಸೆಯಿಂದಲೂ ಗೋಳಾಕಾರದ ಪರಿಮಾಣದ ದೆಸೆಯಿಂದಲೂ ದ್ವ್ಯಣುಕಾದಿಗಳಿಂದ ಆಯಾ ಪರಿಮಾಣವುಳ್ಳ ಕಾರ್ಯವು ಉತ್ಪನ್ನವಾಗುತ್ತದೆ. ಹಾಗಾಗದಿದ್ದರೆ ಚತುರಣುಕಾದಿಗಳು ಕಾರ್ಯದಲ್ಲಿ ಪರಿಮಾಣವನ್ನುಂಟುಮಾಡಲಾರವು ಎಂಬುದನ್ನು ಮೂಲದಲ್ಲಿರುವ **ವಾ**ಶಬ್ದವು ಸೂಚಿಸುತ್ತದೆ ; ಏಕೆಂದರೆ ಈ ಎರಡು ವಿಧವಾದ ಅಣುಗಳಿಗೆ ಯಾವ ವಿಶೇಷವೂ ಇರುವುದಿಲ್ಲ.

## ೩. ಪರಮಾಣುಜಗತ್ಕಾರಣತ್ವಾಧಿಕರಣ

(ಸೂ. ೧೨–೧೭)

**ಉಭಯಥಾಽಪಿ ನ ಕರ್ಮಾತಸ್ತದಭಾವಃ ॥ ೧೨ ॥**

೧೨. ಎರಡು ವಿಧದಿಂದಲೂ (ಪರಮಾಣುಗಳಿಗೆ) ಕರ್ಮವು ಸಾಧ್ಯವಿಲ್ಲ; ಆದುದರಿಂದ ಅದರ (ಎಂದರೆ ಸೃಷ್ಟಿ-ಪ್ರಳಯಗಳ) ಅಭಾವವಾಗುವುದು.

ವೈಶೇಷಿಕರ ವಾದವು ಹೀಗಿರುತ್ತದೆ: ಲೋಕದಲ್ಲಿ ಬಟ್ಟೆಯೇ ಮೊದಲಾದ ಅವಯವಗಳುಳ್ಳ ದ್ರವ್ಯಗಳು ತಮ್ಮಲ್ಲಿ ಅನುಗತವಾದ ಮತ್ತು ಸಂಯೋಗದ ಸಹಾಯವನ್ನು ಪಡೆದಿರುವ ನೂಲು ಮೊದಲಾದ ದ್ರವ್ಯಗಳಿಂದ ಉತ್ಪನ್ನವಾಗುವುದು ಕಂಡುಬರುತ್ತದೆ. ಈ ನಿಯಮವು ಜಗತ್ತಿನಲ್ಲಿ ಅವಯವಗಳುಳ್ಳ ವಸ್ತುಗಳಿಗೆಲ್ಲ ಅನ್ವಯಿಸುತ್ತದೆ. ಈ ಅವಯವ-ಅವಯವಿ-ವಿಭಾಗವು ಎಲ್ಲಿ ನಿಲ್ಲುತ್ತದೆಯೊ ಆ ವಿಭಾಗದ ಕೊನೆಯೇ ಪರಮಾಣುವೆನಿಸಿರುವುದು. ಈ ಜಗತ್ತೆಲ್ಲವೂ ಅವಯವಗಳಿಂದ ಕೂಡಿದೆ ಮತ್ತು ಈ ಕಾರಣದಿಂದಲೇ ಆದ್ಯಂತಗಳುಳ್ಳದ್ದು. ಕಾರಣವಿಲ್ಲದೆ ಕಾರ್ಯವು ಸಾಧ್ಯವಿಲ್ಲದುದರಿಂದ ಪರಮಾಣುಗಳು ಜಗತ್ಕಾರಣವಾಗಿವೆ. ಸಾವಯವವಾದ ಪೃಥ್ವಿ ನೀರು ತೇಜಸ್ಸು ವಾಯು ಎಂಬ ನಾಲ್ಕು ಭೌತದ್ರವ್ಯಗಳಿಂದ ನಾಲ್ಕು ವಿಧವಾದ ಪರಮಾಣುಗಳನ್ನು ಕಲ್ಪಿಸಬೇಕಾಗುವುದು ಪೃಥಿವ್ಯಾದಿಭೂತಗಳು ನಾಶವಾದರೆ ಅವು ಪರಮಾಣುಗಳವರೆಗೂ ವಿಭಾಗವಾಗುತ್ತವೆ. ಇದೇ ಪ್ರಳಯ ಅನಂತರ ಸೃಷ್ಟಿಕಾಲವು ಬಂದಾಗ ವಾಯುವಿನ ಪರಮಾಣುಗಳಲ್ಲಿ ಅದೃಷ್ಟದ ಅಪೇಕ್ಷೆಯಿಂದ ಕರ್ಮವುಂಟಾಗುತ್ತದೆ. ಆ ಕರ್ಮವು ತನಗೆ ಆಶ್ರಯವಾದ ಅಣುವನ್ನು ಮತ್ತೊಂದು ಅಣುವಿನೊಂದಿಗೆ ಸಂಯೋಜಿಸುತ್ತದೆ. ಆಮೇಲೆ ದ್ವ್ಯಣುಕಾದಿಕ್ರಮದಿಂದ ವಾಯುವು ಉತ್ಪನ್ನವಾಗುತ್ತದೆ. ಹೀಗೆಯೇ ತೇಜಸ್ಸು ನೀರು ಪೃಥ್ವಿ, ಇಂದ್ರಿಯಗಳಿಂದ ಕೂಡಿದ ಶರೀರ—ಇವುಗಳ ಉತ್ಪತ್ತಿ. ಈ ರೀತಿ ಜಗತ್ತೆಲ್ಲವೂ ಅಣುಗಳಿಂದ ಉತ್ಪನ್ನವಾಗುತ್ತದೆ ಬಟ್ಟೆಯಲ್ಲಿರುವ ಗುಣಗಳು ನೂಲಿನಿಂದ ಬರುವಂತೆ ದ್ವ್ಯಣುಕಾದಿಗಳ ಗುಣಗಳು ಪರಮಾಣುಗಳಲ್ಲಿ ಅನುಗತವಾದ ಗುಣಗಳಿಂದ ಉತ್ಪನ್ನವಾಗುತ್ತವೆ.

ವೈಶೇಷಿಕಮತವನ್ನು ಹೀಗೆ ನಿರಾಕರಿಸಿದೆ: ಬಟ್ಟೆಯನ್ನು ಮಾಡಲು ನೂಲು ಮೊದಲಾದುವುಗಳ ಸಂಯೋಗವು ಕರ್ಮದಿಂದ ಉಂಟಾಗುವಂತೆ ವಿಭಾಗಾವಸ್ಥೆಯಲ್ಲಿರುವ ಅಣುಗಳ ಸಂಯೋಗಕ್ಕೆ ಆದ್ಯಕರ್ಮದ ಅಪೇಕ್ಷೆಯಿದೆ. ಈ ಕರ್ಮವು ಆತ್ಮಗುಣವಾದ ಪ್ರಯತ್ನವಾಗಿರಬೇಕು ಅಥವಾ ಅಭಿಘಾತವೇ ಮೊದಲಾದ ದೃಷ್ಟನಿಮಿತ್ತವಾಗಿರಬೇಕು ಶರೀರದಲ್ಲಿ ಪ್ರತಿಷ್ಠಿತವಾದ ಮನಸ್ಸಿನೊಂದಿಗೆ ಆತ್ಮನ ಸಂಯೋಗವಾದಾಗ

ಮಾತ್ರ ಪ್ರಯತ್ನವೆಂಬ ಆತ್ಮಗುಣವು ಹುಟ್ಟುತ್ತದೆ. ಅಭಿಘಾತವೂ ಸಾಧ್ಯವಿಲ್ಲ; ಏಕೆಂದರೆ ಸೃಷ್ಟಿಯಾದಮೇಲೆಯೇ ಇವುಗಳೆಲ್ಲವೂ ಹುಟ್ಟುತ್ತವೆ. ಈ ಆದ್ಯಕರ್ಮಕ್ಕೆ ಅದೃಷ್ಟವು ನಿಮಿತ್ತವಾಗಿರಬೇಕೆಂದು ಹೇಳಿದರೆ ಅದು ಆತ್ಮನಲ್ಲಿದೆಯೆ ಅಥವಾ ಅಣುವಿನಲ್ಲಿದೆಯೆ ?—ಎಂದೂ ಕೇಳಬೇಕಾಗುವುದು ಅಚೇತನವಾದ ಅದೃಷ್ಟವು ಕರ್ಮಕ್ಕೆ ಕಾರಣವಾಗಲಾರದು. ಚೇತನದಿಂದ ಅಧಿಷ್ಠಿತವಾಗಿ ಪ್ರವರ್ತಿಸುತ್ತದೆ—ಎಂದೂ ಹೇಳಲಾಗುವುದಿಲ್ಲ; ಏಕೆಂದರೆ ಆತ್ಮನಲ್ಲಿ ಚೈತನ್ಯವು ಇನ್ನೂ ಹುಟ್ಟಿರುವುದಿಲ್ಲವಾದ್ದರಿಂದ ಅವನು ಆ ಅವಸ್ಥೆಯಲ್ಲಿ ಅಚೇತನನಾಗಿರುತ್ತಾನೆ.[1] ಅದೃಷ್ಟವು ಆತ್ಮನಲ್ಲಿದ್ದರೂ ಅಣುಗಳ ಕರ್ಮಕ್ಕೆ ನಿಮಿತ್ತನಾಗಲಾರನು; ಏಕೆಂದರೆ ಅದಕ್ಕೂ ಅಣುಗಳಿಗೂ ಸಂಬಂಧವಿರುವುದಿಲ್ಲ ಅದೃಷ್ಟವುಳ್ಳ ಪುರುಷನಿಗೂ ಅಣುಗಳಿಗೂ ಸಂಬಂಧವಿದೆಯೆಂದು ಹೇಳಿದರೆ ಸಂಬಂಧದ ಸಾತತ್ಯದಿಂದ ಪ್ರವೃತ್ತಿಯೂ ಸತತವಾಗಿರಬೇಕಾಗಿರುವುದು,[2] ಏಕೆಂದರೆ ಪ್ರವೃತ್ತಿಗೆ ಯಾವ ನಿಯಾಮಕವೂ ಇರುವುದಿಲ್ಲ. ಹೀಗೆ ಕರ್ಮಕ್ಕೆ ನಿಮಿತ್ತವಿಲ್ಲದಿರುವುದರಿಂದ ಅಣುಗಳಲ್ಲಿ ಆದ್ಯಕರ್ಮವು ಉಂಟಾಗಲಾರದು; ಕರ್ಮವಿಲ್ಲದಿರುವುದರಿಂದ ಅದರಿಂದಾಗಬೇಕಾದ ಸಂಯೋಗವು ಉಂಟಾಗಲಾರದು; ಸಂಯೋಗವು ಇಲ್ಲದಿರುವಾಗ ದ್ವ್ಯಣುಕವೇ ಮೊದಲಾದ ಕಾರ್ಯಸಮೂಹವು ಆಗಲಾರದು.[3]

ವಿ.—ಪರಮಾಣುಗಳಲ್ಲಿರುವ ಅದೃಷ್ಟದಿಂದ ಅವುಗಳ ಆದ್ಯಕರ್ಮವಾಗುತ್ತದೆಯೆ ಅಥವಾ ಜೀವರಲ್ಲಿರುವ ಅದೃಷ್ಟದಿಂದ ಆಗುತ್ತದೆಯೆ ? ಎರಡರಿಂದಲೂ ಅಲ್ಲ, ಏಕೆಂದರೆ ಜೀವರ ಪುಣ್ಯಪಾಪಗಳಿಂದಾಗುವ ಅದೃಷ್ಟವು ಪರಮಾಣುಗಳಲ್ಲಿದ್ದರೆ ಅವು ಜಗತ್ತನ್ನು ಸದಾ ಉತ್ಪಾದಿಸಬೇಕಾಗುವುದು ಜೀವಗತವಾದ ಅದೃಷ್ಟವೂ ಪರಮಾಣುಗಳಲ್ಲಾಗುವ ಕರ್ಮದ ಉತ್ಪತ್ತಿಗೆ ಕಾರಣವಾಗಲಾರದು ಅದೃಷ್ಟವುಳ್ಳ ಜೀವರ ಸಂಬಂಧದಿಂದ ಅಣುಗಳಲ್ಲಿ ಕರ್ಮವುಂಟಾಗುತ್ತದೆಯೆಂದು ಹೇಳಿದರೆ ಜೀವರ ಅದೃಷ್ಟಪ್ರವಾಹವು ನಿತ್ಯವಾಗಿರುವುದರಿಂದ ಸೃಷ್ಟಿಯೂ ನಿತ್ಯವಾಗಬೇಕಾಗುತ್ತದೆ.

ದ್ವೈ.—ಈಶ್ವರನ ಇಚ್ಛೆಯು ನಿತ್ಯವೆಂದು ಒಪ್ಪಿಕೊಂಡರೆ ಆ ಇಚ್ಛೆಯಿರುವಾಗಲೂ ಪ್ರಳಯದಲ್ಲಿ ಪರಮಾಣುಗಳ ಕರ್ಮವು ಇರುವುದಿಲ್ಲ. ಆದುದರಿಂದ ಪರಮಾಣುಗಳು ಈಗಲೂ ಏನನ್ನೂ ಉತ್ಪಾದಿಸುತ್ತಿಲ್ಲ ಎಂದು ವಾದಿಸಬಹುದು. ಅವನ ಇಚ್ಛೆಯು ಅನಿತ್ಯವಾದರೆ ಅದನ್ನುಂಟುಮಾಡಲು ಯಾವ ಕಾರಣವೂ ಇರುವುದಿಲ್ಲ.[4] ಹೀಗೆ ಪರಮಾಣು

---

[1] ಆತ್ಮನಶ್ಚಾನುತ್ಪನ್ನಚೈತನ್ಯಸ್ಯ ತಸ್ಯಾಮವಸ್ಥಾಯಾಮಚೇತನತ್ವಾತ್ (ಸೂ ಭಾ.)·

[2] ಪ್ರಳಯವೇ ಆಗುವುದಿಲ್ಲ ಎಂದರ್ಥ.

[3] ತದೇವಂ ನಿಯತಸ್ಯ ಕಸ್ಯಚಿತ್ಕರ್ಮನಿಮಿತ್ತಸ್ಯಾಭಾವಾನ್ನಾಣುಷ್ವಾದ್ಯಂ ಕರ್ಮ ಸ್ಯಾತ್ । ಕರ್ಮಾಭಾವಾತ್ ತನ್ನಿಬಂಧನಃ ಸಂಯೋಗೋ ನ ಸ್ಯಾತ್ । ಸಂಯೋಗಾಭಾವಾಚ್ಚ ತನ್ನಿಬಂಧನಂ ದ್ವ್ಯಣುಕಾದಿಕಾರ್ಯಜಾತಂ ಸ್ಯಾತ್ (ಸೂ. ಭಾ.).

[4] ಈಶ್ವರನ ಇಚ್ಛೆಯು ನಿತ್ಯವೊ ಅಥವಾ ಅನಿತ್ಯವೊ ?—ಎಂದು ಈಶ್ವರನನ್ನೂ ಈಶ್ವರೇಚ್ಛೆಯನ್ನೂ ಒಪ್ಪಿಕೊಳ್ಳುವ ವೈಶೇಷಿಕನನ್ನು ಕೇಳಿದೆ

ಗಳಲ್ಲಿ ಕರ್ಮವನ್ನುಂಟುಮಾಡಲು ಈಶ್ವರೇಚ್ಛೆಯಿಲ್ಲದಿರುವುದರಿಂದ ಅವುಗಳ ಕರ್ಮವಾಗಲಿ ಕಾರ್ಯವಾಗಲಿ ಇರುವುದಿಲ್ಲ ಈ ಆಕ್ಷೇಪಣೆಗಳು ವೈದಿಕಪಕ್ಷದಲ್ಲಿ ಬರುವುದಿಲ್ಲ; ಏಕೆಂದರೆ ಅವನು ಸರ್ವಶಕ್ತನೆಂದು ವೇದಗಳು ಹೇಳುತ್ತವೆ.

**ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ॥ ೧೩ ॥**

೧೩. ಸಮವಾಯವನ್ನು ಒಪ್ಪಿಕೊಂಡಿರುವುದರಿಂದಲೂ ಸಾಮ್ಯದಿಂದ ಅನವಸ್ಥೆಯುಂಟಾಗಿರುವುದರಿಂದಲೂ (ಅಣುವಾದವು ಸಂಭವಿಸುವುದಿಲ್ಲ).

ಸಮವಾಯಸಂಬಂಧವು ಅಣುಕಾರಣತ್ವವನ್ನು ಸಾಧಿಸಲಾರದು ಅಣುಗಳಿಗಿಂತ ಅತ್ಯಂತ ಭಿನ್ನವಾದ ದ್ವ್ಯಣುಕವು ಸಮವಾಯರೂಪವಾದ ಸಂಬಂಧದಿಂದ ಅವುಗಳೊಂದಿಗೆ ಹೇಗೆ ಸಂಬದ್ಧವಾಗಿದೆಯೊ ಹಾಗೆಯೇ ಸಮವಾಯಿಗಳಿಗಿಂತ[1] ಅತ್ಯಂತ ಭಿನ್ನವಾದ ಸಮವಾಯವು ಸಮವಾಯರೂಪವಾದ ಇನ್ನೊಂದು ಸಂಬಂಧದಿಂದಲೇ ಸಮವಾಯಿಗಳೊಡನೆ ಸಂಬದ್ಧವಾಗಬೇಕು, ಏಕೆಂದರೆ ಅತ್ಯಂತ ಭಿನ್ನವಾಗಿರುವುದೆಂಬುದು ಎರಡಕ್ಕೂ ಸಮಾನವಾಗಿರುತ್ತದೆ ಎರಡನೆಯ ಸಮವಾಯಸಂಬಂಧಕ್ಕೆ ಮೂರನೆಯ ಸಮವಾಯಸಂಬಂಧವನ್ನು ಕಲ್ಪಿಸಬೇಕಾಗಿರುವುದರಿಂದ ಅನವಸ್ಥಾಪ್ರಸಂಗವು ಒದಗುತ್ತದೆ. ನನ್ನ ಮುಂದೆ ಕಾಣುವ ಬಟ್ಟೆ ಮೊದಲಾದವುಗಳಲ್ಲಿ ಸಮವಾಯಸಂಬಂಧವು ನಿತ್ಯವಾಗಿರುವುದರಿಂದ ಸಂಬಂಧಾಂತರವನ್ನು ಕಲ್ಪಿಸಬೇಕಾಗಿಲ್ಲವೆಂದು ಹೇಳಿದರೆ ಸಂಯೋಗವೂ ಸಂಯೋಗಿಗಳೊಡನೆ ನಿತ್ಯಸಂಬದ್ಧವಾಗಿರುವುದರಿಂದ ಸಮವಾಯವಾದಂತೆ ಮತ್ತೊಂದು ಸಂಬಂಧವನ್ನು ಅಪೇಕ್ಷಿಸುವುದಿಲ್ಲ[2] ಸಂಯೋಗವು ಒಂದು ವಸ್ತುವಾಗಿರುವುದರಿಂದ ಮತ್ತೊಂದು ಸಂಬಂಧವನ್ನು ಅಪೇಕ್ಷಿಸುತ್ತದೆ ಎಂದರೆ ಸಮವಾಯವೂ ಒಂದು ವಸ್ತುವಾಗಿರುವುದರಿಂದ ಮತ್ತೊಂದು ಸಂಬಂಧವನ್ನು ಅಪೇಕ್ಷಿಸುತ್ತದೆ. ಸಂಯೋಗವು ಗುಣವಾಗಿರುವುದರಿಂದ ಮತ್ತೊಂದು ಸಂಬಂಧವನ್ನು ಅಪೇಕ್ಷಿಸುತ್ತದೆ, ಸಮವಾಯವು ಗುಣವಲ್ಲದುದರಿಂದ ಅಪೇಕ್ಷಿಸುವುದಿಲ್ಲ ಎಂದು ಹೇಳಲಾಗುವುದಿಲ್ಲ; ಏಕೆಂದರೆ ಸಂಬಂಧದ ಅಪೇಕ್ಷೆಯು ಎರಡಕ್ಕೂ ಸಮಾನವಾಗಿರುತ್ತದೆಯೇ ಹೊರತು ಪರಿಭಾಷೆಯಲ್ಲಿ ಗುಣವೆಂದು ಹೇಳಲ್ಪಡುವುದು ಸಂಬಂಧಾಪೇಕ್ಷೆಗೆ ಕಾರಣ ಎಂಬುದಲ್ಲ. ಈ ಕಾರಣಗಳಿಂದ ಪರಮಾಣುಕಾರಣವಾದವು ಯುಕ್ತವಲ್ಲ.

ವಿ.—ಸಮವಾಯವನ್ನು ಒಪ್ಪಿಕೊಂಡಿರುವುದರಿಂದ ವೈಶೇಷಿಕಮತವು ಅಸಮಂಜಸವಾಗಿದೆ. ಗುಣ-ಗುಣಿ, ಅವಯವ-ಅವಯವಿ, ಜಾತಿ-ವ್ಯಕ್ತಿ—ಇವೇ ಮೊದಲಾದವುಗಳ

---

[1] ಸಮವಾಯವು ಸಂಬಂಧಿಸುವ ಎರಡು ವಸ್ತುಗಳು

[2] ಇದು ವೈಶೇಷಿಕಮತಕ್ಕೆ ವಿರುದ್ಧವಾಗಿದೆ; ಏಕೆಂದರೆ ಗುಣವೆನಿಸಿದ ಸಂಯೋಗವು ತಾನು ಸೇರಿಸುವ ವಸ್ತುಗಳೊಂದಿಗೆ ಸಮವಾಯದಿಂದ ಸಂಬಂಧಿಸಿರುತ್ತದೆ.

ಅಪೃಥಕ್‌ಸ್ಥಿತಿಗಾಗಿ[1] ಸಮವಾಯಸಂಬಂಧವನ್ನು ಕಲ್ಪಿಸಿದರೆ ಸಮವಾಯವೂ ಕೂಡ ಹಾಗೆಯೇ ಇರುವುದಕ್ಕೆ ಕಾರಣಾಂತರವನ್ನು ಕಲ್ಪಿಸಬೇಕಾಗುತ್ತದೆ. ಹೀಗೆ ಅನವಸ್ಥಾ-ದೋಷವು ಒದಗುತ್ತದೆ ಸಮವಾಯದ ಸ್ವಭಾವಕ್ಕೋಸ್ಕರ ಅಪೃಥಕ್‌ಸಿದ್ಧತ್ವವನ್ನು ಕಲ್ಪಿಸಬೇಕೆಂದೂ ಹೇಳಲಾಗುವುದಿಲ್ಲ; ಏಕೆಂದರೆ ಜಾತಿ-ಗುಣಗಳಿಗೂ ಸ್ವಭಾವವನ್ನು ಕಲ್ಪಿಸಬೇಕಾಗುತ್ತದೆ. ಹಾಗೆ ಮಾಡಿದರೆ ಸಮವಾಯದ ಕಲ್ಪನೆಯೇ ಅನಾವಶ್ಯಕವಾಗುತ್ತದೆ ಮತ್ತೆ, ದೃಷ್ಟವಲ್ಲದ ಸಮವಾಯವನ್ನು ಕಲ್ಪಿಸಿ, ಅದರ ಸ್ವಭಾವ ಇಂತಹುದೆಂದು ಹೇಳುವುದು ಸರಿಯಲ್ಲ

ದ್ವೈ.—ಕಾರ್ಯ-ಕಾರಣ ಮೊದಲಾದುವುಗಳಿರುವ ಮೊದಲನೆಯ ಸಮವಾಯ ಸಂಬಂಧವೇ ಸಿದ್ಧಿಸದಿರುವಾಗ ಮುಂದೆ ಬರುವ ಸಂಬಂಧಗಳು ಸಿದ್ಧಿಸುವುದೇ ಇಲ್ಲ[2] ಪ್ರಥಮಸಂಬಂಧಕ್ಕೆ ಸ್ವ-ನಿರ್ವಾಹಕತ್ವವನ್ನು ಒಪ್ಪಿಕೊಂಡರೆ ಸಮವಾಯವೇ ಅನಾವಶ್ಯಕವಾಗುವುದು.[3]

## ನಿತ್ಯಮೇವ ಚ ಭಾವಾತ್ || ೧೪ ||

೧೪. ಮತ್ತು (ಅಣುಗಳ ಪ್ರವೃತ್ತಿ ಅಥವಾ ನಿವೃತ್ತಿ) ಯಾವಾಗಲೂ ಇರುವುದರಿಂದಲೂ (ಪರಮಾಣುಕಾರಣವಾದವು ಸರಿಯಲ್ಲ).

ಅಣುಗಳು ಪ್ರವೃತ್ತಿಸ್ವಭಾವದವುಗಳಾಗಿರಬಹುದು ಅಥವಾ ನಿವೃತ್ತಿಸ್ವಭಾವದವುಗಳಾಗಿರಬಹುದು ಅಥವಾ ಉಭಯಸ್ವಭಾವದವುಗಳಾಗಿರಬಹುದು ಅಥವಾ ಉಭಯ ಸ್ವಭಾವವಿಲ್ಲದವುಗಳಾಗಿರಬಹುದು ಮೊದಲನೆಯ ಪಕ್ಷದಲ್ಲಿ ಪ್ರಳಯವಾಗುವುದಿಲ್ಲ; ಎರಡನೆಯ ಪಕ್ಷದಲ್ಲಿ ಸೃಷ್ಟಿಯಾಗುವುದಿಲ್ಲ ಮೂರನೆಯ ಪಕ್ಷವು ವಿರುದ್ಧವಾಗಿರುವುದರಿಂದ ಅಸಮಂಜಸವಾಗಿರುತ್ತದೆ. ನಾಲ್ಕನೆಯ ಪಕ್ಷದಲ್ಲಿ ಅಣುಗಳ ಪ್ರವೃತ್ತಿ-ನಿವೃತ್ತಿಗಳು ನಿಮಿತ್ತಕಾರಣವನ್ನು ಅಪೇಕ್ಷಿಸುತ್ತವೆ; ನಿಮಿತ್ತಕಾರಣಗಳಾದ ಅದೃಷ್ಟಾದಿಗಳು ಅಣುಗಳ ಸಾನ್ನಿಧ್ಯದಲ್ಲಿ ನಿತ್ಯವೂ ಇರುವುದರಿಂದ ನಿತ್ಯಪ್ರವೃತ್ತಿಯಾಗಿರಬೇಕಾಗುವುದು. ಅದೃಷ್ಟಾದಿಗಳು ನಿಮಿತ್ತಕಾರಣಗಳಾಗಿದ್ದರೆ ನಿತ್ಯನಿವೃತ್ತಿಯಾಗಬೇಕಾಗುವುದು ಆದುದರಿಂದ ಪರಮಾಣುಕಾರಣವಾದವು ಯುಕ್ತವಲ್ಲ.[4]

ವಿ.—'ಮತ್ತು (ಜಗತ್ತು) ನಿತ್ಯವಾಗುವುದರಿಂದಲೂ' ಎಂಬುದು ಸೂತ್ರಾರ್ಥ.

[1] ವಿಶೇಷದಿಂದ ವಿಶೇಷಣವು ಬೇರೆಯಾಗದೇ ಇರುವಿಕೆ.

[2] ಪ್ರಥಮಸಂಬಂಧಾಸಿದ್ಧೌ ನೈವ ಚ ತದಸಿದ್ಧಿಃ (ಮ. ಭಾ.).

[3] ಸ್ವನಿರ್ವಾಹಕತ್ವೇ ಸಮವಾಯ ಏವ ನ ಸ್ಯಾತ್ (ಮ ಭಾ.).

[4] ಅದೃಷ್ಟಾದೇರ್ನಿಮಿತ್ತಸ್ಯ ನಿತ್ಯಸಂನಿಧಾನಾನ್ನಿತ್ಯಪ್ರವೃತ್ತಿಪ್ರಸಂಗಾತ್ । ಅತಂತ್ರತ್ವೇಽಪ್ಯದೃಷ್ಟಾದೇರ್ನಿತ್ಯಾಪ್ರವೃತ್ತಿಪ್ರಸಂಗಾತ್ । ತಸ್ಮಾದಪ್ಯನುಪಪನ್ನಃ ಪರಮಾಣುಕಾರಣವಾದಃ (ಸೂ. ಭಾ.).

ಸಮವಾಯಸಂಬಂಧವು ನಿತ್ಯವಾಗಿದ್ದರೆ ಸಂಬಂಧವುಳ್ಳದ್ದೂ ನಿತ್ಯವಾಗಬೇಕಾಗುತ್ತದೆ; ಆದುದರಿಂದ ಜಗತ್ತೂ ನಿತ್ಯವಾಗುತ್ತದೆ ಎಂಬ ಅಸಮಂಜಸಸಿದ್ಧಾಂತವು ಒದಗುತ್ತದೆ [1]

ದ್ವೈ.—'ಮತ್ತೆ (ಕಾರಣವು) ನಿತ್ಯವಾಗುವುದರಿಂದ (ಕಾರ್ಯದ ಉತ್ಪತ್ತಿಯೂ) ನಿತ್ಯವೆಂದು (ಒಪ್ಪಿಕೊಳ್ಳಬೇಕಾಗುವುದು)' ಎಂಬುದು ಸೂತ್ರಾರ್ಥ

ಪರಮಾಣುಗಳೂ ಸಮವಾಯವೂ ನಿತ್ಯವೆಂದು ಒಪ್ಪಿಕೊಂಡರೆ ಕಾರ್ಯವನ್ನೂ ನಿತ್ಯವೆಂದು ಒಪ್ಪಿಕೊಳ್ಳಬೇಕಾಗುವುದು [2] ಹಾಗಾಗದಿದ್ದರೆ ಕಾರಣದಿಂದ ಕಾರ್ಯವೇ ಉತ್ಪನ್ನವಾಗುವುದಿಲ್ಲ

**ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ॥ ೧೫ ॥**

೧೫. (ಅಣುಗಳಿಗೆ) ರೂಪಾದಿಗಳಿರುವುದರಿಂದ (ವೈಶೇಷಿಕಸಿದ್ಧಾಂತದ) ವಿಪರ್ಯಯುವೂ (ಆಗಬಹುದು); ಏಕೆಂದರೆ ಅದು ಕಂಡುಬರುತ್ತದೆ.

ವೈಶೇಷಿಕಮತದ ಪ್ರಕಾರ ಸಾವಯವವಾದ ದ್ರವ್ಯಗಳನ್ನು ಅವಯವಗಳಾಗಿ ವಿಭಾಗಿಸಿದಾಗ ಇನ್ನು ಮುಂದೆ ವಿಭಾಗಿಸಲಾಗದ ಒಂದು ಪರಿಮಿತಿಯನ್ನು ಮುಟ್ಟಬೇಕಾಗುತ್ತದೆ. ಪರಮಾಣುಗಳೇ ಅದರ ಮಿತಿ; ಈ ಪರಮಾಣುಗಳು ನಾಲ್ಕು ವಿಧವಾಗಿದ್ದು ರೂಪಾದಿಗಳುಳ್ಳವಾಗಿ ನಿತ್ಯವಾಗಿರುತ್ತವೆ ಇವೇ ರೂಪಾದಿಗಳುಳ್ಳ ಭೂತ-ಭೌತಿಕ-ಜಗತ್ತಿಗೆ ಕಾರಣಗಳಾಗಿರುತ್ತವೆ.

ಪರಮಾಣುಗಳಿಗೆ ರೂಪಾದಿಗಳಿದ್ದರೆ ಅವು ಸ್ಥೂಲವೂ ಅನಿತ್ಯವೂ ಆಗುವುವು. ರೂಪಾದಿಗಳುಳ್ಳ ವಸ್ತುವು ತನ್ನ ಕಾರಣಕ್ಕಿಂತ ಸ್ಥೂಲವೂ ಅನಿತ್ಯವೂ ಆಗಿರುವುದು ಲೋಕದಲ್ಲಿ ಕಂಡುಬರುತ್ತದೆ ಬಟ್ಟೆಯನ್ನು ಅದರ ನೂಲುಗಳಿಗೆ ಹೋಲಿಸಿದರೆ ಸ್ಥೂಲವೂ ಅನಿತ್ಯವೂ ಆಗಿರುತ್ತದೆ; ಹಾಗೆಯೇ ನೂಲನ್ನು ಅದರ ಅಂಶಗಳಿಗೆ ಹೋಲಿಸಿದರೆ ಸ್ಥೂಲವೂ ಅನಿತ್ಯವೂ ಆಗಿರುತ್ತದೆ. ಆದುದರಿಂದ ರೂಪಾದಿಗಳುಳ್ಳ ಪರಮಾಣುಗಳನ್ನೂ ಕೂಡ ಅವುಗಳ ಕಾರಣಗಳಿಗೆ ಹೋಲಿಸಿದರೆ, ಸ್ಥೂಲವೂ ಅನಿತ್ಯವೂ ಆಗಿರಬೇಕಾಗುತ್ತವೆ. 'ಭಾವರೂಪವಾಗಿಯೂ ನಿಷ್ಕಾರಣವಾಗಿಯೂ ಇರುವುದು ನಿತ್ಯವು'[3] (ವೈ. ಸೂ.

---

[1] ಸಮವಾಯಸ್ಯ ಸಂಬಂಧತ್ವಾತ್ ಸಂಬಂಧಸ್ಯ ನಿತ್ಯತ್ವೇ ಸಂಬಂಧಿನೋ ಜಗತಶ್ಚ ನಿತ್ಯಮೇವ ಭಾವಾದಸಮಂಜಸಮ್ (ಶ್ರೀಭಾಷ್ಯ).

[2] ನಿತ್ಯತ್ವಾಚ್ಚ ಪರಮಾಣೂನಾಂ ನಿತ್ಯಮೇವ ಕಾರ್ಯಂ ಸ್ಯಾತ್ (ಮ. ಭಾ.)

[3] ಸದಕಾರಣವನ್ನಿತ್ಯಮ್ ।

೪. ೧ ೧) ಎಂದು ವೈಶೇಷಿಕರು ಹೇಳುವುದು ಅಣುಗಳಿಗೆ ಹೊಂದುವುದಿಲ್ಲ. ಎರಡನೆಯದಾಗಿ ಪರಮಾಣುಗಳು ನಿತ್ಯವೆಂಬುದಕ್ಕೆ ಅವರು ಕೊಟ್ಟಿರುವ ಕಾರಣವು (ವೈ. ಸೂ. ೪. ೧. ೪)[1] ತೃಪ್ತಿಕರವಾಗಿಲ್ಲ. ಪರಮಾಣುಕಾರಣವಾದ ಬ್ರಹ್ಮವೆಂಬ ನಿತ್ಯವಸ್ತುವು ಇದ್ದೇ ಇರುತ್ತದೆ. ಮತ್ತೆ, ಶಬ್ದ ಮತ್ತು ಅದರ ಅರ್ಥ—ಇವುಗಳ ವ್ಯವಹಾರಮಾತ್ರದಿಂದ ಯಾವುದೊಂದು ವಸ್ತುವೂ ಪ್ರಸಿದ್ಧವಾಗಲಾರದು ; ಏಕೆಂದರೆ ಬೇರೆ ಪ್ರಮಾಣಗಳಿಂದ ಸಿದ್ಧವಾದ ಶಬ್ದಾರ್ಥಗಳನ್ನೇ ವ್ಯವಹಾರದಲ್ಲಿ ಪ್ರಯೋಗಿಸುತ್ತಾರೆ.[2] ಇನ್ನು, ಪರಮಾಣುಗಳು ನಿತ್ಯವೆಂಬುದಕ್ಕೆ ಅವಿದ್ಯೆಯು ಕಾರಣವೆಂದು (ವೈ. ಸೂ. ೪ ೧. ೫)[3] ಹೇಳಿರುವುದು ಸರಿಯಲ್ಲ, ಏಕೆಂದರೆ 'ಸದ್ರೂಪವಾಗಿ ಕಂಡುಬರುತ್ತಿರುವ ಕಾರ್ಯಗಳ ಕಾರಣಗಳನ್ನು ಪ್ರತ್ಯಕ್ಷವಾಗಿ ನೋಡದಿರುವುದು ಅವಿದ್ಯೆ' ಎಂದು ಸೂತ್ರಕ್ಕೆ ಅರ್ಥಮಾಡಿದರೆ ದ್ವ್ಯಣುಕವು ನಿತ್ಯವಾಗುತ್ತದೆ[4] ಕಾರಣವಿಭಾಗ ಕಾರಣವಿನಾಶ, ಇವೆರಡಕ್ಕಿಂತ ವಿನಾಶಕ್ಕೆ ಮೂರನೆಯ ಕಾರಣವಿಲ್ಲದಿರುವುದೇ ಅವಿದ್ಯೆ , ಅದು ಪರಮಾಣುಗಳ ನಿತ್ಯತ್ವವನ್ನು ತೋರಿಸಿಕೊಡುತ್ತದೆ ಎಂದು ಈ ಸೂತ್ರಕ್ಕೆ (೪ ೧ ೫) ವೈಶೇಷಿಕನು ವ್ಯಾಖ್ಯಾನ ಮಾಡಬಹುದು. ವಿನಾಶವಾಗುತ್ತಿರುವ ವಸ್ತು ಈ ಎರಡು ಕಾರಣಗಳಿಂದಲೇ ವಿನಾಶವಾಗಬೇಕು ವೆಂಬ ನಿಯಮವೇನೂ ಇಲ್ಲ—ಎಂಬುದು ನಮ್ಮ ಪರಿಹಾರ ಅನೇಕ ದ್ರವ್ಯಗಳ ಸಂಯೋಗದಿಂದ ಒಂದು ಹೊಸ ದ್ರವ್ಯವು ಹುಟ್ಟುತ್ತದೆ ಎಂದು ಒಪ್ಪಿಕೊಂಡರೆ ಹೀಗಾಗಬಹುದು. ಆದರೆ ವಿಶೇಷರಹಿತವೂ ಸಾಮಾನ್ಯರೂಪವೂ ಆದ ಕಾರಣವು ವಿಶೇಷಗಳುಳ್ಳ ಬೇರೊಂದು ಅವಸ್ಥೆಯನ್ನು ಪಡೆದು ಮತ್ತೊಂದು ದ್ರವ್ಯವನ್ನು ಪ್ರಾರಂಭಿಸುತ್ತದೆ ಎಂದು ಯಾವಾಗ ಒಪ್ಪಿಕೊಳ್ಳುತ್ತೇವೆಯೋ ಆಗ—ಗಟ್ಟಿಯಾದ ತುಪ್ಪವು ಉಷ್ಣದಿಂದ ಕರಗುವಂತೆ—ಮೂರ್ತರೂಪವು ಕರಗುವುದರಿಂದ ನಾಶವಾಗಬಹುದು[5] ಆದುದರಿಂದ ಪರಮಾಣುಕಾರಣವಾದವು ಯುಕ್ತವಲ್ಲ.

ವಿ.— ಪಾರ್ಥಿವನೇ ಮೊದಲಾದ ಚತುರ್ವಿಧವಾದ ಪರಮಾಣುಗಳಿಗೆ ರೂಪ-ರಸ-ಗಂಧ-ಸ್ಪರ್ಶಗಳಿವೆ ಎಂಬ ಅಭಿಪ್ರಾಯದ ಪ್ರಕಾರ ಅವು ಅನಿತ್ಯ ಸ್ಥೂಲ ಸಾವಯವ ಎಂದೂ ಒಪ್ಪಿಕೊಳ್ಳಬೇಕಾಗುವುದು. ಇದು ವೈಶೇಷಿಕಮತಕ್ಕೆ ವಿಪರ್ಯಯವಾಗಿದೆ ; ಏಕೆಂದರೆ ಪರಮಾಣುಗಳು ನಿತ್ಯ ಸೂಕ್ಷ್ಮ ನಿರವಯವ ಎಂದು ಅವರು ಉಪದೇಶಿಸುತ್ತಾರೆ.

---

[1] '(ಅಣುಗಳು ನಿತ್ಯವಾಗಿಲ್ಲದಿದ್ದರೆ) ಅನಿತ್ಯ ಎಂಬ ಶಬ್ದದಲ್ಲಿ ಅಭಿಪ್ರೇತವಾಗಿರುವ ವಿಶೇಷಪ್ರತಿಷೇಧವು ಸಾಧ್ಯವಾಗುವುದಿಲ್ಲ' ಅನಿತ್ಯಮಿತಿ ಚ ವಿಶೇಷತಃ ಪ್ರತಿಷೇಧಾಭಾವಃ ।

[2] ನ ಚ ಶಬ್ದಾರ್ಥವ್ಯವಹಾರಮಾತ್ರೇಣ ಕಸ್ಯಚಿದರ್ಥಸ್ಯ ಪ್ರಸಿದ್ಧಿರ್ಭವತಿ ಪ್ರಮಾಣಾಂತರಸಿದ್ಧಯೋಃ ಶಬ್ದಾರ್ಥಯೋರ್ವ್ಯವಹಾರಾವತಾರಾತ್ (ಸೂ. ಭಾ.).

[3] ಅವಿದ್ಯಾ ಚ ।

[4] ಏಕೆಂದರೆ ದ್ವ್ಯಣುಕಕ್ಕೆ ಕಾರಣವಾದ ಪರಮಾಣುಗಳು ನಮಗೆ ಗೋಚರಿಸುವುದಿಲ್ಲ.

[5] ಕಾರ್ಯನಾಶಕ್ಕೆ ಕಾರಣವಿಭಾಗವಾಗಲಿ ಕಾರಣನಾಶವಾಗಲಿ ಅವಶ್ಯಕವಲ್ಲ.

ದ್ವೈ.—ಪರಮಾಣುಗಳಿಗೆ ರೂಪಾದಿಗಳಿರುವುದರಿಂದ ಅವುಗಳು ಅನಿತ್ಯಗಳೆಂದು ಅನುಮಾನಿಸಬೇಕಾಗಿದೆ.

**ಉಭಯಥಾ ಚ ದೋಷಾತ್ ॥ ೧೬ ॥**

೧೬. ಮತ್ತು ಎರಡು ಪಕ್ಷಗಳಲ್ಲಿಯೂ ದೋಷವಿರುವುದರಿಂದ (ಪರಮಾಣು ಕಾರಣವಾದವು ಯುಕ್ತವಲ್ಲ)

ಗಂಧ-ರಸ-ರೂಪ-ಸ್ಪರ್ಶಗಳೆಂಬ ಗುಣಗಳುಳ್ಳ ಪೃಥ್ವಿಯು ಸ್ಥೂಲವಾಗಿದೆ. ರೂಪ-ರಸ-ಸ್ಪರ್ಶಗಳೆಂಬ ಗುಣಗಳುಳ್ಳ ನೀರು ಸೂಕ್ಷ್ಮವಾಗಿದೆ. ರೂಪ-ಸ್ಪರ್ಶಗಳೆಂಬ ಗುಣಗಳುಳ್ಳ ತೇಜಸ್ಸು ಸೂಕ್ಷ್ಮತರವಾಗಿದೆ. ಸ್ಪರ್ಶವೆಂಬ ಗುಣವುಳ್ಳ ವಾಯುವು ಸೂಕ್ಷ್ಮತಮವಾಗಿದೆ. ಈಗ ಭೂತಗಳನ್ನೊಳಗೊಂಡಿರುವ ಪರಮಾಣುಗಳಿಗೂ ಆಯಾ ಭೂತಗಳಂತೆ ಗುಣಗಳು ಹೆಚ್ಚುಕಡಮೆ ಇವೆ ಎಂದು ಕಲ್ಪಿಸಬೇಕೇ ?—ಎಂಬುದು ಪ್ರಶ್ನೆ. ಉಭಯಪಕ್ಷದಲ್ಲಿಯೂ ದೋಷದಿಂದ ಪರಿಹರಿಸಿಕೊಳ್ಳಲು ಸಾಧ್ಯವಿಲ್ಲ. ಕೆಲವು ಪರಮಾಣುಗಳಿಗೆ ಗುಣಗಳು ಹೆಚ್ಚಾಗಿವೆಯೆಂದು ಕಲ್ಪಿಸಿದರೆ ಅವುಗಳ ಪರಿಮಾಣವು ದೊಡ್ಡದಾಗಿ ಪರಮಾಣುತ್ವವೇ ಹೋಗುವುದು. ಪರಮಾಣುಗಳ ಸಾಮ್ಯದ ಸಿದ್ಧಿಗಾಗಿ ಗುಣಗಳ ಸಂಖ್ಯೆಯಲ್ಲಿ ಭೇದವಿಲ್ಲವೆಂದು ಹೇಳಿದರೆ ಅವುಗಳಿಗೆ ಒಂದೇ ಗುಣವನ್ನು ಕಲ್ಪಿಸಬೇಕಾಗುತ್ತದೆ ; ಆಗ ತೇಜಸ್ಸಿನಲ್ಲಿ ಸ್ಪರ್ಶವನ್ನೂ ನೀರಿನಲ್ಲಿ ರೂಪಸ್ಪರ್ಶಗಳನ್ನೂ ಪೃಥ್ವಿಯಲ್ಲಿ ರಸ-ರೂಪ-ಸ್ಪರ್ಶಗಳನ್ನೂ ಕಾಣದೆಹೋಗಬೇಕಾಗುತ್ತದೆ ; ಏಕೆಂದರೆ ಕಾರ್ಯದ ಗುಣಗಳು ಕಾರಣದ ಗುಣಗಳಿಂದ ಉತ್ಪನ್ನವಾಗುತ್ತವೆ. ಎಲ್ಲ ಪರಮಾಣುಗಳಿಗೂ ನಾಲ್ಕು ಗುಣಗಳಿವೆಯೆಂದು ಕಲ್ಪಿಸಿಕೊಂಡರೆ ನೋಡದೆ ಇರುವುದನ್ನು ನೋಡಬೇಕಾಗುತ್ತದೆ : ನೀರಿನಲ್ಲಿ ಗಂಧ, ತೇಜಸ್ಸಿನಲ್ಲಿ ಗಂಧ-ರಸಗಳು ಮತ್ತು ವಾಯುವಿನಲ್ಲಿ ಗಂಧ-ರೂಪ-ರಸಗಳು. ಆದುದರಿಂದ ಪರಮಾಣುವಾದವು ಸರಿಯಲ್ಲ.

ವಿ.—ಮೇಲೆ ಹೇಳಿದ ದೋಷದಿಂದ ಪರಿಹರಿಸಿಕೊಳ್ಳಲು ಪರಮಾಣುಗಳಿಗೆ ರೂಪವಿಲ್ಲವೆಂದು ಹೇಳಿದರೆ ಈ ಸೂತ್ರವು ಉತ್ತರವಾಗಿ ಬಂದಿದೆ ಪರಮಾಣುಗಳಿಗೆ ರೂಪಗಳಿರಲಿ ಇಲ್ಲದಿರಲಿ ದೋಷವು ಬಂದೇ ಬರುತ್ತದೆ ರೂಪಾದಿಗಳಿಲ್ಲದಿದ್ದರೆ ಕಾರ್ಯಗುಣಗಳು ಕಾರಣಗುಣಗಳನ್ನು ಅವಲಂಬಿಸುವುದರಿಂದ ಪೃಥಿವ್ಯಾದಿ ಭೂತಗಳಿಗೆ ಗುಣಗಳು ಹೋಗುತ್ತವೆ. ರೂಪಾದಿಗಳಿವೆಯೆಂದು ಹೇಳಿದರೆ ಹಿಂದಿನ ಸೂತ್ರದಲ್ಲಿ ಹೇಳಿದ ವಿಪರ್ಯಯ ದೋಷವು ಸಂಭವಿಸುತ್ತದೆ.

ದ್ವೈ.—ಪರಮಾಣುಗಳು ನಿತ್ಯವಾದರೆ ಎಲ್ಲವೂ ನಿತ್ಯವಾಗಬೇಕಾಗುತ್ತದೆ. ಅಣುಗಳಿಗೆ ರೂಪಾದಿಗಳಿದ್ದರೆ ಅವು ನಿತ್ಯವೆಂದು ಹೇಳಲು ಯಾವ ವಿಶೇಷಪ್ರಮಾಣವೂ ಇರುವುದಿಲ್ಲ. ಅಣುಗಳು ಅನಿತ್ಯವೆಂದು ಹೇಳಿದರೆ ಕಾರಣದ ಅಭಾವದಿಂದ ಅವುಗಳ ಉತ್ಪತ್ತಿಯೇ ಆಗುವುದಿಲ್ಲ.

**ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ॥ ೧೭ ॥**

೧೭. (ಪರಮಾಣುಕಾರಣವಾದವನ್ನು ಶಿಷ್ಟರು) ಪರಿಗ್ರಹಿಸದಿರುವುದರಿಂದಲೂ (ಅದನ್ನು) ಅತ್ಯಂತವಾಗಿ ಉಪೇಕ್ಷೆಮಾಡಬೇಕು.

ವೇದವಿದರಾದ ಮನು ಮೊದಲಾದವರು ಪ್ರಧಾನಕಾರಣವಾದವನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಂಡಿರುತ್ತಾರೆ; ಏಕೆಂದರೆ ಸತ್ಕಾರ್ಯವೇ ಮೊದಲಾದ ಅಂಶಗಳನ್ನು ಸಾಂಖ್ಯವು ಒಪ್ಪಿಕೊಂಡಿರುತ್ತದೆ. ಆದರೆ ಈ ಪರಮಾಣುಕಾರಣವಾದವನ್ನು ಯಾವ ಶಿಷ್ಟರೂ ಯಾವ ಅಂಶದಲ್ಲಿಯೂ ಒಪ್ಪಿಕೊಂಡಿರುವುದಿಲ್ಲ. ಇದಲ್ಲದೆ ವೈಶೇಷಿಕರು ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ—ಎಂಬ ಆರು ಪದಾರ್ಥಗಳನ್ನು ಅತ್ಯಂತಭಿನ್ನವೆಂದೂ ಬೇರೆ ಬೇರೆ ಲಕ್ಷಣಗಳುಳ್ಳವೆಂದೂ ಒಪ್ಪಿಕೊಂಡು, ಅದಕ್ಕೆ ವಿರುದ್ಧವಾಗಿ ಗುಣ-ಕರ್ಮಾದಿಗಳು ದ್ರವ್ಯಕ್ಕೆ ಅಧೀನವಾಗಿರುವುವೆಂದು ಹೇಳುತ್ತಾರೆ. ಅತ್ಯಂತಭಿನ್ನವಾಗಿರುವ ವಸ್ತುಗಳು ಒಂದಕ್ಕೊಂದು ಅಧೀನವಾಗಿರುವುದಿಲ್ಲ. ಗುಣವೇ ಮೊದಲಾದವು ದ್ರವ್ಯಾಧೀನವಾದರೆ ದ್ರವ್ಯವಿದ್ದರೆ ಇರುವುದರಿಂದಲೂ ದ್ರವ್ಯವಿಲ್ಲದಿದ್ದರೆ ಇಲ್ಲದಿರುವುದರಿಂದಲೂ ದ್ರವ್ಯವೇ ಆಕಾರಾದಿಭೇದದಿಂದ ಅನೇಕ ಪದಗಳಿಗೂ ಪ್ರತ್ಯಯಗಳಿಗೂ ವಿಷಯವಾಗುತ್ತದೆ. ಹಾಗಾದರೆ ಸಾಂಖ್ಯಸಿದ್ಧಾಂತಗ್ರಹಣವೂ[1] ಸ್ವಸಿದ್ಧಾಂತವಿರೋಧವೂ ಒದಗುತ್ತದೆ. ಧೂಮವು ಅಗ್ನಿಗಿಂತ ಬೇರೆಯಾಗಿದ್ದರೂ ಧೂಮವು ಅಗ್ನಿಯ ಅಧೀನದಲ್ಲಿದೆ—ಎಂದು ವೈಶೇಷಿಕನು ಆಕ್ಷೇಪಿಸಬಹುದು. ಇದಕ್ಕೆ ಪರಿಹಾರ ಹೀಗಿದೆ: ಅಗ್ನಿಯೂ ಧೂಮವೂ ಬೇರೆಬೇರೆಯಾಗಿ ಕಂಡುಬರುತ್ತಿರುವುದರಿಂದ ಅವು ಬೇರೆಬೇರೆಯೆಂದು ನಿಶ್ಚಯಿಸುತ್ತೇವೆ. ಆದರೆ ಇಲ್ಲಿ ದ್ರವ್ಯ-ಗುಣಗಳು ಬೇರೆಬೇರೆಯಾಗಿ ಕಂಡುಬರುತ್ತಿಲ್ಲ; ಏಕೆಂದರೆ ಬಿಳಿಯ ಕಂಬಳಿ, ಕೆಂಪು ಹಸು, ನೀಲೋತ್ಪಲ ಎಂಬಲ್ಲಿ ಆಯಾ ದ್ರವ್ಯಗಳು ಗುಣಗಳಿಂದಲೇ ಕಂಡುಬರುತ್ತವೆ. ಆದುದರಿಂದ ಗುಣವು ದ್ರವ್ಯಾತ್ಮಕವೇ ಆಗಿರುತ್ತದೆ. ಇದರಿಂದ ಕರ್ಮ-ಸಾಮಾನ್ಯ-ವಿಶೇಷ-ಸಮವಾಯಗಳು ದ್ರವ್ಯಾತ್ಮಕವೆಂದು ಹೇಳಿದ್ದಾಯಿತು.

ದ್ರವ್ಯ-ಗುಣಗಳು ಅಯುತಸಿದ್ಧವಾಗಿವೆ[2] ಎಂದು ಹೇಳಿದರೆ ಅಯುತಸಿದ್ಧತ್ವವು ದೇಶದಲ್ಲಾಗಲಿ ಕಾಲದಲ್ಲಾಗಲಿ ಅಥವಾ ಸ್ವಭಾವದಲ್ಲಾಗಲಿ ಅಭಿನ್ನವಾಗಿರಬೇಕು. ಇವು ಯಾವವೂ ವೈಶೇಷಿಕದರ್ಶನಕ್ಕೆ ಹೊಂದುವುದಿಲ್ಲ. ಮತ್ತೆ ಅಯುತಸಿದ್ಧವು ಸಂಯೋಗವೆಂದೂ ಅಯುತಸಿದ್ಧವು ಸಮವಾಯವೆಂದೂ ವೈಶೇಷಿಕರು ಹೇಳುವುದು ಸರಿಯಲ್ಲ; ಏಕೆಂದರೆ ಕಾರ್ಯಕ್ಕಿಂತಲೂ ಮೊದಲೇ ಸಿದ್ಧವಾಗಿರುವ ಕಾರಣವೂ ಮತ್ತು ಕಾರ್ಯವೂ

---

[1] ಸಾಂಖ್ಯಸಿದ್ಧಾಂತದಲ್ಲಿ ಪುರುಷನನ್ನು ಬಿಟ್ಟರೆ ಎಲ್ಲವೂ ಪ್ರಧಾನದ ವಿಭಿನ್ನರೂಪಗಳಾಗಿರುತ್ತವೆ.

[2] ಒಂದರಿಂದ ಒಂದು ಬಿಡದೆ ಇರುವುದು.

ಅಯುತಸಿದ್ಧವೆಂದು ಹೇಳಲಾಗುವುದಿಲ್ಲ. ಅಯುತಸಿದ್ಧವಾದ ಕಾರ್ಯದ ಕಾರಣದೊಂದಿಗೆ[1] ಇರುವ ಸಂಬಂಧವು ಸಮವಾಯವು ಎಂದು ವೈಶೇಷಿಕರು ಹೇಳಿದರೆ ಅದೂ ಸರಿಯಾಗುವುದಿಲ್ಲ, ಏಕೆಂದರೆ ಮೊದಲು ಸಿದ್ಧವಾಗದ ಅಲಬ್ಧಾತ್ಮಕವಾದ ಕಾರ್ಯಕ್ಕೆ ಕಾರಣದೊಡನೆ ಸಂಬಂಧವು ಹೊಂದುವುದಿಲ್ಲ. ಸಂಬಂಧವು ಎರಡನ್ನು ಆಶ್ರಯಿಸಿಕೊಂಡಿರಬೇಕು. ಕಾರ್ಯವು ಮೊದಲು ಸಿದ್ಧವಾಗಿ ಅನಂತರ ಕಾರಣದೊಂದಿಗೆ ಸಂಬಂಧವಾಗುವುದೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಕಾರಣದೊಡನೆ ಸಂಬಂಧವಾಗುವುದಕ್ಕೆ ಮೊದಲೇ ಕಾರ್ಯಕ್ಕೆ ಸಿದ್ಧಿಯನ್ನು ಒಪ್ಪಿಕೊಂಡರೆ ಅಯುತಸಿದ್ಧಿಯಿಲ್ಲದಿರುವುದರಿಂದ ಕಾರ್ಯ-ಕಾರಣಗಳಿಗೆ ಸಂಯೋಗ-ವಿಯೋಗಗಳಿಲ್ಲ ಎಂಬುದು ದುರುಕ್ತಿಯಾಗುತ್ತದೆ. ಕಾರಣದ್ರವ್ಯದೊಂದಿಗೆ ಕಾರ್ಯಕ್ಕೆ ಆಗುವ ಸಂಬಂಧವು ಸಂಯೋಗವೇ ಹೊರತು ಸಮವಾಯವಲ್ಲ. ಇದಲ್ಲದ ಸಂಯೋಗ ಅಥವಾ ಸಮವಾಯ ಎಂಬ ಸಂಬಂಧವು ಸಂಬಂಧಿಗಳಿಗಿಂತ ಬೇರೆಯಾಗಿದೆಯೆನ್ನುವುದಕ್ಕೆ ಯಾವ ಪ್ರಮಾಣವೂ ಇಲ್ಲ. ಉಪಲಬ್ಧಿಪ್ರಮಾಣದಿಂದ ಮಾತ್ರ ಸಿದ್ಧವಾಗಬೇಕಾದ ಸಂಯೋಗವೇ ಮೊದಲಾದುವು ಕಾಣದ ಇರುವುದರಿಂದ ಅವು ಇಲ್ಲ ಎನ್ನಬೇಕು. ಮತ್ತೆ ಅಣು ಆತ್ಮ ಮನಸ್ಸು—ಇವುಗಳಿಗೆ ಅವಯವಗಳಿಲ್ಲದುದರಿಂದ ಸಂಯೋಗವು ಹೊಂದುವುದಿಲ್ಲ, ಏಕೆಂದರೆ ಅವಯವಗಳುಳ್ಳ ದ್ರವ್ಯಕ್ಕೆ ಮಾತ್ರ ಸಂಯೋಗವು ಸಾಧ್ಯವಾಗುತ್ತದೆ. ಹೀಗೆ ಅಸಾರತರವಾದ ತರ್ಕದಿಂದ ಆಧಾರವನ್ನು ಪಡೆದಿರುವುದರಿಂದಲೂ ಈಶ್ವರನು ಜಗತ್ಕಾರಣನೆಂಬ ಶ್ರುತಿಗೆ ವಿರುದ್ಧವಾಗಿರುವುದರಿಂದಲೂ ಮನ್ವಾದಿಗಳು ಪರಿಗ್ರಹಿಸದೆ ಇರುವುದರಿಂದಲೂ ಶ್ರೇಯಸ್ಸನ್ನು ಬಯಸುವವರು ಈ ಪರಮಾಣುಕಾರಣವಾದದಲ್ಲಿ ಅತ್ಯಂತವಾಗಿ ಅನಾದರವನ್ನು ತೋರಿಸಬೇಕು.[2]

**ವಿ.**—ಕಾಣಾದಪಕ್ಷದಲ್ಲಿ ಯಾವ ಅಂಶವನ್ನೂ ಪರಿಗ್ರಹಿಸಲು ಸಾಧ್ಯವಿಲ್ಲದುದರಿಂದ ಅದನ್ನು ಅತ್ಯಂತವಾಗಿ ಉಪೇಕ್ಷಿಸಬೇಕು.

**ವೈ.**—ಪರಮಾಣುಕಾರಣವಾದವು ಶ್ರುತಿಸ್ಮೃತಿಗಳಿಂದ ಪರಿಗ್ರಹಿಸಲ್ಪಡದೆ ಇರುವುದರಿಂದಲೂ ಅವುಗಳಿಗೆ ವಿರುದ್ಧವಾಗಿರುವುದರಿಂದಲೂ ಅತಿಶಯವಾಗಿ ಅನಾದರಣೀಯವಾಗಿದೆ. 'ನಿರರ್ಥಕವೂ ಪ್ರತ್ಯಕ್ಷವನ್ನವಲಂಬಿಸಿರುವುದೂ ಆದ ತರ್ಕವಿದ್ಯೆಯಲ್ಲಿ ಅನುರಕ್ತನಾಗಿ (ಈ ಅವಸ್ಥೆಯನ್ನು ಹೊಂದಿರುತ್ತೇನೆ)' ಎಂದು ನರಿಯ ರೂಪದಲ್ಲಿದ್ದ ಇಂದ್ರನು ಮೋಕ್ಷಧರ್ಮದಲ್ಲಿ ಹೇಳುತ್ತಾನೆ.[3]

---

1 ಎಂದರೆ ಎರಡರಲ್ಲಿ ಒಂದಕ್ಕೆ ಮಾತ್ರ ಲಕ್ಷಣವು ಅನ್ವಯಿಸುತ್ತದೆ.

2 ತದೇವಮಸಾರತರತರ್ಕಸಂದೃಬ್ಧತ್ವಾದೀಶ್ವರಕಾರಣಶ್ರುತಿವಿರುದ್ಧತ್ವಾಚ್ಛ್ರುತಿಪ್ರವಣೈಶ್ಚ ಶಿಷ್ಟೈರ್ಮನ್ವಾದಿಭಿರಪರಿಗೃಹೀತತ್ವಾದತ್ಯಂತಮೇವಾನಪೇಕ್ಷಾಽಸ್ಮಿನ್ ಪರಮಾಣುಕಾರಣವಾದೇ ಕಾರ್ಯಾ ಶ್ರೇಯೋಽರ್ಥಿಭಿರಿತಿ ವಾಕ್ಯಶೇಷಃ (ಸೂ ಭಾ)

3 ಆನ್ವೀಕ್ಷಿಕೀಂ ತರ್ಕವಿದ್ಯಾಮನುರಕ್ತೋ ನಿರರ್ಥಿಕಾಮಿತಿ ಮೋಕ್ಷಧರ್ಮೇ (ಮು.ಭಾ)

## ೪. ಸಮುದಾಯಾಧಿಕರಣ

(ಸೂ. ೧೮–೨೭)

**ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ॥ ೧೮ ॥**

೧೮. ಸಮುದಾಯವು ಉಭಯಹೇತುಗಳುಳ್ಳದ್ದು (ಎಂದು ಭಾವಿಸಿದರೂ) ಅದು ಪ್ರಾಪ್ತವಾಗುವುದಿಲ್ಲ

ವೈನಾಶಿಕಸಿದ್ಧಾಂತವು (ಬೌದ್ಧಮತವು) ಬುದ್ಧಿಭೇದದಿಂದ ಅಥವಾ ಶಿಷ್ಯಭೇದದಿಂದ ಬಹುಪ್ರಕಾರವಾಗಿರುತ್ತದೆ. ಅದರಲ್ಲಿ ಮುಖ್ಯವಾದ ಮೂರು ವಿಧವಾದ ವಾದಿಗಳಿರುತ್ತಾರೆ: (೧) ಸರ್ವವಸ್ತುಗಳ ಅಸ್ತಿತ್ವವನ್ನು ಒಪ್ಪಿಕೊಳ್ಳುವ **ಸರ್ವಾಸ್ತಿವಾದಿಗಳು,** (೨) ಜ್ಞಾನದ ಅಸ್ತಿತ್ವವನ್ನು ಮಾತ್ರ ಒಪ್ಪಿಕೊಳ್ಳುವ **ವಿಜ್ಞಾನವಾದಿಗಳು,** (೩) ಸರ್ವವೂ ಶೂನ್ಯವು ಎಂದು ಒಪ್ಪಿಕೊಳ್ಳುವ **ಶೂನ್ಯವಾದಿಗಳು.**[1]

ಬಾಹ್ಯಾಂತರವಸ್ತುಗಳನ್ನೂ ಭೂತ-ಭೌತಿಕಗಳನ್ನೂ ಚಿತ್ತ-ಚೈತ್ತಗಳನ್ನೂ[2] ಒಪ್ಪಿಕೊಳ್ಳುವ ಸರ್ವಾಸ್ತಿವಾದಿಗಳ ಮತವನ್ನು ಮೊದಲು ಖಂಡಿಸಿದೆ. ಈ ಮತದಲ್ಲಿ ಭೂತವೆಂದರೆ ಪೃಥ್ವಿಯೇ ಮೊದಲಾದವು, ಭೌತಿಕವೆಂದರೆ ರೂಪಾದಿಗಳು ಮತ್ತು ಚಕ್ಷುಸ್ಸೇ ಮೊದಲಾದ ಇಂದ್ರಿಯಗಳು. ಗಟ್ಟಿಯೂ ಒದ್ದೆಯೂ ಉಷ್ಣವೂ ಚಲನಸ್ವಭಾವವೂ ಆದ ಪೃಥಿವ್ಯಾದಿಪರಮಾಣುಗಳು ಸೇರಿಕೊಂಡು ಪೃಥಿವ್ಯಾದಿಗಳಾಗುತ್ತವೆ. ರೂಪ ವಿಜ್ಞಾನ ವೇದನಾ ಸಂಜ್ಞಾ ಸಂಸ್ಕಾರ—ಇವು ಆಂತರಿಕವಾದ ಸ್ಕಂಧಗಳು ; ಇವೆಲ್ಲ ಒಟ್ಟು ಸೇರಿ ಸರ್ವವ್ಯವಹಾರಕ್ಕೂ ಆಶ್ರಯವಾಗಿವೆ.

ಈ ಮತದ ಖಂಡನೆ ಹೀಗಿದೆ . ಅಣುಗಳನ್ನೇ ಕಾರಣವಾಗಿ ಉಳ್ಳ ಭೂತ-ಭೌತಿಕ-ಸಮುದಾಯವಾಗಲಿ ಸ್ಕಂಧಗಳನ್ನೇ ಕಾರಣವಾಗಿ ಉಳ್ಳ ಪಂಚಸ್ಕಂಧೀಭೂತವಾದ ಸಮುದಾಯವಾಗಲಿ ಸಮುದಾಯಭಾವವನ್ನೇ ಹೊಂದುವುದಿಲ್ಲ, ಏಕೆಂದರೆ ಸಮುದಾಯಿಗಳು (ಎಂದರೆ ಸಮುದಾಯವನ್ನು ಒಳಕೊಂಡಿರುವ ಅವಯವಗಳು) ಅಚೇತನವಾಗಿವೆ , ಮತ್ತೆ ಚಿತ್ತದ ಜ್ವಲನವು ಸಮುದಾಯದ ಸಿದ್ಧಿಯನ್ನು ಅವಲಂಬಿಸಿದೆ ; ಪುನಃ ಭಿನ್ನವೂ ಚೇತನವೂ ಆದ ಭೋಕ್ತೃವಾಗಲಿ ಸ್ಥಿರವಾದ ಪ್ರಶಾಸಿತೃವಾಗಲಿ ಅವುಗಳನ್ನು ಸೇರಿಸುವನೆಂದು ವೈನಾಶಿಕರು ಒಪ್ಪಿಕೊಳ್ಳದಿರುವುದರಿಂದ ಯಾವುದನ್ನೂ ಅಪೇಕ್ಷಿಸದೆ

---

1 ಶೂನ್ಯವಾದಿಗಳಿಗೆ ಮಾಧ್ಯಮಿಕರೆಂದು ಹೆಸರು ; ವಿಜ್ಞಾನವಾದಿಗಳಿಗೆ ಯೋಗಾಚಾರರೆಂದು ಹೆಸರು ; ಸೌತ್ರಾಂತಿಕರೂ ವೈಭಾಷಿಕರೂ ಒಟ್ಟುಸೇರಿ ಸರ್ವಾಸ್ತಿವಾದಿಗಳೆನಿಸಿರುವರು.

2 ಚಿತ್ತಕ್ಕೆ ಸಂಬಂಧಪಟ್ಟದ್ದು ಚೈತ್ತ.

ಪ್ರವೃತ್ತಿಯುಂಟಾದರೆ ಅಂಥ ಪ್ರವೃತ್ತಿಯು ನಿಲ್ಲುವುದೇ ಇಲ್ಲ ಆಶಯವೂ[1] ಸಮು-ದಾಯಕ್ಕೆ ಕಾರಣವಲ್ಲ; ಏಕೆಂದರೆ ಅದು ಜ್ಞಾನಕ್ಕಿಂತ ಅನ್ಯವೂ ಅಲ್ಲ, ಅನನ್ಯವೂ ಅಲ್ಲ. ಮತ್ತೆ ಆಶಯವು ಕ್ಷಣಿಕವಾಗಿರುವುದರಿಂದ ಅದಕ್ಕೆ ಪ್ರವೃತ್ತಿಯುಂಟಾಗುವುದಿಲ್ಲ. ಆದುದರಿಂದ ಸಮುದಾಯವು ಹೊಂದುವುದಿಲ್ಲ ಸಮುದಾಯವು ಹೊಂದದಿದ್ದರೆ ಅದನ್ನಾಶ್ರಯಿ-ಸಿರುವ ಲೋಕಯಾತ್ರೆಯೇ ನಿಂತುಹೋಗುತ್ತದೆ.

ವಿ.—'ಅಣುಗಳೇ ಕಾರಣವಾಗಿ ಉಳ್ಳ ಪೃಥಿವ್ಯಾದಿಗಳ ಸಮುದಾಯ ಮತ್ತು ಭೂತಗಳೇ ಕಾರಣವಾಗಿ ಉಳ್ಳ ಶರೀರೇಂದ್ರಿಯಗಳ ಸಮುದಾಯ—ಈ ಉಭಯಹೇತುಗಳುಳ್ಳ ಸಮುದಾಯವನ್ನು ಒಪ್ಪಿಕೊಂಡರೂ ಸೃಷ್ಟಿಯು ಸಿದ್ಧಿಸುವುದಿಲ್ಲ' ಎಂಬುದು ಸೂತ್ರಾರ್ಥ.

ಪರಮಾಣುಗಳೂ ಪೃಥಿವ್ಯಾದಿಭೂತಗಳೂ ಕ್ಷಣಿಕವಾದರೆ ಕ್ಷಣಧ್ವಂಸಿಗಳಾದ ಪರಮಾಣುಗಳೂ ಭೂತಗಳೂ ಯಾವಾಗ ಸೇರಲು ಪ್ರವೃತ್ತವಾಗುತ್ತವೆ ಮತ್ತು ಯಾವಾಗ ಸೇರುತ್ತವೆ ? ಮತ್ತು ಅವು ಯಾವಾಗ ಜ್ಞಾನಕ್ಕೆ ವಿಷಯವಾಗುತ್ತವೆ ? ಅವು ಯಾವಾಗ ಗ್ರಹಣ-ಅಗ್ರಹಣಗಳಿಗೆ ಆಸ್ಪದವಾಗುತ್ತವೆ ? ಯಾವನು ವಿಜ್ಞಾನಾತ್ಮನು ? ಯಾವನು ಇಂದ್ರಿಯಗಳ ಮೂಲಕ ಯಾವ ವಿಷಯಗಳನ್ನು ಯಾವಾಗ ಮುಟ್ಟುತ್ತಾನೆ ? ಏಕೆಂದರೆ ಚೇತನನು ನಾಶವಾಗುತ್ತಾನೆ, ಚೇತನದ ವಿಷಯವೂ ನಾಶವಾಗುತ್ತವೆ; ಜ್ಞಾತೃವೂ ಜ್ಞೇಯವೂ ನಾಶವಾಗುತ್ತವೆ. ಒಬ್ಬನು ಇಂದ್ರಿಯಗಳ ಮೂಲಕ ಗ್ರಹಿಸಿದ್ದನ್ನು ಇನ್ನೊಬ್ಬನು ಹೇಗೆ ಅರಿಯುತ್ತಾನೆ ? ಪ್ರತಿಯೊಂದು ಜ್ಞಾನಪ್ರವಾಹವೂ ಒಂದೇ ಎಂದು ಒಪ್ಪಿಕೊಂಡರೂ ವ್ಯವಹಾರಗಳು ಹೊಂದುವುದಿಲ್ಲ; ಏಕೆಂದರೆ ಜ್ಞಾನಪ್ರವಾಹವು ಪ್ರವಾ-ಹದ ಅವಯವಗಳಿಗಿಂತ ಬೇರೆಯಾಗುವುದಿಲ್ಲ. ನಿಜವಾಗಿ ಇವರ ಮತದಲ್ಲಿ ಅಹಂಕಾರವೇ ಆತ್ಮನೂ ಜ್ಞಾತೃವೂ ಆಗಿದೆ.[2]

ದ್ವೈ.—'ಸಮುದಾಯಗಳಿಂದ ಸಮುದಾಯಗಳು ಉತ್ಪನ್ನವಾಗಿವೆ ಅಥವಾ ಅಣುಗಳಿಂದ ಸಮುದಾಯವು ಉತ್ಪನ್ನವಾಗಿದೆ—ಎಂದು ಹೇಳಿದರೂ ಸಮುದಾಯವು ಸಿದ್ಧಿಸುವುದಿಲ್ಲ' ಎಂಬುದು ಸೂತ್ರಾರ್ಥ.

ಒಂದು ಅಣುವಿನಿಂದ ಸಮುದಾಯವು ಆಗುವುದಿಲ್ಲ. ಅಣುಗಳ ಪರಸ್ಪರ ಕಾರ್ಯದಿಂದ ಸಮುದಾಯವು ಸಿದ್ಧಿಸುವುದೆಂದು ಹೇಳಿದರೆ ಅನ್ಯೋನ್ಯಾಶ್ರಯದೋಷವು ಒದಗುತ್ತದೆ. ಆದುದರಿಂದ ಸಮುದಾಯವು ಪ್ರಾಪ್ತವಾಗುವುದಿಲ್ಲ.[3] ಅನ್ಯಥಾ ಸಮುದಾಯವು ಸರ್ವದಾ ಇರುತ್ತದೆ.

---

[1] ಆಲಯವಿಜ್ಞಾನದ ಪ್ರವಾಹ; 'ನಾನು' ಎಂಬ ಪ್ರತ್ಯಯಗಳ ಸಂತಾನ.

[2] ಅಹಮರ್ಥ ಏವಾತ್ಮಾ. ಸ ಚ ಜ್ಞಾತೈವೇತಿ (ಶ್ರೀಭಾಷ್ಯ).

[3] ಉಭಯಹೇತುಕೇಽಪ್ಯನ್ಯೋನ್ಯಾಶ್ರಯಾತ್ ತದಪ್ರಾಪ್ತಿಃ (ಮ. ಭಾ.).

**ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್* || ೧೯ ||**

೧೯ (ಅವಿದ್ಯಾದಿಗಳು) ಒಂದಕ್ಕೊಂದು ಕಾರಣವಾಗಿರುವುದರಿಂದ (ಅಣ್ವಾದಿಗಳ ಸಂಘಾತವೂ ಆಗಬಹುದು) ಎಂದರೆ ಅದು ಸರಿಯಲ್ಲ ; ಏಕೆಂದರೆ ಅವು ಉತ್ಪತ್ತಿಗೆ ಮಾತ್ರ ನಿಮಿತ್ತವಾಗಿವೆ

ಸ್ಥಿರನಾದ ಚೇತನನು ಇಲ್ಲದಿದ್ದರೂ ಅವಿದ್ಯೆ ಸಂಸ್ಕಾರ ವಿಜ್ಞಾನ ನಾಮರೂಪ-ಷಡಾಯತನ ಸ್ಪರ್ಶ ವೇದನೆ ತೃಷ್ಣೆ ಉಪಾದಾನ ಭವ ಜಾತಿ ಜರಾ-ಮರಣ ಶೋಕ ಪರಿದೇವನೆ ದುಃಖ ದೌರ್ಮನಸ್ಯ,[1] ಇವುಗಳು ಒಂದಕ್ಕೊಂದು ಕಾರಣವಾಗಿರುವುದರಿಂದ ಲೋಕಯಾತ್ರೆಯು ನಡೆಯಬಹುದು—ಎಂದು ಬೌದ್ಧನು ಆಕ್ಷೇಪಿಸಿದರೆ ಅದು ಸರಿಯಲ್ಲ; ಏಕೆಂದರೆ ಇವು ಉತ್ಪತ್ತಿಗೆ ಮಾತ್ರ ನಿಮಿತ್ತವಾಗಿರುವುವೇ ಹೊರತು ಸಂಘಾತಕ್ಕೆ ಕಾರಣವಾಗಿಲ್ಲ. ಅವಿದ್ಯಾದಿಗಳು ಸಂಘಾತವನ್ನು ಅಪೇಕ್ಷಿಸದೆ ಸ್ವರೂಪವನ್ನು ಹೊಂದುವುದಿಲ್ಲವಾದುದರಿಂದ ಸಂಘಾತವನ್ನು ಅಪೇಕ್ಷಿಸುತ್ತವೆ ಎಂಬುದು ಬೌದ್ಧನ ಅಭಿಪ್ರಾಯವಾದರೆ ಆಗ ಸಂಘಾತಕ್ಕೆ ನಿಮಿತ್ತವನ್ನು ಹೇಳಬೇಕಾಗುವುದು. ಆ ನಿಮಿತ್ತವು ನಿತ್ಯವಾದ ಅಣುಗಳನ್ನೂ ಅದೃಷ್ಟಕ್ಕೆ ಆಶ್ರಯವಾಗಿರುವ ಭೋಕ್ತೃಗಳನ್ನೂ ಒಪ್ಪಿಕೊಂಡರೂ ಸಂಭವಿಸುವುದಿಲ್ಲವೆಂದು ಹಿಂದೆ ವೈಶೇಷಿಕಪರೀಕ್ಷೆಯಲ್ಲಿ ಹೇಳಿದ್ದಾಯಿತು. ಇನ್ನು ಅಣುಗಳು ಕ್ಷಣಿಕವೂ ಭೋಕ್ತೃರಹಿತವೂ ಆಗಿರುವಾಗ ಆ ನಿಮಿತ್ತವು ಉಂಟಾಗುವುದಿಲ್ಲವೆಂದು ಹೇಳಬೇಕಾಗಿಲ್ಲ ಅವಿದ್ಯಾದಿಗಳೇ ಸಂಘಾತಕ್ಕೆ ನಿಮಿತ್ತವೆಂಬುದು ಬೌದ್ಧನ ಅಭಿಪ್ರಾಯವಾದರೆ ಅದನ್ನೇ ಆಶ್ರಯಿಸಿ ಸ್ವರೂಪವನ್ನು ಹೊಂದುವ ಅವಿದ್ಯಾದಿಗಳು ಅದಕ್ಕೆ ಹೇಗೆ ತಾನೇ ನಿಮಿತ್ತವಾಗುತ್ತವೆ ? ಅಥವಾ ಅನಾದಿಯಾದ ಸಂಸಾರದಲ್ಲಿ ಸಂಘಾತಗಳೇ ಸಂತತವಾಗಿರುತ್ತವೆ, ಅವನ್ನಾಶ್ರಯಿಸಿ ಅವಿದ್ಯಾದಿಗಳು ಇರುತ್ತವೆ ಎಂದು ಪೂರ್ವಪಕ್ಷಿಯು ಹೇಳಿದರೆ, ಆಗ ಒಂದು ಸಂಘಾತದಿಂದ ಮತ್ತೊಂದು ಸಂಘಾತವು ಹುಟ್ಟುವಾಗ ನಿಯಮವಾಗಿ ಅಂಥ ಸಂಘಾತವೇ ಹುಟ್ಟುತ್ತದೆಯೊ ಅಥವಾ ನಿಯಮವಿಲ್ಲದೆ ಸದೃಶವಾಗಿಯೊ

---

* ಶ್ರೀಭಾಷ್ಯದಲ್ಲಿ ಈ ಸೂತ್ರದ ಪಾಠ ಬೇರೆಯಾಗಿದೆ ; ವಿ. ನೋಡಿ.

[1] ಆರು ಧಾತುಗಳಲ್ಲಿರುವ ಅಹಂಕಾರ-ಮಮಕಾರಗಳು ಅವಿದ್ಯೆ ; ರಾಗದ್ವೇಷಮೋಹಗಳು ಸಂಸ್ಕಾರಗಳು ; ವಸ್ತುವಿನ ಜ್ಞಾನವು ವಿಜ್ಞಾನವು , ವಿಜ್ಞಾನದಿಂದಾಗುವ ನಾಲ್ಕು ಉಪಾದಾನಸ್ಕಂಧಗಳು ನಾಮವು ; ಅವುಗಳಿಂದ ರೂಪವು ಉಂಟಾಗುತ್ತದೆ. ನಾಮರೂಪಗಳಿಂದ ಮಿಶ್ರಿತವಾದ ಇಂದ್ರಿಯಗಳೇ ಷಡಾಯತನ ; ನಾಮರೂಪೇಂದ್ರಿಯಗಳಿಂದ ಸ್ಪರ್ಶ, ಸ್ಪರ್ಶದಿಂದ ವೇದನೆ, ಅದರಿಂದ ತೃಷ್ಣೆ, ಅದರಿಂದ ಉಪಾದಾನವೆಂಬ ವಾಕ್ಕಾಯವ್ಯಾಪಾರ ; ಅದರಿಂದ ಧರ್ಮಾಧರ್ಮಗಳೆಂಬ ಭವ, ಅದರಿಂದ ಜಾತಿ ಅಥವಾ ಜನ್ಮ, ಅದರಿಂದ ಜರಾಮರಣಗಳು ; ಹುಟ್ಟಿದ ಸ್ಕಂಧಗಳ ಪರಿಪಕ್ವತೆ ಜರೆ, ಸ್ಕಂಧಗಳ ನಾಶ ಮರಣ ; ಶೋಕ ಪರಿದೇವನೆ ದುಃಖ ದೌರ್ಮನಸ್ಯ—ಇವು ನಾನಾವಿಧವಾದ ದುಃಖಗಳು.

ವಿಸದೃಶವಾಗಿಯೊ ಹುಟ್ಟುತ್ತದೆಯೊ ? ಮೊದಲನೆಯ ಪಕ್ಷದಲ್ಲಿ ಮನುಷ್ಯದೇಹಕ್ಕೆ ದೇವತಿರ್ಯಗಾದಿಯೋನಿಗಳು ಪ್ರಾಪ್ತವಾಗುವುದಿಲ್ಲ ; ಎರಡನೆಯ ಪಕ್ಷದಲ್ಲಿ ಮನುಷ್ಯ ದೇಹವು ಒಂದು ಕ್ಷಣದಲ್ಲಿ ಆನೆಯಾಗಿ ಮತ್ತೊಂದು ಕ್ಷಣದಲ್ಲಿ ದೇವನೊ ಮನುಷ್ಯನೊ ಆಗಬೇಕಾಗುತ್ತದೆ. ಈ ಎರಡೂ ಬೌದ್ಧಮತಕ್ಕೆ ವಿರುದ್ಧವಾಗಿವೆ. ಬೌದ್ಧಮತದಲ್ಲಿ ಸ್ಥಿರನಾದ ಭೋಕ್ತೃವಿಲ್ಲದಿರುವುದರಿಂದ ಭೋಗವು ಭೋಗಕ್ಕಾಗಿಯೇ ಹೊರತು ಬಯಸಿ ದವನಿಗಲ್ಲ ; ಮೋಕ್ಷವು ಮೋಕ್ಷಕ್ಕಾಗಿಯೇ ಹೊರತು ಮುಮುಕ್ಷುವಿಗಲ್ಲ. ಒಬ್ಬನು ಭೋಗ-ಮೋಕ್ಷಗಳೆರಡನ್ನೂ ಬಯಸಿದರೆ ಅವನು ಆಯಾಕಾಲಗಳಲ್ಲಿ ಇರಬೇಕಾಗುವುದು ಇದು ಕ್ಷಣಿಕತ್ವವನ್ನು ಒಪ್ಪಿಕೊಂಡಿರುವ ಬೌದ್ಧಮತಕ್ಕೆ ವಿರುದ್ಧವಾಗಿರುವುದು. ಆದುದ ರಿಂದ ಅವಿದ್ಯಾದಿಗಳು ಪರಸ್ಪರ ಉತ್ಪತ್ತಿಗೆ ನಿಮಿತ್ತವಾಗಬಹುದೇ ಹೊರತು ಸಂಘಾತವು ಸಿದ್ಧಿಸುವುದಿಲ್ಲ ; ಏಕೆಂದರೆ ಬೌದ್ಧಮತದಲ್ಲಿ ಸ್ಥಿರನಾದ ಭೋಕ್ತೃವಿಲ್ಲ [1]

**ವಿ.**—ಇತರೇತರ ಪ್ರತ್ಯಯತ್ವಾದುಪಪನ್ನಮಿತಿ ಚೇನ್ನ ಸಂಘಾತಭಾವಾನಿಮಿತ್ತತ್ವಾತ್ ॥ ೨. ೨ ೧೯ ॥

೧೯. (ಅವಿದ್ಯಾದಿಗಳ) ಅನ್ಯೋನ್ಯಕಾರಣತ್ವದಿಂದ (ಸಂಘಾತವು) ಹೊಂದುತ್ತದೆ ಎಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಅವು ಸಂಘಾತಗಳಿಗೆ ಕಾರಣವಲ್ಲ.

**ಪೂರ್ವಪಕ್ಷಿ**—ಭಾವಗಳೆಲ್ಲ ಕ್ಷಣಿಕವಾಗಿದ್ದರೂ ಅವಿದ್ಯೆಯಿಂದಲೇ ಎಲ್ಲವೂ ಉಪಪನ್ನವಾಗುತ್ತವೆ. ಅವಿದ್ಯೆಯೆಂದರೆ ವಿಪರೀತಬುದ್ಧಿ, ಕ್ಷಣಿಕವಸ್ತುಗಳಲ್ಲಿ ನಿತ್ಯತ್ವ ವನ್ನು ನೋಡುವುದು. ಅವಿದ್ಯೆಯಿಂದ ರಾಗದ್ವೇಷಾದಿಸಂಸ್ಕಾರಗಳು ಹುಟ್ಟುತ್ತವೆ ; ಅವು ಗಳಿಂದ ಚಿತ್ತವನ್ನು ಜ್ವಲಿಸುವ ವಿಜ್ಞಾನ ; ಅದರಿಂದ ಚಿತ್ತ-ಚೈತ್ತಗಳು ; ಅವುಗಳಿಂದ ಪೃಥಿವ್ಯಾದಿ ರೂಪಿದ್ರವ್ಯಗಳು ; ಅವುಗಳಿಂದ ಷಡಾಯತನವೆನಿಸಿದ ಇಂದ್ರಿಯಗಳು ; ಅವು ಗಳಿಂದ ಸ್ಪರ್ಶವೆನಿಸಿದ ಶರೀರ ; ಅದರಿಂದ ವೇದನಾದಿಗಳು ; ಅವುಗಳಿಂದ ಪುನಃ ಅವಿದ್ಯಾದಿ ಗಳು. ಹೀಗೆ ಈ ಚಕ್ರದಲ್ಲಿ ಅವಿದ್ಯಾದಿಗಳು ಅನ್ಯೋನ್ಯಕಾರಣಗಳಾಗಿರುತ್ತವೆ. ಇವೆಲ್ಲ ಪೃಥಿವ್ಯಾದಿ-ಭೂತಭೌತಿಕ-ಸಂಘಾತಗಳಿಲ್ಲದಿದ್ದರೆ ಸಾಧ್ಯವಾಗುತ್ತಿರಲಿಲ್ಲ. ಆದುದರಿಂದ ಸಂಘಾತವು ಹೊಂದುತ್ತದೆ.

**ಸಿದ್ಧಾಂತಿ**—ಇದು ಸರಿಯಲ್ಲ ; ಏಕೆಂದರೆ ಅವಿದ್ಯಾದಿಗಳು ಪೃಥಿವ್ಯಾದಿಭೂತ-ಭೌತಿಕ-ಸಂಘಾತಕ್ಕೆ ನಿಮಿತ್ತಕಾರಣವಾಗುವುದಿಲ್ಲ. ವಿಪರೀತಸ್ವಭಾವವುಳ್ಳ ಅವಿದ್ಯೆಯೂ ಅದರಿಂದಲೇ ಉತ್ಪನ್ನವಾಗುವ ರಾಗದ್ವೇಷಾದಿಗಳೂ ಇತರಕ್ಷಣಿಕ-ವಸ್ತುಗಳ ಸಂಘಾತಕ್ಕೆ ಕಾರಣವಾಗುವುದಿಲ್ಲ. 'ಕಪ್ಪೆಯ ಚಿಪ್ಪು ಬೆಳ್ಳಿ' ಎಂಬ ಭ್ರಾಂತಿಗೆ ಕಾರಣವಾದ ಬುದ್ಧಿ

---

[1] ತಸ್ಮಾದಿತರೇತರೋತ್ಪತ್ತಿಮಾತ್ರನಿಮಿತ್ತತ್ವಮವಿದ್ಯಾದೀನಾಂ ಯದಿ ಭವೇದ್ಭವತು ನಾಮ ನ ತು ಸಂಘಾತಃ ಸಿದ್ಧ್ಯೇತ್ । ಭೋಕ್ತ್ರಭಾವಾದಿತ್ಯಭಿಪ್ರಾಯಃ (ಸೂ. ಭಾ.).

ಕಪ್ಪೆಯ ಚಿಪ್ಪು ಮೊದಲಾದ ಸಂಘಾತಕ್ಕೆ ಕಾರಣವಾಗದಂತೆ ಪುನಃ ಕ್ಷಣಿಕಸಸ್ತುವು ಸ್ಥಿರವೆಂದು ತಿಳಿದುಕೊಂಡಿರುವವನೂ ಆ ಕ್ಷಣದಲ್ಲಿಯೇ ನಾಶವಾಗುತ್ತಾನೆ. ಹೀಗಿರುವಾಗ ರಾಗಾದಿಗಳು ಯಾರಿಗೆ ಉತ್ಪನ್ನವಾಗುತ್ತವೆ? ಸಂಸ್ಕಾರಗಳಿಗೆ ಆಶ್ರಯವಾದ ಸ್ಥಿರದ್ರವ್ಯವನ್ನು ಒಪ್ಪಿಕೊಳ್ಳದಿರುವವನಿಗೆ ಸಂಸ್ಕಾರಗಳ ಸಂತತಿಯನ್ನು ಕಲ್ಪಿಸಲು ಸಾಧ್ಯವಿಲ್ಲ.[1]

ವೈ.—ಸಮುದಾಯವು ಯಾವಾಗಲೂ ಇರುತ್ತದೆ. ಅದರ ಅವಯವಗಳಾದ ಪರಮಾಣುಗಳ ಅನ್ಯೋನ್ಯಾಪೇಕ್ಷೆಯಿಂದ ಸಮುದಾಯವೆಂಬ ವ್ಯವಹಾರವುಂಟಾಗುತ್ತದೆ—ಎಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಕ್ಷಣಿಕವಾದ ಪ್ರತಿಯೊಂದು ಪರಮಾಣುವೂ ತನ್ನ ಕಾರ್ಯವನ್ನು ಉತ್ಪಾದಿಸಿ ಕೂಡಲೇ ನಷ್ಟವಾಗುತ್ತದೆ. ಆದುದರಿಂದ ಮೊದಲು 'ಇದು, ಇದು' ಎಂದು ಬೇರೆ ಬೇರೆ ಕಂಡುಬರುವ ಅಣುಗಳನ್ನು ಅವುಗಳ ಅನ್ಯೋನ್ಯಾಪೇಕ್ಷೆಯಿಂದ ನೋಡುವುದು ಮತ್ತು ಅವುಗಳನ್ನು ಸಮುದಾಯವೆಂದು ವ್ಯವಹರಿಸುವುದು-ಇವಾವುವೂ ಹೊಂದುವುದಿಲ್ಲ. ಕಾರಣವಿದ್ದ ಮೇಲೆ ಕಾರ್ಯವುಂಟಾಗಬೇಕೆಂಬುದು ಕ್ಷಣಭಂಗುರವಾದಿಯ ನಿಯಮ.

## ಉತ್ತರೋತ್ಪಾದೇ ಚ ಪೂರ್ವನಿರೋಧಾತ್ || ೨೦ ||

೨೦. ಮತ್ತು ಉತ್ತರ (ಕ್ಷಣವು) ಹುಟ್ಟುವಾಗ ಪೂರ್ವ (ಕ್ಷಣವು) ನಾಶವಾಗುವುದರಿಂದ (ಕಾರ್ಯ-ಕಾರಣ-ಭಾವವು ಇರುವುದಿಲ್ಲ)

ಉತ್ತರಕ್ಷಣವು ಹುಟ್ಟುವಾಗ ಪೂರ್ವಕ್ಷಣವು ನಾಶವಾಗುತ್ತದೆ ಎಂದು ಕ್ಷಣಭಂಗವಾದಿಯು ಒಪ್ಪಿಕೊಂಡಿರುವುದರಿಂದ ಪೂರ್ವೋತ್ತರಕ್ಷಣಗಳಿಗೆ[2] ಕಾರ್ಯಕಾರಣಭಾವವನ್ನು ಸಾಧಿಸುವುದಕ್ಕಾಗುವುದಿಲ್ಲ; ಏಕೆಂದರೆ ನಾಶವಾಗುತ್ತಿರುವ ಅಥವಾ ನಾಶವಾದ ಪೂರ್ವಕ್ಷಣವು ಅಭಾವವನ್ನು ಹೊಂದಿರುವುದರಿಂದ ಉತ್ತರಕ್ಷಣಕ್ಕೆ ಕಾರಣವಾಗಲಾರದು. ಭಾವವೇ[3] ಅದರ ವ್ಯಾಪಾರವು ಎಂಬುದೂ ಸರಿಯಾಗುವುದಿಲ್ಲ; ಏಕೆಂದರೆ ಕಾರಣಸ್ವರೂಪದಿಂದ ಅನುರಕ್ತವಾಗದಿದ್ದರೆ ಫಲದ ಉತ್ಪತ್ತಿಯು ಸಂಭವಿಸುವುದಿಲ್ಲ. ಕಾರಣಸ್ವರೂಪದ ಅನುರಕ್ತಿಯನ್ನು ಒಪ್ಪಿಕೊಂಡರೆ ಅದು ಫಲಕಾಲದಲ್ಲಿಯೂ ಇರುವುದರಿಂದ ಕ್ಷಣಭಂಗವಾದವನ್ನು ಬಿಡಬೇಕಾಗುತ್ತದೆ. ಕಾರಣವು ಫಲಕ್ಕೆ ರಾಗವನ್ನು ಕೊಡದಿದ್ದರೂ ಕಾರ್ಯಕಾರಣಭಾವವಾಗುವುದೆಂದು ಒಪ್ಪಿಕೊಂಡರೆ ಅದು ಎಲ್ಲೆಲ್ಲಿಯೂ ಬಂದೊದಗಿ ಅತಿಪ್ರಸಂಗವಾಗುವುದು.

---

[1] ಸಂಸ್ಕಾರಾಶ್ರಯಂ ಸ್ಥಿರಮೇಕಂ ದ್ರವ್ಯಮನಭ್ಯುಪಗಚ್ಛತಾಂ ಸಂಸ್ಕಾರಾನುವೃತ್ತಿರಪಿ ನ ಶಕ್ಯಾ ಕಲ್ಪಯಿತುಮ್ (ಶ್ರೀಭಾಷ್ಯ).

[2] ಕ್ಷಣಿಕವಾದ ವಸ್ತುಗಳಿಗೆ.

[3] ಉತ್ಪತ್ತಿಯೇ.

ಬೌದ್ಧರು ಹೇಳುವ ಉತ್ಪತ್ತಿ-ನಿರೋಧಗಳು ವಸ್ತುವಿನ ಸ್ವರೂಪವೋ ಅಥವಾ ಅದರ ಬೇರೆ ಅವಸ್ಥೆಯೊ ಅಥವಾ ಬೇರೆ ವಸ್ತುವೊ ? ಮೊದಲನೆಯದಾಗಿದ್ದರೆ ವಸ್ತು-ಶಬ್ದಕ್ಕೂ ಉತ್ಪತ್ತಿ-ನಿರೋಧ-ಶಬ್ದಗಳಿಗೂ ಯಾವ ಭೇದವೂ ಇರುವುದಿಲ್ಲ ಎರಡನೆಯ ಪಕ್ಷದಲ್ಲಿ ಉತ್ಪತ್ತಿ-ನಿರೋಧ-ಪಕ್ಷಗಳು ಒಂದೇ ವಸ್ತುವಿನ ಆದಿ-ಅಂತಗಳಾಗಿದ್ದರೆ ವಸ್ತುವಿಗೆ ಆದಿ ಮಧ್ಯ-ಅಂತ ಎಂಬ ಮೂರು ಕ್ಷಣಗಳನ್ನು ಒಪ್ಪಿಕೊಳ್ಳಬೇಕಾಗಿ ವಸ್ತುವಿನ ಕ್ಷಣಿಕತ್ವವು ಹೋಗುತ್ತದೆ ಮೂರನೆಯ ಪಕ್ಷವನ್ನು ಒಪ್ಪಿಕೊಂಡರೆ ಉತ್ಪತ್ತಿ-ನಿರೋಧಗಳಿಗಿಂತ ಬೇರೆಯದಾದ ವಸ್ತುವು ಶಾಶ್ವತವಾಗಬೇಕಾಗುತ್ತದೆ ಆದುದರಿಂದ ಸೌಗತ-ಮತವು ಅಸಮಂಜಸವು

ವಿ —ಪೂರ್ವಕ್ಷಣವರ್ತಿತ್ವವೇ ಕಾರಣವೆಂದು ಹೇಳಲಾಗುವುದಿಲ್ಲ , ಹಾಗಾಗಿದ್ದರೆ ಪೂರ್ವಕಾಲದ ಘಟಕ್ಷಣವು ಉತ್ತರಕಾಲದಲ್ಲಿ ಬರುವ ಗೋಮಹಿಷಾದಿ-ಸಮಸ್ತವಸ್ತುಗಳಿಗೂ ಕಾರಣವಾಗುತ್ತಿದ್ದಿತು ಪೂರ್ವಕ್ಷಣದಲ್ಲಿರುವುದು ಉತ್ತರಕ್ಷಣದಲ್ಲಿರುವ ಅದೇ ಜಾತಿಯ ವಸ್ತುಗಳಿಗೆ ಕಾರಣವಾಗಿರುತ್ತದೆಯೆಂದು ಹೇಳಿದರೆ ಪೂರ್ವಕ್ಷಣದಲ್ಲಿದ್ದ ಒಂದು ಘಟವು ಉತ್ತರಕ್ಷಣದಲ್ಲಿರುವ ಎಲ್ಲ ಸ್ಥಳಗಳಲ್ಲಿರುವ ಘಟಗಳಿಗೂ ಕಾರಣವಾಗುತ್ತದೆಯೆಂದು ಹೇಳಬೇಕಾಗುವುದು ಒಂದು ವಸ್ತುವು ಇನ್ನೊಂದು ವಸ್ತುವಿಗೆ ಮಾತ್ರ ಕಾರಣವೆಂದು ಹೇಳಿದರೆ ಯಾವುದಕ್ಕೆ ಯಾವುದು ಕಾರಣವು ಎಂದು ಹೇಗೆ ಅರಿಯಬೇಕು ? ಒಂದು ಸ್ಥಾನದಲ್ಲಿರುವ ಕ್ಷಣಿಕವಾದ ಘಟವು ಅದೇ ಸ್ಥಾನದಲ್ಲಿರುವ ಇನ್ನೊಂದು ಉತ್ತರಕ್ಷಣದ ಘಟಕ್ಕೆ ಕಾರಣವೆಂದು ಹೇಳಿದರೆ ಸ್ಥಾನದ ಸ್ಥಿರತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ ಮತ್ತೆ ಚಕ್ಷುರಾದಿ ಇಂದ್ರಿಯಗಳೊಂದಿಗೆ ಸಂಬಂಧಿಸಿದ ವಸ್ತುವು ಜ್ಞಾನೋತ್ಪತ್ತಿಕಾಲದಲ್ಲಿ ಇಲ್ಲದಿರುವುದರಿಂದ ಯಾವ ವಸ್ತುವೂ ಜ್ಞಾನಕ್ಕೆ ವಿಷಯವೇ ಆಗುವುದಿಲ್ಲ [1]

ದ್ವೈ —ಕಾರ್ಯವನ್ನು ಉತ್ಪಾದಿಸಿದಮೇಲೆ ಕಾರಣವು ನಾಶವಾಗುವುದರಿಂದ ಅದು ವಿಶೇಷಕಾರ್ಯಗಳನ್ನು ಪುನಃ ಉತ್ಪಾದನೆಮಾಡಬಲ್ಲದು ಎಂದು ಹೇಳಲಾಗುವುದಿಲ್ಲ [2]

**ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ॥ ೨೧ ॥**

೨೧ (ಕಾರಣ)ವಿಲ್ಲದಿರುವಾಗ (ಕಾರ್ಯವು ಉತ್ಪನ್ನವಾದರೆ) ಪ್ರತಿಜ್ಞೆಗೆ ವಿರೋಧವಾಗುತ್ತದೆ, ಹಾಗಿಲ್ಲದಿದ್ದರೆ (ಕಾರಣ-ಕಾರ್ಯಗಳಿಗೆ) ಯೌಗಪದ್ಯವು ಉಂಟಾಗುತ್ತದೆ

---

1 ಕಿಂ ಚ ಚಕ್ಷುರಾದಿಸಂಪ್ರಯುಕ್ತಸ್ಯಾರ್ಥಸ್ಯ ಜ್ಞಾನೋತ್ಪತ್ತಿಕಾಲೇಽನವಸ್ಥಿತತ್ವಾನ್ನ ಕಸ್ಯಚಿದರ್ಥಸ್ಯ ಜ್ಞಾನವಿಷಯತ್ವಂ ಸಂಭವತಿ (ಶ್ರೀಭಾಷ್ಯ)

2 ಕಾರ್ಯೋತ್ಪತ್ತಾವೇವ ಕಾರಣಸ್ಯ ವಿನಾಶಾಚ್ಚ ನ ವಿಶೇಷಕಾರ್ಯೋತ್ಪತ್ತಿಃ (ಮ ಭಾ )

ಈಗ ಕಾರಣವಿಲ್ಲದೆಯೇ ಕಾರ್ಯವುಂಟಾಗುತ್ತದೆಂದು ಬೌದ್ಧನು ಹೇಳಿದರೆ ಅವನ ಪ್ರತಿಜ್ಞೆಗೆ ವಿರೋಧವಾಗುತ್ತದೆ. 'ನಾಲ್ಕು ಬಗೆಯಾದ ಕಾರಣಗಳ ಸಂಬಂಧದಿಂದ ಚಿತ್ತ-ಚೈತ್ತಗಳು ಉತ್ಪನ್ನವಾಗುವುವು'[1] ಎಂಬುದು ಅವನ ಪ್ರತಿಜ್ಞೆ. ಕಾರಣವಿಲ್ಲದೆ ಕಾರ್ಯವುಂಟಾಗುವುದಾದರೆ ಯಾವ ಪ್ರತಿಬಂಧವೂ ಇಲ್ಲದಿರುವುದರಿಂದ ಎಲ್ಲವೂ ಎಲ್ಲೆಲ್ಲಿಯೂ ಉತ್ಪನ್ನವಾಗಬಹುದು. ಪೂರ್ವಕ್ಷಣವು ಉತ್ತರಕ್ಷಣದ ಉತ್ಪತ್ತಿಯವರೆಗೂ ಇರುವುದೆಂದು ಹೇಳಿದರೆ ಆಗ ಕಾರಣ-ಕಾರ್ಯಗಳೂ ಒಟ್ಟಿಗೆ ಇರಬೇಕಾಗುವುದು ; ಇದು ಸಂಸ್ಕಾರಗಳೆಲ್ಲ ಕ್ಷಣಿಕವು ಎಂಬ ಬೌದ್ಧರ ಪ್ರತಿಜ್ಞೆಗೆ ವಿರೋಧವಾಗುತ್ತದೆ [2]

ವಿ.—ಪ್ರತಿಜ್ಞೆಯಿಂದ ತಪ್ಪಿಸಿಕೊಳ್ಳಲು ಹಿಂದಿನ ಕ್ಷಣಿಕವಾದ ಘಟವಿರುವಾಗ ಬೇರೊಂದು ಕ್ಷಣಿಕವಾದ ಘಟವು ಉತ್ಪನ್ನವಾಗುತ್ತದೆಂದು ಹೇಳಿದರೆ ಕಾರಣವಾದ ಘಟವೂ ಕಾರ್ಯವಾದ ಘಟವೂ ಒಂದೇ ಕಾಲದಲ್ಲಿ ಕಾಣಿಸಿಕೊಳ್ಳುವುವು ; ಆದರೆ ಹಾಗೆ ಕಾಣುವುದಿಲ್ಲ. ಮತ್ತೆ ಕ್ಷಣಿಕತ್ವಪ್ರತಿಜ್ಞೆಗೂ ಭಂಗವುಂಟಾಗುತ್ತದೆ ಹೀಗಲ್ಲ, ಕ್ಷಣಿಕತ್ವವೂ ಇರುತ್ತದೆ—ಎಂದು ಹೇಳಿದರೆ, ವಿಷಯಕ್ಕೂ ಜ್ಞಾನಕ್ಕೂ ಇರುವ ಇಂದ್ರಿಯಸಂಬಂಧವು ಒಂದೇ ಕಾಲದಲ್ಲಿ ಆಗುತ್ತದೆ [3]

ದ್ವೈ.—ಕಾರಣವು ನಾಶವಾದಮೇಲೆ ಕಾರ್ಯ ಉತ್ಪನ್ನವಾಗುತ್ತದೆಯೆಂದು ಹೇಳಿದರೆ ಕಾರ್ಯವಾಗುವಾಗ ಕಾರಣವು ಇರಲೇಬೇಕೆಂಬ ಪ್ರತಿಜ್ಞೆಗೆ ಹಾನಿಯಾಗುತ್ತದೆ [4] ಕಾರ್ಯೋತ್ಪತ್ತಿಕಾಲದಲ್ಲಿ ಕಾರಣವಿರುತ್ತದೆಂದು ಹೇಳಿದರೆ—ಕಾರ್ಯೋತ್ಪತ್ತಿಯು ಕಾರಣದ ನಾಶವಲ್ಲದ್ದರಿಂದ—ಕಾರ್ಯಗಳಿಗೆ ಅವಿಚ್ಛಿನ್ನವಾಗಿ ಉತ್ಪತ್ತಿಯಾಗಬೇಕಾಗುವುದು.

**ಪ್ರತಿಸಂಖ್ಯಾಽಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ॥ ೨೨ ॥**

೨೨. ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ—ಇವು ಪ್ರಾಪ್ತವಾಗುವುದಿಲ್ಲ ; ಏಕೆಂದರೆ ವಿಚ್ಛೇದವಿಲ್ಲ.

---

1 ಚತುರ್ವಿಧಾನ್ ಹೇತೂನ್ ಪ್ರತೀತ್ಯ ಚಿತ್ತಚೈತ್ತಾ ಉತ್ಪದ್ಯಂತೇ (ಸೂ. ಭಾ.). ಆಲಂಬನಪ್ರತ್ಯಯ, ಸಮನಂತರಪ್ರತ್ಯಯ, ಅಧಿಪತಿಪ್ರತ್ಯಯ ಮತ್ತು ಸಹಕಾರಿಪ್ರತ್ಯಯ ಎಂಬಿವು ನಾಲ್ಕು ಕಾರಣಗಳು.

2 ಕ್ಷಣಿಕಾಃ ಸರ್ವೇ ಸಂಸ್ಕಾರಾ ಇತೀಯಂ ಪ್ರತಿಜ್ಞೋಪರುಧ್ಯೇತ (ಸೂ. ಭಾ.).

3 ಕ್ಷಣಿಕತ್ವಂ ಸ್ಥಿತಮೇವೇತಿ ಚೇತ್, ಇಂದ್ರಿಯಸಂಪ್ರಯೋಗಜ್ಞಾನಯೋರ್ಯೌಗಪದ್ಯಂ ಪ್ರಸಜ್ಯೇತ (ಶ್ರೀಭಾಷ್ಯ).

4 ಕಾರಣೇ ವಿನಷ್ಟೇ ಕಾರ್ಯಮುತ್ಪದ್ಯತೇ ಚೇತ್ ತತ್ಕಾರ್ಯಮಿತಿ ಪ್ರತಿಜ್ಞಾಹಾನಿಃ (ಮ. ಭಾ.).

ಬುದ್ಧಿಗೆ ವಿಷಯವಾದುದಲ್ಲ ತ್ರಯಕ್ಕಿಂತ ಭಿನ್ನವೆಂದೂ ಉತ್ಪಾದ್ಯವೆಂದೂ ಕ್ಷಣಿಕವೆಂದೂ ಬೌದ್ಧರು ಕಲ್ಪಿಸಿಕೊಂಡಿರುತ್ತಾರೆ[1] ಪ್ರತಿಸಂಖ್ಯಾನಿರೋಧ, ಅಪ್ರತಿಸಂಖ್ಯಾನಿರೋಧ, ಆಕಾಶ—ಇವು ತ್ರಯವೆನಿಸಿವೆ ಈ ತ್ರಯವು ಅವಸ್ತುವೆಂದೂ ಅಭಾವಮಾತ್ರವೆಂದೂ ನಿರುಪಾಖ್ಯವೆಂದೂ[2] ಅವರು ಬಾವಿಸುತ್ತಾರೆ ಬುದ್ಧಿಪೂರ್ವಕವಾಗಿ ವಸ್ತುಗಳನ್ನು ನಾಶಗೊಳಿಸುವುದು ಪ್ರತಿಸಂಖ್ಯಾನಿರೋಧವು ವಸ್ತುಗಳು ತಮಗೆ ತಾವೇ ನಾಶವಾಗುವುದು ಅಪ್ರತಿಸಂಖ್ಯಾನಿರೋಧವು ಆವರಣವಿಲ್ಲದಿರುವುದೇ ಆಕಾಶವೆನಿಸುವುದು ಈ ತ್ರಯದಲ್ಲಿ ನಿರೋಧದ್ವಯವನ್ನು ಮಾತ್ರ ಇಲ್ಲಿ ಖಂಡಿಸಿದೆ

ವಿಚ್ಛೇದವಿಲ್ಲದಿರುವುದರಿಂದ ಪ್ರತಿಸಂಖ್ಯಾ-ಅಪ್ರತಿಸಂಖ್ಯಾ-ನಿರೋಧಗಳು ಸಂಭವಿಸುವುದಿಲ್ಲ ಈ ಎರಡು ನಿರೋಧಗಳೂ ಸಂತಾನಕ್ಕೆ[3] ವಿಷಯವಾಗಿರಬೇಕು, ಇಲ್ಲದಿದ್ದರೆ (ವೈಯಕ್ತಿಕ) ವಸ್ತುವಿಗೆ[4] ವಿಷಯವಾಗಿರಬೇಕು ಮೊದಲನೆಯದು ಸಂಭವಿಸುವುದಿಲ್ಲ, ಏಕೆಂದರೆ ಸಂತಾನಗಳಲ್ಲೆಲ್ಲ ಸಂತಾನಿಗಳು ವಿಚ್ಛೇದವಿಲ್ಲದೆ ಕಾರ್ಯ-ಕಾರಣ-ಭಾವದಿಂದಿರುವುದರಿಂದ ಸಂತಾನವಿಚ್ಛೇದವು ಸಂಭವಿಸುವುದಿಲ್ಲ[5] ಎರಡನೆಯದೂ ಸಂಭವಿಸುವುದಿಲ್ಲ, ವಸ್ತುಗಳಿಗೆ ನಿರನ್ವಯವೂ ನಿರುಪಾಖ್ಯವೂ ಆದ ನಾಶವು ಸಂಭವಿಸುವುದಿಲ್ಲ, ಏಕೆಂದರೆ ಎಲ್ಲ ಅವಸ್ಥೆಗಳಲ್ಲಿಯೂ ಅನ್ವಯಿಯು ವಿಚ್ಛೇದನವಾಗುವುದಿಲ್ಲವೆಂದು ಗುರುತಿಸಬಹುದು[6] ಆದ್ದರಿಂದ ಬೌದ್ಧರು ಕಲ್ಪಿಸಿರುವ ನಿರೋಧದ್ವಯವು ಉಪಪನ್ನವಾಗುವುದಿಲ್ಲ

ವಿ.—ಅಸದ್ವಸ್ತುವಿನಿಂದ ಉತ್ಪತ್ತಿಯಾಗುತ್ತದೆಂಬ ಅಭಿಪ್ರಾಯವನ್ನು ಹಿಂದೆ ಖಂಡಿಸಿದ್ದಾಯಿತು ಈಗ ಸದ್ವಸ್ತುವಿನ ಸಂಪೂರ್ಣನಾಶವು ಉಪಪನ್ನವಾಗುವುದಿಲ್ಲವೆಂದು ಸೂತ್ರವು ತಿಳಿಸುತ್ತದೆ ನಾಶವು ಎರಡುಬಗೆಯಾಗಿದೆ ಸ್ಥೂಲವೂ ಗೋಚರವೂ ಆದ ಸದೃಶಸಂತಾನಗಳ ವಿನಾಶ ಮೊದಲನೆಯದು ಸದೃಶಸಂತಾನಗಳಲ್ಲಿ ಪ್ರತಿಕ್ಷಣವೂ ಹುಟ್ಟುತ್ತಿರುವ ಗೋಚರವಾದ ಸೂಕ್ಷ್ಮಗಳ ವಿನಾಶವು ಎರಡನೆಯದು ಇವೆರಡೂ ಸಂಭವಿಸುವುದಿಲ್ಲ, ಏಕಂದರೆ ಸದ್ವಸ್ತುವಿನ ಸಂಪೂರ್ಣ ವಿನಾಶವು ಸಂಭವಿಸುವುದೇ ಇಲ್ಲ[7]

---

1 ಅಪಿ ಚ ವೈನಾಶಿಕಾಃ ಕಲ್ಪಯಂತಿ ಬುದ್ಧಿಬೋಧ್ಯಂ ತ್ರಯಾದನ್ಯತ್ ಸಂಸ್ಕೃತಂ ಕ್ಷಣಿಕಂ ಚೇತಿ (ಸೂ ಭಾ)

2 ನಿಃಸ್ವರೂಪವೆಂದು, ನಿರುಪಾಖ್ಯಂ ನಿಃಸ್ವರೂಪಮ್ (ರ ಪ್ರ)-

3 ಕಾರ್ಯಕಾರಣರೂಪದಿಂದ ಆಗುತ್ತಿರುವ ವಸ್ತುಗಳ ಪ್ರವಾಹವೇ ಸಂತಾನ, ಸಂತಾನೋ ನಾಮ ಭಾವಾನಾಂ ಹೇತುಫಲಭಾವೇನ ಪ್ರವಾಹಃ (ರ ಪ್ರ.)

4 ಭಾವಾಃ ಸಂತಾನಿನಃ (ರ ಪ್ರ)

5 ಸರ್ವೇಷ್ವಪಿ ಸಂತಾನೇಷು ಸಂತಾನಿನಾಮವಿಚ್ಛಿನ್ನೇನ ಹೇತುಫಲಭಾವೇನ ಸಂತಾನವಿಚ್ಛೇದಸ್ಯಾಸಂಭವಾತ್ (ಸೂ ಭಾ)

6 ಘಟದ ಎಲ್ಲ ಅವಸ್ಥೆಗಳಲ್ಲಿಯೂ ಮಣ್ಣಿರುತ್ತದೆ ಮಣ್ಣಿಗೆ ನಾಶವೇ ಇಲ್ಲ

7 ಅವಿಚ್ಛೇದಾತ್— ಸತೋ ನಿರನ್ವಯವಿಚ್ಛೇದಾಸಂಭವಾತ್ (ಶ್ರೀಭಾಷ್ಯ)

ಸದ್ವಸ್ತುವಿನ ಉತ್ಪತ್ತಿವಿನಾಶಗಳು ಒಂದೇ ವಸ್ತುವಿನ ಬೇರೆಬೇರೆ ಅವಸ್ಥೆಗಳೆಂದು ಹಿಂದೆ (೨ ೧ ೧೪) ಹೇಳಿದ್ದಾಯಿತು ದೀಪವು ಆರಿಹೋದಾಗಲೂ ಪೂರ್ಣವಿನಾಶವಾಯಿತೆಂದು ಹೇಳಲಾಗುವುದಿಲ್ಲ, ಏಕೆಂದರೆ ದೀಪವು ಆರಿಹೋದಾಗ ಕೂಡ ಅದು ಬೇರೆ ಸೂಕ್ಷ್ಮಾವಸ್ಥೆಯನ್ನು ಹೊಂದುತ್ತದೆ ಅವಸ್ಥೆಯು ಸೂಕ್ಷ್ಮವಾದದುರಿಂದ ನಮಗೆ ಕಾಣುವುದಿಲ್ಲ

**ದ್ವೈ.**—ಕಾರಣವಿರುವಾಗ ಕಾರ್ಯವೂ ಆಗಲೇಬೇಕು—ಎಂಬ ನಿಯಮದ ಪ್ರಕಾರ ಕಾರ್ಯಕಾರಣಗಳ ಆತ್ಯಂತಿಕನಾಶವಾಗಲಿ ಆತ್ಯಂತಿಕವಲ್ಲದ (ಎಂದರೆ ಕೆಲವು ಸಂತಾನಗಳನ್ನು ಹಿಂದೆ ಬಿಡುವ) ನಾಶವಾಗಲಿ ಸಾಧ್ಯವಾಗುವುದಿಲ್ಲ [1]

## ಉಭಯಥಾ ಚ ದೋಷಾತ್ ॥ ೨೩ ॥

೨೩ ಎರಡು ಬಗೆಯಿಂದಲೂ ದೋಷವಿರುವುದರಿಂದ (ಈ ದರ್ಶನವು ಸಮಂಜಸವಲ್ಲ)

ಪ್ರತಿಸಂಖ್ಯಾನಿರೋಧಗಳಲ್ಲಿ ಸೇರಿರುವುದೆಂದು ಬೌದ್ಧರು ಕಲ್ಪಿಸಿಕೊಂಡಿರುವ ಈ ಅವಿದ್ಯಾದಿಗಳ ನಾಶವು ಹೇಗೆ ಆಗುತ್ತದೆ? ಅದು (ಯಮ-ನಿಯಮವೇ ಮೊದಲಾದ) ಪರಿಕರದಿಂದ ಕೂಡಿದ ಸಮ್ಯಗ್‌ಜ್ಞಾನದಿಂದ ಆಗುವುದೊ? ಅಥವಾ ತಾನೇ ಆಗುವುದೋ? ಮೊದಲನೆಯ ಪಕ್ಷದಲ್ಲಿ ಯಾವ ಕಾರಣವೂ ಇಲ್ಲದೆ ವಿನಾಶವಾಗುವುದು ಎಂಬ ತತ್ತ್ವವನ್ನು ಬಿಟ್ಟಂತಾಗುವುದು [2] ಎರಡನೆಯ ಪಕ್ಷದಲ್ಲಿ 'ಮಾರ್ಗವನ್ನು' ಉಪದೇಶಿಸಿರುವುದು[3] ವ್ಯರ್ಥವಾಗುವುದು [4] ಹೀಗೆ ಎರಡು ವಿಧದಿಂದಲೂ ದೋಷವು ಒದಗುವುದರಿಂದ ಈ ದರ್ಶನವು ಸಮಂಜಸವಲ್ಲ

**ವಿ.**—ಅಸದ್ವಸ್ತುವಿನಿಂದ ಉತ್ಪತ್ತಿಯಾಗುವುದಾಗಲಿ, ಉತ್ಪನ್ನವಾದುದು ಅಸದ್ವಸ್ತುವಿನಲ್ಲಿ ಲಯವಾಗುವುದಾಗಲಿ ಅಸಂಭವವೆಂದು ಹಿಂದೆ ಹೇಳಿದ್ದಾಯಿತು ಅಸತ್ತಿನಿಂದ ಕಾರ್ಯವು ಉತ್ಪನ್ನವಾದರೆ ಅದು ಅಸತ್‌ಸ್ವರೂಪವೇ ಆಗಿರುತ್ತದೆ [5] ಜಗತ್ತು ಶೂನ್ಯವಾಗಿ ಕಾಣುವುದಿಲ್ಲ ಪುನಃ ಸದ್ವಸ್ತುವಿಗೆ ಸಂಪೂರ್ಣನಾಶವಾದರೆ ಒಂದು ಕ್ಷಣವಾದ ಮೇಲೆ ಜಗತ್ತೆಲ್ಲ ನಾಶವಾದಂತಾಗುತ್ತದೆ [6] ಅನಂತರ ಅಸತ್ತಿನಿಂದ ಪುನಃ

---

[1] ಕಾರಣೇ ಸತಿ ಕಾರ್ಯಂ ಭವತ್ಯೇವೇತಿ ನಿಯಮಾನ್ನಿಃಸಂತಾನಃ ಸಸಂತಾನಶ್ಚ ವಿನಾಶೋ ನ ಯುಜ್ಯತೇ (ಮ ಭಾ)

[2] ಪೂರ್ವಸ್ಮಿನ್ವಿಕಲ್ಪೇ ನಿರ್ಹೇತುಕವಿನಾಶಾಭ್ಯುಪಗಮಹಾನಿಪ್ರಸಂಗಃ (ಸೂ ಭಾ)

[3] 'ಎಲ್ಲವೂ ದುಃಖ, ಕ್ಷಣಿಕ' ಎಂಬ ಜ್ಞಾನ

[4] ಉತ್ತರಸ್ಮಿಂಸ್ತು ಮಾರ್ಗೋಪದೇಶಾನರ್ಥಕ್ಯಪ್ರಸಂಗಃ (ಸೂ ಭಾ)

[5] ತುಚ್ಛಾದುತ್ಪತ್ತೌ ತುಚ್ಛಾತ್ಮಕಮೇವ ಕಾರ್ಯಂ ಸ್ಯಾತ್ (ಶ್ರೀಭಾಷ್ಯ)

[6] ಸತೋ ನಿರನ್ವಯವಿನಾಶೇ ಸತ್ಯೇಕಕ್ಷಣಾದೂರ್ಧ್ವಂ ಕೃತ್ಸ್ನಸ್ಯ ಜಗತಸ್ತುಚ್ಛತಾಽಽಪತ್ತಿರೇವ ಸ್ಯಾತ್ (ಶ್ರೀಭಾಷ್ಯ)

ಹುಟ್ಟಿದ ಜಗತ್ತು ಅಸತ್ತೇ ಆಗಿರಬೇಕಾಗಿರುತ್ತದೆ ಹೀಗೆ ಎರಡು ವಿಧದಿಂದಲೂ ದೋಷವಿರುವುದರಿಂದ ಬೌದ್ಧದರ್ಶನದ ಪ್ರಕಾರ ಉತ್ಪತ್ತಿನಾಶಗಳು ಆಗುವುದಿಲ್ಲ

**ದ್ವೈ.**—ಕಾರಣವಿರುವಾಗ ಕಾರ್ಯವು ಆಗಲೇಬೇಕು ಎಂಬ ನಿಯಮವಿದ್ದರೆ ಕಾರ್ಯವು ಯಾವಾಗಲೂ ಇರುವುದರಿಂದ ಕಾರ್ಯಕಾರಣಭಾವವು ಹೋಗುತ್ತದೆ ಅಂಥ ನಿಯಮವಿಲ್ಲದಿದ್ದರೆ ಕಾರ್ಯವೇ ಉತ್ಪನ್ನವಾಗುವುದಿಲ್ಲ [1]

**ಆಕಾಶೇ ಚಾವಿಶೇಷಾತ್ || ೨೪ ||**

೨೪ ಆಕಾಶದಲ್ಲಿಯೂ ವಿಶೇಷವಿಲ್ಲದುದರಿಂದ (ಅದು ನಿರುಪಾಖ್ಯವಲ್ಲ)

ಆಕಾಶವು ವಸ್ತುವೆಂಬುದು 'ಆತ್ಮನಿಂದ ಆಕಾಶವು ಉತ್ಪನ್ನವಾಯಿತು'[2] (ತೈ ಉ ೨ ೧)—ಇವೇ ಮೊದಲಾದ ಶ್ರುತಿಗಳಿಂದ ತಿಳಿದುಬರುತ್ತದೆ ವೇದಪ್ರಾಮಾಣ್ಯವನ್ನು ಒಪ್ಪಿಕೊಳ್ಳದವರು—ಗಂಧಾದಿಗುಣಗಳಿಂದ ಪೃಥಿವ್ಯಾದಿಗಳನ್ನು ಅನುಮಾನಿಸುವಂತೆ —ಶಬ್ದಗುಣದಿಂದ ಆಕಾಶವನ್ನು ಅನುಮಾನಿಸಬಹುದು ಆಕಾಶವು ಆವರಣದ ಅಭಾವವೆಂದು ಹೇಳಿದರೆ ಒಂದು ಪಕ್ಷಿಯು ಹಾರುವುದಕ್ಕ ಅವಕಾಶವಿಲ್ಲದ ಹೋಗುವುದು ಆವರಣವಿಲ್ಲದ ಸ್ಥಾನದಲ್ಲಿ ಪಕ್ಷಿಯು ಹಾರಬಹುದೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಯಾವ ಸ್ಥಾನವು ಆವರಣಾಭಾವಕ್ಕ ವಿಶೇಷಣವಾಗಿದೆಯೊ ಅದೇ ವಸ್ತುಭೂತವಾದ ಆಕಾಶವಾಗಿರುತ್ತದೆಯೇ ಹೊರತು ಆವರಣಾಭಾವಮಾತ್ರವಲ್ಲ[3] ಬೌದ್ಧದರ್ಶನದ ಒಂದು ಸಂವಾದದಲ್ಲಿ ಬರುವ 'ವಾಯು ಯಾವುದನ್ನು ಆಶ್ರಯಿಸಿರುತ್ತದ?' ಎಂಬ ಪ್ರಶ್ನೆಗೆ 'ವಾಯುವು ಆಕಾಶವನ್ನು ಅಶ್ರಯಿಸಿಕೊಂಡಿದೆ' ಎಂಬ ಉತ್ತರವಿದ ಆಕಾಶವು ಅವಸ್ತು ಎಂದಾದರೆ ಇದು ಹೊಂದುವುದಿಲ್ಲ ಮತ್ತೆ ಈ ನಿರೋಧದ್ವಯ ಮತ್ತು ಆಕಾಶ—ಈ ಮೂರು ನಿರುಪಾಖ್ಯ, ಅವಸ್ತು ಮತ್ತು ನಿತ್ಯ ಎಂಬುದು ಪರಸ್ಪರ ವಿರುದ್ಧವಾಗಿದೆ ಅವಸ್ತುವಾದುದಕ್ಕೆ ನಿತ್ಯತ್ವವಾಗಲಿ ಅನಿತ್ಯತ್ವವಾಗಲಿ ಸಂಭವಿಸುವುದಿಲ್ಲ, ಏಕೆಂದರೆ ಧರ್ಮ-ಧರ್ಮಿಗಳ ವ್ಯವಹಾರವು ವಸ್ತುವನ್ನು ಆಶ್ರಯಿಸಿದೆ[4]

**ವಿ.**—ಆಕಾಶವನ್ನು ನಿರುಪಾಖ್ಯವೆಂದು ಹೇಳುವುದು ಸರಿಯಲ್ಲ, ಏಕೆಂದರೆ ಭಾವರೂಪವಾದ ಪೃಥಿವ್ಯಾದಿಗಳಂತೆ ಅದೂ ಕೂಡ ಅಬಾಧಿತಜ್ಞಾನದಿಂದ ಸಿದ್ಧವಾಗಿದೆ

---

[1] ಕಾರಣೇ ಸತಿ ಕಾರ್ಯಂ ಭವತ್ಯೇವೇತಿ ನಿಯಮೇ ಸರ್ವದಾ ಕಾರ್ಯಭಾವಾನ್ನ ಕಾರ್ಯಕಾರಣವಿಶೇಷಃ । ಅನಿಯಮೇ ಕಾರ್ಯಾನುತ್ಪತ್ತಿಃ (ಮ ಭಾ)

[2] ಆತ್ಮನ ಆಕಾಶಃ ಸಂಭೂತಃ ।

[3] ಯೇನಾವರಣಾಭಾವೋ ವಿಶೇಷ್ಯತೇ ತತ್ತರ್ಹಿ ವಸ್ತುಭೂತಮೇವಾಕಾಶಂ ಸ್ಯಾತ್, ನಾವರಣಾಭಾವಮಾತ್ರಮ್ (ಸೂ ಭಾ)

[4] ನ ಹ್ಯವಸ್ತುನೋ ನಿತ್ಯತ್ವಮನಿತ್ಯತ್ವಂ ವಾ ಸಂಭವತಿ, ವಸ್ತ್ವಾಶ್ರಯತ್ವಾದ್ಧರ್ಮ-ಧರ್ಮಿವ್ಯವಹಾರಸ್ಯ (ಸೂ ಭಾ)

'ಇಲ್ಲಿ ಗಿಡುಗ ಹಾರಾಡುತ್ತಿದೆ, ಅಲ್ಲಿ ಗರುಡ ಹಾರಾಡುತ್ತಿದೆ' ಎಂದು ಹೇಳುವಾಗ ಆಕಾಶದ ಪ್ರದೇಶಗಳು ನಮ್ಮ ಮನಸ್ಸಿನಲ್ಲಿ ಹೊಳೆಯುತ್ತವೆ ಪೃಥಿವ್ಯಾದಿಗಳ ಅಭಾವವು ಆಕಾಶವೆಂದು ಹೇಳಲಾಗುವುದಿಲ್ಲ ಮೊದಲನೆಯದಾಗಿ ಆಕಾಶವು ಪೃಥಿವ್ಯಾದಿಗಳಿಗೆ ಸಂಬಂಧಿಸದೆ ಇರುವುದರಿಂದ ಜಗತ್ತೆಲ್ಲ ನಿರಾಕಾಶವಾಗುವುದು ಎರಡನೆಯದಾಗಿ ಆಕಾಶವು ಪೃಥಿವ್ಯಾದಿಗಳ ಇತರೇತರಾಭಾವವೆಂದು ಹೇಳಿದರೆ ಇತರೇತರಾಭಾವವು ಆಯಾ ವಸ್ತುಗಳಲ್ಲಿರುವುದರಿಂದ ಅವುಗಳ ಅಂತರದಲ್ಲಿ ಆಕಾಶವು ಕಂಡುಬರದೆ ಹೋಗುವುದು ಕೊನೆಯದಾಗಿ ಅತ್ಯಂತಾಭಾವವು ಪೃಥಿವ್ಯಾಧಿಗಳಿಗೆ ಸಂಭವಿಸುವುದೇ ಇಲ್ಲ ಅಭಾವವು ಭಾವರೂಪವಾದ ವಸ್ತುವಿನ ವಿಶೇಷಸ್ಥಿತಿಯಾಗಿರುವುದರಿಂದ ಆಕಾಶವು ಅಭಾವವು ಎಂದು ಒಪ್ಪಿಕೊಂಡರೂ ಅದು ನಿರುಪಾಖ್ಯವಾಗುವುದಿಲ್ಲ [1]

ದ್ವೈ.—'ಆಕಾಶದ್ದೃಷ್ಟಾಂತದಂತೆ ವಿಶೇಷವಿಲ್ಲದಿರುವುದರಿಂದ (ವಿರುದ್ಧವಾದುದು ಸಿದ್ಧವಾಗುತ್ತದೆ)' ಎಂಬುದು ಸೂತ್ರಾರ್ಥ

ದೀಪಾದಿಗಳಲ್ಲಿ ಕಂಡುಬರುವ ಪರಿಮಾಣವಿಶೇಷಗಳಿಂದ ಅವುಗಳ ಕ್ಷಣಿಕತ್ವವು ಸಿದ್ಧವಾಗುವಂತೆ ಪ್ರತಿಯೊಂದು ಕಾರ್ಯದ ಕ್ಷಣಿಕತ್ವವೂ ಸಿದ್ಧವಾಗುತ್ತದೆ ಇದಕ್ಕೆ ಪ್ರತಿಯಾಗಿ ಹೀಗೆ ವಾದಿಸಬಹುದು ಆಕಾಶದಲ್ಲಿ ಪರಿಮಾಣವಿಶೇಷವು ಕಾಣದಿರುವುದರಿಂದ ಅದಕ್ಕೆ ಅಕ್ಷಣಿಕತ್ವವು ಸಿದ್ಧವಾಗುತ್ತದೆ, ಹೀಗೆಯೇ ಇತರ ವಸ್ತುಗಳ ಅಕ್ಷಣಿಕತ್ವವೂ ಸಿದ್ಧವಾಗುತ್ತದೆ [2]

## ಅನುಸ್ಮೃತೇಶ್ಚ || ೨೫ ||

೨೫ ಅನುಸ್ಮೃತಿಯಿಂದಲೂ (ಈ ದರ್ಶನವು ಹೊಂದುವುದಿಲ್ಲ)

ವೈನಾಶಿಕನು ಪ್ರತಿಯೊಂದು ವಸ್ತುವೂ ಕ್ಷಣಿಕವೆಂದು ಒಪ್ಪಿಕೊಂಡಿರುವುದರಿಂದ ಅರಿಯುತ್ತಿರುವ ಕರ್ತೃವೂ ಕೂಡ ಕ್ಷಣಿಕವೆಂದು ಒಪ್ಪಿಕೊಳ್ಳಬೇಕಾಗುವುದು ಆದರೆ ಅದು ಸಂಭವಿಸುವುದಿಲ್ಲ, ಏಕೆಂದರೆ ಅನುಸ್ಮೃತಿ ಅಥವಾ ನೆನಪು ಇದೆ ಅನುಭವವನ್ನು ಅನುಸರಿಸಿ ಉತ್ಪನ್ನವಾಗುವ ಸ್ಮರಣವೇ ಅನುಸ್ಮೃತಿ ಎನಿಸಿದೆ [3] ಅನುಭವಿಸುವವನೂ ಸ್ಮರಿಸಿಕೊಳ್ಳುವವನೂ ಒಬ್ಬನೇ ಆಗಿರಬೇಕು, ಏಕೆಂದರೆ ಒಬ್ಬನು ಅನುಭವಿಸಿದ್ದು

---

1 ಅಭಾವಸ್ಯ ವಿದ್ಯಮಾನಪದಾರ್ಥಾವಸ್ಥಾವಿಶೇಷತ್ವೋಪಪಾದನಾಚ್ಚಾಕಾಶಸ್ಯಾಭಾವ-ರೂಪತ್ವೇಽಪಿ ನ ನಿರುಪಾಖ್ಯತ್ವಮ್ (ಶ್ರೀಭಾಷ್ಯ)

2 ದೀಪಾದಿಷು ವಿಶೇಷದರ್ಶನಾತ್ ಕ್ಷಣಿಕತ್ವೇನಾನ್ಯತ್ರ ಕ್ಷಣಿಕತ್ವಮನುಮೀಯತೇ ಚೇದಾಕಾಶಾದಿಷ್ವವಿಶೇಷದರ್ಶನಾದನ್ಯತ್ರಾಪಿ ತದನುಮೀಯೇತ (ಮ ಭಾ)

3 ಅನುಸ್ಮೃತೇಃ ಅನುಭವಮುಪಲಬ್ಧಿಮನೂತ್ಪದ್ಯಮಾನಂ ಸ್ಮರಣಮೇವಾನುಸ್ಮೃತಿಃ (ಸೂ ಭಾ)

ಇನ್ನೊಬ್ಬನಿಗೆ ಸ್ಮೃತಿಯನ್ನುಂಟುಮಾಡುವುದಿಲ್ಲ ಇದಲ್ಲದೆ ನೋಡುವವನೂ ಅರಿಯುವವನೂ ಒಬ್ಬನೇ ಆಗಿದ್ದರೆ ಮಾತ್ರ ಪ್ರತ್ಯಭಿಜ್ಞೆಯು ಸಾಧ್ಯವಾಗುತ್ತದೆ ಒಬ್ಬನೇ ಆದ ಕರ್ತೃವಿಗೆ ದರ್ಶನ ಸ್ಮರಣ ಎಂಬ ಎರಡು ಕ್ಷಣಗಳು ಸಂಬಂಧಿಸಿರುವುದರಿಂದ ವೈನಾಶಿಕನು ಕ್ಷಣಿಕವಾದವನ್ನು ತ್ಯಜಿಸಬೇಕಾಗುತ್ತದೆ ಅರಿವುಗಳ ಸಾದೃಶ್ಯದಿಂದ ಅನುಸ್ಮೃತಿಯಾಗುವುದೆಂದೂ ವಾದಿಸಲು ಅವನಿಗೆ ಸಾಧ್ಯವಾಗುವುದಿಲ್ಲ, ಏಕೆಂದರೆ ಸಾದೃಶ್ಯವು 'ಅದು ಇದಕ್ಕೆ ಸದೃಶವಾಗಿದೆ' ಎಂಬ ಎರಡು ವಸ್ತುಗಳನ್ನು ಅವಲಂಬಿಸಿರುವುದರಿಂದಲೂ ಅವನ ದರ್ಶನದಲ್ಲಿ ಎರಡು ವಸ್ತುಗಳನ್ನು ಅರಿಯುವ ಒಬ್ಬನು ಇಲ್ಲದಿರುವುದರಿಂದಲೂ ಸಾದೃಶ್ಯದಿಂದ ಅನುಸ್ಮೃತಿಯಾಗುವುದು ಮಿಥ್ಯಾಪ್ರಲಾಪವೇ ಆಗಿರುತ್ತದೆ ಪೂರ್ವೋತ್ತರ ಕ್ಷಣಗಳ ಸಾದೃಶ್ಯವನ್ನು ಗ್ರಹಿಸುವವನು ಒಬ್ಬನೇ ಎರಡು ಕ್ಷಣಗಳವರೆಗೆ ಇರುತ್ತಾನೆ ಎಂಬುದನ್ನು ಒಪ್ಪಿಕೊಳ್ಳಬೇಕಾಗಿ ಕ್ಷಣಿಕತ್ವಪ್ರತಿಜ್ಞೆಗೆ ಭಂಗವಾಗುತ್ತದೆ

'ಅದಕ್ಕೆ ಇದು ಸದೃಶವು' ಎಂಬುದು ಬೇರೊಂದು ಹೊಸಪ್ರತ್ಯಯವೇ ಹೊರತು ಪೂರ್ವೋತ್ತರಗಳನ್ನು ಗ್ರಹಿಸಿದ ಕಾರಣದಿಂದ ಆದದ್ದಲ್ಲ—ಎಂದು ಅವನು ಹೇಳಿದರೆ, 'ಅದು' 'ಇದು' ಎಂಬ ಬೇರೆ ಶಬ್ದಗಳು ಬೇರೆ ವಸ್ತುಗಳನ್ನು ಸೂಚಿಸುತ್ತವೆ ಎಂಬುದು ಪರಿಹಾರವಾಗಿದೆ ಸಾದೃಶ್ಯವಿಷಯದ ಜ್ಞಾನವು ಬೇರೊಂದು ಪ್ರತ್ಯಯವಾಗಿದ್ದರೆ 'ಅದಕ್ಕೆ ಇದು ಸದೃಶವು' ಎಂಬ ವಾಕ್ಯಪ್ರಯೋಗವು ಅನರ್ಥಕವಾಗುತ್ತಿತ್ತು 'ನಾನು ಅದನ್ನು ನಿನ್ನೆಯ ದಿನ ನೋಡಿದೆ, ಇದನ್ನು ಇಂದು ನೋಡುತ್ತೇನೆ' ಎಂಬ ವ್ಯವಹಾರವು ಸಾದೃಶ್ಯದಿಂದ ಆಗುತ್ತದೆ ಎಂದೂ ಹೇಳಲಾಗುವುದಿಲ್ಲ, ಏಕೆಂದರೆ ಜ್ಞಾನವು ವಸ್ತುವಿನದೇ ಹೊರತು ಸಾದೃಶ್ಯದ್ದಲ್ಲ ಒಂದು ಬಾಹ್ಯವಸ್ತುವಿನ ವಿಷಯದಲ್ಲಿ 'ಅದೇ ಇದೂ ?' ಅಥವಾ 'ಅದಕ್ಕೆ ಸದೃಶವಾದುದೊ ?' ಎಂಬ ಸಂದೇಹವು ಬರಬಹುದು, ಆದರೆ ಅರಿಯುವ ಕರ್ತೃವಿನ ವಿಷಯದಲ್ಲಿ 'ಅವನೇ ನಾನೆ ?' ಅಥವಾ 'ಅವನಿಗೆ ಸದೃಶನೆ ?' ಎಂಬ ಸಂದೇಹವು ಬರುವುದಿಲ್ಲ, ಏಕೆಂದರೆ 'ನಿನ್ನೆಯ ದಿನ ಯಾವ ನಾನು ನೋಡಿದ್ದೆನೊ ಆ ನಾನೇ ಈಗ ಸ್ಮರಿಸಿಕೊಳ್ಳುತ್ತಿದ್ದೇನೆ' ಎಂದು ಅರಿಯುವವನ ಏಕತ್ವವು ನಿಶ್ಚಿತವಾಗುತ್ತದೆ [1]

ವಿ.—ಹಿಂದೆ ಅನುಭವಿಸಿದ ವಸ್ತುವಿನ ಜ್ಞಾನಕ್ಕೆ ಅನುಸ್ಮೃತಿ ಎಂದು ಹೆಸರು, ಎಂದರೆ ಪ್ರತ್ಯಭಿಜ್ಞೆ [2] ಹಿಂದೆಯೂ ಇದ್ದ ಮತ್ತು ಈಗಲೂ ಇರುವ ಒಂದು ವಸ್ತುವಿನ

---

1 ಭವೇದಪಿ ಕದಾಚಿದ್ಬಾಹ್ಯವಸ್ತುನಿ ವಿಪ್ರಲಂಭಸಂಭವಾತ್ ತದೇವೇದಂ ಸ್ಯಾತ್ ತತ್ಸದೃಶಂ ವೇತಿ ಸಂದೇಹಃ । ಉಪಲಬ್ಧಂ ತು ಸಂದೇಹೋಽಪಿ ನ ಕದಾಚಿದ್ಭವತಿ ಸ ಏವಾಹಂ ಸ್ಯಾಂ ತತ್ಸದೃಶೋ ವೇತಿ । ಯ ಏವಾಯಂ ಪೂರ್ವೇದ್ಯುರದ್ರಾಕ್ಷಂ ಸ ಏವಾಹಮದ್ಯ ಸ್ಮರಾಮೀತಿ ನಿಶ್ಚಿತತದ್ಭಾವೋಪಲಂಭಾತ್ (ಸೂ ಭಾ )

2 ಅನುಸ್ಮರಣಮ್—ಪೂರ್ವಾನುಭೂತವಸ್ತುವಿಷಯಂ ಜ್ಞಾನಮ್, ಪ್ರತ್ಯಭಿಜ್ಞಾನಮಿತ್ಯರ್ಥಃ (ಶ್ರೀಭಾಷ್ಯ)

ಪ್ರತ್ಯಕ್ಷಜ್ಞಾನಕ್ಕೆ ಪ್ರತ್ಯಭಿಜ್ಞೆ ಎಂದು ಹೆಸರು[1] ಎರಡು ಕಾಲಕ್ಕೂ ಸಂಬಂಧಿಸಿದ ವಸ್ತುವೇ ಪ್ರತ್ಯಕ್ಷಜ್ಞಾನದ ವಿಷಯವು. ವಸ್ತುವಿನೊಂದಿಗೆ ಸಂಪ್ರಯೋಗವಿಲ್ಲದಿರುವುದರಿಂದ 'ಅದು' ಎಂಬುದು ಸ್ಮೃತಿ, ಇಂದ್ರಿಯಸಂಪ್ರಯೋಗವಿರುವುದರಿಂದ 'ಇದು' ಎಂಬುದು ಪ್ರತ್ಯಕ್ಷಜ್ಞಾನ—ಎಂದು ಹೇಳಲಾಗುವುದಿಲ್ಲ ; ಏಕೆಂದರೆ 'ಅದೇ ಇದು' ಎಂಬಲ್ಲಿ ಸಾಮಾನಾಧಿಕರಣ್ಯದಿಂದ ಏಕತ್ವವು ಕಂಡುಬರುತ್ತದೆ. ಹಿಂದಿನ ಕಾಲದ ಅನುಭವದಿಂದುಂಟಾದ ಸಂಸ್ಕಾರದೊಂದಿಗೆ ಇಂದ್ರಿಯಸಂಪ್ರಯೋಗವು ಸೇರಿದರೆ ಪ್ರತ್ಯಭಿಜ್ಞೆಯುಂಟಾಗುತ್ತದೆ ದೀಪಜ್ವಾಲೆಯು ಪ್ರತಿಕ್ಷಣವೂ ಬದಲಾಗುತ್ತಿದ್ದರೂ ಸಾದೃಶ್ಯದಿಂದ ಅದನ್ನು ಒಂದೇ ಜ್ವಾಲೆಯೆಂದು ಕರೆಯುತ್ತೇವೆ ; ಹೀಗೆಯೇ ಇತರ ವಸ್ತುಗಳೂ ಆಗಬಹುದಲ್ಲ ?—ಎಂದು ಸೌಗತನು ಆಕ್ಷೇಪಿಸಬಹುದು. ಇದಕ್ಕೆ ಪರಿಹಾರ ಹೀಗಿದೆ : ಎರಡು ದೀಪಜ್ವಾಲೆಗಳ ಸಾದೃಶ್ಯವನ್ನು ಅರಿಯುವವನು ಪೂರ್ವೋತ್ತರಕ್ಷಣಗಳಲ್ಲಿ ಇರಬೇಕಾದುದರಿಂದ ಒಬ್ಬನೇ ಜ್ಞಾತೃವು ಎರಡು ಕ್ಷಣಗಳಲ್ಲಿಯೂ ಇರುವನು ಎಂದಾಗುವುದು.

ದ್ವೈ.—'ಅದೇ ಇದು' ಎಂದು ಹಿಂದೆ ನೋಡಿದ ವಸ್ತುವಿನ ವಿಷಯದಲ್ಲಿ ಪ್ರತ್ಯಭಿಜ್ಞೆಯುಂಟಾಗುತ್ತದೆ. ಆದುದರಿಂದ ಕ್ಷಣಿಕತ್ವವು ಸಿದ್ಧಿಸುವುದಿಲ್ಲ. ಪ್ರತ್ಯಭಿಜ್ಞೆಯು ಭ್ರಾಂತಿಯಾಗಬಹುದು ಎಂದವನು ಆಕ್ಷೇಪಿಸಿದರೆ, ಪೂರ್ವೋತ್ತರಕಾಲಗಳಲ್ಲಿರುವ ವಸ್ತುವಿನ ವಿಷಯದಲ್ಲಿ ಅವನು ಕಲ್ಪಿಸುವ ಭೇದವೂ ಭ್ರಾಂತಿ—ಎಂದು ನಾವು ಹೇಳಬಹುದು[2]

## ನಾಸತೋಽದೃಷ್ಟತ್ವಾತ್* ॥ ೨೬ ॥

೨೬. ಅಸತ್ತಿನಿಂದ (ಸದ್ವಸ್ತುವು ಉತ್ಪನ್ನವಾಗುವುದಿಲ್ಲ) ; ಏಕೆಂದರೆ ಅದು ಕಂಡುಬರುವುದಿಲ್ಲ

ಕಾರಣವು ನಾಶವಾಗದೆ ಕಾರ್ಯವು ಹುಟ್ಟುವುದಿಲ್ಲ ಎಂದು ಹೇಳುವವರು ಅಭಾವದಿಂದ ಭಾವವು ಹುಟ್ಟುತ್ತದೆ ಎಂದು ಒಪ್ಪಿಕೊಳ್ಳಬೇಕಾಗುವುದು. ನಾಶವಾದ ಬೀಜದಿಂದ ಮೊಳಕೆ ಹುಟ್ಟುತ್ತದೆ ಎಂಬುದು ಒಂದು ದೃಷ್ಟಾಂತ. ಅವಿಕಾರಿಯಾದ ಕಾರಣದಿಂದ ಕಾರ್ಯವು ಉತ್ಪನ್ನವಾದರೆ ಎಲ್ಲ ಕಾರ್ಯಗಳೂ ಎಲ್ಲ ಕಾರಣಗಳಿಂದಲೂ

---

1 ಪ್ರತ್ಯಭಿಜ್ಞಾನಂ ಹಿ ನಾಮ ಅತೀತವರ್ತಮಾನಕಾಲವರ್ತ್ಯೇಕವಸ್ತುವಿಷಯಮೇಕಂ ಪ್ರತ್ಯಕ್ಷಜ್ಞಾನಮ್ (ವೇ. ದೀ.).

2 ತದೇವೇದಮಿತಿ ಪ್ರತ್ಯಭಿಜ್ಞಾನಾಚ್ಚ । ಪ್ರತ್ಯಭಿಜ್ಞಾಯಾ ಭ್ರಾಂತಿತ್ವೇ ವಿಶೇಷದರ್ಶನಸ್ಯಾಪಿ ಭ್ರಾಂತಿತ್ವಮ್ (ಮ. ಭಾ.).

* ಈ ಸೂತ್ರದಿಂದ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಎಂಬ ಸೂತ್ರದವರೆಗೆ ಮಧ್ವಭಾಷ್ಯದಲ್ಲಿ ಅಸದಧಿಕರಣ ಎಂಬ ಹೊಸ ಅಧಿಕರಣವಾಗಿದೆ.

ಉತ್ಪನ್ನವಾಗಬಹುದು. ಸೂತ್ರವು ಈ ಅಭಿಪ್ರಾಯವನ್ನು ನಿರಾಕರಿಸುತ್ತದೆ. ಅಭಾವದಿಂದ ಭಾವವು ಉತ್ಪನ್ನವಾಗುವುದಾದರೆ ವಿಶೇಷಕಾರಣಗಳಿಗೆ ಅರ್ಥವಿರುವುದಿಲ್ಲ; ಏಕೆಂದರೆ ಅಭಾವತ್ವವು ಎಲ್ಲಕ್ಕೂ ಸಮಾನವಾಗಿರುತ್ತದೆ.[1] ಬೀಜದಿಂದ ಮೊಳಕೆಯು ಹುಟ್ಟಿದರೆ ಮೊಲದ ಕೊಂಬಿನಿಂದ ಹುಟ್ಟಬೇಕಾಗುತ್ತದೆ. ಆದರೆ ಇದು ಕಂಡುಬರುವುದಿಲ್ಲ. ಅಭಾವದಲ್ಲಿಯೂ ವಿಶೇಷವಿದೆ—ಎಂದು ಅವನು ಹೇಳಿದರೆ ಅಭಾವವೂ ಭಾವವಾಗುತ್ತದೆ. ಅಭಾವವು ಯಾವ ಉತ್ಪತ್ತಿಗೂ ಕಾರಣವಲ್ಲ. ಅಭಾವದಿಂದ ಭಾವವು ಉತ್ಪನ್ನವಾಗುವುದಾದರೆ ಕಾರ್ಯವೆಲ್ಲ ಅಭಾವದಿಂದ ಕೂಡಿರಬೇಕಾಗಿತ್ತು. ಆದರೆ ಹಾಗೆ ಕಂಡುಬರುವುದಿಲ್ಲ. ಪ್ರತಿಯೊಂದು ವಸ್ತುವೂ ತನ್ನ ತನ್ನ ರೂಪದಿಂದ ಭಾವಾತ್ಮಕವಾಗಿಯೇ ಕಂಡುಬರುತ್ತದೆ. ಕಾರಣವು ನಾಶವಾಗದೆ ಕಾರ್ಯವು ಉತ್ಪನ್ನವಾಗುವುದಿಲ್ಲ ಎಂದು ಹೇಳುವುದೂ ತಪ್ಪು; ಏಕೆಂದರೆ ಬೀಜವು ಮೊಳಕೆಯಾಗುವಾಗ ನಾಶವಾಗದೆ ಇರುವ ಬೀಜಗಳ ಅವಯವಗಳೇ ಮೊಳಕೆಗಳಿಗೆ ಕಾರಣವಾಗಿರುತ್ತವೆ. ಅಭಾವದಿಂದ ಭಾವವುಂಟಾಗುತ್ತದೆ ಎಂಬುದು ಅವರ ದರ್ಶನದ ಪ್ರಕಾರವೂ ಹೊಂದುವುದಿಲ್ಲ; ಏಕೆಂದರೆ ಚಿತ್ತ-ಚೈತ್ತಗಳು ಸ್ಕಂಧಗಳಿಂದ ಉಂಟಾಗುತ್ತವೆಂದೂ ಭೂತ-ಭೌತಿಕ-ಸಮುದಾಯವು ಪರಮಾಣುಗಳಿಂದ ಉಂಟಾಗುತ್ತವೆಂದೂ ಅವರೇ ಒಪ್ಪಿಕೊಂಡಿರುತ್ತಾರೆ.

೨.—ಸೌತ್ರಾಂತಿಕನ ಅಭಿಪ್ರಾಯ ಹೀಗಿದೆ: ಜ್ಞಾನಕ್ಕೆ ವಿಷಯವಾಗುವುದು ಎಂದರೆ ಜ್ಞಾನದ ಉತ್ಪತ್ತಿಗೆ ಕಾರಣವಾಗಿರುವುದು ಮಾತ್ರ.[2] ಇದರಿಂದ ಚಕ್ಷುಸ್ಸೇ ಮೊದಲಾದ ಇಂದ್ರಿಯಗಳು ಜ್ಞಾನಕ್ಕೆ ವಿಷಯವಾಗುತ್ತವೆ ಎಂದು ತಿಳಿಯಕೂಡದು. ಜ್ಞಾನಕ್ಕೆ ತನ್ನ ಆಕಾರವನ್ನು ಕೊಡುವುದರ ಮೂಲಕ ಜ್ಞಾನಕ್ಕೆ ಕಾರಣವಾದುದು ಅದಕ್ಕೆ ವಿಷಯವಾಗಿರುತ್ತದೆ.[3] ನಷ್ಟವಾದ ವಿಷಯವೂ ಕೂಡ ಜ್ಞಾನಕ್ಕೆ ತನ್ನ ಆಕಾರವನ್ನು ಸಮರ್ಪಿಸಬಹುದು. ಜ್ಞಾನದ ವೈಚಿತ್ರ್ಯವು ವಿಷಯಗಳ ವೈಚಿತ್ರ್ಯವನ್ನು ಅವಲಂಬಿಸಿದೆ. ಇದಕ್ಕೆ ಪರಿಹಾರ ಹೀಗಿದೆ: ನೀಲಾದಿಗಳ ಆಕಾರಜ್ಞಾನವು ನಷ್ಟವಾದ ಮತ್ತು ಅಸತ್ತಾದ ವಿಷಯಗಳ ಆಕಾರಗಳಾಗಲಾರವು, ಏಕೆಂದರೆ ಧರ್ಮಿಯೇ ನಷ್ಟವಾದಾಗ ಅದರ ಧರ್ಮಗಳು ಬೇರೊಂದು ವಸ್ತುವಾಗಲಾರವು.[4] ಸ್ಥಿರವಾದ ವಸ್ತುಗಳು ಪ್ರತಿಬಿಂಬಿಸಬಹುದೇ ಹೊರತು ಕೇವಲ ಧರ್ಮವಲ್ಲ. ಆದುದರಿಂದ ಜ್ಞಾನಕಾಲದಲ್ಲಿ

---

[1] ಯದ್ಯಭಾವಾದ್ಭಾವ ಉತ್ಪದ್ಯೇತಾಭಾವತ್ವಾವಿಶೇಷಾತ್ ಕಾರಣವಿಶೇಷಾಭ್ಯುಪಗಮೋಽನರ್ಥಕಃ ಸ್ಯಾತ್ (ಸೂ. ಭಾ.).

[2] ಜ್ಞಾನೋತ್ಪತ್ತಿಹೇತುತ್ವಮೇವ ಹಿ ಜ್ಞಾನವಿಷಯತ್ವಮ್ (ಶ್ರೀಭಾಷ್ಯ).

[3] ಸ್ವಾಕಾರಸಮರ್ಪಣೇನ ಜ್ಞಾನಹೇತೋರೇವ ಜ್ಞಾನವಿಷಯತ್ವಾಭ್ಯುಪಗಮಾತ್ (ಶ್ರೀಭಾಷ್ಯ).

[4] ನ ಖಲು ಧರ್ಮಿಣಿ ವಿನಷ್ಟೇ ತದ್ಧರ್ಮಸ್ಯಾರ್ಥಾಂತರೇ ಸಂಕ್ರಮಣಂ ದೃಷ್ಟಮ್ (ಶ್ರೀಭಾಷ್ಯ).

ಅವಸ್ಥಿತವಾಗಿರುವ ವಿಷಯಗಳ ವೈಚಿತ್ರ್ಯದಿಂದಲೇ ಜ್ಞಾನಗಳ ವೈಚಿತ್ರ್ಯವು ಉಂಟಾಗುತ್ತದೆ.[1]

ದ್ವೈ.—'ಅಸತ್ತಿನಿಂದ ಉತ್ಪತ್ತಿಯಿಲ್ಲ; ಏಕೆಂದರೆ ಅದು ಕಂಡುಬರುವುದಿಲ್ಲ' ಎಂಬುದು ಸೂತ್ರಾರ್ಥ.

ಅಸತ್ತು ವಸ್ತುಗಳನ್ನು ಉತ್ಪತ್ತಿಮಾಡುವುದು ಎಲ್ಲಿಯೂ ಕಂಡುಬರುವುದಿಲ್ಲವಾದುದರಿಂದ ಅದು ಕಾರಣವೆಂಬುದು ಹೊಂದುವುದಿಲ್ಲ.[2]

### ಉದಾಸೀನಾನಾಮಪಿ ಚೈವಂ ಸಿದ್ಧಿಃ ॥ ೨೭ ॥

೨೭. ಹೀಗಾದರೆ ಉದಾಸೀನರಾದವರಿಗೂ ಸಿದ್ಧಿಯಾಗಬೇಕಾದೀತು.

ಅಭಾವದಿಂದ ಭಾವವು ಉತ್ಪನ್ನವಾಗುತ್ತದೆ ಎಂಬುದನ್ನು ಒಪ್ಪಿಕೊಂಡರೆ ನಿಷ್ಕ್ರಿಯರಾದ ಜನರಿಗೂ ಅಭೀಷ್ಟಸಿದ್ಧಿಯಾಗಬೇಕಾದೀತು; ಏಕೆಂದರೆ ಅಭಾವವು ಸುಲಭವಾಗಿ ಸಿಕ್ಕುತ್ತದೆ![3] ಕೃಷಿಕನು ತನ್ನ ಕೆಲಸದಲ್ಲಿ ಪ್ರಯತ್ನಿಸದಿದ್ದರೂ ಸಸ್ಯವು ಬೆಳೆಯಬೇಕಾಗುವುದು; ಮತ್ತು ಸ್ವರ್ಗಮೋಕ್ಷಗಳಿಗಾಗಿ ಯಾವನೂ ಪ್ರಯತ್ನಿಸಬೇಕಾಗಿಲ್ಲ.

ವಿ.—ಕಾರಣವಿಲ್ಲದೆ ಕಾರ್ಯವೆಲ್ಲ ಸಾಧ್ಯವಾಗುವುದರಿಂದ ಉದಾಸೀನರಾದವರೂ ಕೂಡ ಐಹಿಕಾಮುಷ್ಮಿಕಫಲವನ್ನೂ ಮೋಕ್ಷವನ್ನೂ ಪಡೆಯಬಹುದು.

ದ್ವೈ.—'ಅಸತ್ತಿಗೆ ಕಾರಣತ್ವವಿದ್ದರೆ ಹೇಯೋಪಾದೇಯಬುದ್ಧಿಗೆ ವಿಷಯವಾಗದ ಗಗನಕುಸುಮಾದಿಗಳ (ಸೌರಭ್ಯಾದಿ) ಕಾರ್ಯವೂ ಸಿದ್ಧಿಸಬೇಕಾಗುವುದು'[4] ಎಂಬುದು ಸೂತ್ರಾರ್ಥ.

ಗಗನಕುಸುಮಾದಿಗಳಿಂದ ಕಾರ್ಯವು ಸಿದ್ಧಿಸದಿದ್ದರೆ ಶೂನ್ಯದಿಂದಲೂ ಕಾರ್ಯವು ಉಂಟಾಗುವುದಿಲ್ಲ; ಏಕೆಂದರೆ ಅಸತ್ತ್ವವು ಎರಡಕ್ಕೂ ಸಮಾನವಾಗಿದೆ.

---

[1] ಅತೋಽರ್ಥವೈಚಿತ್ರ್ಯಕೃತಂ ಜ್ಞಾನವೈಚಿತ್ರ್ಯಮರ್ಥಸ್ಯ ಜ್ಞಾನಕಾಲೇಽವಸ್ಥಾನಾದೇವ ಭವತಿ (ಶ್ರೀಭಾಷ್ಯ).

[2] ಅದೃಷ್ಟತ್ವಾದಸತಃ ಕಾರಣತ್ವಂ ನ ಯುಜ್ಯತೇ (ಮ. ಭಾ.).

[3] ಅಭಾವಸ್ಯ ಸುಲಭತ್ವಾತ್ (ಸೂ. ಭಾ.).

[4] ಅಸತಃ ಕಾರಣತ್ವೇ ಉದಾಸೀನಾನಾಂ ಹೇಯೋಪಾದೇಯಬುದ್ಧಿವರ್ಜಿತಾನಾಂ ಖಪುಷ್ಪಾದೀನಾಮಪಿ ಸಕಾಶಾತ್ಕಾರ್ಯಸಿದ್ಧಿಃ (ಮ. ಭಾ.).

## ೫. ಅಭಾವಾಧಿಕರಣ*

(ಸೂ ೨೮–೩೨)

### ನಾಭಾವ ಉಪಲಬ್ಧೇಃ ॥ ೨೮ ॥

೨೮. (ಬಾಹ್ಯವಸ್ತುಗಳಿಗೆ) ಅಭಾವವಿಲ್ಲ ; ಏಕೆಂದರೆ (ಅವು) ಪ್ರತ್ಯಕ್ಷವಾಗಿವೆ

ವಿಜ್ಞಾನವಾದದ ಪ್ರಕಾರ ಪ್ರಮಾಣ ಪ್ರಮೇಯ ವಿಷಯಜ್ಞಾನ—ಎಂಬ ವ್ಯವಹಾರವೆಲ್ಲ ಬುದ್ಧ್ಯಾರೂಢವಾದ ರೂಪದಿಂದ ಒಳಗೇ ನಡೆಯುತ್ತದೆ. ಬಾಹ್ಯವಸ್ತುಗಳಿದ್ದರೂ ಬುದ್ಧ್ಯಾರೋಹವಿಲ್ಲದಿದ್ದರೆ ಪ್ರಮಾಣಾದಿಗಳ ವ್ಯವಹಾರವೇ ನಡೆಯುತ್ತಿರಲಿಲ್ಲ. ಬಾಹ್ಯವಸ್ತುಗಳನ್ನು ಗ್ರಹಿಸಲು ಸಾಧ್ಯವಿಲ್ಲ ; ಏಕೆಂದರೆ ಅವು ಪರಮಾಣುಗಳೊ ಅಥವಾ ಅವುಗಳ ಸಮೂಹವೊ ಆಗಿರುತ್ತವೆ. ಪರಮಾಣುಗಳು ನಮಗೆ ಗೋಚರಿಸುವುದಿಲ್ಲ ; ಪರಮಾಣುಗಳ ಸಮೂಹವಾದ ಕಂಬ ಮೊದಲಾದವು ಪರಮಾಣುಗಳಿಗಿಂತ ಬೇರೆಯೆಂದಾಗಲಿ ಅಥವಾ ಬೇರೆಯಲ್ಲವೆಂದಾಗಲಿ ನಿರ್ಧರಿಸುವುದು ಶಕ್ಯವಲ್ಲ ಕಂಬ ಗೋಡೆ ಗಡಿಗೆ ಮೊದಲಾದ ಪ್ರತ್ಯಯಗಳಲ್ಲಿರುವ ಭೇದಗಳೂ ಕೂಡ ಆಂತರಿಕವೇ ಜ್ಞಾನಗತವಾದ ವಿಶೇಷವಿಲ್ಲದಿದ್ದರೆ ಇವು ಉಪಪನ್ನವಾಗುವುದಿಲ್ಲ ; ಆದುದರಿಂದ ಜ್ಞಾನವು ವಸ್ತುವಿನ ರೂಪವನ್ನು ಹೊಂದುತ್ತದೆ ಎಂಬುದನ್ನು ಅಂಗೀಕರಿಸಬೇಕು ಹಾಗೆ ಅಂಗೀಕರಿಸಿದರೆ ವಸ್ತುವಿನ ಆಕಾರವು ಜ್ಞಾನವನ್ನು ಅವಲಂಬಿಸಿರುವುದರಿಂದ ಬಾಹ್ಯವಸ್ತುವಿನ ಕಲ್ಪನೆಯು ವ್ಯರ್ಥವಾಗುತ್ತದೆ ಇದಲ್ಲದೆ ವಸ್ತು ಮತ್ತು ವಸ್ತುಜ್ಞಾನ, ಇವು ಒಟ್ಟಿಗೆ ತಿಳಿಯಬರುವುದರಿಂದ ಇವೆರಡೂ ಅಭಿನ್ನವೆಂದೇ ಆಗುತ್ತದೆ. ಇವೆರಡೂ ಬೇರೆಬೇರೆಯಾಗಿದ್ದರೆ ಒಂದು ತಿಳಿಯಬಂದು ಇನ್ನೊಂದು ತಿಳಿಯಬರುತ್ತಿರಲಿಲ್ಲ. ಆದುದರಿಂದ ಬಾಹ್ಯವಸ್ತುಗಳು ಇರುವುದಿಲ್ಲ. ಪ್ರತ್ಯಕ್ಷಜ್ಞಾನವು ಸ್ವಪ್ನಾದಿಗಳ ಹಾಗೆಯೇ ಸ್ವಪ್ನ ಮಾಯೆ ಮರೀಚಿಕೆ ಮೊದಲಾದ ಪ್ರತ್ಯಯಗಳು ಬಾಹ್ಯವಸ್ತುವಿಲ್ಲದಿರುವಾಗ ವಿಷಯಿ-ವಿಷಯಾಕಾರವಾಗಿ ಕಾಣುವಂತೆ ಎಚ್ಚರದಲ್ಲಿ ಕಾಣುವ ಕಂಬ ಮೊದಲಾದ ಪ್ರತ್ಯಯಗಳೂ ಇರಬೇಕು. ಪ್ರತ್ಯಯಗಳ ವೈಚಿತ್ರ್ಯವೂ ಕೂಡ ವಾಸನಾವೈಚಿತ್ರ್ಯದಿಂದ ಉಪಪನ್ನವಾಗಿದೆ ಅನಾದಿಯಾದ ಸಂಸಾರದಲ್ಲಿ ಪ್ರತ್ಯಯಗಳೂ ವಾಸನೆಗಳೂ ಬೀಜಾಂಕುರಗಳಂತೆ ಪರಸ್ಪರ-ಕಾರ್ಯಕಾರಣಗಳಾಗಿರುವುದರಿಂದ ಪ್ರತ್ಯಯಗಳ ವೈಚಿತ್ರ್ಯ ಉಂಟಾಗಿರುವುದು ಸ್ವಪ್ನಾದಿಗಳಲ್ಲಿ ಬಾಹ್ಯವಸ್ತುವಿಲ್ಲದಿದ್ದರೂ ವಾಸನಾನಿಮಿತ್ತದಿಂದ ಜ್ಞಾನವೈಚಿತ್ರ್ಯವುಂಟಾಗುವುದೆಂದು ವಿಜ್ಞಾನವಾದಿಗಳೊಂದಿಗೆ ವೇದಾಂತಿಗಳೂ ಅಂಗೀಕರಿಸುತ್ತಾರೆ ಆದರೆ ವಾಸನೆಯಿಲ್ಲದೆ ಭಾಷ್ಯ

---

* ಇದು ಶ್ರೀಭಾಷ್ಯದಲ್ಲಿ ಉಪಲಬ್ಧ್ಯಧಿಕರಣವೆನಿಸಿದೆ. ಈ ಅಧಿಕರಣವು ನ ಭಾವೋಽನುಪಲಬ್ಧೇಃ ಎಂಬ ಸೂತ್ರದವರೆಗೆ ಮೂರು ಸೂತ್ರಗಳನ್ನು ಒಳಕೊಂಡಿದೆ.

ವಸ್ತುವಿನಿಂದಲೇ ಜ್ಞಾನವೈಚಿತ್ರ್ಯವಾಗಿರುವುದೆಂದು ವಿಜ್ಞಾನವಾದಿಗಳು ಅಂಗೀಕರಿಸುವುದಿಲ್ಲ. ಆದುದರಿಂದಲೂ ಬಾಹ್ಯವಸ್ತುಗಳು ಇರುವುದಿಲ್ಲ.

ಮೇಲೆ ಹೇಳಿದ ಆಕ್ಷೇಪಗಳಿಗೆ ಈ ಸೂತ್ರವು ಉತ್ತರವನ್ನು ಕೊಡುತ್ತದೆ : ಪ್ರತಿಯೊಂದು ಪ್ರತ್ಯಯದಲ್ಲಿಯೂ ಕಂಬ ಗೋಡೆ ಘಟ ಬಟ್ಟೆ ಎಂದು ಬಾಹ್ಯವಸ್ತುವು ಕಂಡು ಬರುತ್ತದೆ ನಮಗೆ ಕಂಡುಬರುತ್ತಿರುವುದು ಅಭಾವವಾಗಿರುವುದಿಲ್ಲ. ಬಾಹ್ಯವಸ್ತುವು ಜ್ಞಾನಕ್ಕಿಂತಲೂ ಬೇರೆಯಾಗಿರುತ್ತದೆ ಎಂಬುದನ್ನು ಜ್ಞಾನದ ಸ್ವಭಾವದಿಂದಲೇ ಅಂಗೀ-ಕರಿಸಬೇಕಾಗುತ್ತದೆ. ಮನುಷ್ಯನು ಗೋಡೆಯನ್ನೊ ಕಂಬವನ್ನೊ ನೋಡುತ್ತಿರುವಾಗ ಜ್ಞಾನಕ್ಕೆ ವಿಷಯವಾದ ವಸ್ತುಗಳನ್ನು ನೋಡುತ್ತಿರುವನೇ ಹೊರತು ಜ್ಞಾನವನ್ನೇ ಕಂಬವನ್ನಾಗಿ ಅಥವಾ ಗೋಡೆಯನ್ನಾಗಿ ನೋಡುವುದಿಲ್ಲ. ವಿಜ್ಞಾನವಾದಿಗಳೂ ಕೂಡ ಒಳಗಿರುವ ಜ್ಞೇಯರೂಪವು ಹೊರಗಿರುವಂತೆ ಕಾಣುತ್ತದೆ ಎಂದು ಹೇಳುವಾಗ ಇದನ್ನು ಒಪ್ಪಿಕೊಳ್ಳುತ್ತಾರೆ ಬಾಹ್ಯವಸ್ತುವಿನ ಅನುಭವವಿಲ್ಲದಿದ್ದರೆ **ಹೊರಗಿರುವಂತೆ** ಕಾಣುತ್ತದೆ ಎಂದು ಹೇಳಲು ಹೇಗೆ ಸಾಧ್ಯವಾದೀತು ? 'ವಿಷ್ಣುಮಿತ್ರನು ಬಂಜೆಯ ಮಗನ ಹಾಗೆ ತೋರುತ್ತಾನೆ' ಎಂದು ಯಾವನೂ ಹೇಳುವುದಿಲ್ಲ. ಬಾಹ್ಯವಸ್ತುವು ಅಸಂಭವವಾದುದರಿಂದ ಹೊರಗಿರುವಂತೆ ಕಾಣುತ್ತದೆ—ಎಂಬ ನಿರ್ಣಯವೂ ಸರಿಯಲ್ಲ ; ಏಕೆಂದರೆ ಪ್ರಮಾಣಗಳ ಪ್ರವೃತ್ತಿ ಅಪ್ರವೃತ್ತಿ, ಇವುಗಳಿಂದಲೇ ಸಂಭವಾಸಂಭವಗಳನ್ನು ನಿರ್ಧರಿಸಬೇಕೇ ಹೊರತು ಸಂಭವಾಸಂಭವಗಳಿಂದ ಪ್ರಮಾಣಗಳ ಪ್ರವೃತ್ತಿ ಅಪ್ರವೃತ್ತಿ, ಇವುಗಳನ್ನು ನಿರ್ಧರಿಸತಕ್ಕದ್ದಲ್ಲ [1] ಪ್ರತ್ಯಕ್ಷಾದಿಪ್ರಮಾಣಗಳಿಂದ ಯಾವುದು ತಿಳಿದುಬರುತ್ತದೆಯೊ ಅದು ಸಂಭವಿಸುತ್ತದೆ, ಯಾವುದು ತಿಳಿದುಬರುವುದಿಲ್ಲವೊ ಅದು ಸಂಭವಿಸುವುದಿಲ್ಲ. ಜ್ಞಾನವು ವಸ್ತುವಿನ ರೂಪವನ್ನು ಪಡೆಯುವುದರಿಂದ ಬಾಹ್ಯವಸ್ತುಗಳಿಲ್ಲ—ಎನ್ನುವುದು ಸರಿಯಲ್ಲ ; ಏಕೆಂದರೆ ಬಾಹ್ಯವಸ್ತುಗಳಿಲ್ಲದಿದ್ದರೆ ಜ್ಞಾನವು ವಸ್ತುವಿನ ರೂಪವನ್ನೇ ಪಡೆಯುತ್ತಿರಲಿಲ್ಲ ಆದುದರಿಂದ ಪ್ರತ್ಯಯ ಮತ್ತು ವಸ್ತು, ಇವುಗಳು ಒಟ್ಟಿಗೆ ಕಂಡು ಬರುತ್ತವೆ ಎಂಬ ನಿಯಮವು ವಸ್ತುಪ್ರತ್ಯಯಕ್ಕೆ ಉಪಾಯವೆಂಬುದನ್ನು ತಿಳಿಸುತ್ತದೆಯೇ ಹೊರತು ಇವೆರಡೂ ಒಂದೇ ಎಂಬುದನ್ನಲ್ಲ.

ಇದಲ್ಲದೆ 'ಗಡಿಗೆಯ ಜ್ಞಾನ', 'ಬಟ್ಟೆಯ ಜ್ಞಾನ' ಎಂಬಲ್ಲಿ ವಿಶೇಷಣಗಳಾದ ಗಡಿಗೆ-ಬಟ್ಟೆಗಳಿಗೆ ಭೇದವಿದೆಯೇ ಹೊರತು ವಿಶೇಷ್ಯವಾದ ಜ್ಞಾನಕ್ಕಲ್ಲ. ಇದರಿಂದ ವಸ್ತುವಿಗೂ ಜ್ಞಾನಕ್ಕೂ ಇರುವ ಭೇದವು ತಿಳಿದುಬರುತ್ತದೆ. ಮತ್ತೆ ಪೂರ್ವೋತ್ತರಕಾಲಗಳಲ್ಲಿದ್ದ ಎರಡು ಪ್ರತ್ಯಯಗಳು ತಮ್ಮನ್ನು ಅರಿತುಕೊಳ್ಳುವುದರಲ್ಲಿಯೇ ನಾಶವಾಗುವುದರಿಂದ ಪರಸ್ಪರ ಗ್ರಾಹ್ಯ-ಗ್ರಾಹಕ-ಭಾವವು ಹೊಂದುವುದಿಲ್ಲ. ಇದರಿಂದ ಪ್ರತ್ಯಯಗಳು

---

[1] ಯತಃ ಪ್ರಮಾಣಪ್ರವೃತ್ತ್ಯಪ್ರವೃತ್ತಿಪೂರ್ವಕೌ ಸಂಭವಾಸಂಭವಾವಧಾರ್ಯೇತೇ ನ ಪುನಃ ಸಂಭವಾಸಂಭವಪೂರ್ವಿಕೇ ಪ್ರಮಾಣಪ್ರವೃತ್ತ್ಯಪ್ರವೃತ್ತೀ (ಸೂ. ಭಾ ).

ಬೇರೆ ಬೇರೆ, ಕ್ಷಣಿಕತ್ವಾದಿಧರ್ಮಗಳು ವ್ಯಕ್ತಿಸಾಮಾನ್ಯಲಕ್ಷಣಗಳು, ಹಿಂದಿನ ಪ್ರತ್ಯಯದ ವಾಸನೆಯು ಮುಂದಿನ ಪ್ರತ್ಯಯದಲ್ಲಿರುವಿಕೆ, ಅವಿದ್ಯಾಸಂಸರ್ಗ, ಸದ್ಧರ್ಮ-ಅಸದ್ಧರ್ಮಗಳು, ಬಂಧಮೋಕ್ಷಗಳು—ಇವೇ ಮೊದಲಾದ ಬೌದ್ಧಶಾಸ್ತ್ರಗಳ ಪ್ರತಿಜ್ಞೆಗಳನ್ನು ತ್ಯಜಿಸಬೇಕಾಗುವುದು.[1]

ವಿಜ್ಞಾನವಾದದ ಪ್ರಕಾರ ಜ್ಞಾನವು ಪ್ರದೀಪದಂತೆ ತನಗೆ ತಾನೇ ಪ್ರಕಾಶಿಸುತ್ತದೆ. ಹೊರಗಿನ ವಸ್ತು ಹಾಗೆ ಪ್ರಕಾಶಿಸುವುದಿಲ್ಲ ಆದುದರಿಂದ ಜ್ಞಾನವು ನಮ್ಮ ಅನುಭವಕ್ಕೆ ಬರುತ್ತದೆಯೇ ಹೊರತು ವಸ್ತುವು ಬರುವುದಿಲ್ಲ. ವಸ್ತುವಿಗಿಂತ ಭಿನ್ನವಾದ ಜ್ಞಾನವು ತನಗೆ ತಾನೇ ವಿಷಯವಾಗುತ್ತದೆ ಎಂಬುದು ಸರಿಯಲ್ಲ ವಸ್ತುವಿಗಿಂತ ಭಿನ್ನವಾದ ಜ್ಞಾನದಿಂದ ಬಾಹ್ಯವಸ್ತುವನ್ನು ಅರಿಯುತ್ತೇವೆ ಎಂಬುದು ಲೋಕಪ್ರಸಿದ್ಧವಾಗಿದೆ. ಪ್ರತ್ಯಯವು ತನಗಿಂತ ಭಿನ್ನವಾದ ಮತ್ತೊಂದರಿಂದ ಗ್ರಾಹ್ಯವಾದರೆ, ಅದು ಇನ್ನೊಂದರಿಂದ ಗ್ರಾಹ್ಯವಾಗುತ್ತದೆ, ಅದು ಮತ್ತೊಂದರಿಂದ ಗ್ರಾಹ್ಯವಾಗುತ್ತದೆ—ಎಂಬ ಅನವಸ್ಥಾ-ಪ್ರಸಂಗವೂ ಒದಗುತ್ತದೆ. ಮತ್ತು ಪ್ರತ್ಯಯವು ಪ್ರಕಾಶಾತ್ಮಕವಾಗಿರುವುದರಿಂದ ಅದಕ್ಕೆ ಮತ್ತೊಂದು ಪ್ರತ್ಯಯವು ಬೇಕಾಗುತ್ತದೆ ಎಂದು ಕಲ್ಪಿಸುವವನ ಮತದಲ್ಲಿ—ಅವೆರಡೂ ಪ್ರಕಾಶರೂಪವೆಂಬುದು ಸಮಾನವಾಗಿರುವುದರಿಂದ—ಅವಕ್ಕೆ ಪರಸ್ಪರ ಅವಭಾಸಕತ್ವವು ಹೊಂದುವುದಿಲ್ಲ ; ಆದುದರಿಂದ ಆ ಕಲ್ಪನೆಯು ವ್ಯರ್ಥ—ಎಂದು ವಿಜ್ಞಾನವಾದಿಯು ಹೇಳಿದರೆ ಈ ಆಕ್ಷೇಪಗಳೆರಡೂ ಸರಿಯಲ್ಲ ; ಏಕೆಂದರೆ ಪ್ರತ್ಯಯವನ್ನು ಗ್ರಹಿಸಿದ ಮಾತ್ರದಿಂದಲೇ ಪ್ರತ್ಯಯದ ಸಾಕ್ಷಿಯನ್ನು ಗ್ರಹಿಸಬೇಕೆಂಬ ಆಕಾಂಕ್ಷೆಯಿಲ್ಲದಿರುವುದರಿಂದ ಅನ-ವಸ್ಥಾಪ್ರಸಂಗವು ಬರುವುದಿಲ್ಲ. ಪ್ರತ್ಯಯವೂ ಅದರ ಸಾಕ್ಷಿಯೂ ಸ್ವಭಾವದಲ್ಲಿ ಬೇರೆಬೇರೆಯಾಗಿರುವುದರಿಂದ ಅವೆರಡಕ್ಕೂ ಜ್ಞೇಯ-ಜ್ಞಾತೃ-ಭಾವವಿರುತ್ತದೆ. ಸ್ವಯಂಸಿದ್ಧನಾದ ಸಾಕ್ಷಿಯನ್ನು ಇಲ್ಲವೆಂದು ಹೇಳಲಾಗುವುದಿಲ್ಲ. ಅದ್ವೈತವೇದಾಂತದ ಸಾಕ್ಷಿಯು ಏಕನೂ ನಿತ್ಯನೂ ಆಗಿದ್ದರೆ ವಿಜ್ಞಾನವಾದದ ಪ್ರತ್ಯಯಗಳು ಉತ್ಪತ್ತಿ-ನಾಶ-ಅನೇಕತ್ವಾದಿ-ವಿಶೇಷಗಳನ್ನು ಹೊಂದಿವೆ. ಆದುದರಿಂದ ಪ್ರದೀಪದಂತೆ ಪ್ರತ್ಯಯಗಳು ಅವುಗಳಿಗಿಂತ ಭಿನ್ನನಾದ ಮತ್ತೊಬ್ಬನಿಂದ ಅರಿಯಲ್ಪಡುತ್ತವೆ— ಎಂಬುದನ್ನು ಸಾಧಿಸಿದೆ.

ವಿ.—'ಜ್ಞಾನಕ್ಕಿಂತ ಬೇರೆಯಾದ ವಸ್ತುವಿಲ್ಲ' ಎಂದು ಹೇಳಲಾಗುವುದಿಲ್ಲ. 'ನಾನು ಗಡಿಗೆಯನ್ನು ತಿಳಿಯುತ್ತೇನೆ' ಎಂಬಲ್ಲಿ ಪ್ರತಿಯೊಬ್ಬನ ಜ್ಞಾನವೂ ಸಿದ್ಧವಾಗುತ್ತದೆ. ಸರ್ವಲೋಕಸಾಕ್ಷಿಕವಾದ ಇಂಥ ಜ್ಞಾನವು ಒಬ್ಬ ಜ್ಞಾತೃವಿಗೆ ಸೇರಿದಂತೆ ಒಂದು ಬಾಹ್ಯವಸ್ತುವನ್ನು ಸೂಚಿಸುವಂತೆ ಅಪರೋಕ್ಷವಾಗಿ ಪ್ರಕಾಶಿಸುತ್ತದೆ ; ಇಂಥ ಜ್ಞಾನವನ್ನೇ

---

[1] ತತಶ್ಚ ವಿಜ್ಞಾನಭೇದಪ್ರತಿಜ್ಞಾ ಕ್ಷಣಿಕತ್ವಾದಿಧರ್ಮಪ್ರತಿಜ್ಞಾ ಸ್ವಲಕ್ಷಣಸಾಮಾನ್ಯ-ಲಕ್ಷಣವಾಸ್ಯವಾಸಕತ್ವಾವಿದ್ಯೋಪಪ್ಲವಸದಸದ್ಧರ್ಮಬಂಧಮೋಕ್ಷಾದಿಪ್ರತಿಜ್ಞಾಶ್ಚ ಸ್ವಶಾಸ್ತ್ರ-ಗತಾಸ್ತಾ ಹೀಯೇರನ್ (ಸೂ. ಭಾ.).

ಅವಲಂಬಿಸಿಕೊಂಡು 'ಪರಮಾರ್ಥವು ಜ್ಞಾನಮಾತ್ರವಾಗಿದೆ' ಎಂದು ಹೇಳುವರು. ಎಲ್ಲರ ಹಾಸ್ಯಕ್ಕೂ ಗುರಿಯಾಗುತ್ತಾರೆ.[1] ವಿಷಯಗಳ ವೈಚಿತ್ರ್ಯವೇ ಜ್ಞಾನಗಳ ವೈಚಿತ್ರ್ಯಕ್ಕೆ ಕಾರಣವಾಗಿದೆ. ಒಂದು ವಸ್ತುವಿಗೂ ಅದರ ಜ್ಞಾನಕ್ಕೂ ಇರುವ ಸಂಬಂಧವೇ ಆ ಜ್ಞಾನದ ವೈಶಿಷ್ಟ್ಯಕ್ಕೆ ಕಾರಣವಾಗಿರುತ್ತದೆ. ಈ ಸಂಬಂಧವು ಸಂಯೋಗರೂಪದಲ್ಲಿದೆ; ಏಕೆಂದರೆ ಜ್ಞಾನವೂ ದ್ರವ್ಯವೇ ಪ್ರಭೆಯು ದ್ರವ್ಯವಾಗಿದ್ದರೂ ಒಂದು ಪ್ರದೀಪಕ್ಕೆ ಗುಣವಾಗಿರುತ್ತದೆ; ಹಾಗೆಯೇ ಜ್ಞಾನವು ದ್ರವ್ಯವಾಗಿದ್ದರೂ ಆತ್ಮನಿಗೆ ಗುಣವಾಗಿರುತ್ತದೆ[2] ಆದುದರಿಂದ ಬಾಹ್ಯವಸ್ತುಗಳ ಅಭಾವವಿಲ್ಲ

**ದ್ವೈ.**—ಜಗತ್ತು ಶೂನ್ಯವೆಂದು ಹೇಳಲಾಗುವುದಿಲ್ಲ; ಏಕೆಂದರೆ ಅದು ನಮಗೆ ಕಂಡುಬರುತ್ತದೆ[3]

## ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ॥ ೨೯ ॥

೨೯. ವೈಧರ್ಮ್ಯವಿರುವುದರಿಂದಲೂ (ಜಾಗ್ರದವಸ್ಥೆಯ ಪ್ರತ್ಯಯಗಳು) ಸ್ವಪ್ನಾದಿಗಳಂತಲ್ಲ

'ಸ್ವಪ್ನಾದಿಗಳಲ್ಲಿ ಕಂಡುಬರುವ ಪ್ರತ್ಯಯಗಳಂತೆ ಜಾಗ್ರದವಸ್ಥೆಯಲ್ಲಿ ಕಂಡುಬರುವ ಕಂಬ ಮೊದಲಾದ ಪ್ರತ್ಯಯಗಳೂ ಕೂಡ ಬಾಹ್ಯವಸ್ತುಗಳಿಲ್ಲದೆ ಇರಬಹುದು; ಏಕೆಂದರೆ ಎರಡೂ ಪ್ರತ್ಯಯಗಳಾಗಿರುತ್ತವೆ' ಎಂದು ಹೇಳಿದ ವಿಜ್ಞಾನವಾದಿಗೆ ಉತ್ತರವನ್ನು ಕೊಡಬೇಕಾಗಿದೆ ಸ್ವಪ್ನ-ಜಾಗರಿತಗಳಿಗೆ ವೈಧರ್ಮ್ಯವಿರುವುದರಿಂದ ಸ್ವಪ್ನಾದಿಗಳ ಪ್ರತ್ಯಯಗಳಂತೆ ಜಾಗ್ರದವಸ್ಥೆಯ ಪ್ರತ್ಯಯಗಳು ಆಗಿರಲಾರವು. ಆ ವೈಧರ್ಮ್ಯವು ಯಾವುದು ? ಬಾಧಾಬಾಧಾಗಳು. ಸ್ವಪ್ನದಲ್ಲಿ ಕಂಡುಬರುವ ವಸ್ತುಗಳು ಜಾಗರಿತದಲ್ಲಿ ಬಾಧಿತವಾಗುತ್ತವೆ. ಹೀಗೆಯೇ ಮಾಯೆ ಮರೀಚಿಕೆ ಮೊದಲಾದುವುಗಳಲ್ಲಿ ಕಂಡುಬರುವ ವಸ್ತುಗಳು ಬಾಧಿತವಾಗುತ್ತವೆ. ಆದರೆ ಜಾಗ್ರದವಸ್ಥೆಯಲ್ಲಿ ಕಂಡುಬರುವ ವಸ್ತುಗಳು ಯಾವ ಅವಸ್ಥೆಯಲ್ಲಿಯೂ ಬಾಧಿತವಾಗುವುದಿಲ್ಲ.[4] ಇದಲ್ಲದೆ ಸ್ವಪ್ನದಲ್ಲಿ ನೋಡಿದ್ದು

---

[1] ಏವಂರೂಪೇಣ ಸಕರ್ಮಕೇಣ ಸಕರ್ತೃಕೇನ ಜ್ಞಾತ್ರಾತ್ಮಾರ್ಥೇನ ಸರ್ವಲೋಕಸಾಕ್ಷಿಕಮಪರೋಕ್ಷಮವಭಾಸಮಾನೇನೈವ ಜ್ಞಾನಮಾತ್ರಮೇವ ಪರಮಾರ್ಥ ಇತಿ ಸಾಧಯಂತಃ ಸರ್ವಲೋಕೋಪಹಾಸೋಪಕರಣಂ ಭವಂತಿ (ಶ್ರೀಭಾಷ್ಯ).

[2] ಪ್ರಭಾದ್ರವ್ಯಸ್ಯ ಪ್ರದೀಪಗುಣಭೂತಸ್ಯೇವ ಜ್ಞಾನಸ್ಯಾಪ್ಯಾತ್ಮಗುಣಭೂತಸ್ಯ ದ್ರವ್ಯತ್ವಮವಿರುದ್ಧಮಿತ್ಯುಕ್ತಮ್ (ಶ್ರೀಭಾಷ್ಯ).

[3] ನ ಚ ಜಗದೇವ ಶೂನ್ಯಮಿತಿ ವಾಚ್ಯಮ್ । ದೃಷ್ಟತ್ವಾತ್ (ಮ. ಭಾ.).

[4] ನೈವಂ ಜಾಗರಿತೋಪಲಬ್ಧಂ ವಸ್ತು ಸ್ತಂಭಾದಿಕಂ ಕಸ್ಯಾಂಚಿದಪ್ಯವಸ್ಥಾಯಾಂ ಬಾಧ್ಯತೇ (ಸೂ. ಭಾ.).

ಸ್ಮೃತಿಯಾಗಿರುತ್ತದೆ, ಜಾಗರಿತದಲ್ಲಿ ನೋಡಿದ್ದು ಪ್ರಮಾಣಜನ್ಯವಾದ ಅನುಭವವಾಗಿರುತ್ತದೆ.[1] ಅನುಭವದಲ್ಲಿ ವಸ್ತುವಿದ್ದರೆ ಸ್ಮೃತಿಯಲ್ಲಿ ವಸ್ತುವಿರುವುದಿಲ್ಲ ಎಂಬ ಭೇದವು ಎಲ್ಲರಿಗೂ ತಿಳಿದಿರುತ್ತದೆ. ಪ್ರಾಜ್ಞರಾದವರು ತಮ್ಮ ಅನುಭವವನ್ನು ತಿರಸ್ಕರಿಸುವುದು ಯುಕ್ತವಲ್ಲ. ಇದಲ್ಲದೆ ವಿಜ್ಞಾನವಾದಿಯು ತನ್ನ ಅನುಭವಕ್ಕೆ ವಿರೋಧವು ಬರುವುದರಿಂದ ಜಾಗರಿತ ಪ್ರತ್ಯಯಗಳಿಗೆ ಸ್ವತಃ ನಿರಾಲಂಬನತ್ವವನ್ನು ಹೇಳಲಾರದೆ ಸ್ವಪ್ನ-ಪ್ರತ್ಯಯಗಳ ಸಾದೃಶ್ಯದಿಂದ ಹಾಗೆ ಹೇಳಲು ಹೊರಟಿರುತ್ತಾನೆ. ಯಾವದು ಯಾವುದಕ್ಕೆ ಧರ್ಮವಾಗಿರಲಾರದೊ ಅದು ಮತ್ತೊಂದರ ಸಾದೃಶ್ಯದಿಂದ ಸಂಭವಿಸಲಾರದು. ಅಗ್ನಿಯು ಉಷ್ಣ ಎಂಬ ಅನುಭವವು ನೀರಿನ ಸಾದೃಶ್ಯದಿಂದ ಅದು ಶೀತಲವಾಗಿದೆ ಎಂದಾಗುವುದಿಲ್ಲ.

ವಿ.—ಸ್ವಪ್ನದ ಜ್ಞಾನಗಳು ನಿದ್ರಾದಿದೋಷಗಳಿಂದ ಕಲುಷಿತವಾದ ಕರಣಗಳಿಂದ ಉತ್ಪನ್ನವಾಗುತ್ತವೆ ಮತ್ತು ಜಾಗರಿತಜ್ಞಾನಗಳಿಂದ ಬಾಧಿತವಾಗುತ್ತವೆ. ಜಾಗರಿತ ಜ್ಞಾನಗಳು ಸ್ವಪ್ನಜ್ಞಾನಗಳಿಗೆ ಅತ್ಯಂತವಿರುದ್ಧವಾಗಿರುವುದರಿಂದ ಎರಡಕ್ಕೂ ಸಾಮ್ಯವಿಲ್ಲ. ಜ್ಞಾನಗಳೆಲ್ಲ ವಿಷಯಶೂನ್ಯವಾಗಿದ್ದರೆ ವಿಜ್ಞಾನವಾದಿಯು ಸಾಧಿಸಬೇಕಾದ ವಿಷಯವನ್ನು ಸಾಧಿಸಲೂ ಆಗುವುದಿಲ್ಲ; ಏಕೆಂದರೆ ಇವನ ಅನುಭವಕ್ಕೆ ನಿಜವಾದ ವಿಷಯವೇ ಇರುವುದಿಲ್ಲ.[2] ಒಂದು ವೇಳೆ ಅದಕ್ಕೆ ವಿಷಯವಿದ್ದರೆ ವಿಷಯಶೂನ್ಯವಾದ ಜ್ಞಾನವೇ ಇರುವುದಿಲ್ಲ; ಏಕೆಂದರೆ ಅನುಮಾನಜ್ಞಾನದಂತೆ ಎಲ್ಲವೂ ಜ್ಞಾನವೇ ಆಗಿರುತ್ತದೆ.

ದ್ವೈ.—'ವೈಧರ್ಮ್ಯವಿರುವುದರಿಂದ ಸ್ವಪ್ನಾದಿಗಳ ಹಾಗೆ ಜಗತ್ತು ಮಿಥ್ಯೆಯಲ್ಲ' ಎಂಬುದು ಸೂತ್ರಾರ್ಥ.

ನಮ್ಮ ಅನುಭವಕ್ಕೆ ವಿಷಯವಾದ ಜಗತ್ತು ಸ್ವಪ್ನಾದಿಗಳ ಹಾಗೆ ಶೂನ್ಯವೆಂದು ಹೇಳಲಾಗುವುದಿಲ್ಲ; ಏಕೆಂದರೆ 'ಇದು ಸ್ವಪ್ನ ಮಾತ್ರ, ಸರ್ಪವಲ್ಲ' ಎಂಬ ಉತ್ತರಕಾಲದ ಅನುಭವದಂತೆ ಜಗತ್ತಿನಲ್ಲಿ ಬಾಧವಿಲ್ಲ.[3] ಜಗತ್ತಿನ ಶೂನ್ಯತ್ವವನ್ನು ಸಾಧಿಸುವುದಕ್ಕೆ ಯಾವ ಪ್ರಮಾಣವೂ ಇಲ್ಲ.

---

[1] ಅಪಿ ಚ ಸ್ಮೃತಿರೇಷಾ ಯತ್ ಸ್ವಪ್ನದರ್ಶನಮ್ । ಉಪಲಬ್ಧಿಸ್ತು ಜಾಗರಿತದರ್ಶ-ನಮ್ (ಸೂ. ಭಾ)

[2] ಸರ್ವೇಷಾಂ ಚ ಜ್ಞಾನಾನಾಮರ್ಥಶೂನ್ಯತ್ವೇ ಭವದ್ಭಿಃ ಸಾಧ್ಯೋಽಪ್ಯರ್ಥೋ ನ ಸಿದ್ಧ್ಯತಿ ನಿರಾಲಂಬನಾನುಮಾನಸ್ಯಾಪ್ಯರ್ಥಶೂನ್ಯತ್ವಾತ್ (ಶ್ರೀಭಾಷ್ಯ).

[3] ನ ಚ ದೃಷ್ಟಸ್ಯಾಪಿ ಸ್ವಪ್ನಾದಿವದಭಾವಃ । ತಸ್ಯೋತ್ತರಕಾಲೇ ಸ್ವಪ್ನೋಽಯಂ ನಾಯಂ ಸರ್ಪ ಇತ್ಯಾದ್ಯನುಭವಾತ್ (ಮ. ಭಾ.).

## ನ ಭಾವೋಽನುಪಲಬ್ಧೇಃ* ॥ ೩೦ ॥

೩೦. (ವಾಸನೆಗಳಿಗೆ) ಅಸ್ತಿತ್ವವಿಲ್ಲ; ಏಕೆಂದರೆ (ವಿಜ್ಞಾನವಾದಿಯ ಪ್ರಕಾರ ಬಾಹ್ಯವಸ್ತುಗಳು) ಉಪಲಬ್ಧವಾಗುವುದಿಲ್ಲ

ಬಾಹ್ಯವಸ್ತುಗಳಿಲ್ಲದಿದ್ದರೂ ವಾಸನೆಗಳ ವೈಚಿತ್ರ್ಯದಿಂದ ಜ್ಞಾನಗಳ ವೈಚಿತ್ರ್ಯವು ಉಪಪನ್ನವಾಗುತ್ತದೆ ಎಂದು ವಿಜ್ಞಾನವಾದಿಯು ಸಾಧಿಸುತ್ತಾನೆ. ಅವನ ಪಕ್ಷದಲ್ಲಿ ಬಾಹ್ಯವಸ್ತುಗಳ ಉಪಲಬ್ಧಿಯಿಲ್ಲದಿರುವುದರಿಂದ ವಾಸನೆಗಳಿಗೆ ಅಸ್ತಿತ್ವವಿಲ್ಲ. ಬಾಹ್ಯವಸ್ತುಗಳ ಜ್ಞಾನದಿಂದಲೇ ನಾನಾರೂಪವಾದ ವಾಸನೆಗಳು ಉತ್ಪನ್ನವಾಗುತ್ತವೆ. ಬಾಹ್ಯವಸ್ತುಗಳ ಉಪಲಬ್ಧಿಯಿಲ್ಲದಿದ್ದರೆ ಯಾವ ನಿಮಿತ್ತದಿಂದ ವಾಸನೆಗಳು ಆಗಬೇಕು? ವಾಸನೆಗಳು ಅನಾದಿಯಾಗಿರುತ್ತವೆ ಎಂದರೆ ಅಂಧಪರಂಪರಾನ್ಯಾಯದಿಂದ ಆಧಾರ-ರಹಿತವೂ ವ್ಯವಹಾರಲೋಪಿನಿಯೂ ಆದ ಅನವಸ್ಥೆಯಾಗುವುದೇ ಹೊರತು ಅವನ ಅಭಿಪ್ರಾಯವು ಸಿದ್ಧಿಸಲಾರದು. ಅನ್ವಯ-ವ್ಯತಿರೇಕಗಳೂ ಬಾಹ್ಯವಸ್ತುಗಳನ್ನೇ ಸ್ಥಾಪಿಸುತ್ತವೆ. ವಾಸನೆಗಳಿಲ್ಲದೆ ವಸ್ತುವಿನ ಜ್ಞಾನವುಂಟಾಗಬಹುದು; ಬಾಹ್ಯವಸ್ತುವಿನ ಉಪಲಬ್ಧಿಯಿಲ್ಲದೆ ವಾಸನೆಯೇ ಉಂಟಾಗುವುದಿಲ್ಲ.[1] ವಾಸನೆಗಳೆಂದರೆ ಸಂಸ್ಕಾರವಿಶೇಷಗಳು. ಸಂಸ್ಕಾರಗಳು ಆಶ್ರಯವಿಲ್ಲದೆ ಆಗುವುದಿಲ್ಲ. ವಿಜ್ಞಾನವಾದಿಯ ಮತದಲ್ಲಿ ವಾಸನಾಶ್ರಯವಿಲ್ಲ; ಏಕೆಂದರೆ ಅದು ಪ್ರಮಾಣದಿಂದ ಕಂಡುಬರುವುದಿಲ್ಲ.

ವಿ.—'ವಿಷಯಶೂನ್ಯವಾದ ಕೇವಲಜ್ಞಾನದ ಅಸ್ತಿತ್ವವು ಸಂಭವಿಸುವುದಿಲ್ಲ; ಏಕೆಂದರೆ ಅಂಥ ಜ್ಞಾನವು ಎಲ್ಲಿಯೂ ಉಪಲಬ್ಧವಾಗಿಲ್ಲ' ಎಂಬುದು ಸೂತ್ರಾರ್ಥ.

ಕರ್ತೃವಿನಲ್ಲಿಲ್ಲದ ಮತ್ತು ವಸ್ತುವನ್ನು ಸೂಚಿಸದ ಜ್ಞಾನವನ್ನು ನೋಡಲು ಎಲ್ಲಿಯೂ ಸಾಧ್ಯವಿಲ್ಲ.[2] ಸ್ವಪ್ನಜ್ಞಾನಗಳೂ ಕೂಡ ವಸ್ತುಶೂನ್ಯವಲ್ಲ.

ದ್ವೈ.—'ಜ್ಞಾನವು ಜಗತ್ತಾಗಿ ಪರಿಣಾಮವನ್ನು ಹೊಂದಿಲ್ಲ; ಏಕೆಂದರೆ ಇದು ಯಾರ ಅನುಭವಕ್ಕೂ ಬರುವುದಿಲ್ಲ'[3] ಎಂಬುದು ಸೂತ್ರಾರ್ಥ.

ಈ ಅಧಿಕರಣದಲ್ಲಿ ಸೂತ್ರಕಾರರು ವಿಜ್ಞಾನವಾದವನ್ನು ನಿರಾಕರಿಸುತ್ತಾರೆ.

---

* ಮಧ್ವಭಾಷ್ಯದಲ್ಲಿ ಈ ಸೂತ್ರದಿಂದ ಹಿಡಿದು ಈ ಅಧಿಕರಣದ ಕೊನೆಯವರೆಗೂ ಅನುಪಲಬ್ಧ್ಯಧಿಕರಣವೆಂಬ ಹೊಸ ಅಧಿಕರಣವಾಗಿದೆ.

[1] ಅಪಿ ಚ ವಿನ್ಯಾಪಿ ವಾಸನಾಭಿರರ್ಥೋಪಲಬ್ಧ್ಯುಪಗಮಾದ್ವಿನಾ ತ್ವರ್ಥೋಪಲಬ್ಧ್ಯಾ ವಾಸನೋತ್ಪತ್ತ್ಯನಭ್ಯುಪಗಮಾದರ್ಥಸದ್ಭಾವಮೇವಾನ್ವಯವ್ಯತಿರೇಕಾವಪಿ ಪ್ರತಿಷ್ಠಾಪಯತಃ (ಸೂ. ಭಾ.).

[2] ನ ಹ್ಯಕರ್ತೃಕಸ್ಯಾಕರ್ಮಕಸ್ಯ ವಾ ಜ್ಞಾನಸ್ಯ ಕ್ವಚಿದುಪಲಬ್ಧಿಃ (ಶ್ರೀಭಾಷ್ಯ).

[3] ನ ವಿಜ್ಞಾನಮಾತ್ರಂ ಜಗತ್ । ತಥಾಽನುಭವಾಭಾವಾತ್ (ಮ. ಭಾ.).

**ಕ್ಷಣಿಕತ್ವಾಚ್ಚ* || ೩೧ ||**

೩೧. (ಆಲಯವಿಜ್ಞಾನವು) ಕ್ಷಣಿಕವಾದುದರಿಂದ (ವಾಸನೆಗಳಿಗೆ ಆಶ್ರಯ ವಾಗಲಾರದು)

ಆಲಯವಿಜ್ಞಾನವು[1] ವಾಸನೆಗಳಿಗೆ ಆಶ್ರಯವೆಂಬ ಕಲ್ಪನೆಯು ಸರಿಯಲ್ಲ ; ಏಕೆಂದರೆ ಜ್ಞಾನವು ಕ್ಷಣಿಕವೆಂದು ಒಪ್ಪಿಕೊಂಡಿರುವುದರಿಂದ ಮತ್ತು ಅನವಸ್ಥಿತ-ರೂಪವೂ ಆಗಿರುವುದರಿಂದ—ಪ್ರವೃತ್ತಿವಿಜ್ಞಾನದಂತೆ--ವಾಸನೆಗಳಿಗೆ ಆಶ್ರಯವಾಗಲಾರದು. ಕಾಲತ್ರಯಕ್ಕೆ ಸಂಬಂಧಿಸಿದ ಒಂದು ಅನ್ವಯಿ ಇಲ್ಲದಿದ್ದರೆ ಅಥವಾ ಎಲ್ಲವನ್ನೂ ಅರಿಯುವ ಕೂಟಸ್ಥನಿಲ್ಲದಿದ್ದರೆ ದೇಶಕಾಲನಿಮಿತ್ತಗಳನ್ನು ಅಪೇಕ್ಷಿಸುವ ವಾಸನೆಗಳನ್ನು ಅವಲಂಬಿಸಿರುವ ಸ್ಮೃತಿ, ಪ್ರತ್ಯಭಿಜ್ಞೆ ಮೊದಲಾದುವು ಸಂಭವಿಸಲಾರವು.[2] ಆಲಯವಿಜ್ಞಾನವು ಸ್ಥಿರರೂಪವೆಂದು ಹೇಳಿದರೆ ಸಿದ್ಧಾಂತದ ಹಾನಿಯೇ ಆಗುವುದು.

ಪ್ರಮಾಣಗಳಿಗೆಲ್ಲ ವಿರುದ್ಧವಾದ ಶೂನ್ಯವಾದಿಯ ಪಕ್ಷವನ್ನು ಖಂಡಿಸಲು ಆದರವನ್ನು ತೋರಿಸಬೇಕಾಗಿಲ್ಲ ಲೋಕವ್ಯವಹಾರವನ್ನು ಅಲ್ಲಗಳೆಯುವ ಮತ್ತೊಂದು ತತ್ತ್ವವನ್ನು ಆಶ್ರಯಿಸಿದ ಹೊರತು ಸರ್ವಪ್ರಮಾಣಸಿದ್ಧವಾದ ಲೋಕವ್ಯವಹಾರವನ್ನು ತಿರಸ್ಕರಿಸಲು ಸಾಧ್ಯವಿಲ್ಲ ; ಏಕೆಂದರೆ ಅಪವಾದವಿಲ್ಲದಿದ್ದರೆ ಸಾಮಾನ್ಯತತ್ತ್ವವು ಸಿದ್ಧವಾಗುತ್ತದೆ.[3]

**ದ್ವೈ.**—ಜ್ಞಾನವು ಕ್ಷಣಿಕವಾಗಿದೆ, ಜಗತ್ತು ಸ್ಥಾಯಿಯಾಗಿದೆ ; ಆದುದರಿಂದ ಕ್ಷಣಿಕವಾದುದಕ್ಕೂ ಸ್ಥಾಯಿಯಾದುದಕ್ಕೂ ಐಕ್ಯವಿಲ್ಲ.[4]

**ಸರ್ವಥಾನುಪಪತ್ತೇಶ್ಚ* || ೩೨ ||**

೩೨. ಸರ್ವವಿಧದಿಂದಲೂ ಅನುಪಪನ್ನವಾಗಿರುವುದರಿಂದ (ವೈನಾಶಿಕಪಕ್ಷವು ಸರಿಯಲ್ಲ.)

---

* ಈ ಸೂತ್ರವು ಶ್ರೀಭಾಷ್ಯದಲ್ಲಿ ಕಂಡುಬರುವುದಿಲ್ಲ.

1 ವಿಜ್ಞಾನಸ್ಕಂಧವು ಆಲಯವಿಜ್ಞಾನ ಪ್ರವೃತ್ತಿವಿಜ್ಞಾನ ಎಂದು ಎರಡು ವಿಧವಾಗಿದೆ. 'ನಾನು' ಎಂಬ ಪ್ರತ್ಯಯಗಳ ಸಂತಾನವು ಆಲಯವಿಜ್ಞಾನವೆನಿಸಿದೆ. ರೂಪವೇ ಮೊದಲಾದ ಬಾಹ್ಯವಸ್ತುಗಳನ್ನು ಸೂಚಿಸುವ ಜ್ಞಾನವು ಪ್ರವೃತ್ತಿವಿಜ್ಞಾನವೆನಿಸಿದೆ.

2 ನ ಹಿ ಕಾಲತ್ರಯಸಂಬಂಧಿನ್ಯೇಕಸ್ಮಿನ್ನನ್ವಯಿನ್ಯಸತಿ ಕೂಟಸ್ಥೇ ವಾ ಸರ್ವಾರ್ಥದರ್ಶಿನಿ ದೇಶಕಾಲನಿಮಿತ್ತಾಪೇಕ್ಷವಾಸನಾಧಾನಸ್ಮೃತಿಪ್ರತಿಸಂಧಾನಾದಿವ್ಯವಹಾರಃ ಸಂಭವತಿ (ಸೂ. ಭಾ).

3 ನಹ್ಯಯಂ ಸರ್ವಪ್ರಮಾಣಪ್ರಸಿದ್ಧೋ ಲೋಕವ್ಯವಹಾರೋಽನ್ಯತ್ತತ್ತ್ವಮನಧಿಗಮ್ಯ ಶಕ್ಯತೇಽಪಹ್ನೋತುಮಪವಾದಾಭಾವ ಉತ್ಸರ್ಗಪ್ರಸಿದ್ಧೇಃ (ಸೂ. ಭಾ.).

4 ಜ್ಞಾನಂ ಕ್ಷಣಿಕಮ್ । ಅರ್ಥಾನಾಂ ಚ ಸ್ಥಾಯಿತ್ವಮುಕ್ತಮ್ । ಅತಶ್ಚ ನೈಕ್ಯಮ್ (ಮ. ಭಾ.).

* ಈ ಸೂತ್ರವು ಶ್ರೀಭಾಷ್ಯದಲ್ಲಿ ಸರ್ವಥಾನುಪಪತ್ತ್ಯಧಿಕರಣ ಎಂಬ ಬೇರೆಯಾದ ಅಧಿಕರಣವಾಗಿದೆ.

ಇನ್ನು ಹೆಚ್ಚು ಹೇಳಿ ಪ್ರಯೋಜನವಿಲ್ಲ. ಬೌದ್ಧಮತವನ್ನು ಯುಕ್ತಿಯಿಂದ ಸಮರ್ಥಿಸಬಹುದೊ ಎಂಬುದನ್ನು ಎಷ್ಟು ವಿಧದಿಂದ ಪರೀಕ್ಷಿಸಿದರೂ ಅದು—ಮರಳು ಭೂಮಿಯಲ್ಲಿರುವ ಬಾವಿಯ ಗೋಡೆಗಳಂತೆ—ಕುಸಿದುಬೀಳುತ್ತದೆ. ಇದಲ್ಲದೆ ಬಾಹ್ಯ ವಸ್ತುವಿನ ಸತ್ಯತ್ವ, ವಿಜ್ಞಾನದ ಸತ್ಯತ್ವ, ಶೂನ್ಯತ್ವ—ಎಂಬ ಪರಸ್ಪರವಿರುದ್ಧವಾದ ವಾದತ್ರಯವನ್ನು ಉಪದೇಶಿಸಿದ ಬುದ್ಧನು ತಾನು ಅಸಂಬದ್ಧಪ್ರಲಾಪಿ ಎಂಬುದನ್ನು ಅಥವಾ ವಿರುದ್ಧಾರ್ಥಪ್ರತಿಪತ್ತಿಯಿಂದ ಜನರು ಮೋಹಗೊಳ್ಳಲಿ ಎಂದು ಜನರಲ್ಲಿರುವ ತನ್ನ ದ್ವೇಷವನ್ನು ಸ್ಪಷ್ಟೀಕರಿಸಿರುತ್ತಾನೆ ಶ್ರೇಯಸ್ಕಾಮರಾದವರು ಈ ದರ್ಶನವನ್ನು ಸರ್ವಥಾ ಅನಾದರಿಸಬೇಕು ಎಂಬುದು ಸೂತ್ರದ ಅಭಿಪ್ರಾಯ.

ವಿ.—ಈ ಸೂತ್ರವು ಮಾಧ್ಯಮಿಕವಾದವನ್ನು ನಿರಾಕರಿಸುತ್ತದೆ ಮಾಧ್ಯಮಿಕರ ಶೂನ್ಯವಾದವು ಬೌದ್ಧಮತದ ಸಾರವು ಕ್ಷಣಿಕತ್ವವೇ ಮೊದಲಾದ ವಾದಗಳನ್ನು ಶಿಷ್ಯರ ಬುದ್ಧಿಯೋಗ್ಯತೆಗೆ ಅನುಸಾರವಾಗಿ ಉಪದೇಶಿಸಿದ್ದಾಯಿತು ವಿಜ್ಞಾನವಾಗಲಿ ಬಾಹ್ಯ-ವಸ್ತುವಾಗಲಿ ನಿಜವಾಗಿ ಇರುವುದಿಲ್ಲ, ಶೂನ್ಯವೊಂದೇ ತತ್ತ್ವವು. ಮೋಕ್ಷವೆಂದರೆ ಅಭಾವ ವನ್ನು ಹೊಂದುವುದು ಎಲ್ಲವೂ ಸತ್ ಆಗಿರುವುದೊ ಅಸತ್ ಆಗಿರುವುದೊ ಅಥವಾ ಇನ್ನೇನಾದರೂ ಆಗಿರುವುದೊ ?—ಎಂದು ಮಾಧ್ಯಮಿಕನನ್ನು ಕೇಳಬೇಕಾಗಿರುತ್ತದೆ. ಈ ಮೂರರಲ್ಲಿ ಯಾವುದೂ ಶೂನ್ಯವನ್ನು ಸ್ಥಾಪಿಸಲಾರದು. ಲೋಕದಲ್ಲಿ ಸತ್ ಅಸತ್ ಎಂಬ ಪದಗಳೂ, ಅವುಗಳ ಅರ್ಥಗಳೂ ನಿಜವಾಗಿರುವ ವಸ್ತುಗಳ ಅವಸ್ಥಾವಿಶೇಷಗಳನ್ನು ಸೂಚಿಸುತ್ತವೆ;[1] ಆದುದರಿಂದ 'ಸರ್ವವೂ ಶೂನ್ಯವು' ಎಂದು ಅವನು ಹೇಳಿದರೆ 'ಸರ್ವವೂ ಸತ್' ಎಂದಾಗುತ್ತದೆ; ಏಕೆಂದರೆ ಸದ್ರೂಪವನ್ನು ಹೊಂದಿರುವ ಪ್ರತಿಯೊಂದು ವಸ್ತುವಿಗೂ ಬೇರೊಂದು ಅವಸ್ಥೆ ಇದೆ ಎಂಬುದು ತಿಳಿದುಬರುತ್ತದೆ. ಇದಲ್ಲದೆ ಶೂನ್ಯವಾದಿಯಾದವನು ಯಾವುದೋ ಒಂದು ಪ್ರಮಾಣದಿಂದ ಶೂನ್ಯವನ್ನು ಅರಿತುಕೊಂಡು ಶೂನ್ಯವನ್ನು ಸಾಧಿಸ ಬೇಕಾಗುತ್ತದೆ ; ಮತ್ತು ಅವನು ಆ ಪ್ರಮಾಣದ ಸತ್ಯತ್ವವನ್ನು ಒಪ್ಪಿಕೊಳ್ಳಬೇಕು. ಆ ಪ್ರಮಾಣವು ಸತ್ಯವಲ್ಲದಿದ್ದರೆ ಎಲ್ಲವೂ ಸತ್ಯವಾಗುವುದು. ಆದುದರಿಂದ ಸರ್ವಶೂನ್ಯತ್ವವು ಎಲ್ಲ ವಿಧದಿಂದಲೂ ಅನುಪಪನ್ನವಾಗಿದೆ

**ದ್ವೈ.**—'ಪ್ರಮಾಣವಿಲ್ಲದಿರುವುದರಿಂದಲೂ ಸರ್ವಶ್ರುತಿಸ್ಮೃತಿಯುಕ್ತಿಗಳಿಗೆ ವಿರುದ್ಧ ವಾಗಿರುವುದರಿಂದಲೂ ಈ ಬೌದ್ಧಪಕ್ಷಗಳನ್ನು ಸ್ವೀಕರಿಸಕೂಡದು'[2] ಎಂಬುದು ಸೂತ್ರಾರ್ಥ.

---

[1] ಲೋಕೇ ಭಾವಾಭಾವಶಬ್ದಯೋಸ್ತತ್ಪ್ರತೀತ್ಯೋಶ್ಚ ವಿದ್ಯಮಾನಸ್ಯೈವ ವಸ್ತು-ನೋಽವಸ್ಥಾವಿಶೇಷಗೋಚರತ್ವಸ್ಯ ಪ್ರತಿಪಾದಿತತ್ವಾತ್ (ಶ್ರೀಭಾಷ್ಯ).

[2] ಪ್ರಮಾಣಾಭಾವಾತ್ ಸರ್ವಶ್ರುತಿಸ್ಮೃತಿಯುಕ್ತಿವಿರುದ್ಧತ್ವಾಚ್ಚ ನೈತೇ ಪಕ್ಷಾ ಗ್ರಾಹ್ಯಾಃ (ಮ. ಭಾ.).

## ೬. ಏಕಸ್ಮಿನ್ನಸಂಭವಾಧಿಕರಣ*

(ಸೂ. ೩೩–೩೬)

### ನೈಕಸ್ಮಿನ್ನಸಂಭವಾತ್ ॥ ೩೩ ॥

೩೩. ಒಂದೇ ಧರ್ಮಿಯಲ್ಲಿ (ವಿರುದ್ಧಧರ್ಮಗಳು) ಸಂಭವಿಸುವುದಿಲ್ಲವಾದುದರಿಂದ (ಜೈನಮತವು) ಸರಿಯಲ್ಲ.

ಜೈನರು ಜೀವ ಅಜೀವ ಆಸ್ರವ ಸಂವರ ನಿರ್ಜರ ಬಂಧ ಮೋಕ್ಷ—ಎಂಬ ಸಪ್ತ ಪದಾರ್ಥಗಳನ್ನು[1] ಒಪ್ಪಿಕೊಂಡಿರುತ್ತಾರೆ- ಜೀವ ಅಜೀವ ಎಂಬ ಎರಡು ಪದಾರ್ಥಗಳಲ್ಲಿಯೇ ಉಳಿದ ಐದು ಪದಾರ್ಥಗಳನ್ನೂ ಅಂತರ್ಗತಮಾಡಬಹುದೆಂಬುದು ಅವರ ಮತ. ಜೀವಾಜೀವಗಳಿಗೆ ಪಂಚಾಸ್ತಿಕಾಯವೆಂಬ ಇನ್ನೊಂದು ವಿವರಣೆಯಿದೆ : ಜೀವಾಸ್ತಿಕಾಯ ಪುದ್ಗಲಾಸ್ತಿಕಾಯ ಧರ್ಮಾಸ್ತಿಕಾಯ ಅಧರ್ಮಾಸ್ತಿಕಾಯ ಮತ್ತು ಆಕಾಶಾಸ್ತಿಕಾಯ. ಇವರು ಸಂಪ್ತಭಂಗೀನಯ ಎಂಬ ನ್ಯಾಯವನ್ನು ಈ ಪದಾರ್ಥಗಳಿಗೆಲ್ಲ ಯೋಜನೆ ಮಾಡುತ್ತಾರೆ : **ಸ್ಯಾದಸ್ತಿ** (ಹೇಗೊ ಇದೆ), **ಸ್ಯಾನ್ನಾಸ್ತಿ** (ಹೇಗೊ ಇಲ್ಲ), **ಸ್ಯಾದಸ್ತಿ ಚ ನಾಸ್ತಿ ಚ** (ಹೇಗೊ ಇದೆ ಮತ್ತು ಇಲ್ಲ), **ಸ್ಯಾದವಕ್ತವ್ಯಃ** (ಹೇಗೊ ಅವರ್ಣನೀಯವಾಗಿದೆ), **ಸ್ಯಾದಸ್ತಿ ಚ ಅವಕ್ತವ್ಯಶ್ಚ** (ಹೇಗೊ ಇದೆ ಮತ್ತು ಅವರ್ಣನೀಯವಾಗಿದೆ), **ಸ್ಯಾನ್ನಾಸ್ತಿ ಚ ಅವಕ್ತವ್ಯಶ್ಚ** (ಹೇಗೊ ಇಲ್ಲ ಮತ್ತು ಅವರ್ಣನೀಯವಾಗಿದೆ), **ಸ್ಯಾದಸ್ತಿ ಚ ನಾಸ್ತಿ ಚ ಅವಕ್ತವ್ಯಃ** (ಹೇಗೊ ಇದೆ ಮತ್ತು ಇಲ್ಲ, ಅವರ್ಣನೀಯವಾಗಿದೆ).

ಈ ಮತವು ಸರಿಯಲ್ಲ ಎಂದು ಸೂತ್ರಕಾರರು ಹೇಳುತ್ತಾರೆ ; ಏಕೆಂದರೆ ಇರುವಿಕೆ, ಇಲ್ಲದಿರುವಿಕೆ ಮೊದಲಾದ ವಿರುದ್ಧಧರ್ಮಗಳು ಶೀತೋಷ್ಣಗಳಂತೆ ಒಂದೇ ಧರ್ಮಿಯಲ್ಲಿ ಒಂದೇ ಕಾಲದಲ್ಲಿ ಸಂಭವಿಸಲಾರವು. ಇಷ್ಟು ಇಂಥವು–ಎಂದು ನಿರ್ಧರಿಸಿದ ಸಪ್ತಪದಾರ್ಥಗಳು 'ಹಾಗೆಯೇ ಇರಬೇಕು' ಅಥವಾ 'ಹಾಗಿಲ್ಲವೇ ಇಲ್ಲ' ಎಂದಾಗಬೇಕು. ಆದರೆ 'ಹಾಗಾದರೂ ಇರಬಹುದು', 'ಹಾಗಿಲ್ಲದೆಯೂ ಇರಬಹುದು' ಎಂಬುದು ಸಂಶಯಜ್ಞಾನದಂತೆ ಅಪ್ರಮಾಣವಾಗುತ್ತದೆ 'ವಸ್ತುವಿನ ಸ್ವರೂಪ ಅನೇಕ' ಎಂದು ನಿರ್ಧಾರಿತರೂಪವಾಗಿಯೇ ಜ್ಞಾನವು ಹುಟ್ಟುವುದರಿಂದ ಸಂಶಯಜ್ಞಾನದಂತೆ ಅಪ್ರಮಾಣವಾಗಲಾರದು

---

* ಇದು ಮಧ್ವಭಾಷ್ಯದಲ್ಲಿ ಸ್ಯಾದ್ವಾದ್ಯಧಿಕರಣ ಎನಿಸಿದೆ

[1] ಭೋಕ್ತೃಗಳೂ ಭೋಗ್ಯವಸ್ತುಗಳೂ ಜೀವ ಅಜೀವ ಎನಿಸಿವೆ. ಇಂದ್ರಿಯಗಳೂ ವಿಷಯಗಳ ಕಡೆಗೆ ಹೋಗುವುದು ಆಸ್ರವವೆನಿಸಿದೆ. ಇಂದ್ರಿಯನಿಗ್ರಹಕ್ಕೆ ಸಂವರವೆಂದು ಹೆಸರು. ಪಾಪನಾಶಕ್ಕೆ ಸಾಧನವಾದ ಪ್ರಾಯಶ್ಚಿತ್ತಕ್ಕೆ ನಿರ್ಜರವೆಂದು ಹೆಸರು. ಕರ್ಮಗಳು ಬಂಧವೆನಿಸಿವೆ ಕರ್ಮಗಳಿಂದ ನಿವೃತ್ತಿಯನ್ನು ಹೊಂದುವುದು ಮೋಕ್ಷವು.

ಎಂದು ಅವನು ಹೇಳಿದರೆ ನಾವು ಒಪ್ಪುವುದಿಲ್ಲ. ಅನೇಕಾಂತತ್ವವು ನಿರಂಕುಶವಾಗಿ ಸರ್ವ ವಸ್ತುಗಳಲ್ಲಿಯೂ ಇದೆ ಎಂಬುದೇ ಒಂದು ವಸ್ತುವಾಗುವುದರಿಂದ **ಸ್ಯಾದಸ್ತಿ ಸ್ಯಾನ್ನಾಸ್ತಿ** ಮೊದಲಾದ ನ್ಯಾಯಕ್ಕೆ ಒಳಗಾಗಿ ಅದೂ ಅನಿರ್ಧಾರಣರೂಪವಾಗುವುದು ಇದಲ್ಲದೆ ನಿರ್ಧರಿಸುವವನೂ ನಿರ್ಧಾರಣಫಲವೂ ಒಂದು ಪಕ್ಷದಲ್ಲಿ ಇದೆ, ಮತ್ತೊಂದು ಪಕ್ಷದಲ್ಲಿ ಇಲ್ಲ ಎಂದಾಗುವುದು. ಪ್ರಮಾಣ ಪ್ರಮೇಯ ಪ್ರಮಾತೃ ಪ್ರಮಿತಿ—ಇವೆಲ್ಲವೂ ಅನಿರ್ಧಾರಿತ ವಾಗಿರುವುದರಿಂದ ಪ್ರಮಾಣಭೂತನಾದ ತೀರ್ಥಕರನು ಹೇಗೆ ತಾನೇ ಉಪದೇಶಮಾಡಿ ಯಾನು ? ಇದೇ ನ್ಯಾಯವನ್ನು ಪಂಚಾಸ್ತಿಕಾಯಗಳಿಗೂ ಯೋಜನೆ ಮಾಡಿದರೆ ಅವು ಒಂದು ಪಕ್ಷದಲ್ಲಿ ಐದಾಗುತ್ತವೆ, ಇನ್ನೊಂದು ಪಕ್ಷದಲ್ಲಿ ಆಗುವುದಿಲ್ಲ ಈ ಪದಾರ್ಥಗಳು ಅವರ್ಣನೀಯವೆಂಬುದೂ ಸರಿಯಲ್ಲ; ಏಕೆಂದರೆ ಅವು ಅವರ್ಣನೀಯವಾಗಿದ್ದರೆ ಅವು ಗಳನ್ನು ವರ್ಣಿಸುವುದಕ್ಕೆ ಆಗುತ್ತಿರಲಿಲ್ಲ ಅವುಗಳನ್ನು ವರ್ಣಿಸಿ ಅವರ್ಣನೀಯವೆಂದು ಹೇಳುವುದು ವಿರುದ್ಧವಾಗಿರುತ್ತದೆ. ಸ್ವರ್ಗ ಮೋಕ್ಷಗಳೂ ಇವೆ ಮತ್ತು ಇಲ್ಲ, ನಿತ್ಯ ಮತ್ತು ಅನಿತ್ಯ ಎಂದು ಹೇಳಿದರೆ, ಇವೆಲ್ಲ ಅನಿಶ್ಚಯಾತ್ಮಕವಾಗಿ ಯಾರಿಗೂ ಸ್ವರ್ಗಮೋಕ್ಷಗಳಿಗೆ ಪ್ರವೃತ್ತಿಯುಂಟಾಗುವುದಿಲ್ಲ. ಇದರಿಂದ ಏಕತ್ವ ಅನೇಕತ್ವ, ನಿತ್ಯತ್ವ ಅನಿತ್ಯತ್ವ, ವ್ಯತಿ ರಿಕ್ತತ್ವ ಅವ್ಯತಿರಿಕ್ತತ್ವ ಮೊದಲಾದ ಅನೇಕಾಂತಗಳ ಅಭ್ಯುಪಗಮಗಳನ್ನು ನಿರಾಕರಿಸಿ ದಂತಾಯಿತು. ಪುದ್ಗಲವೆಂಬ ಹೆಸರಿನ ಅಣುಗಳಿಂದ ಸಂಘಾತಗಳಾಗುತ್ತವೆ ಎಂಬ ಕಲ್ಪನೆ ಯನ್ನು ಬೇರೆಯಾಗಿ ನಿರಾಕರಿಸಬೇಕಾಗಿಲ್ಲ. ವೈಶೇಷಿಕಮತದ ಪರೀಕ್ಷೆಯಲ್ಲಿ ಅದನ್ನು ನಿರಾಕರಿಸಿದೆ.

**ವಿ.**—ಅಸ್ತಿತ್ವ-ನಾಸ್ತಿತ್ವವೇ ಮೊದಲಾದ ವಿರುದ್ಧಧರ್ಮಗಳು ಕತ್ತಲೆಬೆಳಕು ಗಳಂತೆ ಒಂದೇ ವಸ್ತುವಿಗೆ ಏಕಕಾಲದಲ್ಲಿ ಸಂಭವಿಸುವುದಿಲ್ಲ. ಜೈನರು ಹೇಳುವಂತೆ ಒಂದು ದ್ರವ್ಯವೂ ಅದರ ವಿಶೇಷಣವಾದ ಅವಸ್ಥಾವಿಶೇಷಗಳೂ ಬೇರೆ,ಬೇರೆ ಪದಾರ್ಥಗಳಾಗಿರುವುದ ರಿಂದ ಒಂದು ದ್ರವ್ಯವು ತನಗೆ ವಿರುದ್ಧವಾದ ವಿಶೇಷಣಗಳೊಂದಿಗೆ ಸಮಾವೇಶವನ್ನು ಹೊಂದುವುದಿಲ್ಲ. ಈಶ್ವರನಿಂದ ಅಧಿಷ್ಠಿತವಾಗದ ಪರಮಾಣುಕಾರಣವಾದಕ್ಕೆ ಹಿಂದೆ ಹೇಳಿದ ದೋಷಗಳೆಲ್ಲ ಇಲ್ಲಿಯೂ ಬರುತ್ತವೆ. ಆದುದರಿಂದ ಈ ಮತವು ಯುಕ್ತವಲ್ಲ.

**ದ್ವೈ.**—ಜೈನರು ಹೇಳುವ ಇರುವಿಕೆ, ಇಲ್ಲದಿರುವಿಕೆ ಮೊದಲಾದ ಏಳು ಪ್ರಕಾರ ಗಳು ಒಂದು ವಸ್ತುವಿನಲ್ಲಿಯೇ ಇರುವುವೆಂದು ಒಪ್ಪಿಕೊಳ್ಳಲಾಗುವುದಿಲ್ಲ; ಏಕೆಂದರೆ ಇದು ಯುಕ್ತಿ-ಪ್ರಮಾಣಗಳಿಗೆ ವಿರುದ್ಧವಾಗಿದೆ [1]

## ಏವಂ ಚಾತ್ಮಾಕಾರ್ತ್ಸ್ನ್ಯಮ್ || ೩೪ ||

೩೪. ಹೀಗೆಯೇ ಆತ್ಮನಿಗೆ ಪರಿಚ್ಛಿನ್ನತ್ವವು (ಪ್ರಾಪ್ತವಾಗುವುದು).

---

[1] ಸತ್ತ್ವಾಸ್ಯಾದಸತ್ತ್ವಾಸ್ಯಾತ್ಸದಸತ್ತ್ವಾಸ್ಯಾತ್ತತೋಽನ್ಯಚ್ಚ ಸ್ಯಾದಿತ್ಯೇತನ್ನೈಕಸ್ಮಿನ್ ಯುಜ್ಯತೇ। ಅದೃಷ್ಟತ್ವೇನಾಸಂಭವಾತ್ (ಮ. ಭಾ.).

ಜೀವನ ಪರಿಮಾಣವು ಶರೀರದಷ್ಟೇ ಎಂದು ಜೈನರು ಅಭಿಪ್ರಾಯಪಡುತ್ತಾರೆ[1] ಜೀವನು ಶರೀರಪರಿಮಾಣದವನಾದರೆ ಪರಿಚ್ಛಿನ್ನನಾಗುತ್ತಾನೆ ; ಅವನಿಗೆ ಇದರಿಂದ ಅನಿತ್ಯತ್ವವು ಒದಗುವುದು ಅವನು ಯಾವುದೊ ಒಂದು ಕರ್ಮವಿಪಾಕದಿಂದ ಆನೆಯ ಜನ್ಮವನ್ನು ಪಡೆದರೆ ಆ ಶರೀರವನ್ನು ಪೂರ್ಣವಾಗಿ ವ್ಯಾಪಿಸಿಕೊಳ್ಳಲಾರದೆ ಹೋಗುವನು ಇರುವೆಯ ಜನ್ಮವನ್ನು ಪಡೆದರೆ ಅದರ ಶರೀರದಲ್ಲಿ ಪೂರ್ಣರಾಗಿ ಹೋಗಲು ಆಗುವುದಿಲ್ಲ. ಒಂದೇ ಶರೀರದಲ್ಲಿ ಕೌಮಾರ-ಯೌವನ ಮೊದಲಾದ ಅವಸ್ಥೆಗಳು ಬಂದರೆ ಇದೇ ಕಷ್ಟವು ಒದಗುತ್ತದೆ. ಜೀವನಿಗೆ ಅನಂತವಾದ ಅವಯವಗಳಿರುವುದರಿಂದ ಅವು ಸಣ್ಣ ಶರೀರದಲ್ಲಿ ಸಣ್ಣ ಸಣ್ಣವಾಗುತ್ತವೆ. ದೊಡ್ಡ ಶರೀರದಲ್ಲಿ ದೊಡ್ಡವಾಗುತ್ತವೆ—ಎಂದು ಅವನು ಹೇಳಿದರೆ, ಆ ಅನಂತಾವಯವಗಳು ಜೀವನ ಸಮಾನದೇಶದಲ್ಲಿದ್ದರೆ ಒಂದಕ್ಕೊಂದು ಅಡ್ಡಿಯಾಗುತ್ತವೆಯೊ ಅಥವಾ ಇಲ್ಲವೋ—ಎಂದು ಕೇಳಬೇಕಾಗುತ್ತದೆ. ಮೊದಲನೆಯ ಪಕ್ಷದಲ್ಲಿ ಆ ಅನಂತಾವಯವಗಳು ಪರಿಚ್ಛಿನ್ನದೇಶದಲ್ಲಿ ಅಡಕವಾಗದೆ ಹೋಗುವುವು. ಎರಡನೆಯ ಪಕ್ಷದಲ್ಲಿ ಅವಯವಗಳೆಲ್ಲ ಏಕಾವಯವದೇಶದಲ್ಲಿ ಅಡಕವಾಗಬಹುದಾದರಿಂದ ಜೀವನಿಗೆ ಅಣುಪರಿಮಾಣತ್ವವು ಒದಗುವುದು. ಇದಲ್ಲದೆ ಶರೀರದಷ್ಟು ಪರಿಚ್ಛಿನ್ನನಾದ ಜೀವನಿಗೆ ಅನಂತವಾದ ಅವಯವಗಳನ್ನು ಕಲ್ಪಿಸುವುದು ಸರಿಯಲ್ಲ.

**ವಿ.**—ಜೈನಮತದ ಪ್ರಕಾರ ದೇಹಪರಿಮಾಣವುಳ್ಳ ಜೀವನಿಗೆ ಅಪೂರ್ಣತೆಯು ಸಂಭವಿಸುತ್ತದೆ.

**ದ್ವೈ.**—ಆತ್ಮನ ಕಾಯಪರಿಮಾಣತ್ವವು ಸರಿಯಲ್ಲ. ಅವನು ಅನೇಕದೇಹಗಳನ್ನು ಪ್ರವೇಶಿಸಬೇಕಾಗುವುದರಿಂದ ಕಾಯಪರಿಮಾಣತ್ವವು ಹೊಂದುವುದಿಲ್ಲ.[2]

### ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ॥ ೩೫ ॥

೩೫. ಪರ್ಯಾಯದಿಂದಲೂ ಅವಿರೋಧವಾಗುವುದಿಲ್ಲ; ಏಕೆಂದರೆ ವಿಕಾರಾದಿ ದೋಷಗಳು (ಪ್ರಸಕ್ತವಾಗುವುವು).

ಪರ್ಯಾಯದಿಂದ ಜೀವನು ದೊಡ್ಡ ಅಥವಾ ಸಣ್ಣ ಶರೀರವನ್ನು ಪಡೆದಾಗ ಕೆಲವು ಅವಯವಗಳು ಬರುತ್ತವೆ ಅಥವಾ ಹೋಗುತ್ತವೆ ಎಂದು ಜೈನರು ಹೇಳಿದರೆ ಜೀವನಿಗೆ ವಿಕಾರಾದಿದೋಷಗಳೂ ಅನಿತ್ಯತ್ವವೂ ಬರುವುವು ಇವು ಜೀವನ ಬಂಧಮೋಕ್ಷಗಳಿಗೆ ವಿರೋಧವಾಗುವುವು. ಇವರ ಮತದ ಪ್ರಕಾರ ಕರ್ಮಾಷ್ಟಕದಿಂದ[3] ಪರಿವೇಷ್ಟಿತನಾಗಿ ಸಂಸಾರಸಾಗರದಲ್ಲಿ ನೋರೆಬುರುಡೆಯಂತೆ ಮುಳುಗಿರುವ ಜೀವನಬಂಧವು ನಾಶವಾಗಲು

---

[1] ಶರೀಪರಿಮಾಣೋ ಹಿ ಜೀವ ಇತ್ಯಾರ್ಹತಾ ಮನ್ಯಂತೇ (ಸೂ. ಭಾ.).

[2] ತದಪ್ಯಲಂ ದುಷ್ಟಂ ನಾನಾಶರೀರೇಷು ಪ್ರವೇಶಾದನ್ಯಥಾ ಭವಾತ್ (ಅನುವ್ಯಾಖ್ಯಾನ).

[3] ಘಾತಿಕರ್ಮ ನಾಲ್ಕು, ಅಘಾತಿಕರ್ಮ ನಾಲ್ಕು.

ಅವನಿಗೆ ಊರ್ಧ್ವಗಾಮಿತ್ವವಾಗುವುದು ಅವಯವಗಳು ಹೋಗುತ್ತ ಬರುತ್ತ ಇರುವುದರಿಂದ ಆತ್ಮನ ಸ್ವರೂಪವನ್ನು ನಿರ್ಧರಿಸಲು ಸಾಧ್ಯವಿಲ್ಲ.

ಪರ್ಯಾಯದಿಂದ ಆತ್ಮನ ಪರಿಮಾಣವು ಬದಲಾಗುತ್ತಿದ್ದರೂ ಪ್ರವಾಹ-ಸಂತಾನದಂತೆ ಆವನು ನಿತ್ಯವಾಗಬಹುದು—ಎಂದು ಹೇಳಿದರೆ ಪರಿಹಾರವು ಹೀಗಿರುತ್ತದೆ: ಸಂತಾನವು ನಿಜವಾಗಿದ್ದರೆ ನೈರಾತ್ಮ್ಯವಾದವು ಪ್ರಸಕ್ತವಾಗುವುದು, ಸಂತಾನವು ನಿಜವಾಗದಿದ್ದರೆ ಆತ್ಮನಿಗೆ ವಿಕಾರಾದಿದೋಷಗಳು ಬರುವುದರಿಂದ ಈ ಪಕ್ಷವು ಸರಿಯಲ್ಲ.

**ವಿ.**—ಜೀವನು ಸಂಕೋಚ-ವಿಕಾಸಗಳುಳ್ಳ ಪರ್ಯಾಯವೆಂಬ ಅವಸ್ಥಾ-ವಿಶೇಷದಿಂದ ದೊಡ್ಡ ಚಿಕ್ಕ ಶರೀರಗಳನ್ನು ಪ್ರವೇಶಿಸಬಹುದೆಂದು ವಿರೋಧಪರಿಹಾರವಾಗುವುದಿಲ್ಲ; ಇದರಿಂದ ಜೀವನಿಗೆ ವಿಕಾರವೂ ವಿಕಾರದಿಂದಾಗುವ ಅನಿತ್ಯತ್ವಾದಿದೋಷಗಳೂ ಪ್ರಸಕ್ತವಾಗುವುವು. ಆದುದರಿಂದ ಜೀವನು ಅಚೇತನವಸ್ತುಗಳ ಹಾಗೆಯೇ ಆಗುತ್ತಾನೆ.

**ದ್ವೈ.**—ಜೀವನಿಗೆ ಪರ್ಯಾಯದಿಂದ ಶರೀರಪರಿಮಿತತ್ವವನ್ನು ಅಂಗೀಕರಿಸಿದರೆ ವಿರೋಧವು ಹೋಗುವುದಿಲ್ಲ; ಏಕೆಂದರೆ ವಿಕಾರಿತ್ವಾದಿಗಳು ಬರಬೇಕಾಗಿರುವುದರಿಂದ ಅನಿತ್ಯತ್ವವು ಪ್ರಸಕ್ತವಾಗುತ್ತದೆ.

## ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ || ೩೬ ||

೩೬. (ಜೀವನ) ಅಂತ್ಯಪರಿಮಾಣವು ನಿತ್ಯವಾಗಿರುವುದರಿಂದ (ಹಿಂದಿನ) ಎರಡು ಅವಸ್ಥೆಗಳ ಪರಿಮಾಣವೂ ನಿತ್ಯವಾಗಬೇಕಾಗುವುದು ಮತ್ತು ಯಾವ ವಿಶೇಷವೂ ಇರುವುದಿಲ್ಲವೆಂದಾಗುವುದು

ಅಂತ್ಯವು ಎಂದರೆ ಮೋಕ್ಷಾವಸ್ಥೆಯಲ್ಲಿರುವ ಜೀವಪರಿಮಾಣವು ನಿತ್ಯವೆಂದು ಜೈನರು ಒಪ್ಪಿಕೊಂಡಿರುತ್ತಾರೆ ಅದರಂತೆ ಮೊದಲನೆಯ ಮತ್ತು ಮಧ್ಯದ ಜೀವಪರಿಮಾಣಗಳಿಗೂ ನಿತ್ಯತ್ವವು ಪ್ರಾಪ್ತವಾಗುವುದರಿಂದ ಈ ಮೂರು ಪರಿಮಾಣಗಳಿಗೂ ಭೇದವಿರುವುದಿಲ್ಲವೆಂದಾಗುವುದು; ಎಂದರೆ ಜೀವನಿಗೆ ಏಕಶರೀರಪರಿಮಾಣವು ಪ್ರಾಪ್ತವಾಗುವುದೇ ಹೊರತು ದೊಡ್ಡದಾದ ಅಥವಾ ಸಣ್ಣದಾದ ಶರೀರಪರಿಮಾಣವು ಪ್ರಾಪ್ತವಾಗುವುದಿಲ್ಲ [1] ಸೂತ್ರವನ್ನು ಇನ್ನೊಂದು ವಿಧವಾಗಿ ವ್ಯಾಖ್ಯಾನಮಾಡಬಹುದು: ಕೊನೆಯದಾದ ಜೀವಪರಿಮಾಣಕ್ಕೆ ನಿತ್ಯತ್ವವಿರುವುದರಿಂದ ಹಿಂದಿನ ಅವಸ್ಥೆಗಳಲ್ಲಿಯೂ ಜೀವನಿಗೆ ಒಂದೇ ಪರಿಮಾಣವಿದೆಯೆಂದಾಗುವುದು. ಆದುದರಿಂದ ಜೀವನು ಅಣುಪರಿಮಾಣದವನು

---

[1] ಏಕಶರೀರಪರಿಮಾಣತಯೈವ ಸ್ಯಾನ್ನೋಪಚಿತಾಪಚಿತಶರೀರಾಂತರಪ್ರಾಪ್ತಿಃ (ಸೂ. ಭಾ.).

ಅಥವಾ ಮಹತ್ಪರಿಮಾಣದವನು ಎಂದು ಒಪ್ಪಿಕೊಳ್ಳಬೇಕೇ ಹೊರತು ಶರೀರಪರಿಮಾಣದವನು ಎನ್ನುವುದಕ್ಕೆ ಆಗುವುದಿಲ್ಲ ಆದುದರಿಂದ ಬೌದ್ಧಮತದಂತೆ ಜೈನಮತವು ಅಸಂಗತವು ಎಂದು ಉಪೇಕ್ಷಿಸತಕ್ಕದ್ದು.

**ವಿ.**—ಮೋಕ್ಷಾವಸ್ಥೆಯಲ್ಲಿರುವ ಆತ್ಮನೂ ಅವನ ಪರಿಮಾಣವೂ ನಿತ್ಯವಾಗಿರುವುದರಿಂದ ಅದೇ ಅವನ ಸ್ವಾಭಾವಿಕಪರಿಮಾಣವಾಗಿ ಎರಡು ಪರಿಮಾಣಗಳಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ ಆದುದರಿಂದ ಆತ್ಮನು ದೇಹಪರಿಮಾಣದವನು ಎಂಬುದು ಸರಿಯಲ್ಲ

**ದ್ವೈ.**—ಆತ್ಮನಿಗೆ ಪರಿಮಾಣವಿಲ್ಲದಿದ್ದರೆ ಸ್ವರೂಪವಿರುವುದಿಲ್ಲ ಆದುದರಿಂದ ಮೋಕ್ಷದಲ್ಲಿ ಅಂಥ ಪರಿಮಾಣವನ್ನು ಹೊಂದಲು ಶರೀರವು ನಿತ್ಯವಾಗಬೇಕಾಗುತ್ತದೆ. ಹೀಗೆ ಆತ್ಮ, ಅವನ ಶರೀರ ಇವೆರಡೂ ನಿತ್ಯವಾಗಬೇಕಾಗುತ್ತದೆ ; ಏಕೆಂದರೆ ಸಂಸಾರದಲ್ಲಿರುವ ಶರೀರಕ್ಕೂ ಅಂತ್ಯಶರೀರಕ್ಕೂ ಯಾವ ಭೇದವೂ ಇರುವುದಿಲ್ಲ ಇದರಂತೆ ಸಂಸಾರದಲ್ಲಿರುವ ಶರೀರವು ನಿತ್ಯವಾಗಬೇಕಾಗುತ್ತದೆ. ಇದು ಸರಿಯಲ್ಲ

## ೭. ಪಾಶುಪತಾಧಿಕರಣ

(ಸೂ. ೩೧–೪೧)

**ಪತ್ಯುರಸಾಮಂಜಸ್ಯಾತ್ ॥ ೩೭ ॥**

೩೭. ಪತಿಗೆ (ಜಗತ್ಕಾರಣತ್ವವು ಉಪಪನ್ನವಾಗುವುದಿಲ್ಲ); ಏಕೆಂದರೆ ಅಸಾಮಂಜಸ್ಯವಿದೆ

೧.೪ ೨೩-೨೪ ರಲ್ಲಿ ಈಶ್ವರನು ಉಪಾದಾನಕಾರಣನೆಂದೂ ನಿಮಿತ್ತಕಾರಣನೆಂದೂ ಸೂತ್ರಕಾರರು ಹೇಳಿದ್ದಾರೆ. ಈಶ್ವರನು ಉಪಾದಾನಕಾರಣನಲ್ಲ, ಅಧಿಷ್ಠಾತೃವೇ ಎಂದರೆ ಕೇವಲ ನಿಮಿತ್ತಕಾರಣನೇ ಎಂಬ ಪಕ್ಷವು ವೇದಾಂತವಿಹಿತವಾದ ಬ್ರಹ್ಮೈಕತ್ವಕ್ಕೆ ವಿರುದ್ಧವಾಗಿರುವುದರಿಂದ ಅದನ್ನು ಇಲ್ಲಿ ಪ್ರಯತ್ನಪೂರ್ವಕವಾಗಿ ನಿಷೇಧಿಸಿದೆ [1] ವೇದಬಾಹ್ಯವಾದ ಈಶ್ವರಕಲ್ಪನೆಯು ನಾನಾಪ್ರಕಾರವಾಗಿರುತ್ತದೆ. ಸಾಂಖ್ಯ ಮತ್ತು ಯೋಗ, ಇವುಗಳನ್ನು ಅನುಸರಿಸುವವರು ಪ್ರಧಾನಪುರುಷರಿಗೆ ಅಧಿಷ್ಠಾತೃವಾದ ಈಶ್ವರನು ಕೇವಲ ನಿಮಿತ್ತ ಕಾರಣನು ಮತ್ತು ಪ್ರಧಾನಪುರುಷ–ಈಶ್ವರರು ಇತರೇತರ-ವಿಲಕ್ಷಣ-ಸ್ವರೂಪರು—ಎಂದು ಕಲ್ಪಿಸುತ್ತಾರೆ ಕಾರ್ಯಕಾರಣ ಯೋಗ ವಿಧಿ ದುಃಖಾಂತ—ಎಂಬ ಪಂಚಪದಾರ್ಥಗಳನ್ನು ಪಶುಪತಿಯಾದ ಈಶ್ವರನು ಪಶುವಿನ ಪಾಶವಿಮೋಕ್ಷಕ್ಕಾಗಿ ಉಪದೇಶಿಸಿರುತ್ತಾನೆ ಮತ್ತು ಅವನು ನಿಮಿತ್ತಕಾರಣನು—ಎಂದು ಮಾಹೇಶ್ವರರು[2] ಹೇಳುತ್ತಾರೆ.[3] ಹೀಗೆಯೇ ವೈಶೇಷಿಕಾದಿಗಳೂ ಕೂಡ ಈಶ್ವರನು ನಿಮಿತ್ತಕಾರಣನೆಂದು ಹೇಳುತ್ತಾರೆ

ಈ ಮತವು ಅಸಮಂಜಸವಾಗಿರುವುದರಿಂದ ಸೂತ್ರಕಾರರು ಇದನ್ನು ನಿರಾಕರಿಸಿರುತ್ತಾರೆ. ಇದರ ಅಸಾಮಂಜಸ್ಯವು ಹೀಗಿದೆ. ಈಶ್ವರನು ಪ್ರಾಣಿಗಳಲ್ಲಿ ಹೀನ ಮಧ್ಯಮ ಉತ್ತಮ ಎಂಬ ಭಾವಗಳನ್ನು ವಿಧಿಸಿದರೆ ಅವನಿಗೆ ರಾಗದ್ವೇಷಾದಿದೋಷವು ಪ್ರಾಪ್ತವಾಗಿ ಅವನೂ ಮನುಷ್ಯರಂತೆಯೇ ಅನೀಶ್ವರನಾಗುತ್ತಾನೆ. ಈ ಪ್ರಾಣಿಭೇದವು ಪುಣ್ಯಪಾಪಗಳೆಂಬ ಕರ್ಮದಿಂದುಂಟಾಗಿದೆ ಎಂದು ಹೇಳಿದರೆ ಪ್ರಾಣಿಕರ್ಮ ಮತ್ತು ಈಶ್ವರ ಇವರಿಗೆ ಪ್ರವರ್ತ್ಯ-ಪ್ರವರ್ತಕ-ಭಾವದಿಂದ ಅನ್ಯೋನ್ಯಾಶ್ರಯವು ಒದಗುತ್ತದೆ ಈ ಪ್ರವರ್ತ್ಯ-

---

[1] ತಸ್ಮಾದಪ್ರಕೃತಿರಧಿಷ್ಠಾತಾ ಕೇವಲಂ ನಿಮಿತ್ತಕಾರಣಮೀಶ್ವರ ಇತ್ಯೇಷ ಪಕ್ಷೋ ವೇದಾಂತವಿಹಿತಬ್ರಹ್ಮೈಕತ್ವಪ್ರತಿಪಕ್ಷತ್ವಾದ್ಯತ್ನೇನಾತ್ರ ಪ್ರತಿಷಿಧ್ಯತೇ (ಸೂ. ಭಾ.).

[2] ಮಾಹೇಶ್ವರರು ನಾಲ್ಕು ಬಗೆಯಾಗಿದ್ದಾರೆ: ಶೈವರು, ಪಾಶುಪತರು, ಕಾರಣಿಕ-ಸಿದ್ಧಾಂತಿಗಳು ಮತ್ತು ಕಾಪಾಲಿಕರು. ಇವರೆಲ್ಲ ಮಹೇಶ್ವರಪ್ರೋಕ್ತವಾದ ಆಗಮವನ್ನು ಅನುಸರಿಸುವುದರಿಂದ ಮಾಹೇಶ್ವರರು ಎನಿಸಿರುತ್ತಾರೆ (ರ. ಪ್ರ.).

[3] ಮಾಹೇಶ್ವರಾಸ್ತು ಮನ್ಯಂತೇ ಕಾರ್ಯಕಾರಣಯೋಗವಿಧಿದುಃಖಾಂತಾಃ ಪಂಚ-ಪದಾರ್ಥಾಃ ಪಶುಪತಿನೇಶ್ವರೇಣ ಪಶುಪಾಶವಿಮೋಕ್ಷಣಾಯೋಪದಿಷ್ಟಾಃ ಪಶುಪತಿರೀಶ್ವರೋ ನಿಮಿತ್ತಕಾರಣಮಿತಿ ವರ್ಣಯಂತಿ (ಸೂ. ಭಾ.).

ಪ್ರವರ್ತಕ-ಭಾವವು ಅನಾದಿಯೆಂದು ಹೇಳಿದರೂ ದೋಷದ ಪರಿಹಾರವಾಗುವುದಿಲ್ಲ ಇದ ಲ್ಲದೆ 'ದೋಷಗಳು ಪ್ರವರ್ತನಾ ಲಕ್ಷಣವಾಗಿವೆ' ಎಂಬ ನ್ಯಾಯಸೂತ್ರದ[1] (೧.೧.೧೮) ಪ್ರಕಾರ ಈಶ್ವರನು ಸ್ವಾರ್ಥವುಳ್ಳವನಾಗಿ ಅನೀಶ್ವರನಾಗಬೇಕಾಗುತ್ತದೆ. ಯೋಗಮತದ ಪ್ರಕಾರ ಈಶ್ವರನು ಪುರುಷವಿಶೇಷನಾಗಿರುವುದರಿಂದಲೂ ಮತ್ತು ಉದಾಸೀನನಾಗಿರುವುದ ರಿಂದಲೂ ಅಸಾಮಂಜಸ್ಯವುಂಟಾಗುವುದು.

ವಿ.—ಅಸಾಮಂಜಸ್ಯವಿರುವುದರಿಂದ ಪಶುಪತಿಯ ಮತವನ್ನು ಅನಾದರಿಸಬೇಕು; ಏಕೆಂದರೆ ಪಾಶುಪತರು ವೇದವಿರುದ್ಧವಾದ ತತ್ತ್ವಪ್ರಕ್ರಿಯೆಯನ್ನೂ ಇಹ-ಪರದ ಸುಖ ಗಳನ್ನು ಪಡೆಯಲು ತಮ್ಮದೇ ಆದ ಸಾಧನಗಳನ್ನೂ ಕಲ್ಪಿಸಿಕೊಂಡಿರುತ್ತಾರೆ ಇವರು ನಿಮಿತ್ತೋಪಾದಾನಕಾರಣಗಳಿಗೆ ಭೇದವನ್ನು ಕಲ್ಪಿಸಿ ಪಶುಪತಿಯು ನಿಮಿತ್ತಕಾರಣನೆಂದು ಹೇಳುತ್ತಾರೆ. ವೇದಗಳು ಪರಬ್ರಹ್ಮನಾದ ನಾರಾಯಣನೇ ಜಗತ್ತಿಗೆ ನಿಮಿತ್ತೋಪಾದಾನ ಕಾರಣಗಳಾಗಿರುವನೆಂದು ಹೇಳುತ್ತವೆ[2] : 'ನಾರಾಯಣನೇ ಪರಬ್ರಹ್ಮ, ನಾರಾಯಣನೇ ಪರತತ್ತ್ವ, ನಾರಾಯಣನೇ ಪರಂಜ್ಯೋತಿ, ನಾರಾಯಣನೇ ಪರಮಾತ್ಮ'[3] (ಮ. ನಾ. ಉ ೧೩. ೪); 'ಅದು "ಬಹುವಾಗುವೆನು, ಉತ್ಪನ್ನವಾಗುವೆನು" ಎಂದು ಯೋಚಿಸಿತು[4] (ಛಾಂ. ಉ ೬. ೨ ೩); ಪರಬ್ರಹ್ಮನಾದ ಪರಮಪುರುಷನ ಧ್ಯಾನವೇ ಮೋಕ್ಷಸಾಧನ ವೆಂದು ಶ್ರುತಿಗಳು ಹೇಳುತ್ತವೆ. 'ತಮಸ್ಸಿನ ಆಚೆ ಇರುವವನೂ ಆದಿತ್ಯನಂತೆಯೇ ಪ್ರಕಾಶ- ಮಾನನೂ ಆದ ಪುರುಷನನ್ನು ಅರಿತುಕೊಂಡಿರುತ್ತೇನೆ. ಅವನನ್ನು ಹೀಗೆ ಅರಿತುಕೊಂಡಿರು ವವನು ಇಲ್ಲಿ ಅಮೃತನಾಗುತ್ತಾನೆ. ಅಮೃತತ್ವಕ್ಕೆ ಬೇರೆ ದಾರಿಯಿಲ್ಲ'[5] (ಪುರುಷಸೂಕ್ತ ೧೬ ಮತ್ತು ೨೦) ಉಪಾಸನಾವಿಧಿಪರವಾದ ಕೆಲವು ಶ್ರುತಿಗಳಲ್ಲಿ ಬರುವ ಪ್ರಜಾಪತಿ ಶಿವ ಇಂದ್ರ ಆಕಾಶ ಪ್ರಾಣ ಮೊದಲಾದ ಶಬ್ದಗಳೆಲ್ಲವೂ ನಾರಾಯಣನನ್ನೇ ಸೂಚಿಸುತ್ತವೆ

ದ್ವೈ.—ಪಶುಪತಿಯೆನಿಸಿದ ಈಶ್ವರನು ಜಗತ್ಕಾರಣನಲ್ಲ; ಏಕೆಂದರೆ ಪಾರ- ತಂತ್ರ್ಯದ ದೆಸೆಯಿಂದ ಕಾರಣನಾಗಲು ಅಸಮರ್ಥನಾಗಿರುವನು.[6]

---

[1] ಪ್ರವರ್ತನಾಲಕ್ಷಣಾ ದೋಷಾಃ ।

[2] ವೇದಾಃ ಖಲು ಪರಂ ಬ್ರಹ್ಮನಾರಾಯಣಮೇವ ಜಗನ್ನಿಮಿತ್ತಮುಪಾದಾನಂ ಚ ವದಂತಿ ಶ್ರೀಭಾಷ್ಯ).

[3] ನಾರಾಯಣಃ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ ।
ನಾರಾಯಣಃ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ॥

[4] ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ।

[5] ವೇದಾಹಮೇತಂ ಪುರುಷಂ ಮಹಾಂತಮ್ ।
ಆದಿತ್ಯವರ್ಣಂ ತಮಸಸ್ತು ಪಾರೇ ॥
ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ವಿದ್ಯತೇಽಯನಾಯ ॥

[6] ಪಾರತಂತ್ರ್ಯಾಚ್ಚಾಸಮಂಜಸತ್ವಾನ್ನ ಪತಿರೀಶ್ವರನಾಮಾ ಜಗತ್ಕರ್ತಾ (ಮ. ಭಾ.).

**ಸಂಬಂಧಾನುಪಪತ್ತೇಶ್ಚ** * ॥ ೩೮ ॥

೩೮ ಸಂಬಂಧವು ಅನುಪಪನ್ನವಾಗುವುದರಿಂದಲೂ (ಅಸಾಮಂಜಸ್ಯವು ಒದಗುವುದು).

ಪ್ರಧಾನಪುರುಷರಿಗಿಂತ ಭಿನ್ನನಾದ ಈಶ್ವರನು ಅವರೊಂದಿಗೆ ಸಂಬಂಧವನ್ನು ಹೊಂದದೆ ಅವರನ್ನು ಆಳಲಾರನು.[1] ಇದು ಸಂಯೋಗರೂಪವಾದ ಸಂಬಂಧವಾಗಲಾರದು; ಏಕೆಂದರೆ ಪ್ರಧಾನ ಪುರುಷ ಈಶ್ವರ—ಇವರೆಲ್ಲ ಸರ್ವಗತರೂ ಅವಯವರಹಿತರೂ ಆಗಿರುತ್ತಾರೆ. ಸಮವಾಯರೂಪವಾದ ಸಂಬಂಧವೂ ಆಗಲಾರದು, ಏಕೆಂದರೆ ಯಾವುದು ಆಶ್ರಯ, ಯಾವುದು ಆಶ್ರಯಿ—ಎಂದು ನಿರ್ಧರಿಸಲು ಆಗುವುದಿಲ್ಲ. ಮತ್ತೆ, ಕಾರ್ಯದಿಂದ ಅನುಮಾನಿಸಬಹುದಾದ ಬೇರೆ ಯಾವ ಸಂಬಂಧವನ್ನು ಕಲ್ಪಿಸಲೂ ಆಗುವುದಿಲ್ಲ; ಏಕೆಂದರೆ ಕಾರ್ಯಕಾರಣಭಾವವೇ ಇನ್ನೂ ಸಿದ್ಧವಾಗಿಲ್ಲ. ಕಾರ್ಯಕಾರಣಗಳಿಗೆ ಸಂಬಂಧವನ್ನು ಸ್ಥಾಪಿಸಲು ಬ್ರಹ್ಮವಾದಿಗೆ ಯಾವ ಕಷ್ಟವೂ ಆಗುವುದಿಲ್ಲ; ಏಕೆಂದರೆ ಅವನು ತಾದಾತ್ಮ್ಯರೂಪವಾದ[2] ಸಂಬಂಧವನ್ನು ಒಪ್ಪಿಕೊಂಡಿರುತ್ತಾನೆ. ಇದಲ್ಲದೆ ಬ್ರಹ್ಮವಾದಿಯು ಆಗಮಬಲದಿಂದ ಕಾರಣಾದಿಗಳ ಸ್ವರೂಪವನ್ನು ನಿರ್ಧರಿಸುತ್ತಾನೆ. ಆದುದರಿಂದ ಬ್ರಹ್ಮವಾದಿಗೆ ಲೋಕದಲ್ಲಿ ನೋಡಿದಂತೆಯೇ ಎಲ್ಲವನ್ನೂ ಒಪ್ಪಿಕೊಳ್ಳಬೇಕೆಂಬ ನಿಯಮವಿಲ್ಲ.[3] ಆದರೆ ದೃಷ್ಟಾಂತಬಲದಿಂದ ಕಾರಣಾದಿಸ್ವರೂಪವನ್ನು ನಿರ್ಧರಿಸುವ ಪರವಾದಿಯು ತಾನು ನೋಡಿದಂತೆಯೇ ಎಲ್ಲವನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಪರವಾದಿಗೂ ಸರ್ವಜ್ಞಪ್ರಣೀತವಾದ ಆಗಮವಿರುವುದರಿಂದ ವೇದಾಂತಿಯ ಹಾಗೆಯೇ ಅವನಿಗೂ ಆಗಮಬಲವಿದೆಯೆಂದು ಹೇಳಲಾಗುವುದಿಲ್ಲ; ಏಕೆಂದರೆ ಆಗಮಪ್ರತ್ಯಯದಿಂದ ಸರ್ವಜ್ಞತ್ವವು ಸಿದ್ಧವಾಗಬೇಕು, ಸರ್ವಜ್ಞಪ್ರತ್ಯಯದಿಂದ ಆಗಮವು ಸಿದ್ಧವಾಗಬೇಕು—ಎಂಬ ಅನ್ಯೋನ್ಯಾಶ್ರಯವು ಒದಗುತ್ತದೆ.[4] ಆದುದರಿಂದ ಸಾಂಖ್ಯಯೋಗವಾದಿಗಳ ಈಶ್ವರಕಲ್ಪನೆಯು ಉಪಪನ್ನವಲ್ಲ. ಇದೇ ರೀತಿ ಉಳಿದ ವೇದಬಾಹ್ಯವಾದ ಈಶ್ವರಕಲ್ಪನೆಗಳಲ್ಲಿಯೂ ಅಸಾಮಂಜಸ್ಯವನ್ನು ಯೋಚಿಸಬೇಕು.

---

* ಈ ಸೂತ್ರವು ಶ್ರೀಭಾಷ್ಯದಲ್ಲಿ ಕಂಡುಬರುವುದಿಲ್ಲ.

[1] ನ ಹಿ ಪ್ರಧಾನಪುರುಷವ್ಯತಿರಿಕ್ತ ಈಶ್ವರೋಽಂತರೇಣ ಸಂಬಂಧಂ ಪ್ರಧಾನಪುರುಷಯೋರೀಶಿತಾ (ಸೂ. ಭಾ.).

[2] ಮಾಯೆ ಮತ್ತು ಬ್ರಹ್ಮ—ಇವುಗಳಿಗಿರುವ ಅನಿರ್ವಾಚ್ಯವಾದ ತಾದಾತ್ಮ್ಯಸಂಬಂಧ; 'ದೇವನ ಆತ್ಮಶಕ್ತಿ' ಎಂದು ಶ್ರುತಿಯು (ಶ್ವೇ. ಉ. ೧. ೩) ಹೇಳುವಂತೆ (ರ. ಪ್ರ.).

[3] ನಾವಶ್ಯಂ ತಸ್ಯ ಯಥಾದೃಷ್ಟಮೇವ ಸರ್ವಮಭ್ಯುಪಗಂತವ್ಯಮಿತಿ ನಿಯಮೋಽಸ್ತಿ (ಸೂ. ಭಾ.).

[4] ಇತರೇತರಾಶ್ರಯತ್ವಪ್ರಸಂಗಾದಾಗಮಪ್ರತ್ಯಯಾತ್ ಸರ್ವಜ್ಞತ್ವಸಿದ್ಧಿಃ ಸರ್ವಜ್ಞಪ್ರತ್ಯಯಾಚ್ಚಾಗಮಸಿದ್ಧಿರಿತಿ (ಸೂ. ಭಾ.).

ವ್ಯಾ.—'ಪಶುಪತಿಗೆ ಶರೀರವಿಲ್ಲದುದರಿಂದ ಅವನು—ಶರೀರವನ್ನು ಬಿಟ್ಟ ಆತ್ಮನಂತೆ—ಜಗತ್ತಿನ ಕರ್ತೃವಾಗಿ ಅದಕ್ಕೆ ಸಂಬಂಧಿಸಿರುವುದಿಲ್ಲ,[1] ಎಂಬುದು ಸೂತ್ರಾರ್ಥ.

**ಅಧಿಷ್ಠಾನಾನುಪಪತ್ತೇಶ್ಚ ॥ ೩೯ ॥**

೩೯. ಅಧಿಷ್ಠಾನವು ಹೊಂದುವುದಿಲ್ಲವಾದುದರಿಂದಲೂ (ತಾರ್ಕಿಕರ ಈಶ್ವರ ಕಲ್ಪನೆಯು ಸರಿಯಲ್ಲ).

ಕುಂಬಾರನು ಮಣ್ಣು ಮೊದಲಾದುವನ್ನು ಪ್ರವರ್ತಿಸುವಂತೆ ಈಶ್ವರನೂ ಪ್ರಧಾನಾದಿಗಳಲ್ಲಿ ಕ್ರಿಯೆಯನ್ನುಂಟುಮಾಡುತ್ತಾನೆಂದು ಹೇಳಲಾಗುವುದಿಲ್ಲ; ಏಕೆಂದರೆ ಅಪ್ರತ್ಯಕ್ಷವೂ ರೂಪಾದಿಹೀನವೂ, ಆದುದರಿಂದಲೇ ಮಣ್ಣು ಮೊದಲಾದುವುಗಳಿಗಿಂತ ಭಿನ್ನವೂ, ಆದ ಪ್ರಕೃತಿಯು ಈಶ್ವರನ ಕ್ರಿಯೆಗೆ ವಿಷಯವಾಗುವುದಿಲ್ಲ.[2]

ವಿ.—ವೇದಬಾಹ್ಯರಾದವರು ಈಶ್ವರನು ಕೇವಲ ನಿಮಿತ್ತಕಾರಣನೆಂದು ಅನುಮಾನದಿಂದಲೇ ಕಲ್ಪಿಸುತ್ತಾರೆ. ಮಣ್ಣು ಕುಂಬಾರನಿಗೆ ಅಧಿಷ್ಠಾನವಾಗಿರುವಂತೆ ಪ್ರಧಾನವು ಪಶುಪತಿಗೆ ಅಧಿಷ್ಠಾನವಾಗಿದೆಯೆಂದು ಸಿದ್ಧಪಡಿಸಲು ಆಗುವುದಿಲ್ಲ; ಏಕೆಂದರೆ ಈಶ್ವರನು ಅಶರೀರಿಯಾಗಿದ್ದಾನೆ. ಶರೀರವಿದ್ದವರಿಗೇ ಉಪಾದಾನಕಾರಣಗಳನ್ನು ಪ್ರವರ್ತಿಸುವ ಶಕ್ತಿಯಿರುವುದು ಕಂಡುಬರುತ್ತದೆ.[3] ಈಶ್ವರನು ಶರೀರವುಳ್ಳವನೆಂದು ಹೇಳಿದರೆ ೧೧.೩ರಲ್ಲಿ ಹೇಳಿದ ದೋಷಗಳೆಲ್ಲ ಪ್ರಾಪ್ತವಾಗುತ್ತವೆ.[4]

ವ್ಯಾ.—'ಕುಂಬಾರನೇ ಮೊದಲಾದವರು ಪೃಥ್ವಿಯೇ ಮೊದಲಾದ ಅಧಿಷ್ಠಾನದ ಮೇಲೆ ನಿಂತುಕೊಂಡು ಕೆಲಸವನ್ನು ಮಾಡುತ್ತಾರೆ. ಪಶುಪತಿಗೆ ಅಂಥ ಅಧಿಷ್ಠಾನವಿಲ್ಲ'[5] ಎಂಬುದು ಸೂತ್ರಾರ್ಥ.

**ಕರಣವಚ್ಚೇನ್ನ ಭೋಗಾದಿಭ್ಯಃ ॥ ೪೦ ॥**

೪೦. ಇಂದ್ರಿಯಗಳಂತೆ ಎಂದು ಹೇಳಿದರೆ ಅದು ಸರಿಯಲ್ಲ, ಏಕೆಂದರೆ ಭೋಗವೇ ಮೊದಲಾದುವುಗಳಿಂದ (ಅಲ್ಲಿ ಸಾಧ್ಯವಾಗಬಹುದು)

---

[1] ಅಶರೀರತ್ವಾತ್ತಸ್ಯ ಜಗತಾ ಸಂಬಂಧೋ ನ ಯುಜ್ಯತೇ ಕರ್ತೃತ್ವೇನ ಮೃತಪುರುಷವತ್ (ಮ. ಭಾ.).

[2] ನ ಹ್ಯಪ್ರತ್ಯಕ್ಷಂ ರೂಪಾದಿಹೀನಂ ಚ ಪ್ರಧಾನಮೀಶ್ವರಸ್ಯಾಧಿಷ್ಠೇಯಂ ಸಂಭವತಿ ಮೃದಾದಿವೈಲಕ್ಷಣ್ಯಾತ್ (ಸೂ. ಭಾ.)

[3] ಸಶರೀರಾಣಾಮೇವ ಹಿ ಕುಲಾಲಾದೀನಾಮಧಿಷ್ಠಾನಶಕ್ತಿರ್ದೃಷ್ಟಾ (ಶ್ರೀಭಾಷ್ಯ).

[4] 'ಆ ಶರೀರವು ಶರೀರದಂತೆ ಸಾವಯವವೊ ನಿತ್ಯವೋ ಅನಿತ್ಯವೋ ?'

[5] ಪೃಥಿವ್ಯಾದ್ಯಧಿಷ್ಠಾನೇ ಸ್ಥಿತೋ ಹಿ ಕುಲಾಲಾದಿಃ ಕಾರ್ಯಂ ಕರೋತಿ । ನ ಚಾಸ್ಯ ತದಸ್ತಿ (ಮ. ಭಾ.)

ಅಪ್ರತ್ಯಕ್ಷವೂ ರೂಪಾದಿಹೀನವೂ ಆದ ಇಂದ್ರಿಯಗಳನ್ನು ಪುರುಷನು ಆಳುವಂತೆ ಈಶ್ವರನೂ ಪ್ರಧಾನವನ್ನು ಆಳಬಹುದು—ಎಂದು ಹೇಳಿದರೆ ಈ ಹೋಲಿಕೆಯು ಹೊಂದುವುದಿಲ್ಲ, ಏಕೆಂದರೆ ಪುರುಷನಲ್ಲಿ ಸುಖದುಃಖಾದಿಗಳ ಅನುಭವವು ಕಂಡುಬರುವುದರಿಂದ ಇಂದ್ರಿಯಗಳು ಅವನಿಂದ ಅಧಿಷ್ಠಿತವಾಗಿವೆ ಎಂದು ತಿಳಿಯಬರುತ್ತದೆ ಆದರೆ ಈಶ್ವರನಲ್ಲಿ ಪ್ರಧಾನದಿಂದಾಗಬಹುದಾದ ಸುಖದುಃಖಾದಿಗಳ ಅನುಭವವು ಕಂಡುಬರುವುದಿಲ್ಲ ಪ್ರಧಾನಕ್ಕೂ ಇಂದ್ರಿಯಗಳಿಗೂ ಮಾಡಿದ ಹೋಲಿಕೆಯನ್ನು ಒಪ್ಪಿಕೊಂಡರೆ ಸಂಸಾರಿಗಳ ಹಾಗೆ ಈಶ್ವರನಿಗೂ ಸುಖದುಃಖಾದಿಗಳ ಅನುಭವವು ಪ್ರಾಪ್ತವಾದೀತು

೩೯ನೆಯ ಮತ್ತು ೪೦ನೆಯ ಸೂತ್ರಗಳಿಗೆ ಬೇರೊಂದು ವಿಧವಾಗಿಯೂ ವ್ಯಾಖ್ಯಾನಮಾಡಬಹುದು. ಲೋಕದಲ್ಲಿ ಅಧಿಷ್ಠಾನವುಳ್ಳ ಎಂದರೆ ಸಶರೀರನಾದ ರಾಜನೇ ರಾಷ್ಟ್ರಕ್ಕೆ ಒಡೆಯನಾಗಿರುವುದು ಕಂಡುಬರುತ್ತದೆ ಹಾಗೆಯೇ ಈಶ್ವರನಿಗೂ ಇಂದ್ರಿಯಾಶ್ರಯವಾಗಿರುವ ಒಂದು ಶರೀರವನ್ನು ಕಲ್ಪಿಸಬಹುದೆಂದು ಹೇಳಲಾಗುವುದಿಲ್ಲ, ಏಕೆಂದರೆ ಶರೀರವು ಸೃಷ್ಟಿಯ ಉತ್ತರಕಾಲದಲ್ಲಿ ಇರುವುದೇ ಹೊರತು ಸೃಷ್ಟಿಗೆ ಮೊದಲು ಇರಲಾರದು ಈಶ್ವರನಿಗೆ ಇಂದ್ರಿಯಾಶ್ರಯವಾದ ಯಾವುದೊ ಒಂದು ಶರೀರವನ್ನು ನಮ್ಮ ಇಚ್ಛಾನುಸಾರವಾಗಿ ಕಲ್ಪಿಸುವುದೂ ಹೊಂದುವುದಿಲ್ಲ, ಏಕೆಂದರೆ ಈಶ್ವರನಿಗೆ ಶರೀರವಿದ್ದರೆ ಅವನಿಗೂ ಸಂಸಾರಿಗಳ ಹಾಗೆ ಸುಖದುಃಖಗಳು ಪ್ರಾಪ್ತವಾಗಿ ಅನೀಶ್ವರನಾಗುತ್ತಾನೆ [1]

ವಿ —ಭೋಕ್ತೃವಾದ ಜೀವನು ಶರೀರರಹಿತನಾಗಿದ್ದರೂ ಶರೀರೇಂದ್ರಿಯಗಳನ್ನು ಆಳುವುದು ಕಂಡುಬರುತ್ತದೆ ಹೀಗೆಯೇ ಅಶರೀರನಾದ ಮಹೇಶ್ವರನು ಪ್ರಧಾನವನ್ನು ಆಳಬಹುದೆಂಬುದು ಸರಿಯಲ್ಲ, ಏಕೆಂದರೆ ಕರ್ಮಫಲಭೋಗಕ್ಕಾಗಿ ಪುಣ್ಯಪಾಪರೂಪದಿಂದಿರುವ ಅದೃಷ್ಟದಿಂದ ಜೀವನು ಅಧಿಷ್ಠಾನವನ್ನು, ಎಂದರೆ ಶರೀರವನ್ನು ಆಳುತ್ತಾನೆ [2] ಹೀಗೆಯೇ ಪಶುಪತಿಯೂ ಕೂಡ ಕರ್ಮಫಲಭೋಗಕ್ಕಾಗಿ ಅದೃಷ್ಟದ ವಶದಲ್ಲಿರಬೇಕಾಗುತ್ತದೆ ಆದುದರಿಂದ ಪಶುಪತಿಗೆ ಅಧಿಷ್ಠಾನದ ಸಂಭವವಿಲ್ಲ

**ದ್ವೈ.**—'ಈ ಜಗತ್ತೇ ಪಶುಪತಿಗೆ ಕರಣದಂತೆ ಅಧಿಷ್ಠಾನಾದಿರೂಪದಲ್ಲಿದೆ, ನಿತ್ಯವಾಗಿದೆ—ಎಂದು ಹೇಳಿದರೆ ಅದು ಸರಿಯಲ್ಲ, ಏಕೆಂದರೆ ಅವನಿಗೆ ಶರೀರಗತವಾದ ಸುಖದುಃಖಗಳ ಅನುಭವವೂ ಉತ್ಪತ್ತಿನಾಶಗಳೂ ಪ್ರಾಪ್ತವಾಗುವುವು'[3] ಎಂಬುದು ಸೂತ್ರಾರ್ಥ

---

[1] ಸಶರೀರತ್ವೇ ಹಿ ಸತಿ ಸಂಸಾರಿವದ್ಭೋಗಾದಿಪ್ರಸಂಗಾದೀಶ್ವರಸ್ಯಾಪ್ಯನೀಶ್ವರತ್ವಂ ಪ್ರಸಜ್ಯೇತ (ಸೂ ಭಾ)

[2] ಪುಣ್ಯಪಾಪರೂಪಕರ್ಮಫಲಭೋಗಾರ್ಥಂ ಪುಣ್ಯಪಾಪರೂಪಾದೃಷ್ಟಕಾರಿತಂ ಹಿ ತದಧಿಷ್ಠಾನಮ್ (ಶ್ರೀಭಾಷ್ಯ)

[3] ಉತ್ಪತ್ತಿವಿನಾಶೌ ಸುಖದುಃಖಭೋಗಶ್ಚ ಪ್ರಾಪ್ಸ್ಯಂತೇ ತದ್ಗತಾಃ (ಮ ಭಾ)

## ಅಂತವತ್ತ್ವಮಸರ್ವಜ್ಞತಾ ವಾ ॥ ೪೧ ॥

೪೧. (ಇವರ ವಾದದಿಂದ ಈಶ್ವರನಿಗೆ) ಅಂತವತ್ತ್ವವೊ ಅಥವಾ ಅಸರ್ವಜ್ಞತೆಯೋ (ಪ್ರಾಪ್ತವಾಗುತ್ತದೆ).

ಸರ್ವಜ್ಞನಾದ ಈಶ್ವರನು ಪ್ರಧಾನಕ್ಕೂ ಪುರುಷರಿಗೂ ತನಗೂ ಇರತಕ್ಕಂಥ ಇಯತ್ತೆಯನ್ನು ನಿರ್ಧರಿಸಬೇಕು ಅಥವಾ ನಿರ್ಧರಿಸಕೂಡದು ಎರಡು ಪಕ್ಷಗಳಲ್ಲಿಯೂ ದೋಷವು ಬರುತ್ತದೆ. ಮೊದಲನೆಯ ಪಕ್ಷದಲ್ಲಿ ಪ್ರಧಾನಪುರುಷೇಶ್ವರರ ಪರಿಮಿತಿಯು ತಿಳಿದುಬರುವುದರಿಂದ ಅವರಿಗೆ ಅಂತವತ್ತ್ವವು ಅವಶ್ಯವಾಗಿರುತ್ತದೆ. ಮಿತಸಂಖ್ಯೆಯುಳ್ಳ ಸಂಸಾರಿಗಳಿಗೆ ಮೋಕ್ಷವಾದಂತೆ ಸಂಸಾರವೂ ಸಂಸಾರಿಗಳೂ ಅಂತವುಳ್ಳವರಾಗುತ್ತಾರೆ ಈಶ್ವರನ ವಶದಲ್ಲಿರುವುದೂ ವಿಕಾರಗಳಿಂದ ಕೂಡಿರುವುದೂ ಪುರುಷಾರ್ಥವೂ ಆದ ಪ್ರಧಾನವೇ ಸಂಸಾರವು. ಈ ಸಂಸಾರವೇ ಹೋದಮೇಲೆ ಈಶ್ವರನು ಯಾವುದನ್ನು ಆಳಬೇಕು? ಅವನ ಸರ್ವಜ್ಞತ್ವಕ್ಕೂ ಈಶ್ವರತ್ವಕ್ಕೂ ಯಾವ ವಿಷಯವೂ ಇರುವುದಿಲ್ಲ. ಅಂತವುಳ್ಳ ಪ್ರಧಾನಪುರುಷೇಶ್ವರರಿಗೆ ಆದಿಯೂ ಬರುತ್ತದೆ ಆದ್ಯಂತವಿದ್ದರೆ ಶೂನ್ಯತ್ವವು ಪ್ರಸಕ್ತವಾಗುವುದು [1] ಎರಡನೆಯ ಪಕ್ಷದಲ್ಲಿ ಈಶ್ವರನು ಪ್ರಧಾನಪುರುಷೇಶ್ವರರ ಪರಿಮಿತಿಯನ್ನು ನಿರ್ಧರಿಸಲಾರನೆಂದು ಒಪ್ಪಿಕೊಂಡರೆ ಅವನು ಸರ್ವಜ್ಞನೆಂಬುದನ್ನು ಬಿಡಬೇಕಾಗುತ್ತದೆ. ಆದುದರಿಂದ ತಾರ್ಕಿಕರ ಈಶ್ವರಕಾರಣವಾದವು ಅಸಂಗತವಾಗಿರುತ್ತದೆ

ವಿ.—ಮೂಲದಲ್ಲಿರುವ **ವಾ** ಶಬ್ದಕ್ಕೆ 'ಮತ್ತು' ಎಂಬ ಅರ್ಥವಿದೆ. ಈಶ್ವರನು ಪುಣ್ಯಪಾಪರೂಪವಾದ ಅದೃಷ್ಟದ ವಶದಲ್ಲಿದ್ದರೆ ಅವನೂ ಜೀವನಂತೆ ಸೃಷ್ಟಿಲಯಾದಿಗಳಿಗೆ ಆಸ್ಪದನಾಗುತ್ತಾನೆ. ಪಾಶುಪತ-ಶೈವಾಗಮಗಳಲ್ಲಿ ವೇದಕ್ಕೆ ವಿರುದ್ಧವಾಗದ ಕೆಲವು ಧರ್ಮಗಳಿದ್ದರೂ ವೇದವಿರುದ್ಧವಾದ ನಿಮಿತ್ತೋಪಾದಾನ-ಭೇದ-ಕಲ್ಪನೆಯಿಂದಲೂ ಪರಾವರತತ್ತ್ವಗಳನ್ನು ಅದಲುಬದಲು ಮಾಡಿರುವುದರಿಂದಲೂ ಅವುಗಳು ಅಸಮಂಜಸವಾಗಿವೆ.[2]

**ದ್ವೈ.**—ಪಶುಪತಿಗೆ ಶರೀರವಿದ್ದರೆ ಅಂತವತ್ತ್ವವು ಪ್ರಾಪ್ತವಾಗುತ್ತದೆ, ಶರೀರವಿಲ್ಲದಿದ್ದರೆ ಜ್ಞಾನವಿರುವುದಿಲ್ಲ,[3] ಏಕೆಂದರೆ ಶರೀರವುಳ್ಳವನಿಗೇ ಜ್ಞಾನವಿರುವುದು ಕಂಡುಬರುತ್ತದೆ.

---

[1] ಪ್ರಧಾನಪುರುಷೇಶ್ವರಾಣಾಂ ಚೈವಮಂತವತ್ತ್ವೇ ಸತ್ಯಾದಿಮತ್ತ್ವಪ್ರಸಂಗಃ । ಆದ್ಯಂತವತ್ತ್ವೇ ಚ ಶೂನ್ಯವಾದಪ್ರಸಂಗಃ (ಸೂ. ಭಾ.).

[2] ಯದ್ಯಪಿ ಪಾಶುಪತಶೈವಯೋರ್ವೇದಾವಿರೋಧಿನ ಇವ ಕೇಚನ ಧರ್ಮಾಃ ಪ್ರತೀಯಂತೇ ; ತಥಾಪಿ ವೇದವಿರುದ್ಧನಿಮಿತ್ತೋಪಾದಾನಭೇದಕಲ್ಪನಾಪರಾವರತತ್ತ್ವವ್ಯತ್ಯಯಕಲ್ಪನಾಮೂಲತ್ವಾತ್ ಸರ್ವಮಸಮಂಜಸಮೇವೇತಿ ಅಸಾಮಂಜಸ್ಯಾದಿತ್ಯುಕ್ತಮ್ (ಶ್ರೀಭಾಷ್ಯ).

[3] ದೇಹವತ್ತ್ವೇಽಂತವತ್ತ್ವಮನ್ಯಥಾ ಜ್ಞಾನಾಭಾವಃ (ಮ. ಭಾ.).

## ೮. ಉತ್ಪತ್ತ್ಯಸಂಭವಾಧಿಕರಣ*

(ಸೂ. ೪೨–೪೫)

### ಉತ್ಪತ್ತ್ಯಸಂಭವಾತ್ ॥ ೪೨ ॥

೪೨ (ಪರಮೇಶ್ವರನಿಂದ ಜೀವನ) ಉತ್ಪತ್ತಿಯು ಅಸಂಭವವಾದುದರಿಂದ (ಭಾಗವತಮತವು ಹೊಂದುವುದಿಲ್ಲ)

ಭಾಗವತಮತವು ಹೀಗಿದೆ: ಭಗವಂತನಾದ ವಾಸುದೇವನೊಬ್ಬನೇ ನಿರಂಜನ-ಜ್ಞಾನರೂಪವಾದ ಪರಮಾರ್ಥತತ್ತ್ವವು. ಅವನು ತನ್ನನ್ನು ನಾಲ್ಕು ವಿಧವಾಗಿ ವಿಂಗಡಿಸಿಕೊಂಡು ನಾಲ್ಕು ವ್ಯೂಹರೂಪದಿಂದ ಇರುತ್ತಾನೆ: ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ. ವಾಸುದೇವನು ಪರಮಾತ್ಮನು, ಸಂಕರ್ಷಣನು ಜೀವನು, ಪ್ರದ್ಯುಮ್ನನು ಮನಸ್ಸು, ಅನಿರುದ್ಧನು ಅಹಂಕಾರ. ಈ ನಾಲ್ಕು ವ್ಯೂಹಗಳಲ್ಲಿ ವಾಸುದೇವನು ಪರಮಪ್ರಕೃತಿಯು, ಉಳಿದ ಸಂಕರ್ಷಣನೇ ಮೊದಲಾದವರು ಕಾರ್ಯವು. ಹೀಗಿರುವ ಪರಮೇಶ್ವರನಾದ ಭಗವಂತನನ್ನು ಅಭಿಗಮನ ಉಪಾದಾನ ಇಜ್ಯೆ ಸ್ವಾಧ್ಯಾಯ ಯೋಗ[1] —ಇವುಗಳಿಂದ ವರ್ಷಶತವೂ ಪೂಜಿಸಿ ಕ್ಲೇಶಗಳನ್ನು ಕಳೆದುಕೊಂಡ ಉಪಾಸಕನು ಭಗವಂತನನ್ನೇ ಹೊಂದುತ್ತಾನೆ.

ಅವ್ಯಕ್ತಕ್ಕಿಂತ ಶ್ರೇಷ್ಠನೂ ಸರ್ವಾತ್ಮನೂ ಪರಮಾತ್ಮನೂ ಆದ ನಾರಾಯಣನು ತನ್ನನ್ನು ಅನೇಕವಿಧವಾಗಿ ವಿಂಗಡಿಸಿಕೊಂಡಿರುತ್ತಾನೆ—ಎಂಬುದನ್ನು ನಾವು ನಿರಾಕರಿಸುವುದಿಲ್ಲ; ಏಕೆಂದರೆ 'ಅವನು ಒಂದು ರೂಪದಲ್ಲಿರುತ್ತಾನೆ, ಮೂರು ರೂಪದಲ್ಲಿರುತ್ತಾನೆ'[2] (ಛಾಂ. ಉ ೭. ೨೬. ೨)—ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನ ಬಹುರೂಪತ್ವವು ತಿಳಿದುಬರುತ್ತದೆ. ಮತ್ತೆ ಆ ಭಗವಂತನ ಆರಾಧನೆಯನ್ನು ಅನನ್ಯಭಾವದಿಂದ ಅನವರತವೂ ಮಾಡಬೇಕೆಂಬುದನ್ನು ನಾವು ನಿಷೇಧಿಸುವುದಿಲ್ಲ; ಏಕೆಂದರೆ ಶ್ರುತಿಸ್ಮೃತಿಗಳಲ್ಲಿ ಈಶ್ವರಪ್ರಣಿಧಾನವು ಪ್ರಸಿದ್ಧವಾಗಿದೆ. ಆದರೆ ವಾಸುದೇವನೆಂಬ ಪರಮಾತ್ಮ

---

* ಮಧ್ವಭಾಷ್ಯದಲ್ಲಿ ಇದು ಶಕ್ತ್ಯಧಿಕರಣ ಎನಿಸಿದೆ. ಮಧ್ವಭಾಷ್ಯದ ಪ್ರಕಾರ ಸೂತ್ರಕಾರರು ಶಕ್ತಿಪಕ್ಷವನ್ನು ಈ ಅಧಿಕರಣದಲ್ಲಿ ದೂಷಿಸಿರುತ್ತಾರೆ.

[1] ವಾಕ್ಕಾಯಮನಸ್ಸುಗಳನ್ನು ಸಾವಧಾನವಾಗಿ ಮಾಡಿಕೊಂಡು ದೇವತಾಗೃಹಕ್ಕೆ ಹೋಗುವುದು ಅಭಿಗಮನ; ಪೂಜಾದ್ರವ್ಯಗಳ ಸಂಪಾದನೆ ಉಪಾದಾನ; ಪೂಜೆಯು ಇಜ್ಯೆ; ಅಷ್ಟಾಕ್ಷರಾದಿಗಳ ಜಪವು ಸ್ವಾಧ್ಯಾಯ; ಯೋಗವು ಧ್ಯಾನ (ರ. ಪ್ರ.).

[2] ಸ ಏಕಧಾ ಭವತಿ ತ್ರಿಧಾ ಭವತಿ ।

ನಿಂದ ಸಂಕರ್ಷಣನೆಂಬ ಜೀವನು ಹುಟ್ಟುತ್ತಾನೆ—ಎಂಬುದು ಸಂಭವಿಸುವುದಿಲ್ಲ.[1] ಏಕೆಂದರೆ ಜೀವನಿಗೆ ಅನಿತ್ಯತ್ವವೇ ಮೊದಲಾದ ದೋಷಗಳು ಪ್ರಾಪ್ತವಾಗುವುವು ಇದರಿಂದ ಜೀವನಿಗೆ ಭಗವತ್ಪ್ರಾಪ್ತಿಯೆಂಬ ಮೋಕ್ಷವೇ ಇಲ್ಲದಂತೆ ಆಗುವುದು ; ಏಕೆಂದರೆ ಕಾರ್ಯವು ಕಾರಣವನ್ನು ಹೊಂದಿದರೆ ಲಯವಾಗಬೇಕಾಗುವುದು. ಸೂತ್ರಕಾರರೇ ಮುಂದೆ (೨. ೩. ೧೭) ಜೀವನ ಉತ್ಪತ್ತಿಯನ್ನು ನಿಷೇಧಿಸಿರುತ್ತಾರೆ

ವಿ.—ಇದು ಪೂರ್ವಪಕ್ಷಸೂತ್ರವು. ಭಗವಂತನಿಂದ ಉಪದೇಶಿಸಲ್ಪಟ್ಟ ಮತ್ತು ಪರಮನಿಃಶ್ರೇಯಸ್ಸನ್ನು ಬೋಧಿಸುವ ಪಂಚರಾತ್ರತಂತ್ರವೂ ಕೂಡ—ಕಪಿಲಾದಿತಂತ್ರಗಳ ಹಾಗೆ—ಅಪ್ರಮಾಣವೊ ಎಂಬ ಆಶಂಕೆಯನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತದೆ. ಪರಬ್ರಹ್ಮನಾದ ವಾಸುದೇವನಿಂದ ಸಂಕರ್ಷಣನೆಂಬ ಜೀವನ ಉತ್ಪತ್ತಿಯನ್ನು ಹೇಳಿರುವುದು ಶ್ರುತಿಗೆ ವಿರುದ್ಧವಾಗಿದೆ ; ಏಕೆಂದರೆ ಶ್ರುತಿಗಳು ಜೀವನ ಅನಾದಿತ್ವವನ್ನು ಹೇಳುತ್ತವೆ: 'ಜ್ಞಾನಿಯು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ'[2] (ಕ. ಉ. ೧. ೨ ೧೮).

ದ್ವೈ.—'ಶಕ್ತಿಯಿಂದಲೇ ಜಗತ್ತಿನ ಉತ್ಪತ್ತಿಯು ಸಂಭವಿಸದಿರುವುದರಿಂದ ಶಕ್ತಿದೇವತೆಯು ಜಗತ್ಕಾರಣವಲ್ಲ' ಎಂಬುದು ಸೂತ್ರಾರ್ಥ

ಪುರುಷನಿಂದ ಅನುಗೃಹೀತಳಾಗದ ಸ್ತ್ರೀಯಿಂದ ಉತ್ಪತ್ತಿಯಾಗುವುದು ಎಲ್ಲಿಯೂ ಕಂಡುಬರುವುದಿಲ್ಲ.[3]

## ನ ಚ ಕರ್ತುಃ ಕರಣಮ್ ॥ ೪೩ ॥

೪೩. ಕರ್ತೃವಿನಿಂದ ಕರಣವು ಉತ್ಪನ್ನವಾಗಲಾರದು.

ಈ ಕಾರಣದಿಂದಲೂ ಭಾಗವತರ ಕಲ್ಪನೆಯು ಅಸಂಗತವಾಗಿರುತ್ತದೆ : ಕರ್ತೃವಿನಿಂದ ಕರಣವು ಬರುವುದಿಲ್ಲ. ದೇವದತ್ತನು ಕೊಡಲಿಯನ್ನು ಉಪಯೋಗಿಸಬಹುದೇ ಹೊರತು ಅವನಿಂದ ಕೊಡಲಿಯು ಉತ್ಪನ್ನವಾಗುವುದಿಲ್ಲ ಸಂಕರ್ಷಣನೆಂಬ ಜೀವನಿಂದ ಪ್ರದ್ಯುಮ್ನನೆಂಬ ಹೆಸರಿನ ಮನಸ್ಸು ಹುಟ್ಟುತ್ತದೆ, ಪ್ರದ್ಯುಮ್ನನಿಂದ ಅನಿರುದ್ಧನೆಂಬ ಅಹಂಕಾರವು ಹುಟ್ಟುತ್ತದೆ—ಎಂದು ಭಾಗವತರು ವರ್ಣಿಸುತ್ತಾರೆ ದೃಷ್ಟಾಂತವಿಲ್ಲದೆ ಇದನ್ನು ನಿಶ್ಚಯಿಸುವುದಕ್ಕೆ ಆಗುವುದಿಲ್ಲ. ಇದಕ್ಕೆ ಅನುಕೂಲವಾದ ಶ್ರುತಿಯನ್ನೂ ನಾವು ಕಂಡಿಲ್ಲ

ವಿ.—ಇದೂ ಪೂರ್ವಪಕ್ಷದ ಸೂತ್ರ. ಕರ್ತೃವಾದ ಜೀವನಿಂದ ಮನಸ್ಸು ಉತ್ಪನ್ನವಾಗುವುದು ಎಂಬ ಪಕ್ಷವು ಸರಿಯಲ್ಲ ; ಏಕೆಂದರೆ 'ಇವನಿಂದಲೇ ಪ್ರಾಣ ಮನಸ್ಸು ಮತ್ತು

---

[1] ನ ವಾಸುದೇವಸಂಜ್ಞಕಾತ್ ಪರಮಾತ್ಮನಃ ಸಂಕರ್ಷಣಸಂಜ್ಞಕಸ್ಯ ಜೀವಸ್ಯೋತ್ಪತ್ತಿಃ ಸಂಭವತಿ (ಸೂ. ಭಾ.).

[2] ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ।

[3] ನ ಹಿ ಪುರುಷಾನನುಗೃಹೀತಸ್ತ್ರೀಭ್ಯ ಉತ್ಪತ್ತಿರ್ದೃಶ್ಯತೇ (ಮ. ಭಾ.).

ಎಲ್ಲ ಇಂದ್ರಿಯಗಳೂ ಉತ್ಪನ್ನವಾದುವು'[1] (ಮುಂ. ಉ ೨. ೧. ೩) ಎಂಬ ಶ್ರುತಿಯ ಪ್ರಕಾರ ಮನಸ್ಸೂ ಕೂಡ ಪರಬ್ರಹ್ಮನಿಂದಲೇ ಉತ್ಪನ್ನವಾಗುತ್ತದೆ. ಭಾಗವತಮತವು ಶ್ರುತಿವಿರುದ್ಧವಾದ ಅರ್ಥವನ್ನು ಪ್ರತಿಪಾದಿಸುವುದರಿಂದ ಆದರ ಪ್ರಾಮಾಣ್ಯವನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಈ ಆಕ್ಷೇಪಣೆಗಳಿಗೆ ಮುಂದಿನ ಸೂತ್ರವು ಉತ್ತರಿಸುತ್ತದೆ.

**ಟಿಪ್ಪ.**—ಪುರುಷನನ್ನು ಸೃಷ್ಟಿಯ ಅಂಗವಾಗಿ ಅಂಗೀಕರಿಸಿದರೂ ಜ್ಞಾನಾದಿ ಸಾಧನಗಳು ಅವನಿಗೆ ಇಲ್ಲದಿರುವುದರಿಂದ ಅವನು ಸೃಷ್ಟಿಕಾರ್ಯಕ್ಕೆ ಸಹಾಯಕನಾಗಲಾರನು.[2]

## ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ‖ ೪೪ ‖

೪೪. ಅಥವಾ (ಸಂಕರ್ಷಣಾದಿಗಳು) ಜ್ಞಾನವೇ ಮೊದಲಾದ (ಈಶ್ವರಧರ್ಮಗಳಿಂದ) ಕೂಡಿದವರೆಂದರೂ ಅದು (ಎಂದರೆ ಉತ್ಪತ್ತ್ಯಸಂಭವದ ದೋಷವು) ನಿಷೇಧವಾಗುವುದಿಲ್ಲ.

ಸಂಕರ್ಷಣಾದಿಗಳು ಜೀವರಲ್ಲ, ಈಶ್ವರರು ; ಎಂದರೆ ಜ್ಞಾನ ಐಶ್ವರ್ಯ ಶಕ್ತಿ ಬಲ ವೀರ್ಯ ತೇಜಸ್ಸು ಎಂಬ ಈಶ್ವರಧರ್ಮಗಳಿಂದ ಕೂಡಿದವರು. ಇವರೆಲ್ಲರೂ ನಿರ್ದೋಷರಾದ, ಪ್ರಕೃತಿಯಿಂದ ಹುಟ್ಟದ, ನಿರವದ್ಯರಾದ ವಾಸುದೇವರೇ ; ಆದುದರಿಂದ ಮೇಲೆ ಹೇಳಿದ ಉತ್ಪತ್ತಿ-ಅಸಂಭವದ ದೋಷವು ಬರುವುದಿಲ್ಲ—ಎಂದು ಭಾಗವತರು ಹೇಳಿದರೂ ಆ ದೋಷವು ಬೇರೆ ಪ್ರಕಾರದಿಂದ ಬರುತ್ತದೆ : ವಾಸುದೇವರೇ ಮೊದಲಾದ ನಾಲ್ವರು ಪರಸ್ಪರ-ಭಿನ್ನರು, ಈಶ್ವರರು, ಸಮಾನ-ಧರ್ಮವುಳ್ಳವರು, ಏಕಾತ್ಮರಲ್ಲ—ಎಂದು ಪೂರ್ವ-ಪಕ್ಷಿಯು ಹೇಳಿದರೆ ಅನೇಕೇಶ್ವರ-ಕಲ್ಪನೆಯು ವ್ಯರ್ಥವಾಗುತ್ತದೆ ; ಏಕೆಂದರೆ ಒಬ್ಬ ಈಶ್ವರನಿಂದಲೇ ಕಾರ್ಯವೆಲ್ಲ ಸಿದ್ಧಿಸುತ್ತದೆ. ಅಥವಾ ಒಬ್ಬ ಭಗವಂತನಿಂದಲೇ ಸಮಾನಧರ್ಮವುಳ್ಳ ನಾಲ್ಕು ವ್ಯೂಹಗಳು ಉತ್ಪನ್ನವಾಗುತ್ತವೆ—ಎಂದು ಹೇಳಿದರೆ ಉತ್ಪತ್ತಿ-ಅಸಂಭವ-ದೋಷವು ಹೋಗುವುದಿಲ್ಲ ವಾಸುದೇವನಿಂದ ಸಂಕರ್ಷಣನ ಉತ್ಪತ್ತಿ, ಸಂಕರ್ಷಣನಿಂದ ಪ್ರದ್ಯುಮ್ನನ ಉತ್ಪತ್ತಿ, ಪ್ರದ್ಯುಮ್ನನಿಂದ ಅನಿರುದ್ಧನ ಉತ್ಪತ್ತಿ ಎಂಬುದು ಸಂಭವಿಸುವುದಿಲ್ಲ ; ಏಕೆಂದರೆ ಇವರೆಲ್ಲ ಸಮಾನಧರ್ಮವುಳ್ಳವರಾಗಿ ಯಾವ ಅತಿಶಯವನ್ನೂ ಹೊಂದಿರುವುದಿಲ್ಲ. ಕಾರ್ಯ-ಕಾರಣಗಳಿಗೆ ಯಾವ ಅತಿಶಯವೂ ಇಲ್ಲದಿದ್ದರೆ ಇದು ಕಾರ್ಯ, ಇದು ಕಾರಣ ಎಂದು ಹೇಳಲಾಗುವುದಿಲ್ಲ. ವಾಸುದೇವಾದಿಗಳಲ್ಲಿ ಜ್ಞಾನೈಶ್ವರ್ಯಾದಿ-ತಾರತಮ್ಯದಿಂದಾದ ಯಾವ ಭೇದವನ್ನೂ ಪಂಚರಾತ್ರಸಿದ್ಧಾಂತಿಗಳು ಒಪ್ಪಿ

---

1 ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।

2 ಯದಿ ಪುರುಷೋಽಂಗೀಕ್ರಿಯತೇ ತಸ್ಯಾಪಿ ಕರಣಾಭಾವಾದನುಪಪತ್ತಿಃ (ಮ. ಭಾ.).

ಕೊಂಡಿರುವುದಿಲ್ಲ , ಏಕೆಂದರೆ ಈ ವ್ಯೂಹಗಳಿಲ್ಲ ಯಾವ ವಿಶೇಷವೂ ಇಲ್ಲದ ವಾಸುದೇವನೇ ಎಂದು ಹೇಳುತ್ತಾರೆ ಮತ್ತೆ ಭಗವಂತನ ವ್ಯೂಹಗಳು ನಾಲ್ಕೇ ಎಂಬ ಪರಿಮಿತಿಯನ್ನು ಕಲ್ಪಿಸುವುದಕ್ಕೂ ಆಗುವುದಿಲ್ಲ , ಏಕೆಂದರೆ ಬ್ರಹ್ಮನಿಂದ ಹುಲ್ಲಿನವರೆಗೆ ಸಮಸ್ತ ಜಗತ್ತೂ ಭಗವದ್ವ್ಯೂಹವೆಂದು ತಿಳಿದುಬರುತ್ತದೆ [1]

ಎ—'ಅಥವಾ ಅವರು ಪರಬ್ರಹ್ಮಸ್ವರೂಪರಾಗಿದ್ದರೆ ಪಂಚರಾತ್ರಾಗಮಕ್ಕೆ ವಿರೋಧ ವಿರುವುದಿಲ್ಲ' ಎಂಬುದು ಸೂತ್ರಾರ್ಥ

ಮೂಲದಲ್ಲಿರುವ **ವಾ**-ಶಬ್ದವು ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿದ ಪೂರ್ವಪಕ್ಷ ವನ್ನು ನಿರಾಕರಿಸುತ್ತದೆ ಯಾವುದು ವಿಜ್ಞಾನವೊ ಮತ್ತು ಆದಿಯೊ ಅದು ವಿಜ್ಞಾನಾದಿ, ಎಂದರೆ ಪರಬ್ರಹ್ಮ [2] ಸಂಕರ್ಷಣಾದಿಗಳು ಪರಬ್ರಹ್ಮ-ಸ್ವರೂಪರಾಗಿದ್ದರೆ ಅದನ್ನು ಪ್ರತಿಪಾದಿಸುವ ಶಾಸ್ತ್ರಕ್ಕೆ ಅಪ್ರಾಮಾಣ್ಯವು ಒದಗುವುದಿಲ್ಲ ಭಾಗವತರು ವಿರುದ್ಧವಾದ ಜೀವೋತ್ಪತ್ತಿಯನ್ನು ಉಪದೇಶಿಸುತ್ತಾರೆ—ಎಂದು ಹೇಳುವವರಿಗೆ ಭಾಗವತಪ್ರಕ್ರಿಯೆಯು ತಿಳಿದಿರುವುದಿಲ್ಲ [3] ವಾಸುದೇವನೆಂಬ ಹೆಸರುಳ್ಳ ಪರಬ್ರಹ್ಮನೇ ತನ್ನನ್ನು ಆಶ್ರಯಿಸಿರುವವರ ಸಮಾಶ್ರಯಣಕ್ಕೋಸ್ಕರ ಸ್ವೇಚ್ಛೆಯಿಂದಲೇ ನಾಲ್ಕು ವ್ಯೂಹಗಳಲ್ಲಿರುತ್ತಾನೆ ಷಾಡ್ಗುಣ್ಯ-ಶರೀರನಾದ ಪರಬ್ರಹ್ಮನು ಸೂಕ್ಷ್ಮ, ವ್ಯೂಹ ವಿಭವ ಎಂಬ ಭೇದದಿಂದ ತನ್ನನ್ನು ವಿಂಗಡಿಸಿ ಕೊಳ್ಳುತ್ತಾನೆ , ಅಧಿಕಾರಿಗಳಾದ ಭಕ್ತರು ಜ್ಞಾನಪೂರ್ವಕವಾದ ಕರ್ಮದಿಂದ ಇವನನ್ನೇ ಅರ್ಚಿಸುತ್ತಾರೆ ಮತ್ತು ಹೊಂದುತ್ತಾರೆ ಉಪಾಸಕರು ವಿಭವದ ಅರ್ಚನೆಯಿಂದ ವ್ಯೂಹ ವನ್ನು ಹೊಂದುತ್ತಾರೆ, ವ್ಯೂಹದ ಅರ್ಚನೆಯಿಂದ ವಾಸುದೇವನೆಂಬ ಸೂಕ್ಷ್ಮವನ್ನು ಹೊಂದುತ್ತಾರೆ—ಎಂಬುದು ಅವರ ಮತ ಶ್ರೀರಾಮಕೃಷ್ಣಾದಿ ಅವತಾರಗಳಿಗೆ ವಿಭವ ವೆಂದು ಹೆಸರು ಆದುದರಿಂದ ಪರಬ್ರಹ್ಮನು ಸ್ವೇಚ್ಛೆಯಿಂದ ಅಂಗೀಕರಿಸುವ ರೂಪಗಳಿಗೆ ಸಂಕರ್ಷಣಾದಿಗಳೆಂಬ ಹೆಸರು ಬಂದಿದೆ 'ಹುಟ್ಟದಿದ್ದರೂ ಬಹುವಿಧವಾಗಿ ಹುಟ್ಟುತ್ತಾನೆ'[4] ಎಂದು ಶ್ರುತಿಯು ಹೇಳುತ್ತದೆ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ, ಇವರು ಕ್ರಮವಾಗಿ ಜೀವ ಮನಸ್ಸು ಅಹಂಕಾರ—ಇವುಗಳ ಅಧಿಷ್ಠಾತೃಗಳಾಗಿರುವುದರಿಂದ ಜೀವಾದಿ-ಶಬ್ದ ಗಳಿಂದ ಸೂಚಿಸಲ್ಪಟ್ಟರೆ ಯಾವ ವಿರೋಧವೂ ಇರುವುದಿಲ್ಲ , ಏಕೆಂದರೆ ಕೆಲವು ಶ್ರುತಿಗಳಲ್ಲಿ

---

[1] ನ ಚೈತೇ ಭಗವದ್ವ್ಯೂಹಾಶ್ಚತುಃಸಂಖ್ಯಾಯಾ ಮೇವಾವತಿಷ್ಠೇರನ್, ಬ್ರಹ್ಮಾದಿಸ್ತಂಬಪರ್ಯಂತಸ್ಯ ಸಮಸ್ತಸ್ಯೈವ ಜಗತೋ ಭಗವದ್ವ್ಯೂಹತ್ವಾವಗಮಾತ್ (ಸೂ ಭಾ )

[2] ವಿಜ್ಞಾನಂ ಚಾದಿ ಚೇತಿ ಪರಬ್ರಹ್ಮ ವಿಜ್ಞಾನಾದಿ (ಶ್ರೀಭಾಷ್ಯ)

[3] ಭಾಗವತಪ್ರಕ್ರಿಯಾನಭಿಜ್ಞಾನತಾಮಿದಂ ಚೋದ್ಯಂ ಯಜ್ಜೀವೋತ್ಪತ್ತಿರ್ವಿರುದ್ಧಾಭಿಹಿತೇತಿ (ಶ್ರೀಭಾಷ್ಯ)

[4] ಅಜಾಯಮಾನೋ ಬಹುಧಾ ವಿಜಾಯತೇ (ಪುರುಷಸೂಕ್ತ)

ಪರಬ್ರಹ್ಮನನ್ನು ಆಕಾಶ ಪ್ರಾಣಾದಿಶಬ್ದಗಳಿಂದ ಕರೆದಿದೆ.[1]

ದ್ವೈತ — 'ಇವನಿಗೆ ವಿಜ್ಞಾನಾದಿಗಳಿವೆ ಎಂದು ಅಂಗೀಕರಿಸಿದರೂ ಶೈವಮತಕ್ಕೆ ಪ್ರತಿಷೇಧವಾಗುವುದಿಲ್ಲ' ಎಂಬುದು ಸೂತ್ರಾರ್ಥ

ಶಿವನಿಗೆ ವಿಜ್ಞಾನವೇ ಮೊದಲಾದ ಕರಣಗಳಿವೆಯೆಂದು ಅಂಗೀಕರಿಸಿದರೆ ಆಗ ಅವನಿಗೆ ಸೃಷ್ಟ್ಯಾದಿಗಳು ಹೊಂದುತ್ತವೆ. ಆದುದರಿಂದ ಶಕ್ತಿದೇವತೆಗೆ ಅವುಗಳನ್ನು ಆರೋಪಿಸುವ ಆವಶ್ಯಕತೆಯಿಲ್ಲ [2] ಆದರೆ ಶಿವಕರ್ತೃತ್ವವು ಮೊದಲೇ ನಿರಸ್ತವಾಗಿದೆ.

## ವಿಪ್ರತಿಷೇಧಾಚ್ಚ ॥ ೪೫ ॥

೪೫. ವಿಪ್ರತಿಷೇಧವಿರುವುದರಿಂದಲೂ (ಈ ಶಾಸ್ತ್ರವು ಅಸಂಗತವಾಗಿದೆ)

ಭಾಗವತಮತದಲ್ಲಿ ಗುಣ-ಗುಣಿತ್ವ-ಕಲ್ಪನೆಯೇ ಮೊದಲಾದ ಬಹುವಿಧ ವಿರೋಧವು ಕಂಡುಬರುತ್ತದೆ ಜ್ಞಾನ ಐಶ್ವರ್ಯ ಶಕ್ತಿ ಬಲ ವೀರ್ಯ ತೇಜಸ್ಸು— ಇವೇ ಮೊದಲಾದುವನ್ನು ಕೆಲವೆಡೆಯಲ್ಲಿ ಗುಣಗಳೆಂದು ಹೇಳಿದೆ ; ಮತ್ತೆ ಕೆಲವೆಡೆಯಲ್ಲಿ ಇವೆಲ್ಲವೂ ಆತ್ಮರೆಂದೂ ವಾಸುದೇವರೆಂದೂ ಹೇಳಿದೆ. ಮತ್ತೆ 'ನಾಲ್ಕು ವೇದಗಳಲ್ಲಿ ಪರಮಶ್ರೇಯಸ್ಸನ್ನು ಹೊಂದದೆ ಶಾಂಡಿಲ್ಯನು ಈ ಶಾಸ್ತ್ರವನ್ನು ಪಡೆದನು'[3] ಎಂಬ ವೇದನಿಂದೆಯು ಕಂಡುಬರುತ್ತದೆ ಆದುದರಿಂದ ಈ ಕಲ್ಪನೆಯು ಅಸಂಗತವೆಂಬುದು ಸಿದ್ಧವಾಯಿತು.

ವಿ—ಪರಮಸಂಹಿತೆ ಮೊದಲಾದ ಪಂಚರಾತ್ರತಂತ್ರಗಳಲ್ಲಿ ಜೀವನ ಉತ್ಪತ್ತಿಯನ್ನು ನಿಷೇಧಿಸಿದೆ [4] ಶಾಂಡಿಲ್ಯನ ವೇದನಿಂದೆ ನಿಜವಾದ ನಿಂದೆಯಲ್ಲ, ಪಂಚರಾತ್ರದ ಪ್ರಶಂಸೆಯಾಗಿದೆ. ಈ ವಿಧವಾದ ನಿಂದೆ ಭೂಮವಿದ್ಯೆಯಲ್ಲಿಯೂ (ಛಾಂ ಉ. ೭. ೧ ೩) ಕಂಡುಬರುತ್ತದೆ. ಸಂಹಿತೆ ಇತಿಹಾಸ ಪುರಾಣ—ಇವುಗಳನ್ನು ಓದಿದ ನಾರದನು 'ಭಗವಂತನೆ, ನಾನು ಮಂತ್ರವನ್ನು ಮಾತ್ರ ಅರಿತುಕೊಂಡಿರುತ್ತೇನೆ, ಆತ್ಮನನ್ನು ಅರಿತುಕೊಂಡಿಲ್ಲ'[5] ಎಂದು ಹೇಳುತ್ತಾನೆ. ದುರ್ಜ್ಞೇಯವಾದ ವೇದಾರ್ಥವನ್ನು ಸುಲಭವಾಗಿ ಅರಿತುಕೊಳ್ಳಲು ಭಾಗವತವು ಬಂದಿದೆಯೆಂದು ಪರಮಸಂಹಿತೆಯೇ ಹೇಳುತ್ತದೆ ; 'ಜ್ಞಾನಿಯೂ ಭಗವಂತನೂ ಆದ ಹರಿಯು ಭಕ್ತಾನುಕಂಪೆಯಿಂದ ಉಪನಿಷದ್ವಾಕ್ಯಗಳ

---

1 ತತ್ರ ಜೀವಮನೋಽಹಂಕಾರತತ್ತ್ವಾನಾಮಧಿಷ್ಠಾತಾರಃ ಸಂಕರ್ಷಣ ಪ್ರದ್ಯುಮ್ನಾನಿರುದ್ಧಾ ಇತಿ ತೇಷಾಮೇವ ಜೀವಾದಿಶಬ್ದೈರಭಿಧಾನಮವಿರುದ್ಧಮ್ ; ಯಥಾಽಽಕಾಶಪ್ರಾಣಾದಿಶಬ್ದೈಃ ಬ್ರಹ್ಮಣೋಽಭಿಧಾನಮ್ (ಶ್ರೀಭಾಷ್ಯ).

2 ಯದಿ ವಿಜ್ಞಾನಾದಿಕರಣಂ ತಸ್ಯಾಂಗೀಕ್ರಿಯತೇ ತದಾ ತತ ಏವ ಸೃಷ್ಟ್ಯಾದ್ಯುಪಪತ್ತೇರೀಶ್ವರವಾದಾಂತರ್ಭಾವಃ (ಮ. ಭಾ.)

3 ಚತುರ್ಷು ವೇದೇಷು ಪರಂ ಶ್ರೇಯೋಽಲಬ್ಧ್ವಾ ಶಾಂಡಿಲ್ಯ ಇದಂ ಶಾಸ್ತ್ರಮಧಿಗತವಾನ್ (ಸೂ. ಭಾ.).

4 ವಿಪ್ರತಿಷಿದ್ಧಾ ಹಿ ಜೀವೋತ್ಪತ್ತಿಸ್ತಸ್ಮಿನ್ನಪಿ ತಂತ್ರೇ (ಶ್ರೀಭಾಷ್ಯ).

5 ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತಮ್ ।

ಸಾರವನ್ನು ಹಿಂಡಿ ಅದನ್ನು ಸುಲಭರೂಪದಲ್ಲಿ ಸಂಕ್ಷೇಪಮಾಡಿದನು.’[1] ಬ್ರಹ್ಮಸೂತ್ರಗಳು ಸಾಂಖ್ಯಯೋಗ ಪಾಶುಪತ ಮೊದಲಾದ ತಂತ್ರಗಳ ಮುಖ್ಯವಾದ ಅಂಶಗಳನ್ನು ಅಂಗೀಕರಿಸಿವೆ ; ಆದರೆ ಜೈನ-ಬೌದ್ಧ-ಮತಗಳಲ್ಲಿ ಎಲ್ಲವನ್ನೂ ನಿರಾಕರಿಸಿವೆ.

**ದ್ವೈತ**.—ಶಾಕ್ತೇಯಮತವು ಸಕಲಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿರುವುದರಿಂದ ಅಸಮಂಜಸವಾಗಿದೆ.[2]

---

[1] ವೇದಾಂತೇಷು ಯಥಾಸಾರಂ ಸಂಗೃಹ್ಯ ಭಗವಾನ್ ಹರಿಃ ।
ಭಕ್ತಾನುಕಂಪಯಾ ವಿದ್ವಾನ್ ಸಂಚಿಕ್ಷೇಪ ಯಥಾಸುಖಮ್ ॥

[2] ಸಕಲಶ್ರುತ್ಯಾದಿವಿರುದ್ಧತ್ವಾಚ್ಚಾಸಮಂಜಸಮ್ (ಮ. ಭಾ.).

## ಮೂರನೆಯ ಪಾದ

## ೧. ವಿಯದಧಿಕರಣ

(ಸೂ. ೧-೭)

### ನ ವಿಯದಶ್ರುತೇಃ ॥ ೧ ॥

೧ ಆಕಾಶವು ಉತ್ಪನ್ನವಾಗುವುದಿಲ್ಲ ; ಏಕೆಂದರೆ (ಅದನ್ನು ಪ್ರತಿಪಾದಿಸುವ) ಶ್ರುತಿಯಿಲ್ಲ.

ವೇದಾಂತವಾಕ್ಯಗಳಲ್ಲಿ ಭಿನ್ನಭಿನ್ನರೀತಿಯ ಉತ್ಪತ್ತಿಶ್ರುತಿಗಳು ಕಂಡುಬರುತ್ತವೆ ; ಕೆಲವು ಶ್ರುತಿಗಳು ಆಕಾಶದ ಉತ್ಪತ್ತಿಯನ್ನು ಹೇಳುತ್ತವೆ, ಕೆಲವು ಹೇಳುವುದಿಲ್ಲ. ಇನ್ನು ಕೆಲವು ಶ್ರುತಿಗಳು ವಾಯುವಿನ ಉತ್ಪತ್ತಿಯನ್ನು ಹೇಳುತ್ತವೆ, ಮತ್ತೆ ಕೆಲವು ಹೇಳುವುದಿಲ್ಲ. ಜೀವನ ಮತ್ತು ಪ್ರಾಣಗಳ ವಿಷಯದಲ್ಲಿಯೂ ಹೀಗೆಯೇ ಹೇಳಿದೆ. ಇದೇ ರೀತಿ ಸೃಷ್ಟಿಕ್ರಮದಲ್ಲಿಯೂ ಪರಸ್ಪರವಿರೋಧವಿರುವುದು ಕಂಡುಬರುತ್ತದೆ. ಸಾಂಖ್ಯಾದಿಪಕ್ಷಗಳಲ್ಲಿ ಪರಸ್ಪರವಿರೋಧವಿರುವುದರಿಂದ ಅವುಗಳನ್ನು ಸ್ವೀಕರಿಸಕೂಡದು ಎಂದು ಹೇಳಿದ್ದಾಯಿತು ಆದರೆ ವೇದಾಂತದಲ್ಲಿಯೂ ಇದೇ ದೋಷವಿದೆಯೆಂದು ಯಾರಾದರೂ ಹೇಳಬಹುದು ಆದ್ದರಿಂದ ಸೃಷ್ಟಿಯನ್ನು ಹೇಳುವ ವೇದಾಂತವಾಕ್ಯಗಳ ಅರ್ಥವನ್ನು ಸ್ಪಷ್ಟಪಡಿಸಲು ಮುಂದಿನ ವಿವರವು ಬಂದಿರುತ್ತದೆ. ಈಗ ಮೊಟ್ಟಮೊದಲನೆಯದಾಗಿ ಆಕಾಶಕ್ಕೆ ಉತ್ಪತ್ತಿಯಿದೆಯೋ ಅಥವಾ ಇಲ್ಲವೇ ಎಂಬುದನ್ನು ಚರ್ಚಿಸಲಾಗುತ್ತದೆ.

ಶ್ರುತಿಯ ಪ್ರಮಾಣವಿಲ್ಲದಿರುವುದರಿಂದ ಆಕಾಶಕ್ಕೆ ಉತ್ಪತ್ತಿಯಿಲ್ಲ ಎಂಬುದು ಪೂರ್ವಪಕ್ಷ. ಉತ್ಪತ್ತಿಪ್ರಕರಣದಲ್ಲಿ ಆಕಾಶದ ಹೆಸರೇ ಇಲ್ಲ ಛಾಂದೋಗ್ಯಶ್ರುತಿಯು (೬. ೨. ೩) ತೇಜಸ್ಸು ನೀರು ಭೂಮಿ—ಇವುಗಳ ಉತ್ಪತ್ತಿಯನ್ನು ಹೇಳಿದೆಯೇ ಹೊರತು ಆಕಾಶದ ಉತ್ಪತ್ತಿಯನ್ನು ಹೇಳಿಲ್ಲ. ಅತೀಂದ್ರಿಯವಸ್ತುಗಳ ವಿಷಯದಲ್ಲಿ ಜ್ಞಾನವುಂಟಾಗಬೇಕಾದರೆ ನಮಗೆ ಶ್ರುತಿಯೇ ಪ್ರಮಾಣವಾಗಿದೆ.

**ಸಿ.**—ಶ್ರುತಿಯ ಪ್ರಮಾಣವಿಲ್ಲದುದರಿಂದ ಆಕಾಶವು ಉತ್ಪನ್ನವಾಗುವುದಿಲ್ಲ. ಯಾವುದು ಸಂಭವವೊ ಆ ವಿಷಯದಲ್ಲಿ ಶ್ರುತಿವಾಕ್ಯವಿರುವುದೇ ಹೊರತು ಅಸಂಭವವಾದುದರ ವಿಷಯದಲ್ಲಿ ಶ್ರುತಿ ಇರುವುದಿಲ್ಲ. ತೈತ್ತಿರೀಯದಲ್ಲಿ (೨. ೧) ಮತ್ತು ಮುಂಡಕದಲ್ಲಿ (೨. ೧. ೪) ಹೇಳಿರುವ ಆಕಾಶದ ಉತ್ಪತ್ತಿಯು ಅರ್ಥವಿರೋಧವುಳ್ಳದ್ದಾದುದರಿಂದ ಬಾಧಿತವಾಗಿದೆ.

**ಟಿಪ್ಪಣಿ.**—ಜೀವ ಪರಮಾತ್ಮ ಅಧಿಭೂತ ಅಧಿದೈವ—ಈ ವಿಷಯಗಳಲ್ಲಿ ಕಂಡುಬರುವ ಶ್ರುತಿಗಳ ಪರಸ್ಪರವಿರೋಧವನ್ನು ಈ ಪಾದದಲ್ಲಿ ಪರಿಹರಿಸಿದೆ.

ಆಕಾಶವು ಅನುತ್ಪತ್ತಿಯುಳ್ಳದ್ದಲ್ಲ ; ಏಕೆಂದರೆ ಅನುತ್ಪತ್ತಿಯನ್ನು ತಿಳಿಸುವ ಶ್ರುತಿಯಿಲ್ಲ.

## ಅಸ್ತಿ ತು ॥ ೨ ॥

೨. ಆದರೆ (ಆಕಾಶದ ಉತ್ಪತ್ತಿಯನ್ನು ಹೇಳುವ) ಶ್ರುತಿಯಿದೆ.

ಮೂಲದಲ್ಲಿರುವ **ತು**-ಶಬ್ದವು ಪಕ್ಷಾಂತರವನ್ನು ಸೂಚಿಸುತ್ತದೆ. ಛಾಂದೋಗ್ಯದಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಹೇಳದಿದ್ದರೂ ತೈತ್ತಿರೀಯದಲ್ಲಿ (೨ ೧) ಹೇಳಿದೆ : ' ಆ ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು '[1] ಒಂದು ಕಡೆ ತೇಜಸ್ಸೇ ಆದಿಯಾಗಿರುವ ಸೃಷ್ಟಿಯನ್ನು ಹೇಳಿರುವುದರಿಂದಲೂ ಇನ್ನೊಂದು ಕಡೆ ಆಕಾಶವೇ ಆದಿಯಾಗಿರುವ ಸೃಷ್ಟಿಯನ್ನು ಹೇಳಿರುವುದರಿಂದಲೂ ಈ ಶ್ರುತಿಗಳಿಗೆ ಪರಸ್ಪರ ವಿರೋಧವು ಬರುತ್ತದೆ. ಈ ಶ್ರುತಿಗಳೆರಡನ್ನೂ ಸೇರಿಸಿ ಒಂದು ವಾಕ್ಯವನ್ನಾಗಿ ಮಾಡಲು ಸಾಧ್ಯವಿಲ್ಲ ; ಏಕೆಂದರೆ ಒಬ್ಬನೇ ಆದ ಸ್ರಷ್ಟೃವಿಗೆ ಸ್ರಷ್ಟವ್ಯವಾದ ಎರಡು ವಸ್ತುಗಳೊಂದಿಗೆ ಸಂಬಂಧವಾಗುವುದಿಲ್ಲ. ಮತ್ತೆ ಛಾಂದೋಗ್ಯದ ಪ್ರಕಾರ ತೇಜಸ್ಸು ಮೊದಲು ಹುಟ್ಟುತ್ತದೆ, ತೈತ್ತಿರೀಯದ ಪ್ರಕಾರ ಆಕಾಶವು ಮೊದಲು ಹುಟ್ಟುತ್ತದೆ ಆದರೆ ಎರಡೂ ಮೊದಲು ಹುಟ್ಟಿದವೆಂಬುದು ಆಗುವುದಿಲ್ಲ.

**ವಿ.**—ಈ ಸೂತ್ರವು ಹಿಂದಿನ ಸೂತ್ರದಲ್ಲಿ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುತ್ತದೆ : ಆಕಾಶದ ಉತ್ಪತ್ತಿಯನ್ನು ಶ್ರುತಿಯು (ತೈ. ಉ. ೨. ೧) ಹೇಳುತ್ತದೆ. ಬೇರೆ ಪ್ರಮಾಣದಿಂದ ತಿಳಿದುಬರದ ಆಕಾಶದ ಉತ್ಪತ್ತಿಯನ್ನು ಅತೀಂದ್ರಿಯವಸ್ತುವಿಷಯವಾದ ಶ್ರುತಿಯು ಪ್ರತಿಪಾದಿಸಲು ಸಮರ್ಥವಾಗಿದೆ.

**ದ್ವೈ.**—ಆಕಾಶದ ಉತ್ಪತ್ತಿಯನ್ನು ಶ್ರುತಿಯು (ತೈ ಉ ೨. ೧) ತಿಳಿಸುತ್ತದೆ.

## ಗೌಣ್ಯಸಂಭವಾತ್* ॥ ೩ ॥

೩. (ಆ ಉತ್ಪತ್ತಿಶ್ರುತಿಯು) ಗೌಣವು ; ಏಕೆಂದರೆ (ಆಕಾಶದ ಉತ್ಪತ್ತಿಯು) ಸಂಭವಿಸುವುದಿಲ್ಲ.

ಹೀಗೆ ಶ್ರುತಿಗಳಲ್ಲಿ ವಿರೋಧವುಂಟಾಗಲು ಏಕದೇಶಿಸಿದ್ಧಾಂತಿಯು ಹೇಳುತ್ತಾನೆ. ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವಾಗಿರಬೇಕು; ಏಕೆಂದರೆ ಆಕಾಶಕ್ಕೆ ಉತ್ಪತ್ತಿಯಿದೆ ಎಂಬುದು ವೈಶೇಷಿಕರ ಮತಕ್ಕೆ ವಿರುದ್ಧವಾಗಿದೆ. ಅವರ ಮತದ ಪ್ರಕಾರ ಆಕಾಶೋತ್ಪತ್ತಿಗೆ ಬೇಕಾದ ಕಾರಣಸಾಮಗ್ರಿಯೇ ಇಲ್ಲ. ಉತ್ಪನ್ನವಾಗುವ

---

[1] ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಎರಡೂ ಒಟ್ಟುಗೂಡಿ ಒಂದೇ ಸೂತ್ರವಾಗಿದೆ.

ಯಾವ ವಸ್ತುವೇ ಆಗಲಿ ಸಮವಾಯಿ ಅಸಮವಾಯಿ ನಿಮಿತ್ತ ಎಂಬ ಕಾರಣಗಳಿಂದ ಉತ್ಪನ್ನವಾಗುತ್ತದೆ—ಎಂದು ಅವರು ಹೇಳುತ್ತಾರೆ ಆಕಾಶಕ್ಕೆ ಈ ಮೂರರಲ್ಲಿ ಯಾವುದೊಂದು ಕಾರಣವೂ ಇಲ್ಲ. ಉತ್ಪತ್ತಿಯುಳ್ಳ ತೇಜಸ್ಸೇ ಮೊದಲಾದ ಭೂತಗಳಿಗೆ ಪೂರ್ವೋತ್ತರಕಾಲಗಳಲ್ಲಿ ಬೇರೆ ಬೇರೆ ಅವಸ್ಥೆಗಳಿರುವುದು ಕಂಡುಬರುತ್ತದೆ. ಆದರೆ ಆಕಾಶಕ್ಕೆ ಅಂಥ ಅವಸ್ಥೆಗಳು ಇರುವುದಿಲ್ಲ. ಮತ್ತೆ ಪೃಥಿವ್ಯಾದಿಗಳಿಗಿಂತ ವಿಲಕ್ಷಣವಾದ ವೈಧರ್ಮ್ಯವಿರುವುದರಿಂದಲೂ ಆಕಾಶವು ಅಜವೆಂಬುದು ಸಿದ್ಧವಾಗುತ್ತದೆ. ಆದುದರಿಂದ ಆಕಾಶದ ಉತ್ಪತ್ತಿಯನ್ನು ಗೌಣವೆಂದು ಅರಿಯಬೇಕು.

ವಿ.—ಗೌಣ್ಯಸಂಭವಾಚ್ಛಬ್ದಾಚ್ಚ ॥ ೨. ೩. ೩ ॥

೩ ಅದು ಗೌಣವು, ಏಕೆಂದರೆ ಅದು ಅಸಂಭವವಾಗಿದೆ ಮತ್ತು ಶ್ರುತಿಯಿದೆ

ಇದು ಪೂರ್ವಪಕ್ಷದ ಸೂತ್ರ: **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ** ಎಂಬಲ್ಲಿ ಆಕಾಶದ ಉತ್ಪತ್ತಿಯನ್ನು ಹೇಳಿರುವುದು ಗೌಣವೆಂದೇ ಅರಿತುಕೊಳ್ಳಬೇಕು; ಏಕೆಂದರೆ 'ವಾಯು ಮತ್ತು ಅಂತರಿಕ್ಷ, ಇವು ಅಮೃತ'[1] (ಬೃ. ಉ ೨ ೩ ೩) ಎಂಬ ಶ್ರುತಿಯ ಪ್ರಕಾರ ಅಂತರಿಕ್ಷಶಬ್ದದಿಂದ ಹೇಳಲ್ಪಟ್ಟ ಆಕಾಶವು ನಿತ್ಯವಾಗಿದೆ

ದ್ವೈತ—'ಈ ಆಕಾಶವು ಅನಾದಿ ಸೂಕ್ಷ್ಮ ಮತ್ತು ಅತೀಂದ್ರಿಯ' ಇವೇ ಮೊದಲಾದ ಶ್ರುತಿಗಳನ್ನು ಗೌಣವಾಗಿ ತೆಗೆದುಕೊಳ್ಳಬೇಕು;[2] ಹಾಗೆ ತೆಗೆದುಕೊಳ್ಳದಿದ್ದರೆ ಬಾಹುಲ್ಯವು ಕೂಡುವುದಿಲ್ಲ

ಶಬ್ದಾಚ್ಚ ॥ ೪ ॥

೪. ಶ್ರುತಿಯಿಂದಲೂ (ಆಕಾಶವು ಜನ್ಮರಹಿತವಾಗಿರುವುದು).

ಶ್ರುತಿಯೂ ಕೂಡ ಆಕಾಶವು ಜನ್ಮರಹಿತವೆಂದೇ ಹೇಳುತ್ತದೆ (ಬೃ.ಉ.೨.೩.೩). ಅಮೃತವಾದುದಕ್ಕೆ ಉತ್ಪತ್ತಿಯು ಹೊಂದಲಾರದು. 'ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುತ್ತಾನೆ'[3] ಎಂಬಲ್ಲಿ ಬ್ರಹ್ಮದ ಸರ್ವಗತತ್ವನಿತ್ಯತ್ವಗಳಿಗೆ ಆಕಾಶದ ಸಾದೃಶ್ಯವನ್ನು ಕೊಟ್ಟಿರುವುದರಿಂದ ಆಕಾಶಕ್ಕೂ ಆ ಧರ್ಮಗಳಿವೆ ಎಂದು ಶ್ರುತಿಯು ಸೂಚಿಸಿರುತ್ತದೆ. ಅಂಥ ಆಕಾಶಕ್ಕೆ ಉತ್ಪತ್ತಿಯು ಇರಲಾರದು. 'ಈ ಆಕಾಶವು ಹೇಗೆ ಅನಂತವೊ

---

1 ವಾಯುಶ್ಚಾಂತರಿಕ್ಷಂ ಚ, ಏತದಮೃತಮ್ ।

2 ಅನಾದಿರ್ವಾ ಅಯಮಾಕಾಶಃ ಸೂಕ್ಷ್ಮೋಽಲೌಕಿಕ ಇತ್ಯಾದಿಶ್ರುತಿರ್ಗೌಣೀ (ಮ. ಭಾ.).

3 ಆಕಾಶವತ್ ಸರ್ವಗತಶ್ಚ ನಿತ್ಯಃ ।

ಹಾಗೆಯೇ ಆತ್ಮನೂ ಅನಂತನು ಎಂದು ತಿಳಿಯಬೇಕು',[1] 'ಬ್ರಹ್ಮವು ಆಕಾಶಶರೀರವುಳ್ಳದ್ದು'[2] (ತೈ. ಉ. ೧. ೬), 'ಆಕಾಶವು ಆತ್ಮನು'[3] (ತೈ. ಉ. ೧. ೭) ಎಂಬ ಉದಾಹರಣೆಗಳು ಇವೆ. ಆಕಾಶಕ್ಕೆ ಉತ್ಪತ್ತಿಯಿದ್ದರೆ ಇವು ಹೊಂದಲಾರವು.

**ದ್ವೈ.**—ಉತ್ಪತ್ತಿಶ್ರುತಿಯನ್ನು ಒಪ್ಪಿಕೊಳ್ಳಬೇಕು ; 'ಪುರುಷ ಪ್ರಕೃತಿ ಆತ್ಮ ಕಾಲ—ಇವುಗಳು ನಿತ್ಯ' ಎಂಬ ಭಾಲ್ಲವೇಯಶ್ರುತಿಯ ಪ್ರಕಾರ ಅನಾದಿತ್ವಶ್ರುತಿಯು ಗೌಣವೆಂದು ತಿಳಿಯಬೇಕು.

**ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ॥ ೫ ॥**

೫. ಬ್ರಹ್ಮಶಬ್ದದಂತೆ ಒಂದೇ ಶಬ್ದಕ್ಕೆ (ಎರಡು ವಿಧವಾದ ಪ್ರಯೋಗವಿರಬಹುದು).

ಈ ಸೂತ್ರವು (ವೇದಾಂತಿಯು ಎತ್ತಿದ) ಒಂದು ಸಂದೇಹಕ್ಕೆ ಉತ್ತರವನ್ನು ಕೊಡುತ್ತದೆ.[4] ಸಂದೇಹವು ಹೀಗಿದೆ: **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ** ಎಂಬ ಪ್ರಕರಣದಲ್ಲಿ ಒಂದೇ ಸಂಭೂತ-ಶಬ್ದಕ್ಕೆ ತೇಜಸ್ಸೇ ಮೊದಲಾದುವುಗಳ ವಿಷಯದಲ್ಲಿ ಮುಖ್ಯವಾದ ಅರ್ಥವೂ ಆಕಾಶದ ವಿಷಯದಲ್ಲಿ ಗೌಣವಾದ ಅರ್ಥವೂ ಹೇಗೆ ಸಂಭವಿಸುತ್ತದೆ ? ಇದಕ್ಕೆ ಉತ್ತರವು ಹೀಗಿದೆ. ಬ್ರಹ್ಮಶಬ್ದದಂತೆ ಒಂದೇ ಸಂಭೂತ-ಶಬ್ದಕ್ಕೂ ಆಯಾ ವಿಷಯವಿಶೇಷದ ವಶದಿಂದ ಗೌಣಪ್ರಯೋಗವೂ ಮುಖ್ಯಪ್ರಯೋಗವೂ ಆಗಬಹುದು.[5] 'ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೊ ; ತಪಸ್ಸೇ ಬ್ರಹ್ಮ'[6] (ತೈ. ಉ ೩. ೨). ಎಂಬ ಪ್ರಕರಣದಲ್ಲಿ ಒಂದೇ ಬ್ರಹ್ಮಶಬ್ದಕ್ಕೆ ಅನ್ನಾದಿಗಳಲ್ಲಿ ಗೌಣ-ಪ್ರಯೋಗವೂ[7] ಆನಂದದಲ್ಲಿ ಮುಖ್ಯಪ್ರಯೋಗವೂ[8] ಆಗಿರುತ್ತದೆ. ಮತ್ತು ಬ್ರಹ್ಮಜ್ಞಾನ-ಸಾಧನವಾದ ತಪಸ್ಸಿನಲ್ಲಿ ಹೇಗೆ ಬ್ರಹ್ಮಶಬ್ದವು ಗೌಣವಾಗಿಯೂ ವಿಜ್ಞೇಯವಾದ ಬ್ರಹ್ಮದಲ್ಲಿ ಮುಖ್ಯವಾಗಿಯೂ ಪ್ರಯುಕ್ತವಾಗಿದೆಯೊ ಹಾಗೆಯೇ ಇಲ್ಲಿಯೂ ಆಗಬಹುದು 'ಬ್ರಹ್ಮವು ಏಕವು, ಅದ್ವಿತೀಯವು'[9] (ಛಾಂ ಉ. ೬ ೧. ೧) ಎಂಬಲ್ಲಿ ಕಾರ್ಯಾಪೇಕ್ಷೆಯಿಂದ[10] **ಏಕಮೇವ** ಎಂಬುದು ಉಪಪನ್ನವಾಗುತ್ತದೆ ಜಗತ್ಪ್ರಕೃತಿಯಾದ

---

[1] ಸ ಯಥಾsನಂತೋsಯಮಾಕಾಶ ಏವಮನಂತ ಆತ್ಮಾ ವೇದಿತವ್ಯಃ ।

[2] ಆಕಾಶಃ ಶರೀರಂ ಬ್ರಹ್ಮ ।

[3] ಆಕಾಶ ಆತ್ಮಾ ।

[4] ಇದಂ ಪದೋತ್ತರಂ ಸೂತ್ರಮ್ (ಸೂ. ಭಾ.).

[5] ಸ್ಯಾಚ್ಚೈಕಸ್ಯಾಪಿ ಸಂಭೂತಶಬ್ದಸ್ಯ ವಿಷಯವಿಶೇಷವಶಾದ್ ಗೌಣೋ ಮುಖ್ಯಶ್ಚ ಪ್ರಯೋಗೋ ಬ್ರಹ್ಮಶಬ್ದವತ್ (ಸೂ. ಭಾ.)

[6] ತಪಸಾ ಬ್ರಹ್ಮ ವಿಜಿಜ್ಞಾಸಸ್ವ, ತಪೋ ಬ್ರಹ್ಮ ।

[7] ಅನ್ನಂ ಬ್ರಹ್ಮೇತಿ ವ್ಯಜಾನಾತ್ (ತೈ. ಉ. ೩ ೨).

[8] ಆನಂದಂ ಬ್ರಹ್ಮೇತಿ ವ್ಯಜಾನಾತ್ (ತೈ. ಉ. ೩. ೬).

[9] ಏಕಮೇವಾದ್ವಿತೀಯಮ್ ।

[10] ಪ್ರಲಯದಲ್ಲಿ ಕಾರ್ಯಜಗತ್ತೆಲ್ಲ ಲಯವಾಗುವುದರಿಂದ ಬ್ರಹ್ಮವು ಒಂದೇ ಎಂದರ್ಥ.

ಬ್ರಹ್ಮಕ್ಕೆ ಬೇರೊಂದು ಅಧಿಷ್ಠಾತೃವಿಲ್ಲ ಎಂಬುದನ್ನು ಅದ್ವಿತೀಯ-ಶಬ್ದವು ಸೂಚಿಸುತ್ತದೆ[1] ಹಾಲನ್ನು ಸ್ವೀಕರಿಸಿದಾಗ ಅದರಲ್ಲಿ ಸೇರಿರುವ ನೀರನ್ನೂ ಸ್ವೀಕರಿಸಿದಂತೆ ಬ್ರಹ್ಮಗ್ರಹಣ ದಿಂದ ಆಕಾಶವನ್ನೂ ಗ್ರಹಿಸಿದಂತೆಯೇ ಆಗುತ್ತದೆ. ಆದುದರಿಂದ ಬ್ರಹ್ಮಜ್ಞಾನದಿಂದಲೇ ಎಲ್ಲವನ್ನೂ ಅರಿತಂತಾಗುವುದು ಎಂಬ ಪ್ರತಿಜ್ಞೆಯು ಹೊಂದುತ್ತದೆ. ಆಕಾಶದ ಉತ್ಪತ್ತಿಯು ಗೌಣವೇ

ವಿ.—ಇಲ್ಲಿ ಪೂರ್ವಪಕ್ಷಿಯು ತನ್ನ ಅಭಿಪ್ರಾಯವನ್ನು ಸಮರ್ಥಿಸುತ್ತಾನೆ: 'ಅವ ನಿಂದ ಬ್ರಹ್ಮವೂ ನಾಮವೂ ರೂಪವೂ ಉಂಟಾಗುತ್ತವೆ'[2] (ಮುಂ. ಉ. ೧. ೧ ೯) ಎಂಬಲ್ಲಿ ಪ್ರಧಾನವನ್ನು ಸೂಚಿಸುವ ಬ್ರಹ್ಮಶಬ್ದವನ್ನೇ ಗೌಣಾರ್ಥದಲ್ಲಿ ಪ್ರಯೋಗಿಸಿದೆ; 'ಬ್ರಹ್ಮವು ತಪಸ್ಸಿನಿಂದ ದೊಡ್ಡದಾಗುತ್ತದೆ'[3] (ಮುಂ. ಉ. ೧. ೧ ೮) ಎಂಬಲ್ಲಿ ಅದೇ ಪದವು ಮುಖ್ಯಾರ್ಥದಲ್ಲಿ ಬ್ರಹ್ಮವನ್ನೇ ಸೂಚಿಸುತ್ತದೆ. ಹೀಗೆಯೇ ಸಂಭೂತಶಬ್ದಕ್ಕೆ **ಆಕಾಶಃ ಸಂಭೂತಃ** ಎಂಬಲ್ಲಿ ಗೌಣಾರ್ಥವೂ **ಆಕಾಶಾದ್ವಾಯುಃ, ವಾಯೋ-ರಗ್ನಿಃ** ಎಂಬಲ್ಲಿ ಮುಖ್ಯಾರ್ಥವೂ ಆಗಬಹುದು.

**ದ್ವೈ.**—'ಬ್ರಹ್ಮಶಬ್ದದಂತೆ ಉತ್ಪತ್ತಿ-ಅನುತ್ಪತ್ತಿಗಳನ್ನು ಒಂದೇ ವಸ್ತುವಿಗೆ ಗೌಣ-ಮುಖ್ಯಾರ್ಥಗಳಲ್ಲಿ ಅನ್ವಯಿಸಬಹುದು'[4] ಎಂಬುದು ಸೂತ್ರಾರ್ಥ.

ಬ್ರಹ್ಮಶಬ್ದವು ಮುಖ್ಯಾರ್ಥದಲ್ಲಿ ಪರಬ್ರಹ್ಮನನ್ನು ಸೂಚಿಸಿದರೂ ಗೌಣಾರ್ಥದಲ್ಲಿ ವಿರಿಂಚಾದಿಗಳನ್ನು ಸೂಚಿಸುತ್ತದೆ. ಇದೇ ರೀತಿ ಆಕಾಶದ ವಿಷಯದಲ್ಲಿಯೂ ಅನುತ್ಪತ್ತಿ-ಶಬ್ದವನ್ನು ಪ್ರಯೋಗಿಸಿದೆ.

### ಪ್ರತಿಜ್ಞಾಽಹಾನಿರವ್ಯತಿರೇಕಾಚ್ಛಬ್ದೇಭ್ಯಃ* ॥ ೬ ॥

೬. (ವಸ್ತುಸಮೂಹವೆಲ್ಲ ಬ್ರಹ್ಮಕ್ಕಿಂತ) ಅವ್ಯತಿರಿಕ್ತವಾದರೆ ಪ್ರತಿಜ್ಞಾ ಹಾನಿಯಾಗುವುದಿಲ್ಲ; (ಇದು) ಶ್ರುತಿಗಳಿಂದಲೂ (ಸಿದ್ಧವಾಗುತ್ತದೆ).

ಹಿಂದೆ ಬಂದಿರುವ ಪೂರ್ವಪಕ್ಷಗಳಿಗೆ ಸೂತ್ರಕಾರರು ಈಗ ಪರಿಹಾರವನ್ನು ಹೇಳು ತ್ತಾರೆ: 'ಆತ್ಮನನ್ನು ನೋಡಿದರೆ ಕೇಳಿದರೆ ಮನನಮಾಡಿದರೆ ತಿಳಿದುಕೊಂಡರೆ ಇದೆಲ್ಲವೂ ತಿಳಿಯಲ್ಪಡುತ್ತದೆ'[5] (ಬೃ. ಉ. ೪. ೫. ೬)—ಇವೇ ಮೊದಲಾದ[6] ಶ್ರುತಿಗಳಲ್ಲಿ ಹೇಳಿ

---

[1] ಆಕಾಶದ ನಿತ್ಯತ್ವವನ್ನು ನಿರಾಕರಿಸುವುದಿಲ್ಲ ಎಂದರ್ಥ.

[2] ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ।

[3] ತಪಸಾ ಚೀಯತೇ ಬ್ರಹ್ಮ।

[4] ಸ್ಯಾದೇವೈಕಸ್ಯೋತ್ಪತ್ತಿಮತ್ತ್ವಮನುತ್ಪತ್ತಿಮತ್ತ್ವಂ ಚ ಗೌಣಮುಖ್ಯತ್ವಾಪೇಕ್ಷಯಾ (ಮ. ಭಾ.)

* ಇದು ಶ್ರೀಭಾಷ್ಯದಲ್ಲಿ ಎರಡು ಸೂತ್ರಗಳಾಗಿ ವಿಂಗಡಿಸಲ್ಪಟ್ಟಿದೆ.

[5] ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಮ್।

[6] ಛಾಂ. ಉ. ೬. ೧. ೩; ಮುಂ. ಉ. ೧. ೧. ೩.

ರುವ ಪ್ರತಿಜ್ಞೆಗೆ ಹಾನಿಯಾಗುವುದಿಲ್ಲ; ಏಕೆಂದರೆ ವಸ್ತುಸಮೂಹವೆಲ್ಲ ವಿಜ್ಞೇಯವಾದ ಬ್ರಹ್ಮಕ್ಕಿಂತ ಅವ್ಯತಿರಿಕ್ತವಾಗಿರುತ್ತದೆ ಆದುದರಿಂದ ಅಗ್ನಿಯೇ ಮೊದಲಾದುವುಗಳಂತೆ ಆಕಾಶವೂ ಬ್ರಹ್ಮದ ಕಾರ್ಯವಾಗಿದೆ. ತೈತ್ತಿರೀಯಶ್ರುತಿಗೆ ಛಾಂದೋಗ್ಯಶ್ರುತಿಯು ವಿರುದ್ಧವಾಗಿಲ್ಲ. ಛಾಂದೋಗ್ಯದಲ್ಲಿ ಆಕಾಶದ ಉತ್ಪತ್ತಿಯನ್ನು ಹೇಳದಿದ್ದರೂ ತೈತ್ತಿರೀಯಕ್ಕನುಸಾರವಾಗಿ ಅರ್ಥಮಾಡಿಕೊಳ್ಳಬೇಕು; 'ಅದು ಆಕಾಶವನ್ನೂ ವಾಯುವನ್ನೂ ಸೃಷ್ಟಿಸಿ ತೇಜಸ್ಸನ್ನು ಸೃಷ್ಟಿಸಿತು' ಎಂದು ಛಾಂದೋಗ್ಯಶ್ರುತಿಯ ಅರ್ಥವಾಗುತ್ತದೆ. ಒಂದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತಾಗುವುದು ಎಂಬ ಪ್ರತಿಜ್ಞೆಯನ್ನು ಹಾಲು-ನೀರುಗಳ ದೃಷ್ಟಾಂತದಂತೆ ಅರಿಯಕೂಡದು; ಏಕೆಂದರೆ ಮಣ್ಣಿನ ದೃಷ್ಟಾಂತದ ಪ್ರಕಾರ (ಛಾಂ. ಉ. ೬. ೧ ೪) ಉಪಾದಾನಕಾರಣ-ಕಾರ್ಯದಿಂದಲೇ ಸರ್ವವಿಜ್ಞಾನವು ಹೊಂದುತ್ತದೆ

ವಿ.—ಪ್ರತಿಜ್ಞಾಽಹಾನಿರವ್ಯತಿರೇಕಾತ್ ॥ ೨ ೩. ೫ ॥

೫. ಅವ್ಯತಿರೇಕದಿಂದ ಪ್ರತಿಜ್ಞಾಹಾನಿಯು ಆಗುವುದಿಲ್ಲ.

ಆಕಾಶದ ಉತ್ಪತ್ತಿಯನ್ನು ಹೇಳುವ ಇತರ ಶ್ರುತಿಗಳಿಗೆ ಛಾಂದೋಗ್ಯಶ್ರುತಿಯನ್ನು ಅನುಸರಿಸಿ ಗೌಣಾರ್ಥವನ್ನು ಕಲ್ಪಿಸುವುದು ಯುಕ್ತವಲ್ಲ; ಏಕೆಂದರೆ ಛಾಂದೋಗ್ಯವೇ ಆಕಾಶದ ಉತ್ಪತ್ತಿಯನ್ನು ಅಂಗೀಕರಿಸಿರುತ್ತದೆ: 'ಯಾವುದರಿಂದ ಅಶ್ರುತವು ಶ್ರುತವಾಗುತ್ತದೆಯೊ'[1] (ಛಾಂ. ಉ. ೬. ೧ ೩) ಎಂಬ ವಾಕ್ಯವು ಬ್ರಹ್ಮಜ್ಞಾನದಿಂದ ಎಲ್ಲದರ ಜ್ಞಾನವು ಆಗುತ್ತದೆಯೆಂದು ತಿಳಿಸುತ್ತದೆ. ಆಕಾಶವು ಬ್ರಹ್ಮಕಾರ್ಯವಾಗಿದ್ದು ಅದಕ್ಕಿಂತ ಬೇರೆಯಾಗಿದ್ದರೆ ಪ್ರತಿಜ್ಞಾಹಾನಿಯಾಗುವುದಿಲ್ಲ [2]

ಶಬ್ದೇಭ್ಯಃ ॥ ೨. ೩ ೬ ॥

೬. ಇತರ ಶ್ರುತಿಗಳಿಂದಲೂ (ಆಕಾಶದ ಉತ್ಪತ್ತಿಯು ತಿಳಿದುಬರುತ್ತದೆ).

'ಸೃಷ್ಟಿಗೆ ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್ಸ್ವರೂಪವೇ ಆಗಿತ್ತು' (ಛಾಂ. ಉ. ೬. ೨. ೧) ಎಂಬ ಶ್ರುತಿಯು ಸೃಷ್ಟಿಗೆ ಮೊದಲು ಎಲ್ಲವೂ ಒಂದೇ ಆಗಿತ್ತು ಎಂಬುದನ್ನು ತಿಳಿಸುತ್ತದೆ. 'ಇದೆಲ್ಲವೂ ಅದನ್ನೇ ಆತ್ಮವಾಗಿ ಹೊಂದಿದೆ'[3] (ಛಾಂ. ಉ. ೬. ೮. ೭) ಎಂಬುದು ಎಲ್ಲವೂ ಬ್ರಹ್ಮಕಾರ್ಯವೆಂದೂ ಅದಕ್ಕಿಂತ ಅಭಿನ್ನವೆಂದೂ ತಿಳಿಸುತ್ತದೆ. 'ಅದು ತೇಜಸ್ಸನ್ನು ಸೃಷ್ಟಿಸಿತು'[4] (ಛಾ. ಉ. ೭ ೨. ೩)

---

1 ಯೇನಾಶ್ರುತಂ ಶ್ರುತಮ್ ।

2 ತಸ್ಯಾ ಹಿ ಪ್ರತಿಜ್ಞಾಯಾಃ ಅಹಾನಿರಾಕಾಶಸ್ಯಾಪಿ ಬ್ರಹ್ಮಕಾರ್ಯತ್ವೇನ ತದವ್ಯತಿರೇಕಾದೇವ ಭವತಿ (ಶ್ರೀಭಾಷ್ಯ).

3 ಐತದಾತ್ಮ್ಯಮಿದಂ ಸರ್ವಮ್ ।

4 ತತ್ತೇಜೋಽಸೃಜತ ।

ಎಂಬುದು ಆಕಾಶದ ಉತ್ಪತ್ತಿಯನ್ನು ನಿರಾಕರಿಸುವುದಿಲ್ಲ ; ಏಕೆಂದರೆ ಆಕಾಶದ ಉತ್ಪತ್ತಿಯನ್ನು ಹೇಳದಿರುವುದರಿಂದ ತೇಜಸ್ಸಿಗೆ ಪ್ರಥಮ ಸ್ಥಾನವನ್ನು ಕೊಟ್ಟಿದೆ : ಆದರೆ ಇದು ಬೇರೆ ಶ್ರುತಿಯಲ್ಲಿ ಹೇಳಿರುವ ಆಕಾಶದ ಉತ್ಪತ್ತಿಯನ್ನು ನಿರಾಕರಿಸಲಾರದು.[1]

ದ್ವೈ.—ಪರಬ್ರಹ್ಮನಿಗಿಂತ ಬೇರೆಯಾಗಿರುವುದು ನಿತ್ಯವೆಂದು ಅಂಗೀಕರಿಸಿದರೆ 'ಇದೆಲ್ಲವನ್ನೂ ಅವನು ಸೃಷ್ಟಿಸಿದನು' (ತೈ. ಉ ೨. ೬)–ಇವೇ ಮೊದಲಾದ ವಾಕ್ಯಗಳಲ್ಲಿರುವ ಪ್ರತಿಜ್ಞೆಗೆ ಹಾನಿಯಾಗುವುದು. ಆಕಾಶವು ಕೂಡ 'ಎಲ್ಲ' ಎಂಬುದಕ್ಕಿಂತ ಬೇರೆಯಾಗಿಲ್ಲ.[2]

**ಯಾವದ್ವಿಕಾರಂ ತು ವಿಭಾಗೋ ಲೋಕವತ್ ॥ ೭ ॥**

೭. ಆದರೆ ಲೋಕದಲ್ಲಿರುವಂತೆ ವಿಕಾರವಿರುವವರೆಗೂ ವಿಭಾಗವಿರುತ್ತದೆ.

ಆಕಾಶದ ಉತ್ಪತ್ತಿಯು ಗೌಣವೆಂಬ ಪಕ್ಷವನ್ನು ಈ ಸೂತ್ರವು ನಿರಾಕರಿಸುತ್ತದೆ. ಆಕಾಶದ ಉತ್ಪತ್ತಿಯ ವಿಷಯದಲ್ಲಿ ಅಸಂಭವವೇ ಇಲ್ಲ ; ಗಡಿಗೆ ಮೊದಲಾದ ಕಾರ್ಯ-ವಸ್ತುಗಳೆಲ್ಲ ವಿಭಾಗವಾಗಿಯೇ ಕಂಡುಬರುತ್ತವೆ. ವಿಕಾರವಾಗದ ಯಾವ ವಸ್ತುವೂ ವಿಭಾಗವಾಗಿ ಕಂಡುಬರುವುದಿಲ್ಲ.[3] ಆದರೆ ಆಕಾಶವು ಪೃಥಿವ್ಯಾದಿಗಳಿಗಿಂತ ವಿಭಿನ್ನವಾಗಿ ಕಂಡುಬರುತ್ತದೆ. ಆದುದರಿಂದ ಆಕಾಶವು ವಿಕಾರವಾಗಿರಬೇಕು. ಇದರಿಂದ ದಿಕ್ಕು ಕಾಲ ಮನಸ್ಸು ಪರಮಾಣು ಮೊದಲಾದುವುಗಳೆಲ್ಲ ಕಾರ್ಯವೆಂದು ತಿಳಿಸಿದಂತೆಯೇ ಆಯಿತು

ಆತ್ಮನೂ ಆಕಾಶಾದಿಗಳಿಗಿಂತ ಭಿನ್ನನಾಗಿರುವುದರಿಂದ ಅವನೂ ಘಟಾದಿಗಳಂತೆ ಕಾರ್ಯನು ಎಂದು ಹೇಳಲಾಗುವುದಿಲ್ಲ ; ಏಕೆಂದರೆ ಆತ್ಮನು ಆಗಂತುಕನಲ್ಲ, ಸ್ವಯಂ ಸಿದ್ಧನಾಗಿರುತ್ತಾನೆ.[4] ಅವನು ತನ್ನ ವಿಷಯದಲ್ಲಿ ಪ್ರಮಾಣವನ್ನು ಅಪೇಕ್ಷಿಸಿ ಸಿದ್ಧನಾಗುವುದಿಲ್ಲ ; ಏಕೆಂದರೆ ಸಿದ್ಧವಾಗದ ಪ್ರಮೇಯದ ಸಿದ್ಧಿಗಾಗಿ ಆತ್ಮನೇ ಪ್ರತ್ಯಕ್ಷಾದಿಪ್ರಮಾಣಗಳನ್ನು ಅಂಗೀಕರಿಸಬೇಕಾಗಿರುತ್ತದೆ. ಆದರೆ ಆಕಾಶಾದಿವಸ್ತುಗಳು ಪ್ರಮಾಣದ ಅಪೇಕ್ಷೆಯಿಲ್ಲದೆ ಸಿದ್ಧವಾಗುವುದಿಲ್ಲ. ಆತ್ಮನು ಪ್ರಮಾಣಾದಿ-ವ್ಯವಹಾರಕ್ಕೆ ಆಶ್ರಯನಾಗಿರುವುದರಿಂದ ಪ್ರಮಾಣಾದಿವ್ಯವಹಾರಕ್ಕೆ ಮೊದಲೇ ಸಿದ್ಧನಾಗಿರುತ್ತಾನೆ.[5] ಇಂಥವನನ್ನು ನಿರಾಕರಿಸಲು ಸಾಧ್ಯವಿಲ್ಲ.

---

1 ವಿಯದುತ್ಪತ್ತ್ಯವಚನಮಾತ್ರೇಣ ತೇಜಸಃ ಪ್ರತೀಯಮಾನಂ ಪ್ರಾಥಮ್ಯಂ ಶ್ರುತ್ಯಂತರ-ಪ್ರತಿಪನ್ನಾಂ ವಿಯದುತ್ಪತ್ತಿಂ ನ ನಿವಾರಯಿತುಮಲಮ್ (ಶ್ರೀಭಾಷ್ಯ)

2 ಬ್ರಹ್ಮಣೋಽನ್ಯಸ್ಯ ವ್ಯಕ್ತಿತ್ವೇ ಇದಂ ಸರ್ವಮಸೃಜತೇತ್ಯಾದಿಪ್ರತಿಜ್ಞಾಹಾನಿಃ । ಆಕಾಶಸ್ಯಾಪಿ ಸರ್ವಸ್ಮಾದವ್ಯತಿರೇಕಾತ್ (ಮ. ಭಾ.).

3 ನ ತ್ವವಿಕೃತಂ ಕಿಂಚಿತ್ ಕುತಶ್ಚಿದ್ವಿಭಕ್ತಮುಪಲಭ್ಯತೇ (ಸೂ. ಭಾ.).

4 ನ ಹ್ಯಾತ್ಮಾಽಽಗಂತುಕಃ ಕಸ್ಯಚಿತ್, ಸ್ವಯಂಸಿದ್ಧತ್ವಾತ್ (ಸೂ. ಭಾ ).

5 ಆತ್ಮಾ ತು ಪ್ರಮಾಣಾದಿವ್ಯವಹಾರಾಶ್ರಯತ್ವಾತ್ ಪ್ರಾಗೇವ ಪ್ರಮಾಣಾದಿವ್ಯವ-ಹಾರಾತ್ ಸಿದ್ಧ್ಯತಿ (ಸೂ. ಭಾ.).

ವಿ.—ಛಾಂದೋಗ್ಯದಲ್ಲಿ ಆಕಾಶದ ಉತ್ಪತ್ತಿಯನ್ನು ಹೇಳದಿದ್ದರೂ 'ಇದೆಲ್ಲವೂ ಅದನ್ನೇ ಆತ್ಮವಾಗಿ ಹೊಂದಿದೆ' (ಛಾಂ ಉ. ೬ ಅ. ೭)—ಇವೇ ಮೊದಲಾದ ವಾಕ್ಯಗಳು ಪರಬ್ರಹ್ಮನಿಂದ ಆಕಾಶದ ಉತ್ಪತ್ತಿಯನ್ನು ತಿಳಿಸುತ್ತವೆ. ಸರ್ವವಸ್ತುವೂ ಬ್ರಹ್ಮನ ವಿಕಾರವಾಗಿರುವುದರಿಂದ ವಿಕಾರವುಳ್ಳದ್ದೆಲ್ಲ ವಿಭಾಗ ಎಂದರೆ ಉತ್ಪತ್ತಿ ಉಳ್ಳದ್ದಾಗಿರುತ್ತವೆ. ಲೋಕದಲ್ಲಿ 'ಇವರೆಲ್ಲ ದೇವದತ್ತನ ಮಕ್ಕಳು' ಎಂದು ಯಾವನೋ ಒಬ್ಬನು ಹೇಳಿ ಅವನೇ ಅನಂತರ ಒಬ್ಬನ ಅಥವಾ ಇಬ್ಬರು ಮಕ್ಕಳ ಉತ್ಪತ್ತಿಯನ್ನು ಹೇಳಿದಾಗ ಅದು ಎಲ್ಲರಿಗೂ ಅನ್ವಯಿಸುವಂತೆ ಆಕಾಶವನ್ನು ಅಮೃತವೆಂದು ಕರೆದಿರುವುದು ಅದು ಚಿರಸ್ಥಾಯಿ ಎಂಬುದನ್ನು ಮಾತ್ರ ತಿಳಿಸುತ್ತದೆ.

ದ್ವೈ.—ವಿಭಾಗವುಳ್ಳದ್ದೆಲ್ಲ ಉತ್ಪತ್ತಿಯುಳ್ಳದ್ದು ಎಂಬುದು ಯುಕ್ತವಾಗಿದೆ; ಏಕೆಂದರೆ ಉತ್ಪನ್ನವಾದ ವಸ್ತುಗಳೆಲ್ಲ ವಿಭಾಗವುಳ್ಳದ್ದಾಗಿ ಕಂಡುಬರುತ್ತವೆ.[1]

[1] ವಿಭಕ್ತತ್ವಾಚ್ಚ ವಿಕಾರಿತ್ವಂ ಯುಕ್ತಮ್ । ವಿಕಾರಿಣ ಏವ ಹಿ ವಿಭಕ್ತಾ ಲೋಕೇ ದೃಶ್ಯಂತೇ (ಮ. ಭಾ.).

## ೨. ಮಾತರಿಶ್ವಾಧಿಕರಣ*

### ಏತೇನ ಮಾತರಿಶ್ವಾ ವ್ಯಾಖ್ಯಾತಃ ॥ ೮ ॥

೮. ಇದರಿಂದ ವಾಯುವನ್ನೂ ವಿವರಿಸಿದ್ದಾಯಿತು.

ವಾಯು ಹುಟ್ಟುವುದಿಲ್ಲ ; ಏಕೆಂದರೆ ಛಾಂದೋಗ್ಯಶ್ರುತಿಯ ಉತ್ಪತ್ತಿಯ ಪ್ರಕರಣದಲ್ಲಿ ಅದರ ಉತ್ಪತ್ತಿಯನ್ನು ಹೇಳಿಲ್ಲ—ಎಂಬುದು ಒಂದು ಪಕ್ಷ ತೈತ್ತಿರೀಯಶ್ರುತಿಯು[1] (೨. ೧) ಉತ್ಪತ್ತಿಪ್ರಕರಣದಲ್ಲಿ ಅದನ್ನು ಹೇಳಿದೆ—ಎಂಬುದು ಮತ್ತೊಂದು ಪಕ್ಷ. ಹೀಗೆ ಶ್ರುತಿಗಳಿಗೆ ವಿರೋಧವಾಗಲು ವಾಯುವಿನ ಉತ್ಪತ್ತಿಯನ್ನು ಹೇಳುವ ಶ್ರುತಿಯು ಗೌಣವು, ಏಕೆಂದರೆ ಅದಕ್ಕೆ ಉತ್ಪತ್ತಿಯು ಸಂಭವಿಸುವುದಿಲ್ಲ—ಎಂಬುದು ಇನ್ನೊಂದು ಅಭಿಪ್ರಾಯ; ಹೇಗೆಂದರೆ 'ವಾಯುವು ಅಸ್ತಮಿಸುವುದಿಲ್ಲ, ವಾಯುವು ಅಸ್ತಮಿಸದ ದೇವತೆ'[2] (ಬೃ.ಉ ೧. ೫. ೨೨) ಎಂಬಲ್ಲಿ ಅದಕ್ಕೆ ಅಸ್ತಮಯವನ್ನು ನಿರಾಕರಿಸಿದೆ. ಮತ್ತು ಅಮೃತತ್ವಾದಿಗಳನ್ನು ಹೇಳಿದೆ. ವಿಕಾರವಿರುವವರೆಗೂ ವಿಭಾಗವಿರುತ್ತದೆ ಎಂದು ಹಿಂದೆ ಹೇಳಿದ ನ್ಯಾಯದ ಪ್ರಕಾರ ವಾಯುವಿಗೂ ಉತ್ಪತ್ತಿಯಿದೆ ಎಂಬುದು ಸಿದ್ಧಾಂತ. ಅದಕ್ಕೆ ಅಸ್ತಮಯವಿಲ್ಲವೆಂದು ಹೇಳಿರುವುದು ಅಪರವಿದ್ಯಾದೃಷ್ಟಿಯಿಂದ ಮತ್ತು ಆಪೇಕ್ಷಿಕವಾಗಿ. ಅಮೃತತ್ವವೂ ಆಪೇಕ್ಷಿಕವೇ.

ವಿ.—ಹಿಂದಿನ ಸೂತ್ರದಲ್ಲಿ ಹೇಳಿದ ಹೇತುವೇ ಇಲ್ಲಿಯೂ ಕೂಡ ವಾಯುವಿನ ಉತ್ಪತ್ತಿಯನ್ನು ತಿಳಿಸುತ್ತದೆ. ಮುಂದೆ ತೇಜೋಽಧಿಕರಣದಲ್ಲಿ 'ವಾಯುವಿನಿಂದ ತೇಜಸ್ಸಿನ ಉತ್ಪತ್ತಿಯನ್ನು ಹೇಳಬೇಕಾಗಿರುವುದರಿಂದ ಹಿಂದಿನ ಸೂತ್ರದಲ್ಲಿ ಆಕಾಶದೊಂದಿಗೆ ವಾಯುವನ್ನು ಸೇರಿಸಲಿಲ್ಲ

ದ್ವೈ.—ಹಿಂದೆ ಹೇಳಿದ ಯುಕ್ತಿಸಮುದಾಯದಿಂದ ಮುಖ್ಯವಾಯುವೂ ಕೂಡ ಗೌಣದೃಷ್ಟಿಯಿಂದ ಅನುತ್ಪತ್ತಿಯುಳ್ಳವನು ; ಎಂದರೆ ಉತ್ಪತ್ತಿಯುಳ್ಳವನು.

---

* ಶ್ರೀಭಾಷ್ಯದಲ್ಲಿ ಈ ಅಧಿಕರಣ ಮತ್ತು ಮುಂದಿನ ಅಸಂಭವಾಧಿಕರಣ ಹಿಂದಿನ ವಿಯದಧಿಕರಣಕ್ಕೇ ಸೇರಿವೆ.

1 ಆಕಾಶಾದ್ವಾಯುಃ ।

2 ನ ವಾಯುಃ ; ಸೈಷಾನಸ್ತಮಿತಾ ದೇವತಾ ಯದ್ವಾಯುಃ ।

## ೩. ಅಸಂಭವಾಧಿಕರಣ

### ಅಸಂಭವಸ್ತು ಸತೋಽನುಪಪತ್ತೇಃ ॥ ೯ ॥

೯. ಸದ್ವಸ್ತುವಿಗೆ (ಉತ್ಪತ್ತಿಯು) ಸಂಭವವಿಲ್ಲ ; ಏಕೆಂದರೆ ಅದು ಹೊಂದುವುದಿಲ್ಲ.

ಕಾರ್ಯವಾದ ಆಕಾಶಾದಿಗಳಿಂದ ಮುಂದಿನ ಕಾರ್ಯಗಳು ಉತ್ಪನ್ನವಾಗುವುದು ಕಂಡುಬರುವುದರಿಂದ ಆಕಾಶವು ಕೂಡ ಕಾರ್ಯವಾದ ಬ್ರಹ್ಮದಿಂದಲೇ ಹುಟ್ಟಬಹುದು—ಎಂದು ಪೂರ್ವಪಕ್ಷಿಯು ಭಾವಿಸಬಹುದು. ಅಂಥ ಆಶಂಕೆಯನ್ನು ಪರಿಹರಿಸಲು ಈ ಸೂತ್ರವು ಬಂದಿದೆ. ಸದಾತ್ಮಕವಾದ ಬ್ರಹ್ಮಕ್ಕೆ ಯಾವುದರಿಂದಲೂ ಉತ್ಪತ್ತಿಯಾಗುವುದಿಲ್ಲ. ಬ್ರಹ್ಮವು ಸನ್ಮಾತ್ರವೇ, ಅದು ಸನ್ಮಾತ್ರದಿಂದ ಹುಟ್ಟುವುದಿಲ್ಲ.[1] ಕಾರಣದಲ್ಲಿ ಸ್ವಲ್ಪ ಅತಿಶಯವಿಲ್ಲದಿದ್ದರೆ ಕಾರ್ಯ-ಕಾರಣಭಾವವು ಹೊಂದುವುದಿಲ್ಲ ಯಾವ ವಿಶೇಷದಿಂದಲೂ ಬ್ರಹ್ಮವು ಸಂಭವಿಸಲು ಸಾಧ್ಯವಿಲ್ಲ ; ಏಕೆಂದರೆ ಮಣ್ಣೇ ಮೊದಲಾದ ಸಾಮಾನ್ಯದಿಂದ ಗಡಿಗೆ ಮೊದಲಾದ ವಿಶೇಷವು ಹುಟ್ಟುತ್ತದೆಯೇ ಹೊರತು ವಿಶೇಷದಿಂದ ಸಾಮಾನ್ಯವು ಹುಟ್ಟುವುದಿಲ್ಲ. ಬ್ರಹ್ಮವು ಅಸತ್ತಿನಿಂದಲೂ ಹುಟ್ಟಲಾರದು ; ಏಕೆಂದರೆ ಅಸತ್ತಿಗೆ ಸ್ವರೂಪವಿಲ್ಲ 'ಹೇಗೆ ಅಸತ್ತಿನಿಂದ ಸದ್ವಸ್ತುವು ಹುಟ್ಟುವುದು ?'[2] (ಛಾಂ.ಉ.೬.೨.೨) ಎಂದು ಶ್ರುತಿಯು ಹೇಳುತ್ತದೆ. ಬ್ರಹ್ಮವು ಕಾರ್ಯದಿಂದ ಹುಟ್ಟಿದ ಕಾರ್ಯವೂ ಆಗಲಾರದು ; ಏಕೆಂದರೆ ಮೂಲಪ್ರಕೃತಿಯನ್ನು ಅಂಗೀಕರಿಸದಿದ್ದರೆ ಅನವಸ್ಥೆಯು ಬರುತ್ತದೆ. ಈ ಮೂಲಪ್ರಕೃತಿಯೇ ನಮ್ಮ ಪಕ್ಷದಲ್ಲಿ ಬ್ರಹ್ಮವಾಗಿದೆ. ಆದುದರಿಂದ ಯಾವ ವಿರೋಧವೂ ಇಲ್ಲ.[3]

ವಿ —ಆಕಾಶ-ವಾಯುಗಳ ಉತ್ಪತ್ತಿಯನ್ನು ಹೇಳಿರುವುದು ಒಂದು ಸಾಮಾನ್ಯ ತತ್ತ್ವವನ್ನು ಉದಾಹರಿಸುವುದಕ್ಕಾಗಿ. ಪರಮಕಾರಣನಾದ ಪರಬ್ರಹ್ಮನಿಗೆ ಉತ್ಪತ್ತಿಯಿಲ್ಲ. ಪರಬ್ರಹ್ಮನಿಗಿಂತ ವ್ಯತಿರಿಕ್ತವಾದುದಕ್ಕೆಲ್ಲ—ಅವ್ಯಕ್ತದಿಂದ ವಾಯುವಿನವರೆಗೆ—ಅನುತ್ಪತ್ತಿಯನ್ನು ಹೇಳಲು ಸಾಧ್ಯವಿಲ್ಲ, ಏಕೆಂದರೆ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುತ್ತದೆ ಎಂಬ ಶ್ರುತಿಯು ಇವುಗಳ ಕಾರ್ಯಭಾವವನ್ನು ತಿಳಿಸುತ್ತದೆ.

ದ್ವೈ.—ಸಚ್ಛಬ್ದವಾಚ್ಯನಾದ ಬ್ರಹ್ಮನಿಗೆ ಉತ್ಪತ್ತಿಯಿಲ್ಲ, ಅಂಥ ಉತ್ಪತ್ತಿಯು ದೃಷ್ಟವಲ್ಲದುದರಿಂದ ಹೊಂದುವುದಿಲ್ಲ.[4]

---

[1] ಸನ್ಮಾತ್ರಂ ಬ್ರಹ್ಮ । ನ ತಸ್ಯ ಸನ್ಮಾತ್ರಾದೇವೋತ್ಪತ್ತಿಃ ಸಂಭವತಿ (ಸೂ ಭಾ).

[2] ಕಥಮಸತಃ ಸಜ್ಜಾಯೇತ ।

[3] ಯಾವ ಮೂಲಪ್ರಕೃತಿರಭ್ಯುಪಗಮ್ಯತೇ ತದೇವ ಚ ನೋ ಬ್ರಹ್ಮೇತ್ಯವಿರೋಧಃ (ಸೂ. ಭಾ).

[4] ನ ಹ್ಯಸತಃ ಸದುತ್ಪದ್ಯತೇ । ಅದೃಷ್ಟತ್ವಾದನುಪಪತ್ತೇಃ (ಮ. ಭಾ.).

## ೪. ತೇಜೋಽಧಿಕರಣ

### ತೇಜೋಽತಸ್ತಥಾಹ್ಯಾಹ ॥ ೧೦ ॥

೧೦ ತೇಜಸ್ಸು ಇದರಿಂದ (ಎಂದರೆ ವಾಯುವಿನಿಂದ ಸಂಭವಿಸುತ್ತದೆ); ಏಕೆಂದರೆ ಹಾಗೆ (ಶ್ರುತಿಯು) ಹೇಳುತ್ತದೆ.

ಛಾಂದೋಗ್ಯದಲ್ಲಿ (೬. ೨. ೩) ತೇಜಸ್ಸು ಸದ್ವಸ್ತುವಿನಿಂದ ಹುಟ್ಟುತ್ತದೆಂದು ಹೇಳಿದೆ ಆದರೆ ತೈತ್ತಿರೀಯದಲ್ಲಿ (೨ ೧) ಅದು ವಾಯುವಿನಿಂದ ಹುಟ್ಟುತ್ತದೆಂದು[1] ಹೇಳಿದೆ. ಹೀಗೆ ತೇಜಸ್ಸಿನ ಕಾರಣದ ವಿಷಯದಲ್ಲಿ ವಿರೋಧವು ಬಂದೊದಗಲಾಗಿ ತೇಜಸ್ಸು ಬ್ರಹ್ಮದಿಂದಲೇ ಹುಟ್ಟುತ್ತದೆ ಎಂದು ಪೂರ್ವಪಕ್ಷಿಯು ಹೇಳುತ್ತಾನೆ, ಏಕೆಂದರೆ 'ಸದ್ವಸ್ತುವೇ ಮೊದಲಿತ್ತು' (ಛಾಂ. ಉ. ೬. ೨. ೧) ಎಂದು ಶ್ರುತಿಯು ಉಪಕ್ರಮಿಸಿ, 'ಅದು ತೇಜಸ್ಸನ್ನು ಸೃಷ್ಟಿಸಿತು' ಎಂದು ಹೇಳುತ್ತದೆ; ಮತ್ತು ಸರ್ವವಿಜ್ಞಾನಪ್ರತಿಜ್ಞೆಯೂ ಕೂಡ ಎಲ್ಲವೂ ಬ್ರಹ್ಮದಿಂದಲೇ ಉತ್ಪನ್ನವಾಗಿದೆ ಎಂಬುದರಿಂದಲೇ ಸಾಧ್ಯವಾಗುತ್ತದೆ. ಮುಂಡಕಶ್ರುತಿಯ ಪ್ರಕಾರವೂ (೨. ೧. ೩) ಎಲ್ಲವೂ ಬ್ರಹ್ಮದಿಂದಲೇ ಉತ್ಪನ್ನವಾಗುತ್ತದೆ. 'ಅವನು ತಪಸ್ಸುಮಾಡಿ ಇದೆಲ್ಲವನ್ನೂ ಸೃಷ್ಟಿಸಿದನು' ಎಂದು ತೈತ್ತಿರೀಯವು (೨ ೬) ಹೇಳುತ್ತದೆ ಆದುದರಿಂದ **ವಾಯೋರಗ್ನಿಃ** ಎಂಬುದು ವಾಯುವು ಹುಟ್ಟಿದ ಮೇಲೆ ಅಗ್ನಿಯು ಹುಟ್ಟಿತು ಎಂಬ ಕ್ರಮವನ್ನು ತಿಳಿಸುತ್ತದೆ.

ವಾಯುವಿನಿಂದಲೇ ಅಗ್ನಿಯು ಹುಟ್ಟಿತು ಎಂಬುದು ಸಿದ್ಧಾಂತ. ಅಗ್ನಿಯು ಬ್ರಹ್ಮದಿಂದ ನೇರವಾಗಿ ಹುಟ್ಟಿದ್ದರೆ **ವಾಯೋರಗ್ನಿಃ** ಎಂಬ ಶ್ರುತಿಯು ಬಾಧಿತವಾಗುತ್ತಿತ್ತು. ಈ ವಾಕ್ಯವು ವಾಯುವಿನ ಬಳಿಕ ಅಗ್ನಿಯು ಹುಟ್ಟಿತು ಎಂಬ ಕ್ರಮವನ್ನು ತಿಳಿಸುತ್ತದೆ ಎಂಬುದೂ ಸರಿಯಲ್ಲ, ಏಕೆಂದರೆ 'ಆತ್ಮನಿಂದ ಆಕಾಶವುಂಟಾಯಿತು' ಎಂದು ಹಿಂದಿನ ವಾಕ್ಯದಲ್ಲಿ (೨. ೧) ಹೇಳಿದಂತೆ ಮತ್ತು 'ಪೃಥ್ವಿಯಿಂದ ಸಸ್ಯಗಳು' ಎಂದು ಮುಂದೆ ಹೇಳುವಂತೆ **ವಾಯೋರಗ್ನಿಃ** ಎಂಬಲ್ಲಿ ಪಂಚಮಿಯು ಒಂದು ವಸ್ತುವು ಉತ್ಪನ್ನವಾಗುವ ಕಾರಣವನ್ನು ಸೂಚಿಸುತ್ತದೆ. 'ವಾಯುವಿನ ಬಳಿಕ ಅಗ್ನಿಯುಂಟಾಯಿತು' ಎಂದು ಅರ್ಥಮಾಡಿದರೆ ಒಂದು ಉಪಸರ್ಗವನ್ನೋ ಅಥವಾ ಕ್ರಿಯಾವಿಶೇಷಣವನ್ನೋ ಕಲ್ಪಿಸಬೇಕಾಗುತ್ತದೆ ಆದರೆ ಪಂಚಮಿ ಎಂಬ ಕಾರಕಾರ್ಥವು ಮೊದಲೇ ಸಿದ್ಧವಾಗಿರುತ್ತದೆ. ಆದುದರಿಂದ ಅಗ್ನಿಯು ವಾಯುವಿನಿಂದ ಹುಟ್ಟುತ್ತದೆ ಎಂದು ಶ್ರುತಿಯು ತಿಳಿಸುತ್ತದೆ 'ಅದು ತೇಜಸ್ಸನ್ನು ಸೃಷ್ಟಿಸಿತು' ಎಂಬ ಇತರ ವಾಕ್ಯಗಳಿಂದಲೂ ತೇಜಸ್ಸು ಪರಂಪರೆಯ ಮೂಲಕ ಬ್ರಹ್ಮದಿಂದ ಹುಟ್ಟುತ್ತದೆ ಎಂದು ಅರ್ಥವನ್ನು ಮಾಡಿದರೆ

---

[1] ವಾಯೋರಗ್ನಿಃ ।

ವಿರುದ್ಧವಾಗುವುದಿಲ್ಲ. ಸರ್ವವಿಜ್ಞಾನಪ್ರತಿಜ್ಞೆಯು ಸರ್ವವೂ ಬ್ರಹ್ಮದಿಂದಲೇ ಹುಟ್ಟುತ್ತದೆ ಎಂಬುದನ್ನು ಅಪೇಕ್ಷಿಸುತ್ತದೆಯೇ ಹೊರತು ನೇರವಾಗಿ ಹುಟ್ಟಬೇಕೆಂದು ಹೇಳುವುದಿಲ್ಲ. ಆದುದರಿಂದ ಯಾವ ವಿರೋಧವೂ ಇರುವುದಿಲ್ಲ.[1]

**ವಿ.**—ಬ್ರಹ್ಮವ್ಯತಿರಿಕ್ತವಾದ ಸಮಸ್ತವಸ್ತುವೂ ಬ್ರಹ್ಮಕಾರ್ಯವೆಂದು ಹೇಳಿದ್ದಾಯಿತು. ಈಗ ವ್ಯವಹಿತವಾದ ಕಾರ್ಯಗಳು ತಮ್ಮ ತಮ್ಮ ಹಿಂದಿನ ಕಾರಣಗಳಾದ ವಸ್ತುಗಳಿಂದ ಉತ್ಪನ್ನವಾಗಿವೆಯೊ ಅಥವಾ ಆಯಾ ರೂಪದಲ್ಲಿರುವ ಬ್ರಹ್ಮನಿಂದಲೇ ಉತ್ಪನ್ನವಾಗಿಯೊ ?—ಎಂಬುದು ಸಂಶಯ. ಹಿಂದುಹಿಂದಿನ ಆಯಾ ವಸ್ತುಗಳಿಂದಲೇ ಉತ್ಪನ್ನವಾಗುತ್ತವೆ ಎಂಬುದು ಸಿದ್ಧಾಂತ ; ಏಕೆಂದರೆ **ವಾಯೋರಗ್ನಿಃ** ಎಂಬ ವಾಕ್ಯವು ವಾಯುವಿನಿಂದ ಅಗ್ನಿಯ ಉತ್ಪತ್ತಿಯನ್ನು ನೇರವಾಗಿ ತಿಳಿಸುತ್ತದೆ.

**ದ್ವೈ.**—**ವಾಯೋರಗ್ನಿಃ** ಎಂಬ ಶ್ರುತಿಯು ಪರಬ್ರಹ್ಮನ ಹೊರತು ಮತ್ತೆ ಯಾವುದರಿಂದಲೂ ತೇಜಸ್ಸು ಉತ್ಪನ್ನವಾಗಿಲ್ಲ ಎಂಬುದನ್ನೇ ತಿಳಿಸುತ್ತದೆ[2] ಆದುದರಿಂದ ತೇಜಸ್ಸು ಪರಬ್ರಹ್ಮನಿಂದಲೇ ಹುಟ್ಟುತ್ತದೆ.

---

[1] ಪ್ರತಿಜ್ಞಾಽಪಿ ಸದ್ವಂಶ್ಯತ್ವಮಾತ್ರಮಪೇಕ್ಷತೇ ನಾವ್ಯವಹಿತಜನ್ಯತ್ವಮಿತ್ಯವಿರೋಧಃ (ಸೂ. ಭಾ.).

[2] ವಾಯೋರಗ್ನಿರಿತ್ಯಾದೇರ್ನಾನ್ಯತ ಉತ್ಪತ್ತಿರ್ಗ್ರಾಹ್ಯಾ (ಮ. ಭಾ.).

## ೫. ಅಬಧಿಕರಣ*

### ಆಪಃ ॥ ೧೧ ॥

೧೧ ನೀರು (ತೇಜಸ್ಸಿನಿಂದ ಉತ್ಪನ್ನವಾಗುತ್ತದೆ)

ನೀರು ತೇಜಸ್ಸಿನಿಂದ ಉತ್ಪನ್ನವಾಗುತ್ತದೆ; ಏಕೆಂದರೆ 'ಅದು ನೀರನ್ನು ಸೃಷ್ಟಿಸಿತು'[1] (ಛಾಂ ಉ ೬ ೨. ೩), 'ಅಗ್ನಿಯಿಂದ ನೀರು (ಉತ್ಪನ್ನವಾಯಿತು)'[2] (ತೈ. ಉ ೨. ೧) ಎಂದು ಶ್ರುತಿಗಳು ಹೇಳುತ್ತವೆ

ವಿ.—ನೀರು ತೇಜಸ್ಸಿನಿಂದ ಉತ್ಪನ್ನವಾಗುತ್ತದೆ.

ಪೃಥಿವೀ† ॥ ೨. ೩. ೧೨ ॥

೧೨. ಪೃಥ್ವಿಯು (ನೀರಿನಿಂದ ಉತ್ಪನ್ನವಾಗುತ್ತದೆ).

'ನೀರಿನಿಂದ ಪೃಥ್ವಿ'[3] (ತೈ. ಉ ೨. ೧), 'ಅದು ಪೃಥ್ವಿಯನ್ನು ಸೃಷ್ಟಿಸಿತು'[4] (ಛಾಂ. ಉ. ೬. ೨ ೪) ಎಂದು ಶ್ರುತಿಗಳು ಹೇಳುತ್ತವೆ.

**ದ್ವೈ.**—ಅಗ್ನೇರಾಪಃ ಎಂಬ ಶ್ರುತಿಯಿದ್ದರೂ ಪರಬ್ರಹ್ಮನಿಂದಲೇ ನೀರೂ ಹುಟ್ಟುತ್ತದೆ; ಏಕೆಂದರೆ 'ಬ್ರಹ್ಮನೊಬ್ಬನೇ ಮೊದಲಿದ್ದನು. ಅವನು ನೀರನ್ನು ಸೃಷ್ಟಿಸಿದನು; ಇದೆಲ್ಲವೂ ಅವನಿಂದಲೇ ಉಂಟಾಯಿತು.' ಎಂದು ಶ್ರುತಿಯು ಹೇಳುತ್ತದೆ.[5]

---

* ಶ್ರೀಭಾಷ್ಯದಲ್ಲಿ ಈ ಅಧಿಕರಣದಿಂದ ಹಿಡಿದು ಚರಾಚರವ್ಯಪಾಶ್ರಯಾಧಿಕರಣದವರೆಗೆ ಸೂತ್ರಗಳೆಲ್ಲ ತೇಜೋಽಧಿಕರಣದಲ್ಲಿಯೇ ಅಂತರ್ಗವಾಗಿವೆ.

1 ತದಪೋಽಸೃಜತ ।

2 ಅಗ್ನೇರಾಪಃ ।

† ಈ ಸೂತ್ರವು ಶಂಕರಭಾಷ್ಯದಲ್ಲಾಗಲಿ ಮಧ್ವಭಾಷ್ಯದಲ್ಲಾಗಲಿ ಕಂಡುಬರುವುದಿಲ್ಲ.

3 ಅದ್ಭ್ಯಃ ಪೃಥಿವೀ ।

4 ತಾ ಅನ್ನಮಸೃಜಂತ ।

5 ಬ್ರಹ್ಮ ವೇದಮಗ್ರ ಆಸೀತ್ತದಪೋಽಸೃಜತ ತದಿದಂ ಸರ್ವಮಿತಿ ಶ್ರುತೇರಗ್ನೇರಾಪ ಇತ್ಯುಕ್ತೇಽಪಿ ಬ್ರಹ್ಮಣ ಏವಾಬಾದಿಸೃಷ್ಟಿಃ (ಮ. ಭಾ.).

## ೬. ಪೃಥಿವ್ಯಧಿಕಾರಾಧಿಕರಣ

### ಪೃಥಿವ್ಯಧಿಕಾರರೂಪಶಬ್ದಾಂತರೇಭ್ಯಃ ॥ ೧೨ ॥

೧೨. ಪೃಥಿವಿಯನ್ನೇ (ಹೇಳಿದೆ); ಏಕೆಂದರೆ ವಿಷಯ ರೂಪ ಶ್ರುತ್ಯಂತರ— ಇವುಗಳಿವೆ.

'ನೀರು ಅನ್ನವನ್ನು ಸೃಷ್ಟಿಸಿತು'[1] (ಛಾಂ. ಉ. ೬. ೨. ೪) ಎಂದು ಛಂದೋಗರು ಹೇಳುತ್ತಾರೆ. ಅನ್ನವೆಂದರೆ ಬತ್ತವೊ ಯವೆಯೊ ಅಥವಾ ಪೃಥಿವಿಯೊ ?—ಎಂಬುದು ಸಂಶಯ. ಇಲ್ಲಿ ಅನ್ನವೆಂದರೆ ಆಹಾರ, ಪೃಥಿವಿಯಲ್ಲ ಎಂದು ಪೂರ್ವಪಕ್ಷಿಯು ಅಭಿಪ್ರಾಯಪಡುತ್ತಾನೆ. ಇಲ್ಲಿ ಅನ್ನ-ಶಬ್ದವು ಪೃಥಿವಿಯನ್ನು ಸೂಚಿಸುತ್ತದೆ ಎಂಬುದು ಸಿದ್ಧಾಂತ. ಮೊದಲನೆಯದಾಗಿ ವಿಷಯ : ಇಲ್ಲಿ ತೇಜಸ್ಸು ನೀರು ಎಂದು ಮಹಾಭೂತಗಳ ಸೃಷ್ಟಿಯನ್ನು ಹೇಳಿರುವುದರಿಂದ ಅನ್ನವು ಪೃಥಿವಿಯನ್ನು ಸೂಚಿಸುತ್ತದೆಯೇ ಹೊರತು ಬತ್ತ ಮೊದಲಾದ ಆಹಾರಗಳನ್ನಲ್ಲ. ಎರಡನೆಯದಾಗಿ ರೂಪ : 'ಯಾವುದು (ಅಗ್ನಿಯ) ಕಪ್ಪುಬಣ್ಣವೊ ಅದು ಪೃಥಿವಿಯ ಬಣ್ಣ'[2] (ಛಾಂ. ಉ. ೬. ೪. ೧) ಎಂಬ ವಾಕ್ಯಶೇಷದಲ್ಲಿ ಪೃಥಿವಿಯ ರೂಪವು ಕಪ್ಪೆಂದು ಹೇಳಿರುತ್ತದೆ. ಮೂರನೆಯದಾಗಿ ಶ್ರುತಿಗಳು : ಅನೇಕ ಶ್ರುತಿಗಳು ನೀರಿನಿಂದ ಪೃಥಿವಿಯು ಉತ್ಪನ್ನವಾಯಿತೆಂದು ಹೇಳುತ್ತವೆ ; 'ನೀರಿನಿಂದ ಪೃಥಿವಿ' (ತೈ. ಉ. ೨. ೧), 'ಅಲ್ಲಿ ಯಾವುದು ನೀರಿನ ಗರಣೆಯಂತಿದ್ದಿತೊ ಅದು ಗಟ್ಟಿಯಾಯಿತು ; ಅದು ಆ ಪೃಥಿವಿಯಾಯಿತು'[3] (ಬೃ. ಉ ೧. ೨. ೨). ಆದುದರಿಂದ ಅನ್ನಶಬ್ದವಾಚ್ಯವಾಗಿರುವುದು ಪೃಥಿವಿ

ವಿ.—ಅಧಿಕಾರರೂಪಶಬ್ದಾಂತರೇಭ್ಯಃ ॥ ೨. ೩. ೧೩ ॥

೧೩. ವಿಷಯ-ರೂಪ-ಶಬ್ದಾಂತರಗಳಿಂದ (ಪೃಥಿವಿಯೇ)

ಮಹಾಭೂತಗಳ ಸೃಷ್ಟಿಪ್ರಕರಣವಾದುದರಿಂದ ಅನ್ನಶಬ್ದವು ಪೃಥಿವಿಯನ್ನೇ ಸೂಚಿಸುತ್ತದೆ. ವಾಕ್ಯಶೇಷದಲ್ಲಿ (ಛಾಂ ಉ ೬ ೪. ೧) ಮಹಾಭೂತಗಳ ಬಣ್ಣಗಳನ್ನು ಹೇಳುವಾಗ ಅನ್ನಕ್ಕೆ ಪೃಥಿವಿಯ ವರ್ಣವಾದ ಕೃಷ್ಣವರ್ಣವನ್ನು ಹೇಳಿದೆ. ಮತ್ತೆ, 'ಅಗ್ನಿಯಿಂದ ನೀರು, ನೀರಿನಿಂದ ಪೃಥಿವಿ' (ತೈ. ಉ. ೨. ೧) ಮತ್ತು 'ಪ್ರಾಣ ಮನಸ್ಸು ಸರ್ವೇಂದ್ರಿಯಗಳು ಆಕಾಶ ವಾಯು ಅಗ್ನಿ ನೀರು ಸರ್ವವನ್ನೂ ಧರಿಸಿರುವ

---

[1] ತಾ ಅನ್ನಮಸೃಜಂತ ।

[2] ಯತ್ ಕೃಷ್ಣಂ ತದನ್ನಸ್ಯ ।

[3] ತದ್ಯದಪಾಂ ಶರ ಅಸೀತ್ ತತ್ ಸಮಹನ್ಯತ ಸಾ ಪೃಥಿವ್ಯಭವತ್ ।

ಪೃಥಿವಿ—ಇವುಗಳು ಈ ಪುರುಷನಿಂದ ಹುಟ್ಟುತ್ತವೆ'[1] (ಮುಂ. ಉ. ೨. ೧ ೩) ಇವೇ ಮೊದಲಾದ ಸಮಾನಪ್ರಕರಣಗಳಲ್ಲಿ ಅನ್ನಶಬ್ದಕ್ಕೆ ಬದಲು ಪೃಥಿವೀಶಬ್ದವನ್ನು ಪ್ರಯೋಗಿಸಿರುವುದರಿಂದ ಅನ್ನವೆಂದರೆ ಪೃಥಿವಿ.

**ದ್ವೈ.—ತತ್ತೇಜೋ ಅಸೃಜತ** (ಛಾಂ.ಉ ೬.೨ ೩) ಎಂದು ಭೂತಪ್ರಕರಣವಾಗಿರುವುದರಿಂದಲೂ **ಯತ್ ಕೃಷ್ಣಂ ತದನ್ನಸ್ಯ** (ಛಾಂ ಉ ೬. ೪ ೧), **ಪೃಥಿವೀ ವಾ ಅನ್ನಮ್** (ತೈ. ಉ. ೩. ೯) ಎಂದು ಶ್ರುತ್ಯಂತವಿರುವುದರಿಂದಲೂ ಪೃಥಿವಿಯೇ ಅಲ್ಲಿ ಅನ್ನಶಬ್ದದಿಂದ ಹೇಳಲ್ಪಡುತ್ತದೆ.

---

1 ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥

## ೭. ತದಭಿಧ್ಯಾನಾಧಿಕರಣ

**ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ॥ ೧೩ ॥**

೧೩. ಆದರೆ ಅವನ ಅಭಿಧ್ಯಾನದಿಂದಲೇ (ಸೃಷ್ಟಿಯಾಗುತ್ತದೆ); ಲಿಂಗ ವಿರುವುದರಿಂದ ಅವನೇ (ಸೃಷ್ಟಿಕರ್ತೃವು).

ಈ ಆಕಾಶಾದಿಗಳು ತಮ್ಮ ಕಾರ್ಯಗಳನ್ನು ತಾವೇ ಸೃಷ್ಟಿಸುತ್ತವೆಯೊ ಅಥವಾ ಪರಮೇಶ್ವರನೇ ಆಯಾ ರೂಪದಲ್ಲಿದ್ದುಕೊಂಡು ಸೃಷ್ಟಿಸುತ್ತಾನೆಯೊ ?—ಎಂಬುದು ಸಂಶಯ ಆಕಾಶಾದಿಭೂತಗಳೇ ತಮ್ಮ ತಮ್ಮ ಕಾರ್ಯಗಳನ್ನು ಸೃಷ್ಟಿಸುತ್ತವೆ—ಎಂಬುದು ಪೂರ್ವಪಕ್ಷ ; ಏಕೆಂದರೆ 'ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ' (ತೈ. ಉ. ೨ ೧) ಎಂದು ಶ್ರುತಿಗಳು ಭೂತಗಳಿಗೆ ಸ್ವತಂತ್ರಸೃಷ್ಟಿಯನ್ನು ಹೇಳುತ್ತವೆ ಅಚೇತನ ವಸ್ತುಗಳಿಗೆ ಸ್ವತಂತ್ರಪ್ರವೃತ್ತಿಯಿಲ್ಲವೆಂದು ಹೇಳಲಾಗುವುದಿಲ್ಲ ; ಏಕೆಂದರೆ 'ಆ ತೇಜಸ್ಸು ಯೋಚಿಸಿತು', 'ಆ ನೀರು ಯೋಚಿಸಿತು' (ಛಾಂ. ಉ. ೬. ೨. ೩. ೪) ಎಂಬಲ್ಲಿ ಭೂತಗಳು ಚೇತನವೆಂದು ಹೇಳಿದೆ.

ಆ ಪರಮೇಶ್ವರನೇ ಆಯಾ ರೂಪದಿಂದ ಇದ್ದುಕೊಂಡು ಅಭಿಧ್ಯಾನಿಸಿ ಆಯಾ ಕಾರ್ಯವನ್ನು ಸೃಷ್ಟಿಸುತ್ತಾನೆ[1]—ಎಂಬುದು ಸಿದ್ಧಾಂತ ; ಏಕೆಂದರೆ 'ಯಾವನು ಪೃಥಿವಿಯಲ್ಲಿರುವವನಾಗಿ ಪೃಥಿವಿಯ ಒಳಗಿರುವನೊ, ಯಾವನನ್ನು ಪೃಥಿವಿಯು ತಿಳಿಯದೊ, ಯಾವನಿಗೆ ಪೃಥಿವಿಯು ಶರೀರವೊ, ಯಾವನು ಒಳಗಿದ್ದುಕೊಂಡು ಪೃಥಿವಿಯನ್ನು ನಿಯಮಿಸುವನೊ'[2] (ಬೃ. ಉ. ೩. ೭. ೨) ಎಂಬ ಶ್ರುತಿಯು ಚೇತನನಾದ ಅಧ್ಯಕ್ಷನಿಂದ ನಿಯಮಿಸಲ್ಪಟ್ಟ ಭೂತಗಳಿಗೇ ಪ್ರವೃತ್ತಿಯನ್ನು ಹೇಳಿದೆ. ಇದೇ ರೀತಿ 'ನಾನು ಬಹುವಾಗುವೆನು, ಹುಟ್ಟುವೆನು—ಎಂದು ಆತ್ಮನು ಸಂಕಲ್ಪಿಸಿದನು' ಎಂದು ಪ್ರಾರಂಭಿಸಿ 'ಅವನು ಸತ್ ತ್ಯತ್ ಆದನು'[3] (ತೈ. ಉ. ೨. ೬), 'ಅದು ತನ್ನನ್ನು ತಾನೇ ಉತ್ಪತ್ತಿಮಾಡಿಕೊಂಡಿತು'[4] (ತೈ ಉ.೨ ೭) ಇವೇ ನೊದಲಾದ ಶ್ರುತಿಗಳು ಅವನು ಸರ್ವಾತ್ಮನೆಂಬುದನ್ನು ತಿಳಿಸುತ್ತವೆ 'ತೇಜಸ್ಸು ಯೋಚಿಸಿತು', 'ನೀರು ಯೋಚಿಸಿತು' ಎಂಬುದು ಪರಮೇಶ್ವರನ ಪ್ರವೇಶದಿಂದಲೇ ಆಯಿತೆಂದು ತಿಳಿಯಬೇಕು ; ಏಕೆಂದರೆ 'ಇವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ'[5] (ಬೃ. ಉ ೩ ೭. ೨೩) ಎಂದು ಶ್ರುತಿಯು ಹೇಳುತ್ತದೆ.

---

[1] ಸ ಏವ ಪರಮೇಶ್ವರಸ್ತೇನ ತೇನಾತ್ಮನಾವತಿಷ್ಠಮಾನೋಽಭಿಧ್ಯಾಯಂಸ್ತಂ ತಂ ವಿಕಾರಂ ಸೃಜತೀತಿ (ಸೂ ಭಾ ).

[2] ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ, ಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಮ್, ಯಃ ಪೃಥಿವೀಮಂತರೋ ಯಮಯತಿ ।

[3] ಸಚ್ಚ ತ್ಯಚ್ಚಾಭವತ್ ।

[4] ತದಾತ್ಮಾನಂ ಸ್ವಯಮಕುರುತ ।

[5] ನಾನ್ಯೋಽತೋಽಸ್ತಿ ದ್ರಷ್ಟಾ ।

**ವಿ.**—ಮಹತ್ತೇ ಮೊದಲಾದ ಕಾರ್ಯಗಳಲ್ಲಿ ತತ್ತ್ಚ್ಛರೀರಕನಾದ ಪರಮಾತ್ಮನೇ ನೇರವಾಗಿ ಕಾರಣನಾಗಿರುತ್ತಾನೆಯೇ ಹೊರತು ಪರಂಪರೆಯಿಂದ ಕಾರಣನಾಗಿರುವುದಿಲ್ಲ. ಇದು ಪರಮಪುರುಷನ ಅಭಿಧ್ಯಾನದಿಂದಲೇ ತಿಳಿದುಬರುತ್ತದೆ ಇಲ್ಲಿ ಅಭಿಧ್ಯಾನವೆಂದರೆ 'ನಾನು ಬಹುವಾಗುವೆನು' ಎಂಬೀ ರೂಪದ ಸಂಕಲ್ಪ. 'ನಾನು ಬಹುವಾಗುವೆನು—ಎಂದು ತೇಜಸ್ಸು ಯೋಚಿಸಿತು' (ಛಾಂ ಉ. ೬ ೨. ೩), 'ನಾನು ಬಹುವಾಗುವೆನು—ಎಂದು ನೀರು ಯೋಚಿಸಿತು' (ಛಾಂ. ಉ ೬. ೨ ೪)—ಇವೇ ಮೊದಲಾದ ಶ್ರುತಿಗಳು ಪರಮಾತ್ಮನ ಬಹುಭವನ-ಸಂಕಲ್ಪ-ರೂಪವಾದ ಈ ಕ್ಷಣವನ್ನು ತಿಳಿಸುತ್ತವೆ. ಇಂಥ 'ಈಕ್ಷಣವು' ತತ್ತ್ಚ್ಛರೀರಕನಾದ ಪರಬ್ರಹ್ಮನಿಗೇ ಹೊಂದುತ್ತದೆ.[1]

**ದ್ವೈ.**—'ಅವನ ಪ್ರಸಾದದಿಂದಲೂ ಅವನಲ್ಲಿ ಮನಸ್ಸನ್ನು ಅರ್ಪಿಸುವುದರಿಂದಲೂ ತತ್ತ್ವಭಾವನೆಯಿಂದಲೂ ಕೊನೆಯಲ್ಲಿ ವಿಶ್ವಬಂಧಕವಾದ ಮಾಯಾನಿವೃತ್ತಿಯು ಉಂಟಾಗುತ್ತದೆ' (ಶ್ವೇ. ಉ. ೧. ೧೦) ಎಂಬ ಅವನ ಅಭಿಧ್ಯಾನ. ನಿಮಿತ್ತತ್ವಲಿಂಗದಿಂದ ಬಂಧ-ಲಯಕ್ಕೆ ವಿಷ್ಣುವೇ ಕಾರಣನೆಂದು ತಿಳಿದುಬರುತ್ತದೆ [2]

---

[1] ತಥಾವಿಧಂ ಚೇಕ್ಷಣಂ ತತ್ತ್ಚ್ಛರೀರಕಸ್ಯ ಪರಸ್ಯೈವ ಬ್ರಹ್ಮಣ ಉಪಪದ್ಯತೇ (ಶ್ರೀಭಾಷ್ಯ).

[2] ತಸ್ಯಾಭಿಧ್ಯಾನಾದ್ಯೋಜನಾತ್ ತತ್ತ್ವಪ್ರಭಾವಾದ್ಭೂಯಶ್ಚಾಂತೇ ವಿಶ್ವಮಾಯಾ-ನಿವೃತ್ತಿರಿತಿ ಬಂಧಲಯಸ್ಯ ತದಭಿಧ್ಯಾನನಿಮಿತ್ತತ್ತ್ವಲಿಂಗಾತ್ ತತ್ಕರ್ತೃತ್ವಂ ಪ್ರತೀಯತೇ (ಮ. ಭಾ.).

## ೮. ವಿಪರ್ಯಯಾಧಿಕರಣ

**ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ॥ ೧೪ ॥**

೧೪. (ಪ್ರಳಯ)ಕ್ರಮವು (ಉತ್ಪತ್ತಿಕ್ರಮದ) ವಿಪರ್ಯಯವಾಗಿದೆ; ಆದುದರಿಂದ ಅದು ಉಪಪನ್ನವಾಗಿದೆ.

ಭೂತಗಳು ನಿಯತಕ್ರಮವಿಲ್ಲದೆ ಲಯವಾಗುತ್ತವೆಯೊ ? ಅಥವಾ ಉತ್ಪತ್ತಿಕ್ರಮದಿಂದ ಅಥವಾ ಅದಕ್ಕೆ ವಿಪರೀತವಾದ ಕ್ರಮದಿಂದ ಲಯವಾಗುತ್ತವೆಯೊ ?—ಎಂಬುದು ಸಂಶಯ. ಲಯಕ್ಕೆ ಯಾವ ನಿಯತಕ್ರಮವೂ ಇಲ್ಲವೆಂಬುದು ಪೂರ್ವಪಕ್ಷ; ಏಕೆಂದರೆ ಶ್ರುತಿಯು ಈ ವಿಷಯದಲ್ಲಿ ಯಾವ ವಿಶೇಷವನ್ನೂ ತಿಳಿಸಿಲ್ಲ. ಅಥವಾ ಉತ್ಪತ್ತಿಕ್ರಮವನ್ನು ಶ್ರುತಿಯಲ್ಲಿ ಹೇಳಿರುವುದರಿಂದ ಕ್ರಮವನ್ನು ಬಯಸುವವನು ಅದನ್ನೇ ಸ್ವೀಕರಿಸಬಹುದು.

ಪ್ರಳಯಕ್ರಮವು ಉತ್ಪತ್ತಿಕ್ರಮದ ವಿಪರ್ಯಯವಾಗಿರಬೇಕು—ಎಂಬುದು ಸಿದ್ಧಾಂತ. ಇದು ಲೋಕದಲ್ಲಿಯೂ ಕಂಡುಬರುತ್ತದೆ: ಮೆಟ್ಟಲುಗಳನ್ನು ಯಾವ ಕ್ರಮದಿಂದ ಒಬ್ಬನು ಹತ್ತುತ್ತಾನೆಯೊ ಅದಕ್ಕೆ ವಿಪರೀತವಾದ ಕ್ರಮದಿಂದ ಕೆಳಕ್ಕೆ ಇಳಿಯುತ್ತಾನೆ. ಕಾರ್ಯವು ತನ್ನ ಹಿಂದಿನ ಕಾರಣದಲ್ಲಿ ಲಯವಾಗುತ್ತದೆ: ಪೃಥಿವಿಯು ನೀರಿನಲ್ಲಿ, ನೀರು ತೇಜಸ್ಸಿನಲ್ಲಿ.... ಇತ್ಯಾದಿ. ಈ ಕ್ರಮದಿಂದ ಕಾರ್ಯಗಳೆಲ್ಲ ತಮ್ಮ ಹಿಂದುಹಿಂದಿನ ಕಾರಣಗಳನ್ನು ಸೇರಿ, ಕೊನೆಗೆ ಪರಮ-ಸೂಕ್ಷ್ಮವೂ ಪರಮಕಾರಣವೂ ಆದ ಬ್ರಹ್ಮದಲ್ಲಿ ಲಯವಾಗುತ್ತದೆ. ಉತ್ಪತ್ತಿಯ ವಿಷಯದಲ್ಲಿ ಹೇಳಿರುವ ಕ್ರಮವನ್ನು ಲಯಕ್ಕೆ ಅನ್ವಯಿಸಕೂಡದು.

ವಿ.—'(ಪರಬ್ರಹ್ಮನಿಂದಲೇ ಪ್ರಾಣಾದಿಗಳು ಉತ್ಪನ್ನವಾದುವು ಎಂಬುದನ್ನು ಸ್ವೀಕರಿಸಿದರೆ ಮಾತ್ರ) ವಿಪರ್ಯಯದಿಂದ ಹೇಳಿದ ಕ್ರಮವು ಹೊಂದುತ್ತದೆ' ಎಂಬುದು ಸೂತ್ರಾರ್ಥ.

ತೈತ್ತಿರೀಯದಲ್ಲಿ **ಆಕಾಶಾದ್ವಾಯುಃ, ವಾಯೋರಗ್ನಿಃ** ಎಂದು ಪಾರಂಪರ್ಯವಾಗಿ ಹೇಳಿದೆ. ಆದರೆ ಮುಂಡಕದಲ್ಲಿ **ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ** ಎಂದು ನೇರವಾಗಿ ಹೇಳಿದೆ. ಪ್ರತಿಯೊಂದು ಕಾರ್ಯವೂ ಪರಬ್ರಹ್ಮನಿಂದಲೇ ಉತ್ಪನ್ನವಾಗಿದೆ ಎಂದು ಒಪ್ಪಿಕೊಂಡರೆ ಮಾತ್ರ ಅವ್ಯಕ್ತ ಮಹತ್ ಅಹಂಕಾರ ಆಕಾಶ—ಇವೇ ಮೊದಲಾದುವುಗಳ ವಿಪರ್ಯಯ-ಕ್ರಮವು ಹೊಂದುತ್ತದೆ. ಪರಬ್ರಹ್ಮನು ಪರಂಪರೆಯಿಂದ ಕಾರಣನು ಎಂದು ಹೇಳುವುದು ಅವನು ಸಾಕ್ಷಾತ್ಕಾರಣನೆಂದು ಹೇಳುವ ಶ್ರುತಿಗಳಿಗೆ ವಿರುದ್ಧವಾಗಿರುತ್ತದೆ.[1]

---

[1] ಪರಂಪರಯಾ ಕಾರಣತ್ವೇ ಹ್ಯಾನಂತರ್ಯಶ್ರವಣಮುಪರುಧ್ಯೇತ (ಶ್ರೀಭಾಷ್ಯ).

ದ್ವೈ.—'ಆದರೆ ವಿಪರ್ಯಯಕ್ರಮದ ವಿಷಯದಲ್ಲಿ ಕ್ರಮವನ್ನು (ಹೇಳಿದೆ); ಆದುದರಿಂದ (ಶ್ರುತಿಯಿದೆ); ಮತ್ತು (ವಿಪರ್ಯಯಕ್ರಮವೂ) ಹೊಂದುತ್ತದೆ' ಎಂಬುದು ಸೂತ್ರಾರ್ಥ.

ಭಾಲ್ಲವೇಯ-ಶ್ರುತಿಯ ಪ್ರಕಾರ ಲಯಕ್ರಮವೂ ಉತ್ಪತ್ತಿಕ್ರಮದಂತೆಯೇ ಇರುವ ಹಾಗೆ ತೋರುತ್ತದೆ[1] ಆದರೆ ಚತುರ್ವೇದಶಿಖೆಯ ಪ್ರಕಾರ ಲಯಕ್ರಮವು ವಿಪರೀತ ವಾಗಿರುವಂತೆ ತೋರುತ್ತದೆ.[2] ಈ ವಿರೋಧವನ್ನು ಪರಿಹರಿಸಲು ಸೂತ್ರಕಾರರು ಹೀಗೆ ಹೇಳುತ್ತಾರೆ: ಪ್ರಳಯವಿಷಯದಲ್ಲಿಯೂ ಕ್ರಮವಚನವು ವಿಪರೀತ ಕ್ರಮವನ್ನೇ ಅಪೇಕ್ಷಿಸುತ್ತದೆ.[3] 'ಪ್ರಾಣಾದಿಕ್ರಮದಿಂದ ಜಗತ್ತನ್ನು ಸೃಷ್ಟಿಸುವವನೂ ಭೂಮ್ಯಾದಿ-ವ್ಯುತ್ಕ್ರಮದಿಂದ ಅದನ್ನು ನಾಶಮಾಡುವವನೂ ಆದವನು ಹರಿ' ಎಂದು ಭಾಲ್ಲವೇಯ-ಶ್ರುತಿಯು ಹೇಳುತ್ತದೆ. ಆದುದರಿಂದ ಲಯಕ್ರಮಕ್ಕೆ ವೈಪರೀತ್ಯವು ಯುಕ್ತವಾಗಿದೆ

1 ಅತ ಏವ ಹಿ ಪರಾದಿದಂ ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ (ಮ. ಭಾ.).
2 ವ್ಯುತ್ಕ್ರಮಾದ್ವಿಲಯಶ್ಚೈವ ತಸ್ಮಿನ್ನೇವ ಪರಾತ್ಮನಿ (ಮ. ಭಾ.).
3 ಕ್ರಮವಚನಮಪಿ ವಿಪರೀತಕ್ರಮಾಪೇಕ್ಷಯಾ (ಮ. ಭಾ.)

## ೯. ಅಂತರಾವಿಜ್ಞಾನಾಧಿಕರಣ

**ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ॥ ೧೫ ॥**

೧೫ ಅವುಗಳ ಲಿಂಗವಿರುವುದರಿಂದ ಬುದ್ಧಿ-ಮನಸ್ಸುಗಳನ್ನು (ಆತ್ಮನ ಮತ್ತು ಭೂತಗಳ) ಮಧ್ಯದಲ್ಲಿ ಕ್ರಮವಾಗಿ (ಸಂಗ್ರಹಿಸಬೇಕು)—ಎಂದರೆ, ಅದು ಸರಿಯಲ್ಲ, ಏಕೆಂದರೆ (ಅವುಗಳಿಗೆ) ವಿಶೇಷವಿಲ್ಲ

ಭೂತಗಳು ಆತ್ಮನಿಂದಲೇ ಹುಟ್ಟಿ ಕೊನೆಗೆ ಆತ್ಮನಲ್ಲಿಯೇ ಲಯವಾಗುತ್ತವೆ ಎಂದು ಹೇಳಿದ್ದಾಯಿತು ಆದರೆ ಇಂದ್ರಿಯಸಹಿತವಾದ ಮನಸ್ಸೂ ಬುದ್ಧಿಯೂ ಇವೆ ಎಂದು ಶ್ರುತಿಸ್ಮೃತಿಗಳಲ್ಲಿ[1] ಹೇಳಿದೆ ವಸ್ತುಸಮೂಹವೆಲ್ಲ ಬ್ರಹ್ಮದಿಂದಲೇ ಹುಟ್ಟುವುದರಿಂದ ಬುದ್ಧಿ-ಮನಸ್ಸುಗಳ ಉತ್ಪತ್ತಿ-ಲಯಗಳನ್ನು ಆತ್ಮನಿಗೂ ಭೂತಗಳಿಗೂ ನಡುವೆ ಯಾವುದಾದರೊಂದು ಕ್ರಮದಿಂದ ಸೇರಿಸಿಕೊಳ್ಳಬೇಕು ಇದನ್ನೇ ಆಥರ್ವಣದಲ್ಲಿಯೂ[2] ಹೇಳಿದೆ ಆದುದರಿಂದ ಹಿಂದೆ ಹೇಳಿರುವ ಭೂತಗಳ ಉತ್ಪತ್ತಿ-ಪ್ರಳಯ-ಕ್ರಮಕ್ಕೆ ಭಂಗವಾಗುತ್ತದೆ—ಎಂದು ಪೂರ್ವಪಕ್ಷಿಯು ಹೇಳಿದರೆ ಅದು ಸರಿಯಲ್ಲ ಕರಣಗಳು ಭೌತಿಕವೆಂದು ಒಪ್ಪಿಕೊಂಡರೆ ಭೂತಗಳ ಉತ್ಪತ್ತಿ-ಲಯ-ಕ್ರಮವೇ ಅವುಗಳಿಗೂ ಅನ್ವಯಿಸುತ್ತದೆ.[3] ಕರಣಗಳು ಭೌತಿಕವೆನ್ನುವುದಕ್ಕೆ ಲಿಂಗವೂ ಇದೆ 'ಮನಸ್ಸು ಅನ್ನಮಯ, ಪ್ರಾಣವು ಅಪ್ಮಯ, ವಾಕ್ಕು ತೇಜೋಮಯ'[4] (ಛಾಂ ಉ ೬ ೫ ೪) ಕೆಲವು ಸ್ಥಳಗಳಲ್ಲಿ ಭೂತಗಳನ್ನೂ ಕರಣಗಳನ್ನೂ ಬೇರೆ ಬೇರೆಯಾಗಿ ಹೇಳಿದ್ದರೆ ಬ್ರಾಹ್ಮಣನಾದ ಪರಿವ್ರಾಜಕನನ್ನು ಬ್ರಾಹ್ಮಣನಿಂದ ಬೇರೆಯಾಗಿ ಹೇಳಿದ್ದಂತೆ ಕರಣಗಳನ್ನು ಅಭೌತಿಕವೆಂದು ಗ್ರಹಿಸಿದರೂ ಭೂತಗಳ ಉತ್ಪತ್ತಿಗೆ ಅವುಗಳನ್ನು ವಿಶೇಷಣಗಳಾಗಿ ಹೇಳಿಲ್ಲ ಆಥರ್ವಣದಲ್ಲಿ

---

[1] 'ಬುದ್ಧಿಯನ್ನು ಸಾರಥಿಯೆಂದೂ ಮನಸ್ಸನ್ನು ಕಡಿವಾಣವೆಂದೂ ತಿಳಿ ಇಂದ್ರಿಯಗಳನ್ನು ಕುದುರೆಗಳೆಂದು ಹೇಳುತ್ತಾರೆ' ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ। ಇಂದ್ರಿಯಾಣಿ ಹಯಾನಾಹುಃ (ಕ ಉ ೧ ೩ ೩-೪)

[2] 'ಪ್ರಾಣ ಮನಸ್ಸು ಸರ್ವೇಂದ್ರಿಯಗಳು ಆಕಾಶ ವಾಯು ಅಗ್ನಿ ನೀರು, ಎಲ್ಲವನ್ನೂ ಧರಿಸಿರುವ ಪೃಥಿವಿ—ಇವು ಈ ಪುರುಷನಿಂದ ಹುಟ್ಟುತ್ತವೆ' ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ। ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ (ಮುಂ ಉ ೨ ೧ ೩)

[3] ಯದಿ ತಾವದ್ ಭೌತಿಕಾನಿ ಕರಣಾನಿ ತತೋ ಭೂತೋತ್ಪತ್ತಿಪ್ರಲಯಾಭ್ಯಾಮೇವೈಷಾಮುತ್ಪತ್ತಿಪ್ರಲಯೌ ಭವತ ಇತಿ ನೈತಯೋಃ ಕ್ರಮಾಂತರಂ ಮೃಗ್ಯಮ್ (ಸೂ ಭಾ )

[4] ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಕ್ ।

ಕರಣಗಳನ್ನೂ ಭೂತಗಳನ್ನೂ ಹೇಳಿರುವುದು ಪಾಠಕ್ರಮವೇ ಹೊರತು ಉತ್ಪತ್ತಿ ಕ್ರಮವಲ್ಲ ಇದಲ್ಲದೆ ಮತ್ತೊಂದು ಶ್ರುತಿಯಲ್ಲಿ ಕರಣಕ್ರಮವನ್ನೂ ಬೇರೆಯಾಗಿಯೇ ಹೇಳಿದೆ 'ಮೊದಲು ಇದೆಲ್ಲ ಪ್ರಜಾಪತಿಯೇ ಆಗಿತ್ತು. ಅವನು ತನ್ನನ್ನೇ ಚಿಂತಿಸಿಕೊಂಡನು, ಅವನು ಮನಸ್ಸನ್ನು ಸೃಷ್ಟಿಸಿದನು; ಮನಸ್ಸೊಂದೇ ಇತ್ತು; ಅದು ತನ್ನನ್ನೇ ಚಿಂತಿಸಿಕೊಂಡಿತು, ಅದು ವಾಕ್ಕನ್ನು ಸೃಷ್ಟಿಸಿತು'[1] ಆದುದರಿಂದ ಭೂತೋತ್ಪತ್ತಿಕ್ರಮಕ್ಕೆ ಭಂಗವಿಲ್ಲ

ವಿ.—'ಒಂದು ಶ್ರುತಿಯ ಪ್ರಕಾರ (ಭೂತ-ಪ್ರಾಣಗಳ) ನಡುವೆ ಇಂದ್ರಿಯ-ಮನಸ್ಸುಗಳೆರಡೂ ಕ್ರಮವಾಗಿ ಉತ್ಪನ್ನವಾಗುತ್ತವೆ—ಎಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಯಾವ ವಿಶೇಷವೂ ಇಲ್ಲ' ಎಂಬುದು ಸೂತ್ರಾರ್ಥ.

**ಏತಸ್ಮಾಜ್ಜಾಯತೇ**—(ಮುಂ ಉ. ೨ ೧. ೩)—ಇವೇ ಮೊದಲಾದ ಶ್ರುತಿಗಳಲ್ಲಿ ಆಕಾಶಾದಿ ಪಂಚತನ್ಮಾತ್ರಗಳ ಮಧ್ಯದಲ್ಲಿ ಇಂದ್ರಿಯ ಮನಸ್ಸುಗಳು ಕ್ರಮವಾಗಿ ಹುಟ್ಟುತ್ತವೆ. ಸುಬಾಲೋಪನಿಷತ್ತಿನಲ್ಲಿಯೂ ಈ ಕ್ರಮವೇ ಕಂಡುಬರುತ್ತದೆ: 'ಪೃಥಿವಿಯು ನೀರಿನಲ್ಲಿ ಲಯವಾಗುತ್ತದೆ...ತಮಸ್ಸು ಪರದೇವನಲ್ಲಿ ಒಂದಾಗುತ್ತದೆ'[2] ಆದುದರಿಂದ ಪಾರಂಪರ್ಯ-ಕಾರ್ಯ-ಕಾರಣವು ಸರಿಯೇ ಹೊರತು ಸಾಕ್ಷಾದುತ್ಪತ್ತಿಕ್ರಮವು ಸರಿಯಲ್ಲ ಎಂಬುದು ಪೂರ್ವಪಕ್ಷ ಯಾವ ವಿಶೇಷವೂ ಇಲ್ಲದಿರುವುದರಿಂದ ಇದು ಸರಿಯಲ್ಲ ಎಂಬುದು ಸಿದ್ಧಾಂತ. **ಏತಸ್ಮಾಜ್ಜಾಯತೇ** ಎಂಬುದನ್ನು ವಿಜ್ಞಾನ ಮನಸ್ಸು ಆಕಾಶಾದಿ ಭೂತ—ಇವೆಲ್ಲಕ್ಕೂ ಸಂಬಂಧಿಸಬೇಕು ಪ್ರಾಣದಿಂದ ಪ್ರಾರಂಭಿಸಿ ಪೃಥಿವಿಯವರೆಗೂ ಎಲ್ಲವೂ ಪರಬ್ರಹ್ಮನಿಂದಲೇ ಹುಟ್ಟುತ್ತವೆ ಎಂಬುದು ಶ್ರುತಿಯ ತಾತ್ಪರ್ಯವೇ ಹೊರತು ಕ್ರಮವಲ್ಲ, ಏಕೆಂದರೆ ಒಂದು ಶ್ರುತಿಯಲ್ಲಿ ಹೇಳಿದ ಕ್ರಮವು ಮತ್ತೊಂದು ಶ್ರುತಿಗೆ ವಿರುದ್ಧವಾಗಿದೆ. ಆದುದರಿಂದ ಅವ್ಯಕ್ತಾದಿಶರೀರಕನಾದ ಪರಬ್ರಹ್ಮನಿಂದಲೇ ಸರ್ವಕಾರ್ಯವೂ ಉತ್ಪನ್ನವಾಗುತ್ತದೆ

**ವ್ಯಾ.**—'ಲಿಂಗವಿರುವುದರಿಂದ ಬುದ್ಧಿ-ಮನಸ್ಸುಗಳ ಹೊರತು (ವಿಪರ್ಯಯ) ಕ್ರಮವು ಇರುವುದೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ವಿಶೇಷ-ಪ್ರಮಾಣವಿಲ್ಲ' ಎಂಬುದು ಸೂತ್ರಾರ್ಥ

'ಪ್ರಾಣದಿಂದ ಮನಸ್ಸು. ಮನಸ್ಸಿನಿಂದ ವಿಜ್ಞಾನ', 'ಪ್ರಾಜ್ಞನು ವಾಕ್ಕನ್ನು ಮನಸ್ಸಿನಲ್ಲಿ ಮನಸ್ಸನ್ನು ಬುದ್ಧಿಯಲ್ಲಿ ಲಯಮಾಡಿಕೊಳ್ಳಬೇಕು' (ಕ. ಉ. ೧. ೩. ೧೩)—ಇವೇ ಮೊದಲಾದ ಲಿಂಗಗಳ ಪ್ರಕಾರ ಬುದ್ಧಿಮನಸ್ಸುಗಳ ಹೊರತು ಲಯದಲ್ಲಿ ವಿಪರೀತಕ್ರಮವು ಹೊಂದುತ್ತದೆಯೆಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಇದಕ್ಕೆ ಯಾವ ವಿಶೇಷ ಪ್ರಮಾಣವೂ ಇಲ್ಲ.

---

[1] ಪ್ರಜಾಪತಿರ್ವಾ ಇದಮಗ್ರ ಆಸೀತ್ ಸ ಆತ್ಮಾನಮೈಕ್ಷತ ಸ ಮನೋಽಸೃಜತ ತನ್ಮನ ಏವಾಸೀತ್ ತದಾತ್ಮಾನಮೈಕ್ಷತ ತದ್ವಾಚಮಸೃಜತ ।

[2] ಪೃಥಿವ್ಯಪ್ಸು ಪ್ರಲೀಯತೇ ... ತಮಃ ಪರೇ ದೇವ ಏಕೀಭವತಿ ।

## ೧೧. ಆತ್ಮಾಧಿಕರಣ

**ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ॥ ೧೭ ॥**

೧೭ ಆತ್ಮನು ಹುಟ್ಟುವುದಿಲ್ಲ , ಏಕೆಂದರ ಶ್ರುತಿಯಿಲ್ಲ , ಮತ್ತು ಅವುಗಳ (ಎಂದರ ಶ್ರುತಿಗಳ) ಪ್ರಕಾರ ನಿತ್ಯನಾಗಿರುತ್ತಾನೆ

ಶರೀರೇಂದ್ರಿಯಗಳ ಪಂಜರಕ್ಕೆ ಅಧ್ಯಕ್ಷನಾದ ಕರ್ಮಫಲಸಂಬಂಧಿಯಾದ ಜೀವನೆಂಬ ಆತ್ಮನಿರುವನು ಅವನು ಆಕಾಶಾದಿಗಳ ಹಾಗೆ ಬ್ರಹ್ಮದಿಂದ ಉತ್ಪನ್ನನಾಗುತ್ತಾನೆಯೊ ಅಥವಾ ಬ್ರಹ್ಮದಂತೆ ಉತ್ಪನ್ನನಾಗುವುದಿಲ್ಲವೊ ?—ಎಂದು ಶ್ರುತಿಗಳ ವಿರೋಧವು ಸಂಶಯವನ್ನುಂಟುಮಾಡುತ್ತದೆ ಕಲವು ಶ್ರುತಿಗಳು (ಬೃ ಉ ೨ ೧ ೨೩, ಮುಂ ಉ ೨ ೧ ೧) ಜೀವಾತ್ಮನನ್ನು ಬೆಂಕಿಯಿಂದ ಬರುವ ಕಿಡಿಗಳಿಗೆ ಹೋಲಿಸಿ ಅವನಿಗೆ ಬ್ರಹ್ಮದಿಂದ ಉತ್ಪತ್ತಿಯನ್ನು ಹೇಳುತ್ತವೆ ಇನ್ನು ಕೆಲವು ಶ್ರುತಿಗಳು ಅವಿಕಾರಿಯಾದ ಪರಬ್ರಹ್ಮವೇ ಕಾರ್ಯಪ್ರವೇಶದ ಮೂಲಕ ಜೀವಭಾವವನ್ನು ಹೊಂದಿದೆಯೆಂದು ತಿಳಿಸುತ್ತವೆ ಆದರೆ ಜೀವೋತ್ಪತ್ತಿಯನ್ನು ಶ್ರುತಿಗಳು ಹೇಳಿಲ್ಲ

ಜೀವನು ಹುಟ್ಟುತ್ತಾನೆ ಎಂಬುದು ಪೂರ್ವಪಕ್ಷ, ಏಕೆಂದರೆ ಹಾಗಾದರೆ ಏಕ ವಿಜ್ಞಾನದಿಂದ ಸರ್ವವಿಜ್ಞಾನವಾಗುವುದೆಂಬ ಪ್ರತಿಜ್ಞೆಗೆ ವಿರೋಧವು ಬರುವುದಿಲ್ಲ ಜೀವನು ಬೇರೊಂದು ತತ್ತ್ವವಾದರೆ ಪ್ರತಿಜ್ಞಾಭಂಗವಾಗುತ್ತದೆ ಅವಿಕಾರಿಯಾದ ಪರಮಾತ್ಮನೇ ಜೀವನೆಂಬುದು ಸರಿಯಲ್ಲ, ಏಕೆಂದರೆ ಇಬ್ಬರಿಗೂ ಲಕ್ಷಣ-ಭೇದವಿದೆ ಆಕಾಶಾದಿಗಳಂತೆ ವಿಭಕ್ತನಾಗಿರುವುದರಿಂದ ಜೀವನು ಕಾರ್ಯವಾಗಿರಬೇಕೆಂಬುದು ಸಿದ್ಧವಾಗುತ್ತದೆ ಕೆಲವು ಶ್ರುತಿಗಳಲ್ಲಿ ಜೀವನ ಉತ್ಪತ್ತಿಯನ್ನು ಹೇಳದಿದ್ದರೂ ಜೀವನಿಗೆ ಕಿಡಿಗಳೇ ಮೊದಲಾದ ದೃಷ್ಟಾಂತದಿಂದ ಉತ್ಪತ್ತಿಯನ್ನು ಹೇಳುವ ಬೇರೆ ಶ್ರುತಿಗಳಿರುವುದರಿಂದ ಆವನಿಗೆ ಉತ್ಪತ್ತಿಯಿದೆ ಎಂಬುದು ಯುಕ್ತವಾಗಿದೆ ಒಂದು ಕಡೆಯಲ್ಲಿ ಶ್ರುತಿಯಿಲ್ಲದಿರುವುದು ಇನ್ನೊಂದು ಕಡೆಯಲ್ಲಿ ಶ್ರುತಿಯು ಹೇಳಿರುವುದನ್ನು ನಿರಾಕರಿಸಲಾರದು ಪ್ರವೇಶ-ಶ್ರುತಿಯನ್ನೂ ಆತ್ಮನು ವಿಕಾರಪಡದೇ ಪ್ರವೇಶಿಸಿದನು ಎಂದು ಅರ್ಥಮಾಡಿಕೊಳ್ಳಬೇಕು

ಜೀವನು ಹುಟ್ಟುವುದಿಲ್ಲ ಎಂಬುದು ಸಿದ್ಧಾಂತ , ಏಕೆಂದರೆ ಉತ್ಪತ್ತಿಪ್ರಕರಣದಲ್ಲಿ ಜೀವನು ಉತ್ಪನ್ನನಾಗುವನು ಎಂದು ಹೇಳುವ ಶ್ರುತಿಯೇ ಇಲ್ಲ ಅವನು ನಿತ್ಯನೆಂದು ಶ್ರುತಿಗಳು ಹೇಳುತ್ತವೆ [1] ಸೂತ್ರದಲ್ಲಿರುವ ಚ-ಶಬ್ದವು ಆವನಿಗೆ ಅಜತ್ವಾದಿಗಳನ್ನು ಹೇಳುತ್ತದೆ ವಿಭಕ್ತನಾಗಿರುವುದರಿಂದ ಜೀವನೂ ವಿಕಾರವು, ವಿಕಾರವಾಗಿರುವುದರಿಂದ ಉತ್ಪತ್ತಿ

---

[1] (ಛಾಂ ಉ ೬ ೧೧ ೩, ೬ ೩ ೨, ೬ ೮ ೭, ಬೃ ಉ. ೪ ೪ ೨೫, ಕ ಉ ೧ ೨ ೧೮, ತೈ ಉ ೨ ೬

ಭಾವವು ಪರಬ್ರಹ್ಮನ ಅಸ್ತಿತ್ವವನ್ನೇ ಅವಲಂಬಿಸಿರುತ್ತದೆ.[1] ನಾಮ-ರೂಪಗಳ ವಿಂಗಡವನ್ನು ಹೇಳುವ ಶ್ರುತಿಯಿಂದ ಇದು ತಿಳಿದುಬರುತ್ತದೆ.

**ದ್ವೈ.**—'ಮನಸ್ಸಿನಿಂದ ವಿಜ್ಞಾನವು ಉತ್ಪನ್ನವಾಗುತ್ತದೆ' ಎಂಬ ವ್ಯಪದೇಶವು ಚರವಾದ ಮನಸ್ಸಿನ, ಅಚರವಾದ ವಸ್ತುಗಳ ಆಲೋಚನೆಯಿಂದ ವಿಜ್ಞಾನವುಂಟಾಗುತ್ತದೆಂದು ತಿಳಿಸುತ್ತದೆ: ಇದು ಭಾಗಾಪೇಕ್ಷೆಯಿಂದ ಮಾಡಿದ ವ್ಯಪದೇಶವೇ ಹೊರತು ವಿಜ್ಞಾನತತ್ತ್ವಾಪೇಕ್ಷೆಯಿಂದ ಮಾಡಿದ್ದಲ್ಲ [2]

---

[1] ಚರಾಚರವ್ಯಪಾಶ್ರಯಃ ತದ್ವ್ಯಪದೇಶಃ—ತದ್ವಾಚಿಶಬ್ದಃ, ಚರಾಚರವಾಚಿಶಬ್ದೋ ಬ್ರಹ್ಮಣ್ಯಭಾಕ್ತಃ ಮುಖ್ಯ ಏವ ; ಕುತಃ ? ಬ್ರಹ್ಮಭಾವಭಾವಿತ್ವಾತ್ ಸರ್ವಶಬ್ದಾನಾಂ ವಾಚಕಭಾವಸ್ಯ ; ನಾಮರೂಪವ್ಯಾಕರಣಶ್ರುತ್ಯಾ ಹಿ ತಥಾಽವಗತಮ್ (ಶ್ರೀಭಾಷ್ಯ).

[2] ಮನಸಶ್ಚ ವಿಜ್ಞಾನಮಿತಿ ವ್ಯಪದೇಶಶ್ಚರಾಚರೇಷ್ವಾಲೋಚನಾದ್ವಿಜ್ಞಾನಂ ಭವತೀತಿ ಭಾಗಾಪೇಕ್ಷಯಾ ಸ್ಯಾತ್ । ನ ವಿಜ್ಞಾನತತ್ತ್ವಾಪೇಕ್ಷಯಾ (ಮ. ಭಾ.).

## ೧೧. ಆತ್ಮಾಧಿಕರಣ

### ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ॥ ೧೭ ॥

೧೭ ಆತ್ಮನು ಹುಟ್ಟುವುದಿಲ್ಲ, ಏಕೆಂದರ ಶ್ರುತಿಯಿಲ್ಲ, ಮತ್ತು ಅವುಗಳ (ಎಂದರ ಶ್ರುತಿಗಳ) ಪ್ರಕಾರ ನಿತ್ಯನಾಗಿರುತ್ತಾನೆ

ಶರೀರೇಂದ್ರಿಯಗಳ ಪಂಜರಕ್ಕೆ ಅಧ್ಯಕ್ಷನಾದ ಕರ್ಮಫಲಸಂಬಂಧಿಯಾದ ಜೀವನೆಂಬ ಆತ್ಮನಿರುವನು. ಅವನು ಆಕಾಶಾದಿಗಳ ಹಾಗೆ ಬ್ರಹ್ಮದಿಂದ ಉತ್ಪನ್ನನಾಗುತ್ತಾನೆಯೊ ಅಥವಾ ಬ್ರಹ್ಮದಂತೆ ಉತ್ಪನ್ನನಾಗುವುದಿಲ್ಲವೊ ?—ಎಂದು ಶ್ರುತಿಗಳ ವಿರೋಧವು ಸಂಶಯವನ್ನುಂಟುಮಾಡುತ್ತದೆ ಕಲವು ಶ್ರುತಿಗಳು (ಬೃ ಉ ೨ ೧ ೨೩, ಮುಂ ಉ ೨. ೧ ೧) ಜೀವಾತ್ಮನನ್ನು ಬೆಂಕಿಯಿಂದ ಬರುವ ಕಿಡಿಗಳಿಗೆ ಹೋಲಿಸಿ ಅವನಿಗೆ ಬ್ರಹ್ಮದಿಂದ ಉತ್ಪತ್ತಿಯನ್ನು ಹೇಳುತ್ತವೆ ಇನ್ನು ಕೆಲವು ಶ್ರುತಿಗಳು ಅವಿಕಾರಿಯಾದ ಪರಬ್ರಹ್ಮವೇ ಕಾರ್ಯಪ್ರವೇಶದ ಮೂಲಕ ಜೀವಭಾವವನ್ನು ಹೊಂದಿದೆಯೆಂದು ತಿಳಿಸುತ್ತವೆ ಆದರೆ ಜೀವೋತ್ಪತ್ತಿಯನ್ನು ಶ್ರುತಿಗಳು ಹೇಳಿಲ್ಲ

ಜೀವನು ಹುಟ್ಟುತ್ತಾನೆ ಎಂಬುದು ಪೂರ್ವಪಕ್ಷ, ಏಕೆಂದರೆ ಹಾಗಾದರೆ ಏಕ ವಿಜ್ಞಾನದಿಂದ ಸರ್ವವಿಜ್ಞಾನವಾಗುವುದೆಂಬ ಪ್ರತಿಜ್ಞೆಗೆ ವಿರೋಧವು ಬರುವುದಿಲ್ಲ ಜೀವನು ಬೇರೊಂದು ತತ್ತ್ವವಾದರೆ ಪ್ರತಿಜ್ಞಾಭಂಗವಾಗುತ್ತದೆ ಅವಿಕಾರಿಯಾದ ಪರಮಾತ್ಮನೇ ಜೀವನೆಂಬುದು ಸರಿಯಲ್ಲ, ಏಕೆಂದರೆ ಇಬ್ಬರಿಗೂ ಲಕ್ಷಣ-ಭೇದವಿದೆ ಆಕಾಶಾದಿಗಳಂತೆ ವಿಭಕ್ತನಾಗಿರುವುದರಿಂದ ಜೀವನು ಕಾರ್ಯವಾಗಿರಬೇಕೆಂಬುದು ಸಿದ್ಧವಾಗುತ್ತದೆ ಕೆಲವು ಶ್ರುತಿಗಳಲ್ಲಿ ಜೀವನ ಉತ್ಪತ್ತಿಯನ್ನು ಹೇಳದಿದ್ದರೂ ಜೀವನಿಗೆ ಕಿಡಿಗಳೇ ಮೊದಲಾದ ದೃಷ್ಟಾಂತದಿಂದ ಉತ್ಪತ್ತಿಯನ್ನು ಹೇಳುವ ಬೇರೆ ಶ್ರುತಿಗಳಿರುವುದರಿಂದ ಅವನಿಗೆ ಉತ್ಪತ್ತಿಯಿದೆ ಎಂಬುದು ಯುಕ್ತವಾಗಿದೆ ಒಂದು ಕಡೆಯಲ್ಲಿ ಶ್ರುತಿಯಿಲ್ಲದಿರುವುದು ಇನ್ನೊಂದು ಕಡೆಯಲ್ಲಿ ಶ್ರುತಿಯು ಹೇಳಿರುವುದನ್ನು ನಿರಾಕರಿಸಲಾರದು ಪ್ರವೇಶ-ಶ್ರುತಿಯನ್ನೂ ಆತ್ಮನು ವಿಕಾರಪಡದೇ ಪ್ರವೇಶಿಸಿದನು ಎಂದು ಅರ್ಥಮಾಡಿಕೊಳ್ಳಬೇಕು

ಜೀವನು ಹುಟ್ಟುವುದಿಲ್ಲ ಎಂಬುದು ಸಿದ್ಧಾಂತ, ಏಕೆಂದರೆ ಉತ್ಪತ್ತಿಪ್ರಕರಣದಲ್ಲಿ ಜೀವನು ಉತ್ಪನ್ನನಾಗುವನು ಎಂದು ಹೇಳುವ ಶ್ರುತಿಯೇ ಇಲ್ಲ ಅವನು ನಿತ್ಯನೆಂದು ಶ್ರುತಿಗಳು ಹೇಳುತ್ತವೆ[1] ಸೂತ್ರದಲ್ಲಿರುವ ಚ-ಶಬ್ದವು ಅವನಿಗೆ ಅಜತ್ವಾದಿಗಳನ್ನು ಹೇಳುತ್ತದೆ ವಿಭಕ್ತನಾಗಿರುವುದರಿಂದ ಜೀವನೂ ವಿಕಾರವು, ವಿಕಾರವಾಗಿರುವುದರಿಂದ ಉತ್ಪತ್ತಿ

---

[1] (ಛಾಂ ಉ ೬ ೧೧ ೩, ೬ ೩ ೨, ೬ ೮ ೭, ಬೃ ಉ. ೪ ೪ ೨೫, ಕ ಉ ೧ ೨ ೧೮, ತೈ ಉ ೨ ೬

ಯುಳ್ಳವನು—ಎಂದು ಹೇಳಲಾಗುವುದಿಲ್ಲ; ಏಕೆಂದರೆ ಅವನಿಗೆ ಸ್ವತಃ ಪ್ರವಿಭಾಗವಿಲ್ಲ. ಅವನು ಸರ್ವವ್ಯಾಪಿಯೆಂದೂ ಸರ್ವಭೂತಾಂತರಾತ್ಮನೆಂದೂ ಶ್ರುತಿಯು (ಶ್ವೇ ಉ. ೬. ೧೧) ಹೇಳುತ್ತದೆ. ಆಕಾಶವು ಗಡಿಗೆ ಮೊದಲಾದುವುಗಳ ಸಂಬಂಧದಿಂದ ವಿಭಾಗವಾಗಿ ಕಾಣುವಂತೆ ಬುದ್ಧಿಯೇ ಮೊದಲಾದ ಉಪಾಧಿಗಳ ನಿಮಿತ್ತದಿಂದ ಆತ್ಮನಿಗೆ ವಿಭಾಗವು ತೋರುತ್ತದೆ[1] ಉಪಾಧಿಯ ಉತ್ಪತ್ತಿ-ಲಯಗಳಿಂದ ಜೀವನಿಗೆ ಉತ್ಪತ್ತಿ-ಲಯಗಳು ಆಗುತ್ತವೆಯೆಂದು ಶ್ರುತಿಯು ಹೇಳುತ್ತದೆ: 'ಈ ಆತ್ಮನು ಪ್ರಜ್ಞಾನಘನನು; (ಆತ್ಮನ ಭಿನ್ನತೆಯು) ಈ ಭೂತಗಳಿಂದ ಉಂಟಾಗಿ ಭೂತವರ್ಗದ ಲಯದೊಂದಿಗೆ ತಾನೂ ಲಯ ವಾಗುತ್ತದೆ'[2] (ಬೃ. ಉ ೪. ೫. ೧೩). ಅವಿಕಾರಿಯಾದ ಬ್ರಹ್ಮವೇ ಜೀವಭಾವವನ್ನು ಹೊಂದಿರುವುದರಿಂದ ಪ್ರತಿಜ್ಞೆಗೆ ವಿರೋಧವಿಲ್ಲ[3] ಇವರಿಬ್ಬರಿಗಿರುವ ಲಕ್ಷಣಭೇದವು ಉಪಾಧಿಯಿಂದಲೇ ಆಗಿದೆ. ಆದುದರಿಂದ ಆತ್ಮನು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ.

ವಿ.—'ಆತ್ಮನು ಹುಟ್ಟುವುದಿಲ್ಲ; ಏಕೆಂದರೆ ಶ್ರುತಿಯಿದೆ ಮತ್ತು ಅವುಗಳಲ್ಲಿ ಅವನ ನಿತ್ಯತ್ವವನ್ನು ಹೇಳಿದೆ' ಎಂಬುದು ಸೂತ್ರಾರ್ಥ

ಆತ್ಮನಿಗೆ ಉತ್ಪತ್ತಿಯಿಲ್ಲ ಎಂಬುದು ಸಿದ್ಧಾಂತ; ಏಕೆಂದರೆ ಅನುತ್ಪತ್ತಿ ಶ್ರುತಿಗಳಿವೆ. ಜೀವನೂ ಕಾರ್ಯನಾಗಿರುವುದರಿಂದಲೂ ಕಾರ್ಯಕಾರಣಗಳಿಗೆ ಭೇದವಿಲ್ಲದಿರುವುದ ರಿಂದಲೂ ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುತ್ತದೆಂಬ ಪ್ರತಿಜ್ಞೆಗೆ ಹಾನಿಯಾಗುವು ದಿಲ್ಲ. ಆದರೆ ಜೀವನು ಆಕಾಶಾದಿಗಳ ಹಾಗೆ ಉತ್ಪನ್ನನಾಗುತ್ತಾನೆಂದು ತಿಳಿಯಕೂಡದು. ಒಂದು ದ್ರವ್ಯವು ಬೇರೊಂದು ಅವಸ್ಥೆಯನ್ನು ಹೊಂದುವುದಕ್ಕೆ ಕಾರ್ಯವೆಂದು ಹೆಸರು.[4] ಈ ದೃಷ್ಟಿಯಿಂದ ಆತ್ಮನು ಕಾರ್ಯನಾಗಿದ್ದಾನೆ ಜೀವನಿಗೂ ಆಕಾಶವೇ ಮೊದಲಾದ ಅಚೇತನಗಳಿಗೂ ಈ ಭೇದವಿದೆ: ಆಕಾಶಾದಿಗಳು ಅನ್ಯಥಾಭಾವವನ್ನು ಹೊಂದುವಂತೆ ಜೀವನು ಹೊಂದುವುದಿಲ್ಲ ಜ್ಞಾನದ ಸಂಕೋಚ-ವಿಕಾಸಗಳೇ ಜೀವನ ಅನ್ಯಥಾಭಾವ. ಆಕಾಶಾದಿಗಳ ಸ್ವರೂಪ ಬದಲಾಗುವುದೇ ಅವುಗಳ ಅನ್ಯಥಾಭಾವ.[5] ಆದರೆ ಜೀವನಿಗೆ ಸ್ವರೂಪದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ ಭೋಗ್ಯ ಭೋಕ್ತೃ ನಿಯಂತೃ ಎಂಬ ತತ್ತ್ವತ್ರಯದಲ್ಲಿ ಭೋಗ್ಯಗತವಾದ ಉತ್ಪತ್ತ್ಯಾದಿಗಳು ನಿತ್ಯರಾದ ಭೋಕ್ತೃ

---

1 ಬುದ್ಧ್ಯಾದ್ಯುಪಾಧಿನಿಮಿತ್ತಂ ತ್ವಸ್ಯ ಪ್ರವಿಭಾಗಪ್ರತಿಭಾನಮಾಕಾಶಸ್ಯೇವ ಘಟಾದಿ-ಸಂಬಂಧನಿಮಿತ್ತಮ್ (ಸೂ. ಭಾ.).

2 ಪ್ರಜ್ಞಾನಘನ ಏವ: ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ।

3 ಪ್ರತಿಜ್ಞಾನುಪರೋಧೋಽಪ್ಯವಿಕೃತಸ್ಯೈವ ಬ್ರಹ್ಮಣೋ ಜೀವಭಾವಾಭ್ಯುಪಗಮಾತ್ (ಸೂ. ಭಾ.).

4 ಕಾರ್ಯತ್ವಂ ಹಿ ನಾಮೈಕಸ್ಯ ದ್ರವ್ಯಸ್ಯಾವಸ್ಥಾಂತರಾಪತ್ತಿಃ (ಶ್ರೀಭಾಷ್ಯ).

5 ಜ್ಞಾನಸಂಕೋಚವಿಕಾಸಲಕ್ಷಣೋ ಜೀವಸ್ಯಾನ್ಯಥಾಭಾವಃ, ವಿಯದಾದೇಸ್ತು ಸ್ವರೂ-ಪಾನ್ಯಥಾಭಾವಲಕ್ಷಣಃ (ಶ್ರೀಭಾಷ್ಯ).

ಗಳಿಗೆ ಇರುವುದಿಲ್ಲ; ಭೋಗ್ಯದ ಉತ್ಪತ್ತ್ಯಾದಿಗಳೂ ಅಪುರುಷಾರ್ಥಾಶ್ರಯತ್ವವೂ ನಿಯಂತೃವಿಗಿರುವುದಿಲ್ಲ; ಏಕೆಂದರೆ ನಿಯಂತೃವು ನಿತ್ಯನೂ ನಿರವದ್ಯನೂ ಸರ್ವಜ್ಞನೂ ಸತ್ಯಸಂಕಲ್ಪನೂ ಇಂದ್ರಿಯಾಧಿಪರ ಅಧಿಪತಿಯೂ ವಿಶ್ವಪತಿಯೂ ಆಗಿರುತ್ತಾನೆ.

**ಡ್ವೈ.**—'ಪರಮಾತ್ಮನಿಗೆ ಲಯವಿಲ್ಲ; ಏಕೆಂದರೆ ಅವನಿಗೆ ಲಯವು ಶ್ರುತವಾಗಿಲ್ಲ, ಶ್ರುತಿಗಳ ಪ್ರಕಾರ ಅವನು ನಿತ್ಯನು' ಎಂಬುದು ಸೂತ್ರಾರ್ಥ.

'ಅವನು ಇದೆಲ್ಲವನ್ನೂ ತಮಸ್ಸಿನಲ್ಲಿಯೇ ವಿಲೀನಗೊಳಿಸಿ ತಾನೂ ವಿಲೀನನಾಗುತ್ತಾನೆ'[1] ಎಂಬ ಶ್ರುತಿಯಿಂದ ಪರಮಾತ್ಮನಿಗೆ ಲಯವಿಲ್ಲವೆಂಬುದು ತಿಳಿದುಬರುತ್ತದೆ. ವಿಲೀನ-ಶಬ್ದವು 'ನಮ್ಮ ದೃಷ್ಟಿಗೆ ಗೂಢನಾಗಿದ್ದಾನೆ' ಎಂಬ ಅರ್ಥವನ್ನು ಸೂಚಿಸುತ್ತದೆ[2]

---

[1] ಸ ಇದಂ ಸರ್ವಂ ವಿಲಾಪ್ಯಾಂತಸ್ತಮಸಿ ವಿಲೀನಃ (ಮ. ಭಾ.).

[2] ವಿಲೀನಶಬ್ದೇನಾಪಿಹಿತತ್ವಮುಚ್ಯತೇ (ಮ. ಭಾ.).

# ೧೨. ಜ್ಞಾಧಿಕರಣ*

## ಜ್ಞೋಽತ ಏವ ॥ ೧೮ ॥

೧೮. ಆದುದರಿಂದಲೇ (ಜೀವಾತ್ಮನು) ನಿತ್ಯಚೈತನ್ಯಸ್ವರೂಪನು.

ಕಾಣಾದರ ಮತದಲ್ಲಿ ಹೇಳಿರುವ ಹಾಗೆ ಜೀವನು ಸ್ವತಃ ಅಚೇತನನಾಗಿ ಆಗಂತುಕ ಚೈತನ್ಯಸ್ವರೂಪನಾಗಿರುವನೊ ಅಥವಾ ಸಾಂಖ್ಯರ ಮತದಲ್ಲಿ ಹೇಳಿರುವಂತೆ ನಿತ್ಯಚೈತನ್ಯ-ಸ್ವರೂಪನಾಗಿರುವನೊ ?—ಎಂಬುದು ಸಂಶಯ. ಆತ್ಮನ ಚೈತನ್ಯವು ಆತ್ಮಮನಸ್ಸುಗಳ ಸಂಯೋಗದಿಂದ ಉಂಟಾಗುವುದರಿಂದ ಆಗಂತುಕವು—ಎಂಬುದು ಪೂರ್ವಪಕ್ಷ ; ಏಕೆಂದರೆ ಆತ್ಮನು ನಿತ್ಯಚೈತನ್ಯನಾಗಿದ್ದರೆ ನಿದ್ರೆ ಮೂರ್ಛೆ ಮೊದಲಾದ ಅವಸ್ಥೆಗಳಲ್ಲಿಯೂ ಚೈತನ್ಯ ವಿರಬೇಕಾದೀತು.

ಆತ್ಮನು ನಿತ್ಯಚೈತನ್ಯಸ್ವರೂಪನು—ಎಂಬುದು ಸಿದ್ಧಾಂತ. ಅವಿಕಾರಿಯಾದ ಪರ ಬ್ರಹ್ಮವೇ ಉಪಾಧಿಯ ಸಂಪರ್ಕದಿಂದ ಜೀವಭಾವವನ್ನು ಹೊಂದಿರುವುದು.[1] 'ವಿಜ್ಞಾನವೂ ಆನಂದವೂ ಆದ ಬ್ರಹ್ಮವು'[2] (ಬೃ. ಉ. ೩. ೯. ೨೮), 'ತಾನು ಅಸುಪ್ತನಾಗಿ ಸುಪ್ತ-ವಾಗಿರುವ ವಿಷಯಗಳನ್ನು ನೋಡುತ್ತಾನೆ'[3] (ಬೃ. ಉ. ೪. ೩. ೧೧)—ಇವೇ ಮೊದ ಲಾದ ಶ್ರುತಿಗಳ ಪ್ರಕಾರ[4] ಜೀವನಿಗೆ ನಿತ್ಯಚೈತನ್ಯಸ್ವರೂಪತ್ವವಿದೆ. ಚೈತನ್ಯವು ಆತ್ಮನ ಸ್ವರೂಪವಾಗಿದ್ದರೂ ಇಂದ್ರಿಯಗಳು ವ್ಯರ್ಥವಾಗುವುದಿಲ್ಲ ; ಏಕೆಂದರೆ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಪರಿಚ್ಛೇದಗೊಳಿಸುತ್ತವೆ. 'ಮೂಸುವುದಕ್ಕೆ ಘ್ರಾಣೇಂದ್ರಿ-ಯವು'[5] (ಛಾಂ. ಉ. ೮. ೧೨. ೪) ಎಂದು ಶ್ರುತಿಯು ಹೇಳುತ್ತದೆ. ಸುಷುಪ್ತಿಯಲ್ಲಿಯೂ ಜ್ಞಾನವಿರುತ್ತದೆ. 'ಅವನು ಸುಷುಪ್ತಿಯಲ್ಲಿ ನೋಡದಿರುವುದಕ್ಕೆ ಕಾರಣವೇನೆಂದರೆ ಆಗ ಅವನು (ನಿಜವಾಗಿ) ನೋಡುತ್ತಿದ್ದರೂ ನೋಡುವುದಿಲ್ಲ ; ಏಕೆಂದರೆ (ದ್ರಷ್ಟೃವು) ಅವಿ-ನಾಶಿಯಾಗಿರುವುದರಿಂದ ದ್ರಷ್ಟೃವಿನ ದೃಷ್ಟಿಗೆ ನಾಶವಿಲ್ಲ. ಆದರೆ ನೋಡಬಹುದಾದ ಆ ಎರಡನೆಯ ವಸ್ತುವು ತನಗಿಂತ ಬೇರೆಯಾಗಿ ವಿಂಗಡವಾಗಿರುವುದಿಲ್ಲ'[6] (ಬೃ. ಉ. ೪. ೩.

---

* ಇದು ಮತ್ತು ಮುಂದಿನ ಸೂತ್ರ ಮಧ್ವಭಾಷ್ಯದಲ್ಲಿ ಜ್ಞಾಧಿಕರಣ ಎನಿಸಿದೆ.

[1] ಪರಮೇವ ಬ್ರಹ್ಮಾವಿಕೃತಮುಪಾಧಿಸಂಪರ್ಕಾಜ್ಜೀವಭಾವೇನಾವತಿಷ್ಠತೇ (ಸೂ.ಭಾ )

[2] ವಿಜ್ಞಾನಮಾನಂದಂ ಬ್ರಹ್ಮ ।

[3] ಅಸುಪ್ತಃ ಸುಪ್ತಾನಭಿಚಾಕಶೀತಿ ।

[4] ಬೃ. ಉ. ೪. ೩. ೧೪, ೪. ೫. ೧೩; ಛಾಂ.ಉ. ೮. ೧೨. ೪; ತೈ. ಉ. ೨. ೧ ನೋಡಿ

[5] ಗಂಧಾಯ ಘ್ರಾಣಮ್ ।

[6] ಯದ್ವೈ ತನ್ನ ಪಶ್ಯತಿ, ಪಶ್ಯನ್ ವೈ ತನ್ನ ಪಶ್ಯತಿ, ನ ಹಿ ದ್ರಷ್ಟುರ್ದೃಷ್ಟೇರ್ವಿಪರಿ-ಲೋಪೋ ವಿದ್ಯತೇಽವಿನಾಶಿತ್ವಾತ್ । ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ಪಶ್ಯೇತ್ ।

೨೩) ಎಂದು ಶ್ರುತಿಯೇ ಹೇಳುತ್ತದೆ ವಿಷಯಾಭಾವದಿಂದ ಈ ಅಚೇತನವುಂಟಾಗಿದೆಯೇ ಹೊರತು ಚೈತನ್ಯಾಭಾವದಿಂದಲ್ಲ[1] ಪ್ರಕಾಶಿಸಲ್ಪಡುವ ವಸ್ತುವಿಲ್ಲದಿರುವಾಗ ಆಕಾಶದಲ್ಲಿರುವ ಬೆಳಕು ಹೇಗೆ ತೋರುವುದಿಲ್ಲವೋ ಹಾಗೆ ವೈಶೇಷಿಕಾದಿಗಳ ತರ್ಕವು ಶ್ರುತಿ-ವಿರೋಧವಾಗಿರುವುದರಿಂದ ಆಭಾಸವಾಗಿರುತ್ತದೆ ಆದುದರಿಂದ ಆತ್ಮನು ನಿತ್ಯಚೈತನ್ಯ-ಸ್ವರೂಪನು

ವಿ —'ಆದುದರಿಂದಲೇ ಜ್ಞಾತೃವು' ಎಂಬುದು ಸೂತ್ರಾರ್ಥ

ಸುಗತ-ಕಪಿಲರು ಹೇಳುವ ಹಾಗೆ ಆತ್ಮಸ್ವರೂಪವು ಚಿನ್ಮಾತ್ರವೊ ? ಅಥವಾ ಕಣಾದನು ಹೇಳುವಂತೆ ಆತ್ಮಸ್ವರೂವು ಅಚಿತ್ತಾಗಿದ್ದರೂ ಆಗಂತುಕಚೈತನ್ಯವೊ? ಅಥವಾ ಜ್ಞಾತೃತ್ವವೊ ?—ಎಂಬುದು ಸಂಶಯ ಆತ್ಮಸ್ವರೂಪವು ಚಿನ್ಮಾತ್ರವೇ ಎಂಬುದು ಮೊದಲನೆಯ ಪೂರ್ವಪಕ್ಷ, ಏಕಂದರೆ 'ಯಾವನು ವಿಜ್ಞಾನದಲ್ಲಿ ನೆಲಸಿರುವನೊ' (ಬೃ ಉ ೩ ೭ ೨೨) ಮತ್ತು 'ವಿಜ್ಞಾನವು ಯಜ್ಞಗಳನ್ನೂ ಕರ್ಮಗಳನ್ನೂ ಮಾಡುತ್ತದೆ' (ತೈ ಉ ೨ ೫) ಎಂದು ಶ್ರುತಿಗಳು ಹೇಳುತ್ತವೆ ಇನ್ನೊಂದು ಪೂರ್ವಪಕ್ಷದ ಪ್ರಕಾರ ಆತ್ಮನ ಸ್ವರೂಪವು ಜ್ಞಾನವೂ ಅಲ್ಲ, ಜ್ಞಾತೃತ್ವವೂ ಅಲ್ಲ, ಆಗಂತುಕ-ಚೈತನ್ಯವಾಗಿದ

ಜ್ಞಾತೃತ್ವವೇ ಅವನ ಸ್ವರೂಪ ಎಂಬುದು ಸಿದ್ಧಾಂತ ಈ ಆತ್ಮನು ಜ್ಞಾತೃಸ್ವರೂಪನೇ, ಜ್ಞಾನವೂ ಅಲ್ಲ, ಜಡವೂ ಅಲ್ಲ,[2] ಏಕೆಂದರೆ ಶ್ರುತಿಗಳಿವೆ, ಛಾಂದೋಗ್ಯದಲ್ಲಿ ಮುಕ್ತಾಮುಕ್ತರ ಸ್ವರೂಪವನ್ನು ಹೀಗೆ ಹೇಳಿದ 'ಯಾವನು "ಇದನ್ನು ಮೂಸುತ್ತೇನೆ" ಎಂದು ಅರಿತುಕೊಂಡಿರುವನೊ ಅವನು ಅತ್ಮನು'[3] (೮ ೧೨ ೪), 'ಅವನು ಮನಸ್ಸಿನಿಂದ ಬ್ರಹ್ಮಲೋಕದಲ್ಲಿರುವ ಈ ಕಾಮಗಳನ್ನೆಲ್ಲ ನೋಡುತ್ತ ರಮಿಸುತ್ತಾನೆ'[4] (೮ ೧೨ ೫), 'ಯಾವನ ಕಾಮಗಳು ಸತ್ಯವೊ, ಸಂಕಲ್ಪಗಳು ಸತ್ಯವೊ'[5] (೮ ೧ ೫) ಇತ್ಯಾದಿ ಬೃಹದಾರಣ್ಯಕವೂ ಹೀಗೆ ಹೇಳುತ್ತದೆ 'ಆ ಆತ್ಮನು ಯಾವನು ? ಇಂದ್ರಿಯಗಳ ಮಧ್ಯದಲ್ಲಿ ಮತ್ತು ಹೃದಯದಲ್ಲಿ ಇರುವವನೂ ಜ್ಯೋತಿಃಸ್ವರೂಪನೂ ಆದ ಈ ಪುರುಷನು'[6] (೪ ೩ ೭), 'ವಿಜ್ಞಾತೃವನ್ನು ಯಾವುದರಿಂದ ತಿಳಿದುಕೊಂಡಾನು ?' (೪ ೫ ೧೫) ಇತ್ಯಾದಿ

---

[1] ವಿಷಯಾಭಾವಾದಿಯಮಚೇತಯಮಾನತಾ ನ ಚೈತನ್ಯಾಭಾವಾದಿತಿ (ಸೂ ಭಾ.),

[2] ಅಯಮಾತ್ಮಾ ಜ್ಞಾತೃಸ್ವರೂಪ ಏವ, ನ ಜ್ಞಾನಮಾತ್ರಮ್, ನಾಪಿ ಜಡಸ್ವರೂಪಃ (ಶ್ರೀಭಾಷ್ಯ)

[3] ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ।

[4] ಮನಸೈವೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ ।

[5] ಸತ್ಯಕಾಮಃ ಸತ್ಯಸಂಕಲ್ಪಃ ।

[6] ಕತಮ ಆತ್ಮೇತಿ, ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ।

[7] ವಿಜ್ಞಾತಾರಮರೇ ಕೇನ ವಿಜಾನೀಯಾತ್ ?

ದ್ವೈ—.'ಜೀವನೂ ಕೂಡ ಪರಮಾತ್ಮನಿಂದಲೇ ಹುಟ್ಟುತ್ತಾನೆ' ಎಂಬುದು ಸೂತ್ರಾರ್ಥ

ಜೀವನೂ ಕೂಡ ಪರಮಾತ್ಮನಿಂದಲೇ ಹುಟ್ಟುತ್ತಾನೆ; ಏಕೆಂದರೆ ಶ್ರುತಿಯು ಪ್ರಮಾಣವಿದೆ. [1] 'ಅವಿನಾಶಿಗಳಾದ ಈ ಚಿದಾತ್ಮರೆಲ್ಲ ಪರಂಜ್ಯೋತಿಯನ್ನು ಪ್ರವೇಶಿಸಿರುತ್ತಾರೆ ಮತ್ತು ಅವನಿಂದಲೇ ಹುಟ್ಟುತ್ತಾರೆ; ಅವರಿಗೆ ಎಂದಿಗೂ ನಾಶವಿಲ್ಲ' ಎಂದು ಕಾಷಾಯಣಶ್ರುತಿಯು ಹೇಳಿರುತ್ತದೆ.

ಯುಕ್ತೇಶ್ಚ* ॥ ೨. ೩. ೧೯ ॥

೧೯. (ಜೀವನೂ ಹುಟ್ಟುತ್ತಾನೆ) ಎಂಬ ಸಂಭವವಿರುವುದರಿಂದಲೂ.

ಜೀವನು ನಿತ್ಯನಾಗಿದ್ದರೂ ಅವನ ಉಪಾಧಿಯ ಅಪೇಕ್ಷೆಯಿಂದ ಅವನು ಹುಟ್ಟುತ್ತಾನೆ ಎಂಬುದು ಯುಕ್ತವಾಗಿರುತ್ತದೆ.[2]

---

[1] ಜೀವೋಽಪ್ಯತ ಏವ ಪರಮೇಶ್ವರಾದುತ್ಪದ್ಯತೇ । ಶಬ್ದಾದೇವ (ಮ. ಭಾ.).

* ಈ ಸೂತ್ರವು ಶಾಂಕರಭಾಷ್ಯದಲ್ಲಾಗಲಿ ಶ್ರೀಭಾಷ್ಯದಲ್ಲಾಗಲಿ ಕಂಡುಬರುವುದಿಲ್ಲ.

[2] ನಿತ್ಯಸ್ಯಾಪಿ ಹಿ ಜೀವಸ್ಯೋಪಾಧ್ಯಪೇಕ್ಷಯೋತ್ಪತ್ತಿರ್ಯುಜ್ಯತೇ (ಮ. ಭಾ.).

## ೧೩. ಉತ್ಕ್ರಾಂತಿಗತ್ಯಧಿಕರಣ

(ಸೂ. ೧೯–೩೨)

**ಉತ್ಕ್ರಾಂತಿಗತ್ಯಾಗತೀನಾಮ್* || ೧೯ ||**

೧೯. ಉತ್ಕ್ರಾಂತಿ, ಗಮನ, ಆಗಮನ—(ಇವುಗಳ ಶ್ರವಣವಿರುವುದರಿಂದ ಜೀವನು ಅಣುಪರಿಮಾಣವುಳ್ಳವನು).

ಈಗ ಜೀವನ ಪರಿಮಾಣವು ಯಾವುದು ಎಂಬುದನ್ನು ಯೋಚಿಸಲಾಗುತ್ತದೆ. ಜೀವನು ಅಣುಪರಿಮಾಣವುಳ್ಳವನೋ, ಮಧ್ಯಮಪರಿಮಾಣವುಳ್ಳವನೊ ಅಥವಾ ಮಹಾ ಪರಿಮಾಣವುಳ್ಳವನೊ ?—ಎಂಬುದು ಸಂಶಯ.

ಇಲ್ಲಿ ಮೊದಲು ಒದಗುವ ಪೂರ್ವಪಕ್ಷವು ಹೀಗಿದೆ: ಜೀವನ ಉತ್ಕ್ರಮಣ ಗಮನ ಆಗಮನ—ಇವುಗಳನ್ನು ಶ್ರುತಿಗಳು ಹೇಳಿರುವುದರಿಂದ ಪರಿಚ್ಛಿನ್ನನು ಮತ್ತು ಅಣುಪರಿಮಾಣವುಳ್ಳವನು. 'ಅವನು ಉತ್ಕ್ರಮಿಸುವಾಗ ಇವೆಲ್ಲವುಗಳೊಡನೆ ಉತ್ಕ್ರಮಿಸುತ್ತಾನೆ'[1] (ಕೌ. ಉ ೩. ೩.) ಎಂಬಲ್ಲಿ ಉತ್ಕ್ರಾಂತಿಯನ್ನು ಹೇಳಿದೆ. 'ಈ ಲೋಕದಿಂದ ಯಾರ್ಯಾರು ಹೋಗುತ್ತಾರೆಯೊ ಅವರೆಲ್ಲ ಚಂದ್ರನನ್ನೇ ಸೇರುತ್ತಾರೆ'[2] (ಕೌ. ಉ. ೧. ೨) ಎಂಬಲ್ಲಿ ಗಮನವನ್ನು ಹೇಳಿದೆ. 'ಆ ಲೋಕದಿಂದ ಈ ಲೋಕಕ್ಕೆ ಕರ್ಮಕ್ಕಾಗಿ ಪುನಃ ಬರುತ್ತಾನೆ'[3] (ಬೃ. ಉ. ೪. ೪. ೬) ಎಂಬಲ್ಲಿ ಆಗಮನವನ್ನು ಹೇಳಿದೆ. ಜೀವನು ವಿಭುವಾಗಿದ್ದರೆ ಚಲನವು ಹೊಂದುವುದಿಲ್ಲ ಪರಿಚ್ಛೇದವನ್ನು ಒಪ್ಪಿಕೊಂಡರೆ ಆತ್ಮನು ಅಣುಪರಿಮಾಣವುಳ್ಳವನೆಂದೂ ಒಪ್ಪಿಕೊಳ್ಳಬೇಕಾಗುತ್ತದೆ ; ಏಕೆಂದರೆ ಆತ್ಮನು ಶರೀರ ಪರಿಮಾಣವುಳ್ಳವನೆಂಬುದನ್ನು ಆರ್ಹತಮತಪರೀಕ್ಷೆಯಲ್ಲಿ ನಿರಾಕರಿಸಿದೆ

ವಿ.—ಆತ್ಮನ ಜ್ಞಾತೃತ್ವವು ಸ್ವಾಭಾವಿಕವಾಗಿದ್ದರೆ ಅವನಿಗೆ ಎಲ್ಲೆಲ್ಲಿಯೂ ಜ್ಞಾನೋಪಲಬ್ಧಿಯುಂಟಾಗುತ್ತದೆ—ಎಂಬ ಪೂರ್ವಪಕ್ಷಕ್ಕೆ ಈ ಸೂತ್ರವು ಉತ್ತರವಾಗಿದೆ ಆತ್ಮನು ಸರ್ವಗತನಲ್ಲ, ಅಣುಪರಿಮಾಣವುಳ್ಳವನು ; ಏಕೆಂದರೆ ಅವನ ಉತ್ಕ್ರಮಣ-

---

* ಮಧ್ವಭಾಷ್ಯದಲ್ಲಿ ಈ ಅಧಿಕರಣವು ಗುಣಾದ್ವಾಽಽಲೋಕವತ್ ಎಂಬ ಸೂತ್ರದಲ್ಲಿಯೇ ಮುಗಿಯುತ್ತದೆ.

† ಶಾಂಕರಭಾಷ್ಯದಲ್ಲಿ ಸೂ ೧೯-೨೮ ಪೂರ್ವಪಕ್ಷದ ಸೂತ್ರಗಳಾಗಿದ್ದು ೨೯ನೆಯ ಸೂತ್ರದಲ್ಲಿ ಸಿದ್ಧಾಂತವನ್ನು ಪ್ರತಿಪಾದಿಸಿದೆ. ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ಈ ಅಧಿಕರಣದ ಮೊದಲನೆಯ ಸೂತ್ರವೇ ಸಿದ್ಧಾಂತವಾಗಿದೆ.

1 ಸ ಯದಾಽಸ್ಮಾಚ್ಛರೀರಾದುತ್ಕ್ರಾಮತಿ ಸಹೈವೈತೈಃ ಸರ್ವೈರುತ್ಕ್ರಾಮತಿ ।

2 ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ ।

3 ತಸ್ಮಾಲ್ಲೋಕಾತ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ ।

ಗಮನಾಗಮನಗಳನ್ನು ಶ್ರುತಿಯು ಹೇಳುತ್ತದೆ. ಜೀವನು ವಿಭುವಾಗಿದ್ದರೆ ಇಂಥ ಚಲನವು ಸಾಧ್ಯವಾಗುತ್ತಿರಲಿಲ್ಲ

ದ್ವೈ —ಉತ್ಕ್ರಮಣ-ಗಮನಾಗಮನಗಳಿರುವುದರಿಂದ ಜೀವನು ಅಣುವೇ, ವಿಭುವಲ್ಲ.[2]

## ಸ್ವಾತ್ಮನಾ ಚೋತ್ತರಯೋಃ ॥ ೨೦ ॥

೨೦. ಮುಂದೆ ಉಂಟಾಗುವ (ಗಮನಾಗಮನಗಳು) ತಮ್ಮ ಆತ್ಮನೊಡನೆ ಸಂಬಂಧಿಸಿರುವುದರಿಂದಲೂ (ಆತ್ಮನು ಅಣುಪರಿಮಾಣವುಳ್ಳವನು.)

ಜೀವನು ಒಂದು ವೇಳೆ ಚಲಿಸದಿದ್ದರೂ ಕರ್ಮಕ್ಷಯದಿಂದ ದೇಹಸ್ವಾಮ್ಯವು ಹೋಗುವುದರಿಂದ ಅವನಿಗೆ ಉತ್ಕ್ರಾಂತಿಯಾಗಬಹುದು. ಆದರೆ ಗಮನಾಗಮನಗಳು ಅಚಲನಾದವನಿಗೆ ಸಂಭವಿಸುವುದೇ ಇಲ್ಲ ; ಏಕೆಂದರೆ ಗಮನಾಗಮನಗಳು ಕರ್ತೃವಿನಲ್ಲಿರುವ ಕ್ರಿಯೆಗಳಾಗಿರುತ್ತವೆ. ಈ ಚಲನಗಳು ಅಣುಪರಿಮಾಣವುಳ್ಳ ಕರ್ತೃವಿಗೇ ಸಂಭವಿಸುತ್ತವೆ. ಹೀಗೆ ಗಮನಾಗಮನಗಳಿರುವಾಗ ಉತ್ಕ್ರಾಂತಿ—ಎಂದರೆ ದೇಹವನ್ನು ಬಿಟ್ಟು ಹೋಗುವುದು ಎಂದೇ ಆಗುತ್ತದೆ. ಶರೀರದ ಅನೇಕ ಪ್ರದೇಶಗಳಿಂದ ಜೀವನು ಉತ್ಕ್ರಮಿಸುತ್ತಾನೆಂದು ಶ್ರುತಿಗಳು ಹೇಳುತ್ತವೆ (ಬೃ. ಉ ೪ ೪ ೨). ಶರೀರದ ಒಳಗಡೆಯೂ ಜೀವನಿಗೆ ಗಮನಾಗಮನಗಳಿರುವುವೆಂದು ಇನ್ನು ಕೆಲವು ಶ್ರುತಿಗಳು ಹೇಳುತ್ತವೆ. ಅವನು ತೇಜೋಮಾತ್ರೆಗಳನ್ನು ಸಂಪೂರ್ಣವಾಗಿ ತೆಗೆದುಕೊಂಡವನಾಗಿ ಹೃದಯವನ್ನೇ ಬಂದು ಸೇರುತ್ತಾನೆ'[3] (ಬೃ. ಉ. ೪. ೪. ೧) ಇತ್ಯಾದಿ.

ವಿ.—ಅಚಲನಾದ ಆತ್ಮನಿಗೆ ಶರೀರವಿಯೋಗರೂಪವಾದ ಉತ್ಕ್ರಾಂತಿಯು ಸಾಧ್ಯವಾದರೂ ಗಮನಾಗಮನಗಳು ಸಂಭವಿಸುವುದಿಲ್ಲ ಆದ ದರಿಂದ ಈ ಚಲನಗಳು ಆತ್ಮನಿಂದಲೇ ಆಗುತ್ತವೆ[4]

ದ್ವೈ.—'(ಪೌಷ್ಯಾಯಣಶ್ರುತಿಯು) ಉತ್ತರವಾಕ್ಯಗಳ ಪ್ರಕಾರ ಜೀವನ ಉತ್ಕ್ರಮಣಾದಿಗಳು ಪರಮಾತ್ಮನೊಂದಿಗೆ ಆಗುತ್ತವೆ, (ಸ್ವತಃ ಅಲ್ಲ)' ಎಂಬುದು ಸೂತ್ರಾರ್ಥ.

---

[1] 'ಆ ಜ್ಯೋತಿಯ ಸಹಾಯದಿಂದ ಈ ಆತ್ಮನು ಕಣ್ಣಿನ ಮೂಲಕ ಅಥವಾ ತಲೆಯ ಮೂಲಕ ಅಥವಾ ಯಾವುದಾದರೂ ಶರೀರದೇಶದ ಮೂಲಕ ನಿಷ್ಕ್ರಮಿಸುತ್ತಾನೆ' ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ಮೂರ್ಧ್ನೋ ವಾ, ಅನ್ಯೇಭ್ಯೋ ವಾ ಶರೀರದೇಶೇಭ್ಯಃ। ಗಮನಾಗಮನಾದಿಗಳಿಗೆ ಕೌ. ಉ. ೩. ೨, ಬೃ. ಉ ೪. ೪. ೬ ನೋಡಿ.

[2] ಹೇತೂನಾಂ ಸಕಾಶಾದಣುರೇವ (ಮ. ಭಾ.).

[3] ಸ ಏತಾಸ್ತೇಜೋಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ।

[4] ಅತಸ್ತೇ ಸ್ವಾತ್ಮನ್ಯೇವ ಸಂಪಾದ್ಯೇ (ಶ್ರೀಭಾಷ್ಯ).

ಆ ಉತ್ತರವಾಕ್ಯಗಳು ಹೀಗಿವೆ: 'ಅವನು ತನ್ನಲ್ಲಿರುವ ಪರಮಾತ್ಮನೊಂದಿಗೆ ಗರ್ಭವನ್ನು ಪ್ರವೇಶಿಸುತ್ತಾನೆ. ಹುಟ್ಟುತ್ತಾನೆ ಮತ್ತು ಕರ್ಮವನ್ನು ಮಾಡುತ್ತಾನೆ'[1] ಮತ್ತು 'ಪರಮಾತ್ಮನೇ ಜೀವನು ಜೀವಿಸುವ ಹಾಗೆ ಮಾಡುತ್ತಾನೆ'[2]

## ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ || ೨೧ ||

೨೧. ಅವಲ್ಲವೆಂಬ ಶ್ರುತಿಯಿರುವುದರಿಂದ ಅಣುವಲ್ಲವೆಂದರೆ ಸರಿಯಲ್ಲ; ಏಕೆಂದರೆ ಇನ್ನೊಬ್ಬನ ಪ್ರಕರಣವಾಗಿರುತ್ತದೆ.

ಆತ್ಮನು ಅಣುವಲ್ಲ ; ಏಕೆಂದರೆ 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಜನ್ಮರಹಿತನೂ ಮಹಾಂತನೂ ಆದ ಆ ಈ ಆತ್ಮನು ಹೃದಯಾಕಾಶದಲ್ಲಿರುತ್ತಾನೆ'[3] (ಬೃ. ಉ. ೪. ೪ ೨೨), 'ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುತ್ತಾನೆ',[4] 'ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮ'[5] (ತೈ. ಉ. ೨. ೧)—ಎಂದು ಅಣುತ್ವಕ್ಕೆ ವಿರುದ್ಧವಾದ ಶ್ರುತಿಯಿದೆ ಎಂಬ ಪೂರ್ವಪಕ್ಷವು ಸರಿಯಲ್ಲ ; ಏಕೆಂದರೆ ಅಣುಪರಿಮಾಣಕ್ಕಿಂತ ಬೇರೆ ಪರಿಮಾಣವನ್ನು ಹೇಳುವ ಶ್ರುತಿಯು ಪರಮಾತ್ಮನ ಪ್ರಕರಣದಲ್ಲಿ ಬಂದಿದೆ. ಸಾಮಾನ್ಯವಾಗಿ ವೇದಾಂತವಾಕ್ಯಗಳಲ್ಲಿ ಪರಮಾತ್ಮನೇ ಜ್ಞಾತವ್ಯನಾದುದರಿಂದ ಪ್ರಧಾನ ವಿಷಯವಾಗಿದ್ದಾನೆ ಮತ್ತೆ, 'ವಿರಜನೂ ಅವ್ಯಾಕೃತಕ್ಕಿಂತಲೂ ವ್ಯತಿರಿಕ್ತನೂ'[6] (ಬೃ ಉ ೪. ೪. ೨೦) ಎಂಬ ಶ್ರುತಿಯು ಪರಮಾತ್ಮನು ವೇದಾಂತವಾಕ್ಯಗಳ ವಿಷಯನೆಂದು ವಿಶೇಷವಾಗಿಹೇಳುತ್ತವೆ. ಆದುದರಿಂದ ಪರಿಮಾಣಾಂತರವನ್ನು ಶ್ರುತಿಯಲ್ಲಿ ಹೇಳಿರುವುದು ಪರಮಾತ್ಮನ ವಿಷಯವಾದುದರಿಂದ ಜೀವನು ಅಣು ಎಂಬುದಕ್ಕೆ ವಿರುದ್ಧವಾಗಿರುವುದಿಲ್ಲ.

ವಿ.—**ಸ ವಾ ಏಷ ಮಹಾನಜ ಆತ್ಮಾ** (ಬೃ. ಉ. ೪ ೪. ೨೨) ಎಂಬಲ್ಲಿ ಆತ್ಮನಿಗೆ ಮಹತ್ತ್ವವನ್ನು ಹೇಳಿರುವುದರಿಂದ ಅವನು ಅಣುವಲ್ಲವೆಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಪರಮಾತ್ಮನು ಈ ವಾಕ್ಯದ ವಿಷಯವು ಈ ಅಧ್ಯಾಯದ ಪ್ರಾರಂಭದಲ್ಲಿ ಜೀವನ ವಿಷಯವು ಬಂದಿದ್ದರೂ ೪ ೩. ೭—೪. ೪. ೨೨ರ ಮಧ್ಯದಲ್ಲಿ ಪರಮಾತ್ಮನ ವಿಷಯವು ಬಂದಿರುತ್ತದೆ 'ಯಾವನಿಗೆ ಆತ್ಮನು ಅನುಲಬ್ಧನಾಗಿರುವನೊ ಪ್ರತಿಬುದ್ಧ

---

[1] ಸ ಏತೇನೈವ ಸ್ವಾತ್ಮನಾ ಪರೇಣೇಮಂ ಗರ್ಭಮನುಪ್ರವಿಶತಿ ಪರೇಣ ಜಾಯತೇ ಪರೇಣ ಕರ್ಮ ಕರುತೇ (ಮ. ಭಾ).

[2] ಏಷ ಹ್ಯೇನಂ ಜೀವಮಭಿಜೀವಯತಿ (ಮ ಭಾ).

[3] ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿಂಛೇತೇ ।

[4] ಆಕಾಶವತ್ ಸರ್ವಗತಶ್ಚ ನಿತ್ಯಃ ।

[5] ಸತ್ಯಂ ಜ್ಞಾನಮನಂತಂ ಬ್ರಹ್ಮ ।

[6] ವಿರಜಃ ಪರ ಆಕಾಶಾತ್ ।

ನಾಗಿರುವನೊ'[1] (ಬೃ ಉ ೪ ೪ ೧೩) ಈ ಆತ್ಮನನ್ನು ಮಹತ್ ಎಂದು ಹೇಳಿದೆಯೇ ಹೊರತು ಜೀವನನಲ್ಲ.

ದ್ವೈ —ಅಣುತ್ವಕ್ಕೆ ವಿರುದ್ಧವಾದ ಮಹತ್ತ್ವವನ್ನು ಬೋಧಿಸತಕ್ಕ 'ಚೇತನರೂ ನಿರ್ಗುಣರೂ ಆದ ಆತ್ಮರು ವ್ಯಾಪ್ತರು'[2] ಎಂಬ ಶ್ರುತಿಯಿರುವುದರಿಂದ ಜೀವನು ಅಣು ವಲ್ಲವೆಂದು ಹೇಳಕೂಡದು ; ಏಕೆಂದರೆ ಆ ಶ್ರುತಿಯು ಬ್ರಹ್ಮಪರವಾಗಿದೆ ಒಬ್ಬನೇ ಆದ ಭಗವಂತನನ್ನು ಏಕವಚನದಲ್ಲಿಯೂ ದ್ವಿವಚನದಲ್ಲಿಯೂ ಬಹುವಚನದಲ್ಲಿಯೂ ಹೇಳಿದೆ ಯೆಂದು ಭವಿಷ್ಯತ್ಪುರಾಣವು ಹೇಳುತ್ತದೆ

## ಸ್ವಶಬ್ದೋನ್ಮಾನಾಭ್ಯಾಂ ಚ || ೨೨ ||

೨೨. ಸ್ವಶಬ್ದ, ಉನ್ಮಾನ—ಇವುಗಳಿಂದಲೂ (ಆತ್ಮನು ಅಣುವೆಂದು ತಿಳಿಯ ಬೇಕು).

ಶ್ರುತಿಯಲ್ಲಿ ಸಾಕ್ಷಾತ್ತಾಗಿ ಅಣುತ್ವವಾಚಕಶಬ್ದವಿರುವುದರಿಂದ ಆತ್ಮನು ಅಣುವು: 'ಯಾವುದರಲ್ಲಿ ಪ್ರಾಣವು ಪಂಚಪ್ರಕಾರವಾಗಿ ಪ್ರವೇಶಿಸಿರುವುದೊ ಅಲ್ಲಿಯೇ ಈ ಅಣು ವಾದ ಆತ್ಮನನ್ನು ಚೇತಸ್ಸಿನಿಂದ ತಿಳಿಯಬೇಕು'[3] (ಮುಂ. ಉ. ೩. ೧. ೯) ಇಲ್ಲಿ ಆತ್ಮನಿಗೆ ಪ್ರಾಣಸಂಬಂಧವಿರುವುದರಿಂದ ಅವನು ಜೀವನೆಂದು ತಿಳಿದುಬರುತ್ತದೆ ಹೀಗೆಯೇ 'ಕೂದಲೆಳೆಯ ತುದಿಯನ್ನು ನೂರಾಗಿ ಭಾಗಿಸಿ, ಅದರ ಒಂದು ಭಾಗವನ್ನು ಪುನಃ ನೂರಾಗಿ ಭಾಗಿಸಿದರೆ ಎಷ್ಟು ಅಣುಪರಿಮಾಣವುಂಟಾಗುವುದೊ ಅಷ್ಟು ಪರಿಮಾಣವುಳ್ಳ ವನು ಜೀವಾತ್ಮನು ಎಂದು ತಿಳಿಯಬೇಕು'[4] (ಶ್ವೇ. ಉ. ೫. ೯) ಮತ್ತು 'ಇನ್ನೊಬ್ಬನಾದ ಜೀವನು ಅಂಕುಶದ ಮೊನೆಯಂತೆ ಸೂಕ್ಷ್ಮನಾಗಿ ಕಂಡುಬರುತ್ತಾನೆ'[5] (ಶ್ವೇ. ಉ ೫. ೮) ಎಂಬ ಉನ್ಮಾನವು ಜೀವನು ಅಣುವೆಂಬುದನ್ನು ತಿಳಿಸುತ್ತದೆ.

ವಿ.—ಶ್ರುತಿಯು ಅಣುಶಬ್ದವನ್ನು ಜೀವನ ವಿಷಯದಲ್ಲಿ ಸಾಕ್ಷಾತ್ತಾಗಿ ಪ್ರಯೋ ಗಿಸಿದೆ (ಮುಂ. ಉ. ೩. ೧. ೯) ಉನ್ಮಾನವೆಂದರೆ ಹೋಲಿಕೆಯುಳ್ಳ ವಸ್ತುಗಳೊಂದಿಗೆ ಅಳೆಯುವುದು. ಶ್ರುತಿಯು ಜೀವನನ್ನು ಅಣುಸದೃಶವಾದ ವಸ್ತುಗಳೊಂದಿಗೆ ಹೋಲಿಸಿ

---

[1] ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ ।

[2] ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚೇತಿ (ಮ. ಭಾ.).

[3] ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಂಚಧಾಸಂವಿವೇಶ ।

[4] ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।
ಭಾಗೋ ಜೀವಃ ಸ ವಿಜ್ಞೇಯಃ ...॥

[5] ಆರಾಗ್ರಮಾತ್ರೋ ಹ್ಯಪರೋಽಪಿ ದೃಷ್ಟಃ ಃ

ಶ್ವೇ ಉ ೫ ೮ ೯) ಅವನ ಅಣುತ್ವವನ್ನು ಹೇಳುತ್ತದೆ [1] ಆದುದರಿಂದ ಜೀವಾತ್ಮನು ಅಣುವೇ

ದ್ವೈ—ಮತ್ತು ಆತ್ಮಶಬ್ದ, ಅಪರಿಮಿತಸ್ವರೂಪಲಿಂಗ—ಇವುಗಳಿರುವುದರಿಂದ ಶ್ರುತಿಯು ಪರಬ್ರಹ್ಮನನ್ನು ಸೂಚಿಸುತ್ತದೆಯೇ ಹೊರತು ಜೀವನನ್ನಲ್ಲ' ಎಂಬುದು ಸೂತ್ರಾರ್ಥ

'ಆತ್ಮನು ಅಮೇಯನು ಪರಬ್ರಹ್ಮ-ಪರಾನಂದ-ಶಬ್ದಗಳು ವಿಷ್ಣುವನ್ನೇ ಸೂಚಿಸುತ್ತವೆ ಇವುಗಳನ್ನು ಬೇರೆ ಯಾರಿಗೂ ಅನ್ವಯಿಸಲಾಗುವುದಿಲ್ಲ' ಎಂದು ಕೂರ್ಮಪುರಾಣದಲ್ಲಿ ಹೇಳಿದೆ [2]

## ಅವಿರೋಧಶ್ಚಂದನವತ್ ॥ ೨೩ ॥

೨೩ ಚಂದನದ ಹಾಗೆ ಯಾವ ವಿರೋಧವೂ ಇಲ್ಲ

ಆತ್ಮನು ಅಣುಪರಿಮಾಣವುಳ್ಳವನಾಗಿದ್ದು, ಶರೀರದ ಒಂದು ಸ್ಥಳದಲ್ಲಿ ನೆಲಸಿದ್ದರೆ ದೇಹದಲ್ಲೆಲ್ಲ ಅರಿವಾಗುವುದು ವಿರುದ್ಧವಾಗುತ್ತದೆ, ನದಿಯಲ್ಲಿ ಮಿಾಯುವಾಗ ಶರೀರದಲ್ಲೆಲ್ಲ ಶೀತದ ಅರಿವಾಗುವುದು ಅಥವಾ ಬೇಸಗೆಯ ಕಾಲದಲ್ಲಿ ದೇಹದಲ್ಲೆಲ್ಲ ತಾಪದ ಅರಿವಾಗುವುದು ನಮ್ಮ ಅನುಭವಕ್ಕೆ ಬಂದ ವಿಷಯ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಹೇಗೆ ಚಂದನದ ಒಂದು ಬಿಂದು ಶರೀರದ ಒಂದು ಭಾಗಕ್ಕೆ ಸಂಬದ್ಧವಾಗಿದ್ದರೂ ದೇಹವನ್ನೆಲ್ಲ ವ್ಯಾಪಿಸಿ ಆಹ್ಲಾದವನ್ನುಂಟುಮಾಡುತ್ತದೆಯೊ ಹಾಗೆಯೇ ಆತ್ಮನು ಶರೀರದ ಒಂದು ಏಕದೇಶದಲ್ಲಿದ್ದರೂ ಸಕಲ ದೇಹವನ್ನೂ ವ್ಯಾಪಿಸಿಕೊಂಡಿರುವ ಅರಿವನ್ನು ಉಂಟುಮಾಡುವುದು [3]

ವಿ —ಆತ್ಮನು ಅಣುವಾಗಿದ್ದರೆ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುವ ವೇದನೆಯನ್ನು ಹೊಂದುವುದಿಲ್ಲವಲ್ಲ—ಎಂಬ ಆಕ್ಷೇಪಣೆಗೆ ಈ ಸೂತ್ರವು ಪರಿಹಾರವಾಗಿದೆ ಏಕದೇಶದಲ್ಲಿರುವ ಚಂದನವು ಶರೀರವನ್ನೆಲ್ಲ ವ್ಯಾಪಿಸಿಕೊಂಡು ಆಹ್ಲಾದವನ್ನುಂಟುಮಾಡುವಂತೆ ಆತ್ಮನು ದೇಹದ ಏಕದೇಶದಲ್ಲಿದ್ದರೂ ಸಕಲದೇಹದಲ್ಲಿರುವ ವೇದನೆಯನ್ನು ಅನುಭವಿಸುತ್ತಾನೆ

---

[1] ಉದ್ಧೃತ್ಯ ಮಾನಮುನ್ಮಾನಮ್ , ಅಣುಸದೃಶಂ ವಸ್ತೂದ್ಧೃತ್ಯ ತನ್ಮಾನತ್ವಂ ಜೀವಸ್ಯ ಶ್ರೂಯತೇ (ಶ್ರೀಭಾಷ್ಯ)

[2] ಆತ್ಮಾಮೇಯಃ ಪರಂ ಬ್ರಹ್ಮ ಪರಾನಂದಾದಿಕಾಭಿಧಾಃ ।
ವದಂತಿ ವಿಷ್ಣುಮೇವೈಕಂ ನಾನ್ಯತ್ರಾಸಾಂ ಗತಿಃ ಕ್ವಚಿತ್ ॥ ಇತಿ ಚ ಕೌರ್ಮೇ (ಮ ಭಾ)

[3] ಏವಮಾತ್ಮಾಪಿ ದೇಹೈಕದೇಶಸ್ಥಃ ಸಕಲದೇಹವ್ಯಾಪಿನೀಮುಪಲಬ್ಧಿಂ ಕರಿಷ್ಯತಿ (ಸೂ ಭಾ )

ದ್ವೈ.—ಚಂದನಬಿಂದುವು ಏಕದೇಶದಲ್ಲಿದ್ದರೂ ಶರೀರವನ್ನೆಲ್ಲ ವ್ಯಾಪಿಸಿಕೊಳ್ಳುವಂತೆ ಜೀವನು ಅಣುವಾಗಿದ್ದರೂ ಶರೀರವನ್ನೆಲ್ಲ ವ್ಯಾಪಿಸಿಕೊಳ್ಳುತ್ತಾನೆ ಎಂಬುದು ಹೊಂದುತ್ತದೆ

**ಅವಸ್ಥಿತಿವೈಶೇಷ್ಯಾದಿತಿ ಚೇನ್ನಾಭ್ಯುಗಪಮಾದ್ಧೃದಿ ಹಿ || ೨೪ ||**

೨೪. (ದೃಷ್ಟಾಂತದಲ್ಲಿ ಚಂದನಕ್ಕೆ) ವಿಶೇಷವಾದ ಅವಸ್ಥಿತಿಯಿದೆಯೆಂದು ಹೇಳಿದರೆ ಅದು ಸರಿಯಲ್ಲ, (ಶ್ರುತಿಯಲ್ಲಿ ವಿಶೇಷಸ್ಥಾನದ) ಒಪ್ಪಿಗೆಯಿದೆ; (ಎಂದರೆ ಆತ್ಮನು) ಹೃದಯದಲ್ಲಿದ್ದಾನೆ.

ಚಂದನದಂತೆ ಯಾವ ವಿರೋಧವೂ ಇಲ್ಲ ಎಂದು ಹಿಂದೆ ಹೇಳಿರುವುದು ಸರಿಯಲ್ಲ, ಏಕೆಂದರೆ ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ಹೋಲಿಕೆ ಸರಿಯಾಗಿಲ್ಲ : ಚಂದನವು ಏಕದೇಶದಲ್ಲಿದ್ದು ಸಕಲದೇಹಾಹ್ಲಾದನವನ್ನುಂಟುಮಾಡುವುದು ಪ್ರತ್ಯಕ್ಷವಾಗಿದೆ; ಆದರೆ ಆತ್ಮನಿಗೆ ದೇಹದಲ್ಲೆಲ್ಲ ಅರಿವು ಉಂಟಾಗುವುದು ಮಾತ್ರ ಪತ್ಯಕ್ಷವಾಗಿದೆಯೇ ಹೊರತು ಅವನು ಏಕದೇಶದಲ್ಲಿರುವುದು ಪ್ರತ್ಯಕ್ಷವಾಗಿಲ್ಲ—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ : ಇದರಲ್ಲಿ ದೋಷವಿಲ್ಲ ; ಏಕೆಂದರೆ ಆತ್ಮನೂ ಚಂದನದಂತೆ ಏಕದೇಶದಲ್ಲಿರುವನೆಂಬ ವಿಶೇಷವಾದ ಅವಸ್ಥಿತಿಯನ್ನು ಒಪ್ಪಿಕೊಳ್ಳಲಾಗಿದೆ. ಆತ್ಮನು ಹೃದಯದಲ್ಲಿದ್ದಾನೆಂದು ಅನೇಕಶ್ರುತಿಗಳು ಹೇಳುತ್ತವೆ : 'ಈ ಆತ್ಮನು ಹೃದಯದಲ್ಲಿಯೇ (ವಾಸಿಸುವನು)'[1] (ಪ್ರ. ಉ ೩ ೬) ; 'ಆ ಈ ಆತ್ಮನೇ ಹೃದಯದಲ್ಲಿ (ಇರುವನು)'[2] (ಛಾಂ. ಉ. ೮. ೩. ೩) ; 'ಆ ಆತ್ಮನು ಯಾವನು ? ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಹೃದಯದಲ್ಲಿರುವ ಜ್ಯೋತಿಯೂ ಆದ ಈ ಪುರುಷನು'[3] (ಬೃ. ಉ. ೪. ೩. ೭) ಇತ್ಯಾದಿ. ಆದುದರಿಂದ ಚಂದನದೃಷ್ಟಾಂತದಂತೆ ಅವಿರೋಧವಾಗಿರುವುದು ಸರಿಯೇ.

ವಿ—ದೇಹದ ದೇಶವಿಶೇಷದಲ್ಲಿರುವ ಚಂದನಬಿಂದುವು ತನ್ನ ಕಾರ್ಯವನ್ನುಂಟುಮಾಡುತ್ತದೆ ; ಆದರೆ ಆತ್ಮನಿಗೆ ಅಂಥ ದೇಶವಿಶೇಷವಿಲ್ಲ—ಎಂದು ಹೇಳಲಾಗುವುದಿಲ್ಲ ; ಏಕೆಂದರೆ ದೇಹದ ದೇಶವಿಶೇಷದಲ್ಲಿ ಎಂದರೆ ಹೃದಯದಲ್ಲಿ ಆತ್ಮನಿಗೆ ಸ್ಥಿತಿ ಇರುವುದೆಂದು ಶ್ರುತಿಯು (ಬೃ. ಉ. ೪. ೩. ೭) ಹೇಳುತ್ತದೆ. ಆತ್ಮನು ದೇಹದ ದೇಶವಿಶೇಷದಲ್ಲಿರುವನೆಂಬುದನ್ನು ತಿಳಿಸಲು ಚಂದನದೃಷ್ಟಾಂತವನ್ನು ಹೇಳಿದೆಯೇ ಹೊರತು ಚಂದನದ ದೇಶವಿಶೇಷವನ್ನು ಅಪೇಕ್ಷಿಸಿ ಹೇಳಿಲ್ಲ.[4]

---

[1] ಹೃದಿ ಹ್ಯೇಷ ಆತ್ಮಾ ।

[2] ಸ ವಾ ಏಷ ಆತ್ಮಾ ಹೃದಿ ।

[3] ಕತಮ ಆತ್ಮೇತಿ; ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ

[4] ಆತ್ಮನೋ ದೇಶವಿಶೇಷಸ್ಥಿತಿಖ್ಯಾಪನಾಯ ಚಂದನದೃಷ್ಟಾಂತಃ ಪ್ರದರ್ಶಿತಃ; ನ ತು ಚಂದನಸ್ಯ ದೇಶವಿಶೇಷಾಪೇಕ್ಷಾ (ಶ್ರೀಭಾಷ್ಯ).

ದ್ವೈ.—ಚಂದನಬಿಂದುವಿಗೆ ದೇಹದ ಕೆಲವೆಡೆ ಚೆನ್ನಾಗಿಯೂ ಇನ್ನು ಕೆಲವೆಡೆ ಚೆನ್ನಾಗಿಲ್ಲದೆಯೂ ಅವಸ್ಥಾನವಿದ್ದ ಪ್ರಯುಕ್ತ ವ್ಯಾಪ್ತಿ ಹೊಂದಿದರೂ ಜೀವನಿಗೆ ಅದಿಲ್ಲದಿರುವುದರಿಂದ ದೇಹವ್ಯಾಪ್ತಿಯು ಹೊಂದುವುದಿಲ್ಲವೆಂದು ಹೇಳಕೂಡದು; ಏಕೆಂದರೆ ಶ್ರುತಿಯು (ಪ್ರ. ಉ. ೩. ೬) ಜೀವನಿಗೆ ವಿಶೇಷಸ್ಥಾನವನ್ನು ಹೇಳುತ್ತದೆ.

## ಗುಣಾದ್ವಾ ಲೋಕವತ್* ॥ ೨೫ ॥

೨೫. ಅಥವಾ ಲೋಕದಲ್ಲಿರುವಂತೆ (ಚೈತನ್ಯ) ಗುಣವು (ವ್ಯಾಪಕವಾಗಿರುವುದರಿಂದ ಜೀವನು ಸಕಲದೇಹವನ್ನೂ ವ್ಯಾಪಿಸಿಕೊಳ್ಳಬಹುದು)

ಕೋಣೆಯ ಒಂದು ಭಾಗದಲ್ಲಿ ದೀಪವಿದ್ದರೆ ಅದು ತನ್ನ ಪ್ರಭೆಯಿಂದ ಕೋಣೆಯನ್ನೆಲ್ಲ ಬೆಳಗುವುದು ಕಂಡುಬರುತ್ತದೆ; ಹೀಗೆಯೇ ಜೀವನು ಅಣುಪರಿಮಾಣವುಳ್ಳವನಾಗಿದ್ದರೂ ತನ್ನ ಚೈತನ್ಯಗುಣದ ವ್ಯಾಪ್ತಿಯಿಂದ ಸಕಲಶರೀರವನ್ನೂ ವ್ಯಾಪಿಸಿಕೊಂಡು ಅರಿವನ್ನು ಪಡೆಯಬಹುದು ಚಂದನಕ್ಕೆ ಅವಯವಗಳಿರುವುದರಿಂದ ಅವು ಹರಡಿಕೊಂಡು ದೇಹದಲ್ಲೆಲ್ಲ ಆಹ್ಲಾದವನ್ನುಂಟುಮಾಡಬಹುದು, ಆದರೆ ಯಾವ ಅವಯವಗಳಿದ್ದರೆ ಅವು ದೇಹದಲ್ಲೆಲ್ಲ ಹರಡಿಕೊಳ್ಳಬಹುದೊ ಅಂಥ ಅವಯವಗಳು ಅಣುವಾದ ಜೀವನಿಗೆ ಇರುವುದಿಲ್ಲವೆಂಬ ಆಶಂಕೆಯನ್ನು ಈ ಸೂತ್ರವು ಪರಿಹರಿಸುತ್ತದೆ.

ವಿ.—'ಅಥವಾ ದೀಪದಂತೆ ಗುಣವಿರುವುದರಿಂದ' ಎಂಬುದು ಸೂತ್ರಾರ್ಥ. ಆತ್ಮನು ಏಕದೇಶದಲ್ಲಿದ್ದರೂ ಸಕಲದೇಹವ್ಯಾಪಕವಾದ ಕಾರ್ಯವನ್ನುಂಟುಮಾಡುತ್ತಾನೆಂದು ಸೂತ್ರಕಾರರು ತಮ್ಮ ಮತವನ್ನು ಇಲ್ಲಿ ಹೇಳುತ್ತಾರೆ. ಏಕದೇಶದಲ್ಲಿರುವ ದೀಪದ ಬೆಳಕು ಅನೇಕದೇಶವನ್ನು ವ್ಯಾಪಿಸುವಂತೆ ಹೃದಯದಲ್ಲಿರುವ ಆತ್ಮನ ಜ್ಞಾನವು ದೇಹವನ್ನೆಲ್ಲ ವ್ಯಾಪಿಸಿಕೊಂಡಿರುತ್ತದೆ.[2]

ದ್ವೈ.—ದೀಪಕ್ಕೆ ಸ್ವರೂಪದಿಂದ ಅವ್ಯಾಪ್ತಿಯಿದ್ದರೂ ಪ್ರಕಾಶಗುಣದಿಂದ ವ್ಯಾಪ್ತಿಯಿರುವಂತೆ ಜೀವನಿಗೆ ಜೀವರೂಪದಿಂದ ಅವ್ಯಾಪ್ತಿಯಿದ್ದರೂ ಚಿದ್ಗುಣದಿಂದ ದೇಹವ್ಯಾಪ್ತಿಯು ಹೊಂದುತ್ತದೆ.[3]

---

1 ಸಮ್ಯಗಸಮ್ಯಗವಸ್ಥಾನವಿಶೇಷಾದ್ಯುಜ್ಯತೇ ಚಂದನಸ್ಯೇತಿ ಚೇನ್ನ । ಹೃದಿ ಹ್ಯೇಷ ಆತ್ಮೇತಿ ಜೀವಸ್ಯಾಪಿ ತಥಾಭ್ಯುಪಗಮಾತ್ (ಮ. ಭಾ.).

* ಶ್ರೀಭಾಷ್ಯದಲ್ಲಿಯೂ ಮಧ್ವಭಾಷ್ಯದಲ್ಲಿಯೂ ಆಲೋಕವತ್ ಎಂದಿದೆ.

2 ತದ್ವದ್ ಹೃದಯಸ್ಥಸ್ಯಾತ್ಮನೋ ಜ್ಞಾನಂ ಸಕಲದೇಹಂ ವ್ಯಾಪ್ಯ ವರ್ತತೇ (ಶ್ರೀ-ಭಾಷ್ಯ).

3 ಯಥಾಽಽಲೋಕಸ್ಯ ಪ್ರಕಾಶಗುಣೇನ ವ್ಯಾಪ್ತಿರ್ಜ್ಯೋತೀರೂಪೇಣಾವ್ಯಾಪ್ತಿರೇವಂ ಚಿದ್ಗುಣೇನ ವ್ಯಾಪ್ತಿರ್ಜೀವರೂಪೇಣಾವ್ಯಾಪ್ತಿರಿತಿ ವಾ (ಮ. ಭಾ.).

## ವ್ಯತಿರೇಕೋ ಗಂಧವತ್* ॥ ೨೬ ॥

೨೬ ಗಂಧದ ಹಾಗೆ (ಚೈತನ್ಯಗುಣವು ಆತ್ಮನನ್ನು) ಬಿಟ್ಟೂ ಇರಬಹುದು

ಗುಣವು ಗುಣಿಯನ್ನು ಬಿಟ್ಟು ಬೇರೆ ಕಡೆಯಲ್ಲಿ ಹೇಗೆ ಇರಬಲ್ಲದು ? ಬಟ್ಟೆಯ ಶುಕ್ಲಗುಣವು ಬಟ್ಟೆಯನ್ನು ಬಿಟ್ಟು ಬೇರೆ ಕಡೆ ಇರುವುದಿಲ್ಲ ಪ್ರದೀಪದ ಪ್ರಭೆಯು ಹಾಗೂ ಆಗುವಂತಿಲ್ಲ, ಏಕೆಂದರೆ ಅದನ್ನು ದ್ರವ್ಯವೆಂದೇ ಪರಿಗಣಿಸಿದೆ—ಎಂಬ ಆಕ್ಷೇಪಣೆಗೆ ಪರಿಹಾರ ಹೀಗಿದೆ, ಗಂಧವು ಗುಣವೇ ಆಗಿದ್ದರೂ ಗಂಧದ್ರವ್ಯವನ್ನು ಬಿಟ್ಟು ಮತ್ತೊಂದು ಕಡೆ ಇರುವಂತೆ ಜೀವನು ಅಣುವಾಗಿದ್ದರೂ ಚೈತನ್ಯವು ಅವನನ್ನು ಬಿಟ್ಟು ಬೇರೆಯಾಗಿರಬಹುದು ಆದುದರಿಂದ ಶುಕ್ಲಾದಿವರ್ಣಗಳು ತಮ್ಮ ಆಶ್ರಯವನ್ನು ಬಿಡಲಾರವು—ಎಂಬ ಅನುಮಾನವು ಅನೈಕಾಂತಿಕವಾಗಿರುತ್ತದೆ ಏಕೆಂದರೆ ಗುಣವೇ ಆಗಿದ್ದರೂ ತನ್ನ ಆಶ್ರಯದಿಂದ ಬೇರೆಯಾಗಿರುವುದು ಕಂಡುಬರುತ್ತದೆ

## ತಥಾ ಚ ದರ್ಶಯತಿ ॥ ೨೭ ॥

೨೭ ಮತ್ತು ಹಾಗೆಂದೇ (ಶಾಸ್ತ್ರವು) ತಿಳಿಸುತ್ತದೆ

ಆತ್ಮನು ಹೃದಯವೆಂಬ ಆಶ್ರಯದಲ್ಲಿ ಇರುವನೆಂದೂ ಅಣುಪರಿಮಾಣವುಳ್ಳವನೆಂದೂ ಶಾಸ್ತ್ರವು ಹೇಳಿ, 'ಈ ಪ್ರಾಜ್ಞಾತ್ಮನು ಶರೀರವನ್ನು ಕೂದಲು-ನಖಾಗ್ರಗಳವರೆಗೂ ಪ್ರವೇಶಿಸಿರುವನು'[1] (ಕೌ ಉ ೪ ೧೯) ಎಂಬ ಶ್ರುತಿಯಿಂದ ಆತ್ಮನು ತನ್ನ ಚೈತನ್ಯಗುಣದಿಂದ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುವನೆಂದು ತಿಳಿಸುತ್ತದೆ

ವಿ —ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ॥ ೨ ೩ ೨೭ ॥

೨೭ ಗಂಧದಂತೆ ಬೇರೆಯಾಗಿರುತ್ತದೆ, ಹೀಗೆಂದು ಶ್ರುತಿಯು ಹೇಳುತ್ತದೆ

ಪೃಥ್ವಿಯ ಗುಣವಾದ ಗಂಧವು ಪೃಥ್ವಿಗಿಂತ ಬೇರೆಯಾಗಿ ಕಂಡುಬರುತ್ತದೆ ಹೀಗೆಯೇ 'ನಾನು ಅರಿಯುತ್ತೇನೆ' ಎಂದು ಜ್ಞಾತೃಗುಣತ್ವದಿಂದ ಕಂಡುಬರುವ ಆತ್ಮನ ಜ್ಞಾನವು ಜ್ಞಾತೃವಿಗಿಂತ ಬೇರೆಯಾಗಿರುತ್ತದೆ[2] 'ಈ ಪುರುಷನು ಅರಿಯುತ್ತಾನೆ' ಎಂದು ಶ್ರುತಿಯು ಹೇಳುತ್ತದೆ

---

* ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ಇದು ಮತ್ತು ಮುಂದಿನ ಸೂತ್ರ ಒಟ್ಟುಗೂಡಿ ಒಂದೇ ಸೂತ್ರವಾಗಿದೆ, ಮತ್ತು ಮಧ್ವಭಾಷ್ಯದಲ್ಲಿ ಇದು ವ್ಯತಿರೇಕಾಧಿಕರಣ ಎನಿಸಿದೆ

1 ಏಷ ಪ್ರಾಜ್ಞ ಆತ್ಮೇದಂ ಶರೀರಮನುಪ್ರವಿಷ್ಟ ಆ ಲೋಮಭ್ಯ ಆ ನಖೇಭ್ಯಃ ।

2 ತಥಾ ಜಾನಾಮೀತಿ ಜ್ಞಾತೃಗುಣತ್ವೇನ ಪ್ರತೀಯಮಾನಸ್ಯ ಜ್ಞಾನಸ್ಯಾತ್ಮನೋ ವ್ಯತಿರೇಕಃ ಸಿದ್ಧಃ (ಶ್ರೀಭಾಷ್ಯ)

ದ್ವೈ.—ಗಂಧದಂತೆ ಆತ್ಮನ ಅಂಶಗಳು ಹೊರಗೆ ಹೋಗುತ್ತವೆ; ಹೀಗೆಯೇ ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ.

**ಸ ನಿತ್ಯೋ ನಿರವಯವಃ** ಎಂಬ ಗೌಪವನ-ಶ್ರುತಿಯು ಆತ್ಮನಿಗೆ ಅಬಹುತ್ವವನ್ನು ಹೇಳುತ್ತದೆ. **ಸ ಪಂಚಧಾ ಸಪ್ತಧಾ ದಶಧಾ ಭವತಿ** ಎಂಬ ಪಾರಾಶರ್ಯಾಯಣ-ಶ್ರುತಿಯು ಆತ್ಮನಿಗೆ ಬಹುರೂಪತ್ವವನ್ನು ಹೇಳುತ್ತದೆ. ಈ ಶ್ರುತಿಗಳ ವಿರೋಧವನ್ನು ಪರಿಹರಿಸಲು ಈ ಸೂತ್ರವು ಬಂದಿದೆ ಹೇಗೆ ಪುಷ್ಪದ ಗಂಧವು ಪುಷ್ಪವನ್ನು ಬಿಟ್ಟು ಹೊರಗೆಹೋಗುತ್ತದೆಯೊ ಹಾಗೆಯೇ ಜೀವನ ಅಂಶಗಳು ಅಂಶಿಯಾದ ಆತ್ಮವನ್ನು ಬಿಟ್ಟು ಬೇರೆಯಾಗುತ್ತವೆ[1]

## ಪೃಥಗುಪದೇಶಾತ್* ॥ ೨೮ ॥

೨೮. ಬೇರೆಯಾಗಿ ಉಪದೇಶಮಾಡಿರುವುದರಿಂದಲೂ (ಆತ್ಮನು ಚೈತನ್ಯ ಗುಣದಿಂದ ಶರೀರವನ್ನು ವ್ಯಾಪಿಸಿಕೊಂಡಿರುತ್ತಾನೆ.)

ಆತ್ಮ, ಪ್ರಜ್ಞೆ—ಇವುಗಳನ್ನು ಕರ್ತೃ-ಕರಣ-ಭಾವದಿಂದ ತಿಳಿಸುವ 'ಪ್ರಜ್ಞೆಯಿಂದ ಶರೀರವನ್ನು ಸ್ವಾಧೀನಪಡಿಸಿಕೊಂಡು'[2] (ಕೌ. ಉ ೩. ೬) ಎಂಬ ಶ್ರುತಿಯಿಂದ ಆತ್ಮನು ಚೈತನ್ಯಗುಣದಿಂದಲೇ ಶರೀರವನ್ನು ವ್ಯಾಪಿಸಿಕೊಂಡಿರುತ್ತಾನೆಂದು ನಿಶ್ಚಯವಾಗುತ್ತದೆ. ಮತ್ತೆ 'ಆಗ ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ಎಳೆದುಕೊಂಡು'[3] (ಬೃ.ಉ. ೨. ೧. ೧೭) ಎಂಬ ಶ್ರುತಿಯು ವಿಜ್ಞಾನಕ್ಕಿಂತ ಕರ್ತೃವಾದ ಜೀವನು ಬೇರೆಯೆಂಬುದನ್ನು ತಿಳಿಸುತ್ತದೆ. ಆದುದರಿಂದ ಆತ್ಮನು ಅಣುಪರಿಮಾಣವುಳ್ಳವನು.

ವಿ.—ಜ್ಞಾನವು ಜ್ಞಾತೃವಿಗಿಂತ ಬೇರೆಯೆಂದು ಶ್ರುತಿಯು ಸಾಕ್ಷಾತ್ತಾಗಿ ಹೇಳುತ್ತದೆ: 'ಜ್ಞಾತೃವಿನ ಜ್ಞಾನಕ್ಕೆ ಲೋಪವಿಲ್ಲ'[4] (ಬೃ. ಉ. ೪. ೩. ೩೦).

ದ್ವೈ.—'ಜೀವಾತ್ಮನು '(ಪರಬ್ರಹ್ಮನಿಗಿಂತ) ಭಿನ್ನನು; ಏಕೆಂದರೆ ಉಪದೇಶವಿದೆ' ಎಂಬುದು ಸೂತ್ರಾರ್ಥ.

'ಪರಮಾತ್ಮನು ಜೀವಸಂಘಕ್ಕಿಂತ ಭಿನ್ನನು, ಅಚಿಂತ್ಯನು, ಪೂರ್ಣನು' ಎಂಬ ಕೌಶಿಕ-ಶ್ರುತಿಯ ಪ್ರಕಾರ ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನಾಗಿರುವನು.

---

1 ಯಥಾ ಪುಷ್ಪಾದ್ಗಂಧಃ ಪೃಥಗ್ಗಚ್ಛತಿ ಏವಮಂಶಿನೋ ಜೀವಾದಂಶಾಃ ಪೃಥಗ್ಗಚ್ಛಂತಿ (ಮ. ಭಾ.).

* ಈ ಸೂತ್ರ ಮತ್ತು ಮುಂದಿನದು ಮಧ್ವಭಾಷ್ಯದಲ್ಲಿ ಪೃಥಗುಪದೇಶಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ

2 ಪ್ರಜ್ಞಯಾ ಶರೀರಂ ಸಮಾರುಹ್ಯ ।

3 ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ।

4 ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ ।

**ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ॥ ೨೯ ॥**

೨೯. ತದ್ಗುಣಗಳ ಸಾರನಾಗಿರುವುದರಿಂದ ಆ ವ್ಯಪದೇಶವಿಶದೆ; ಪ್ರಾಜ್ಞನಂತೆ.

ಹೀಗೆ ಪೂರ್ವಪಕ್ಷವು ಒದಗಲಾಗಿ ಸಿದ್ಧಾಂತವು ಈ ರೀತಿಯಾಗಿದೆ : ಆತ್ಮನು ಅಣುವಲ್ಲ; ಜೀವಾತ್ಮನ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳದೆ ಇರುವುದರಿಂದಲೂ, ಪರಬ್ರಹ್ಮವೇ ಸೃಷ್ಟಿಯನ್ನು ಪ್ರವೇಶಿಸಿದೆ ಎಂದು ಶ್ರುತಿಯಲ್ಲಿ ಹೇಳಿರುವುದರಿಂದಲೂ, ತಾದಾತ್ಮ್ಯವನ್ನು ಉಪದೇಶಿಸಿರುವುದರಿಂದಲೂ ಜೀವನು ಪರಬ್ರಹ್ಮವೇ ಎಂದು ಹೇಳಿದ್ದಾಗಿದೆ. ಜೀವನು ಪರಬ್ರಹ್ಮವಾದರೆ ಪರಬ್ರಹ್ಮದ ಪರಿಮಾಣವೇ ಜೀವನ ಪರಿಮಾಣವಾಗಬೇಕು. ಪರಬ್ರಹ್ಮವು ವಿಭುವೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನು ವಿಭುವೇ. ಹೀಗಾದರೆ 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಅಜನೂ ಮಹಾಂತನೂ ಆದ ಈ ಅತ್ಮನು' (ಬೃ. ಉ. ೪. ೪. ೨೨) ಎಂದು ಜೀವನ ವಿಭುತ್ವವನ್ನು ತಿಳಿಸುವ ಶ್ರೌತ-ಸ್ಮಾರ್ತ-ವಾದಗಳನ್ನು ಸಮರ್ಥಿಸಿದಂತೆ ಆಗುತ್ತದೆ.

ಜೀವನು ಅಣುವಾಗಿದ್ದರೆ ಶರೀರದಲ್ಲೆಲ್ಲ ಆಗುವ ವೇದನೆಯು ಹೊಂದುವುದಿಲ್ಲ. ಇದು ಚರ್ಮದ ಸಂಬಂಧದಿಂದ ಆಗಿದೆಯೆಂದೂ ಹೇಳಲಾಗುವುದಿಲ್ಲ, ಹಾಗಾಗಿದ್ದರೆ ಮುಳ್ಳನ್ನು ತುಳಿದಾಗ ಶರೀರದಲ್ಲೆಲ್ಲ ವೇದನೆಯು ಆಗಬೇಕಾಗಿದ್ದಿತೇ ಹೊರತು ಅಂಗಾಲಿನಲ್ಲಲ್ಲ. ಅಣುವಿನ ಗುಣವು ತನ್ನ ಆಶ್ರಯದ ಹೊರಗಡೆ ವ್ಯಾಪಿಸಿಕೊಂಡಿದೆಯೆಂಬುದೂ ಸರಿಯಲ್ಲ ; ಏಕೆಂದರೆ ಗುಣವು ಗುಣಿಯಿದ್ದಲ್ಲಿಯೇ ಇರುತ್ತದೆ. ಪ್ರದೀಪದ ಪ್ರಭೆಯಂತೆ ಎಂಬುದೂ ಆಗುವುದಿಲ್ಲ; ಏಕೆಂದರೆ ಅದು ದ್ರವ್ಯವೆಂದು ಹಿಂದೆಯೇ ಹೇಳಿದೆ. ಗಂಧವು ಗುಣವೆಂದು ಪರಿಗಣಿಸಿರುವುದರಿಂದ ಅದು ತನ್ನ ಆಶ್ರಯದೊಂದಿಗೇ ಸಂಚರಿಸಬೇಕಾಗುತ್ತದೆ. ಹಾಗಾಗದಿದ್ದರೆ ಗುಣತ್ವವೇ ಹೋಗುತ್ತದೆ. ಜೀವನ ಚೈತನ್ಯವು ಶರೀರವನ್ನೆಲ್ಲ ವ್ಯಾಪಿಸಿಕೊಂಡಿದೆಯೆಂದು ಹೇಳಿದರೆ ಜೀವನು ಅಣುವಲ್ಲ ಎಂದಾಗುವುದು. ಅಗ್ನಿಗೆ ಔಷ್ಣ್ಯ-ಪ್ರಕಾಶಗಳಿರುವಂತೆ ಚೈತನ್ಯವೇ ಇವನ ಸ್ವರೂಪವು. ಇಲ್ಲಿ ಗುಣ-ಗುಣಿಗಳ ವಿಭಾಗವಿಲ್ಲ. ಆದುದರಿಂದ ಜೀವನು ವಿಭು.

ಶ್ರುತಿಯಲ್ಲಿ ಜೀವನಿಗೆ ಅಣುತ್ವಾದಿಗಳನ್ನು ಹೇಳಿದೆಯೆಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ : ತದ್ಗುಣಗಳೆಂದರೆ ಬುದ್ಧಿಯ ಗುಣಗಳು. ಇಚ್ಛಾದ್ವೇಷ-ಸುಖದುಃಖಾದಿಗಳು ಯಾವ ಆತ್ಮನು ಸಂಸಾರಿಯಾಗುವುದಕ್ಕೆ ಸಾರವಾಗಿರುತ್ತವೆಯೊ ಎಂದರೆ ಪ್ರಧಾನವಾಗಿರುತ್ತವೆಯೊ ಅವನು ತದ್ಗುಣಸಾರನು ಬುದ್ಧಿಯ ಗುಣಗಳಿಲ್ಲದೆ ಕೇವಲ ಆತ್ಮನಿಗೆ ಸಂಸಾರಿತ್ವವುಂಟಾಗುವುದಿಲ್ಲ. ಬುದ್ಧಿಯೆಂಬ ಉಪಾಧಿಯ ಧರ್ಮಗಳ ಅಧ್ಯಾಸದ ನಿಮಿತ್ತದಿಂದಲೇ ಕರ್ತೃ-ಭೋಕ್ತೃ-ಸಂಸಾರಿಯಲ್ಲದ ನಿತ್ಯಮುಕ್ತನಾದ ಆತ್ಮನಿಗೆ ಕರ್ತೃತ್ವ-

ಭೋಕ್ತೃತ್ವ-ರೂಪವಾದ ಸಂಸಾರವುಂಟಾಗುವುದು.[1] ಹೀಗೆ ತದ್ಗುಣಸಾರನಾಗಿರುವುದರಿಂದ ಬುದ್ಧಿಯ ಪರಿಮಾಣದಿಂದ ಆತ್ಮನಿಗೆ ಅಣುಪರಿಮಾಣವನ್ನು ಹೇಳಿದೆ.[2] ಮತ್ತು ಬುದ್ಧಿಯು ಉತ್ಕ್ರಮಿಸುವುದರಿಂದ ಇವನಿಗೆ ಉತ್ಕ್ರಾಂತ್ಯಾದಿಗಳನ್ನು ಹೇಳಿದೆಯೇ ಹೊರತು ಅವು ಇವನಿಗೆ ಸ್ವತಃ ಇರುವುದಿಲ್ಲ. ಆದುದರಿಂದಲೇ ಶ್ರುತಿಯು 'ಕೂದಲೆಳೆಯ ತುದಿಯನ್ನು ನೂರಾಗಿಭಾಗಿಸಿ ಅದರ ಒಂದು ಭಾಗವನ್ನು ಪುನಃ ನೂರಾಗಿ ಭಾಗಿಸಿದರೆ ಎಷ್ಟು ಅಣುಪರಿಮಾಣವುಂಟಾಗುವುದೊ ಅಷ್ಟು ಪರಿಮಾಣವುಳ್ಳವನು ಜೀವಾತ್ಮನು —ಎಂದು ತಿಳಿಯಬೇಕು. ಆದರೂ ಅವನು ಅನಂತನೇ' (ಶ್ವೇ. ಉ. ೫. ೯) ಎಂದು ಜೀವನಿಗೆ ಅಣುತ್ವವನ್ನು ಹೇಳಿ ಪುನಃ ಅವನಿಗೆ ಆನಂತ್ಯವನ್ನು ಹೇಳುತ್ತದೆ. ಜೀವನ ಅಣುತ್ವವು ಔಪಚಾರಿಕವಾದರೆ, ಆನಂತ್ಯವು ಪಾರಮಾರ್ಥಿಕವಾದರೆ ಈ ವ್ಯಪದೇಶವು ಮುಖ್ಯವಾದ ಅರ್ಥವನ್ನು ಕೊಡಲು ಸಾಧ್ಯವಿಲ್ಲ ; ಮತ್ತೆ, ಆನಂತ್ಯವು ಔಪಚಾರಿಕವೆಂದು ಸಮಂಜಸವಾಗುತ್ತದೆ.[3] ಎರಡಕ್ಕೂ ಮುಖ್ಯವಾದ ಅರ್ಥವನ್ನು ಕೊಡಲು ಸಾಧ್ಯವಿಲ್ಲ , ಮತ್ತೆ, ಆನಂತ್ಯವು ಔಪಚಾರಿಕವೆಂದು ತಿಳಿಯುವುದಕ್ಕೆ ಆಗುವುದೇ ಇಲ್ಲ ; ಏಕೆಂದರೆ ಎಲ್ಲ ಉಪನಿಷತ್ತುಗಳೂ ಇವನಿಗೆ ಬ್ರಹ್ಮಾತ್ಮ ಭಾವವನ್ನು ಪ್ರತಿಪಾದಿಸಲು ಪ್ರವೃತ್ತವಾಗಿರುತ್ತವೆ. ಹೀಗೆಯೇ 'ಬುದ್ಧಿಯ ಮತ್ತು ಶರೀರದ ಗುಣಗಳಿಂದಲೂ ಕೂಡಿರುವ ಇನ್ನೊಬ್ಬನಾದ ಜೀವಾತ್ಮನು ಅಂಕುಶದ ಮೊನೆಯಂತೆ ಸೂಕ್ಷ್ಮನಾಗಿರುತ್ತಾನೆ' (ಶ್ವೇ. ಉ. ೫ ೮) ಎಂದು ಉನ್ಮಾನವನ್ನು ಹೇಳುವ ಇನ್ನೊಂದು ಶ್ರುತಿಯು ಬುದ್ಧಿಯ ಗುಣದಿಂದ ಆತ್ಮನಿಗೆ ಪರಿಮಾಣವುಂಟಾಗಿದೆಯೇ ಹೊರತು ತನ್ನ ರೂಪದಿಂದಲ್ಲ ಎಂದು ಹೇಳುತ್ತದೆ. 'ಈ ಅಣುವಾದ ಆತ್ಮನನ್ನು ಚೇತಸ್ಸಿನಿಂದ ತಿಳಿಯಬೇಕು' (ಮುಂ. ಉ. ೩. ೧. ೯) ಎಂಬ ಶ್ರುತಿಯು ಜೀವನ ಅಣುಪರಿಮಾಣತ್ವವನ್ನು ಹೇಳುವುದಿಲ್ಲ ; ಇಂದ್ರಿಯಗಳಿಗೆ ಅಗ್ರಾಹ್ಯನಾದ ಪರಮಾತ್ಮನನ್ನು ಜ್ಞಾನಪ್ರಸಾದದಿಂದ ಅರಿತುಕೊಳ್ಳಬಹುದೆಂದು ತಿಳಿಸುತ್ತದೆ ಆದುದರಿಂದ ಈ ಅಣುತ್ವವಚನವನ್ನು ಆತ್ಮನು ದುರ್ಜ್ಞೇಯನೆಂಬ ಅಭಿಪ್ರಾಯದಿಂದಾಗಲಿ ಅಥವಾ ಉಪಾಧಿಯ ಅಭಿಪ್ರಾಯದಿಂದಾಗಲಿ ಹೇಳಿದ್ದು ಎಂದು ಅರಿಯಬೇಕು.[4] ಹೀಗೆಯೇ 'ಪ್ರಜ್ಞೆಯಿಂದ ಶರೀರವನ್ನು ಸ್ವಾಧೀನ ಪಡಿಸಿಕೊಂಡು' (ಕೌ. ಉ. ೩. ೬) ಎಂಬಲ್ಲಿ 'ಉಪಾಧಿಯಾಗಿರುವ ಬುದ್ಧಿಯಿಂದ' ಎಂದು ಅನ್ವಯಿಸಿಕೊಳ್ಳಬೇಕು. ಹೀಗೆಯೇ ಉತ್ಕ್ರಾಂತ್ಯಾದಿಗಳೂ ಕೂಡ ಬುದ್ಧಿಯನ್ನೇ ಅವಲಂಬಿಸುತ್ತವೆ :

---

1 ಬುದ್ಧ್ಯುಪಾಧಿಧರ್ಮಾಧ್ಯಾಸನಿಮಿತ್ತಂ ಹಿ ಕರ್ತೃತ್ವಭೋಕ್ತೃತ್ವಾದಿಲಕ್ಷಣಂ ಸಂಸಾರತ್ವಮಕರ್ತುರಭೋಕ್ತುಶ್ಚಾಸಂಸಾರಿಣೋ ನಿತ್ಯಮುಕ್ತಸ್ಯ ಸತ ಆತ್ಮನಃ (ಸೂ. ಭಾ.)

2 ತಸ್ಮಾತ್ ತದ್ಗುಣಸಾರತ್ವಾದ್ ಬುದ್ಧಿಪರಿಮಾಣೇನಾಸ್ಯ ಪರಿಮಾಣವ್ಯಪದೇಶಃ (ಸೂ. ಭಾ.).

3 ತಚ್ಚೈಕಮೇವ ಸಮಂಜಸಂ ಸ್ಯಾದ್ ಯದೌಪಚಾರಿಕಮಣುತ್ವಂ ಜೀವಸ್ಯ ಭವೇತ್ ಪಾರಮಾರ್ಥಿಕಂ ಚಾನಂತ್ಯಮ್ (ಸೂ. ಭಾ.).

4 ತಸ್ಮಾದ್ ದುರ್ಜ್ಞಾನತ್ವಾಭಿಪ್ರಾಯಮಿದಮಣುತ್ವವಚನಮುಪಾಧ್ಯಭಿಪ್ರಾಯಂ ವಾ ದ್ರಷ್ಟವ್ಯಮ್ (ಸೂ. ಭಾ.).

'ಯಾವನು ಉತ್ಕ್ರಮಿಸಿದರೆ ನಾನು ಉತ್ಕ್ರಮಿಸುವೆನು ? ಯಾವನು ನಿಂತುಕೊಂಡರೆ ನಾನು ನಿಲ್ಲುವೆನು ?'[1] (ಪ್ರ ಉ ೬ ೩) ಎಂದು ಶ್ರುತಿಯು ಹೇಳುತ್ತದೆ ಉತ್ಕ್ರಾಂತಿಯಿಲ್ಲದಿರುವಾಗ ಗಮನಾಗಮನಗಳಿರುವುದಿಲ್ಲ

ಹೀಗೆ ಜೀವನು ಸಂಸಾರದಶೆಯಲ್ಲಿ ಉಪಾಧಿಗುಣಗಳ ಸಾರನಾಗಿರುವುದರಿಂದ ಅಣುತ್ವವೇ ಮೊದಲಾದ ವ್ಯಪದೇಶವಿರುತ್ತದೆ ಹೇಗೆ ಪ್ರಾಜ್ಞನಾದ ಪರಮಾತ್ಮನು ಸಗುಣೋಪಾಸನೆಗಳಲ್ಲಿ ಉಪಾಧಿಗುಣಸಾರನಾಗಿರುವುದರಿಂದ ಅಣುತ್ವಾದಿಧರ್ಮಗಳನ್ನು ಹೊಂದಿರುವನೊ ಹಾಗೆಯೇ

ವಿ.—'ಆದರೆ (ಆತ್ಮನಿಗೆ) ಜ್ಞಾನವು ಸಾರವಾಗಿರುವುದರಿಂದ ಆ ವ್ಯಪದೇಶವು ಪ್ರಾಜ್ಞನಂತೆ' ಎಂಬುದು ಸೂತ್ರಾರ್ಥ

'ಯಾವನು ವಿಜ್ಞಾನದಲ್ಲಿರುವನೊ'[2] (ಬೃ ಉ ೩ ೭ ೨೨), 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ' (ತೈ ಉ ೨ ೫) ಎಂಬಲ್ಲಿ ಆತ್ಮನು ಜ್ಞಾತೃವಲ್ಲ, ಜ್ಞಾನವೆಂದು ಹೇಳಿದೆ ಈ ಆಶಂಕೆಯನ್ನು ಪರಿಹರಿಸಲು ಈ ಸೂತ್ರವು ಬಂದಿದೆ ವಿಜ್ಞಾನವೆಂಬ ಗುಣವನ್ನು ಸಾರವಾಗಿ ಹೊಂದಿರುವುದರಿಂದ ಆತ್ಮನು ವಿಜ್ಞಾನವೆಂದು ಹೇಳಿದೆ , ಏಕೆಂದರೆ ವಿಜ್ಞಾನವೇ ಆತ್ಮನ ಸಾರಭೂತವಾದ ಗುಣವಾಗಿದೆ[3] ಹೀಗೆಯೇ ಪ್ರಾಜ್ಞನಾದ ಪರಮಾತ್ಮನನ್ನು ಆನಂದವೆಂದು ಕರೆದಿದೆ , ಏಕೆಂದರೆ ಆನಂದವು ಅವನ ಸಾರಭೂತವಾದ ಗುಣವಾಗಿದೆ 'ಆನಂದವು ಬ್ರಹ್ಮ ಎಂದು ತಿಳಿದುಕೊಂಡನು'[4] (ತೈ ಉ ೩ ೬) ಅಥವಾ ಪ್ರಾಜ್ಞನಿಗೆ ಜ್ಞಾನಶಬ್ದದಿಂದಲೂ ವ್ಯಪದೇಶವಿದೆಯೆಂದು ಹೇಳಬಹುದು - 'ಬ್ರಹ್ಮವು ಸತ್ಯ, ಜ್ಞಾನ, ಅನಂತ'[5] (ತೈ ಉ ೨ ೧)-

**ದ್ವೈ**—'ಪರಬ್ರಹ್ಮಸದೃಶವಾದ ಗುಣಗಳನ್ನು ತನ್ನ ಸಾರವಾಗಿ ಹೊಂದಿರುವುದರಿಂದ ಜೀವನನ್ನು ಬ್ರಹ್ಮನೆಂದು ಕರೆದಿದೆ , ಪ್ರಾಜ್ಞನಂತೆ' ಎಂಬುದು ಸೂತ್ರಾರ್ಥ

ಜ್ಞಾನಾನಂದವೇ ಮೊದಲಾದ ಪರಬ್ರಹ್ಮನ ಗುಣಗಳು ಇವನ ಸಾರವಾಗಿರುವುದರಿಂದ ಜೀವ-ಬ್ರಹ್ಮರಿಗೆ ಅಭೇದವ್ಯಪದೇಶವಿದೆ[6] **ಸರ್ವ ಖಲ್ವಿದಂ ಬ್ರಹ್ಮ** (ಛಾಂ ಉ ೩ ೧೪ ೧) ಎಂಬಲ್ಲಿ ಹೇಗೆ ಪರಬ್ರಹ್ಮನಿಗೆ ಜಗದಭೇದವ್ಯಪದೇಶವಿದೆಯೋ ಹಾಗೆಯೇ-

---

[1] ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ । ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ।

[2] ಯೋ ವಿಜ್ಞಾನೇ, ತಿಷ್ಠನ್ ।

[3] ತದ್ಗುಣಸಾರತ್ವಾತ್—ವಿಜ್ಞಾನಗುಣಸಾರತ್ವಾದ್ ಆತ್ಮನೋ ವಿಜ್ಞಾನಮಿತಿ ವ್ಯಪದೇಶಃ (ಶ್ರೀಭಾಷ್ಯ)

[4] ಆನಂದೋ ಬ್ರಹ್ಮೇತಿ ವ್ಯಜಾನಾತ್ ।

[5] ಸತ್ಯಂ ಜ್ಞಾನಮನಂತಂ ಬ್ರಹ್ಮ ।

[6] ಜ್ಞಾನಾನಂದಾದಿಬ್ರಹ್ಮಗುಣಾ ಏವಾಸ್ಯ ಯತಃ ಸಾರಃ ಸ್ವರೂಪಮತೋ ಭೇದವ್ಯಪದೇಶಃ (ಮ ಭಾ )

**ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್* ॥ ೩೦ ॥**

೩೦. ಮತ್ತು ಎಲ್ಲಿಯವರೆಗೆ ಆತ್ಮನಿರುವನೊ (ಅಲ್ಲಿಯವರೆಗೂ ಇವನಿಗೆ ಬುದ್ಧಿಸಂಯೋಗವಿರುತ್ತದೆ) ; ಆದುದರಿಂದ ದೋಷವಿಲ್ಲ ; ಹಾಗೆಂದು ಶ್ರುತಿಯಲ್ಲಿ ಹೇಳಿದೆ.

ಸರಿ, ಆತ್ಮನು ಬುದ್ಧಿಗುಣಸಾರನಾಗಿರುವುದರಿಂದ ಅವನಿಗೆ ಸಂಸಾರಿತ್ವವಾಗಿರುವು ದೆಂದು ಕಲ್ಪಿಸಿದರೆ ಬುದ್ಧಿಯೂ ಆತ್ಮನೂ ಬೇರೆಬೇರೆಯಾಗಿರುವುದರಿಂದ ಅವರಿಬ್ಬರ ಸಂಯೋಗವು ಅವಶ್ಯವಾಗಿ ನಾಶವಾಗಬೇಕಾಗುತ್ತದೆ. ಆದುದರಿಂದ ಬುದ್ಧಿಯಿಂದ ವಿಯೋಗವನ್ನು ಪಡೆದ ಆತ್ಮನು ಅನಾಲಕ್ಷ್ಯನಾಗುವುದರಿಂದ ಅವನು ಇಲ್ಲವೆಂದಾಗುತ್ತದೆ ಅಥವಾ ಅಸಂಸಾರಿಯೆಂದಾಗುತ್ತದೆ—ಎಂಬ ಪೂರ್ವಪಕ್ಷಕ್ಕೆ ಸೂತ್ರಕಾರರು ಹೀಗೆ ಉತ್ತ ರಿಸುತ್ತಾರೆ : ಈ ದೋಷವು ಬರುವುದಿಲ್ಲ ; ಏಕೆಂದರೆ ಎಲ್ಲಿಯವರೆಗೆ ಈ ಆತ್ಮನು ಸಂಸಾರಿ ಯಾಗಿರುವನೊ ಅಲ್ಲಿಯವರೆಗೂ ಇವನಿಗೆ ಬುದ್ಧಿಯ ಸಂಯೋಗವು ಹೋಗುವುದಿಲ್ಲ. ಎಲ್ಲಿಯವರೆಗೆ ಈ ಬುದ್ಧಿಯೆಂಬ ಉಪಾಧಿಯ ಸಂಬಂಧವಿರುವುದೊ ಅಲ್ಲಿಯವರೆಗೂ ಜೀವ ನಿಗೆ ಜೀವತ್ವವೂ ಸಂಸಾರಿತ್ವವೂ ಇರುವುವು. ಆದರೆ ಪರಮಾರ್ಥವಾಗಿ ಬುದ್ಧ್ಯುಪಾಧಿಯ ಸಂಬಂಧದಿಂದ ಕಲ್ಪಿತವಾದ ಸ್ವರೂಪಕ್ಕಿಂತ ಬೇರೆಯಾಗಿ ಜೀವನೆಂಬುವನೇ ಇರುವುದಿಲ್ಲ.[1] ನಿತ್ಯಮುಕ್ತಸ್ವರೂಪನೂ ಸರ್ವಜ್ಞನೂ ಆದ ಈಶ್ವರನಿಗಿಂತ ಎರಡನೆಯ ಚೇತನವಸ್ತುವು, ವೇದಾಂತಾರ್ಥವನ್ನು ನಿರೂಪಿಸಿದರೆ, ಕಂಡುಬರುವುದೇ ಇಲ್ಲ.[2] 'ಅವನಿಗಿಂತ ಬೇರೆಯಾದ ಸಾಕ್ಷಿಯಿಲ್ಲ ; ಅವನಿಗಿಂತ ಬೇರೆಯಾದ ಶ್ರೋತೃವಿಲ್ಲ, ಅವನಿಗಿಂತ ಬೇರೆಯಾದ ಮಂತೃ ವಿಲ್ಲ'[3] (ಬೃ. ಉ. ೩. ೭. ೨೩) ; 'ಅದಕ್ಕಿಂತ ಬೇರೆಯಾದ ಸಾಕ್ಷಿಯಿಲ್ಲ ; ಶ್ರೋತೃವಿಲ್ಲ, ಮಂತೃವಿಲ್ಲ, ವಿಜ್ಞಾತೃವಿಲ್ಲ'[4] (ಬೃ. ಉ. ೩. ೮. ೧೧) ; 'ನೀನು ಅದಾಗಿರುವೆ'[5] (ಛಾಂ ಉ. ೬. ೮. ೭) ; 'ನಾನು ಬ್ರಹ್ಮವಾಗಿರುತ್ತೇನೆ'[6] (ಬೃ. ಉ. ೧. ೪. ೧೦) ಎಂಬ ನೂರಾರು ಶ್ರುತಿಗಳಿಂದ ಇದು ಸಿದ್ಧವಾಗಿರುತ್ತದೆ.

ಎಲ್ಲಿಯವರೆಗೆ ಸಂಸಾರದಶೆಯಲ್ಲಿ ಆತ್ಮನಿರುವನೊ ಅಲ್ಲಿಯವರೆಗೂ ಬುದ್ಧಿಸಂಯೋಗ

* ಈ ಸೂತ್ರವು ಮಧ್ವಭಾಷ್ಯದಲ್ಲಿ ಯಾವದಧಿಕರಣ ಎನಿಸಿದೆ.

[1] ಪರಮಾರ್ಥತಸ್ತು ನ ಜೀವೋ ನಾಮ ಬುದ್ಧ್ಯುಪಾಧಿಸಂಬಂಧಪರಿಕಲ್ಪಿತಸ್ವರೂಪ- ವ್ಯತಿರೇಕೇಣಾಸ್ತಿ (ಸೂ ಭಾ.).

[2] ನ ಹಿ ನಿತ್ಯಮುಕ್ತಸ್ವರೂಪಾತ್ ಸರ್ವಜ್ಞಾದೀಶ್ವರಾದನ್ಯಶ್ಚೇತನೋ ಧಾತುರ್ದ್ವಿ ತೀಯೋ ವೇದಾಂತಾರ್ಥನಿರೂಪಣಾಯಾಮುಪಲಭ್ಯತೇ (ಸೂ. ಭಾ.).

[3] ನಾನ್ಯೋಽತೋಽಸ್ತಿ ದ್ರಷ್ಟಾ ಶ್ರೋತಾ ಮಂತಾ ವಿಜ್ಞಾತಾ ।

[4] ನಾನ್ಯದತೋಽಸ್ತಿ ದ್ರಷ್ಟೃ ಶ್ರೋತೃ ಮಂತೃ ವಿಜ್ಞಾತೃ ।

[5] ತತ್ತ್ವಮಸಿ ।

[6] ಅಹಂ ಬ್ರಹ್ಮಾಸ್ಮಿ ।

ವಿರುತ್ತದೆ ಎಂಬುದನ್ನು ಶ್ರುತಿಯಲ್ಲಿ ನೋಡಬಹುದು : 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಬುದ್ಧಿಯಲ್ಲಿರುವ ಜ್ಯೋತಿಯೂ ಆದ ಈ ಪುರುಷನು ....... ಅವನು ಬುದ್ಧಿಗೆ ಸಮಾನವಾದ ಆಕಾರವನ್ನು ಪಡೆದು ಇಹಲೋಕ-ಪರಲೋಕಗಳ ಮಧ್ಯೆ ಸಂಚರಿಸುತ್ತಾನೆ ; ಅವನು ಧ್ಯಾನಿಸುವಂತೆ ಚಲಿಸುವಂತೆ ಇರುತ್ತಾನೆ'[1] (ಬೃ. ಉ. ೪. ೩. ೭) ಇಲ್ಲಿ 'ವಿಜ್ಞಾನಮಯ' ಎಂದು ಬುದ್ಧಿಮಯನನ್ನೇ ಹೇಳಿದೆ[2] ಬುದ್ಧಿಮಯತ್ವವೆಂದರೆ ತದ್ಗುಣಸಾರತ್ವವೆಂಬುದೇ ಅಭಿಪ್ರಾಯ. ಮತ್ತೆ ಆತ್ಮನಿಗೆ ಬುದ್ಧ್ಯುಪಾಧಿಸಂಬಂಧವು ಮಿಥ್ಯಾಜ್ಞಾನಪುರಃಸರವಾಗಿರುತ್ತದೆ. ಮಿಥ್ಯಾಜ್ಞಾನವು ಸಮ್ಯಗ್‌ಜ್ಞಾನವಿಲ್ಲದೆ ಹೋಗುವುದಿಲ್ಲವಾದುದರಿಂದ ಎಲ್ಲಿಯವರೆಗೆ ಬ್ರಹ್ಮಾತ್ಮತತ್ತ್ವವನ್ನು ಅರಿತುಕೊಳ್ಳದೆ ಇರುವನೊ ಅಲ್ಲಿಯವರೆಗೆ ಈ ಬುದ್ಧ್ಯುಪಾಧಿಸಂಬಂಧವು ನಿಲ್ಲುವುದಿಲ್ಲ.[3]

ವಿ.—'ಮತ್ತು ಆತ್ಮನು ಇರುವವರೆಗೆ (ಜ್ಞಾನವು) ಇರುವುದರಿಂದ ದೋಷವಿಲ್ಲ; ಏಕೆಂದರೆ ಇದು (ಲೋಕದಲ್ಲಿ) ಕಂಡುಬರುತ್ತದೆ' ಎಂಬುದು ಸೂತ್ರಾರ್ಥ.

ಆತ್ಮನು ಇರುವ ತನಕ ಅವನ ಧರ್ಮವಾದ ಜ್ಞಾನವೂ ಇರುವುದರಿಂದ ಆ ಧರ್ಮದ ಶಬ್ದದಿಂದಲೇ ಆತ್ಮನನ್ನು ಕರೆಯಬಹುದು. ಉದಾಹರಣೆಗೆ ಕೊಂಬು ಮುರಿದುಹೋಗಿರುವ ಗೋವಿನಲ್ಲಿ ಗೋತ್ವವಿರುವುದರಿಂದ ಅದೂ ಗೌಃ ಎಂದು ವ್ಯವಹರಿಸಲ್ಪಡುತ್ತದೆ ; ಏಕೆಂದರೆ ಆ ಧರ್ಮವೇ ಅದರ ಸ್ವರೂಪವನ್ನು ನಿರೂಪಿಸುತ್ತದೆ.[4] ಜ್ಞಾನದಂತೆ ಆತ್ಮನು ಸ್ವಪ್ರಕಾಶನಾದುದರಿಂದ ಜ್ಞಾನಶಬ್ದದಿಂದ ಅವನನ್ನು ವ್ಯವಹರಿಸುವುದು ಸರಿ—ಎಂಬುದನ್ನು ಸೂತ್ರದಲ್ಲಿರುವ ಚಕಾರವು ತಿಳಿಸುತ್ತದೆ.

ದ್ವೈ—'ಪರಮಾತ್ಮನೊಂದಿಗೆ ಅನಾದಿಕಾಲದಿಂದಲೂ ಜೀವನಿರುವುದರಿಂದ ದೋಷವಿಲ್ಲ ; ಇದು ಶ್ರುತಿಯಲ್ಲಿ ಕಂಡುಬರುತ್ತದೆ' ಎಂಬುದು ಸೂತ್ರಾರ್ಥ.

ಜೀವನಿಗೂ ಉತ್ಪತ್ತಿಯನ್ನು ಹೇಳಿದೆ ; ಆದುದರಿಂದ 'ಅವನು ಅನಾದಿಯಾದ ಪುಣ್ಯದಿಂದಲೂ ಪಾಪದಿಂದಲೂ ಬದ್ಧನಾಗಿರುವನು ; ಪರಮಾತ್ಮನಿಂದ ಮುಕ್ತನಾದಾಗ ಆನಂತ್ಯಕ್ಕೆ ಅರ್ಹನಾಗುತ್ತಾನೆ' ಎಂಬ ಶ್ರುತಿಯ ಪ್ರಕಾರ ಅವನಿಗೆ ಅನಾದಿಕರ್ಮಸಂಬಂಧವಾಗಲಿ ಆನಂತ್ಯದ ಪ್ರಾಪ್ತಿಯಾಗಲಿ ಹೊಂದಬೇಕಾಗಿದ್ದುದು ಹೊಂದುವುದಿಲ್ಲ—ಎಂಬ ಆಶಂಕೆಯನ್ನು ಪರಿಹರಿಸಲು ಈ ಸೂತ್ರವು ಬಂದಿದೆ: ಪರಮಾತ್ಮನು ಅನಾದಿಯೂ

---

[1] ....ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ ಧ್ಯಾಯತೀವ ಲೇಲಾಯತೀವ ।

[2] ತತ್ರ ವಿಜ್ಞಾನಮಯ ಇತಿ ಬುದ್ಧಿಮಯ ಇತ್ಯೇತದುಕ್ತಂ ಭವತಿ (ಸೂ. ಭಾ.)

[3] ಅಪಿ ಚ ಮಿಥ್ಯಾಜ್ಞಾನಪುರಃಸರೋಽಯಮಾತ್ಮನೋ ಬುದ್ಧ್ಯುಪಾಧಿಸಂಬಂಧಃ । ನ ಚ ಮಿಥ್ಯಾಜ್ಞಾನಸ್ಯ ಸಮ್ಯಗ್‌ಜ್ಞಾನಾದನ್ಯತ್ರ ನಿವೃತ್ತಿರಸ್ತೀತ್ಯತೋ ಯಾವದ್ಬ್ರಹ್ಮಾತ್ಮತಾನವಬೋಧಸ್ತಾವದೇಯಂ ಬುದ್ಧ್ಯುಪಾಧಿಸಂಬಂಧೋ ನ ಶಾಮ್ಯತಿ (ಸೂ. ಭಾ.).

[4] ತಥಾ ಚ ಖಂಡಾದಯೋ ಯಾವತ್ಸ್ವರೂಪಭಾವಿಗೋತ್ವಾದಿಧರ್ಮಶಬ್ದೇನ ಗೌರಿತಿ ವ್ಯಪದಿಶ್ಯಮಾನಾ ದೃಶ್ಯಂತೇ (ಶ್ರೀಭಾಷ್ಯ).

ಅನಂತನೂ ಆಗಿರುವಂತೆ ಜೀವನೂ ಆಗಿರುವನು[1] 'ಪರಮಾತ್ಮನೂ ನಿತ್ಯನು, ಜೀವನೂ ನಿತ್ಯನು, ಜೀವನ ಧಾತುಗಳು ಅನಿತ್ಯಗಳು, ಆದುದರಿಂದ ಅವನು ಹುಟ್ಟುತ್ತಾನೆ, ಸಾಯುತ್ತಾನೆ, ಮುಕ್ತನಾಗುತ್ತಾನೆ ಎಂದು ಹೇಳುತ್ತಾರೆ'–ಎಂದು ಅಗ್ನಿವೇಶ್ಯಶ್ರುತಿಯು ಹೇಳುತ್ತದೆ

## ಪುಂಸ್ತ್ವಾದಿವತ್ ತ್ವಸ್ಯ ಸತೋಽಭಿವ್ಯಕ್ತಿಯೋಗಾತ್* ॥ ೩೧ ॥

೩೧ ಪುಂಸ್ತ್ವಾದಿಗಳಂತೆ ಈ (ಬುದ್ಧಿಸಂಬಂಧವೂ) ಇದ್ದುಕೊಂಡೇ ಅಭಿವ್ಯಕ್ತವಾಗುವುದರಿಂದ (ಸಂಸಾರಿತ್ವವು ಹೊಂದುತ್ತದೆ)

ಸುಷುಪ್ತಿ-ಪ್ರಲಯಗಳಲ್ಲಿ ಆತ್ಮನಿಗೆ ಬುದ್ಧಿಸಂಬಂಧವನ್ನು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ, ಏಕೆಂದರೆ 'ಆಗ ಸೋಮ್ಯ, ಸದ್ವಸ್ತುವಿನೊಂದಿಗೆ ಏಕೀಭೂತನಾಗಿರುತ್ತಾನೆ, ಸ್ವರೂಪವನ್ನು ಹೊಂದಿರುತ್ತಾನೆ'[2] (ಛಾಂ ಉ ೬ ೮ ೧) ಎಂದು ಶ್ರುತಿಯು ಹೇಳುತ್ತದೆ ಮತ್ತು ವಿಕಾರಗಳೆಲ್ಲ ಆಗ ಲಯವನ್ನು ಹೊಂದುತ್ತವೆ, ಹೀಗಿರುವಾಗ ಆತ್ಮನಿರುವವರೆಗೆ ಬುದ್ಧಿಸಂಬಂಧವಿರುತ್ತದೆಂದು ಹೇಳುವುದು ಹೇಗೆ?—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ ಪುಂಸ್ತ್ವವು ಬಾಲ್ಯದಲ್ಲಿ ಬೀಜರೂಪವಾಗಿರುವುದರಿಂದ ಯೌವನದಲ್ಲಿ ತೋರಿಕೊಳ್ಳುವುದು ಹೀಗೆಯೇ ಬುದ್ಧಿ ಸಂಬಂಧವು ಸುಷುಪ್ತಿ-ಪ್ರಲಯಗಳಲ್ಲಿ ಶಕ್ತಿರೂಪದಿಂದ ಇದ್ದು ಪುನಃ ಪ್ರಬೋಧಸೃಷ್ಟಿಕಾಲಗಳಲ್ಲಿ ವ್ಯಕ್ತವಾಗುತ್ತದೆ[3] ಅವಿದ್ಯೆಯು ಬೀಜರೂಪದಿಂದಿರುವುದರಿಂದಲೇ ಮನುಷ್ಯನು ಸುಷುಪ್ತಿಯಿಂದ ಎಚ್ಚರವಾಗುತ್ತಾನೆ ಎಂದು ಶ್ರುತಿಯು ಹೇಳುತ್ತದೆ: 'ಇಲ್ಲಿ ಈ ಪ್ರಾಣಿಗಳು ಏನಾಗಿರುವುವೊ–ಹುಲಿ ಸಿಂಹ .–ಅವು ಅವೇ ಆಗುವುವು'[4] (ಛಾಂ. ಉ ೬ ೯ ೩)

ವಿ.—ಸುಷುಪ್ತ್ಯಾದಿಗಳಲ್ಲಿರುವ ಜ್ಞಾನವು ಜಾಗ್ರದವಸ್ಥೆಯಲ್ಲಿಯೇ ಅಭಿವ್ಯಕ್ತವಾಗುತ್ತದೆ, ಆದುದರಿಂದ ಜ್ಞಾನವು ಆತ್ಮನ ಧರ್ಮವೆಂದು ಹೇಳುವುದು ಯುಕ್ತವಾಗಿರುತ್ತದೆ ಬಾಲ್ಯಾವಸ್ಥೆಯಲ್ಲಿರುವ ಪುಂಸ್ತ್ವಾದಿಗಳು ಯೌವನದಲ್ಲಿ ವ್ಯಕ್ತವಾದ ಹಾಗೆ ಆದುದರಿಂದ ಜ್ಞಾತೃತ್ವವೇ ಜೀವಾತ್ಮನ ಸ್ವರೂಪ, ಮತ್ತು ಈ ಆತ್ಮನು ಅಣುಪರಿಮಾಣ[5]

---

[1] ಯಾವತ್ಪರಮಾತ್ಮಾ ತಿಷ್ಠತ್ಯನಾದ್ಯನಂತತ್ವೇನೈವಂ ಜೀವೋಽಪಿ (ಮ ಭಾ).

* ಇದು ಮತ್ತು ಮುಂದಿನ ಸೂತ್ರ ಮಧ್ವಭಾಷ್ಯದಲ್ಲಿ ಪುಂಸ್ತ್ವಾಧಿಕರಣ ಎನಿಸಿದೆ

[2] ಸತಾ ಸೋಮ್ಯ ತಥಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ।

[3] ಏವಮಯಮಪಿ ಬುದ್ಧಿಸಂಬಂಧಃ ಶಕ್ತ್ಯಾತ್ಮನಾ ವಿದ್ಯಮಾನ ಏವ ಸುಷುಪ್ತ-ಪ್ರಲಯಯೋಃ ಪುನಃ ಪ್ರಬೋಧಪ್ರಸವಯೋರಾವಿರ್ಭವತಿ (ಸೂ ಭಾ)

[4] ತ ಇಹ ವ್ಯಾಘ್ರೋ ವಾ ಸಿಂಹೋ ವಾ ।

[5] ಅತೋ ಜ್ಞಾತೃತ್ವಮೇವ ಜೀವಾತ್ಮನಃ ಸ್ವರೂಪಮ್, ಸ ಚಾಯಮಾತ್ಮಾಣುಪರಿಮಾಣಃ (ಶ್ರೀಭಾಷ್ಯ)

ವುಳ್ಳವನು 'ಇಲ್ಲಿಂದ ಹೋದಮೇಲೆ ಸಂಜ್ಞೆಯಿರುವುದಿಲ್ಲ'[1] (ಬೃ ಉ ೨ ೪ ೧೨) ಎಂಬ ಶ್ರುತಿಯು ಮುಕ್ತನಿಗೆ ಜ್ಞಾನವಿಲ್ಲ ಎಂಬುದನ್ನು ತಿಳಿಸುವುದಿಲ್ಲ ಸಂಸಾರದಶೆಯಲ್ಲಿ ಭೂತಸಂಸರ್ಗದಿಂದ ಉಂಟಾಗುವ ಜನ್ಮ-ಮರಣಾದಿಗಳ ಜ್ಞಾನವಿರುವುದಿಲ್ಲ ಎಂಬುದನ್ನು ತಿಳಿಸುತ್ತದೆ

**ಟಿಪ್ಪ.**—ಬಾಲ್ಯದಲ್ಲಿರುವ ಪುಂಸ್ತ್ವವು ಯೌವನದಲ್ಲಿ ವ್ಯಕ್ತವಾಗುವಂತೆ ಜೀವನ ಸಾರವಾದ ಆನಂದಾದಿಗುಣಗಳು ಅವನು ಮುಕ್ತನಾದಮೇಲೆ ವ್ಯಕ್ತವಾಗುತ್ತವೆ[2] 'ದುಃಖದಿಂದ ಮುಕ್ತನಾಗಿ ಆನಂದಿಯಾಗುತ್ತಾನೆ' ಎಂದು ಪೈಂಗಿಶ್ರುತಿಯು ಹೇಳುತ್ತದೆ

## ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರನಿಯಮೋ ವಾಽನ್ಯಥಾ ॥ ೩೨ ॥

೩೨ ಹಾಗಿಲ್ಲದಿದ್ದರೆ (ಎಂದರೆ ಅಂತಃಕರಣವಿಲ್ಲದಿದ್ದರೆ) ಯಾವಾಗಲೂ ಅರಿವಾಗುವ ಅಥವಾ ಅರಿವಾಗದ ಪ್ರಸಂಗವಾದೀತು, ಅಥವಾ ಎರಡರಲ್ಲಿ (ಎಂದರೆ ಆತ್ಮನಲ್ಲಿ ಅಥವಾ ಇಂದ್ರಿಯಗಳಲ್ಲಿ) ಒಂದರ ನಿಯಮವಾಗಬೇಕಾದೀತು

ಆತ್ಮನಿಗೆ ಉಪಾಧಿಯಾಗಿರುವ ಅಂತಃಕರಣಕ್ಕೆ ಮನಸ್ಸು ಬುದ್ಧಿ ವಿಜ್ಞಾನ ಚಿತ್ತ —ಎಂಬ ಅನೇಕ ಹೆಸರುಗಳಿವೆ ಇಂಥ ಅಂತಃಕರಣವನ್ನು ಒಪ್ಪಿಕೊಳ್ಳದಿದ್ದರೆ ನಿತ್ಯವಾದ ಉಪಲಬ್ಧಿ ಅಥವಾ ನಿತ್ಯವಾದ ಅನುಪಲಬ್ಧಿ ಆಗಬೇಕಾಗುವುದು. ಎಂದರೆ ಆತ್ಮ, ಇಂದ್ರಿಯಗಳು, ವಿಷಯಗಳು—ಎಂಬ ಜ್ಞಾನಸಾಧನಗಳು ಹತ್ತಿರವಿರುವಾಗ ಯಾವಾಗಲೂ ಅರಿವು ಆಗಬೇಕಾಗುವುದು[3] ಹಾಗಾಗದೆ ಈ ಮೂರು ಕಾರಣಗಳಿದ್ದೂ ಫಲವಾಗದಿದ್ದರೆ ಯಾವಾಗಲೂ ಅರಿವು ಆಗದೇ ಇರಬೇಕಾಗುವುದು[4] ಈ ಎರಡೂ ಆಗುವುದಿಲ್ಲ ಇಲ್ಲದಿದ್ದರೆ ಆತ್ಮನ ಅಥವಾ ಇಂದ್ರಿಯದ ಶಕ್ತಿಯು ಪ್ರತಿಬದ್ಧವಾಗಿದೆಯೆಂದು ಒಪ್ಪಿಕೊಳ್ಳಬೇಕಾಗುವುದು ಆದರೆ ಆತ್ಮನು ನಿಷ್ಕ್ರಿಯನಾದುದರಿಂದ ಅವನ ಶಕ್ತಿಗೆ ಪ್ರತಿಬಂಧವಾಗಲಾರದು ಇಂದ್ರಿಯಕ್ಕೂ ಪ್ರತಿಬಂಧವಾಗುವಂತಿಲ್ಲ, ಏಕೆಂದರೆ ಪೂರ್ವೋತ್ತರಕ್ಷಣಗಳಲ್ಲಿ ಪ್ರತಿಬಂಧವಾಗದಿರುವಾಗ ಮಧ್ಯದಲ್ಲಿ ಅಕಸ್ಮಾತ್ತಾಗಿ ಶಕ್ತಿಯು ಪ್ರತಿ-

---

[1] ನ ಪ್ರೇತ್ಯ ಸಂಜ್ಞಾಽಸ್ತಿ ।

[2] ಯಥಾ ಬಾಲಸ್ಯ ಸದೇವ ಪುಂಸ್ತ್ವಂ ಯೌವನೇಽಭಿವ್ಯಜ್ಯತ ಏವಂ ಸತಾಮೇವಾನಂದಾದೀನಾಂ ವ್ಯಕ್ತ್ಯಪೇಕ್ಷಯಾ ತದುಕ್ತಿಃ (ಮ ಭಾ )

[3] ಆತ್ಮೇಂದ್ರಿಯವಿಷಯಾಣಾಮುಪಲಬ್ಧಿಸಾಧನಾನಾಂ ಸನ್ನಿಧಾನೇ ಸತಿ ನಿತ್ಯಮೇವೋಪಲಬ್ಧಿಃ ಪ್ರಸಜ್ಯೇತ (ಸೂ. ಭಾ ).

[4] ಅಥ ಸತ್ಯಪಿ ಹೇತುಸಮವಧಾನೇ ಫಲಾಭಾವಸ್ತತೋ ನಿತ್ಯಮೇವಾನುಪಲಬ್ಧಿಃ ಪ್ರಸಜ್ಯೇತ (ಸೂ. ಭಾ.).

ಬಂಧವಾಗಿದೆ ಎಂದು ಹೇಳಲಾಗುವುದಿಲ್ಲ. ಆದುದರಿಂದ ಯಾವುದರ ಅವಧಾನ-ಅನವಧಾನಗಳಿಂದ ಉಪಲಬ್ಧಿ-ಅನುಪಲಬ್ಧಿಗಳು ಆಗುವುವೋ ಅಂಥ ಮನಸ್ಸನ್ನು ಒಪ್ಪಿಕೊಳ್ಳಬೇಕು. "ನಾನು ಅನ್ಯಮನಸ್ಕನಾಗಿದ್ದೆನು, ನಾನು ಕೇಳಲಿಲ್ಲ" ಎಂದು (ಜನರು ಹೇಳುತ್ತಾರೆ). ಮನಸ್ಸಿನಿಂದಲೇ ಎಲ್ಲರೂ ನೋಡುತ್ತಾರೆ ಮತ್ತು ಕೇಳುತ್ತಾರೆ'[1] (ಬೃ. ಉ ೧. ೫. ೩) ಎಂದು ಶ್ರುತಿಯು ಹೇಳುತ್ತದೆ. ಆದುದರಿಂದ ಮನಸ್ಸಿನ ಪ್ರಕಾರವಾದ ಬುದ್ಧಿಯ ಸಂಬಂಧದಿಂದಲೇ ಆತ್ಮನಿಗೆ ಸಂಸಾರವುಂಟಾಗುತ್ತದೆ.

ವಿ.—ಆತ್ಮನು ಸರ್ವಗತನು ಮತ್ತು ಜ್ಞಾನಮಾತ್ರನು ಎಂಬ ಪಕ್ಷದಲ್ಲಿ ನಿತ್ಯವಾದ ಜ್ಞಾನ ಅಥವಾ ಅಜ್ಞಾನ—ಇವೆರಡೂ ಒಟ್ಟಿಗೇ ಸರ್ವತ್ರ ಉಂಟಾಗಬೇಕಾಗುವುದು ; ಅಥವಾ ಜ್ಞಾನಕ್ಕಾಗಲಿ ಅಜ್ಞಾನಕ್ಕಾಗಲಿ ನಿತ್ಯವಾದ ನಿಯಮವುಂಟಾಗಬೇಕಾದೀತು ; ಎಂದರೆ, ಒಂದಿದ್ದರೆ ಒಂದಿಲ್ಲದಿರಬೇಕಾಗುವುದು. ಸಿದ್ಧಾಂತದ ಪ್ರಕಾರ ಆತ್ಮನು ಶರೀರದಲ್ಲಿಯೇ ಅವಸ್ಥಿತನಾಗಿರುವುದರಿಂದ ಅಲ್ಲಿಯೇ ಜ್ಞಾನವುಂಟಾಗುತ್ತದೆಯೇ ಹೊರತು ಬೇರೊಂದು ಸ್ಥಾನದಲ್ಲಲ್ಲ.[2]

ದ್ವೈ.—'ಹಾಗಾಗದಿದ್ದರೆ ನಿತ್ಯವೂ ಜ್ಞಾನವಾಗಲಿ ದುಃಖವಾಗಲಿ ಉಂಟಾದೀತು, ಅಥವಾ ಎರಡೂ ಯಾವಾಗಲೂ ಉಂಟಾದೀತು' ಎಂಬುದು ಸೂತ್ರಾರ್ಥ.

ಆನಂದಾದಿಗಳ ಅಭಿವ್ಯಕ್ತಿಯನ್ನು ಒಪ್ಪಿಕೊಳ್ಳದಿದ್ದರೆ ದೇವತೆಗಳಿಗೆ ಯಾವಾಗಲೂ ಆನಂದಾದಿಗಳೂ, ಅಸುರರಿಗೆ ಯಾವಾಗಲೂ ದುಃಖಾದಿಗಳೂ, ಮನುಷ್ಯರಿಗೆ ಎರಡೂ ಉಂಟಾಗುತ್ತಿದ್ದುವು.[3]

---

[1] ಅನ್ಯತ್ರಮನಾ ಅಭೂವಂ ನಾಶ್ರೌಷಮ್ ।....ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ ।

[2] ಅಸ್ಮಾಕಂ ಶರೀರಸ್ಯಾಂತರೇವಾವಸ್ಥಿತತ್ವಾದಾತ್ಮನಸ್ತತ್ರೈವೋಪಲಬ್ಧಿರ್ನಾನ್ಯತ್ರೇತಿ ವ್ಯವಸ್ಥಾಸಿದ್ಧಿಃ (ಶ್ರೀಭಾಷ್ಯ).

[3] ವ್ಯಕ್ತ್ಯನಂಗೀಕಾರೇ ದೇವಾನಾಂ ನಿತ್ಯೋಪಲಬ್ಧಿರಾನಂದಾದೀನಾಮಸುರಾಣಾಂ ನಿತ್ಯಾನುಪಲಬ್ಧಿರ್ಮನುಷ್ಯಾಣಾಂ ಚ ನಿತ್ಯೋಪಲಬ್ಧ್ಯನುಪಲಬ್ಧೀ ಚ ಪ್ರಸಜ್ಯಂತೇ (ಮ.ಭಾ.).

# ೧೪. ಕರ್ತ್ರಧಿಕರಣ*

(ಸೂ. ೩೩-೩೯)

## ಕರ್ತಾ ಶಾಸ್ತ್ರಾರ್ಥವತ್ತ್ವಾತ್ ॥ ೩೩ ॥

೩೩ (ಜೀವನು) ಕರ್ತೃ; ಏಕೆಂದರೆ ಶಾಸ್ತ್ರಕ್ಕೆ ಅರ್ಥವಾಗಬೇಕಾಗಿದೆ

ಜೀವನು ಕರ್ತೃ; ಏಕೆಂದರೆ ಶಾಸ್ತ್ರಕ್ಕೆ ಅರ್ಥವಾಗಬೇಕಾಗಿದೆ. ಹೀಗೆ ಒಪ್ಪಿಕೊಂಡರೆ 'ಯಾಗಮಾಡಬೇಕು' 'ಹೋಮಮಾಡಬೇಕು' 'ಕೊಡಬೇಕು'—ಎಂಬ ವಿಧಿಗಳಿಗೆ ಅರ್ಥವುಂಟಾಗುತ್ತದೆ. ಈ ವಿಧಿಗಳೆಲ್ಲವೂ ಕರ್ತೃವಿನ ವಿಶೇಷ ಕರ್ತವ್ಯಗಳನ್ನು ಉಪದೇಶಿಸುತ್ತವೆ ಹೀಗೆಯೇ 'ಇವನೇ ನೋಡುವವನೂ ನಿಶ್ಚಯಿಸುವವನೂ ಕರ್ತೃವೂ ವಿಜ್ಞಾತೃವೂ ಪುರುಷನೂ ಆಗಿರುತ್ತಾನೆ'[1] (ಪ್ರ. ಉ. ೪. ೯) ಎಂಬ ಶ್ರುತಿಗೆ ಅರ್ಥವುಂಟಾಗುತ್ತದೆ

ವಿ.—ಈ ಜೀವಾತ್ಮನು ಜ್ಞಾತೃವೆಂದೂ ಅಣುಪರಿಮಾಣವುಳ್ಳವನೆಂದೂ ಹಿಂದೆ ಹೇಳಿದ್ದಾಯಿತು. ಈಗ 'ಇವನು ಕರ್ತೃವೊ ಅಥವಾ ತಾನೇ ಅಕರ್ತೃವಾಗಿದ್ದರೂ ಅಚೇತನವಾದ ಗುಣಗಳ ಕರ್ತೃತ್ವವನ್ನು ತನ್ನಲ್ಲಿ ಆರೋಪಿಸಿಕೊಂಡಿರುವನೊ ?'—ಎಂಬ ಪ್ರಶ್ನೆಯು ಏಳುತ್ತದೆ. ಆತ್ಮನು ಕರ್ತೃವಲ್ಲ ; ಏಕೆಂದರೆ ಕರ್ತೃತ್ವವು ಗುಣಗಳಿಗೇ ಸೇರಿದೆಯೆಂದು ಅಧ್ಯಾತ್ಮಶಾಸ್ತ್ರದಲ್ಲಿ ಹೇಳಿದೆ ಎಂಬುದು ಪೂರ್ವಪಕ್ಷ ಹೀಗೆಯೇ ಕಠವಲ್ಲಿಯಲ್ಲಿ (೧. ೨. ೧೮) ಜೀವನಿಗೆ ಮೊದಲು ಜನ್ಮ-ಜರಾ-ಮರಣಾದಿಗಳೆಂಬ ಪ್ರಕೃತಿ-ಧರ್ಮಗಳನ್ನು ನಿಷೇಧಿಸಿ, ಅನಂತರ ಕೊಲ್ಲುವಿಕೆಯೇ ಮೊದಲಾದ ಕರ್ಮಗಳಲ್ಲಿ ಕರ್ತೃತ್ವವನ್ನು ನಿಷೇಧಿಸುತ್ತದೆ. ಸ್ವಯಂ ಭಗವಂತನೇ ಅಕರ್ತೃತ್ವವು ಜೀವನ ಸ್ವರೂಪ, ಕರ್ತೃತ್ವಾಭಿಮಾನವು ಮೋಹದಿಂದ ಉಂಟಾಗಿದೆ ಎಂದು ಹೇಳಿರುತ್ತಾನೆ (ಗೀತಾ ೩. ೨೭, ೧೪. ೧೯, ೧೩. ೨೦). ಆದುದರಿಂದ ಜೀವನಿಗೆ ಭೋಕ್ತೃತ್ವ, ಪ್ರಕೃತಿಗೆ ಕರ್ತೃತ್ವ ಸಿದ್ಧವಾಗುತ್ತವೆ.

---

* 'ಜೀವಕರ್ತೃತ್ವವು ಸ್ವಾಭಾವಿಕವೆಂದು ಪೂರ್ವಮೀಮಾಂಸಕರು ಹೇಳುತ್ತಾರೆ. ಕರ್ತೃತ್ವವು ಬುದ್ಧಿಗೆ ಸೇರಿದೆಯೇ ಹೊರತು ಜೀವನಿಗಲ್ಲ ಎಂದು ಸಾಂಖ್ಯರು ಹೇಳುತ್ತಾರೆ. ಜೀವಕರ್ತೃತ್ವವು ಔಪಾಧಿಕವೆಂಬುದು ಅದ್ವೈತಿಗಳ ಅಭಿಪ್ರಾಯ. ಈ ಅಧಿಕರಣದಲ್ಲಿ ಸಾಂಖ್ಯರು ಪೂರ್ವಪಕ್ಷಿಗಳಾಗಿಯೂ ಮೀಮಾಂಸಕರು ಸಿದ್ಧಾಂತಿಗಳಾಗಿಯೂ ಇರುತ್ತಾರೆ' (ರ. ಪ್ರ.). ಶ್ರೀಭಾಷ್ಯದಲ್ಲಿ ಯಥಾ ಚ ತಕ್ಷೋಭಯಥಾ (೪೦) ಎಂಬ ಸೂತ್ರವೂ ಈ ಅಧಿಕರಣದಲ್ಲಿಯೇ ಸೇರಿದೆ. ಮಧ್ವಭಾಷ್ಯದಲ್ಲಿ ೪೨ನೆಯ ಸೂತ್ರದವರೆಗೆ ಕರ್ತೃತ್ವಾಧಿಕರಣವು ಮುಂದುವರಿಯುತ್ತದೆ.

1 ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ ।

ಇಂಥ ಪೂರ್ವಪಕ್ಷಕ್ಕೆ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ : ಆತ್ಮನೇ ಕರ್ತೃ, ಗುಣಗಳಲ್ಲ. ಹೀಗಾದರೆ ಶಾಸ್ತ್ರಕ್ಕೆ ಪ್ರಯೋಜನವನ್ನು ಹೇಳಬಹುದಾಗಿದೆ. ಶಾಸ್ತ್ರವು 'ಯಜ್ಞಮಾಡಬೇಕು', 'ಉಪಾಸನೆಮಾಡಬೇಕು' ಎಂದು ಸ್ವರ್ಗಮೋಕ್ಷಫಲಗಳ ಭೋಕ್ತೃವಿಗೇ ಕರ್ತೃತ್ವವನ್ನು ಹೇಳುತ್ತದೆ. ಅಚೇತನವು ಕರ್ತೃವಾಗಿದ್ದರೆ ಚೇತನನನ್ನು ಕುರಿತು ವಿಧಿಯನ್ನು ಹೇಳುತ್ತಿರಲಿಲ್ಲ ಶಾಸನಮಾಡುವುದರಿಂದ ಶಾಸ್ತ್ರವು; ಶಾಸನವೆಂದರೆ ಕರ್ಮದಲ್ಲಿ ಪ್ರೇರಿಸುವುದು.[1] 'ಪ್ರಯೋಗಿಸುವವನಿಗೇ ಶಾಸ್ತ್ರಫಲವು'[2] (ಜೈ. ಸೂ. ೩. ೭. ೧೮) ಎಂದು ಪೂರ್ವಮೀಮಾಂಸೆಯು ಹೇಳುತ್ತದೆ ಆತ್ಮನು ನಿತ್ಯನಾದುದರಿಂದ ಅವನನ್ನು ಕೊಲ್ಲಲಾಗುವುದಿಲ್ಲ ಎಂಬುದೇ ಕಠವಲ್ಲಿಯ (೧. ೨. ೧೯) ಅರ್ಥ. 'ಪ್ರಕೃತಿಯ ಗುಣಗಳು ಎಲ್ಲ ರೀತಿಯಿಂದಲೂ ಕರ್ಮಗಳನ್ನು ಮಾಡುತ್ತವೆ'[3] ಎಂದು ಪೂರ್ವಪಕ್ಷಿಯು ಉದ್ಧರಿಸಿದ ಗೀತೆಯ (೩. ೨೭) ಅರ್ಥವು ಹೀಗಿದೆ : ಸಾಂಸಾರಿಕಪ್ರವೃತ್ತಿಗಳಲ್ಲಿ ತ್ರಿಗುಣಗಳ ಸಂಸರ್ಗದಿಂದ ಕರ್ತೃತ್ವವು ಒದಗಿದೆಯೇ ಹೊರತು ಸ್ವರೂಪದಿಂದಲ್ಲ. ಈ ಅರ್ಥದಲ್ಲಿಯೇ ಗೀತೆಯು (೧೩. ೨೧) ಹೀಗೆ ಹೇಳುತ್ತದೆ : 'ಇವನು ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಹುಟ್ಟುವುದಕ್ಕೆ ಗುಣಸಂಗವು ಕಾರಣ.'[4]

**ದ್ವೈ.**—ಜೀವನಿಗೆ ಕರ್ತೃತ್ವವಿಲ್ಲದಿದ್ದರೆ ಶಾಸ್ತ್ರಕ್ಕೆ ಪ್ರಯೋಜನವಿಲ್ಲದಿರುವುದರಿಂದ ಜೀವನೂ ಕೂಡ ಕರ್ತೃವು.[5]

**ವಿಹಾರೋಪದೇಶಾತ್* || ೩೪ ||**

೩೪ ಸಂಚಾರವನ್ನು ಉಪದೇಶಿಸಿರುವುದರಿಂದಲೂ (ಜೀವನು ಕರ್ತೃ).

ಶ್ರುತಿಯು ಸ್ವಪ್ನಾವಸ್ಥೆಯಲ್ಲಿ ಜೀವನಿಗೆ ಸಂಚಾರವನ್ನು ಹೇಳಿರುವುದರಿಂದಲೂ ಅವನು ಕರ್ತೃ : 'ಅಮೃತನಾದ ಅವನು ಮನಸ್ಸಿದ್ದೆಡೆಗೆ ಹೋಗುತ್ತಾನೆ'[6] (ಬೃ. ಉ. ೪. ೩. ೧೨); 'ತನ್ನ ಶರೀರದಲ್ಲಿ ಸ್ವೇಚ್ಛೆಯಾಗಿ ಸುತ್ತಾಡುತ್ತಾನೆ'[7] (ಬೃ.ಉ ೨.೧.೧೮)

**ವಿ.**—'ಸ್ವೀಕಾರದಿಂದಲೂ ಸಂಚಾರವನ್ನು ಉಪದೇಶಿಸಿರುವುದರಿಂದಲೂ ಜೀವನು ಕರ್ತೃ' ಎಂಬುದು ಸೂತ್ರಾರ್ಥ

---

[1] ಶಾಸನಾಚ್ಚ ಶಾಸ್ತ್ರಮ್; ಶಾಸನಂ ಚ ಪ್ರವರ್ತನಮ್ (ಶ್ರೀಭಾಷ್ಯ)

[2] ಶಾಸ್ತ್ರಫಲಂ ಪ್ರಯೋಕ್ತರಿ ।

[3] ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।

[4] ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ।

[5] ಜೀವಸ್ಯ ಕರ್ತೃತ್ವಾಭಾವೇ ಶಾಸ್ತ್ರಸ್ಯಾಪ್ರಯೋಜಕತ್ವಪ್ರಾಪ್ತೇರ್ಜೀವೋಽಪಿ ಕರ್ತಾ (ಮ. ಭಾ.).

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಸೇರಿ ಉಪಾದಾನಾದ್ವಿಹಾರೋಪದೇಶಾಚ್ಚ ಎಂದು ಒಂದೇ ಸೂತ್ರವಾಗಿದೆ.

[6] ಸ ಈಯತೇಽಮೃತೋ ಯತ್ರ ಕಾಮಮ್ ।

[7] ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ ।

'ಹಾಗೆಯೇ ಇವನು ಪ್ರಾಣಗಳನ್ನು ಕರೆದುಕೊಂಡು ತನ್ನ ಶರೀರದಲ್ಲಿ ಸ್ವೇಚ್ಛೆಯಾಗಿ ಸುತ್ತಾಡುತ್ತಾನೆ'[1] (ಬೃ ಉ ೨ ೧ ೧೮) ಎಂಬ ಶ್ರುತಿಯು ಪ್ರಾಣಗಳ ಸ್ವೀಕಾರದಲ್ಲಿ ಮತ್ತು ಶರೀರದೊಳಗೆ ಸಂಚರಿಸುವುದರಲ್ಲಿ ಜೀವನೇ ಕರ್ತೃವೆಂದು ಹೇಳುತ್ತದೆ

**ದ್ವೈ.**—'ಸ್ತ್ರೀಯರೊಂದಿಗೆ ಜ್ಞಾತಿಗಳೊಂದಿಗೆ ಅಜ್ಞಾತಿಗಳೊಂದಿಗೆ ಅಥವಾ ವಾಹನಗಳಿಂದ ರಮಿಸುತ್ತಾನೆ' (ಛಾಂ ಉ ೮ ೧೨ ೩) ಎಂದು ಮುಕ್ತಿಯಲ್ಲಿ ಕ್ರೀಡಾ ಕರ್ತೃತ್ವವನ್ನು ಹೇಳಿರುವುದರಿಂದ ಜೀವನು ಕರ್ತೃವೇ

**ಉಪಾದಾನಾತ್ || ೩೫ ||**

೩೫. (ಕರಣಗಳ) ಸ್ವೀಕಾರವನ್ನು ಹೇಳಿರುವುದರಿಂದಲೂ (ಜೀವನು ಕರ್ತೃ)

ಜೀವನ ಪ್ರಕರಣದಲ್ಲಿ ಜೀವನು ಕರಣಗಳನ್ನು ಸ್ವೀಕರಿಸುತ್ತಾನೆಂದು ಹೇಳಿರುವುದರಿಂದಲೂ ಜೀವನು ಕರ್ತೃ[2]

**ದ್ವೈ.**—ಜೀವನು ಲೋಕದಲ್ಲಿ ಸಾಧನಾದಿಗಳನ್ನು ಸ್ವೀಕರಿಸುವುದರಿಂದಲೂ ಕರ್ತೃವೇ[3]

**ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ || ೩೬ ||**

೩೬ ಕ್ರಿಯೆಯಲ್ಲಿ (ಕರ್ತೃತ್ವವನ್ನು) ಹೇಳಿರುವುದರಿಂದಲೂ (ಜೀವನು ಕರ್ತೃ), ಹಾಗಿಲ್ಲದಿದ್ದರೆ ಮತ್ತೊಂದು ವಿಧವಾದ ನಿರ್ದೇಶವಾಗಬೇಕಾಗಿತ್ತು

ಈ ಕಾರಣದಿಂದಲೂ ಜೀವನಿಗೆ ಕರ್ತೃತ್ವವಿದೆ - ಲೌಕಿಕ-ಕ್ರಿಯೆಗಳಲ್ಲಿಯೂ ವೈದಿಕ-ಕ್ರಿಯೆಗಳಲ್ಲಿಯೂ ಜೀವನಿಗೆ ಕರ್ತೃತ್ವವಿದೆಯೆಂದು ಶಾಸ್ತ್ರವು ಹೇಳುತ್ತದೆ 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ'[4] (ತೈ ಉ ೨ ೫) ವಿಜ್ಞಾನ ಶಬ್ದವು ಬುದ್ಧಿಯನ್ನು ಸೂಚಿಸುವುದರಿಂದ ಜೀವನ ಕರ್ತೃತ್ವವನ್ನು ಸೂಚಿಸಲಾರದು— ಎಂದು ಹೇಳಲಾಗುವುದಿಲ್ಲ, ಏಕೆಂದರೆ ಇಲ್ಲಿ ಜೀವನ ನಿರ್ದೇಶವಿಲ್ಲದಿದ್ದರೆ 'ವಿಜ್ಞಾನದಿಂದ' **ವಿಜ್ಞಾನೇನ** ಎಂದು ಮತ್ತೊಂದು ವಿಧವಾದ ನಿರ್ದೇಶವಾಗಬೇಕಾಗಿತ್ತು, ಮತ್ತೆ ಬುದ್ಧಿ

---

1 ಏವಮೇವೈಷ ಏತಾನ್ ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ ।

2 ಬೃ. ಉ ೨ ೧ ೧೭ ಮತ್ತು ೧೮ ನೋಡಿ

3 ಸಾಧನಾದ್ಯುಪಾದಾನಪ್ರತೀತೇಶ್ಚ (ಮ ಭಾ )

4 ವಿಜ್ಞಾನಂ ಯಜ್ಞಂ ತನುತೇ ಕರ್ಮಾಣಿ ತನುತೇಽಪಿ ಚ ।

ಯನ್ನು ಸೂಚಿಸಬೇಕೆಂಬ ಅಭಿಪ್ರಾಯದಿಂದ ಬೇರೊಂದು ಕಡೆಯಲ್ಲಿ[1] ಶ್ರುತಿಯು ಕರಣ ವಿಭಕ್ತಿಯನ್ನು ಸೂಚಿಸಿರುತ್ತದೆ ಆದುದರಿಂದ ಆತ್ಮನಿಗೆ ಇಲ್ಲಿ ಕರ್ತೃತ್ವವನ್ನು ಸೂಚಿಸಿದೆ.

ವಿ.—ತೈತ್ತಿರೀಯಶ್ರುತಿಯ (೨ ೫) ಪ್ರಕಾರ ಲೌಕಿಕ-ವೈದಿಕ-ಕ್ರಿಯೆಗಳಲ್ಲೆಲ್ಲ ಜೀವನನ್ನೇ ಕರ್ತೃವೆಂದು ಹೇಳಿದೆ ವಿಜ್ಞಾನ-ಶಬ್ದವು ಬುದ್ಧಿಯನ್ನು ಸೂಚಿಸಿದ್ದರೆ ನಿರ್ದೇಶವು ಬೇರೆ ವಿಧವಾಗಿರುತ್ತಿತ್ತು, ಎಂದರೆ ಬುದ್ಧಿಯು ಕರಣವಾಗಿರುವುದರಿಂದ ಶ್ರುತಿಯು **ವಿಜ್ಞಾನವತ್** ಎಂದು ಹೇಳುವ ಬದಲು **ವಿಜ್ಞಾನೇನ** ಎಂದು ಕರಣವಿಭಕ್ತಿಯನ್ನೇ ನಿರ್ದೇಶಿಸುತ್ತಿತ್ತು

ದ್ವೈ.—'ಲೋಕಾಶ್ರಯನಾದ ಪರಮಾತ್ಮನನ್ನು ಉಪಾಸಿಸಬೇಕು' ಎಂಬ ಶ್ರುತಿಯು ಉಪಾಸನೆಮಾಡಬೇಕೆಂದು ಜೀವನಿಗೆ ನಿರ್ದೇಶಿಸಿರುವುದರಿಂದ ಜೀವನು ಕರ್ತೃವು[2] ಜೀವನಿಗೆ ಕರ್ತೃತ್ವವಿಲ್ಲವೆಂದಾದರೆ ಪರಮಾತ್ಮನಿಗೇ ಕರ್ತೃತ್ವವು ಬರಬೇಕಾಗಿರುವುದರಿಂದ **ಆತ್ಮಾನಮೇವ ಲೋಕಮ್** ಎಂಬುದರ ಬದಲು **ಆತ್ಮೈವ ಲೋಕಮ್** ಎಂಬ ನಿರ್ದೇಶವು ಬರುತ್ತಿತ್ತು

## ಉಪಲಬ್ಧಿವದನಿಯಮಃ ॥ ೩೭ ॥

೩೭ ಜ್ಞಾನದಂತೆ ನಿಯಮವಿಲ್ಲ

ಬುದ್ಧಿಗಿಂತ ಬೇರೆಯವನಾದ ಜೀವನು ಕರ್ತೃವಾದರೆ ಅವನು ಸ್ವತಂತ್ರನಾಗಿರುವುದರಿಂದ ಪ್ರಿಯವೂ ಹಿತವೂ ಆದದ್ದನ್ನೇ ನಿಯಮದಿಂದ ಪಡೆಯಬೇಕೇ ಹೊರತು ಅದಕ್ಕೆ ವಿರುದ್ಧವಾದುದನ್ನು ಪಡೆಯಕೂಡದು—ಎಂದು ಆಕ್ಷೇಪಿಸಿದರೆ ಸೂತ್ರಕಾರರ ಉತ್ತರವು ಹೀಗಿದೆ ಹೇಗೆ ಆತ್ಮನು ಜ್ಞಾನದ ವಿಷಯದಲ್ಲಿ ಸ್ವತಂತ್ರನಾಗಿದ್ದರೂ ನಿಯಮವಿಲ್ಲದೆ ಇಷ್ಟವನ್ನೂ ಅನಿಷ್ಟವನ್ನೂ ಅರಿಯಬಹುದೊ ಹಾಗೆಯೇ ನಿಯಮವಿಲ್ಲದೆ ಇಷ್ಟವನ್ನೂ ಅನಿಷ್ಟವನ್ನೂ ಸಂಪಾದಿಸಿಕೊಳ್ಳಬಹುದು[3]

## ಶಕ್ತಿವಿಪರ್ಯಯಾತ್ ॥ ೩೮ ॥

೩೮ ಶಕ್ತಿಯ ವಿಪರ್ಯಯವಾಗುವುದರಿಂದಲೂ (ಜೀವನು ಕರ್ತೃವು)

ವಿಜ್ಞಾನಶಬ್ದವಾಚ್ಯವಾದ ಬುದ್ಧಿಯೇ ಕರ್ತೃವಾಗಿದ್ದರೆ ಶಕ್ತಿಯ ವಿಪರ್ಯಯವಾಗುತ್ತಿತ್ತು; ಎಂದರೆ ಬುದ್ಧಿಯ ಕರಣಶಕ್ತಿಯು ಹೋಗಿ, ಅದಕ್ಕೆ ಕರ್ತೃ-ಶಕ್ತಿಯು

---

1 'ಈ ಪ್ರಾಣಗಳ ವಿಜ್ಞಾನವನ್ನು ವಿಜ್ಞಾನದಿಂದ ಎಳೆದುಕೊಂಡು' ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ।

2 ಆತ್ಮಾನಮೇವ ಲೋಕಮುಪಾಸೀತೇತಿ ಕ್ರಿಯಾಯಾಂ ವ್ಯಪದೇಶಾಚ್ಚ (ಮ ಭಾ )

3 ಯಥಾಽಯಮಾತ್ಮೋಪಲಬ್ಧಿಂ ಪ್ರತಿ ಸ್ವತಂತ್ರೋಽಪ್ಯನಿಯಮೇನೇಷ್ಟಮನಿಷ್ಟಂ ಚೋಪಲಭತ ಏವಮನಿಯಮೇನೈವೇಷ್ಟಮನಿಷ್ಟಂ ಚ ಸಂಪಾದಯಿಷ್ಯತಿ (ಸೂ ಭಾ )

ಉಂಟಾಗುತ್ತಿತ್ತು. ಮತ್ತು ಬುದ್ಧಿಗೆ ಕರ್ತೃಶಕ್ತಿಯಿದ್ದರೆ ಅದೇ ಅಹಂ-ಪ್ರತ್ಯಯಕ್ಕೆ ವಿಷಯವಾಗುತ್ತಿತ್ತು. ಪುನಃ ಕರ್ತೃಶಕ್ತಿಯಿಂದ ಕೂಡಿರುವ ಬುದ್ಧಿಗೆ ಸರ್ವಾರ್ಥಕಾರಿಯಾದ ಮತ್ತೊಂದು ಕರಣವನ್ನು ಕಲ್ಪಿಸಬೇಕಾಗುವುದು ; ಏಕೆಂದರೆ ಕರ್ತೃವು ಶಕ್ತನಾಗಿದ್ದರೂ ಕರಣವನ್ನು ತೆಗೆದುಕೊಂಡೇ ಕ್ರಿಯೆಗಳಲ್ಲಿ ಪ್ರವೃತ್ತನಾಗುವುದು ಕಂಡುಬರುತ್ತದೆ. ಆಗ ಹೆಸರಿನಲ್ಲಿ ವಿವಾದವಾಗುತ್ತದೆಯೇ ಹೊರತು ವಸ್ತುಭೇದವಿರುವುದಿಲ್ಲ ; ಏಕೆಂದರೆ ಕರಣಕ್ಕಿಂತ ಬೇರೆಯಾಗಿರುವವನೇ ಕರ್ತೃವೆಂದು ಒಪ್ಪಿಕೊಂಡಂತಾಗುವುದು

ವಿ —ಬುದ್ಧಿಯು ಕರ್ತೃವಾಗಿದ್ದರೆ ಅದಕ್ಕೆ ಭೋಕ್ತೃತ್ವಶಕ್ತಿಯು ಉಂಟಾಗುತ್ತಿತ್ತು ಮತ್ತು ಆತ್ಮನ ಭೋಕ್ತೃತ್ವಶಕ್ತಿಯು ಹೋಗುತ್ತಿತ್ತು. ಹೀಗಾದರೆ ಆತ್ಮನ ಅಸ್ತಿತ್ವಕ್ಕೆ ಪ್ರಮಾಣವೇ ಇರುತ್ತಿರಲಿಲ್ಲ ; ಏಕೆಂದರೆ 'ಭೋಕ್ತೃಭಾವವಿರುವುದರಿಂದ ಪುರುಷನಿರುವನು'[1] (ಸಾಂ ಕಾ ೧೭) ಎಂದು ಅವರೇ ಹೇಳುತ್ತಾರೆ

ದ್ವೈ.—ಜೀವನಿಗೆ ಅಲ್ಪಶಕ್ತಿಯಿರುವುದರಿಂದ (ಸ್ವಾತಂತ್ರ್ಯವಿಲ್ಲ) [2]

## ಸಮಾಧ್ಯಭಾವಾಚ್ಚ || ೩೯ ||

೩೯. ಸಮಾಧಿಯ ಅಭಾವವಾಗುವುದರಿಂದಲೂ (ಕರ್ತೃತ್ವವನ್ನು ಒಪ್ಪಿಕೊಳ್ಳಬೇಕು).

ಉಪನಿಷತ್ತುಗಳಲ್ಲಿ ಹೇಳಿರುವ ಆತ್ಮನನ್ನು ಸಾಕ್ಷಾತ್ಕರಿಸಬೇಕೆಂಬ ಪ್ರಯೋಜನಕ್ಕಾಗಿ 'ಆತ್ಮನನ್ನು ನೋಡಬೇಕು ಶ್ರವಣಮಾಡಬೇಕು ಮನನಮಾಡಬೇಕು ನಿದಿಧ್ಯಾಸನಮಾಡಬೇಕು'[3] (ಬೃ. ಉ. ೨. ೪. ೫), 'ಅವನನ್ನೇ ಅನ್ವೇಷಿಸಬೇಕು, ಅವನನ್ನೇ ಅರಿತುಕೊಳ್ಳಲು ಬಯಸಬೇಕು'[4] (ಛಾಂ. ಉ. ೮. ೭. ೧)—ಎಂಬೀ ಲಕ್ಷಣದ ಸಮಾಧಿಯು ವೇದಾಂತವಾಕ್ಯಗಳಲ್ಲಿ ಉಪದಿಷ್ಟವಾಗಿದೆ. ಆತ್ಮನಿಗೆ ಕರ್ತೃತ್ವವಿಲ್ಲದಿದ್ದರೆ ಈ ಸಮಾಧಿಯು ಹೊಂದುವುದಿಲ್ಲ.

ವಿ.—ಬುದ್ಧಿಯು ಕರ್ತೃವಾಗಿದ್ದರೆ ಮೋಕ್ಷಸಾಧನಭೂತವಾದ ಸಮಾಧಿಯಲ್ಲಿಯೂ ಕರ್ತೃವಾಗಿಯೇ ಇರಬೇಕು. ಆ ಸಮಾಧಿಯು 'ಪ್ರಕೃತಿಗಿಂತ ಬೇರೆಯುವ

---

[1] ಪುರುಷೋಽಸ್ತಿ ಭೋಕ್ತೃಭಾವಾತ್ ।

[2] ಅಲ್ಪಶಕ್ತಿತ್ವಾಜ್ಜೀವಸ್ಯ (ಮ. ಭಾ.).

[3] ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ।

[4] ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ।

ನಾಗಿರುತ್ತೇನೆ' ಎಂಬೀ ರೂಪದಲ್ಲಿರುತ್ತದೆ.[1] ಇಂಥ ಸಮಾಧಿಯು ಪ್ರಕೃತಿಗೇ ಉಂಟಾಗಲಾರದು ಆದುದರಿಂದ ಆತ್ಮನೇ ಕರ್ತೃ

**ದ್ವೈ.**—ಜೀವನಿಗೆ ಮನಃಸಮಾಧಾನವಿಲ್ಲದಿರುವುದರಿಂದಲೂ (ಸ್ವಾತಂತ್ರ್ಯವಿಲ್ಲ).[2]

---

[1] ಸ ಚ ಸಮಾಧಿಃ ಪ್ರಕೃತೇರನ್ಯೋಽಸ್ಮೀತ್ಯೇವಂರೂಪಃ (ಶ್ರೀಭಾಷ್ಯ)

[2] ಸಮಾಧಾನಾಭಾವಾಚ್ಚಾಸ್ವಾತಂತ್ರ್ಯಂ ಪ್ರತೀಯತೇ (ಮ. ಭಾ.).

## ೧೫. ತಕ್ಷಾಧಿಕರಣ

**ಯಥಾ ಚ ತಕ್ಷೋಭಯಥಾ || ೪೦ ||**

೪೦ ಆದರೆ ಬಡಗಿಯು ಎರಡು ವಿಧದಲ್ಲಿಯೂ ಇರುವಂತೆ (ಆತ್ಮನು ಕರ್ತೃವೂ ಅಕರ್ತೃವೂ ಆಗಿರುತ್ತಾನೆ.)

ಹಿಂದಿನ ಸೂತ್ರಗಳಲ್ಲಿ ಆತ್ಮನಿಗೆ ಕರ್ತೃತ್ವವನ್ನು ಪ್ರದರ್ಶಿಸಿದ್ದಾಯಿತು. ಈಗ ಅದು ಸ್ವಾಭಾವಿಕವೊ ಅಥವಾ ಉಪಾಧಿಯಿಂದ ಆಗಿದೆಯೊ ?— ಎಂಬ ಪ್ರಶ್ನೆಯು ಬರುತ್ತದೆ. ಹಿಂದಿನ ಅಧಿಕರಣದಲ್ಲಿ ಹೇಳಿರುವ ಯುಕ್ತಿಗಳಿಂದ ಕರ್ತೃತ್ವವು ಸ್ವಾಭಾವಿಕವೆಂಬುದು ಪೂರ್ವಪಕ್ಷ

ಆತ್ಮನ ಕರ್ತೃತ್ವವು ಸ್ವಾಭಾವಿಕವಲ್ಲ—ಎಂಬುದು ಸಿದ್ಧಾಂತ ; ಏಕೆಂದರೆ ಅದು ಸ್ವಾಭಾವಿಕವಾದರೆ ಅದರಿಂದ ಮೋಕ್ಷವು ಸಂಭವಿಸುವುದಿಲ್ಲ. ಉಪನಿಷತ್ತುಗಳ ಪ್ರಕಾರ ಆತ್ಮನು ಕರ್ತೃವಲ್ಲ, ಅಸಂಗನಾಗಿರುತ್ತಾನೆ.[1] ಉಪಾಧಿಯಿಂದ ಸಂಬದ್ಧನಾದ ಆತ್ಮನಿಗೇ ಭೋಕ್ತೃತ್ವಾದಿವಿಶೇಷವುಂಟಾಗುತ್ತದೆಂದು ಶ್ರುತಿಯು ಹೇಳುತ್ತದೆ : 'ಶರೀರ ಇಂದ್ರಿಯ ಮನಸ್ಸು—ಇವುಗಳಿಂದ ಕೂಡಿದ ಆತ್ಮನನ್ನು ಭೋಕ್ತೃವೆಂದು ವಿವೇಕಿಗಳು ಹೇಳುತ್ತಾರೆ'[2] (ಕ ಉ. ೧ ೩ ೪) ಬಡಗಿಯ ದೃಷ್ಟಾಂತದಿಂದ ಇದಕ್ಕೆ ಪರಿಹಾರವನ್ನು ಹೇಳಬಹುದು. ಬಡಗಿಯು ಬಾಚಿಯೇ ಮೊದಲಾದ ಸಾಧನಗಳಿಂದ ಕೆಲಸಮಾಡುವಾಗ ಕರ್ತೃವೂ ದುಃಖಿಯೂ ಆಗಿದ್ದು ಅವುಗಳನ್ನು ತ್ಯಜಿಸಿದಾಗ ಸುಖಿಯಾಗುತ್ತಾನೆ ; ಇದೇ ರೀತಿ ಅವಿದ್ಯೆಯಿಂದ ಬಂದ ದ್ವೈತದ ಸಂಪರ್ಕವುಳ್ಳ ಆತ್ಮನು ಸ್ವಪ್ನಜಾಗರಿತಾವಸ್ಥೆಗಳಲ್ಲಿ ಕರ್ತೃವೂ ದುಃಖಿಯೂ ಆಗಿರುತ್ತಾನೆ ; ಅವನು ತನ್ನ ಶ್ರಮವನ್ನು ನೀಗಿಕೊಳ್ಳಲು ತನ್ನ ಆತ್ಮನಾದ ಪರಬ್ರಹ್ಮನನ್ನು ಪ್ರವೇಶಿಸಿ, ಕಾರ್ಯಕರಣ-ಸಂಘಾತದಿಂದ ಮುಕ್ತನಾಗಿ, ಸುಷುಪ್ತಿಯ ಅವಸ್ಥೆಯಲ್ಲಿ ಅಕರ್ತೃವೂ ಸುಖಿಯೂ ಆಗಿರುತ್ತಾನೆ.[3] ಹೀಗೆಯೇ ಮುಕ್ತಿಯ ಅವಸ್ಥೆಯಲ್ಲಿಯೂ ಅವಿದ್ಯೆಯೆಂಬ ಕತ್ತಲನ್ನು ವಿದ್ಯೆಯೆಂಬ ಪ್ರದೀಪದಿಂದ ಚದುರಿಸಿ, ಕೇವಲ ಆತ್ಮನೇ ಆಗಿ ಸುಖಿಯಾಗಿರುತ್ತಾನೆ.[4] ಆದುದರಿಂದ ಅವಿದ್ಯಾಕೃತ

---

1 'ಅವನು ಧ್ಯಾನಿಸುವಂತೆ ಚಲಿಸುವಂತೆ ಇರುತ್ತಾನೆ' ಧ್ಯಾಯತೀವ ಲೇಲಾಯತೀವ (ಬೃ. ಉ. ೪. ೩. ೭).

2 ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ।

3 ಏವಮವಿದ್ಯಾಪ್ರತ್ಯುಪಸ್ಥಾಪಿತದ್ವೈತಸಂಪೃಕ್ತ ಆತ್ಮಾ ಪರಂ ಬ್ರಹ್ಮ ಪ್ರವಿಶ್ಯ ವಿಮುಕ್ತ ಕಾರ್ಯಕರಣಸಂಘಾತೋಽಕರ್ತಾ ಸುಖೀಭವತಿ ಸಂಪ್ರಸಾದಾವಸ್ಥಾಯಾಮ್ (ಸೂ. ಭಾ.).

4 ತಥಾ ಮುಕ್ತ್ಯವಸ್ಥಾಯಾಮಪ್ಯವಿದ್ಯಾಧ್ವಾಂತಂ ವಿದ್ಯಾಪ್ರದೀಪೇನ ವಿಧೂಯಾತ್ಮೈವ ಕೇವಲೋ ನಿರ್ವೃತಃ ಸುಖೀ ಭವತಿ (ಸೂ. ಭಾ.).

ವಾದ ಕರ್ತೃತ್ವವನ್ನು ಇಟ್ಟುಕೊಂಡೇ ವಿಧಿಶಾಸ್ತ್ರವು ಪ್ರವರ್ತಿಸುತ್ತದೆ. ಮತ್ತೆ, ಆತ್ಮನ ಸ್ವಪ್ನವಿಹಾರವು ವಾಸನಾಮಯವೇ ಹೊರತು ಪಾರಮಾರ್ಥಿಕವಲ್ಲ ; ಏಕೆಂದರೆ ಮನಸ್ಸಿನಿಂದ ಯುಕ್ತನಾಗಿಯೇ ಸ್ವಪ್ನದಲ್ಲಿ ವಿಹರಿಸುತ್ತಾನೆ. 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ' (ತೈ. ಉ. ೨. ೫) ಎಂಬಲ್ಲಿರುವ ವ್ಯಪದೇಶವು ಬುದ್ಧಿಗೆ ಕರ್ತೃತ್ವವನ್ನು ಕೊಡುತ್ತದೆಯೇ ಹೊರತು ಅರಿಯುವ ಜೀವನಿಗಲ್ಲ ; ಏಕೆಂದರೆ ವಿಜ್ಞಾನಶಬ್ದವು ಬುದ್ಧಿಯಲ್ಲಿಯೇ ಪ್ರಸಿದ್ಧವಾಗಿರುತ್ತದೆ. ಉಪಲಬ್ಧಿಯಲ್ಲಿಯೂ ಆತ್ಮನಿಗೆ ಕರ್ತೃತ್ವವಿರುವುದಿಲ್ಲ ; ಏಕೆಂದರೆ ಇವನು ನಿತ್ಯೋಪಲಬ್ಧಿಸ್ವರೂಪನಾಗಿರುತ್ತಾನೆ. ಅಹಂಕಾರಪೂರ್ವಕವಾಗಿ ಆಗುವ ಕರ್ತೃತ್ವವು ಅರಿಯುವ ಆತ್ಮನಿಗೆ ಆಗಲಾರದು ; ಏಕೆಂದರೆ ಅಹಂಕಾರವೂ ಅರಿಯಲ್ಪಡುತ್ತದೆ ಆದುದರಿಂದ ಆತ್ಮನಿಗೆ ಕರ್ತೃತ್ವವು ಉಪಾಧಿಯ ನಿಮಿತ್ತದಿಂದಲೇ ಆಗಿದೆ.

ಸಿ.—ಆತ್ಮನು ವಾಗಾದಿಕರಣಸಂಪನ್ನನಾಗಿದ್ದರೂ ಇಚ್ಛೆಯಿದ್ದಾಗ ಕೆಲಸ ಮಾಡುತ್ತಾನೆ, ಇಚ್ಛೆಯಿಲ್ಲದಿದ್ದರೆ ಕೆಲಸಮಾಡುವುದಿಲ್ಲ ಬಡಗಿಯ ಹತ್ತಿರ ಬಾಚಿ ಮೊದಲಾದ ಕರಣಗಳಿದ್ದರೂ ಇಚ್ಛೆಗೆ ಅನುಗುಣವಾಗಿ ಕೆಲಸಮಾಡುತ್ತಾನೆ ಅಥವಾ ಮಾಡುವುದಿಲ್ಲ ಆದರೆ ಬುದ್ಧಿಗೆ ಕರ್ತೃತ್ವವಿದ್ದರೆ, ಅದು ಅಚೇತನವಾಗಿರುವುದರಿಂದ ಭೋಗದ ಬಯಕೆಯನ್ನು ಹೊಂದಿರುವುದಿಲ್ಲ ; ಆದುದರಿಂದ ಅದು ಯಾವಾಗಲೂ ಕೆಲಸ ಮಾಡಬೇಕಾಗುತ್ತದೆ.

ದೃ.—ಬಡಗಿಯು ಕೆಲಸಮಾಡಿಸುವವನಿಂದ ನಿಯತನಾಗಿದ್ದರೂ ಸ್ವಯಂ ಕರ್ತೃವೂ ಆಗಿರುವಂತೆ ಜೀವನು ಈಶ್ವರನಿಂದ ನಿಯತನಾಗಿದ್ದರೂ ಕರ್ತೃವೆಂದು ಹೇಳಲ್ಪಡುತ್ತಾನೆ.[1]

---

[1] ಯಥಾ ತಕ್ಷ್ಣಃ ಕಾರಯಿತೃನಿಯತತ್ವಂ ಕರ್ತೃತ್ವಂ ಚ ವಿದ್ಯತೇ ಏವಂ ಜೀವಸ್ಯಾಪಿ (ಮ. ಭಾ.).

## ೧೭. ಪರಾಯತ್ತಾಧಿಕರಣ

(ಸೂ. ೪೧—೪೨)

**ಪರಾತ್ತು ತಚ್ಛ್ರುತೇಃ ॥ ೪೧ ॥**

೪೧. ಆದರೆ ಅದು ಪರಮಾತ್ಮನಿಂದ (ಉಂಟಾಗಿದೆ) ; ಏಕೆಂದರೆ ಶ್ರುತಿಯಿದೆ.

ಅವಿದ್ಯಾವಸ್ಥೆಯಲ್ಲಿ ಉಪಾಧಿನಿಮಿತ್ತವಾದ ಕರ್ತೃತ್ವವು ಜೀವನಿಗೆ ಈಶ್ವರನ ಅಪೇಕ್ಷೆಯಿಂದ ಆಗಿದೆಯೊ, ಅಪೇಕ್ಷೆಯಿಲ್ಲದೆಯೇ ಆಗಿದೆಯೊ ?—ಎಂದು ವಿಚಾರಿಸಬೇಕಾಗಿದೆ.

ಜೀವನು ರಾಗದ್ವೇಷಾದಿಗಳಿಂದ ಪ್ರಯುಕ್ತನಾಗಿ ಬೇರೆ ಕಾರಕಗಳೆಂಬ ಸಾಮಗ್ರಿಗಳಿಂದ ಸಂಪನ್ನನಾಗಿ ಸ್ವಯಂಕರ್ತೃವಾಗಿರುವುದರಿಂದ ಈಶ್ವರನ ಅಪೇಕ್ಷೆಗೆ ಪ್ರಯೋಜನವಿರುವುದಿಲ್ಲ—ಎಂಬುದು ಪೂರ್ವಪಕ್ಷ. ಜೀವನ ಕರ್ತೃತ್ವಕ್ಕೆ ಅಪೇಕ್ಷೆಯಿದ್ದರೆ ಈಶ್ವರನಿಗೆ ವೈಷಮ್ಯ-ನೈರ್ಘೃಣ್ಯಗಳು ಪ್ರಾಪ್ತವಾಗುತ್ತವೆ.

ಮೇಲಿನ ಪೂರ್ವಪಕ್ಷಕ್ಕೆ ಸಿದ್ಧಾಂತವು ಹೀಗಿದೆ : ಅವಿದ್ಯಾವಸ್ಥೆಯಲ್ಲಿ ಕಾರ್ಯ-ಕರಣ-ಸಂಘಾತದ ವಿವೇಚನವನ್ನು ಅರಿಯದ ಮತ್ತು ಅವಿದ್ಯಾತಿಮಿರದಿಂದ ಕುರುಡನಾದ ಜೀವನಿಗೆ ಕರ್ಮಾಧ್ಯಕ್ಷನೂ ಸರ್ವಭೂತಾಧಿವಾಸನೂ ಸಾಕ್ಷಿಯೂ ಚೇತನಗೊಳಿಸುವವನೂ ಈಶ್ವರನೂ ಆದ ಪರಮಾತ್ಮನಿಂದ, ಅವನ ಅನುಜ್ಞೆಯಿಂದ, ಕರ್ತೃತ್ವ-ಭೋಕ್ತೃತ್ವ-ರೂಪವಾದ ಸಂಸಾರವು ಸಿದ್ಧಿಸುತ್ತದೆ ; ಅವನ ಅನುಗ್ರಹದಿಂದುಂಟಾದ ವಿಜ್ಞಾನದಿಂದಲೇ ಮೋಕ್ಷಸಿದ್ಧಿಯೂ ಆಗಬೇಕು ;[1] ಏಕೆಂದರೆ ಶ್ರುತಿಯಿದೆ. ಜೀವನು ದೋಷಯುಕ್ತನಾಗಿ ಸಾಮಗ್ರೀಸಂಪನ್ನನಾಗಿದ್ದರೂ ಅವನ ಪ್ರವೃತ್ತಿಗಳಿಗೆಲ್ಲ ಈಶ್ವರನೇ ಪ್ರೇರಕನೆಂದು ಶ್ರುತಿಯಿಂದ ನಿಶ್ಚಯವಾಗುತ್ತದೆ : 'ಯಾವನನ್ನು ಈ ಲೋಕಗಳಿಂದ ಮೇಲಕ್ಕೊಯ್ಯಲು ಬಯಸುತ್ತಾನೆಯೊ ಅವನನ್ನು ಇವನೇ ಸಾಧುಕರ್ಮವನ್ನು ಮಾಡುವಂತೆ ಮಾಡುತ್ತಾನೆ ; ಯಾವನನ್ನು ಕೆಳಕ್ಕಿಳಿಸಬೇಕೆಂದು ಬಯಸುತ್ತಾನೆಯೊ ಅವನನ್ನು ಇವನೇ ಕೆಟ್ಟ ಕರ್ಮವನ್ನು ಮಾಡುವಂತೆ ಮಾಡುತ್ತಾನೆ'[2] (ಕೌ. ಉ. ೩. ೮).

---

[1] ಅವಿದ್ಯಾವಸ್ಥಾಯಾಂ ಕಾರ್ಯಕರಣಸಂಘಾತಾವಿವೇಕದರ್ಶಿನೋ ಜೀವಸ್ಯಾವಿದ್ಯಾತಿಮಿರಾಂಧಸ್ಯ ಸತಃ ಪರಸ್ಮಾದಾತ್ಮನಃ ಕರ್ಮಾಧ್ಯಕ್ಷಾತ್ ಸರ್ವಭೂತಾಧಿವಾಸಾತ್ ಸಾಕ್ಷಿಣಶ್ಚೇತಯಿತುರೀಶ್ವರಾತ್ ತದನುಜ್ಞಯಾ ಕರ್ತೃತ್ವಭೋಕ್ತೃತ್ವಲಕ್ಷಣಸ್ಯ ಸಂಸಾರಸ್ಯ ಸಿದ್ಧಿಃ, ತದನುಗ್ರಹಹೇತುಕೇನೈವ ಚ ವಿಜ್ಞಾನೇನ ಮೋಕ್ಷಸಿದ್ಧಿರ್ಭವಿತುಮರ್ಹತಿ (ಸೂ. ಭಾ.).

[2] ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ । ಏಷ ಹ್ಯೇವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ ॥ ಮಾ. ಪಾ. ೩. ೭. ೭ ನೋಡಿ.

ವಿ.—ಜೀವನ ಕರ್ತೃತ್ವವು ಪರಮಾತ್ಮನಿಂದಲೇ ಉಂಟಾಗಿದೆ, ಏಕೆಂದರೆ ಶ್ರುತಿಯು ಹೀಗೆ ಹೇಳುತ್ತದೆ 'ಸರ್ವಾತ್ಮನೂ ಶಾಸ್ತ್ರವೂ ಆದವನು ಒಳಗೆ ಪ್ರವೇಶಿಸಿರುತ್ತಾನೆ',[1] 'ಯಾವನು ಆತ್ಮನಲ್ಲಿ ಇರುವವನಾಗಿ ಆತ್ಮನ ಒಳಗಿರುವನೊ ಯಾವನನ್ನು ಆತ್ಮನು ತಿಳಿಯನೊ, ಯಾವನಿಗೆ ಆತ್ಮನು ಶರೀರವೊ, ಯಾವನು ಒಳಗಿದ್ದುಕೊಂಡು ಆತ್ಮನನ್ನು ನಿಯಮಿಸುವನೊ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು'[2] (ಮಾ ಪಾ ೩ ೭ ೭)

ದ್ವೈ. – ಕರ್ತೃತ್ವಶಕ್ತಿ ಪರಮಾತ್ಮನಿಂದಲೇ ಬಂದಿದೆ[3] 'ಕರ್ತೃತ್ವ ಕರಣತ್ವ ಇವೆಲ್ಲವೂ ಈಶ್ವರಪ್ರಸಾದದಿಂದಲೇ ಉಂಟಾಗುತ್ತವೆ' ಎಂದು ಪೈಂಗಿಶ್ರುತಿಯು ಹೇಳುತ್ತದೆ

**ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ ॥ ೪೨ ॥**

೪೨ ಆದರೆ (ಜೀವನು) ಮಾಡಿದ ಪ್ರಯತ್ನವನ್ನು ಅಪೇಕ್ಷಿಸಿಯೇ (ಈಶ್ವರನು ಅವನನ್ನು ಪ್ರೇರಿಸುತ್ತಾನೆ), ಏಕೆಂದರೆ ವಿಹಿತ-ಪ್ರತಿಷಿದ್ಧಗಳ ವ್ಯರ್ಥವಾಗದಿರುವಿಕೆಯೇ ಮೊದಲಾದ ಕಾರಣಗಳಿವೆ

ಹೀಗೆ ಈಶ್ವರನು ಕಾರಯಿತೃವಾದರೆ ಅವನಿಗೆ ವೈಷಮ್ಯ-ನೈರ್ಘೃಣ್ಯಗಳೂ ಜೀವನಿಗೆ ಮಾಡದಿದ್ದ ಕರ್ಮದ ಫಲವೂ ಉಂಟಾಗುತ್ತವೆ—ಎಂಬ ಆಕ್ಷೇಪಣೆಗೆ ಈ ಸೂತ್ರವು ಪರಿಹಾರವನ್ನು ಹೇಳುತ್ತದೆ ಈ ಅಭಿಪ್ರಾಯವು ಸರಿಯಲ್ಲ, ಏಕೆಂದರೆ ಜೀವನು ಮಾಡುವ ಧರ್ಮಾಧರ್ಮರೂಪವಾದ ಪ್ರಯತ್ನವನ್ನು ಅಪೇಕ್ಷಿಸಿ ಈಶ್ವರನು ಅವನನ್ನು ಕರ್ಮದಲ್ಲಿ ಪ್ರೇರಿಸುತ್ತಾನೆ[4] ಆದುದರಿಂದ ಈಶ್ವರನು ಸಾಧಾರಣನಿಮಿತ್ತನಾಗಿರುತ್ತಾನೆ ಇದಕ್ಕೆ ಮಳೆಯ ದೃಷ್ಟಾಂತವನ್ನು ಹೇಳಬಹುದು ನಾನಾ ವಿಧವಾದ ಸಸ್ಯಗಳು ಅಸಾಧಾರಣವಾದ ತಮ್ಮ ತಮ್ಮ ಬೀಜಗಳಿಂದ ಹುಟ್ಟುತ್ತಿದ್ದರೂ ಮಳೆಯು ಸಾಧಾರಣ ನಿಮಿತ್ತವಾಗಿರುತ್ತದೆ, ಮಳೆಯಿಲ್ಲದಿದ್ದರೂ ತಮ್ಮ ತಮ್ಮ ಬೀಜಗಳಿಲ್ಲದಿದ್ದರೂ ರಸಪುಷ್ಪ ಪಲಾಶಾದಿಗಳ ವೈಷಮ್ಯವು ಅವುಗಳಲ್ಲಿ ಆಗುವುದಿಲ್ಲ ಹೀಗೆಯೇ ಈಶ್ವರನು ಜೀವಕೃತವಾದ ಪ್ರಯತ್ನವನ್ನು ಅಪೇಕ್ಷಿಸಿ ಅವರಿಗೆ ಶುಭಾಶುಭಫಲಗಳನ್ನು ಕೊಡುತ್ತಾನೆ

---

[1] ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ ।

[2] ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ ।

[3] ಸಾ ಚ ಕರ್ತೃತ್ವಶಕ್ತಿಃ ಪರಾದೇವ (ಮ ಭಾ)

[4] ಕೃತೋ ಯಃ ಪ್ರಯತ್ನೋ ಜೀವಸ್ಯ ಧರ್ಮಾಧರ್ಮಲಕ್ಷಣಸ್ತದಪೇಕ್ಷ ಏವೈನಮೀಶ್ವರಃ ಕಾರಯತಿ (ಸೂ. ಭಾ)

ಹೀಗಾದರೆ ವಿಹಿತವಾದದ್ದು[1] ಮತ್ತು ಪ್ರತಿಷಿದ್ಧವಾದದ್ದು[2] ವ್ಯರ್ಥವಾಗುವುದಿಲ್ಲ. ಹೀಗಾಗದಿದ್ದರೆ ಜೀವನು ಅತ್ಯಂತಪರತಂತ್ರನಾಗುವುದರಿಂದ ಈಶ್ವರನೇ ವಿಧಿಪ್ರತಿಷೇಧಗಳ ಸ್ಥಾನಗಳಲ್ಲಿ ನಿಯೋಜಿತನಾಗುತ್ತಾನೆ.

ವಿ.—ಜೀವನ ಕರ್ತೃತ್ವವು ಪರಮಾತ್ಮಾಧೀನವಾದರೆ ಶಾಸ್ತ್ರದ ವಿಧಿನಿಷೇಧಗಳಿಗೆ ಆನರ್ಥಕ್ಯವುಂಟಾಗುತ್ತದೆ ಎಂದು ಹೇಳಲಾಗುವುದಿಲ್ಲ. ಪುರುಷನು ಸಮಸ್ತಕ್ರಿಯೆಗಳಲ್ಲಿ ಮಾಡುವ ಪ್ರಯತ್ನವನ್ನು ಅಪೇಕ್ಷಿಸಿ ಅಂತರ್ಯಾಮಿಯಾದ ಪರಮಾತ್ಮನು ತನ್ನ ಅನುಮತಿಯ ಮೂಲಕ ಅವನನ್ನು ಕರ್ಮದಲ್ಲಿ ಪ್ರವರ್ತಿಸುತ್ತಾನೆ. ಪರಮಾತ್ಮನ ಅನುಮತಿಯಿಲ್ಲದಿದ್ದರೆ ಪ್ರವೃತ್ತಿಯೇ ಉಂಟಾಗುವುದಿಲ್ಲ. ಹೀಗಾದರೆ ವಿಧಿನಿಷೇಧಗಳ ಅರ್ಥವು ಹೋಗುವುದಿಲ್ಲ. ಮೂಲದಲ್ಲಿರುವ ಆದಿ-ಶಬ್ದವು ಭಗವಂತನು ಜೀವನ ಕರ್ಮಕ್ಕನುಸಾರವಾಗಿ ಕೊಡುವ ಅನುಗ್ರಹ-ನಿಗ್ರಹಗಳನ್ನು ಸೂಚಿಸುತ್ತದೆ

ದ್ವೈ.—ಜೀವನ ಪ್ರಯತ್ನದ ಅನುಸಾರ ಈಶ್ವರನ ಪ್ರೇರಣೆಯಾಗುವುದರಿಂದ ಶಾಸ್ತ್ರವು ಅಪ್ರಯೋಜಕವಾಗಲಾರದು.[3]

---

[1] 'ಸ್ವರ್ಗವನ್ನು ಬಯಸುವವನು ಯಾಗಮಾಡಬೇಕು.'

[2] 'ಬ್ರಾಹ್ಮಣನನ್ನು ಕೊಲ್ಲಕೂಡದು.'

[3] ತತೋಽಪ್ರಯೋಜಕತ್ವಂ ಶಾಸ್ತ್ರಸ್ಯ ನಾಪದ್ಯತೇ । ಕೃತಪ್ರಯತ್ನಾಪೇಕ್ಷತ್ವಾತ್ ಪ್ರೇರಕತ್ವಸ್ಯ (ಮ. ಭಾ.).

# ೧೭. ಅಂಶಾಧಿಕರಣ

(ಸೂ. ೪೩-೫೩)

**ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ॥ ೪೩ ॥**

೪೩. ಭೇದ-ವ್ಯಪದೇಶವಿರುವುದರಿಂದಲೂ (ಬ್ರಹ್ಮವು) ಬೆಸ್ತ, ಜೂಜುಕೋರ—ಇವರೇ ಮೊದಲಾದವರ ರೂಪದಲ್ಲಿದೆ ಎಂದು ಕೆಲವರು ಅಧ್ಯಯನ ಮಾಡುವುದರಿಂದ ಅನಾನಾತ್ವ-(ವ್ಯಪದೇಶವಿರುವುದರಿಂದಲೂ) (ಜೀವನು ಈಶ್ವರನ) ಅಂಶವು *

ಜೀವೇಶ್ವರರಿಗೆ ಉಪಕಾರ್ಯ-ಉಪಕಾರಕಭಾವವು[1] ಇದೆಯೆಂದು ಹಿಂದೆ ಹೇಳಿದ್ದಾಯಿತು. ಈಗ ಇವರಿಬ್ಬರಿಗಿರುವ ಸಂಬಂಧದ ವಿಷಯದಲ್ಲಿ ಪ್ರಶ್ನೆ ಏಳುತ್ತದೆ : ಇವರಿಬ್ಬರಿಗಿರುವ ಸಂಬಂಧವು ಸ್ವಾಮಿಭೃತ್ಯರಿಗಿರುವಂತೆಯೊ ಅಥವಾ ಬೆಂಕಿಕಿಡಿಗಳಿಗಿರುವಂತೆಯೊ ? ಇವರಿಬ್ಬರ ಸಂಬಂಧದಲ್ಲಿ ಯಾವ ನಿಯಮವೂ ಇಲ್ಲ. ಅಥವಾ ಸಂಬಂಧವಿದ್ದರೆ ಸ್ವಾಮಿ-ಭೃತ್ಯರಿಗಿರುವಂತೆ ಆಗಬಹುದು—ಎಂಬುದು ಪೂರ್ವಪಕ್ಷ.

ಕಿಡಿಯು ಬೆಂಕಿಯ ಅಂಶವಾಗಿರುವಂತೆ ಜೀವನು ಈಶ್ವರನ ಅಂಶವು ಎಂಬುದು ಸೂತ್ರಕಾರರ ಉತ್ತರ. ಇಲ್ಲಿ ಅಂಶವೆಂದರೆ ಅಂಶವಿದ್ದಂತೆ ; ಏಕೆಂದರೆ ನಿರವಯವನಾದ ಈಶ್ವರನಿಗೆ ಮುಖ್ಯಾರ್ಥದಲ್ಲಿ ಅಂಶವು ಸಂಭವಿಸುವುದಿಲ್ಲ.[2] ಹಾಗಾದರೆ ನಿರವಯವನಾದ ಈಶ್ವರನನ್ನೇ ಜೀವನೆಂದು ಏಕೆ ಭಾವಿಸಬಾರದು ? ಏಕೆಂದರೆ ಭೇದವ್ಯಪದೇಶವಿದೆ . 'ಅವನನ್ನೇ ಅನ್ವೇಷಿಸಬೇಕು, ಅವನನ್ನೇ ಅರಿತುಕೊಳ್ಳಲು ಬಯಸಬೇಕು'[3] (ಛಾಂ. ಉ ೮.೭.೧) ; 'ಇವನನ್ನೇ ಅರಿತುಕೊಂಡು ಮುನಿಯಾಗುತ್ತಾನೆ'[4] (ಬೃ. ಉ. ೪. ೪. ೨೨)—ಇವೇ ಮೊದಲಾದ ಭೇದನಿರ್ದೇಶವು ಭೇದವಿಲ್ಲದಿದ್ದರೆ ಹೊಂದುವುದಿಲ್ಲ. ಈ ಭೇದವ್ಯಪದೇಶವು ಸ್ವಾಮಿ-ಭೃತ್ಯರಂತಿದ್ದರೆ ಸುತರಾಂ ಹೊಂದುತ್ತದೆ—ಎಂದೂ ಆಕ್ಷೇಪಿಸಲಾಗುವುದಿಲ್ಲ; ಏಕೆಂದರೆ ಅನಾನಾತ್ವ-ವ್ಯಪದೇಶವೂ ಇದೆ: 'ದಾಶರು ಬ್ರಹ್ಮವು, ದಾಸರು

---

* ಶಂಕರಭಾಷ್ಯದ ವ್ಯಾಖ್ಯಾನಕಾರರ ಪ್ರಕಾರ ಈ ಸೂತ್ರವು ಅವಚ್ಛೇದವಾದವನ್ನು ಪ್ರತಿಪಾದಿಸುತ್ತದೆ.

[1] ಉಪಕಾರವನ್ನು ಪಡೆಯುವವನು ಮತ್ತು ಉಪಕಾರವನ್ನು ಮಾಡುವವನು.

[2] ಅಂಶ ಇವಾಂಶಃ, ನ ಹಿ ನಿರವಯವಸ್ಯ ಮುಖ್ಯೋಽಂಶಃ ಸಂಭವತಿ (ಸೂ. ಭಾ ).

[3] ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ।

[4] ಏತಮೇವ ವಿದಿತ್ವಾ ಮುನಿರ್ಭವತಿ ।

ಬ್ರಹ್ಮವು, ಈ ಜೂಜುಕೋರರೂ ಬ್ರಹ್ಮವು'[1] ಎಂದು ಆಥರ್ವಣಿಕರು ಬ್ರಹ್ಮಸೂಕ್ತದಲ್ಲಿ ಬ್ರಹ್ಮಕ್ಕೆ ದಾಶ-ಕಿತವಾದಿ-ಭಾವವನ್ನು ಹೇಳುತ್ತಾರೆ. ದಾಶರೆಂದರೆ ಬೆಸ್ತರು, ಕಿತವರೆಂದರೆ ಜೂಜುಕೋರರು ಇವರೆಲ್ಲರೂ ಬ್ರಹ್ಮವೇ ಎಂದು ಉದಾಹರಿಸಿರುವುದರಿಂದ ನಾಮ-ರೂಪ ಕೃತವಾದ ಕಾರ್ಯ-ಕರಣ-ಸಂಘಾತಗಳನ್ನು ಪ್ರವೇಶಿಸಿರುವ ಜೀವರೆಲ್ಲ ಬ್ರಹ್ಮವೆಂದು ಶ್ರುತಿಯು ಹೇಳುತ್ತದೆ[2] ಇತರ ಶ್ರುತಿಗಳಲ್ಲಿಯೂ[3] ಇದೇ ಅರ್ಥವನ್ನು ವಿವರಿಸಿ ಹೇಳಿದೆ ಬೆಂಕಿ—ಕಿಡಿಗಳಿಗೆ ಔಷ್ಣ್ಯವು ಸಮಾನವಾಗಿರುವಂತೆ ಚೈತನ್ಯವು ಜೀವೇಶ್ವರರಿಗೆ ಸಮಾನ ವಾಗಿರುತ್ತದೆ ಹೀಗೆ ಭೇದಾಭೇದಶ್ರುತಿಗಳಿರುವುದರಿಂದ ಜೀವನು ಈಶ್ವರನ ಅಂಶವೆಂಬುದು ತಿಳಿದುಬರುತ್ತದೆ

ವಿ —ಜೀವನು ಕರ್ತೃವೆಂದೂ ಪರಮಪುರುಷನನ್ನು ಆಧಾರವಾಗಿ ಹೊಂದಿರುವ ನೆಂದೂ ಹಿಂದೆ ಹೇಳಿದ್ದಾಯಿತು ಈಗ ಈ ಜೀವನು ಪರಮಾತ್ಮನಿಗಿಂತ ಅತ್ಯಂತ ಭಿನ್ನನೊ ಅಥವಾ ಭ್ರಾಂತಿಯುಳ್ಳ ಪರಬ್ರಹ್ಮವೊ ಅಥವಾ ಉಪಾಧ್ಯವಚ್ಛಿನ್ನವಾದ ಪರಬ್ರಹ್ಮವೊ ಅಥವಾ ಬ್ರಹ್ಮಾಂಶವೊ ?—ಎಂಬ ಪ್ರಶ್ನೆಯು ಏಳುತ್ತದೆ[4] ನಾನಾತ್ವವನ್ನೂ ಏಕತ್ವ ವನ್ನೂ ಬೋಧಿಸುವ ಶ್ರುತಿಗಳಿರುವುದರಿಂದ ಹೀಗೆ ಸಂಶಯವು ಬಂದಿದೆ

ಜೀವನು ಬ್ರಹ್ಮಾಂಶವೆಂಬುದು ಸೂತ್ರಕಾರರ ಅಭಿಪ್ರಾಯ , ಏಕೆಂದರೆ ನಾನಾತ್ವ ವನ್ನೂ ಏಕತ್ವವನ್ನೂ ಉಪದೇಶಿಸುವ ಶ್ರುತಿಗಳಿವೆ ಸ್ರಷ್ಟೃತ್ವ-ಸೃಜ್ಯತ್ವ, ನಿಯಂತೃತ್ವ-ನಿಯಾಮ್ಯತ್ವ, ಸರ್ವಜ್ಞತ್ವ-ಅಜ್ಞತ್ವ, ಸ್ವಾಧೀನತ್ವ-ಪರಾಧೀನತ್ವ, ಶುದ್ಧತ್ವ-ಅಶುದ್ಧತ್ವ-ಇವೇ ಮೊದಲಾದುವುಗಳಿಗೆ ಭೇದವನ್ನು ತಿಳಿಸುವ ಶ್ರುತಿಗಳು ಮೊದಲನೆಯ ಗುಂಪಿಗೆ ಸೇರಿವೆ **ತತ್ತ್ವಮಸಿ, ಅಯಮಾತ್ಮಾ ಬ್ರಹ್ಮ**—ಇವೇ ಮೊದಲಾದ ಶ್ರುತಿಗಳು ಎರಡನೆಯ ಗುಂಪಿಗೆ ಸೇರಿವೆ ಇನ್ನು ಕೆಲವರು ಬ್ರಹ್ಮಕ್ಕೆ ದಾಶ-ಕಿತವ-ಭಾವವನ್ನೂ ಹೇಳುತ್ತಾರೆ ಈ ಉಭಯವ್ಯಪದೇಶಗಳಿಗೂ ಮುಖ್ಯಾರ್ಥವನ್ನು ಸಿದ್ಧಿಸಲು ಜೀವನು ಬ್ರಹ್ಮಾಂಶವೆಂದು ಒಪ್ಪಿಕೊಳ್ಳಬೇಕಾಗಿದೆ ಭೇದವ್ಯಪದೇಶವು ಪ್ರತ್ಯಕ್ಷಾದಿಗಳಿಂದ ಸಿದ್ಧ ವಾದುದನ್ನೇ ಸೂಚಿಸುತ್ತದೆಂದು ಹೇಳಲಾಗುವುದಿಲ್ಲ , ಏಕೆಂದರೆ ಪರಬ್ರಹ್ಮನಿಗೂ ಜೀವ ನಿಗೂ ಇರುವ ಭೇದಗಳು ಪ್ರತ್ಯಕ್ಷಾದಿಗಳಿಗೆ ಗೋಚರವಾಗುವುದಿಲ್ಲ ಆದುದರಿಂದ ಜಗತ್ಸೃಷ್ಟ್ಯಾದಿಗಳನ್ನು ತಿಳಿಸುವ ಶ್ರುತಿಗಳು ಪ್ರಮಾಣಾಂತರದಿಂದ ಸಿದ್ಧವಾದ ಭೇದ ಗಳನ್ನು ಅನುವಾದಿಸುವುದರಿಂದ ಮಿಥ್ಯಾವಿಷಯಗಳನ್ನು ಉಪದೇಶಿಸುತ್ತವೆ ಎಂದು ಹೇಳು

---

[1] ಬ್ರಹ್ಮ ದಾಶಾ ಬ್ರಹ್ಮ ದಾಸಾ ಬ್ರಹ್ಮೈವೇಮೇ ಕಿತವಾಃ ।

[2] ಸರ್ವೇ ಬ್ರಹ್ಮೈವೇತಿ ಹೀನಜಂತೂದಾಹರಣೇನ ಸರ್ವೇಷಾಮೇವ ನಾಮರೂಪ-ಕೃತಕಾರ್ಯಕರಣಸಂಘಾತಪ್ರವಿಷ್ಟಾನಾಂ ಜೀವಾನಾಂ ಬ್ರಹ್ಮತ್ವಮಾಹ ( ಸೂ ಭಾ )

[3] ಶ್ವೇ ಉ. ೪.೩, ತೈ ಆ ೩ ೧೨ ೭, ಬೃ ಉ ೩.೭ ೨೩

[4] ಇದಾನೀಂ ಕಿಮಯಂ ಜೀವಃ ಪರಸ್ಮಾದತ್ಯಂತಭಿನ್ನಃ, ಉತ ಪರಮೇವ ಬ್ರಹ್ಮ ಭ್ರಾಂತಮ್, ಉತ ಬ್ರಹ್ಮೈವೋಪಾಧ್ಯವಚ್ಛಿನ್ನಮ್, ಅಥ ಬ್ರಹ್ಮಾಂಶ ಇತಿ ಸಂಶಯ್ಯತೇ (ಶ್ರೀಭಾಷ್ಯ)

ವುದು ತಪ್ಪು. ಉಪಾಧ್ಯವಚ್ಛಿನ್ನವಾದ ಬ್ರಹ್ಮವೇ ಜೀವನೆಂದು ಹೇಳುವುದು ಸರಿಯಲ್ಲ ; ಏಕೆಂದರೆ ಪರಬ್ರಹ್ಮನು ನಿಯಂತೃವು, ಜೀವನು ನಿಯಾಮ್ಯನು—ಎಂಬಿವೇ ಮೊದಲಾದ ಉಪದೇಶದೊಂದಿಗೆ ವಿರೋಧವಾಗುತ್ತದೆ.[1] ಒಬ್ಬನೇ ವ್ಯಕ್ತಿಯು ನಿಯಂತೃವೂ ನಿಯಾಮ್ಯನೂ ಆಗಲಾರನು ; ಏಕೆಂದರೆ ಅವನು ತನ್ನ ಗೃಹವೇ ಮೊದಲಾದ ಉಪಾಧಿಯಿಂದ ಬೇರೆಯವನಾಗಿರುತ್ತಾನೆ

**ದ್ವೈ.**—**ಅಂಶಾ ಏವ ಹೀಮೇ ಜೀವಾಃ** ಎಂಬ ಗೌಪವನಶ್ರುತಿಯು ಜೀವನು ಪರಮೇಶ್ವರನ ಅಂಶವೆಂದು ಹೇಳುತ್ತದೆ **ನೈವಾಂಶಃ** ಎಂಬ ಭಾಲ್ಲವೇಯಶ್ರುತಿಯು ಜೀವನು ಪರಮಾತ್ಮನ ಅಂಶವಲ್ಲವೆಂದು ತಿಳಿಸುತ್ತದೆ. ಈ ವಿರೋಧವನ್ನು ಪರಿಹರಿಸಲು ಜೀವನು ಪರಮಾತ್ಮನ ಅಂಶವೆಂದು ಸೂತ್ರಕಾರರು ಹೇಳುತ್ತಾರೆ. **ಮಾಂ ರಕ್ಷತು** ಎಂಬ ಸ್ಮೃತಿಯಲ್ಲಿಯೂ **ದ್ವಾ ಸುಪರ್ಣಾ** (ಮುಂ. ಉ. ೩. ೧ ೧) ಎಂಬ ಶ್ರುತಿಯಲ್ಲಿಯೂ ಪಿತೃತ್ವ-ಪುತ್ರತ್ವ-ಸಖಿತ್ವವೇ ಮೊದಲಾದ ಸಂಬಂಧವನ್ನು ಹೇಳಿರುವುದರಿಂದ ಜೀವನು ಪರಮೇಶ್ವರನ ಅಂಶವೇ.[2]

## ಮಂತ್ರವರ್ಣಾಚ್ಚ ॥ ೪೪ ॥

೪೪. ಮತ್ತು ಮಂತ್ರವರ್ಣದಿಂದಲೂ (ಜೀವನು ಬ್ರಹ್ಮಾಂಶವೇ).

'ಇದರ ಮಹಿಮೆಯು ಅಷ್ಟು. ಆದರೆ ಪುರುಷನು ಅದಕ್ಕಿಂತಲೂ ದೊಡ್ಡವನು. ಈ ಭೂತಗಳೆಲ್ಲ ಇವನ ಒಂದು ಪಾದವಾಗಿದೆ. ಇವನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ'[3] (ಛಾಂ ಉ. ೩. ೧೨. ೬) ಎಂಬ ಮಂತ್ರವರ್ಣವೂ ಈ ಅರ್ಥವನ್ನೇ ತಿಳಿಸುತ್ತದೆ ಇಲ್ಲಿ ಭೂತಶಬ್ದವು ಜೀವಪ್ರಧಾನವಾದ ಸ್ಥಾವರಜಂಗಮಗಳನ್ನು ತಿಳಿಸುತ್ತದೆ. ಅಂಶ, ಪಾದ, ಭಾಗ ಎಂಬ ಶಬ್ದಗಳು ಒಂದೇ ಅರ್ಥವನ್ನು ಸೂಚಿಸುತ್ತವೆ.

**ವಿ.**—ಮಂತ್ರವರ್ಣದ[4] ಪ್ರಕಾರ (ಋ. ವೇ. ೧೦. ೯೦. ೩) ಜೀವನು ಬ್ರಹ್ಮಾಂಶವೇ ; ಏಕೆಂದರೆ ಪಾದಶಬ್ದವು ಅಂಶವನ್ನು ಸೂಚಿಸುತ್ತದೆ. ಜೀವರು ಅನೇಕರಾಗಿರುವುದರಿಂದ **ವಿಶ್ವಾ ಭೂತಾನಿ** ಎಂಬ ಬಹುವಚನ ಬಂದಿದೆ. ಕಠಶ್ರುತಿಯು (೨ ೫. ೧೩) ನಿತ್ಯರೂ ಅನೇಕರೂ ಆದ ಜೀವರು ಈಶ್ವರನಿಗಿಂತ ಭಿನ್ನರೆಂದು ಹೇಳುತ್ತದೆ. ಹೀಗೆ ಜೀವರ ಬಹುತ್ವ-ನಿತ್ಯತ್ವಗಳು ಪ್ರಾಮಾಣಿಕವಾಗಿರುವಾಗ ಆತ್ಮಯಾಥಾತ್ಮ್ಯವನ್ನು ಅರಿತಿರು

---

1 ಉಪಾಧ್ಯವಚ್ಛಿನ್ನಂ ಬ್ರಹ್ಮ ಜೀವ ಇತ್ಯಪಿ ನ ಸಾಧೀಯಃ, ಪೂರ್ವನಿರ್ದಿಷ್ಟ-ನಿಯಂತೃತ್ವನಿಯಾಮ್ಯತ್ವಾದಿವ್ಯಪದೇಶಬಾಧಾದೇವ (ಶ್ರೀಭಾಷ್ಯ).

2 ....ಇತ್ಯಾದಿನಾ ನಾನಾವ್ಯಪದೇಶಾದಂಶೋ ಜೀವಃ (ಮ. ಭಾ.).

3 ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

4 ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ।

ವನರು ಜೀವರೆಲ್ಲ ಜ್ಞಾನಸ್ವರೂಪರಾಗಿದ್ದರೂ ಅವರಲ್ಲಿರುವ ಭೇದವನ್ನು ಅರಿಯುತ್ತಾರೆ[1]
ಮತ್ತೆ ೨ ೩ ೪೩ನೆಯ ಸೂತ್ರವು ಆತ್ಮನ ಬಹುತ್ವವನ್ನು ನೇರವಾಗಿ ಹೇಳುತ್ತದೆ

**ದ್ವೈತ —ಪಾದೋಽಸ್ಯ ವಿಶ್ವಾ ಭೂತಾನಿ** ಎಂಬ ಶ್ರುತಿಯಿಂದಲೂ ಜೀವನು ಪರಮಾತ್ಮನ ಅಂಶವೇ

### ಅಪಿ ಚ ಸ್ಮರ್ಯತೇ* || ೪೫ ||

೪೫ ಮತ್ತು ಸ್ಮೃತಿಯಲ್ಲಿಯೂ (ಇದನ್ನು ಹೇಳಿದೆ)

ಈಶ್ವರಗೀತೆಯಲ್ಲಿಯೂ ಜೀವನು ಈಶ್ವರಾಂಶವೆಂದು ಹೇಳಿದೆ . 'ಸನಾತನವಾದ ನನ್ನ ಅಂಶವೇ ಸಂಸಾರದಲ್ಲಿ ಜೀವನಾಗಿ (ಇರುತ್ತದೆ)'[2] (ಗೀತಾ ೧೫ ೭) ಈಶಿತೃ-ಈಶಿತವ್ಯ-ಭಾವವು ಸ್ವಾಮಿ-ಭೃತ್ಯರಲ್ಲಿ ಲೋಕಪ್ರಸಿದ್ಧವಾಗಿದ್ದರೂ ಶಾಸ್ತ್ರದಿಂದ ಅಂಶ-ಅಂಶಿ-ಭಾವವನ್ನೂ ಈಶಿತೃ-ಈಶಿತವ್ಯ-ಭಾವವನ್ನೂ ನಿರ್ಧರಿಸಬೇಕಾಗಿದೆ ನಿರತಿಶಯೋಪಾಧಿಸಂಪನ್ನನಾದ ಈಶ್ವರನು ಹೀನೋಪಾಧಿಸಂಪನ್ನರಾದ ಜೀವರನ್ನು ಆಳುತ್ತಾನೆ ಎಂಬುದರಲ್ಲಿ ಯಾವ ವಿರೋಧವೂ ಇಲ್ಲ

**ವಿ. ಮತ್ತು ದ್ವೈತ** —ಸ್ಮೃತಿಯೂ (ಗೀತಾ ೧೫ ೭) ಜೀವನು ಪುರುಷೋತ್ತಮನ ಅಂಶವೆಂದು ಹೇಳುತ್ತದೆ

### ಪ್ರಕಾಶಾದಿವನ್ನೈವಂ ಪರಃ || ೪೬ ||

೪೬ ಪ್ರಕಾಶಾದಿಗಳು (ತಾವು ವ್ಯಾಪಿಸಿಕೊಂಡಿರುವ ವಸ್ತುಗಳ ಆಕಾರದಿಂದ ಅಸ್ಪೃಷ್ಟವಾಗಿರುವಂತೆ) ಪರಮಾತ್ಮನು (ಜೀವನಂತೆ ಸುಖದುಃಖಗಳಿಂದ) ಸ್ಪೃಷ್ಟನಾಗಿಲ್ಲ

ಜೀವನು ಈಶ್ವರಾಂಶವೆಂದು ಒಪ್ಪಿಕೊಂಡರೆ ಅಂಶನಾದ ಜೀವನ ಸುಖದುಃಖಗಳು ಅಂಶಿಯಾದ ಈಶ್ವರನಿಗೂ ಉಂಟಾಗಬೇಕಾಗುತ್ತದೆ ಕೈಗೋ ಕಾಲಿಗೋ ಗಾಯವಾದರೆ ಇಡೀ ಶರೀರಕ್ಕೆ ನೋವಾಗುವುದು ಲೋಕದಲ್ಲಿ ಕಂಡುಬರುತ್ತದೆ ಆದುದರಿಂದ ಈಶ್ವರನನ್ನು ಪಡೆದುಕೊಂಡವರಿಗೆ ಮಹತ್ತರವಾದ ದುಃಖವು ಉಂಟಾಗುತ್ತದೆ ಅದಕ್ಕಿಂತಲೂ ಹಿಂದಿನ

---

[1] ಏವಂ ನಿತ್ಯಾನಾಮಾತ್ಮನಾಂ ಬಹುತ್ವೇ ಪ್ರಾಮಾಣಿಕೇ ಸತಿ ಜ್ಞಾನಸ್ವರೂಪತ್ವೇನ ಸರ್ವೇಷಾಮೇಕರೂಪತ್ವೇಽಪಿ ಭೇದಕಾಕಾರಃ ಆತ್ಮಯಾಥಾತ್ಮ್ಯವೇದನಕ್ಷಮೈರವಗಮ್ಯತೇ (ಶ್ರೀಭಾಷ್ಯ)

* ಶ್ರೀಭಾಷ್ಯದ ಪಾಠದಲ್ಲಿಯೂ ಮಧ್ವಭಾಷ್ಯದ ಪಾಠದಲ್ಲಿಯೂ ಸೂತ್ರದಲ್ಲಿರುವ ಚಕಾರವಿಲ್ಲ

[2] ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।

ಸಂಸಾರವೇ ಹೆಚ್ಚು ಇಷ್ಟವಾಗಿದ್ದು ಸಮ್ಯಗ್ದರ್ಶನವು ವ್ಯರ್ಥವಾಗುತ್ತದೆ—ಎಂಬುದು ಪೂರ್ವಪಕ್ಷ

ಇದಕ್ಕೆ ಪರಿಹಾರವು ಹೀಗಿದೆ : ಜೀವನು ಸಂಸಾರದುಃಖವನ್ನು ಅನುಭವಿಸುವಂತೆ ಪರಮೇಶ್ವರನು ಅನುಭವಿಸುವುದಿಲ್ಲ ; ಏಕೆಂದರೆ ಜೀವನು ಅವಿದ್ಯಾವೇಶದ ವಶದಿಂದ ದೇಹಾದಿಗಳೊಂದಿಗೆ ಆತ್ಮಭಾವವನ್ನು ಪಡೆದಂತಾಗಿ, ಅದರಿಂದಾದ ದುಃಖದಿಂದ 'ನಾನು ದುಃಖಿ' ಎಂದು ಅವಿದ್ಯಾಕೃತವಾದ ದುಃಖೋಪಭೋಗದಲ್ಲಿ ಅಭಿಮಾನವನ್ನು ಹೊಂದಿರುತ್ತಾನೆ. ಆದರೆ ಪರಮೇಶ್ವರನು ದೇಹಾದ್ಯಾತ್ಮಭಾವವನ್ನಾಗಲಿ ದುಃಖಾಭಿಮಾನವನ್ನಾಗಲಿ ಹೊಂದುವುದಿಲ್ಲ.

ಸೂರ್ಯನ ಅಥವಾ ಚಂದ್ರನ ಪ್ರಕಾಶವು ಆಕಾಶವನ್ನು ವ್ಯಾಪಿಸಿಕೊಂಡಿದ್ದು ಅಂಗುಲಿಯೇ ಮೊದಲಾದ ಉಪಾಧಿಗಳ ಸಂಬಂಧದಿಂದ ಋಜು-ವಕ್ರಾದಿ-ಭಾವವನ್ನು ಪಡೆದಂತೆ ಕಂಡರೂ, ಗಡಿಗೆಯನ್ನು ಒಂದು ಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ಒಯ್ದಾಗ ಅದರಲ್ಲಿರುವ ಆಕಾಶವು ಚಲಿಸಿದಂತೆ ಕಂಡರೂ, ನೀರಿನ ಪಾತ್ರೆಯು ಅಲುಗಾಡುತ್ತಿರುವಾಗ ಅದರಲ್ಲಿರುವ ಸೂರ್ಯಪ್ರತಿಬಿಂಬವು ಅಲುಗಾಡಿದಂತೆ ಕಂಡರೂ ನಿಜವಾಗಿ ಇವು ಯಾವುವೂ ಬದಲಾವಣೆಯನ್ನು ಹೊಂದುವುದಿಲ್ಲ. ಹೀಗೆಯೇ ಅವಿದ್ಯೆಯು ತಂದೊಡ್ಡಿದ ಬುದ್ಧ್ಯಾದಿಗಳಿಂದ ಉಪಹಿತನಾದ ಜೀವನೆಂಬ ಅಂಶವು ದುಃಖಿಯಾದರೂ (ಅಂಶಿಯಾದ) ಈಶ್ವರನು ದುಃಖಿಯಾಗುವುದಿಲ್ಲ.[1] ಆದುದರಿಂದ ತತ್ತ್ವಮಸಿ (ಛಾಂ. ಉ. ೬. ೮. ೭) ಇವೇ ಮೊದಲಾದ ವೇದಾಂತವಾಕ್ಯಗಳು ಅವಿದ್ಯೆಯಿಂದುಂಟಾದ ಜೀವಭಾವವನ್ನು ಹೋಗಲಾಡಿಸಿ ಬ್ರಹ್ಮಭಾವವನ್ನೇ ಜೀವನಿಗೆ ಪ್ರತಿಪಾದಿಸುತ್ತವೆ. ಆದುದರಿಂದ ಜೈವದುಃಖದಿಂದ ಪರಮಾತ್ಮನಿಗೆ ದುಃಖಿತ್ವವು ಬರುವುದಿಲ್ಲ

**ವಿ.**—ಅಗ್ನಿ ಸೂರ್ಯ ಮೊದಲಾದ ವಸ್ತುಗಳಿಂದ ಬರುತ್ತಿರುವ ಪ್ರಕಾಶವು ಆ ವಸ್ತುಗಳ ಅಂಶವಾಗಿರುವಂತೆ ಜೀವನು ಪರಮಾತ್ಮನ ಅಂಶನಾಗಿರುವನು.[2] ಒಂದು ವಸ್ತುವಿನ ಏಕದೇಶಕ್ಕೆ ಅಂಶವೆಂದು ಹೆಸರು ; ಆದುದರಿಂದ ವಿಶಿಷ್ಟವಾದ ಒಂದು ವಸ್ತುವಿನ ಅಂಶವು ವಿಶೇಷಣವಾಗಿರುತ್ತದೆ. ಈ ಕಾರಣದಿಂದ ವಿಶಿಷ್ಟವಸ್ತುವನ್ನು ವಿವೇಚಿಸುವವರು 'ಇದು ವಿಶೇಷಣಾಂಶ', 'ಇದು ವಿಶೇಷ್ಯಾಂಶ' ಎಂದು ಹೇಳುತ್ತಾರೆ. ವಿಶೇಷಣ-ವಿಶೇಷ್ಯಗಳಿಗೆ ಅಂಶಾಂಶಿಸಂಬಂಧವಿದ್ದರೂ ಅವೆರಡರಲ್ಲಿ ಒಂದು ಸ್ವಭಾವವೈಲಕ್ಷಣ್ಯವು ಕಂಡುಬರುತ್ತವೆ. ಆದುದರಿಂದ ವಿಶೇಷಣನಾದ ಜೀವನು, ವಿಶೇಷ್ಯನಾದ ಪರಮಾತ್ಮನು— ಇವರು ಅಂಶಾಂಶಿಗಳಾಗಿದ್ದರೂ ಇವರಿಬ್ಬರಲ್ಲಿ ಸ್ವಭಾವಭೇದವಿರುತ್ತದೆ. ಜೀವನಂತೆ ಪರಮಾತ್ಮನಲ್ಲ. ಪ್ರಭೆಯುಳ್ಳ ವಸ್ತುವು ತನ್ನ ಪ್ರಭೆಗಿಂತ ಬೇರಾಗಿರುವಂತೆ ಪ್ರಭಾಸ್ಥಾನದಲ್ಲಿ

[1] ಏವಮವಿದ್ಯಾಪ್ರತ್ಯುಪಸ್ಥಾಪಿತೇ ಬುದ್ಧ್ಯಾದ್ಯುಪಹಿತೇ ಜೀವಾಖ್ಯೇಽಂಶೇ ದುಃಖಾಯಮಾನೇಽಪಿ ನ ತದ್ವಾನೀಶ್ವರೋ ದುಃಖಾಯತೇ (ಸೂ. ಭಾ.).

[2] ಪ್ರಕಾಶಾದಿವಜ್ಜೀವಃ ಪರಮಾತ್ಮನೋಽಂಶಃ, ಯಥಾಽಗ್ನ್ಯಾದಿತ್ಯಾದೇರ್ಭಾಸ್ವತೋ ಭಾರೂಪಃ ಪ್ರಕಾಶೋಽಂಶೋ ಭವತಿ (ಶ್ರೀಭಾಷ್ಯ).

ರುವ ತನ್ನ ಅಂಶವಾದ ಜೀವನಿಗಿಂತ ಅಂಶಿಯಾದ ಪರಮಾತ್ಮನು ಬೇರೆಯವನಾಗಿರುತ್ತಾನೆ [1]

ದ್ವೈ.—'(ಪರಮಾತ್ಮನು ತನ್ನ ಅವತಾರಗಳ ವಿಷಯದಲ್ಲಿ) ಹೀಗಲ್ಲ, ಏಕೆಂದರೆ ಪ್ರಕಾಶಾದಿಗಳ (ಅಧಿಷ್ಠಾತೃದೇವತೆಗಳು) ಬೇರೆಯಾಗಿ ಇದ್ದಂತೆ' ಎಂಬುದು ಸೂತ್ರಾರ್ಥ

ಜೀವರು ಮತ್ತು ಇತರ ವಸ್ತುಗಳು ಪರಮಾತ್ಮನ ಅಂಶಗಳೆಂದು ಹೇಳಲ್ಪಟ್ಟರೂ ಮತ್ಸ್ಯಾದಿರೂಪಿಯಾದ ಪರಮಾತ್ಮನು ಜೀವಾದಿಗಳಂತಲ್ಲ, [2] ಹೇಗೆಂದರೆ ಕಾಲಾಗ್ನಿ ಮತ್ತು ಮಿಂಚಿನ ಹುಳು ಇವೆರಡೂ ತೇಜೋಽಂಶವೇ ಆಗಿದ್ದರೂ ಒಂದೇ ಪ್ರಕಾರವಾಗಿರುವುದಿಲ್ಲ

## ಸ್ಮರಂತಿ ಚ ॥ ೪೭ ॥

೪೭ ಮತ್ತು (ವ್ಯಾಸಾದಿಗಳೂ) ಸ್ಮರಿಸುತ್ತಾರೆ

ಜೀವನ ದುಃಖದಿಂದ ಪರಮಾತ್ಮನು ದುಃಖಿಸುವುದಿಲ್ಲವೆಂದು ವ್ಯಾಸಾದಿಗಳು ಹೇಳುತ್ತಾರೆ. 'ಅವರಿಬ್ಬರಲ್ಲಿ ಯಾವನು ಪರಮಾತ್ಮನೊ ಅವನು ನಿತ್ಯನೂ ನಿರ್ಗುಣನೂ ಆಗಿರುವನು, ತಾವರೆಯೆಲೆಯಂತೆ ಕರ್ಮಫಲದಿಂದ ಲಿಪ್ತನಾಗಿಲ್ಲ ಆದರೆ ಕರ್ಮಾಶ್ರಯನಾದ ಮತ್ತೊಬ್ಬನು ಬಂಧಮೋಕ್ಷಗಳಿಂದ ಕೂಡಿರುತ್ತಾನೆ, ಮತ್ತು ಅವನಿಗೆ ದಶೇಂದ್ರಿಯಗಳು ಪಂಚಪ್ರಾಣಗಳು ಮನಸ್ಸು ಬುದ್ಧಿ—ಇವುಗಳ ಸಂಬಂಧವಿದೆ' [3] (ಮೋ ಧ ೩೫೧ ೧೪ ೧೬) ಇದು ಶ್ರುತಿಗಳ ಸಮುಚ್ಚಯಾರ್ಥವೆಂದು ಸೂತ್ರದಲ್ಲಿರುವ ಚ-ಶಬ್ದವು ಸೂಚಿಸುತ್ತದೆ

ವಿ —ಹೀಗೆ ಪ್ರಭಾ-ಪ್ರಭಾವದ್-ರೂಪದಿಂದ, ಶಕ್ತಿ-ಶಕ್ತಿಮದ್-ರೂಪದಿಂದ ಶರೀರ-ಆತ್ಮ-ಭಾವದಿಂದ ಜಗತ್ತು, ಪರಬ್ರಹ್ಮ ಇವರಿಗಿರುವ ಅಂಶಾಂಶಿಭಾವವನ್ನು ಪರಾಶರಾದಿಗಳು ಸ್ಮರಿಸುತ್ತಾರೆ 'ಒಂದು ಸ್ಥಳದಲ್ಲಿರುವ ಅಗ್ನಿಯ ಬೆಳಕು ಎಲ್ಲಾ ಕಡೆಯಲ್ಲಿಯೂ ಪ್ರಸರಿಸುವಂತೆ ಈ ಜಗತ್ತೆಲ್ಲ ಪರಬ್ರಹ್ಮನ ಶಕ್ತಿಯಾಗಿದೆ' [4]

---

[1] ಯಥೈವ ಹಿ ಪ್ರಭಾಯಾಃ ಪ್ರಭಾವಾನ್ಯಥಾಭೂತಃ, ತಥಾ ಪ್ರಭಾಸ್ಥಾನೀಯಾತ್ ಸ್ವಾಂಶಾಜ್ಜೀವಾದಂಶೀ ಪರೋಽಪ್ಯರ್ಥಾಂತರಭೂತ ಇತ್ಯರ್ಥಃ (ಶ್ರೀಭಾಷ್ಯ)

[2] ಅಂಶತ್ವೇಽಪಿ ನ ಮತ್ಸ್ಯಾದಿರೂಪೀ ಪರ ಏವಂವಿಧಃ (ಮ ಭಾ)

[3] ತತ್ರ ಯಃ ಪರಮಾತ್ಮಾ ಹಿ ಸ ನಿತ್ಯೋ ನಿರ್ಗುಣಃ ಸ್ಮೃತಃ ।
ನ ಲಿಪ್ಯತೇ ಫಲೈಶ್ಚಾಪಿ ಪದ್ಮಪತ್ರಮಿವಾಂಭಸಾ ॥
ಕರ್ಮಾತ್ಮಾ ತ್ವಪರೋ ಯೋಽಸೌ ಮೋಕ್ಷಬಂಧೈಃ ಸ ಯುಜ್ಯತೇ ।
ಸ ಸಪ್ತದಶಕೇನಾಪಿ ರಾಶಿನಾ ಯುಜ್ಯತೇ ಪುನಃ ॥
ಏಕದೇಶಸ್ಥಿತಸ್ಯಾಗ್ನೇರ್ಜ್ಯೋತ್ಸ್ನಾ ವಿಸ್ತಾರಿಣೀ ಯಥಾ ।
ಪರಸ್ಯ ಬ್ರಹ್ಮಣಃ ಶಕ್ತಿಸ್ತಥೇದಮಖಿಲಂ ಜಗತ್ ॥

ದ್ವೈ.—ಜೀವನಿಗೆ ಭಿನ್ನಾಂಶತ್ವವನ್ನೂ ಮತ್ಸ್ಯಾದಿ-ರೂಪಗಳಿಗೆ ಅಭಿನ್ನಾಂಶತ್ವವನ್ನೂ ವ್ಯಾಸಾದಿಗಳು ಹೇಳುತ್ತಾರೆ 'ಇವೆಲ್ಲಾ ಪರಮಪುರುಷನ ಅಭಿನ್ನವಾದ ಕಲೆಗಳು, ಇವು ಭಗವಂತನಾದ ಕೃಷ್ಣನಿಗಿಂತ ಅಭಿನ್ನವಾಗಿ, ಇಂದ್ರನ ಶತ್ರುಗಳಿಂದ ವ್ಯಾಕುಲವಾದ ಲೋಕವನ್ನು ಅನುಗ್ರಹಿಸಲು ಪ್ರತಿಯುಗದಲ್ಲಿಯೂ ಬರುತ್ತವೆ'[1] (ಭಾಗ ೧ ೩ ೨೮), 'ಪರಮಾತ್ಮನಿಗಿಂತ ಭಿನ್ನನೂ ಸೂಕ್ಷ್ಮನೂ ಅವ್ಯಕ್ತನೂ, ಪರಮಾತ್ಮನನ್ನು ಕೇಳದೆ ಅರಿಯದೆ ಧ್ಯಾನಿಸದೆ ಇರುವುದರಿಂದ ಮುಕ್ತನಾಗದೆ ಇರುವವನೂ, ಆದ ಜೀವನು ಪುನರ್ಜನ್ಮವನ್ನು ಹೊಂದುತ್ತಾನೆ'[2] (ಭಾಗ ೧ ೩ ೩೨)

## ಅನುಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾದಿವತ್ ॥ ೪೮ ॥

೪೮ ವಿಧಿನಿಷೇಧಗಳು ಜ್ಯೋತಿಯೇ ಮೊದಲಾದವುಗಳಂತೆ ದೇಹ_ಸಂಬಂಧದಿಂದ (ಸಾಧ್ಯವಾಗುತ್ತವೆ)

ಸರ್ವಪ್ರಾಣಿಗಳಲ್ಲಿ ಒಬ್ಬನೇ ಅಂತರಾತ್ಮನಿದ್ದರೆ ವಿಧಿ-ನಿಷೇಧಗಳು ಹೇಗೆ ಆಗುತ್ತವೆ ?—ಎಂದು ಆಕ್ಷೇಪಿಸಲು ಕಾರಣವಿಲ್ಲ, ಏಕೆಂದರೆ ಜೀವನು ಈಶ್ವರಾಂಶವೆಂದು ಹೇಳಿದ್ದೇವೆ ಈ ಭೇದದಿಂದ ವಿಧಿನಿಷೇಧಗಳು ಒಂದಕ್ಕೊಂದು ಬೆರೆಯದೆ ಇರಲು ಸಾಧ್ಯವಾಗುತ್ತವೆ ಅಭೇದಶ್ರುತಿಗಳು ಜೀವನು ಈಶ್ವರಾಂಶನಲ್ಲವೆಂದು ಹೇಳುವುದರಿಂದ ಈ ಪರಿಹಾರವು ಸರಿಯಲ್ಲವೆಂದು ಆಕ್ಷೇಪಕನು ಹೇಳಿದರೆ ಭೇದಾಭೇದಗಳ ಜ್ಞಾನದಿಂದ ಜೀವನ ಅಂಶತ್ವವು ಸಿದ್ಧಿಸುತ್ತದೆ—ಎಂದು ಉತ್ತರಿಸಬಹುದು ಇದಕ್ಕೆ ಪೂರ್ವಪಕ್ಷಿಯು ಪುನಃ ಹೀಗೆ ಆಕ್ಷೇಪಿಸುತ್ತಾನೆ ಭೇದಾಭೇದಗಳನ್ನು ಪ್ರತಿಪಾದನೆ ಮಾಡಬೇಕೆಂದಿದ್ದರೆ ಹೀಗಾಗಬಹುದಾಗಿತ್ತು ಆದರೆ ಅಭೇದವನ್ನೇ ಪ್ರತಿಪಾದಿಸಲು ಇಲ್ಲಿ ಹೊರಟಿದೆ, ಏಕೆಂದರೆ ಬ್ರಹ್ಮಾತ್ಮತ್ವ-ಜ್ಞಾನದಿಂದ ಪುರುಷಾರ್ಥವು ಸಿದ್ಧಿಸುತ್ತದೆ ಇಲ್ಲಿ ಸ್ವಭಾವದಿಂದ ಬಂದ ಭೇದವನ್ನು ಸೂಚಿಸಿದೆ ನಿರವಯವವಾದ ಬ್ರಹ್ಮಕ್ಕೆ ಜೀವನು ಅಂಶವೆಂಬುದು ಮುಖ್ಯಾರ್ಥದಲ್ಲಿ ಆಗುವುದಿಲ್ಲವೆಂದು ಹಿಂದೆಯೇ ಹೇಳಿದ್ದೇವೆ ಆದುದರಿಂದ ಸರ್ವಪ್ರಾಣಿಗಳಿಗೂ ಅಂತರಾತ್ಮನಾದ ಪರಮಾತ್ಮನೊಬ್ಬನೇ ಇರುವುದರಿಂದ ಅವನಿಗೇ ವಿಧಿ-ನಿಷೇಧಗಳು ಹೇಗೆ ಉಂಟಾಗುತ್ತವೆ ?— ಎಂಬುದನ್ನು ಹೇಳಬೇಕಾಗುತ್ತದೆ

ಮೇಲಿನ ಆಕ್ಷೇಪಣೆಗೆ ಪರಿಹಾರವು ಹೀಗಿರುತ್ತದೆ ಆತ್ಮನು ಒಬ್ಬನೇ ಆದರೂ ಅವನಿಗೆ ದೇಹಸಂಬಂಧವಿರುವುದರಿಂದ ವಿಧಿ–ನಿಷೇಧಗಳು ಆಗಬಹುದು ಈ ದೇಹಾದಿ-

---

[1] ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।
ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ ॥

[2] ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।
ಅದೃಷ್ಟಾಶ್ರುತವಸ್ತುತ್ವಾತ್ಸ ಜೀವೋ ಯಃ ಪುನರ್ಭವಃ ।

ಸಂಘಾತವೇ 'ನಾನು' ಎಂದು ತನ್ನಲ್ಲಿ ವಿಪರೀತಪ್ರತ್ಯಯವುಂಟಾಗುವುದೇ ದೇಹ ಸಂಬಂಧವು[1] 'ನಾನು ಕುರುಡ, ಕುರುಡನಲ್ಲ', 'ನಾನು ಮೂಢ, ಮೂಢನಲ್ಲ'—ಇವೇ ಮೊದಲಾದ ಪ್ರತ್ಯಯಗಳು ಎಲ್ಲರಲ್ಲಿಯೂ ಕಂಡುಬರುತ್ತವೆ ಇಂಥ ಪ್ರತ್ಯಯಗಳನ್ನು ನಿವಾರಿಸಲು ಸಮ್ಯಗ್ದರ್ಶನವನ್ನು ಬಿಟ್ಟರೆ ಬೇರೆ ಯಾವುದೂ ಇರುವುದಿಲ್ಲ ಆದುದರಿಂದ ಸಮ್ಯಗ್ದರ್ಶಿಗೆ ವಿಧಿನಿಷೇಧಗಳು ವ್ಯರ್ಥವಾಗುವುವೆಂದು ಹೇಳಲಾಗುವುದಿಲ್ಲ, ಏಕೆಂದರೆ ಅವನು ಕೃತಾರ್ಥನಾಗಿರುವುದರಿಂದ ಅವನಿಗೆ ಆವಶ್ಯಕರ್ತವ್ಯಗಳಿರುವುದಿಲ್ಲ[2] ಆಕಾಶಾದಿಗಳಂತೆ ತಾನು ದೇಹಾದಿಗಳೊಂದಿಗೆ ಸೇರಿಕೊಂಡಿಲ್ಲ ಎಂಬುದನ್ನು ಅರಿಯದಿರುವವನಿಗೆ ಅವಶ್ಯಕರ್ತವ್ಯಗಳಿರುತ್ತವೆ ಕರ್ತವ್ಯವಿಲ್ಲದ ಸಮ್ಯಗ್ದರ್ಶಿಗೆ ಯಥೇಷ್ಟಾಚರಣವುಂಟಾಗುವುದೆಂದೂ ಹೇಳಲಾಗುವುದಿಲ್ಲ, ಏಕಂದರೆ ಸಮ್ಯಗ್ದರ್ಶಿಗೆ ಅಭಿಮಾನವಿರುವುದಿಲ್ಲ ಆದುದರಿಂದ ದೇಹಸಂಬಂಧದಿಂದಲೇ ವಿಧಿನಿಷೇಧಗಳಿರುತ್ತವೆ ಇದು ಜ್ಯೋತಿಯೇ ಮೊದಲಾದುವುಗಳ ಹಾಗೆ ಜ್ಯೋತಿಯು ಒಂದೇ ಆಗಿದ್ದರೂ ಅಶುದ್ಧಪ್ರದೇಶದಲ್ಲಿರುವ ಪ್ರಕಾಶವು ತ್ಯಾಜ್ಯವಾಗಿ ಶುದ್ಧಪ್ರದೇಶದಲ್ಲಿರುವುದು ಗ್ರಾಹ್ಯವಾಗಿರುತ್ತದೆ

ವಿ.—ಜೀವರೆಲ್ಲ ಬ್ರಹ್ಮಾಂಶರಾಗಿದ್ದರೂ ಶುಚಿದೇಹದ ಅಥವಾ ಅಶುಚಿದೇಹದ ಸಂಬಂಧದಿಂದ ವಿಧಿನಿಷೇಧಗಳು ಸಾಧ್ಯವಾಗುತ್ತವೆ ಅಗ್ನಿಯು ಒಂದೇ ಆಗಿದ್ದರೂ ಶುದ್ಧವಾದ ಅಗ್ನಿಯನ್ನು ಪರಿಗ್ರಹಿಸುತ್ತೇವೆ, ಅಶುದ್ಧವಾದುದನ್ನು ತ್ಯಜಿಸುತ್ತೇವೆ

ದ್ವೈ.—'ಜೀವನಿಗೆ ದೇಹಸಂಬಂಧವಿರುವುದರಿಂದ ಈಶ್ವರನ ಅನುಜ್ಞಾಧೀನಗಳಾದ ಪ್ರವೃತ್ತಿ-ಮೋಕ್ಷಗಳು ಉಂಟಾಗುತ್ತವೆ, ಜ್ಯೋತಿರಾದಿಗಳಂತೆ' ಎಂಬುದು ಸೂತ್ರಾರ್ಥ

ಜೀವನು ಪರಮಾತ್ಮನ ಅಂಶವಾಗಿದ್ದರೂ ದೇಹಸಂಬಂಧದಿಂದ ಪರಮಾತ್ಮನ ಅನುಜ್ಞೆಯ ಪ್ರಕಾರ ಪ್ರವೃತ್ತಿಯೂ ನಿವೃತ್ತಿಯೂ ಅವನಿಗೆ ಉಂಟಾಗುತ್ತವೆ,[3] ಅಕ್ಷ್ಯಭಿಮಾನಿಗಳಾದ ಅಪಭ್ರಷ್ಟರೆಂಬ ದೇವತೆಗಳು ಸೂರ್ಯಾದಿಗಳಿಂದ ಭಿನ್ನರಾಗಿದ್ದರೂ ಸೂರ್ಯಾದಿಗಳಿಂದ ಅನುಗ್ರಾಹ್ಯರಾಗಿರುವಂತೆ

**ಅಸಂತತೇಶ್ಚಾವ್ಯತಿಕರಃ ॥ ೪೯ ॥**

೪೯ ಮತ್ತು (ಜೀವಾತ್ಮನಿಗೆ) ವ್ಯಾಪ್ತಿಯಿಲ್ಲದಿರುವುದರಿಂದ (ಕರ್ಮಫಲಗಳ) ಮಿಶ್ರಣವಿಲ್ಲ

---

[1] ದೇಹಾದಿರಯಂ ಸಂಘಾತೋಽಹಮೇವೇತ್ಯಾತ್ಮನಿ ವಿಪರೀತಪ್ರತ್ಯಯೋತ್ಪತ್ತಿಃ (ಸೂ ಭಾ)

[2] ತಸ್ಯ ಕೃತಾರ್ಥತ್ವಾನ್ನಿಯೋಜ್ಯತ್ವಾನುಪಪತ್ತೇಃ (ಸೂ ಭಾ)

[3] ಪರಾನುಜ್ಞಯಾ ಪ್ರವೃತ್ತಿಃ ಪರತೋ ಬಂಧನಿವೃತ್ತಿಶ್ಚ ಜೀವಸ್ಯ ಪ್ರತೀಯತೇಽಂಶತ್ವೇಽಪಿ ದೇಹಸಂಬಂಧಾತ್ (ಮ ಭಾ)

ಒಬ್ಬನೇ ಆದ ಆತ್ಮನಿಗೆ ವಿಶೇಷದೇಹಗಳ ಸಂಬಂಧದಿಂದ ವಿಧಿನಿಷೇಧಗಳಾಗಬಹುದು. ಆದರೆ ಆತ್ಮನು ಒಬ್ಬನೇ ಎಂದು ಒಪ್ಪಿಕೊಂಡರೆ ಕರ್ಮಫಲಗಳು ಬೆರೆಯುತ್ತವೆ ; ಏಕೆಂದರೆ ಕರ್ಮಫಲಗಳನ್ನು ಅನುಭವಿಸಲು ಒಬ್ಬನೇ ಸ್ವಾಮಿಯಿರುತ್ತಾನೆ— ಎಂಬುದು ಪೂರ್ವಪಕ್ಷ. ಇದಕ್ಕೆ ಪರಿಹಾರವೂ ಹೀಗಿದೆ : ಇದು ಸರಿಯಲ್ಲ ; ಏಕೆಂದರೆ ಕರ್ತೃವೂ ಭೋಕ್ತೃವೂ ಆದ ಆತ್ಮನಿಗೆ ವ್ಯಾಪ್ತಿಯಿಲ್ಲ : ಎಂದರೆ ಎಲ್ಲ ಶರೀರಗಳೊಡನೆ ಸಂಬಂಧಿಸಿಲ್ಲ. ಜೀವನು ಉಪಾಧಿವಶನೆಂದು ಹಿಂದೆಯೇ ಹೇಳಿದೆ. ಉಪಾಧಿಗೆ ವ್ಯಾಪ್ತಿಯಿಲ್ಲದಿರುವುದರಿಂದ ಜೀವನಿಗೂ ವ್ಯಾಪ್ತಿಯಿರುವುದಿಲ್ಲ. ಆದುದರಿಂದ ಕರ್ಮಗಳ ಮಿಶ್ರಣವಾಗಲಿ ಫಲಗಳ ಮಿಶ್ರಣವಾಗಲಿ ಆಗುವುದಿಲ್ಲ.

ವಿ.—ಜೀವಾತ್ಮರು ಬ್ರಹ್ಮಾಂಶರಾಗಿದ್ದರೂ ಪರಸ್ಪರ ಭಿನ್ನರಾಗಿದ್ದಾರೆ ; ಏಕೆಂದರೆ ಪ್ರತಿಯೊಬ್ಬನೂ ಅಣುಪರಿಮಾಣನಾಗಿದ್ದು ಬೇರೆ ಬೇರೆ ಶರೀರದಲ್ಲಿ ಇರುತ್ತಾನೆ. ಆದುದರಿಂದ ಒಬ್ಬ ಜೀವನ ಕರ್ಮಫಲಭೋಗವು ಇನ್ನೊಬ್ಬನದರೊಂದಿಗೆ ಬೆರೆಯುವುದಿಲ್ಲ. ಭ್ರಾಂತ-ಬ್ರಹ್ಮ-ಜೀವ-ವಾದದಲ್ಲಿಯೂ ಉಪಹಿತ-ಬ್ರಹ್ಮ-ಜೀವ-ವಾದದಲ್ಲಿಯೂ ಜೀವಾತ್ಮ-ಪರಮಾತ್ಮರ ಅನುಭವಗಳು ಬೆರೆಯುತ್ತವೆ ಎಂಬ ದೋಷವಿದೆ; ಈ ಅಭಿಪ್ರಾಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಸೂತ್ರಕಾರರು ಸ್ವಪಕ್ಷದಲ್ಲಿ ಭೋಗಗಳ ಮಿಶ್ರಣವಿಲ್ಲನೆಂದು ಹೇಳಿರುತ್ತಾರೆ.[1]

ದ್ವೈ.—'ಜೀವಾತ್ಮನಿಗೆ ಅಪೂರ್ಣಶಕ್ತಿಯಿರುವುದರಿಂದ ಅವನಿಗೂ ಮತ್ಸ್ಯಾದಿರೂಪಗಳಿಗೂ ಸಾಮ್ಯವಿಲ್ಲ'[2] ಎಂಬುದು ಸೂತ್ರಾರ್ಥ.

**ಆಭಾಸ ಏವ ಚ* ॥ ೫೦ ॥**

೫೦. ಮತ್ತು (ಜೀವನು) ಆಭಾಸನೇ.

ಜಲದಲ್ಲಿ ಪ್ರತಿಬಿಂಬಿಸುವ ಸೂರ್ಯನಂತೆ ಜೀವನು ಪರಮಾತ್ಮನ ಆಭಾಸನೇ ಎಂದು ಅರಿಯಬೇಕು.[3] ಜೀವನು ಸಾಕ್ಷಾತ್ ಪರಮಾತ್ಮನೂ ಅಲ್ಲ, ಅವನಿಗಿಂತ

---

[1] ಭ್ರಾಂತಬ್ರಹ್ಮಜೀವವಾದೇ ಚೋಪಹಿತಬ್ರಹ್ಮಜೀವವಾದೇ ಚ ಜೀವಪರಯೋರ್ಜೀವಾನಾಂ ಚ ಭೋಗವ್ಯತಿಕರಾದಯಃ ಸರ್ವೇ ದೋಷಾಃ ಸಂತೀತ್ಯಭಿಪ್ರಾಯೇಣ ಸ್ವಪಕ್ಷೇ ಭೋಗವ್ಯತಿಕರಾಭಾವ ಉಕ್ತಃ (ಶ್ರೀಭಾಷ್ಯ).

[2] ಅಪೂರ್ಣಶಕ್ತಿತ್ವಾಚ್ಚ ಜೀವಸ್ಯ ನ ಮತ್ಸ್ಯಾದಿಸಾಮ್ಯಮ್ (ಮ. ಭಾ.).

* ಈ ಸೂತ್ರದಲ್ಲಿ ಪ್ರತಿಬಿಂಬವಾದವು ಪ್ರತಿಪಾದಿತವಾಗಿದೆಯೆಂದು ರತ್ನಪ್ರಭಾಕರರು ಅಭಿಪ್ರಾಯಪಡುತ್ತಾರೆ.

[3] ಆಭಾಸ ಏವ ಚೈಷ ಜೀವಃ ಪರಮಾತ್ಮನೋ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ (ಸೂ. ಭಾ.).

ಬೇರೆಯಾದವನೂ ಅಲ್ಲ ಆದುದರಿಂದ ಸೂರ್ಯನ ಒಂದು ಪ್ರತಿಬಿಂಬವು ನೀರಿನಲ್ಲಿ ಕಂಪಿಸಿದರೆ ಇನ್ನೊಂದು ಪ್ರತಿಬಿಂಬವು ಕಂಪಿಸುವುದಿಲ್ಲ ; ಹೀಗೆಯೇ ಒಬ್ಬ ಜೀವನಿಗೆ ಕರ್ಮಫಲಸಂಬಂಧವಿದ್ದರೆ ಮತ್ತೊಬ್ಬ ಜೀವನಿಗೆ ಅದರ ಸಂಬಂಧವಿರುವುದಿಲ್ಲ ಈ ರೀತಿ ಕರ್ಮಫಲಗಳು ಮಿಶ್ರವಾಗುವುದೇ ಇಲ್ಲ ಆಭಾಸವು ಅವಿದ್ಯಾಕೃತವಾಗಿರುವುದರಿಂದ ಅದನ್ನು ಆಶ್ರಯಿಸಿರುವ ಸಂಸಾರವೂ ಅವಿದ್ಯಾಕೃತವಾಗಿದೆ ನಿಜವಾಗಿ ಆತ್ಮನು ಬ್ರಹ್ಮವು ಎಂಬ ಶ್ರುತಿಯ ಉಪದೇಶವು ಹೊಂದುತ್ತದೆ [1] ಆದರೆ ಯಾರ ಮತದಲ್ಲಿ ಆತ್ಮರು ಅನೇಕರೂ ಮತ್ತು ಸರ್ವಗತರೂ ಅಂಥ ಸಾಂಖ್ಯ-ವೈಶೇಷಿಕಾದಿಗಳ ಪಕ್ಷದಲ್ಲಿ ಕರ್ಮ-ಫಲಗಳ ಸಂಕರವು ಒದಗುತ್ತದೆ

ವಿ.—'ಮತ್ತು (ಅದು ಹೇತುವಿನ) ಆಭಾಸವೇ ಆಗಿದೆ' ಎಂಬುದು ಸೂತ್ರಾರ್ಥ

ಅಖಂಡೈಕರಸಪ್ರಕಾಶಸ್ವರೂಪವಾದ ಬ್ರಹ್ಮವು ತನ್ನ ಸ್ವರೂಪವನ್ನೇ ತಿರೋಧಾನಗೊಳಿಸುವ ಉಪಾಧಿಯಿಂದ ಭೇದವನ್ನು ಹೊಂದಿದೆ—ಎಂಬ ವಾದವು ಹೇತುವಿನ ಆಭಾಸವಾಗಿದೆ.[2] ಪ್ರಕಾಶೈಕಸ್ವರೂಪವಾದುದರ ಪ್ರಕಾಶವು ತಿರೋಧಾನವಾದರೆ ಪ್ರಕಾಶದ ನಾಶವೇ ಆಗುತ್ತದೆ ಭೇದವು ಅವಿದ್ಯಾಕಲ್ಪಿತವಾಗಿದ್ದರೂ ಸರ್ವೋಪಾಧಿಗಳಿಂದ ಉಪಹಿತವಾಗಿರುವ ಸ್ವರೂಪವು ಒಂದೇ ಆಗಿರುವುದರಿಂದ ಜೀವ-ಪರಮಾತ್ಮರ ಅನುಭವಗಳು ಬೆರೆಯುವುವು—ಎಂಬುದು ಸಿದ್ಧವಾಗುತ್ತದೆ.

ದ್ವೈ —'ಜೀವಾತ್ಮರು ಭಗವಂತನ ಅನೇಕರೂಪಗಳ ಪ್ರತಿಬಿಂಬವಾಗಿರುತ್ತಾರೆ' ಎಂದು ಶ್ರುತಿಯು (ಋ ವೇ ೬ ೪೭ ೧೮) ಹೇಳುವುದರಿಂದ ಜೀವನು ಈಶ್ವರನಿಗೆ ಅಥವಾ ಅವನ ಮತ್ಸ್ಯಾದಿರೂಪಗಳಿಗೆ ಸಮಾನನಾಗಲಾರನು [3]

## ಅದೃಷ್ಟಾನಿಯಮಾತ್ ॥ ೫೧ ॥

೫೧ ಅದೃಷ್ಟಕ್ಕೆ ನಿಯಮವಿಲ್ಲದಿರುವುದರಿಂದ (ಜೀವನ ಅನುಭವವನ್ನು ನಿರ್ಧರಿಸಲು ಆಗುವುದಿಲ್ಲ).

ಅದೃಷ್ಟನಿಮಿತ್ತದಿಂದ ಕರ್ಮಫಲಗಳ ನಿಯಮವಾಗಬಹುದು—ಎಂಬುದು ಸರಿಯಲ್ಲ. ಮನೋವಾಕ್ಕಾಯಗಳಿಂದ ಉಂಟಾಗುವ ಧರ್ಮಾಧರ್ಮಗಳಿಗೆ ಅದೃಷ್ಟವೆಂದು

---

[1] ಆಭಾಸಸ್ಯ ಚಾವಿದ್ಯಾಕೃತತ್ವಾತ್ ತದಾಶ್ರಯಸ್ಯ ಸಂಸಾರಸ್ಯಾವಿದ್ಯಾಕೃತತ್ವೋಪಪತ್ತಿರಿತಿ । ತದ್ವ್ಯುದಾಸೇನ ಚ ಪಾರಮಾರ್ಥಿಕಸ್ಯ ಬ್ರಹ್ಮಾತ್ಮಭಾವಸ್ಯೋಪದೇಶೋಪಪತ್ತಿಃ (ಸೂ ಭಾ.)

[2] ಅಖಂಡೈಕರಸಪ್ರಕಾಶಮಾತ್ರಸ್ವರೂಪಸ್ಯ ಸ್ವರೂಪತಿರೋಧಾನಪೂರ್ವಕೋಪಾಧಿಭೇದೋಪಪಾದನಹೇತುರಾಭಾಸ ಏವ (ಶ್ರೀಭಾಷ್ಯ)

[3] ರೂಪಂ ರೂಪಂ ಪ್ರತಿರೂಪೋ ಬಭೂವೇತಿ ಪ್ರತಿಬಿಂಬತ್ವಾಚ್ಚ ನ ಸಾಮ್ಯಮ್ (ಮ ಭಾ.)

ಹೆಸರು ಸಾಂಖ್ಯಮತದ ಪ್ರಕಾರ ಅದೃಷ್ಟವು ಆತ್ಮನಲ್ಲಿರದೆ ಪ್ರಧಾನದಲ್ಲಿರುವುದು. ಪ್ರಧಾನವು ಎಲ್ಲರಿಗೂ ಸಮಾನವಾಗಿರುವುದರಿಂದ ಅದು ಒಬ್ಬೊಬ್ಬ ಆತ್ಮನ ಸುಖದುಃಖ ಭೋಗವನ್ನು ನಿಯಮಿಸುವುದಕ್ಕೆ ಕಾರಣವಾಗಲಾರದು. ವೈಶೇಷಿಕರ ಪ್ರಕಾರ ಆತ್ಮ ಮನಸ್ಸುಗಳ ಸಂಯೋಗದಿಂದ ಅದೃಷ್ಟವುಂಟಾಗುತ್ತದೆ ಇದೂ ಎಲ್ಲರಿಗೂ ಸಮಾನವಾದುದರಿಂದ 'ಈ ಆತ್ಮನಿಗೆ ಇಂಥ ಅದೃಷ್ಟ' ಎಂದು ನಿರ್ಧರಿಸಲು ಆಗುವುದಿಲ್ಲ. ಆದುದರಿಂದ ಹಿಂದೆ ಹೇಳಿದ ದೋಷವು ಉಳಿಯುತ್ತದೆ

ವಿ.—ಉಪಾಧಿಪರಂಪರೆಗೆ ಕಾರಣವಾದ ಅದೃಷ್ಟಗಳು ಬ್ರಹ್ಮಸ್ವರೂಪವನ್ನೇ ಆಶ್ರಯವಾಗಿ ಪಡೆದಿರುವುದರಿಂದ ಅವುಗಳ ವಿತರಣೆಗೆ ನಿಯಮವಿರುವುದಿಲ್ಲ ; ಆದುದರಿಂದ ಸುಖದುಃಖಾದಿ-ಅನುಭವಗಳ ಅವ್ಯವಸ್ಥೆಯು ಹೋಗುವುದಿಲ್ಲ ಉಪಾಧಿಗಳೂ ಅದೃಷ್ಟಗಳೂ ತಮ್ಮ ಸಂಬಂಧದಿಂದ ಬ್ರಹ್ಮಸ್ವರೂಪವನ್ನು ವಿಚ್ಛೇದಗೊಳಿಸಲಾರವು.[1]

ದ್ವೈ.—ಈಶ್ವರನ ಪ್ರತಿಬಿಂಬಗಳಾದ ಜೀವರು ಪರಸ್ಪರ ಬೇರೆಯಾದಿರುವುದಕ್ಕೆ ಕಾರಣವನ್ನು ಹೇಳಿದೆ: ಅನಾದಿಯಾದ ಜ್ಞಾನ, ಕರ್ಮ—ಇವೇ ಮೊದಲಾದುವುಗಳ ವೈಚಿತ್ರ್ಯದಿಂದ ಪ್ರತಿಬಿಂಬಗಳ ವೈಚಿತ್ರ್ಯವು ಉಂಟಾಗಿದೆ.[2]

### ಅಭಿಸಂಧ್ಯಾದಿಷ್ವಪಿ ಚೈವಮ್ ॥ ೫೨ ॥

೫೨. ಅಭಿಸಂಧಿಯೇ ಮೊದಲಾದುವುಗಳಲ್ಲಿಯೂ ಹೀಗೆಯೇ.

'ನಾನು ಇಂಥ ಫಲವನ್ನು ಹೊಂದಲು ಬಯಸುತ್ತೇನೆ', 'ಇದನ್ನು ಪರಿಹರಿಸಿಕೊಳ್ಳಬೇಕು'—ಇವೇ ಮೊದಲಾದ ಅಭಿಸಂಧಿಗಳು ಪ್ರತಿಯೊಬ್ಬ ಆತ್ಮನಲ್ಲಿಯೂ ಆಗುತ್ತಿರುವಾಗ ಅವು ಆತ್ಮರ ಸ್ವಾಮಿತ್ವವನ್ನು ಅದೃಷ್ಟದ ವಿಷಯದಲ್ಲಿ ನಿಯಮಿಸಬಹುದಲ್ಲ ? —ಎಂದು ಪೂರ್ವಪಕ್ಷಿಯು ಹೇಳಿದರೆ, ಹಿಂದೆ ಎತ್ತಿದ ಆಕ್ಷೇಪಣೆಯು ಈ ಅಭಿಸಂಧಿಗಳಿಗೂ ಅನ್ವಯಿಸುತ್ತದೆ; ಏಕೆಂದರೆ ಅಭಿಸಂಧಿಯೇ ಮೊದಲಾದುವು ಎಲ್ಲರಿಗೂ ಸಮಾನವಾಗಿರುವ ಆತ್ಮ-ಮನಃ-ಸಂಯೋಗದಿಂದ ಸರ್ವಾತ್ಮರ ಸಂನಿಧಿಯಲ್ಲಿ ಆಗುವುದರಿಂದ ಇವೂ ಕೂಡ ಸುಖದುಃಖಗಳನ್ನು ನಿಯಮಿಸಲು ಕಾರಣವಾಗಲಾರವು.

ವಿ.—ಅದೃಷ್ಟಗಳಿಗೆ ಕಾರಣಗಳಾದ ಸಂಕಲ್ಪಾದಿಗಳಲ್ಲಿಯೂ ಹಿಂದೆ ಹೇಳಿದ ಹೇತುವಿನಿಂದಲೇ ನಿಯಮವಿರುವುದಿಲ್ಲ; ಏಕೆಂದರೆ ಅವು ಅದ್ವಯವಾದ ಬ್ರಹ್ಮದಲ್ಲಿ ವಿಚ್ಛೇದವನ್ನು ತರಲಾರವು.

---

1 ಉಪಾಧಿಪರಂಪರಾಹೇತುಭೂತಸ್ಯಾದೃಷ್ಟಸ್ಯಾಪಿ ಬ್ರಹ್ಮಸ್ವರೂಪಾಶ್ರಯತ್ವೇನ ನಿಯಮಹೇತ್ವಭಾವಾದವ್ಯವಸ್ಥೈವ, ಉಪಾಧಿಭಿರದೃಷ್ಟೈಶ್ಚ ಸ್ವಸಂಬಂಧೇನ ಬ್ರಹ್ಮಸ್ವರೂಪಚ್ಛೇದಾಸಂಭವಾತ್ (ಶ್ರೀಭಾಷ್ಯ).

2 ಅನಾದಿವಿದ್ಯಾಕರ್ಮಾದಿವೈಚಿತ್ರ್ಯಾದ್ವೈಚಿತ್ರ್ಯಮ್ (ಮ. ಭಾ.).

ದ್ವೈತ —ಅದೃಷ್ಟದ ವೈಚಿತ್ರ್ಯದಿಂದಲೇ ಇಚ್ಛಾದ್ವೇಷಸುಖದುಃಖಾದಿಗಳ ವೈಚಿತ್ರ್ಯವೂ ಉಂಟಾಗುತ್ತದೆ [1]

## ಪ್ರದೇಶಾದಿತಿ ಚೇನ್ನಾಂತರ್ಭಾವಾತ್ ॥ ೫೩ ॥

೫೩. (ಅನುಭವಗಳ ಭೇದವು) ಪ್ರದೇಶ (ಭೇದದಿಂದ ಉಂಟಾಗುತ್ತದೆ) ಎಂದು ಹೇಳಿದರೆ ಅದು ಸರಿಯಲ್ಲ, ಏಕೆಂದರೆ (ಆತ್ಮರೆಲ್ಲ ಎಲ್ಲ ಶರೀರಗಳಲ್ಲಿಯೂ) ಇರುತ್ತಾರೆ.

ಆತ್ಮನು ವಿಭುವಾಗಿದ್ದರೂ ಶರೀರದಲ್ಲಿರುವ ಮನಸ್ಸಿನೊಂದಿಗೆ ಆಗುವ ಅವನ ಸಂಯೋಗವು ಶರೀರಾವಚ್ಛಿನ್ನವಾದ ಆತ್ಮಪ್ರದೇಶದಲ್ಲಿಯೇ ಆಗುತ್ತದೆ; ಆದುದರಿಂದ ಪ್ರದೇಶಕೃತವಾದ ವ್ಯವಸ್ಥೆಯು ಅಭಿಸಂಧ್ಯಾದಿಗಳಿಗೂ ಅದೃಷ್ಟಕ್ಕೂ ಸುಖದುಃಖಾದಿಗಳಿಗೂ ಆಗಬಹುದು—ಎಂಬುದು ಪೂರ್ವಪಕ್ಷ. ಇದೂ ಸರಿಯಲ್ಲ; ಏಕೆಂದರೆ ಆತ್ಮರೆಲ್ಲ ಸಮಾನವಾಗಿ ವಿಭುವಾಗಿದ್ದು ಪ್ರತಿಶರೀರದಲ್ಲಿರುತ್ತಾರೆ. ಹೀಗಿರುವಾಗ ಆತ್ಮನಿಗೆ ಶರೀರಾವಚ್ಛಿನ್ನವಾದ ಪ್ರದೇಶವನ್ನು ಕಲ್ಪಿಸಲು ವೈಶೇಷಿಕರಿಗೆ ಸಾಧ್ಯವಿಲ್ಲ. ಪ್ರದೇಶರಹಿತನಾದ ಆತ್ಮನಿಗೆ ಅವರು ಪ್ರದೇಶವನ್ನು ಕಲ್ಪಿಸಿದರೂ ಅದು ಕಾಲ್ಪನಿಕವಾಗಿರುವುದರಿಂದ ಅಭಿಸಂಧಿಯೇ ಮೊದಲಾದ ನಿಜವಾದ ಕಾರ್ಯವನ್ನು ನಿರ್ಧರಿಸಲಾರದು. ಮತ್ತೆ ಶರೀರವೂ ಕೂಡ ಸರ್ವಾತ್ಮರ ಸಂನಿಧಿಯಲ್ಲಿ ಉತ್ಪನ್ನವಾಗುವುದರಿಂದ 'ಇದು ಈ ಆತ್ಮನಿಗೇ ಸೇರಿದೆ, ಇತರರಿಗಲ್ಲ' ಎಂದು ನಿರ್ಧರಿಸಲು ಶಕ್ಯವಲ್ಲ. ಸರ್ವಗತರಾದ ಅನೇಕ ಆತ್ಮರು ಇದ್ದಾರೆಂಬುದೂ ಹೊಂದುವುದಿಲ್ಲ;[2] ಏಕೆಂದರೆ ಅದಕ್ಕೆ ದೃಷ್ಟಾಂತವಿಲ್ಲ. ಆದುದರಿಂದ ಆತ್ಮೈಕತ್ವಪಕ್ಷದಲ್ಲಿ ಯಾವ ದೋಷವೂ ಇರುವುದಿಲ್ಲ.

ವಿ.—ಬ್ರಹ್ಮಸ್ವರೂಪವು ಏಕವಾಗಿದ್ದರೂ ತನಗೆ ಸಂಬಂಧಿಸಿರುವ ನಾನಾ ವಿಧವಾದ ಉಪಾಧಿಗಳಿಂದ ವಿಚ್ಛೇದವನ್ನು ಹೊಂದಲು ಯೋಗ್ಯವಾಗದಿದ್ದರೂ ಉಪಾಧಿಗಳಿಗೆ ಸಂಬಂಧಿಸಿದ ಬ್ರಹ್ಮಪ್ರದೇಶದ ಭೇದಗಳಿಂದ ಭೋಗವ್ಯವಸ್ಥೆಯು ಹೊಂದುತ್ತದೆ—ಎಂಬ ಪೂರ್ವಪಕ್ಷವು ಸರಿಯಲ್ಲ; ಏಕೆಂದರೆ ಉಪಾಧಿಗಳು ಎಲ್ಲೆಲ್ಲಿಯೂ ಚಲಿಸುವುದರಿಂದ ಎಲ್ಲ ಪ್ರದೇಶಗಳೂ ಎಲ್ಲ ಉಪಾಧಿಗಳೊಂದಿಗೆ ಸೇರಿಕೊಳ್ಳುತ್ತವೆ; ಆದುದರಿಂದ ಭೋಗದ ಬೆರಕೆಯನ್ನು ತಪ್ಪಿಸಲು ಸಾಧ್ಯವಿಲ್ಲ.[3] ಉಪಾಧಿಗಳು ಬೇರೆ ಬೇರೆ ಪ್ರದೇಶ

---

[1] ಇಚ್ಛಾದ್ವೇಷಸುಖದುಃಖಾದಿವೈಚಿತ್ರ್ಯಂ ಚಾದೃಷ್ಟಾದೇವ (ಮ. ಭಾ.).

[2] ಸರ್ವಗತತ್ವಾನುಪಪತ್ತಿಶ್ಚ ಬಹೂನಾಮಾತ್ಮನಾಮ್, ದೃಷ್ಟಾಂತಾಭಾವಾತ್ (ಸೂ. ಭಾ.).

[3] ಉಪಾಧೀನಾಂ ತತ್ರ ತತ್ರ ಗಮನಾತ್ ಸರ್ವಪ್ರದೇಶಾನಾಂ ಸರ್ವೋಪಾಧ್ಯಂತರ್ಭಾವಾದ್ವ್ಯತಿಕರಸ್ತದವಸ್ಥ ಏವ (ಶ್ರೀಭಾಷ್ಯ).

ಗಳೊಂದಿಗೆ ಸಂಬಂಧಿಸಿದ್ದರೂ ಆಯಾ ಪ್ರದೇಶಕ್ಕೆ ಸಂಬಂಧಿಸಿದ ದುಃಖವು ಬ್ರಹ್ಮಕ್ಕೇ ಬರುತ್ತದೆ.

**ದ್ವೈ.**—'ಸ್ವರ್ಗಾದಿ-ಪ್ರದೇಶ-ವೈಚಿತ್ರ್ಯವಿರುವುದರಿಂದ ಜೀವನಿಗೂ ವೈಚಿತ್ರ್ಯವಿರಲಿ ಎಂದು ಹೇಳಕೂಡದು ; ಏಕೆಂದರೆ ಅದೂ ಕೂಡ ಅದೃಷ್ಟವನ್ನೇ ಅಪೇಕ್ಷಿಸುತ್ತದೆ'[1] ಎಂಬುದು ಸೂತ್ರಾರ್ಥ.

---

[1] ನ ಸ್ವರ್ಗಭೂಮ್ಯಾದಿಪ್ರದೇಶವಿಶೇಷಾದ್ವೈಚಿತ್ರ್ಯಮ್। ತತ್ಪ್ರಾಪ್ತೇರಪ್ಯದೃಷ್ಟಾಪೇಕ್ಷತ್ವಾತ್ (ಮ. ಭಾ.).

## ನಾಲ್ಕನೆಯ ಪಾದ

# ೧. ಪ್ರಾಣೋತ್ಪತ್ತ್ಯಧಿಕರಣ

(ಸೂ. ೧—೪)

**ತಥಾ ಪ್ರಾಣಾಃ ॥ ೧ ॥**

೧. ಹಾಗೆಯೇ ಪ್ರಾಣಗಳೂ

ಮೂರನೆಯ ಪಾದದಲ್ಲಿ ಆಕಾಶಾದಿ ವಿಷಯದ ಶ್ರುತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಈಗ ಪ್ರಾಣವಿಷಯವಾದ ಶ್ರುತಿಗಳ ವಿರೋಧವನ್ನು ಪರಿಹರಿಸಲಾಗುತ್ತದೆ.

**ಪೂರ್ವ ಪಕ್ಷಿ**—ಕೆಲವು ಶ್ರುತಿಗಳಲ್ಲಿ[1] ಪ್ರಾಣಗಳ ಉತ್ಪತ್ತಿಯನ್ನು ಹೇಳಿಲ್ಲ ; ಮತ್ತೆ ಕೆಲವು ಶ್ರುತಿಗಳು[2] ಸೃಷ್ಟಿಗೆ ಮೊದಲು ಪ್ರಾಣಗಳು ಇದ್ದವೆಂದು ಹೇಳುತ್ತವೆ. ಇನ್ನು ಕೆಲವೆಡೆಗಳಲ್ಲಿ[3] ಪ್ರಾಣಗಳು ಉತ್ಪನ್ನವಾದವೆಂದು ಹೇಳಿದೆ. ಹೀಗೆ ಶ್ರುತಿವಿರೋಧವಿರುವುದರಿಂದ ಯಾವುದನ್ನೂ ಸರಿಯೆಂದು ನಿರ್ಧರಿಸಲು ಆಗುವುದಿಲ್ಲ; ಅಥವಾ ಉತ್ಪತ್ತಿಗೆ ಮೊದಲು ಪ್ರಾಣಗಳಿದ್ದವೆಂದು ಶ್ರುತಿಗಳು ಹೇಳುವುದರಿಂದ ಉತ್ಪತ್ತಿಯನ್ನು ತಿಳಿಸುವ ಶ್ರುತಿಗಳನ್ನು ಗೌಣಾರ್ಥದಲ್ಲಿ ಗ್ರಹಿಸಬೇಕು.

**ಸಿದ್ಧಾಂತಿ**—'ಈ ಆತ್ಮನಿಂದ ಎಲ್ಲ ಪ್ರಾಣಗಳೂ ಎಲ್ಲ ಲೋಕಗಳೂ ಎಲ್ಲ ದೇವತೆಗಳೂ ಎಲ್ಲ ಪ್ರಾಣಿಗಳೂ ಬರುತ್ತವೆ'[4] (ಬೃ. ಉ. ೨. ೧ ೨೦) ಎಂಬ ಪ್ರಾಣೋತ್ಪತ್ತಿವಾಕ್ಯದಲ್ಲಿ ಹೇಗೆ ಲೋಕಾದಿಗಳು ಪರಬ್ರಹ್ಮದಿಂದ ಉತ್ಪನ್ನವಾಗುತ್ತವೆಯೊ ಹಾಗೆಯೇ ಪ್ರಾಣಗಳೂ ಉತ್ಪನ್ನವಾಗುತ್ತವೆ[5]—ಎಂದು ಹೇಳಿದೆ. ಹೀಗೆಯೇ 'ಪ್ರಾಣ ಮನಸ್ಸು ಸರ್ವೇಂದ್ರಿಯಗಳು ಆಕಾಶ ವಾಯು ಅಗ್ನಿ ನೀರು ಎಲ್ಲವನ್ನೂ ಧರಿಸಿರುವ ಪೃಥಿವಿ—ಇವುಗಳು ಈ ಪುರುಷನಿಂದ ಹುಟ್ಟುತ್ತವೆ'[6] (ಮುಂ. ಉ. ೨. ೧. ೩) ಎಂಬ ಶ್ರುತಿಯಲ್ಲಿ ಆಕಾಶಾದಿಗಳಂತೆ ಪ್ರಾಣಗಳಿಗೂ ಉತ್ಪತ್ತಿಯನ್ನು ಹೇಳಿದೆ. ಅಥವಾ ಹೇಗೆ ಹಿಂದಿನ

---

1 ಛಾಂ. ಉ. ೬. ೨. ೩ ; ತೈ. ಉ. ೨. ೧.

2 ಶ. ಬ್ರಾ. ೬. ೧. ೧. ೧.

3 ಬೃ. ಉ. ೨. ೧. ೨೦ ; ಮುಂ. ಉ. ೨ ೧. ೩ ಮತ್ತು ೮ , ಪ್ರ. ಉ. ೬. ೪.

4 ಏತಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರಂತಿ ।

5 ತತ್ರ ಯಥಾ ಲೋಕಾದಯಃ ಪರಸ್ಮಾದ್ಬ್ರಹ್ಮಣ ಉತ್ಪದ್ಯಂತೇ ತಥಾ ಪ್ರಾಣಾ ಅಪೀತ್ಯರ್ಥಃ (ಸೂ. ಭಾ.).

6 ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥

ವಾದದ ಮೊದಲಿನಲ್ಲಿ ಹೇಳಿರುವ ಆಕಾಶಾದಿಗಳು ಪರಬ್ರಹ್ಮದ ಕಾರ್ಯಗಳೆಂದು ನಿರ್ಧರಿಸಲ್ಪಟ್ಟಿವೆಯೊ ಹಾಗೆಯೇ ಪ್ರಾಣಗಳು ಪರಬ್ರಹ್ಮದ ಕಾರ್ಯಗಳೆಂದು ದೂರದ ಸಂಬಂಧವನ್ನು ಮಾಡಿಕೊಳ್ಳಬಹುದು ; ಇದಕ್ಕೆ ಪೂರ್ವಮೀಮಾಂಸೆಯ ಒಂದು ಸೂತ್ರವು (೩. ೪. ೩೮) ಪ್ರಮಾಣವಾಗಿದೆ.

ವಿ.—ಬ್ರಹ್ಮವ್ಯತಿರಿಕ್ತವಾದ ಆಕಾಶಾದಿಗಳೆಲ್ಲ ಕಾರ್ಯವೆಂದು ಹೇಳಿದ ಮೇಲೆ ಜೀವನು ಒಂದು ಬಗೆಯ ಕಾರ್ಯನಾಗಿದ್ದರೂ ತನ್ನ ಸ್ವರೂಪವನ್ನು ಬದಲಾಯಿಸುವಂಥ ಉತ್ಪತ್ತಿಯನ್ನು ಹೊಂದುವುದಿಲ್ಲವೆಂದು ಹೇಳಿದ್ದಾಯಿತು ಮತ್ತು ಪ್ರಾಸಂಗಿಕವಾಗಿ ಜೀವಸ್ವರೂಪವನ್ನು ಶೋಧಿಸಿದ್ದಾಯಿತು. ಈಗ ಜೀವನ ಉಪಕರಣಗಳಾದ ಪ್ರಾಣೇಂದ್ರಿಯಗಳ ಉತ್ಪತ್ತಿಯ ವಿಷಯದಲ್ಲಿ ಶೋಧನೆಯನ್ನು ಮಾಡಲಾಗುತ್ತದೆ.

ಜೀವನ ಹಾಗೆ ಇಂದ್ರಿಯಗಳು ಕಾರ್ಯವೊ ? ಅಥವಾ ಆಕಾಶಾದಿಗಳ ಹಾಗೆ ಕಾರ್ಯವೊ ?—ಎಂಬುದನ್ನು ನಿಶ್ಚಯಿಸಬೇಕಾಗಿದೆ. ಪೂರ್ವಪಕ್ಷಿಯ ಪ್ರಕಾರ ಜೀವನಂತೆ ಇಂದ್ರಿಯಗಳೂ ಕಾರ್ಯಗಳಾಗಿವೆ ; ಎಂದರೆ ಜೀವನಿಗೆ ಉತ್ಪತ್ತಿ ಇಲ್ಲದಂತೆ ಇಂದ್ರಿಯಗಳಿಗೂ ಉತ್ಪತ್ತಿ ಇಲ್ಲ ಇದನ್ನೇ ಶ್ರುತಿಗಳೂ ಹೇಳುತ್ತವೆ 'ಇದು ಸೃಷ್ಟಿಗೆ ಮೊದಲು ಅಸತ್ ಆಗಿತ್ತು ಅದು ಯಾವುದು ? ಆ ಋಷಿಗಳೇ ಅಸತ್ ಆಗಿದ್ದರು—ಎಂದು ಹೇಳುತ್ತಾರೆ ಆ ಋಷಿಗಳು ಯಾರು ? ಪ್ರಾಣಗಳೇ ಆ ಋಷಿಗಳಾಗಿದ್ದವು'[1] (ಶ. ಬ್ರಾ. ೬. ೧ ೧ ೧) ಇದಕ್ಕೆ ಸಿದ್ಧಾಂತಿಯು ಹೀಗೆ ಪರಿಹಾರವನ್ನು ಹೇಳುತ್ತಾನೆ : ಆಕಾಶಾದಿಗಳಂತೆ ಪ್ರಾಣಾದಿಗಳೂ ಉತ್ಪನ್ನವಾಗುತ್ತವೆ ; ಏಕೆಂದರೆ ಸೃಷ್ಟಿಗೆ ಮೊದಲು ಎಲ್ಲವೂ ಒಂದಾಗಿತ್ತೆಂದು ಶ್ರುತಿಯು ಹೇಳುತ್ತದೆ. 'ಸೋಮ್ಯನೆ, ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್ಸ್ವರೂಪವೇ ಆಗಿತ್ತು' (ಛಾಂ. ಉ. ೬. ೨ ೧) ಮತ್ತು ಮುಂಡಕಶ್ರುತಿಯು (೨. ೩. ೧) ಇಂದ್ರಿಯಗಳ ಉತ್ಪತ್ತಿಯನ್ನು ಹೇಳುತ್ತದೆ. ಪೂರ್ವಪಕ್ಷಿಯು ಪ್ರಮಾಣವಾಗಿ ಉದಾಹರಿಸಿದ ಶ್ರುತಿಯಲ್ಲಿ ಪ್ರಾಣಶಬ್ದವು ಪರಮಾತ್ಮನನ್ನು ನಿರ್ದೇಶಿಸುತ್ತದೆ 'ಪ್ರಾಣಗಳೇ ಆ ಋಷಿಗಳು' ಎಂಬಲ್ಲಿ ಋಷಿ-ಶಬ್ದವು ಸರ್ವಜ್ಞನಾದ ಪರಮಾತ್ಮನನ್ನು ಸೂಚಿಸುತ್ತದೆಯೇ ಹೊರತು, ಅಚೇತನವಾದ ಇಂದ್ರಿಯಗಳನ್ನಲ್ಲ

**ದ್ವೈ.**—ಪ್ರಾಣಾದಿವಿಷಯದಲ್ಲಿ ಶ್ರುತಿಯುಕ್ತಿಗಳಿಂದ ವಿರುದ್ಧವಾಗಿ ತೋರುವ ಶ್ರುತಿಗಳಿಗೆ ಸುವಿಶಿಷ್ಟವಾದ ಯುಕ್ತಿಗಳಿಂದ ಈ ಪಾದದಲ್ಲಿ ವಿರೋಧವನ್ನು ಪರಿಹರಿಸಿದೆ.

ಪರಮಾತ್ಮನಿಂದ ಆಕಾಶಾದಿಗಳು ಹೇಗೆ ಹುಟ್ಟುತ್ತವೆಯೊ ಹಾಗೆಯೇ ಇಂದ್ರಿಯಗಳೂ ಅವನಿಂದಲೇ ಹುಟ್ಟುತ್ತವೆ.[2]

---

[1] ಅಸದ್ವಾ ಇದಮಗ್ರ ಆಸೀತ್, ತದಾಹುಃ ಕಿಂ ತದಸದಾಸೀದಿತಿ, ಋಷಯೋ ವಾ ವ ತೇಽಗ್ರೇಽಸದಾಸೀತ್, ತದಾಹುಃ ಕೇ ತೇ ಋಷಯ ಇತಿ, ಪ್ರಾಣಾ ವಾ ವ ಋಷಯಃ ।

[2] ಯಥಾಽಽಕಾಶಾದಯಃ ಪರಮಾತ್ಮನ ಉತ್ಪದ್ಯಂತೇ ತಥಾ ಪ್ರಾಣಾ ಅಪಿ (ಮ. ಭಾ.)

## ಗೌಣ್ಯಸಂಭವಾತ್ * ॥ ೨ ॥

೨ ಗೌಣ್ಯರ್ಥದಲ್ಲಿ ಸಂಭವಿಸುವುದಿಲ್ಲವಾದುದರಿಂದ (ಪ್ರಾಣಾದಿಗಳು ನಿಜವಾಗಿ ಹುಟ್ಟುತ್ತವೆ).

ಪ್ರಾಣಗಳ ಉತ್ಪತ್ತಿಯನ್ನು ತಿಳಿಸುವ ಶ್ರುತಿಗಳನ್ನು ಗೌಣಾರ್ಥದಲ್ಲಿ ತೆಗೆದುಕೊಳ್ಳಲು ಸಾಧ್ಯವಿಲ್ಲ; ಏಕೆಂದರೆ ಪ್ರತಿಜ್ಞೆಗೆ ಹಾನಿಯುಂಟಾಗುತ್ತದೆ: 'ಯಾವುದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದಂತಾಗುವುದು ?'[1] (ಮುಂ. ಉ ೧. ೧ ೩) ಎಂಬಲ್ಲಿ ಏಕವಿಜ್ಞಾನದಿಂದ ಸರ್ವವಿಜ್ಞಾನವು ಆಗುತ್ತದೆಂದು ಪ್ರತಿಜ್ಞೆ ಮಾಡಿ ಅದನ್ನು ಸಾಧಿಸಲು 'ಇವನಿಂದ ಪ್ರಾಣಗಳು ಹುಟ್ಟುತ್ತವೆ' (ಮುಂ. ಉ. ೨. ೧. ೩) ಎಂಬ ವಾಕ್ಯವನ್ನು ಪಠಿಸಿದೆ ಪ್ರಾಣಗಳೇ ಮೊದಲಾದ ಸಮಸ್ತ ಜಗತ್ತೂ ಬ್ರಹ್ಮಕಾರ್ಯವೆಂದಾದರೆ—ಉಪಾದಾನಕಾರಣಕ್ಕಿಂತ ಬೇರೆಯಾದ ಕಾರ್ಯವಿಲ್ಲದಿರುವುದರಿಂದ—ಆ ಪ್ರತಿಜ್ಞೆಯು ಸಿದ್ಧವಾಗುತ್ತದೆ. ಆದರೆ ಪ್ರಾಣಗಳ ಉತ್ಪತ್ತಿಯನ್ನು ಗೌಣಾರ್ಥದಲ್ಲಿ ತೆಗೆದುಕೊಂಡರೆ ಆ ಪ್ರತಿಜ್ಞೆಯನ್ನು ಬಿಡಬೇಕಾಗುತ್ತದೆ. ಉತ್ಪತ್ತಿಗೆ ಮೊದಲು ಪ್ರಾಣಗಳು ಇರುತ್ತವೆ—ಎಂಬ ಶ್ರುತಿಯು ಮೂಲಕಾರಣವಾದ ಬ್ರಹ್ಮವನ್ನು ಕುರಿತು ಹೇಳಿದ್ದಲ್ಲ; ಏಕೆಂದರೆ ಆ ಮೂಲಕಾರಣದಲ್ಲಿ ಪ್ರಾಣವೇ ಮೊದಲಾದ ಯಾವ ವಿಶೇಷವೂ ಇಲ್ಲವೆಂದು ಶ್ರುತಿಯು[2] ಹೇಳುತ್ತದೆ. ಮತ್ತೆ ಈ ಪ್ರಾಣಗಳು ಉತ್ಪತ್ತಿಗೆ ಮೊದಲು ಇರುವುವೆಂದು ಅವಧಾರಣೆ ಮಾಡಿರುವುದು ಹಿರಣ್ಯಗರ್ಭನೆಂಬ ಅವಾಂತರಪ್ರಕೃತಿಯ ವಿಷಯವಾದದ್ದು; ಮತ್ತು ಆ ಹಿರಣ್ಯಗರ್ಭನ ಕಾರ್ಯದ ಅಪೇಕ್ಷೆಯಿಂದ ಹೇಳಿದ್ದು, ಏಕೆಂದರೆ ಈ ವ್ಯಾಕೃತಜಗತ್ತಿನಲ್ಲಿಯೂ ಅನೇಕಾವಸ್ಥೆಗಳು ಕಾರ್ಯ-ಕಾರಣಭಾವದಿಂದಿರುವುದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ.

ವಿ.—ಗೌಣ್ಯಸಂಭವಾತ್ ತತ್ಪ್ರಾಕ್ಛ್ರುತೇಶ್ಚ ॥ ೨. ೪. ೨ ॥

೨. (ಶ್ರುತಿಯಲ್ಲಿ ಹೇಳಿರುವ ಬಹುವಚನವು) ಗೌಣವು; ಏಕೆಂದರೆ ಅದು ಸಂಭವಿಸುವುದಿಲ್ಲ; ಮತ್ತು ಅದಕ್ಕಿಂತ ಮೊದಲು (ಪರಮಾತ್ಮನನ್ನು) ಹೇಳಿದೆ.

'ಋಷಿಗಳು ಪ್ರಾಣಗಳು' ಎಂಬ ಬಹುವಚನಶ್ರುತಿಗೆ ಪರಿಹಾರವನ್ನು ಈ ಸೂತ್ರವು ಹೇಳುತ್ತದೆ ಶ್ರುತಿಯಲ್ಲಿ ಹೇಳಿರುವ ಬಹುವಚನವನ್ನು ಗೌಣಾರ್ಥದಲ್ಲಿ ತೆಗೆದುಕೊಳ್ಳ

---

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಸೇರಿ ಒಂದೇ ಸೂತ್ರವಾಗಿದೆ

1 ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ।

2 ಅವನು ಪ್ರಾಣಮನಸ್ಸುಗಳಿಲ್ಲದವನು, ಶುದ್ಧನು, ಪರವಾದ ಅಕ್ಷರಕ್ಕಿಂತಲೂ ಶ್ರೇಷ್ಠನು' ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ (ಮುಂ. ಉ. ೨. ೧.೨)

ಬೇಕು ; ಏಕೆಂದರೆ ಬಹ್ವರ್ಥವು ಸಂಭವಿಸುವುದಿಲ್ಲ ; ಇದಕ್ಕೆ ಕಾರಣ ಸೃಷ್ಟಿಗೆ ಮೊದಲು ಪರಮಾತ್ಮನೊಬ್ಬನೇ ಇದ್ದನೆಂದು ಶ್ರುತಿಯು ಹೇಳುತ್ತದೆ.[1]

ದ್ವೈ.—ಇಂದ್ರಿಯಗಳ ಅನಾದಿತ್ವವನ್ನು ತಿಳಿಸುವ ಶ್ರುತಿಯನ್ನು ಗೌಣಾರ್ಥದಲ್ಲಿ ತೆಗೆದುಕೊಳ್ಳಬೇಕು ; ಏಕೆಂದರೆ ಅವು ಅನಾದಿಯೆಂದು ತಿಳಿಯುವುದು ಸಾಧ್ಯವಲ್ಲ.[2]

## ತತ್ಪ್ರಾಕ್‌ಶ್ರುತೇಶ್ಚ ॥ ೩ ॥

೩. ಮತ್ತು ಅದನ್ನು (ಎಂದರೆ ಜಾಯತೇ ಎಂಬ ಜನ್ಮವಾಚಕವಾದ ಪದವನ್ನು) ಮೊದಲೇ ಪ್ರಯೋಗಿಸಿರುವುದರಿಂದ (ಪ್ರಾಣಗಳ ಜನ್ಮವನ್ನು ತಿಳಿಸುವ ಶ್ರುತಿಯನ್ನು ಮುಖ್ಯಾರ್ಥದಲ್ಲಿಯೇ ತೆಗೆದುಕೊಳ್ಳಬೇಕು).

ಪ್ರಾಣ ಮನಸ್ಸು, ಎಲ್ಲ ಇಂದ್ರಿಯಗಳು, ಆಕಾಶ ವಾಯು ಅಗ್ನಿ ನೀರು ಎಲ್ಲವನ್ನೂ ಧರಿಸಿರುವ ಪೃಥಿವಿ—ಇವುಗಳು ಇವನಿಂದ **ಹುಟ್ಟುತ್ತವೆ'** (ಮುಂ. ಉ. ೨. ೧ ೩) ಎಂದು ಶ್ರುತಿಯು ಹೇಳುತ್ತದೆ. ಇಲ್ಲಿ 'ಹುಟ್ಟುತ್ತದೆ' **ಜಾಯತೇ** ಎಂಬ ಕ್ರಿಯಾಪದವು ಮೊದಲೇ ಬಂದಿದೆ. ಇದು ಮೊದಲು ಪ್ರಾಣಗಳಿಗೆ ಸಂಬಂಧಿಸಿದ್ದು ಅನಂತರ ಆಕಾಶಾದಿಗಳಿಗೆ ಸಂಬಂಧಿಸಿದೆ[3] ಆಕಾಶಾದಿಗಳ ವಿಷಯದಲ್ಲಿ 'ಹುಟ್ಟುತ್ತದೆ' ಎಂಬ ಪದವನ್ನು ಮುಖ್ಯಾರ್ಥದಲ್ಲಿಯೇ ಗ್ರಹಿಸಬೇಕೆಂಬುದು ಸಿದ್ಧವಾಗಿದೆ ; ಆದುದರಿಂದ ಪ್ರಾಣಗಳ ವಿಷಯದಲ್ಲಿಯೂ ಈ ಪದವನ್ನು ಮುಖ್ಯಾರ್ಥದಲ್ಲಿಯೇ ಗ್ರಹಿಸಬೇಕು ಒಂದೇ ಪ್ರಕರಣದ ಒಂದೇ ವಾಕ್ಯದಲ್ಲಿ ಒಂದೇ ಸಲ ಹೇಳಿದ ಶಬ್ದವು ಬಹುಪದಗಳಿಗೆ ಸಂಬಂಧಿಸಿದ್ದರೆ ಅದು ಒಂದು ಕಡೆ ಮುಖ್ಯಾರ್ಥವನ್ನೂ ಇನ್ನೊಂದು ಕಡೆ ಗೌಣಾರ್ಥವನ್ನೂ ಸೂಚಿಸುತ್ತದೆ ಎಂದು ನಿರ್ಧರಿಸಲು ಶಕ್ಯವಲ್ಲ; ಏಕೆಂದರೆ ಅಂಥ ನಿರ್ಧಾರದಿಂದ ಅನೇಕಾರ್ಥವು ಒದಗುತ್ತದೆ.

ದ್ವೈ.—ಪ್ರತಿಜ್ಞಾಽನುಪರೋಧಾಚ್ಚ* ॥ ೨. ೪. ೩ ॥

೩. ಪ್ರತಿಜ್ಞೆಗೆ ವಿರೋಧವಾಗದಿರಲು (ಇಂದ್ರಿಯಗಳ ಉತ್ಪತ್ತಿಯನ್ನು ಅಂಗೀಕರಿಸಬೇಕು).

---

[1] ಬಹುವಚನಶ್ರುತಿರ್ಗೌಣೀ, ಬಹ್ವರ್ಥಾಸಂಭವಾತ್ ; ತಸ್ಯೈವ ಪರಮಾತ್ಮನಃ ಸೃಷ್ಟೇಃ ಪ್ರಾಗವಸ್ಥಾನಶ್ರುತೇರೇವ (ಶ್ರೀಭಾಷ್ಯ).

[2] ಅನಾದಿತ್ವಶ್ರುತಿರ್ಗೌಣಾನಾದಿತ್ವಾಪೇಕ್ಷಯಾ (ಮ. ಭಾ.)

[3] ಯಜ್ಜಾಯತ ಇತ್ಯೇಕಂ ಜನ್ಮವಾಚಿಪದಂ ಪ್ರಾಣೇಷು ಪ್ರಾಕ್‌ಶ್ರುತಂ ಸದುತ್ತರೇಷ್ವಪ್ಯಾಕಾಶಾದಿಷ್ವನುವರ್ತತೇ (ಸೂ. ಭಾ.).

* ಈ ಸೂತ್ರವು ಶಾಂಕರಭಾಷ್ಯದಲ್ಲಿಯೂ ಶ್ರೀಭಾಷ್ಯದಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿಗೆ ಈ ಅಧಿಕರಣವು ಮುಗಿಯುತ್ತದೆ.

'ಅವನು ಇದನ್ನೆಲ್ಲ ಸೃಷ್ಟಿಸಿದನು' (ತೈ. ಉ. ೨. ೬) ಎಂಬುದು ಪ್ರತಿಜ್ಞೆ.[1]

ತತ್ಪ್ರಾಕ್‌ಶ್ರುತೇಶ್ಚ* ॥ ೨. ೪. ೪. ॥

೪. (ಮನಸ್ಸು ಉತ್ಪನ್ನವಾಗುತ್ತದೆ) ; ಏಕೆಂದರೆ ಶ್ರುತಿಯು (ಇದರ ಉತ್ಪತ್ತಿಯನ್ನು ಇತರ ಇಂದ್ರಿಯಗಳಿಗೆ) ಮೊದಲೇ ಹೇಳುತ್ತದೆ.

'ಮನಸ್ಸು ಸರ್ವೇಂದ್ರಿಯಗಳು....ಹುಟ್ಟುತ್ತವೆ' (ಮುಂ. ಉ. ೨. ೧. ೩) ಎಂಬ ಶ್ರುತಿಯ ಪ್ರಕಾರ ಮನಸ್ಸಿಗೆ ಉತ್ಪತ್ತಿಯಿಲ್ಲ ಎಂಬುದನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ.[2]

## ತತ್ಪೂರ್ವಕತ್ವಾದ್ವಾಚಃ† ॥ ೪ ॥

೪. ವಾಕ್ಕು (ಪ್ರಾಣ ಮನಸ್ಸು)—ಇವುಗಳಿಗೆ ಮೊದಲು ಅದು (ಎಂದರೆ ತೇಜಸ್ಸೇ ಮೊದಲಾದ ಭೂತಗಳು) ಬಂದಿರುವುದರಿಂದಲೂ (ಪ್ರಾಣ ಗಳು ಬ್ರಹ್ಮದಿಂದ ಹುಟ್ಟಿವೆ).

'ಅದು ತೇಜಸ್ಸನ್ನು ಸೃಷ್ಟಿಸಿತು' (ಛಾಂ ಉ. ೬. ೨. ೩) ಎಂಬಲ್ಲಿ ಪ್ರಾಣಗಳ ಉತ್ಪತ್ತಿಯನ್ನು ಹೇಳಿಲ್ಲ ; ಆದರೂ ವಾಕ್ಪ್ರಾಣಮನಸ್ಸುಗಳು ಬ್ರಹ್ಮವೇ ಕಾರಣವಾಗಿರುವ ತೇಜಸ್ಸು ನೀರು ಭೂಮಿಗಳನ್ನು ಸೂಚಿಸುವುದರಿಂದ ಪ್ರಾಣಗಳು ಬ್ರಹ್ಮದಿಂದ ಹುಟ್ಟುತ್ತವೆ ಎಂಬುದು ಸಿದ್ಧವಾಗುತ್ತದೆ. ಇದೇ ಪ್ರಕರಣದಲ್ಲಿ (ಛಾಂ. ಉ. ೬. ೫. ೪) ಇಂದ್ರಿಯಗಳು ಭೂತಗಳಿಂದ ಉತ್ಪನ್ನವಾಗಿವೆಯೆಂದೂ, ಭೂತಗಳು ಬ್ರಹ್ಮದಿಂದ ಉತ್ಪನ್ನವಾಗಿವೆ ಯೆಂದೂ ಹೇಳಿದೆ. ಆದುದರಿಂದ ಅವೂ ಕೂಡ ಬ್ರಹ್ಮದಿಂದಲೇ ಹುಟ್ಟಿವೆ.

ಮಿ.—'ನಾಮಗಳಿಗೆ ಮೊದಲೇ ವಸ್ತುಗಳಿರಬೇಕು' ಎಂಬುದು ಸೂತ್ರಾರ್ಥ

ಈ ಕಾರಣದಿಂದಲೂ ಪ್ರಾಣಶಬ್ದವು ಪರಮಾತ್ಮನನ್ನು ಸೂಚಿಸುತ್ತದೆ, ಇಂದ್ರಿಯ ಗಳನ್ನಲ್ಲ. ಇಲ್ಲಿ ವಾಕ್ಕು ಎಂದರೆ ನಾಮಧೇಯವು ಬ್ರಹ್ಮನಿಗಿಂತ ಭಿನ್ನವಾದ ಸಮಸ್ತ ವಸ್ತುಗಳನ್ನೂ ನಾಮಗಳು ಸೂಚಿಸುತ್ತವೆ ; ಏಕೆಂದರೆ ಆಕಾಶಾದಿ ಸಮಸ್ತಜಗತ್ತು ನಾಮದ ವಿಷಯವಾಗಿದೆ. 'ಆಗ ಈ ಜಗತ್ತು ಅವ್ಯಕ್ತವಾಗಿತ್ತು. ಅನಂತರ ಈ ಅವ್ಯಕ್ತ ವಾದ ಜಗತ್ತು ನಾಮರೂಪಗಳಿಂದ ವಿಂಗಡಿಸಲ್ಪಟ್ಟಿತು'[3] (ಬೃ. ಉ. ೧. ೪. ೭) ಎಂದು

---

[1] ಸ ಇದಂ ಸರ್ವಮಸೃಜತ ಇತಿ (ಮ. ಭಾ.).

* ಇದು ಮನೋಽಧಿಕರಣ ಎನಿಸಿದೆ.

[2] ಮನಃ ಸರ್ವೇಂದ್ರಿಯಾಣಿ ಚೇತಿ ಪೂರ್ವೋಕ್ತತ್ವಾನ್ನಾನುತ್ಪತ್ತಿರ್ಮನಸೋ ಯುಜ್ಯತೇ (ಮ. ಭಾ.).

† ಮಧ್ವಭಾಷ್ಯದಲ್ಲಿ ಈ ಸೂತ್ರವು ವಾಗಧಿಕರಣ ಎನಿಸಿದೆ.

[3] ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಂ ವ್ಯಾಕ್ರಿಯತ ।

ಶ್ರುತಿಯು ಹೇಳುತ್ತದೆ. ಆಗ ನಾಮರೂಪಗಳನ್ನು ಹೊಂದಿದ ವಸ್ತುಗಳು ಇಲ್ಲದುದರಿಂದ ವಾಕ್ಕೇ ಮೊದಲಾದ ಇಂದ್ರಿಯಗಳ ಕಾರ್ಯವೂ ಇರಲಿಲ್ಲ. ಆದುದರಿಂದ ಸೃಷ್ಟಿಗೆ ಮೊದಲು ಪ್ರಾಣಗಳು ಇದ್ದವೆಂದು ಹೇಳಲಾಗುವುದಿಲ್ಲ

**ದ್ವೈ**—.'ವಾಗಿಂದ್ರಿಯಕ್ಕೆ ಉತ್ಪತ್ತಿಯಿದೆ; ಏಕೆಂದರೆ ಅದು ಮನಃಪೂರ್ವಕವಾಗಿದೆ' ಎಂಬುದು ಸೂತ್ರಾರ್ಥ.

'ಮನಸ್ಸು ಪೂರ್ವರೂಪ, ವಾಕ್ಕು ಉತ್ತರರೂಪ' (ಐ. ಆ. ೩. ೧. ೧) ಎಂಬ ಶ್ರುತಿಯಿದೆ; ಆದುದರಿಂದ ಮನಃಪೂರ್ವಕವಾದ ವಾಕ್ಕಿಗೆ ಉತ್ಪತ್ತಿಯಿಲ್ಲವೆಂದು ಹೇಳಲಾಗುವುದಿಲ್ಲ.[1]

[1] ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಮಿತಿ ಮನಃಪೂರ್ವಕತ್ವಾದ್ವಾಚೋ ನಾನುತ್ಪತ್ತಿಃ (ಮ. ಭಾ.).

# ೨. ಸಪ್ತಗತ್ಯಧಿಕರಣ

(ಸೂ. ೫—೬)

**ಸಪ್ತಗತೇರ್ವಿಶೇಷಿತತ್ವಾಚ್ಚ*  || ೫ ||**

೫. (ಪ್ರಾಣಗಳು) ಏಳು; ಏಕೆಂದರೆ (ಹಾಗೆ) ತಿಳಿದುಬಂದಿದೆ ಮತ್ತು ವಿಶೇಷಿತವಾಗಿದೆ

ಪ್ರಾಣಗಳ ಸಂಖ್ಯೆಯ ವಿಷಯದಲ್ಲಿ ಶ್ರುತಿಗಳು ವಿರೋಧಾಭಿಪ್ರಾಯವನ್ನು ಸೂಚಿಸುತ್ತವೆ: ಮುಂಡಕಶ್ರುತಿಯ ಪ್ರಕಾರ (೨ ೧ ೮) ಪ್ರಾಣಗಳು ಏಳು; ಬೃಹದಾರಣ್ಯಕಶ್ರುತಿಯ ಪ್ರಕಾರ (೩. ೨. ೧) ಪ್ರಾಣಗಳು ಎಂಟು; ತೈತ್ತಿರೀಯ ಸಂಹಿತೆಯ ಪ್ರಕಾರ (೫. ೩. ೨. ೪) ಪ್ರಾಣಗಳು ಒಂಬತ್ತು; ಇದೇ ಸಂಹಿತೆಯ ಇನ್ನೊಂದು ಕಡೆಯಲ್ಲಿ (೫. ೩. ೨. ೩) ಪ್ರಾಣಗಳು ಹತ್ತು ಎಂದು ಹೇಳಿದೆ. ಹೀಗೆಯೇ ಒಂದು ಕಡೆ (ಬೃ. ಉ. ೯ ೧. ೪) ಪ್ರಾಣಗಳು ಹನ್ನೊಂದೆಂದೂ ಇನ್ನೊಂದು ಕಡೆ (ಬೃ ಉ. ೨. ೪. ೧೧) ಹನ್ನೆರಡೆಂದೂ ಮತ್ತೊಂದು ಕಡೆ (ಪ್ರ. ಉ. ೪ ೮) ಹದಿಮೂರೆಂದೂ ಹೇಳಿದೆ. ಆದುದರಿಂದ ಈಗ ಪ್ರಾಣಗಳ ಸಂಖ್ಯೆಯನ್ನು ನಿರ್ಧರಿಸಬೇಕಾಗಿದೆ.

ಪ್ರಾಣಗಳು ಏಳೇ ಎಂದು ಪೂರ್ವಪಕ್ಷಿಯು ಹೇಳುತ್ತಾನೆ, ಏಕೆಂದರೆ 'ಅವನಿಂದ ಏಳು ಪ್ರಾಣಗಳು ಹುಟ್ಟುತ್ತವೆ'[1] (ಮುಂ. ಉ. ೨. ೧. ೮) ಎಂಬೀ ವಿಧದ ಶ್ರುತಿಗಳಿಂದ ತಿಳಿದು ಬರುತ್ತದೆ. ಇನ್ನೊಂದು ಕಡೆಯಲ್ಲಿ 'ತಲೆಯಲ್ಲಿ ಏಳು ಪ್ರಾಣಗಳು'[2] (ತೈ. ಸಂ. ೫. ೩. ೨. ೪) ಎಂದು ವಿಶೇಷಣವಾಗಿ ಹೇಳಿದೆ. ಮುಂಡಕದಲ್ಲಿ (೨. ೧. ೮) ಪ್ರಾಣಗಳು ಏಳೇಳು ಎಂದು ಹೇಳಿರುವುದು ಪ್ರತಿಯೊಬ್ಬನಲ್ಲಿಯೂ ಏಳು ಪ್ರಾಣಗಳಿವೆ ಎಂದು ತಿಳಿಸುವುದಕ್ಕೆ. ಪ್ರಾಣಗಳ ಬೇರೆ ಬೇರೆ ವೃತ್ತಿಗಳ ಅಪೇಕ್ಷೆಯಿಂದ ಇತರ ಸಂಖ್ಯೆಗಳನ್ನು ಶ್ರುತಿಗಳಲ್ಲಿ ಹೇಳಿದೆ.

ವಿ.—'(ಪ್ರಾಣಗಳು) ಏಳು, ಏಕೆಂದರೆ ಅವು ಸಂಚರಿಸುತ್ತವೆ ಮತ್ತು ವಿಶೇಷಿತವಾಗಿವೆ' ಎಂಬುದು ಸೂತ್ರಾರ್ಥ.

ಪೂರ್ವಪಕ್ಷಿಯ ಪ್ರಕಾರ ಪ್ರಾಣಗಳು ಏಳು; ಏಕೆಂದರೆ ಮುಂಡಕಶ್ರುತಿಯ ಪ್ರಕಾರ (೨. ೧ ೮) ಸಪ್ತಪ್ರಾಣಗಳು ಜೀವನೊಂದಿಗೆ ಲೋಕಗಳಲ್ಲಿ ಸಂಚರಿಸುತ್ತವೆ ಈ ಪ್ರಾಣಗಳ ಗತಿಯನ್ನೇ ಕಠಶ್ರುತಿಯು (೨ ೬. ೧೦) ವಿಶೇಷಿಸಿದೆ ಇತರ ಶ್ರುತಿ

---

* ಇದು ಶಾಂಕರಭಾಷ್ಯದಲ್ಲಿಯೂ ಶ್ರೀಭಾಷ್ಯದಲ್ಲಿಯೂ ಪೂರ್ವಪಕ್ಷ ಸೂತ್ರವಾಗಿದೆ.

[1] ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್

[2] ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ ।

ಗಳಲ್ಲಿ ಪ್ರಾಣಗಳ ಸಂಖ್ಯೆಯನ್ನು ಹೆಚ್ಚಾಗಿ ಹೇಳಿದ್ದರೆ ಅದನ್ನು ಔಪಚಾರಿಕವೆಂದು ತಿಳಿಯ ಬೇಕು ; ಏಕೆಂದರೆ ಶ್ರುತಿಯು ಇವುಗಳ ಸಂಚಾರವನ್ನು ಹೇಳುವುದಿಲ್ಲ.

**ದ್ವೈತ**.—'ಜ್ಞಾನವನ್ನುಂಟುಮಾಡುವ ಇಂದ್ರಿಯಗಳು ಏಳೇ, ಮತ್ತು ವಿಶೇಷ ಣವೂ ಇದೆ' ಎಂಬುದು ಸೂತ್ರಾರ್ಥ.

ಜ್ಞಾನೇಂದ್ರಿಯಗಳು ಏಳೆಂದು ಶ್ರುತಿಯು (ಮುಂ. ಉ ೨. ೧. ೮) ಹೇಳುತ್ತದೆ. ಆ ಶ್ರುತಿಯಲ್ಲಿಯೇ **ಗುಹಾಶಯಾಂ ನಿಹಿತಾಃ ಸಪ್ತ ಸಪ್ತ** ಎಂಬ ವಿಶೇಷಣವನ್ನು ಹೇಳಿದೆ.

## ಹಸ್ತಾದಯಸ್ತು ಸ್ಥಿತೇಽತೋ ನೈವಮ್ ॥ ೬ ॥

೬. ಆದರೆ ಹಸ್ತಾದಿಗಳನ್ನೂ (ಶ್ರುತಿಗಳಲ್ಲಿ ಹೇಳಿದೆ); ಆದುದರಿಂದ ಹೀಗಾಗಲಾರದು

ಸಪ್ತಪ್ರಾಣಗಳಿಗಿಂತ ಬೇರೆಯಾಗಿರುವ ಹಸ್ತವೇ ಮೊದಲಾದ ಪ್ರಾಣಗಳನ್ನು ಕುರಿತು ಶ್ರುತಿಯು ಹೇಳುತ್ತದೆ : 'ಕೈಗಳೇ ಗ್ರಹವು ; ಅವು ಕರ್ಮವೆಂಬ ಅತಿಗ್ರಹದಿಂದ ವಶೀಕೃತವಾಗಿವೆ, ಏಕೆಂದರೆ ಕೈಗಳ ಮೂಲಕ ಮನುಷ್ಯನು ಕರ್ಮವನ್ನು ಮಾಡುತ್ತಾನೆ'[1] (ಬೃ. ಉ. ೩. ೨ ೮). ಏಳಕ್ಕಿಂತ ಹೆಚ್ಚಾಗಿರುವಾಗ ಏಳು ಎಂಬ ಸಂಖ್ಯೆಯನ್ನು ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸೇರಿಸಬೇಕಾಗುತ್ತದೆ. ಅಧಿಕ ಸಂಖ್ಯೆಯಲ್ಲಿ ಕಡಮೆಯ ಸಂಖ್ಯೆ ಅಂತರ್ಗತವಾಗಿರುತ್ತದೆಯೇ ಹೊರತು ಅಧಿಕ ಸಂಖ್ಯೆಯು ಕಡಮೆಯ ಸಂಖ್ಯೆಯಲ್ಲಿ ಅಂತರ್ಗತವಾಗಲಾರದು. ಅಧಿಕಸಂಖ್ಯೆಯನ್ನನುಸರಿಸಿದರೂ ಪ್ರಾಣಗಳು ಹನ್ನೊಂದೇ ಆಗಬೇಕು : 'ಪುರುಷಶರೀರದಲ್ಲಿರುವ ಹತ್ತು ಇಂದ್ರಿಯಗಳು ಮತ್ತು ಮನಸ್ಸು'[2] (ಬೃ. ಉ. ೩. ೯. ೪). ಪಂಚ-ಕರ್ಮೇಂದ್ರಿಯಗಳು, ಪಂಚಜ್ಞಾನೇಂದ್ರಿಯಗಳು ಮತ್ತು ಮನಸ್ಸು—ಎಂಬ ಹನ್ನೊಂದೇ ಪ್ರಾಣಗಳು ಎಂದು ನಿರ್ಣಯಿಸಬೇಕು ಕೆಲವೆಡೆಗಳಲ್ಲಿ ಉಪಾಸನೆಗೋಸ್ಕರ ಕೆಲವನ್ನು ಪ್ರಾಣಗಳೆಂದು ಹೇಳಿದೆ, ಇನ್ನು ಕೆಲವೆಡೆಗಳಲ್ಲಿ ಕೆಲವನ್ನು ಉಪಲಕ್ಷಣಾರ್ಥವಾಗಿ ಹೇಳಿದೆ. ಹೀಗೆ ಪ್ರಾಣದ ಸಂಖ್ಯೆಯಲ್ಲಿ ಭಿನ್ನಾಭಿಪ್ರಾಯವಿರುವಾಗ ಎಲ್ಲಿ, ಯಾವುದರಲ್ಲಿ ತಾತ್ಪರ್ಯವಿದೆ ?—ಎಂಬುದನ್ನು ವಿವೇಚಿಸಬೇಕು.

**ವಿ**.—ಇಂದ್ರಿಯಗಳು ಏಳಲ್ಲ, ಹನ್ನೊಂದು ; ಏಕೆಂದರೆ ಹಸ್ತಾದಿಗಳು ಶರೀರದಲ್ಲಿರುವ ಜೀವನ ಭೋಗೋಪಕರಣವಾಗಿವೆ. ಮತ್ತು ಶ್ರೋತ್ರಾದಿಗಳಂತೆ ಹಿಡಿಯುವಿಕೆ ಮೊದಲಾದ ಕಾರ್ಯಭೇದವನ್ನು ಹೊಂದಿವೆ. ಆದುದರಿಂದ ಹಸ್ತಾದಿಗಳು ಇಂದ್ರಿಯ

[1] ಹಸ್ತೌ ವೈ ಗ್ರಹಃ, ಸ ಕರ್ಮಣಾಽತಿಗ್ರಹೇಣ ಗೃಹೀತಃ, ಹಸ್ತಾಭ್ಯಾಂ ಹಿ ಕರ್ಮ ಕರೋತಿ ।

[2] ದಶೇಮೇ ಪುರುಷೇ ಪ್ರಾಣಾಃ, ಆತ್ಮೈಕಾದಶಃ ।

ವಲ್ಲ ಎಂದು ತಿಳಿಯಕೊಡದು ಬುದ್ಧಿ ಅಹಂಕಾರ ಚಿತ್ತ—ಇವು ಇಂದ್ರಿಯಗಳಲ್ಲ; ಏಕೆಂದರೆ ಇವು ಅಧ್ಯವಸಾಯ, ಅಭಿಮಾನ, ಚಿಂತನೆ—ಎಂಬ ವೃತ್ತಿಗಳಿಂದ ಮನಸ್ಸೇ ಆಗಿವೆ. ಬೃ. ಉ. ೩ ೯ ೪ ರಲ್ಲಿ ಆತ್ಮಶಬ್ದವು ಮನಸ್ಸನ್ನೇ ಸೂಚಿಸುತ್ತದೆ. 'ಹತ್ತು ಇಂದ್ರಿಯಗಳು ಮತ್ತು ಮನಸ್ಸು'[1] (ಗೀತಾ ೧೩. ೫) ಎಂದು ಸ್ಮೃತಿಯು ಹೇಳುತ್ತದೆ

ದ್ವೈ.—'ಹಸ್ತಾದಿಗಳು ಕರ್ಮಕ್ಕೆ ಉಪಯುಕ್ತವಾದುದರಿಂದ ಜ್ಞಾನೇಂದ್ರಿಯಗಳ ಜೊತೆಯಲ್ಲಿ ಹೇಳಲಿಲ್ಲ' ಎಂಬುದು ಸೂತ್ರಾರ್ಥ.[2]

[1] ಇಂದ್ರಿಯಾಣಿ ದಶೈಕಂ ಚ ।

[2] ಹಸ್ತಾದೀನಾಂ ಕರ್ಮವಿಷಯತ್ವಾನ್ನ ಸಹಪಾಠಃ (ಮ. ಭಾ.).

## ೩. ಪ್ರಾಣಾಣುತ್ವಾಧಿಕರಣ*

**ಅಣವಶ್ಚ ॥ ೭ ॥**

೭. ಮತ್ತು ಪ್ರಾಣಗಳು ಅಣುಗಳಾಗಿವೆ.

ಈಗ ಸೂತ್ರಕಾರರು ಪ್ರಾಣಗಳ ಇನ್ನೊಂದು ಸ್ವಭಾವವನ್ನು ಹೇಳುತ್ತಾರೆ. ಈ ಪ್ರಾಣಗಳು ಅಣುವಾಗಿರುವುವೆಂದು ತಿಳಿಯಬೇಕು ಇಲ್ಲಿ ಅಣುತ್ವವೆಂದರೆ ಸೂಕ್ಷ್ಮತ್ವ-ಪರಿಚ್ಛಿನ್ನತ್ವಗಳೇ ಹೊರತು ಪರಮಾಣುತುಲ್ಯತ್ವವಲ್ಲ;[1] ಏಕೆಂದರೆ ಅವು ಪರಮಾಣು ಸಮಾನವಾಗಿದ್ದರೆ ಶರೀರವನ್ನೆಲ್ಲ ವ್ಯಾಪಿಸಿಕೊಂಡು ಕೆಲಸಮಾಡಲು ಶಕ್ತವಾಗುತ್ತಿರಲಿಲ್ಲ. ಇವು ಸೂಕ್ಷ್ಮವೂ ಆಗಿವೆ ; ಏಕೆಂದರೆ ಇವು ಸ್ಥೂಲವಾಗಿದ್ದರೆ ಮರಣಕಾಲದಲ್ಲಿ ಶರೀರ ದಿಂದ ಹೊರಕ್ಕೆ ಬರುವಾಗ ಇತರರಿಗೆ ಕಾಣಬರುತ್ತಿದ್ದವು. ಈ ಪ್ರಾಣಗಳು ಪರಿಚ್ಛಿನ್ನವೂ ಆಗಿವೆ ; ಏಕೆಂದರೆ ಇವು ಸರ್ವಗತವಾಗಿದ್ದರೆ ಉತ್ಕ್ರಾಂತಿ, ಗತಿ, ಆಗತಿ—ಇವುಗಳನ್ನು ಹೇಳುವ ಶ್ರುತಿಗೆ ವಿರೋಧವಾಗುವುದು ; ಆಗ ಜೀವನು 'ತದ್ಗುಣಸಾರನು' (೨.೩.೨೯) ಎಂದು ಹೇಳಲಾಗುವುದಿಲ್ಲ ಪ್ರಾಣಗಳು ಸರ್ವಗತವಾಗಿದ್ದರೂ ವೃತ್ತಿರೂಪದಿಂದ ಶರೀರ ದಲ್ಲಿರಬಹುದು—ಎಂದೂ ಹೇಳಲಾಗುವುದಿಲ್ಲ ; ಏಕೆಂದರೆ ವೃತ್ತಿಮಾತ್ರವೇ ಕರಣವಾಗ ಬಹುದು ಯಾವುದು ಜ್ಞಾನಕ್ಕೆ ಸಾಧನವೊ—ಅದು ವೃತ್ತಿಯೋ ಆಗಲಿ, ಮತ್ತೊಂದೇ ಆಗಲಿ—ಅದೇ ನಮಗೆ ಕರಣವಾಗುವುದು ವಿವಾದವಿರುವುದು ಹೆಸರಿನಲ್ಲಿ ಮಾತ್ರ. ಆದುದರಿಂದ ಇಂದ್ರಿಯಗಳಿಗೆ ವ್ಯಾಪಿತ್ವವನ್ನು ಕಲ್ಪಿಸುವುದು ವ್ಯರ್ಥ.

ವಿ.—'ಆ ಇವೆಲ್ಲವೂ ಸಮವಾಗಿವೆ, ಎಲ್ಲವೂ ಅನಂತವಾಗಿವೆ'[2] (ಬೃ. ಉ ೧ ೫. ೧೩) ಎಂಬ ಶ್ರುತಿಯಿಂದ ಪ್ರಾಣಗಳು ವಿಭುವೆಂದು ಕಲ್ಪಿಸಲಾಗುವುದಿಲ್ಲ , ಏಕೆಂದರೆ 'ಉತ್ಕ್ರಮಿಸುತ್ತಿರುವ ಪ್ರಾಣವನ್ನು ಅನುಸರಿಸಿ ಇಂದ್ರಿಯಗಳೆಲ್ಲ ಉತ್ಕ್ರಮಿಸುತ್ತವೆ'[3] (ಬೃ. ಉ. ೪. ೪. ೨) ಎಂಬ ಶ್ರುತಿಯು ಅವು ಅಣುವಾಗಿರುವುವೆಂದು ಹೇಳುತ್ತದೆ ಪ್ರಾಣಗಳು ಅನಂತವೆಂದು ಶ್ರುತಿಯಲ್ಲಿ ಹೇಳಿರುವುದು ಉಪಾಸನೆಗಾಗಿ : ಅಲ್ಲಿ ಉಪಾಸ್ಯ ವಾದ ಪ್ರಾಣಕ್ಕೆ ಕಾರ್ಯಬಾಹುಲ್ಯವಿರುವುದರಿಂದ ಅದನ್ನು ಅನಂತವೆಂದು ಕರೆದಿದೆ.

ದ್ವೈ.—ಪ್ರಾಣಗಳು ಸ್ವರೂಪತಃ ಅಣುರೂಪಗಳಾಗಿದ್ದರೂ ತಮ್ಮ ತೇಜಸ್ಸಿನಿಂದ ವ್ಯಾಪಿಸಿಕೊಳ್ಳುತ್ತವೆ.

---

* ಶ್ರೀಭಾಷ್ಯದಲ್ಲಿ ಈ ಅಧಿಕರಣವು ಮುಂದಿನ ಸೂತ್ರವನ್ನೂ ಒಳಕೊಂಡಿದೆ. ಮಧ್ವ ಭಾಷ್ಯದಲ್ಲಿ ಈ ಅಧಿಕರಣವು ಅಣುತ್ವಾಧಿಕರಣ ಎನಿಸಿದೆ.

1 ಅಣುತ್ವಂ ಚೈಷಾಂ ಸೌಕ್ಷ್ಮ್ಯಪರಿಚ್ಛೇದೌ, ನ ಪರಮಾಣುತುಲ್ಯತ್ವಮ್ (ಸೂ.ಭಾ.).

2 ತ ಏತೇ ಸರ್ವ ಏವ ಸಮಾಃ, ಸರ್ವೇ ಅನಂತಾಃ ।

3 ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ ।

## ೪. ಪ್ರಾಣಶ್ರೈಷ್ಠ್ಯಾಧಿಕರಣ*

### ಶ್ರೇಷ್ಠಶ್ಚ ॥ ೮ ॥

೮ ಮತ್ತು ಮುಖ್ಯಪ್ರಾಣವೂ (ಬ್ರಹ್ಮದ ಕಾರ್ಯವೇ).

ಮುಖ್ಯಪ್ರಾಣವೂ ಇತರ ಪ್ರಾಣಗಳಂತೆ ಬ್ರಹ್ಮವಿಕಾರವೇ ಎಂದು ಅತಿದೇಶವನ್ನು ಮಾಡಿದೆ. ಪ್ರಾಣಗಳೆಲ್ಲ ಬ್ರಹ್ಮವಿಕಾರವಾಗಿರುವಾಗ ಹೀಗೆ ಅತಿದೇಶವನ್ನು ಮಾಡಲು ಕಾರಣವೇನು ?—ಎಂದು ಪ್ರಶ್ನಿಸಬಹುದು. ಇದಕ್ಕೆ ಪರಿಹಾರ ಹೀಗಿದೆ : ಬ್ರಹ್ಮಪ್ರಧಾನವಾದ ನಾಸದೀಯಸೂಕ್ತದಲ್ಲಿ 'ಅಲ್ಲಿ ಮೃತ್ಯುವು ಇರಲಿಲ್ಲ, ಅಮೃತವು ಇರಲಿಲ್ಲ ; ಹಗಲಿರಲಿಲ್ಲ, ರಾತ್ರಿಯಿರಲಿಲ್ಲ ; ಅದು ಸ್ವಧೆಯಿಂದ ತಾನೊಂದೇ ವಾತವಿಲ್ಲದೆ ಉಸಿರಾಡುತ್ತಿತ್ತು. ಅದಕ್ಕಿಂತ ಹೆಚ್ಚಿನದು ಯಾವುದೂ ಇರಲಿಲ್ಲ'[1] (ಋ. ವೇ. ೮. ೭. ೧೭) ಎಂಬ ಮಂತ್ರವರ್ಣವಿದೆ. ಇಲ್ಲಿ 'ಉಸಿರಾಡುತ್ತಿತ್ತು' **ಆನೀತ್** ಎಂಬ ಶಬ್ದವು ಸೃಷ್ಟಿಗೆ ಮೊದಲು ಪ್ರಾಣವು ಇದ್ದಂತೆ ಸೂಚಿಸುತ್ತದೆ. ಆದುದರಿಂದ ಪ್ರಾಣಕ್ಕೆ ಉತ್ಪತ್ತಿಯಿಲ್ಲ ಎಂಬ ಆಶಂಕೆಯನ್ನು ಹೋಗಲಾಡಿಸಲು ಈ ಅತಿದೇಶವು ಬಂದಿದೆ. **ಆನೀತ್**-ಶಬ್ದವು ಉತ್ಪತ್ತಿಗೆ ಮೊದಲು ಪ್ರಾಣವು ಇದ್ದಿತೆಂದು ಸೂಚಿಸುವುದಿಲ್ಲ ; ಏಕೆಂದರೆ 'ವಾತವಿಲ್ಲದೆ' **ಅವಾತಮ್** ಎಂಬ ವಿಶೇಷಣವಿದೆ. ಮತ್ತೆ 'ಪ್ರಾಣರಹಿತನು, ಮನಸ್ಸಿಲ್ಲದವನು, ಶುಭ್ರನು'[2] (ಮುಂ. ಉ. ೨. ೧. ೨) ಎಂಬ ಶ್ರುತಿಯು ಮೂಲಪ್ರಕೃತಿಯಾದ ಪರಮಾತ್ಮನು ಪ್ರಾಣಾದಿ-ಸಮಸ್ತವಿಶೇಷರಹಿತನೆಂದು ತಿಳಿಸುತ್ತದೆ. 'ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿದೆ'[3] (ಛಾಂ. ಉ. ೫. ೧. ೧) ಎಂಬ ಶ್ರುತಿಯ ನಿರ್ದೇಶವಿರುವುದರಿಂದ ಮುಖ್ಯಪ್ರಾಣವು ಶ್ರೇಷ್ಠವೆಂದು ಸೂತ್ರಕಾರರು ಹೇಳುತ್ತಾರೆ.

**ವಿ.**—ಪ್ರಾಣಸಂವಾದದಲ್ಲಿ (ಛಾಂ. ಉ. ೫. ೧) ಮುಖ್ಯಪ್ರಾಣವು—ಶರೀರಸ್ಥಿತಿಗೆ ಕಾರಣವಾಗಿರುವುದರಿಂದ—ಶ್ರೇಷ್ಠವೆಂದು ಕರೆಯಲ್ಪಟ್ಟಿದೆ. ವೇದದಲ್ಲಿ (ಋ. ವೇ. ೮. ೭. ೧೭) **ಆನೀದವಾತಮ್** ಎಂದು ಹೇಳಿರುವುದು ಏಕನಾದ ಪರಮಾತ್ಮನನ್ನು ಸೂಚಿಸುತ್ತದೆಯೇ ಹೊರತು ಜೀವನ ಪ್ರಾಣವನ್ನು ಸೂಚಿಸಿಲ್ಲ ; ಏಕೆಂದರೆ 'ಪ್ರಾಣ

---

* ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಸೇರಿ ಮುಖ್ಯಪ್ರಾಣಾಧಿಕರಣ ಎನಿಸಿದೆ.

[1] ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ।

[2] ಅಪ್ರಾಣೋ ಹ್ಯಮನಾಃ ಶುಭ್ರಃ ।

[3] ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ ।

ರಹಿತನು' ಎಂದು ಅಲ್ಲಿಯೇ ಹೇಳಿದೆ.[1] ಮುಂಡಕಶ್ರುತಿಯು (೨ ೧. ೩) ಪ್ರಾಣದ ಉತ್ಪತ್ತಿಯನ್ನು ಹೇಳುವುದರಿಂದಲೂ, ಇದನ್ನು ನಿಷೇಧಿಸುವ ಶ್ರುತಿಯಿಲ್ಲದಿರುವುದರಿಂದಲೂ ಮುಖ್ಯಪ್ರಾಣಕ್ಕೆ ಉತ್ಪತ್ತಿಯಿದೆ—ಎಂದು ನಿರ್ಧರಿಸಬೇಕು

**ದ್ವೈ.**—ಮುಖ್ಯಪ್ರಾಣಕ್ಕೂ ಕೂಡ ಉತ್ಪತ್ತಿಯಿದೆ; ಏಕೆಂದರೆ 'ಪರಮಾತ್ಮನಿಂದ ಪ್ರಾಣವು ಹುಟ್ಟುತ್ತದೆ'[2] (ಪ್ರ ಉ ೩. ೩) ಎಂಬ ಶ್ರುತಿಯಿದೆ.

---

[1] ಆನೀದವಾತಮಿತಿ ತು ನ ಜ್ಯೈವಂ ಶ್ರೇಷ್ಠಂ ಪ್ರಾಣಮಭಿಪ್ರೇತ್ಯೋಚ್ಯತೇ, ಅಪಿತು ಪರಸ್ಯ ಬ್ರಹ್ಮಣ ಏಕಸ್ಯೈವ ವಿದ್ಯಮಾನತ್ವಮುಚ್ಯತೇ, ಅವಾತಮಿತಿ ತತ್ರೈವ ಶ್ರವಣಾತ್ (ಶ್ರೀಭಾಷ್ಯ).

[2] ಆತ್ಮತ ಏಷ ಪ್ರಾಣೋ ಜಾಯತೇ ।

## ೫. ವಾಯುಕ್ರಿಯಾಧಿಕರಣ

(ಸೂ. ೯–೧೨)

### ನ ವಾಯುಕ್ರಿಯೇ ಪೃಥಗುಪದೇಶಾತ್ ॥ ೯ ॥

೯. (ಮುಖ್ಯಪ್ರಾಣವು) ವಾಯುವೂ ಅಲ್ಲ, ಕ್ರಿಯೆಯೂ ಅಲ್ಲ ; ಏಕೆಂದರೆ ಬೇರೆಯಾಗಿ ಉಪದೇಶಿಸಿದೆ

ಇನ್ನು ಮುಖ್ಯಪ್ರಾಣದ ಸ್ವರೂಪವನ್ನು ವಿಚಾರಿಸಲಾಗುವುದು ಶ್ರುತಿಯ ಪ್ರಕಾರ ವಾಯುವೇ ಪ್ರಾಣವು ಎಂಬುದು ಪೂರ್ವಪಕ್ಷ ಅಥವಾ ಸಾಂಖ್ಯತಂತ್ರದ ಪ್ರಕಾರ (ಸಾಂ ಕಾ ೨೯) ಸಮಸ್ತಕರಣಗಳ ವೃತ್ತಿಯೇ ಪ್ರಾಣವೆಂದಾಗಬಹುದು.

ಪ್ರಾಣವು ವಾಯುವೂ ಅಲ್ಲ, ಕರಣವೃತ್ತಿಯೂ ಅಲ್ಲ—ಎಂಬುದು ಸಿದ್ಧಾಂತ , ಏಕೆಂದರೆ ಇವುಗಳಿಗಿಂತ ಬೇರೆಯಾಗಿ ಉಪದೇಶಿಸಿದೆ. 'ಪ್ರಾಣವೇ ಬ್ರಹ್ಮದ ನಾಲ್ಕನೆಯ ಪಾದ. ಅದು ವಾಯುವಿನಿಂದ ಪ್ರಕಾಶಿಸುತ್ತದೆ ಮತ್ತು ತಪಿಸುತ್ತದೆ'[1] (ಛಾಂ. ಉ ೩. ೧೮. ೪) ಎಂಬಲ್ಲಿ ಪ್ರಾಣವು ವಾಯುವಿಗಿಂತ ಬೇರೆಯೆಂದು ಹೇಳಿದೆ. ವಾಗಾದಿಕರಣಗಳನ್ನು ಅನುಕ್ರಮವಾಗಿ ಹೇಳುವಾಗ ಅಲ್ಲಲ್ಲಿ ಪ್ರಾಣವನ್ನು ಹೇಳಿರುವುದರಿಂದ ಅದು ಕರಣವೃತ್ತಿಗಳಿಗಿಂತಲೂ ಬೇರೆ—ಎಂದು ನಿಶ್ಚಯಿಸಬೇಕಾಗುತ್ತದೆ ಹೇಗೆ ಒಂದು ಪಂಜರದಲ್ಲಿರುವ ಹನ್ನೊಂದು ಪಕ್ಷಿಗಳು—ತಮತಮಗೆ ಪ್ರತ್ಯೇಕವಾದ ವ್ಯಾಪಾರವಿದ್ದರೂ—ಒಟ್ಟುಗೂಡಿ ತಮ್ಮ ಪಂಜರವನ್ನು ಚಲಿಸುವಂತೆ ಮಾಡುತ್ತವೆಯೊ ಹಾಗೆಯೇ ಶರೀರದಲ್ಲಿರುವ ಹನ್ನೊಂದು ಪ್ರಾಣಗಳು—ತಮತಮಗೆ ನಿಯತವಾದ ವೃತ್ತಿಗಳಿದ್ದರೂ—ಒಟ್ಟುಗೂಡಿ ಪ್ರಾಣವೆಂಬ ಒಂದು ವೃತ್ತಿಯನ್ನು ಉತ್ಪಾದಿಸಬಹುದು, ಎಂಬ ಅಭಿಪ್ರಾಯವು ಸರಿಯಲ್ಲ ; ಏಕೆಂದರೆ ಪಕ್ಷಿಗಳೆಲ್ಲ ಒಟ್ಟುಗೂಡಿ ತಮ್ಮ ತಮ್ಮ ಅವಾಂತರ ವ್ಯಾಪಾರಗಳಿಂದ ಪಂಜರವನ್ನು ಚಲಿಸುವಂತೆ ಮಾಡಿದರೂ ಶ್ರವಣವೇ ಮೊದಲಾದ ಅವಾಂತರವ್ಯಾಪಾರವುಳ್ಳ ಪ್ರಾಣಗಳು ಒಟ್ಟುಗೂಡಿ ಪ್ರಾಣನವ್ಯಾಪಾರವನ್ನು ಮಾಡುವುವು—ಎಂಬುದಕ್ಕೆ ಪ್ರಮಾಣವಿಲ್ಲ. ಪ್ರಾಣನವೆಂಬ ವ್ಯಾಪಾರವು ಶ್ರವಣಾದಿಗಳಿಗಿಂತ ಅತ್ಯಂತ ಬೇರೆಯಾಗಿರುತ್ತದೆ ಆದುದರಿಂದ ಪ್ರಾಣವು ವಾಯು-ಕ್ರಿಯೆಗಳಿಗಿಂತ ಭಿನ್ನವೇ.

ವಿ.—'ಪ್ರಾಣ, ಮನಸ್ಸು, ಸರ್ವೇಂದ್ರಿಯಗಳು, ಆಕಾಶ, ವಾಯು ...—ಇವುಗಳು ಈ ಪುರುಷನಿಂದ ಹುಟ್ಟುತ್ತವೆ' (ಮುಂ. ಉ. ೨. ೧. ೩) ಎಂಬ ಬೇರೆ ಉಪದೇಶವಿರುವುದರಿಂದ ಮುಖ್ಯಪ್ರಾಣವು ಎರಡನೆಯ ಭೂತವಾದ ವಾಯುವೂ ಅಲ್ಲ, ಅದರ

---

[1] ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ । ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ ।

ಸ್ಪಂದನಕ್ರಿಯೆಯೂ ಅಲ್ಲ ವಾಯುವೇ ಪ್ರಾಣವು ಎಂಬ ಶ್ರುತಿಯಲ್ಲಿ ಅವಸ್ಥಾಂತರವನ್ನು ಹೊಂದಿದ ವಾಯುವೇ ಪ್ರಾಣವು ಎಂದು ತಿಳಿದುಬರುತ್ತದೆಯೇ ಹೊರತು ತೇಜಸ್ಸೇ ಮೊದಲಾದವುಗಳಂತೆ ಅತ್ಯಂತ ಬೇರೆಯದು ಎಂದು ತಿಳಿದು ಬರುವುದಿಲ್ಲ

**ದ್ವೈ**— 'ಬಾಹ್ಯವಾಯುವನ್ನಾಗಲಿ ಚೇಷ್ಟಾರೂಪಕ್ರಿಯೆಯನ್ನಾಗಲಿ ಪ್ರಾಣೋತ್ಪತ್ತಿಶ್ರುತಿಯಲ್ಲಿ ಹೇಳಿಲ್ಲ, ಏಕೆಂದರೆ ಅವುಗಳ ಉತ್ಪತ್ತಿಯನ್ನು ಬೇರೆಯಾಗಿ ಹೇಳಿದೆ' ಎಂಬುದು ಸೂತ್ರಾರ್ಥ

'ಆ ಪುರುಷನು ಮುಖ್ಯಪ್ರಾಣನನ್ನೂ, ಅವನನ್ನು ನಿಮಿತ್ತೀಕರಿಸಿಕೊಂಡು ಶ್ರದ್ಧೆಯನ್ನೂ ಸೃಷ್ಟಿಸಿದನು, ಹಾಗೆಯೇ ಆಕಾಶ ವಾಯು ಅಗ್ನಿ ಜಲ ಭೂಮಿ ನಾಮ—ಇವುಗಳನ್ನು ಸೃಷ್ಟಿಸಿದನು'[1] (ಪ್ರ ಉ ೬ ೪) ಎಂಬಲ್ಲಿ ಬಾಹ್ಯವಾಯು, ಚೇಷ್ಟಾರೂಪ ಕ್ರಿಯೆ—ಇವುಗಳನ್ನು ಬೇರೆಯಾಗಿ ಹೇಳಿರುವುದರಿಂದ ಇವೆರಡೂ ಪ್ರಾಣೋತ್ಪತ್ತಿ ಶ್ರುತಿಯಲ್ಲಿ ಇರತಕ್ಕ ಪ್ರಾಣಶಬ್ದದ ಪ್ರತಿಪಾದ್ಯಗಳಲ್ಲ

**ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ*  ॥ ೧೦ ॥**

೧೦ ಆದರ ಚಕ್ಷುಸ್ಸು ಮೊದಲಾದುವುಗಳಂತೆ (ಪ್ರಾಣವೂ ಜೀವನಿಗೆ ಕರಣವೇ), ಏಕೆಂದರ ಅವುಗಳೊಡನೆ ಉಪದೇಶಿಸಿರುವುದೇ ಮೊದಲಾದ (ಕಾರಣಗಳಿವೆ)

ಪ್ರಾಣವೂ ಜೀವನಂತೆ ಈ ಶರೀರದಲ್ಲಿ ಸ್ವತಂತ್ರವಾಗಿರಬೇಕು, ಏಕೆಂದರೆ ಅದು ಶ್ರೇಷ್ಠವಾಗಿದೆ ಮತ್ತು ಇಂದ್ರಿಯಾದಿಗಳು ಅದರ ಅಧೀನದಲ್ಲಿವೆ ವಾಗಾದಿಗಳು ಸುಪ್ತವಾಗಿರುವಾಗ ಪ್ರಾಣವೊಂದೇ ಎಚ್ಚತ್ತಿರುತ್ತದೆ, ಪ್ರಾಣವೊಂದನ್ನೇ ಮೃತ್ಯುವು ಹಿಡಿಯಲಿಲ್ಲ, ಪ್ರಾಣವು ಸಂವರ್ಗವು—ಇವೇ ಮೊದಲಾದ ಶ್ರುತಿಗಳು ಪ್ರಾಣದ ವಿಭೂತಿಯನ್ನು ಹೇಳುತ್ತವೆ, ಎಂಬುದು ಪೂರ್ವಪಕ್ಷ ಇದಕ್ಕೆ ಪರಿಹಾರ ಹೀಗಿದೆ ಮೂಲದಲ್ಲಿರುವ **ತು**-ಶಬ್ದವು ಪ್ರಾಣಕ್ಕೆ ಸ್ವಾತಂತ್ರ್ಯವನ್ನು ನಿರಾಕರಿಸುತ್ತದೆ ಚಕ್ಷುಸ್ಸೇ ಮೊದಲಾದುವು—ರಾಜನ ಪ್ರಜೆಗಳಂತೆ—ಜೀವನ ಕರ್ತೃತ್ವಕ್ಕೆ ಮತ್ತು ಭೋಕ್ತೃತ್ವಕ್ಕ ಉಪಕರಣಗಳಾಗಿ ಅಸ್ವತಂತ್ರವಾಗಿರುವಂತೆ ಮುಖ್ಯ ಪ್ರಾಣವೂ—ರಾಜನ ಮಂತ್ರಿಯಂತೆ—ಜೀವನಿಗೆ ಸರ್ವಾರ್ಥವನ್ನೂ ಉಂಟುಮಾಡುತ್ತಿರುವ ಉಪಕರಣವಾಗಿ ಅಸ್ವತಂತ್ರವಾಗಿರುತ್ತದೆ, ಏಕೆಂದರೆ ಆ ಚಕ್ಷುರಾದಿಗಳೊಡನೆ ಪ್ರಾಣವನ್ನು ಪ್ರಾಣಸಂವಾದಾದಿಗಳಲ್ಲಿ ಹೇಳಿರುತ್ತದೆ ಮೂಲದಲ್ಲಿರುವ **ಆದಿ**-ಶಬ್ದವು ಸಾವಯವತ್ವ ಅಚೇತನತ್ವ ಮೊದಲಾದ ಪ್ರಾಣ ಸ್ವಾತಂತ್ರ್ಯವನ್ನು ನಿರಾಕರಿಸುವ ಕಾರಣಗಳನ್ನು ಸೂಚಿಸುತ್ತದೆ

---

1 ಸ ಪ್ರಾಣಮಸೃಜತ, ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀ ನಾಮ ಚ ।

* ಮಧ್ವಭಾಷ್ಯದಲ್ಲಿ ಇದು ಮತ್ತು ಮುಂದಿನ ಸೂತ್ರ ಚಕ್ಷುರಾದ್ಯಧಿಕರಣ ಎನಿಸಿದೆ

ವಿ.—ವಾಯುವಿನ ಕಾರ್ಯವಾದ ಪ್ರಾಣವು ಅಗ್ನಿಯ ಹಾಗೆ ಭೂತಾಂತರವೋ? —ಎಂಬ ಅಭಿಪ್ರಾಯವನ್ನು ಈ ಸೂತ್ರದಲ್ಲಿ ನಿರಾಕರಿಸಿದೆ ಪ್ರಾಣವು ಭೂತವಿಶೇಷವಲ್ಲ, ಚಕ್ಷುರಾದಿ-ಕರಣಗಳಂತೆ ಜೀವನಿಗೆ ಉಪಕರಣವಿಶೇಷವಾಗಿದೆ, ಏಕೆಂದರೆ ಪ್ರಾಣಸಂವಾದಾದಿಗಳಲ್ಲಿ ಚಕ್ಷುರಾದಿಗಳೊಂದಿಗೆ ಇದನ್ನೂ ಹೇಳಿದ

ದ್ವೈ —ಚಕ್ಷುರಾದಿಗಳಂತೆ ಮುಖ್ಯಪ್ರಾಣನೂ ಪರಮಾತ್ಮನ ವಶದಲ್ಲಿ ಇರುತ್ತಾನೆ[1]

**ಅಕರಣತ್ವಾಚ್ಚ ನ ದೋಷಸ್ತಥಾ ಹಿ ದರ್ಶಯಂತಿ ॥ ೧೧ ॥**

೧೧ (ಪ್ರಾಣವು) ಕರಣವಲ್ಲದುದರಿಂದ ದೋಷವು ಬರುವುದಿಲ್ಲ, ಏಕೆಂದರೆ ಹೀಗೆಂದೇ (ಶ್ರುತಿಯು) ಹೇಳುತ್ತದೆ

ಚಕ್ಷುರಾದಿಗಳಂತೆ ಪ್ರಾಣವೂ ಜೀವನಿಗೆ ಒಂದು ಕರಣವಾದರೆ—ಚಕ್ಷುರಾದಿಗಳಿಗೆ ರೂಪಾದಿವಿಷಯಗಳಿರುವಂತೆ—ಪ್ರಾಣಕ್ಕೂ ಒಂದು ವಿಷಯವನ್ನು ಅಂಗೀಕರಿಸಬೇಕಾಗುತ್ತದ ರೂಪಾದಿಗಳನ್ನು ನೋಡುವುದೇ ಮೊದಲಾದ ವೃತ್ತಿಗಳಿಂದ ಚಕ್ಷುರಾದಿಗಳು ಜೀವನಿಗೆ ಕಾರಣವಾಗಿರುತ್ತವೆ ರೂಪಾದಿಗಳನ್ನು ಅರಿಯುವುವೇ ಮೊದಲಾದ ಹನ್ನೊಂದು ಕಾರ್ಯಜಾತಗಳಿಗೆ ಹನ್ನೊಂದು ಕರಣಗಳಿವೆಯೆಂದು ಒಪ್ಪಿಕೊಂಡಿದ ಆದರೆ ಹನ್ನೆರಡನೆಯದಾದ ಮತ್ತೊಂದು ಕಾರ್ಯಜಾತವಿರುವುದಿಲ್ಲ, ಹಾಗಿದ್ದರೆ ಅದಕ್ಕ ಹನ್ನೆರಡನೆಯದಾಗಿ ಪ್ರಾಣವನ್ನು ಕರಣವೆಂದು ಹೇಳಬಹುದಾಗಿತ್ತು—ಎಂಬುದು ಪೂರ್ವಪಕ್ಷ.

ಇದಕ್ಕೆ ಪರಿಹಾರವು ಹೀಗಿದೆ ಪ್ರಾಣವು ಚಕ್ಷುರಾದಿಗಳಂತೆ ಕರಣವಲ್ಲ, ಆದುದರಿಂದ ಅದಕ್ಕೆ ಮತ್ತೊಂದು ವಿಷಯವು ಪ್ರಸಕ್ತವಾಗುವುದೆಂಬ ದೋಷವು ಬರುವುದಿಲ್ಲ ಆದರೆ ಪ್ರಾಣಕ್ಕೆ ಕಾರ್ಯವೇ ಇಲ್ಲವೆಂದಲ್ಲ, ಏಕಂದರೆ ಶ್ರುತಿಯು ಇತರ ಪ್ರಾಣಗಳಿಗೆ ಸಂಭವಿಸದಿರುವ ವಿಶೇಷಕಾರ್ಯವನ್ನು ಮುಖ್ಯಪ್ರಾಣಕ್ಕೆ ಪ್ರಾಣಸಂವಾದಾದಿಗಳಲ್ಲಿ (ಛಾಂ ಉ ೫.೧ ೬ ೧೫) ತಿಳಿಸಿರುತ್ತದೆ[2] ಒಂದು ಸಲ ಪಂಚೇಂದ್ರಿಯಗಳು ತಮ್ಮ ಶ್ರೇಷ್ಠತ್ವದ ವಿಷಯದಲ್ಲಿ ವಾದಿಸಿದುವು ತಮ್ಮಲ್ಲಿ ಯಾವುದು ಉತ್ಕ್ರಮಿಸಿದರೆ ಶರೀರವು ಪಾಪಿಷ್ಠತರವಾದಂತೆ ಕಾಣುವುದೊ ಅದೇ ತಮ್ಮಲ್ಲಿ ಶ್ರೇಷ್ಠವು—ಎಂಬ ಪ್ರಜಾಪತಿ ವಾಕ್ಯದ ಪ್ರಕಾರ ವಾಗಾದಿಗಳು ಒಂದೊಂದಾಗಿ ಉತ್ಕ್ರಮಿಸಲು, ಆಯಾ ವೃತ್ತಿಯಿಲ್ಲದಿದ್ದರೂ ಶರೀರವು ಬದುಕಿತ್ತು ಅನಂತರ ಪ್ರಾಣವು ಉತ್ಕ್ರಮಿಸುವುದಕ್ಕ ಪ್ರಾರಂಭಿಸಲು ವಾಗಾದಿಗಳು ಶಿಥಿಲವಾದುವೆಂದೂ ಶರೀರಪಾತಪ್ರಸಂಗವು ಬಂದಿತೆಂದೂ ಪ್ರಾಣನಿಮಿತ್ತ

1 ಚಕ್ಷುರಾದಿವನ್ಮುಖ್ಯಪ್ರಾಣೋಽಪಿ ಪರಮಾತ್ಮವಶ ಏವ (ಮ ಭಾ )

2 ತಥಾ ಹಿ ಶ್ರುತಿಃ ಪ್ರಾಣಾಂತರೇಷ್ವಸಂಭಾವ್ಯಮಾನಂ ಮುಖ್ಯಪ್ರಾಣಸ್ಯ ವೈಶೇಷಿಕಂ ಕಾರ್ಯಂ ದರ್ಶಯತಿ ಪ್ರಾಣಸಂವಾದಾದಿಷು (ಸೂ ಭಾ )

ದಿಂದಲೇ ಶರೀರೇಂದ್ರಿಯಗಳು ಬದುಕಿದ್ದವೆಂದೂ ಶ್ರುತಿಯು ತಿಳಿಸುತ್ತದೆ [1]

ವಿ.—ಸೂತ್ರದಲ್ಲಿರುವ ಕರಣಶಬ್ದಕ್ಕೆ ಕ್ರಿಯೆಎಂಬ ಅರ್ಥವಿದೆ. ಜೀವನಿಗೆ ಉಪಕಾರ ಮಾಡುವಂಥ ವಿಶೇಷರೂಪಕ್ರಿಯೆಯು ಪ್ರಾಣಕ್ಕಿಲ್ಲ—ಎಂದು ಹೇಳಲಾಗುವುದಿಲ್ಲ. ಪ್ರಾಣಕ್ಕೆ ಶರೀರೇಂದ್ರಿಯಗಳನ್ನು ಧರಿಸಿರುವ ಕ್ರಿಯೆಯಿದೆಯೆಂದು ಶ್ರುತಿಯೇ (ಛಾಂ. ಉ. ೫. ೧ ೭) ಹೇಳುತ್ತದೆ ಆದುದರಿಂದ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನ ಎಂಬ ಪಂಚಪ್ರಕಾರವುಳ್ಳ ಪ್ರಾಣವು ಶರೀರೇಂದ್ರಿಯಗಳ ಧಾರಣದಿಂದ ಜೀವನಿಗೆ ಉಪ ಕಾರಮಾಡುತ್ತದೆ ಮತ್ತು ಚಕ್ಷುರಾದಿಗಳಂತೆಯೇ ಕರಣವಾಗಿದೆ

ದ್ವೈ.—'ಮುಖ್ಯಪ್ರಾಣನಿಗೆ ಕರಣತ್ವವಿಲ್ಲದಿರುವುದರಿಂದಲೂ ಇತರ ಪ್ರಾಣಗಳಿಗೆ ಕರಣತ್ವವಿರುವುದರಿಂದಲೂ ಅವನು ಇತರರಿಗಿಂತ ಉತ್ತಮನು ಎಂಬುದೂ ಹೊಂದುತ್ತದೆ;[2] ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ' ಎಂಬುದು ಸೂತ್ರಾರ್ಥ

'ಇವೆಲ್ಲವೂ ಕರಣಗಳು, ಪ್ರಾಣನೊಬ್ಬನೇ ಕರಣನಾಗದವನು ; ಆದುದರಿಂದ ಅವನು ಮುಖ್ಯನು, ಅವನು ಮುಖ್ಯನು ಎಂದು ಋಷಿಗಳು ಹೇಳುತ್ತಾರೆ' ಎಂದು ಮಾಂಡವ್ಯಶ್ರುತಿಯು ಹೇಳುತ್ತದೆ.

**ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ* ॥ ೧೨ ॥**

೧೨. (ಪ್ರಾಣವು) ಮನಸ್ಸಿನಂತೆ ಪಂಚವೃತ್ತಿಗಳುಳ್ಳದ್ದೆಂದು (ಶ್ರುತಿಗಳಲ್ಲಿ) ಹೇಳಲ್ಪಟ್ಟಿದೆ.

ಮುಖ್ಯಪ್ರಾಣಕ್ಕೆ 'ಪ್ರಾಣ ಅಪಾನ ವ್ಯಾನ ಉದಾನ ಸಮಾನ' ಎಂಬ ಐದು ವೃತ್ತಿಗಳಿರುವುದೆಂದು ಶ್ರುತಿಯು (ಬೃ. ಉ. ೧. ೫. ೩) ಹೇಳುವುದರಿಂದಲೂ ಅದು ವಿಶೇಷಕಾರ್ಯವುಳ್ಳದ್ದು ಎಂದು ನಿರ್ಧರಿಸಬೇಕು. ಮುಖ್ಯಪ್ರಾಣಕ್ಕೆ ಬೇರೆ ಬೇರೆ ವೃತ್ತಿ ಗಳಿರುವುದು ಬೇರೆ ಬೇರೆ ಕಾರ್ಯಗಳ ಅಪೇಕ್ಷೆಯಿಂದ : ಉಚ್ಛ್ವಾಸಾದಿಕರ್ಮವುಳ್ಳ ಬಹಿರ್ಗಮನವೃತ್ತಿಯು ಪ್ರಾಣವೆನಿಸಿದೆ; ನಿಃಶ್ವಾಸಾದಿಕರ್ಮವುಳ್ಳ ಅಂತರ್ಗಮನವೃತ್ತಿಯು ಅಪಾನವೆನಿಸಿದೆ ; ಉತ್ಕ್ರಾಂತ್ಯಾದಿಗಳಿಗೆ ಕಾರಣವಾಗಿರುವ ಊರ್ಧ್ವವೃತ್ತಿಯು ಉದಾನ ವೆನಿಸಿದೆ ; ಅಂಗಗಳಿಗೆಲ್ಲ ಸಮಾನವಾಗಿ ಅನ್ನರಸವನ್ನು ಒಯ್ಯುವ ವೃತ್ತಿಯು ಸಮಾನ ವೆನಿಸಿದೆ. ಮನಸ್ಸಿಗೆ ಪಂಚವೃತ್ತಿಗಳಿರುವಂತೆ ಪ್ರಾಣಕ್ಕೂ ಪಂಚವೃತ್ತಿಗಳಿವೆ. ಶ್ರೋತ್ರಾದಿ ಗಳಿಂದ ಉತ್ಪನ್ನವಾದ ಮತ್ತು ಶಬ್ದಾದಿಗಳನ್ನು ವಿಷಯವಾಗಿ ಹೊಂದಿರುವ ಪಂಚವೃತ್ತಿ ಗಳು ಮನಸ್ಸಿನ ವೃತ್ತಿಗಳು.

---

[1] ಬೃ. ಉ. ೪. ೩. ೧೨, ೧. ೩. ೧೯; ಪ್ರ. ಉ. ೨. ೩. ೬. ೩. ೪ ನೋಡಿ.

[2] ಇತರೇಷಾಂ ಪ್ರಾಣಾನಾಂ ಕರಣತ್ವಾನ್ಮುಖ್ಯಸ್ಯಾಕರಣತ್ವಾತ್ ತಸ್ಮಾನ್ಯೇಭ್ಯ ಉತ್ತಮ ತ್ವಂ ಯುಜ್ಯತೇ (ಮ. ಭಾ.).

* ಇದು ಮಧ್ವಭಾಷ್ಯದಲ್ಲಿ ಪಂಚವೃತ್ತ್ಯಧಿಕರಣ ಎನಿಸಿದೆ

ವಿ.—'ಕಾಮ ಸಂಕಲ್ಪ ಸಂಶಯ ಶ್ರದ್ಧೆ ಅಶ್ರದ್ಧೆ ಧೃತಿ ಅಧೃತಿ ಲಜ್ಜೆ ಬುದ್ಧಿ ಮತ್ತು ಭಯ—ಇವೆಲ್ಲವೂ ಮನಸ್ಸೇ'[1] (ಬೃ. ಉ. ೧. ೫. ೩) ಎಂಬ ಶ್ರುತಿಯ ಪ್ರಕಾರ ಕಾಮಾದಿಗಳು ವೃತ್ತಿಭೇದಗಳನ್ನೂ ಕಾರ್ಯಭೇದಗಳನ್ನೂ ಹೊಂದಿದ್ದರೂ ಮನಸ್ಸಿಗಿಂತ ಬೇರೆಯದಾದ ತತ್ತ್ವಗಳಲ್ಲದಂತೆ ಪ್ರಾಣಾಪಾನಾದಿಗಳೆಲ್ಲವೂ ಪ್ರಾಣದ ವೃತ್ತಿವಿಶೇಷಗಳೆಂದೂ ತತ್ತ್ವಾಂತರಗಳಲ್ಲವೆಂದೂ ತಿಳಿಯಬೇಕು.

ದ್ವೈ.—ಹೇಗೆ ಮನಸ್ಸು, ಮನಸ್ಸು ಬುದ್ಧಿ ಅಹಂಕಾರ ಚಿತ್ತ ಚೇತನ ಎಂದು ಹೇಳಲ್ಪಟ್ಟಿದೆಯೋ ಮತ್ತು ಅದರಿಂದ ಹುಟ್ಟಿದ ಮನಸ್ಸೇ ಮೊದಲಾದ ಪಂಚವೃತ್ತಿಗಳುಳ್ಳದ್ದೋ, ಹಾಗೆಯೇ ಮುಖ್ಯಪ್ರಾಣನೂ ಕೂಡ ಪ್ರಾಣಾಪಾನ-ವ್ಯಾನೋದಾನಸಮಾನ ಎಂಬ ಪಂಚರೂಪಗಳುಳ್ಳವನು ಮತ್ತು ಪ್ರಾಣಾದಿ-ಪಂಚದಾಸಗಳುಳ್ಳವನು.

1 ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀರ್ಧೀರ್ಭೀರಿತ್ಯೇತತ್ಸರ್ವಂ ಮನ ಏವ ।

## ೬. ಶ್ರೇಷ್ಠಾಣುತ್ವಾಧಿಕರಣ*

### ಅಣುಶ್ಚ ॥ ೧೩ ॥

೧೩ (ಮುಖ್ಯಪ್ರಾಣವು) ಅಣುವೂ (ಆಗಿದೆ).

ಮುಖ್ಯಪ್ರಾಣವು ಇತರ ಪ್ರಾಣಗಳಂತೆ ಅಣುವೂ ಆಗಿದೆ ಎಂದು ಅರಿಯಬೇಕು. ಇಲ್ಲಿಯೂ ಕೂಡ ಅಣುತ್ವವೆಂದರೆ ಸೂಕ್ಷ್ಮತ್ವ-ಪರಿಚ್ಛಿನ್ನತ್ವಗಳೇ ಹೊರತು ಪರಮಾಣು ತುಲ್ಯತ್ವವಲ್ಲ ; ಏಕೆಂದರೆ ಮುಖ್ಯಪ್ರಾಣವು ಪಂಚವೃತ್ತಿಗಳಿಂದ ಶರೀರವನ್ನೆಲ್ಲ ವ್ಯಾಪಿಸಿಕೊಂಡಿರುತ್ತದೆ ಪ್ರಾಣವು ಸೂಕ್ಷ್ಮವು ; ಏಕೆಂದರೆ ಉತ್ಕ್ರಾಂತಿಕಾಲದಲ್ಲಿ ಇತರರಿಗೆ ಕಾಣುವುದಿಲ್ಲ. ಅದು ಪರಿಚ್ಛಿನ್ನವೂ ಆಗಿರುತ್ತದೆ ; ಏಕೆಂದರೆ ಅದಕ್ಕೆ ಉತ್ಕ್ರಾಂತಿ-ಗತಿ-ಆಗತಿಗಳನ್ನು ಶ್ರುತಿಗಳು ಹೇಳುತ್ತವೆ. ಕೆಲವು ಶ್ರುತಿಗಳಲ್ಲಿ (ಬೃ. ಉ. ೧. ೩. ೨೨) ಮುಖ್ಯಪ್ರಾಣಕ್ಕೆ ವಿಭುತ್ವವನ್ನು ಹೇಳಿದ್ದರೂ ಅದು ಆಧಿದೈವಿಕನಾದ, ಸಮಷ್ಟಿ-ವ್ಯಷ್ಟಿ-ರೂಪವುಳ್ಳ, ಹಿರಣ್ಯಗರ್ಭನ ಪ್ರಾಣರೂಪದಿಂದ ಹೇಳಿದೆಯೇ ಹೊರತು ಆಧ್ಯಾತ್ಮಿಕರೂಪದಿಂದಲ್ಲ.

ವಿ.—ಇತರ ಪ್ರಾಣಗಳಂತೆ ಮುಖ್ಯಪ್ರಾಣವೂ ಅಣುವೇ ; ಏಕೆಂದರೆ ಉತ್ಕ್ರಾಂತ್ಯಾದಿಗಳನ್ನು ಶ್ರುತಿಗಳಲ್ಲಿ ಹೇಳಿದೆ. ಇತರ ಶ್ರುತಿಗಳಲ್ಲಿ (ಬೃ. ಉ. ೧. ೩. ೨೨) ಪ್ರಾಣಕ್ಕೆ ಮಹಾಪರಿಮಾಣವನ್ನು ಹೇಳಿದ್ದರೆ ಸಮಸ್ತಪ್ರಾಣಿಸಮೂಹವೂ ಪ್ರಾಣವನ್ನೇ ಅವಲಂಬಿಸಿದೆ—ಎಂಬುದನ್ನು ತಿಳಿಸುವುದಕ್ಕೆ. ಶ್ರುತಿಗಳು ಪ್ರಾಣಕ್ಕೆ ಉತ್ಕ್ರಾಂತ್ಯಾದಿಗಳನ್ನು ಹೇಳುವುದರಿಂದ ಅದು ಪರಿಚ್ಛೇದವುಳ್ಳದ್ದೇ.

ದ್ವೈ.—ಮುಖ್ಯಪ್ರಾಣನು ದೇಹದಲ್ಲಿ ಅಣುವಾಗಿರುತ್ತಾನೆ, ಹೊರಗೆ ಮುಖ್ಯವಾಯುರೂಪದಿಂದ ವ್ಯಾಪ್ತನಾಗಿರುತ್ತಾನೆ,

---

* ಇದು ಮಧ್ವಭಾಷ್ಯದಲ್ಲಿ ಪ್ರಾಣಾಣುತ್ವಾಧಿಕರಣ ಎನಿಸಿದೆ.

## ೭. ಜ್ಯೋತಿರಾದ್ಯಧಿಕರಣ*

(ಸೂ. ೧೪–೧೬)

**ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್† ॥ ೧೪ ॥**

೧೪. ಆದರೆ ಜ್ಯೋತಿಸ್ಸೇ ಮೊದಲಾದುವುಗಳ ಅಧಿಷ್ಠಾನವಿದೆ; ಏಕೆಂದರೆ ಅದನ್ನು (ಶ್ರುತಿಗಳಲ್ಲಿ) ಹೇಳಿದೆ

ಈ ಪ್ರಾಣಗಳು ತಮ್ಮ ಮಹಿಮೆಯಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ಉತ್ಪಾದಿಸಲು ಶಕ್ತವಾಗಿವೆಯೊ? ಅಥವಾ ದೇವತೆಗಳಿಂದ ಅಧಿಷ್ಠಿತವಾಗಿ ಶಕ್ತವಾಗಿವೆಯೊ?—ಎಂಬುದನ್ನು ಈಗ ವಿಚಾರಿಸಲಾಗುತ್ತದೆ ಪ್ರಾಣಗಳಿಗೆ ತಮ್ಮ ಕಾರ್ಯವನ್ನುಂಟುಮಾಡಲು ಶಕ್ತಿಯಿರುವುದರಿಂದ ತಮ್ಮ ಮಹಿಮೆಯಿಂದಲೇ ಪ್ರವರ್ತಿಸುತ್ತವೆ—ಎಂಬುದು ಪೂರ್ವಪಕ್ಷ. ಇದಲ್ಲದೆ ದೇವತೆಗಳಿಂದ ಅಧಿಷ್ಠಿತವಾಗಿಯೇ ಪ್ರಾಣಗಳು ಪ್ರವರ್ತಿಸುವುವು ಎಂದೊಪ್ಪಿಕೊಂಡರೆ, ಆ ಅಧಿಷ್ಠಾತೃದೇವತೆಗಳೇ ಭೋಕ್ತೃಗಳೆಂದಾಗುವುದರಿಂದ ಜೀವನಿಗೆ ಭೋಕ್ತೃತ್ವವೇ ಹೋಗುತ್ತದೆ.

ಇದಕ್ಕೆ ಪರಿಹಾರ ಹೀಗಿದೆ. ಜ್ಯೋತಿಸ್ಸು ಮೊದಲಾದುವುಗಳಿಂದ, ಎಂದರೆ ಅಗ್ನಿಯೇ ಮೊದಲಾದ ಅಭಿಮಾನಿದೇವತೆಗಳಿಂದ, ಅಧಿಷ್ಠಿತವಾಗಿ ವಾಕ್ಕೇ ಮೊದಲಾದ ಕರಣಸಮೂಹವು ಸ್ವಕಾರ್ಯದಲ್ಲಿ ಪ್ರವರ್ತಿಸುತ್ತದೆ—ಎಂದು ಸೂತ್ರಕಾರರು ಪ್ರತಿಜ್ಞೆ ಮಾಡಿರುತ್ತಾರೆ.[1] ಇದನ್ನೇ ಶ್ರುತಿಗಳು ಹೇಳುತ್ತವೆ: 'ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು'[2] (ಐ. ಉ. ೨. ೪); ಇಲ್ಲಿ ದೇವತಾಸಂಬಂಧವನ್ನು ಬಿಟ್ಟರೆ ಅಗ್ನಿಗೆ ವಾಕ್ಕಿನಲ್ಲಾಗಲಿ ಬಾಯಲ್ಲಾಗಲಿ ಯಾವ ವಿಶೇಷಸಂಬಂಧವೂ ಕಂಡುಬರುವುದಿಲ್ಲ. ಹೀಗೆಯೇ 'ವಾಯುವು ಪ್ರಾಣವಾಗಿ ಮೂಗಿನ ಹೊಳ್ಳೆಗಳನ್ನು ಪ್ರವೇಶಿಸಿದನು'[3] (ಐ. ಉ. ೨. ೪) ಎಂಬುದೇ ಮೊದಲಾದುದನ್ನು ಯೋಜಿಸಿಕೊಳ್ಳಬೇಕು. ಈ ಅರ್ಥದಲ್ಲಿಯೇ ಇನ್ನೂ ಕೆಲವು ಶ್ರುತಿಗಳಿವೆ: 'ವಾಗಿಂದ್ರಿಯವೇ ಮನೋಬ್ರಹ್ಮದ ನಾಲ್ಕನೆಯ ಪಾದ. ಅದು ಅಗ್ನಿಜ್ಯೋತಿ

---

* ಇದು ಶ್ರೀಭಾಷ್ಯದಲ್ಲಿ ಜ್ಯೋತಿರಾದ್ಯಧಿಷ್ಠಾನಾಧಿಕರಣ ಎನಿಸಿದೆ.

† ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಒಟ್ಟುಗೂಡಿ ಒಂದೇ ಸೂತ್ರವಾಗಿದೆ.

[1] ಜ್ಯೋತಿರಾದಿಭಿರಗ್ನ್ಯಾದ್ಯಭಿಮಾನಿನೀಭಿರ್ದೇವತಾಭಿರಧಿಷ್ಠಿತಂ ವಾಗಾದಿ ಕರಣಜಾತಂ ಸ್ವಕಾರ್ಯೇಷು ಪ್ರವರ್ತತ ಇತಿ ಪ್ರತಿಜಾನೀತೇ (ಸೂ. ಭಾ.).

[2] ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ ।

[3] ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್ ।

ಯಿಂದ ಪ್ರಕಾಶಿಸುತ್ತದೆ ಮತ್ತು ತಪಿಸುತ್ತದೆ'[1] (ಛಾಂ. ಉ. ೩. ೧೮. ೩); 'ಆ ಪ್ರಾಣನು ಪ್ರಧಾನವಾದ ವಾಗಿಂದ್ರಿಯವನ್ನೇ (ಮೊದಲು) ಒಯ್ದನು. ಆ ವಾಕ್ಕು ಯಾವಾಗ ಮೃತ್ಯುವನ್ನು ದಾಟಿ ಮುಕ್ತವಾಯಿತೊ (ಆಗ) ಅದು ಅಗ್ನಿಯಾಯಿತು'[2] (ಬೃ. ಉ. ೧. ೩. ೧೨). ಪ್ರಾಣಗಳು ತಮ್ಮ ಮಹಿಮೆಯಿಂದಲೇ ಪ್ರವರ್ತಿಸಬಹುದು— ಎಂಬುದು ಸರಿಯಲ್ಲ; ಏಕೆಂದರೆ ಗಾಡಿಯೇ ಮೊದಲಾದುವು ಚಲಿಸಲು ಶಕ್ತವಾಗಿದ್ದರೂ ಎತ್ತು ಮೊದಲಾದುವು ಎಳೆದರೆ ಮಾತ್ರ ಹೋಗುತ್ತವೆ ಆದುದರಿಂದ ಪ್ರಾಣಗಳು ದೇವತಾಧಿಷ್ಠಿತವಾಗಿಯೇ ಇರುವುವು ಎಂದು ಆಗಮಬಲದಿಂದ ನಿರ್ಣಯಿಸಬೇಕಾಗುತ್ತದೆ

**ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಪ್ರಾಣವತಾ ಶಬ್ದಾತ್ || ೨. ೪. ೧೪ ||**

**ವಿ.**—'ಜೀವಾತ್ಮನೊಂದಿಗೆ ಜ್ಯೋತಿರಾದಿಗಳು (ಪ್ರಾಣಗಳಿಗೆ) ಅಧಿಷ್ಠಾನವಾಗಿರುವುದು ಆ ಪರಮಾತ್ಮನ ಸಂಕಲ್ಪದಿಂದಲೇ'—ಎಂಬುದು ಸೂತ್ರಾರ್ಥ.

ಇತರ ಪ್ರಾಣಗಳೊಂದಿಗೆ ಮುಖ್ಯಪ್ರಾಣವು ಪರಬ್ರಹ್ಮನಿಂದಲೇ ಉತ್ಪನ್ನವಾಗಿದೆಯೆಂದೂ ಪರಿಮಿತಪರಿಮಾಣವುಳ್ಳದ್ದೆಂದೂ ಹಿಂದೆ ಹೇಳಿದ್ದಾಯಿತು. ಪ್ರಾಣಗಳಿಗೆ ಅಗ್ನಿಯೇ ಮೊದಲಾದ ದೇವತೆಗಳು ಅಧಿಷ್ಠಾನವೆಂದು ೨. ೧. ೫ರಲ್ಲಿ ತೋರಿಸಿದ್ದಾಯಿತು. ಜೀವಾತ್ಮನು ಈ ಪ್ರಾಣಗಳನ್ನು ತನ್ನ ಭೋಗಕ್ಕೆ ಸಾಧನಗಳನ್ನಾಗಿ ಉಪಯೋಗಿಸುವನೆಂಬುದೂ ಲೋಕಪ್ರಸಿದ್ಧವಾಗಿದೆ ಇನ್ನು ಜೀವನು ಮತ್ತು ಅಗ್ನ್ಯಾದಿದೇವತೆಗಳು ಪ್ರಾಣಗಳನ್ನು ನಿಯಂತ್ರಿಸುವುದು ಸ್ವಶಕ್ತಿಯಿಂದಲೊ ಅಥವಾ ಪರಮಾತ್ಮನ ಅವಲಂಬನದಿಂದಲೊ ?—ಎಂಬ ಪ್ರಶ್ನೆಯು ಬರುತ್ತದೆ. ಈ ನಿಯಂತ್ರಣವು ಸ್ವಾಯತ್ತದಿಂದಲೇ ಉಂಟಾಗಿದೆ ಎಂಬುದನ್ನು ಸೂತ್ರಕಾರರು ನಿರಾಕರಿಸುತ್ತಾರೆ : ಪರಮಾತ್ಮನ ಸಂಕಲ್ಪದಿಂದಲೇ ಜೀವನು ಮತ್ತು ಅಗ್ನ್ಯಾದಿದೇವತೆಗಳು ಪ್ರಾಣಗಳನ್ನು ನಿಯಂತ್ರಿಸುತ್ತಾರೆ[3]— ಎಂಬುದು ಸಿದ್ಧಾಂತ. ಇಂದ್ರಿಯಗಳೂ ಅವುಗಳ ಅಭಿಮಾನಿದೇವತೆಗಳೂ ಮತ್ತು ಜೀವಾತ್ಮನೂ ತಮ್ಮ ಕಾರ್ಯಗಳಿಗಾಗಿ ಪರಮಪುರುಷನನ್ನೇ ಅವಲಂಬಿಸುತ್ತಾರೆಂದು ಶ್ರುತಿಗಳು ಹೇಳುತ್ತವೆ : 'ಯಾವನು ಅಗ್ನಿಯಲ್ಲಿರುವವನಾಗಿ ಅಗ್ನಿಯ ಒಳಗಿರುವನೊ ಯಾವನನ್ನು ಅಗ್ನಿಯು ತಿಳಿಯದೊ ಯಾವನಿಗೆ ಅಗ್ನಿಯು ಶರೀರವೊ, ಯಾವನು ಒಳಗಿದ್ದುಕೊಂಡು ಅಗ್ನಿಯನ್ನು ನಿಯಮಿಸುವನೊ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ

1 ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ।

2 ಸ ವೈ ವಾಚಮೇವ ಪ್ರಥಮಾಮತ್ಯವಹತ್ ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್ ।

3 ಪ್ರಾಣವತಾ—ಜೀವೇನ ಸಹ ಜ್ಯೋತಿರಾದೀನಾಮಗ್ನ್ಯಾದಿದೇವತಾನಾಂ ಪ್ರಾಣವಿಷಯಮಧಿಷ್ಠಾನಮ್, ತದಾಮನನಾತ್—ತಸ್ಯ ಪರಮಾತ್ಮನಃ ಆಮನನಾದ್ಭವತಿ (ಶ್ರೀಭಾಷ್ಯ).

ಆತ್ಮನು'[1] (ಬೃ. ಉ. ೩. ೭. ೫) ; 'ಇವನ ಭಯದಿಂದ ವಾಯುವು ಬೀಸುತ್ತಾನೆ, ಸೂರ್ಯನು ಉದಯಿಸುತ್ತಾನೆ ; ಇವನ ಭಯದಿಂದ ಅಗ್ನಿಯೂ ಇಂದ್ರನೂ (ತಮ್ಮ ಕೆಲಸಗಳನ್ನು ಮಾಡುತ್ತಾರೆ) ; ಐದನೆಯವನಾದ ಮೃತ್ಯುವು ಓಡುತ್ತಾನೆ'[2] (ತೈ. ಉ. ೨. ೮) ; 'ಈ ಅಕ್ಷರದ ಶಾಸನದಿಂದಲೇ ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನದಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ'[3] (ಬೃ. ಉ. ೩. ೮. ೯).

ದ್ವೈತ.—'ಜ್ಯೋತಿರಾದಿಗಳ ನಿಯಾಮಕನಾದ ಪರಬ್ರಹ್ಮನೇ ಚಕ್ಷುರಾದಿಗಳಿಗೆ ನಿಯಾಮಕನು ; ಹೀಗೆಂದು ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ.

**ಯಃ ಚಕ್ಷುಷಿ ತಿಷ್ಠನ್** (ಬೃ. ಉ. ೩. ೭. ೧೮) ಇವೇ ಮೊದಲಾದ ಶ್ರುತಿಗಳಲ್ಲಿ ಹಾಗೆ ತೋರುತ್ತದೆ

**ಪ್ರಾಣವತಾ ಶಬ್ದಾತ್ || ೧೫ ||**

೧೫. ಪ್ರಾಣವಂತನಾದ (ಜೀವನೊಂದಿಗೆ ಈ ಪ್ರಾಣಗಳ ಸಂಬಂಧವಿದೆ) ; ಏಕೆಂದರೆ (ಹಾಗೆಂದು) ಶ್ರುತಿಯಿದೆ.

ಪ್ರಾಣಗಳಿಗೆ ದೇವತೆಗಳು ಅಧಿಷ್ಠಾತೃಗಳಾದರೂ ಪ್ರಾಣವಂತನೂ ಕಾರ್ಯಕರಣ ಸಂಘಾತಕ್ಕೆ ಸ್ವಾಮಿಯೂ ಆದ ಜೀವನೊಂದಿಗೇ ಈ ಪ್ರಾಣಗಳಿಗೆ ಸಂಬಂಧವಿದೆಯೆಂದು[4] ಶ್ರುತಿಯಿಂದ ತಿಳಿದುಬರುತ್ತದೆ.[5] 'ಎಲ್ಲಿ ದೃಷ್ಟಿಯು ಆಕಾಶವನ್ನು ಸೇರಿಕೊಂಡಿರುವುದೊ ಅಲ್ಲಿ ಚಾಕ್ಷುಷಪುರುಷನಿರುವನು, ಅವನು ನೋಡುವುದಕ್ಕೆ ಕಣ್ಣು ಇಂದ್ರಿಯವು'[6] (ಛಾಂ. ಉ. ೮. ೧೨. ೪). ಇದಲ್ಲದೆ ಪ್ರತಿಕರಣದಲ್ಲಿಯೂ ಅಧಿಷ್ಠಾತೃಗಳಾದ ದೇವತೆಗಳು ಅನೇಕರಾಗಿರುವುದರಿಂದ ಅವರು ಈ ಶರೀರದಲ್ಲಿ ಭೋಕ್ತೃಗಳಾಗಿರುವರೆಂಬುದು ಹೊಂದುವುದಿಲ್ಲ. ಪ್ರತ್ಯಭಿಜ್ಞಾದಿಗಳ ಸಂಭವದಿಂದ ಈ ಶರೀರದಲ್ಲಿ ಒಬ್ಬನೇ ಭೋಕ್ತೃವಿರಬೇಕೆಂದು ತಿಳಿದುಬರುತ್ತದೆ.

---

1 ಯೋಽಗ್ನೌ ತಿಷ್ಠನ್ನಗ್ನೇರಂತರಃ, ಯಮಗ್ನಿರ್ನ ವೇದ, ಯಸ್ಯಾಗ್ನಿಃ ಶರೀರಮ್, ಯೋಽಗ್ನಿಮಂತರೋ ಯಮಯತಿ, ಏಷ ತ ಅಂತರ್ಯಾಮ್ಯಮೃತಃ ।

2 ಭೀಷಾಽಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ, ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ, ಮೃತ್ಯುರ್ಧಾವತಿ ಪಂಚಮ ಇತಿ ।

3 ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಚಂದ್ರಮಸೌ ವಿಧೃತೌ ತಿಷ್ಠತಃ।

4 ಎಂದರೆ ಭೋಕ್ತೃ-ಭೋಗ್ಯ-ಭಾವ (ರ. ಪ್ರ.).

5 ಸತೀಷ್ವಪಿ ಪ್ರಾಣಾನಾಮಧಿಷ್ಠಾತ್ರೀಷು ದೇವತಾಸು ಪ್ರಾಣವತಾ ಕಾರ್ಯಕರಣ ಸಂಘಾತಸ್ವಾಮಿನಾ ಶಾರೀರೇಣೈವೇಷಾಂ ಪ್ರಾಣಾನಾಂ ಸಂಬಂಧಃ ಶ್ರುತೇರವಗಮ್ಯತೇ (ಸೂ. ಭಾ.).

6 ಅಥ ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋದರ್ಶನಾಯ ಚಕ್ಷುಃ ।

ದ್ವೈ —'ಪರಮಾತ್ಮನು ತನ್ನ ಕರಣಗಳ ಮೂಲಕವೇ ಜೀವನಿಂದ ದರ್ಶನಾದಿಗಳನ್ನು ಮಾಡಿಸುವುದರಿಂದ ಶ್ರುತಿಗಳಲ್ಲಿ ಯಾವ ವಿರೋಧವೂ ಇಲ್ಲ'[1] ಎಂಬುದು ಸೂತ್ರಾರ್ಥ

'ಪರಮಾತ್ಮನು ಜೀವನು ಕಣ್ಣಿನಿಂದ ನೋಡುವ ಹಾಗೆ ಮಾಡುತ್ತಾನೆ '[2] ಎಂದು ಭಾಲ್ಲವೇಯಶ್ರುತಿಯು ಹೇಳುತ್ತದೆ

## ತಸ್ಯ ಚ ನಿತ್ಯತ್ವಾತ್ ॥ ೧೬ ॥

೧೬ ಮತ್ತು ಆ (ಜೀವನು) ನಿತ್ಯನಾಗಿರುವುದರಿಂದಲೂ (ದೇವತೆಗಳು ಭೋಕ್ತೃಗಳಲ್ಲ)

ಜೀವನು ಈ ಶರೀರದಲ್ಲಿ ಭೋಕ್ತೃರೂಪದಿಂದ ನಿತ್ಯನಾಗಿರುತ್ತಾನೆ, ಏಕೆಂದರೆ ಅವನಿಗೆ ಪುಣ್ಯಾಪಾಪಲೇಪದ ಸಂಭವವೂ ಸುಖದುಃಖಗಳ ಉಪಭೋಗದ ಸಂಭವವೂ ಇವೆ ದೇವತೆಗಳಿಗೆ ಹೀಗಾಗುವುದಿಲ್ಲ,[3] ಏಕೆಂದರೆ ಅವರು ಪರಮೈಶ್ವರ್ಯಪದದಲ್ಲಿರುವುದರಿಂದ ಈ ಹೀನಶರೀರದಲ್ಲಿ ಭೋಕ್ತೃತ್ವವನ್ನು ಪಡೆಯಲಾರರು 'ಇವನಿಗೆ ಪುಣ್ಯವೇ ಬರುತ್ತದೆ, ದೇವತೆಗಳಿಗೆ ಪಾಪವು ಬರುವುದೇ ಇಲ್ಲ'[4] ಎಂದು ಶ್ರುತಿಯು (ಬೃ. ಉ ೧ ೫ ೨೦) ಹೇಳುತ್ತದೆ ಕರಣಗಳನ್ನು ನಿಯಂತ್ರಿಸುವ ದೇವತೆಗಳಿದ್ದರೂ ಜೀವನಿಗೆ ಭೋಕ್ತೃತ್ವವು ಹೋಗುವುದಿಲ್ಲ, ಏಕೆಂದರೆ ದೇವತೆಗಳು ಕರಣಪಕ್ಷಕ್ಕೇ ಸೇರಿರುವರೇ ಹೊರತು ಭೋಕ್ತೃಪಕ್ಷಕ್ಕಲ್ಲ

ವಿ.—ಪರಮಾತ್ಮನು ಸರ್ವಕ್ಕೂ ಆತ್ಮನಾಗಿ ನಿಯಂತೃವಾಗಿರುವುದು ನಿತ್ಯವಾಗಿರುವುದರಿಂದಲೂ ಅವನ ಸ್ವರೂಪಕ್ಕೆ ಸಂಬಂಧಪಟ್ಟಿರುವುದರಿಂದಲೂ ಜೀವನ ಮತ್ತು ದೇವತೆಗಳ ನಿಯಮನವು ಅವನ ಸಂಕಲ್ಪಾನುಸಾರವೇ ಉಂಟಾಗುತ್ತದೆ[5] ಸರ್ವಚಿದಚಿದ್ವಸ್ತುಗಳಲ್ಲಿ ನಿಯಂತೃರೂಪದಿಂದ ಅವನು ಪ್ರವೇಶಿಸಿರುವುದು ಅವನ ಸ್ವರೂಪಕ್ಕೆ ಸಂಬಂಧಿಸಿದೆಯೆಂದು ಶ್ರುತಿಯೇ ಹೇಳುತ್ತದೆ 'ಅದನ್ನೆಲ್ಲ ಸೃಷ್ಟಿಸಿ ಅದನ್ನು ಅನುಪ್ರವೇಶಮಾಡಿದನು'[6] (ತೈ ಉ ೨ ೬)

---

1 ಜೀವೇನೈವ ಕರಣೈಃ ಕಾರಯತಿ ಪರಮಾತ್ಮಾ । ಅತೋ ನ ವಿರೋಧಃ (ಮ ಭಾ)

2 ಏಷ ಹ್ಯೇವೈನಾತ್ಮನಾ ಚಕ್ಷುಷಾ ದರ್ಶಯತಿ (ಮ ಭಾ)

3 ತಸ್ಯ ಚ ಶಾರೀರಸ್ಯಾಸ್ಮಿಂಛರೀರೇ ಭೋಕ್ತೃತ್ವೇನ ನಿತ್ಯತ್ವಂ ಪುಣ್ಯಪಾಪೋಪಲೇಪಸಂಭವಾತ್ ಸುಖದುಃಖೋಪಭೋಗಸಂಭವಾಚ್ಚ ನ ದೇವತಾನಾಮ್ (ಸೂ ಭಾ)

4 ಪುಣ್ಯಮೇವಾಮುಂ ಗಚ್ಛತಿ, ನ ಹ ವೈ ದೇವಾನ್ ಪಾಪಂ ಗಚ್ಛತಿ ।

5 ಸರ್ವೇಷಾಂ ಪರಮಾತ್ಮಾಧಿಷ್ಠಿತತ್ವಸ್ಯ ನಿತ್ಯತ್ವಾತ್, ಸ್ವರೂಪಾನುಬಂಧಿತ್ವೇನ ನಿಯತತ್ವಾಚ್ಚ ತತ್ಸಂಕಲ್ಪಾದೇವೈಷಾಮಧಿಷ್ಠಾತೃತ್ವಮವರ್ಜನೀಯಮ್ (ಶ್ರೀಭಾಷ್ಯ)

6 ತತ್ ಸೃಷ್ಟ್ವಾ ತದೇವಾನುಪ್ರಾವಿಶತ್ ।

ದ್ವೈ.—ಜೀವನಿಗೂ ಕರಣಗಳಿಗೂ ಇರುವ ಸಂಬಂಧವು ಅನಾದಿ-ನಿತ್ಯವಾಗಿರುವುದರಿಂದ ಕರಣಗಳು ಜೀವನ ಕರಣಗಳೆಂದು ಶ್ರುತಿಯು ಹೇಳುತ್ತದೆ'[1] ಎಂಬುದು ಸೂತ್ರಾರ್ಥ.

'ಜೀವನು ಕರಣಗಳಿಂದ ಎಂದಿಗೂ ಬೇರೆಯಾಗುವುದಿಲ್ಲ. ದೇಹದಿಂದ ಬೇರೆಯಾಗುತ್ತಾನೆ .'[2] ಎಂದು ಗೌಪವನಶ್ರುತಿಯು ಹೇಳುತ್ತದೆ.

---

1 ಅನಾದಿನಿತ್ಯತ್ವಾಚ್ಚ ಜೀವಕರಣಸಂಬಂಧಸ್ಯ ಯುಜ್ಯತೇ ತತ್ಕರಣತ್ವಶ್ರುತಿಃ(ಮ.ಭಾ ).

2 ಕರಣೈರ್ವಾ ಏಷ ನ ವಿಯುಜ್ಯತೇ ದೇಹೇನೈವ ವಿಯುಜ್ಯತೇ (ಮ. ಭಾ.).

# ೮. ಇಂದ್ರಿಯಾಧಿಕರಣ

(ಸೂ. ೧೭–೧೯)

**ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ॥ ೧೭ ॥**

೧೭. ಆ (ಪ್ರಾಣಗಳು) ಮುಖ್ಯಪ್ರಾಣದ ಹೊರತು ಇಂದ್ರಿಯಗಳು; ಏಕೆಂದರೆ ಆ ವ್ಯಪದೇಶವಿದೆ

**ಉಳಿದ** ಪ್ರಾಣಗಳು ಮುಖ್ಯಪ್ರಾಣದ ವೃತ್ತಿಭೇದಗಳೊ ಅಥವಾ ಬೇರೆ ತತ್ತ್ವಗಳೊ ?—ಎಂಬುದು ಸಂಶಯ. ಉಳಿದ ಪ್ರಾಣಗಳು ಮುಖ್ಯಪ್ರಾಣದ ವೃತ್ತಿಗಳೇ—ಎಂಬುದು ಪೂರ್ವಪಕ್ಷ, ಏಕೆಂದರೆ ಹಾಗೆಂದು ಶ್ರುತಿಯಲ್ಲಿ ಹೇಳಿದೆ : "'ನಾವೆಲ್ಲರೂ ಇದರ ರೂಪವನ್ನೇ ಹೊಂದುವ." ಇವೆಲ್ಲವೂ ಇದರ ರೂಪವನ್ನೇ ಪಡೆದುವು'[1] (ಬೃ. ಉ. ೧. ೫. ೨೧). ಇವೆಲ್ಲವೂ ಪ್ರಾಣವೆಂಬ ಒಂದೇ ಶಬ್ದದಿಂದ ಕರೆಯಲ್ಪಟ್ಟಿವೆ. ಆದುದರಿಂದ ಪ್ರಾಣಾಪಾನಾದಿಗಳಂತೆ ವಾಗಾದಿಕರಣಗಳೂ ಮುಖ್ಯಪ್ರಾಣದ ವೃತ್ತಿಗಳೇ.

ವಾಗಾದಿಗಳು ಪ್ರಾಣಕ್ಕಿಂತ ಬೇರೆಯ ತತ್ತ್ವಗಳೇ—ಎಂಬುದು ಸಿದ್ಧಾಂತ; ಏಕೆಂದರೆ ಅವಕ್ಕೆ 'ಇಂದ್ರಿಯಗಳು' ಎಂಬ ವ್ಯಪದೇಶವು ಶ್ರುತಿಯಲ್ಲಿದೆ: 'ಪ್ರಾಣ, ಮನಸ್ಸು, ಸರ್ವೇಂದ್ರಿಯಗಳು—ಇವನಿಂದ ಹುಟ್ಟುತ್ತವೆ'[2] (ಮುಂ. ಉ. ೨. ೧. ೩); ಈ ಜಾತಿಯ ಶ್ರುತಿಗಳಲ್ಲಿ ಪ್ರಾಣವನ್ನೂ ಇಂದ್ರಿಯಗಳನ್ನೂ ಬೇರೆಬೇರೆಯಾಗಿ ಹೇಳಿದೆ. ಮನಸ್ಸನ್ನು ಇಂದ್ರಿಯಗಳಿಗಿಂತ ಬೇರೆಯಾಗಿ ಶ್ರುತಿಯಲ್ಲಿ ಹೇಳಿದ್ದರೂ ಸ್ಮೃತಿಯಲ್ಲಿ 'ಹನ್ನೊಂದು ಇಂದ್ರಿಯಗಳು' ಎಂದು ಮನಸ್ಸನ್ನು ಇಂದ್ರಿಯಗಳಲ್ಲಿ ಸೇರಿಸಿದೆ. ಆದರೆ ಪ್ರಾಣವು ಇಂದ್ರಿಯವೆಂದು ಎಲ್ಲಿಯೂ ಪ್ರಸಿದ್ಧವಾಗಿಲ್ಲ. ಆದುದರಿಂದ ಉಳಿದ ಪ್ರಾಣಗಳು ಬೇರೆಯ ತತ್ತ್ವಗಳು ಎಂಬ ಪಕ್ಷದಲ್ಲಿಯೇ ಈ ವ್ಯಪದೇಶವು ಹೊಂದುತ್ತದೆ.

**ವಿ.**—ಮುಖ್ಯಪ್ರಾಣವನ್ನು ಬಿಟ್ಟರೆ ಉಳಿದ ಪ್ರಾಣಗಳೆಲ್ಲ ಇಂದ್ರಿಯಗಳೇ; ಏಕೆಂದರೆ ಕರಣಗಳಾದ ಇವುಗಳನ್ನೆಲ್ಲ ಪ್ರಾಣಗಳೆಂದು ಕರೆದಿದೆ. 'ಹತ್ತು ಇಂದ್ರಿಯಗಳು ಮತ್ತು ಮನಸ್ಸು, ಐದು ಇಂದ್ರಿಯವಿಷಯಗಳು'[3] (ಗೀತಾ ೧೩. ೫) ಎಂಬಲ್ಲಿ ಇಂದ್ರಿಯ-ಶಬ್ದವನ್ನು ಚಕ್ಷುರಾದಿಗಳಿಗೂ ಮನಸ್ಸಿಗೂ ಹೇಳಿದೆ.

---

[1] ಹಂತಾಸ್ಯೈವ ಸರ್ವೇ ರೂಪಮಸಾಮೇತಿ; ತ ಏತಸ್ಯೈವ ಸರ್ವೇ ರೂಪಮಭವನ್।

[2] ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ ।

[3] ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ।

ದ್ವೈ.—ಮುಖ್ಯಪ್ರಾಣನನ್ನು ಬಿಟ್ಟರೆ ಉಳಿದುವೆಲ್ಲ ಇಂದ್ರಿಯಗಳು. ಇಂದ್ರಿಯ ಗಳು ಹನ್ನೆರಡು ಎಂದು ಹೇಳುತ್ತಾರೆ; 'ಮುಖ್ಯಪ್ರಾಣನು ಇಂದ್ರಿಯವಲ್ಲ'[1] ಎಂದು ಪೌತ್ರಾಯಣಶ್ರುತಿಯು ಹೇಳುತ್ತದೆ.

## ಭೇದಶ್ರುತೇಃ* ॥ ೧೮ ॥

೧೮. ಭೇದಶ್ರುತಿಯಿರುವುದರಿಂದಲೂ (ಉಳಿದ ಪ್ರಾಣಗಳು ಬೇರೆಯ ತತ್ತ್ವಗಳು).

ವಾಗಾದಿಗಳಿಗಿಂತ ಬೇರೆಯಾಗಿ ಮುಖ್ಯಪ್ರಾಣವನ್ನು ಸರ್ವತ್ರ ಹೇಳಿದೆ: 'ಅವರು ವಾಕ್ಕನ್ನು ಹೇಳಿದರು'[2] (ಬೃ. ಉ. ೧. ೩. ೨); 'ಅನಂತರ ಬಾಯಲ್ಲಿರುವ ಪ್ರಾಣವನ್ನು ಕುರಿತು ಹೇಳಿದರು'[3] (ಬೃ. ಉ. ೧. ೩. ೭); 'ಮನಸ್ಸು-ವಾಕ್ಕು-ಪ್ರಾಣಗಳನ್ನು ತನ ಗಾಗಿ ಇಟ್ಟುಕೊಂಡನು'[4] (ಬೃ. ಉ. ೧. ೫. ೩).

ವಿ.—ಭೇದಶ್ರುತೇರ್ವೈಲಕ್ಷಣ್ಯಾಚ್ಚ ॥ ೨. ೪. ೧೬ ॥

೧೬. ಭೇದಶ್ರುತಿಯಿರುವುದರಿಂದಲೂ ವೈಲಕ್ಷಣ್ಯವಿರುವುದರಿಂದಲೂ (ಮುಖ್ಯಪ್ರಾಣಕ್ಕಿಂತ ಇಂದ್ರಿಯಗಳು ಬೇರೆ ಎಂದು ತಿಳಿದುಬರುತ್ತದೆ).

ಶ್ರುತಿಯ (ಮುಂ. ಉ. ೨ ೧. ೩) ಪ್ರಕಾರ ಪ್ರಾಣವು ಇಂದ್ರಿಯಗಳಿಗಿಂತ ಬೇರೆ ಯಾಗಿರುವುದರಿಂದ ಅದು ಇಂದ್ರಿಯವಲ್ಲವೆಂದು ತಿಳಿದುಬರುತ್ತದೆ. ಮುಖ್ಯಪ್ರಾಣವು ಚಕ್ಷುರಾದಿ-ಇಂದ್ರಿಯಗಳಿಗಿಂತ ವಿಲಕ್ಷಣವೆಂಬುದು ಪರಿಶೀಲನದಿಂದಲೂ ತಿಳಿದುಬರುತ್ತದೆ. ಸುಷುಪ್ತಿಯಲ್ಲಿ ಪ್ರಾಣದ ವೃತ್ತಿಯು ಕಂಡುಬರುವುವೇ ಹೊರತು ಇಂದ್ರಿಯಗಳ ವೃತ್ತಿಗಳು ಕಂಡುಬರುವುದಿಲ್ಲ. ಚಕ್ಷುರಾದಿಗಳೂ ಮನಸ್ಸೂ ಕರ್ಮ-ಜ್ಞಾನಗಳಿಗೆ ಸಾಧನವಾಗಿದ್ದರೆ ಪ್ರಾಣವು ಶರೀರೇಂದ್ರಿಯಧಾರಣಕ್ಕೆ ಕಾರಣವಾಗಿದೆ ಇಂದ್ರಿಯಗಳ ಧಾರಣವು ಪ್ರಾಣ ವನ್ನವಲಂಬಿಸಿರುವುದರಿಂದ ಇಂದ್ರಿಯಗಳನ್ನೇ ಪ್ರಾಣಗಳೆಂದು ಕರೆದಿದೆ.

ದ್ವೈ.—ದ್ವಾದಶಪ್ರಾಣಗಳಿಗೂ ಮುಖ್ಯಪ್ರಾಣನಿಗೂ ಭೇದವನ್ನು **ಸ್ಥಿತ ಏವ ಹೀದಂ ಮುಖ್ಯಪ್ರಾಣಃ ಕರೋತಿ ಕಾರಯತಿ** ಎಂಬ ಪೌತ್ರಾಯಣ-ಶ್ರುತಿಯಲ್ಲಿ ಹೇಳಿರುವುದರಿಂದ ದ್ವಾದಶಪ್ರಾಣಗಳೇ ಇಂದ್ರಿಯಗಳು

---

1 ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯವತ್ (ಮ. ಭಾ.).

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಸೇರಿ ಒಂದಾಗಿದೆ.

2 ತೇ ಹ ವಾಚಮೂಚುಃ ।

3 ಅಥ ಹೇಮಮಾಸನ್ಯಂ ಪ್ರಾಣಮೂಚುಃ ।

4 ಮನೋ ವಾಚಂ ಪ್ರಾಣಂ ತಾನ್ಯಾತ್ಮನೇಽಕುರುತ ।

## ವೈಲಕ್ಷಣ್ಯಾಚ್ಚ || ೧೯ ||

೧೯. ವೈಲಕ್ಷಣ್ಯವಿರುವುದರಿಂದಲೂ (ಅವು ಬೇರೆ ತತ್ತ್ವಗಳಾಗಿವೆ).

ಮುಖ್ಯಪ್ರಾಣಕ್ಕೂ ಉಳಿದ ಪ್ರಾಣಗಳಿಗೂ ವೈಲಕ್ಷಣ್ಯವಿದೆ: ಸುಷುಪ್ತಿಯಲ್ಲಿ ಮುಖ್ಯಪ್ರಾಣವೊಂದೇ ಎಚ್ಚರವಾಗುತ್ತದೆಯೇ ಹೊರತು ವಾಗಾದಿಗಳಲ್ಲ. ಮೃತ್ಯುವು ಮುಖ್ಯಪ್ರಾಣವನ್ನು ವ್ಯಾಪಿಸಲಾರದು, ಇತರ ಪ್ರಾಣಗಳನ್ನು ವ್ಯಾಪಿಸಬಲ್ಲುದು. ಅದರ ಸ್ಥಿತಿ-ಉತ್ಕ್ರಾಂತಿಗಳಿಂದ ಶರೀರದ ಸ್ಥಿತಿ-ನಾಶಗಳು ಉಂಟಾಗುತ್ತವೆಯೇ ಹೊರತು ಉಳಿದ ಪ್ರಾಣಗಳಿಂದಲ್ಲ. ಇಂದ್ರಿಯಗಳು ವಿಷಯಗ್ರಹಣಕ್ಕೆ ಕಾರಣವಾಗಿವೆ, ಮುಖ್ಯ ಪ್ರಾಣವಲ್ಲ. 'ಅವೆಲ್ಲವೂ ಇವನ ರೂಪವನ್ನೇ ಪಡೆದವು' (ಬೃ. ಉ. ೧. ೫. ೨೧) ಎಂಬ ಶ್ರುತಿಯು ವಾಗಾದಿಪ್ರಾಣಗಳು ತಮ್ಮ ಸ್ಪಂದನಲಾಭಕ್ಕಾಗಿ ಮುಖ್ಯಪ್ರಾಣದ ಅಧೀನ ವಾಗಿವೆ ಎಂಬುದನ್ನು ತಿಳಿಸುತ್ತದೆಯೇ ಹೊರತು ತಾದಾತ್ಮ್ಯವನ್ನಲ್ಲ. ಪ್ರಾಣ-ಶಬ್ದ ವನ್ನು ಇಂದ್ರಿಯಾರ್ಥದಲ್ಲಿ ಪ್ರಯೋಗಿಸಿರುವುದು ಲಾಕ್ಷಣಿಕವೆಂದು ಇದರಿಂದ ತಿಳಿದು ಬರುತ್ತದೆ.

**ದ್ವೈ.**—ಇಂದ್ರಿಯಗಳ ಪ್ರವೃತ್ತಿಯು ಜೀವನ ಅಧೀನದಲ್ಲಿಯೇ ಹೊರತು ಮುಖ್ಯಪ್ರಾಣನ ಅಧೀನದಲ್ಲಲ್ಲ.[1] 'ಈ ಶರೀರದಲ್ಲಿ ಮುಖ್ಯಪ್ರಾಣರೂಪಗಳೆಂಬ ಅಗ್ನಿಗಳೇ ಸ್ವವ್ಯಾಪಾರವನ್ನು ಮಾಡುತ್ತವೆ'[2] (ಪ್ರ. ಉ. ೪. ೩) ಎಂಬ ಶ್ರುತಿಯ ಪ್ರಕಾರ ಉಳಿದ ಇಂದ್ರಿಯಗಳು ಸುಪ್ತವಾಗಿರುವಾಗ ಮುಖ್ಯಪ್ರಾಣನೊಬ್ಬನೇ ಶರೀರಧಾರಣಾದಿವ್ಯಾಪಾರ ವನ್ನು ಮಾಡುತ್ತಾನೆ ಎಂದು ತಿಳಿದುಬರುತ್ತದೆ.

---

[1] ಪುರುಷಾಪೇಕ್ಷಯಾ ಪ್ರವೃತ್ತಿರಿಂದ್ರಿಯಾಣಾಂ ದೃಶ್ಯತೇ ನ ಮುಖ್ಯಸ್ಯ (ಮ. ಭಾ.).

[2] ಪ್ರಾಣಾಗ್ನಯ ಏವೈತಸ್ಮಿನ್ಪುರೇ ಜಾಗ್ರತಿ ।

## ೯. ಸಂಜ್ಞಾಮೂರ್ತಿಕ್ಲೃಪ್ತ್ಯಧಿಕರಣ

(ಸೂ. ೨೦–೨೨)

**ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್*** || ೨೦ ||

೨೦. ನಾಮ-ರೂಪಗಳ ಕಲ್ಪನವು ತ್ರಿವೃತ್ಕರಣಮಾಡುವವನದು; ಏಕೆಂದರೆ (ಹಾಗೆ) ಉಪದೇಶವಿದೆ.

'ಆ ಈ ದೇವತೆಯು ಯೋಚಿಸಿತು: "ನಾನು ಈ ಜೀವಾತ್ಮರೂಪದಿಂದ ಈ ಮೂರು ದೇವತೆಗಳನ್ನು ಪ್ರವೇಶಿಸಿ ನಾಮ-ರೂಪಗಳನ್ನು ವಿಂಗಡಿಸುತ್ತೇನೆ"'[1] (ಛಾಂ. ಉ. ೬. ೩. ೨); 'ಅವುಗಳಲ್ಲಿ ಒಂದೊಂದನ್ನೂ ಮೂರುಮೂರಾಗಿ ಮಾಡುತ್ತೇನೆ'[2] (ಛಾಂ. ಉ. ೬. ೩. ೩)—ಎಂದು ಶ್ರುತಿಯು ನಾಮ-ರೂಪಗಳ ವಿಂಗಡವನ್ನು ಹೇಳುತ್ತದೆ. ಈ ನಾಮರೂಪಗಳ ವಿಂಗಡವು ಜೀವಕರ್ತೃಕವೊ ಪರಮೇಶ್ವರಕರ್ತೃಕವೊ?—ಎಂಬುದು ಸಂಶಯ. ಇದು ಜೀವಕರ್ತೃಕವೆಂಬುದು ಪೂರ್ವಪಕ್ಷ; ಏಕೆಂದರೆ 'ಈ ಜೀವಾತ್ಮರೂಪದಿಂದ' ಎಂಬ ವಿಶೇಷಣವಿದೆ.

ತ್ರಿವೃತ್ಕರಣವನ್ನು ಮಾಡುವವನಿಗೇ ನಾಮರೂಪಗಳ ಕಲ್ಪನವು ಸೇರಿದೆ—ಎಂಬುದು ಸಿದ್ಧಾಂತ; **ಸಂಜ್ಞಾಮೂರ್ತಿಕ್ಲೃಪ್ತಿಃ** ಎಂದರೆ ನಾಮ-ರೂಪಗಳ ವ್ಯಾಕರಣ ಅಥವಾ ವಿಂಗಡ. **ತ್ರಿವೃತ್ಕುರ್ವತಃ** ಎಂಬುದು ಪರಮೇಶ್ವರನನ್ನು ಸೂಚಿಸುತ್ತದೆ; ಏಕೆಂದರೆ ಹಾಗೆ ಉಪದೇಶವಿದೆ: 'ಆ ಈ ದೇವತೆಯು ಯೋಚಿಸಿತು' ಎಂದು ಉಪಕ್ರಮಿಸಿ 'ವಿಂಗಡಿಸುತ್ತೇನೆ' ಎಂದು ಉತ್ತಮಪುರುಷಪ್ರಯೋಗವನ್ನು ಮಾಡಿರುವುದರಿಂದ ಇಲ್ಲಿ ಪರಬ್ರಹ್ಮಕ್ಕೆ ವ್ಯಾಕರಣದ ಕರ್ತೃತ್ವವನ್ನು ಹೇಳಿರುತ್ತದೆ.

**ವಿ.**—ಭೂತೇಂದ್ರಿಯಗಳ ಸಮಷ್ಟಿಸೃಷ್ಟಿ ಮತ್ತು ಜೀವಾತ್ಮರ ಕರ್ತೃತ್ವ—ಇವು ಪರಮಾತ್ಮನಿಂದಲೇ ಆಗುತ್ತವೆ ಎಂದು ಹಿಂದೆ ಹೇಳಿದ್ದಾಯಿತು. ಈಗ ನಾಮ-ರೂಪ-ವ್ಯಾಕರಣಾತ್ಮಕವಾದ ವ್ಯಷ್ಟಿಸೃಷ್ಟಿಯ ವಿಷಯವಾಗಿ ಪ್ರಶ್ನೆಯು ಏಳುತ್ತದೆ; ಈ ಕರ್ಮವು ಸಮಷ್ಟಿಜೀವರೂಪನಾದ ಹಿರಣ್ಯಗರ್ಭನದೊ? ಅಥವಾ ಹಿರಣ್ಯಗರ್ಭಶರೀರಕನಾದ ಪರಬ್ರಹ್ಮನದೊ? ಇದು ಹಿರಣ್ಯಗರ್ಭನದೇ ಎಂಬುದು ಪೂರ್ವಪಕ್ಷ. ತ್ರಿವೃತ್ಕರಣವನ್ನು ಮಾಡುವ ಪರಬ್ರಹ್ಮನಿಗೇ ನಾಮ-ರೂಪಗಳ ವ್ಯಾಕರಣವು ಸೇರಿದೆ—ಎಂಬುದು ಸಿದ್ಧಾಂತ. ಈ ತ್ರಿವೃತ್ಕರಣವು ಬ್ರಹ್ಮಾಂಡದಲ್ಲಿರುವ ಚತುರ್ಮುಖಬ್ರಹ್ಮನಿಗೆ ಸಂಭವಿಸು

---

* ಮಧ್ವಭಾಷ್ಯದಲ್ಲಿ ಈ ಸೂತ್ರವು ಮಾತ್ರ ಸಂಜ್ಞಾಧಿಕರಣ ಎನಿಸಿದೆ.

1 ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ।

2 ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ।

ವುದಿಲ್ಲ, ಏಕೆಂದರೆ ತ್ರಿವೃತ್ಕೃತವಾದ ಅಗ್ನಿ-ನೀರು-ಭೂಮಿಗಳಿಂದಲೇ ಬ್ರಹ್ಮಾಂಡವು ಉತ್ಪನ್ನವಾಗಿದೆ ಆ ಬ್ರಹ್ಮಾಂಡದಲ್ಲಿ ಬ್ರಹ್ಮನು ಹುಟ್ಟಿದನೆಂದು ಮನುವು ಹೇಳುತ್ತಾನೆ [1] ಮೂಲದಲ್ಲಿರುವ ಜೀವ-ಶಬ್ದವು ಜೀವನನ್ನೇ ಶರೀರವಾಗುಳ್ಳ ಪರಬ್ರಹ್ಮನನ್ನೇ ಸೂಚಿಸುತ್ತದೆ [2]

ದ್ವೈ.—'ನಾಮ-ರೂಪಗಳ ಸೃಷ್ಟಿಯು ಪರಮಾತ್ಮನಿಂದಲೇ ಆಗುತ್ತದೆ [3] ಸರ್ವಜ್ಞನಾದ ಪರಮಾತ್ಮನು ಅವುಗಳನ್ನು ಸೂಚಿಸಲು ನಾಮ-ರೂಪಗಳನ್ನು ಸೃಷ್ಟಿಸಿ, ಅವುಗಳನ್ನು (ಸದಾ) ಉಪಯೋಗಿಸುತ್ತಾನೆ' (ತೈ ಆ ೩ ೧೨) ಎಂದು ಶ್ರುತಿಯು ಹೇಳುತ್ತದೆ [4]

**ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ * ॥ ೨೧ ॥**

೨೧ ಶ್ರುತಿಗನುಸಾರವಾಗಿ ಮಾಂಸಾದಿಗಳು ಭೂಮಿಯ (ಕಾರ್ಯವು), ಉಳಿದೆರಡರ (ಕಾರ್ಯವೂ) ಹೀಗೆಯೇ

ಹೊರಗಿನ ತ್ರಿವೃತ್ಕರಣವನ್ನು ಹೇಳಿದಮೇಲೆ ಆ ತ್ರಿವೃತ್ಕೃತವಾದ ಭೂತಗಳು ನಾನಾರೂಪಗಳನ್ನು ಹೊಂದಿ ಮನುಷ್ಯಶರೀರದಲ್ಲಿ ಪ್ರತಿಯೊಂದೂ ಮೂರು ವಿಧವಾಗಿ ಪರಿಣಮಿಸುತ್ತದೆಯೆಂದು ಶ್ರುತಿಯು (ಛಾಂ ಉ ೬ ೫ ೧ ೩) ಹೇಳುತ್ತದೆ ಇದೇ ಆಧ್ಯಾತ್ಮಿಕತ್ರಿವೃತ್ಕರಣ ಮನುಷ್ಯನು ಜೀರ್ಣಿಸಿಕೊಂಡ ತ್ರಿವೃತ್ಕೃತವಾದ ಭೂಮಿಯಿಂದ ಮಾಂಸಾದಿಕಾರ್ಯವು ಉತ್ಪನ್ನವಾಗುತ್ತದೆ 'ಭುಕ್ತವಾದ ಅನ್ನವು (ಜಾಠರಾಗ್ನಿಯಿಂದ ಪಕ್ವವಾಗಿ) ಮೂರು ಬಗೆಯಾಗುತ್ತದೆ ಆ ಅನ್ನದಲ್ಲಿ ಯಾವುದು ಸ್ಥೂಲತಮವಾದ ಧಾತುವೋ ಅದು ಮಲವಾಗುತ್ತದೆ, ಯಾವುದು ಮಧ್ಯಮಧಾತುವೊ ಅದು ಮಾಂಸವಾಗುತ್ತದೆ, ಯಾವುದು ಸೂಕ್ಷ್ಮತಮಧಾತುವೊ ಅದು ಮನಸ್ಸಾಗುತ್ತದೆ' [5] (ಛಾಂ ಉ ೬ ೫ ೧) ಎಂದು ಶ್ರುತಿಯು ಹೇಳುತ್ತದೆ ತ್ರಿವೃತ್ಕೃತವಾದ ಈ ಭೂಮಿಯನ್ನೇ ವ್ರೀಹಿ-ಯವಾದಿ-ಅನ್ನರೂಪದಿಂದ ತಿನ್ನುತ್ತಾರೆ ಎಂದರ್ಥ ಹೀಗೆಯೇ ನೀರು, ತೇಜಸ್ಸು ಇವುಗಳ ಕಾರ್ಯವನ್ನೂ ಶ್ರುತಿಗನುಸಾರವಾಗಿ ನಿರ್ಧರಿಸಬೇಕು

---

1 ತಸ್ಮಿನ್ನಂಡೇऽಭವದ್ಬ್ರಹ್ಮಾ ಸರ್ವಲೋಕಪಿತಾಮಹಃ ।

2 ಜೀವಶರೀರಕಂ ಪರಂ ಬ್ರಹ್ಮೈವ ಜೀವಶಬ್ದೇನಾಭಿಧೀಯತೇ (ಶ್ರೀಭಾಷ್ಯ)

3 ನಾಮರೂಪಕ್ಲೃಪ್ತಿಃ ಪರಾದೇವ (ಮ. ಭಾ )

4 ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾ ಅಭಿವದನ್ಯ ಅಸ್ತೇ ಇತಿ ಶ್ರುತಿಃ (ಮ ಭಾ )

* ಈ ಸೂತ್ರ ಮತ್ತು ಮುಂದಿನದು ಸೇರಿ ಮಧ್ವಭಾಷ್ಯದಲ್ಲಿ ಮಾಂಸಾದ್ಯಧಿಕರಣ ಎನಿಸಿದೆ

5 ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾಂಸಂ ಯೋऽಣಿಷ್ಠಸ್ತನ್ಮನಃ ।

ವಿ.—ಪುರೀಷ-ಮಾಂಸ-ಮನಸ್ಸುಗಳು ಪೃಥ್ವಿಯ ವಿಕಾರಗಳು, ಮೂತ್ರ-ರಕ್ತ-ಪ್ರಾಣಗಳು ನೀರಿನ ವಿಕಾರಗಳು, ಅಸ್ಥಿ-ಮಜ್ಜೆ-ವಾಕ್ಕುಗಳು ತೇಜೋವಿಕಾರಗಳು[1]

ದ್ವೈ.—'ಯಾವುದು ಕಠಿನವೊ ಅದು ಪೃಥಿವಿ. ಯಾವುದು ದ್ರವವೊ ಅದು ನೀರು, ಯಾವುದು ಉಷ್ಣವೊ ಅದು ತೇಜಸ್ಸು' ಎಂಬ ಶ್ರುತಿಯ ಪ್ರಕಾರ ಮಾಂಸಾದಿಗಳು ಭೌಮವೇ ಹೊರತು ಸರ್ವಶರೀರವಲ್ಲ.[2] ಮಜ್ಜಾದಿಗಳು ಜಲ-ತೇಜಸ್ಸುಗಳ ಕಾರ್ಯವೆಂದು ಶ್ರುತ್ಯನುಸಾರವಾಗಿ ಅಂಗೀಕರಿಸತಕ್ಕದ್ದು.

## ವೈಶೇಷ್ಯಾತ್ತು ತದ್ವಾದಸ್ತದ್ವಾದಃ ॥ ೨೨ ॥

೨೨. ಆದರೆ ವೈಶೇಷ್ಯದಿಂದ ಅದು ಎಂಬ ವಾದವು, ಅದು ಎಂಬ ವಾದವು.

ಭೂತಭೌತಿಕವೆಲ್ಲ ತ್ರಿವೃತ್ಕೃತವೇ ಆಗಿದ್ದರೆ 'ಇದು ಭೂಮಿ', 'ಇದು ನೀರು', 'ಇದು ತೇಜಸ್ಸು' ಎಂಬ ವಿಶೇಷವಾದ ಹೆಸರುಗಳನ್ನು ಏಕೆ ಕೊಡುತ್ತೇವೆ?—ಎಂಬ ಆಕ್ಷೇಪಕ್ಕೆ ಉತ್ತರ ಹೀಗಿದೆ: ವಿಶೇಷದ ಭಾವ ವೈಶೇಷ್ಯ, ಆಧಿಕ್ಯವೆಂದರ್ಥ. ವಸ್ತುಗಳೆಲ್ಲ ತ್ರಿವೃತ್ಕೃತವಾಗಿದ್ದರೂ ಒಂದೊಂದು ಕಡೆಯಲ್ಲಿ ಒಂದೊಂದು ಭೂತಧಾತುವಿನ ಆಧಿಕ್ಯವು —ಅಗ್ನಿಗೆ ತೇಜಸ್ಸಿನ ಆಧಿಕ್ಯ, ನೀರಿಗೆ ಅಪ್ಪಿನ ಆಧಿಕ್ಯ, ಭೂಮಿಗೆ ಅನ್ನದ ಆಧಿಕ್ಯ— ಕಂಡುಬರುತ್ತದೆ. ಆದುದರಿಂದ ತ್ರಿವೃತ್ಕರಣವಿದ್ದರೂ ಆಧಿಕ್ಯದಿಂದಲೇ ಭೂತ-ಭೌತಿಕ-ವಸ್ತುಗಳ ವಿಷಯದಲ್ಲಿ ತೇಜಸ್ಸು, ನೀರು, ಭೂಮಿ—ಎಂಬ ವಿಶೇಷವಾದವು ಹೊಂದುತ್ತದೆ. **ತದ್ವಾದಃ, ತದ್ವಾದಃ** ಎಂದು ಪುನಃ ಪುನಃ ಹೇಳಿರುವುದು ಅಧ್ಯಾಯದ ಸಮಾಪ್ತಿಯನ್ನು ಸೂಚಿಸುತ್ತದೆ.

ವಿ.—ತ್ರಿವೃತ್ಕರಣದಿಂದ ಒಂದೊಂದು ಭೂತವೂ ಮೂರು ರೂಪದಲ್ಲಿದ್ದರೂ ಯಾವುದೊ ಒಂದು ಭೂತದ ಆಧಿಕ್ಯದಿಂದ ಆಯಾ ಹೆಸರುಗಳು ಬಂದಿವೆ.

ದ್ವೈ.—ಪಾರ್ಥಿವ, ಆಪ್ಯ, ತೈಜಸ—ಎಂಬ ವಿಶೇಷವ್ಯವಹಾರವು ಪೃಥಿವ್ಯಾದಿ ಮೊದಲಾದ ಭೂತಗಳ ಸಂಯೋಗಾಧಿಕ್ಯದಿಂದ ಹೊಂದುತ್ತದೆ.

---

1 ಅತಃ ಪುರೀಷಮಾಂಸಮನಾಂಸಿ ಪೃಥಿವೀವಿಕಾರಾಃ, ಮೂತ್ರಲೋಹಿತಪ್ರಾಣಾ ಅಬ್ವಿಕಾರಾಃ, ಅಸ್ಥಿಮಜ್ಜಾವಾಚಸ್ತೇಜೋವಿಕಾರಾ ಇತಿ ಪ್ರತಿಪತ್ತವ್ಯಮ್ (ಶ್ರೀಭಾಷ್ಯ).

2 ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪೋ ಯದುಷ್ಣಂ ತತ್ತೇಜ ಇತಿ ಶ್ರುತೇರ್ಮಾಂಸಾದ್ಯೇವ ಭೌಮಂ ನ ಸರ್ವಶರೀರಮ್ (ಮ. ಭಾ.).

# ಮೂರನೆಯ ಅಧ್ಯಾಯ

## ಮೊದಲನೆಯ ಪಾದ

## ೧. ತದಂತರಪ್ರತಿಪತ್ತ್ಯಧಿಕರಣ

(ಸೂ. ೧-೭)

**ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾ-ಭ್ಯಾಮ್*** ॥ ೧ ॥

೧. (ಜೀವಾತ್ಮನು) ಬೇರೆ (ದೇಹವನ್ನು) ಪಡೆಯುವಾಗ (ಸೂಕ್ಷ್ಮಭೂತಗಳಿಂದ) ಆವರಿಸಲ್ಪಟ್ಟು ಹೋಗುತ್ತಾನೆ; ಪ್ರಶ್ನೋತ್ತರಗಳಿಂದ (ಇದು ತಿಳಿದುಬರುತ್ತದೆ)

ಈ ಅಧ್ಯಾಯದಲ್ಲಿ ಮುಂದೆ ಹೇಳುವ ವಿಷಯಗಳನ್ನು ವಿಚಾರಮಾಡಲಾಗಿದೆ. ಉಪಕರಣಗಳಿಂದ ಉಪಹಿತನಾಗಿರುವ ಜೀವನ ಸಂಸಾರಗತಿಯ ಪ್ರಕಾರ (೩. ೧), ಜೀವನ ಬೇರೆಬೇರೆಯ ಅವಸ್ಥೆಗಳು ಮತ್ತು ಬ್ರಹ್ಮದ ಸ್ವರೂಪ (೩. ೨), ವಿದ್ಯೆಗಳ ಭೇದಾಭೇದಗಳು ಮತ್ತು ಬ್ರಹ್ಮದ ಗುಣಗಳ ಉಪಸಂಹಾರ ಅಥವಾ ಅನುಪಸಂಹಾರ (೩. ೩); ಸಂಯಗ್ದರ್ಶನದಿಂದ ಪುರುಷಾರ್ಥಸಿದ್ಧಿ, ಸಂಯಗ್ದರ್ಶನೋಪಾಯದ ವಿಧಿ ಪ್ರಭೇದಗಳು ಮತ್ತು ಮುಕ್ತಿಫಲದಲ್ಲಿ ಅನಿಯಮ (೩. ೪).

ಇಲ್ಲಿ ಮೊದಲನೆಯದಾಗಿ ಪ್ರಥಮಪಾದದಲ್ಲಿ ಪಂಚಾಗ್ನಿವಿದ್ಯೆಯನ್ನು (ಛಾಂ. ಉ. ೫ ೩. ೧೦) ಆಶ್ರಯಿಸಿಕೊಂಡು ಸಂಸಾರಗತಿಯ ಪ್ರಭೇದಗಳನ್ನು ವೈರಾಗ್ಯಬೋಧನೆಗಾಗಿ ಪ್ರದರ್ಶಿಸಲಾಗುವುದು.

ಮುಖ್ಯಪ್ರಾಣ, ಇಂದ್ರಿಯಗಳು ಮತ್ತು ಮನಸ್ಸು—ಇವುಗಳಿಂದ ಕೂಡಿದ ಜೀವನು ಅವಿದ್ಯಾ-ಕರ್ಮ-ಪೂರ್ವಾನುಭವ-ವಾಸನೆಗಳ ಸಹಿತ ಹಿಂದಿನ ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಪಡೆಯುತ್ತಾನೆ—ಎಂದು ಶ್ರುತಿಯು (ಬೃ. ಉ. ೪. ೪. ೧. ೪) ಹೇಳುತ್ತದೆ. ಜೀವನು ದೇಹಬೀಜಗಳಾಗಿರುವ ಸೂಕ್ಷ್ಮಭೂತಗಳಿಂದ ಆವರಿಸಲ್ಪಟ್ಟು ಹೋಗುತ್ತಾನೆಯೊ ಅಥವಾ ಇಲ್ಲವೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಜೀವನು ಬೇರೆ ದೇಹಕ್ಕೆ ಹೋಗುವಾಗ ಚಕ್ಷುರಾದಿಗಳನ್ನು ತೆಗೆದುಕೊಂಡು ಹೋಗುತ್ತಾನೆ ಎಂದು ಹೇಳಿರುವ ಹಾಗೆ ಭೂತಮಾತ್ರಗಳನ್ನು ತೆಗೆದುಕೊಂಡು ಹೋಗುತ್ತಾನೆಂದು ಹೇಳಿರುವುದಿಲ್ಲ. ಮತ್ತೆ ಭೂತಮಾತ್ರಗಳು ಸರ್ವತ್ರ

---

* ಮಧ್ವಭಾಷ್ಯದ ತದಂತರಾಧಿಕರಣವು ಈ ಸೂತ್ರವನ್ನು ಮಾತ್ರ ಒಳಕೊಂಡಿದೆ.

ಸುಲಭವಾಗಿ ಸಿಕ್ಕುತ್ತವೆ, ಆದುದರಿಂದ ಸೂಕ್ಷ್ಮಭೂತಗಳಿಂದ ಆವರಿಸಲ್ಪಡದೆ ಹೋಗುತ್ತಾನೆ

**ಸಿದ್ಧಾಂತಿ**—ದೇಹಾಂತರಪ್ರಾಪ್ತಿಯಾಗುವಾಗ ಜೀವನು ದೇಹಬೀಜಗಳಾದ ಸೂಕ್ಷ್ಮಭೂತಗಳಿಂದ ಆವರಿಸಲ್ಪಟ್ಟು ಹೋಗುತ್ತಾನೆ, ಏಕೆಂದರೆ ಇದು ಪ್ರಶ್ನೋತ್ತರಗಳಿಂದ ತಿಳಿದುಬರುತ್ತದೆ 'ಐದನೆಯ ಆಹುತಿಯಲ್ಲಿ ನೀರು ಹೇಗೆ ಪುರುಷನೆಂಬ ಹೆಸರನ್ನು ಪಡೆಯುವುದು ಎಂಬುದನ್ನು ಬಲ್ಲೆಯ?'[1] (ಛಾಂ ಉ ೫ ೩ ೩) ಎಂಬುದು ಪ್ರಶ್ನೆ ದ್ಯುಲೋಕ ಪರ್ಜನ್ಯ ಪೃಥಿವಿ ಪುರುಷ ಸ್ತ್ರೀ—ಎಂಬ ಪಂಚಾಗ್ನಿಗಳಲ್ಲಿ ಶ್ರದ್ಧೆ ಸೋಮ ವೃಷ್ಟಿ ಅನ್ನ ರೇತಸ್ಸು—ಎಂಬೀ ರೂಪದ ಪಂಚಾಗ್ನಿಗಳನ್ನು ತೋರಿಸಿ, 'ಹೀಗೆ ಐದನೆಯ ಆಹುತಿಯಲ್ಲಿ ನೀರು ಪುರುಷನೆಂಬ ಹೆಸರನ್ನು ಪಡೆಯುತ್ತದ'[2] (ಛಾಂ ಉ ೫ ೯ ೧) ಎಂಬ ಉತ್ತರವಿದೆ ಆದುದರಿಂದ ನೀರಿನಿಂದ ಪರಿವೇಷ್ಟಿತನಾಗಿ ಜೀವನು ಹೋಗುತ್ತಾನೆ, **ರಂಹತಿ** ಎಂಬುದು ನಿಶ್ಚಯವಾಗುತ್ತದೆ 'ಹೇಗೆ ತೃಣ ಜಲಾಯುಕವು'[3] (ಬೃ ಉ ೪ ೪ ೩) ಎಂಬ ಇನ್ನೊಂದು ಶ್ರುತಿಯಲ್ಲಿ ಜೀವನು ಜಿಗಣೆಯಂತೆ ಮತ್ತೊಂದು ಶರೀರವನ್ನು ಆಕ್ರಮಿಸುವವರೆಗೂ ಪೂರ್ವದೇಹವನ್ನು ಬಿಡುವುದಿಲ್ಲ ಎಂದು ಹೇಳಿದೆಯಲ್ಲ—ಎಂಬ ಆಕ್ಷೇಪಕ್ಕ ಪರಿಹಾರವು ಹೀಗಿದೆ ಅಲ್ಲಿ ನೀರಿನಿಂದ ಪರಿವೇಷ್ಟಿತನಾದ ಜೀವನು ಕರ್ಮವು ತಂದಿಡುವ ಪ್ರಾಪ್ತವ್ಯದೇಹವಿಷಯದ ದೀರ್ಘೀಭಾವವನ್ನು ಜಿಗಣೆಗೆ ಹೋಲಿಸಿರುವುದರಿಂದ ಯಾವ ವಿರೋಧವೂ ಇಲ್ಲ[4]

ಹೀಗೆ ಶ್ರುತಿಯು ದೇಹಾಂತರವನ್ನು ಹೊಂದುವ ಪ್ರಕಾರವನ್ನು ಹೇಳಿರುವುದರಿಂದ ಶ್ರುತಿವಿರುದ್ಧವಾದ ಮತ್ತು ಪುರುಷಬುದ್ಧಿಯಿಂದುಂಟಾದ ಈ ಕಲ್ಪನೆಗಳನ್ನೆಲ್ಲ ಅನಾದರಿಸಬೇಕು (೧) ಸರ್ವವ್ಯಾಪಿಗಳಾದ ಕರಣಗಳಿಗೂ ಆತ್ಮನಿಗೂ ದೇಹಾಂತರ ಪ್ರಾಪ್ತಿಯಾದ ಮೇಲೆ ಕರ್ಮವಶದಿಂದ ಅದರಲ್ಲೇ ವೃತ್ತಿಲಾಭವುಂಟಾಗುತ್ತದೆಂಬ ಸಾಂಖ್ಯರ ಕಲ್ಪನೆ, (೨) ಕೇವಲ ಆತ್ಮನೇ ಶರೀರದಲ್ಲಿ ಪ್ರವರ್ತಿಸುತ್ತಾನೆ, ಇಂದ್ರಿಯಗಳೂ ದೇಹದಂತೆ ಆಯಾ ಭೋಗಸ್ಥಾನಗಳಲ್ಲಿ ಉತ್ಪನ್ನವಾಗುತ್ತವೆ—ಎಂಬ ಸುಗತಕಲ್ಪನೆ, (೩) ಕೇವಲ ಮನಸ್ಸೇ ಭೋಗಸ್ಥಾನಕ್ಕ ಹೋಗುತ್ತದ—ಎಂಬ ವೈಶೇಷಿಕಕಲ್ಪನೆ, (೪) ಗಿಳಿಯು ಮರದಿಂದ ಮರಕ್ಕೆ ಹಾರುವಂತೆ ಜೀವನು ದೇಹದಿಂದ ದೇಹಕ್ಕೆ ಹಾರುತ್ತಾನೆ—ಎಂಬ ದಿಗಂಬರಜೈನರ[1] ಕಲ್ಪನೆ ಇವೇ ಮೊದಲಾದುವು

---

[1] ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ ।

[2] ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ ।

[3] ತದ್ಯಥಾ ತೃಣಜಲಾಯುಕಾ ।

[4] ತತ್ರಾಪ್ಯಪ್ಪರಿವೇಷ್ಟಿತಸ್ಯೈವ ಜೀವಸ್ಯ ಕರ್ಮೋಪಸ್ಥಾಪಿತಪ್ರತಿಪತ್ತವ್ಯದೇಹವಿಷಯ-ಭಾವನಾದೀರ್ಘೀಭಾವಮಾತ್ರಂ ಜಲೂಕಯೋಪಮೀಯತ ಇತ್ಯವಿರೋಧಃ (ಸೂ ಭಾ)

**ವಿ.**—ಮೂರನೆಯ ಅಧ್ಯಾಯದಲ್ಲಿ ಬ್ರಹ್ಮೋಪಾಯವಾದ ಉಪಾಸನಾ ವಿಷಯವನ್ನು ವಿಚಾರಿಸಲಾಗುತ್ತದೆ ಜೀವನಿಗೆ ಲೋಕಾಂತರಸಂಚಾರ, ಜಾಗ್ರತಾದಿ ಅವಸ್ಥೆಗಳೆಂಬ ದೋಷಗಳು, ಪರಬ್ರಹ್ಮನ ಕಲ್ಯಾಣಗುಣಾಕರತ್ವ—ಇವೇ ಮೊದಲಾದುವು ಮೊದಲನೆಯ ಮತ್ತು ಎರಡನೆಯ ಪಾದಗಳ ವಿಷಯಗಳು.

ಜೀವನು ಪುನಃ ದೇಹಪ್ರಾಪ್ತಿಗೆ ಬೇಕಾದ ಭೂತಸೂಕ್ಷ್ಮಗಳೊಂದಿಗೆ ಸ್ಥೂಲದೇಹವನ್ನು ಬಿಟ್ಟುಹೋಗುತ್ತಾನೆ—ಎಂಬುದು ಸಿದ್ಧಾಂತ ಇದು ಪ್ರಶ್ನೆ-ಪ್ರತಿವಚನಗಳಿಂದ (ಛಾಂ. ಉ. ೫. ೩. ೧೦) ತಿಳಿದುಬರುತ್ತದೆ.[2]

**ದ್ವೈ.**—ಈ ಅಧ್ಯಾಯವು ಸಾಧನವಿಚಾರವನ್ನು ಒಳಕೊಂಡಿದೆ. ವೈರಾಗ್ಯಕ್ಕೆ ಕಾರಣವಾದ ಗಮನಾಗಮನಗಳ ಸ್ವರೂಪವನ್ನು ಮೊದಲನೆಯ ಪಾದದಲ್ಲಿ ನಿರೂಪಿಸಿದೆ

(ಹಿಂದಿನ ಶರೀರವನ್ನು ತ್ಯಜಿಸಿದಮೇಲೆ) ಜೀವನು ದೇಹಾಂತರಪ್ರಾಪ್ತಿಗಾಗಿ ಭೂತಗಳಿಂದ ಸಂಬದ್ಧನಾಗಿಯೇ ಹೋಗುತ್ತಾನೆ[3] ಎಂಬುದು ಸಿದ್ಧಾಂತ. ಇದು ಪ್ರಶ್ನೆ-ಪರಿಹಾರಗಳಿಂದ (ಛಾಂ. ಉ ೫. ೩. ೯) ತಿಳಿದುಬರುತ್ತದೆ.

## ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್* ॥ ೨ ॥

೨. (ನೀರು) ಮೂರು (ಭೂತಗಳನ್ನು) ಒಳಕೊಂಡಿರುವುದರಿಂದ (ಆ ಶಂಕೆಗೆ ಕಾರಣವಿಲ್ಲ); (ನೀರು) ಹೆಚ್ಚಾಗಿರುವುದರಿಂದ (ಆಪ್-ಎಂದು ಕರೆದಿದೆ).

ಕೇವಲ ನೀರಿನಿಂದ ಆವರಿಸಲ್ಪಟ್ಟು ಜೀವಾತ್ಮನು ಹೋಗುತ್ತಾನೆ—ಎಂಬುದು ಪ್ರಶ್ನೋತ್ತರಗಳಿಂದ ತಿಳಿದುಬರುತ್ತದೆ; ಹೀಗಿರುವಾಗ ಸಮಸ್ತಭೂತಸೂಕ್ಷ್ಮಗಳಿಂದ ಆವರಿಸಲ್ಪಟ್ಟು ಹೋಗುತ್ತಾನೆ ಎಂಬುದು ಹೇಗೆ ಸಿದ್ಧವಾಗುತ್ತದೆ ?—ಎಂದು ಪೂರ್ವಪಕ್ಷಿಯು ಆಕ್ಷೇಪಿಸಿದರೆ ಅದಕ್ಕೆ ಪರಿಹಾರವನ್ನು ಸೂತ್ರಕಾರರೇ ಹೇಳಿರುತ್ತಾರೆ: ದೇಹವು

---

1 ವ್ಯಾಪಿನಾಂ ಕರಣಾನಾಮಾತ್ಮನಶ್ಚ ದೇಹಾಂತರಪ್ರತಿಪತ್ತೌ ಕರ್ಮವಶಾದ್ವೃತ್ತಿಲಾಭಸ್ತತ್ರ ಭವತಿ; ಕೇವಲಸ್ಯೈವಾತ್ಮನೋ ವೃತ್ತಿಲಾಭಸ್ತತ್ರ ಭವತಿ; ಇಂದ್ರಿಯಾಣಿ ತು ದೇಹವದಭಿನವಾನ್ಯೇವ ತತ್ರ ತತ್ರ ಭೋಗಸ್ಥಾನ ಉತ್ಪದ್ಯಂತೇ; ಮನ ಏವ ವಾ ಕೇವಲಂ ಭೋಗಸ್ಥಾನಮಭಿಪ್ರತಿಷ್ಠತೇ; ಜೀವ ಏವೋತ್ಪ್ಲುತ್ಯ ದೇಹಾದ್ದೇಹಾಂತರಂ ಪ್ರತಿಪದ್ಯತೇ ಶುಕ ಇವ ವೃಕ್ಷಾದ್‌ವೃಕ್ಷಾಂತರಮ್ ।

2 ಅತ ಏವಂ ಪ್ರಶ್ನಪ್ರತಿವಚನಾಭ್ಯಾಂ ದೇಹಹೇತುಭೂತಭೂತಸೂಕ್ಷ್ಮೈಃ ಸಹ ತತ್ರ ತತ್ರ ಯಾತೀತಿ ಗಮ್ಯತೇ (ಶ್ರೀಭಾಷ್ಯ).

3 ಶರೀರಾಂತರಪ್ರತಿಪತ್ತೌ ಭೂತಪರಿಷ್ವಕ್ತ ಏವ ಗಚ್ಛತಿ (ಮ. ಭಾ.).

* ಈ ಸೂತ್ರವು ಮಧ್ವಭಾಷ್ಯದಲ್ಲಿ ತ್ರ್ಯಾತ್ಮಕತ್ವಾಧಿಕರಣ ಎಂಬ ಅಧಿಕರಣವಾಗಿದೆ.

ಮೂರು ಭೂತಗಳನ್ನು ಒಳಕೊಂಡಿದೆ, ಏಕೆಂದರೆ ಅದರಲ್ಲಿ ತೇಜಸ್ಸು, ನೀರು, ಪೃಥಿವಿ— ಎಂಬ ಈ ಮೂರು ಭೂತಗಳ ಕಾರ್ಯವೂ ಕಂಡುಬರುತ್ತದೆ. ನೀರು ಅಧಿಕವಾಗಿರುವುದರಿಂದ 'ನೀರು ಪುರುಷನೆಂಬ ಹೆಸರನ್ನು ಪಡೆಯುತ್ತದೆ' (ಛಾಂ. ಉ. ೫. ೯. ೧) ಎಂದು ಹೇಳಿದೆಯೇ ಹೊರತು ನೀರೊಂದೇ ಇದೆಯೆಂಬ ಅಪೇಕ್ಷೆಯಿಂದಲ್ಲ. 'ನೀರು' ಎಂಬ ಶಬ್ದದಿಂದ ದೇಹಬೀಜವಾಗಿರುವ ಭೂತಸೂಕ್ಷ್ಮಗಳನ್ನೆಲ್ಲ ಗ್ರಹಿಸಬೇಕು.

ವಿ.—ನೀರೊಂದೇ ಶರೀರವನ್ನು ಆರಂಭಿಸಲಾರದು, ಏಕೆಂದರೆ 'ಅವನು ಒಂದೊಂದನ್ನೂ ಮೂರು ಮೂರು ಭಾಗಗಳುಳ್ಳದ್ದಾಗಿ ಮಾಡಿದನು'[1] (ಛಾಂ. ಉ ೬. ೩. ೪) ಎಂಬ ಶ್ರುತಿಯು ದೇಹಾದಿಗಳನ್ನು ಆರಂಭಿಸುವುದಕ್ಕಾಗಿಯೇ ತ್ರಿವೃತ್ಕರಣವಾಯಿತು ಎಂಬುದನ್ನು ತಿಳಿಸುತ್ತದೆ. ನೀರು ಅಧಿಕವಾಗಿರುವುದರಿಂದ ಶ್ರುತಿಯಲ್ಲಿ ನೀರಿನ ಹೆಸರಿದೆ.

ದ್ವೈ.—ನೀರು ಮೂರು ಭೂತಗಳನ್ನೂ ಒಳಕೊಂಡಿರುವುದರಿಂದ ಅಪ್‌ಶಬ್ದವು ಹೊಂದುತ್ತದೆ.

## ಪ್ರಾಣಗತೇಶ್ಚ* ॥ ೩ ॥

೩. ಪ್ರಾಣದ ಗತಿಯನ್ನು (ಹೇಳಿರುವುದರಿಂದಲೂ).

ಬೃಹದಾರಣ್ಯಕಶ್ರುತಿಯ (೪. ೪. ೨) ಪ್ರಕಾರ ಪ್ರಾಣವು ಉತ್ಕ್ರಮಿಸಿದಾಗ ಅದನ್ನು ಅನುಸರಿಸಿ ಇಂದ್ರಿಯಗಳೆಲ್ಲ ಉತ್ಕ್ರಮಿಸುತ್ತವೆ. ಆಶ್ರಯವಿಲ್ಲದಿದ್ದರೆ ಪ್ರಾಣಗಳಿಗೆ ಗತಿಯು ಸಾಧ್ಯವಾಗುವುದಿಲ್ಲ; ಆದುದರಿಂದ ಇತರ ಭೂತಗಳಿಂದ ಸಂಬದ್ಧವಾದ ನೀರು ಉತ್ಕ್ರಮಿಸುತ್ತಿರುವ ಪ್ರಾಣಗಳಿಗೆ ಆಶ್ರಯವಾಗಿರುತ್ತದೆ; ಏಕೆಂದರೆ ಅಂಥ ಆಶ್ರಯವಿಲ್ಲದಿದ್ದರೆ ಪ್ರಾಣಗಳು ಎಲ್ಲಿಗೂ ಹೋಗಲಾರವು ಮತ್ತು ನಿಲ್ಲಲಾರವು

ವಿ.—ಭೂತಸೂಕ್ಷ್ಮಗಳಿಂದ ಆವರಿಸಲ್ಪಟ್ಟೇ ಜೀವನು ಹೊಂದುತ್ತಾನೆ. ಸ್ಮೃತಿಯೂ (ಗೀತಾ ೧೫. ೮)[2] ಇದನ್ನೇ ಹೇಳುತ್ತದೆ: 'ಜೀವನು ಶರೀರವನ್ನು ಯಾವಾಗ ಹೊಂದುತ್ತಾನೆಯೊ ಮತ್ತು ಯಾವಾಗ ಬಿಡುತ್ತಾನೆಯೊ ಆಗ—ಗಾಳಿಯು ಗಂಧಗಳನ್ನು ಅವುಗಳ ಆಶ್ರಯದಿಂದ ಒಯ್ಯುವ ಹಾಗೆ—ಇಂದ್ರಿಯಗಳನ್ನೂ ತೆಗೆದುಕೊಂಡು ಹೋಗುತ್ತಾನೆ.'

---

[1] ತಾಸಾಂ ತ್ರಿವೃತಮೇಕೈಕಾಂ ಕರವಾಣಿ ।

* ಇದು ಮಧ್ವಭಾಷ್ಯದಲ್ಲಿ ಪ್ರಾಣಗತ್ಯಧಿಕರಣ ಎಂಬ ಅಧಿಕರಣವಾಗಿದೆ.

[2] ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥

ದ್ವೈ.—ಯತ್ರ ವಾವ ಭೂತಾನಿ ತತ್ರ ಕರಣಾನಿ ಎಂಬ ಭಾಲ್ಲವೇಯ-ಶ್ರುತಿಯ ಪ್ರಕಾರ ಭೂತಗಳು ಪ್ರಾಣಗಳಿಂದ ವ್ಯಾಪ್ತವಾಗಿರುವುದರಿಂದ ಜೀವನು ಭೂತಗಳಿಂದ ಸಂಬದ್ಧನಾಗಿಯೇ ಹೋಗುತ್ತಾನೆ.

**ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ * ॥ ४ ॥**

೪. ಅಗ್ನ್ಯಾದಿಗತಿಯನ್ನು ಶ್ರುತಿಯು ಹೇಳಿರುವುದರಿಂದ (ಪ್ರಾಣೇಂದ್ರಿಯಗಳು ಜೀವನೊಂದಿಗೆ ಹೋಗುವುದಿಲ್ಲ) ಎಂದು ಹೇಳಿದರೆ, ಅದು ಸರಿಯಲ್ಲ; ಏಕೆಂದರೆ (ಆ ಶ್ರುತಿಯು) ಗೌಣವು.

**ಆಕ್ಷೇಪಣೆ**—ದೇಹಾಂತರಪ್ರಾಪ್ತಿಯಾಗುವಾಗ ಪ್ರಾಣಗಳು ಜೀವನೊಂದಿಗೆ ಹೋಗುವುದಿಲ್ಲ; ಏಕೆಂದರೆ ಮರಣಕಾಲದಲ್ಲಿ ವಾಗಾದಿಗಳು ಅಗ್ನ್ಯಾದಿದೇವತೆಗಳನ್ನು ಪ್ರವೇಶಿಸುತ್ತವೆಂದು ಶ್ರುತಿಯು ಹೇಳುತ್ತದೆ: 'ಯಾವಾಗ ಮೃತನಾದ ಪುರುಷನ ವಾಕ್ಕು ಅಗ್ನಿಯಲ್ಲಿ ಲಯವಾಗುತ್ತದೆಯೊ, ಘ್ರಾಣವು ವಾಯುವಿನಲ್ಲಿ ಲಯವಾಗುತ್ತದೆಯೊ'[1] (ಬೃ. ಉ. ೩. ೨. ೧೩)

**ಪರಿಹಾರ**—ಇದು ಸರಿಯಲ್ಲ; ವಾಗಾದಿಗಳು ಅಗ್ನ್ಯಾದಿಗಳನ್ನು ಪ್ರವೇಶಿಸುತ್ತವೆ—ಎಂಬುದು 'ರೋಮಗಳು ಮೂಲಿಕೆಗಳಲ್ಲಿಯೂ, ಕೂದಲುಗಳು ವನಸ್ಪತಿಗಳಲ್ಲಿಯೂ ಲಯವಾದಾಗ' (ಬೃ. ಉ. ೩. ೨. ೧೩) ಎಂಬ ವಾಕ್ಯದ ಹಾಗೆ ಗೌಣವಾಗಿ ಗ್ರಹಿಸಬೇಕು; ಏಕೆಂದರೆ ರೋಮಕೇಶಗಳು ಮೂಲಿಕೆಗಳನ್ನೂ ಮರಗಳನ್ನೂ ಸೇರುವುದು ಕಂಡುಬರುವುದಿಲ್ಲ. ಜೀವನಿಗೆ ಪ್ರಾಣಗಳೆಂಬ ಉಪಾಧಿಯನ್ನು ನಿರಾಕರಿಸಿದರೆ ಗಮನವೂ ಸಂಭವಿಸುವುದಿಲ್ಲ, ದೇಹಾಂತರದಲ್ಲಿ ಉಪಭೋಗವೂ ಹೊಂದುವುದಿಲ್ಲ ಮತ್ತು ಇನ್ನೊಂದು ಶ್ರುತಿಯಲ್ಲಿ (ಬೃ. ಉ. ೪. ೪. ೨) ಪ್ರಾಣಗಳು ಜೀವನೊಂದಿಗೆ ಉತ್ಕ್ರಮಿಸುತ್ತವೆ ಎಂದು ಸ್ಪಷ್ಟವಾಗಿ ಹೇಳಿದೆ; ಆದುದರಿಂದ 'ವಾಗಾದಿಗಳು ಅಗ್ನ್ಯಾದಿಗಳನ್ನು ಪ್ರವೇಶಿಸುತ್ತವೆ' ಎಂಬುದಕ್ಕೆ ಗೌಣಾರ್ಥವು ಹೀಗಿದೆ: ವಾಗಾದಿಗಳಿಗೆ ಅಧಿಷ್ಠಾತೃವಾಗಿರುವ ಅಗ್ನ್ಯಾದಿದೇವತೆಗಳು ಉಪಕಾರಕವಾಗಿದ್ದು ಮರಣಕಾಲದಲ್ಲಿ ತಮ್ಮ ಉಪಕಾರವನ್ನು ನಿಲ್ಲಿಸುತ್ತಾರೆ

ವಿ.—ವಾಗಾದಿಗಳು ಅಗ್ನ್ಯಾದಿಗಳನ್ನು ಸೇರುತ್ತವೆ—ಎಂಬ ಶ್ರುತಿಯನ್ನು (ಬೃ. ಉ. ೩. ೨. ೧೩) ಮುಖ್ಯಾರ್ಥದಲ್ಲಿ ಗ್ರಹಿಸಕೂಡದು, ಗೌಣವಾಗಿಯೇ ಗ್ರಹಿಸಬೇಕು.

ದ್ವೈ.—ಬೃಹದಾರಣ್ಯಕಶ್ರುತಿಯ (೩. ೨. ೧೩) ಪ್ರಕಾರ ಪ್ರಾಣಗಳು ಜೀವನೊಂದಿಗೆ ಹೋಗುವುದಿಲ್ಲವೆಂದು ಹೇಳಕೂಡದು; ಏಕೆಂದರೆ ಪ್ರಾಣಗಳು ಒಂದು ಅಂಶ

---

* ಇದು ಮಧ್ವಭಾಷ್ಯದಲ್ಲಿ ಅಗ್ನ್ಯಾದ್ಯಧಿಕರಣ ಎಂಬ ಅಧಿಕರಣವಾಗಿದೆ.

[1] ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಃ ।

ದಿಂದ ಅಗ್ನ್ಯಾದಿಗಳನ್ನು ಸೇರುತ್ತವೆ, ಮತ್ತೊಂದು ಅಂಶದಿಂದ ಜೀವನೊಂದಿಗೆ ಹೋಗುತ್ತವೆ.[1]

## ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ* ॥ ೫ ॥

೫. ಪ್ರಥಮಾಗ್ನಿಯಲ್ಲಿ (ನೀರಿನ) ಶ್ರವಣವಿಲ್ಲದುದರಿಂದ (ಇದು ಸರಿಯಲ್ಲ) ಎಂದರೆ ನಾವು ಒಪ್ಪುವುದಿಲ್ಲ ; ಏಕೆಂದರೆ ಅದೇ (ನೀರನ್ನೇ ಅಲ್ಲಿಯೂ ಹೇಳಿದೆ) ; (ಅದು) ಹೊಂದುವುದರಿಂದ (ಯುಕ್ತವಾಗಿರುತ್ತದೆ).

ಶ್ರುತಿಯು[2] (ಛಾಂ. ಉ ೫. ೪. ೨) ಮೊದಲನೆಯ ಅಗ್ನಿಯಲ್ಲಿ ಶ್ರದ್ಧೆಯೇ ಹೋಮದ್ರವ್ಯವೆಂದು ಹೇಳಿರುವುದೇ ಹೊರತು ನೀರನ್ನು ಹೋಮದ್ರವ್ಯವೆಂದು ಹೇಳಿಲ್ಲ —ಎಂದು ಆಕ್ಷೇಪಿಸಿದರೆ, ನೀರೇ ಶ್ರದ್ಧೆ ಎಂಬ ಶಬ್ದದಿಂದ ಅಭಿಪ್ರೇತವಾಗಿರುತ್ತದೆ— ಎಂಬುದು ನಮ್ಮ ಉತ್ತರ ; ಏಕೆಂದರೆ ಶ್ರದ್ಧಾಶಬ್ದದಿಂದ ನೀರನ್ನು ಗ್ರಹಿಸಿದರೆ ಮಾತ್ರ ಶ್ರುತಿಯ ಆದಿಮಧ್ಯಾವಸಾನಗಳು ಹೊಂದಿಕೊಂಡು ಯಾವ ಆತಂಕವಿಲ್ಲದೆ ಏಕವಾಕ್ಯವಾಗುತ್ತದೆ. ಹೀಗಾದರೆ ನೀರಿನ ಸ್ಥಾನದಲ್ಲಿ ಶ್ರದ್ಧೆಯನ್ನೇ ಮುಖ್ಯಾರ್ಥದಲ್ಲಿ ಗ್ರಹಿಸಿದರೆ ಪ್ರಶ್ನೋತ್ತರಗಳು ಬೇರೆಬೇರೆಯಾಗಿ ಏಕವಾಕ್ಯವಾಗುವುದಿಲ್ಲ. ಶ್ರದ್ಧಾಕಾರ್ಯವಾದ ಸೋಮ, ವೃಷ್ಟಿ, ಮೊದಲಾದದ್ದು ಸ್ಥೂಲವಾಗುವಾಗ ಅದರಲ್ಲಿ ನೀರು ಬಹುಳವಾಗಿರುವುದು ಕಂಡುಬರುತ್ತದೆ ; ಆದುದರಿಂದ ಶ್ರದ್ಧೆಯು ನೀರೆಂಬುದಕ್ಕೆ ಇದು ಯುಕ್ತಿಯಾಗಿದೆ; ಏಕೆಂದರೆ ಕಾರ್ಯವು ಕಾರಣದ ಅನುರೂಪವಾಗಿರುತ್ತದೆ. ಮತ್ತೆ ಮನಸ್ಸಿನ ಅಥವಾ ಜೀವನ ಧರ್ಮವಾದ ಶ್ರದ್ಧೆಯೆಂಬುದನ್ನು ಧರ್ಮಿಯಿಂದ ಎಳೆದುಕೊಂಡು ಹೋಮಕ್ಕೆ ದ್ರವ್ಯವಾಗಿ ಉಪಯೋಗಿಸಲು ಸಾಧ್ಯವಿಲ್ಲ. ಶ್ರದ್ಧಾಶಬ್ದವು ನೀರಿನಲ್ಲಿಯೂ ಉಪಪನ್ನವಾಗುತ್ತದೆ ; ಏಕೆಂದರೆ 'ಶ್ರದ್ಧೆಯೇ ನೀರು'[3] (ತೈ. ಸಂ. ೧. ೬. ೮. ೧) ಎಂಬ ವೈದಿಕ-ಪ್ರಯೋಗವಿದೆ. ನೀರು ತನುತ್ವವೆಂಬ ಶ್ರದ್ಧಾಸಾರೂಪ್ಯವನ್ನು ಹೊಂದಿ ದೇಹಕ್ಕೆ ಬೀಜವಾಗುವುದರಿಂದಲೂ ಅದು ಶ್ರದ್ಧೆಯೆಂದು ಕರೆಯಲ್ಪಡುತ್ತದೆ ; ಸಿಂಹದಂತೆ ಪರಾಕ್ರಮವುಳ್ಳವನು ಸಿಂಹಶಬ್ದದಿಂದ ಕರೆಯಲ್ಪಡುವಂತೆ. ಪುನಃ ಶ್ರದ್ಧೆಯಿಂದ ಮಾಡುವ ಕರ್ಮದ ಸಂಬಂಧವಿರುವುದರಿಂದಲೂ ನೀರಿನಲ್ಲಿ ಶ್ರದ್ಧಾಶಬ್ದವು ಉಪಪನ್ನವಾಗುತ್ತದೆ. ಶ್ರದ್ಧೆಗೆ

---

1 ಭಾಗತೋಽಗ್ನ್ಯಾದಿಪ್ರಾಪ್ತೇಃ ।
ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು ।
ಅಧಿದೈವಂ ಪ್ರಾಪ್ನುವಂತಿ ಭಾಗತೋಽನುವ್ರಜಂತಿ ತಮ್ (ಮ. ಭಾ.).

* ಇದು ಮಧ್ವಭಾಷ್ಯದಲ್ಲಿ ಪ್ರಥಮಶ್ರವಣಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

2 ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ।

3 ಶ್ರದ್ಧಾ ವಾ ಆಪಃ ।

ಕಾರಣವಾಗಿರುವುದರಿಂದಲೂ ನೀರಿನಲ್ಲಿ ಶ್ರದ್ಧಾಶಬ್ದವು ಹೊಂದುತ್ತದೆ: 'ಪುಣ್ಯಕರ್ಮವನ್ನು ಮಾಡುವುದಕ್ಕೆ ನೀರೇ ಇವನಿಗೆ ಶ್ರದ್ಧೆಯನ್ನುಂಟುಮಾಡುತ್ತದೆ'[1] ಎಂಬ ಶ್ರುತಿಯಿದೆ.

ವಿ.—ಅಲ್ಲಿ ನೀರನ್ನೇ ಶ್ರದ್ಧಾಶಬ್ದದಿಂದ ಕರೆದಿದೆ; ಹಾಗಾಗದಿದ್ದರೆ ಪ್ರಶ್ನಪ್ರತಿವಚನಗಳು ಹೊಂದುತ್ತಿರಲಿಲ್ಲ.

**ದೈ.**—ಪ್ರಸ್ತುತವಾದ ನೀರನ್ನೇ ಇಲ್ಲಿ ಶ್ರದ್ಧಾರೂಪದಿಂದ ಹೋಮ ಮಾಡಿದೆ; ಹೀಗಿದ್ದರೇನೆ **ಆಪಃ ಪುರುಷವಚಸೋ ಭವಂತಿ** (ಛಾಂ. ಉ ೫. ೯. ೧) ಎಂಬ ಉಪಸಂಹಾರವಾಕ್ಯವು ಹೊಂದುತ್ತದೆ.

**ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ*** ॥ ೬ ॥

೬. ಶ್ರುತಿಯಲ್ಲಿ ಹೇಳದೇ ಇರುವುದರಿಂದ (ಜೀವರು ನೀರಿನಿಂದ ಆವರಿಸಲ್ಪಟ್ಟು ಉತ್ಕ್ರಮಿಸುವುದಿಲ್ಲ) ಎಂದು ಹೇಳಿದರೆ ಅದು ಸರಿಯಲ್ಲ; ಏಕೆಂದರೆ ಇಷ್ಟಾದಿಗಳನ್ನು ಮಾಡುವವರು (ಸ್ವರ್ಗಕ್ಕೆ ಹೋಗುವರು) ಎಂದು (ಶ್ರುತಿಯಿಂದ) ತಿಳಿದುಬರುತ್ತದೆ.

ಪ್ರಶ್ನೋತ್ತರಗಳಿಂದ ನೀರು ಶ್ರದ್ಧಾದಿಕ್ರಮವಾಗಿ ಐದನೆಯ ಆಹುತಿಯಲ್ಲಿ ಪುರುಷಾಕಾರವನ್ನು ಪಡೆಯುತ್ತದೆ—ಎಂದು ಒಪ್ಪಿಕೊಂಡರೂ, ಜೀವರು ನೀರಿನಿಂದ ಆವರಿಸಲ್ಪಟ್ಟು ಹೋಗುತ್ತಾರೆಂದು ಶ್ರುತಿಯಲ್ಲಿ ಹೇಳಿಲ್ಲ; ಆದುದರಿಂದ ಜೀವನು ನೀರಿನಿಂದ ಆವರಿಸಲ್ಪಟ್ಟು ಹೋಗುತ್ತಾನೆ ಎಂದು ಹೇಳಿರುವುದು ಸರಿಯಲ್ಲ—ಎಂಬ ಆಕ್ಷೇಪಕ್ಕೆ ಪರಿಹಾರ ಹೀಗಿದೆ: ಶ್ರುತಿಯಲ್ಲಿ (ಛಾಂ ಉ. ೫. ೧೦. ೩. ೪) ಇಷ್ಟಾಪೂರ್ತಾದಿಗಳನ್ನು ಮಾಡುವವರು ಧೂಮವೇ ಮೊದಲಾದ ಪಿತೃಯಾಣಮಾರ್ಗದಿಂದ ಚಂದ್ರನನ್ನು ಸೇರುತ್ತಾರೆಂದು ಹೇಳಿದೆ. ಇಲ್ಲಿಯೂ ಕೂಡ ಆ ಇಷ್ಟಾದಿಗಳನ್ನು ಮಾಡುವವರನ್ನೇ ಹೇಳಿದೆ. ಆಹವನೀಯದಲ್ಲಿ ಹೋಮಮಾಡಿದ ದ್ರವರೂಪವಾದ ಹಾಲು, ಮೊಸರು ಮೊದಲಾದ ಆಹುತಿಗಳು ಸೂಕ್ಷ್ಮವಾದ ಅಪೂರ್ವರೂಪವನ್ನು ಪಡೆದು ಆ ಇಷ್ಟಾದಿ-ಕಾರಿಯನ್ನು ಆಶ್ರಯಿಸುತ್ತವೆ. ಅನಂತರ ಅವನು ಮೃತನಾದಾಗ ಋತ್ವಿಕ್ಕುಗಳು **ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ**[2] ಎಂಬ ಮಂತ್ರದಿಂದ ಅವನ ಶರೀರವನ್ನು ಅಂತ್ಯಾಗ್ನಿಯಲ್ಲಿ ಹೋಮಮಾಡುತ್ತಾರೆ. ಅನಂತರ ಶ್ರದ್ಧೆಯಿಂದ ಉತ್ಪನ್ನವಾದ ಕರ್ಮಕ್ಕೆ ಸಂಬಂಧಪಟ್ಟ ಆಹುತಿಮಯವಾದ ಆ ನೀರು ಅಪೂರ್ವವೆಂಬ ರೂಪವನ್ನು ಪಡೆದುಕೊಂಡು, ಇಷ್ಟಾದಿ-

---

[1] ಆಪೋ ಹಾಸ್ಮೈ ಶ್ರದ್ಧಾಂ ಸಂನಮಂತೇ ಪುಣ್ಯಾಯ ಕರ್ಮಣೇ।

* ಇದು ಮಧ್ವಭಾಷ್ಯದಲ್ಲಿ ಅಶ್ರುತತ್ವಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

[2] 'ಇವನು ಸ್ವರ್ಗಕ್ಕೆ ಹೋಗಲಿ, ಸ್ವಾಹಾ.'

ಕಾರಿಗಳಾದ ಜೀವರನ್ನು ಪರಿವೇಷ್ಟಿಸಿ ಫಲವನ್ನು ಕೊಡುವುದಕ್ಕಾಗಿ ಆ ಲೋಕಕ್ಕೆ ಒಯ್ಯುತ್ತದೆ[1] ಅದನ್ನೇ ಇಲ್ಲಿ 'ಶ್ರದ್ಧೆಯನ್ನು ಹೋಮಮಾಡುತ್ತಾರೆ' (ಛಾಂ ಉ ೫ ೪ ೨) ಎಂದು ಹೇಳಿದೆ ಆದುದರಿಂದ ಆಹುತಿಮಯವಾದ ನೀರಿನಿಂದ ಪರಿಷ್ವಕ್ತರಾದ ಜೀವರು ಸ್ವಕರ್ಮಫಲಭೋಗಕ್ಕಾಗಿ ಹೋಗುತ್ತಾರೆ—ಎಂಬುದು ಸರಿಯಾಗಿದೆ

ವಿ —'ಆ ಅಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ ಆ ಆಹುತಿಯಿಂದ ಸೋಮರಾಜನು ಹುಟ್ಟುತ್ತಾನೆ' (ಛಾಂ ಉ ೫ ೪ ೨) ಎಂಬುದರ ಅರ್ಥವು ಹೀಗಿದೆ ಶ್ರದ್ಧಾನಸಾಧದೇಹದಿಂದ ವಿಶಿಷ್ಟನಾದವನು ಸೋಮರೂಪದೇಹದಿಂದ ವಿಶಿಷ್ಟನಾಗುತ್ತಾನೆ ಜೀವವಿಶೇಷಣವೇ ತನ್ನ ಸ್ವರೂಪವೆಂದು ಸೂಚಿಸುವ ಶರೀರಶಬ್ದವು ತನ್ನ ವಿಶೇಷ್ಯವಾದ ಜೀವನಲ್ಲಿ ಪರ್ಯವಸಾನವನ್ನು ಹೊಂದುತ್ತದೆ ಆದುದರಿಂದ ನೀರಿನಿಂದ ಸಂಪರಿಷ್ವಕ್ತನಾಗಿ ಹೋಗುತ್ತಾನೆ—ಎಂಬುದು ಯುಕ್ತವಾಗಿರುತ್ತದೆ

ದ್ವೈ.—'ಯಜಮಾನನನ್ನು ಯಾವುದು ಬಿಡುವುದಿಲ್ಲ? ಭೂತಗಳೇ, ಭೂತಗಳೊಂದಿಗೆ ಅವನು ಹೋಗುತ್ತಾನೆ ಮತ್ತು ಭೋಗಿಸುತ್ತಾನೆ, ಭೂತಗಳೊಂದಿಗೆ ಅವನು ಹುಟ್ಟುತ್ತಾನೆ ಮತ್ತು ಒಳ್ಳೆಯದೂ ಕೆಟ್ಟದೂ ಆದ ಕೆಲಸಗಳನ್ನು ಮಾಡುತ್ತಾನೆ' ಎಂಬ ಕೌಂಡಿನ್ಯಶ್ರುತಿಯ ಪ್ರಕಾರ ಇಷ್ಟಾದಿ-ಕಾರಿಯು ಭೂತಗಳೊಂದಿಗೆ ಹೋಗುತ್ತಾನೆ

**ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ* ॥ ೭ ॥**

೭ (ಇಷ್ಟಾದಿ-ಕಾರಿಗಳು ದೇವತೆಗಳ ಅನ್ನವೆಂಬುದು) ಔಪಚಾರಿಕವೇ, ಏಕೆಂದರೆ (ಅವರು) ಅನಾತ್ಮಜ್ಞರು, ಹೀಗೆ (ಶ್ರುತಿಯು) ಹೇಳುತ್ತದೆ

'ಇವನು ದೇವತೆಗಳಿಗೆ ಅನ್ನವು ಇವನನ್ನು ದೇವತೆಗಳು ತಿನ್ನುತ್ತಾರೆ'[2] (ಛಾಂ ಉ ೫ ೧೦ ೪) ಎಂದು ಶ್ರುತಿಯು ಹೇಳುತ್ತದೆ ಇವರೇ ದೇವತೆಗಳಿಗೆ ಆಹಾರವಾಗಿರುವಾಗ ತಮ್ಮ ಕರ್ಮಫಲವನ್ನು ಹೇಗೆ ಭೋಗಿಸುತ್ತಾರೆ_ಎಂಬುದು ಆಕ್ಷೇಪ, ಇದಕ್ಕೆ ಪರಿಹಾರವನ್ನು ಸೂತ್ರವೇ ಹೇಳುತ್ತದೆ ಇವರಿಗೆ ಅನ್ನತ್ವವುಂಟಾಗಿರುವುದು—ಎಂಬುದು ಔಪಚಾರಿಕವೇ ಹೊರತು ಮುಖ್ಯಾರ್ಥದಲ್ಲಲ್ಲ ಭೋಗಕ್ಕೆ ಕಾರಣವಾದುದೆಲ್ಲವನ್ನೂ ಸಾಮಾನ್ಯವಾಗಿ ಅನ್ನಶಬ್ದವು ಸೂಚಿಸುತ್ತದೆ, ಆದುದರಿಂದ ಇಲ್ಲಿಯೂ ಅನ್ನವಲ್ಲದ ವಸ್ತುವಿನಲ್ಲಿ ಆ ಶಬ್ದವನ್ನು ಉಪಚಾರಕ್ಕಾಗಿ ಪ್ರಯೋಗಿಸಿರುವುದು ಕಂಡುಬರುತ್ತದೆ 'ದೇವತೆಗಳು ತಿನ್ನುವುದೂ ಇಲ್ಲ, ಕುಡಿಯುವುದೂ ಇಲ್ಲ, ಈ ಅಮೃತವನ್ನು ನೋಡಿಯೇ

---

1 ತಾಃ ಶ್ರದ್ಧಾಪೂರ್ವಕಕರ್ಮಸಮವಾಯಿನ್ಯ ಆಹುತಿಮಯ್ಯ ಆಪೋಽಪೂರ್ವರೂಪಾಃ ಸತ್ಯಸ್ತಾನಿಷ್ಟಾದಿಕಾರಿಣೋ ಜೀವಾನ್ ಪರಿವೇಷ್ಟ್ಯಾಮುಂ ಲೋಕಂ ಫಲದಾನಾಯ ನಯಂತಿ (ಸೂ ಭಾ ).

* ಇದು ಮಧ್ವಭಾಷ್ಯದಲ್ಲಿ ಭಾಕ್ತಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ

2 ತದ್ದೇವಾನಾಮನ್ನಂ ತಂ ದೇವಾ ಭಕ್ಷಯಂತಿ । ಬೃ. ಉ. ೬ ೨. ೧೬ ನೋಡಿ

ತೃಪ್ತರಾಗುತ್ತಾರೆ'[1] (ಛಾಂ ಉ ೩ ೬ ೧) ಎಂದು ಶ್ರುತಿಯು ಹೇಳುತ್ತದೆ ಇಷ್ಟಾದಿ-ಕಾರಿಗಳು ಆತ್ಮನನ್ನು ಅರಿಯದಿರುವುದರಿಂದ ಅವರು ದೇವತೆಗಳಿಗೆ ಭೋಗ್ಯರಾಗಿರುವುದು ಯುಕ್ತವೇ 'ಯಾವನು "ಇವನು ಬೇರೆ, ನಾನು ಬೇರೆ" ಎಂದು ಬೇರೆ ದೇವತೆಗಳನ್ನು ಉಪಾಸಿಸುತ್ತಾನೆಯೋ ಅವನು ಅರಿಯನು ಅವನು ದೇವತೆಗಳಿಗೆ ಪಶುವು ಹೇಗೋ ಹಾಗೆ'[2] (ಬೃ ಉ ೧ ೪ ೧೦) ಎಂದು ಶ್ರುತಿಯು ಹೇಳುತ್ತದೆ ಉಪಾಸಕನು ಈ ಲೋಕದಲ್ಲಿ ಇಷ್ಟಾದಿಕರ್ಮದಿಂದ ದೇವತೆಗಳನ್ನು ಸಂತೋಷಪಡಿಸುತ್ತ ಅವರಿಗೆ ಪಶುವಿನಂತೆ ಉಪಕಾರವನ್ನು ಮಾಡುವಂತೆ ಪರಲೋಕದಲ್ಲಿಯೂ ಅವರ ಉಪಜೀವಿಯಾಗಿ ಅವರಿಗೆ ಉಪಕಾರವನ್ನು ಮಾಡುತ್ತಿರುತ್ತಾನೆ ಎಂದರ್ಥ

**ಅನಾತ್ಮವಿತ್ತ್ವಾತ್ ತಥಾ ಹಿ ದರ್ಶಯತಿ** ಎಂಬ ಸೂತ್ರಭಾಗಕ್ಕೆ ಇನ್ನೊಂದು ವಿಧವಾದ ವ್ಯಾಖ್ಯಾನವನ್ನೂ ಮಾಡಬಹುದು ಈ ಇಷ್ಟಾದಿಕಾರಿಗಳು ಕೇವಲ ಕರ್ಮಿಗಳಾಗಿರುವುದರಿಂದ ಅನಾತ್ಮವಿದರಾಗಿರುತ್ತಾರೆ, ಜ್ಞಾನಕರ್ಮಸಮುಚ್ಚಯವನ್ನು ಅನುಷ್ಠಿಸಿದವರಲ್ಲ—ಎಂದರ್ಥ ಪಂಚಾಗ್ನಿವಿದ್ಯೆಯನ್ನೇ ಇಲ್ಲಿ ಆತ್ಮವಿದ್ಯೆಯೆಂದು ಉಪಚಾರದಿಂದ ಕರೆದಿರುತ್ತದೆ, ಏಕೆಂದರೆ ಅದು ಪ್ರಕರಣವಾಗಿರುತ್ತದೆ ಆದುದರಿಂದ ಜೀವರು ಭೂತಸೂಕ್ಷ್ಮಪರಿವೇಷ್ಟಿತರಾಗಿಯೇ ಹೋಗುತ್ತಾರೆಂಬುದು ಸಿದ್ಧವಾಯಿತು

**ವಿ.**—ಆತ್ಮಜ್ಞಾನಿಗಳು ಬ್ರಹ್ಮವನ್ನು ಹೊಂದುತ್ತಾರೆಂದು ಅನಾತ್ಮಜ್ಞಾನಿಗಳು ದೇವತೆಗಳಿಗೆ ಭೋಗ್ಯರಾಗುತ್ತಾರೆಂದೂ ಸ್ಮೃತಿಯೂ[3] (ಗೀತಾ ೭ ೨೩) ಹೇಳುತ್ತದೆ 'ದೇವತೆಗಳನ್ನು ಆರಾಧಿಸುವವರು ದೇವತೆಗಳನ್ನು ಹೊಂದುತ್ತಾರೆ, ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ' ಜೀವನು ದೇವತೆಗಳಿಗೆ ಭೋಗೋಪಕರಣವಾಗಿರುವುದೇ ಅವರ 'ತಿನ್ನುವಿಕೆ' ಆದುದರಿಂದ ಭೂತಸೂಕ್ಷ್ಮಗಳಿಂದ ಪರಿವೇಷ್ಟಿತನಾಗಿಯೇ ಜೀವನು ಹೋಗುತ್ತಾನೆ—ಎಂಬುದು ಸಿದ್ಧವಾಯಿತು

**ದ್ವೈತ**—ಹಾಗಾದರೆ 'ನಾವು ಸೋಮವನ್ನು ಕುಡಿದೆವು, ಅಮೃತರಾದೆವು'[4] ಎಂಬ ಶ್ರುತಿಗೆ (ಋ ವೇ ೮ ೪೮ ೩) ನಿಮ್ಮ ಅಭಿಪ್ರಾಯವು ವಿರೋಧವಾಗುತ್ತದೆಯಲ್ಲ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಕಾಮ್ಯಕರ್ಮಿಗೆ ಕರ್ಮದಿಂದ ಆಗುವ ಅಮೃತತ್ವವು ಮಿತಕಾಲದಲ್ಲಿ ಆಗುವ ಸ್ವರ್ಗಸುಖವೇ ಹೊರತು ನಿಜವಾದ ಮುಕ್ತಿಯಲ್ಲ, ಏಕೆಂದರೆ **ನಾನ್ಯಃ ಪಂಥಾ ಅಯನಾಯ ವಿದ್ಯತೇ** (ಶ್ವೆ ೮ ೩ ೧೩) ಎಂದು ಶ್ರುತಿಯು ಹೇಳುತ್ತದೆ ಮೂಲದಲ್ಲಿರುವ 'ಅಥವಾ' ಎಂಬ ಶಬ್ದವು ಆತ್ಮಜ್ಞಾನದಿಂದ ಕೂಡಿ ಕರ್ಮವನ್ನು ಮಾಡುವವರು ಪರೋಕ್ಷವಾಗಿ ಅಮೃತತ್ವವನ್ನು ಹೊಂದುತ್ತಾರೆಂದು ಸೂಚಿಸುತ್ತದ

---

1 ನ ಹ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ।

2 ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ, ನ ಸ ವೇದ, ಯಥಾ ಪಶುರೇವಂ ಸ ದೇವಾನಾಂ ।

3 ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ।

4 ಅಪಾಮ ಸೋಮಮಮೃತಾ ಅಭೂಮ (ಮ ಭಾ )

## ೨. ಕೃತಾತ್ಯಯಾಧಿಕರಣ

(ಸೂ. ೮—೧೧)

**ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮ- ನೇವಂಚ* ॥ ೮ ॥**

೮. ಕರ್ಮಕ್ಷಯವಾಗಲು ಅನುಶಯದಿಂದ ಕೂಡಿ (ಜೀವನು ಕೆಳಗಿಳಿಯುತ್ತಾನೆ); ಏಕೆಂದರೆ ಶ್ರುತಿಸ್ಮೃತಿಗಳಿವೆ. ಹೋದ ಮಾರ್ಗದಿಂದಲೂ ಬೇರೆ ಪ್ರಕಾರದಿಂದಲೂ (ಇಳಿಯುತ್ತಾನೆ).

'ಅಲ್ಲಿ ಸಂಪಾತವಾಗುವವರೆಗೂ (ಎಂದರೆ ಕರ್ಮಕ್ಷಯವಾಗುವವರೆಗೂ) ಇದ್ದು ಅನಂತರ ಬಂದ ಮಾರ್ಗದಿಂದಲೇ ಪುನಃ ಹಿಂತಿರುಗುವರು'[1] (ಛಾಂ. ಉ. ೫. ೧೦. ೫) ಎಂಬಲ್ಲಿಂದ ಪ್ರಾರಂಭಿಸಿ, ರಮಣೀಯಚರಣರು (ಪುಣ್ಯಕರ್ಮವನ್ನು ಮಾಡಿದವರು) ಪುಣ್ಯಯೋನಿಯನ್ನಾಗಲಿ ಕಪೂಯಚರಣರು (ಕೆಟ್ಟಕರ್ಮವನ್ನು ಮಾಡಿದವರು) ಕೆಟ್ಟ ಯೋನಿಯನ್ನಾಗಲಿ ಪಡೆಯುತ್ತಾರೆ (ಛಾಂ. ಉ. ೫. ೧೦. ೭) ಎಂಬುವವರೆಗೆ ಇಷ್ಟಾದಿ ಕಾರಿಗಳು ಧೂಮಾದಿಮಾರ್ಗದಿಂದ ಚಂದ್ರಮಂಡಲವನ್ನು ಏರಿ ಭೋಗಗಳನ್ನು ಅನುಭವಿಸಿದಮೇಲೆ ಕೆಳಕ್ಕಿಳಿಯುವರು—ಎಂದು ಶ್ರುತಿಯು ಹೇಳುತ್ತದೆ. ಅಲ್ಲಿ ಕರ್ಮವೆಲ್ಲವನ್ನೂ ಮುಗಿಸಿ ಇಳಿಯುತ್ತಾರೆಯೋ ಅಥವಾ ಅನುಶಯವೆಂಬ ಕರ್ಮಶೇಷಸಹಿತವಾಗಿ ಇಳಿಯುತ್ತಾರೆಯೋ—ಎಂಬುದು ಸಂಶಯ.

**ಪೂರ್ವಪಕ್ಷಿ**—ಯಾವ ಅನುಶಯವೂ ಇಲ್ಲದೆ ಇಳಿಯುತ್ತಾರೆ; ಏಕೆಂದರೆ 'ಸಂಪಾತವಾಗುವವರೆಗೂ' ಎಂಬ ವಿಶೇಷಣವಿದೆ; ಇಲ್ಲಿ ಸಂಪಾತಶಬ್ದದಿಂದ ಕರ್ಮಾನುಶಯವನ್ನು ಹೇಳಿದೆ. ಮತ್ತೆ 'ಇಹಲೋಕದಲ್ಲಿ ಯಾವ ಕರ್ಮವನ್ನು ಮಾಡುವನೋ ಅದರ ಅಂತವನ್ನು ಅನುಭವಿಸಿಕೊಂಡು ಅಲ್ಲಿಂದ ಪುನಃ ಈ ಲೋಕಕ್ಕೆ (ಹೊಸ) ಕರ್ಮಕ್ಕಾಗಿ ಹಿಂತಿರುಗುತ್ತಾನೆ' (ಬೃ. ಉ. ೪. ೪. ೬) ಎಂಬ ಇನ್ನೊಂದು ಶ್ರುತಿಯೂ ಇದೆ. ಇದಲ್ಲದೆ ಮೃತ್ಯುವು ಆರಂಭವಾಗದ ಫಲವುಳ್ಳ ಕರ್ಮವನ್ನು ಅಭಿವ್ಯಂಜಿಸುವುದು; ಏಕೆಂದರೆ ಮೃತ್ಯುವಿಗೆ ಮೊದಲು ಆರಬ್ಧಫಲವುಳ್ಳ ಕರ್ಮವು ಪ್ರತಿಬಂಧಕವಾಗಿರುವುದರಿಂದ ಅದು ಅಭಿವ್ಯಕ್ತವಾಗಲು ಸಾಧ್ಯವಿಲ್ಲ.

---

* ಯಥೇತಮನೇವಂ ಚ ಎಂಬ ಸೂತ್ರಭಾಗವು ಮಧ್ವಭಾಷ್ಯದಲ್ಲಿ ಯಥೇತಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

1 ತಸ್ಮಿನ್ ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತಂತೇ ಯಥೇತಮ್ (ಸೂ. ಭಾ.).

**ಸಿದ್ಧಾಂತಿ**—ಯಾವ ಕರ್ಮಸ್ವಂಪದಿಂದ ಜೀವನು ಫಲೋಪಭೋಗಕ್ಕಾಗಿ ಚಂದ್ರನನ್ನು ಏರಿದ್ದನೊ ಅದು ಉಪಭೋಗದಿಂದ ಕ್ಷಯವಾಗಲಾಗಿ ಅನುಶಯ ಸಹಿತವಾಗಿ ಈ ಲೋಕಕ್ಕೆ ಇಳಿಯುತ್ತಾನೆ, ಇದನ್ನೇ ಶ್ರುತಿಯೂ (ಛಾಂ ಉ ೫ ೧೦ ೭) ಹೇಳಿರುತ್ತದೆ 'ಸ್ವಕರ್ಮನಿಷ್ಠರಾದ ವರ್ಣಾಶ್ರಮಿಗಳು ಮೃತರಾದಮೇಲೆ ಕರ್ಮಫಲವನ್ನು ಅನುಭವಿಸಿ, ಅನಂತರ ಉಳಿದ (ಎಂದರೆ ಅನುಭವಿಸಿದ ಕರ್ಮದ ಫಲವಾಗಿ) ವಿಶಿಷ್ಟವಾದ ದೇಶ ಜಾತಿ ಕುಲ ರೂಪ ಆಯುಸ್ಸು ಜ್ಞಾನ ನಡತೆ ಧನ ಸುಖ ಮೇಧಸ್ಸು—ಇವುಗಳಿಂದ ಕೂಡಿ ಜನ್ಮವನ್ನು ಪಡೆಯುತ್ತಾರೆ'[1] (ಗೌ ಧ ಸೂ ೧೧ ೨೯) ಎಂದು ಸ್ಮೃತಿಯೂ ತಿಳಿಸುತ್ತದೆ ಆಮುಷ್ಮಿಕಫಲವುಳ್ಳ ಕರ್ಮಸಮೂಹವನ್ನು ಅನುಭವಿಸಿದ ಮೇಲೆ ಉಳಿದ ಐಹಿಕಫಲವುಳ್ಳ ಬೇರೆಯ ಕರ್ಮಸಮೂಹವೇ ಅನುಶಯವು[2] ಇಷ್ಟಾದಿಕಾರಿಗಳು ಇದರ ಸಹಿತ ಇಳಿಯುತ್ತಾರೆ ಮರಣಕಾಲವು ಅನಾರಬ್ಧವಾಗಿರುವ ಫಲವುಳ್ಳ ಕರ್ಮವನ್ನೆಲ್ಲ ಯಾವ ವಿಶೇಷವೂ ಇಲ್ಲದೆ ಅಭಿವ್ಯಕ್ತಿಗೊಳಿಸುತ್ತದೆ—ಎಂಬುದೂ ಸರಿಯಲ್ಲ, ಏಕೆಂದರೆ ವಿರುದ್ಧಫಲಗಳುಳ್ಳ ಅನೇಕ ಕರ್ಮಗಳಿಗೆ ಒಂದೇ ಕಾಲದಲ್ಲಿ ಫಲವುಂಟಾಗುವುದು ಅಸಂಭವವಾದುದರಿಂದ ಪ್ರಬಲಕರ್ಮದಿಂದ ಪ್ರತಿಬದ್ಧವಾದ ದುರ್ಬಲ-ಕರ್ಮಕ್ಕೆ ವೃತ್ತಿಯುಂಟಾಗಲಾರದು ಎಂದು ಹೇಳಬೇಕಾಗುತ್ತದೆ ಸ್ವರ್ಗಾರ್ಥವಾದ ಕರ್ಮಫಲವನ್ನು ಅನುಭವಿಸಿ ಉಳಿದ ಯಾವುದೋ ಒಂದು ಭಾಗವು ಅನುಶಯವೆಂದು ಹೇಳುವುದೂ ಸರಿಯಲ್ಲ, ಏಕೆಂದರೆ ಸಮ್ಯಗ್ದರ್ಶನದಿಂದ ಕರ್ಮವೆಲ್ಲ ಕ್ಷಯವಾಗುವುದೆಂದು ಶ್ರುತಿಯು ಹೇಳುತ್ತದೆ ಇಷ್ಟಾದಿಕಾರಿಗಳು ಇಳಿಯುವಾಗ ಹೋದಂತೆಯೂ ಇಳಿಯಬಹುದು, ಬೇರೆ ವಿಧದಿಂದಲೂ ಇಳಿಯಬಹುದು

**ವಿ.**—ಇಷ್ಟಾದಿಕಾರಿಯು ಅನುಶಯದೊಂದಿಗೆ ಇಳಿಯುತ್ತಾನೆಂಬುದು ಶ್ರುತಿ (ಬೃ ಉ ೫ ೧೦ ೭), ಸ್ಮೃತಿ (ಗೌ ಧ ಸೂ ೧೧. ೨೯), ಇವುಗಳಿಂದ ತಿಳಿದುಬರುತ್ತದೆ

**ದ್ವೈತ** —ಮಾಡಿದ ಕರ್ಮವು ಭೋಗದಿಂದ ಕ್ಷಯವಾದಾಗ ಮುಕ್ತಿಯಾಗುತ್ತದೆ—ಎಂದು ಹೇಳಲಾಗುವುದಿಲ್ಲ, ಶ್ರುತಿ ಸ್ಮೃತಿಗಳ[3] ಪ್ರಕಾರ ಸ್ವರ್ಗಾದಿಭೋಗದಿಂದ ಕರ್ಮಕ್ಷಯವಾದ ಮೇಲೆ ಜೀವನು ಕರ್ಮಶೇಷವುಳ್ಳವನಾಗಿಯೇ ಬರುತ್ತಾನೆ

---

1 ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲರೂಪಾಯುಃ ಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿ-ಪದ್ಯಂತೇ ।

2 ತಸ್ಮಾದಾಮುಷ್ಮಿಕಫಲೇ ಕರ್ಮಜಾತ ಉಪಭುಕ್ತೇಽವಶಿಷ್ಟಮೈಹಿಕಫಲಂ ಕರ್ಮಾಂತರಜಾತಮನುಶಯಸ್ತದ್ವಂತೋಽವರೋಹಂತೀತಿ (ಸೂ ಭಾ )

3 ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ ಪುನರ್ಗಚ್ಛತಿ ಪುನರಾಗಚ್ಛತಿ— ಎಂಬುದು ಶ್ರುತಿ, ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ— ಎಂಬುದು ಸ್ಮೃತಿ

**ಚರಣಾದಿತಿ ಚೇನ್ನೋಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ*** || ೯ ||

೯ ಚರಣದ ದೆಸೆಯಿಂದ (ಯೋನಿಯನ್ನು ಪಡೆಯುತ್ತಾರ, ಅನುಶಯದಿಂದಲ್ಲ) ಎಂದು ಹೇಳಿದರೆ, ಅದು ಸರಿಯಲ್ಲ, ಏಕೆಂದರೆ (ಈ ಚರಣಶ್ರುತಿಯು) ಉಪಲಕ್ಷಣಾರ್ಥವಾಗಿರುತ್ತದೆ ಎಂದು ಕಾರ್ಷ್ಣಾಜಿನಿಯು (ಅಭಿಪ್ರಾಯಪಡುತ್ತಾನೆ)

**ತದ್ಯ ಇಹ ರಮಣೀಯಚರಣಾಃ**—(ಛಾಂ ಉ ೫ ೧೦ ೭) ಎಂಬಲ್ಲಿ ಚರಣದಿಂದ (ಎಂದರೆ ಆಚಾರದಿಂದ ಅಥವಾ ಶೀಲದಿಂದ) ಯೋನಿಯನ್ನು ಪಡೆಯುತ್ತಾರೆ, ಎಂದು ಹೇಳಿದೆಯೇ ಹೊರತು ಅನುಶಯದಿಂದಲ್ಲ—ಎಂಬುದು ಆಕ್ಷೇಪ, ಇದೇನೂ ದೋಷವಲ್ಲ, ಏಕೆಂದರೆ ಚರಣಶ್ರುತಿಯು ಅನುಶಯವನ್ನು ಸೂಚಿಸುವುದಕ್ಕೇ ಬಂದಿದೆ,[1] ಇದು ಕಾರ್ಷ್ಣಾಜಿನಿಯ ಅಭಿಪ್ರಾಯ

**ವಿ.**—ಚರಣಶಬ್ದವು ಆಚಾರವನ್ನು ಸೂಚಿಸುವುದಿಲ್ಲ, ಕಾರ್ಷ್ಣಾಜಿನಿಯ ಅಭಿಪ್ರಾಯದಂತೆ ಅದು ಕರ್ಮವನ್ನು ಸೂಚಿಸುತ್ತದೆ,[2] ಏಕೆಂದರೆ ಕೇವಲ ಆಚಾರದಿಂದ ಸುಖದುಃಖಗಳ ಪ್ರಾಪ್ತಿಯಾಗುವುದಿಲ್ಲ, ಪುಣ್ಯಪಾಪರೂಪವಾದ ಕರ್ಮಫಲದಿಂದ ಅವುಗಳ ಪ್ರಾಪ್ತಿಯಾಗುತ್ತದೆ

**ದ್ವೈ.**—ಕಾರ್ಷ್ಣಾಜಿನಿಯ ಅಭಿಪ್ರಾಯದ ಪ್ರಕಾರ ಚರಣಶ್ರುತಿಯು ಯಜ್ಞಾದಿಕರ್ಮಗಳನ್ನೂ ಸೂಚಿಸುತ್ತದೆ

**ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್** || ೧೦ ||

೧೦ (ಶೀಲವು) ವ್ಯರ್ಥವಾಯಿತಲ್ಲ—ಎಂದರ, ಅದು ಸರಿಯಲ್ಲ, ಏಕೆಂದರೆ (ಕರ್ಮವು ಶೀಲವನ್ನು) ಅಪೇಕ್ಷಿಸುತ್ತದೆ

ಚರಣಶಬ್ದವು ಶೀಲವೆಂಬ ಪ್ರಸಿದ್ಧಾರ್ಥವನ್ನು ಬಿಟ್ಟು ಅನುಶಯವನ್ನು ಏಕೆ ತಿಳಿಸಬೇಕು? ವಿಹಿತ-ಪ್ರತಿಷಿದ್ಧವಾದ ಸಾಧು-ಅಸಾಧುರೂಪವಾದ ಶೀಲದಿಂದಲೇ ಶುಭಾಶುಭಯೋನಿಗಳು ಉಂಟಾಗುತ್ತವೆಯಲ್ಲವೆ? ಶೀಲಕ್ಕೆ ಅವಶ್ಯವಾದ ಒಂದು ಫಲವನ್ನು ಒಪ್ಪದಿದ್ದರೆ ಅದು ವ್ಯರ್ಥವಾಗುತ್ತದೆ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಇದರಲ್ಲಿ ದೋಷವಿಲ್ಲ, ಇಷ್ಟಾದಿಕರ್ಮಸಮೂಹವು ಶೀಲವನ್ನು ಅಪೇಕ್ಷಿಸುತ್ತದೆ, ಏಕೆಂದರೆ ಸದಾ-

---

* ಶ್ರೀಭಾಷ್ಯದಲ್ಲಿ ಉದಾಹರಿಸಿರುವ ಸೂತ್ರದ ಪ್ರಕಾರ ಉಪಲಕ್ಷಣಾರ್ಥೇತಿ ಎಂಬ ಸೂತ್ರಭಾಗಕ್ಕೆ ಮೊದಲು ತತ್ ಎಂಬ ಶಬ್ದವು ಬಂದಿದೆ ಮಧ್ವಭಾಷ್ಯದಲ್ಲಿ ಇಲ್ಲಿಂದ ಚರಣಾಧಿಕರಣ ಪ್ರಾರಂಭವಾಗಿದೆ

[1] ಯತೋಽನುಶಯೋಪಲಕ್ಷಣಾರ್ಥೈವೈಷಾ ಚರಣಶ್ರುತಿಃ (ಸೂ ಭಾ )

[2] ಚರಣಶ್ರುತಿಃ ಕರ್ಮೋಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿರಾಚಾರ್ಯೋ ಮನ್ಯತೇ (ಶ್ರೀಭಾಷ್ಯ)

ಚಾರಹೀನನಾದವನು ಕರ್ಮಕ್ಕೆ ಅಧಿಕಾರಿಯಾಗುವುದಿಲ್ಲ 'ವೇದಗಳು ಆಚಾರಹೀನನಾದವನನ್ನು ಪವಿತ್ರಗೊಳಿಸಲಾರವು'[1] ಎಂದು ವಸಿಷ್ಠಸ್ಮೃತಿಯು (೬ ೩) ಹೇಳುತ್ತದೆ ಕರ್ಮದಿಂದ ಪುನರ್ಜನ್ಮವು ಸಂಭವಿಸುತ್ತಿರುವಾಗ ಶೀಲವು ಅದಕ್ಕೆ ಕಾರಣವೆಂದು ಕಲ್ಪಿಸಬೇಕಾಗಿಲ್ಲ; ಮನುಷ್ಯನು ಕಾಲಿನಿಂದ ಪಲಾಯನಮಾಡಲು ಶಕ್ತನಾಗಿರುವಾಗ ಮೊಳಕಾಲುಗಳಿಂದ ತೆವಳುವುದಿಲ್ಲ[2]

ವಿ.—ಆಚಾರವು ವ್ಯರ್ಥವಾಗುವುದಿಲ್ಲ, ಏಕೆಂದರೆ ಆಚಾರವಂತನಿಗೆ ಪುಣ್ಯಕರ್ಮದಲ್ಲಿ ಅಧಿಕಾರವಿದ 'ಸಂಧ್ಯಾಹೀನನೂ ಅಶುಚಿಯೂ ಆದವನು ಸರ್ವಕರ್ಮಗಳಲ್ಲಿಯೂ ಯಾವಾಗಲೂ ಅನರ್ಹನು'[3] ಎಂದು ಸ್ಮೃತಿಯು ಹೇಳುತ್ತದೆ ಆದುದರಿಂದ ಚರಣಶ್ರುತಿಯು ಕರ್ಮವನ್ನು ಸೂಚಿಸುತ್ತದೆ—ಎಂಬುದು ಕಾರ್ಷ್ಣಾಜಿನಿಯ ಅಭಿಪ್ರಾಯವು

ದ್ವೈ.—ಕಾರ್ಷ್ಣಾಜಿನಿಯ ಅಭಿಪ್ರಾಯದ ಪ್ರಕಾರ ಚರಣಶ್ರುತಿಯು ಯಜ್ಞಾದಿಕರ್ಮಗಳನ್ನು ಸೂಚಿಸಿದರೆ ರಮಣೀಯ, ಕಪೂಯ ಎಂಬ ಶಬ್ದಗಳೇ ಸಾಕಾಗಿರುವುದರಿಂದ ಚರಣಶಬ್ದವು ವ್ಯರ್ಥವಾಯಿತು—ಎಂದು ಹೇಳಕೂಡದು, ಏಕೆಂದರೆ ಸಾಧುಕರ್ಮಗಳಿಗೆ ಆಚಾರದ ಅಪೇಕ್ಷೆಯಿರುವುದರಿಂದ ಚರಣಶಬ್ದವು ವ್ಯರ್ಥವಾಗುವುದಿಲ್ಲ

**ಸುಕೃತದುಷ್ಕೃತೇ ಏವೇತಿ ತು ಬಾದರಿಃ ॥ ೧೧ ॥**

೧೧ ಆದರೆ ಸುಕೃತ-ದುಷ್ಕೃತಗಳೇ (ಚರಣವೆಂದು) ಬಾದರಿಯು (ಅಭಿಪ್ರಾಯಪಡುತ್ತಾನೆ)

ಚರಣಶಬ್ದವು ಸುಕೃತ-ದುಷ್ಕೃತಗಳನ್ನೇ ತಿಳಿಸುತ್ತದೆಂದು ಆಚಾರ್ಯ ಬಾದರಿಯು ತಿಳಿಸುತ್ತಾನೆ ಚರಣ, ಅನುಷ್ಠಾನ, ಕರ್ಮ—ಇವೆಲ್ಲ ಒಂದೇ ಅರ್ಥವನ್ನು ತಿಳಿಸುತ್ತವೆ ಆದುದರಿಂದ ಚರಣಶಬ್ದವನ್ನು ಕರ್ಮಸಾಮಾನ್ಯದಲ್ಲಿ ಪ್ರಯೋಗಿಸುವುದು ಕಂಡುಬರುತ್ತದೆ ಲೌಕಿಕರು ಇಷ್ಟಾದಿ-ಪುಣ್ಯಕರ್ಮವನ್ನು ಮಾಡುವವನನ್ನು 'ಈ ಮಹಾತ್ಮನು ಧರ್ಮವನ್ನು ಆಚರಿಸುತ್ತಾನೆ' ಎಂದು ಹೇಳುತ್ತಾರೆ ಆಚಾರವೂ ಒಂದು ಧರ್ಮವಿಶೇಷವೇ ಆದುದರಿಂದ ರಮಣೀಯ ಚರಣರೆಂದರೆ ಪ್ರಶಸ್ತಕರ್ಮವನ್ನು ಮಾಡಿದವರು, ಕಪೂಯಚರಣರೆಂದರೆ ನಿಂದಿತಕರ್ಮವನ್ನು ಮಾಡಿದವರು—ಎಂಬುದು ನಿರ್ಣಯ

ವಿ.—ತು ಶಬ್ದವು ಹಿಂದಿನ ಅಭಿಪ್ರಾಯವನ್ನು ವ್ಯಾವರ್ತಿಸಿ ಹೇಳುತ್ತದೆ **ರಮಣೀಯಚರಣಾಃ ಕಪೂಯಚರಣಾಃ** ಎಂಬಲ್ಲಿ ಚರಣಶಬ್ದವು ಸುಕೃತ ದುಷ್ಕೃತ

---

[1] ಆಚಾರಹೀನಂ ನ ಪುನಂತಿ ವೇದಾಃ ।

[2] ನ ಹಿ ಪದ್ಭ್ಯಾಂ ಪಲಾಯಿತುಂ ಪಾರಯಮಾಣೋ ಜಾನುಭ್ಯಾಂ ರಂಹಿತುಮರ್ಹತೀತಿ (ಸೂ ಭಾ).

[3] ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು (ಶ್ರೀಭಾಷ್ಯ)

ಗಳನ್ನು ಪ್ರತಿಪಾದಿಸುತ್ತದೆ **ಚರತೇಃ** ಎಂಬ ಶಬ್ದಕ್ಕೆ ಕರ್ಮದಲ್ಲಿಯೇ ಮುಖ್ಯಾರ್ಥವಿರುವಾಗ ಲಕ್ಷಣಾರ್ಥವು ನ್ಯಾಯವಲ್ಲವೆಂದು ಬಾದರಿಯು ಅಭಿಪ್ರಾಯಪಡುತ್ತಾನೆ ಇಲ್ಲಿ ಬಾದರಿಯ ಮತವೇ ಸೂತ್ರಕಾರರ ಮತವಾಗಿದೆ [1] ಚರಣ-ಶಬ್ದಕ್ಕೆ ಮುಖ್ಯಾರ್ಥವನ್ನು ಹೇಳಿದರೂ ಆನರ್ಥಕ್ಯವಿಲ್ಲ ; ಏಕೆಂದರೆ ಸುಕೃತಾದಿಗಳ ಆಚರಣೆಯು ಅಪೇಕ್ಷಿತವೇ. ಆದುದರಿಂದ ಜೀವನು ಅನುಶಯದೊಂದಿಗೆ ಇಳಿಯುತ್ತಾನೆ.

**ದ್ವೈ.—ಧರ್ಮಂ ಚರತ, ಮಾ ಅಧರ್ಮಮ್**—ಇವೇ ಮೊದಲಾದ ಪ್ರಯೋಗವಿರುವುದರಿಂದ ಚರಣಶಬ್ದವು ಸುಕೃತ-ದುಷ್ಕೃತಗಳನ್ನೇ ತಿಳಿಸುತ್ತದೆ. **ತು**-ಶಬ್ದವು ಸೂತ್ರಕಾರರ ಸಿದ್ಧಾಂತವನ್ನು ತಿಳಿಸುತ್ತದೆ

---

[1] **ಅತ್ರ ಬಾದರಿಮತಮೇವ ಸ್ವಮತಮ್ (ಶ್ರೀಭಾಷ್ಯ).**

## ೩. ಅನಿಷ್ಟಾದಿಕಾರ್ಯಧಿಕರಣ

(ಸೂ ೧೨–೨೧)

**ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್*  ॥ ೧೨ ॥**

೧೨ ಇಷ್ಟಾದಿಕಾರಿಗಳಲ್ಲದವರೂ (ಚಂದ್ರನನ್ನು ಸೇರುತ್ತಾರೆ) ಎಂದು ಶ್ರುತಿಯು ಹೇಳುತ್ತದೆ

ಇಷ್ಟಾದಿಗಳನ್ನು ಮಾಡದವರೂ ಚಂದ್ರನನ್ನು ಸೇರುವರೊ ಅಥವಾ ಇಲ್ಲವೊ—ಎಂಬುದು ಸಂಶಯ

**ಪೂರ್ವಪಕ್ಷ**—ಇಷ್ಟಾದಿಕಾರಿಗಳಲ್ಲದವರೂ ಚಂದ್ರನನ್ನು ಸೇರುತ್ತಾರೆಂದು ಶ್ರುತಿಯು ಹೇಳುತ್ತದೆ 'ಈ ಲೋಕದಿಂದ ಹೋಗುವವರೆಲ್ಲರೂ ಚಂದ್ರನನ್ನು ಸೇರುತ್ತಾರೆ'[1] (ಕೌ ಉ ೧ ೨) ಇದಲ್ಲದೆ ಪುನಃ ಹುಟ್ಟುವವರಿಗೆ ದೇಹಾರಂಭವೂ ಕೂಡ ಚಂದ್ರಪ್ರಾಪ್ತಿಯಿಲ್ಲದೆ ಆಗಲಾರದು, ಏಕೆಂದರೆ 'ಐದನೆಯ ಆಹುತಿಯಲ್ಲಿ (ಛಾಂ. ಉ ೫ ೯ ೧) ಎಂದು ಆಹುತಿಸಂಖ್ಯೆಯು ನಿಯಮವಿದೆ ಆದುದರಿಂದ ಎಲ್ಲರೂ ಚಂದ್ರನನ್ನು ಸೇರುತ್ತಾರೆ ಇಷ್ಟಾದಿಕಾರಿಗಳೂ ಇತರರೂ ಸಮಾನಗತಿಯನ್ನು ಪಡೆಯುವುದು ಯುಕ್ತವಲ್ಲ—ಎಂಬುದು ಸರಿಯಲ್ಲ, ಏಕೆಂದರೆ ಇತರರಿಗೆ ಚಂದ್ರಮಂಡಲದಲ್ಲಿ ಭೋಗವಿಲ್ಲ

**ವಿ.**—ಅನಿಷ್ಟಾದಿಕಾರಿಗಳೆಂದರೆ ವಿಹಿತಕರ್ಮವನ್ನು ಮಾಡದವರು ನಿಷಿದ್ಧಕರ್ಮವನ್ನು ಮಾಡುವವರು; ಕೌಷೀತಕಿ-ಶ್ರುತಿಯು (೧ ೨) ಪ್ರಕಾರ ಪಾಪಕರ್ಮವನ್ನು ಮಾಡಿದವರೂ ಮಾಡದವರೂ ಚಂದ್ರಲೋಕಕ್ಕೆ ಹೋಗುತ್ತಾರೆ

**ದ್ವೈ.**—ಗಮನಾಗಮನಾದಿಗಳು ಇಷ್ಟಾದಿಕಾರಿಗಳಿಗೆ ಮಾತ್ರವಲ್ಲ, **ತದ್ಯ ಇಹ ಶುಭಾಕೃತೋ ಯೋ ವಾಽಶುಭಕೃತಸ್ತೇಽಶುಭಮನುಭೂಯಾಽವರ್ತಂತೇ** ಎಂಬ ಭಾಲ್ಲವೇಯಶ್ರುತಿಯು ಪ್ರಕಾರ ಇಷ್ಟಾದಿಗಳನ್ನು ಮಾಡದವರಿಗೂ ಮತ್ತು ಪಾಪಕರ್ಮಿಗಳಿಗೂ ಗಮನಾಗಮನಗಳಿವೆ

**ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿ-ದರ್ಶನಾತ್ ॥ ೧೩ ॥**

೧೩ ಆದರೆ ಯಮಾಲಯದಲ್ಲಿ (ಯಾತನೆಯನ್ನು) ಅನುಭವಿಸಿದ ಮೇಲೆ ಇತರರಿಗೆ ಆರೋಹ-ಅವರೋಹಗಳು ಆಗುತ್ತವೆ, ಏಕೆಂದರೆ ಅಂಥ ಗತಿಯನ್ನು (ಶ್ರುತಿಯು) ಹೇಳುತ್ತದೆ

---

* ಶಾಂಕರಭಾಷ್ಯ, ಶ್ರೀಭಾಷ್ಯ—ಇವುಗಳ ಪ್ರಕಾರ ಇದು ಪೂರ್ವಪಕ್ಷ ಸೂತ್ರ

[1] ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ ।

ತು-ಶಬ್ದವು ಹಿಂದಿನ ಸೂತ್ರದಲ್ಲಿ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುತ್ತದೆ. ಎಲ್ಲರೂ ಚಂದ್ರನನ್ನು ಸೇರುತ್ತಾರೆ ಎಂಬುದು ನಿಜವಲ್ಲ ; ಏಕೆಂದರೆ ಭೋಗಕ್ಕಾಗಿಯೇ ಚಂದ್ರಾರೋಹಣವಾಗುತ್ತದೆಯೇ ಹೊರತು ಬೇರೆ ಯಾವ ಪ್ರಯೋಜನಕ್ಕೂ ಅಲ್ಲ, ಕೇವಲ ಅವರೋಹಣಕ್ಕೂ ಅಲ್ಲ. ಆದುದರಿಂದ ಇಷ್ಟಾದಿಕಾರಿಗಳಿಗೆ ಚಂದ್ರಾರೋಹಣ ವಾಗುತ್ತದೆಯೇ ಹೊರತು ಇತರರಿಗಾಗುವುದಿಲ್ಲ. ಇತರರಾದರೋ ಸಂಯಮನವೆಂಬ ಯಮಾಲಯವನ್ನು ಪ್ರವೇಶಿಸಿ ತಮ್ಮ ದುಷ್ಕೃತಕ್ಕೆ ಅನುರೂಪವಾದ ಯಾತನೆಗಳನ್ನು ಅನುಭವಿಸಿ ಪುನಃ ಈ ಲೋಕಕ್ಕೆ ಇಳಿಯುತ್ತಾರೆ ಇಂಥಹವರಿಗೆ ಆರೋಹ-ಅವರೋಹ ಗಳಿವೆಯೆಂದು ಯಮವಚನರೂಪವಾದ ಶ್ರುತಿಯೇ (ಕ. ಉ ೧. ೨ ೬) ಹೇಳುತ್ತದೆ : 'ಪ್ರಮಾದವನ್ನು ಮಾಡುತ್ತಿರುವ, ವಿತ್ತಮೋಹದಿಂದ ಮೂಢನಾಗಿರುವ ಬಾಲಕನಿಗೆ ಸಾಂಪರಾಯವು ಕಾಣುವುದಿಲ್ಲ "ಈ ಲೋಕವು ಮಾತ್ರ ಇದೆ. ಪರಲೋಕವಿಲ್ಲ" ಎಂದು ತಿಳಿದುಕೊಳ್ಳುವವನು ಪುನಃ ಪುನಃ ನನ್ನ ವಶವನ್ನು ಹೊಂದುತ್ತಾನೆ.'[1] ಯಮ-ವಶ್ಯತೆಯನ್ನು ತೋರಿಸುವ ಲಿಂಗವೂ ಬಹುವಾಗಿ ಶ್ರುತಿಯಲ್ಲಿದೆ : 'ಜನರಿಗೆ ಯಮ-ಲೋಕವೇ ಸೇರುವ ಸ್ಥಳವು'[2] (ಋ ವೇ ೧೦. ೧೪. ೧).

ವಿ.—ಇಷ್ಟಾದಿಕಾರಿಗಳಲ್ಲದವರಿಗೆ—ಯಮಶಾಸನದ ಪ್ರಕಾರ ಪಾಪಫಲಗಳನ್ನು ಅನುಭವಿಸಿದ ಬಳಿಕ—ಚಂದ್ರಲೋಕದ ಆರೋಹಣ-ಅವರೋಹಣಗಳು ಆಗುತ್ತವೆ. ಇಂಥ ಗತಿಯನ್ನು ಶ್ರುತಿಯು (ಕ. ಉ. ೧. ೨. ೬ ; ಋ ವೇ ೧೦. ೧೪. ೧) ಹೇಳುತ್ತದೆ.

ದ್ವೈ.—ಯಜ್ಞಾದಿಗಳನ್ನು ಮಾಡದಿರುವ ಪಾಪಿಗಳಿಗೆ ಯಮಶಾಸನವನ್ನು ಅನುಭವಿಸಿದ ಬಳಿಕವೇ ಅಲ್ಲಿಂದ ಉತ್ಥಾನವು ; ಭಗವದ್ವೇಷಿಗಳೆಲ್ಲ ನಿತ್ಯನರಕದಲ್ಲಿ ಬೀಳುತ್ತಾರೆ. ಇಂಥ ಗತಿಯು **ಸರ್ವೇ ವಾ ಏತೇಽಶುಭಕೃತಃ ಸಂಯಮನೇ ಪ್ರತಪಂತಿ** ಎಂಬ ಕೌಂಠರವ್ಯಶ್ರುತಿಯಲ್ಲಿ ಹೇಳಿದೆ.

**ಸ್ಮರಂತಿ ಚ*** || ೧೪ ||

೧೪. (ಇದನ್ನೇ) ಸ್ಮರಿಸುತ್ತಲೂ ಇದ್ದಾರೆ.

ಸಂಯಮನಪುರದಲ್ಲಿ ಯಮಾಧೀನವಾಗಿ ಪಾಪಕರ್ಮದ ವಿಪಾಕವಾಗುವುದೆಂದು ಮನು, ವ್ಯಾಸ ಮೊದಲಾದ ಶಿಷ್ಟರು ನಚಿಕೇತೋಪಾಖ್ಯಾನಾದಿಗಳಲ್ಲಿ ಸ್ಮರಿಸಿರುತ್ತಾರೆ.

---

1 ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ||

2 ವೈವಸ್ವತಂ ಸಂಗಮನಂ ಜನಾನಾಮ್ |

* ಇಲ್ಲಿಗೆ ಮಧ್ವಭಾಷ್ಯದಲ್ಲಿ ಅನಿಷ್ಟಾದಿಕಾರ್ಯಧಿಕರಣವು ಮುಗಿಯುತ್ತದೆ.

**ವಿ.**—ಎಲ್ಲರೂ ಯಮವಶ್ಯರೆಂದು ಪರಾಶರಾದಿಗಳು ಹೇಳಿರುತ್ತಾರೆ : 'ಇವರೆಲ್ಲರೂ ಯಮನ ವಶವನ್ನು ಹೊಂದುತ್ತಾರೆ'[1] (ವಿ. ಪು ೩. ೭. ೫).

**ದ್ವೈ.**—'ಪಾಪಿಗಳೆಲ್ಲ ನರಕಕ್ಕೆ ಹೋಗುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ ; ಅಲ್ಲಿ ಯಾತನೆಯನ್ನು ಅನುಭವಿಸಿದ ಮೇಲೆ ಜನಾರ್ದನನನ್ನು ದ್ವೇಷಿಸುವವರು ಕೆಳಗೆ ಬೀಳುತ್ತಾರೆ ; ಮಹಾತಮಸ್ಸಿನಲ್ಲಿ ಬಿದ್ದವರಿಗೆ ಪುನಃ ಉತ್ಥಾನವಿಲ್ಲ ; ಆದರೆ ಇತರ ಪಾಪಿಗಳು ಮೇಲಕ್ಕೆ ಬರಬಹುದು'[2] ಎಂದು ಸ್ಮೃತಿಯು ಹೇಳುತ್ತದೆ.

**ಅಪಿ ಚ ಸಪ್ತ* || ೧೫ ||**

೧೫. ಇದಲ್ಲದೆ ಏಳು (ನರಕಗಳಿವೆ).

ಇದಲ್ಲದೆ ರೌರವವೇ ಮೊದಲಾದ ಏಳು ನರಕಗಳು ದುಷ್ಕೃತ-ಕರ್ಮಫಲವನ್ನು ಅನುಭವಿಸುವ ಭೂಮಿಗಳೆಂದು ಪೌರಾಣಿಕರು ಹೇಳುತ್ತಾರೆ. ಅವುಗಳನ್ನು ಇಷ್ಟಾದಿಗಳನ್ನು ಮಾಡದವರು ಪಡೆಯುತ್ತಾರೆ. ಹೀಗಿರುವಾಗ ಅವರು ಚಂದ್ರನನ್ನು ಹೇಗೆ ಹೊಂದುತ್ತಾರೆ ?

**ವಿ.**—ಪಾಪಕರ್ಮಿಗಳು ಹೋಗತಕ್ಕ ರೌರವಾದಿನರಕಗಳು ಏಳೆಂದು ಸ್ಮೃತಿಗಳು ಹೇಳುತ್ತವೆ.

**ದ್ವೈ.**—'ರೌರವ ಮಹಾರೌರವ ವಹ್ನಿ ವೈತರಣೀ ಕುಂಭೀಪಾಕ—ಇವು ಅನಿತ್ಯ ನರಕಗಳು, ತಾಮಿಸ್ರ, ಅಂಧತಾಮಿಸ್ರ—ಇವು ನಿತ್ಯನರಕಗಳು' ಎಂದು ಭಾರತವು ಹೇಳುತ್ತದೆ.

**ತತ್ರಾಪಿ ಚ ತದ್ವ್ಯಾಪಾರಾದವಿರೋಧಃ† || ೧೬ ||**

೧೬. ಅಲ್ಲಿಯೂ ಕೂಡ ಅವನ ವ್ಯಾಪಾರವಿರುವುದರಿಂದ ವಿರೋಧವಿಲ್ಲ.

ರೌರವಾದಿನರಕಗಳಲ್ಲಿ ಚಿತ್ರಗುಪ್ತರೇ ಮೊದಲಾದ ಬೇರೆ ಬೇರೆ ಅಧಿಷ್ಠಾತೃಗಳಿರುವುದರಿಂದ ಪಾಪಕರ್ಮಿಗಳು ಯಮಾಧೀನರಾಗಿಯೇ ಯಾತನೆಗಳನ್ನು ಅನುಭವಿಸುತ್ತಾರೆ ಎಂಬುದು ವಿರುದ್ಧವಲ್ಲವೊ ?—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ : ಆ ಸಪ್ತನರಕ

---

1 ಸರ್ವೇ ಚೈತೇ ವಶಂ ಯಾಂತಿ ಯಮಸ್ಯ ಭಗವನ್ ಕಿಲ ।

2 ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ । ತತ್ರ ಭುಕ್ತ್ವಾ ಪತಂತ್ಯೇವ ಯೇ ದ್ವಿಷಂತಿ ಜನಾರ್ದನಮ್ । ಮಹಾತಮಸಿ ಮಗ್ನಾನಾಂ ನ ತೇಷಾಮುತ್ಥಿತಿಃ ಕ್ವಚಿತ್ । ಇತರೇಷಾಂ ತು ಪಾಪಾನಾಂ ವ್ಯುತ್ಥಾನಂ ವಿದ್ಯತೇಽಪಿ ಚ ॥

* ಇದು ಮಧ್ವಭಾಷ್ಯದಲ್ಲಿ ಸಪ್ತಾಧಿಕರಣ ಎನಿಸಿದೆ. ಶ್ರೀಭಾಷ್ಯದಲ್ಲಿ ಸೂತ್ರದಲ್ಲಿರುವ ಚ-ಶಬ್ದವು ಕಂಡುಬರುವುದಿಲ್ಲ.

† ಇದು ಮಧ್ವಭಾಷ್ಯದಲ್ಲಿ ತದ್‍ವ್ಯಾಪಾರಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

ಗಳಲ್ಲಿ ಯಮನ ಅಧಿಷ್ಠಾತೃತ್ವ-ವ್ಯಾಪಾರವನ್ನೇ ಅಂಗೀಕರಿಸಿರುವುದರಿಂದ ವಿರೋಧವಿಲ್ಲ ಚಿತ್ರಗುಪ್ತಾದಿಗಳು ಯಮಪ್ರೇರಿತರಾಗಿಯೇ ಅಧಿಷ್ಠಾತೃಗಳಾಗಿರುವರೆಂದು ಸ್ಮೃತಿಯು ಹೇಳುತ್ತದೆ.

ವಿ.—ಸಪ್ತನರಕಗಳಿಗೆ ಹೋಗುವವರು ಯಮಲೋಕವನ್ನು ಹೇಗೆ ಸೇರುತ್ತಾರೆ? —ಎಂಬ ಆಕ್ಷೇಪಕ್ಕೆ ಪರಿಹಾರ ಹೀಗಿದೆ: ಸಪ್ತನರಕಗಳಿಗೆ ಗಮನವು ಯಮಾಜ್ಞೆಯಿಂದಲೇ ಉಂಟಾಗುವುದರಿಂದ ವಿರೋಧವಿಲ್ಲ.

ದ್ವೈ.—'ಅಲ್ಲಿಯೂ ಕೂಡ ಹರಿಯ ಪ್ರೇರಣೆಯೆಂಬ ವ್ಯಾಪಾರವಿರುವುದರಿಂದ ವಿರೋಧವಿಲ್ಲ' ಎಂಬುದು ಸೂತ್ರಾರ್ಥ.

ಈಶ್ವರನು ನರಕದಲ್ಲಿರುವನೆಂಬುದು ಸರಿಯಲ್ಲ; ಆದರೆ ಕೌಷಾರವಶ್ರುತಿಯು ಹೀಗೆ ವಿರುದ್ಧವಾಗಿ ಹೇಳುತ್ತದೆ: 'ಅವನು ಎಲ್ಲವನ್ನೂ ಸೃಷ್ಟಿಸುತ್ತಾನೆ, ನಾಶಗೊಳಿಸುತ್ತಾನೆ, ರಮಿಸುವಂತೆ ಮಾಡುತ್ತಾನೆ, ರಮಿಸದಂತೆ ಮಾಡುತ್ತಾನೆ, ಪ್ರವರ್ತಿಸುವಂತೆ ಮಾಡುತ್ತಾನೆ, ಇದೆಲ್ಲವನ್ನು ಪ್ರವೇಶಿಸಿದ್ದಾನೆ;' ಈ ಅಶಂಕೆಯ ಪರಿಹಾರಕ್ಕೆ ಸೂತ್ರಕಾರರು ಹೀಗೆ ಹೇಳುತ್ತಾರೆ: ಯಾವ ದುಃಖದಿಂದಲೂ ಸ್ಪೃಷ್ಟನಾಗದೆ ಈಶ್ವರನು ತನ್ನ ಕರ್ಮವನ್ನು ಮಾಡುತ್ತಾನೆ—ಎಂಬುದನ್ನು ಚ-ಶಬ್ದವು ಸೂಚಿಸುತ್ತದೆ.[1] 'ಅವನು ಸ್ವರ್ಗ-ಭೂಮಿ-ನರಕಗಳಲ್ಲಿದ್ದಾನೆ, ಅಂಧ-ತಮಸ್ಸಿನಲ್ಲಿದ್ದಾನೆ....' ಎಂಬ ಪೌತ್ರಾಯಣ ಶ್ರುತಿಯಿಂದ ವಿರೋಧವಿಲ್ಲವೆಂಬುದು ತಿಳಿದುಬರುತ್ತದೆ.

### ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್* ॥ ೧೭ ॥

೧೭ (ಇಷ್ಟಾದಿಕಾರಿಗಳಲ್ಲದವರು ವಿದ್ಯಾ-ಕರ್ಮಗಳ ಪಥಗಳಲ್ಲಿ ಹೋಗುವುದಿಲ್ಲ); ಏಕೆಂದರೆ ವಿದ್ಯಾಕರ್ಮಗಳ ಪಥಗಳು ಇಲ್ಲಿ ಪ್ರಕೃತವಾಗಿವೆ.

ಪಂಚಾಗ್ನಿವಿದ್ಯೆಯಲ್ಲಿ 'ಹೇಗೆ ಆ ಲೋಕವು ತುಂಬುತ್ತಿಲ್ಲ?' (ಛಾಂ. ಉ. ೫. ೩. ೩) ಎಂಬ ಪ್ರಶ್ನೆಗೆ, 'ಈ ಎರಡು ಪಥಗಳಲ್ಲಿ ಯಾವುದೊಂದರಿಂದಲೂ ಹೋಗದವರು[2] ಪುನಃ ಪುನಃ ಹಿಂತಿರುಗುವ ಕ್ಷುದ್ರಜಂತುಗಳಾಗಿ ಹುಟ್ಟುತ್ತಾರೆ. "ಹುಟ್ಟು, ಸಾಯಿ" ಎಂಬಿದು ಇವರ ಮೂರನೆಯ ಸ್ಥಾನವು. ಆದುದರಿಂದ ಆ ಲೋಕವು

---

1 ಚಶಬ್ದಾದದುಃಖಾನುಭವೇನ (ಮ. ಭಾ.).

* ಇದು ಮಧ್ವಭಾಷ್ಯದಲ್ಲಿ ವಿದ್ಯಾಕರ್ಮಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

2 ಇಷ್ಟಾದಿಕರ್ಮಗಳನ್ನು ಮಾಡಿ ಧೂಮಾದಿಮಾರ್ಗದಲ್ಲಿ ಹೋಗಿಬರುವವರು ಒಂದು ಪಥದವರು; ಪಂಚಾಗ್ನಿವಿದ್ಯೆಯೇ ಮೊದಲಾದುವನ್ನು ಪಡೆದು ಅರ್ಚಿರಾದಿಮಾರ್ಗದಿಂದ ಹೋಗುವವರು ಎರಡನೆಯ ಪಥದವರು; ಉಭಯಮಾರ್ಗಪರಿಭ್ರಷ್ಟರು ಮೂರನೆಯ ಪಥದವರು.

ತುಂಬುವುದಿಲ್ಲ'[1] (ಛಾಂ. ಉ. ೫. ೧೦. ೮) ಎಂಬ ಉತ್ತರವಿದೆ. ಅಲ್ಲಿ 'ಈ ಎರಡು ಪಥಗಳಲ್ಲಿ' ಎಂದರೆ ವಿದ್ಯೆಯ ಪಥದಲ್ಲಿ ಮತ್ತು ಕರ್ಮದ ಪಥದಲ್ಲಿ ಎಂಬುದು ಅಭಿಪ್ರಾಯ, ಏಕೆಂದರೆ ವಿದ್ಯಾ-ಕರ್ಮಗಳು ದೇವಯಾನ-ಪಿತೃಯಾಣ ಎಂಬ ಪಥಗಳ ಪ್ರಾಪ್ತಿಗೆ ಪ್ರಕೃತವಾಗಿರುತ್ತವೆ. 'ಅವರಲ್ಲಿ ಹೀಗೆ ಅರಿತುಕೊಂಡಿರುವವರು'[2] (ಛಾಂ. ಉ. ೫. ೧೦. ೧) ಎಂಬುದು ವಿದ್ಯೆ; ದೇವಯಾನಮಾರ್ಗವು ಅದರಿಂದ ಹೊಂದತಕ್ಕದೆಂದು ಹೇಳಿರುತ್ತದೆ. 'ಇಷ್ಟಾಪೂರ್ತಗಳು, ದತ್ತ'[3] (ಛಾಂ. ಉ. ೫ ೧೦. ೪) ಎಂಬುದು ಕರ್ಮ; ಪಿತೃಯಾಣ-ಮಾರ್ಗವು ಅದರಿಂದ ಹೊಂದತಕ್ಕದೆಂದು ಹೇಳಿರುತ್ತದೆ. 'ಈ ಎರಡು ಪಥಗಳಲ್ಲಿ ಯಾವುದರಿಂದಲೂ ಹೋಗದಿರುವವರು ಕ್ಷುದ್ರಜಂತುರೂಪವಾದ ಪುನಃ ಪುನಃ ಹಿಂತಿರುಗುವ ಮೂರನೆಯ ಪಥದಲ್ಲಿ ಬರುತ್ತಾರೆ. ಆದುದರಿಂದ ಇಷ್ಟಾದಿಕಾರಿಗಳಲ್ಲದವರು ಚಂದ್ರನನ್ನು ಪಡೆಯುವುದಿಲ್ಲ. ಸೂತ್ರದಲ್ಲಿರುವ **ತು**-ಶಬ್ದವು 'ಎಲ್ಲರೂ ಚಂದ್ರಲೋಕಕ್ಕೆ ಹೋಗುವರು' ಎಂಬ ಕೌಷೀತಕಿಶ್ರುತಿವಾಕ್ಯದಿಂದ ಉಂಟಾಗುವ ಆಶಂಕೆಯನ್ನು ಪರಿಹರಿಸುತ್ತದೆ. ಉಕ್ತ ಶ್ರುತಿಯಲ್ಲಿರುವ **ಸರ್ವ**-ಶಬ್ದವು ಅಧಿಕಾರಿಗಳ ಅಪೇಕ್ಷೆಯಿಂದ ಪ್ರಯೋಗಿಸಿದೆ.

**ವಿ.**—ಇಷ್ಟಾದಿಕಾರಿಗಳಲ್ಲದವರು ಯಮಲೋಕವನ್ನು ಹೊಂದಿ, ಅಲ್ಲಿ ತಮ್ಮ ಕರ್ಮಕ್ಕನುಸಾರವಾಗಿ ಯಾತನೆಯನ್ನು ಅನುಭವಿಸಿ, ಅನಂತರ ಚಂದ್ರಲೋಕಕ್ಕೆ ಏರಿ ಪುನಃ ಕೆಳಗೆ ಇಳಿಯುತ್ತಾರೆ—ಎಂಬುದನ್ನು ಒಪ್ಪಿಕೊಳ್ಳಲು ಆಗುವುದಿಲ್ಲ; ಏಕೆಂದರೆ ವಿದ್ಯಾ-ಕರ್ಮಗಳ ಫಲಭೋಗಕ್ಕಾಗಿಯೇ ದೇವಯಾನ-ಪಿತೃಯಾಣಗಳಿವೆ. ಇಷ್ಟಾದಿಗಳನ್ನು ಮಾಡದವರಿಗೆ ವಿದ್ಯೆಯಿಲ್ಲದುದರಿಂದ ದೇವಯಾನದಲ್ಲಿ ಗಮನವಿಲ್ಲ, ದಾನಾದಿ-ಪುಣ್ಯಕರ್ಮಗಳನ್ನು ಮಾಡದಿರುವುದರಿಂದ ಅವರಿಗೆ ಪಿತೃಯಾಣದಲ್ಲಿಯೂ ಗಮನವಿಲ್ಲ.

**ದ್ವೈ.**—**ಅಥೈತಯೋಃ** (ಛಾಂ. ಉ. ೫. ೧೦. ೮) ಎಂಬ ಶ್ರುತಿಯಿಂದ ಪ್ರಾಣಿಗಳ ಗತಿಯು ಸ್ವತಂತ್ರವಾಗಿರುವಂತೆ ಕಾಣುತ್ತದೆ—ಎಂಬ ಸಂಶಯಕ್ಕೆ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ: **ಏತಯೋಃ**, 'ಇವೆರಡರಲ್ಲಿ' ಎಂಬ ಶಬ್ದವು ವಿದ್ಯಾಮಾರ್ಗ-ಕರ್ಮಮಾರ್ಗಗಳನ್ನು ಅಪೇಕ್ಷಿಸುತ್ತದೆ,[4] ಏಕೆಂದರೆ ಇವು ಪ್ರಕೃತವಿಷಯಗಳಾಗಿವೆ 'ವಿದ್ಯಾಪಥ, ಕರ್ಮಪಥ—ಎಂಬ ಎರಡು ಮಾರ್ಗಗಳು ಹೇಳಲ್ಪಟ್ಟಿವೆ; ಇವೆರಡು ಮಾರ್ಗಗಳೂ ಇಲ್ಲದವನು ತಿರ್ಯಗ್ಯೋನಿಗೊ ನರಕಕ್ಕೊ ತಮಸ್ಸಿಗೊ ಹೋಗುತ್ತಾನೆ' ಎಂದು ಭಾರತವು ಹೇಳುತ್ತದೆ.

---

1 ಅಥೈತಯೋಃ ಪಥೋರ್ನ ಕತರೇಣ ಚನ ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇತತ್ ತೃತೀಯಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ ।

2 ತದ್ಯ ಇತ್ಥಂ ವಿದುಃ.

3 ಇಷ್ಟಾಪೂರ್ತೇ ದತ್ತಮ್ ।

4 ವಿದ್ಯಾಕರ್ಮಾಪೇಕ್ಷಯೈತದ್ವಚನಮ್ (ಮ. ಭಾ.).

**ನ ತೃತೀಯೇ ತಥೋಪಲಬ್ಧೇಃ*** || ೧೮ ||

೧೮. ಮೂರನೆಯ (ಮಾರ್ಗದಲ್ಲಿ ಆಹುತಿಸಂಖ್ಯಾ-ನಿಯಮವು) ಇಲ್ಲ; ಏಕೆಂದರೆ (ಶ್ರುತಿಯಲ್ಲಿ) ಹಾಗೆ ನೋಡಲ್ಪಟ್ಟಿದೆ.

'ಐದನೆಯ ಆಹುತಿಯಲ್ಲಿ' (ಛಾಂ ಉ. ೫. ೯. ೧) ಎಂದು ಆಹುತಿಸಂಖ್ಯೆಯ ನಿಯಮವಿರುವುದರಿಂದ ದೇಹವನ್ನು ಪಡೆಯುವುದಕ್ಕೆ ಎಲ್ಲರೂ ಚಂದ್ರನನ್ನು ಸೇರುವರು ಎಂಬುದೇ ಯುಕ್ತ—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ : ತೃತೀಯಸ್ಥಾನದಲ್ಲಿ ದೇಹವನ್ನು ಪಡೆಯುವುದಕ್ಕೆ ಪಂಚಸಂಖ್ಯಾನಿಯಮವಿಲ್ಲ ; ಏಕೆಂದರೆ ಶ್ರುತಿಯಲ್ಲಿ ಹಾಗೆ ಕಂಡು ಬರುತ್ತದೆ. ಶ್ರುತಿಯು ಮನುಷ್ಯಶರೀರದ ಪ್ರಾಪ್ತಿಗೆ ಹೇತುವಾಗಿ ಆಹುತಿಸಂಖ್ಯೆಯನ್ನು ಹೇಳುತ್ತದೆಯೇ ಹೊರತು ಕೀಟಪತಂಗಾದಿಶರೀರಗಳ ಹೇತುವಾಗಿ ಹೇಳಿಲ್ಲ ಯಾರಿಗೆ ಆರೋಹ-ಅವರೋಹಗಳು ಸಂಭವಿಸುತ್ತವೆಯೋ ಅವರಿಗೆ ಐದನೆಯ ಆಹುತಿಯಲ್ಲಿ ಶರೀರ ವುಂಟಾಗುತ್ತದೆ; ಉಳಿದವರಿಗೆ ಆಹುತಿಸಂಖ್ಯೆಯು ಇಲ್ಲದೆಯೇ ಇತರ ಭೂತಗಳಿಂದ ಮಿಶ್ರಿತವಾದ ನೀರಿನಿಂದ ದೇಹವುಂಟಾಗುತ್ತದೆ

**ವಿ.**—ತೃತೀಯಸ್ಥಾನವು ದೇಹಾರಂಭಕ್ಕಾಗಿ ಐದನೆಯ ಆಹುತಿಯನ್ನು ಅಪೇಕ್ಷಿಸುವುದಿಲ್ಲ ; ತೃತೀಯಸ್ಥಾನವೆಂದರೆ ಕೇವಲ ಪಾಪಕರ್ಮಿಗಳು

**ದ್ವೈ.**—"ಮೂರನೆಯದಾದ ಮಹಾತಮಸ್ಸಿನಲ್ಲಿ ಸುಖಲೇಶವೂ ಇಲ್ಲ' ಎಂಬುದು ಸೂತ್ರಾರ್ಥ.

ಮಹಾತಮಸ್ಸಿನಲ್ಲಿ ಸುಖಪ್ರಾಪ್ತಿಯಾಗಬಹುದು ಎಂಬ ಆಶಂಕೆಗೆ ಇದು ಉತ್ತರ ವಾಗಿದೆ **ಅಥಾವಿದ್ವಾನಕವರ್ಾ** ಎಂಬ ಶ್ರುತಿಯ ಪ್ರಕಾರ ತೃತೀಯಸ್ಥಾನದಲ್ಲಿ ಸುಖಲೇಶವೂ ಇಲ್ಲ

**ಸ್ಮರ್ಯತೇಽಪಿ ಚ ಲೋಕೇ** || ೧೯ ||

೧೯ ಮತ್ತೆ ಅದು ಲೋಕದಲ್ಲಿಯೂ ಸ್ಮೃತವಾಗಿದೆ.

ಇದಲ್ಲದೆ ದ್ರೋಣ, ಧೃಷ್ಟದ್ಯುಮ್ನ, ಸೀತೆ ಮೊದಲಾದವರು ಅಯೋನಿಜರೆಂದು ಲೋಕದಲ್ಲಿ ಸ್ಮೃತವಾಗಿದೆ. ಅವರಲ್ಲಿ ದ್ರೋಣಾದಿಗಳಿಗೆ ಸ್ತ್ರೀ-ವಿಷಯವಾದ ಅಗ್ನಿಯಿಲ್ಲ ; ಧೃಷ್ಟದ್ಯುಮ್ನಾದಿಗಳಿಗೆ ಸ್ತ್ರೀ-ಪುರುಷವಿಷಯವಾದ ಎರಡು ಆಹುತಿಗಳೂ ಇಲ್ಲ. ಹೀಗೆಯೇ ಇತರ ಕಡೆಗಳಲ್ಲಿಯೂ ಆಹುತಿಯಿಲ್ಲದೆಯೇ ಶರೀರಪ್ರಾಪ್ತಿಯಾಗಬಹುದು

**ವಿ.**—ದ್ರೌಪದಿ, ಧೃಷ್ಟದ್ಯುಮ್ನ ಮೊದಲಾದವರಿಗೆ ಐದನೆಯ ಆಹುತಿ ಇಲ್ಲದಯೇ ಶರೀರಾರಂಭವಾಯಿತೆಂದು ಮಹಾಭಾರತಾದಿ ಸ್ಮೃತಿಗಳಲ್ಲಿ ಹೇಳಿದೆ.

---

* ಮಧ್ವಭಾಷ್ಯದಲ್ಲಿ ಇಲ್ಲಿಂದ ಮಹಾತಮೋಽಧಿಕರಣವು ಪ್ರಾರಂಭವಾಗುತ್ತದೆ.

ದ್ವೈ.—'ತೃತೀಯಸ್ಥಾನದಲ್ಲಿ ಸುಖವಿಲ್ಲವೆಂಬುದು ಸ್ಮೃತಿಯಲ್ಲಿಯೂ ಸಿದ್ಧವಾಗಿದೆ' ಎಂಬುದು ಸೂತ್ರಾರ್ಥ.

'ತಿರ್ಯಗ್ಜನ್ಮದಲ್ಲಿಯೋ ನರಕದಲ್ಲಿಯೋ ಸುಖಲೇಶವಿದೆ, ಆದರೆ ಅಂಧತಮಸ್ಸಿನಲ್ಲಿ ಮುಳುಗಿರುವವರಿಗೆ ಸುಖಲೇಶವೂ ಇಲ್ಲ' ಎಂದು ಭವಿಷ್ಯತ್ಪರ್ವವು ಹೇಳುತ್ತದೆ. ಇದು ಲೋಕಸಿದ್ಧವೂ ಆಗಿದೆ.

## ದರ್ಶನಾಚ್ಚ || ೨೦ ||

೨೦. ಮತ್ತು (ಲೋಕದಲ್ಲಿ) ಕಂಡುಬರುವುದರಿಂದಲೂ.

ಇದಲ್ಲದೆ ಜರಾಯುಜ ಅಂಡಜ ಸ್ವೇದಜ ಉದ್ಭಿಜ್ಜ—ಎಂಬ ಚತುರ್ವಿಧಭೂತಸಮೂಹದಲ್ಲಿ ಸ್ವೇದಜ-ಉದ್ಭಿಜ್ಜಗಳಿಗೆ ಮೈಥುನಕರ್ಮವಿಲ್ಲದೆಯೇ ಉತ್ಪತ್ತಿಯು ಕಂಡುಬರುವುದರಿಂದ ಆಹುತಿಸಂಖ್ಯೆಯನ್ನು ಹಿಡಿಯಬೇಕಾಗಿಲ್ಲ ; ಹೀಗೆಯೇ ಇತರ ಕಡೆಯಲ್ಲಿಯೂ ಆಗಬಹುದು.

ವಿ.—ಐದನೆಯ ಆಹುತಿಯ ಅಪೇಕ್ಷೆಯಿಲ್ಲದೆ ದೇಹಾರಂಭವಾಗಬಹುದೆಂದು ಶ್ರುತಿಯೂ ಹೇಳುತ್ತದೆ . 'ಆ ಈ ಪ್ರಾಣಿಗಳಿಗೆ ಅಂಡಜ ಜರಾಯುಜ ಉದ್ಭಿಜ್ಜ—ಎಂಬ ಮೂರೇ ಕಾರಣಗಳಿರುತ್ತವೆ'[1] (ಛಾಂ. ಉ. ೬. ೩. ೧) ; ಇವುಗಳಲ್ಲಿ ಸ್ವೇದಜ-ಉದ್ಭಿಜ್ಜಗಳಿಗೆ ಐದನೆಯ ಆಹುತಿಯಿಲ್ಲದೆ ದೇಹವುಂಟಾಗುತ್ತದೆ.

## ತೃತೀಯಶಬ್ದಾವರೋಧಃ ಸಂಶೋಕಜಸ್ಯ || ೨೧ ||

೨೧. ಮೂರನೆಯ ಶಬ್ದವು ಸ್ವೇದಜವನ್ನು ಒಳಕೊಂಡಿದೆ.

ಭೂತಗಳಿಗೆ ಅಂಡಜ ಜೀವಜ ಉದ್ಭಿಜ್ಜ ಎಂಬ ಮೂರೇ ಬೀಜಗಳು ಇರುತ್ತವೆಯೆಂದು ಶ್ರುತಿಯು (ಛಾಂ. ಉ. ೬. ೩. ೧) ಹೇಳಿರುವುದರಿಂದ ಭೂತಗ್ರಾಮವು ಹೇಗೆ ನಾಲ್ಕು ವಿಧವಾಗುತ್ತದೆ?—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ : ಮೂರನೆಯದಾದ ಉದ್ಭಿಜ್ಜ-ಶಬ್ದವು ಸ್ವೇದಜವನ್ನು ಒಳಕೊಂಡಿದೆ ; ಏಕೆಂದರೆ ಒಂದು ಭೂಮಿಯಿಂದ ಹುಟ್ಟಿದರೆ ಇನ್ನೊಂದು ನೀರಿನಿಂದ ಹುಟ್ಟುತ್ತದೆ.

ವಿ.—ಸ್ವೇದಜವು ಮೂರನೆಯದಾದ ಉದ್ಭಿಜ್ಜ-ಶಬ್ದದಲ್ಲಿಯೇ ಸಂಗ್ರಹವಾಗಿದೆ. ಆದುದರಿಂದ ಕೇವಲ ಪಾಪಕರ್ಮಿಗಳಿಗೆ ಚಂದ್ರಪ್ರಾಪ್ತಿಯಿಲ್ಲವೆಂಬುದು ಸಿದ್ಧಾಂತ.

---

[1] ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತ್ಯಾಂಡಜಂ ಜೀವಜಮುದ್ಭಿಜ್ಜಮಿತಿ ।

ದ್ವೈ.—'ತೃತೀಯ ತಮಸ್ಸಿನಲ್ಲಿ ಶಬ್ದದ ಶ್ರವಣದಿಂದಲೇ ಶೋಕಜನ್ಯವಾದ ಮೋಹವು ಉಂಟಾಗುತ್ತದೆ'[1] ಎಂಬುದು ಸೂತ್ರಾರ್ಥ.

ಸ್ಮರಣಾಚ್ಚ* ॥ ೩. ೧. ೨೩ ॥

೨೩. ಇದು ಸ್ಮೃತಿಯಿಂದಲೂ ತಿಳಿದುಬರುತ್ತದೆ.

'ಮೂರನೆಯ ತಮಸ್ಸಿನ ಸ್ವರೂಪವನ್ನು ಕೇಳಿದೊಡನೆಯೇ ಮೂರ್ಛೆಯು ಬರುತ್ತದೆ ; ಆದುದರಿಂದ ಅದನ್ನು ವಿಸ್ತಾರವಾಗಿ ಹೇಳುವದಿಲ್ಲ'[2] ಎಂದು ಕೂರ್ಮಪುರಾಣದಲ್ಲಿ ಹೇಳಿದೆ.

---

1 ತೃತೀಯೇ ತೃತೀಯತಮಸಃ ಶ್ರವಣಾದೇವ ಶಬ್ದಾನುಸಾರೇಣ ಸಂಶೋಕಜಮೋಹ-ಪ್ರಾಪ್ತಿಃ (ಮ. ಭಾ.).

* ಈ ಸೂತ್ರವು ಶಾಂಕರಭಾಷ್ಯದಲ್ಲಿಯೂ ಶ್ರೀಭಾಷ್ಯದಲ್ಲಿಯೂ ಕಂಡುಬರುವುದಿಲ್ಲ.

2 ಶ್ರವಣೇನೈವ ಮೂರ್ಛಾದಿರಧರಸ್ಯ ಯತೋ ಭವೇತ್ । ತಸ್ಮಾನ್ನ ವಿಸ್ತರೇಣೈತತ್ ಕಥ್ಯತೇ ರಾಜಸತ್ತಮೇತಿ ಕೌರ್ಮೇ (ಮ. ಭಾ.).

## ೪. ಸಾಭಾವ್ಯಾಪತ್ತ್ಯಧಿಕರಣ*

**ಸಾಭಾವ್ಯಾಪತ್ತಿರುಪಪತ್ತೇಃ ॥ ೨೨ ॥**

೨೨ (ಚಂದ್ರಮಂಡಲದಿಂದ ಇಳಿಯುವವರು ಆಕಾಶಾದಿಗಳ) ಸಾಮ್ಯವನ್ನು ಪಡೆಯುತ್ತಾರೆ; ಏಕೆಂದರೆ (ಅದು) ಹೊಂದುತ್ತದೆ.

'ಅಲ್ಲಿ ಕರ್ಮಕ್ಷಯವಾಗುವವರೆಗೂ ಇದ್ದು ಅನಂತರ ಬಂದ ಮಾರ್ಗದಿಂದಲೇ ಹಿಂತಿರುಗುವರು. (ಅವರು) ಆಕಾಶವನ್ನು (ಸೇರುತ್ತಾರೆ), ಆಕಾಶದಿಂದ ವಾಯುವನ್ನು, ವಾಯುವಾಗಿ ಧೂಮವಾಗುತ್ತಾರೆ, ಧೂಮವಾಗಿ ಅಭ್ರವಾಗುತ್ತಾರೆ, ಅಭ್ರವಾಗಿ ಮೇಘವಾಗುತ್ತಾರೆ, ಮೇಘವಾಗಿ ಮಳೆಯರೂಪದಿಂದ ಕೆಳಗೆ ಬೀಳುತ್ತಾರೆ'[1] (ಛಾಂ. ಉ. ೫. ೧೦. ೫-೬) ಎಂಬ ಅವರೋಹಣಶ್ರುತಿಯು ಇದೆ. ಅವರು ಇಳಿಯುವಾಗ ಆಕಾಶಾದಿಗಳ ಸ್ವರೂಪವನ್ನು ಪಡೆದುಕೊಳ್ಳುತ್ತಾರೆಯೊ? ಅಥವಾ ಆಕಾಶಾದಿಗಳ ಸಾಮ್ಯವನ್ನು ಪಡೆದುಕೊಳ್ಳುತ್ತಾರೆಯೊ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಆಕಾಶಾದಿಗಳ ಸ್ವರೂಪವನ್ನೇ ಪಡೆದುಕೊಳ್ಳುತ್ತಾರೆ; ಏಕೆಂದರೆ 'ವಾಯುವಾಗಿ ಧೂಮವಾಗುತ್ತಾನೆ' ಎಂದು ಶ್ರುತಿಯು ಹೇಳುತ್ತದೆ; ಇದು ಯುಕ್ತವಾಗಿದೆ. ಇಲ್ಲಿ ಮುಖ್ಯಾರ್ಥವನ್ನು ಬಿಟ್ಟು ಲಕ್ಷಣಾರ್ಥವನ್ನು ತೆಗೆದುಕೊಳ್ಳುವುದು ಯುಕ್ತವಲ್ಲ.

**ಸಿದ್ಧಾಂತಿ**—ಆಕಾಶಾದಿಗಳ ಸಾಮ್ಯವನ್ನೇ ಹೊಂದುತ್ತಾನೆ. ಚಂದ್ರಮಂಡಲದಲ್ಲಿ ಉಪಭೋಗಕ್ಕಾಗಿ ಉಂಟಾದ ಜಲಮಯಶರೀರವು ಕರಗಿ ಆಕಾಶದಂತೆ ಸೂಕ್ಷ್ಮವಾಗುತ್ತದೆ; ಅನಂತರ ವಾಯುವಿನ ವಶವಾಗುತ್ತಾನೆ. ಅನಂತರ ಧೂಮಾದಿಗಳೊಡನೆ ಸಂಬದ್ಧನಾಗುತ್ತಾನೆ ಎಂಬುದು ಶ್ರುತಿಯ ಅರ್ಥ. ಒಂದು ವಸ್ತುವು ತನ್ನ ಸ್ವರೂಪವನ್ನು ಬದಲಾಯಿಸಿಕೊಂಡು ಇನ್ನೊಂದಾಗಲಾರದು, ಆದುದರಿಂದ ಇಲ್ಲಿ ಲಕ್ಷಣಾರ್ಥವನ್ನು ಆಶ್ರಯಿಸುವುದೇ ಯುಕ್ತವಾಗಿದೆ ಆಕಾಶಾದಿಗಳಿಗೆ ಸಮಾನವಾಗಿರುವುದನ್ನೇ ಇಲ್ಲಿ ಆಕಾಶಾದಿಭಾವವೆಂದು ಉಪಚಾರಕ್ಕಾಗಿ ಕರೆದಿದೆ

---

* ಇದು ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ಕ್ರಮವಾಗಿ ತತ್ಸ್ವಾಭಾವ್ಯಾಪತ್ತ್ಯಧಿಕರಣ-ತತ್ಸ್ವಾಭಾವ್ಯಾಧಿಕರಣ ಎನಿಸಿದೆ

[1] ತಸ್ಮಿನ್ ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತಂತೇ ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಭ್ರಂ ಭವತಿ । ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ।

ವಿ.—ಜೀವಾತ್ಮರು ಸೋಮಭಾವವನ್ನು ಅಥವಾ ಮನುಷ್ಯಭಾವವನ್ನು ಹೊಂದುವುದು ಸುಖದುಃಖಗಳ ಭೋಗಕ್ಕಾಗಿ ಆದರೆ ಈ ಲೋಕಕ್ಕೆ ಇಳಿಯುವವರಿಗೆ ಆಕಾಶವಾಗಲು ಕಾರಣವಿಲ್ಲ. ಅವರು ಆಕಾಶಾದಿಗಳ ಸಂಸರ್ಗದಿಂದ ಅವುಗಳ ಸಾಮ್ಯವನ್ನು ಹೊಂದಿ ಇಳಿಯುತ್ತಾರೆ ಎಂಬುದು ಅಭಿಪ್ರಾಯ

ದ್ವೈ.—ಧೂಮಾದಿಭಾವಪ್ರಾಪ್ತಿಯೆಂದರೆ ಧೂಮಸದೃಶವಾದ ಸ್ವಭಾವತ್ವಪ್ರಾಪ್ತಿ, ಧೂಮಾದಿದೇವತೆಯೊಂದಿಗೆ ಐಕ್ಯವೂ ಅಲ್ಲ, ತತ್ಪದವಪ್ರಾಪ್ತಿಯೂ ಅಲ್ಲ.

# ೫. ನಾತಿಚಿರಾಧಿಕರಣ*

## ನಾತಿಚಿರೇಣ ವಿಶೇಷಾತ್ ॥ ೨೩ ॥

೨೩. ಹೆಚ್ಚು ತಡವಿಲ್ಲದೆ (ಇಳಿಯುತ್ತಾನೆ); ಏಕೆಂದರೆ ವಿಶೇಷವಿದೆ.

ಜೀವನು ಆಕಾಶಾದಿಗಳ ಸಾದೃಶ್ಯವನ್ನು ಹೊಂದಿ ಬಹುಕಾಲವಿರುವನೊ? ಅಥವಾ ಸ್ವಲ್ಪಕಾಲವಿರುವನೊ?—ಎಂಬುದು ಸಂಶಯ. ನಿಯಮವನ್ನು ಮಾಡುವ ಶಾಸ್ತ್ರವಿಲ್ಲದುದರಿಂದ ಯಾವ ನಿಯಮವೂ ಇಲ್ಲ—ಎಂಬುದು ಪೂರ್ವಪಕ್ಷ

ಸಿದ್ಧಾಂತಿ—ಜೀವರು ಸ್ವಲ್ಪಕಾಲದವರೆಗೆ ಆಕಾಶಾದಿಭಾವದಿಂದ ಇದ್ದುಕೊಂಡು ಮಳೆಯ ಹನಿಗಳೊಂದಿಗೆ ಈ ಭೂಮಿಗೆ ಇಳಿಯುತ್ತಾರೆ. ಇದು ವಿಶೇಷ ದರ್ಶನದಿಂದ ತಿಳಿದುಬರುತ್ತದೆ: ಅವರು ಬತ್ತ ಜವೆ ಮೂಲಿಕೆ ಇವೇ ಮೊದಲಾದುವುಗಳಾಗಿ ಹುಟ್ಟುತ್ತಾರೆ—ಎಂದು ಹೇಳಿದಮೇಲೆ, 'ಇವುಗಳಿಂದ ತಪ್ಪಿಸಿಕೊಳ್ಳುವುದು ಕಷ್ಟ'[1] (ಛಾಂ. ಉ. ೫. ೧೦. ೬) ಎಂದು ವಿಶೇಷವಾಗಿ ತಿಳಿಸಿರುತ್ತದೆ. ವ್ರೀಹ್ಯಾದಿಭಾವದಿಂದ ಹೊರಕ್ಕೆ ಬರುವುದು ಕಷ್ಟವಾದುದರಿಂದ ಹಿಂದಿನ ಅವಸ್ಥೆಗಳಿಂದ ಸುಖವಾಗಿ ಬರಬಹುದೆಂಬುದು ತಿಳಿದುಬರುತ್ತದೆ. ಆದುದರಿಂದ ವ್ರೀಹ್ಯಾದಿಭಾವವನ್ನು ಪಡೆಯುವುದಕ್ಕೆ ಮೊದಲು ಸ್ವಲ್ಪ ಕಾಲದಲ್ಲಿಯೇ ಇದ್ದು ಇಳಿಯುತ್ತಾರೆ—ಎಂಬುದು ಸಿದ್ಧವಾಗುತ್ತದೆ.

ವಿ.—ವ್ರೀಹ್ಯಾದಿಭಾವವನ್ನು ಹೊಂದುವುದಕ್ಕೆ ಮೊದಲು ಜೀವನಿಗೆ ಬಹಳ ತಡವಿಲ್ಲದೆ ಗಮನವುಂಟಾಗುತ್ತದೆ.

ದ್ವೈ.—'ಅವರಲ್ಲಿ ಯಾರು ಇಲ್ಲಿ ರಮಣೀಯಚರಣರೋ ಅವರು ರಮಣೀಯಯೋನಿಯನ್ನು ಶೀಘ್ರವಾಗಿ ಪಡೆಯುತ್ತಾರೆ'[2] (ಛಾಂ. ಉ. ೫. ೧೦. ೭) ಎಂಬ ವಿಶೇಷ ಶ್ರುತಿಯ ಪ್ರಕಾರ ಕರ್ಮಿಯು ಶೀಘ್ರವಾಗಿ ಯೋನಿಯನ್ನು ಹೊಂದುತ್ತಾನೆ.

---

* ಇದು ಮಧ್ವಭಾಷ್ಯದಲ್ಲಿ ಅಚಿರಪ್ರಾಪ್ತ್ಯಧಿಕರಣ ಎನಿಸಿದೆ.

1 ಅತೋ ವೈ ಖಲು ದುರ್ನಿಷ್ಪ್ರಪತರಮ್ ।

2 ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತ ಇತಿ ವಿಶೇಷಾನ್ನಾತಿಚಿರೇಣ (ಮ. ಭಾ.).

# ೬. ಅನ್ಯಾಧಿಷ್ಠಿತಾಧಿಕರಣ

(ಸೂ. ೨೪–೨೭)

**ಅನ್ಯಾಧಿಷ್ಠಿತೇಷು ಪೂರ್ವವದಭಿಲಾಪಾತ್ ॥ ೨೪ ॥**

೨೪. ಬೇರೆ (ಜೀವರಿಗೆ) ಅಧಿಷ್ಠಿತವಾಗಿರುವ (ವ್ರೀಹ್ಯಾದಿ)ಗಳಲ್ಲಿ (ಇಳಿಯುತ್ತಿರುವ ಜೀವರು) ಹಿಂದಿನಂತೆ (ಪ್ರವೇಶಿಸುತ್ತಾರೆ); ಏಕೆಂದರೆ ಹಾಗೆ ಹೇಳಿದೆ.

ಆ ಅವರೋಹದಲ್ಲಿ ಜೀವರು ಮಳೆಯಹನಿಗಳೊಂದಿಗೆ ಕೆಳಗೆ ಬೀಳುತ್ತಾರೆ ಎಂದು ಹೇಳಿದ ಮೇಲೆ ಶ್ರುತಿಯು, 'ಅವರು ಇಲ್ಲಿ ಬತ್ತ ಜವೆ ಮೂಲಿಕೆ ಮರಗಳು ಎಳ್ಳುದ್ದುಗಳು ಆಗಿ ಹುಟ್ಟುತ್ತಾರೆ'[1] (ಛಾಂ ಉ. ೫. ೧೦. ೬) ಎಂದು ಹೇಳುತ್ತದೆ. ಹೀಗೆ ಸ್ಥಾವರಜನ್ಮವನ್ನು ಪಡೆದವರು ಸ್ಥಾವರಗಳ ಸುಖದುಃಖಗಳನ್ನೇ ಹೊಂದುತ್ತಾರೆಯೊ ? ಅಥವಾ ಬೇರೆ ಜೀವರಿಗೆ ಆಶ್ರಯವಾಗಿರುವ ಸ್ಥಾವರಶರೀರಗಳಲ್ಲಿ ಸಂಬಂಧಮಾತ್ರವನ್ನು ಪಡೆಯುತ್ತಾರೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಕೆಳಗೆ ಇಳಿಯುತ್ತಿರುವ ಅನುಶಯಿಗಳು ಸ್ಥಾವರಜನ್ಮವನ್ನು ಪಡೆದುಕೊಂಡು ಪ್ರಾಣಿಗಳ ಸುಖದುಃಖಗಳನ್ನೇ ಹೊಂದುತ್ತಾರೆ; ಏಕೆಂದರೆ **ಜಾಯಂತೇ** ಎಂಬ ಶ್ರುತಿಶಬ್ದದಲ್ಲಿ **ಜನ್**-ಧಾತುವಿಗೆ ಮುಖ್ಯಾರ್ಥವು ಹೊಂದುತ್ತದೆ ಮತ್ತು ಸ್ಥಾವರಭಾವವು ಉಪಭೋಗಸ್ಥಾನವೆಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ. ಇಷ್ಟಾದಿಕರ್ಮಗಳಲ್ಲಿ ಪಶುಹಿಂಸಾದಿಗಳು ಇರುವುದರಿಂದ ಅನಿಷ್ಟಫಲವೂ ಆಗಬಹುದು. ಆದುದರಿಂದ ನಾಯಿಯ ಜನ್ಮ ಮೊದಲಾದುವನ್ನು ಶ್ರುತಿಯು (ಛಾಂ ಉ. ೫. ೧೦. ೭) ಹೇಳುವಂತೆ ಅನುಶಯವುಳ್ಳ ಜೀವರಿಗೆ ವ್ರೀಹ್ಯಾದಿಜನ್ಮವನ್ನು ಮುಖ್ಯಾರ್ಥದಲ್ಲಿ ಗ್ರಹಿಸಬೇಕು.

**ಸಿದ್ಧಾಂತಿ**—ಅನ್ಯಜೀವರಿಗೆ ಆಶ್ರಯವಾಗಿರುವ ವ್ರೀಹ್ಯಾದಿಗಳಲ್ಲಿ ಅನುಶಯವುಳ್ಳ ಜೀವರು ಸಂಬಂಧವನ್ನು ಮಾತ್ರ ಪಡೆಯುತ್ತಾರೆ, ಅವುಗಳ ಸುಖದುಃಖಗಳನ್ನು ಪಡೆಯುವುದಿಲ್ಲ. ಇದು ಹಿಂದಿನಂತೆಯೇ ; ಹೇಗೆ ವಾಯು-ಧೂಮಾದಿಭಾವಗಳೆಂದರೆ ಜೀವರಿಗೆ ಅವುಗಳ ಸಂಬಂಧಮಾತ್ರವೋ ಹಾಗೆಯೇ ವ್ರೀಹ್ಯಾದಿಭಾವವೆಂದರೆ ಸ್ಥಾವರಗಳೊಂದಿಗೆ ಸಂಬಂಧಮಾತ್ರವೇ. ಹೇಗೆ ಜೀವರು ಆಕಾಶವಾಗಿ ಮಳೆಯಾಗುವವರೆಗೆ ಯಾವ ಕರ್ಮವ್ಯಾಪಾರವನ್ನೂ ಹೇಳಿಲ್ಲವೊ ಹಾಗೆಯೇ ವ್ರೀಹ್ಯಾದಿಜನ್ಮದಲ್ಲಿಯೂ ಕರ್ಮದ ಪರಾಮರ್ಶವಿಲ್ಲ. ಆದರೆ ಜೀವರು ಸುಖದುಃಖಗಳನ್ನು ಪಡೆಯುತ್ತಾರೆ ಎಂಬುದನ್ನು ಶ್ರುತಿಯು ತಿಳಿಸುವಾಗ ಅಲ್ಲಿ 'ಯಾರು ರಮಣೀಯಚರಣರೊ ಕಪೂರಚರಣರೊ' (ಛಾಂ. ಉ. ೫.

---

1 ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯಂತೇ ।

೧೦ ೭) ಎಂದು ಪರಾಮರ್ಶಿಸಿರುತ್ತದೆ ವ್ರೀಹ್ಯಾದಿಶರೀರಗಳನ್ನು ಅನುಶಯಿಗಳಾದ ಜೀವರು ಪಡೆದುಕೊಂಡರೆ ಅವುಗಳನ್ನು ಕುಟ್ಟುವಾಗ, ಬೇಯಿಸುವಾಗ ಅಥವಾ ತಿನ್ನುವಾಗ ಅವರು ಅಲ್ಲಿಂದ ಹೋಗಬೇಕಾಗುವುದು ಸ್ಥಾವರಭಾವವು ಉಪಭೋಗಸ್ಥಾನವೆಂಬುದನ್ನು ನಾವು ನಿರಾಕರಿಸುವುದಿಲ್ಲ ಅದು ಪಾಪಕರ್ಮಿಗಳಿಗೆ ಉಪಭೋಗಸ್ಥಾನವಾಗುತ್ತದೆಯೇ ಹೊರತು ಚಂದ್ರಮಂಡಲದಿಂದ ಇಳಿಯುವ ಅನುಶಯಿಗಳಿಗೆ ಆಗುವುದಿಲ್ಲ

ವಿ.—ಇತರ ಜೀವರಿಂದ ಅಧಿಷ್ಠಿತವಾದ ವ್ರೀಹ್ಯಾದಿಶರೀರಗಳಲ್ಲಿ ಇಳಿಯುತ್ತಿರುವ ಜೀವರಿಗೆ ಸಂಶ್ಲೇಷಮಾತ್ರವಿರುತ್ತದೆ [1]

ದ್ವೈ.—ಅನ್ಯಜೀವರಿಂದ ಅಧಿಷ್ಠಿತವಾದ ವ್ರೀಹ್ಯಾದಿಶರೀರದಲ್ಲಿ ಪ್ರವೇಶಮಾತ್ರವೇ ಹೊರತು ಭೋಗವಿಲ್ಲ.[2]

## ಅಶುದ್ಧಮಿತಿ ಚೇನ್ನ ಶಬ್ದಾತ್ ॥ ೨೫ ॥

೨೫. (ಯಜ್ಞಕರ್ಮವು) ಅಶುದ್ಧವೆಂದರೆ ಅದು ಸರಿಯಲ್ಲ ; ಏಕೆಂದರೆ ಶ್ರುತಿಯಿದೆ

ಪಶುಹಿಂಸಾದಿಗಳ ಸಂಬಂಧವಿರುವುದರಿಂದ ಯಜ್ಞಕರ್ಮವು ಅಶುದ್ಧವೆಂಬುದು ಸರಿಯಲ್ಲ ; ಏಕೆಂದರೆ ಧರ್ಮ, ಅಧರ್ಮ ಎಂಬ ಜ್ಞಾನಕ್ಕೆ ಶಾಸ್ತ್ರವೇ ಹೇತುವಾಗಿರುತ್ತದೆ.[3] ಶಾಸ್ತ್ರವು ಅತೀಂದ್ರಿಯವಾಗಿದೆ ಮತ್ತು ದೇಶಕಾಲನಿಮಿತ್ತಗಳಿಂದ ಬದ್ಧವಾಗಿಲ್ಲ. ಯಾವ ದೇಶಕಾಲನಿಮಿತ್ತಗಳಲ್ಲಿ ಯಾವುದು ಧರ್ಮವೆಂದು ಅನುಷ್ಠಿಸಲ್ಪಡುವುದೊ ಅದು ಬೇರೆ ದೇಶಕಾಲನಿಮಿತ್ತಗಳಲ್ಲಿ ಅಧರ್ಮವಾಗುತ್ತದೆ.[4] ಆದುದರಿಂದ ಶಾಸ್ತ್ರವಿಲ್ಲದೆ ಧರ್ಮಾಧರ್ಮಗಳ ವಿಷಯದಲ್ಲಿ ಜ್ಞಾನವು ಯಾರಿಗೂ ಇರುವುದಿಲ್ಲ.[5] ಶಾಸ್ತ್ರದಿಂದಲೇ ಹಿಂಸಾನುಗ್ರಹಾದಿರೂಪದ ಜ್ಯೋತಿಷ್ಟೋಮವು ಧರ್ಮವೆಂದು ತಿಳಿದುಬರುವಾಗ ಅದು ಅಶುದ್ಧವೆಂದು ಹೇಳಲು ಹೇಗೆ ತಾನೆ ಆದೀತು ? 'ಯಾವ ಪ್ರಾಣಿಯನ್ನೂ ಹಿಂಸಿಸಬಾರದು'[6] ಎಂದು ಶಾಸ್ತ್ರವೇ ಪ್ರಾಣಿಹಿಂಸೆಯು ಅಧರ್ಮವೆಂದು ಹೇಳಿರಬಹುದು ; ಆದರೆ ಅದು

---

[1] ಜೀವಾಂತರೇಣಾಧಿಷ್ಠಿತೇ ವ್ರೀಹ್ಯಾದಿಶರೀರೇ ತೇಷಾಂ ಸಂಶ್ಲೇಷಮಾತ್ರಮೇವ (ಶ್ರೀಭಾಷ್ಯ).

[2] ಅನ್ಯಾಧಿಷ್ಠಿತೇ ವ್ರೀಹ್ಯಾದಿಶರೀರೇ ಪ್ರವೇಶಃ । ನ ತು ಭೋಗೋಽಸ್ಯ (ಮ. ಭಾ.)

[3] ಶಾಸ್ತ್ರಹೇತುತ್ವಾದ್ಧರ್ಮಾಧರ್ಮವಿಜ್ಞಾನಸ್ಯ (ಸೂ. ಭಾ.)

[4] ಯಸ್ಮಿನ್ ದೇಶೇ ಕಾಲೇ ನಿಮಿತ್ತೇ ಚ ಯೋ ಧರ್ಮೋಽನುಷ್ಠೀಯತೇ ಸ ಏವ ದೇಶಕಾಲನಿಮಿತ್ತಾಂತರೇಷ್ವಧರ್ಮೋ ಭವತಿ (ಸೂ. ಭಾ ).

[5] ತೇನ ನ ಶಾಸ್ತ್ರಾದೃತೇ ಧರ್ಮಾಧರ್ಮವಿಷಯಂ ವಿಜ್ಞಾನಂ ಕಸ್ಯಚಿದಸ್ತಿ (ಸೂ. ಭಾ )

[6] ನ ಹಿಂಸ್ಯಾತ್ ಸರ್ವಾ ಭೂತಾನಿ (ಸೂ. ಭಾ.).

ಸಾಮಾನ್ಯನಿಯಮವು ; 'ಅಗ್ನಿಷ್ಟೋಮದ ಪಶುವನ್ನು ಅರ್ಪಿಸಬೇಕು'[1] ಎಂಬುದು ವಿಶೇಯನಿಯಮವಾಗಿರುತ್ತದೆ ಆದುದರಿಂದ ಸಾಮಾನ್ಯ-ವಿಶೇಷ-ನಿಯಮಗಳಿಗೆ ಬೇರೆ ಬೇರೆ ವಿಷಯಗಳಿರುತ್ತವೆ. ಆದುದರಿಂದ ಶಿಷ್ಟರು ಮಾಡುವ ವೈದಿಕಕರ್ಮವು ಶುದ್ಧ ವಾಗಿರುತ್ತದೆ, ಸ್ಥಾವರವಾಗಿ ಹುಟ್ಟುವುದು ಅದರ ಫಲವಾಗಲಾರದು. ವ್ರೀಹ್ಯಾದಿ ಜನ್ಮವು ನಾಯಿಯೇ ಮೊದಲಾದುವುಗಳ ಜನ್ಮದ ಹಾಗೆ—ಎಂಬುದೂ ಸರಿಯಲ್ಲ ; ಏಕೆಂದರೆ ಅದು ಕಪೂಯಚರಣರಾದ ಪಾಪಕರ್ಮಿಗಳನ್ನು ಕುರಿತು ಹೇಳಿದ್ದು ಆದುದ ರಿಂದ ಚಂದ್ರಮಂಡಲದಿಂದ ಸ್ಖಲಿತರಾದ ಅನುಶಯಿಗಳಿಗೆ ಆಗುವ ವ್ರೀಹ್ಯಾದಿಸಂಶ್ಲೇಷ ವನ್ನೇ ವ್ರೀಹ್ಯಾದಿಭಾವವೆಂದು ಉಪಚಾರಕ್ಕಾಗಿ ಹೇಳಿದೆ.

ವಿ.—ಯಜ್ಞಪಶುವು 'ಸುವರ್ಣಮಯಶರೀರವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗುತ್ತದೆ'[2] ಎಂದು ಶ್ರುತಿಯಿರುವುದರಿಂದ ಅಗ್ನೀಷೋಮೀಯಾದಿಗಳು ಅಶುದ್ಧ ವಲ್ಲವು ಅತಿಶಯವಾದ ಅಭ್ಯುದಯಕ್ಕೆ ಕಾರಣವಾದ ಕರ್ಮವು—ಸ್ವಲ್ಪ ದುಃಖ ವನ್ನುಂಟುಮಾಡುವದಾದರೂ—ಹಿಂಸೆಯಲ್ಲವು, ರಕ್ಷಣೆಯೇ ಆಗಿರುತ್ತದೆ. ಚಿಕಿತ್ಸೆಯು ತತ್ಕಾಲದಲ್ಲಿ ದುಃಖಕಾರಿಯಾಗಿದ್ದರೂ ರೋಗಿಯನ್ನು ಕಾಪಾಡುತ್ತದೆಂದು ತಜ್ಞರು ಹೇಳುತ್ತಾರೆ.[3]

ದ್ವೈ.—ಯಜ್ಞಕರ್ಮವು ಹಿಂಸಾರೂಪವಾಗಿರುವುದರಿಂದಲೂ ಪಾಪವನ್ನುಂಟು ಮಾಡುವುದರಿಂದಲೂ ದುಃಖಸಾಧನವೆಂದು ಹೇಳಕೂಡದು; ಏಕೆಂದರೆ **ಜ್ಯೋತಿಷ್ಟೋ- ಮೇನ ಸ್ವರ್ಗಕಾಮೋ ಯಜೇತ** ಎಂದು ಶ್ರುತಿವಿಹಿತವಾಗಿದೆ. ವೇದೋಕ್ತವಾದ ಹಿಂಸೆಯಿಂದ ಅನರ್ಥವುಂಟಾಗುವುದಿಲ್ಲವೆಂದು ವರಾಹಪುರಾಣವು ಹೇಳುತ್ತದೆ

**ರೇತಃಸಿಗ್ಯೋಗೋಽಥ*   ॥ ೨೬ ॥**

೨೬ ಅನಂತರ (ಜೀವನು) ರೇತಃಸೇಚನಮಾಡುವವನೊಂದಿಗೆ ಯುಕ್ತನಾಗು ತ್ತಾನೆ.

ವ್ರೀಹ್ಯಾದಿಭಾವವುಂಟಾದ ಬಳಿಕ ಅನುಶಯಿಗಳಿಗೆ ರೇತಃಸಿಗ್ಭಾವವನ್ನು ಶ್ರುತಿಯು ಹೇಳುತ್ತದೆ : 'ಯಾವ ಯಾವನು ಅನ್ನವನ್ನು ತಿನ್ನುತ್ತಾನೆಯೋ, ರೇತಸ್ಸನ್ನು ಸೇಚಿಸು ತ್ತಾನೆಯೊ ಅವನಂತೆಯೇ ಆಗುತ್ತಾನೆ'[4] (ಛಾಂ. ಉ. ೫. ೧೦. ೬). ಇಲ್ಲಿಯೂ

---

1 ಅಗ್ನೀಷೋಮೀಯಂ ಪಶುಮಾಲಭೇತ (ಸೂ. ಭಾ ).

2 ಹಿರಣ್ಯಶರೀರ ಊರ್ಧ್ವಃ ಸ್ವರ್ಗಂ ಲೋಕಮೇತಿ (ಶ್ರೀಭಾಷ್ಯ).

3 ಚಿಕಿತ್ಸಕಂ ಚ ತಾದಾತ್ವಿಕಾಲ್ಪದುಃಖಕಾರಿಣಮಪಿ ರಕ್ಷಕಮೇವ ವದಂತಿ, **ಪೂಜ-** ಯಂತಿ ಚ ತಜ್ಜ್ಞಾಃ (ಶ್ರೀಭಾಷ್ಯ).

* ಇದು ಮಧ್ವಭಾಷ್ಯದಲ್ಲಿ ರೇತೋಽಧಿಕರಣ ಎಂಬ ಹೊಸ ಅಧಿಕರಣವಾಗಿದೆ.

4 ಯೋ ಯೋ ಹ್ಯನ್ನಮತ್ತಿ ಯೋ ರೇತಃ ಸಿಂಚತಿ ತದ್ಭೂಯ ಏವ ಭವತಿ ।

ಕೂಡ ರೇತಃಸಿಗ್ಭಾವವನ್ನು ಮುಖ್ಯಾರ್ಥದಲ್ಲಿ ಗ್ರಹಿಸಕೂಡದು ; ರೇತಃಸೇಚನಮಾಡು ವವನೊಂದಿಗೆ ಉಂಟಾಗುವ ಸಂಬಂಧವೇ ರೇತಃಸಿಗ್ಭಾವವು. ಹೀಗೆಯೇ ವ್ರೀಹ್ಯಾದಿ-ಭಾವವೂ ವ್ರೀಹ್ಯಾದಿಯೋಗವೆಂಬುದು ಅವಿರುದ್ಧವಾಗಿದೆ.

ವಿ.—ರೇತಃಸೇಚನಮಾಡುವವನೊಂದಿಗೆ ಜೀವನು ಸಂಶ್ಲೇಷವನ್ನು ಹೊಂದುತ್ತಾನೆ.

ದ್ವೈ.—'ಸ್ವರ್ಗದಿಂದ ಇಳಿಯುತ್ತಿರುವ ಕರ್ಮಿಗೆ ಮೊದಲು ಪಿತೃಪ್ರದೇಶವು, (ಅನಂತರ ಮಾತೃಪ್ರದೇಶವು)' ಎಂಬುದು ಸೂತ್ರಾರ್ಥ.

## ಯೋನೇಃ ಶರೀರಮ್* ॥ ೨೭ ॥

೨೭. ಯೋನಿಯಿಂದ (ಹೊಸ) ಶರೀರವು (ಉಂಟಾಗುತ್ತದೆ).

ರೇತಃಸಿಗ್ಭಾವವಾದಮೇಲೆ ಯೋನಿಯಲ್ಲಿ ರೇತಸ್ಸು ನಿಷಿಕ್ತವಾಗುತ್ತದೆ ; ಅನಂತರ ಅನುಶಯಿಗಳಿಗೆ ಅನುಶಯದ ಫಲವನ್ನು ಉಪಭೋಗಿಸುವುದಕ್ಕಾಗಿ ಯೋನಿಯಲ್ಲಿ ಶರೀರವುಂಟಾಗುತ್ತದೆ.

ವಿ.—ಯೋನಿಯನ್ನು ಪಡೆದಮೇಲೆಯೇ ಅನುಶಯಿಗಳಿಗೆ ಶರೀರಪ್ರಾಪ್ತಿಯಾಗುತ್ತದೆ ; ಆ ಶರೀರದಲ್ಲಿಯೇ ಸುಖದುಃಖಗಳ ಉಪಭೋಗವಾಗುತ್ತದೆ.

ದ್ವೈ.—ಪಿತೃಶರೀರದಿಂದ ಮಾತೃಶರೀರವನ್ನು ಪ್ರವೇಶಿಸಿ ಅನಂತರ ಶರೀರವನ್ನು ಪಡೆಯುತ್ತಾನೆ.

* ಇದು ಮಧ್ವಭಾಷ್ಯದಲ್ಲಿ ಯೋನ್ಯಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

## ಎರಡನೆಯ ಪಾದ

# ೧. ಸಂಧ್ಯಾಧಿಕರಣ

(ಸೂ. ೧–೬)

**ಸಂಧ್ಯೇ ಸೃಷ್ಟಿರಾಹ ಹಿ ॥ ೧ ॥**

೧. ಸಂಧಿಯಲ್ಲಿ (ನಿಜವಾದ) ಸೃಷ್ಟಿಯಿದೆ; ಏಕೆಂದರೆ (ಶ್ರುತಿಯು ಅದನ್ನು) ಹೇಳುತ್ತದೆ.

ಈಗ ಜೀವನ ಅವಸ್ಥಾಭೇದವನ್ನು ವಿವರಿಸಲಾಗುವುದು. 'ಮೂರನೆಯದಾದ ಸ್ವಪ್ನಸ್ಥಾನವು (ಇವೆರಡರ) ಸಂಧಿಯಲ್ಲಿರುವುದು ...ಅವನು ಎಲ್ಲಿ ಕನಸುಕಾಣುವನೊ....'[1] (ಬೃ. ಉ. ೪. ೩. ೯) ಎಂದು ಶ್ರುತಿಯು ಪ್ರಾರಂಭಿಸಿ ಹೀಗೆ ಮುಂದುವರಿಯುತ್ತದೆ: 'ಅಲ್ಲಿ ರಥಗಳಾಗಲಿ ಅವುಗಳಿಗೆ ಕಟ್ಟಲ್ಪಡುವ (ಕುದುರೆಯೇ ಮೊದಲಾದ) ಪ್ರಾಣಿಗಳಾಗಲಿ ಪಥಗಳಾಗಲಿ ಇರುವುದಿಲ್ಲ; ಆದರೆ ಅವನು ರಥಗಳನ್ನೂ ಪ್ರಾಣಿಗಳನ್ನೂ ಪಥಗಳನ್ನೂ ಸೃಷ್ಟಿಸಿಕೊಳ್ಳುತ್ತಾನೆ'[2] (ಬೃ. ಉ. ೪. ೩. ೧೦). ಜಾಗ್ರದವಸ್ಥೆಯ ಹಾಗೆ ಸ್ವಪ್ನದಲ್ಲಿಯೂ ಸೃಷ್ಟಿಯು ಪಾರಮಾರ್ಥಿಕವೊ? ಅಥವಾ ಮಾಯಾಮಯವೊ?—ಎಂಬ ಸಂಶಯವು ಇಲ್ಲಿ ಬರುತ್ತದೆ.

**ಪೂರ್ವಪಕ್ಷ**—ಸಂಧಿಯಲ್ಲಿ ನಿಜವಾದ ಸೃಷ್ಟಿಯಿದೆ; ಇಲ್ಲಿ 'ಸಂಧಿ' ಎಂದರೆ ಜಾಗ್ರದವಸ್ಥೆ-ನಿದ್ರೆಗಳ ಮಧ್ಯದಲ್ಲಿರುವ ಮೂರನೆಯದಾದ ಸ್ವಪ್ನಸ್ಥಾನ. ಅವನು ರಥವೇ ಮೊದಲಾದುವುಗಳನ್ನು ಸೃಷ್ಟಿಸಿಕೊಳ್ಳುತ್ತಾನೆ, ಅವನು ಕರ್ತೃ—ಎಂದು ಶ್ರುತಿಯು ಹೇಳಿರುವುದರಿಂದ ಸೃಷ್ಟಿಯು ಸತ್ಯ.

**ವಿ.**—ಶ್ರುತಿಯು ತಿಳಿಸುವ ರಥಾದಿಸೃಷ್ಟಿಯನ್ನು ಜೀವನೇ ಮಾಡುತ್ತಾನೆಯೊ? ಅಥವಾ ಈಶ್ವರನು ಮಾಡುತ್ತಾನೆಯೊ?—ಎಂಬುದು ಸಂಶಯ. ಸಂಧಿಯಲ್ಲಿ ಆಗುವ ಸೃಷ್ಟಿಯು ಜೀವನದೇ—ಎಂಬುದು ಪೂರ್ವಪಕ್ಷ;[3] ಏಕೆಂದರೆ 'ಅವನು ಸೃಷ್ಟಿಸುತ್ತಾನೆ, ಅವನು ಕರ್ತೃ' ಎಂದು ಶ್ರುತಿಯು ಸ್ವಪ್ನವನ್ನು ನೋಡುತ್ತಿರುವ ಜೀವನನ್ನು ಕುರಿತೇ ಹೇಳುತ್ತದೆ.

---

1 ಸಂಧ್ಯಂ ತೃತೀಯಂ ಸ್ವಪ್ನಸ್ಥಾನಮ್; ..ಸ ಯತ್ರ ಪ್ರಸ್ವಪಿತಿ....।

2 ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ, ಅಥ ರಥಾನ್ ರಥಯೋಗಾನ್ ಪಥಃ ಸೃಜತೇ ।

3 ಶಂಕರ-ರಾಮಾನುಜರ ಪೂರ್ವಪಕ್ಷಗಳು ಬೇರೆ ಬೇರೆಯಾಗಿರುವುದನ್ನು ಗಮನದಲ್ಲಿಡಬೇಕು. ಶಾಂಕರಭಾಷ್ಯದ ಮತ್ತು ಶ್ರೀಭಾಷ್ಯದ ಪ್ರಕಾರ ಈ ಸೂತ್ರ ಮತ್ತು ಮುಂದಿನದೂ ಪೂರ್ವಪಕ್ಷದ ಸೂತ್ರಗಳಾಗಿವೆ.

ದ್ವೈ.—ಭಕ್ತಿಯನ್ನು ಈ ಪಾದದಲ್ಲಿ ಹೇಳಿದೆ ; ಭಕ್ತಿಗೋಸ್ಕರ ಭಗವಂತನ ಮಹಿಮೆಯನ್ನು ಇಲ್ಲಿ ಹೇಳಿದೆ ಭಗವಂತನ ಹೊರತು ಸ್ವಪ್ನವೂ ಕೂಡ ಆಗುವುದಿಲ್ಲ.[1]

**ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ॥ ೨ ॥**

೨. ನಿರ್ಮಾತೃವು (ಈಶ್ವರನೆಂದು) ಕೆಲವರು (ಹೇಳುತ್ತಾರೆ), (ಅಲ್ಲಿ) ಪುತ್ರಾದಿಗಳೇ (ಕಾಮಗಳು).

'(ಇತರರು) ನಿದ್ರಿಸುತ್ತಿರುವಾಗ ಬೇರೆ ಬೇರೆ ಕಾಮಗಳನ್ನು ನಿರ್ಮಿಸುತ್ತ ಯಾವ ಈ ಪುರುಷನು ಎಚ್ಚತ್ತಿರುವನೊ'[2] (ಕ. ಉ. ೨. ೫. ೮) ಎಂದು ಇನ್ನೊಂದು ಶಾಖೆಯವರು ಈ ಸಂಧಿಯಲ್ಲಿ ಆತ್ಮನೇ ಕಾಮಗಳ ನಿರ್ಮಾತೃವೆಂದು ಹೇಳುತ್ತಾರೆ ಇಲ್ಲಿ ಕಾಮಗಳೆಂದರೆ ಪುತ್ರಾದಿಗಳೇ ಈ ನಿರ್ಮಾತೃವು ಪರಮಾತ್ಮನೆಂದೇ ಈ ಪ್ರಕರಣದ ವಾಕ್ಯಶೇಷಗಳಿಂದ [3] ತಿಳಿದುಬರುತ್ತದೆ. ಪರಮಾತ್ಮನು ಸೃಷ್ಟಿಸಿರುವ ಜಾಗರಿತಾವಸ್ಥೆಯು ಸತ್ಯವಾಗಿರುವ ಹಾಗೆ ಸ್ವಪ್ನಾವಸ್ಥೆಯೂ ಸತ್ಯವಾಗಿರಬೇಕು. 'ಆದರೆ ಇನ್ನು ಕೆಲವರು ಹೀಗೆ ಹೇಳುತ್ತಾರೆ: ಮನುಷ್ಯನ ಸ್ವಪ್ನಾವಸ್ಥೆಯೆಂಬುದು ಜಾಗ್ರದವಸ್ಥೆಯೇ; ಏಕೆಂದರೆ ಅವನು ಜಾಗ್ರದವಸ್ಥೆಯಲ್ಲಿ ನೋಡಿದುದನ್ನೇ ಸ್ವಪ್ನದಲ್ಲಿಯೂ ನೋಡುತ್ತಾನೆ'[4] (ಬೃ. ಉ. ೪. ೩. ೧೪) ಎಂಬ ಶ್ರುತಿಯ ಪ್ರಕಾರ ಸ್ವಪ್ನ-ಜಾಗ್ರದವಸ್ಥೆಗಳಿಗೆ ಭೇದವಿಲ್ಲ. ಆದುದರಿಂದ ಸಂಧಿಯಲ್ಲಿ ಆಗುವ ಸೃಷ್ಟಿಯು ಸತ್ಯವೇ ಆಗಿರುತ್ತದೆ.

ವಿ.—ಇನ್ನೊಂದು ಶಾಖೆಯ ಪ್ರಕಾರ (ಕ. ಉ. ೨. ೫. ೮) ಕನಸನ್ನು ನೋಡುತ್ತಿರುವ ಜೀವನೇ ಕಾಮಗಳನ್ನು ನಿರ್ಮಿಸುತ್ತಾನೆ. ಹೀಗೆ ಜೀವನೇ ರಥಾದಿಗಳನ್ನು ಸ್ವಪ್ನದಲ್ಲಿ ಸೃಷ್ಟಿಸುತ್ತಾನೆ. ಜೀವನ ಸತ್ಯಸಂಕಲ್ಪತ್ವವು ಪ್ರಜಾಪತಿಯ ವಾಕ್ಯದಿಂದಲೂ ತಿಳಿದುಬರುತ್ತದೆ. ಆದುದರಿಂದ ಉಪಕರಣಗಳಿಲ್ಲದಿದ್ದರೂ ಸೃಷ್ಟಿಸಲು ಜೀವನು ಸಮರ್ಥನಾಗಿರುತ್ತಾನೆ

ದ್ವೈ.—'ಯಾವ ಪರಮಾತ್ಮನು ನಿದ್ರಿತರಾದ ಜೀವರಲ್ಲಿ ಕಾಮ್ಯವಸ್ತುಗಳನ್ನು ನಿರ್ಮಾಣಮಾಡುವವನಾಗಿ ಎಚ್ಚತ್ತಿರುವನೊ' (ಕ. ಉ. ೨. ೫. ೮) ಎಂಬ ಶ್ರುತಿಯ ಪ್ರಕಾರ ಕೆಲವು ಶಾಖೆಗಳು ವಿಷ್ಣುವೇ ಸ್ವಪ್ನದಲ್ಲಿ ವಸ್ತುಗಳನ್ನು ಸೃಷ್ಟಿಸುತ್ತಾನೆಂದು ಹೇಳುತ್ತವೆ.

---

1 ಭಕ್ತಿರಸ್ಮಿನ್ ಪಾದ ಉಚ್ಯತೇ । ಭಕ್ತ್ಯರ್ಥಂ ಭಗವನ್ಮಹಿಮೋಕ್ತಿಃ । ನ ಸ್ವಪ್ನೋಽಪಿ ತಂ ವಿನಾ ಪ್ರತೀಯತೇ ।

2 ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ ।

3 ಕ ಉ. ೧. ೨. ೧೪.

4 ಅಥೋ ಖಲ್ವಾಹುಃ, ಜಾಗರಿತದೇಶ ಏವಾಸ್ಯೈಷ ಇತಿ ; ಯಾನಿ ಹ್ಯೇವ ಜಾಗ್ರತ್ ಪಶ್ಯತಿ ತಾನಿ ಸುಪ್ತ ಇತಿ ।

## ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ‖ ೩ ‖

೩. ಆದರೆ (ಸ್ವಪ್ನಸೃಷ್ಟಿಯೂ) ಮಾಯಾಮಾತ್ರವೇ, ಏಕೆಂದರೆ ಸಂಪೂರ್ಣವಾಗಿ ಅಭಿವ್ಯಕ್ತವಾಗದ ಸ್ವರೂಪವುಳ್ಳದ್ದು.

**ಸಿದ್ಧಾಂತಿ**—ಸೂತ್ರದಲ್ಲಿರುವ **ತು**-ಶಬ್ದವು ಪೂರ್ವಪಕ್ಷವನ್ನು ನಿರಾಕರಿಸುತ್ತದೆ. ಸ್ವಪ್ನದ ಸೃಷ್ಟಿಯು ಮಾಯೆಯೇ ಹೊರತು ಪರಮಾರ್ಥವಲ್ಲ; ಏಕೆಂದರೆ ಸ್ವಪ್ನಜಗತ್ತು ಸಂಪೂರ್ಣವಾಗಿ ಎಂದರೆ ಪರಮಾರ್ಥವಸ್ತುವಿನ ಧರ್ಮದಿಂದ ಅಭಿವ್ಯಕ್ತವಾಗುತ್ತಿಲ್ಲ.[1] ದೇಶ-ಕಾಲ-ನಿಮಿತ್ತ-ವಸ್ತುಗಳೂ ಬಾಧವಾಗದೆ ಇರುವುದೂ ಪರಮಾರ್ಥವು. ಇಂಥ ಪರಮಾರ್ಥವು ಸ್ವಪ್ನದಲ್ಲಿ ಕಂಡುಬರುವುದಿಲ್ಲ. ರಥಾದಿಗಳಿಗೆ ಉಚಿತವಾದ ದೇಶವು ಸ್ವಪ್ನದಲ್ಲಿ ಇರುವುದಿಲ್ಲ. ಕನಸನ್ನು ನೋಡುತ್ತಿರುವವನು ದೇಹದ ಹೊರಗೆ ಹೋಗುತ್ತಾನೆಂದು ಶ್ರುತಿಯ ಆಧಾರದ ಮೇಲೆ (ಬೃ ಉ. ೪. ೩ ೧೨)[2] ಹೇಳಲಾಗುವುದಿಲ್ಲ; ಏಕೆಂದರೆ ಸ್ವಪ್ನವನ್ನು ನೋಡುತ್ತಿರುವ ಜೀವನು ಕ್ಷಣಮಾತ್ರದಲ್ಲಿ ದೂರದಲ್ಲಿರುವ ದೇಶಕ್ಕೆ ಹೋಗುವುದಕ್ಕೂ ಅಲ್ಲಿಂದ ಹಿಂತಿರುಗುವುದಕ್ಕೂ ಸಾಧ್ಯವಿಲ್ಲ. ಇನ್ನೊಂದು ಶ್ರುತಿಯು 'ತನ್ನ ಶರೀರದಲ್ಲಿ ಸ್ವೇಚ್ಛೆಯಾಗಿ ಸುತ್ತಾಡುತ್ತಾನೆ'[3] (ಬೃ ಉ. ೨. ೧ ೧೮) ಎಂದು ಹೇಳುತ್ತದೆ ಆದುದರಿಂದ ಜೀವನು ಸ್ವಪ್ನಕಾಲದಲ್ಲಿ ಹೊರಗೆ ಹೋಗುತ್ತಾನೆ ಎಂಬುದನ್ನು ತಿಳಿಸುವ ಶ್ರುತಿಯನ್ನು ಗೌಣವಾಗಿ ತೆಗೆದುಕೊಳ್ಳಬೇಕು. ಸ್ವಪ್ನದಲ್ಲಿ ಕಾಲವೂ ಕೂಡ ಹೊಂದುವುದಿಲ್ಲ. ರಾತ್ರಿಯಲ್ಲಿ ಮಲಗಿರುವವನು ಸ್ವಪ್ನದಲ್ಲಿ ಹಗಲನ್ನು ನೋಡುತ್ತಾನೆ. ಒಂದು ಮುಹೂರ್ತಮಾತ್ರವೇ ಇರುವ ಸ್ವಪ್ನದಲ್ಲಿ ವರ್ಷಗಳು ಕಳೆದುಹೋಗುತ್ತವೆ. ಮೂರನೆಯದಾಗಿ ಸ್ವಪ್ನದಲ್ಲಿ ಜ್ಞಾನಕ್ಕಾಗಲಿ ಕರ್ಮಕ್ಕಾಗಲಿ ನಿಮಿತ್ತಗಳು ಯೋಗ್ಯವಾಗಿರುವುದಿಲ್ಲ; ಕರಣಗಳನ್ನು ಉಪಸಂಹರಿಸಿಕೊಂಡಿರುವುದರಿಂದ ಇವನಿಗೆ ರಥಾದಿಗಳನ್ನು ಗ್ರಹಿಸುವುದಕ್ಕೆ ಕಣ್ಣು ಮೊದಲಾದ ಇಂದ್ರಿಯಗಳಿರುವುದಿಲ್ಲ; ಮತ್ತೆ ರಥಾದಿಗಳನ್ನು ಮಾಡುವುದಕ್ಕೆ ನಿಮಿಷಮಾತ್ರದಲ್ಲಿ ಸಾಮರ್ಥ್ಯವಾಗಲಿ ಮರವಾಗಲಿ ಎಲ್ಲಿಂದ ಬರುತ್ತವೆ? ಈ ಸ್ವಪ್ನದಲ್ಲಿ ನೋಡಿದ ರಥಾದಿಗಳೆಲ್ಲ ಜಾಗ್ರದವಸ್ಥೆಯಲ್ಲಿ ಬಾಧಿತವಾಗುತ್ತವೆ; ಅಷ್ಟೇಕೆ? ಸ್ವಪ್ನದಲ್ಲಿಯೇ ಬಾಧಿತವಾಗುತ್ತವೆ! ರಥವು ಮನುಷ್ಯನಾಗಬಹುದು, ಮನುಷ್ಯನು ವೃಕ್ಷವಾಗಬಹುದು. ಆದುದರಿಂದ ಸ್ವಪ್ನದರ್ಶನವು ಮಾಯಾಮಾತ್ರವಾಗಿರುತ್ತದೆ.

---

[1] ನ ಹಿ ಕಾರ್ತ್ಸ್ನ್ಯೇನ ಪರಮಾರ್ಥವಸ್ತುಧರ್ಮೇಣಾಭಿವ್ಯಕ್ತಸ್ವರೂಪಃ ಸ್ವಪ್ನಃ (ಸೂ. ಭಾ.).

[2] 'ಶರೀರವೆಂಬ ನಿಕೃಷ್ಟವಾದ ಗೂಡನ್ನು ರಕ್ಷಿಸುತ್ತ, ತಾನು ಹೊರಗೆ ಸಂಚರಿಸುತ್ತಾನೆ' ಬಹಿಷ್ಕುಲಾಯಾದಮೃತಶ್ಚರಿತ್ವಾ।

[3] ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ।

ವಿ.—ಸ್ವಪ್ನದಲ್ಲಿ ಕಾಣುವ ರಥ, ಪುಷ್ಕರಿಣಿ ಮೊದಲಾದುವೆಲ್ಲ ಮಾಯಾ-ಮಾತ್ರವೇ ಎಂದರೆ ಪರಮಪುರುಷನಿಂದ ಸೃಷ್ಟಿಸಲ್ಪಟ್ಟವು. ಮಾಯಾಶಬ್ದವು ಆಶ್ಚರ್ಯವನ್ನು ಸೂಚಿಸುತ್ತದೆ.[1] 'ಜನಕನ ಕುಲದಲ್ಲಿ ಹುಟ್ಟಿದ ಸೀತೆಯು ದೇವಮಾಯೆಯಂತೆ ನಿರ್ಮಿತಳಾದವಳು'[2] (ಶ್ರೀಮದ್ರಾಮಾಯಣ ೧. ೬೬) ಎಂಬ ವಚನದಿಂದ ಈ ಅರ್ಥವು ತಿಳಿದುಬರುತ್ತದೆ. 'ಅಲ್ಲಿ ರಥಗಳಿಲ್ಲ' (ಬೃ. ಉ. ೪. ೩. ೧೦) ಎಂಬ ವಾಕ್ಯವು ಸ್ವಪ್ನವನ್ನು ನೋಡುತ್ತಿರುವವನನ್ನು ಬಿಟ್ಟರೆ ಇತರರಿಗೆ ಕಾಣುವುದಿಲ್ಲ—ಎಂದು ತಿಳಿಸುತ್ತದೆ. ಸ್ವಪ್ನವನ್ನು ನೋಡುತ್ತಿರುವವನಿಗೆ ಮಾತ್ರ ಪರಮಪುರುಷನು ಅವುಗಳನ್ನು ಸೃಷ್ಟಿಸುತ್ತಾನೆ ಎಂದರ್ಥ. ಇಂಥ ಆಶ್ಚರ್ಯರೂಪವಾದ ಸೃಷ್ಟಿಯು ಸತ್ಯಸಂಕಲ್ಪನಾದ ಪರಮೇಶ್ವರನಿಗೆ ಸಾಧ್ಯವೇ ಹೊರತು ಜೀವನಿಗಲ್ಲ.

ದ್ವೈ.—'ತನ್ನ ಮನಸ್ಸಿನಲ್ಲಿರುವ ಸಂಸ್ಕಾರಗಳನ್ನು ಜೀವನು ನೋಡುವಂತೆ ಈಶ್ವರನು ಸ್ವೇಚ್ಛೆಯಾಗಿ ಮಾಡುತ್ತಾನೆ; ಬೇರೆ ಸಾಧನಗಳಿಂದ ಈಶ್ವರನು ಸೃಷ್ಟಿಸುವುದಿಲ್ಲ; ಏಕೆಂದರೆ ಇಂಥ ಸೃಷ್ಟಿಗೆ ಅಭಿವ್ಯಕ್ತಿಯಿಲ್ಲ'[3] ಎಂಬುದು ಸೂತ್ರಾರ್ಥ. ಪೂರ್ವಾನು-ಭವಸಂಸ್ಕಾರವು ಉಪಾದಾನಕಾರಣವಾಗಿದ್ದರೆ ಈಶ್ವರೇಚ್ಛೆಯು ನಿಮಿತ್ತಕಾರಣವಾಗಿರುತ್ತದೆ.

**ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ* ॥ ೪ ॥**

೪ (ಸ್ವಪ್ನವು ಭವಿಷ್ಯದ) ಸೂಚಕವೂ ಆಗಿದೆ; ಶ್ರುತಿಯಿಂದಲೂ (ತಿಳಿದು ಬರುತ್ತದೆ); ಅದನ್ನು ತಿಳಿದವರು (ಹಾಗೆ) ಹೇಳುತ್ತಾರೆ.

ಸ್ವಪ್ನವು ಮಾಯಾಮಯವಾಗಿದ್ದರೂ ಮುಂದೆ ಆಗುವ ಒಳ್ಳೆಯದು, ಕೆಟ್ಟದು—ಇವುಗಳನ್ನು ಸೂಚಿಸುತ್ತದೆ. 'ಕಾಮ್ಯಕರ್ಮಗಳನ್ನು ಅನುಷ್ಠಾನಮಾಡುವ ಕಾಲದಲ್ಲಿ ಸ್ವಪ್ನದಲ್ಲಿ ಸ್ತ್ರೀಯನ್ನು ನೋಡಿದರೆ ಆ ಸ್ವಪ್ನನಿದರ್ಶನದಲ್ಲಿ ಸಮೃದ್ಧಿಯುಂಟಾಗುವುದೆಂದು ತಿಳಿಯಬೇಕು'[4] (ಛಾಂ. ಉ. ೫. ೨. ೮) ಮತ್ತು 'ಕರಿಯ ಹಲ್ಲಿರುವ ಕಪ್ಪು ಮನುಷ್ಯನನ್ನು ನೋಡಿದರೆ ಅವನು ಇವನನ್ನು ಕೊಲ್ಲುವನು'[5] (ಐ. ಆ. ೩. ೨. ೪) ಎಂದು

---

[1] ಮಾಯಾಶಬ್ದೋ ಹ್ಯಾಶ್ಚರ್ಯವಾಚೀ (ಶ್ರೀಭಾಷ್ಯ).

[2] ಜನಕಸ್ಯ ಕುಲೇ ಜಾತಾ ದೇವಮಾಯೇವ ನಿರ್ಮಿತಾ ।

[3] ಮನೋಗತಾನ್ ಸಂಸ್ಕಾರಾನ್ ಸ್ವೇಚ್ಛಾಮಾತ್ರೇಣ ಪ್ರದರ್ಶಯತಿ, ನಾನ್ಯೇನ ಸಾಧನೇನ; ಸಮ್ಯಗನಭಿವ್ಯಕ್ತತ್ವಾತ್ (ಮ. ಭಾ.).

* ಇದು ಶ್ರೀಭಾಷ್ಯದಲ್ಲಿ ೩ನೆಯ ಸೂತ್ರವಾಗಿದೆ.

[4] ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಷು ಪಶ್ಯತಿ ಸಮೃದ್ಧಿಂ ತತ್ರ ಜಾನೀ-ಯಾತ್ ತಸ್ಮಿನ್ ಸ್ವಪ್ನನಿದರ್ಶನೇ ।

[5] ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ ।

ಶ್ರುತಿಗಳು ಹೇಳುತ್ತವೆ. ಸ್ವಪ್ನಾಧ್ಯಾಯವನ್ನು ತಿಳಿದವರು ಗಜಾರೋಹಣವು ಒಳ್ಳೆಯ ದೆಂದೂ ಗಾರ್ದಭಾರೋಹಣವು ಕೆಟ್ಟದೆಂದೂ ಹೇಳುತ್ತಾರೆ. ಮಂತ್ರಗಳು, ದೇವತೆಗಳು ದ್ರವ್ಯಗಳು—ಇವುಗಳ ನಿಮಿತ್ತದಿಂದ ಉಂಟಾದ ಕೆಲವು ಸ್ವಪ್ನಗಳು ಸತ್ಯಾರ್ಥದ ಗಂಧ ದಿಂದ ಕೂಡಿರುತ್ತವೆಂದು ಕೆಲವರು ಭಾವಿಸುತ್ತಾರೆ. ಇಲ್ಲೆಲ್ಲ ಸೂಚಿತವಾಗುವ ವಸ್ತುವು ಸತ್ಯವಾಗಬಹುದು, ಸೂಚಕವಾದ ಸ್ತ್ರೀದರ್ಶನಾದಿಗಳು ಮಿಥ್ಯೆಯಾಗಿರುತ್ತವೆ; ಏಕೆಂದರೆ ಅವು ಬಾಧಿತವಾಗುತ್ತವೆ.[1] ಆದುದರಿಂದ ಸ್ವಪ್ನವು ಮಾಯಾಮಯವು. ಈ ಸಂಧಿಯನ್ನು ಆಶ್ರಯಿಸಿಕೊಂಡಿರುವ ಸೃಷ್ಟಿಯು ಆಕಾಶಾದಿಸೃಷ್ಟಿಯಂತೆ ಪಾರಮಾರ್ಥಿಕವಲ್ಲ. ಆಕಾಶಾದಿಸೃಷ್ಟಿಗೂ ಆತ್ಯಂತಿಕವಾದ ಸತ್ಯತ್ವವಿಲ್ಲ, ಏಕೆಂದರೆ ಹಿಂದೆ (೨. ೧. ೧೪) ಸಮಸ್ತ ಪ್ರಪಂಚವೂ ಮಾಯಾಮಯವೆಂದು ಪ್ರತಿಪಾದಿಸಲಾಗಿದೆ. ಬ್ರಹ್ಮಾತ್ಮತ್ವದರ್ಶನಕ್ಕಿಂತ ಮೊದಲು ಆಕಾಶಾದಿಪ್ರಪಂಚವು ಇದ್ದ ಹಾಗೆಯೇ ಇರುತ್ತದೆ; ಆದರೆ ಸಂಧ್ಯಾಶ್ರಯವಾದ ಪ್ರಪಂಚವು ಪ್ರತಿದಿನವೂ ಬಾಧಿತವಾಗುತ್ತದೆ.

ವಿ.—ಶ್ರುತಿಯ ಪ್ರಕಾರ (ಛಾಂ. ಉ. ೫. ೨. ೮) ಸ್ವಪ್ನಗಳು ಅಭ್ಯುದಯ-ಅನಭ್ಯುದಯಗಳನ್ನು ಸೂಚಿಸುವುದರಿಂದ ಸ್ವಪ್ನವಸ್ತುಗಳು ಜೀವಸಂಕಲ್ಪದಂತೆ ಸೃಷ್ಟಿಸಲ್ಪಡುವುದಿಲ್ಲ. ತನ್ನ ಸಂಕಲ್ಪವನ್ನು ಆಶ್ರಯಿಸಿರುವುದು ಸೂಚಕವಾಗುವುದಿಲ್ಲ; ಅಶುಭವು ಅನಿಷ್ಟವಾದುದರಿಂದ ಕನಸುನೋಡುವವನು ಶುಭಸೂಚಕವನ್ನೇ ಸೃಷ್ಟಿಸಿ ಅದನ್ನು ಮಾತ್ರ ನೋಡುತ್ತಿದ್ದನು; ಆದುದರಿಂದ ಸ್ವಪ್ನಸೃಷ್ಟಿಯು ಈಶ್ವರನದೇ.

ದ್ವೈ.—ಸಾಧನಗಳಿಲ್ಲದಿದ್ದರೂ ಕೂಡ ಈಶ್ವರನು ಶುಭಾಶುಭಸೂಚಕಗಳಾದ ಸ್ವಪ್ನಾರ್ಥಗಳನ್ನು ತೋರಿಸುತ್ತಾನೆ.

**ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ *॥ ೫ ॥**

೫. ಪರಮೇಶ್ವರನ ಧ್ಯಾನದಿಂದಲೇ (ಜೀವೇಶ್ವರರ ಸಮಾನಧರ್ಮವು ಜೀವನಲ್ಲಿ ವ್ಯಕ್ತವಾಗುತ್ತದೆ); ಅವನಿಂದಲೇ ಇವನ ಬಂಧಮೋಕ್ಷಗಳು (ಆಗುತ್ತವೆ).

ಅಗ್ನಿಗೆ ಮತ್ತು ಅದರ ಅಂಶಗಳಾದ ಕಿಡಿಗಳಿಗೆ ದಹನ-ಪ್ರಕಾಶನ-ಶಕ್ತಿಗಳು ಸಮಾನವಾಗಿರುವ ಹಾಗೆ ಜೀವನು ಪರಮಾತ್ಮನ ಅಂಶವಾಗಿದ್ದರೆ ತನಗೂ ಈಶ್ವರನಿಗೂ ಸಮಾನವಾಗಿರುವ ಜ್ಞಾನೈಶ್ವರ್ಯಶಕ್ತಿಗಳಿಂದ ಸ್ವಪ್ನದಲ್ಲಿ ರಥಾದಿಗಳನ್ನು ಸೃಷ್ಟಿಸಬಹುದಲ್ಲವೆ?—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ: ಜೀವೇಶ್ವರರಿಗೆ ಅಂಶ-ಅಂಶಿ-ಭಾವ

[1] ತತ್ರಾಪಿ ಭವತು ನಾಮ ಸೂಚ್ಯಮಾನಸ್ಯ ವಸ್ತುನಃ ಸತ್ಯತ್ವಮ್, ಸೂಚಕಸ್ಯ ತು ಸ್ತ್ರೀದರ್ಶನಾದೇರ್ಭವತ್ಯೇವ ವೈತಥ್ಯಂ ಬಾಧ್ಯಮಾನತ್ವಾದಿತ್ಯಭಿಪ್ರಾಯಃ (ಸೂ. ಭಾ.).

* ಇದು ಮಧ್ವಭಾಷ್ಯದಲ್ಲಿ ಪರಾಭಿಧ್ಯಾನಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ.

ವಿದ್ದರೂ ಜೀವನಿಗೆ ಈಶ್ವರನಿಗಿಂತ ವಿಪರೀತಧರ್ಮವಿರುವುದು ಪ್ರತ್ಯಕ್ಷವಾಗಿರುತ್ತದೆ ಜೀವನಿಗೆ ಈಶ್ವರಸಮಾನಧರ್ಮವಿದ್ದರೂ ಅದು ಅವಿದ್ಯೆಯಿಂದ ತಿರೋಹಿತವಾಗಿರುತ್ತದೆ. ಧ್ಯಾನಿಸುತ್ತಿರುವ ಜೀವನಿಗೆ ಅವಿದ್ಯೆಯು ನಾಶವಾದರೆ ತಿರೋಹಿತವಾದ ಆ ಜ್ಞಾನೈಶ್ವರ್ಯಗಳು ಈಶ್ವರನ ಪ್ರಸಾದದಿಂದ ಅವನಲ್ಲಿ ಆವಿರ್ಭಾವವಾಗುತ್ತವೆಯೇ ಹೊರತು ಎಲ್ಲ ಜೀವರಲ್ಲಿಯೂ ಆಗುವುದಿಲ್ಲ; ಏಕೆಂದರೆ ಈಶ್ವರನಿಂದಲೇ ಜೀವನಿಗೆ ಬಂಧಮೋಕ್ಷಗಳು ಆಗುತ್ತವೆ. ಈಶ್ವರನ ಸ್ವರೂಪವನ್ನು ಅರಿಯದಿರುವುದರಿಂದಲೇ ಬಂಧವು, ಅವನ ಸ್ವರೂಪವನ್ನು ಅರಿತುಕೊಂಡಿದ್ದರಿಂದಲೇ ಮೋಕ್ಷವು.[1] 'ಪರಮೇಶ್ವರನನ್ನು ಅರಿತುಕೊಂಡಾಗ ಸರ್ವಪಾಶಗಳೂ ನಾಶವಾಗುತ್ತವೆ; (ಅವಿದ್ಯಾದಿ)–ಕ್ಲೇಶಗಳು ಕ್ಷೀಣವಾಗುವುದರ ಮೂಲಕ ಜನನಮರಣಗಳ ನಾಶವು ಆಗುತ್ತದೆ ಅವನ ಅಭಿಧ್ಯಾನದಿಂದ ಸರ್ವೈಶ್ವರ್ಯಲಕ್ಷಣವುಳ್ಳ ಮೂರನೆಯ (ಅವಸ್ಥೆಯನ್ನು) ಶರೀರಪಾತವಾದ ಮೇಲೆ (ಹೊಂದುತ್ತಾನೆ) (ಅನಂತರ) ಕೇವಲನೂ ಆಪ್ತಕಾಮನೂ (ಆಗುತ್ತಾನೆ)'[2] (ಶ್ವೇ. ಉ. ೧. ೧೧) ಎಂದು ಶ್ರುತಿಯು ಹೇಳುತ್ತದೆ.

ವಿ.—'ಪರಮಪುರುಷನ ಸಂಕಲ್ಪದಿಂದ ಅದು ತಿರೋಹಿತವಾಗಿದೆ, ಏಕೆಂದರೆ ಅದರಿಂದಲೇ ಬಂಧಮೋಕ್ಷಗಳು ಆಗುತ್ತವೆ' ಎಂಬುದು ಸೂತ್ರಾರ್ಥ

ಪರಮಪುರುಷನ ಸಂಕಲ್ಪದಿಂದಲೇ ಜೀವನ ಸ್ವಾಭಾವಿಕವಾದ ರೂಪವು ತಿರೋಹಿತವಾಗಿದೆ; ಎಂದರೆ ಅನಾದಿಕರ್ಮಪರಂಪರೆಯಿಂದ ಅಪರಾಧಿಯಾದ ಜೀವನ ಸ್ವಾಭಾವಿಕವಾದ ಕಲ್ಯಾಣರೂಪವನ್ನು ಪರಮಪುರುಷನು ಮುಚ್ಚಿರುತ್ತಾನೆ 'ಇವನೇ ಸರ್ವ ಚೇತನರನ್ನೂ ಆನಂದಗೊಳಿಸುವನು'[3] (ತೈ. ಉ. ೨. ೭) ಇವೇ ಮೊದಲಾದ ಶ್ರುತಿಗಳು ಭಗವಂತನ ಸಂಕಲ್ಪದಿಂದಲೇ ಬಂಧಮೋಕ್ಷಗಳಾಗುತ್ತವೆಂದು ತಿಳಿಸುತ್ತವೆ.

ದ್ವೈ.—'ಈಶ್ವರನ ಇಚ್ಛೆಯಿಂದಲೇ ಸ್ವಪ್ನವು ತಿರೋಹಿತವಾಗುತ್ತದೆ; ಏಕೆಂದರೆ ಅವನಿಂದಲೇ ಬಂಧಮೋಕ್ಷಗಳಾಗುತ್ತವೆ'[4] ಎಂಬುದು ಸೂತ್ರಾರ್ಥ.

**ದೇಹಯೋಗಾದ್ವಾ ಸೋಽಪಿ* ॥ ೬ ॥**

೬. ಅಥವಾ ದೇಹಸಂಬಂಧದಿಂದಲೂ (ಜೀವನ ಜ್ಞಾನೈಶ್ವರ್ಯಗಳು ತಿರೋಹಿತವಾಗಿವೆ)

---

1 ಈಶ್ವರಸ್ವರೂಪಾಪರಿಜ್ಞಾನಾದ್ಬಂಧಸ್ತತ್ಸ್ವರೂಪಪರಿಜ್ಞಾನಾತ್ತು ಮೋಕ್ಷಃ (ಸೂ. ಭಾ.).

2 ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ ಕ್ಷೀಣೈಃ ಕ್ಲೇಶೈರ್ಜನ್ಮಮೃತ್ಯುಪ್ರಹಾಣಿಃ । ತಸ್ಯಾಭಿಧ್ಯಾನಾತ್ ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ ॥

3 ಏಷ ಹ್ಯೇವಾನಂದಯಾತಿ ।

4 ಬಂಧಮೋಕ್ಷಪ್ರದತ್ವಾತ್ ಸ ಏವ ಸ್ವಪ್ನತಿರಸ್ಕರ್ತಾ (ಮ. ಭಾ.).

* ಇದು ಮಧ್ವಭಾಷ್ಯದಲ್ಲಿ ದೇಹಯೋಗಾಧಿಕರಣ ಎಂಬ ಬೇರೆಯ ಅಧಿಕರಣವಾಗಿ ಸೂತ್ರದ ರಚನೆಯೂ ಭಿನ್ನವಾಗಿದೆ.

ಜೀವನು ಪರಮಾತ್ಮನ ಅಂಶವಾಗಿದ್ದರೆ ಅವನ ಜ್ಞಾನೈಶ್ವರ್ಯಗಳು ಏಕೆ ತಿರೋಹಿತವಾಗಿವೆ ? ಎಂದು ಆಕ್ಷೇಪಿಸಿದರೆ, ದೇಹ ಇಂದ್ರಿಯ ಮನಸ್ಸು ಬುದ್ಧಿ ವಿಷಯ ವೇದನೆ —ಇವುಗಳ ಸಂಬಂಧದಿಂದ ಅವನ ಶಕ್ತಿಗಳು ತಿರೋಹಿತವಾಗಿವೆ—ಎಂಬುದು ಸೂತ್ರಕಾರರ ಉತ್ತರ ಹೇಗೆ ಅಗ್ನಿಗೆ ದಹನ-ಪ್ರಕಾಶನ-ಶಕ್ತಿಗಳಿದ್ದರೂ ಅದು ಅರಣಿಯಿಂದ ಕಡೆಯದಿರುವಾಗ ಅಥವಾ ಬೂದಿಯಿಂದ ಮುಚ್ಚಿರುವಾಗ ಆ ಶಕ್ತಿಗಳು ತಿರೋಹಿತವಾಗಿರುತ್ತವೆಯೋ ಹಾಗೆಯೇ ಅವಿದ್ಯೆಯು ತಂದೊಡ್ಡಿದ ನಾಮರೂಪಗಳಿಂದಾದ ದೇಹಾದಿ ಉಪಾಧಿಗಳ ಸಂಬಂಧದಿಂದ, ಅವುಗಳ ಅವಿವೇಕದಿಂದಾಗಿರುವ ಭ್ರಮೆಯಿಂದ, ಜೀವನಿಗೆ ಜ್ಞಾನೈಶ್ವರ್ಯಗಳು ತಿರೋಹಿತವಾಗಿರುತ್ತವೆ ಸೂತ್ರದಲ್ಲಿರುವ ವಾ-ಶಬ್ದವು ಜೀವನು ಈಶ್ವರನಿಗಿಂತ ಭಿನ್ನನೆಂಬ ಆಶಂಕೆಯನ್ನು ತೆಗೆದುಹಾಕುತ್ತದೆ ಆದುದರಿಂದ ಸ್ವಪ್ನದಲ್ಲಿ ರಥಾದಿಗಳ ಸೃಷ್ಟಿಯು ಜೀವನ ಸಂಕಲ್ಪದಿಂದ ಆದದ್ದೆಂಬುದು ಹೊಂದುವುದಿಲ್ಲ ಹಾಗಾಗಿದ್ದರೆ ಯಾವನೂ ತನಗೆ ಅನಿಷ್ಟವಾದ ಸ್ವಪ್ನವನ್ನು ನೋಡುತ್ತಿರಲಿಲ್ಲ

ವಿ.—ಜೀವನ ಸ್ವಾಭಾವಿಕರೂಪದ ತಿರೋಭಾವವು ದೇಹಸಂಬಂಧದಿಂದ ಅಥವಾ ಸೂಕ್ಷ್ಮವಾದ ಅಚಿಚ್ಛಕ್ತಿಯ ಸಂಬಂಧದಿಂದ ಆಗುತ್ತದೆ,[1] ಸೃಷ್ಟಿಕಾಲದಲ್ಲಿ ದೇಹರೂಪದಲ್ಲಿರುವ ಅಚಿದ್ವಸ್ತುವಿನ ಸಂಬಂಧದಿಂದಲೂ ಪ್ರಳಯಕಾಲದಲ್ಲಿ ನಾಮರೂಪಗಳ ವಿಂಗಡಕ್ಕೆ ಅರ್ಹವಾಗದ ಅತಿಸೂಕ್ಷ್ಮವಾದ ಅಚಿದ್ವಸ್ತುವಿನ ಸಂಬಂಧದಿಂದಲೂ ಆತ್ಮನ ಸ್ವಭಾವವು ತಿರೋಹಿತವಾಗುತ್ತದೆ ಹೀಗೆ ಜೀವನ ಸ್ವರೂಪವು ವ್ಯಕ್ತವಾಗದಿರುವುದರಿಂದ ರಥಾದಿಗಳನ್ನು ಸಂಕಲ್ಪಮಾತ್ರದಿಂದಲೇ ಸೃಷ್ಟಿಸಲು ಅವನಿಗೆ ಸಾಧ್ಯವಾಗುವುದಿಲ್ಲ. ಜೀವನ ಅಲ್ಪಾಲ್ಪಕರ್ಮದ ಫಲಕ್ಕೆ ಅನುಗುಣವಾಗಿ ಪರಮಪುರುಷನೇ ಸ್ವಪ್ನದಲ್ಲಿ ಅರ್ಥಗಳನ್ನು ಸೃಷ್ಟಿಸುತ್ತಾನೆ, ಸ್ವಾಪ್ನಾರ್ಥಗಳು ಸ್ವಪ್ನಕಾಲದವರೆಗಿದ್ದು ಒಬ್ಬ ಜೀವನಿಂದಲೇ ನೋಡಲ್ಪಡುತ್ತವೆ

ದ್ವೈ.—ದೇಹಯೋಗಾದ್ ವಾಸೋಽಪಿ ॥ ೩ ೨ ೬ ॥

'ದೇಹಸಂಬಂಧದಿಂದ ಸ್ಥಿತಿಯೂ ಕೂಡ ಎಂದರೆ ಜಾಗ್ರದವಸ್ಥೆಯೂ ಭಗವಂತನ ಇಚ್ಛೆಯಿಂದಲೇ ಆಗುತ್ತದೆ'[2] ಎಂಬುದು ಸೂತ್ರಾರ್ಥ

---

[1] ಸೋಽಪಿ ತಿರೋಭಾವೋ ದೇಹಯೋಗದ್ವಾರೇಣ ವಾ ಭವತಿ, ಸೂಕ್ಷ್ಮಾಚಿಚ್ಛಕ್ತಿಯೋಗದ್ವಾರೇಣ ವಾ (ಶ್ರೀಭಾಷ್ಯ)

[2] ದೇಹಯೋಗೇನ ವಾಸೋ ಜಾಗ್ರದಪಿ ತತ ಏವ (ಮ ಭಾ )

# ೨. ತದಭಾವಾಧಿಕರಣ

(ಸೂ. ೭–೮)

**ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ ॥ ೭ ॥**

೭. ಆ ಸ್ವಪ್ನದ ಅಭಾವವು ನಾಡಿಗಳಲ್ಲಿಯೂ ಆತ್ಮನಲ್ಲಿಯೂ (ಆಗುತ್ತದೆ); ಏಕೆಂದರೆ ಅದು ಶ್ರುತಿಯಿಂದ (ತಿಳಿದುಬರುತ್ತದೆ).

ಈಗ ಸುಷುಪ್ತ್ಯವಸ್ಥೆಯನ್ನು ಪರೀಕ್ಷಿಸಲಾಗುತ್ತದೆ. ಸುಷುಪ್ತಿವಿಷಯವಾಗಿ ಈ **ಶ್ರುತಿಗಳಿವೆ :** 'ಅಲ್ಲಿ ಯಾವಾಗ ಹೀಗೆ ಇಂದ್ರಿಯವೃತ್ತಿಗಳೆಲ್ಲವನ್ನೂ ಉಪಸಂಹರಿಸಿಕೊಂಡು ಸುಪ್ತನೂ ಪ್ರಸನ್ನನೂ ಆಗಿ ಸ್ವಪ್ನವನ್ನು ಅರಿಯದಿರುವನೊ ಆಗ ಈ ನಾಡಿಗಳಲ್ಲಿ ಪ್ರವೇಶಿಸಿರುತ್ತಾನೆ'[1] (ಛಾಂ. ಉ. ೮. ೬. ೩); 'ಅವುಗಳ ಮೂಲಕ ಹಿಂತಿರುಗಿ ಪುರೀತತ್ತಿನಲ್ಲಿ ಮಲಗಿರುತ್ತಾನೆ'[2] (ಬೃ. ಉ. ೨. ೧. ೧೯); 'ಆಗ ಸೋಮ್ಯ, ಸದ್ವಸ್ತುವಿನೊಂದಿಗೆ ಏಕೀಭೂತನಾಗಿರುತ್ತಾನೆ, ಸ್ವರೂಪವನ್ನು ಹೊಂದಿರುತ್ತಾನೆ'[3] (ಛಾಂ. ಉ. ೬. ೮. ೧) ಇತ್ಯಾದಿ.[4] ಈ ನಾಡಿಗಳೇ ಮೊದಲಾದುವು ಒಂದನ್ನೊಂದು ಅಪೇಕ್ಷಿಸದಿರುವ ಭಿನ್ನವಾದ ಸುಷುಪ್ತಿಸ್ಥಾನಗಳೊ ? ಅಥವಾ ಒಂದನ್ನೊಂದು ಅಪೇಕ್ಷಿಸುವ ಒಂದೇ ಸುಷುಪ್ತಿಸ್ಥಾನವೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಇವು ಬೇರೆ ಬೇರೆಯ ಸ್ಥಾನಗಳು ; ಏಕೆಂದರೆ ಇವುಗಳಿಗೆಲ್ಲ ಒಂದೇ ಪ್ರಯೋಜನವಿದೆ. ಪುರೋಡಾಶಕ್ಕೆ ಅಕ್ಕಿ, ಯವೆ ಮೊದಲಾದುವುಗಳಲ್ಲಿ ಒಂದೇ ಆವಶ್ಯಕವಾಗಿರುವಂತೆ, ನಾಡ್ಯಾದಿಗಳಿಗೆಲ್ಲ ಸುಷುಪ್ತಿ ಎಂಬ ಒಂದೇ ಪ್ರಯೋಜನವಿರುತ್ತದೆ ; ಏಕೆಂದರೆ 'ನಾಡಿಗಳಲ್ಲಿ', 'ಪುರೀತತ್ತಿನಲ್ಲಿ' ಎಂಬ ಸಪ್ತಮೀನಿರ್ದೇಶವು ಸಮಾನವಾಗಿರುತ್ತದೆ. ಈ ವಾಕ್ಯಗಳಲ್ಲೆಲ್ಲ ವಿಶೇಷಜ್ಞಾನವಿರದ ಸುಷುಪ್ತಿಯನ್ನೇ ಹೇಳಿದೆ. ಆದುದರಿಂದ ಸುಷುಪ್ತಿಯಲ್ಲಿ ಜೀವನು ನಾಡ್ಯಾದಿಗಳಲ್ಲಿ ಯಾವುದಾದರೂ ಒಂದು ಸ್ಥಾನಕ್ಕೆ ಹೋಗಬಹುದು

**ಸಿದ್ಧಾಂತಿ**—ಸ್ವಪ್ನದರ್ಶನದ ಅಭಾವವು ಎಂದರೆ ಸುಷುಪ್ತಿಯು ನಾಡಿಗಳಲ್ಲಿಯೂ ಆತ್ಮನಲ್ಲಿಯೂ ಆಗುತ್ತದೆ ; ವಿಕಲ್ಪವನ್ನು ಅನುಸರಿಸುವುದು ಯುಕ್ತವಲ್ಲ ; ಏಕೆಂದರೆ ನಾಡ್ಯಾದಿಗಳಲ್ಲಿ ಪ್ರತಿಯೊಂದನ್ನೂ ಸುಷುಪ್ತಿಸ್ಥಾನವೆಂದು ಶ್ರುತಿಯು ಹೇಳುತ್ತದೆ.

---

[1] ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ತದಾ ನಾಡೀಷು ಸೃಪ್ತೋ ಭವತಿ ।

[2] ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ ।

[3] ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ।

[4] ಕೌ. ಉ. ೪. ೧೯ ; ಬೃ. ಉ. ೨. ೧. ೧೭ ಮತ್ತು ೪. ೩. ೨೧ ನೋಡಿ.

ಸಮುಚ್ಚಯವನ್ನು ಒಪ್ಪಿಕೊಂಡರೆ ಇವುಗಳನ್ನೆಲ್ಲ ಸಂಗ್ರಹಿಸಿದಂತೆ ಆಗುತ್ತದೆ, ವಿಕಲ್ಪದಲ್ಲಿ ಒಂದನ್ನು ಒಪ್ಪಿಕೊಂಡು ಉಳಿದುವನ್ನು ಬಿಟ್ಟಂತೆ ಆಗುತ್ತದೆ. ಒಂದೇ ವಿಭಕ್ತಿಯಿದ್ದರೂ ನಾಡಿಯೇ ಮೊದಲಾದುವುಗಳ ಸಮುಚ್ಚಯವಾಗಬಹುದು; ಏಕೆಂದರೆ 'ಪ್ರಾಸಾದದಲ್ಲಿ ಮಲಗಿದ್ದಾನೆ', 'ಮಂಚದ ಮೇಲೆ ಮಲಗಿದ್ದಾನೆ' ಎಂಬಲ್ಲಿ ನಾನಾರ್ಥ ಸಮುಚ್ಚಯಗಳನ್ನು ಒಂದೇ ವಿಭಕ್ತಿಯಿಂದ ನಿರ್ದೇಶಿಸಿರುವುದು ಕಂಡುಬರುತ್ತದೆ. ಇಲ್ಲಿಯೂ ಕೂಡ ನಾಡಿಗಳಲ್ಲಿಯೂ ಪುರೀತತ್ತಿನಲ್ಲಿಯೂ ಬ್ರಹ್ಮದಲ್ಲಿಯೂ ಮಲಗುತ್ತಾನೆ ಎಂಬ ಸಮುಚ್ಚಯವು ಹೊಂದುತ್ತದೆ.[1] ಆದುದರಿಂದ ಶ್ರುತಿಯು 'ಯಾವಾಗ ಸುಪ್ತನಾದವನು ಯಾವ ಕನಸನ್ನೂ ನೋಡುವುದಿಲ್ಲವೊ ಆಗ ಆ ನಾಡಿಗಳಲ್ಲಿ ಇರುತ್ತಾನೆ, ಆಗ ಈ ಪ್ರಾಣದಲ್ಲಿಯೇ ಒಂದಾಗಿರುತ್ತಾನೆ'[2] (ಕೌ. ಉ. ೪. ೧೯) ಎಂದು ಸುಷುಪ್ತಿಯಲ್ಲಿ ನಾಡಿಗಳ ಮತ್ತು ಪ್ರಾಣದ ಸಮುಚ್ಚಯವನ್ನು ತಿಳಿಸುತ್ತದೆ. ಈ ಪ್ರಾಣವು ಬ್ರಹ್ಮವೆಂದೇ ೧ ೧. ೨೮ ರಲ್ಲಿ ನಿರ್ಧರಿಸಿದೆ ಶ್ರುತಿಗಳಲ್ಲಿ ನಾಡಿಗಳು, ಪುರೀತತ್ತು ಮತ್ತು ಬ್ರಹ್ಮ—ಈ ಮೂರನ್ನೂ ಸುಷುಪ್ತಿಸ್ಥಾನಗಳೆಂದು ಹೇಳಿದ್ದರೂ ಬ್ರಹ್ಮವೊಂದೇ ಸುಷುಪ್ತಿಸ್ಥಾನವು, ಉಳಿದವು ದ್ವಾರಗಳಾಗಿವೆ. ನಾಡಿಗಳ ಮೂಲಕ ಪುರೀತತ್ತಿಗೆ ಎಂದರೆ ಹೃದಯವನ್ನು ಸುತ್ತಿಕೊಂಡಿರುವ ಪೊರೆಗೆ ಹೋಗಿ, ಅದರಲ್ಲಿರುವ ಹೃದಯಾಕಾಶದಲ್ಲಿ ಎಂದರೆ ಬ್ರಹ್ಮದಲ್ಲಿ ನಿದ್ರಿಸುತ್ತಾನೆ ಎಂದರ್ಥ. 'ಸದ್ವಸ್ತುವಿನೊಂದಿಗೆ ಏಕೀಭೂತನಾಗುತ್ತಾನೆ' (ಛಾಂ. ಉ. ೬ ೮. ೧) ಎಂಬಲ್ಲಿ ಸ್ವ-ಶಬ್ದವು ಆತ್ಮನನ್ನು ಸೂಚಿಸುತ್ತದೆ; 'ಸ್ವರೂಪವನ್ನು ಹೊಂದಿ ಸುಪ್ತನಾಗುತ್ತಾನೆ' ಎಂದರ್ಥ. ಜೀವನು ಬ್ರಹ್ಮದೊಂದಿಗೆ ಒಂದಾಗುತ್ತಾನೆ ಎಂಬುದು ಎಂದಿಗೂ ಸಾಧ್ಯವಿಲ್ಲ; ಏಕೆಂದರೆ ಸ್ವರೂಪವು ಎಂದಿಗೂ ಬಿಟ್ಟುಹೋಗುವುದಿಲ್ಲ. ಆದರೆ ಸ್ವಪ್ನ-ಜಾಗರಿತಗಳಲ್ಲಿ ಉಪಾಧಿಸಂಪರ್ಕವಶದಿಂದ ಬೇರೆ ರೂಪವನ್ನು ಹೊಂದಿದಂತೆ ಆಗಿರುವುದರ ಅಪೇಕ್ಷೆಯಿಂದ ಆ ಉಪಾಧಿಗಳು ಸುಷುಪ್ತಿಯಲ್ಲಿ ಲಯವಾದಾಗ 'ಸ್ವರೂಪವನ್ನು ಹೊಂದುತ್ತಾನೆ' ಎಂದು ಹೇಳಿರುತ್ತದೆ. ಇಲ್ಲಿ ನಾಡ್ಯಾದಿಗಳ ಸಮುಚ್ಚಯವನ್ನು ಪ್ರತಿಪಾದಿಸುವುದು ಉದ್ದೇಶವಲ್ಲ; ಏಕೆಂದರೆ ಈ ಜ್ಞಾನದಿಂದ ಯಾವ ಪ್ರಯೋಜನವೂ ಇಲ್ಲ ಬ್ರಹ್ಮವೇ ತಪ್ಪದಿರುವ ಸುಷುಪ್ತಿಸ್ಥಾನವೆಂಬುದನ್ನು ತಿಳಿದರೆ, ಜೀವನಿಗೆ ಸ್ವಪ್ನ-ಜಾಗರಿತಗಳೆಂಬ ವ್ಯವಹಾರವು ನಿಜವಾಗಿಲ್ಲವೆಂದೂ ಅವನು ಬ್ರಹ್ಮಸ್ವರೂಪನೆಂದೂ ತಿಳಿಯುವ ಪ್ರಯೋಜನವಿರುತ್ತದೆ. ಆದುದರಿಂದ ಆತ್ಮನೇ ಸುಷುಪ್ತಿಸ್ಥಾನವು.

ವಿ.—ಸುಷುಪ್ತಿಯು ನಾಡಿಗಳಲ್ಲಿಯೂ ಪುರೀತತ್ತಿನಲ್ಲಿಯೂ ಆತ್ಮನಲ್ಲಿಯೂ ಒಟ್ಟಿಗೆ ಆಗುತ್ತದೆ. ಸಮುಚ್ಚಯವು ಸಾಧ್ಯವಾದಾಗ ಇತರ ಪಕ್ಷಗಳನ್ನು ಬಾಧಿಸುವ

---

[1] ತಥೇಹಾಪಿ ನಾಡೀಷು ಪುರೀತತಿ ಬ್ರಹ್ಮಣಿ ಚ ಸ್ವಪಿತೀತ್ಯೇತದುಪಪದ್ಯತೇ ಸಮುಚ್ಚಯಃ (ಸೂ. ಭಾ.).

[2] ತಾಸು ತದಾ ಭವತಿ ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ।

ವಿಕಲ್ಪವು ನ್ಯಾಯವಲ್ಲ ಇಲ್ಲಿ ಸಮುಚ್ಚಯವು ಸಂಭವಿಸುತ್ತದೆ ನಾಡಿಗಳು ಪ್ರಾಸಾದವಾಗಿದ್ದರೆ ಪುರೀತತ್ತು ಅದರಲ್ಲಿರುವ ಮಂಚವಾಗಿದೆ, ಪರಬ್ರಹ್ಮನು ಮಂಚದ ಮೇಲಿರುವ ಪರ್ಯಂಕವಾಗಿದ್ದಾನೆ [1]ಜೀವಾತ್ಮನು ಪರ್ಯಂಕಸ್ಥಾನೀಯನಾದ ಪರಮಾತ್ಮನೊಂದಿಗೆ ಸುಷುಪ್ತಿಯಲ್ಲಿ ವಿಶ್ರಮಿಸಿಕೊಳ್ಳುತ್ತಾನೆ ಎಂದು ಅಭಿಪ್ರಾಯವು ಆದುದರಿಂದ ಪರಬ್ರಹ್ಮನೇ ಸಾಕ್ಷಾತ್ ಸುಷುಪ್ತಿಸ್ಥಾನನು

**ದ್ವೈ.**—ಜಾಗ್ರತ್-ಸ್ವಪ್ನಗಳ ಅಭಾವವು ಎಂದರೆ ಸುಷುಪ್ತಿಯು ನಾಡಿಗಳಲ್ಲಿರತಕ್ಕ ಪರಮಾತ್ಮನಲ್ಲಿ ಸಂಭವಿಸುತ್ತದೆ [2] ಏಕೆಂದರೆ ಶ್ರುತಿಗಳು (ಛಾಂ ಉ ೮ ೬ ३, ೬ ೮ ೧) ಹೀಗೆಂದೇ ಹೇಳುತ್ತವೆ

**ಅತಃ ಪ್ರಬೋಧೋಽಸ್ಮಾತ್*** ॥ ೮ ॥

೮ ಆದುದರಿಂದ ಇವನಿಂದಲೇ ಎಚ್ಚರವು

ಆತ್ಮನೇ ಸುಷುಪ್ತಿಸ್ಥಾನವಾಗಿರುವುದರಿಂದ ಸುಷುಪ್ತಿಪ್ರಕರಣದಲ್ಲಿ ಆತ್ಮನಿಂದಲೇ ಎಚ್ಚರವಾಗುವುದೆಂದು ಉಪದೇಶಿಸಿರುತ್ತದೆ ಬೃಹದಾರಣ್ಯಕೋಪನಿಷತ್ತಿನಲ್ಲಿ (೨ ೧ ೧೬) 'ಎಲ್ಲಿಂದ ಹೇಗೆ ಬಂದನು ?'[3] ಎಂಬ ಪ್ರಶ್ನೆಗೆ, ಹೇಗೆ ಅಗ್ನಿಯಿಂದ ಸಣ್ಣ ಕಿಡಿಗಳು ಹಾರುತ್ತವೆಯೊ ಹಾಗೆಯೇ ಈ ಆತ್ಮನಿಂದ ಎಲ್ಲ ಪ್ರಾಣಗಳೂ, ಎಲ್ಲ ಲೋಕಗಳೂ, ಎಲ್ಲ ದೇವತೆಗಳೂ, ಎಲ್ಲ ಪ್ರಾಣಿಗಳೂ ಬರುತ್ತವೆ'[4] (ಬೃ ಉ ೨ ೧ ೨೦) ಎಂದು ಶ್ರುತಿಯು ಹೇಳುತ್ತದೆ. ಜೀವನು ಸುಷುಪ್ತಿಯಲ್ಲಿರುವಾಗ ಆಶ್ರಯಿಸಲು ಬೇರೆ ಸ್ಥಾನಗಳಿದ್ದರೆ ಒಮ್ಮೆ ನಾಡಿಗಳಿಂದಲೂ ಒಮ್ಮೆ ಪುರೀತತ್ತಿನಿಂದಲೂ ಒಮ್ಮೆ ಆತ್ಮನಿಂದಲೂ ಎಚ್ಚರಗೊಳ್ಳುತ್ತಾನೆ ಎಂದು ಶ್ರುತಿಯು ಹೇಳುತ್ತಿತ್ತು ಆದುದರಿಂದ ಆತ್ಮನೇ ಸುಷುಪ್ತಿಸ್ಥಾನವು

**ವಿ.**—ಬ್ರಹ್ಮನೇ ಸಾಕ್ಷಾತ್ಸುಷುಪ್ತಿಸ್ಥಾನನಾದುದರಿಂದ ಅವನಿಂದಲೇ ಜೀವರು ಎಚ್ಚರಗೊಳ್ಳುತ್ತಾರೆಂದು ಶ್ರುತಿಯು ಹೇಳುತ್ತದೆ. 'ಈ ಪ್ರಾಣಿಗಳೆಲ್ಲ ಸದ್ವಸ್ತುವಿನಿಂದ ಬಂದು "ನಾವು ಸದ್ವಸ್ತುವಿನಿಂದ ಬಂದಿದ್ದೇವೆ" ಎಂದು ಅರಿಯುವು '[5]

**ದ್ವೈ.**—ಜೀವನು ಪರಮಾತ್ಮನಲ್ಲಿಯೇ ಸುಪ್ತನಾದುದರಿಂದ ಅವನಿಂದಲೇ ಪ್ರಬೋಧವೂ ಆಗುತ್ತದೆ [6]

---

1 ತತ್ರ ನಾಡೀಪುರೀತತೌ ಪ್ರಾಸಾದಖಟ್ವಾಸ್ಥಾನೀಯೌ, ಬ್ರಹ್ಮ ತು ಪರ್ಯಂಕಸ್ಥಾನೀಯಂ (ಶ್ರೀಭಾಷ್ಯ).

2 ಜಾಗ್ರತ್ಸ್ವಪ್ನಾಭಾವಃ ಸುಪ್ತಿರ್ನಾಡೀಸ್ಥೇ ಪರಮಾತ್ಮನಿ (ಮ. ಭಾ )

* ಇದು ಮಧ್ವಭಾಷ್ಯದಲ್ಲಿ ಪ್ರಬೋಧಾಧಿಕರಣ ಎಂಬ ಬೇರೆ ಅಧಿಕರಣವಾಗಿದೆ

3 ಕುತ ಏತದಾಗಾತ್ ?

4 ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರಂತಿ, ಏವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ, ಸರ್ವೇ ಲೋಕಾಃ, ಸರ್ವೇ ದೇವಾಃ, ಸರ್ವಾಣಿ ಭೂತಾನಿ ವ್ಯುಚ್ಚರಂತಿ ।

5 ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ ।

6 ಯತಸ್ತಸ್ಮಿನ್ ಸುಪ್ತಿಃ ।

# ೩. ಕರ್ಮಾನುಸ್ಮೃತಿಶಬ್ದವಿಧ್ಯಧಿಕರಣ*

## ಸ ಏವ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ॥ ೯ ॥

೯ ಅವನೇ (ಬ್ರಹ್ಮದಿಂದ ಎಚ್ಚರಗೊಳ್ಳುತ್ತಾನೆ), ಏಕೆಂದರೆ ಕರ್ಮ, ಅನುಸ್ಮೃತಿ, ಶಬ್ದ ಮತ್ತು ವಿಧಿ—ಇವುಗಳಿಂದ (ಇದು ತಿಳಿದುಬರುತ್ತದೆ)

ಸದ್ವಸ್ತುವಿನಿಂದ ಎಚ್ಚರಗೊಂಡಾಗ ಯಾವ ಜೀವನು ಸದ್ವಸ್ತುವಿನಲ್ಲಿ ಒಂದಾಗಿದ್ದನೊ ಅವನೇ ಎಚ್ಚರಗೊಳ್ಳುತ್ತಾನೆಯೊ ಅಥವಾ ಮತ್ತೊಬ್ಬನೊ—ಎಂಬುದನ್ನು ಈಗ ವಿಚಾರಿಸಬೇಕಾಗುತ್ತದೆ ಪೂರ್ವಪಕ್ಷದ ಪ್ರಕಾರ ಸುಷುಪ್ತಿಯಲ್ಲಿ ಲಯವಾದವನೇ ಎಚ್ಚರಗೊಳ್ಳುತ್ತಾನೆಂಬ ನಿಯಮವಿಲ್ಲ, ಏಕೆಂದರೆ ಜಲರಾಶಿಯಲ್ಲಿ ಒಂದು ಜಲಬಿಂದುವನ್ನು ಹಾಕಿದಾಗ ಅದು ನೀರಿನೊಡನೆ ಒಂದಾಗುತ್ತದೆ ಮತ್ತು ಪುನಃ ಅದನ್ನು ತೆಗೆದರೆ ಅದೇ ಜಲಬಿಂದುವೆಂದು ಹೇಳುವ ಹಾಗಿಲ್ಲ, ಹಾಗೆಯೇ ಸುಪ್ತನಾದವನು ಪರಮಾತ್ಮನೊಂದಿಗೆ ಏಕತ್ವವನ್ನು ಹೊಂದಿದವನಾಗಿ ಸಂಪ್ರಸನ್ನನಾಗುವುದರಿಂದ ಅವನೇ ಪುನಃ ಏಳಲಾರನು ಆದುದರಿಂದ ಎಚ್ಚರಗೊಂಡವನು ಈಶ್ವರನಾಗಬಹುದು ಅಥವಾ ಮತ್ತೊಬ್ಬ ಜೀವನಾಗಬಹುದು

ಅದೇ ಜೀವನು ಸುಪ್ತನಾಗಿ ಸ್ವಸ್ಥತೆಯನ್ನು ಹೊಂದಿ ಪುನಃ ಏಳುತ್ತಾನೆಯೇ ಹೊರತು ಮತ್ತೊಬ್ಬನಲ್ಲ—ಎಂಬದು ಸಿದ್ಧಾಂತ, ಏಕೆಂದರೆ (೧) ಸುಷುಪ್ತಿಗೆ ಹೋಗುವುದಕ್ಕೆ ಮೊದಲು ಪೂರ್ತಿಗೊಳಿಸಿದ ಕರ್ಮವನ್ನು ಎಚ್ಚರವಾದ ಮೇಲೆ ಮಾಡುವುದು ಕಂಡುಬರುತ್ತದೆ, ಒಬ್ಬನು ಅರ್ಧಮಾಡಿದ ಕರ್ಮವನ್ನು ಇನ್ನೊಬ್ಬನು ಮಾಡದಿರುವುದರಿಂದ ಎರಡು ಕಾಲದಲ್ಲಿಯೂ ಕರ್ಮವನ್ನು ಮಾಡುವವನು ಒಬ್ಬನೇ ಆಗಿರಬೇಕು; (೨) ಎಚ್ಚರಗೊಂಡವನು ತನ್ನ ಹಿಂದಿನ ಅನುಭವವನ್ನು ಸ್ಮರಿಸಿಕೊಳ್ಳುವುದರಿಂದ ಇನ್ನೊಬ್ಬನು ಏಳುತ್ತಾನೆಂಬುವುದು ಹೊಂದುವುದಿಲ್ಲ; ಮತ್ತೆ 'ಅವನೇ ನಾನು' ಎಂಬ ಆತ್ಮಾನುಸ್ಮರಣವೂ ಇರುವುದು, (೩) ಈ ವಿಷಯದಲ್ಲಿ ಶ್ರುತಿಯ ಪ್ರಮಾಣವೂ ಇದೆ 'ಹೋದ ದಾರಿಯಿಂದಲೇ ಹಿಂದಿನ ಅವಸ್ಥೆಗೆ ಎಂದರೆ ಎಚ್ಚರಕ್ಕೆ ತ್ವರೆಯಿಂದ ಬರುತ್ತಾನೆ'[1] (ಬೃ ಉ ೪ ೩. ೧೬) ಸುಷುಪ್ತಿಯಿಂದ ಎಚ್ಚರಗೊಂಡವನು ಬೇರೊಬ್ಬನಾದರೆ ಕರ್ಮದ ಅಥವಾ ವಿದ್ಯೆಯ ವಿಷಯವಾದ ವಿಧಿಗಳೆಲ್ಲ ವ್ಯರ್ಥವಾಗುತ್ತವೆ ಜಲಬಿಂದು—ಜಲರಾಶಿಯೊಂದಿಗೆ ಮಾಡಿದ ಹೋಲಿಕೆಯು ಸರಿಯಲ್ಲ, ಏಕೆಂದರೆ ಜಲರಾಶಿಯಲ್ಲಿ ಐಕ್ಯವಾದ ಜಲಬಿಂದು

---

* ಇದನ್ನು ಮಧ್ವಭಾಷ್ಯದಲ್ಲಿ ಕರ್ಮಾನುಸ್ಮೃತ್ಯಧಿಕರಣ ಎಂದು ಕರೆದಿದೆ

1 ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ । ಛಾಂ ಉ ೪. ೩ ೨ ೬ ೯ ೩ ನೋಡಿ.

ವನ್ನು ಉದ್ಧರಿಸಲು ಆಗುವುದಿಲ್ಲ, ಆದರೆ ಜೀವನು ಉಪಾಧಿಯೊಂದಿಗೆ ಸದ್ವಸ್ತುವಿನಲ್ಲಿ ಸೇರಿಕೊಳ್ಳುತ್ತಾನೆ, ಅವನೇ ಲಿಂಗಡಕ್ಕೆ ಕಾರಣವಾದ ಕರ್ಮ, ಅವಿದ್ಯೆ—ಇವುಗಳೊಂದಿಗೆ ಪುನಃ ಏಳುತ್ತಾನೆ ನಿಜವಾದ ಪರಮಾತ್ಮನಿಗಿಂತ ಬೇರೆಯವನಾದ ಜೀವನಿಲ್ಲ; ಸದ್ವಸ್ತುವೇ ಉಪಾಧಿಯ ಸಂಪರ್ಕದಿಂದ ಜೀವನೆಂದು ಉಪಚಾರಕ್ಕಾಗಿ ಹೇಳಲ್ಪಟ್ಟಿದೆ ಎಂದು ಅನೇಕ ಸಲ ವಿವರಿಸಿದ್ದಾಗಿದೆ[1] ಉಪಾಧಿಗಳು ಬೇರೆಬೇರೆಯಾಗಿರುವುದರಿಂದ ಜೀವರೂ ಭಿನ್ನ ರಾಗಿರುತ್ತಾರೆ ಒಂದು ಬಗೆಯಾದ ಉಪಾಧಿಗಳಿಂದ ಬಂಧಿಸಲ್ಪಟ್ಟಾಗ ಒಬ್ಬ ಜೀವನೆಂಬ ವ್ಯವಹಾರವಿರುತ್ತದೆ.

ವಿ —ಸುಪ್ತನಾದವನೇ ಏಳುವುದಕ್ಕೆ ಕರ್ಮ, ಅನುಸ್ಮೃತಿ, ಶ್ರುತಿ, ವಿಧಿಗಳು ಎಂಬ ನಾಲ್ಕು ಕಾರಣಗಳಿವೆ. ಜೀವನು ಸುಷುಪ್ತಿಯಲ್ಲಿ ಆಯಾಸಪರಿಹಾರಕ್ಕಾಗಿ ಸರ್ವ ಕರಣಗಳನ್ನೂ ತ್ಯಜಿಸಿ ಪರಮಾತ್ಮನನ್ನು ಸೇರಿ, ಆಯಾಸಪರಿಹಾರವಾದಮೇಲೆ ಪುನಃ ಕರ್ಮಫಲದ ಭೋಗಕ್ಕಾಗಿ ಏಳುತ್ತಾನೆ ತತ್ತ್ವಜ್ಞಾನಕ್ಕೆ ಮೊದಲು ತಾನು ಮಾಡಿದ ಪುಣ್ಯಪಾಪರೂಪವಾದ ಕರ್ಮದ ಫಲವನ್ನು ಅನುಭವಿಸುವುದು ಕರ್ಮ. 'ಮಲಗಿದ್ದ ನಾನೇ ಎಚ್ಚರವಾಗಿದ್ದೇನೆ' ಎಂಬುದು ಅನುಸ್ಮೃತಿ. ಶಬ್ದವು ಇದನ್ನೇ ತಿಳಿಸುತ್ತದೆ.[2] ವಿಧಿಗಳು ಮೋಕ್ಷಸಾಧನಭೂತವಾದ ಉಪಾಯವನ್ನು ತೋರಿಸುತ್ತವೆ; ಮಲಗಿದ್ದವನಿಗೇ ಮುಕ್ತಿಯಾದರೆ ವಿಧಿಗಳು ವ್ಯರ್ಥವಾಗುತ್ತವೆ.

ದ್ವೈ.—'ಪರಮಾತ್ಮನೇ ಅವಸ್ಥೆಗಳನ್ನೆಲ್ಲ ಪ್ರವರ್ತಿಸುತ್ತಾನೆ. ಏಕೆಂದರೆ ಶ್ರುತಿ-ಸ್ಮೃತಿ-ವಿಧಿಗಳಿವೆ' ಎಂಬುದು ಸೂತ್ರಾರ್ಥ.

ಪರಮಾತ್ಮನೇ ಎಲ್ಲರ ಸ್ವಪ್ನಾದಿ ಅವಸ್ಥೆಗಳಿಗೆ ಕಾರಣನಾಗಿರುತ್ತಾನೆ; 'ಅವನು ಸಾಧುಕರ್ಮವನ್ನು ಮಾಡಿಸುತ್ತಾನೆ' (ಕೌ. ಉ. ೩. ೮) ಎಂದು ಶ್ರುತಿಯು ಖಂಡಿತವಾಗಿ ಹೇಳುತ್ತದೆ.[3] 'ಅವನೇ ಎಲ್ಲರ ಸ್ವಪ್ನಾದಿಗಳಿಗೆ ಕಾರಣನು' ಎಂಬ ಸ್ಮೃತಿಯೂ ಇದೆ. 'ಆತ್ಮಲೋಕವನ್ನೇ ಉಪಾಸಿಸು'[4] (ಬೃ. ಉ ೧. ೪. ೧೫) ಎಂಬುದು ವಿಧಿ.

---

[1] ಸದೇವ ತೂಪಾಧಿಸಂಪರ್ಕಾಜ್ಜೀವ ಇತ್ಯುಪಚರ್ಯತ ಇತ್ಯಸಕೃತ್ಪ್ರಪಂಚಿತಮ್ (ಸೂ. ಭಾ.).

[2] 'ಇಲ್ಲಿ ಈ ಪ್ರಾಣಿಗಳು ಏನೇನಾಗಿರುವುವೊ—ಹುಲಿ, ಸಿಂಹ, ತೋಳ, ವರಾಹ, ಕೀಟ, ಪತಂಗ, ತೊಣಚಿ ಅಥವಾ ಸೊಳ್ಳೆ—ಅವು (ಪುನಃ ಪುನಃ) ಅದೇ ಆಗುವುವು' (ಛಾಂ. ಉ. ೬. ೧೦. ೨).

[3] ಏಷ ಹ್ಯೇವ ಸಾಧುಕರ್ಮ ಕಾರಯತೀತಿ ಕರ್ಮಣ್ಯವಧಾರಣಾತ್ (ಮ. ಭಾ.).

[4] ಆತ್ಮಾನಮೇವ ಲೋಕಮುಪಾಸೀತ ।

# ೪. ಮುಗ್ಧೇಽರ್ಧಸಂಪತ್ತ್ಯಧಿಕರಣ*

**ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ॥ ೧೦ ॥**

೧೦ ಪರಿಶೇಷದಿಂದ ಮೂರ್ಛೆಯು ಅರ್ಧಸಂಪತ್ತಿ (ಎಂದು ನಿಶ್ಚಯಿಸಬೇಕಾಗಿದೆ)

ಮೂರ್ಛೆಯು ಜಾಗ್ರತ್-ಸ್ವಪ್ನ-ಸುಷುಪ್ತಿ-ಮರಣಗಳೆಂಬ ನಾಲ್ಕು ಅವಸ್ಥೆಗಳಲ್ಲಿ ಒಂದೊ ಅಥವಾ ಬೇರೆಯೊ—ಎಂಬುದು ಸಂಶಯ ಶ್ರುತಿ-ಸ್ಮೃತಿಗಳಲ್ಲಿ ಇವುಗಳಿಗಿಂತ ಬೇರೆ ಯಾವ ಅವಸ್ಥೆಯನ್ನೂ ಹೇಳದಿರುವುದರಿಂದ ಮೂರ್ಛೆಯು ಈ ನಾಲ್ಕು ಅವಸ್ಥೆಗಳಲ್ಲಿ ಯಾವುದೋ ಒಂದಾಗಿರಬಹುದು—ಎಂಬುದು ಪೂರ್ವಪಕ್ಷ

ಸಿದ್ಧಾಂತವು ಹೀಗಿದೆ ಮೊದಲನೆಯದಾಗಿ ಮೂರ್ಛೆಯಲ್ಲಿರುವವನು ಜಾಗರಿತಾವಸ್ಥೆಯಲ್ಲಿರುವವನೆಂದು ಹೇಳಲಾಗುವುದಿಲ್ಲ, ಏಕೆಂದರೆ ಇಂದ್ರಿಯಗಳ ಮೂಲಕ ವಿಷಯುಗಳನ್ನು ನೋಡುತ್ತಿಲ್ಲ ಯಾವುದೋ ಒಂದು ವಸ್ತುವಿನಲ್ಲಿರುವ ಏಕಾಗ್ರತೆಯಿಂದ ಇತರ ವಸ್ತುಗಳನ್ನು ಅರಿಯಲಿಲ್ಲವೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಮೂರ್ಛಿತನಾದವನಿಗೆ ಯಾವುದೂ ತಿಳಿಯಬರುವುದಿಲ್ಲ ಅವನು ಸ್ವಪ್ನಗಳನ್ನು ನೋಡುತ್ತಾನೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಅವನಿಗೆ ಯಾವ ಜ್ಞಾನವೂ ಇರುವುದಿಲ್ಲ ಅವನು ಮೃತನಾಗಿರುವನೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಅವನಲ್ಲಿ ಪ್ರಾಣವೂ ಉಷ್ಣತೆಯೂ ಇರುತ್ತವೆ, ಮತ್ತೆ ಅವನಿಗೆ ಎಚ್ಚರವೂ ಆಗಿ ಮೇಲಕ್ಕೇಳುತ್ತಾನೆ ಮೂರ್ಛೆಯನ್ನು ಸುಷುಪ್ತಿಯೆಂದೂ ಹೇಳಲಾಗುವುದಿಲ್ಲ, ಏಕೆಂದರೆ ಮೂರ್ಛಿತನಾದವನು ನಿಯಮದಿಂದ ಉಸಿರಾಡುವುದಿಲ್ಲ, ಅವನ ಶರೀರವು ನಡುಗುತ್ತ ಇರುತ್ತದೆ, ಮುಖವು ಭಯಾನಕವಾಗಿ ಕಣ್ಣುಗಳು ತೆರೆದಿರುತ್ತವೆ ಸುಷುಪ್ತಿಯಲ್ಲಿರುವವನ ಮುಖವು ಪ್ರಸನ್ನವಾಗಿರುತ್ತದೆ ಮತ್ತು ಅವನು ಸರಿಯಾಗಿ ಉಸಿರಾಡುತ್ತಾನೆ ನಿದ್ರಿಸುತ್ತಿರುವವನನ್ನು ಸ್ಪರ್ಶಮಾತ್ರದಿಂದ ಎಚ್ಚಿಸುವ ಹಾಗೆ ಮೂರ್ಛಿತನಾದವನನ್ನು ಎಬ್ಬಿಸಲು ಸಾಧ್ಯವಿಲ್ಲ ಪರಿಶೇಷದಿಂದ ಮೂರ್ಛೆಯನ್ನು ಅರ್ಧಸಂಪತ್ತಿಯೆಂದು ನಿರ್ಧರಿಸಬೇಕಾಗಿದೆ, ಜ್ಞಾನವಿಲ್ಲದುದರಿಂದ ಸಂಪನ್ನನಾಗಿರುತ್ತಾನೆ, ಸುಷುಪ್ತಿಗಿಂತ ವಿಲಕ್ಷಣವಾಗಿರುವುದರಿಂದ ಸಂಪನ್ನನೂ ಅಲ್ಲ [1] ಇದರಿಂದ ಮೂರ್ಛಿತನಾದವನಿಗೆ ಬ್ರಹ್ಮದೊಡನೆ ಸಂಪತ್ತಿಯು ಅರ್ಧವಾಗಿದಯೆಂದು ತಿಳಿಯಕೂಡದು ಮೂರ್ಛೆಯ ಅರ್ಧಪಾಲು ಸುಷುಪ್ತಿಯ ಪಕ್ಷಕ್ಕೆ ಸೇರಿರುತ್ತದೆ, ಇನ್ನರ್ಧಪಾಲು

---

* ಇದನ್ನು ಶ್ರೀಭಾಷ್ಯದಲ್ಲಿ ಮುಗ್ಧಾಧಿಕರಣ ಎಂದೂ ಮಧ್ವಭಾಷ್ಯದಲ್ಲಿ ಮುಗ್ಧಪ್ರಾಪ್ತ್ಯಧಿಕರಣ ಎಂದೂ ಕರೆದಿದೆ

1 ಪರಿಶೇಷಾದರ್ಧಸಂಪತ್ತಿರ್ಮುಗ್ಧತೇತ್ಯವಗಚ್ಛಾಮಃ । ನಿಃಸಂಜ್ಞತ್ವಾತ್ ಸಂಪನ್ನಃ, ಇತರಸ್ಮಾದ್ವೈಲಕ್ಷಣ್ಯಾದಸಂಪನ್ನ ಇತಿ (ಸೂ ಭಾ )

ಮತ್ತೊಂದು ಅವಸ್ಥೆಗೆ ಸೇರಿರುತ್ತದೆ. ಮೂರ್ಛೆಯು ಮರಣಕ್ಕೆ ದ್ವಾರವೂ ಆಗಿರುತ್ತದೆ; ಅವನ ಕರ್ಮವು ನಿರವಶೇಷವಾದಾಗ ಮೃತನಾಗುತ್ತಾನೆ.

**ವಿ.**—ಪರಿಶೇಷದಿಂದ ಮೂರ್ಛೆಯು ಮರಣದ ಅರ್ಧಸಂಪತ್ತಿ.[1] **ಜೀವಾತ್ಮನು** ಶರೀರೇಂದ್ರಿಯಗಳಿಂದ ಸಂಪೂರ್ಣವಾಗಿ ಬೇರ್ಪಟ್ಟರೆ ಮರಣವೆನಿಸುತ್ತದೆ, ಸೂಕ್ಷ್ಮವಾದ ಶರೀರೇಂದ್ರಿಯಗಳೊಂದಿಗೆ ಸಂಬಂಧವಿದ್ದರೆ ಮೂರ್ಛೆಯೆನಿಸುತ್ತದೆ.

**ದ್ವೈ.**—'ಮುಗ್ಧಾವಸ್ಥೆಯಲ್ಲಿ ಜೀವನಿಗೆ ಬ್ರಹ್ಮನೊಂದಿಗೆ ಅರ್ಧಪ್ರಾಪ್ತಿಯಾಗುತ್ತದೆ, (ಸಮ್ಯಕ್ಪ್ರಾಪ್ತಿಯಲ್ಲ); ಇದು ಪರಿಶೇಷದಿಂದ ತಿಳಿದುಬರುತ್ತದೆ'[2] ಎಂಬುದು ಸೂತ್ರಾರ್ಥ.

'ಹೃದಯದಲ್ಲಿರುವ ಪರಮಾತ್ಮನಿಂದ ಜೀವನು ದೂರವಾಗಿರುವಾಗ ಅವನು ಎಚ್ಚರವಾಗಿರುತ್ತಾನೆ; ಪರಮಾತ್ಮನ ಸಮೀಪದಲ್ಲಿರುವಾಗ ಅವನು ಸ್ವಪ್ನದಲ್ಲಿರುತ್ತಾನೆ; ಪರಮಾತ್ಮನನ್ನು ಪ್ರವೇಶಿಸಿದಾಗ ಮಲಗಿರುತ್ತಾನೆ. ಈ ಅವಸ್ಥಾತ್ರಯವು ಹೀಗಿರುವಾಗ ಪರಮಾತ್ಮನಲ್ಲಿ ಅರ್ಧಪ್ರವೇಶವು ಮೂರ್ಛೆಯೆಂಬುದು ಪರಿಶಿಷ್ಟವಾಗಿದೆ; ಏಕೆಂದರೆ ಆ ಅವಸ್ಥೆಯಲ್ಲಿ ದುಃಖವು ಮಾತ್ರ ಮುಂದುವರಿದಿದೆ' ಎಂದು ವರಾಹಪುರಾಣದಲ್ಲಿ ಹೇಳಿದೆ. ಇತರ ಅವಸ್ಥೆಗಳಂತೆ ಮೂರ್ಛೆಯೂ ಅದರಿಂದ ಎಚ್ಚರವಾಗುವುದೂ ಪರಮಾತ್ಮನಿಂದಲೇ ಆಗುತ್ತದೆ.

---

[1] ಪಾರಿಶೇಷ್ಯಾನ್ಮರಣಾಯಾರ್ಧಸಂಪತ್ತಿರ್ಮೂರ್ಛಾ (ಶ್ರೀಭಾಷ್ಯ).

[2] ಮೋಹಾವಸ್ಥಾಯಾಂ ಪರಮೇಶ್ವರೇಽರ್ಧಪ್ರಾಪ್ತಿರ್ಜೀವಸ್ಯ (ಮ. ಭಾ.).

## ೫. ಉಭಯಲಿಂಗಾಧಿಕರಣ*

(ಸೂ. ೧೧-೨೧)

**ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ॥ ೧೧ ॥**

೧೧. ಸ್ಥಾನದಿಂದಲೂ ಪರಮಾತ್ಮನಿಗೆ ಉಭಯಲಿಂಗವಿಲ್ಲ; ಏಕೆಂದರೆ (ಶಾಸ್ತ್ರವು ಬ್ರಹ್ಮಕ್ಕೆ ನಿರ್ವಿಶೇಷತ್ವವನ್ನು) ಸರ್ವತ್ರ ಹೇಳಿದೆ.

ಸುಷುಪ್ತ್ಯಾದಿಗಳಲ್ಲಿ ಉಪಾಧಿಯು ಉಪಶಮವಾಗುವುದರಿಂದ ಯಾವ ಬ್ರಹ್ಮದೊಂದಿಗೆ ಜೀವನು ಸಂಪತ್ತಿಯನ್ನು ಪಡೆಯುತ್ತಾನೆಯೊ ಆ ಬ್ರಹ್ಮದ ಸ್ವರೂಪವನ್ನು ಶ್ರುತಿವಶದಿಂದ ಈಗ ನಿರ್ಧರಿಸಲಾಗುತ್ತದೆ. ಬ್ರಹ್ಮದ ವಿಷಯದಲ್ಲಿ ಉಭಯಲಿಂಗದ ಶ್ರುತಿಗಳಿರುತ್ತವೆ : '(ಆ ಈಶ್ವರನು) ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು'[1] (ಛಾಂ. ಉ. ೩. ೧೪. ೨), ಇವೇ ಮೊದಲಾದುವು ಸವಿಶೇಷಲಿಂಗದ ಶ್ರುತಿಗಳು ; 'ಅದು ಅಸ್ಥೂಲವು, ಅನಣು, ಅಹ್ರಸ್ವವು, ಅದೀರ್ಘವು'[2] (ಬೃ. ಉ. ೩. ೮. ೮) ಇವೇ ಮೊದಲಾದುವು ನಿರ್ವಿಶೇಷಲಿಂಗದ ಶ್ರುತಿಗಳು. ಬ್ರಹ್ಮವು ಉಭಯಲಿಂಗವುಳ್ಳದ್ದೊ ಅಥವಾ ಇವೆರಡರಲ್ಲಿ ಒಂದೇ ಲಿಂಗವುಳ್ಳದ್ದೊ—ಎಂಬುದು ಸಂಶಯ.

**ಪೂರ್ವಪಕ್ಷ.**—ಶ್ರುತಿಯು ಎರಡು ಲಿಂಗಗಳನ್ನು ಹೇಳಿರುವುದರಿಂದ ಬ್ರಹ್ಮವು ಉಭಯಲಿಂಗವುಳ್ಳದೆಂದು ತಿಳಿದುಕೊಳ್ಳಬೇಕು

**ಸಿದ್ಧಾಂತಿ.**—ಪರಬ್ರಹ್ಮಕ್ಕೆ ಸ್ವತಃ ಉಭಯಲಿಂಗತ್ವವು ಹೊಂದುದಿಲ್ಲ ; ಏಕೆಂದರೆ ಒಂದೇ ವಸ್ತುವಿಗೆ ಸವಿಶೇಷತ್ವ, ನಿರ್ವಿಶೇಷತ್ವ—ಎಂಬ ಪರಸ್ಪರವಿರೋಧವಾದ ಎರಡೂ ಇವೆ ಎಂದು ಹೇಳಲಾಗುವುದಿಲ್ಲ. ಹಾಗಾದರೆ ಸ್ಥಾನದಿಂದ ಎಂದರೆ ಪೃಥಿವ್ಯಾದಿ-ಉಪಾಧಿಗಳ ಸಂಬಂಧದಿಂದ ಆಗಬಹುದೆಂಬುದೂ ಹೊಂದುವುದಿಲ್ಲ ; ಏಕೆಂದರೆ ಉಪಾಧಿಸಂಬಂಧದಿಂದ ಒಂದು ವಸ್ತುವಿಗೆ ಮತ್ತೊಂದು ಸ್ವಭಾವವು ಆಗುವುದಿಲ್ಲ ;[3] ಸ್ವಚ್ಛವಾದ ಸ್ಫಟಿಕದಲ್ಲಿ ಪ್ರತಿಬಿಂಬಿತವಾದ ಕೆಂಪುಬಣ್ಣವು ಸ್ಫಟಿಕದ ಸ್ವರೂಪವನ್ನು ಬದಲಾಯಿಸಲಾರದು ; ಏಕೆಂದರೆ ಸ್ಫಟಿಕದಲ್ಲಿ ತೋರುವ ಬಣ್ಣವು ಭ್ರಮೆಯಾಗಿರುತ್ತದೆ. ಮತ್ತೆ ಅವಿದ್ಯೆಯೇ

---

* ಶ್ರೀಭಾಷ್ಯದಲ್ಲಿ ಈ ಅಧಿಕರಣವು ಅತೋಽನಂತೇನ ತಥಾ ಹಿ ಲಿಂಗಮ್ (೨೬) ಎಂಬ ಸೂತ್ರದವರೆಗೂ ಮುಂದುವರೆಯುತ್ತದೆ. ಮಧ್ವಭಾಷ್ಯದಲ್ಲಿ ಈ ಸೂತ್ರವು ಮತ್ತು ಮುಂದಿನ ಎರಡು ಸೂತ್ರಗಳು ಸೇರಿಕೊಂಡು ಸ್ಥಾನಭೇದಾಧಿಕರಣ ಎಂಬ ಅಧಿಕರಣವಾಗಿದೆ.

1 ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ।

2 ಅಸ್ಥೂಲಮನಣ್ವಹ್ರಸ್ವಮದೀರ್ಘಮ್ ।

3 ನ ಹ್ಯುಪಾಧಿಯೋಗಾದಪ್ಯನ್ಯಾದೃಶಸ್ಯ ವಸ್ತುನೋಽನ್ಯಾದೃಶಃ ಸ್ವಭಾವಃ ಸಂಭವತಿ (ಸೂ. ಭಾ.).

ಉಪಾಧಿಗಳನ್ನು ತಂದೊಡ್ಡುತ್ತದೆ. ಆದುದರಿಂದ ಎರಡು ಲಿಂಗಗಳಲ್ಲಿ ಒಂದನ್ನು ಒಪ್ಪಿಕೊಳ್ಳಬೇಕಾದರೂ ಬ್ರಹ್ಮವು ನಿರ್ವಿಶೇಷವು, ನಿರ್ವಿಕಲ್ಪವು ಎಂದು ತಿಳಿದುಕೊಳ್ಳಬೇಕೇ ಹೊರತು ಇದಕ್ಕೆ ವಿರುದ್ಧವಾಗಿ ತಿಳಿದುಕೊಳ್ಳಕೂಡದು ; ಏಕೆಂದರೆ ಬ್ರಹ್ಮಸ್ವರೂಪಪ್ರತಿಪಾದನ-ಪರವಾದ 'ಯಾವುದು ಶಬ್ದರಹಿತವೊ ಸ್ಪರ್ಶರಹಿತವೊ ರೂಪರಹಿತವೊ ಅವ್ಯಯವೊ'[1] (ಕ. ಉ. ೧. ೩. ೧೫) ಇವೇ ಮೊದಲಾದ ವಾಕ್ಯಗಳಲ್ಲೆಲ್ಲ ನಿರ್ವಿಶೇಷವಾದ ಬ್ರಹ್ಮವನ್ನೇ ಉಪದೇಶಿಸಿರುತ್ತದೆ.

ವಿ.—'ಸ್ಥಾನದಿಂದಲೂ ಪರಬ್ರಹ್ಮನಿಗೆ (ದೋಷವಿಲ್ಲ) ; ಅವನಿಗೆ ಉಭಯಲಿಂಗವಿದೆಯೆಂದು ಸರ್ವತ್ರ (ಹೇಳಿದೆ)' ಎಂಬುದು ಸೂತ್ರಾರ್ಥ.

ಜಾಗರಿತ-ಸ್ವಪ್ನ-ಸುಷುಪ್ತ್ಯಾದಿ ಅವಸ್ಥೆಗಳಲ್ಲಿರುವ ಜೀವನಿಗೆ ಆಯಾ ಅವಸ್ಥೆಗಳಿಂದುಂಟಾದ ದೋಷಗಳು ಅವನ ಅಂತರ್ಯಾಮಿಯಾದ ಪರಮಾತ್ಮನಿಗೂ ಬರುತ್ತವೆಯೊ ಅಥವಾ ಇಲ್ಲವೊ ಎಂಬುದು ಸಂಶಯ. ಜಾಗರಿತ-ಸ್ವಪ್ನಾದಿ-ಶರೀರಗಳಲ್ಲಿ ಪರಮಾತ್ಮನು ಇರುವುದರಿಂದ ಅವನಿಗೂ ಈ ದೋಷಗಳು ಬರುತ್ತವೆ—ಎಂಬುದು ಪೂರ್ವಪಕ್ಷ. ಸ್ಥಾನದ ದೆಸೆಯಿಂದಲೂ ಪರಮಾತ್ಮನಿಗೆ ದೋಷವು ಬರುವುದಿಲ್ಲ—ಎಂಬುದು ಸಿದ್ಧಾಂತ. ಶ್ರುತಿಸ್ಮೃತಿಗಳಲ್ಲೆಲ್ಲ ಅವನಿಗೆ ಉಭಯಲಕ್ಷಣವನ್ನು ಹೇಳಿದೆ: (೧) ಸಮಸ್ತದೋಷರಹಿತನಾಗಿದ್ದಾನೆ ಮತ್ತು (೨) ಕಲ್ಯಾಣಗುಣಗಳ ಆಕರನಾಗಿದ್ದಾನೆ. 'ಪಾಪ ಮುಪ್ಪು ಮೃತ್ಯು ಶೋಕ ಹಸಿವು ಬಾಯಾರಿಕೆ—ಇವುಗಳಿಲ್ಲದವನಾದ ಸತ್ಯಕಾಮನಾದ ಸತ್ಯಸಂಕಲ್ಪನಾದ ಪರಮಾತ್ಮನು'[2] (ಛಾಂ. ಉ. ೮. ೧. ೫) ಎಂದು ಶ್ರುತಿಯು ಹೇಳುತ್ತದೆ 'ತೇಜಸ್ಸು ಬಲ ಐಶ್ವರ್ಯ ಸರ್ವಜ್ಞತ್ವ ಸುವೀರ್ಯಶಕ್ತಿ—ಇವುಗಳ ರಾಶಿಯು ಪರಮೇಶ್ವರನು ; ಇವನು ಶ್ರೇಷ್ಠರಾದ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು, ಪರಾವರಗಳಿಗೆ ಈಶ್ವರನಾದ ಅವನಲ್ಲಿ ಯಾವ ದೋಷವೂ ಇಲ್ಲ'[3] (ವಿ. ಪು. ೬. ೫. ೮೫) ಎಂದು ಸ್ಮೃತಿಯೂ ಹೇಳುತ್ತದೆ.

ದ್ವೈ.—'ದೇವಮನುಷ್ಯಾದಿ ಸ್ಥಾನಭೇದದಿಂದಲೂ ಪರಮಾತ್ಮನಿಗೆ ಅನುಗ್ರಾಹ್ಯ-ಅನುಗ್ರಾಹಕತ್ವರೂಪವಾದ ಭೇದವಿಲ್ಲ ; ಎಲ್ಲ ಸ್ಥಾನಗಳಲ್ಲಿಯೂ ಪರಮಾತ್ಮನು ದೋಷರಹಿತನು ಮತ್ತು ಪರಿಪೂರ್ಣಕಲ್ಯಾಣಚಿದ್ಗುಣನು'[4] ಎಂಬುದು ಸೂತ್ರಾರ್ಥ.

---

1 ಅಶಬ್ದಮಸ್ಪರ್ಶಮರೂಪಮವ್ಯಯಮ್ ।

2 ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ।

3 ತೇಜೋಬಲೈಶ್ವರ್ಯಮಹಾವಬೋಧಸುವೀರ್ಯಶಕ್ತ್ಯಾದಿಗುಣೈಕರಾಶಿಃ ।
ಪರಃ ಪರಾಣಾಂ ಸಕಲಾ ನ ಯತ್ರ ಕ್ಲೇಶಾದಯಸ್ಸಂತಿ ಪರಾವರೇಶೇ ॥

4 ನ ಸ್ಥಾನಭೇದತೋಽಪ್ಯಸ್ಯ ಭೇದಃ ಕಶ್ಚಿತ್ಪರೇಶಿತುಃ ।
ಸರ್ವತ್ರಾಶೇಷದೋಷೋಜ್ಝಪೂರ್ಣಕಲ್ಯಾಣಚಿದ್ಗುಣಃ ॥

'ಸಮಸ್ತ ಪ್ರಾಣಿಗಳಲ್ಲಿಯೂ ಇವನೇ ಬ್ರಹ್ಮನಾಗಿದ್ದಾನೆ—ಎಂದು ಜ್ಞಾನಿಗಳು ಹೇಳುತ್ತಾರೆ' ಎಂದು ಶ್ರುತಿಯು ಹೇಳುತ್ತದೆ [1]

**ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್* ॥ ೧೨ ॥**

೧೨ ಭೇದವನ್ನು ಉಪದೇಶಿಸಿರುವುದರಿಂದ ಅದು ಸರಿಯಲ್ಲವೆಂದರೆ ಹಾಗಲ್ಲ, ಏಕೆಂದರೆ ಪ್ರತ್ಯೇಕವಾಗಿಯೂ ಅದಲ್ಲವೆಂದೇ ಹೇಳಿದೆ.

**ಆಕ್ಷೇಪಣೆ**—ಪ್ರತಿಯೊಂದು ವಿದ್ಯೆಯಲ್ಲಿಯೂ ಭಿನ್ನವಾಗಿಯೇ ಬ್ರಹ್ಮಕ್ಕೆ ಆಧಾರಗಳನ್ನು ಕಲ್ಪಿಸಿದೆ ಬ್ರಹ್ಮಕ್ಕೆ ನಾಲ್ಕು ಪಾದಗಳಿವೆ (ಛಾಂ ಉ ೩ ೧೨ ೫) ; ಬ್ರಹ್ಮಕ್ಕೆ ಹದಿನಾರು ತಲೆಗಳಿವೆ (ಪ್ರ ಉ ೬ ೧ ೮) , ಬ್ರಹ್ಮಕ್ಕೆ ವಾಮನೀತ್ವಾದಿ ಲಕ್ಷಣಗಳಿವೆ (ಛಾಂ ಉ ೪ ೧೫ ೩) , ಬ್ರಹ್ಮವು ತ್ರೈಲೋಕ್ಯಶರೀರ-ವೈಶ್ವಾನರಶಬ್ದದಿಂದ ಹೇಳಲ್ಪಟ್ಟಿದ್ದು (ಛಾಂ ಉ ೫ ೧೧) ಇತ್ಯಾದಿ ಬ್ರಹ್ಮಕ್ಕೆ ಉಭಯ-ಲಿಂಗವಿರುವುದರಲ್ಲಿ ವಿರೋಧವಿಲ್ಲ, ಏಕೆಂದರೆ ಆಕಾರಭೇದವು ಉಪಾಧಿಯಿಂದಾಗಿರುತ್ತದೆ ಆದುದರಿಂದ ಬ್ರಹ್ಮಕ್ಕೆ ಸವಿಶೇಷತ್ವವನ್ನು ಒಪ್ಪಬೇಕು

**ಪರಿಹಾರ**—ಈ ಆಕ್ಷೇಪಣೆಯು ಸರಿಯಲ್ಲ , ಏಕೆಂದರೆ ಪ್ರತಿಯೊಂದು ಉಪಾಧಿ-ಭೇದದ ವಿಷಯದಲ್ಲಿಯೂ ಶ್ರುತಿಯು ಅಭೇದವನ್ನೇ ಹೇಳುತ್ತದೆ 'ಈ ಪೃಥ್ವಿಯಲ್ಲಿ ಯಾವ ತೇಜೋಮಯನೂ ಅಮೃತಮಯನೂ ಆದ ಪುರುಷನಿರುವನೋ, ಶರೀರಸಂಬಂಧಿಯಾದ ಮತ್ತು ಶರೀರದಲ್ಲಿ ಯಾವ ಈ ತೇಜೋಮಯನಾದ ಅಮೃತಮಯನಾದ ಪುರುಷನಿರುವನೋ ಇವನೇ ಅವನು' [2] (ಬೃ ಉ ೨ ೫ ೧) ಎಂದು ಶ್ರುತಿಯು ಹೇಳುತ್ತದೆ ಆದುದರಿಂದ ಬ್ರಹ್ಮದ ಭಿನ್ನಾಕಾರಸಂಬಂಧವನ್ನು ಶಾಸ್ತ್ರೀಯವೆಂದು ಹೇಳುವುದು ಸರಿಯಲ್ಲ . ಏಕೆಂದರೆ ಉಪಾಸನೆಗಾಗಿ ಭೇದವನ್ನು ಹೇಳಿದೆ , ಅಭೇದದಲ್ಲಿಯೇ ಆ ಶ್ರುತಿಗೆ ತಾತ್ಪರ್ಯವಿದೆ [3]

**ವಿ.**—'ಪರಮಾತ್ಮನಿಗೂ ಅವಸ್ಥಾಭೇದದಿಂದ ದೋಷಸಂಬಂಧವು ತಪ್ಪುವುದಿಲ್ಲವೆಂದು ಹೇಳಿದರೆ ಅದು ಸರಿಯಲ್ಲ , ಏಕೆಂದರೆ ಪ್ರತಿಯೊಂದರಲ್ಲಿಯೂ ಪರಮಾತ್ಮನಿಗೆ ದೋಷವಿಲ್ಲವೆಂದು ಹೇಳಿದೆ' ಎಂಬುದು ಸೂತ್ರಾರ್ಥ

ಪ್ರಜಾಪತಿ-ವಾಕ್ಯದಲ್ಲಿ ಹೇಳಿರುವ ಹಾಗೆ ಜೀವನಿಗೆ ಅಪಹತ-ಪಾಪ್ಮತ್ವಾದಿ ಉಭಯ ಲಕ್ಷಣವಿದ್ದರೂ ದೇವಾದಿಶರೀರಸಂಬಂಧದಿಂದ ದೋಷವನ್ನು ಹೊಂದುವಂತೆ ಪರಮಾತ್ಮ

---

1 ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತ ಇತಿ ಹಿ ಶ್ರುತಿಃ (ಮ ಭಾ.)

* ಶ್ರೀಭಾಷ್ಯದಲ್ಲಿ ಮೊದಲನೆಯ ನ-ಕಾರವಿಲ್ಲ

2 ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷಃ, ಯಶ್ಚಾಯಮಧ್ಯಾತ್ಮಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷಃ, ಅಯಮೇವ ಸ ಯೋಽಯಮಾತ್ಮಾ ।

3 ಭೇದಸ್ಯೋಪಾಸನಾರ್ಥತ್ವಾದಭೇದೇ ತಾತ್ಪರ್ಯಾತ್ (ಸೂ ಭಾ ).

ನಾದ ಅಂತರ್ಯಾಮಿಯೂ ಶರೀರಸಂಬಂಧದಿಂದ ದೋಷವನ್ನು ಹೊಂದುತ್ತಾನೆ— ಎಂಬ ಆಕ್ಷೇಪಣೆಯು ಸರಿಯಲ್ಲ, ಏಕೆಂದರೆ 'ಯಾವನು ಪೃಥ್ವಿಯಲ್ಲಿರುವನೊ' (ಬೃ ಉ. ೩. ೭. ೩) ಎಂದು ಶ್ರುತಿಯು ಹೇಳುವಾಗ ಆ ಅಂತರ್ಯಾಮಿಯು ಅಮೃತನೆಂದು ಹೇಳಿ, ಶರೀರಸಂಬಂಧದಿಂದಾಗುವ ದೋಷಗಳನ್ನು ನಿರಾಕರಿಸುತ್ತದೆ. ಹಿಂದೆ ಹೇಳಿರುವಂತೆ (೩. ೨. ೫) ಜೀವನ ಸ್ವರೂಪವು ಶರೀರಸಂಬಂಧದಿಂದ ತಿರೋಹಿತವಾಗಿದೆ. ಪರಬ್ರಹ್ಮನು ಸ್ವಾಧೀನನಾದುದರಿಂದಲೂ ಅವನು ನಿಯಮನಕ್ಕಾಗಿ ಶರೀರವನ್ನು ತನ್ನ ಇಚ್ಛಾನುಸಾರ ಪ್ರವೇಶಿಸುವುದರಿಂದಲೂ ಆ ಸಂಬಂಧವು ನಿಯಮನರೂಪವಾದ ಲೀಲೆಯಾಗಿರುತ್ತದೆ.

**ದ್ವೈ.**—'ಭೇದಶ್ರುತಿಯಿರುವುದರಿಂದ ಪರಮಾತ್ಮನಲ್ಲಿ ಅಭೇದವಿಲ್ಲ ಎಂದು ಹೇಳಕೂಡದು; ಏಕೆಂದರೆ ಪ್ರತ್ಯೇಕವಾಗಿ ಅಭೇದಪ್ರತಿಪಾದಕವಾದ ವಚನವಿದೆ' ಎಂಬುದು ಸೂತ್ರಾರ್ಥ.

'ವಿಶ್ವ-ತೈಜಸರು ಅಜ್ಞಾನಕಾರ್ಯವಾದ ಭ್ರಮೆಯಿಂದಲೂ ಭ್ರಮೆಗೆ ಕಾರಣವಾದ ಅವಿದ್ಯೆಯಿಂದಲೂ ಬದ್ಧರಾಗಿದ್ದಾರೆ; ಪ್ರಾಜ್ಞನಾದರೊ ಕಾರಣೀಭೂತವಾದ ಅಜ್ಞಾನರೂಪ-ಸುಪ್ತಿಯಿಂದ ಬದ್ಧನಾಗಿರುತ್ತಾನೆ; ತುರೀಯದಲ್ಲಿ ಇವೆರಡೂ ಇರುವುದಿಲ್ಲ'[1] (ಮಾಂ. ಕಾ. ೧. ೧೧) ಎಂಬ ಶ್ರುತಿಯಲ್ಲಿ ಭೇದವನ್ನು ಪ್ರತಿಪಾದಿಸತಕ್ಕ ವಚನವಿರುವುದರಿಂದ ಪರಮಾತ್ಮನಿಗೆ ಸರ್ವರೂಪಗಳಲ್ಲಿ ಅಭೇದವಿಲ್ಲ—ಎಂದು ಹೇಳಕೂಡದು; ಏಕೆಂದರೆ **ಏಷ ತ ಆತ್ಮಾಽಂತರ್ಯಾಮ್ಯಮೃತಃ** (ಬೃ. ಉ. ೩. ೭. ೫) ಎಂಬಲ್ಲಿ 'ಪೃಥಿವ್ಯಾದಿಯ ಅಂತರ್ಯಾಮಿಯೇ ನಿನ್ನ ಅಂತರ್ಯಾಮಿ' ಎಂದೂ **ಅಯಮೇವ ಸ ಯೋಽಯಮಾತ್ಮಾ, ಇದಮಮೃತಮ್, ಇದಂ ಬ್ರಹ್ಮ, ಇದಂ ಸರ್ವಂ** (ಬೃ. ಉ. ೨. ೫ ೧) ಎಂಬಲ್ಲಿ ಈಶ್ವರನ ರೂಪಗಳಿಗೆ ಪ್ರತ್ಯೇಕವಾಗಿ ಅಭೇದವನ್ನೂ ಪ್ರತಿಪಾದಿಸಿದೆ.

**ಅಪಿ ಚೈವಮೇಕೇ ॥ ೧೩ ॥**

೧೩. ಮತ್ತು ಕೆಲವರು ಹೀಗೆ (ಪಠಿಸುತ್ತಾರೆ).

ಹೀಗೆ ಭೇದದರ್ಶನವನ್ನು ನಿಂದಿಸುವುದರ ಮೂಲಕ ಅಭೇದದರ್ಶನವನ್ನೇ ಒಂದು ಶಾಖೆಯವರು ಪಠಿಸುತ್ತಾರೆ: 'ಬ್ರಹ್ಮವನ್ನು ಮನಸ್ಸಿನಿಂದಲೇ ಹೊಂದಬೇಕು; ಇಲ್ಲಿ ಏನೂ ಭಿನ್ನವಿಲ್ಲ. ಯಾವನು ಇಲ್ಲಿ ಭಿನ್ನವಾಗಿರುವಂತೆ ನೋಡುತ್ತಾನೆಯೊ ಅವನು ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ'[2] (ಕ. ಉ. ೨. ೪. ೧೧). ಹೀಗೆಯೇ

[1] ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತೌ ತುರ್ಯೇ ನ ಸಿಧ್ಯತಃ ॥

[2] ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।
ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥

ಇನ್ನು ಕೆಲವರು ಭೋಗ್ಯ-ಭೋಕ್ತೃ-ನಿಯಂತೃರೂಪವಾಗಿರುವ ಪ್ರಪಂಚವೆಲ್ಲವೂ ಬ್ರಹ್ಮ ವೆಂಬ ಒಂದೇ ಸ್ವಭಾವವುಳ್ಳದೆಂದು ಹೇಳುತ್ತಾರೆ ; 'ಭೋಕ್ತೃ ಭೋಗ್ಯ ಮತ್ತು ಪ್ರೇರಕ ನಾದ ಈಶ್ವರ—ಇವರನ್ನು ಅರಿತುಕೊಂಡಾಗ ಎಲ್ಲವೂ ಹೇಳಲ್ಪಟ್ಟಂತೆಯೇ. ಇದು ತ್ರಿವಿಧವಾದ ಬ್ರಹ್ಮ'[1] (ಶ್ವೇ. ಉ. ೧. ೧೨).

ಪಿ.—ಒಂದೇ ಶರೀರದಲ್ಲಾಗುವ ಸಂಯೋಗವು ಜೀವನಿಗೆ ಅಪುರುಷಾರ್ಥ ವನ್ನುಂಟುಮಾಡಿದರೂ ಪರಮಾತ್ಮನಿಗೆ ಅಂಥಹದೇನೂ ಆಗುವುದಿಲ್ಲವೆಂದೂ ಅದು ಆವನಿಗೆ ನಿಯಮನರೂಪವಾದ ಐಶ್ವರ್ಯವಾಗಿದೆಯೆಂದೂ ಒಂದು ಶಾಖೆಯವರು ಹೇಳುತ್ತಾರೆ ; 'ಎರಡು ಸಮಾನಗುಣಕಗಳಾದ ಮತ್ತು ಪರಸ್ಪರ ಸಖರಾದ ಪಕ್ಷಿಗಳು ಒಂದೇ ವೃಕ್ಷವನ್ನು ಅವಲಂಬಿಸಿರುವುವು. ಅವುಗಳಲ್ಲಿ ಒಂದು ಪಕ್ವವಾದ ಪಿಪ್ಪಲಫಲವನ್ನು ಸೇವಿಸುತ್ತಿರುವುದು ; ಮತ್ತೊಂದು ಏನನ್ನೂ ತಿನ್ನದೆ ಪ್ರಕಾಶಿಸುತ್ತಿರುವುದು.'[2]

ದ್ವೈ.—'ಭಿನ್ನಾಂಶರಹಿತನಾದರೂ ವಿಶ್ವಾದಿ ಅನಂತ ಅಂಶಗಳುಳ್ಳವನೂ ಅನಿಷ್ಟ ವನ್ನು ನಾಶಮಾಡುವವನೂ ಸುಖರೂಪನೂ ಆದ ಪರಮಾತ್ಮನನ್ನು ಯಾವನು ಅರಿಯು ತ್ತಾನೆಯೊ ಅವನೇ ಮುನಿಯು ಇತರರಲ್ಲ'[3] (ಮಾಂ ಕಾ. ೧. ೨೯) ಎಂಬ ಶ್ರುತಿಯಲ್ಲಿ ಕೆಲವು ಶಾಖೆಯವರು ಪರಮಾತ್ಮನಿಗೆ ಅನಂತರೂಪವನ್ನು ಪಠಿಸುತ್ತಾರೆ. 'ಪರಮೇಶ್ವರನು ನಿರ್ದೋಷನೂ ಅದ್ವಯರೂಪನೂ ಆಗಿದ್ದರೂ ಭಿನ್ನವಸ್ತುಗಳಲ್ಲಿರುವುದರಿಂದ ಭಿನ್ನನೆಂದೂ ಬಂಧಾದಿಗಳಿಗೆ ಸಾಕ್ಷಿಯಾಗಿರುವುದರಿಂದ ಬದ್ಧನೆಂದೂ ಹೇಳಲ್ಪಡುತ್ತಾನೆ'[4] ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಅರೂಪವದೇವ ಹಿ ತತ್ಪ್ರಧಾನತ್ವಾತ್*　|| ೧೪ ||**

೧೪. (ಬ್ರಹ್ಮವು) ರೂಪವಿಲ್ಲದ್ದೇ ; ಏಕೆಂದರೆ (ಶಾಸ್ತ್ರವು) ಅದನ್ನೇ ಪ್ರಧಾನ ವಾಗಿ (ತಿಳಿಸುತ್ತದೆ).

**ಆಕ್ಷೇಪ**—ಬ್ರಹ್ಮಕ್ಕೆ ಆಕಾರವಿದೆಯೆಂದು ಕೆಲವು ಶ್ರುತಿಗಳು ಹೇಳಿದರೆ, ಆಕಾರ

---

1 ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮ ಮೇತತ್ ।

2 ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥

3 ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।
ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥

4 ಬದ್ಧೋ ಬಂಧಾದಿಸಾಕ್ಷಿತ್ವಾದ್ಭಿನ್ನೋ ಭಿನ್ನೇಷು ಸಂಸ್ಥಿತೇಃ ।
ನಿರ್ದೋಷಾದ್ವಯರೂಪೋಽಪಿ ಕಥ್ಯತೇ ಪರಮೇಶ್ವರ ಇತಿ ॥

* ಇಲ್ಲಿಂದ ಪ್ರಾರಂಭಿಸಿ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಎಂಬ ಸೂತ್ರದವರೆಗೆ ಮಧ್ವಭಾಷ್ಯದಲ್ಲಿ ಅರೂಪಾಧಿಕರಣ ಎನಿಸಿದೆ.

ವಿಲ್ಲವೆಂದು ಇನ್ನು ಕೆಲವು ಶ್ರುತಿಗಳು ಹೇಳುತ್ತವೆ; ಹೀಗಿರುವಾಗ ಬ್ರಹ್ಮವು ಆಕಾರ ರಹಿತವೆಂದು ಹೇಗೆ? ಇದಕ್ಕೆ ವಿರುದ್ಧವಾದುದನ್ನು ನಿರ್ಧರಿಸಬಹುದಲ್ಲ?

**ಪರಿಹಾರ**—ಬ್ರಹ್ಮಕ್ಕೆ ರೂಪಾದಿ ಆಕಾರಗಳಿಲ್ಲವೆಂದು ನಿರ್ಧರಿಸಬೇಕೇ ಹೊರತು ರೂಪಾದಿಗಳಿವೆಯೆಂದು ನಿರ್ಧರಿಸಕೂಡದು; ಏಕೆಂದರೆ ಶ್ರುತಿಗಳು ನಿಷ್ಪ್ರಪಂಚವಾದ ಬ್ರಹ್ಮಾತ್ಮತತ್ತ್ವವನ್ನೇ ಪ್ರಧಾನವಾಗಿ ತಿಳಿಸುತ್ತವೆ; 'ಅದು ಅಸ್ಥೂಲವು ಅನಣು ಅಹ್ರಸ್ವವು ಅದೀರ್ಘವು'[1] (ಬೃ. ಉ. ೩. ೮. ೮); 'ದಿವ್ಯನೂ ಅಮೂರ್ತನೂ ಆದ ಪುರುಷನು ಒಳಗೂ ಹೊರಗೂ ಇರುವವನು, ಅಜನು'[2] ಇತ್ಯಾದಿ.[3] ಬ್ರಹ್ಮಕ್ಕೆ ಆಕಾರಾದಿ ಗಳನ್ನು ಹೇಳುವ ಇತರ ವಾಕ್ಯಗಳು ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವುದರಲ್ಲಿ ಪ್ರಧಾನ ವಾಗಿರುವುದಿಲ್ಲ; ಏಕೆಂದರೆ ಅವು ಉಪಾಸನಾವಿಧಿಯನ್ನು ತಿಳಿಸುವುದರಲ್ಲಿ ಪ್ರಧಾನವಾಗಿರು ತ್ತವೆ. ತತ್ಪ್ರಧಾನವಾಕ್ಯಕ್ಕೂ ಅತತ್ಪ್ರಧಾನವಾಕ್ಯಕ್ಕೂ ವಿರೋಧವುಂಟಾದಾಗ ತತ್ಪ್ರಧಾನ ವಾಕ್ಯವೇ ಪ್ರಬಲವಾಗಿರುತ್ತದೆ

**ವಿ.**—'ಜೀವಾತ್ಮನ ನಿಯಂತೃವಾಗಿರುವುದರಿಂದ ಪರಬ್ರಹ್ಮನು ಅರೂಪನೇ' ಎಂಬುದು ಸೂತ್ರಾರ್ಥ.

ಪರಬ್ರಹ್ಮನು ದೇವಾದಿಶರೀರಗಳನ್ನು ಪ್ರವೇಶಿಸಿ ಆಯಾ ರೂಪಗಳೊಂದಿಗೆ ಯುಕ್ತ ನಾಗಿದ್ದರೂ ರೂಪಾದಿರಹಿತನೇ; ಮತ್ತೆ ಜೀವನ ಹಾಗೆ ಶರೀರತ್ವದಿಂದ ಆಗುವ ಕರ್ಮಕ್ಕೆ ವಶನಾಗಿಲ್ಲ; ಏಕೆಂದರೆ ನಾಮರೂಪಗಳನ್ನುಂಟುಮಾಡುವುದರಿಂದ ಪ್ರಧಾನನಾಗಿರುತ್ತಾನೆ; 'ಆಕಾಶ-ಶಬ್ದವಾಚ್ಯನಾದ ಪರಬ್ರಹ್ಮನು ನಾಮರೂಪಗಳನ್ನುಂಟುಮಾಡುವನು; ಇವೆರ ಡರ ಮಧ್ಯದಲ್ಲಿರುವವನು ಬ್ರಹ್ಮನು'[4] (ಛಾಂ. ಉ. ೮. ೧೪ ೧) ಎಂಬ ಶ್ರುತಿಯ ಪ್ರಕಾರ ಪರಬ್ರಹ್ಮನು ಎಲ್ಲವನ್ನೂ ಪ್ರವೇಶಿಸಿದ್ದರೂ ನಾಮರೂಪಗಳಿಂದ ಸ್ಪರ್ಶಿತನಾಗದೆ ನಾಮರೂಪಗಳನ್ನುಂಟುಮಾಡುತ್ತಾನೆ.

**ದ್ವೈ.**—'ಪರಬ್ರಹ್ಮನಿಗೆ ಪ್ರಾಕೃತರೂಪಾದಿಗಳಿಲ್ಲ; ಏಕೆಂದರೆ ಪ್ರಕೃತಿ ಮೊದ ಲಾದುವುಗಳಿಗೆ ಪ್ರವರ್ತಕನಾಗಿ ಅವುಗಳಿಗಿಂತ ಉತ್ತಮನಾಗಿರುತ್ತಾನೆ'[5] ಎಂಬುದು ಸೂತ್ರಾರ್ಥ

**ಅಸ್ಥೂಲಮನಣು** (ಬೃ. ಉ ೩. ೮. ೮) ಎಂಬ ಶ್ರುತಿಯನ್ನು ಸೂತ್ರದಲ್ಲಿ ರುವ ಹಿ-ಶಬ್ದವು ಸೂಚಿಸುತ್ತದೆ.

---

1 ಅಸ್ಥೂಲಮನಣ್ವಹ್ರಸ್ವಮದೀರ್ಘಮ್ ।

2 ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।

3 ಬೃ. ಉ. ೨. ೫. ೧೯, ಕ. ಉ. ೧. ೩. ೧೫ ಮತ್ತು ಛಾಂ. ಉ. ೮. ೧೪. ೧ ನೋಡಿ.

4 ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ।

5 ಪ್ರಕೃತ್ಯಾದಿಪ್ರವರ್ತಕತ್ವೇನ ತದುತ್ತಮತ್ವಾನ್ನೈವ ರೂಪವದ್ಬ್ರಹ್ಮ (ಮ. ಭಾ.).

## ಪ್ರಕಾಶವಚ್ಚಾವೈಯರ್ಥ್ಯಾತ್* ॥ ೧೫ ॥

೧೫. ಪ್ರಕಾಶದಂತೆ (ಬ್ರಹ್ಮವೂ ಆಕಾರವನ್ನು ಹೊಂದುತ್ತದೆ); ಏಕೆಂದರೆ (ಶ್ರುತಿಗಳು) ಅರ್ಥರಹಿತವಾಗಿಲ್ಲ.

ಹಾಗಾದರೆ ಬ್ರಹ್ಮಕ್ಕೆ ಆಕಾರವನ್ನು ಹೇಳುವ ಶ್ರುತಿಗಳ ಗತಿಯೇನು ? ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ; ಬೆಳಕು ಉಪಾಧಿಯ ಸಂಬಂಧದಿಂದ ಋಜುವಕ್ರಾದಿ ಭಾವವನ್ನು ಹೊಂದುವಂತೆ ಬ್ರಹ್ಮವೂ ಪೃಥಿವಿಯೇ ಮೊದಲಾದ ಉಪಾಧಿಗಳ ಸಂಬಂಧ ದಿಂದ ಅವುಗಳ ಆಕಾರವನ್ನು ಹೊಂದುವಂತೆ ತೋರುತ್ತದೆ ; ಅದನ್ನು ಆಶ್ರಯಿಸಿ ಬ್ರಹ್ಮಕ್ಕೆ ವಿಶೇಷಾಕಾರಗಳನ್ನು ಉಪಾಸನೆಗೋಸ್ಕರ ಉಪದೇಶಿಸಿರುವುದು ವಿರುದ್ಧವಾಗುವುದಿಲ್ಲ ಹೀಗಿರುವುದರಿಂದ ಬ್ರಹ್ಮಕ್ಕೆ ಆಕಾರವನ್ನು ಹೇಳುವ ಶ್ರುತಿಗಳು ಅರ್ಥರಹಿತವಾಗಿಲ್ಲ. ವೇದವಾಕ್ಯಗಳಲ್ಲಿ ಕೆಲವಕ್ಕೆ ಅರ್ಥವಿದೆ, ಕೆಲವಕ್ಕೆ ಅರ್ಥವಿಲ್ಲ ಎಂದು ತಿಳಿಯುವುದು ಸರಿಯಲ್ಲ , ಏಕೆಂದರೆ ಎಲ್ಲವೂ ಸಮಾನವಾಗಿಯೇ ಪ್ರಮಾಣವಾಗಿರುತ್ತವೆ.[1]

ವಿ.—'ಪರಬ್ರಹ್ಮನು ಪ್ರಕಾಶದಂತೆ; ಏಕೆಂದರೆ ಶ್ರುತಿಗೆ ವೈಯರ್ಥ್ಯವಿಲ್ಲ' ಎಂಬುದು ಸೂತ್ರಾರ್ಥ.

'ಬ್ರಹ್ಮನು ಸತ್ಯ, ಜ್ಞಾನ ಮತ್ತು ಅನಂತ' (ತೈ. ಉ. ೨. ೧) ಇವೇ ಮೊದ ಲಾದ ವಾಕ್ಯಗಳಿಗೆ ವೈಯರ್ಥ್ಯವುಂಟಾಗದಿರಲೆಂದು ಪರಬ್ರಹ್ಮನಿಗೆ ಪ್ರಕಾಶಸ್ವರೂಪವನ್ನು ಒಪ್ಪಿಕೊಳ್ಳಬೇಕು. ಹೀಗೆಯೇ ಉಭಯಲಕ್ಷಣವನ್ನು ಪರಬ್ರಹ್ಮನಿಗೆ ಒಪ್ಪಿಕೊಳ್ಳಬೇಕು ; ಹಾಗೆ ಒಪ್ಪಿಕೊಳ್ಳದಿದ್ದರೆ, ಪರಬ್ರಹ್ಮನು ಸತ್ಯಸಂಕಲ್ಪನು, ಸರ್ವಜ್ಞನು, ಜಗತ್ಕಾರಣನು ಇವೇ ಮೊದಲಾದ ಗುಣಗಳನ್ನು ಹೇಳುವ ಶ್ರುತಿಗಳು ನಿರರ್ಥಕವಾಗುತ್ತವೆ.

ದ್ವೈ.—'ಪ್ರಕಾಶದಂತೆ ಪರಬ್ರಹ್ಮನಿಗೆ ರೂಪಾದಿಗಳನ್ನು ತಿಳಿಸುವ ಶ್ರುತಿಗಳಿಗೆ ವೈಯರ್ಥ್ಯವಿಲ್ಲ' ಎಂಬುದು ಸೂತ್ರಾರ್ಥ

ಪರಬ್ರಹ್ಮನಿಗೆ ವಿಲಕ್ಷಣವಾದ ರೂಪವಿದ್ದೆ ಪ್ರಯುಕ್ತ 'ಯಾವಾಗ ಜ್ಞಾನಿಯು ರುಕ್ಮವರ್ಣವುಳ್ಳ ಪರಮಾತ್ಮನನ್ನು ನೋಡುತ್ತಾನೆಯೋ'[2] (ಮುಂ. ಉ. ೩. ೧ ೩), 'ಶ್ಯಾಮವರ್ಣವುಳ್ಳ ಪರಮಾತ್ಮನಿಂದ ಅನೇಕ ವರ್ಣವುಳ್ಳ ಪರಮಾತ್ಮನನ್ನು ಹೊಂದು ತ್ತೇನೆ'[3] (ಛಾಂ. ಉ. ೮. ೧೩. ೧), 'ಬ್ರಹ್ಮನು ಸುವರ್ಣಜ್ಯೋತಿಯು'[4] ಇವೇ ಮೊದ

---

* ಮಧ್ವಭಾಷ್ಯದಲ್ಲಿ ಅವೈಯರ್ಥ್ಯಾವ್ ಎಂಬ ಪಾಠಭೇದವಿದೆ.

1 ನ ಹಿ ವೇದವಾಕ್ಯಾನಾಂ ಕಸ್ಯಚಿದರ್ಥವತ್ತ್ವಂ ಕಸ್ಯಚಿದನರ್ಥವತ್ತ್ವಮಿತಿ ಯುಕ್ತಂ ಪ್ರತಿಪತ್ತುಂ ಪ್ರಮಾಣತ್ವಾವಿಶೇಷಾತ್ (ಸೂ. ಭಾ.).

2 ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮ್ ।

3 ಶ್ಯಾಮಾಚ್ಛಬಲಂ ಪ್ರಪದ್ಯೇ ।

4 ಸುವರ್ಣಜ್ಯೋತಿಃ ।

ಲಾದ ಶ್ರುತಿಗಳಿಗೆ ವೈಯರ್ಥ್ಯವುಂಟಾಗುವುದಿಲ್ಲ ಮನೆಯಲ್ಲಿ ಚಾಕ್ಷುಷಾದಿ-ಪ್ರಕಾಶ ವಿದ್ದರೂ ಅದು ಸೂರ್ಯಪ್ರಕಾಶಕ್ಕೆ ಭಿನ್ನವಾದುದರಿಂದ 'ಪ್ರಕಾಶವಿಲ್ಲ' ಎಂದು ಹೇಳು ವಂತೆ ಪರಬ್ರಹ್ಮನಿಗೆ ವಿಲಕ್ಷಣವಾದ ರೂಪವಿದ್ದ ಪ್ರಯುಕ್ತ ಅರೂಪಶ್ರುತಿಗೆ ಅಪ್ರಮಾಣ್ಯ ವಿಲ್ಲ.

**ಆಹ ಚ ತನ್ಮಾತ್ರಮ್ ॥ ೧೬ ॥**

೧೬. ಮತ್ತು (ಬ್ರಹ್ಮವು) ತನ್ಮಾತ್ರವೆಂದು (ಶ್ರುತಿಯು) ಹೇಳುತ್ತದೆ.

ಬ್ರಹ್ಮವು ತನ್ಮಾತ್ರವು ಎಂದರೆ ಚೈತನ್ಯಮಾತ್ರವು, ಬೇರೆ ಲಕ್ಷಣಗಳಿಲ್ಲದ್ದು, ನಿರ್ವಿ ಶೇಷವು ಎಂದು ಶ್ರುತಿಯು ಹೇಳುತ್ತದೆ; 'ಹೇಗೆ ಉಪ್ಪಿನಗಟ್ಟಿಯು ಒಳಗಿಲ್ಲದೆ ಹೊರ ಗಿಲ್ಲದೆ ಪೂರ್ಣವಾಗಿ ರಸಘನವಾಗಿರುವುದೊ ಹಾಗೆಯೇ ಈ ಆತ್ಮನು ಒಳಗಿಲ್ಲದೆ ಹೊರ ಗಿಲ್ಲದೆ ಪೂರ್ಣವಾದ ಪ್ರಜ್ಞಾನಘನನಾಗಿರುವನು'[1] (ಬೃ ಉ. ೪. ೫ ೧೩).

ವಿ.—'(ಶ್ರುತಿಯು) ಅಷ್ಟು ಮಾತ್ರ ಹೇಳುತ್ತದೆ' ಎಂಬುದು ಸೂತ್ರಾರ್ಥ.

'ಬ್ರಹ್ಮನು ಸತ್ಯ ಜ್ಞಾನ ಮತ್ತು ಅನಂತ' (ತೈ. ಉ. ೨. ೧) ಎಂಬ ಶ್ರುತಿಯು ಪರಬ್ರಹ್ಮನ ಪ್ರಕಾಶಸ್ವರೂಪವನ್ನು ಮಾತ್ರ ಪ್ರತಿಪಾದಿಸುತ್ತದೆ; ಇತರ ಶ್ರುತಿಗಳು ಹೇಳುವ ಸತ್ಯಸಂಕಲ್ಪತ್ವ-ಸರ್ವಜ್ಞತ್ವಾದಿಗುಣಗಳನ್ನು ನಿರಾಕರಿಸುವುದಿಲ್ಲ.

ದ್ವೈ.—'ಭಗವಂತನ ರೂಪವು ಜ್ಞಾನಾನಂದಾತ್ಮಕವೆಂದೇ ಶ್ರುತಿಯು ಹೇಳು ತ್ತದೆ' ಎಂಬುದು ಸೂತ್ರಾರ್ಥ.

**ಐಕಾತ್ಮ್ಯಪ್ರತ್ಯಯಸಾರಮ್** (ಮಾಂ. ಉ. ೭) ಎಂಬ ಶ್ರುತಿಯು ಭಗ ವಂತನ ವಿಲಕ್ಷಣವಾದ ರೂಪವು ಜ್ಞಾನಾನಂದಾದ್ಯಾತ್ಮಕವನ್ನಾಗಿಯೇ ಹೇಳುತ್ತದೆ.

**ದರ್ಶಯತಿ ಚಾಥೋ ಅಪಿ ಸ್ಮರ್ಯತೇ ॥ ೧೭ ॥**

೧೭. (ಶ್ರುತಿಯೂ) ತೋರಿಸುತ್ತದೆ ಮತ್ತು ಸ್ಮೃತಿಯಲ್ಲಿಯೂ ಹಾಗೆಯೇ ಹೇಳಿದೆ.

ಬ್ರಹ್ಮಕ್ಕೆ ರೂಪಾಂತರವನ್ನು ಪ್ರತಿಷೇಧಿಸಿಯೇ ಅದು ನಿರ್ವಿಶೇಷವೆಂದು ಶ್ರುತಿಗಳು ತೋರಿಸುತ್ತವೆ: 'ಈಗ ಆದುದರಿಂದ (ಬ್ರಹ್ಮದ) ನಿರ್ದೇಶವು—ಹೀಗಲ್ಲ, ಹೀಗಲ್ಲ'[2] (ಬೃ. ಉ. ೨. ೩. ೬); 'ಅದು ತಿಳಿದಿರುವುದಕ್ಕಿಂತ ಬೇರೆ ಮತ್ತು ತಿಳಿಯ

---

[1] ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವ, ಏವಂ ವಾ ಅರೇಽಯಮಾತ್ಮಾನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ ।

[2] ಅಥಾತ ಆದೇಶಃ— ನೇತಿ ನೇತಿ ।

ದಿರುವುದಕ್ಕಿಂತ ಬೇರೆ'[1] (ಕೇ ಉ ೧ ೪), 'ಯಾವುದರಿಂದ ವಾಕ್ಕುಗಳು ಮನಸ್ಸಿನೊಂದಿಗೆ ಅದನ್ನು ಪಡೆಯದೆ ಹಿಂತಿರುಗುವುವೋ'[2] (ತೈ ಉ ೨ ೪) ಬಾಧ್ವನು ಬಾಷ್ಕಲಿಯಿಂದ ಬ್ರಹ್ಮವಿಷಯವಾಗಿ ಪ್ರಶ್ನಿಸಲ್ಪಟ್ಟಾಗ ಮೌನದಿಂದಲೇ ಉಪದೇಶಿಸಿದನೆಂದು ಮತ್ತೊಂದು ಶ್ರುತಿಯು ಹೇಳುತ್ತದೆ 'ಯಾವುದು ಜ್ಞೇಯವೋ, ಯಾವುದನ್ನು ಅರಿತುಕೊಂಡು ಮನುಷ್ಯನು ಅಮೃತತ್ವವನ್ನು ಹೊಂದುತ್ತಾನೆಯೊ ಅದನ್ನು ಹೇಳುತ್ತೇನೆ ಅದು ಅನಾದಿ, ಪರಬ್ರಹ್ಮ ಅದು ಸತ್ ಅಲ್ಲ, ಅಸತ್ ಅಲ್ಲ—ಎಂದು ಹೇಳಲ್ಪಟ್ಟಿದೆ'[3] (ಗೀತಾ ೧೩ ೧೨) ಎಂದು ಸ್ಮೃತಿಯು ಹೇಳುತ್ತದೆ ವಿಶ್ವರೂಪಧಾರಿಯಾದ ನಾರಾಯಣನು ನಾರದನನ್ನು ಕುರಿತು 'ಎಲೈ ನಾರದ, ನೀನು ನನ್ನನ್ನು ನೋಡುತ್ತಿರುವುದು ನಾನು ಸೃಷ್ಟಿಸಿರುವ ಮಾಯೆ, ನಾನು ಹೀಗೆ ಸರ್ವಭೂತಗಳ ಗುಣಗಳಿಂದ ಕೂಡಿರುವೆನೆಂದು ತಿಳಿದುಕೊಳ್ಳಬೇಡ'[4] ಎಂದು ಹೇಳಿದನೆಂದು ಇನ್ನೊಂದು ಸ್ಮೃತಿಯು (ಮೋ ಧ ೩೩೯ ೪೫) ಹೇಳುತ್ತದೆ

**ವಿ.**—ಪರಮಾತ್ಮನ ಕಲ್ಯಾಣಗುಣಾಕರತ್ವವನ್ನೂ ನಿರಸ್ತನಿಖಿಲದೋಷತ್ವವನ್ನೂ ಶ್ರುತಿಗಳೂ ಸ್ಮೃತಿಗಳೂ ಸಾರುತ್ತವೆ[5]

**ದ್ವೈ.**—**ಆನಂದರೂಪಮಮೃತಂ ಯದ್ವಿಭಾತಿ** ಎಂಬ ಶ್ರುತಿಯು (ಮುಂ ಉ ೨ ೨ ೮) ಭಗವಂತನ ಆನಂದಾತ್ಮಕರೂಪವನ್ನು ತೋರಿಸುತ್ತದೆ **ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್। ಚಿಂತಯಿಾತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ** ಎಂಬ ಸ್ಮೃತಿಯು ಅವನ ಜ್ಞಾನಾತ್ಮಕರೂಪವನ್ನು ತಿಳಿಸುತ್ತದೆ

**ಅತ ಏವ ಚೋಪಮಾ ಸೂರ್ಯಕಾದಿವತ್*** ॥ ೧೮ ॥

೧೮ ಆದುದರಿಂದಲೇ ಸೂರ್ಯಕಾದಿಗಳಂತೆ ಎಂಬ ಉಪಮಾನವನ್ನು (ಮೋಕ್ಷಶಾಸ್ತ್ರಗಳಲ್ಲಿ ಹೇಳಿರುತ್ತದೆ).

ಈ ಆತ್ಮನು ಚೈತನ್ಯರೂಪನೂ ನಿರ್ವಿಶೇಷನೂ ವಾಙ್ಮನಸ್ಸುಗಳಿಗೆ ಅತೀತನೂ ಆಗಿದ್ದು, ಇತರ ಲಕ್ಷಣಗಳನ್ನು ನಿಷೇಧಿಸಿಯೇ ಉಪದೇಶ್ಯನಾದುದರಿಂದ—ಉಪಾಧಿ

---

1 ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ।

2 ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।

3 ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥

4 ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ ।
ಸರ್ವಭೂತಗುಣೈರ್ಯುಕ್ತಂ ನೈವಂ ಮಾಂ ಜ್ಞಾತುಮರ್ಹಸಿ ॥

5 ಶ್ವೇ ಉ. ೬ ೭—೯, ೧೯, ಮುಂ ಉ ೧ ೧ ೯, ತೈ ಉ ೨ ೯, ಗೀತಾ ೧೦ ೩, ೪೨, ೯ ೧೦, ೧೫ ೧೭ ಮತ್ತು ವಿ ಪು. ೫ ೧ ೪೬—೪೮ ನೋಡಿ

* ಇದು ಮಧ್ವಭಾಷ್ಯದಲ್ಲಿ ಉಪಮಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

ನಿಮಿತ್ತವಾದ ಭೇದಗಳೆಲ್ಲ ಮಿಥ್ಯೆ ಎಂಬ ಅಭಿಪ್ರಾಯದಿಂದ—ಮೋಕ್ಷಶಾಸ್ತ್ರಗಳು ಆತ್ಮನನ್ನು ನೀರಿನಲ್ಲಿ ಪ್ರತಿಬಿಂಬಿತವಾದ ಸೂರ್ಯಕಾದಿಗಳಿಗೆ ಹೋಲಿಸಿದೆ 'ಏಕನೂ ಜ್ಯೋತಿರ್ಮಯನೂ ಆದ ಸೂರ್ಯನು ಬೇರೆ ಬೇರೆ ಜಲಾಶಯಗಳನ್ನು ಅನುಸರಿಸಿ ಉಪಾಧಿಯಿಂದ ಹೇಗೆ ಬಹುವಾಗುವನೊ ಹಾಗೆಯೇ ದೇವನೂ ಅಜನೂ ಆದ ಈ ಆತ್ಮನು (ಬೇರೆ ಬೇರೆ) ಕ್ಷೇತ್ರಗಳಲ್ಲಿ ಬಹುವಾಗುತ್ತಾನೆ,'[1] ಮತ್ತು ಒಬ್ಬನೇ ಆದ ಭೂತಾತ್ಮನು ಪ್ರತಿಯೊಂದು ಭೂತದಲ್ಲಿಯೂ ಇರುತ್ತಾನೆ, ಜಲದಲ್ಲಿ ಪ್ರತಿಬಿಂಬಿಸಿರುವ ಚಂದ್ರನಂತೆ ಅವನು ಏಕರೂಪದಿಂದಲೂ ಬಹುರೂಪದಿಂದಲೂ ಕಾಣುತ್ತಿರುತ್ತಾನೆ'[2] (ಬ್ರಹ್ಮಬಿಂದು ಉ ೧೨)

**ವಿ.**—ಪರಬ್ರಹ್ಮನು ನಾನಾ ಸ್ಥಾನಗಳಲ್ಲಿದ್ದರೂ ಆ ಸ್ಥಾನದ ದೋಷಗಳಿಂದ ಲಿಪ್ತನಾಗುವುದಿಲ್ಲವೆಂದು ಶಾಸ್ತ್ರವು ಜಲ, ಕನ್ನಡಿ ಮೊದಲಾದುವುಗಳಲ್ಲಿ ಪ್ರತಿಬಿಂಬಿತವಾದ ಸೂರ್ಯಕಾದಿ-ದೃಷ್ಟಾಂತಗಳಿಂದ ಹೇಳುತ್ತದೆ

**ದ್ವೈ.**—'ಈಶ್ವರನಿಗೂ ಅವನ ರೂಪಗಳಿಗೂ ಅಭೇದವನ್ನು ಹೇಳಿರುವುದರಿಂದ ಜೀವನಿಗೂ ಈಶ್ವರನಿಗೂ ಅಭೇದವಿದೆಯೆಂದು ಭಾವಿಸಬಹುದು, ಇದನ್ನು ನಿರಾಕರಿಸಲು ಸೂತ್ರಕಾರರು ಜೀವನು ಈಶ್ವರನ ಪ್ರತಿಬಿಂಬವೆಂದು ಹೇಳಿ, ಚ-ಶಬ್ದದಿಂದ ಅವರಿಬ್ಬರಿಗಿರುವ ಭೇದವನ್ನು ತೋರಿಸುತ್ತಾರೆ'[3] ಎಂಬುದು ಸೂತ್ರಾರ್ಥ

'ಪರಮಾತ್ಮನ ರೂಪಗಳಿಗೆ ಜೀವರು ಪ್ರತಿಬಿಂಬರಾಗಿರುತ್ತಾರೆ'[4] (ಬೃ ಉ ೨ ೫ ೧೯) ಎಂದು ಶ್ರುತಿಯು ಹೇಳುತ್ತದೆ

**ಅಂಬುವದಗ್ರಹಣಾತ್ತು ನ ತಥಾತ್ವಮ್ * ॥ ೧೯ ॥**

೧೯ ಆದರೆ ನೀರಿನಂತೆ (ಬೇರೆಯಾಗಿ) ಕಾಣದಿರುವುದರಿಂದ ಹೋಲಿಕೆಯು ಹೊಂದುವುದಿಲ್ಲ

**ಆಕ್ಷೇಪಣೆ**—ಜಲಸೂರ್ಯಕವೇ ಮೊದಲಾದ ಹೋಲಿಕೆಯು ಹೊಂದುವುದಿಲ್ಲ, ಏಕೆಂದರೆ ಮೂರ್ತವಸ್ತುವಾದ ಜಲವೆಂಬುದು ಸೂರ್ಯನಿಂದ ಬೇರೆಯಾಗಿ ದೂರ

---

[1] ಯಥಾ ಹ್ಯಯಂ ಜ್ಯೋತಿರಾತ್ಮಾ ವಿವಸ್ವಾನಪೋ ಭಿನ್ನಾ ಬಹುಧೈಕೋಽನುಗಚ್ಛನ್ ।
ಉಪಾಧಿನಾ ಕ್ರಿಯತೇ ಭೇದರೂಪೋ ದೇವಃ ಕ್ಷೇತ್ರೇಷ್ವೇವಮಜೋಽಯಮಾತ್ಮಾ ।

[2] ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥

[3] ಯಸ್ಮಾದೇವಂ ಪರಮೇಶ್ವರಸ್ವರೂಪಾಣಾಂ ವಿಭೋಃ ನ ಕಶ್ಚಿದ್ಭೇದೋಽತ ಏವ ಸಾದೃಶ್ಯಾಜ್ಜೀವಸ್ಯಾಪಿ ತಥಾ ಸ್ಯಾದಿತಿ ತಸ್ಯ ಪ್ರತಿಬಿಂಬತ್ವಮುಕ್ತ್ವಾ ಚಶಬ್ದೇನ ಭೇದಂ ದರ್ಶಯತಿ (ಮ ಭಾ)

[4] ರೂಪಂ ರೂಪಂ ಪ್ರತಿರೂಪೋ ಬಭೂವ ।

* ಶಂಕರಭಾಷ್ಯ-ಶ್ರೀಭಾಷ್ಯಗಳಲ್ಲಿ ಇದು ಪೂರ್ವಪಕ್ಷದ ಸೂತ್ರವಾಗಿದೆ ಮಧ್ವಭಾಷ್ಯದಲ್ಲಿ ಈ ಸೂತ್ರವು ಅಂಬುವದಧಿಕರಣ ಎಂಬ ಬೇರೆಯ ಅಧಿಕರಣವಾಗಿದೆ

ಪ್ರದೇಶದಲ್ಲಿರುತ್ತದೆ, ಆದುದರಿಂದ ಸೂರ್ಯನು ಅದರಲ್ಲಿ ಪ್ರತಿಬಿಂಬಿಸಬಹುದು ಆದರೆ ಆತ್ಮನು ಮೂರ್ತನಲ್ಲ, ಉಪಾಧಿಗಳು ಅವನಿಗಿಂತ ಬೇರೆಯಾಗಿ ದೂರಪ್ರದೇಶದಲ್ಲಿರುವುದಿಲ್ಲ, ಏಕಂದರೆ ಅವನು ಸರ್ವಗತನೂ ಅನನ್ಯನೂ ಆಗಿರುತ್ತಾನೆ ಆದುದರಿಂದ ಈ ದೃಷ್ಟಾಂತವು ಸರಿಯಲ್ಲ

ವಿ.—ಸೂರ್ಯನು ನೀರಿನಲ್ಲಿ ಪ್ರತಿಬಿಂಬಿಸುವಂತೆ ಪರಮಾತ್ಮನು ಪೃಥಿವ್ಯಾದಿಗಳಲ್ಲಿ ಪ್ರತಿಬಿಂಬಿಸಿರುವುದು ತೋರುವುದಿಲ್ಲ ಸೂರ್ಯನು ನೀರಿನಲ್ಲಿರುವಂತೆ ತೋರುವುದು ಭ್ರಾಂತಿಯೇ ಹೊರತು ಪರಮಾರ್ಥವಲ್ಲ ಆದರೆ ಪರಮಾತ್ಮನು ಪೃಥಿವ್ಯಾದಿಗಳಲ್ಲಿ ಇರುವನೆಂದು ಶ್ರುತಿಯು (ಬೃ ಉ ೩ ೭ ೩—೨೧) ಹೇಳುತ್ತದೆ ಆದುದರಿಂದ ದೃಷ್ಟಾಂತವು ಸರಿಯಲ್ಲ ಎಂಬುದು ಆಕ್ಷೇಪಣೆ

ದ್ವೈ.—'ನೀರು (ಎಂದರೆ ಸ್ನೇಹಯುಕ್ತವಾದ ಜ್ಞಾನವು) ಇಲ್ಲದಿರುವುದರಿಂದ ಆ ಅವಸ್ಥೆಯು ವ್ಯಕ್ತವಾಗುವುದಿಲ್ಲ' ಎಂಬುದು ಸೂತ್ರಾರ್ಥ

ಭಕ್ತಿಯಿಲ್ಲದಿದ್ದರೆ ಜೀವನಿಗೆ ಪರಮಾತ್ಮನೊಂದಿಗಿರುವ ಸಾದೃಶ್ಯವು ಅಭಿವ್ಯಕ್ತವಾಗುವುದಿಲ್ಲ[1] 'ಯಾವನನ್ನು ಪರಮಾತ್ಮನು ಸ್ವೀಕರಿಸುತ್ತಾನೆಯೊ, ಅವನಿಂದ ಹೊಂದಲು ಶಕ್ಯನು, ಅವನಿಗೇ ಪರಮಾತ್ಮನು ತನ್ನ ವಿಗ್ರಹವನ್ನು ತೋರಿಸುತ್ತಾನೆ'[2] (ಕ ಉ ೧ ೨ ೨೩) ಎಂದು ಶ್ರುತಿಯು ಹೇಳುತ್ತದೆ

## ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್* ॥ ೨೦ ॥

೨೦. (ಬ್ರಹ್ಮವು ಉಪಾಧಿಯಲ್ಲಿ) ಇರುವುದರಿಂದ (ಆ ಉಪಾಧಿಯ) ವೃದ್ಧಿ ಕ್ಷಯಗಳನ್ನು ಪಡೆಯುವಂತೆ ಇರುತ್ತದೆ, (ದೃಷ್ಟಾಂತ-ದಾರ್ಷ್ಟಾಂತಿಕಗಳು) ಎರಡೂ ಸಮಂಜಸವಾಗಿರುವುದರಿಂದ ಹೀಗೆ

ಈಗ ಮೇಲಿನ ಆಕ್ಷೇಪಣೆಗೆ ಪರಿಹಾರವನ್ನು ಹೇಳಲಾಗುವುದು ವಿವಕ್ಷಿತವಾದ ಅಂಶವು ಇಲ್ಲಿ ಇರುವುದರಿಂದ ದೃಷ್ಟಾಂತವು ಯುಕ್ತವಾಗಿದೆ ದೃಷ್ಟಾಂತ-ದಾರ್ಷ್ಟಾಂತಿಕಗಳಿಗೆ ವಿವಕ್ಷಿತವಾದ ಅಂಶವನ್ನು ಬಿಟ್ಟರೆ ಸರ್ವಸಮಾನತೆಯನ್ನು ತೋರಿಸಿಕೊಡಲು ಯಾರಿಗೂ ಸಾಧ್ಯವಿಲ್ಲ, ಏಕೆಂದರೆ ಸರ್ವಸಮಾನತೆಯಿದ್ದರೆ ದೃಷ್ಟಾಂತ-ದಾರ್ಷ್ಟಾಂತಿಕಭಾವದ ನಾಶವೇ ಆದೀತು ಇಲ್ಲಿ ವಿವಕ್ಷಿತವಾದ ಸಮಾನತೆಯು ಯಾವುದೆಂದರೆ ವೃದ್ಧಿ

---

1 ಭಕ್ತಿಂ ವಿನಾ ನ ತತ್ಸಾದೃಶ್ಯಂ ಸಮ್ಯಗಭಿವ್ಯಜ್ಯತೇ (ಮ ಭಾ ).
2 ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್।
* ಇದು ಶ್ರೀಭಾಷ್ಯದಲ್ಲಿ ದರ್ಶನಾಚ್ಚ ಎಂಬ ಮುಂದಿನ ಸೂತ್ರದ ಸಹಿತ ಒಂದೇ ಸೂತ್ರವಾಗಿದೆ ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ವೃದ್ಧಿಹ್ರಾಸಾಧಿಕರಣ ಎಂಬ ಬೇರೆಯ ಅಧಿಕರಣವಾಗಿದೆ

ಕ್ಷಯಗಳನ್ನು ಪಡೆಯುವುದು. ಜಲದಲ್ಲಿರುವ ಸೂರ್ಯಪ್ರತಿಬಿಂಬವು ಜಲವು ದೊಡ್ಡದಾದರೆ ತಾನೂ ದೊಡ್ಡದಾಗುವುದು, ಜಲವು ಸಂಕುಚಿತವಾದರೆ ತಾನೂ ಸಂಕುಚಿತವಾಗುತ್ತದೆ, ಜಲವು ಚಲಿಸಿದರೆ ಅಥವಾ ಬೇರೆಯಾದರೆ ತಾನೂ ಚಲಿಸುತ್ತದೆ ಮತ್ತು ಬೇರೆಯಾಗುತ್ತದೆ. ಹೀಗೆ ಸೂರ್ಯನ ಪ್ರತಿಬಿಂಬವು ನೀರಿನ ಚಲನಾದಿಧರ್ಮಗಳನ್ನು ಅನುಸರಿಸುತ್ತಿದ್ದರೂ ನಿಜವಾದ ಸೂರ್ಯನು ತನ್ನ ರೂಪದಲ್ಲಿಯೇ ಇರುತ್ತಾನೆ. ಹೀಗೆಯೇ ಬ್ರಹ್ಮವು ನಿಜವಾಗಿ ಅವಿಕಾರಿಯಾದ ಒಂದೇ ರೂಪದಲ್ಲಿದ್ದರೂ ದೇಹವೇ ಮೊದಲಾದ ಉಪಾಧಿಗಳೊಳಗೆ ಇರುವುದರಿಂದ ಆ ಉಪಾಧಿಯ ಧರ್ಮಗಳಾದ ವೃದ್ಧಿ-ಕ್ಷಯಾದಿಗಳನ್ನು ಪಡೆಯುವಂತೆ ಇರುತ್ತದೆ[1] ಹೀಗೆ ದೃಷ್ಟಾಂತ-ದಾರ್ಷ್ಟಾಂತಿಕಗಳಿಗೆ ಸಾಮಂಜಸ್ಯವಿರುವುದರಿಂದ ಯಾವ ವಿರೋಧವೂ ಇಲ್ಲ.

ವಿ.—ವೃದ್ಧಿಹ್ರಾಸಭಾಕ್ತ್ವ... .ಏವಂ ದರ್ಶನಾಚ್ಚ ॥ ೩. ೨. ೨೦ ॥

**೨೦. ಪರಬ್ರಹ್ಮನು ವಸ್ತುಗಳಲ್ಲಿ ಅಂತರ್ಯಾಮಿಯಾಗಿ ಸೇರಿದ್ದರೂ ಅವುಗಳ ವೃದ್ಧಿಕ್ಷಯಗಳು ಪರಬ್ರಹ್ಮನಿಗೆ ಸಂಬಂಧಿಸಿಲ್ಲ ; ಎರಡು ದೃಷ್ಟಾಂತಗಳಲ್ಲಿಯೂ ಸಾಮಂಜಸ್ಯವಿರುವುದರಿಂದಲೂ ಹೀಗೆ ಕಂಡುಬರುವುದರಿಂದಲೂ ಅವನಿಗೆ ದೋಷಸಂಬಂಧವಿಲ್ಲ.**

ಪೃಥಿವ್ಯಾದಿ-ವಸ್ತುಗಳಲ್ಲಿ ಪರಬ್ರಹ್ಮನು ಅಂತರ್ಯಾಮಿಯಾಗಿದ್ದರೂ ತದ್ಗತ ದೋಷಗಳು ಇವನಿಗೆ ಸಂಬಂಧಿಸುವುದಿಲ್ಲವೆಂದು ತೋರಿಸಲು ಸೂರ್ಯಾದಿ-ದೃಷ್ಟಾಂತವನ್ನು ಹೇಳಿದೆ. ವೃದ್ಧಿ-ಹ್ರಾಸಗಳನ್ನು ಹೊಂದುವ ಗಡಿಗೆ ಮೊದಲಾದ ವಸ್ತುಗಳೊಂದಿಗೆ ಬೇರೆಬೇರೆಯಾಗಿ ಸಂಬಂಧಿಸಿರುವ ಆಕಾಶವು ವೃದ್ಧಿ-ಹ್ರಾಸಾದಿ-ದೋಷಗಳನ್ನು ಹೊಂದುವುದಿಲ್ಲ ; ಇದೇ ರೀತಿ ವಿವಿಧಪರಿಮಾಣವುಳ್ಳ ಜಲಾಶಯಗಳಲ್ಲಿ ಪ್ರತಿಬಿಂಬಿಸುವ ಸೂರ್ಯನಿಗೆ ಅವುಗಳ ದೋಷಗಳು ಬರುವುದಿಲ್ಲ ; ಹೀಗೆಯೇ ಪರಮಾತ್ಮನು ನಾನಾಕಾರಗಳುಳ್ಳ ಪೃಥಿವ್ಯಾದಿ-ಚೇತನಾಚೇತನಗಳಲ್ಲಿ ಸ್ಥಿತನಾಗಿದ್ದರೂ ಅವುಗಳ ವೃದ್ಧಿಹ್ರಾಸಾದಿದೋಷಗಳಿಂದ ಸಂಸ್ಪೃಷ್ಟನಾಗುವುದಿಲ್ಲ ; ಪರಮಾತ್ಮನು ಸರ್ವತ್ರ ಏಕನಾಗಿದ್ದರೂ ದೋಷಗಂಧದಿಂದಲೂ ಸೋಂಕಲ್ಪಡದೆ ಕಲ್ಯಾಣಗುಣಾಕರನಾಗಿರುತ್ತಾನೆ. ಲೋಕದಲ್ಲಿ ಒಂದು ವಸ್ತುವನ್ನು ಇನ್ನೊಂದು ವಸ್ತುವಿಗೆ ಹೋಲಿಸುವಾಗ ವಿವಕ್ಷಿತವಾದ ಅಂಶದಲ್ಲಿ ಸಾಧರ್ಮ್ಯವಿರುತ್ತದೆಯೇ ಹೊರತು ಎಲ್ಲ ಅಂಶಗಳಲ್ಲಿಯೂ ಇರುವುದಿಲ್ಲ.

**ದ್ವೈತ.**—'ಭಕ್ತಿಜ್ಞಾನಾದಿಗಳಿಗೆ ಆಧಿಕ್ಯ-ನ್ಯೂನತಾರೂಪವಾದ ತಾರತಮ್ಯವನ್ನು ಒಪ್ಪಿಕೊಳ್ಳಬೇಕಾಗುತ್ತದೆ ; ಏಕೆಂದರೆ ಅದರಲ್ಲಿ ಬ್ರಹ್ಮಾದಿಗಳಿಗೂ ನಮ್ಮಂತಹವರಿಗೂ ಅಂತರ್ಭಾವವಿದೆ ; ಹೀಗೆ ಭಕ್ತಿ ಮೊದಲಾದುವುಗಳಿಗೆ ತಾರತಮ್ಯವನ್ನು ಅಂಗೀಕರಿಸಿದ

---

[1] ಏವಂ ಪರಮಾರ್ಥತೋಽವಿಕೃತಮೇಕರೂಪಮಪಿ ಸದ್ಬ್ರಹ್ಮ ದೇಹಾದ್ಯುಪಾಧ್ಯಂತರ್ಭಾವಾದಜ್ಞತ ಇವೋಪಾಧಿಧರ್ಮಾನ್ ವೃದ್ಧಿಹ್ರಾಸಾದೀನ್ (ಸೂ. ಭಾ).

ರೇನೇ ಪರಮಾತ್ಮನಿಗೆ ಇವರನ್ನು ಕುರಿತು ಸಾಮಂಜಸ್ಯವು ಹೊಂದುತ್ತದೆ'[1] ಎಂಬುದು ಸೂತ್ರಾರ್ಥ

### ದರ್ಶನಾಚ್ಚ ॥ ೨೧ ॥

೨೧. ಮತ್ತು (ಶ್ರುತಿಯು) ಹೇಳುವುದರಿಂದಲೂ (ಸೂತ್ರದಲ್ಲಿ ಹೇಳಿರುವ ಉಪಮೆಯು ಯುಕ್ತವೇ).

ಪರಬ್ರಹ್ಮವೇ ದೇಹವೇ ಮೊದಲಾದ ಉಪಾಧಿಗಳಲ್ಲಿ ಪ್ರವೇಶಿಸಿದೆಯೆಂದು ಶ್ರುತಿಯು ತಿಳಿಸುತ್ತದೆ: 'ಪರಮೇಶ್ವರನು ಎರಡು ಕಾಲಿನ ಶರೀರಗಳನ್ನೂ ನಾಲ್ಕು ಕಾಲಿನ ಶರೀರ ಗಳನ್ನೂ ಮಾಡಿದನು. ಆ ಪುರುಷನು ಮೊದಲು ಪಕ್ಷಿಯಾಗಿ ಶರೀರಗಳನ್ನು ಪ್ರವೇಶಿಸಿ ದನು'[2] (ಬೃ. ಉ. ೨. ೫ ೧೮), ಮತ್ತು 'ಈ ಜೀವಾತ್ಮರೂಪದಿಂದ ಅವರನ್ನು ಪ್ರವೇ ಶಿಸಿ'[3] (ಛಾಂ. ಉ. ೬. ೩ ೨). ಆದುದರಿಂದ ಸೂತ್ರದಲ್ಲಿ (೩. ೨. ೧೮) ಹೇಳಿರುವ ಉಪಮಾನವು ಯುಕ್ತವೇ. ಬ್ರಹ್ಮವು ನಿರ್ವಿಕಲ್ಪಕವಾದ ಒಂದೇ ಲಿಂಗವುಳ್ಳದ್ದು, ಉಭಯಲಿಂಗವುಳ್ಳದ್ದೂ ಅಲ್ಲ, ವಿಪರೀತಲಿಂಗವುಳ್ಳದ್ದೂ ಅಲ್ಲ—ಎಂಬುದು ಸಿದ್ಧ ವಾಯಿತು.

**ದ್ವೈ.**—ಭಕ್ತಿಯ ತಾರತಮ್ಯವು ಶ್ರುತಿ-ಸ್ಮೃತಿಗಳಲ್ಲಿ ದೃಷ್ಟವಾಗಿದೆ: 'ಇನ್ನು ಆದುದರಿಂದ ಆನಂದದ ತಾರತಮ್ಯ-ವಿಚಾರವು ಪ್ರಾರಂಭವಾಗುತ್ತದೆ' (ತೈ. ಉ. ೨. ೮) ಎಂಬಲ್ಲಿ ಮನುಷ್ಯನಿಂದ ಪ್ರಾರಂಭಿಸಿ ಚತುರ್ಮುಖಬ್ರಹ್ಮನ ವರೆಗೆ ಆನಂದದ ತಾರತಮ್ಯ ವನ್ನು ಹೇಳಿದೆ.[4] 'ಇಲ್ಲಿ ಪುರುಷೋತ್ತಮನಲ್ಲಿ ಭಕ್ತಿಯ ತಾರತಮ್ಯವಿದ್ದಂತೆ ಜ್ಞಾನಿಯ ಲಿಂಗಶರೀರವು ನಾಶವಾದ ಮೇಲೆ ಅಲ್ಲಿಯೂ ಆನಂದಾನುಭವದ ತಾರತಮ್ಯವಿರುತ್ತದೆ'[5] ಎಂದು ಸ್ಮೃತಿಯು ಹೇಳುತ್ತದೆ.

---

[1] ಏವಂ ಭಕ್ತ್ಯಾದಿವಿಶೇಷಾಂಗೀಕಾರಾದೇವೇಶ್ವರಸ್ಯ ಬ್ರಹ್ಮಾದೀನಸ್ಮಾನ್ ಪ್ರತಿ ಚ ಸಾಮಂಜಸ್ಯಂ ಭವತಿ (ಮ. ಭಾ.).

[2] ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।
ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್ ॥

[3] ಅನೇನ ಜೀವೇನಾತ್ಮನಾನುಪ್ರವಿಶ್ಯ. . . ।

[4] ಅಥಾತ ಆನಂದಸ್ಯ ಮೀಮಾಂಸಾ ಭವತೀತ್ಯಾರಭ್ಯ ಬ್ರಹ್ಮಪರ್ಯಂತೇಷು ಸುಖೇ ವಿಶೇಷದರ್ಶನಾತ್ (ಮ. ಭಾ).

[5] ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ । ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನ ಇತಿ (ಮ. ಭಾ).

## ೬. ಪ್ರಕೃತೈತಾವತ್ತ್ವಾಧಿಕರಣ*

(ಸೂ. ೨೨–೩೦)

**ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ॥ ೨೨ ॥**

೨೨. (ಶ್ರುತಿಯಲ್ಲಿರುವ ನೇತಿ ನೇತಿ ಎಂಬ ವಾಕ್ಯವು ಬ್ರಹ್ಮಕ್ಕೆ) ಪ್ರಕೃತವಾದ 'ಇಷ್ಟು' ಎಂಬುದನ್ನೇ ನಿಷೇಧಿಸುತ್ತದೆ; ಮತ್ತೆ (ಶ್ರುತಿಯು) ಅದಕ್ಕಿಂತಲೂ ಹೆಚ್ಚಾಗಿ ಹೇಳುತ್ತದೆ.

'ಬ್ರಹ್ಮಕ್ಕೆ ಎರಡೇ ರೂಪಗಳಿವೆ: ಮೂರ್ತ ಮತ್ತು ಅಮೂರ್ತ'[1] (ಬೃ. ಉ. ೨. ೩. ೧) ಎಂದು ಶ್ರುತಿಯು ಉಪಕ್ರಮಿಸಿ, 'ಈಗ ಆದುದರಿಂದ ಬ್ರಹ್ಮದ ನಿರ್ದೇಶವು: "ಹೀಗಲ್ಲ, ಹೀಗಲ್ಲ;" ಏಕೆಂದರೆ "ಹೀಗಲ್ಲ" ಎಂಬುದಕ್ಕಿಂತ ಬೇರೆ ಶ್ರೇಷ್ಠವಾದ ನಿರ್ದೇಶವಿಲ್ಲ'[2] (ಬೃ. ಉ. ೨. ೩. ೬); ಈ ಪ್ರತಿಷೇಧವು ಬ್ರಹ್ಮವನ್ನೂ ಅದರ ಎರಡು ರೂಪಗಳನ್ನೂ ಪ್ರತಿಷೇಧಿಸುತ್ತದೆಯೊ ಅಥವಾ ಇವೆರಡರಲ್ಲಿ ಒಂದನ್ನು ಪ್ರತಿಷೇಧಿಸುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ—ನೇತಿ ನೇತಿ** ಎಂದು ಎರಡು ಸಲ ಹೇಳಿರುವುದರಿಂದ ಇಲ್ಲಿ ಬ್ರಹ್ಮವನ್ನೂ ಅದರ ಎರಡು ರೂಪಗಳನ್ನೂ ನಿಷೇಧಿಸಿದೆ ಎಂದು ಹೇಳಬಹುದು; ಎರಡಲ್ಲಿ ಒಂದನ್ನು ನಿರಾಕರಿಸಿದ್ದಾದರೆ ಬ್ರಹ್ಮವನ್ನೇ ನಿರಾಕರಿಸಿದೆಯೆಂದು ಹೇಳಬಹುದು; ಏಕೆಂದರೆ ಅದು ವಾಙ್ಮನಸ್ಸುಗಳಿಗೆ ಅತೀತವಾದುದರಿಂದ ಅದರ ಅಸ್ತಿತ್ವವು ಅಸಂಭಾವಿತವಾಗಿ ಪ್ರತಿಷೇಧಕ್ಕೆ ಅರ್ಹವಾಗಿರುತ್ತದೆ

**ಸಿದ್ಧಾಂತಿ**—ಉಭಯ-ಪ್ರತಿಷೇಧವು ಹೊಂದುವುದಿಲ್ಲ; ಏಕೆಂದರೆ ಆಗ ಶೂನ್ಯವಾದವು ಪ್ರಸಕ್ತವಾಗುವುದು ಬ್ರಹ್ಮವು ಮಾತ್ರ ಪ್ರತಿಷೇಧಿಸಲ್ಪಟ್ಟಿದೆ ಎಂಬುದೂ ಸರಿಯಲ್ಲ; ಏಕೆಂದರೆ 'ನಿನಗೆ ಬ್ರಹ್ಮವನ್ನು ಉಪದೇಶಿಸುತ್ತೇನೆ'[3] (ಬೃ. ಉ. ೨ ೧. ೧) ಎಂಬುದಕ್ಕೆ ವಿರುದ್ಧವಾಗುವುದು; ಮತ್ತೆ 'ಇದ್ದಾನೆ—ಎಂದೇ ತಿಳಿಯತಕ್ಕದ್ದು'[4] (ಕ. ಉ. ೨. ೬. ೧೩) ಎಂದು ಶ್ರುತಿಯು ಹೇಳುತ್ತದೆ ಬ್ರಹ್ಮವು ವಾಙ್ಮನಸ್ಸುಗಳಿಗೆ ಅತೀತವೆಂದು ಹೇಳಿರುವುದು ಅದನ್ನು ಪ್ರತಿಷೇಧಿಸುವುದಕ್ಕಲ್ಲ; ಏಕೆಂದರೆ 'ಬ್ರಹ್ಮವನ್ನು

---

* ಇದು ಮಧ್ವಭಾಷ್ಯದಲ್ಲಿ ಪಾಲಕತ್ವಾದಿಕರಣ ಎನಿಸಿದೆ; ಈ ಅಧಿಕರಣವು ಒಂದೇ ಸೂತ್ರವನ್ನು ಒಳಕೊಂಡಿದೆ.

1 ದ್ವೇ ವಾವ ಬ್ರಹ್ಮಣೋ ರೂಪೇ—ಮೂರ್ತಂ ಚೈವಾಮೂರ್ತಂ ಚ ।

2 ಅಥಾತ ಆದೇಶಃ—ನೇತಿ ನೇತಿ, ನ ಹ್ಯೇತಸ್ಮಾದಿತಿ, ನೇತ್ಯನ್ಯತ್ ಪರಮಸ್ತಿ (ಸೂ. ಭಾ).

3 ಬ್ರಹ್ಮ ತೇ ಬ್ರವಾಣಿ ।

4 ಅಸ್ತೀತ್ಯೇವೋಪಲಬ್ಧವ್ಯಃ ।

ತಿಳಿದವನು ಬ್ರಹ್ಮವನ್ನು ಹೊಂದುತ್ತಾನೆ'[1] (ತೈ ಉ ೨ ೧) ಎಂದು ಶ್ರುತಿಯು ಬ್ರಹ್ಮವನ್ನು ಪ್ರತಿಪಾದಿಸಿದೆ ಪ್ರಕೃತವಾದ ಬೃಹದಾರಣ್ಯಕ-ಶ್ರುತಿಯ ಅಭಿಪ್ರಾಯವು ಹೀಗಿದೆ ವಾಙ್ಮನಸ್ಸುಗಳನ್ನು ಮೀರಿ, 'ವಿಷಯಕ್ಕೆ' ಬೀಳದೆ, ಪ್ರತ್ಯಗಾತ್ಮಭೂತವಾಗಿ ನಿತ್ಯ-ಶುದ್ಧ-ಬುದ್ಧ-ಮುಕ್ತ-ಸ್ವರೂಪವಾಗಿರುವುದೇ ಬ್ರಹ್ಮವು ಆದುದರಿಂದ ಶ್ರುತಿಯು ಬ್ರಹ್ಮದ ರೂಪಗಳನ್ನು ನಿರಾಕರಿಸಿ, ಬ್ರಹ್ಮನನ್ನು ಮಾತ್ರ ಉಳಿಸಿಕೊಂಡಿದೆ—ಎಂದು ಅರಿಯಬೇಕು [2]

ಇನ್ನು 'ಪ್ರಕೃತವಾದ "ಇಷ್ಟು" ಎಂಬುದನ್ನೇ ನಿಷೇಧಿಸುತ್ತದೆ' ಎಂಬ ಸೂತ್ರಭಾಗದ ಅರ್ಥ ಹೀಗಿದೆ **ನೇತಿ ನೇತಿ** ಎಂಬ ಪ್ರತಿಷೇಧ-ದ್ವಯವು ಬ್ರಹ್ಮದ ಮೂರ್ತಾ-ಮೂರ್ತರೂಪಗಳನ್ನು ನಿರಾಕರಿಸುತ್ತದೆ, ಅಥವಾ ಮೊದಲನೆಯ ಪ್ರತಿಷೇಧವು ಭೂತ-ರಾಶಿಯನ್ನು ನಿರಾಕರಿಸಿದರೆ, ಎರಡನೆಯದು ವಾಸನಾರಾಶಿಯನ್ನು ನಿರಾಕರಿಸುತ್ತದೆ, ಅಥವಾ **ನೇತಿ ನೇತಿ** ಎಂಬುದು ನಾವು ಯಾವುದನ್ನು ಊಹಿಸಿದರೂ ಅದಿಲ್ಲವೆಂಬುದನ್ನೂ ತಿಳಿಸುತ್ತದೆ ಹೀಗೆ ವಿಷಯಸಮೂಹವನ್ನೆಲ್ಲ ನಿರಾಕರಿಸಿದುದರಿಂದ ಅವಿಷಯನಾದ ಪ್ರತ್ಯಗಾತ್ಮನು ಬ್ರಹ್ಮವೆಂದಾಗಿ ಜಿಜ್ಞಾಸೆಯು ನಿಲ್ಲುತ್ತದೆ

ಈಗ 'ಮತ್ತೆ (ಶ್ರುತಿಯು) ಅದಕ್ಕಿಂತಲೂ ಹೆಚ್ಚಾಗಿ ಹೇಳುತ್ತದೆ' ಎಂಬ ಸೂತ್ರದ ಉತ್ತರಭಾಗದ ಅರ್ಥವು ಹೀಗಿದೆ ಬ್ರಹ್ಮಕ್ಕಿಂತ ವ್ಯತಿರಿಕ್ತವಾದುದು ಇಲ್ಲದುದರಿಂದ **ನೇತಿ ನೇತಿ** ಎಂದು ಹೇಳಿದೆಯೇ ಹೊರತು ಬ್ರಹ್ಮವೇ ಇಲ್ಲವೆಂದಲ್ಲ ಅಥವಾ **ನೇತಿ ನೇತಿ** ಎಂದು ಪ್ರಪಂಚ-ಪ್ರತಿಷೇಧ-ರೂಪದ ಉಪದೇಶಕ್ಕಿಂತ ಬ್ರಹ್ಮಕ್ಕೆ ಮತ್ತೊಂದು ಹೆಚ್ಚಿನ ಉಪದೇಶದ ಪ್ರಕಾರವಿಲ್ಲ—ಎಂದೂ ಆಗಬಹುದು, ಹೀಗೆ ಯೋಜನೆ ಮಾಡಿದರೆ ಸೂತ್ರವು ನಾಮಧೇಯವನ್ನು ಸೂಚಿಸುತ್ತದೆ. 'ಸತ್ಯದ ಸತ್ಯವು—ಎಂಬುದು ನಾಮಧೇಯವು ಪ್ರಾಣಗಳೇ ಸತ್ಯವು, ಇವನು ಅವುಗಳ ಸತ್ಯವು'[3] (ಬೃ ಉ ೨ ೧. ೨೦), ಇದೂ ಕೂಡ ಬ್ರಹ್ಮದಲ್ಲಿ ಕೊನೆಗಾಣುವ ಪ್ರತಿಷೇಧವೇ ಆಗಿರುತ್ತದೆ

**ವಿ.**—ಬೃಹದಾರಣ್ಯಕ-ಶ್ರುತಿಯು ಪರಬ್ರಹ್ಮನ ಮೂರ್ತಾಮೂರ್ತರೂಪಗಳನ್ನು ಮೊದಲು ಪರಾಮರ್ಶಿಸಿ ಅನಂತರ ಆವನ ರೂಪವಿಶೇಷವು 'ಕೇಸರೀ ಬಣ್ಣದ ಬಟ್ಟೆಯ ಹಾಗೆ' (ಬೃ ಉ ೨ ೩ ೬) ಎಂದು ಹೇಳುತ್ತದೆ ಅನಂತರ **ನೇತಿ ನೇತಿ** ಎಂದು ಆದೇಶಿಸಿ, ಇದಕ್ಕಿಂತ ಶ್ರೇಷ್ಠವಾದ ನಿರ್ದೇಶವಿಲ್ಲವೆಂದು ಹೇಳುತ್ತದೆ ಈ ವಾಕ್ಯವು ಹಿಂದೆ

---

1 ಬ್ರಹ್ಮವಿದಾಪ್ನೋತಿ ಪರಮ್ ।

2 ಏತದುಕ್ತಂ ಭವತಿ—ವಾಙ್ಮನಸಾತೀತವಿಷಯಾಂತಃಪಾತಿ ಪ್ರತ್ಯಗಾತ್ಮಭೂತಂ ನಿತ್ಯ-ಶುದ್ಧಮುಕ್ತಸ್ವಭಾವಂ ಬ್ರಹ್ಮೇತಿ । ತಸ್ಮಾದ್ಬ್ರಹ್ಮಣೋ ರೂಪಂ ಪ್ರಪಂಚಂ ಪ್ರತಿಷೇಧತಿ, ಪರಿಶಿನಷ್ಟಿ ಬ್ರಹ್ಮೇತ್ಯಭ್ಯುಪಗಂತವ್ಯಮ್ (ಸೂ ಭಾ)

3 ಅಥ ನಾಮಧೇಯಮ್—ಸತ್ಯಸ್ಯ ಸತ್ಯಮಿತಿ ; ಪ್ರಾಣಾ ವೈ ಸತ್ಯಂ, ತೇಷಾಮೇಷ ಸತ್ಯಮ್ ।

ಹೇಳಿದ ವಿಶೇಷಗಳೆಲ್ಲ ಬ್ರಹ್ಮದಲ್ಲಿ ಕಲ್ಪಿತವಾದುವೆಂದೂ ಅದು ಸನ್ಮಾತ್ರವೆಂದೂ ತಿಳಿಸುತ್ತದೆ. ಹೀಗಿರುವಾಗ ಬ್ರಹ್ಮಕ್ಕೆ ಉಭಯಲಿಂಗವೆಲ್ಲಿಂದ ಬರುವುದು ?—ಎಂಬುದು ಆಕ್ಷೇಪಣೆ. ಇದಕ್ಕೆ ಪರಿಹಾರ ಹೀಗಿದೆ : **ನೇತಿ ನೇತಿ** ಎಂಬುದು ಪರಬ್ರಹ್ಮನ ವಿಶೇಷಗಳೆಲ್ಲವನ್ನೂ ನಿಷೇಧಿಸುತ್ತದೆ—ಎಂಬುದು ಸರಿಯಲ್ಲ. ಅದು ಶ್ರುತಿಯ ಅಭಿಪ್ರಾಯವಾಗಿದ್ದರೆ ವ್ಯರ್ಥವಾದ ಮಾತಾಗುತ್ತದೆ. ಪರಬ್ರಹ್ಮನಿಗೆ ಮೊದಲು ವಿಶೇಷಣಗಳನ್ನು ಹೇಳಿ ಅನಂತರ ಅವುಗಳನ್ನು ನಿರಾಕರಿಸುವುದು ಉನ್ಮತ್ತನಾಗದವನಿಗೆ ಸಾಧ್ಯವಿಲ್ಲ. ಪರಬ್ರಹ್ಮನು ಕೇವಲ ಚೇತನಾಚೇತನರೂಪವಾದ ಜಗಚ್ಛರೀರಕನು ಎಂಬುದನ್ನು ಮಾತ್ರ ಶ್ರುತಿಯು ನಿಷೇಧಿಸುತ್ತದೆ. ಅನಂತರ ಶ್ರುತಿಯೇ ಪರಬ್ರಹ್ಮನಿಗಿಂತ ಗುಣದಲ್ಲಾಗಲಿ ಸ್ವರೂಪದಲ್ಲಾಗಲಿ ಶ್ರೇಷ್ಠವಾದುದು ಯಾವುದೂ ಇಲ್ಲವೆಂದೂ, ಅವನು ಸತ್ಯದ ಸತ್ಯನೆಂದೂ ಹೇಳುತ್ತದೆ. ವಾಕ್ಯಶೇಷವು ಪರಬ್ರಹ್ಮನಿಗೆ ಗುಣಯೋಗವನ್ನು ಹೇಳುವುದರಿಂದ **ನೇತಿ ನೇತಿ** ಎಂಬುದು ಅವನ ಸವಿಶೇಷತ್ವವನ್ನು ನಿಷೇಧಿಸದೆ ಹಿಂದೆ ಹೇಳಿದ ಇಯತ್ತೆಯನ್ನು ಮಾತ್ರ ನಿಷೇಧಿಸುತ್ತದೆ. ಆದುದರಿಂದ ಪರಬ್ರಹ್ಮನು ಉಭಯಲಿಂಗವುಳ್ಳವನು.

**ದ್ವೈ.**—ಪರಮೇಶ್ವರನಿಗೆ ಸೃಷ್ಟಿ-ಸಂಹಾರಗಳ ಕರ್ತೃತ್ವವಿದೆಯೇ ಹೊರತು ಪಾಲಕತ್ವವಿಲ್ಲ—ಎಂಬ ಆಕ್ಷೇಪಕ್ಕೆ ಸೂತ್ರಕಾರರು ಹೀಗೆ ಹೇಳುತ್ತಾರೆ: ಶ್ರುತಿಯು ಮೊದಲು ಹೇಳಿದ ಸೃಷ್ಟಿಸಂಹಾರಕರ್ತೃತ್ವಮಾತ್ರವನ್ನು ನಿಷೇಧಿಸಿ ಅದಕ್ಕಿಂದ ಅಧಿಕವಾದ ಪಾಲಕತ್ವವನ್ನು ಹೇಳುತ್ತದೆ:[1] 'ಇಷ್ಟು ಮಾತ್ರವಲ್ಲ, ಇನ್ನೂ ಅಧಿಕವಾಗಿರುವುದು ಇದೆ; ಭಕ್ತರ ಇಚ್ಛೆಗಳನ್ನೆಲ್ಲ ನೆರವೇರಿಸುವವನು ದ್ಯಾವಾಪೃಥ್ವಿಗಳನ್ನು ಎತ್ತಿ ಹಿಡಿದಿರುತ್ತಾನೆ'[2] (ಋ. ವೇ. ೧೦. ೩೧. ೮).

## ತದವ್ಯಕ್ತಮಾಹ ಹಿ* ॥ ೨೩ ॥

೨೩. ಅದು ಅವ್ಯಕ್ತವು ; ಏಕೆಂದರೆ (ಶ್ರುತಿಯು) ಹೇಳುತ್ತದೆ.

ಶ್ರುತಿಯಲ್ಲಿ ನಿಷೇಧಿಸಿರುವ ಪ್ರಪಂಚಕ್ಕಿಂತ ಬೇರೆಯಾಗಿರುವ ಪರಬ್ರಹ್ಮವಿದ್ದರೆ ಏತಕ್ಕೆ ಅದನ್ನು ಗ್ರಹಿಸಲಾಗುವುದಿಲ್ಲ ?—ಎಂಬ ಪ್ರಶ್ನೆಗೆ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ: ಅದು ಸರ್ವದೃಶ್ಯಗಳಿಗೂ ಸಾಕ್ಷಿಯಾಗಿರುವುದರಿಂದ ಅವ್ಯಕ್ತವು ಎಂದರೆ

---

[1] ಉಕ್ತಂ ಸೃಷ್ಟಿಸಂಹಾರಕರ್ತೃತ್ವಮಾತ್ರಂ ಪ್ರತಿಷಿಧ್ಯ ತತೋಽಧಿಕಂ ಬ್ರವೀತಿ (ಮ. ಭಾ.).

[2] ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತೀತಿ (ಮ. ಭಾ).

* ಈ ಸೂತ್ರದಿಂದ ಪ್ರಾರಂಭಿಸಿ ಅತೋಽನಂತೇನ ತಥಾಹಿ ಲಿಂಗಮ್ ಎಂಬ ಸೂತ್ರದ ವರೆಗೆ ಮಧ್ವಭಾಷ್ಯದಲ್ಲಿ ಅವ್ಯಕ್ತಾಧಿಕರಣ ಎನಿಸಿದೆ.

ಇಂದ್ರಿಯಗ್ರಾಹ್ಯವಲ್ಲ ಶ್ರುತಿಸ್ಮೃತಿಗಳು ಹೀಗೆಯೇ ಹೇಳುತ್ತವೆ 'ನೇತಿ ನೇತಿ ಎಂದು ಹೇಳಲ್ಪಟ್ಟಿರುವ ಅವನೇ ಈ ಆತ್ಮನು ಅವನು ಅಗ್ರಹ್ಯನು, ಏಕೆಂದರೆ ಅವನನ್ನು ಹಿಡಿಯಲಾಗುವುದಿಲ್ಲ'[1] (ಬೃ ಉ ೩ ೯ ೨೬), 'ಈ ಆತ್ಮನು ಅವ್ಯಕ್ತನು, ಅಚಿಂತ್ಯನು, ವಿಕಾರರಹಿತನು ಎಂದು ಹೇಳಲ್ಪಟ್ಟಿರುತ್ತಾನೆ'[2] (ಗೀತಾ ೨ ೨೫)

ಪಿ —ಪರಬ್ರಹ್ಮನು ಬೇರೆ ಪ್ರಮಾಣಗಳಿಂದ ವ್ಯಕ್ತನಾಗುವುದಿಲ್ಲ, ಏಕಂದರೆ ಶ್ರುತಿಯು ಹೀಗೆ ಹೇಳುತ್ತದೆ 'ಇವನ ರೂಪವು ದೃಗ್ಗೋಚರವಾಗುವುದಿಲ್ಲ ಇವನನ್ನು ಯಾವನೂ ಕಣ್ಣಿನಿಂದ ನೋಡಲಾರನು'[3] (ಕ ಉ ೨ ೬ ೯) ಇತ್ಯಾದಿ

**ದ್ವೈ.**—ಆ ಬ್ರಹ್ಮನು ಸ್ವತಃ ಅವ್ಯಕ್ತನು, ಏಕಂದರೆ 'ಬ್ರಹ್ಮನು ಅರೂಪನು, ಅಕ್ಷರನು, ಸದಾ ಅವ್ಯಕ್ತನು ಮತ್ತು ನಿಷ್ಕಲನು'[4] ಎಂಬ ಕೌಂಠರವ್ಯ-ಶ್ರುತಿಯು ಅವ್ಯಕ್ತತ್ವವನ್ನು ಹೇಳುತ್ತದೆ

**ಅಪಿ ಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ॥ ೨೪ ॥**

೨೪ ಇದಲ್ಲದೆ (ಯೋಗಿಗಳು) ಸಂರಾಧನಕಾಲದಲ್ಲಿ (ಆತ್ಮನನ್ನು ನೋಡುತ್ತಾರೆ), (ಹಾಗೆಂದು) ಪ್ರತ್ಯಕ್ಷಾನುಮಾನಗಳಿಂದ (ತಿಳಿದುಬರುತ್ತದೆ)

ಇದಲ್ಲದೆ ಯೋಗಿಗಳು ಸರ್ವಪ್ರಪಂಚರಹಿತನೂ ಅವ್ಯಕ್ತನೂ ಆದ ಆತ್ಮನನ್ನು ಸಂರಾಧನಕಾಲದಲ್ಲಿ ನೋಡುತ್ತಾರೆ ಭಕ್ತಿ-ಧ್ಯಾನ-ಪ್ರಣಿಧಾನಾದಿಗಳನ್ನು ಅನುಷ್ಠಾನ ಮಾಡುವುದಕ್ಕೆ ಸಂರಾಧನವೆಂದು ಹೆಸರು[5] 'ಪ್ರತ್ಯಕ್ಷಾನುಮಾನಗಳಿಂದ' ಎಂದರೆ ಶ್ರುತಿಸ್ಮೃತಿಗಳಿಂದ, 'ಪರಮೇಶ್ವರನು ಇಂದ್ರಿಯಗಳು ಹೊರಗೇ ಹೋಗುವಂತೆ ಮಾಡಿರುತ್ತಾನೆ; ಆದುದರಿಂದ ಮನುಷ್ಯನು ಹೊರಗಡೆ ನೋಡುತ್ತಾನೆ, ಅಂತರಾತ್ಮನನ್ನು ನೋಡುವುದಿಲ್ಲ ಯಾವನೋ ಒಬ್ಬ ವಿವೇಕಿಯು ಅಮೃತತ್ವವನ್ನು ಬಯಸುತ್ತ, ಚಕ್ಷುಸ್ಸನ್ನು ಹಿಂತಿರುಗಿಸಿ, ಪ್ರತ್ಯಗಾತ್ಮನನ್ನು ನೋಡುತ್ತಾನೆ'[6] (ಕ ಉ ೨ ೪ ೧),

---

[1] ಸ ಏಷ ನೇತಿ ನೇತ್ಯಾತ್ಮಾ। ಅಗೃಹ್ಯೋ ನ ಹಿ ಗೃಹ್ಯತೇ। ಮುಂ ಉ ೩ ೧ ೮ ಮತ್ತು ತೈ ಉ ೨ ೬ ನೋಡಿ

[2] ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।

[3] ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।

[4] ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಮ್ (ಮ ಭಾ)

[5] ಸಂರಾಧನಂ ಚ ಭಕ್ತಿಧ್ಯಾನಪ್ರಣಿಧಾನಾದ್ಯನುಷ್ಠಾನಮ್ (ಸೂ ಭಾ).

[6] ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ ॥

ಇವೇ ಮೊದಲಾದ ಶ್ರುತಿಗಳಿವೆ[1] 'ಆ ಸನಾತನನಾದ ಭಗವಂತನನ್ನು ಯೋಗಿಗಳು ನೋಡುತ್ತಾರೆ'[2] ಎಂದು ಸ್ಮೃತಿಯೂ ಹೇಳುತ್ತದೆ

ವಿ.—ಸಮ್ಯಕ್‌ಪ್ರೀತಿಯಲ್ಲಿ ಎಂದರೆ ಭಕ್ತಿರೂಪಾಪನ್ನವಾದ ಧ್ಯಾನದಲ್ಲಿ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆಯೇ ಹೊರತು ಬೇರೆ ಯಾವ ಅವಸ್ಥೆಯಲ್ಲಿಯೂ ಇಲ್ಲ[3] ಎಂದು ಶ್ರುತಿಸ್ಮೃತಿಗಳು ಹೇಳುತ್ತವೆ 'ಈ ಆತ್ಮನು ಪ್ರವಚನದಿಂದಾಗಲಿ, ನಿದಿಧ್ಯಾಸನದಿಂದಾಗಲಿ, ಬಹಳ ಶ್ರವಣದಿಂದಾಗಲಿ ಲಭ್ಯನಲ್ಲ, ಪರಮಾತ್ಮನು ಯಾವನನ್ನು ಆರಿಸುತ್ತಾನೆಯೊ ಅವನಿಂದಲೇ (ಪರಮಾತ್ಮನು) ಲಭ್ಯನು ಈ ಉಪಾಸಕನಿಗೆ ಪರಮಾತ್ಮನು ತನ್ನ ಸ್ವರೂಪವನ್ನು ಪ್ರಕಾಶಿಸುತ್ತಾನೆ'[4] (ಕ ಉ ೧ ೨ ೨೩), ಮತ್ತು 'ಅರ್ಜುನ, ಆದರೆ ಅನನ್ಯವಾದ ಭಕ್ತಿಯಿಂದ ಈ ವಿಧವಾದ ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು, ಸಾಕ್ಷಾತ್ಕರಿಸಲು ಮತ್ತು ಪ್ರವೇಶಿಸಲು ಸಾಧ್ಯವು (ಗೀತಾ, ೧೧ ೫೪) ಇತ್ಯಾದಿ[5]

ದ್ವೈ —'ಆರಾಧನೆಯನ್ನು ಮಾಡಿದರೂ ಆ ಬ್ರಹ್ಮನು ವ್ಯಕ್ತನಾಗುವುದಿಲ್ಲ ಅವನ ಅವ್ಯಕ್ತತ್ವವು ಜ್ಞಾನಿಗಳಿಗೆ ಪ್ರತ್ಯಕ್ಷದಿಂದಲೂ ಇತರರಿಗೆ ಸೂಕ್ಷ್ಮತ್ವವೆಂಬ ಅನುಮಾನದಿಂದಲೂ ಸಿದ್ಧವಾಗಿದೆ[6]

**ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್* || ೨೫ ||**

೨೫ ಪ್ರಕಾಶಾದಿಗಳಂತೆ (ಜೀವಾತ್ಮ-ಪರಮಾತ್ಮರಿಗೆ) ವಿಶೇಷವಿಲ್ಲ, ಪ್ರಕಾಶವು ತನ್ನ ಕರ್ಮದಲ್ಲಿ (ಎಂದರೆ ವಿಷಯದಲ್ಲಿ) ಸವಿಶೇಷವಾಗಿರುವಂತೆ ತೋರುತ್ತದೆ, ಏಕೆಂದರೆ (ಶ್ರುತಿಗಳು) ಪುನಃ ಪುನಃ (ಅಭೇದವನ್ನು ಹೇಳುತ್ತವೆ)

---

[1] ಮುಂ ಉ ೩ ೧ ೮ ನೋಡಿ

[2] ಮ ಭಾ ಶಾಂತಿಪರ್ವ ೩೮೪ ೬೯ ನೋಡಿ

[3] ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್॥

[4] ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ॥

[5] ಮುಂ ಉ ೩ ೧ ೯ ನೋಡಿ

[6] ಆರಾಧಿತೇಽಪ್ಯವ್ಯಕ್ತಮೇವ । ಜ್ಞಾನಿಪ್ರತ್ಯಕ್ಷೇಣೇತರೇಷಾಮತಿಸೂಕ್ಷ್ಮತ್ವಲಿಂಗಾದನುಮಾನೇನ (ಮ ಭಾ)

* ಇದು ಮಧ್ವಭಾಷ್ಯದಲ್ಲಿ ಎರಡು ಸೂತ್ರವಾಗಿದೆ.

ಆರಾಧ್ಯನಾದ ಪರಮಾತ್ಮನೂ ಆರಾಧಕನಾದ ಜೀವನೂ ಬೇರೆ ಬೇರೆ—ಎಂದು ಹೇಳಿದರೆ ನಾವು ಒಪ್ಪಿಕೊಳ್ಳುವುದಿಲ್ಲ; ಏಕೆಂದರೆ ಪ್ರಕಾಶಾದಿಗಳು ತಮ್ಮ ಉಪಾಧಿ ಭೂತವಾದ ಬೆರಳು ಮೊದಲಾದ ಕರ್ಮಗಳಲ್ಲಿ ಸವಿಶೇಷವಾಗಿರುವಂತೆ ತೋರುತ್ತವೆಯೇ ಹೊರತು ಅವು ತಮ್ಮ ಸ್ವಾಭಾವಿಕವಾದ ನಿರ್ವಿಶೇಷರೂಪವನ್ನು ಬಿಟ್ಟಿರುವುದಿಲ್ಲ; ಹಾಗೆಯೇ ಆತ್ಮಭೇದವು ಉಪಾಧಿನಿಮಿತ್ತದಿಂದಲೇ ಆಗಿದೆ; ಆತ್ಮನು ಸ್ವತಃ ಒಬ್ಬನೇ ಆಗಿರುತ್ತಾನೆ. ಆದುದರಿಂದ ಉಪನಿಷತ್ತುಗಳು ಜೀವ-ಬ್ರಹ್ಮರ ಅಭೇದವನ್ನು ಪುನಃ ಪುನಃ ಹೇಳಿರುತ್ತವೆ.

**ವಿ.**—'ಪ್ರಕಾಶದ ಹಾಗೆ ಪರಬ್ರಹ್ಮನ ರೂಪಗುಣಗಳಲ್ಲಿ ಭೇದವಿಲ್ಲ; ಬ್ರಹ್ಮನ ಪ್ರಕಾಶವು ಉಪಾಸನಾಕರ್ಮದ ಅಭ್ಯಾಸದಿಂದ ಸಾಕ್ಷಾತ್ಕರಿಸಲ್ಪಡುತ್ತದೆ' ಎಂಬುದು ಸೂತ್ರಾರ್ಥ

ಪರಬ್ರಹ್ಮ-ಸ್ವರೂಪವನ್ನು ಸಾಕ್ಷಾತ್ಕರಿಸಿದ ವಾಮದೇವಾದಿಗಳ ದರ್ಶನದಲ್ಲಿ—ಪರಬ್ರಹ್ಮನ ಜ್ಞಾನಾನಂದಾದಿಸ್ವರೂಪದಂತೆ—ಮೂರ್ತಾಮೂರ್ತಾದಿ-ಪ್ರಪಂಚದಿಂದ ವಿಶಿಷ್ಟನಾದ ಪರಬ್ರಹ್ಮನ ಗುಣವು ಭೇದವಿಲ್ಲದೆಯೇ ಗ್ರಹಿಸಲ್ಪಟ್ಟದೆ 'ಋಷಿ ವಾಮದೇವನು ಇದನ್ನು "ಅದು" ಎಂದು ಸಾಕ್ಷಾತ್ಕರಿಸಿದಾಗ "ನಾನು ಮನು ಮತ್ತು ಸೂರ್ಯ" ಎಂದು ಅರಿತುಕೊಂಡನು'[1] (ಬೃ. ಉ. ೧ ೪. ೧೦) ಎಂಬ ಶ್ರುತಿಯು ಹೇಳುತ್ತದೆ ಬ್ರಹ್ಮಸ್ವರೂಪಭೂತವಾದ ಪ್ರಕಾಶಾನಂದಾದಿಗಳನ್ನು ವಾಮದೇವಾದಿಗಳು ಸಂರಾಧನಾರೂಪವಾದ ಕರ್ಮದಲ್ಲಿ ಧ್ಯಾನಾಭ್ಯಾಸದಿಂದ ಅರಿತುಕೊಂಡರು. ಹೀಗೆಯೇ ಪರಬ್ರಹ್ಮನು ಮೂರ್ತಾಮೂರ್ತಾದಿ-ವಿಶಿಷ್ಟನೆಂದು ಅರಿತುಕೊಂಡರು ಆದುದರಿಂದ **ನೇತಿ ನೇತಿ** ಎಂಬುದು ಪರಬ್ರಹ್ಮನ ಏತಾವತ್ತ್ವವನ್ನು ನಿಷೇಧಿಸುತ್ತದೆಯೇ ಹೊರತು ಮೂರ್ತಾಮೂರ್ತಾದಿ-ವಿಶಿಷ್ಟತ್ವವನ್ನು ನಿಷೇಧಿಸುವುದಿಲ್ಲ.

**ದ್ವೈ.—ಪ್ರಕಾಶಾದಿವಚ್ಚಾವೈಶೇಷ್ಯಮ್ ॥ ೩. ೨. ೨೫ ॥**

**೨೫. 'ಆಗ್ನ್ಯಾದಿಗಳಂತೆಯೇ ಬ್ರಹ್ಮನಿಗೆ ಸ್ಥೂಲ-ಸೂಕ್ಷ್ಮತ್ವ-ವಿಶೇಷಗಳಿಲ್ಲ'[2]**

ತನ್ಮಾತ್ರಾದಿರೂಪದಿಂದಿರುವ ಆಗ್ನ್ಯಾದಿಗಳು ಸ್ಥೂಲರೂಪದಿಂದ ವ್ಯಕ್ತವಾಗುವಂತೆ ಬ್ರಹ್ಮನು ಸ್ವಲ್ಪ ವ್ಯಕ್ತವಾದ ರೂಪದಿಂದ ಕಾಣಬಹುದು—ಎಂಬ ಆಶಂಕೆಗೆ ಈ ಸೂತ್ರವು ಉತ್ತರವಾಗಿದೆ.

---

[1] ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇ, ಅಹಂ ಮನುರಭವಂ ಸೂರ್ಯಶ್ಚೇತಿ ।

[2] ಅಗ್ನ್ಯಾದಿವತ್ ಸ್ಥೂಲಸೂಕ್ಷ್ಮತ್ವವಿಶೇಷಾಭಾವಾತ್ (ಮ. ಭಾ.).

ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ॥ ೩. ೨. ೨೬ ॥

೨೬. 'ವಿಷಯಭೂತನಾದ ಬ್ರಹ್ಮನಲ್ಲಿ ಶ್ರವಣಾದಿಗಳನ್ನು ಪುನಃ ಪುನಃ ಮಾಡುವುದರಿಂದ ಅವನ ಅಪರೋಕ್ಷಜ್ಞಾನವಾಗುತ್ತದೆ'

**ಅತೋಽನಂತೇನ ತಥಾ ಹಿ ಲಿಂಗಮ್ ॥ ೨೭ ॥**

೨೭. ಆದುದರಿಂದ ಅನಂತನೊಡನೆ (ಒಂದಾಗುತ್ತಾನೆ); ಹಾಗೆಂದು (ಶ್ರುತಿಯು) ಸೂಚಿಸುತ್ತದೆ.

ಅಭೇದವು ಸ್ವಾಭಾವಿಕವಾಗಿರುವುದರಿಂದಲೂ ಭೇದವು ಅವಿದ್ಯಾಕೃತವಾಗಿರುವುದರಿಂದಲೂ ವಿದ್ಯೆಯನ್ನು ಅವಿದ್ಯೆಯಿಂದ ಕಳೆದುಕೊಂಡು ಜೀವನು ಪರಮಾತ್ಮನೊಂದಿಗೆ ಎಂದರೆ ಅನಂತನಾದ ಪ್ರಾಜ್ಞನೊಂದಿಗೆ ಏಕತ್ವವನ್ನು ಹೊಂದುತ್ತಾನೆ 'ಯಾವನು ಆ ಪರಬ್ರಹ್ಮವನ್ನು ತಿಳಿದುಕೊಳ್ಳುವನೊ ಅವನು ಬ್ರಹ್ಮವೇ ಆಗುತ್ತಾನೆ'[1] (ಮುಂ. ಉ. ३. ೨. ೯); 'ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ'[2] (ಬೃ. ಉ ೪. ೪. ೬) ಎಂದು ಶ್ರುತಿಗಳು ಹೇಳುತ್ತವೆ.

**ವಿ.**—ಹಿಂದೆ ಹೇಳಿದ ಹೇತುಗಳಿಂದ ಪರಬ್ರಹ್ಮನು ಅನಂತವಾದ ಕಲ್ಯಾಣಗುಣಗಳಿಂದ ವಿಶಿಷ್ಟನಾಗಿರುವನು ಎಂಬುದು ಸಿದ್ಧವಾಯಿತು. ಆದುದರಿಂದ ಪರಬ್ರಹ್ಮನು ಉಭಯಲಿಂಗವುಳ್ಳವನು ಎಂಬುದು ಹೊಂದುತ್ತದೆ.

**ದ್ವೈ.**—'ಬ್ರಹ್ಮನು ವ್ಯಕ್ತನು ಮತ್ತು ಅವ್ಯಕ್ತನು ಎಂಬುದರ ವಿಷಯದಲ್ಲಿ ಪ್ರಮಾಣಗಳಿರುವುದರಿಂದ ಅವನ ಪ್ರಸಾದದಿಂದಲೇ ಅಪರೋಕ್ಷಜ್ಞಾನವಾಗುತ್ತದೆ'[3] ಎಂಬುದು ಸೂತ್ರಾರ್ಥ.

'ಪುನಃ ಪುನಃ ಅವನನ್ನು ಧ್ಯಾನಿಸುವುದರಿಂದಲೂ ತತ್ಪರನಾಗುವುದರಿಂದಲೂ ಅವನ ಅನುಗ್ರಹದಿಂದಲೇ ಕೊನೆಗೆ ವಿಶ್ವಮಾಯೆಯ ನಿವೃತ್ತಿಯಾಗುತ್ತದೆ'[4] (ಶ್ವೇ. ಉ. ೧ ೧೦) ಎನ್ನುವ ಲಿಂಗವೂ ಇದೆ

**ಉಭಯವ್ಯಪದೇಶಾತ್ತ್ವಹಿಕುಂಡಲವತ್* ॥ ೨೮ ॥**

---

[1] ಸ ಯೋ ಹ ವೈ ತತ್ ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ

[2] ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।

[3] ಉಭಯತ್ರ ಪ್ರಮಾಣಭಾವಾತ್ ತತ್ ಪ್ರಸಾದಾದೇವ ಪ್ರಕಾಶೋಭವತಿ (ಮ.ಭಾ.).

[4] ತಸ್ಯಾಭಿಧ್ಯಾನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ।

* ಈ ಸೂತ್ರದಿಂದ ಪ್ರಾರಂಭಿಸಿ ಪ್ರತಿಷೇಧಾಚ್ಚ ಎಂಬ ಸೂತ್ರದ ವರೆಗೆ ಶ್ರೀಭಾಷ್ಯದಲ್ಲಿ ಅಹಿಕುಂಡಲಾಧಿಕರಣ ಎಂದೂ ಮಧ್ವಭಾಷ್ಯದಲ್ಲಿ ಉಭಯವ್ಯಪದೇಶಾಧಿಕರಣ ಎಂದೂ ಎನಿಸಿದೆ.

## ೨೭ ಆದರೆ ಉಭಯವ್ಯಪದೇಶವಿರುವುದರಿಂದ (ಜೀವಾತ್ಮ-ಪರಮಾತ್ಮರ ಸಂಬಂಧವನ್ನು) ಅಹಿ-ಕುಂಡಲದಂತೆ (ತಿಳಿದುಕೊಳ್ಳಬೇಕು)

ಸಂರಾಧ್ಯ-ಸಂರಾಧಕ-ಭಾವದಲ್ಲಿ ಸ್ವಮತವು ವಿಶುದ್ಧವಾಗಿ ತೋರಲೆಂದು ಸೂತ್ರಕಾರರು ಮತಾಂತರವನ್ನು ಹೇಳುತ್ತಾರೆ ಕೆಲವು ಕಡೆಗಳಲ್ಲಿ ಜೀವಾತ್ಮ-ಪರಮಾತ್ಮರಿಗೆ ಹೀಗೆ ಭೇದವನ್ನು ಹೇಳಿದೆ—'ಆದರೆ ಜ್ಞಾನಪ್ರಸಾದದಿಂದ ಶುದ್ಧವಾದ ಅಂತಃಕರಣವುಳ್ಳವನಾಗಿ ಧ್ಯಾನಮಾಡುವವನು ಅದರಿಂದ ನಿಷ್ಕಲನಾದ ಆ ಆತ್ಮನನ್ನು ನೋಡುತ್ತಾನೆ'[1] (ಮುಂ ಉ ೩ ೧ ೮) ಎಂಬಲ್ಲಿ ಧ್ಯಾತೃ-ಧ್ಯಾತವ್ಯ, ದ್ರಷ್ಟೃ-ದ್ರಷ್ಟವ್ಯ ಎಂಬ ಭೇದವನ್ನು ಹೇಳಿದ, 'ಪರಾತ್ಪರನೂ ದಿವ್ಯನೂ ಆದ ಪುರುಷನನ್ನು ಹೊಂದುತ್ತಾನೆ'[2] (ಮುಂ ಉ ೩ ೨ ೮) ಎಂಬಲ್ಲಿ ಗಂತೃ-ಗಂತವ್ಯ ಎಂಬ ಭೇದವಿದೆ ಆದರೆ ಕೆಲವೆಡೆಗಳಲ್ಲಿ ಇವರಿಬ್ಬರಿಗೂ ಅಭೇದವನ್ನೇ ಹೇಳಿದೆ—'ಅದೇ ನೀನಾಗಿರುವೆ'[3] (ಛಾಂ ಉ ೬ ೮ ೭), 'ನಾನು ಬ್ರಹ್ಮನಾಗಿರುತ್ತೇನೆ'[4] (ಬೃ ಉ ೧ ೪ ೧೦) ಇತ್ಯಾದಿ ಹೀಗೆ ಉಭಯವ್ಯಪದೇಶವಿರುವಾಗ ಅಹಿಕುಂಡಲದಂತೆ ತತ್ತ್ವವಿರಬೇಕು ಸರ್ಪವನ್ನು ಪೂರ್ಣವಾಗಿ ಭಾವಿಸಿದಾಗ ಒಂದೇ ಆಗಿರುತ್ತದೆ, ಕುಂಡಲ, ಹೆಡೆ, ಎತ್ತರವಾಗಿ ನಿಲ್ಲುವಿಕೆ—ಇವುಗಳನ್ನು ಭಾವಿಸಿದಾಗ ಭೇದವು ತೋರುತ್ತದೆ ಹೀಗೆಯೇ ಜೀವನಿಗೂ ಪರಮಾತ್ಮನಿಗೂ ಇರುವ ಸಂಬಂಧವನ್ನು ತಿಳಿದುಕೊಳ್ಳಬೇಕು

**ವಿ.**—ಮೂರ್ತಾಮೂರ್ತರೂಪವಾದ ಅಚಿತ್-ಪ್ರಪಂಚವು ಪರಬ್ರಹ್ಮನ ರೂಪವೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದಾಯಿತು ಈ ಅಚಿತ್‌ಪ್ರಪಂಚವು ಯಾವ ಪ್ರಕಾರದಿಂದ ಪರಬ್ರಹ್ಮನ ರೂಪವಾಗಿದೆ ?—ಎಂಬುದನ್ನು ಬ್ರಹ್ಮನ ನಿರ್ದೋಷತ್ವಸಿದ್ಧಿಗಾಗಿ ಈಗ ವಿಚಾರಿಸಬೇಕು ಸರ್ಪಕ್ಕೆ ಅದರ ಕುಂಡಲವು ಹೇಗೊ ಹಾಗೆ ಅಚಿತ್ ಪ್ರಪಂಚವು ಪರಬ್ರಹ್ಮನಿಗೆ ಸಂಬಂಧಿಸಿದೆ ಅಹಿ-ಕುಂಡಲ-ಭಾವದಂತೆ ಅಚಿದ್ವಸ್ತುಗಳೆಲ್ಲ ಬ್ರಹ್ಮನ ಸಂಸ್ಥಾನವಿಶೇಷಗಳೆಂಬುದು ನಮ್ಮ ಸಿದ್ಧಾಂತ

**ವ್ಯಾ.**—'ಪರಬ್ರಹ್ಮನಿಗೆ ಆನಂದಾದಿಗುಣಸ್ವರೂಪತ್ವವೂ ಆನಂದಾದಿಗುಣವೈಶಿಷ್ಟ್ಯವೂ ಹೊಂದುತ್ತದೆ ಎಂಬ ಉಭಯ-ವ್ಯಪದೇಶವಿದೆ, ಸರ್ಪದ ಕುಂಡಲದ ಹಾಗೆ' ಎಂಬುದು ಸೂತ್ರಾರ್ಥ

'ಅನಂತರ ಇದೇ ಪರಮಾನಂದ'[5] (ಬೃ ಉ ೪ ೩ ೩೩), 'ಯಾವನು ಬ್ರಹ್ಮನ ಆನಂದವನ್ನು ತಿಳಿದಿರುವನೋ'[6] (ತೈ ಉ ೨ ೪) ಎಂಬ ಉಭಯವ್ಯಪದೇಶವನ್ನು

---

[1] ಸ ಯೋ ಹ ವೈ ತತ್ ಪರಮಂ ಬ್ರಹ್ಮವೇದ ಬ್ರಹ್ಮೈವ ಭವತಿ ।

[2] ಪರಾತ್ಪರಂ ಪುರುಷಮುಪೈತಿ ದಿವ್ಯಮ್ ।

[3] ತತ್ತ್ವಮಸಿ ।

[4] ಅಹಂ ಬ್ರಹ್ಮಾಸ್ಮಿ ।

[5] ಅಥೈಷ ಏವ ಪರಮ ಆನಂದಃ ।

[6] ಆನಂದಂ ಬ್ರಹ್ಮಣೋ ವಿದ್ವಾನ್ ।

ಶ್ರುತಿಗಳು ಹೇಳುತ್ತವೆ, ಸರ್ಪಕ್ಕೆ ಕುಂಡಲರೂಪಧರ್ಮ, ಕುಂಡಲಿರೂಪಧರ್ಮಿ ಸ್ವರೂಪ ದಂತೆ ಸೂತ್ರದಲ್ಲಿರುವ ತು-ಶಬ್ದವು ಕೇವಲ ಶ್ರುತಿಗಮ್ಯತ್ವವನ್ನು ತಿಳಿಸುತ್ತದೆ

**ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ || ೨೮ ||**

೨೮ ಅಥವಾ ಪ್ರಕಾಶ ಮತ್ತು ಅದರ ಆಶ್ರಯ—ಇವೆರಡೂ ತೇಜಸ್ಸೇ ಆಗಿರುವಂತೆ

ಸೂರ್ಯನ ಪ್ರಕಾಶವು ಮತ್ತು ಅದಕ್ಕೆ ಆಶ್ರಯನಾಗಿರುವ ಸೂರ್ಯ—ಇವೆರಡೂ ತೇಜಸ್ಸೇ ಆಗಿರುವುದರಿಂದ ಅತ್ಯಂತ ಭಿನ್ನವಲ್ಲವು, ಆದರೂ ಭಿನ್ನವಾಗಿರುವಂತೆ ಹೇಳಲ್ಪಡುತ್ತವೆ ಹೀಗೆಯೇ ಜೀವಾತ್ಮ-ಪರಮಾತ್ಮರ ಸಂಬಂಧವನ್ನು ಅರಿತುಕೊಳ್ಳಬೇಕು

**ವಿ** —ಸೂತ್ರದಲ್ಲಿರುವ **ವಾ**-ಶಬ್ದವು ಹಿಂದಿನ ಅಭಿಪ್ರಾಯವನ್ನು ನಿರಾಕರಿಸುತ್ತದೆ ಪರಬ್ರಹ್ಮನೇ ಅಹಿ-ಕುಂಡಲದಂತೆ ಅಚಿದ್ವಸ್ತುವಾಗಿ ಪರಿಣಮಿಸಿದರೆ ಭೇದಾಭೇದಶ್ರುತಿಗಳು ಬಾಧಿತವಾಗುತ್ತವೆ ಆದುದರಿಂದ ಎರಡನೇ ಪಕ್ಷವನ್ನು ಒಪ್ಪಿಕೊಳ್ಳುತ್ತೇವೆ ತೇಜಸ್ಸು ಮತ್ತು ಅದರ ಆಶ್ರಯವು, ಇವೆರಡೂ ಭಿನ್ನವಾಗಿದ್ದರೂ—ತೇಜಸ್ಸು ಇವೆರಡಕ್ಕೂ ಸಮಾನವಾಗಿರುವುದರಿಂದ—ಅಭಿನ್ನವಾಗಿರುತ್ತವೆ ಹೀಗೆಯೇ ಅಚಿತ್-ಪ್ರಪಂಚವು ಪರಬ್ರಹ್ಮನ ರೂಪವಾಗಿದೆ

**ದ್ವೈ** —ಸೂರ್ಯನಿಗೆ ತೇಜೋರೂಪತ್ವವಿದ್ದ ಪ್ರಯುಕ್ತ ಪ್ರಕಾಶತ್ವ ಮತ್ತು ಪ್ರಕಾಶಿತ್ವ, ಇವೆರಡೂ ಇರುವಂತೆ ಬ್ರಹ್ಮನಿಗೆ ಗುಣರೂಪತ್ವವೂ ಗುಣಿರೂಪತ್ವವೂ ಹೊಂದುತ್ತದೆ

**ಪೂರ್ವವದ್ವಾ* || ೨೯ ||**

೨೯ ಅಥವಾ ಮೊದಲು ಹೇಳಿದ ಹಾಗೆಯೇ

ಅಥವಾ ಜೀವ-ಪರಮಾತ್ಮರ ಸಂಬಂಧವನ್ನು ೨೫ನೆಯ ಸೂತ್ರದಲ್ಲಿ ಹೇಳಿರುವಂತೆಯೇ ತಿಳಿದುಕೊಳ್ಳಬಹುದು ಹಾಗಾದರೆ ಬಂಧವೂ ಅವಿದ್ಯಾಕೃತವಾಗಿರುವುದರಿಂದ ಜ್ಞಾನದಿಂದ ಮೋಕ್ಷವಾಗುವುದೆಂಬುದು ಹೊಂದುತ್ತದ ಹೀಗಲ್ಲದೆ ಪರಮಾರ್ಥವಾಗಿಯೇ ಜೀವನನ್ನು—ಅಹಿ-ಕುಂಡಲ-ನ್ಯಾಯದಿಂದ ಪರಮಾತ್ಮನ ಸಂಸ್ಥಾನವೆಂದಾಗಲೀ, ಪ್ರಕಾಶಾಶ್ರಯನ್ಯಾಯದಿಂದ ಒಂದು ಭಾಗವೆಂದಾಗಲೀ—ಒಪ್ಪಿಕೊಂಡರೆ ಆಗ ನಿಜವಾಗಿರುವ ಬಂಧವನ್ನು ತೊಲಗಿಸಿಕೊಳ್ಳಲು ಅವಶಕ್ಯವಾಗಿರುವುದರಿಂದ ಮೋಕ್ಷಶಾಸ್ತ್ರವು ವ್ಯರ್ಥವೆಂಬ ಪ್ರಸಂಗವು ಬರುವುದು ಇಲ್ಲಿ ಶ್ರುತಿಯು ಭೇಧಾಭೇದಗಳನ್ನು

---

* ಶಂಕರಭಾಷ್ಯ-ಶ್ರೀಭಾಷ್ಯಗಳಲ್ಲಿ ಹಿಂದಿನ ಎರಡು ಸೂತ್ರಗಳು ಪೂರ್ವಪಕ್ಷಸೂತ್ರಗಳಾಗಿದ್ದು ಇದು ಸಿದ್ಧಾಂತ-ಸೂತ್ರವಾಗಿದೆ

ಸಮಾನವಾಗಿ ಉಪದೇಶಿಸುತ್ತಿಲ್ಲ, ಏಕೆಂದರೆ ಅಭೇದವನ್ನೇ ಪ್ರತಿಪಾದ್ಯವೆಂದು ನಿರ್ದೇಶಿಸುತ್ತದೆ ಪೂರ್ವಸಿದ್ಧವಾಗಿರುವ ಭೇದವನ್ನೇ ಬೇರೊಂದು ವಿಷಯವನ್ನು ತಿಳಿಸುವುದಕ್ಕಾಗಿ ಸೂಚಿಸುತ್ತದೆ ಆದುದರಿಂದ ೨೫ನೆಯ ಸೂತ್ರದಲ್ಲಿ ಹೇಳಿರುವಂತೆ ಜೀವಾತ್ಮನು ಪರಮಾತ್ಮನಿಗಿಂತ ಭಿನ್ನನಲ್ಲ

**ವಿ.**—**ವಾ**-ಶಬ್ದವು ಹಿಂದಿನ ಎರಡು ಪಕ್ಷಗಳನ್ನು ನಿರಾಕರಿಸುತ್ತದೆ ಹಿಂದೆ ಹೇಳಿದಂತೆ[1] ಬ್ರಹ್ಮನಿಗೂ ಅಚಿತ್-ವಸ್ತುವಿಗೂ ಇರುವ ಸಂಬಂಧವು ಜೀವನಿಗೂ ಬ್ರಹ್ಮನಿಗೂ ಇದ್ದಂತೆ, ಎಂದರೆ ಬ್ರಹ್ಮನಿಗಿಂತ ಬೇರೆಯಾಗದ ವಿಶೇಷಣವಾಗಿ ಅವನ ಅಂಶವೇ ಆಗಿರುತ್ತದೆ ಅಭೇದ-ಶ್ರುತಿಗಳನ್ನು ಮುಖ್ಯಾರ್ಥದಲ್ಲಿ ಗ್ರಹಿಸಬಹುದು, ಏಕೆಂದರೆ ಅಂಶವೆಂಬುದು ತಾನು ಸೇರಿರುವ ಅಂಶಿಯ ಏಕದೇಶವಾಗಿರುತ್ತದೆ ಭೇದ-ಶ್ರುತಿಗಳನ್ನೂ ಮುಖ್ಯಾರ್ಥದಲ್ಲಿ ಗ್ರಹಿಸಬಹುದು, ಏಕೆಂದರೆ ವಿಶೇಷಣಕ್ಕೂ ವಿಶೇಷ್ಯಕ್ಕೂ ಭೇದವಿರುತ್ತದೆ ಹೀಗೆ ಪರಬ್ರಹ್ಮನ ನಿರ್ದೋಷತ್ವವು ರಕ್ಷಿತವಾಗಿದ

**ದ್ವೈ**—'ಅಥವಾ ಹಿಂದಿನ ಕಾಲದಂತೆ' ಎಂಬುದು ಸೂತ್ರಾರ್ಥ

ಒಂದೇ ಕಾಲವನ್ನು ಪೂರ್ವಕಾಲವೆಂದು ಹೇಳಿದಾಗ ಅವಚ್ಛೇದಕವೂ ಅವಚ್ಛೇದ್ಯವೂ ಆಗುವಂತೆ ಪರಬ್ರಹ್ಮನು ಆನಂದನೂ ಆನಂದಿಯೂ ಆಗಿರುತ್ತಾನೆ[2]

## ಪ್ರತಿಷೇಧಾಚ್ಚ ॥ ೩೦ ॥

೩೦. ಪ್ರತಿಷೇಧಿಸಿರುವುದರಿಂದಲೂ (ಇದೇ ಸಿದ್ಧಾಂತವು)

ಶ್ರುತಿಯು ಪರಮಾತ್ಮನಿಗಿಂತ ಬೇರೊಬ್ಬ ಚೇತನನಿಲ್ಲ ಎಂದು ಹೇಳುವುದರಿಂದಲೂ ಇದೇ ಸಿದ್ಧಾಂತವು, 'ಇವನಿಗಿಂತ ಬೇರೆ ದ್ರಷ್ಟೃವಿಲ್ಲ'[3] (ಬೃ ಉ ೩ ೭ ೨೩) ಬ್ರಹ್ಮಕ್ಕಿಂತ ವ್ಯತಿರಿಕ್ತವಾದ ಪ್ರಪಂಚವನ್ನು ನಿರಾಕರಿಸುವ ಮತ್ತು ಬ್ರಹ್ಮಮಾತ್ರವನ್ನು ಉಳಿಸಿಕೊಂಡಿರುವ ಶ್ರುತಿಗಳಿಂದಲೂ ಇದೇ ಸಿದ್ಧಾಂತವು ಬರುತ್ತದೆ 'ಈಗ ಆದುದರಿಂದ ಬ್ರಹ್ಮದ ನಿರ್ದೇಶವು—"ಹೀಗಲ್ಲ, ಹೀಗಲ್ಲ"'[4] (ಬೃ ಉ ೨ ೩ ೬), 'ಆ ಈ ಬ್ರಹ್ಮವು ಅಪೂರ್ವವು, ಅನವರವು, ಅನಂತರವು, ಅಬಾಹ್ಯವು'[5] (ಬೃ ಉ ೨ ೫ ೧೯)

**ವಿ.**—'ಮಹಾಂತನೂ, ಜನ್ಮರಹಿತನೂ ಜರಾಶೂನ್ಯನೂ ಮೃತ್ಯುರಹಿತನೂ ಆದ ಈ ಆತ್ಮನು'[6] (ಬೃ ಉ ೪ ೪ ೨೫), 'ಶರೀರದ ಮುಪ್ಪಿನಿಂದ ಇದು ಮುಪ್ಪನ್ನು

---

1 ಶ್ರೀಭಾಷ್ಯದ ಪ್ರಕಾರ ೨ ೩ ೪೨ ಮತ್ತು ೪೫ ನೋಡಿ

2 ಯಥೈಕ ಏವ ಕಾಲಃ ಪೂರ್ವ ಇತ್ಯವಚ್ಛೇದಕೋಽವಚ್ಛೇದ್ಯಶ್ಚ ಭವತಿ ।

3 ನಾನ್ಯೋಽತೋಽಸ್ತಿ ದ್ರಷ್ಟಾ ।

4 ಅಥಾತ ಆದೇಶಃ—ನೇತಿ ನೇತಿ ।

5 ತದೇತದ್ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮ್ ।

6 ಸ ವಾ ಏಷ ಮಹಾನಜ ಆತ್ಮಾಜರೋಽಮರಃ ।

ಹೊಂದುವುದಿಲ್ಲ'[1] (ಛಾಂ. ಉ ೮. ೧. ೫) ಎಂಬ ಶ್ರುತಿಗಳು ಪರಬ್ರಹ್ಮನಿಗೆ ಅಚಿದ್ಧರ್ಮಗಳನ್ನು ಪ್ರತಿಷೇಧಿಸುತ್ತವೆ ಆದುದರಿಂದ ಜೀವ-ಪರಮಾತ್ಮರಿಗೆ ವಿಶೇಷಣ-ವಿಶೇಷ್ಯಭಾವವೂ ಅಂಶಾಂಶಿಭಾವವೂ ಇರುತ್ತವೆ. ಚಿದಚಿದ್ವಸ್ತುಗಳ ಸೂಕ್ಷ್ಮಾವಸ್ಥೆಯಲ್ಲಿ ವಿಶಿಷ್ಟನಾದ ಬ್ರಹ್ಮನು ಅವುಗಳ ಕಾರಣನು ; ಅವುಗಳ ಸ್ಥೂಲಾವಸ್ಥೆಯಲ್ಲಿ ವಿಶಿಷ್ಟನಾದ ಬ್ರಹ್ಮನು ಕಾರ್ಯನು ಕಾರಣಭೂತನಾದ ಬ್ರಹ್ಮನ ಜ್ಞಾನದಿಂದ ಕಾರ್ಯದ ಜ್ಞಾನವು ಹೊಂದುವುದರಿಂದ ಈ ತತ್ತ್ವಗಳೆಲ್ಲ ಉಪಪನ್ನವಾಗುತ್ತವೆ

ದ್ವೈ.—**ಏಕಮೇವಾದ್ವಿತೀಯಂ** (ಛಾಂ. ಉ. ೬. ೨ ೧), **ನೇಹ ನಾನಾಽಸ್ತಿ ಕಿಂಚನ** (ಕ. ಉ. ೨. ೪. ೧೧) ಎಂಬ ಶ್ರುತಿಗಳ ಪ್ರಕಾರ ಬ್ರಹ್ಮನಿಗೂ ಅವನ ಗುಣಗಳಿಗೂ ಭೇದವಿಲ್ಲ.

---

1 ನಾಸ್ಯ ಜರಯೈತಜ್ಜೀರ್ಯತಿ ।

# ೭. ಪರಾಧಿಕರಣ*

(ಸೂ. ೩೧–೩೭)

**ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ॥ ೩೧ ॥**

೩೧ ಇದಕ್ಕಿಂತ ಪರವಾದ (ಬೇರೊಂದು ತತ್ತ್ವವಿದೆ); ಏಕೆಂದರೆ ಸೇತು ಉನ್ಮಾನ ಸಂಬಂಧ ಭೇದ—ಇವುಗಳ ವ್ಯಪದೇಶಗಳಿವೆ.

ನಿಷ್ಪ್ರಪಂಚವಾದ ಬ್ರಹ್ಮಕ್ಕಿಂತ ಪರವಾದ ಬೇರೊಂದು ತತ್ತ್ವವು ಇದೆಯೊ? ಅಥವಾ ಇಲ್ಲವೊ?—ಎಂಬ ಸಂಶಯವುಂಟಾಗುತ್ತದೆ; ಏಕೆಂದರೆ ಕೆಲವು ಶ್ರುತಿಗಳು ಬ್ರಹ್ಮಕ್ಕಿಂತಲೂ ಭಿನ್ನವಾದ ಮತ್ತೊಂದು ತತ್ತ್ವವನ್ನು ಪ್ರತಿಪಾದಿಸುವಂತೆ ಕಾಣುತ್ತವೆ

**ಪೂರ್ವಪಕ್ಷಿ**—ಈ ಬ್ರಹ್ಮಕ್ಕಿಂತ ಭಿನ್ನವಾದ ಮತ್ತೊಂದು ತತ್ತ್ವವಿರಬೇಕು; ಏಕೆಂದರೆ ಸೇತುವ್ಯಪದೇಶ ಉನ್ಮಾನವ್ಯಪದೇಶ ಸಂಬಂಧವ್ಯಪದೇಶ ಭೇದವ್ಯಪದೇಶ—ಎಂಬ ನಾಲ್ಕು ವ್ಯಪದೇಶಗಳಿವೆ. ಮೊದಲನೆಯದಾಗಿ ಸೇತುವ್ಯಪದೇಶವು ಹೀಗಿದೆ: 'ಆ ಆತ್ಮನು ಸೇತುವೂ ವಿಧೃತಿಯೂ ಆಗಿದ್ದಾನೆ'[1] (ಛಾಂ. ಉ. ೮. ೪. ೧); ಸೇತುವೆಂದರೆ ಪ್ರವಾಹಾದಿಗಳನ್ನು ತಡೆಯುವ ದಡ ಅಥವಾ ದಂಡೆ. ಇಲ್ಲಿ ಲೌಕಿಕಸೇತುವಿನಂತೆ ಆತ್ಮ ಸೇತುವಿಗಿಂತ ಬೇರೊಂದು ವಸ್ತುವಿದೆಯೆಂದು ತಿಳಿದುಬರುತ್ತದೆ. 'ಸೇತುವನ್ನು ದಾಟಿ'[2] (ಛಾಂ. ಉ. ೮. ೪. ೨) ಎಂಬ ಶ್ರುತಿಯ ಪ್ರಯೋಗದಿಂದ ಆತ್ಮನೆಂಬ ಸೇತುವನ್ನು ದಾಟಿ ಆತ್ಮನಲ್ಲದ ಅಸೇತುವನ್ನು ಪಡೆಯುತ್ತಾರೆ—ಎಂದು ತಿಳಿದುಬರುತ್ತದೆ. ಎರಡನೆಯ ದಾಗಿ ಉನ್ಮಾನದ ಅಥವಾ ಪರಿಮಾಣದ ವ್ಯಪದೇಶವು ಹೀಗಿದೆ: 'ಈ ಬ್ರಹ್ಮಕ್ಕೆ ನಾಲ್ಕು ಪಾದಗಳೂ ಎಂಟು ಗೊರಸುಗಳೂ ಹದಿನಾರು ಕಲೆಗಳೂ ಇವೆ.'[3] ಹೀಗೆ ಬ್ರಹ್ಮಕ್ಕೆ ಅಳತೆಯಿದ್ದರೆ ಅದಕ್ಕಿಂತ ಬೇರೆಯಾದ ಮತ್ತೊಂದು ವಸ್ತುವಿರಬೇಕು—ಎಂದು ತಿಳಿದು ಬರುತ್ತದೆ. ಮೂರನೆಯದಾಗಿ ಸಂಬಂಧವ್ಯಪದೇಶ: 'ಎಲೈ ಸೋಮ್ಯ, ಆಗ ಸದ್ವಸ್ತುವಿನೊಂದಿಗೆ ಒಂದಾಗುತ್ತಾನೆ'[4] ಮತ್ತು 'ಪ್ರಜ್ಞಾತ್ಮನಿಂದ ಆಲಿಂಗಿತನಾಗಿ'[5] (ಬೃ. ಉ. ೪ ೩. ೨೧) ಇತ್ಯಾದಿ ಜೀವರಿಗೆ ಸುಷುಪ್ತಿಯಲ್ಲಿ ಬ್ರಹ್ಮದೊಂದಿಗೆ ಸಂಬಂಧವಾಗುತ್ತದೆಂದು

* ಮಧ್ವಭಾಷ್ಯದಲ್ಲಿ ಇಲ್ಲಿಂದ ಬುದ್ಧ್ಯರ್ಥಃ ಪಾದವತ್ ಎಂಬ ಸೂತ್ರದ ವರೆಗೆ ಪರಾನಂದಾಧಿಕರಣ ಎನಿಸಿದೆ.

1 ಅಥ ಯ ಆತ್ಮಾ ಸ ಸೇತುರ್ವಿಧೃತಿಃ ।

2 ಸೇತುಂ ತೀರ್ತ್ವಾ ।

3 ತದ್ವೈತದ್ಬ್ರಹ್ಮ ಚತುಷ್ಪಾದಷ್ಟಾಶಫಲಂ ಷೋಡಶಕಲಮ್ ।

4 ಸತಾ ಸೋಮ್ಯ ತದಾ ಸಂಪನ್ನೋ ಭವತಿ ।

5 ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ।

ಶ್ರುತಿಯು ಹೇಳುತ ದೆ ಆದುದರಿಂದ ಬ್ರಹ್ಮಕ್ಕಿಂತ ಪರವಾದ ಮತ್ತೊಂದು ಅಮಿತ ವಾದದ್ದಿದೆ—ಎಂಬುದು ತಿಳಿದುಬರುತ್ತದೆ ನಾಲ್ಕನೆಯದಾದ ಭೇದವ್ಯಪದೇಶವು ಇದನ್ನೇ ತಿಳಿಸುತ್ತ ದೆ 'ಇನ್ನು ಆದಿತ್ಯಮಂಡಲದಲ್ಲಿ ಕಾಣುತ್ತಿರುವ ಹಿರಣ್ಮಯನಾದ ಈ ಪುರುಷನು'[1] (ಛಾಂ ಉ ೧ ೬ ೬) ಎಂದು ಆದಿತ್ಯಾಧಾರನಾದ ಈಶ್ವರನನ್ನು ಹೇಳಿ ಅವನಿಗಿಂತ ಭಿನ್ನವಾಗಿ ಕಣ್ಣಿನ ಆಧಾರವುಳ್ಳ ಈಶ್ವರನನ್ನು 'ಇನ್ನು ಕಣ್ಣಿನಲ್ಲಿ ಕಾಣುತ್ತಿರುವ ಪುರುಷನು'[2] (ಛಾಂ ಉ ೧ ೭ ೫) ಎಂದು ಶ್ರುತಿಯು ಹೇಳುತ್ತದೆ ಇಂಥ ವ್ಯಪದೇಶಗಳಿರುವುದರಿಂದ ಬ್ರಹ್ಮಕ್ಕಿಂತ ಬೇರೆ ವಸ್ತುವಿದಯೆಂಬುದು ಸಿದ್ಧವಾಯಿತು

ವಿ.—ಸೇತು (ಛಾಂ ಉ ೮ ೪ ೧), ಉನ್ಮಾನ (ಛಾಂ ಉ ೩ ೧೮ ೨), ಸಂಬಂಧ (ಪ್ರ ಉ ೬ ೨), ಭೇದ (ಶ್ವೇ ಉ ೩ ೯) ಎಂಬ ನಾಲ್ಕು ಕಾರಣಗಳಿಂದ ಪರಬ್ರಹ್ಮನಿಗಿಂತಲೂ ಶ್ರೇಷ್ಠನಾದ ಇನ್ನೊಬ್ಬನಿರುವನು ಎಂದು ತಿಳಿದುಬರುತ್ತದೆ—ಎಂಬುದು ಪೂರ್ವಪಕ್ಷ

**ದ್ವೈ** —'ಸೇತು ಉನ್ಮಾನ ಸಂಬಂಧ ಭೇದ ಎಂಬ ವ್ಯಪದೇಶಗಳಿಂದ ಬ್ರಹ್ಮನ ಗುಣಸಮುದಾಯವು ವಿಲಕ್ಷಣವು' ಎಂಬುದು ಸೂತ್ರಾರ್ಥ

ಬ್ರಹ್ಮನ ಆನಂದಾದಿಗುಣಗಳು ಲೌಕಿಕಾನಂದಾದಿಗಳ ಹಾಗಲ್ಲ **ಏಷ ಸೇತುರ್ವಿಧೃತಿಃ** (ಛಾಂ ಉ ೮ ೪ ೧) ಇದೇ ಮೊದಲಾದ ಶ್ರುತಿಗಳು ಆನಂದಾದಿಗಳಿಗೆ ಸೇತುತ್ವವನ್ನು ಹೇಳುತ್ತವೆ, **ಯತೋ ವಾಚೋ ನಿವರ್ತಂತೇ** (ತೈ ಉ ೨ ೪) ಎಂಬ ಶ್ರುತಿಯು ಬ್ರಹ್ಮನ ಅಮಿತತ್ವವನ್ನು ಹೇಳುತ್ತದೆ **ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ** (ಬೃ ಉ ೪ ೩ ೩೨) ಎಂಬ ಶ್ರುತಿಯು ಬ್ರಹ್ಮನಿಗೂ ಜಗತ್ತಿಗೂ ಇರುವ ಸಂಬಂಧವನ್ನು ತಿಳಿಸುತ್ತದೆ **ಅನ್ಯಜ್ಜ್ಞಾನಂ ತು ಜೀವಾನಾಮನ್ಯಜ್ಜ್ಞಾನಂ** ಎಂಬುದು ಭೇದವನ್ನು ತಿಳಿಸುತ್ತದೆ ಆದುದರಿಂದ ಬ್ರಹ್ಮಾನಂದಾದಿಕವು ಅಲೌಕಿಕವಾದುದರಿಂದ ಬೇರೆಯೇ ಆಗಿರುತ್ತದೆ[3]

## ಸಾಮಾನ್ಯಾತ್ತು* ॥ ೩೨ ॥

೩೨ ಆದರೆ ಸಾದೃಶ್ಯದಿಂದ (ಬ್ರಹ್ಮವನ್ನು ಸೇತುವೆಂದು ಕರೆದಿದೆ)

ಸೂತ್ರದಲ್ಲಿರುವ **ತು**-ಶಬ್ದವು ಹಿಂದೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುತ್ತದೆ ಬ್ರಹ್ಮಕ್ಕಿಂತ ಅನ್ಯವಾದ ಬೇರೆ ಯಾವ ವಸ್ತುವೂ ಇಲ್ಲ, ಏಕೆಂದರೆ ಅದಕ್ಕೆ ಪ್ರಮಾಣ

---

[1] ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ।

[2] ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ।

[3] ಅತೋಽಲೌಕಿಕತ್ವಾತ್ ಪರಮೇವ ಬ್ರಹ್ಮಾನಂದಾದಿಕಮ್ (ಮ ಭಾ.)

* ಮಧ್ವಭಾಷ್ಯದಲ್ಲಿ ಈ ಸೂತ್ರದ ಸ್ಥಾನದಲ್ಲಿ ದರ್ಶನಾತ್ತು ಎಂಬ ಸೂತ್ರವಿದೆ

ವಿಲ್ಲ ಸೇತುವೇ ಮೊದಲಾದ ವ್ಯಪದೇಶಗಳು ಬ್ರಹ್ಮಕ್ಕಿಂತ ಬೇರೆಯಾದ ತತ್ತ್ವವನ್ನು ಸೂಚಿಸುವುದಿಲ್ಲ ಶ್ರುತಿಯು 'ಆತ್ಮನು ಸೇತು' ಎಂದು ಹೇಳುತ್ತದೆಯೇ ಹೊರತು 'ಅದಕ್ಕಿಂತ ಬೇರೊಂದಿದೆ' ಎಂದು ಹೇಳುತ್ತಿಲ್ಲ ಆತ್ಮನಿಗೆ ಲೌಕಿಕಸೇತುವನ್ನು ದೃಷ್ಟಾಂತ ವಾಗಿ ಕೊಟ್ಟಿರುವುದರಿಂದ ಅದಕ್ಕಿಂತ ಭಿನ್ನವಾದ ಬೇರೊಂದು ವಸ್ತುವನ್ನು ಕಲ್ಪಿಸಬೇಕಾ ಗಿಲ್ಲ ಸೇತುವಿಗೆ ಹೋಲುವುದರಿಂದ ಸೇತುಶಬ್ದವನ್ನು ಆತ್ಮನಲ್ಲಿ ಪ್ರಯೋಗಿಸಿದೆ ಎಂಬುದು ಯುಕ್ತವಾಗಿರುತ್ತದೆ [1] ಜಗತ್ತನ್ನೂ ಅದರ ಮರ್ಯಾದೆಗಳನ್ನೂ ತಡೆದು ನಿಲ್ಲಿಸಿರುವುದೇ ಆತ್ಮನಿಗೂ ಸೇತುವಿಗೂ ಇರುವ ಹೋಲಿಕೆಯು 'ಸೇತುವನ್ನು ದಾಟಿ' (ಛಾಂ ೮ ೪ ೨) ಎಂಬಲ್ಲಿ ತರಣಶಬ್ದವು 'ದಾಟು' ಎಂಬುದನ್ನು ಸೂಚಿಸದೆ 'ಪ್ರಾಪ್ತಿ' ಎಂಬ ಅರ್ಥವನ್ನು ಸೂಚಿಸುತ್ತದೆ, ವ್ಯಾಕರಣ ಓದಿದವನನ್ನು **ವ್ಯಾಕರಣಂ ತೀರ್ಣಃ** ಎಂದು ಹೇಳಿದ ಹಾಗ

**ದೃಶ್ಯ.—ದರ್ಶನಾತ್** ॥ ೩೨ ॥

**೩೨ ಏಕೆಂದರೆ ಆನಂದಾದಿಗಳು ಗೋಚರವಾಗಿವೆ**

ಜೀವರ ಆನಂದಾದಿಗಳು ಗೋಚರವಾಗಿರುವುದರಿಂದಲೂ ಬ್ರಹ್ಮನ ಗುಣಗಳು ಅಗೋಚರವಾಗಿರುವುದರಿಂದಲೂ ಬ್ರಹ್ಮನ ಗುಣಸಮುದಾಯವು ಲೌಕಿಕಾನಂದಾದಿಗಳಿ ಗಿಂತ ವಿಲಕ್ಷಣವಾಗಿರುತ್ತದೆ

**ಬುದ್ಧ್ಯರ್ಥಃ ಪಾದವತ್** ॥ ೩೩ ॥

೩೩ ಬುದ್ಧಿಯ ಪ್ರಯೋಜನಕ್ಕಾಗಿ (ಉನ್ಮಾನ-ವ್ಯಪದೇಶವು ಬಂದಿದೆ), ಪಾದಗಳ ಹಾಗೆ

ಉನ್ಮಾನ-ವ್ಯಪದೇಶವು ಬ್ರಹ್ಮಕ್ಕಿಂತ ಬೇರೊಂದು ವಸ್ತುವಿದೆ ಎಂಬುದನ್ನು ತಿಳಿಸು ವುದಕ್ಕೆ ಬಂದಿಲ್ಲ, ಬುದ್ಧಿಯ ಪ್ರಯೋಜನಕ್ಕಾಗಿ ಎಂದರೆ ಉಪಾಸನೆಗಾಗಿ ಬಂದಿದ 'ನಾಲ್ಕು ಪಾದಗಳುಳ್ಳದ್ದು' ಎಂಬೀ ರೂಪದ ಉನ್ಮಾನ-ಕಲ್ಪನೆಯು ಬುದ್ಧಿಯು ಬ್ರಹ್ಮ ದಲ್ಲಿ ಹೇಗಾದರೂ ಸ್ಥಿರವಾಗಿ ನಿಲ್ಲಲಿ ಎಂಬುವಕ್ಕಾಗಿ ವಿಕಾರದ್ವಾರದಿಂದ ಬ್ರಹ್ಮಕ್ಕೆ ಕಲ್ಪಿಸಿದೆ, ಏಕೆಂದರೆ ಅವಿಕಾರವೂ ಅನಂತವೂ ಆದ ಬ್ರಹ್ಮದಲ್ಲಿ ಎಲ್ಲರೂ ಬುದ್ಧಿಯನ್ನು ನಿಲ್ಲಿಸಲು ಸಮರ್ಥರಾಗಲಾರರು, ಏಕೆಂದರೆ ಜನರು ಮಂದ-ಮಧ್ಯಮ-ಉತ್ತಮ ಬುದ್ಧಿ ಗಳಿಂದ ಕೂಡಿರುತ್ತಾರೆ ಹೇಗೆ ಛಾಂದೋಗ್ಯಶ್ರುತಿಯು (೩ ೧೮ ೧—೪) ಉಪಾಸನೆ ಗೋಸ್ಕರ ವಾಗಾದಿಗಳನ್ನು ಬ್ರಹ್ಮದ ಅಧ್ಯಾತ್ಮ-ಪಾದಗಳೆಂದೂ ಅಗ್ನ್ಯಾದಿಗಳನ್ನು ಅಧಿ- ದೈವತ-ಪಾದಗಳೆಂದೂ ಕಲ್ಪಿಸಿದೆಯೋ ಹಾಗಯೇ ಇಲ್ಲಿಯೂ ಅರಿತುಕೊಳ್ಳಬೇಕು,

[1] ಸೇತುಸಾಮಾನ್ಯಾತ್ ಸೇತುಶಬ್ದ ಆತ್ಮನಿ ಪ್ರಯುಕ್ತ ಇತಿ ಶ್ಲಿಷ್ಯತೇ (ಸೂ ಭಾ).

ಅಥವಾ ಕಾರ್ಷಾಪಣ ಎಂಬ ನಾಣ್ಯದಲ್ಲಿ ಪಾದಗಳನ್ನು ವ್ಯವಹಾರಕ್ಕಾಗಿ ಕಲ್ಪಿಸಿರುವಂತೆ ಇಲ್ಲಿಯೂ ತಿಳಿದುಕೊಳ್ಳಬಹುದು

ಪಿ.—'ಈ ಜಗತ್ತೆಲ್ಲ ಇವನ ಒಂದ ಪಾದವಾಗಿದೆ'[1] (ಛಾಂ ಉ ೩ ೧೨ ೬) ಇವೇ ಮೊದಲಾದ ಶ್ರುತಿಗಳು ಉಪಾಸನೆಗಾಗಿಯೇ ಬಂದಿವೆ ಏಕೆಂದರೆ **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ ಉ ೨ ೧) ಎಂಬ ಶ್ರುತಿಯು ಬ್ರಹ್ಮನ ಅಪರಿಚ್ಛಿನ್ನತ್ವವನ್ನು ತಿಳಿಸುತ್ತದೆಯೇ ಹೊರತು ಅವನ ಪರಿಮಾಣವನ್ನು ಹೇಳುವುದಿಲ್ಲ 'ವಾಕ್ಕು ಒಂದು ಪಾದ, ಪ್ರಾಣವು ಒಂದು ಪಾದ, ಚಕ್ಷುಸ್ಸು ಒಂದು ಪಾದ, ಮನಸ್ಸು ಒಂದು ಪಾದ'[2] (ಛಾಂ ಉ ೩ ೮೮ ೨) ಎಂಬ ಶ್ರುತಿಯ ಪ್ರಕಾರ ಇಲ್ಲಿಯೂ ಶ್ರುತಿಗಳು ಉಪಾಸನೆಗಾಗಿ ಬಂದಿವೆ

**ದ್ವೈ.**—ಜೀವ ಮತ್ತು ಈಶ್ವರ—ಇವರ ಸಂಬಂಧವನ್ನು ನಮ್ಮ ಬುದ್ಧಿಗೆ ತಿಳಿಸಲು—ಜೀವನು ಈಶ್ವರನ ಅಂಶಗಳಿಗಿಂತ ಮತ್ತು ಅವನ ಪಾದವೆನಿಸಿದ ಜಗತ್ತಿಗಿಂತ ಭಿನ್ನನಾಗಿದ್ದರೂ ಇಡೀ ಜಗತ್ತನ್ನು ಪಾದಶಬ್ದದಿಂದ ಶ್ರುತಿಯು ಹೇಳುತ್ತದೆ 'ಪ್ರಾಣಿಗಳೆಲ್ಲ ಅವನ ಪಾದವಾಗಿವೆ' (ಋ ವೇ ೧೦ ೯೦ ೩) ಹೀಗೆಯೇ ಈಶ್ವರನ ಜ್ಞಾನಾದಿಗಳು ಅಲೌಕಿಕವಾಗಿದ್ದರೂ ಲೋಕಪ್ರಸಿದ್ಧವಾದ ಆಯಾ ಶಬ್ದಗಳಿಂದ ಹೇಳಲ್ಪಡುತ್ತವೆ

**ಸ್ಥಾನವಿಶೇಷಾತ್ ಪ್ರಕಾಶಾದಿವತ್*** ॥ ೩೪ ॥

೩೪ ಸ್ಥಾನವಿಶೇಷದಿಂದ ಪ್ರಕಾಶಾದಿಗಳಂತೆ (ಆ ವ್ಯಪದೇಶಗಳು ಆಗಬಹುದು)

ಒಂದೇ ಬ್ರಹ್ಮಕ್ಕೆ ಸಂಬಂಧ-ಭೇದ-ವ್ಯಪದೇಶಗಳು ಸ್ಥಾನವಿಶೇಷದ ಅಪೇಕ್ಷೆಯಿಂದ ಹೊಂದುತ್ತವೆ ಬುದ್ಧಿಯೇ ಮೊದಲಾದ ಉಪಾಧಿರೂಪ-ಸ್ಥಾನವಿಶೇಷದ ಸಂಬಂಧದಿಂದ ಹುಟ್ಟಿರುವ ವಿಶೇಷಜ್ಞಾನವು ಉಪಾಧಿಯು ನಾಶವಾದರೆ ನಾಶವಾಗುತ್ತದೆ ಇದನ್ನೇ ಉಪಾಧಿಯ ಅಪೇಕ್ಷೆಯಿಂದ 'ಪರಮಾತ್ಮನೊಂದಿಗೆ ಸಂಬಂಧವು' ಎಂದು ಉಪಚಾರಕ್ಕಾಗಿ ಹೇಳಿದೆಯೇ ಹೊರತು ಪರಮಾತ್ಮನು ಪರಿಮಿತನಾಗಿರುವನೆಂಬ ಅಪೇಕ್ಷೆಯಿಂದಲ್ಲ[3] ಹೀಗೆಯೇ ಬ್ರಹ್ಮಕ್ಕೆ, ಭೇದವ್ಯಪದೇಶವನ್ನು ಉಪಾಧಿಭೇದದ ಅಪೇಕ್ಷೆಯಿಂದ ಉಪಚಾರಕ್ಕಾಗಿ ಹೇಳಿರುತ್ತದೆಯೇ ಹೊರತು, ಬ್ರಹ್ಮದ ಸ್ವರೂಪವೇ ಬೇರೆ ಎಂಬುದರ ಅಪೇಕ್ಷೆ

---

[1] ಪಾದೋಽಸ್ಯ ಸರ್ವಾ ಭೂತಾನಿ ।

[2] ವಾಕ್ಪಾದಃ ಪ್ರಾಣಃ ಪಾದಃ ಚಕ್ಷುಃ ಪಾದೋ ಮನಃ ಪಾದಃ ।

* ಮಧ್ವಭಾಷ್ಯದಲ್ಲಿ ಈ ಸೂತ್ರ ಮುಂದಿನದು ಒಟ್ಟುಗೂಡಿ ಸ್ಥಾನವಿಶೇಷಾಧಿಕರಣ ಎನಿಸಿದೆ

[3] ಬುದ್ಧ್ಯಾದ್ಯುಪಾಧಿಸ್ಥಾನವಿಶೇಷಯೋಗಾದುದ್ಭೂತಸ್ಯ ವಿಶೇಷವಿಜ್ಞಾನಸ್ಯೋಪಾಧ್ಯುಪಶಮೇ ಯ ಉಪಶಮಃ ಸ ಪರಮಾತ್ಮನಾ ಸಂಬಂಧ ಇತ್ಯುಪಾಧ್ಯಪೇಕ್ಷಯೈವೋಪಚರ್ಯತೇ, ನ ಪರಿಮಿತತ್ವಾಪೇಕ್ಷಯಾ (ಸೂ ಭಾ )

ಯಿಂದಲ್ಲ ಇದೆಲ್ಲ ಪ್ರಕಾಶಾದಿಗಳಿಂತೆ ಏಕವಾಗಿರುವ ಸೂರ್ಯಪ್ರಕಾಶಕ್ಕೆ ಉಪಾಧಿ ಸಂಬಂಧದಿಂದ ಹುಟ್ಟಿದ ವಿಶೇಷವು ಉಪಾಧಿಯು ನಾಶವಾಗಲು ಸಂಬಂಧ-ವ್ಯಪದೇಶ ವಾಗುವುದು ಮತ್ತು ಉಪಾಧಿಯ ಭೇದದಿಂದ ಭೇದ-ವ್ಯಪದೇಶವಾಗುವುದು

ವಿ —ವಾಕ್ಕೇ ಮೊದಲಾದ ವಿಶೇಷಸ್ಥಾನಗಳ ಉಪಾಧಿಭೇದದಿಂದ ಅವುಗಳಿಗೆ ಸಂಬಂಧಪಟ್ಟಿರುವ ಪರಬ್ರಹ್ಮನು ಪರಿಮಾಣವನ್ನು ಹೊಂದಿರುವವನಂತೆ ಕಂಡುಬರು ತ್ತಾನೆ, ಪ್ರಕಾಶಾದಿಗಳು ಎಲ್ಲೆಲ್ಲಿಯೂ ಇದ್ದರೂ ಕಿಟಕಿ, ಘಟ ಮೊದಲಾದ ಸ್ಥಾನಭೇದ ಗಳಿಂದ ಪರಿಚ್ಛಿನ್ನವಾಗಿ ಕಂಡುಬರುವಂತೆ

ದ್ವೈ.—'ಸ್ಥಾನಗಳ ವಿಶೇಷಗಳಿಂದ ಭೇದಗಳು ಉತ್ಪನ್ನವಾಗುತ್ತವೆ, ಪ್ರಕಾ ಶಾದಿಗಳ ಹಾಗೆ' ಎಂಬುದು ಸೂತ್ರಾರ್ಥ

ಜೀವಾತ್ಮರ ಆನಂದಾದಿಗಳೆಲ್ಲ ಪರಾನಂದದ ಪ್ರತಿಬಿಂಬಗಳಾಗಿದ್ದರೆ ಬ್ರಹ್ಮಾದಿಗಳ ಆನಂದಗಳಲ್ಲಿ ಭೇದಗಳು ಹೇಗೆ ಆಗುತ್ತವೆ?—ಎಂಬುದಕ್ಕೆ ಈ ಸೂತ್ರವು ಉತ್ತರ ವಾಗಿದೆ. ಕನ್ನಡಿಯೇ ಮೊದಲಾದ ಸ್ಥಾನವಿಶೇಷಗಳಿಂದ ಸೂರ್ಯನ ಪ್ರತಿಬಿಂಬದಲ್ಲಿ ವೈಚಿತ್ರ್ಯವಾಗುವಂತೆ ಬ್ರಹ್ಮಾದಿಗಳ ಗುಣವಿಶೇಷಗಳಿಂದ ಅವರಲ್ಲಿ ಪ್ರತಿಬಿಂಬಿತವಾದ ಪರಮಾತ್ಮನ ಆನಂದಾದಿಗಳು ವಿಶೇಷವನ್ನು ಹೊಂದುತ್ತವೆ [1]

## ಉಪಪತ್ತೇಶ್ಚ ॥ ೩೫ ॥

೩೫　ಮತ್ತು (ಇಂಥಹ ಸಂಬಂಧವು) ಹೊಂದುವುದರಿಂದಲೂ (ಹೀಗೆ)

ಇಲ್ಲಿ ಇಂಥ ಸಂಬಂಧವು ಹೊಂದುತ್ತದೆಯೇ ಹೊರತು ಬೇರೆ ಬಗೆಯ ಸಂಬಂಧವು ಹೊಂದುವುದಿಲ್ಲ, ಏಕೆಂದರೆ 'ತನ್ನಲ್ಲಿಯೇ ಲಯವಾಗುತ್ತಾನೆ'[2] (ಛಾಂ ಉ ೪ ೮ ೧) ಎಂಬ ಶ್ರುತಿಯು ಇದನ್ನು ಸ್ವರೂಪಸಂಬಂಧವೆಂದೇ ತಿಳಿಸುತ್ತದೆ ಸ್ವರೂಪವು—ಜನರು ನಗರವನ್ನು ಬಿಡುವಂತೆ—ಎಂದಿಗೂ ಬಿಟ್ಟುಹೋಗುವುದಿಲ್ಲ, ಆದರೆ ಉಪಾಧಿಯಿಂದ ಸ್ವರೂಪವು ಮುಚ್ಚಿಹೋಗುತ್ತದೆ ಎಂಬುದೇ ಹೊಂದುತ್ತದೆ ಹೀಗೆಯೇ ಭೇದವೂ ಕೂಡ ಬೇರೆಯೇ ಬಗೆಯಿಂದ ಆಗುವ ಹಾಗಿಲ್ಲ, ಏಕೆಂದರೆ ಬಹುಶ್ರುತಿಗಳಲ್ಲಿ ಪ್ರಸಿದ್ಧ ವಾಗಿರುವ ಅದ್ವಿತೀಯ ಈಶ್ವರತ್ವಕ್ಕೆ ವಿರೋಧವಾಗಿರುತ್ತದೆ ಆದುದರಿಂದಲೇ ಶ್ರುತಿಯು 'ಪುರುಷನ ಹೊರಗಿರುವ ಆಕಾಶವೇ ಪುರುಷನ ಒಳಗಿರುವ ಆಕಾಶ ಪುರುಷನ ಒಳಗಿರುವ ಆಕಾಶವೇ ಹೃದಯದಲ್ಲಿರುವ ಆಕಾಶ' (ಛಾಂ ಉ ೩ ೧೨ ೭ ೮) ಎಂದು ಒಂದೇ ಆಕಾಶಕ್ಕೆ ಸ್ಥಾನದಿಂದಾದ ಭೇದವ್ಯಪದೇಶವನ್ನು ಉಪಪಾದಿಸುತ್ತದೆ

---

[1] ಯಥಾಽದಿತ್ಯಸ್ಯ ದರ್ಪಣಾದಿಸ್ಥಾನವಿಶೇಷಾತ್ ಪ್ರತಿಬಿಂಬವಿಶೇಷ ಏವಮಾನಂದಾ- ದೇರಪಿ (ಮ ಭಾ)

[2] ಸ್ವಮಪೀತೋ ಭವತಿ ।

ವಿ.—ಅಮೃತಸ್ಯೈಷ ಸೇತುಃ (ಮುಂ. ಉ. ೨. ೨. ೫) ಎಂಬ ಶ್ರುತಿಯು ಪ್ರಾಪ್ಯ-ಪ್ರಾಪಕ-ಸಂಬಂಧವನ್ನು ಹೇಳುವುದರಿಂದ ಪ್ರಾಪಕಕ್ಕಿಂತ ಬೇರೆಯಾದ ಪ್ರಾಪ್ಯ ವೊಂದಿದೆ ಎಂಬುದು ಸರಿಯಲ್ಲ ; ಏಕೆಂದರೆ ಪ್ರಾಪ್ಯನಾದ ಪರಮಪುರುಷನೇ ಸ್ವಪ್ರಾಪ್ತಿಗೆ ಉಪಾಯನಾಗಿರುತ್ತಾನೆ 'ಈ ಆತ್ಮನು ಪ್ರವಚನಾದಿಗಳಿಂದ ಲಭ್ಯನಲ್ಲ ; ಪರಮಾತ್ಮನು ಯಾವನನ್ನು ಆರಿಸುತ್ತಾನೆಯೊ, ಆಯ್ಕೆಗೊಂಡ ಅವನಿಂದಲೇ ಪರಮಾತ್ಮನು ಲಭ್ಯನು' (ಕ ಉ. ೧. ೨. ೨೩) ಎಂದು ಶ್ರುತಿಯು ಹೇಳುತ್ತದೆ.

ದ್ವೈ.—'ವಿಷ್ಣುವಿನ ಐಶ್ವರ್ಯದಿಂದಲೂ ಭಕ್ತ್ಯಾದಿಗಳ ಅನಾದಿಭೇದದಿಂದಲೂ ಬ್ರಹ್ಮಾದಿಗಳಲ್ಲಿರುವ ಆನಂದಾದಿಗಳ ವೈಚಿತ್ರ್ಯವು ಉಪಪನ್ನವಾಗುತ್ತದೆ' ಎಂದು ಪದ್ಮ ಪುರಾಣವು ಹೇಳುತ್ತದೆ [1]

## ತಥಾನ್ಯಪ್ರತಿಷೇಧಾತ್* ॥ ೩೬ ॥

೩೬. ಹಾಗೆಯೇ ಮತ್ತೊಂದನ್ನು ಪ್ರತಿಷೇಧಿಸಿರುವುದರಿಂದಲೂ (ಬ್ರಹ್ಮಕ್ಕಿಂತ ಭಿನ್ನವಾದ ವಸ್ತುವಿಲ್ಲ).

ಅನೇಕಶ್ರುತಿಗಳು ಬ್ರಹ್ಮಕ್ಕಿಂತ ಭಿನ್ನವಾದ ವಸ್ತುವಿದೆ ಎಂಬುದನ್ನು ನಿಷೇಧಿಸುತ್ತವೆ. 'ಅವನೇ ಕೆಳಗಿರುವನು. ನಾನೇ ಕೆಳಗಿರುವೆನು'[2] (ಛಾಂ. ಉ. ೭. ೨೫. ೧), 'ಯಾವನು ಎಲ್ಲವನ್ನೂ ಆತ್ಮನಿಗಿಂತ ಭಿನ್ನವೆಂದು ಅರಿಯುತ್ತಾನೆಯೋ ಅವನನ್ನು ಎಲ್ಲವೂ ನಿರಾಕರಿಸುವುವು'[3] (ಬೃ ಉ. ೨. ೪. ೬), 'ಆತ್ಮನೇ ಇದೆಲ್ಲವೂ ಆಗಿರುವನು'[4] (ಛಾಂ. ಉ. ೭. ೨೫. ೨), 'ಇಲ್ಲಿ ನಾನಾತ್ವವು ಸ್ವಲ್ಪವೂ ಇಲ್ಲ'[5] (ಬೃ. ಉ ೪. ೪. ೧೯), 'ಯಾವನಿಗಿಂತ ಉತ್ಕೃಷ್ಟವಾದುದಾಗಲೀ ಅನ್ಯವಾದುದಾಗಲೀ ಇಲ್ಲವೋ'[6] (ಶ್ವೇ. ಉ. ೩. ೯) ಇತ್ಯಾದಿ. ಆತ್ಮನು ಎಲ್ಲದರಲ್ಲಿಯೂ ಇರುವನು ಎಂಬ ಸರ್ವಾಂತರಶ್ರುತಿ ಇರುವುದರಿಂದ ಪರಮಾತ್ಮನಿಗಿಂತ ಅನ್ಯನಾದ ಅಂತರಾತ್ಮನು ಇಲ್ಲವೆಂದು ಖಂಡಿತವಾಗಿ ಹೇಳಿದಂತಾಗಿದೆ

---

[1] ಐಶ್ವರ್ಯಾತ್ ಪರಮಾದ್ವಿಷ್ಣೋರ್ಭಕ್ತ್ಯಾದೀನಾಮನಾದಿತಃ । ಬ್ರಹ್ಮಾದೀನಾಂ ಸೂಪಪನ್ನಾ ಹ್ಯಾನಂದಾದೇರ್ವಿಚಿತ್ರತೇತಿ ಹಿ ಪಾದ್ಮೇ (ಮ. ಭಾ ).

* ಇದು ಮಧ್ವಭಾಷ್ಯದಲ್ಲಿ ಪ್ರತಿಷೇಧಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

[2] ಸ ಏವಾಧಸ್ತಾತ್ . . . ಅಹಮೇವಾಧಸ್ತಾತ್ ।

[3] ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದ ।

[4] ಆತ್ಮೈವೇದಂ ಸರ್ವಮ್ ।

[5] ನೇಹ ನಾನಾಸ್ತಿ ಕಿಂಚನ ।

[6] ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್ ।

ದ್ವಿ —'ಯಾವುದು ಅದಕ್ಕಿಂತ ಉತ್ಕೃಷ್ಟತರವಾದುದೊ'[1] (ಶ್ವೇ. ಉ. ೩. ೧೦) ಎಂಬೀ ರೂಪದ ಶ್ರುತಿಗಳು ಪರಮಾತ್ಮನಿಗಿಂತ ಶ್ರೇಷ್ಠವಾದ ವಸ್ತುವಿದೆ ಎಂಬುದನ್ನು ತಿಳಿಸುವುದಿಲ್ಲ ; ಏಕೆಂದರೆ ಅದೇ ಶ್ರುತಿಯು (ಶ್ವೇ. ಉ. ೩. ೯) ಪರಮಾತ್ಮನಿಗಿಂತ ಉತ್ಕೃಷ್ಟವಾದುದಾಗಲಿ ಅಣುತರವಾದುದಾಗಲಿ ಮಹತ್ತರವಾದುದಾಗಲಿ ಇಲ್ಲವೆಂದು ತಿಳಿಸುತ್ತದೆ. ಶ್ವೇತಾಶ್ವತರಶ್ರುತಿಯ (೩. ೧೦) ಅಭಿಪ್ರಾಯವು ಹೀಗಿದೆ : ಅತ್ಯಂತ ಶ್ರೇಷ್ಠನಾದ ಪರಮಾತ್ಮನು ಕರ್ಮಕೃತರೂಪವಿಲ್ಲದವನೂ ಕ್ಲೇಶರಹಿತನೂ ಆಗಿರುವುದರಿಂದ ಅವನನ್ನು ಉಪಾಸಿಸುವವರು ಅಮೃತರಾಗುತ್ತಾರೆ.

**ದ್ವೈತ** —'ಧ್ಯಾನದಲ್ಲಿ ನೋಡಿದ್ದಕ್ಕಿಂತ ಪರಬ್ರಹ್ಮನು ಅನ್ಯನು ; ಏಕೆಂದರೆ ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ನಿಷೇಧಿಸಿದೆ' ಎಂಬುದು ಸೂತ್ರಾರ್ಥ

ಜೀವಾದಿಗಳ ಆನಂದಾದಿಗಳಿಗಿಂತ ಪರಬ್ರಹ್ಮನ ಆನಂದಾದಿಗಳು ಭಿನ್ನವಾಗಿರುವಂತೆ ಉಪಾಸನಾಕೃತವಾದ ವಸ್ತುವಿಗಿಂತ ಭಿನ್ನನಾಗಿರುತ್ತಾನೆ[2] 'ಯಾವನನ್ನು ಮನಸ್ಸಿನಿಂದ ಮನನ ಮಾಡಲು ಆಗುವುದಿಲ್ಲವೋ, ಯಾವನಿಂದ ಮನಸ್ಸು ತಿಳಿಯಲ್ಪಟ್ಟಿದೆಯೆಂದು ಹೇಳುವರೋ ಅವನನ್ನೇ ಬ್ರಹ್ಮವೆಂದು ತಿಳಿ ; ಉಪಾಸನೆಯಲ್ಲಿ ಗೋಚರವಾದ ಇದಲ್ಲ'[3] (ಕೇ ಉ. ೧. ೬) ಎಂಬುದು ಶ್ರುತಿಯ ಪ್ರತಿಷೇಧ.

**ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ*	॥ ೩೭ ॥**

೩೭. ಇದರಿಂದ (ಬ್ರಹ್ಮದ) ಸರ್ವಗತತ್ವವೂ ; ಏಕೆಂದರೆ (ಬ್ರಹ್ಮದ) ವ್ಯಾಪ್ತಿಯನ್ನು ತಿಳಿಸುವ ಶ್ರುತಿಗಳಿವೆ.

ಬ್ರಹ್ಮಕ್ಕೆ ಸೇತುವೇ ಮೊದಲಾದ ವ್ಯಪದೇಶಗಳನ್ನು ನಿರಾಕರಿಸಿರುವುದರಿಂದಲೂ ಅನ್ಯಪ್ರತಿಷೇಧದಿಂದಲೂ ಆತ್ಮನ ಸರ್ವಗತತ್ವವು ಸಿದ್ಧವಾಗುತ್ತದೆ. ಅನ್ಯಥಾ ಅದು ಸಿದ್ಧಿಸಲಾರದು. ಸೇತುವೇ ಮೊದಲಾದ ವ್ಯಪದೇಶಗಳನ್ನು ಮುಖ್ಯಾರ್ಥದಲ್ಲಿ ಅಂಗೀಕರಿಸಿದರೆ ಆತ್ಮನಿಗೆ ಪರಿಚ್ಛೇದವು ಪ್ರಸಕ್ತವಾಗುವುದು ; ಏಕೆಂದರೆ ಸೇತುವೇ ಮೊದಲಾದುವುಗಳು ಪರಿಚ್ಛಿನ್ನವಾಗಿರುತ್ತವೆ. ಹೀಗೆ ಅನ್ಯ ಪ್ರತಿಷೇಧವಿಲ್ಲದಿದ್ದರೂ ಒಂದು ವಸ್ತುವು ಇನ್ನೊಂದು ವಸ್ತುವಿನಿಂದ ಭಿನ್ನವಾಗಿರುವುದರಿಂದ ಆತ್ಮನಿಗೆ ಪರಿಚ್ಛೇದವೇ ಪ್ರಸಕ್ತವಾಗು

---

1 ತತೋ ಯದುತ್ತರತರಮ್ ।

2 ಯಥಾ ಜೀವಾನಂದಾದೇರನ್ಯದ್ಬ್ರಹ್ಮ ತಥೋಪಾಸಾಕೃತಾದಪಿ (ಮ. ಭಾ.).

3 ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥

* ಇದು ಮಧ್ವಭಾಷ್ಯದಲ್ಲಿ ಸರ್ವಗತತ್ವಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

ವುದು. ಆತ್ಮನ ಸರ್ವಗತತ್ವವು ಆಯಾಮಶಬ್ದಾದಿಗಳಿಂದ[1] ತಿಳಿದುಬರುತ್ತದೆ: 'ಆ ಆಕಾಶವು ಎಷ್ಟಿರುವುದೋ ಹೃದಯದಲ್ಲಿರುವ ಈ ಆಕಾಶವೂ ಅಷ್ಟೇ ಇರುವುದು'[2] (ಛಾಂ ಉ. ೮. ೧. ೩), 'ದ್ಯುಲೋಕಕ್ಕಿಂತಲೂ ದೊಡ್ಡವನು'[3] (ಛಾಂ ೩. ೧೪. ೩), 'ಈ ಆತ್ಮನು ನಿತ್ಯನು, ಸರ್ವಗತನು, ಸ್ಥಿರನು, ಅಚಲನು ಮತ್ತು ಸನಾತನನು'[4] (ಗೀತಾ ೨. ೨೪).

**ವಿ.**—ಪರಬ್ರಹ್ಮನೇ ಎಲ್ಲವನ್ನೂ ವ್ಯಾಪಿಸಿರುವನು ಎಂದು ಅನೇಕ ಶ್ರುತಿಗಳು ಹೇಳುತ್ತವೆ: 'ಅವನಿಂದ ಇದೆಲ್ಲವೂ ವ್ಯಾಪ್ತವಾಗಿದೆ'[5] (ಶ್ವೇ. ಉ. ೩. ೯), 'ಈ ಜಗತ್ತಿನಲ್ಲಿ ಕಂಡುಬರುವುದೆಲ್ಲ ಕೇಳಿಬರುವುದೆಲ್ಲ ಒಳಗೂ ಹೊರಗೂ ನಾರಾಯಣನಿಂದ ವ್ಯಾಪ್ತವಾಗಿದೆ'[6] (ಮ. ನಾ. ಉ. ೧೩. ೫) ಇತ್ಯಾದಿ ಆದುದರಿಂದ ಪರಬ್ರಹ್ಮನು ಸರ್ವಕ್ಕಿಂತಲೂ ಶ್ರೇಷ್ಠನು ಎಂಬುದು ಸಿದ್ಧವಾಗುತ್ತದೆ

**ದ್ವೈ.**—'ಅವನಿಂದಲೇ ಸೃಷ್ಟ್ಯಾದಿಗಳು ಸರ್ವದೇಶಕಾಲಗಳಲ್ಲಿ ಪ್ರವರ್ತಿಸುತ್ತವೆ; ಏಕೆಂದರೆ ಇದಕ್ಕಾಗಿಯೇ ಇವನನ್ನು ಶ್ರುತಿಗಳು ಸರ್ವಗತನೆಂದೂ ಪೂಯಾಮಯನೆಂದೂ ಹೇಳುತ್ತವೆ' ಎಂಬುದು ಸೂತ್ರಾರ್ಥ. **ಏಷ ಸರ್ವಗತಃ** ಎಂಬ ಭಾಲ್ಲವೇಯ-ಶ್ರುತಿಯು ಅವನ ಸರ್ವಗತತ್ವವನ್ನೂ **ಸರ್ವತ್ರ ಸರ್ವತೋಽಸ್ಮಾತ್ ಸರ್ವದಾ ಸರ್ವವಸ್ತುಷು** ಎಂಬ ಚತುರ್ವೇದಶಿಖೆಯು ಅವನ ಪೂಯಾಮಯತ್ವವನ್ನೂ ತಿಳಿಸುತ್ತವೆ.

---

1 ಆಯಾಮಶಬ್ದವು ವ್ಯಾಪ್ತಿಯನ್ನು ತಿಳಿಸುತ್ತದೆ.

2 ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ ।

3 ಜ್ಯಾಯಾನ್ ದಿವಃ ।

4 ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ।

5 ತೇನೇದಂ ಪೂರ್ಣಂ ಪುರುಷೇಣ ಸರ್ವಮ್ ।

6 ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

# ೮. ಫಲಾಧಿಕರಣ*

(ಸೂ ೩೮–೪೧)

## ಫಲಮತ ಉಪಪತ್ತೇಃ ॥ ೩೮ ॥

೩೮ ಇವನಿಂದ ಫಲವು, ಏಕೆಂದರೆ ಹೊಂದುತ್ತದೆ

ಅದೇ ಬ್ರಹ್ಮಕ್ಕೆ ವ್ಯಾವಹಾರಿಕವಾದ ಆಳುವವನೂ, ಆಳಲ್ಪಟ್ಟವು ಎಂಬ ವಿಭಾಗ ವಿರುವ ಅವಸ್ಥೆಯಲ್ಲಿ ಇನ್ನೊಂದು ಸ್ವಭಾವವನ್ನು ಈಗ ಹೇಳಲಾಗುತ್ತದೆ ಇಷ್ಟ ಅನಿಷ್ಟ ಮಿಶ್ರ—ಎಂಬ ರೂಪದ ಕರ್ಮಫಲವು ಸಂಸಾರದಲ್ಲಿ ಜೀವರಿಗೆ ಮೂರು ಬಗೆಯಾಗಿರುವು ದೆಂದು ಪ್ರಸಿದ್ಧವಾಗಿದೆ ಇದು ಕರ್ಮದಿಂದ ಆಗುತ್ತದೆಯೊ ಅಥವಾ ಈಶ್ವರನಿಂದ ಆಗು ತ್ತದೆಯೊ ಎಂಬುದನ್ನು ವಿಚಾರಿಸಲಾಗುತ್ತದೆ

ಫಲವು ಈಶ್ವರನಿಂದಲೇ ಆಗುತ್ತದೆ ಎಂಬುದು ಸೂತ್ರಕಾರರ ಅಭಿಪ್ರಾಯ, ಏಕೆಂದರೆ ಸರ್ವಾಧ್ಯಕ್ಷನಾದ ಈಶ್ವರನು ವಿಚಿತ್ರವಾದ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವವನಾಗಿರುವುದರಿಂದಲೂ, ದೇಶಕಾಲಗಳ ವಿಶೇಷಗಳನ್ನು ಬಲ್ಲವನಾದುದರಿಂದಲೂ ಕರ್ಮಿಗಳ ಕರ್ಮಕ್ಕೆ ಅನುರೂಪವಾದ ಫಲಗಳನ್ನು ಕೊಡುತ್ತಾನೆ ಪ್ರತಿಯೊಂದು ಕ್ಷಣ ದಲ್ಲಿಯೂ ನಾಶವಾಗುವ ಕರ್ಮವು ಕಾಲಾಂತರದಲ್ಲಿ ಫಲವನ್ನು ಕೊಡುತ್ತದೆಯೆಂಬುದು ಹೊಂದುವುದಿಲ್ಲ, ಏಕೆಂದರೆ ಅಭಾವದಿಂದ ಭಾವವು ಹುಟ್ಟುವುದಿಲ್ಲ ಕರ್ಮವು ನಾಶ ವಾಗುತ್ತಿದ್ದರೂ ತನ್ನ ಕಾಲದಲ್ಲಿ ತನಗೆ ಅನುರೂಪವಾದ ಫಲವನ್ನು ಹುಟ್ಟಿಸಿ ನಾಶ ವಾಗುತ್ತದೆ ಮತ್ತು ಆ ಫಲವನ್ನು ಕಾಲಾಂತರದಲ್ಲಿ ಭೋಕ್ತೃವು ಅನುಭವಿಸುತ್ತಾನೆ— ಎಂದೂ ಹೇಳಲಾಗುವುದಿಲ್ಲ, ಏಕೆಂದರೆ ಭೋಕ್ತೃವು ಅದನ್ನು ಅನುಭವಿಸುವುದಕ್ಕೆ ಮೊದಲು ಅದು ಫಲವೇ ಆಗುವುದಿಲ್ಲ ಕರ್ಮದ ಕಾರ್ಯವಾದ ಅಪೂರ್ವದಿಂದ ಫಲವು ಉತ್ಪನ್ನವಾಗಬಹುದು—ಎಂಬುದೂ ಹೊಂದುವುದಿಲ್ಲ; ಏಕೆಂದರೆ ಅಚೇತನವಾದ ಅಪೂರ್ವವು ಚೇತನನಾದವನು ಪ್ರವರ್ತಿಸಿದ ಹೊರತು ಪ್ರವರ್ತಿಸುವುದಿಲ್ಲ ಮತ್ತು ಅದರ ಅಸ್ತಿತ್ವದಲ್ಲಿಯೂ ಯಾವ ಪ್ರಮಾಣವೂ ಇಲ್ಲ ಅದು ಇರುವುದಕ್ಕ ಅರ್ಥಾಪತ್ತಿಯೂ[1] ಪ್ರಮಾಣವಾಗಲಾರದು, ಈಶ್ವರಸಿದ್ಧಿಯಿಂದ ಅರ್ಥಾಪತ್ತಿಯು ಹೋಗುತ್ತದೆ

ವಿ —ಈಗ ಉಪಾಸನೆಯನ್ನು ವಿಚಾರಿಸಲು ಪ್ರಾರಂಭಿಸಿ ಉಪಾಸಕನು ಉಪಾಸ ನೆಯ ಫಲವಾದ ಮೋಕ್ಷವನ್ನು ಹೊಂದುತ್ತಾನೆಂದು ಸೂತ್ರಕಾರರು ಹೇಳುತ್ತಾರೆ ಈ ಫಲವು ಪರಮಪುರುಷನಿಂದಲೇ ಉತ್ಪನ್ನವಾಗುತ್ತದೆ, ಏಕೆಂದರೆ ಸರ್ವಜ್ಞನೂ ಸರ್ವ

---

* ಇದನ್ನು ಮಧ್ವಭಾಷ್ಯದಲ್ಲಿ ಫಲದಾನಾಧಿಕರಣ ಎಂದು ಕರೆದಿದೆ

[1] ಕರ್ಮವು ಕ್ಷಯವಾದುದರಿಂದ ಒಂದು ಸ್ಥಾಯಿಯಾದ ಕಾರಣವಿಲ್ಲದೆ ಫಲವಾಗ ಲಾರದು ಎಂಬುದು ಇಲ್ಲಿ ಅರ್ಥಾಪತ್ತಿ

ಶಕ್ತನೂ ಮಹೋದಾರಿಯೂ ಆದ ಪರಮಪುರುಷನು ಐಹಿಕಾಮುಷ್ಮಿಕ-ಭೋಗಸಮೂಹ ವನ್ನೂ ಸ್ವಸ್ವರೂಪಪ್ರಾಪ್ತಿರೂಪವಾದ ಮೋಕ್ಷವನ್ನೂ ಕೊಡಲು ಸಮರ್ಥನಾಗುತ್ತಾನೆ ಕ್ಷಣಿಕವೂ ಅಚೇತನವೂ ಆದ ಕರ್ಮವು ಕಾಲಾಂತರದಲ್ಲಿ ಫಲವನ್ನು ಕೊಡಲಾರದು.

**ದ್ವೈ.**—ಈಶ್ವರನಿಂದಲೇ ಫಲವಾಗುತ್ತದೆ ;[1] ಏಕೆಂದರೆ ಅಚೇತನವಾದ ಕರ್ಮಕ್ಕೆ ಸ್ವತಃ ಪ್ರವೃತ್ತಿಯು ಹೊಂದುವುದಿಲ್ಲ

**ಶ್ರುತತ್ವಾಚ್ಚ ॥ ೩೯ ॥**

೩೯ ಶ್ರುತಿಯು ಹೇಳುವುದರಿಂದಲೂ (ಈಶ್ವರನು ಫಲದಾತೃವು)

ಉಪಪತ್ತಿಮಾತ್ರವಲ್ಲದೆ ಈಶ್ವರನೇ ಫಲಕ್ಕೆ ಹೇತುವೆಂದು ಶ್ರುತಿಯೂ ಹೇಳುತ್ತದೆ; 'ಮಹಾಂತನೂ ಜನ್ಮರಹಿತನೂ ಆದ ಆ ಈ ಆತ್ಮನು ಅನ್ನಾದನು ಮತ್ತು ವಸು ದಾನಿಯು'[2] (ಬೃ. ಉ. ೪. ೪. ೨೪)

**ವಿ.**—ಭೋಗಾಪವರ್ಗರೂಪವಾದ ಫಲವನ್ನು ಕೊಡುತ್ತಾನೆ ಎಂದು ಶ್ರುತಿಯು ಹೇಳುತ್ತದೆ : 'ಮಹಾಂತನೂ ಜನ್ಮರಹಿತನೂ ಆದ ಆ ಈ ಆತ್ಮನು ಅನ್ನಾದನು ಮತ್ತು ವಾಸುದಾನಿಯು' (ಬೃ. ಉ. ೪ ೪. ೨೪) ಮತ್ತು 'ಇವನೇ ಸರ್ವಚೇತನರನ್ನೂ ಆನಂದ ಗೊಳಿಸುವನು'[3] (ತೈ ಉ. ೨ ೭).

**ದ್ವೈ.**—'ಪರಬ್ರಹ್ಮನು ವಿಜ್ಞಾನವೂ ಆನಂದವೂ ಆಗಿರುತ್ತಾನೆ; ಅವನು ಉಪಾಸಕನಿಗೆ ಕರ್ಮಫಲವನ್ನು ಕೊಡುತ್ತಾನೆ'[4] (ಬೃ. ಉ. ೩. ೯. ೨೮) ಎಂದು ಶ್ರುತಿಯು ಫಲದಾತೃತ್ವವನ್ನು ಈಶ್ವರನಿಗೆ ಪ್ರತಿಪಾದಿಸುತ್ತದೆ.

**ಧರ್ಮಂ ಜೈಮಿನಿರತ ಏವ* ॥ ೪೦ ॥**

೪೦. ಆದುದರಿಂದಲೇ ಧರ್ಮವು (ಫಲವನ್ನು ಕೊಡುತ್ತದೆಂದು) ಜೈಮಿನಿಯು (ಅಭಿಪ್ರಾಯಪಡುತ್ತಾನೆ)

ಧರ್ಮವೇ ಫಲವನ್ನು ಕೊಡತಕ್ಕದ್ದೆಂದು ಜೈಮಿನಿ ಆಚಾರ್ಯನು ಅಭಿಪ್ರಾಯ ಪಡುತ್ತಾನೆ ; ಏಕೆಂದರೆ 'ಸ್ವರ್ಗವನ್ನು ಬಯಸುವವನು ಯಾಗಮಾಡತಕ್ಕದ್ದು'[5] ಎಂದು ಶಾಸ್ತ್ರವು ವಿಧಿಸಿದೆ ಈ ವಿಧಿ-ಶ್ರುತಿಗೆ ವಿಷಯವನ್ನು ಒಪ್ಪಿಕೊಂಡಿರುವುದರಿಂದ ಯಾಗವು

---

1 ಅತ ಏವೇಶ್ವರಾತ್ ಫಲಂ ಭವತಿ (ಮ. ಭಾ.).

2 ಸ ವಾ ಏಷ ಮಹಾನಜ ಆತ್ಮಾನ್ನಾದೋ ವಸುದಾನಃ ।

3 ಏಷ ಹ್ಯೇವಾನಂದಯಾತಿ ।

4 ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ।

* ಇಲ್ಲಿ ಜೈಮಿನಿಯ ಅಭಿಪ್ರಾಯವು ಪೂರ್ವಪಕ್ಷವಾಗಿದೆ.

5 ಸ್ವರ್ಗಕಾಮೋ ಯಜೇತ ।

ಸ್ವರ್ಗವನ್ನು ಉಂಟುಮಾಡುತ್ತದೆ ಹೀಗಾಗದಿದ್ದರೆ ಯಾಗಕ್ಕೆ ಅನುಷ್ಠಾತೃವು ಇರುವುದಿಲ್ಲ ಮತ್ತು ವಿಧಿಗಳು ವ್ಯರ್ಥವಾಗುವುವು ಪ್ರತಿಕ್ಷಣದಲ್ಲಿಯೂ ನಾಶವಾಗುತ್ತಿರುವ ಕರ್ಮಕ್ಕೆ ಕಾಲಾಂತರದಲ್ಲಿ ಫಲವುಂಟಾಗುವುದು ಹೊಂದುವುದಿಲ್ಲ—ಎಂಬುದನ್ನು ತ್ಯಜಿಸಿದ್ದರೂ ದೋಷವಿಲ್ಲ, ಏಕೆಂದರೆ ಶ್ರುತಿಯು ಪ್ರಮಾಣವಾದರೆ ಶ್ರುತವಾಗಿರುವ ಈ ಕರ್ಮ-ಫಲ-ಸಂಬಂಧವು ಹೊಂದುವಂತೆ ಕಲ್ಪಿಸಿಕೊಳ್ಳಬೇಕು ಆದುದರಿಂದ ಸೂಕ್ಷ್ಮವಾದ ಯಾವುದೋ ಒಂದು ಉತ್ತರಾವಸ್ಥೆಯೊ ಅಥವಾ ಫಲದ ಪೂರ್ವಾವಸ್ಥೆಯೊ ಆಗಿರುವ ಅಪೂರ್ವವು ಇರಬೇಕೆಂದು ತರ್ಕಿಸುತ್ತೇವೆ ಈಶ್ವರನು ಫಲದಾತೃವೆಂಬುದು ಹೊಂದುವುದಿಲ್ಲ, ಏಕೆಂದರೆ ಒಂದೇ ವಿಧವಾದ ಕಾರಣವು ನಾನಾ ಬಗೆಯಾದ ಕಾರ್ಯಗಳನ್ನುಂಟುಮಾಡಲಾರದು ಇದಲ್ಲದೆ ಈಶ್ವರನಿಗೆ ವೈಷಮ್ಯ-ನೈರ್ಘೃಣ್ಯಗಳು ಪ್ರಸಕ್ತವಾಗುತ್ತವೆ ಆದುದರಿಂದ ಧರ್ಮದಿಂದಲೇ ಎಂದರೆ ಅಪೂರ್ವದ್ವಾರದಿಂದಲೇ ಫಲವಾಗುತ್ತದೆ

ವಿ.—ಉಪಪತ್ತಿಯಿಂದಲೂ ಶಾಸ್ತ್ರದಿಂದಲೂ ಯಾಗ ದಾನ-ಹೋಮ-ಉಪಾಸನಾರೂಪವಾದ ಧರ್ಮವೇ ಫಲವನ್ನು ಕೊಡುತ್ತದೆಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ ಆದುದರಿಂದ ಅಪೂರ್ವದ್ವಾರದಿಂದಲೇ ಫಲವುಂಟಾಗುತ್ತದೆ

ದ್ವೈ.—ಯಾವ ಕರ್ಮವು ಫಲವನ್ನು ಕೊಡುತ್ತದೆಯೋ ಅದು ಈಶ್ವರನಿಂದಲೇ ಆಗುತ್ತದೆ,[1] 'ಈಶ್ವರನೇ ಜೀವನು ಸಾಧುಕರ್ಮವನ್ನು ಮಾಡುವಂತೆ ಮಾಡುತ್ತಾನೆ' (ಕೌ ಉ ೩ ೮) ಎಂಬ ಶ್ರುತಿಯಿರುವುದರಿಂದ ಜೈಮಿನಿಯು ಅಭಿಪ್ರಾಯಪಡುತ್ತಾನೆ

**ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ॥ ೪೧ ॥**

೪೧ ಆದರೆ ಹಿಂದೆ (ಹೇಳಿರುವ ಈಶ್ವರನೇ ಫಲದಾತೃವೆಂದು ಅಭಿಪ್ರಾಯಪಡುತ್ತಾನೆ), ಏಕೆಂದರೆ (ಅವನನ್ನೇ ಕರ್ಮಫಲದ) ಹೇತುವೆಂದು ಹೇಳಿದೆ

ಸೂತ್ರದಲ್ಲಿರುವ ತು-ಶಬ್ದವು ಕೇವಲ ಕರ್ಮದಿಂದಲೊ ಅಥವಾ ಅಪೂರ್ವದಿಂದಲೊ ಫಲವಾಗುವುದೆಂಬ ಪಕ್ಷವನ್ನು ನಿರಾಕರಿಸುತ್ತದೆ ಕರ್ಮಫಲಕ್ಕೆ ತಕ್ಕಂತೆ ಅಥವಾ ಕರ್ಮದಿಂದಾಗುವ ಅಪೂರ್ವಕ್ಕನುಸಾರವಾಗಿ ಈಶ್ವರನೇ ಫಲವನ್ನು ಕೊಡುತ್ತಾನೆ ಎಂಬುದು ಸಿದ್ಧಾಂತ[2] ಈಶ್ವರನು ಧರ್ಮಾಧರ್ಮಗಳಿಗೆ ಕಾರಣನೆಂದೂ ಫಲದಾತೃವೆಂದೂ ಶ್ರುತಿಯು ಹೇಳುತ್ತದೆ 'ಯಾವನನ್ನು ಈ ಲೋಕಗಳಿಂದ ಮೇಲಕ್ಕೆತ್ತಲು ಇಚ್ಛಿಸುವನೊ ಅವನನ್ನು ಸಾಧುಕರ್ಮವನ್ನು ಮಾಡುವಂತೆ ಮಾಡುತ್ತಾನೆ,

---

1 ಯತಃ ಫಲಂ ತದೇವ ಕರ್ಮೇಶ್ವರಾದ್ಭವತಿ (ಮ ಭಾ)

2 ಕರ್ಮಾಪೇಕ್ಷಾದಪೂರ್ವಾಪೇಕ್ಷಾದ್ವಾ ಯಥಾ ತಥಾಸ್ತ್ವೀಶ್ವರಾತ್ ಫಲಮಿತಿ ಸಿದ್ಧಾಂತಃ (ಸೂ ಭಾ)

ಯಾವನನ್ನು ಕೆಳಕ್ಕಿಳಿಸಲು ಇಚ್ಛಿಸುವನೊ ಅವನನ್ನು ಇವನೇ ಅಸಾಧುಕರ್ಮವನ್ನು ಮಾಡುವಂತೆ ಮಾಡುತ್ತಾನೆ'[1] (ಕೌ. ಉ. ೩. ೯) ಜೀವನು ಮಾಡುವ ಪ್ರಯತ್ನದ ಅಪೇಕ್ಷೆಯ ಪ್ರಕಾರ ಈಶ್ವರನು ಫಲವನ್ನು ಕೊಡುವುದರಿಂದ ಒಂದೇ ವಿಧವಾದ ಕಾರಣವು ನಾನಾ ಬಗೆಯಾದ ಕಾರ್ಯಗಳನ್ನುಂಟುಮಾಡಲಾರದು ಎಂಬ ದೋಷವೂ ಬರುವುದಿಲ್ಲ.

**ವಿ.**—ಪರಮಪುರುಷನೇ ಫಲವನ್ನು ಕೊಡುತ್ತಾನೆ ಎಂದು ಭಗವಾನ್ ಬಾದರಾಯಣನು ಅಭಿಪ್ರಾಯಪಡುತ್ತಾನೆ ; ಏಕೆಂದರೆ ಯಾಗಾದಿಗಳಲ್ಲಿ ಆರಾಧ್ಯರಾದ ಅಗ್ನಿ ವಾಯು ಮೊದಲಾದ ದೇವತೆಗಳಿಂದ ಫಲವುಂಟಾಗುತ್ತದೆಂದು ಶ್ರುತಿಯು ಹೇಳುತ್ತದೆ ; ಎಂದರೆ ವಾಯ್ವಾದಿಗಳಲ್ಲಿ ಅಂತರ್ಯಾಮಿಯಾಗಿರುವ ಪರಮಪುರುಷನಿಂದಲೇ ಫಲವಾಗುತ್ತದೆಂದು ಭಾವವು.

**ದ್ವೈ.**—'ಪೂರ್ವೋಕ್ತನಾದ ಪರಬ್ರಹ್ಮನೂ ಧರ್ಮವೂ ಫಲದಾತೃಗಳೆಂದು ಶ್ರುತಿಯು ಹೇಳುತ್ತದೆ, ಆದರೆ ಬ್ರಹ್ಮನು ಕರ್ತೃ, ಧರ್ಮವು ಕರಣ ಎಂಬ ಭೇದವಿದೆ' ಎಂಬುದು ಸೂತ್ರಾರ್ಥ.

ಪರಬ್ರಹ್ಮ ಮತ್ತು ಕರ್ಮ—ಇವೆರಡೂ ಫಲಕ್ಕೆ ಕಾರಣಗಳಾಗಿದ್ದರೂ ಕರ್ಮವು ಬ್ರಹ್ಮನನ್ನು ಪ್ರವರ್ತಿಸಲಾರದು, ಬ್ರಹ್ಮನು ಕರ್ಮವನ್ನು ಪ್ರವರ್ತಿಸುತ್ತಾನೆ. 'ಜೀವಕೃತಪುಣ್ಯವಿಶೇಷದಿಂದ ಪುಣ್ಯಲೋಕವನ್ನೂ ಪಾಪವಿಶೇಷದಿಂದ ನರಕವನ್ನೂ ಹೊಂದಿಸುತ್ತಾನೆ'[2] (ಪ್ರ. ಉ. ೩. ೭) ಎಂಬ ಹೇತುವನ್ನು ಶ್ರುತಿಯು ಹೇಳುತ್ತದೆ.

---

[1] ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ । ಏಷ ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ ಇತಿ ॥

[2] ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್ ।

## ಮೂರನೆಯ ಪಾದ

# ೧. ಸರ್ವವೇದಾಂತಪ್ರತ್ಯಯಾಧಿಕರಣ

(ಸೂ. ೧-೪)

**ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ॥ ೧ ॥**

೧. ಚೋದನಾದಿಗಳಲ್ಲಿ ವಿಶೇಷವಿಲ್ಲದಿರುವುದರಿಂದ ಸರ್ವೋಪನಿಷತ್ತು ಗಳಲ್ಲಿಯೂ ಕಂಡುಬರುವ (ಉಪಾಸನೆಗಳು ಒಂದೇ ಆಗಿರುತ್ತವೆ).

ಭಿನ್ನಭಿನ್ನ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಪಂಚಾಗ್ನಿವಿದ್ಯೆ ಪ್ರಾಣ ವಿದ್ಯೆ ದಹರವಿದ್ಯೆ ಶಾಂಡಿಲ್ಯವಿದ್ಯೆ ವೈಶ್ವಾನರವಿದ್ಯೆ—ಇವೇ ಮೊದಲಾದ ಉಪಾಸನೆಗಳು ಬೇರೆಬೇರೆಯೊ ಅಥವಾ ಒಂದೇ ವಿದ್ಯೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ನಾಮರೂಪಾದಿಗಳು ಭಿನ್ನಭಿನ್ನವಾಗಿರುವುದರಿಂದ ಈ ಉಪಾಸನೆಗಳು ಭಿನ್ನಭಿನ್ನವಾಗಿರುತ್ತವೆ ಇಲ್ಲಿ ಧರ್ಮವಿಶೇಷವು ಇದೆ ಆಥರ್ವಣಕರಿಗೆ ಶಿರೋವ್ರತವು ಧರ್ಮವಿಶೇಷವಾಗಿದೆ. ಆದುದರಿಂದ ಒಂದೊಂದು ಉಪನಿಷತ್ತಿನಲ್ಲಿಯೂ ಉಪಾಸನೆಯು ಭಿನ್ನವಾಗಿರುತ್ತದೆ

**ಸಿದ್ಧಾಂತಿ**—ಬೇರೆ ಬೇರೆ ಉಪನಿಷತ್ತುಗಳಲ್ಲಿ ವಿಧಿಸಿರುವ ಉಪಾಸನೆಗಳು ಒಂದೇ ಆಗಿರುತ್ತವೆ, ಏಕೆಂದರೆ ಚೋದನಾದಿಗಳಲ್ಲಿ ವಿಶೇಷವಿಲ್ಲ ಉದಾಹರಣೆಗೆ ಅಗ್ನಿಹೋತ್ರವು ಭಿನ್ನಭಿನ್ನ ಶಾಖೆಗಳಲ್ಲಿ ಹೇಳಲ್ಪಟ್ಟಿದ್ದರೂ ಒಂದೇ ವಿಧವಾದ ಪುರುಷಪ್ರಯತ್ನವನ್ನು **ಜುಹುಯಾತ್** ('ಹೋಮ ಮಾಡಬೇಕು') ಎಂದು ಚೋದನೆ ಮಾಡಿರುವಂತೆ: 'ಯಾವನು ಜ್ಯೇಷ್ಠನನ್ನೂ ಶ್ರೇಷ್ಠನನ್ನೂ ತಿಳಿದಿರುವನೊ'[1] (ಬೃ. ಉ. ೬. ೧. ೧, ಛಾಂ. ಉ. ೫. ೧. ೧) ಎಂದು ವಾಜಸನೇಯಿಗಳಿಗೂ ಛಂದೋಗರಿಗೂ ಅದೇ ಪ್ರಕಾರದ ಚೋದನೆಯಿರುತ್ತದೆ. ಫಲಸಂಬಂಧವಾಕ್ಯವೂ 'ತನ್ನ ಸಂಬಂಧಿಗಳಲ್ಲಿಯೂ ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ' (ಬೃ. ಉ. ೬. ೧. ೧) ಸಮಾನವಾಗಿರುತ್ತದೆ. ಮೇಲಿನ ಎರಡು ವಾಕ್ಯಗಳಲ್ಲಿಯೂ ಉಪಾಸನೆಯ ನಾಮವೂ ರೂಪವೂ ಒಂದೇ ಆಗಿರುತ್ತದೆ. ಆದುದರಿಂದ ಬೇರೆಬೇರೆ ಶಾಖೆಗಳಲ್ಲಿ ಉಪಾಸನೆಯು ಒಂದೇ ಆಗಿರುತ್ತದೆ.

**ವಿ.**—ಪ್ರತಿಯೊಂದು ಉಪನಿಷತ್ತಿನಲ್ಲಿಯೂ ವಿದ್ಯೆಯು ಒಂದೇ ಆಗಿರುತ್ತದೆ; ಏಕೆಂದರೆ ಚೋದನೆಯು ಒಂದೇ ಆಗಿರುತ್ತದೆ. ಉದಾಹರಣೆಗೆ, ಛಾಂದೋಗ್ಯದಲ್ಲಿಯೂ ಬೃಹದಾರಣ್ಯಕದಲ್ಲಿಯೂ 'ವೈಶ್ವಾನರನನ್ನು ಉಪಾಸಿಸಬೇಕು' ಎಂಬ ಚೋದನೆಯು

---

1 ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ।

ಒಂದೇ ಆಗಿರುತ್ತದೆ ಎರಡು ಉಪನಿಷತ್ತುಗಳಲ್ಲಿಯೂ ವೇದ್ಯನಾದ ವೈಶ್ವಾನರನು ಒಬ್ಬನೇ ಆಗಿರುತ್ತಾನೆ ಹೀಗೆಯೇ ಎರಡು ವಿದ್ಯೆಗಳ ಹೆಸರೂ ವೈಶ್ವಾನರವಿದ್ಯೆಯೆಂದೇ ಆಗಿರುತ್ತದೆ ಆದುದರಿಂದ ಶಾಖಾಂತರಗಳಲ್ಲಿಯೂ ವಿದ್ಯೆಯು ಒಂದೇ ಆಗಿರುತ್ತದ

**ದ್ವೈ.**—'ಸರ್ವವೇದಾಂತಗಳ ನಿರ್ಣಯದಿಂದ ಉತ್ಪನ್ನವಾದ ಜ್ಞಾನದ ವಿಷಯನು ಪರಬ್ರಹ್ಮನೇ ಆಗಿರುತ್ತಾನೆ, ಏಕೆಂದರೆ ಚೋದನೆಗಳಲ್ಲಿ ವಿಶೇಷಗಳಿಲ್ಲ ಎಂಬುದು ಸೂತ್ರಾರ್ಥ

ಉಪಾಸನೆಯು ಈ ಪಾದದ ವಿಷಯವಾಗಿದೆ ಸರ್ವವೇದಾರ್ಥಪರಿಜ್ಞಾನವನ್ನು ಶ್ರವಣಮನನಗಳ ಮೂಲಕ ಪಡೆಯಬೇಕೆಂದು ಮೊದಲನೆಯ ಅಧಿಕರಣದಲ್ಲಿ ಹೇಳಿದೆ ಸರ್ವವೇದಗಳ ನಿರ್ಣಯದಿಂದ ಉತ್ಪನ್ನವಾದ ಜ್ಞಾನದ ವಿಷಯನೇ ಪರಬ್ರಹ್ಮನು 'ಆತ್ಮನನ್ನೇ ಉಪಾಸಿಸಬೇಕು'[1] (ಬೃ ಉ ೧ ೪ ೭) ಎಂಬೀ ವಿಧವಾದ ವಿಧಿಗಳೂ ಅವುಗಳಲ್ಲಿ ಉಕ್ತವಾದ ಯುಕ್ತಿಗಳೂ ಸರ್ವಶಾಖೆಗಳಿಗೂ ಸಮಾನವಾಗಿವೆ

## ಭೇದಾನ್ನೇತಿ ಚೇನ್ನೈಕಸ್ಯಾಮಪಿ* ॥ ೨ ॥

೨ (ರೂಪ) ಭೇದವಿರುವುದರಿಂದ (ವಿದ್ಯೆಗಳು) ಏಕವಲ್ಲ ಎಂದರ ಅದು ಸರಿಯಲ್ಲ, ಏಕೆಂದರೆ ಒಂದೇ ವಿದ್ಯೆಯಲ್ಲಿಯೂ (ಈ ಜಾತಿಯ ಗುಣ ಭೇದಗಳಿರುತ್ತವೆ).

ಉಪನಿಷದ್‌ವಾಕ್ಯಗಳಲ್ಲೆಲ್ಲ ವಿವಿಧ ವಿದ್ಯೆಗಳು ಸಮಾನವಾಗಿವ ಎಂಬುದು ಹೊಂದುವುದಿಲ್ಲ, ಏಕೆಂದರೆ ಗುಣಭೇದವಿದೆ ವಾಜಸನೇಯಿಗಳು 'ಅವನಿಗೆ ಅಗ್ನಿಯೇ ಅಗ್ನಿಯಾಗುತ್ತದೆ' (ಬೃ ಉ ೬ ೨ ೧೪) ಎಂದು ಆರನೆಯ ಅಗ್ನಿಯನ್ನು ಪಠಿಸಿದರೆ, ಛಂದೋಗರು ಹಾಗೆ ಪಠಿಸದೆ ಐದನೆಯ ಸಂಖ್ಯೆಯಿಂದಲೇ (ಛಾಂ ಉ ೫ ೧೦ ೧೦) ಮುಗಿಸುತ್ತಾರೆ ಹೀಗೆ ಗುಣಭೇದವಿರುವುದರಿಂದ ಎರಡು ವಿದ್ಯೆಯೂ ಸಮಾನವಾಗಲಾರದು ಹೀಗೆಯೇ ಪ್ರಾಣಸಂವಾದದಲ್ಲಿ ಛಂದೋಗರು ನಾಲ್ಕು ಪ್ರಾಣಗಳನ್ನು ಪಠಿಸಿದರೆ ವಾಜಸನೇಯಿಗಳು ಐದನೆಯ ಪ್ರಾಣವನ್ನು ಪಠಿಸುತ್ತಾರೆ ಹೀಗೆ ಗುಣಭೇದದಿಂದ ವೇದ್ಯವು ಬೇರೆ ಆಗುತ್ತದೆ, ವೇದ್ಯಭೇದದಿಂದ ವಿದ್ಯಾಭೇದವಾಗುತ್ತದೆ, ದ್ರವ್ಯದೇವತೆಗಳು ಬೇರೆಯಾಗುವುದರಿಂದ ಯಾಗವು ಬೇರೆಯಾಗುತ್ತದೆ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಇದು ದೋಷವಲ್ಲ, ಏಕೆಂದರೆ ಒಂದೇ ವಿದ್ಯೆಯಲ್ಲಿಯೂ ಈ ಜಾತಿಯ ಗುಣಭೇದವು ಇರುತ್ತದ ಛಂದೋಗರಲ್ಲಿ ಆರನೆಯ ಅಗ್ನಿಯನ್ನು ಸೇರಿಸದಿದ್ದರೂ

---

1 ಆತ್ಮೇತ್ಯೇವೋಪಾಸೀತ ।

* ಸೂತ್ರಪಾಠವು ಶ್ರೀಭಾಷ್ಯದಲ್ಲಿಯೂ ಮಧ್ವಭಾಷ್ಯದಲ್ಲಿಯೂ ಹೀಗೆ ಸ್ವಲ್ಪ ಭಿನ್ನವಾಗಿರುವುದು ಭೇದಾನ್ನೇತಿ ಚೇದೇಕಸ್ಯಾಮಪಿ ।

ದ್ಯುಲೋಕವೇ ಮೊದಲಾದ ಪಂಚಾಗ್ನಿಗಳು ಎರಡು ಕಡೆಯಲ್ಲಿಯೂ ಸಮಾನವಾಗಿರುವುದರಿಂದ ವಿದ್ಯಾಭೇದವಾಗಲಾರದು ಇದರಂತೆ ಪ್ರಾಣಸಂವಾದದಲ್ಲಿಯೂ ಅಧಿಕವಾಗಿರುವ ಗುಣವನ್ನು ಇನ್ನೊಂದು ಕಡೆಯಲ್ಲಿ ಉಪಸಂಹಾರಮಾಡಿಕೊಂಡರೆ ಯಾವ ಭೇದವೂ ಇರುವುದಿಲ್ಲ ಗುಣಗಳನ್ನು ನೇರಿಸಿಕೊಳ್ಳುವುದರಿಂದ ಅಥವಾ ತೆಗೆಯುವುದರಿಂದ ವಿದ್ಯಾಭೇದವಾಗುವುದಿಲ್ಲ, ಏಕಂದರೆ ವೇದ್ಯಗಳು ಅಂಶದಿಂದ ಸ್ವಲ್ಪ ಭಿನ್ನವಾಗಿದ್ದರೂ ಹೆಚ್ಚಿನ ಭಾಗದ ವೇದ್ಯರಾಶಿಯಲ್ಲಿ ಭೇದವಿಲ್ಲದಿರುವುದರಿಂದ ಅಭೇದವೇ ನಿಶ್ಚಿತವಾಗುತ್ತದೆ ಆದುದರಿಂದ ವಿದ್ಯೆಯು ಒಂದೇ ಆಗಿರುತ್ತದೆ

**ಸಿ.**—ಪ್ರಕರಣಭೇದದಿಂದಲೂ ವಿಧಿವಾಕ್ಯಭೇದದಿಂದಲೂ ವಿದ್ಯೆಗಳು ಬೇರೆಯಾಗಲಾರವು, ಏಕಂದರೆ ಒಂದೇ ವಿದ್ಯೆಯಲ್ಲಿ ಬೇರೆ ಶಾಖೆಗೆ ನೇರಿದ ಶಿಷ್ಯರಿದ್ದರೆ ಪುನಃ ಶ್ರವಣವು ಪ್ರಕರಣಾಂತರದಲ್ಲಿ ಅವಶ್ಯಕವಾಗುತ್ತದೆ[1] ಆದುದರಿಂದ ವಿಧಿಸಬೇಕಾದ ವಿಷಯದಲ್ಲಿ ಭೇದವಿಸುವುದಿಲ್ಲ

**ಶ್ವೈ** —'ಬೇರೆ ಬೇರೆ ಶಾಖೆಗಳಲ್ಲಿ ಬ್ರಹ್ಮರೂಪದ ವಿಷಯದಲ್ಲಿ **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ ಉ ೨ ೧) **ವಿಜ್ಞಾನಮಾನಂದಂ ಬ್ರಹ್ಮ** (ಬೃ ಉ ೩ ೯ ೨೮) ಎಂಬ ಉಕ್ತಿಭೇದಗಳಿರುವುದರಿಂದ ಸರ್ವಶಾಖೆಗಳನ್ನೂ ಒಬ್ಬನೇ ಆದ ಅಧಿಕಾರಿಯು ಅಧ್ಯಯನ ಮಾಡಬೇಕಾಗಿಲ್ಲ—ಎಂದು ಹೇಳಿದರೆ ಅದು ಸರಿಯಲ್ಲ, ಏಕಂದರೆ ಒಂದೇ ಶಾಖೆಯಲ್ಲಿ **ಆತ್ಮೇತ್ಯೇವೋಪಾಸೀತ** (ಬೃ ಉ ೧ ೪ ೭), **ಕಂ ಬ್ರಹ್ಮ ಖಂ ಬ್ರಹ್ಮ** (ಛಾಂ ಉ ೪ ೧೦ ೪) ಎಂಬ ಭೇದವು ಕಂಡುಬರುತ್ತದೆ' ಎಂಬುದು ಸೂತ್ರಾರ್ಥ[2]

**ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ*** ॥ ೩ ॥

೩ ಹಾಗೆಂದೇ ಸಮಾಚಾರದಲ್ಲಿ (ಹೇಳಿರುವುದರಿಂದಲೂ) ಅಧಿಕೃತ ವಿಷಯವಿರುವುದರಿಂದಲೂ (ಶಿರೋವ್ರತವು) ಸ್ವಾಧ್ಯಾಯದ (ಧರ್ಮವು), ಸವದಂತೆಯೂ ಆ ನಿಯಮವು

---

1 ಏಕಸ್ಯಾಮಪಿ ವಿದ್ಯಾಯಾಂ ಪ್ರತಿಪತ್ತೃಭೇದಾತ್ ಪುನಶ್ಶ್ರುತಿಃ ಪ್ರಕರಣಾಂತರಂ ಚೋಪಪದ್ಯತೇ (ಶ್ರೀಭಾಷ್ಯ)

2 ಸತ್ಯಂ ಜ್ಞಾನಮನಂತಂ ಬ್ರಹ್ಮೇತ್ಯಾದಿ ಪ್ರತಿಶಾಖಮುಕ್ತಿಭೇದಾನ್ನೈಕಾಧಿಕಾರಿವಿಷಯಾಃ ಸರ್ವಶಾಖಾ ಇತಿ ಚೇನ್ನ। ಏಕಸ್ಯಾಮಪಿ ಶಾಖಾಯಾಂ ಆತ್ಮೇತ್ಯೇವೋಪಾಸೀತೋಂ ಖಂ ಬ್ರಹ್ಮೇತ್ಯಾದಿಭೇದದರ್ಶನಾತ್ (ಮ ಭಾ)

* ಇದು ಮಧ್ವಭಾಷ್ಯದಲ್ಲಿ ಸ್ವಾಧ್ಯಾಯಸ್ಯ ಅಧಿಕಾರಾಚ್ಚ ಮತ್ತು ಸಲಿಲವಚ್ಚ ತನ್ನಿಯಮಃ ಎಂದು ಎರಡು ಸೂತ್ರಗಳಾಗಿ ವಿಭಾಗಿಸಲ್ಪಟ್ಟಿದೆ

ಆಥರ್ವಣಿಕರು ವಿದ್ಯೆಗಾಗಿ ಶಿರೋವ್ರತಾದಿಗಳನ್ನು[1] ಅಪೇಕ್ಷಿಸುವುದರಿಂದಲೂ ಅವು ಇತರರಿಗೆ ಅನಪೇಕ್ಷಣೀಯವಾಗಿರುವುದರಿಂದಲೂ ವಿದ್ಯೆಗಳು ಬೇರೆ ಬೇರೆ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಇದು ವಿದ್ಯೆಯ ಧರ್ಮವೇ ಹೊರತು ಸ್ವಾಧ್ಯಾಯದ ಧರ್ಮವಲ್ಲ ಇದು ಸ್ವಾಧ್ಯಾಯಧರ್ಮವೆಂದೇ ವೇದವ್ರತಗಳನ್ನು ತಿಳಿಸುವ ಸಮಾಚಾರವೆಂಬ ಗ್ರಂಥದಲ್ಲಿ ತಿಳಿಸಿದ ಉಪನಿಷತ್ತಿನ ಕೊನೆಯ ಭಾಗದಲ್ಲಿ ಈ ವಾಕ್ಯವು (ಮುಂ ಉ ೩ ೨ ೧೧) ಬರುತ್ತದೆ 'ವ್ರತವನ್ನು ಆಚರಿಸದೆ ಇರುವವನು ಇದನ್ನು ಅಧ್ಯಯನಮಾಡಕೂಡದು,' ಇಲ್ಲಿ ಪ್ರಕೃತಿವಿಷಯಕವಾದ **ಇದು** ಎಂಬ ಶಬ್ದವಿರುವುದರಿಂದಲೂ ಆಧ್ಯಯನ ಎಂಬ ಶಬ್ದವಿರುವುದರಿಂವಿಲೂ ಈ ವ್ರತವು ಆಥರ್ವಣಿಕರ ಉಪನಿಷತ್ತಿನ ಅಧ್ಯಯನಧರ್ಮವಾಗಿದೆ 'ಸವದಂತೆಯೂ ಆ ನಿಯಮವು' ಎಂಬ ದೃಷ್ಟಾಂತದ ಅರ್ಥವು ಹೀಗಿದೆ ಏಳು ಆಹುತಿಗಳು—ಸೌರ್ಯದಿಂದ ಪ್ರಾರಂಭಿಸಿ ಶತೌದನದವರೆಗೆ—ಬೇರೆ ವೇದಗಳಲ್ಲಿ ಹೇಳಿರುವ ತ್ರೇತಾಗ್ನಿಗೆ ಸಂಬಂಧಿಸದೆ ಇರುವುದರಿಂದರಿಂದಲೂ ಆಥರ್ವಣದಲ್ಲಿ ಹೇಳಿರುವ ಏಕಾಗ್ನಿಗೆ ಸಂಬಂಧಿಸಿರುವುದರಿಂದಲೂ ಹೇಗೆ ಆಥರ್ವಣಿಕರಿಗೆ ಎಂದು ನಿಯಮಿತವಾಗಿರುವುವೊ ಹಾಗೆಯೇ ಶಿರೋವ್ರತವೆಂಬ ಈ ಧರ್ಮವು ಸ್ವಾಧ್ಯಾಯ ವಿಶೇಷದ ಸಂಬಂಧವಿರುವುದರಿಂದ ಅದಕ್ಕೇ ನಿಯಮಿತವಾಗಿರುತ್ತದೆ ಆದುದರಿಂದ ವಿದ್ಯೆಯು ಒಂದೇ ಎಂಬುದು ದೋಷರಹಿತವಾಗಿದ

ವಿ.—ಶಿರೋವ್ರತೋಪದೇಶದ ನಿಯಮವು ವಿದ್ಯಾಭೇದವನ್ನು ಸೂಚಿಸುವುದಿಲ್ಲ, ಏಕಂದರೆ ಆ ವ್ರತವು ವಿದ್ಯೆಯ ಅಂಗವಾಗಿಲ್ಲ ಮತ್ತೇನೆಂದರೆ ಆಥರ್ವಣಿಕರ ವೇದಾ-ಧ್ಯಯನಕ್ಕ ಆ ಶಿರೋವ್ರತವು ಸಂಸ್ಕಾರಾತಿಶಯವನ್ನು ಕೊಡುವುದರಿಂದ ಅದು ಅಂಗವಾಗಿರಬೇಕಂಬ ನಿಯಮವು[2]

ದ್ವೈಪ.—ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ॥ ೩ ೩ ೩ ॥

೩ 'ಸ್ವಾಧ್ಯಾಯವನ್ನು ಮಾಡಬೇಕು'[3] (ತೈ ಆ ೨ ೧೫) ಎಂಬ ಅಧ್ಯಯನವಿಧಿಯು ಎಲ್ಲ ಅಧಿಕಾರಿಗಳಿಗೂ ಸಾಧಾರಣವಾಗಿರುವುದರಿಂದಲೂ, ಸರ್ವವೇದೋಕ್ತಕರ್ಮಗಳನ್ನು ಅನು-ಷ್ಠಾನಮಾಡುವ ವಿಷಯದಲ್ಲಿ ಎಲ್ಲರಿಗೂ ಅಧಿಕಾರವಿರುವುದರಿಂದಲೂ ಬ್ರಹ್ಮನು ಸರ್ವ-ವೇದಾಂತದಿಂದ ಉತ್ಪನ್ನವಾಗತಕ್ಕ ಜ್ಞಾನವಿಷಯನೆ

ಸಲಿಲವಚ್ಚ ತನ್ನಿಯಮಃ ॥ ೩ ೩ ೪ ॥

೪ ನೀರಿನಂತೆಯೂ ಆ ನಿಯಮವು

---

1 ಅಥರ್ವಣಶಾಖೆಯವರ ಈ ವ್ರತದಲ್ಲಿ ಅಗ್ನಿಯನ್ನು ತಲೆಯ ಮೇಲೆ ಧರಿಸಬೇಕು

2 ತಜ್ಜನ್ಯಸಂಸ್ಕಾರಭಾಕ್ತ್ವಸಿದ್ಧ್ಯರ್ಥ ಹಿ ಶಿರೋವ್ರತೋಪದೇಶನಿಯಮಃ, ನ ವಿದ್ಯಾಯಾಃ (ಶ್ರೀಭಾಷ್ಯ)

3 ಸ್ವಾಧ್ಯಾಯೋಽಧ್ಯೇತವ್ಯಃ ।

ಹೇಗೆ ನದಿಗಳ ನೀರೆಲ್ಲ ಸಮುದ್ರವನ್ನು ನೇರುತ್ತದೆಯೊ ಹಾಗೆಯೇ ಸಮಸ್ತಶಬ್ದ ಗಳೂ ಬ್ರಹ್ಮಜ್ಞಾನಕ್ಕೆ ಸಾಧನವಾಗಿವೆ—ಎಂಬುದು ನಿಯಮ.[1]

**ದರ್ಶಯತಿ ಚ ॥ ೪ ॥**

೪. (ಶ್ರುತಿಯೂ) ಇದನ್ನು ತಿಳಿಸುತ್ತದೆ.

ವೇದವು ವಿದ್ಯೆಯ ಏಕತ್ವವನ್ನು ಉಪದೇಶಿಸುತ್ತದೆ ; ಏಕೆಂದರೆ ಉಪನಿಷತ್ತುಗಳಲ್ಲೆಲ್ಲ ವೇದ್ಯವು ಒಂದೇ ಎಂದು ಹೇಳಿದೆ : 'ಎಲ್ಲ ವೇದಗಳೂ ಯಾವ ಪದವನ್ನು ಪ್ರತಿಪಾದಿಸುತ್ತವೆಯೊ'[2] (ಕ. ಉ. ೧. ೨. ೧೫) ; 'ಇವನನ್ನೇ ಬಹ್ವೃಚರು ಮಹತ್ತಾದ ಉಕ್ಥದಲ್ಲಿ ವಿಚಾರಿಸುತ್ತಾರೆ. ಇವನನ್ನೇ ಅಧ್ವರ್ಯುಗಳು ಅಗ್ನಿಯಲ್ಲಿ ವಿಚಾರಿಸುತ್ತಾರೆ, ಇವನನ್ನೇ ಛಂದೋಗರು ಮಹಾವ್ರತದಲ್ಲಿ ವಿಚಾರಿಸುತ್ತಾರೆ'[3] (ಐ. ಆ. ೩. ೨. ೩). ಹೀಗೆಯೇ ಕಾಠಕದಲ್ಲಿ (೨. ೬. ೨) ಹೇಳಿರುವ ಈಶ್ವರಗುಣವಾದ ಭಯಹೇತುತ್ವವನ್ನು ತೈತ್ತಿರೀಯದಲ್ಲಿ (೨ ೭) ಭೇದದರ್ಶನವನ್ನು ನಿಂದಿಸಲು ಹೇಳಿದೆ. ಇದರಂತೆ ವಾಜ. ಸನೇಯದಲ್ಲಿ ಪ್ರಾದೇಶಮಾತ್ರನೆಂದು ಕಲ್ಪಿಸಿರುವ ವೈಶ್ವಾನರನನ್ನು ಛಾಂದೋಗ್ಯದಲ್ಲಿ (೫. ೧೮. ೧) ಆಗಲೇ ಸಿದ್ಧನಾದಂತೆ ಹೇಳಿರುತ್ತದೆ. ಹೀಗೆಯೇ ಉಪನಿಷತ್ತುಗಳಲ್ಲೆಲ್ಲ ಉಪಾಸನೆಗಳೂ ಒಂದೇ ಆಗಿರುತ್ತವೆ.

**ವಿ.**— ಎರಡು ಸ್ಥಳಗಳಲ್ಲಿ ಹೇಳಿರುವ ವಿದ್ಯೆಯು ಒಂದೇ ಎಂದು ಶ್ರುತಿಯೇ ಹೇಳುತ್ತದೆ: ಛಾಂದೋಗ್ಯವು (೮. ೧. ೧) ಹೃದಯದಲ್ಲಿರುವ ಅಂತರಾಕಾಶವನ್ನು ಅನ್ವೇ-ಷಿಸಬೇಕೆಂದು ಹೇಳಿ ಅನಂತರ 'ಅಲ್ಲೇನನ್ನು ಅನ್ವೇಷಿಸಬೇಕು ?' ಎಂಬ ಪ್ರಶ್ನೆಗೆ ಅಪಹತ ಪಾಪ್ಮತ್ವಾದಿ-ಗುಣಾಷ್ಟಕ-ವಿಶಿಷ್ಟನಾದ ಪರಮಾತ್ಮನನ್ನೇ ಉಪಾಸಿಸಬೇಕೆಂದು ಹೇಳುತ್ತದೆ. ಛಾಂದೋಗ್ಯದಲ್ಲಿ ಪ್ರತಿಪಾದಿತವಾದ ವಸ್ತುವನ್ನೇ ಉಪಾಸಿಸಬೇಕೆಂದು ತೈತ್ತಿ-ರೀಯವೂ (ಮ. ನಾ. ಉ. ೧೦. ೨೩) ಹೇಳುತ್ತದೆ. ವಿದ್ಯೆಯ ಏಕತ್ವದಿಂದ ಒಂದು ಸ್ಥಳದಲ್ಲಿ ಹೇಳಿದ ಗುಣಗಳನ್ನು ಇನ್ನೊಂದು ಸ್ಥಳದಲ್ಲಿ ಉಪಸಂಹಾರಮಾಡಿದರೇ ಇದು ಸಾಧ್ಯವಾಗುತ್ತದೆ.

**ದ್ವೈ.**—ಹಿಂದೆ ಹೇಳಿದ ಅರ್ಥವನ್ನೇ 'ಸರ್ವವೇದಗಳಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು'[4] ಎಂಬ ಶ್ರುತಿಯೂ 'ಸರ್ವವೇದಾಂತ-ಇತಿಹಾಸ-

---

[1] ಯಥಾ ಸರ್ವಂ ಸಲಿಲಂ ಸಮುದ್ರಂ ಗಚ್ಛತ್ಯೇವಂ ಸರ್ವಾಣಿ ವಚನಾನಿ ಬ್ರಹ್ಮ-ಜ್ಞಾನಾರ್ಥಾನೀತಿ ನಿಯಮಃ ।

[2] ಸರ್ವೇ ವೇದಾ ಯತ್ಪದಮಾಮನಂತಿ ।

[3] ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತೇ ಏತಮಗ್ನಾವಾಧ್ವರ್ಯವ ಏತಂ ಮಹಾವ್ರತೇ ಛಂದೋಗಾಃ ।

[4] ಸರ್ವೈಶ್ಚ ವೇದೈಃ ಪರಮೋ ಹಿ ದೇವೋ ಜಿಜ್ಞಾಸ್ಯಃ ।

ಪುರಾಣಾದಿಗಳನ್ನು ಅರಿತುಕೊಂಡ ಮೇಲೆ ವಿಷ್ಣುವು ಜ್ಞೇಯನಾಗುತ್ತಾನೆ'[1] ಎಂಬ ಸ್ಮೃತಿಯೂ ತೋರಿಸುತ್ತದೆ

---

[1] ಸರ್ವಾನ್ ವೇದಾನ್ ಸೇತಿಹಾಸಾನ್ ಪುರಾಣಾನ್ ಸಂಯುಕ್ತಿಕಾನ್ । ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥೇತಿ ಚ ಬೃಹತ್ತರ್ಕೇ (ಮ ಭಾ )

# ೨. ಉಪಸಂಹಾರಾಧಿಕರಣ*

**ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ ಸಮಾನೇ ಚ† ॥ ೫ ॥**

೫ ವಿಧಿಯ ಶೇಷದಂತೆ (ಗುಣಗಳನ್ನು ಉಪಾಸನೆಯಲ್ಲಿ) ಉಪಸಂಹಾರ ಮಾಡಿಕೊಳ್ಳಬೇಕು ; ಏಕೆಂದರೆ ಅರ್ಥವೂ ಒಂದೇ ಆಗಿದೆ.

ಇದು ಪ್ರಯೋಜನವನ್ನು ತಿಳಿಸುವ ಸೂತ್ರ. ಉಪನಿಷತ್ತುಗಳಲ್ಲೆಲ್ಲ ವಿದ್ಯೆಗಳು ಒಂದೇ ಎಂದು ಸಿದ್ಧವಾಗಿರುವುದರಿಂದ ಒಂದು ವಿದ್ಯೆಯಲ್ಲಿ ಹೇಳಿರುವ ಗುಣಗಳನ್ನು ಇನ್ನೊಂದು ಕಡೆಯಲ್ಲಿ ಅದೇ ವಿದ್ಯೆಯಲ್ಲಿ ಉಪಸಂಹರಿಸಬೇಕಾಗುತ್ತದೆ ; ಏಕೆಂದರೆ ಅರ್ಥವು ಬೇರೆಯಲ್ಲ. ಇದು ವಿಧಿಶೇಷದಂತೆ : ಹೇಗೆ ವಿಧಿಶೇಷವಾಗಿರುವ ಅಗ್ನಿಹೋತ್ರಾದಿಗಳ ಧರ್ಮಗಳನ್ನು—ಅಗ್ನಿಹೋತ್ರಾದಿ ಕರ್ಮವು ಸರ್ವತ್ರ ಒಂದೇ ಆಗಿರುವುದರಿಂದ ಮತ್ತು ಅರ್ಥಭೇದವಿಲ್ಲದಿರುವುದರಿಂದ—ಉಪಸಂಹರಿಸುತ್ತಾರೆಯೋ ಹಾಗೆಯೇ ಇಲ್ಲಿಯೂ ಮಾಡಬೇಕು. ವಿದ್ಯೆಗಳು ಬೇರೆಬೇರೆಯಾಗಿದ್ದರೆ—ಆಯಾ ವಿದ್ಯೆಯ ಗುಣಗಳು ಆಯಾ ವಿದ್ಯೆಗೇ ಸಂಬದ್ಧವಾಗಿರುವುದರಿಂದ—ಉಪಸಂಹಾರಮಾಡಲು ಆಗುವುದಿಲ್ಲ. ಈ ಸೂತ್ರವನ್ನೇ ಮುಂದೆ (೩. ೩. ೧೦) ವಿವರಿಸಲಾಗುವುದು.

**ವಿ.**—'ವಿದ್ಯೆಗಳು ಒಂದೇ ಆಗಿರುವುದರಿಂದ ಒಂದು ಕಡೆಯಲ್ಲಿ ಹೇಳಿರುವ ಗುಣಗಳನ್ನು ಇನ್ನೊಂದು ಕಡೆಯಲ್ಲಿ ಅಂಗವಾಗಿ ತೆಗೆದುಕೊಳ್ಳಬೇಕು , ಏಕೆಂದರೆ ವಿಧಿಶೇಷದಂತೆ ಅರ್ಥಭೇದವಿಲ್ಲ' ಎಂಬುದು ಸೂತ್ರಾರ್ಥ.

ಉಪನಿಷತ್ತುಗಳಲ್ಲಿ ಉಪಾಸನೆಯು ಸಮಾನವಾಗಿರುವುದರಿಂದ ಒಂದು ಕಡೆಯಲ್ಲಿ ಹೇಳಿರುವ ಗುಣಗಳನ್ನು ಮತ್ತೊಂದು ಕಡೆಯಲ್ಲಿ ಉಪಸಂಹರಿಸಿಕೊಳ್ಳಬೇಕು. ಉಪಾಸನಾವಿಧಿಯ ಶೇಷದಂತೆ ಎಂಬುದರ ಅರ್ಥ ಹೀಗಿದೆ. ಒಂದೇ ವೇದಾಂತವಾಕ್ಯದಲ್ಲಿ ಹೇಳಲ್ಪಟ್ಟ ವೈಶ್ವಾನರವಿದ್ಯೆಯೇ ಮೊದಲಾದ ಉಪಾಸನೆಗೆ ಅಂಗವಾಗಿ ಭಾವಿಸಲ್ಪಟ್ಟ ಗುಣವು ಹೇಗೆ ಆ ವಿದ್ಯೆಗೆ ಉಪಸಂಹಾರಮಾಡಿಕೊಳ್ಳತಕ್ಕದ್ದೋ ಹಾಗೆಯೇ ಬೇರೆ ವಾಕ್ಯದಲ್ಲಿಯೂ ಅದೇ ವಿದ್ಯೆಗೆ ಅಂಗವಾಗಿ ಉಪಸಂಹಾರಮಾಡಿಕೊಳ್ಳತಕ್ಕದ್ದು ನ್ಯಾಯವೇ.

**ದ್ವೈ.**—'ಸರ್ವವೇದಾಂತೋಕ್ತವಾದ ಗುಣಗಳನ್ನೂ ದೋಷಾಭಾವಗಳನ್ನೂ ಉಪಸಂಹರಿಸಿ ಪರಮಾತ್ಮನನ್ನು ಉಪಾಸಿಸಬೇಕು. ವಿಧಿವಿಹಿತಗಳಾದ ಸಂಧ್ಯಾವಂದನಾದಿಗಳಂತೆ ಉಪಾಸಿಸಬೇಕು' ಎಂಬುದು ಸೂತ್ರಾರ್ಥ.

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ಎಂಬ ಸೂತ್ರದವರೆಗೂ ಹೋಗುತ್ತದೆ.

† ಶ್ರೀಭಾಷ್ಯದ ಪ್ರಕಾರ ಈ ಸೂತ್ರವು ಹಿಂದಿನ ಅಧಿಕರಣಕ್ಕೆ ಸೇರಿದೆ.

ಪೂರ್ಣತ್ವಕ್ಕೆ ವಿರೋಧಿಯಾಗದ ಗುಣಗಳನ್ನೇ ಉಪಸಂಹರಿಸಬೇಕು. 'ಅವನು ರೋದಿಸಿದನು' (ತೈ. ಸಂ. ೧. ೫. ೧) ಮೊದಲಾದ ಅಯೋಗ್ಯವಾದ ವಿಷಯದಲ್ಲಿ ಉಪಸಂಹಾರಮಾಡಕೂಡದು.

[ಅಧಿ. ೩. ಸೂ. ೫

## ೩. ಅನ್ಯಥಾತ್ವಾಧಿಕರಣ*

(ಸೂ ೬—೮)

**ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ॥ ೬ ॥**

೬ ಶಬ್ದವು (ಬೇರೆಯಾಗಿರುವುದರಿಂದ ಬೃಹದಾರಣ್ಯಕದ ಮತ್ತು ಛಾಂದೋಗ್ಯದ ಉದ್ಗೀಥವಿದ್ಯೆಯು) ಬೇರೆ ಬೇರೆಯೆಂದು ಹೇಳಿದರೆ ಅದು ಹಾಗಲ್ಲ, ಏಕೆಂದರೆ ಯಾವ ವಿಶೇಷವೂ ಇರುವುದಿಲ್ಲ

ಬೃಹದಾರಣ್ಯಕದಲ್ಲಿಯೂ ಛಾಂದೋಗ್ಯದಲ್ಲಿಯೂ ಪ್ರಾಣವಿದ್ಯೆಯನ್ನು ಹೀಗೆ ಹೇಳಿದೆ "ಸರಿ! ನಾವು ಈ ಯಜ್ಞದಲ್ಲಿ ಉದ್ಗೀಥದ ಮೂಲಕ ಅಸುರರನ್ನು ಮೀರೋಣ" ಎಂದು ದೇವತೆಗಳು ಹೇಳಿದರು "ನೀನು ನಮಗೋಸ್ಕರ ಉದ್ಗೀಥವನ್ನು ಹಾಡು" ಎಂದು ದೇವತೆಗಳು ವಾಕ್ಕಿಗೆ ಹೇಳಿದರು ವಾಕ್ಕು "ಹಾಗೆಯೇ ಆಗಲಿ" ಎಂದು ಹೇಳಿ ಅವರಿಗೆ ಉದ್ಗೀಥವನ್ನು ಹಾಡಿತು' (ಬೃ ಉ ೧ ೩ ೧ ೨), ಆದರೆ ಈ ವಾಗಾದಿ ಇಂದ್ರಿಯಗಳೆಲ್ಲ ಅಸುರಪಾಪದಿಂದ ಹೊಡೆಯಲ್ಪಟ್ಟು ತಾವು ಮಾಡಬೇಕಾದ ಕಾರ್ಯವನ್ನು ಮಾಡಲು ಸಮರ್ಥಗಳಾಗಲಿಲ್ಲ ಅನಂತರ ದೇವತೆಗಳು ತಮಗೆ ಉದ್ಗೀಥವನ್ನು ಹಾಡಬೇಕೆಂದು ಬಾಯಲ್ಲಿರುವ ಪ್ರಾಣಕ್ಕೆ ಹೇಳಿದರು ಪ್ರಾಣವು ಅವರಿಗೆ ಉದ್ಗೀಥವನ್ನು ಹಾಡಿತು ಹೀಗೆಯೇ ಛಾಂದೋಗ್ಯದಲ್ಲಿಯೂ (೧ ೨ ೭) 'ಅವರು ಉದ್ಗೀಥವನ್ನು ಮುಖ್ಯಪ್ರಾಣವೆಂದು ಉಪಾಸಿಸಿದರು' ಎಂದು ಹೇಳಿದೆ ಎರಡು ಕಡೆಯಲ್ಲಿಯೂ ಪ್ರಾಣಪ್ರಶಂಸೆಯಿರುವುದರಿಂದ ಪ್ರಾಣವಿದ್ಯೆಯನ್ನು ವಿಧಿಸಿದೆಯೆಂದು ತಿಳಿದುಬರುತ್ತದೆ ಈಗ ಈ ಎರಡು ವಿದ್ಯೆಗಳು ಬೇರೆ ಬೇರೆಯೊ ಅಥವಾ ಒಂದೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಹಿಂದಿನ ಅಧಿಕರಣದ ನ್ಯಾಯದಿಂದ ಇವೆರಡೂ ಒಂದೇ ವಿದ್ಯೆ ಎನ್ನುವುದು ಯುಕ್ತ ಎರಡು ಕಡೆಯಲ್ಲಿಯೂ ಉಪಕ್ರಮಭೇದವಿರುವುದರಿಂದ[1] ವಿದ್ಯೆಯು ಬೇರೆ ಬೇರೆ ಎನ್ನುವುದು ಸರಿಯಲ್ಲ ಏಕೆಂದರೆ ಇವೆರಡರಲ್ಲಿಯೂ ದೇವಾಸುರರ ಸಂಗ್ರಾಮ, ಅಸುರರನ್ನು ಮೀರಬೇಕೆಂಬ ಅಭಿಪ್ರಾಯ, ಉದ್ಗೀಥೋಪನ್ಯಾಸ, ವಾಗಾದಿಸಂಕೀರ್ತನ, ಮುಖ್ಯಪ್ರಾಣವನ್ನು ಆಶ್ರಯಿಸುವುದು ಮತ್ತು ಅದರ ವೀರ್ಯದಿಂದ ಅಸುರರ ನಾಶ

---

* ಶ್ರೀಭಾಷ್ಯದ ಪ್ರಕಾರ ವ್ಯಾಪ್ತೇಶ್ಚ ಸಮಂಜಸಮ್ (೯) ಎಂಬ ಸೂತ್ರದವರೆಗೂ ಈ ಅಧಿಕರಣವು ಮುಂದುವರಿಯುತ್ತದೆ

[1] 'ನೀನು ನಮಗಾಗಿ ಉದ್ಗಾನಮಾಡು' ಎಂದು ಬೃಹದಾರಣ್ಯಕದಲ್ಲಿ (೧ ೩ ೨) ಪ್ರಾಣವನ್ನು ಉದ್ಗೀಥದ ಕರ್ತೃವಾಗಿ ಹೇಳಿದೆ ಆದರೆ 'ಅವನನ್ನು ಉದ್ಗೀಥವೆಂದು ಉಪಾಸಿಸಿದರು' ಎಂದು ಛಾಂದೋಗ್ಯದಲ್ಲಿ (೧. ೨ ೭) ಪ್ರಾಣವನ್ನೇ ಉದ್ಗೀಥವೆಂದು ಹೇಳಿದೆ

ಮೊದಲಾದ ಸಾಮಾನ್ಯವೂ ಕಾಣುತ್ತದೆ. ಮತ್ತೆ ಬೃಹದಾರಣ್ಯಕದಲ್ಲಿ (೧ ३. ೨३) 'ಇವನೇ ಉದ್ಗೀಥ' ಎಂದು ಪ್ರಾಣಕ್ಕೆ ಉದ್ಗೀಥದ ಸಾಮಾನಾಧಿಕರಣ್ಯವನ್ನು ಹೇಳಿದೆ. ಆದುದರಿಂದ ಛಾಂದೋಗ್ಯದಲ್ಲಿ ಪ್ರಾಣವು ಉದ್ಗೀಥದ ಕರ್ತೃವೆಂಬುದನ್ನು ಲಕ್ಷಣೆಯಿಂದ ತಿಳಿದುಕೊಳ್ಳಬೇಕು ಇವೆರಡೂ ಒಂದೇ ವಿದ್ಯೆಯೇ.

**ವಿ.**—ವಿದ್ಯೆಯು ಒಂದೇ ಎಂದು ಪೂರ್ವಪಕ್ಷಿಯ ಅಭಿಪ್ರಾಯ; ಏಕೆಂದರೆ ಎರಡು ಕಡೆಯಲ್ಲಿಯೂ ಪ್ರಾಣರೂಪದಲ್ಲಿರುವ ಉದ್ಗೀಥವನ್ನೇ ಉಪಾಸ್ಯವೆಂದು ಹೇಳಿದೆ.

**ದ್ವೈ.**—'**ಆತ್ಮೇತ್ಯೇವೋಪಾಸೀತ** (ಬೃ ಉ. ೧. ೪ ೭) ಎಂಬ ಶ್ರುತಿ ಇರುವುದರಿಂದ ಬಹುಗುಣಗಳನ್ನು ಉಪಸಂಹರಿಸಕೂಡದು—ಎಂದರೆ, ಅದು ಸರಿಯಲ್ಲ; ಏಕೆಂದರೆ ಇಂಥ ಗುಣಗಳನ್ನು ಉಪಾಸಿಸಕೂಡದು—ಎಂಬ ವಿಶೇಷವಚನವಿಲ್ಲ.[1] ಮೇಲೆ ಶ್ರುತಿಯನ್ನು ಉದಾಹರಿಸಿರುವುದು ಅನಾತ್ಮತ್ವದ ನಿವೃತ್ತಿಗಾಗಿ

## ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ॥ ೭ ॥

೭. (ವಿದ್ಯೆಗಳ ಏಕತ್ವ)ವಿಲ್ಲ; ಏಕೆಂದರೆ ಪ್ರಕರಣಭೇದವಿದೆ. (ಇದು) ಪರೋವರೀಯಸ್ತ್ವಾದಿಗಳಂತೆ.

ಪ್ರಕರಣಭೇದವಿರುವುದರಿಂದ ಈ ಎರಡು ವಿದ್ಯೆಗಳು ಬೇರೆಬೇರೆಯಾಗಿರುತ್ತವೆ. ಛಾಂದೋಗ್ಯದಲ್ಲಿ (೧. ೧. ೧) 'ಉದ್ಗೀಥಶಬ್ದವಾಚ್ಯವಾದ ಓಂ ಎಂಬ ಈ ಅಕ್ಷರವನ್ನು ಉಪಾಸಿಸಬೇಕು'[2] ಎಂದು ಪ್ರಾರಂಭಿಸಿ ಅನಂತರ ಉದ್ಗೀಥದ ಅವಯವವಾದ ಓಂಕಾರವನ್ನು ಪ್ರಾಣವೆಂದು ಉಪಾಸಿಸಬೇಕು (ಛಾಂ. ಉ. ೧. ೨. ೭) ಎಂದು ಹೇಳಿದೆ. ಬೃಹದಾರಣ್ಯಕದಲ್ಲಾದರೋ ಉದ್ಗೀಥಶಬ್ದದಿಂದ ಅವಯವವನ್ನು ಗ್ರಹಿಸುವುದಕ್ಕೆ ಕಾರಣವಿಲ್ಲವಾಗಿ ಅದನ್ನು ಪೂರ್ಣವಾಗಿಯೇ ತಿಳಿಸಿರುತ್ತದೆ. ಇಲ್ಲಿ (ಬೃ. ಉ. ೧. ३. ೨) ಉದ್ಗಾತೃವನ್ನೇ ಪ್ರಾಣವೆಂದು ಹೇಳಿರುವುದರಿಂದ ಇದು ಬೇರೊಂದು ಉಪಾಸನೆಯ ಮಾರ್ಗವಾಗಿದೆ ಇದು ಪರೋವರೀಯಸ್ತ್ವಾದಿಗಳಂತೆ. 'ಆಕಾಶವೇ ಇವುಗಳಿಗಿಂತ ಮಹತ್ತರವು. ಆಕಾಶವೇ ಪರಾಯಣವು'[3] (ಛಾಂ. ಉ. ೧. ೯. ೧) ಮತ್ತು 'ಆ ಇದು ಪರೋವರೀಯವಾದ (ಎಂದರೆ ಉತ್ತರೋತ್ತರ ಉತ್ಕೃಷ್ಟತರವಾದ) ಉದ್ಗೀಥವು ಆ ಇದು ಅನಂತವು'[4] (ಛಾಂ ಉ. ೧. ೯. ೨) ಎಂದು ಪರೋವರೀಯಸ್ತ್ವಗುಣವಿಶಿಷ್ಟವಾದ ಉದ್ಗೀಥದ ಉಪಾಸನೆಯು ಅಕ್ಷಿ, ಆದಿತ್ಯ ಮೊದಲಾದವುಗಳಲ್ಲಿರುವ ಹಿರಣ್ಯ

---

1 ಏತೇ ಗುಣಾ ನೋಪಾಸ್ಯಾ ಇತಿ ವಿಶೇಷವಚನಾಭಾವಾತ್ (ಮ. ಭಾ.).

2 ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ।

3 ಆಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್ ।

4 ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ ।

ಶ್ಮಶ್ರುತ್ವಾದಿ ಗುಣವಿಶಿಷ್ಟವಾದ ಉದ್ಗೀಥದ ಉಪಾಸನೆಗಿಂತ (ಛಾಂ ಉ ೧ ೬) ಬೇರೆಯಾಗಿರುವುದು ಒಂದೇ ಶಾಖೆಯ ಎರಡು ಕಡೆಯಲ್ಲಿಯೂ ಪರಮಾತ್ಮದೃಷ್ಟಿಯನ್ನು ಅಧ್ಯಾಸಮಾಡಿ ಹೇಳಿದ್ದರೂ ಉಪಾಸನೆಗಳು ಬೇರೆಬೇರೆಯಾಗಿರುತ್ತವೆ ಇದರಂತೆಯೇ ಶಾಖಾಂತರಗಳಲ್ಲಿರುವ ವಿದ್ಯೆಗಳು ಭಿನ್ನವಾಗಿರುತ್ತವೆ

**ವಿ.**—ಪ್ರಕರಣಭೇದದಿಂದ ವಿದ್ಯೆಗಳ ಐಕ್ಯವಿಲ್ಲ ಛಾಂದೋಗ್ಯದಲ್ಲಿ ಉದ್ಗೀಥದ ಅವಯವವಾದ ಪ್ರಣವವು ಉಪಾಸ್ಯವಾಗಿದ್ದರೆ ಬೃಹದಾರಣ್ಯಕದಲ್ಲಿ ಪೂರ್ಣವಾದ ಉದ್ಗೀಥವೇ ವಿಷಯವಾಗಿದೆ ಪ್ರಕರಣಭೇದದಿಂದ ವಿಷಯಭೇದವಾಗಿ ವಿಷಯಭೇದದಿಂದ ಉಪಾಸನೆಯ ರೂಪವೇ ಬದಲಾಗುತ್ತದೆ

**ದ್ವೈ.**—'ಸರ್ವಗುಣಗಳಿಗೆ ಪ್ರಕರಣಭೇದವಿರುವುದರಿಂದ ಸರ್ವಗುಣೋಪಸಂಹಾರವನ್ನು ಮಾಡದೇ ಇರಬಹುದು,[1] ಪರೋವರೀಯಸ್ತ್ವಾದಿಗಳಲ್ಲಿ ಇಷ್ಟನ್ನೇ ಹೇಳಿದೆ' ಎಂಬುದು ಸೂತ್ರಾರ್ಥ

ಆಕಾಶಪ್ರಕರಣದಲ್ಲಿರುವ ಪರೋವರೀಯಸ್ತ್ವಾದಿ ಉಪಾಸನೆಯಲ್ಲಿ ಹೇಗೆ ಸರ್ವಗುಣೋಪಸಂಹಾರವು ಇಲ್ಲವೋ ಹಾಗೆಯೇ

**ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ॥ ೮ ॥**

ಪ ಸಂಜ್ಞೆಯಿಂದ (ವಿದ್ಯೆಗಳು ಒಂದೇ) ಎಂದರೆ ಅದನ್ನು (ಹಿಂದೆಯೇ) ಹೇಳಿದ್ದಾಗಿದೆ, ಅದೂ (ಎಂದರೆ ನಾಮದ ಏಕತ್ವವೂ) ಇದೆ

ಎರಡೂ ಕಡೆಗಳಲ್ಲಿಯೂ ಒಂದೇ ಸಂಜ್ಞೆ ಅಥವಾ ಹೆಸರಿದ್ದರೆ ವಿದ್ಯೆಗಳ ಐಕ್ಯವು ಆಗುವುದಿಲ್ಲ ಎಂಬುದನ್ನು ಹಿಂದಿನ ಸೂತ್ರದಲ್ಲಿಯೇ ಹೇಳಿದೆ ಭೇದವು ಪ್ರಸಿದ್ಧವಾಗಿರುವ ಪರೋವರೀಯಸ್ತ್ವಾದಿ ಉಪಾಸನೆಗಳಲ್ಲಿಯೂ 'ಉದ್ಗೀಥವಿದ್ಯೆ' ಎಂಬ ನಾಮದ ಐಕ್ಯವು ಇದ್ದೇ ಇದೆ ಮತ್ತು ಅಗ್ನಿಹೋತ್ರ, ದರ್ಶಪೂರ್ಣಮಾಸ ಇವೇ ಮೊದಲಾದ ಭಿನ್ನಕರ್ಮಗಳು ಕಾಠಕವೆಂಬ ಒಂದೇ ಗ್ರಂಥದಲ್ಲಿ ಪಠಿತವಾಗಿರುವುದರಿಂದ ಕಾಠಕವೆಂಬ ಹೆಸರಿನಿಂದ ಕರೆಯುವುದು ಕಂಡುಬರುತ್ತದೆ ಹಾಗೆಯೇ ಇಲ್ಲಿಯೂ ಆಗಬಹುದು ಎಲ್ಲಿ ವಿದ್ಯೆಗಳ ಭೇದಕ್ಕೆ ಕಾರಣವಿಲ್ಲವೋ ಅಲ್ಲಿ ನಾಮದ ಐಕ್ಯದಿಂದ ವಿದ್ಯೆಗಳು ಒಂದೇ ಆಗಬಹುದು, ಉದಾಹರಣೆಗೆ ಸಂವರ್ಗವಿದ್ಯಾದಿಗಳಲ್ಲಿ ವಿದ್ಯೆಗಳ ಐಕ್ಯವು ಆಗಬಹುದು

**ವಿ.**—'ಸಂಜ್ಞೆಯು ಒಂದೇ ಆಗಿರುವುದರಿಂದ ವಿದ್ಯೆಗಳು ಒಂದೇ ಎಂದು ಹೇಳಿದೆ—ಎಂದರೂ ಭೇದವಿದ್ದೇ ಇರುತ್ತದೆ, ಏಕೆಂದರೆ ಅಲ್ಲಿಯೂ ವಿಷಯಭೇದವಿದೆ' ಎಂಬುದು ಸೂತ್ರಾರ್ಥ

---

[1] ಪ್ರಕರಣಭೇದಾನ್ನ ವೋಪಸಂಹಾರಃ ಕಾರ್ಯಃ (ಮ ಭಾ.).

ಉದ್ಗೀಥವಿದ್ಯೆ ಎಂಬ ಸಂಜ್ಞೆಯು ಒಂದೇ ಆಗಿರುವುದರಿಂದ ಆ ವಿದ್ಯೆಗಳು ಒಂದೇ ಎಂದು ಹೇಳಿದರೆ, ವಿಧಿಯ ವಿಷಯಗಳು ಭಿನ್ನವಾಗಿರುವಾಗಲೂ ನಾಮೈಕ್ಯವಿದೆ ಎಂದು ನಾವು ಹೇಳುತ್ತೇವೆ.[1] ಉದಾಹರಣೆಗೆ ನಿತ್ಯಾಗ್ನಿಹೋತ್ರಕ್ಕೂ ಕುಂಡಪಾಯಿಗಳೆಂಬ ಶಾಖೆಯವರ ಅಗ್ನಿಹೊತ್ರಕ್ಕೂ ಅಗ್ನಿಹೋತ್ರವೆಂಬ ಒಂದೇ ಹೆಸರಿದೆ. ಛಾಂದೋಗ್ಯದ ಮೊದಲನೆಯ ಪ್ರಪಾಠಕದಲ್ಲಿ ವಿವರಿಸಿರುವ ಅನೇಕ ಉಪಾಸನೆಗಳಿಗೆ ಉದ್ಗೀಥವೆಂಬ ಹೆಸರಿದೆ.

**ದ್ವೈ೮.**—'ಸರ್ವಶ್ರುತಿಗಳೂ ಪರಬ್ರಹ್ಮನ ನಾಮಗಳಾಗಿರುವುದರಿಂದ ಅವುಗಳನ್ನೆಲ್ಲ ಉಪಸಂಹರಿಸಬೇಕು—ಎಂದರೆ, ನಾವು ಒಪ್ಪಿಕೊಳ್ಳುತ್ತೇವೆ; ಹೀಗೆಯೇ ಹೇಳಿದೆ ; ಮತ್ತು ಆ ಪ್ರಮಾಣವೂ ಇದೆ' ಎಂಬುದು ಸೂತ್ರಾರ್ಥ.

'ಪರಬ್ರಹ್ಮನ ನಾಮಗಳೇ ಈ ವಿದ್ಯೆಗಳಾಗಿವೆ; ಆದುದರಿಂದ ಒಬ್ಬನಾದ ವಿಷ್ಣುವನ್ನೇ ಸರ್ವಗುಣಗಳಿಂದ ಧ್ಯಾನಿಸಬೇಕು' ಎಂದು ಕೌಂಡಿನ್ಯಶ್ರುತಿಯು ಹೇಳುತ್ತದೆ.[2] ಇದೇ ಆ ಪ್ರಮಾಣ

---

[1] ಉದ್ಗೀಥವಿದ್ಯೇತಿ ಸಂಜ್ಞೈಕ್ಯಾತ್ ತತ್—ವಿದ್ಯೈಕ್ಯಮುಕ್ತಂ ಚೇತ್, ತತ್—ಸಂಜ್ಞೈಕ್ಯಂ ವಿಧೇಯಭೇದೇಽಪ್ಯಸ್ತ್ಯೇವ (ಶ್ರೀಭಾಷ್ಯ).

[2] ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಸ್ತಸ್ಮಾದೇಕಃ ಸರ್ವಗುಣೈರ್ವಿಚಿಂತ್ಯ ಇತಿ ಕೌಂಡಿನ್ಯಶ್ರುತೌ (ಮ. ಭಾ.).

## ೪. ವ್ಯಾಪ್ತ್ಯಧಿಕರಣ*

### ವ್ಯಾಪ್ತೇಶ್ಚ ಸಮಂಜಸಮ್ ॥೯॥

೯. (ಓಂಕಾರವು ವೇದವನ್ನೆಲ್ಲ) ವ್ಯಾಪಿಸಿರುವುದರಿಂದ (ಉದ್ಗೀಥವು ಓಂಕಾರದ ವಿಶೇಷಣವೆಂಬುದು) ಸಮಂಜಸವೆ.

**ಓಮಿತ್ಯೇತದಕ್ಷರಮುದ್ಗೀಥಮುಪಾಸೀತ** (ಛಾಂ. ಉ ೧. ೧. ೧) ಎಂಬಲ್ಲಿ ಓಂಕಾರ, ಉದ್ಗೀಥ—ಎಂಬ ಶಬ್ದಗಳು ಸಾಮಾನಾಧಿಕರಣ್ಯದಲ್ಲಿವೆ; ಈ ಶಬ್ದಾರ್ಥಗಳ ಸಂಬಂಧವು ಅಧ್ಯಾಸವೊ ಅಪವಾದವೊ ಏಕತ್ವವೊ ವಿಶೇಷಣವೊ ?—ಎಂಬುದು ಸಂಶಯ. ಎರಡು ವಸ್ತುಗಳಲ್ಲಿ ಒಂದರ ಭಾವನೆಯು ಹೋಗದಿರುವಾಗಲೇ ಅದರ ಮೇಲೆ ಇನ್ನೊಂದರ ಭಾವನೆಯನ್ನು ಹಾಕುವುದು ಇಲ್ಲಿ ಅಧ್ಯಾಸವೆನಿಸುವುದು. ಯಾವುದಾದರೊಂದು ವಸ್ತುವಿನಲ್ಲಿ ಮೊದಲಿದ್ದ ಮಿಥ್ಯಾಭಾವನೆಯು ಅನಂತರ ಉತ್ಪನ್ನವಾದ ಯಥಾರ್ಥಭಾವನೆಯಿಂದ ತೊಲಗಿದರೆ ಅದು ಅಪವಾದವೆನಿಸುವುದು. ಎರಡು ಶಬ್ದಗಳಿಗೆ ಒಂದೇ ಅರ್ಥವಿರುವಾಗ ಏಕತ್ವವೆನಿಸುವುದು. ಕೊನೆಯದು ವಿಶೇಷಣ: ಸರ್ವವೇದಗಳನ್ನೂ ವ್ಯಾಪಿಸಿಕೊಂಡಿರುವ ಓಂಕಾರವನ್ನು ಗ್ರಹಿಸುವ ಪ್ರಸಕ್ತಿಯಿರುವಾಗ ವಿಶೇಷ ಸಂಬಂಧವು ಔದ್ಗಾತ್ರ-ವಿಶೇಷವನ್ನು[1] ತಿಳಿಸುವುದು. 'ನೀಲವಾಗಿರುವಾಗ ಆ ನೈದಿಲೆಯನ್ನು ತೆಗೆದುಕೊಂಡು ಬಾ' ಎನ್ನುವ ಹಾಗೆ ಇಲ್ಲಿಯೂ 'ಉದ್ಗೀಥವಾಗಿರುವ ಆ ಓಂಕಾರವನ್ನು ಉಪಾಸಿಸಬೇಕು.'[2]

ಇಲ್ಲಿ ನಾಲ್ಕು ಪಕ್ಷಗಳು ತೋರುತ್ತಿರುವುವು ; ಇವುಗಳಲ್ಲಿ ಯಾವುದೊಂದನ್ನೂ ಸರಿಯೆಂದು ನಿರ್ಧರಿಸಲು ಕಾರಣವಿರುವುದಿಲ್ಲ—ಎಂಬುದು ಪೂರ್ವಪಕ್ಷ.

ಸಿದ್ಧಾಂತವು ಹೀಗಿದೆ: **ತು**-ಶಬ್ದದ ಸ್ಥಾನದಲ್ಲಿರುವ **ಚ**-ಶಬ್ದವು ಮೊದಲಿನ ಮೂರು ಪಕ್ಷಗಳನ್ನು ನಿರಾಕರಿಸುತ್ತದೆ. ಇಲ್ಲಿ ಮೂರು ಪಕ್ಷಗಳನ್ನು ದೋಷವುಳ್ಳದ್ದೆಂದು ತಿರಸ್ಕರಿಸಿ ವಿಶೇಷಣಪಕ್ಷವೊಂದನ್ನೇ ನಿರ್ದೋಷವೆಂದು ತೆಗೆದುಕೊಂಡಿದೆ. ಸರ್ವವೇದವನ್ನೂ ವ್ಯಾಪಿಸಿಕೊಂಡಿರುವ ಓಂಕಾರವು ಇಲ್ಲಿ ಪ್ರಸಕ್ತವಾಗದೆ ಇರಲೆಂಬ ಕಾರಣದಿಂದ ಉದ್ಗೀಥಶಬ್ದದಿಂದ ಓಂಕಾರವನ್ನು ವಿಶೇಷಿಸಿದೆ. ಉದ್ಗೀಥದ ಅವಯವವಾಗಿರುವ ಓಂಕಾರವನ್ನು ಹೇಗಾದರೂ ಗ್ರಹಿಸಲಿ ಎಂಬುದು ಅಭಿಪ್ರಾಯ.

---

* ಇದು ಮಧ್ವಭಾಷ್ಯದಲ್ಲಿ ಪ್ರಾಪ್ತ್ಯಧಿಕರಣ ಎನಿಸಿದೆ ; ಆದುದರಿಂದ ಸೂತ್ರವೂ ಕೂಡ ಪ್ರಾಪ್ತೇಶ್ಚ ಸಮಂಜಸಮ್ ಎಂದಾಗಿದೆ.

1 ಎಂದರೆ ಉದ್ಗಾತೃವಿನ ಸಾಮಗಾನ.

2 ಯಥಾ ನೀಲಂ ಯದುತ್ಪಲಂ ತದಾನಯೇತಿ । ಏವಮಿಹಾಪ್ಯುದ್ಗೀಥೋ ಯಃ ಓಂಕಾರಸ್ತಮುಪಾಸೀತೇತಿ (ಸೂ. ಭಾ.).

**ವಿ.**—ಛಾಂದೋಗ್ಯದ ಪ್ರಥಮ ಪ್ರಪಾಠಕದಲ್ಲಿ ಉದ್ಗೀಥದ ಅವಯವ ಪ್ರಣವವನ್ನು ಉಪಾಸ್ಯವೆಂದು ಹೇಳಿರುವುದರಿಂದಲೂ ಅದು ಮುಂದೆ ಬರುವ ವಿದ್ಯೆಗಳಲ್ಲಿ ವ್ಯಾಪ್ತವಾಗಿರುವುದರಿಂದಲೂ ಮಧ್ಯದಲ್ಲಿ ಬರುವ 'ಅಲ್ಲಿ ದೇವತೆಗಳು ಉದ್ಗೀಥವನ್ನು ಅನುಷ್ಠಿಸಿದರು'[1] (ಛಾಂ. ಉ. ೧. ೨. ೧) ಎಂಬ ವಾಕ್ಯದಲ್ಲಿ ಉದ್ಗೀಥಶಬ್ದವು ಪ್ರಣವವನ್ನು ಸೂಚಿಸುತ್ತದೆ ಎಂಬುದು ಸಮಂಜಸವಾಗಿರುತ್ತದೆ. ಆದುದರಿಂದ ಛಾಂದೋಗ್ಯದಲ್ಲಿ ಉದ್ಗೀಥಶಬ್ದದಿಂದ ನಿರ್ದಿಷ್ಟವಾದ ಪ್ರಣವವೇ ಪ್ರಾಣದೃಷ್ಟಿಯಿಂದ ಉಪಾಸ್ಯವಾಗಿದೆ; ಆದರೆ ಬೃಹದಾರಣ್ಯಕದಲ್ಲಿ ಉದ್ಗೀಥಶಬ್ದವು ಪೂರ್ಣವಾದ ಉದ್ಗೀಥವನ್ನೇ ಸೂಚಿಸುತ್ತದೆ ಮತ್ತು ಉದ್ಗಾತೃವೇ ಪ್ರಾಣದೃಷ್ಟಿಯಿಂದ ಉಪಾಸ್ಯನಾಗಿದ್ದಾನೆ.[2]

**ದ್ವೈ.**—ಪ್ರಾಪ್ತೇಶ್ಚ ಸಮಂಜಸಮ್ ॥ ೩. ೩. ೧೦ ॥

೧೦. ಯೋಗ್ಯತೆಯ ಪ್ರಕಾರ ಎರಡು ಪಕ್ಷಗಳಿಗೂ ಪ್ರಾಪ್ತಿಯು ಕೂಡುತ್ತದೆ.

ಸರ್ವಗುಣೋಪಸಂಹಾರವೂ ಅನುಪಸಂಹಾರವೂ ಜೀವನ ಯೋಗ್ಯತಾ-ವಿಶೇಷದಿಂದ ಯುಕ್ತವಾಗುತ್ತದೆ.[3] 'ಚತುರ್ಮುಖಬ್ರಹ್ಮನು ಪರಮೇಶ್ವರನನ್ನು ಸರ್ವಗುಣಗಳಿಂದಲೂ ಉಪಾಸಿಸುತ್ತಾನೆ; ಇತರ ದೇವತೆಗಳು ತಮ್ಮ ಸಾಮರ್ಥ್ಯಕ್ಕನುಸಾರವಾಗಿ ಉಪಾಸಿಸುತ್ತಾರೆ; ಮನುಷ್ಯರಾದರೋ ಅಲ್ಪಗುಣಗಳಿಂದಲೇ ಉಪಾಸಿಸುತ್ತಾರೆ' ಎಂದು ಭವಿಷ್ಯತ್ಪುರಾಣದಲ್ಲಿ ಹೇಳಿದೆ.

---

[1] ತದ್ಧ ದೇವಾ ಉದ್ಗೀಥಮಾಜಹ್ರುಃ ।

[2] ಅತಶ್ಚೋದ್ಗೀಥಾವಯವಭೂತಃ ಪ್ರಣವ ಏವೋದ್ಗೀಥಶಬ್ದನಿರ್ದಿಷ್ಟ ಇತಿ ಸ ಏವ ಪ್ರಾಣದೃಷ್ಟ್ಯೋಪಾಸ್ಯಶ್ಛಾಂದೋಗ್ಯೇ ಪ್ರತಿಪತ್ತವ್ಯಃ । ವಾಜಸನೇಯಕೇ ತು ಕೃತ್ಸ್ನೋದ್ಗೀಥ-ವಿಷಯ ಉದ್ಗೀಥಶಬ್ದ ಇತಿ ಕೃತ್ಸ್ನೋದ್ಗೀಥಸ್ಯ ಕರ್ತೋದ್ಗಾತಾ ಪ್ರಾಣದೃಷ್ಟ್ಯೋಪಾಸ-ಇತಿ ವಿದ್ಯಾನಾನಾತ್ವಂ ಸಿದ್ಧಂ (ಶ್ರೀಭಾಷ್ಯ)

[3] ಯುಜ್ಯತೇ ಚೋಪಸಂಹಾರೋಽನುಪಸಂಹಾರಶ್ಚ ಯೋಗ್ಯತಾವಿಶೇಷಾತ್ (ಮ. ಭಾ.).

## ೫. ಸರ್ವಭೇದಾಧಿಕರಣ

### ಸರ್ವಾಭೇದಾದನ್ಯತ್ರೇಮೇ ॥ ೧೦ ॥

೧೦. ಸರ್ವವೂ ಅಭೇದವಾಗಿರುವುದರಿಂದ ಈ (ಗುಣಗಳನ್ನು) ಇತರ ಸ್ಥಾನ ಗಳಲ್ಲಿಯೂ (ಉಪಸಂಹರಿಸಬೇಕು)

ಬೃಹದಾರಣ್ಯಕದಲ್ಲಿಯೂ (೬ ೧) ಛಾಂದೋಗ್ಯದಲ್ಲಿಯೂ (೫ ೧) ಶ್ರೇಷ್ಠತ್ವ ಗುಣದಿಂದ ಕೂಡಿದ ಪ್ರಾಣವನ್ನು ಉಪಾಸಿಸಬೇಕೆಂದು ಹೇಳಿದೆ ಅಲ್ಲಿ ವಾಗಾದಿಗಳಿಗೆ ವಸಿಷ್ಠತ್ವಾದಿಗುಣಗಳನ್ನು ಹೇಳಿ ಅದನ್ನು ಪ್ರಾಣಕ್ಕೆ ಪ್ರತ್ಯರ್ಪಣೆಮಾಡಲಾಗಿದೆ ಆದರೆ ಕೌಷೀತಕಿ (೨ ೧೪) ಮೊದಲಾದ ಶಾಖೆಗಳಲ್ಲಿ ಪ್ರಾಣದ ಶ್ರೇಷ್ಠತ್ವವನ್ನು ಹೇಳಿದೆಯೇ ಹೊರತು ವಸಿಷ್ಠತ್ವಾದಿಗುಣಗಳನ್ನು ಹೇಳಿಲ್ಲ. ಒಂದು ಕಡೆಯಲ್ಲಿ ಹೇಳಿರುವ ವಸಿಷ್ಠತ್ವಾದಿಗುಣಗಳನ್ನು ಇನ್ನೊಂದು ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕೊ ಅಥವಾ ಬೇಡವೊ ?—ಎಂಬುದು ಸಂಶಯ.

ಸೇರಿಸಿಕೊಳ್ಳಬಾರದು—ಎಂಬುದು ಪೂರ್ವಪಕ್ಷ ; ಏಕೆಂದರೆ ಅಲ್ಲಿ 'ಯಾವ ಹೀಗೆ ತಿಳಿದುಕೊಂಡವನಾಗಿ' ಎಂದು ಅಲ್ಲಲ್ಲಿ **ಏವಂ**-ಶಬ್ದದಿಂದಲೇ ವೇದ್ಯವಸ್ತುವನ್ನು ತಿಳಿಸಿದೆ. **ಏವಂ**-ಶಬ್ದಕ್ಕೆ ಸಮೀಪದಲ್ಲಿರುವುದೇ ವಿಷಯವಾಗಿದೆ.

ಒಂದು ಕಡೆಯಲ್ಲಿ ಹೇಳಿರುವ ವಸಿಷ್ಠತ್ವಾದಿಗುಣಗಳನ್ನು ಮತ್ತೊಂದು ಕಡೆ ಯಲ್ಲಿಯೂ ಸೇರಿಸಿಕೊಳ್ಳಬೇಕು—ಎಂಬುದು ಸಿದ್ಧಾಂತ , ಏಕೆಂದರೆ ಪ್ರಾಣೋಪಾಸನೆಯು ಎಲ್ಲೆಲ್ಲಿಯೂ ಒಂದೇ ಆಗಿರುತ್ತದೆ ಕೌಷೀತಕಿಶಾಖೆಯಲ್ಲಿರುವ **ಏವಂ**-ಶಬ್ದವು ಬೃಹ-ದಾರಣ್ಯಕದಲ್ಲಿರುವ ಗುಣಸಮೂಹವನ್ನು ಹೇಳದಿದ್ದರೂ ಬೃಹದಾರಣ್ಯಕದಲ್ಲಿರುವ **ಏವಂ**-ಶಬ್ದವು ಅದನ್ನು ಹೇಳುತ್ತದೆ ಗುಣಯುಕ್ತವಾದ ಪ್ರಾಣವು ಒಂದೇ ಆಗಿರುವುದ ರಿಂದ ಒಂದು ಶಾಖೆಯಲ್ಲಿ ಉಪಾಸ್ಯವಾಗಿರುವ ಗುಣಗಳನ್ನು ಮತ್ತೊಂದು ಶಾಖೆ ಯಲ್ಲಿಯೂ ಅಭಿಯೋಗವಿಶೇಷದಿಂದ ಸೇರಿಸಿಕೊಳ್ಳಬಹುದು.[1] ಆದುದರಿಂದ ಹೀಗೆ ಒಂದು ವಸ್ತುವಿಗೆ ಸಂಬದ್ಧವಾಗಿರುವ ಗುಣಗಳನ್ನು ಒಂದೇ ಕಡೆಯಲ್ಲಿ ಹೇಳಿದ್ದರೂ ಸರ್ವತ್ರ ಉಪಸಂಹರಿಸಿಕೊಳ್ಳಬೇಕು.

**ವಿ.**—ಕೌಷೀತಕಿಯಲ್ಲಿ ಹೇಳಿರುವ ಪ್ರಾಣವಿದ್ಯೆಯಲ್ಲಿಯೂ ಈ ವಸಿಷ್ಠತ್ವಾದಿ ಗುಣಗಳು ಉಪಾಸ್ಯವಾದ ಪ್ರಾಣದಲ್ಲಿ ತೋರಿಬರುತ್ತವೆ : ಏಕೆಂದರೆ ಸರ್ವಶಾಖೆ ಯಲ್ಲಿಯೂ ಈ ಪ್ರಾಣವಿದ್ಯೆಗಳಿಗೆ ಅಭೇದವಿದೆ. ಕೌಷೀತಕಿಪ್ರಾಣವಿದ್ಯೆಯಲ್ಲಿ ವಸಿಷ್ಠತ್ವಾದಿಗುಣಗಳನ್ನು ಹೇಳದಿದ್ದರೂ ಪ್ರಾಣದ ಜ್ಯೇಷ್ಠತ್ವ-ಶ್ರೇಷ್ಠತ್ವಾದಿಗುಣಗಳನ್ನು ಉಪ

---

[1] ಏವಮಭಿಯೋಗವಿಶೇಷಾಚ್ಛಾಖಾಂತರೇಽಪ್ಯುಪಾಸ್ಯಾ ಗುಣಾಃ ಶಾಖಾಂತರೇಽಪ್ಯ-ಸ್ಯೇರನ್ (ಸೂ. ಭಾ.).

ಪಾದಿಸಲು ವಸಿಷ್ಠತ್ವಾದಿಗುಣಗಳು ಆವಶ್ಯಕವಾಗಿವೆ. ಆದುದರಿಂದ ಕೌಷೀತಕಿ-ಪ್ರಾಣವಿದ್ಯೆಯಲ್ಲಿಯೂ ವಸಿಷ್ಠತ್ವಾದಿಗುಣಗಳನ್ನು ಸೇರಿಸಿಕೊಳ್ಳಬೇಕು.

**ದ್ವೈತ.**—'ಬ್ರಹ್ಮಾದಿಗಳು ಪರಮೇಶ್ವರನು ಸರ್ವಗುಣಯುಕ್ತನೆಂದು ಉಪಾಸಿಸುವುದರಿಂದ ಬೇರೆ ಫಲವನ್ನು ಹೊಂದುತ್ತಾರೆ'[1] ಎಂದರೆ ಸಂಪೂರ್ಣ ಆನಂದಾದ್ಯಾತ್ಮಕವಾದ ಮೋಕ್ಷಫಲದಲ್ಲಿ ಭಾಗಿಗಳಾಗುತ್ತಾರೆ—ಎಂಬುದು ಸೂತ್ರಾರ್ಥ

[1] ಸರ್ವಗುಣಯುಕ್ತತ್ವೇನೋಪಾಸನಾದನ್ಯತ್ರೈವ ಫಲೇ ಬ್ರಹ್ಮಾದಯೋ ಭವಂತಿ (ಮ. ಭಾ.).

# ೬. ಆನಂದಾದ್ಯಧಿಕರಣ*

(ಸೂ. ೧೧–೧೩)

**ಆನಂದಾದಯಃ ಪ್ರಧಾನಸ್ಯ ॥ ೧೧ ॥**

೧೧ ಪ್ರಧಾನದ (ಎಂದರೆ ಬ್ರಹ್ಮದ) ಆನಂದಾದಿಗಳನ್ನು (ಸರ್ವತ್ರ ತಿಳಿದುಕೊಳ್ಳಬೇಕು).

ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ಶ್ರುತಿಗಳು ಆನಂದರೂಪತ್ವ ವಿಜ್ಞಾನಘನತ್ವ ಸರ್ವಗತತ್ವ ಸರ್ವಾತ್ಮತ್ವ—ಇವೇ ಮೊದಲಾದ ಬ್ರಹ್ಮಧರ್ಮಗಳನ್ನು ಬೇರೆ ಬೇರೆಯಾಗಿ ಹೇಳುತ್ತವೆ. ಯಾವ ಗುಣಗಳು ಎಲ್ಲಿ ಎಷ್ಟು ಶ್ರುತವಾಗಿವೆಯೋ ಅಷ್ಟೇ ಅಲ್ಲಿ ತಿಳಿಯತಕ್ಕದ್ದೊ ಅಥವಾ ಎಲ್ಲವನ್ನೂ ಎಲ್ಲ ಕಡೆಗಳಲ್ಲಿಯೂ ತಿಳಿಯಬೇಕೊ ?—ಎಂಬುದು ಸಂಶಯ

ಆಯಾ ಶ್ರುತಿಯಲ್ಲಿ ವಿಭಾಗಿಸಿ ಹೇಳಿರುವಂತೆ ಧರ್ಮಗಳನ್ನು ತಿಳಿದುಕೊಳ್ಳಬೇಕು—ಎಂಬುದು ಪೂರ್ವಪಕ್ಷ. ಇದಕ್ಕೆ ಪರಿಹಾರವು ಹೀಗಿದೆ : ಪ್ರಧಾನದ ಎಂದರೆ ಬ್ರಹ್ಮದ ಆನಂದವೇ ಮೊದಲಾದ ಸರ್ವಧರ್ಮಗಳನ್ನೂ ಸರ್ವತ್ರ ತಿಳಿಯಬೇಕು ;[1] ಏಕೆಂದರೆ ಹಿಂದಿನ ಸೂತ್ರದಲ್ಲಿ ಹೇಳಿರುವಂತೆ ಸರ್ವಾಭೇದವಿದೆ : ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ಶ್ರುತಿಗಳಲ್ಲಿ ವಿಶೇಷ್ಯವು ಒಂದೇ ಆಗಿರುತ್ತದೆ ; ಆದುದರಿಂದ ಬ್ರಹ್ಮಧರ್ಮಗಳೂ ಸಾರ್ವತ್ರಿಕವಾಗಿರುತ್ತವೆ.

ವಿ.—ಬ್ರಹ್ಮಸ್ವರೂಪಗುಣಗಳನ್ನು ಎಲ್ಲ ಬ್ರಹ್ಮೋಪಾಸನೆಗಳಲ್ಲಿಯೂ ಉಪಸಂಹರಿಸಬೇಕೊ ಅಥವಾ ಬೇಡವೊ—ಎಂಬುದನ್ನು ನಿರ್ಣಯಿಸಬೇಕು. ಗುಣಿಯಾದ ಪರಬ್ರಹ್ಮನು ಎಲ್ಲ ಉಪಾಸನೆಗಳಲ್ಲಿಯೂ ಒಬ್ಬನೇ ಆಗಿರುವುದರಿಂದಲೂ ಗುಣಿಗಳು ಗುಣಿಯನ್ನು ಉಪಸಂಹರಿಸಬೇಕು.[2]

---

* ಶ್ರೀಭಾಷ್ಯದಲ್ಲಿ ಈ ಅಧಿಕರಣವು ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಎಂಬ ಸೂತ್ರದವರೆಗೆ ಎರಡು ಸೂತ್ರಗಳನ್ನು ಒಳಕೊಂಡಿದ್ದರೆ ಮಧ್ವಭಾಷ್ಯದಲ್ಲಿ ಈ ಅಧಿಕರಣಕ್ಕೆ ಒಂದೇ ಸೂತ್ರವಿದೆ.

1 ಆನಂದಾದಯಃ ಪ್ರಧಾನಸ್ಯ ಬ್ರಹ್ಮಣೋ ಧರ್ಮಾಃ ಸರ್ವೇ ಸರ್ವತ್ರ ಪ್ರತಿಪತ್ತವ್ಯಾಃ (ಸೂ. ಭಾ.).

2 ಪ್ರಧಾನಸ್ಯ ಗುಣಿನೋ ಬ್ರಹ್ಮಣಃ ಸರ್ವೇಷೂಪಾಸನೇಷ್ವಭೇದಾತ್, ಗುಣ್ಯಪೃಥಗ್ಭಾವಾದ್ಗುಣಾನಾಂ, ಸರ್ವತ್ರಾನಂದಾದಯಸ್ತದ್ಗುಣಾ ಉಪಸಂಹರ್ತವ್ಯಾಃ (ಶ್ರೀಭಾಷ್ಯ).

ದ್ವೈ.—'ಪ್ರಧಾನ ಫಲಭೂತವಾದ ಮೋಕ್ಷಕ್ಕಾಗಿ ಮುಮುಕ್ಷುಗಳೆಲ್ಲರೂ ಆನಂದ-ಜ್ಞಾನ-ನಿರ್ದೋಷತ್ವ-ಆತ್ಮತ್ವರೂಪಗಳಾದ ನಾಲ್ಕು ಗುಣಗಳನ್ನು ಉಪಾಸಿಸಬೇಕು'[1] ಎಂಬುದು ಸೂತ್ರಾರ್ಥ

**ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ* ॥ ೧೨ ॥**

೧೨ ಪ್ರಿಯಶಿರಸ್ಸೇ ಮೊದಲಾದುವುಗಳು ಮಾತ್ರ ಪ್ರಾಪ್ತವಾಗುವುದಿಲ್ಲ, ಏಕೆಂದರೆ ಭೇದವಾದರೆ ಹೆಚ್ಚುಕಡಮೆಯಾಗುತ್ತವೆ

**ಆಕ್ಷೇಪ**—ಹೀಗಾದರೆ ಪ್ರಿಯವನ್ನು ಶಿರಸ್ಸಾಗಿ ಹೊಂದಿರುವುದೇ ಮೊದಲಾದ ಧರ್ಮಗಳೆಲ್ಲ ಸರ್ವತ್ರ ಸಂಕರವಾಗುತ್ತವೆ ಏಕೆಂದರೆ ತೈತ್ತಿರೀಯದಲ್ಲಿ (೨ ೫) ಆನಂದಮಯವನ್ನು ಕುರಿತು ಹೀಗೆ ಹೇಳಿದೆ 'ಅವನಿಗೆ ಪ್ರಿಯವೇ ತಲೆ, ಮೋದವು ದಕ್ಷಿಣಪಕ್ಷ, ಪ್ರಮೋದವು ಉತ್ತರಪಕ್ಷ, ಆನಂದವು ಮಧ್ಯಭಾಗ, ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ'[2]

**ಪರಿಹಾರ**—ತೈತ್ತಿರೀಯಕದಲ್ಲಿ ಹೇಳಿರುವ ಪ್ರಿಯಶಿರಸ್ತ್ವಾದಿಧರ್ಮಗಳಿಗೆ ಮತ್ತೊಂದು ಕಡೆಯಲ್ಲಿ ಪ್ರಾಪ್ತಿಯಿಲ್ಲ, ಏಕೆಂದರೆ ಪ್ರಿಯ ಮೋದ ಪ್ರಮೋದ ಆನಂದ— ಎಂಬಿವು ಪರಸ್ಪರವಾಗಿಯೂ ಭೋಕ್ತೃಗಳ ಅಪೇಕ್ಷೆಯಿಂದಲೂ ಹೆಚ್ಚುಕಡಿಮೆಯಾಗಿರುತ್ತವೆ ಹೆಚ್ಚುಕಡಮೆಗಳು ಭೇದವಿರುವಾಗ ಸಂಭವಿಸುತ್ತವೆ, ಆದರೆ ಬ್ರಹ್ಮದಲ್ಲಿ ಯಾವ ಭೇದವೂ ಇಲ್ಲ ಈ ಪ್ರಿಯಶಿರಸ್ತ್ವಾದಿಗಳು ಬ್ರಹ್ಮದ ಧರ್ಮಗಳಲ್ಲ, ಕೋಶಗಳ ಧರ್ಮಗಳು ಎಂದು ಹಿಂದೆಯೇ (೧ ೧ ೧೨) ತಿಳಿಸಿದೆ ಪರಬ್ರಹ್ಮದಲ್ಲಿ ಚಿತ್ತವನ್ನು ನಿಲ್ಲಿಸಲು ಇವುಗಳನ್ನು ಕಲ್ಪಿಸಿದೆಯೇ ಹೊರತು ಉಪಾಸ್ಯವೆಂದು ಹೇಳಿರುವುದಿಲ್ಲ ಉಪಚಿತ-ಅಪಚಿತ-ಗುಣತ್ವವು ಭೇದವ್ಯವಹಾರವಿರುವ ಸಗುಣಬ್ರಹ್ಮದಲ್ಲಿ ಹೊಂದುತ್ತದ, ನಿರ್ಗುಣಬ್ರಹ್ಮದಲ್ಲಿ ಹೊಂದುವುದಿಲ್ಲ[3]

ಪ್ರಿಯಶಿರಸ್ತ್ವಾದಿ-ಗುಣಗಳು ಬ್ರಹ್ಮಗುಣಗಳಲ್ಲ, ಏಕಂದರೆ ಅವು ಪರಬ್ರಹ್ಮನ ಪುರುಷಾಕೃತಿಯ ರೂಪಕದಲ್ಲಿ ಅಂತರ್ಗತವಾಗಿವೆ, ಹಾಗಾಗದಿದ್ದರೆ ಶಿರಸ್ಸೇ ಮೊದಲಾದ

---

[1] ಪ್ರಧಾನಫಲಸ್ಯ ಮೋಕ್ಷಸ್ಯಾರ್ಥೇ ಆನಂದೋ ಜ್ಞಾನಂ ಸದಾತ್ಮೇತ್ಯುಪಾಸ್ಯಾ ಏವ (ಮ ಭಾ)

* ಇದು ಮಧ್ವಭಾಷ್ಯದಲ್ಲಿ ಪ್ರಿಯಶಿರಸ್ತ್ವಾದ್ಯಧಿಕರಣ ಎಂಬ ಬೇರೆಯ ಅಧಿಕರಣವಾಗಿದೆ

[2] ತಸ್ಯ ಪ್ರಿಯಮೇವ ಶಿರಃ। ಮೋದೋ ದಕ್ಷಿಣಃ ಪಕ್ಷಃ। ಪ್ರಮೋದ ಉತ್ತರಃ ಪಕ್ಷಃ। ಆನಂದ ಆತ್ಮಾ। ಬ್ರಹ್ಮ ಪುಚ್ಛಂ ಪ್ರತಿಷ್ಠಾ।

[3] ಉಪಚಿತಾಪಚಿತಗುಣತ್ವಂ ಹಿ ಸತಿ ಭೇದವ್ಯವಹಾರೇ ಸಗುಣೇ ಬ್ರಹ್ಮಣ್ಯುಪಪದ್ಯತೇ ನ ನಿರ್ಗುಣೇ ಪರಸ್ಮಿನ್ ಬ್ರಹ್ಮಣಿ (ಸೂ ಭಾ)

ಅವಯವಭೇದದಿಂದ ಪರಬ್ರಹ್ಮನಿಗೆ ಉಪಚಯ-ಅಪಚಯಗಳು ಉಂಟಾಗುತ್ತಿದ್ದವು[1] ಹಾಗೆ ಅಂಗೀಕರಿಸಿದರೆ **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ ಉ) ಎಂಬ ಸ್ವರೂಪ ಶೋಧಕ-ವಾಕ್ಯಕ್ಕೆ ವಿರೋಧವಾಗುತ್ತದೆ

**ದ್ವೈ.**—'ಪ್ರಿಯಶಿರಸ್ತ್ವಾದಿಗುಣೋಪಾಸನೆಯ ಪ್ರಾಪ್ತಿಯು ಎಲ್ಲರಿಗೂ ಇಲ್ಲ, ಕೆಲವರಿಗೆ ಮಾತ್ರ ಇದೆ, ಮುಕ್ತಿಯೆಂಬ ಫಲದಲ್ಲಿ ಭೇದವಿರುವುದರಿಂದ ಗುಣೋಪಾಸನೆಯಲ್ಲಿಯೂ ವೃದ್ಧಿ-ಹ್ರಾಸಗಳನ್ನು ಅಂಗೀಕರಿಸಬೇಕು'[2] ಎಂಬುದು ಸೂತ್ರಾರ್ಥ

**ಇತರೇ ತ್ವರ್ಥಸಾಮಾನ್ಯಾತ್* ॥ ೧೩ ॥**

೧೩ ಉಳಿದ (ಧರ್ಮಗಳು ಸರ್ವತ್ರ ಇರುತ್ತವೆ), ಏಕೆಂದರೆ ಅರ್ಥವು (ಎಂದರ ಧರ್ಮಿಯು) ಒಂದೇ ಆಗಿರುತ್ತದೆ

ಉಳಿದ ಆನಂದಾದಿಧರ್ಮಗಳನ್ನು ಬ್ರಹ್ಮಸ್ವರೂಪ-ಪ್ರತಿಪಾದನೆಗಾಗಿ ಹೇಳಿರುವುದರಿಂದ ಅವು ಎಲ್ಲ ಕಡೆಗಳಲ್ಲಿಯೂ ಪ್ರಮಾಣವಾಗಿರುವುದೆಂದು ತಿಳಿಯಬೇಕು, ಏಕಂದರೆ ಪ್ರತಿಪಾದ್ಯವಾದ ಧರ್ಮಿಯು (ಎಂದರೆ ಬ್ರಹ್ಮವು) ಒಂದೇ ಆಗಿರುತ್ತದೆ ಆನಂದಾದಿ-ಧರ್ಮಗಳನ್ನು ಜ್ಞಾನಕ್ಕಾಗಿ ಹೇಳಿದೆಯೇ ಹೊರತು ಉಪಾಸನಗಲ್ಲ

**ವಿ**—'ಉಳಿದ ಸ್ವರೂಪ-ನಿರೂಪಕ-ಧರ್ಮಗಳನ್ನು ಸರ್ವೋಪಾಸನೆಗಳಲ್ಲಿಯೂ ಅನುಸಂಧಾನಮಾಡಬೇಕು, ಏಕೆಂದರೆ ಅವುಗಳು ಬ್ರಹ್ಮಸ್ವರೂಪಕ್ಕ ಸಮಾನವಾಗಿರುತ್ತವೆ' ಎಂಬುದು ಸೂತ್ರಾರ್ಥ

ಬ್ರಹ್ಮಸ್ವರೂಪವನ್ನು ನಿರೂಪಿಸುವ ಧರ್ಮಗಳನ್ನು—ಬ್ರಹ್ಮಸ್ವರೂಪದಂತೆಯೇ—ಸರ್ವತ್ರ ಅನುಸಂಧಾನಮಾಡಬೇಕು, ಏಕಂದರೆ ಆ ಆನಂದಾದಿ-ಧರ್ಮಗಳು ಬ್ರಹ್ಮಸ್ವರೂಪಕ್ಕ ಸಮಾನವಾಗಿರುತ್ತವೆ ಸತ್ಯತ್ವ ಜ್ಞಾನತ್ವ ಆನಂದತ್ವ ಅಮಲತ್ವ ಅನಂತತ್ವ—ಇವೇ ಮೊದಲಾದ ಗುಣಗಳು ಈ ಜಾತಿಗೆ ಸೇರಿದುವು

**ದ್ವೈ**—'ಆನಂದಾದಿ ನಾಲ್ಕು ಗುಣಗಳಿಂದಲೂ ಸರ್ವಗುಣಗಳಿಂದಲೂ ಭಿನ್ನವಾದ ಇತರ ಗುಣಗಳು ಫಲಸಾಮ್ಯದ ಅಪೇಕ್ಷೆಯಿಂದ ಉಪಸಂಹಾರಪೂರ್ವಕವಾಗಿ ಉಪಾಸ್ಯವಾಗಿವೆ'[3] ಎಂಬುದು ಸೂತ್ರಾರ್ಥ

---

[1] ಅನ್ಯಥಾ ಶಿರಃಪಕ್ಷಪುಚ್ಛಾದ್ಯವಯವಭೇದೇ ಸತಿ ಬ್ರಹ್ಮಣೋಽಪ್ಯುಪಚಯಾಪಚಯೌ ಪ್ರಸಜ್ಯೇಯಾತಾಮ್ (ಶ್ರೀಭಾಷ್ಯ)

[2] ಫಲಭೇದಾರ್ಥಮುಪಚಯಾಪಚಯಯೋರ್ಭಾವಾನ್ನ ಸರ್ವೇಷಾಂ ಪ್ರಿಯಶಿರಸ್ತ್ವಾದಿಗುಣೋಪಾಸಾಪ್ರಾಪ್ತಿಃ (ಮ ಭಾ)

* ಇದು ಮಧ್ವಭಾಷ್ಯದಲ್ಲಿ ಫಲಸಾಮ್ಯಾಧಿಕರಣ ಎಂಬ ಬೇರೆಯ ಅಧಿಕರಣವಾಗಿದೆ

[3] ಇತರೇ ಗುಣಾಃ ಫಲಸಾಮ್ಯಾಪೇಕ್ಷಯೋಪಸಂಹರ್ತವ್ಯಾಃ (ಮ ಭಾ)

## ೭. ಆಧ್ಯಾನಾಧಿಕರಣ

(ಸೂ. ೧೪—೧೫)

**ಆಧ್ಯಾನಾಯ ಪ್ರಯೋಜನಾಭಾವಾತ್ ॥ ೧೪ ॥**

೧೪. ಆಧ್ಯಾನಪೂರ್ವಕವಾದ (ಸಮ್ಯಗ್ದರ್ಶನಕ್ಕಾಗಿ ಹೇಳಿದೆ); ಏಕೆಂದರೆ (ಬೇರೆ) ಪ್ರಯೋಜನವಿಲ್ಲ.

ಕಠೋಪನಿಷತ್ತಿನಲ್ಲಿ ಹೀಗೆ ಹೇಳಿದೆ. 'ಇಂದ್ರಿಯಗಳಿಗಿಂತ ವಿಷಯಗಳು ಶ್ರೇಷ್ಠವಾದುವು, ವಿಷಯಗಳಿಗಿಂತ ಮನಸ್ಸು ಶ್ರೇಷ್ಠವಾದುದು, ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವಾದುದು, ಬುದ್ಧಿಗಿಂತ ಮಹತ್ ಎಂಬ ಆತ್ಮನು ಶ್ರೇಷ್ಠನು'[1] (೧. ೩. ೧೦); ಇವೆಲ್ಲ ಕ್ರಮವಾಗಿ ಒಂದಕ್ಕಿಂತ ಒಂದು ಶ್ರೇಷ್ಠವೊ ಅಥವಾ ಪುರುಷನು ಇವೆಲ್ಲಕ್ಕಿಂತ ಶ್ರೇಷ್ಠನೊ? —ಎಂಬುದು ಸಂಶಯ. ಮುಂದೆಮುಂದೆ ಬರುವುದೆಲ್ಲ ಹಿಂದುಹಿಂದಿನದಕ್ಕಿಂತ ಶ್ರೇಷ್ಠವು —ಎಂಬುದು ಪೂರ್ವಪಕ್ಷ; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ.

ಸಿದ್ಧಾಂತವು ಹೀಗಿದೆ: ಪುರುಷನು ಇವೆಲ್ಲಕ್ಕಿಂತಲೂ ಶ್ರೇಷ್ಠನು ಎಂದು ಪ್ರತಿಪಾದಿಸಿದೆಯೆಂಬುದೇ ಯುಕ್ತವು; ಇವೆಲ್ಲವೂ ಪ್ರತ್ಯೇಕವಾಗಿ ಶ್ರೇಷ್ಠವೆಂದು ಪ್ರತಿಪಾದಿಸುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಆದರೆ ಪುರುಷನು ಇಂದ್ರಿಯಾದಿಗಳಿಗಿಂತ ಶ್ರೇಷ್ಠನೆಂದೂ ಸರ್ವಾನರ್ಥಗಳನ್ನು ಮೀರಿರುವವನೆಂದೂ ಅರಿತುಕೊಂಡರೆ ಮೋಕ್ಷಸಿದ್ಧಿಯೆಂಬ ಪ್ರಯೋಜನವು ಕಂಡುಬರುತ್ತದೆ; 'ಅವನನ್ನು ಅರಿತುಕೊಂಡು ಮೃತ್ಯುಮುಖದಿಂದ ಮುಕ್ತನಾಗುತ್ತಾನೆ'[2] (ಕ. ಉ. ೧. ೩. ೧೫) ಎಂದು ಶ್ರುತಿಯೂ ಹೇಳುತ್ತದೆ. 'ಆಧ್ಯಾನಕ್ಕಾಗಿ ಹೇಳಿದೆ' ಎಂಬುದಕ್ಕೆ 'ಆಧ್ಯಾನಪೂರ್ವಕವಾದ ಸಮ್ಯಗ್ದರ್ಶನಕ್ಕಾಗಿ' ಎಂದರ್ಥ ಇಲ್ಲಿ ಆಧ್ಯಾನವನ್ನು ಸ್ವಪ್ರಧಾನವಾಗಿ ಹೇಳಿಲ್ಲ.

**ವಿ.**—ಬೇರೆ ಯಾವ ಪ್ರಯೋಜನವೂ ಇಲ್ಲದಿರುವುದರಿಂದ ಪ್ರಿಯಶಿರಸ್ತ್ವವೇ ಮೊದಲಾದ ರೂಪಣವನ್ನು ಧ್ಯಾನಕ್ಕಾಗಿ ಉಪದೇಶಿಸಿದೆ. **ಬ್ರಹ್ಮವಿದಾಪ್ನೋತಿ ಪರಮ್** (ತೈ. ಉ. ೨. ೧) ಎಂಬಲ್ಲಿ ಹೇಳಲ್ಪಟ್ಟ ಧ್ಯಾನದ ಸಿದ್ಧಿಗಾಗಿ ಶ್ರುತಿಯು ಆನಂದಮಯನಾದ ಬ್ರಹ್ಮನನ್ನು ಪ್ರಿಯಮೋದಾದಿರೂಪದಿಂದ ವಿಂಗಡಿಸಿ, ಅವುಗಳನ್ನು ಶಿರಃಪಕ್ಷಾದಿಗಳಿಗೆ ಹೋಲಿಸಿದೆ. ಇದರಿಂದ ಸಮಸ್ತಕೋಶಗಳಿಗೂ ಅಂತರತಮನಾದ ಆನಂದಮಯನು ಬುದ್ಧಿಗೆ ಸ್ಪಷ್ಟವಾಗಿ ವಿಷಯನಾಗುತ್ತಾನೆ.

---

[1] ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥

[2] ನಿಚಾಯ್ಯ ತನ್ಮೃತ್ಯುಮುಖಾತ್ ಪ್ರಮುಚ್ಯತೇ ।

**ದ್ವೈ.**—'ಸರ್ವಗುಣಗಳನ್ನೂ ಹೇಳಿರುವುದು ಧ್ಯಾನಕ್ಕಾಗಿ ; ಏಕೆಂದರೆ ಬೇರೆಯ ಪ್ರಯೋಜನವಿಲ್ಲ'[1] ಎಂಬುದು ಸೂತ್ರಾರ್ಥ.

## ಆತ್ಮಶಬ್ದಾಚ್ಚ ॥ ೧೫ ॥

೧೫ ಆತ್ಮಶಬ್ದವಿರುವುದರಿಂದಲೂ (ಹೀಗೆ ತಿಳಿಯಬೇಕು)

ಪ್ರಕೃತನಾದ ಪುರುಷನನ್ನು ಶ್ರುತಿಯು ಆತ್ಮನೆಂದು ಕರೆದಿರುವುದರಿಂದಲೂ ಮೇಲೆ ಹೇಳಿದ ಸಿದ್ಧಾಂತವು ಸ್ಥಿರವಾಗಿರುತ್ತದೆ : 'ಪ್ರಾಣಿಗಳಲ್ಲೆಲ್ಲ ಗೂಢವಾಗಿರುವ ಈ ಆತ್ಮನು ಪ್ರಕಾಶಿಸುವುದಿಲ್ಲ ; ಆದರೆ ಸೂಕ್ಷ್ಮದರ್ಶಿಗಳು ಏಕಾಗ್ರವೂ ಸೂಕ್ಷ್ಮವೂ ಆದ ಬುದ್ಧಿಯಿಂದ ನೋಡುತ್ತಾರೆ'[2] (ಕ. ಉ. ೧. ೩. ೧೨) ಉಳಿದವೆಲ್ಲ ಅನಾತ್ಮಗಳೆಂದು ಇದರಿಂದ ತಿಳಿದುಬರುತ್ತದೆ. ಶ್ರುತಿಯು (ಕ. ಉ. ೧ ೩. ೧೦) ಇಂದ್ರಿಯಾದಿಗಳನ್ನು ವಿವರಿಸಿರುವುದು ವಿಷ್ಣುವಿನ ಪರಮಪದದ (ಕ. ಉ. ೧. ೩. ೯) ಜ್ಞಾನಕ್ಕಾಗಿಯೇ ಹೊರತು ಇಂದ್ರಿಯಾದಿಗಳನ್ನು ತಿಳಿಸುವುದಕ್ಕಲ್ಲ.

**ವಿ.**—'ಇವನಿಗಿಂತ ಅನ್ಯನೂ ಒಳಗಿರುವವನೂ ಆದ ಆತ್ಮನು ಆನಂದಮಯನು'[3] (ತೈ. ಉ. ೨. ೫) ಎಂದು ಶ್ರುತಿಯು ಹೇಳಿರುವುದರಿಂದಲೂ ಹೀಗೆಯೆ ; ಏಕೆಂದರೆ ಆತ್ಮನಿಗೆ ಶಿರಃ-ಪಕ್ಷ-ಪುಚ್ಛಗಳು ಇಲ್ಲದಿರುವುದರಿಂದ 'ಪ್ರಿಯವೇ ತಲೆ' ಮೊದಲಾದುವುಗಳನ್ನು ಸುಖವಾಗಿ ಅರಿತುಕೊಳ್ಳಲು ಹೇಳಿರುವ ರೂಪಣವೆಂದೇ ತಿಳಿಯಬೇಕು.

**ದ್ವೈ.**—'ಆತ್ಮನನ್ನೇ ಉಪಾಸಿಸಬೇಕು (ಬೃ. ಉ. ೧. ೪. ೭)—ಎಂದು ಕೇವಲ ಆತ್ಮತ್ವದ ಉಪಾಸನೆಯನ್ನು ವಿಧಿಸತಕ್ಕ ಶ್ರುತಿಯಿಂದಲೂ ಅನುವ ಸಂಹಾರವು ಸಿದ್ಧಿಸುತ್ತದೆ.[4]

---

1 ಆಧ್ಯಾನಾರ್ಥಂ ಹಿ ಸರ್ವೇ ಗುಣಾ ಉಚ್ಯಂತೇ ಪ್ರಯೋಜನಾಂತರಾಭಾವಾತ್ (ಮ. ಭಾ.).

2 ಏಷ ಸರ್ವೇಷು ಭೂತೇಷು ಗೂಢೋಽಽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥

3 ಅನ್ಯೋಽಂತರ ಆತ್ಮಾಽಽನಂದಮಯಃ ।

4 ಆತ್ಮೇತ್ಯೇವೋಪಾಸೀತೇತ್ಯನುಪಸಂಹಾರಪ್ರಮಾಣಮ್ (ಮ. ಭಾ.).

# ೮. ಆತ್ಮಗೃಹೀತ್ಯಧಿಕರಣ

(ಸೂ. ೧೬–೧೭)

**ಆತ್ಮಗೃಹೀತಿರಿತರವದುತ್ತರಾತ್*  ॥ ೧೬ ॥**

೧೬. ಇತರ ಸ್ಥಳಗಳಂತೆ (ಐತರೇಯದಲ್ಲಿಯೂ) ಆತ್ಮನನ್ನೇ ಗ್ರಹಿಸಬೇಕು ; ಏಕೆಂದರೆ ಮುಂದೆ (ವಿಶೇಷಣವು) ಸಿಕ್ಕುತ್ತದೆ.

ಐತರೇಯ-ಶ್ರುತಿಯು ಹೀಗೆ ಹೇಳುತ್ತದೆ : 'ಮೊದಲು ಇದು ಆತ್ಮನೊಬ್ಬನೇ ಆಗಿತ್ತು. ವೀಕ್ಷಣವೇ ಮೊದಲಾದ ಕ್ರಿಯೆಯುಳ್ಳ ಬೇರೆ ಯಾವುದೂ ಇರಲಿಲ್ಲ. "ಲೋಕಗಳನ್ನು ಸೃಷ್ಟಿಸುವೆನು" ಎಂದು ಅವನು ಆಲೋಚಿಸಿದನು. ಅವನು ಈ ಲೋಕಗಳನ್ನು ಸೃಷ್ಟಿಸಿದನು : ಅಂಭೋಲೋಕ ಮರೀಚಿಲೋಕಗಳು ಮರಲೋಕ ಆಪೋಲೋಕ'[1] (ಐ. ಉ. ೧. ೧ ೨) ; ಇಲ್ಲಿ ಆತ್ಮಶಬ್ದವು ಪರಮಾತ್ಮನನ್ನು ಸೂಚಿಸುತ್ತದೆಯೊ ಅಥವಾ ಬೇರೊಬ್ಬನನ್ನು ಸೂಚಿಸುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಪರಮಾತ್ಮನು ಇಲ್ಲಿ ಆತ್ಮಶಬ್ದದಿಂದ ಉಕ್ತನಾಗಿಲ್ಲ. ಲೋಕಸೃಷ್ಟಿಯನ್ನು ಹೇಳಿರುವುದರಿಂದ ಇಲ್ಲಿ ಪ್ರಜಾಪತಿಯು ಉಕ್ತನಾಗಿದ್ದಾನೆ ಆತ್ಮಶಬ್ದವನ್ನು ಪ್ರಜಾಪತಿಯ ವಿಷಯದಲ್ಲಿಯೂ ಪ್ರಯೋಗಿಸಿರುವುದುಂಟು (ಬೃ. ಉ. ೧. ೪. ೧); 'ಒಬ್ಬನೇ ಇದ್ದನು' ಎಂಬುದು ಪ್ರಜಾಪತಿಯ ಕಾರ್ಯದ ಅಪೇಕ್ಷೆಯಿಂದಲೂ ಹೊಂದುತ್ತದೆ. ಇದಲ್ಲದೆ 'ಅವರಿಗೆ ಗೋವನ್ನು ತಂದುಕೊಟ್ಟನು' (ಐ. ಉ. ೧. ೨. ೨) ಎಂಬೀ ಜಾತಿಯ ವಾಕ್ಯಗಳು ವಿಶೇಷಾತ್ಮರಲ್ಲಿ ಪ್ರಸಿದ್ಧವಾಗಿರುವ ವ್ಯಾಪಾರವಿಶೇಷವನ್ನೇ ಹೇಳುತ್ತದೆ.

**ಸಿದ್ಧಾಂತಿ**—ಇಲ್ಲಿ ಆತ್ಮ-ಶಬ್ದದಿಂದ ಪರಮಾತ್ಮನನ್ನೇ ಗ್ರಹಿಸಬೇಕು. 'ಆ ಈ ಆತ್ಮನಿಂದ ಆಕಾಶವು ಉತ್ಪನ್ನವಾಯಿತು'[2] (ತೈ.ಉ.೨.೧) ಎಂಬಿವೇ ಮೊದಲಾದ ಸೃಷ್ಟಿವಚನಗಳಲ್ಲಿ ಪರಮಾತ್ಮನನ್ನು ಗ್ರಹಿಸಿರುವಂತೆ ಇಲ್ಲಿಯೂ ಗ್ರಹಿಸಬೇಕು. ಯಾವ ವಾಕ್ಯದಲ್ಲಿ 'ಪುರುಷಾಕಾರನಾದ'[3] (ಬೃ. ಉ. ೧. ೪. ೧) ಎಂಬಿವೇ ಮೊದಲಾದ ವಿಶೇಷವಿದೆಯೊ ಅಲ್ಲಿ ವಿಶೇಷಸಹಿತನಾದ ಆತ್ಮನನ್ನು ಗ್ರಹಿಸಬಹುದು ; ಆದರೆ ಇಲ್ಲಿ 'ಲೋಕ,

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣದಲ್ಲಿ ಒಂದೇ ಸೂತ್ರವಿದೆ.

[1] ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥ ಸ ಇಮಾಂಲ್ಲೋಕಾನಸೃಜತ— ಅಂಭೋ ಮರೀಚೀರ್ಮರಮಾಪೋಽದೋಽಂಭಃ ।

[2] ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ ।

[3] ಆತ್ಮೈವೇದಮಗ್ರ ಆಸೀತ್ ಪುರುಷವಿಧಃ ।

ಗಳನ್ನು ಸೃಷ್ಟಿಸುವೆನು—ಎಂದು ಅವನು ಆಲೋಚಿಸಿದನು ಅವನು ಈ ಲೋಕಗಳನ್ನು ಸೃಷ್ಟಿಸಿದನು' (ಐ ಉ ೧ ೧ ೧ ೨) ಎಂಬಿವೇ ಮೊದಲಾದ ಪರಮಾತ್ಮಗ್ರಹಣಾನು-ಗುಣವಾದ ವಿಶೇಷಣವಿರುವುದರಿಂದ ಪರಮಾತ್ಮನನ್ನೇ ಗ್ರಹಿಸಬೇಕು

**ವಿ —ಅನ್ಯೋಽಂತರ ಆತ್ಮಾ ಪ್ರಾಣಮಯಃ ಅನ್ಯೋಽಂತರ ಆತ್ಮಾ ಮನೋಮಯಃ** ಎಂಬಲ್ಲಿ ಆತ್ಮಶಬ್ದವನ್ನು ಅನಾತ್ಮಗಳಲ್ಲಿಯೂ ಪ್ರಯೋಗಿಸಿರುವುದರಿಂದ **ಅನ್ಯೋಽಂತರ ಆತ್ಮಾಽಽನಂದಮಯಃ** ಎಂಬಲ್ಲಿ ಆತ್ಮಶಬ್ದವು ಪರಮಾತ್ಮನನ್ನು ಸೂಚಿಸುತ್ತದೆ—ಎಂಬುದನ್ನು ಹೇಗೆ ನಿಶ್ಚಯಿಸಿದೆ ? ಇತರ ಸ್ಥಾನಗಳಲ್ಲಿಯೂ ಎಂದರೆ ಐತರೇಯಶ್ರುತಿಯಲ್ಲಿಯೂ (೧ ೧ ೧) ಆತ್ಮಶಬ್ದವು ಪರಮಾತ್ಮನನ್ನು ಸೂಚಿಸುವಂತೆ ಇಲ್ಲಿಯೂ ಸೂಚಿಸುತ್ತದೆ ಇದು ಹೇಗೆ ಸಿದ್ಧವಾಯಿತು ?—ಎಂದರೆ ಮುಂದೆ ಬರುವ 'ನಾನು ಬಹುವಾಗುವೆನು , ಅದಕ್ಕೋಸ್ಕರ ಸೃಷ್ಟಿಸುವೆನು'[1] (ತೈ ಉ ೨ ೬) ಎಂಬ ವಾಕ್ಯವು ಆನಂದಮಯ-ವಿಷಯವಾಗಿದೆ

**ದ್ವೈ.**—'ಇತರ ವಾಕ್ಯಗಳಂತೆ ಆತ್ಮಶಬ್ದದಿಂದ ಆನಂದವೇ ಮೊದಲಾದ ನಾಲ್ಕು ಗುಣಗಳೂ ಗ್ರಹಿಸಲ್ಪಡುತ್ತವೆ , ಏಕೆಂದರೆ ಉತ್ತರವಾಕ್ಯವಿದೆ' ಎಂಬುದು ಸೂತ್ರಾರ್ಥ

**ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ ಉ ೨ ೧) **ವಿಜ್ಞಾನಮಾನಂದಂ ಬ್ರಹ್ಮ** (ಬೃ ಉ ೩ ೯ ೨೮) ಎಂಬಲ್ಲಿ ಇತರ ಗುಣಗಳೂ ಗೃಹೀತವಾಗಿರುವಂತೆ ಇಲ್ಲಿಯೂ ಆತ್ಮಶಬ್ದವು ಆನಂದವೇ ಮೊದಲಾದ ನಾಲ್ಕು ಗುಣಗಳನ್ನು ಸೂಚಿಸುತ್ತದೆ, ಏಕೆಂದರೆ 'ಇವನಲ್ಲಿ ಇವೆಲ್ಲವೂ ಒಂದಾಗುವುವು'[2] (ಬೃ ಉ ೧ ೪ ೭) ಎಂಬ ಉತ್ತರ ವಾಕ್ಯವಿದೆ

### ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್* ॥ ೧೭ ॥

೧೭ (ವಾಕ್ಯದ) ಅನ್ವಯದಿಂದ (ಪರಮಾತ್ಮನನ್ನು ಗ್ರಹಿಸಕೂಡದು) ಎಂದರೆ ಅವಧಾರಣೆಯಿಂದ ಆಗಬಹುದು (ಎಂಬುದು ನಮ್ಮ ಉತ್ತರ)

ಪರಮಾತ್ಮನನ್ನು ಗ್ರಹಿಸುವುದೇ ಉಪಪನ್ನವಾಗಿರುವುದು , ಏಕೆಂದರೆ ಇಲ್ಲಿ ಪರಮಾತ್ಮನನ್ನು ಗ್ರಹಿಸಿದರೆ ಉತ್ಪತ್ತಿಗಿಂತ ಮೊದಲು ಆತ್ಮೈಕತ್ವವನ್ನು ಅವಧಾರಣೆ ಮಾಡಿರುವುದು ಮುಖ್ಯಾರ್ಥದಲ್ಲಿ ಹೊಂದುತ್ತದೆ ಹಾಗಿಲ್ಲದಿದ್ದರೆ ಅದು ಅಮುಖ್ಯವಾಗುತ್ತದೆ ಇಲ್ಲಿ ವಿವಕ್ಷಿತವಾಗಿರುವುದು ಬ್ರಹ್ಮಾತ್ಮತ್ವವೇ ಲೋಕ-ಲೋಕಪಾಲಕರ

---

1 ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ ।

2 ಅತ್ರ ಹ್ಯೇತೇ ಸರ್ವ ಏಕಂ ಭವಂತಿ ।

* ಇದು ಮಧ್ವಭಾಷ್ಯದಲ್ಲಿ ಅನ್ವಯಾಧಿಕರಣ ಎನಿಸಿದೆ.

ಸೃಷ್ಟಿಯನ್ನು ಹೇಳಿ, ಕರಣಗಳನ್ನೂ ಕರಣಾಶ್ರಯಗಳನ್ನೂ ಹೇಳಿ ಸ್ರಷ್ಟೃವು ಈ ಶರೀರವನ್ನು ಪ್ರವೇಶಿಸಿದನೆಂದು ಹೇಳಿದೆ. 'ಅವನು ಈ ಪುರುಷನನ್ನೇ ಪರಿಪೂರ್ಣವಾದ ಬ್ರಹ್ಮವೆಂದು ಅರಿತುಕೊಂಡನು'[1] (ಐ. ಉ. ೧. ೧೩) ಮತ್ತು 'ಅದೆಲ್ಲವೂ ಪ್ರಜ್ಞಾನೇತ್ರವು, ಪ್ರಜ್ಞಾನದಲ್ಲಿ ಪ್ರತಿಷ್ಠಿತವಾಗಿರುವುದು, ಲೋಕವು ಪ್ರಜ್ಞಾನೇತ್ರವು, ಪ್ರಜ್ಞೆಯು ಪ್ರತಿಷ್ಠೆಯು ಪ್ರಜ್ಞಾನವು ಬ್ರಹ್ಮ'[2](ಐ. ಉ. ೩. ೩) ಎಂಬ ಸ್ಥಾನಗಳಲ್ಲಿ ಕರಣವ್ಯಾಪಾರ ವಿವೇಚನೆಯ ಮೂಲಕ ಬ್ರಹ್ಮಾತ್ಮತ್ವವನ್ನೇ ಅವಧಾರಣಮಾಡಿದೆ ಆದುದರಿಂದ ಇಲ್ಲಿ ಪರಮಾತ್ಮನನ್ನೇ ಗ್ರಹಿಸಬೇಕು.

೧೬-೧೭ನೆಯ ಸೂತ್ರಗಳನ್ನು ಇನ್ನೊಂದು ಬಗೆಯಿಂದಲೂ ವ್ಯಾಖ್ಯಾನ ಮಾಡಬಹುದು : ಬೃಹದಾರಣ್ಯಕವು[3] (೪. ೩. ೭) ಆತ್ಮಶಬ್ದದಿಂದ ಪ್ರಾರಂಭಿಸಿ ಅವನು ಸಂಗರಹಿತನೆಂದು ಹೇಳುವುದರ ಮೂಲಕ ಬ್ರಹ್ಮಾತ್ಮತ್ವವನ್ನು ಪ್ರತಿಪಾದಿಸುತ್ತದೆ. ಛಾಂದೋಗ್ಯವು[4] (೬. ೨ ೧) ಆತ್ಮಶಬ್ದವನ್ನು ಉಪಯೋಗಿಸದೆ 'ಅದೇ ಆತ್ಮನು, ಅದೇ ನೀನು'[5] (೬. ೮. ೭) ಎಂದು ತಾದಾತ್ಮ್ಯವನ್ನು ಹೇಳುತ್ತದೆ ಈ ಎರಡು ಶ್ರುತಿಗಳಿಗೂ ಒಂದೇ ಅಥವಾ ಬೇರೆಬೇರೆ ಅರ್ಥವೊ—ಎಂಬುದು ಸಂಶಯ. ಇವುಗಳಿಗೆ ಸಮಾನಾರ್ಥವಿಲ್ಲ—ಎಂಬುದು ಪೂರ್ವಪಕ್ಷ.

ಛಾಂದೋಗ್ಯದ ವಾಕ್ಯದಲ್ಲಿಯೂ ಬೃಹದಾರಣ್ಯಕದಂತೆ ಆತ್ಮನನ್ನು ಗ್ರಹಿಸಬೇಕು—ಎಂಬುದು ಸಿದ್ಧಾಂತ ; ಏಕೆಂದರೆ ಮುಂದೆ ಆತ್ಮಶಬ್ದದ ಉಪದೇಶವಿದೆ : ಉಪಕ್ರಮದಲ್ಲಿ ಆತ್ಮಶಬ್ದವಿಲ್ಲದಿದ್ದರೂ ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಅವಧಾರಣೆ ಮಾಡಿದ ಮೇಲೆ[6] (ಛಾಂ. ಉ. ೬. ೧. ೩) 'ಸತ್‌ಸ್ವರೂಪವೇ ಆಗಿತ್ತು' ಎಂದು ಹೇಳಿರುವುದರಿಂದ ಇಲ್ಲಿಯೂ ಆತ್ಮನನ್ನೇ ಗ್ರಹಿಸಬೇಕು. ಹಾಗೆ ಗ್ರಹಿಸದಿದ್ದರೆ ಮುಖ್ಯಾತ್ಮನ ಜ್ಞಾನವಿಲ್ಲದೆ ಸರ್ವವಿಜ್ಞಾನವೇ ಹೋಗುತ್ತದೆ. ಹೀಗೆಯೇ ಉತ್ಪತ್ತಿಗೆ ಮೊದಲು ಏಕತ್ವಾವಧಾರಣೆ ಮಾಡಿರುವುದು, ಜೀವನನ್ನು ಆತ್ಮಶಬ್ದದಿಂದ ಪರಾಮರ್ಶಿಸಿರುವುದು, ನಿದ್ರಾವಸ್ಥೆಯಲ್ಲಿ ಆ ಸ್ವಭಾವವನ್ನು ಪಡೆಯುವನೆಂದು ಹೇಳಿರುವುದು, ಚೋದನಾಪೂರ್ವಕ

---

[1] ಸ ಏತಮೇವ ಪುರುಷಂ ಬ್ರಹ್ಮ ತತಮಪಶ್ಯತ್ ।

[2] ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ।

[3] 'ಆ ಆತ್ಮನು ಯಾರು ? ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಬುದ್ಧಿಯಲ್ಲಿರುವ ಸ್ವಯಂಜ್ಯೋತಿಯೂ ಆದ ಈ ಪುರುಷನು, ಕತಮ ಆತ್ಮೇತಿ ; ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ।

[4] 'ಸೋಮ್ಯ, ಸೃಷ್ಟಿಗೆ ಮೊದಲು ಈ ಜಗತ್ತು ಏಕವೂ ಅದ್ವಿತೀಯವೂ ಆದ ಸತ್‌ಸ್ವರೂಪವೇ ಆಗಿತ್ತು' ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್ ।

[5] ಸ ಆತ್ಮಾ ತತ್ತ್ವಮಸಿ ।

[6] 'ಯಾವುದರಿಂದ ಅಶ್ರುತವು ಶ್ರುತವಾಗುವುದೊ ಅಮತವು ಮತವಾಗುವುದೊ ಅವಿಜ್ಞಾತವು ವಿಜ್ಞಾತವಾಗುದೊ—ಆ ಆದೇಶವನ್ನು ಕೇಳಿದೆಯೊ?'

ವಾಗಿ 'ಅದೇ ನೀನಾಗಿರುವೆ' ಎಂದು ಅವಧಾರಣೆಮಾಡಿರುವುದು—ಇವೆಲ್ಲವೂ ತಾದಾತ್ಮ್ಯ-ಪ್ರತಿಪಾದನೆ ಮಾಡಬೇಕೆಂದಿದ್ದರೆ ಮಾತ್ರ ಹೊಂದುತ್ತದೆಯೇ ಹೊರತು ತಾದಾತ್ಮ್ಯಧ್ಯಾನ ಮಾಡಬೇಕೆಂದಿದ್ದರೆ ಹೊಂದುವುದಿಲ್ಲ.[1] ಉಪಕ್ರಮದಲ್ಲಿ **ಸದೇವ** ಎಂದು ಸಾಮಾನ್ಯವಾಗಿ ಹೇಳಿ, ವಾಕ್ಯಶೇಷದಲ್ಲಿ ವಿಶೇಷವಾದ ಆತ್ಮಶಬ್ದದಿಂದ ಉಪಸಂಹಾರಮಾಡಿರುವುದರಿಂದ, ಸಚ್ಛಬ್ದವೂ ಮುಖ್ಯಾತ್ಮನನ್ನೇ ಸೂಚಿಸಿರುವುದರಿಂದ ಇಲ್ಲಿ ಆತ್ಮನನ್ನೇ ಗ್ರಹಿಸಬೇಕು.

**ವಿ.**—ಹಿಂದೆ ಅನಾತ್ಮಗಳಾದ ಪ್ರಾಣಮಯಾದಿಗಳಲ್ಲಿ ಆತ್ಮ-ಶಬ್ದದ ಅನ್ವಯವು ಇರುವುದರಿಂದ ಹೇಗೆ ಆ ಶಬ್ದವು ಪರಮಾತ್ಮನನ್ನು ಬೋಧಿಸೀತು ?—ಎಂದರೆ ಅವಧಾರಣದಿಂದ ಅದು ಸಾಧ್ಯ ಎಂದು ನಮ್ಮ ಉತ್ತರ. **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ** (ತೈ. ಉ. ೨. ೧) ಎಂಬಲ್ಲಿ ಪರಮಾತ್ಮನೇ ಬುದ್ಧಿಗೆ ತೋರಿಬರುವುದರಿಂದ ಆ ಭಾವನೆಯೇ ಪ್ರಾಣಮಯ-ಮನೋಮಯ-ವಿಜ್ಞಾನಮಯ—ಇವುಗಳಲ್ಲಿಯೂ ರೂಢವಾಗಿ ಆನಂದಮಯದಲ್ಲಿ ಪರ್ಯವಸಾನವಾಗುತ್ತದೆ. ಹೀಗೆ ಮೊದಲಿನಿಂದಲೂ ಅಪರಮಾತ್ಮವಸ್ತುಗಳಲ್ಲಿ ಪರಮಾತ್ಮಬುದ್ಧಿಯನ್ನಿಟ್ಟಿರುವುದರಿಂದ ಆತ್ಮಶಬ್ದದ ಅನ್ವಯವು ನಿರವದ್ಯವಾಗಿದೆ.

**ದ್ವೈ.**—'ಆತ್ಮಶಬ್ದಕ್ಕೆ ಸರ್ವಗುಣವಾಚಕತ್ವವಿರುವುದರಿಂದ ಆ ಶಬ್ದಕ್ಕೆ ಅನುಪಸಂಹಾರಪ್ರಮಾಣತ್ವವು ಅಯುಕ್ತವೆಂದರೆ, ಸರ್ವಗುಣವಾಚಿತ್ವವನ್ನೇ ಅಂಗೀಕರಿಸುತ್ತೇವೆ ; ಏಕೆಂದರೆ **ಆತ್ಮೇತ್ಯೇವ** ಎಂಬ ಅವಧಾರಣವಿದೆ' ಎಂಬುದು ಸೂತ್ರಾರ್ಥ.

ಅನ್ಯಥಾ ಪರಮಾತ್ಮನು ಸರ್ವಗಣಗುಳನ್ನೂ ಉಪಸಂಹಾರಮಾಡುವನು—ಎಂಬ ವಚನಕ್ಕೆ ವಿರೋಧವಾಗುತ್ತದೆ.

---

1 ತಥಾ ಪ್ರಾಗುತ್ಪತ್ತೇರೇಕತ್ವಾವಧಾರಣಂ ಜೀವಸ್ಯ ಚಾತ್ಮಶಬ್ದೇನ ಪರಾಮರ್ಶಃ ಸ್ವಾಪಾವಸ್ಥಾಯಾಂ ಚ ತತ್ಸ್ವಭಾವಸಂಪತ್ತಿಕಥನಂ ಪರಿಚೋದನಾಪೂರ್ವಕಂ ಚ ಪುನಃ ಪುನಃ ತತ್ತ್ವಮಸಿ ಇತ್ಯವಧಾರಣಮಿತಿ ಚ ಸರ್ವಮೇತತ್ ತಾದಾತ್ಮ್ಯಪ್ರತಿಪಾದನಾಯಾಮೇವಾವಕಲ್ಪತೇ ನ ತಾದಾತ್ಮ್ಯಸಂಪಾದನಾಯಾಮ್ (ಸೂ. ಭಾ.).

# ೯. ಕಾರ್ಯಾಖ್ಯಾನಾಧಿಕರಣ

## ಕಾರ್ಯಾಖ್ಯಾನಾದಪೂರ್ವಮ್ ॥ ೧೮ ॥

೧೮. ಕಾರ್ಯವನ್ನು ಹೇಳಿರುವುದರಿಂದ ಅಪೂರ್ವವಾದದ್ದು (ವಿಹಿತವಾಗಿದೆ).

ಪ್ರಾಣಸಂವಾದದಲ್ಲಿ ಛಂದೋಗರೂ ವಾಜಸನೇಯಿಗಳೂ ನಾಯಿಯವರೆಗೂ ಪ್ರಾಣದ ಅನ್ನವೆಂದು ಹೇಳಿ ಅದಕ್ಕೇ ನೀರು ಬಟ್ಟೆಯೆಂದು ಹೇಳುತ್ತಾರೆ; ಅನಂತರ ಛಂದೋಗರು 'ಆದುದರಿಂದಲೇ ಭೋಜನಮಾಡುವವರು (ಭೋಜನಕ್ಕೆ) ಮೊದಲೂ ಮತ್ತು ಅನಂತರವೂ ನೀರಿನ ಮೂಲಕ (ಆಚಮನಮಾಡಿ ಪ್ರಾಣವನ್ನು) ಮುಚ್ಚುತ್ತಾರೆ'[1] (ಛಾಂ. ಉ. ೫. ೨. ೨.) ಎಂದು ಪಠಿಸುತ್ತಾರೆ; ವಾಜಸನೇಯಿಗಳಾದರೋ 'ನೀರು ಪ್ರಾಣದ ಬಟ್ಟೆಯಾಗಿರುವುದರಿಂದ ಶ್ರೋತ್ರಿಯರಾದ ಜ್ಞಾನಿಗಳು ಊಟಮಾಡುವಾಗ ಮತ್ತು ಊಟಮಾಡಿದಮೇಲೆ ಆಚಮನಮಾಡುತ್ತಾರೆ; ಅವರು ಈ ಪ್ರಾಣದ ನಗ್ನತೆಯನ್ನು ತೆಗೆದೆವೆಂದು ಭಾವಿಸುತ್ತಾರೆ'[2] (ಬೃ. ಉ ೬. ೧. ೧೪) ಎಂದು ಪಠಿಸುತ್ತಾರೆ. ಇಲ್ಲಿ ಆಚಮನ, ಪ್ರಾಣದ ಅನಗ್ನತಾಚಿಂತನ—ಇವೆರಡನ್ನೂ ವಿಧಿಸಿದೆಯೆ ? ಅಥವಾ ಇವೆರಡರಲ್ಲಿ ಒಂದನ್ನು ಮಾತ್ರ ವಿಧಿಸಿದೆಯೆ ? ಎಂಬುದು ಸಂಶಯ.

ಇವೆರಡನ್ನೂ ವಿಧಿಸಿದೆ—ಎಂಬುದು ಪೂರ್ವಪಕ್ಷ; ಏಕೆಂದರೆ ಎರಡೂ ನಿರ್ಧರಿಸಲ್ಪಟ್ಟಿರುವುದರಿಂದ ಮತ್ತು ಅಪೂರ್ವವಾಗಿರುವುದರಿಂದ[3] ವಿಧಿಗೆ ಅರ್ಹವಾಗಿವೆ; ಅಥವಾ ಆಚಮನದಲ್ಲಿ ವಿಧಿ-ವಿಭಕ್ತಿಯು ಸ್ಪಷ್ಟವಾಗಿರುವುದರಿಂದ ಆಚಮನವೊಂದನ್ನೇ ವಿಧಿಸಿದೆ; ಮತ್ತು ಅದನ್ನು ಸ್ತುತಿಸುವುದಕ್ಕೆ ಅನಗ್ನತೆಯನ್ನು ಹೇಳಿದೆ.

ಆಚಮನವನ್ನು ವಿಧಿಸಿದೆಯೆಂಬುದು ಹೊಂದುವುದಿಲ್ಲ—ಎಂಬುದು ಸಿದ್ಧಾಂತ; ಏಕೆಂದರೆ ಆಚಮನವು ಸ್ಮೃತಿವಿಹಿತವಾಗಿ ಪ್ರಾಪ್ತವಾಗಿದೆ. ಶ್ರುತಿಯಲ್ಲಿ ಪ್ರಾಣವಿದ್ಯೆಯನ್ನೇ ವಿಧಿಸಿರುವುದರಿಂದ ಅವೆರಡನ್ನೂ ವಿಧಿಸಿದೆ ಎನ್ನುವುದೂ ಸರಿಯಲ್ಲ. ಆದುದರಿಂದ ಆಚಮನೀಯವಾದ ನೀರಿನಲ್ಲಿ ಅನಗ್ನತಾಕರಣಸಂಕಲ್ಪವನ್ನು ಪ್ರಾಣವಿದ್ಯೆಗೆ ಸಂಬಂಧಪಟ್ಟಂತೆ ಉಪದೇಶಿಸಿರುತ್ತದೆ. ಆಚಮನವನ್ನು ವಿಧಿಸದೇ-ಇರುವುದರಿಂದ ಅದನ್ನು ಸ್ತುತಿಸುವುದಕ್ಕೆ ಅನಗ್ನತೆಯು ಬಂದಿದೆಯೆಂಬುದೂ ಸರಿಯಲ್ಲ. ಆದುದರಿಂದ ಆಚಮನ

---

[1] ತಸ್ಮಾದ್ವಾ ಏತದಶಿಷ್ಯಂತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್ಭಿಃ ಪರಿದಧತಿ ।

[2] ತದ್ವಿದ್ವಾಂಸಃ ಶ್ರೋತ್ರಿಯಂ ಅಶಿಷ್ಯಂತ ಆಚಾಮಂತಿ, ಅಶಿತ್ವಾಚಾಮಂತಿ ; ಏತಮೇವ ತದನಮನಗ್ನಂ ಕುರ್ವಂತೋ ಮನ್ಯಂತೇ ।

[3] ಬೇರೆ ಪ್ರಮಾಣದಿಂದ ತಿಳಿಯದೆ ಬರುವುದರಿಂದ (ರತ್ನಪ್ರಭಾ).

ವನ್ನು ಬಟ್ಟೆಯೆಂದು ಸಂಕಲ್ಪಿಸುವುದನ್ನೇ ವಿಧಿಸಿದೆ, ಆಚಮನವನ್ನಲ್ಲ ಎಂಬುದೇ ಯುಕ್ತವಾಗಿದೆ [1]

ವಿ.—ಇಲ್ಲಿ ಆಚಮನವನ್ನು ವಿಧಿಸಿಲ್ಲ, ಆಪೋಶನವನ್ನು ಪ್ರಾಣದ ಬಟ್ಟೆಯೆಂದು ಅನುಸಂಧಾನಮಾಡಬೇಕು—ಎಂಬುದನ್ನು ವಿಧಿಸಿದೆ ಹಿಂದೆ ಹೇಳಲ್ಪಡದೇ ಇರುವುದರಿಂದ ಅಪ್ರಾಪ್ತವಾದುದನ್ನು ವಿಧಿಸಿದೆ[2]—ಎಂಬುದು ಸೂತ್ರಾರ್ಥ

ದ್ವೈ.—'ಮೋಕ್ಷವೆಂಬ ಅಪೂರ್ವಕಾರ್ಯವನ್ನು ಹೇಳಿರುವುದರಿಂದ ಪರಬ್ರಹ್ಮನ ಗುಣಸಮುದಾಯವನ್ನು ಅಲೌಕಿಕವನ್ನಾಗಿ ಉಪಸಂಹರಿಸಿ ಧ್ಯಾನಿಸಬೇಕು' ಎಂಬುದು ಸೂತ್ರಾರ್ಥ

'ಬ್ರಹ್ಮನ ಗುಣಗಳು ಲೌಕಿಕಗಳಲ್ಲ, ಆದುದರಿಂದ ಅಲೌಕಿಕಗುಣಗಳನ್ನೇ ಉಪಾಸಿಸಬೇಕು, ಧ್ಯಾನದ ಕಾರ್ಯವಾದ ಮುಕ್ತಿಯು ಅಲೌಕಿಕವಾಗಿದೆ' ಎಂಬಲ್ಲಿ ಮುಕ್ತಿಯನ್ನು ಹೇಳಿದೆ, ಅಲೌಕಿಕವಾದ ಗುಣಗಳನ್ನೇ ಉಪಾಸಿಸಬೇಕು [3]

---

[1] ತಸ್ಮಾದ್ವಾಸೋ ವಿಜ್ಞಾನಮೇವೇಹ ವಿಧೀಯತೇ ನಾಚಮನಮಿತಿ ನ್ಯಾಯ್ಯಮ್ (ಸೂ. ಭಾ)

[2] ಅಪೂರ್ವಮ್ ಅಪ್ರಾಪ್ತಂ ವಿಧೀಯತೇ, ಕಾರ್ಯಾಖ್ಯಾನಾತ್ ಅಪ್ರಾಪ್ತಾಖ್ಯಾನಾತ್ (ಶ್ರೀಭಾಷ್ಯ)

[3] ಅಲೌಕಿಕಾಸ್ತಸ್ಯ ಗುಣಾ ಹ್ಯುಪಾಸ್ಯಾ ಅಲೌಕಿಕಂ ಮುಕ್ತಿಕಾರ್ಯಂ ಯತೋಽಸ್ಯೇತಿ-ಕಾರ್ಯಾಖ್ಯಾನಾದನ್ಯತ್ರಾದೃಷ್ಟಾ ಏವ ಗುಣಾ ಉಪಾಸ್ಯಾಃ (ಮ. ಭಾ.).

## ೧೦. ಸಮಾನಾಧಿಕರಣ

### ಸಮಾನ ಏವಂ ಚಾಭೇದಾತ್ ॥ ೧೯ ॥

೧೯. ಅದೇ ಶಾಖೆಯಲ್ಲಿಯೂ ಹೀಗೆಯೇ (ಎಂದರೆ ವಿದ್ಯೆಯು ಏಕತ್ವವಿದೆ) ; ಏಕೆಂದರೆ ಉಪಾಸ್ಯವು ಅಭೇದವು.

ವಾಜಸನೇಯಿಶಾಖೆಯ ಅಗ್ನಿರಹಸ್ಯದಲ್ಲಿ ಬರುವ ಶಾಂಡಿಲ್ಯವಿದ್ಯೆಯಲ್ಲಿ 'ಮನೋಮಯನೂ, ಶರೀರವೇ ಪ್ರಾಣವಾಗಿ ಉಳ್ಳವನೂ, ಪ್ರಕಾಶರೂಪನೂ ಆದ ಆತ್ಮನನ್ನೇ ಉಪಾಸಿಸಬೇಕು'[1] (ಶ. ಬ್ರಾ. ೧೦. ೬. ೩. ೧) ಎಂದು ಈ ಗುಣಗಳನ್ನು ಹೇಳಿದೆ. ಅದೇ ಶಾಖೆಯ ಬೃಹದಾರಣ್ಯಕದಲ್ಲಿ 'ಈ ಪುರುಷನು ಮನೋಮಯನು, ಭಾಸ್ಕರನು, ಬತ್ತದ ಕಾಳಿನಂತೆ ಅಥವಾ ಯವೆಯ ಕಾಳಿನಂತೆ ಅಂತರ್ಹೃದಯದಲ್ಲಿ (ಕಾಣುತ್ತಾನೆ) ಇವನು ಎಲ್ಲರ ಈಶನು, ಎಲ್ಲರ ಅಧಿಪತಿಯು ಮತ್ತು ಇರುವುದನ್ನೆಲ್ಲ ಶಾಸನಮಾಡುತ್ತಾನೆ'[2] (೫. ೬. ೧) ಎಂದು ಹೇಳಿದೆ. ಅಗ್ನಿವಿದ್ಯೆ-ಬೃಹದಾರಣ್ಯಕಗಳಲ್ಲಿರುವ ಇದು ಒಂದೇ ವಿದ್ಯೆಯೆಂದು ಗುಣಗಳ ಉಪಸಂಹಾರವನ್ನು ಮಾಡಬೇಕೊ ? ಅಥವಾ ಇವೆರಡೂ ಬೇರೆಬೇರೆ ವಿದ್ಯೆಗಳೆಂದು ಗುಣೋಪಸಂಹಾರಮಾಡಬೇಕೊ ?—ಎಂಬುದು ಸಂಶಯ.

ಇಲ್ಲಿ ಎರಡು ವಿದ್ಯೆಗಳಿವೆ—ಎಂಬುದು ಪೂರ್ವಪಕ್ಷ; ಏಕೆಂದರೆ ಗುಣಗಳನ್ನು ಬೇರೆಬೇರೆಯಾಗಿ ಉಪಸಂಹರಿಸಬೇಕು. ಶಾಖೆಗಳು ಭಿನ್ನವಾಗಿದ್ದರೆ ಅಧ್ಯೇತೃಗಳೂ ಅರ್ಥವನ್ನು ತಿಳಿಯುವವರೂ ಬೇರೆಬೇರೆಯಾಗಿರುವುದರಿಂದ ಪುನರುಕ್ತಿಯನ್ನು ಪರಿಹರಿಸಲು ಒಂದೇ ವಿದ್ಯೆಯೆಂದು ನಿರ್ಣಯಿಸಿ ಪ್ರಾಣ-ಸಂವಾದಾದಿಗಳಲ್ಲಿ ಒಂದು ಕಡೆಯಲ್ಲಿ ಅಧಿಕವಾಗಿರುವ ಗುಣಗಳನ್ನು ಮತ್ತೊಂದು ಕಡೆಯಲ್ಲಿ ಉಪಸಂಹರಿಸಬೇಕೆಂದು ಹೇಳಿದ್ದಾಯಿತು. ಆದರೆ ಶಾಖೆಯು ಒಂದೇ ಆಗಿ ಅಧ್ಯೇತೃಗಳಲ್ಲಿ ಅರ್ಥವನ್ನು ತಿಳಿದುಕೊಳ್ಳುವವರಲ್ಲಿ ಭೇದವಿಲ್ಲದಿರುವುದರಿಂದ ಪುನರುಕ್ತಿದೋಷಗಳನ್ನು ಪರಿಹರಿಸಿಕೊಳ್ಳಲು ಆಗುವುದಿಲ್ಲ ಮತ್ತು ಬೇರೆಬೇರೆ ಕಡೆಗಳಲ್ಲಿರುವ ವಾಕ್ಯಗಳು ಒಂದೇ ವಿದ್ಯೆಗೆ ಸೇರಿದವೆಂದು ಹೇಳಲಾಗುವುದಿಲ್ಲ. ಮತ್ತೆ ಒಂದು ಕಡೆಯಲ್ಲಿ ವಿದ್ಯೆಯನ್ನು ವಿಧಿಸಿ ಬೇರೊಂದು ಕಡೆಯಲ್ಲಿ ಗುಣಗಳನ್ನು ವಿಧಿಸಿದೆಯೆಂದೂ ಹೇಳಲಾಗುವುದಿಲ್ಲ; ಏಕೆಂದರೆ ಮನೋಮಯತ್ವಾದಿ ಗುಣಗಳನ್ನು ಎರಡು ಕಡೆಯಲ್ಲಿಯೂ ಸಮಾನವಾಗಿಯೇ ಹೇಳಿದೆ.

---

[1] ಸ ಆತ್ಮಾನಮುಪಾಸೀತ ಮನೋಮಯಂ ಪ್ರಾಣಶರೀರಂ ಭಾರೂಪಮ್ ।

[2] ಮನೋಮಯೋಽಯಂ ಪುರುಷೋ ಭಾಃಸತ್ಯಸ್ತಸ್ಮಿನ್ನಂತರ್ಹೃದಯೇ, ಯಥಾ-ವ್ರೀಹಿರ್ವಾ ಯವೋ ವಾ ; ಸ ಏಷ ಸರ್ವಸ್ಯೇಶಾನಃ, ಸರ್ವಸ್ಯಾಧಿಪತಿಃ, ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂಚ ।

ಭಿನ್ನಭಿನ್ನಶಾಖೆಗಳಲ್ಲಿ ವಿದ್ಯೆಯು ಒಂದೇ ಆಗಿರುವಂತೆ ಇಲ್ಲಿಯೂ (ಎಂದರೆ ಒಂದೇ ಶಾಖೆಯಲ್ಲಿಯೂ) ವಿದ್ಯೆಯು ಒಂದೇ ಆಗಿದೆ—ಎಂಬುದು ಸಿದ್ಧಾಂತ; ಏಕೆಂದರೆ ಉಪಾಸ್ಯವು ಒಂದೇ ಆಗಿರುತ್ತದೆ. ವಿದ್ಯೆಗೆ ಉಪಾಸ್ಯವೇ ರೂಪವು. ವಿದ್ಯೆಯ ರೂಪವು ಒಂದೇ ಆಗಿರುವಾಗ ವಿದ್ಯೆಯು ಬೇರೆಬೇರೆ ಎಂದು ನಿರ್ಧರಿಸುವುದು ಸರಿಯಲ್ಲ. ಒಂದು ಪಾಠವು ವಿದ್ಯೆಯನ್ನು ವಿಧಿಸುವುದಕ್ಕೆ ಬಂದಿದೆ, ಇನ್ನೊಂದು ಗುಣಗಳನ್ನು ವಿಧಿಸುವುದಕ್ಕೆ ಬಂದಿದೆ ಎಂಬುದರಲ್ಲಿ ದೋಷವಿಲ್ಲ. ಎರಡು ಕಡೆಗಳಲ್ಲಿಯೂ ಸಮಾನವಾಗಿ ಕೆಲವು ಗುಣಗಳನ್ನು ಪಠಿಸಿರುವುದು ವಿದ್ಯೆಯು ಒಂದೇ ಎಂಬುದನ್ನು ಗುರುತಿಸುವುದಕ್ಕಾಗಿ. ಇದಲ್ಲದೆ ಅಪ್ರಾಪ್ತವಾದ ಅಂಶವನ್ನು ಉಪದೇಶಿಸಿರುವುದರಿಂದ ಈ ವಾಕ್ಯಕ್ಕೆ ಪ್ರಯೋಜನವಿದೆ ಎಂದಾಗುವಾಗ, ಪ್ರಾಪ್ತಾಂಶವನ್ನು ಪರಾಮರ್ಶಿಸಿರುವುದು ನಿತ್ಯಾನುವಾದವೆಂದೂ ಹೊಂದುವುದರಿಂದ 'ಇದು ಅದೇ ವಿದ್ಯೆ' ಎಂದು ಗುರುತಿಸುವುದನ್ನು ಉಪೇಕ್ಷಿಸುವುದು ಸರಿಯಲ್ಲ.

**ವಿ.**—'ಎರಡು ಕಡೆಗಳಲ್ಲಿಯೂ ಮನೋಮಯತ್ವಾದಿ-ಗುಣಗಳನ್ನು ಸಮಾನವಾಗಿ ಹೇಳಿರುವುದರಿಂದ ವಿದ್ಯೆಯು ಒಂದೇ; ಏಕೆಂದರೆ ವಶಿತ್ವಾದಿ-ಗುಣಗಳಲ್ಲಿ ಭೇದವಿಲ್ಲ'[1] ಎಂಬುದು ಸೂತ್ರಾರ್ಥ.

ಅಗ್ನಿರಹಸ್ಯದ ಶಾಂಡಿಲ್ಯವಿದ್ಯೆಯೂ ಬೃಹದಾರಣ್ಯಕದ ಶಾಂಡಿಲ್ಯವಿದ್ಯೆಯೂ ಒಂದೇ ಆಗಿದೆ; ಏಕೆಂದರೆ ಮನೋಮಯತ್ವಾದಿಗುಣಗಳು ಎರಡಕ್ಕೂ ಸಮಾನವಾಗಿವೆ. ಬೃಹದಾರಣ್ಯಕದಲ್ಲಿ ಅಧಿಕವಾಗಿ ಹೇಳಿರುವ ವಶಿತ್ವಾದಿಗುಣಗಳು ಸತ್ಯಸಂಕಲ್ಪತ್ವಾದಿ-ಗುಣಗಳಿಗಿಂತ ಬೇರೆಯುವಲ್ಲ.

**ದ್ವೈ.**—'ಈಶ್ವರನ ಧರ್ಮಗಳಿಗೆ ಅಪೂರ್ವತ್ವವಿದ್ದರೂ ಸಾಮಾನ್ಯವಾದ ಗುಣಗಳಲ್ಲಿಯೇ ಉಪಸಂಹಾರವು'[2] ಎಂಬುದು ಸೂತ್ರಾರ್ಥ.

ತ್ರಿವಿಕ್ರಮತ್ವವೇ ಮೊದಲಾದ ವಿಶೇಷಗುಣಗಳಲ್ಲಿ ಉಪಸಂಹಾರವಿಲ್ಲ; ಏಕೆಂದರೆ ನಿತ್ಯವಿಕ್ರಮತ್ವವೇ ಮೊದಲಾದ ಸಾಮಾನ್ಯಗುಣಗಳಲ್ಲಿ ಅವು ಅಂತರ್ಗತವಾಗಿವೆ

---

[1] ಮನೋಮಯತ್ವಾದಿಕೇ ಸಮಾನೇ ಸತಿ ವಿದ್ಯೈಕ್ಯಮ್, ಏವಂ ಚಾಭೇದಾತ್ ವಶಿತ್ವಾದಿಗುಣೇನಾಸ್ಯ ಭೇದಾತ್ ವಶಿತ್ವಾದಿರ್ಹಿ ಸತ್ಯಸಂಕಲ್ಪತ್ವವಿತತಿಃ (ವೇ. ದೀ.).

[2] ಅಪೂರ್ವತ್ವೇಽಪಿ ಸಮಾನಾನಾಮೇವೋಪಸಂಹಾರಃ (ಮ. ಭಾ.).

# ೧೧. ಸಂಬಂಧಾಧಿಕರಣ*

(ಸೂ ೨೦-೨೨)

**ಸಂಬಂಧಾದೇವಮನ್ಯತ್ರಾಪಿ†  ॥ ೨೦ ॥**

೨೦. ಸಂಬಂಧವಿರುವುದರಿಂದ ಇನ್ನೊಂದು ಕಡೆಯಲ್ಲಿಯೂ ಹೀಗೆಯೇ.

ಬೃಹದಾರಣ್ಯಕದಲ್ಲಿ 'ಸತ್ಯವು ಬ್ರಹ್ಮ' (೫. ೫. ೧) ಎಂದು ಪ್ರಾರಂಭಿಸಿ 'ಯಾವುದು ಸತ್ಯಬ್ರಹ್ಮವೊ ಅದು ಆ ಆದಿತ್ಯನು—ಇವನು ಆದಿತ್ಯಮಂಡಲದಲ್ಲಿರುವ ಪುರುಷನು ಮತ್ತು ಬಲಗಣ್ಣಿನಲ್ಲಿರುವ ಪುರುಷನು'[1] (ಬೃ. ಉ. ೫. ೫. ೨) ಎಂದು ಆ ಸತ್ಯಬ್ರಹ್ಮಕ್ಕೆ ಅಧಿದೈವತವಾಗಿಯೂ ಅಧ್ಯಾತ್ಮವಾಗಿಯೂ ಆಯತನಗಳನ್ನೂ ವ್ಯಾಹೃತಿ ಶರೀರತ್ವವನ್ನೂ ತಿಳಿಸಿ, 'ಅಹಸ್ಸೆಂಬುದು ಅವನ ರಹಸ್ಯನಾಮ'[2] (ಬೃ. ಉ. ೫ ೫. ೩) ಎಂದು ಅಧಿದೈವತವಾಗಿಯೂ 'ಅಹಂ-ಎಂಬುದು ಅವನ ರಹಸ್ಯನಾಮ'[3] (ಬೃ. ಉ. ೫ ೫. ೪) ಎಂದು ಅಧ್ಯಾತ್ಮವಾಗಿಯೂ ಎರಡು ರಹಸ್ಯನಾಮಗಳು ಉಪದಿಷ್ಟವಾಗಿವೆ. ಈ ಎರಡು ರಹಸ್ಯನಾಮಗಳನ್ನು ಎರಡು ಕಡೆಗಳಲ್ಲಿಯೂ ವಿಂಗಡಿಸದೆ ಅನುಸಂಧಾನಮಾಡಬೇಕೊ ? ಅಥವಾ ವಿಂಗಡಿಸಿಕೊಂಡು ಒಂದು ಅಧಿದೈವದಲ್ಲಿ ಒಂದು ಅಧ್ಯಾತ್ಮದಲ್ಲಿ ಎಂದು ಅನುಸಂಧಾನಮಾಡಬೇಕೊ ?—ಎಂಬುದು ಸಂಶಯ.

ಇದು ಪೂರ್ವಪಕ್ಷದ ಸೂತ್ರ : ಹೇಗೆ ಶಾಂಡಿಲ್ಯವಿದ್ಯೆಯಲ್ಲಿ ಬೇರೆಬೇರೆ ಕಡೆ ಗುಣಗಳನ್ನು ಹೇಳಿದ್ದರೂ ಅವುಗಳ ಉಪಸಂಹಾರವನ್ನು ಮಾಡಬೇಕೆಂದು ಹೇಳಿದೆಯೋ ಹಾಗೆಯೇ ಇತರ ಕಡೆಗಳಲ್ಲಿಯೂ ಆಗತಕ್ಕದ್ದು ; ಏಕೆಂದರೆ ಗುಣಗಳೆಲ್ಲ ಒಂದೇ ವಿದ್ಯೆಗೆ ಸಂಬಂಧಪಟ್ಟಿವೆ. ಉಪಕ್ರಮವು ಒಂದೇ ಆಗಿರುವುದರಿಂದಲೂ ಅಕ್ಷಿ-ಆದಿತ್ಯರನ್ನು ಸಂಬಂಧಿಸುವ ವಾರವು ಎರಡರಲ್ಲಿ ಬರುವುದರಿಂದಲೂ ಅಧಿದೈವವಾಗಿಯೂ ಅಧ್ಯಾತ್ಮವಾಗಿಯೂ ಈ ಸತ್ಯವಿದ್ಯೆಯು ಒಂದೇ ಆಗಿದೆ. ಆದುದರಿಂದ ಈ ಎರಡು ರಹಸ್ಯನಾಮಗಳು ಆದಿತ್ಯನಿಗೂ ಚಕ್ಷುಸ್ಸಿಗೂ ಸಮಾನವಾಗಿ ಸೇರಿವೆ.

**ವಿ.**—ಇದು ಪೂರ್ವಪಕ್ಷ ಸೂತ್ರವು : ಶಾಂಡಿಲ್ಯವಿದ್ಯೆಯಲ್ಲಿ ಮನೋಮಯತ್ವಾದಿ ಗುಣಗಳುಳ್ಳ ಪರಬ್ರಹ್ಮನೊಬ್ಬನೇ ಉಪಾಸ್ಯನಾದುದರಿಂದ ಎರಡು ವಿದ್ಯೆಗಳು ಒಂದೇ

---

* ಕೆಲವು ಪಾಠಗಳಲ್ಲಿ ಇದನ್ನು ಸತ್ಯವಿದ್ಯಾಧಿಕರಣ ಎಂದು ಕರೆದಿದೆ.

† ಮಧ್ವಭಾಷ್ಯದ ಪ್ರಕಾರ ಈ ಸೂತ್ರ ಸಮಾನಾಧಿಕರಣಕ್ಕೆ ಸೇರಿದೆ.

1 ತದ್ಯತ್ ತತ್ ಸತ್ಯಮಸೌ ಸ ಆದಿತ್ಯಃ—ಯ ಏಷ ಏತಸ್ಮಿನ್ ಮಂಡಲೇ ಪುರುಷೋ, ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ ।

2 ತಸ್ಯೋಪನಿಷದಹರಿತಿ ।

3 ತಸ್ಯೋಪನಿಷದಹಮಿತಿ ।

ಎಂದು ಹೇಳಲ್ಪಟ್ಟಿತು  ಹಾಗೆಯೇ ಆದಿತ್ಯಮಂಡಲಸ್ಥನಾಗಿ ಅಹನ್ ಎಂಬ ರಹಸ್ಯನಾಮವುಳ್ಳ ಪರಬ್ರಹ್ಮನು ಉಪಾಸ್ಯನೆಂದು ಹೇಳುವ ವಿದ್ಯೆಯೂ ಮತ್ತು ಚಕ್ಷುಸ್ಸಿನಲ್ಲಿ ಅಹಂ ಎಂಬ ರಹಸ್ಯನಾಮವುಳ್ಳ ಪರಬ್ರಹ್ಮನು ಉಪಾಸ್ಯನೆಂದು ಹೇಳುವ ವಿದ್ಯೆಯೂ ಒಂದೇ, ಏಕೆಂದರೆ ಸತ್ಯಬ್ರಹ್ಮನಿಗೆ ಆದಿತ್ಯಮಂಡಲ ಮತ್ತು ಕಣ್ಣು—ಎಂಬ ಸ್ಥಾನದ್ವಯದ ಸಂಬಂಧವಿದೆ

**ದ್ವೈ.**—'ಪರಮಾತ್ಮನ ಸಂಬಂಧದಿಂದ ನಿತ್ಯವಾಗಿರುವ ತ್ರಿವಿಕ್ರಮತ್ವಾದಿ-ಗುಣಗಳನ್ನು (ಚತುರ್ಮುಖ-ಬ್ರಹ್ಮನು ತನ್ನ ಧ್ಯಾನದಲ್ಲಿ) ಉಪಸಂಹರಿಸಬಹುದು'[1] ಎಂಬುದು ಸೂತ್ರಾರ್ಥ

'ತ್ರಿವಿಕ್ರಮತ್ವಾದಿಗುಣಗಳನ್ನು ವಿರಿಂಚನು ಉಪಸಂಹರಿಸಬಹುದೇ ಹೊರತು ಇತರರಲ್ಲ—ಎಂಬುದರಲ್ಲಿ ಸಂಶಯವಿಲ್ಲ, ಏಕೆಂದರೆ ಅವನು ಸರ್ವಗುಣಗಳಿಂದ ಶ್ರೇಷ್ಠನಾಗಿದ್ದಾನೆ' ಎಂದು ಬೃಹತ್ತಂತ್ರದಲ್ಲಿ ಹೇಳಿದೆ

## ನ ವಾ ವಿಶೇಷಾತ್* ॥ ೨೧ ॥

೨೧  (ಪ್ರಾಪ್ತಿಯು) ಇಲ್ಲ, ಏಕೆಂದರೆ (ಸ್ಥಾನದ) ವಿಶೇಷವಿದೆ

ಆ ಎರಡು ರಹಸ್ಯನಾಮಗಳು ಉಕ್ತರಾದ ಪುರುಷರಿಬ್ಬರಿಗೆ ಅನ್ವಯಿಸುವುದಿಲ್ಲ, ಏಕೆಂದರೆ ಅವರು ವಿದ್ಯೆಯ ವಿಶೇಷಸ್ಥಾನಗಳಿಗೆ ಸಂಬಂಧಿಸಿದ್ದಾರೆ  ಆಯಾ ಸ್ಥಾನದ ಪುರುಷನಿಗೆ ಆಯಾ ರಹಸ್ಯನಾಮವನ್ನು ಹೇಳಿದೆ ಎಂಬುದು **ತಸ್ಯ**, 'ಅವನಿಗೆ' ಎಂಬ ಸಂನಿಹಿತ-ಸರ್ವನಾಮದಿಂದ ತಿಳಿದುಬರುತ್ತದೆ  ಉಪಾಸ್ಯನಾದ ಸತ್ಯಪುರುಷನು ಅಧಿದೈವತವಾಗಿಯೂ ಅಧ್ಯಾತ್ಮವಾಗಿಯೂ ಒಬ್ಬನೇ ಆಗಿದ್ದರೂ ಆಯಾ ಅವಸ್ಥೆಯಲ್ಲಿರುವ ಪುರುಷನಿಗೆ ಆಯಾ ರಹಸ್ಯನಾಮವು ಬೇಕಾಗಿರುವುದರಿಂದ ಬೇರೆಬೇರೆ ಅವಸ್ಥೆಯನ್ನು ಸ್ವೀಕರಿಸಿದೆ  ಆಚಾರ್ಯನು ಕುಳಿತಿರುವಾಗ ಮಾಡತಕ್ಕ ಸೇವೆಯೇ ಬೇರೆ, ನಿಂತಿರುವಾಗ ಮಾಡತಕ್ಕ ಸೇವೆಯೇ ಬೇರೆ  ಆದುದರಿಂದ ಆ ಎರಡು ರಹಸ್ಯನಾಮಗಳನ್ನು ಬೇರೆ ಬೇರೆಯಾಗಿಡಬೇಕು

**ವಿ.**—ಉಪಾಸ್ಯದ ರೂಪಗಳು ಬೇರೆ ಬೇರೆಯಾಗಿರುವುದರಿಂದ ವಿದ್ಯೆಯು ಎರಡಾಗಿದೆ  ಪರಬ್ರಹ್ಮನು ಒಂದು ಕಡೆಯಲ್ಲಿ ಅಧಿದೈವತನಾಗಿ ಆದಿತ್ಯಮಂಡಲಾಂತರವರ್ತಿಯಾಗಿದ್ದರೆ ಇನ್ನೊಂದು ಕಡೆಯಲ್ಲಿ ಅಧ್ಯಾತ್ಮವಾಗಿ ಅಕ್ಷ್ಯಂತರವರ್ತಿಯಾಗಿ ಉಪಾಸ್ಯನಾಗಿರುತ್ತಾನೆ, ಆದುದರಿಂದ **ಅಹನ್** ಮತ್ತು **ಅಹಂ** ಎಂಬ ರಹಸ್ಯನಾಮಗಳೂ

---

[1] ಪರಮಾತ್ಮಸಂಬಂಧಿತ್ವೇನ ನಿತ್ಯತ್ವಾತ್ ತ್ರಿವಿಕ್ರಮತ್ವಾದಿಷ್ವಪ್ಯುಪಸಂಹಾರ್ಯತ್ವಂ ಯುಜ್ಯತೇ (ಮ ಭಾ )

* ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ವಿಶೇಷಾಧಿಕರಣ ಎನಿಸಿದೆ.

ನಿಯಮೇನ ಎರಡು ಕಡೆಗಳಲ್ಲಿಯೂ ಬೇರೆಯಾಗಿರುತ್ತವೆ ಆದರೆ ಶಾಂಡಿಲ್ಯವಿದ್ಯೆಯಲ್ಲಿ ಉಪಾಸ್ಯಸ್ಥಾನದ ಭೇದವಿಲ್ಲ, ಉಭಯತ್ರ ಹೃದಯದಲ್ಲಿಯೇ ಪರಬ್ರಹ್ಮನು ಉಪಾಸ್ಯನಾಗಿದ್ದಾನೆ[1]

**ದ್ವೈ.**—'ಆತ್ಮಶಬ್ದದಿಂದ ಗುಣಗಳೆಲ್ಲ ಸೂಚಿತವಾಗುವುದಿಲ್ಲ, ಏಕೆಂದರೆ ಅಧಿಕಾರಿಗಳು ತಮ್ಮ ಯೋಗ್ಯತೆಯ ವಿಷಯದಲ್ಲಿ ಭಿನ್ನಭಿನ್ನರಾಗಿರುತ್ತಾರೆ'[2] ಎಂಬುದು ಸೂತ್ರಾರ್ಥ

## ದರ್ಶಯತಿ ಚ ॥ ೨೨ ॥

೨೨ (ಶ್ರುತಿಯು) ಕೂಡ (ಅದನ್ನು) ಹೇಳುತ್ತದೆ

'ಆದಿತ್ಯಪುರುಷನ ಹಿರಣ್ಮಯರೂಪವೇ ಚಾಕ್ಷುಷಪುರುಷನ ರೂಪ, ಅವನ ಗೇಷ್ಣುಗಳೇ ಇವನ ಗೇಷ್ಣುಗಳು, ಅವನ ಹೆಸರೇ ಇವನ ಹೆಸರು'[3] (ಛಾಂ ಉ ೧ ೭ ೫) ಎಂಬಲ್ಲಿ ಈ ಜಾತಿಯ ಧರ್ಮಗಳು ಬೇರೆಬೇರೆಯಾಗಿವೆಯೆಂದು ಹೇಳಿದೆ ಅದು ಹೇಗೆಂದರೆ ಇಲ್ಲಿ ಆದಿತ್ಯಪುರುಷನ ರೂಪಾದಿಧರ್ಮಗಳನ್ನು ಅಕ್ಷಿಪುರುಷನಲ್ಲಿ ಸ್ಥಾನಾಂತರಿಸಬೇಕೆಂದು ಅತಿದೇಶಮಾಡಿದೆ, ಏಕೆಂದರೆ ಶ್ರುತಿಯ ಪ್ರಕಾರ ಅಕ್ಷಿ, ಆದಿತ್ಯ ಎಂಬ ಸ್ಥಾನಗಳು ಬೇರೆಯಾಗಿರುವುದರಿಂದ ಧರ್ಮಗಳು ಭಿನ್ನವಾಗಿ, ಒಂದರದನ್ನು ಇನ್ನೊಂದರಲ್ಲಿ ಉಪಸಂಹರಿಸಲು ಆಗುವುದಿಲ್ಲ ಆದುದರಿಂದ ಈ ರಹಸ್ಯನಾಮಗಳೆರಡನ್ನು ಬೇರೆಬೇರೆಯಾಗಿಡಬೇಕು

**ವಿ.**—ಅಕ್ಷಿ-ಆದಿತ್ಯ ಎಂಬ ಆಧಾರಗಳಲ್ಲಿರುವ ಗುಣಗಳನ್ನು ಉಪಸಂಹಾರ ಮಾಡಲು ಆಗದಿರುವುದರಿಂದ ಶ್ರುತಿಯೇ (ಛಾಂ ಉ ೧ ೭ ೫) ಒಂದರ ರೂಪವು ಇನ್ನೊಂದರ ರೂಪವೆಂದು ಹೇಳಿದೆ ಗುಣಗಳು ಸ್ವತಃ ಪ್ರಾಪ್ತವಾಗದಿರುವಾಗ ಅವುಗಳನ್ನು ಇನ್ನೊಂದು ಕಡೆಯಲ್ಲಿಯೂ ಇಟ್ಟುಕೊಳ್ಳಬೇಕೆಂಬುದು ಅತಿದೇಶವು[4]

**ದ್ವೈ.**—'ಚತುರ್ಮುಖಬ್ರಹ್ಮಾದಿಗಳ ವಿಷಯದಲ್ಲಿ ಆತ್ಮಶಬ್ದವು ಸರ್ವಗುಣಗಳನ್ನು ಸೂಚಿಸಿದರೂ ಇತರರ ವಿಷಯದಲ್ಲಿ ಸೂಚಿಸುವುದಿಲ್ಲ—ಎಂದು ಭಾಲ್ಲವೇಯ ಶ್ರುತಿಯು ಪೂರ್ವಸೂತ್ರೋಕ್ತವಾದ ಅರ್ಥವನ್ನು ಹೇಳುತ್ತದೆ'[5] ಎಂಬುದು ಸೂತ್ರಾರ್ಥ

---

[1] ನೈವಂ ಶಾಂಡಿಲ್ಯವಿದ್ಯಾಯಾಃ ಉಪಾಸ್ಯಸ್ಥಾನಂ ಭಿದ್ಯತೇ, ಉಭಯತ್ರ ಹೃದಯಾಧಾರತ್ವೇನೋಪಾಸ್ಯತ್ವಾತ್ (ಶ್ರೀಭಾಷ್ಯ)

[2] ನ ವಾಽಽತ್ಮಶಬ್ದೇನ ಸರ್ವಗುಣಗ್ರಹೀತಿಃ, ಅಧಿಕಾರಿವಿಶೇಷಾತ್ (ಮ ಭಾ ).

[3] ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯನ್ನಾಮ ತನ್ನಾಮ ।

[4] ಸ್ವತೋಽಪ್ರಾಪ್ತಾತಿದೇಶೇನ ಪ್ರಾಪ್ತ್ಯಪೇಕ್ಷಾ (ಶ್ರೀಭಾಷ್ಯ)

[5] ಸರ್ವಾನ್ ಗುಣಾನ್ ಆತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನಚೈವೇತಿ ಚ ಭಾಲ್ಲವೇಯಶ್ರುತಿಃ (ಮ. ಭಾ )

## ೧೨. ಸಂಭೃತ್ಯಧಿಕರಣ

**ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ॥ ೨೩ ॥**

೨೩. ಅದೇ ಕಾರಣದಿಂದಲೇ ಸಂಭೃತಿ ಮತ್ತು ದ್ಯುವ್ಯಾಪ್ತಿ—ಇವುಗಳನ್ನೂ ಉಪಸಂಹರಿಸಲು ಆಗುವುದಿಲ್ಲ.

'ಬ್ರಹ್ಮವೇ ಜ್ಯೇಷ್ಠವಾದ ವೀರ್ಯಗಳು ಧರಿಸಲ್ಪಟ್ಟಿವೆ, ಜ್ಯೇಷ್ಠವಾದ ಬ್ರಹ್ಮವು ಮೊದಲು ದ್ಯುಲೋಕವನ್ನು ವ್ಯಾಪಿಸಿಕೊಂಡಿತು'[1] ಎಂದು ರಾಣಾಯಣೀಯಶಾಖೆಯ ಖಿಲಭಾಗದಲ್ಲಿ ಬ್ರಹ್ಮಕ್ಕೆ ವೀರ್ಯ ಸಂಭೃತಿ (ಎಂದರೆ ಎತ್ತಿ ಹಿಡಿಯುವಿಕೆ) ದ್ಯುಲೋಕದ ವ್ಯಾಪ್ತಿ ಮೊದಲಾದ ವ್ಯಾಪ್ತಿಗಳನ್ನು ಹೇಳಿದೆ ; ಮತ್ತು ಆ ಶಾಖೆಯ ಉಪನಿಷತ್ತಿನಲ್ಲಿಯೇ ಶಾಂಡಿಲ್ಯವಿದ್ಯಾದಿ-ಬ್ರಹ್ಮೋಪಾಸನೆಗಳನ್ನು ಹೇಳಿದೆ. ಆ ಬ್ರಹ್ಮೋಪಾಸನೆಗಳಲ್ಲಿ ಬ್ರಹ್ಮದ ಈ ವಿಭೂತಿಗಳನ್ನು ಉಪಸಂಹರಿಸಬೇಕೊ ಅಥವಾ ಕೂಡದೊ—ಎಂಬುದು ಸಂಶಯ. ಅವು ಬ್ರಹ್ಮಕ್ಕೆ ಸಂಬಂಧಿಸಿರುವುದರಿಂದ ಉಪಸಂಹರಿಸಬೇಕು—ಎಂಬುದು ಪೂರ್ವಪಕ್ಷ.

ಸಂಭೃತಿ, ದ್ಯುವ್ಯಾಪ್ತಿ ಮೊದಲಾದ ವಿಭೂತಿಗಳನ್ನು ಶಾಂಡಿಲ್ಯವಿದ್ಯಾದಿಗಳಲ್ಲಿ ಉಪಸಂಹರಿಸಕೂಡದು—ಎಂಬುದು ಸಿದ್ಧಾಂತ; ಏಕೆಂದರೆ ಹಿಂದಿನಂತೆ ಇಲ್ಲಿಯೂ ಹೃದಯ (ಛಾಂ ಉ. ೩. ೧೪. ೩), ಅಕ್ಷಿ (೪. ೧೫. ೧) ಮೊದಲಾದ ಆಯತನವಿಶೇಷ ಗಳನ್ನು ಹೇಳಿದೆ ಆಧ್ಯಾತ್ಮಿಕವಾದ ಈ ಆಯತನಗಳಲ್ಲಿ ಆಧಿದೈವಿಕವಾದ ಸಂಭೃತಿ ಮೊದಲಾದುವುಗಳನ್ನು ಸೇರಿಸಲು ಆಗುವುದಿಲ್ಲ. ಶಾಂಡಿಲ್ಯವಿದ್ಯಾದಿಗಳಲ್ಲಿ (ಛಾಂ. ಉ. ೩. ೧೪. ೩ ; ೪. ೧೫. ೪ ; ೮. ೧. ೩) ದ್ಯುಲೋಕ, ಆಕಾಶ ಮೊದಲಾದ ಆಧಿದೈವಿಕ ವಿಭೂತಿಗಳನ್ನು ಹೇಳಿದ್ದರೂ ಇಲ್ಲಿ ಉಪಸಂಹರಿಸದಿರುವುದಕ್ಕೆ ವಿಶೇಷವಾದ ಹೇತುವಿದೆ: ಸಮಾನಗುಣಗಳಿದ್ದರೇ ಒಂದು ಕಡೆಯಲ್ಲಿರುವ ಗುಣಗಳನ್ನು ಇನ್ನೊಂದು ಕಡೆಯಲ್ಲಿ ಉಪಸಂಹರಿಸಿಕೊಳ್ಳಬಹುದು. ಆದರೆ ಸಂಭೃತ್ಯಾದಿಗಳೂ ಶಾಂಡಿಲ್ಯವಿದ್ಯೆಯ ಮನೋಮಯತ್ವಾದಿಗಳಿಗೂ ಪರಸ್ಪರವ್ಯಾವೃತ್ತಸ್ವರೂಪವಾದುದರಿಂದ ಗುಣೋಪಸಂಹಾರವು ಸಾಧ್ಯವಿಲ್ಲ. ಬ್ರಹ್ಮವು ಒಂದೇ ಆಗಿದ್ದರೂ ತನ್ನ ವಿಭೂತಿಭೇದದಿಂದ ಅನೇಕವಿಧವಾಗಿ ಉಪಾಸ್ಯವಾಗಿರುತ್ತದೆ ಎಂಬುದು ಸಿದ್ಧಾಂತ.[2] ಆದುದರಿಂದ ವೀರ್ಯ, ಸಂಭೃತಿ ಮೊದಲಾದುವನ್ನು ಶಾಂಡಿಲ್ಯವಿದ್ಯಾದಿಗಳಲ್ಲಿ ಉಪಸಂಹರಿಸುವುದು ಯುಕ್ತವಲ್ಲ.

**ವಿ.**—ಸಂಭೃತಿ, ದ್ಯುವ್ಯಾಪ್ತಿ ಮೊದಲಾದ ಗುಣಗಳನ್ನು ಸರ್ವತ್ರ ಉಪಸಂಹರಿಸಕೂಡದು ; ಏಕೆಂದರೆ ಸ್ಥಾನಭೇದವಿದೆ. ಅಲ್ಪಸ್ಥಾನವಾದ ಹೃದಯಾದಿಗಳಲ್ಲಿ (ಎಂದರೆ

---

[1] ಬ್ರಹ್ಮಜ್ಯೇಷ್ಠಾ ವೀರ್ಯಾ ಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠಂ ದಿವಮಾತತಾನ ।

[2] ಏಕಮಪಿ ಹಿ ಬ್ರಹ್ಮ ವಿಭೂತಿಭೇದೈರನೇಕಧೋಪಾಸ್ಯತ ಇತಿ ಸ್ಥಿತಿಃ (ಸೂ. ಭಾ.).

ದಹರವಿದ್ಯೆಯಲ್ಲಿ ವಿಪುಲಸ್ಥಾನವಾದ ದ್ಯುವ್ಯಾಪ್ತಿಯನ್ನು ಉಪಸಂಹರಿಸಲು ಆಗುವುದಿಲ್ಲ.[1]

**ದ್ವೈತ.**—'ಸಂಭೃತಿ, ದ್ಯುವ್ಯಾಪ್ತಿ ಮೊದಲಾದ ಗುಣಗಳನ್ನು ದೇವತೆಗಳ ಉಪಾಸನೆಗಳಲ್ಲಿ ಉಪಸಂಹರಿಸಲು ಸಾಧ್ಯವೇ ಹೊರತು ಇತರರ ಉಪಾಸನೆಗಳಲ್ಲಲ್ಲ'[2] ಎಂಬುದು ಸೂತ್ರಾರ್ಥ.

ಏಕೆಂದರೆ ಯೋಗ್ಯತಾವಿಶೇಷವಿದೆ.

---

[1] ದ್ಯುವ್ಯಾಪ್ತಿಸ್ತಾವದ್ಧೃದಯಾದ್ಯಲ್ಪಸ್ಥಾನಗೋಚರಾಸು ವಿದ್ಯಾಸು ನೋಪಸಂಹರ್ತುಂ ಶಕ್ಯಾ (ಶ್ರೀಭಾಷ್ಯ).

[2] ಸಂಭೃತಿದ್ಯುವ್ಯಾಪ್ತೀ ಅಪಿ ದೇವಾದೀನಾಮುಪಸಂಹರ್ತವ್ಯೇ ನಾನ್ಯೇಷಾಮ್ (ಸೂ.ಭಾ.).

# ೧೩. ಪುರುಷವಿದ್ಯಾಧಿಕರಣ

**ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್*  ॥ ೨೪ ॥**

೨೪. ಪುರುಷವಿದ್ಯೆಯಂತೆ ಇತರ (ಶಾಖೆಗಳಲ್ಲಿ) ಹೇಳದೇ ಇರುವುದರಿಂದ (ಉಪಸಂಹಾರವಿಲ್ಲ).

ತಾಂಡಿಗಳ ಮತ್ತು ಪೈಂಗಿಗಳ ರಹಸ್ಯಬ್ರಾಹ್ಮಣರಲ್ಲಿ ಪುರುಷವಿದ್ಯೆಯಿದೆ; ಅಲ್ಲಿ[1] ಪುರುಷನನ್ನು ಯಜ್ಞವೆಂದು ಕಲ್ಪಿಸಿದೆ; ಅವನ ಆಯುಸ್ಸನ್ನು ಮೂರು ಭಾಗವಾಗಿ ವಿಭಜಿಸಿ ಸವನತ್ರಯವನ್ನು ಕಲ್ಪಿಸಿದೆ. ತೈತ್ತಿರೀಯಕರೂ ಕೂಡ 'ಹೀಗೆಂದು ತಿಳಿಯುವವನ ಯಜ್ಞಕ್ಕೆ ಆತ್ಮನೇ ಯಜಮಾನನು, ಶ್ರದ್ಧೆಯೇ ಪತ್ನಿ'[2] (ತೈ. ಆ. ೧೦. ೬೪) ಎಂದು ಪುರುಷಯಜ್ಞವನ್ನು ಕಲ್ಪಿಸಿರುತ್ತಾರೆ. ಬೇರೆ ಕಡೆಯಲ್ಲಿ ಹೇಳಿರುವ ಪುರುಷಯಜ್ಞದ ಧರ್ಮಗಳನ್ನು ತೈತ್ತಿರೀಯಕದಲ್ಲಿ ಉಪಸಂಹರಿಸಬೇಕೊ ಅಥವಾ ಕೂಡದೊ ?— ಎಂಬುದು ಸಂಶಯ. ಎರಡು ಕಡೆಗಳಲ್ಲಿಯೂ ಪುರುಷಯಜ್ಞವು ಸಮಾನವಾಗಿರುವುದರಿಂದ ಉಪಸಂಹರಿಸಬೇಕು—ಎಂಬುದು ಪೂರ್ವಪಕ್ಷ.

ಉಪಸಂಹರಿಸಕೂಡದು—ಎಂಬುದು ಸಿದ್ಧಾಂತ; ಏಕೆಂದರೆ ತೈತ್ತಿರೀಯದಲ್ಲಿ ತಾಂಡಿ-ಪೈಂಗಿಗಳ ಪುರುಷವಿದ್ಯೆಯ ಪಾಠದಂತೆ ಪಾಠವಿಲ್ಲ. ತೈತ್ತಿರೀಯದಲ್ಲಿ ಪತ್ನಿ ಯಜಮಾನ ವೇದ ವೇದಿ ಬರ್ಹಿಸ್ಸು ಯೂಪ ಆಜ್ಯ ಪಶು ಋತ್ವಿಕ್ಕುಗಳು—ಇವೇ ಮೊದಲಾದುವುಗಳನ್ನು ಅನುಕ್ರಮವಾಗಿ ಹೇಳಿದೆ. ಅಲ್ಲಿ ಸಂಪಾದಿಸಿರುವ ಸವನವೂ ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲ ಎಂದು ವಿಲಕ್ಷಣವಾಗಿಯೇ ಇದೆ. ಇವೆರಡಕ್ಕೆ ಭೇದವು ಬಹಳವಾಗಿರುವುದರಿಂದ 'ಮರಣವು ಅವಭೃತ'—ಇವೇ ಮೊದಲಾದ ಸಾಮ್ಯ ವಿದ್ದರೂ ಎರಡೂ ಒಂದೇ ವಿದ್ಯೆಯೆಂದು ಹೇಳಲಾಗುವುದಿಲ್ಲ. ತೈತ್ತಿರೀಯಕದಲ್ಲಿ ಪುರುಷನು ಯಜ್ಞವೆಂದು ಹೇಳಿಲ್ಲ, 'ತಿಳಿದವನ ಯಜ್ಞಕ್ಕೆ' **ವಿದುಷೋ ಯಜ್ಞಸ್ಯ** ಎಂದಿದೆ. ಇಲ್ಲಿ ಷಷ್ಠೀವಿಭಕ್ತಿಗಳು ವ್ಯಧಿಕರಣವೇ ಹೊರತು ಸಮಾನಾಧಿಕರಣವಲ್ಲ. ಸಂನ್ಯಾಸಸಹಿತವಾದ ಆತ್ಮಜ್ಞಾನವನ್ನು ಮೊದಲು ಹೇಳಿ ಅನಂತರ **ತಸ್ಯೈವಂವಿದುಷಃ** ಎಂದು ಅನುಕ್ರಮವಾಗಿ ಹೇಳಿರುವ ಶ್ರುತಿಯು ಹಿಂದೆ ಹೇಳಿದುದಕ್ಕೆ ಶೇಷವು, ಸ್ವತಂತ್ರ ವಲ್ಲ ಎಂದು ತಿಳಿದುಬರುತ್ತದೆ. ಆದುದರಿಂದಲೇ ಎರಡು ಅನುವಾಕಗಳಲ್ಲಿಯೂ 'ಬ್ರಹ್ಮದ

---

* ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ಪುರುಷವಿದ್ಯಾಯಾಮಪಿ ಎಂಬ ಪಾಠಭೇದವಿದೆ.

1 'ಪುರುಷನೇ ಯಜ್ಞ. ಅವನ ಮೊದಲನೆಯ ಇಪ್ಪತ್ತುನಾಲ್ಕು ವರ್ಷಗಳು ಪ್ರಾತಃಸವನ . . . ಅವನ ಮುಂದಿನ ನಲವತ್ತನಾಲ್ಕು ವರ್ಷಗಳು ಮಾಧ್ಯಂದಿನ ಸವನ . . . ಅವನ ಕೊನೆಯ ನಲವತ್ತೆಂಟು ವರ್ಷಗಳು ತೃತೀಯಸವನ' (ಛಾಂ. ಉ. ೩. ೧೬. ೧. ೫).

2 ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ ।

ಮಹಿಮೆಯನ್ನು ಹೊಂದುತ್ತಾನೆ' ಎಂದು ಒಂದೇ ಫಲವನ್ನು ಹೇಳಿದೆ. ಆದರೆ ತಾಂಡಿ-ಪೈಂಗಿಗಳಲ್ಲಿ ಪುರುಷವಿದ್ಯೆಯು ಸ್ವತಂತ್ರವಾಗಿದೆ. ಆದುದರಿಂದ ತೈತ್ತಿರೀಯದಲ್ಲಿ ಪುರುಷ ವಿದ್ಯಾಧರ್ಮಗಳ ಉಪಸಂಹಾರವಿಲ್ಲ.

**ವಿ.**—ಎರಡು ವಿದ್ಯೆಗಳೂ ಪುರುಷವಿದ್ಯೆ ಎನಿಸಿದ್ದರೂ ವಿದ್ಯಾಭೇದವಿದೆ ; ಏಕೆಂದರೆ ಒಂದು ಶಾಖೆಯಲ್ಲಿ ಹೇಳಿರುವ ಗುಣಗಳನ್ನು ಇನ್ನೊಂದು ಶಾಖೆಯಲ್ಲಿ ಹೇಳಿಲ್ಲ. ಮತ್ತು ಫಲಗಳೂ ಬೇರೆಯಾಗಿವೆ. ಆದುದರಿಂದ ಒಂದರ ಗುಣಗಳನ್ನು ಇನ್ನೊಂದರಲ್ಲಿ ಉಪ ಸಂಹರಿಸಕೂಡದು.

**ದ್ವೈ.** —'ಪುರುಷಸೂಕ್ತೋಕ್ತ-ವಿದ್ಯೆಯಲ್ಲಿಯೂ (ಕೆಲವು ಗುಣಗಳನ್ನು ಹೇಳದೇ ಇರುವುದರಿಂದ) ಸರ್ವಗುಣಗಳನ್ನು ಉಪಸಂಹರಿಸಬೇಕು' ಎಂಬುದು ಸೂತ್ರಾರ್ಥ.[1]

'ಪುರುಷಸೂಕ್ತದಲ್ಲೆಲ್ಲ ವಿಷ್ಣುವಿನ ಗುಣಗಳನ್ನೇ ಹೇಳಿದೆ ; ಅಲ್ಲಿಯೂ ಸರ್ವಗುಣ ಗಳನ್ನು ಹೇಳಿಲ್ಲ ; ಆದುದರಿಂದ ಅವುಗಳನ್ನು ಉಪಸಂಹರಿಸಬೇಕು' ಎಂದು ಬ್ರಹ್ಮತರ್ಕ ದಲ್ಲಿ ಹೇಳಿದೆ.[2]

[1] ಪುರುಷಸೂಕ್ತೋಕ್ತವಿದ್ಯಾಯಾಮಪಿ ಕೇಷಾಂಚಿದ್ಗುಣಾನಾಮನಾಮ್ನಾನಾತ್ (ಮ. ಭಾ).

[2] ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ । ತತ್ರಾಪಿ ನೈವ ಸರ್ವೇಽಪಿ ತಸ್ಮಾತ್ ಕಾರ್ಯೋಪಸಂಹೃತಿರಿತಿ ಬ್ರಹ್ಮತರ್ಕೇ (ಮ. ಭಾ.).

# ೧೪. ವೇಧಾದ್ಯಧಿಕರಣ

**ವೇಧಾದ್ಯರ್ಥಭೇದಾತ್ || ೨೫ ||**

೨೫. ಸೀಳುವಿಕೆ ಮೊದಲಾದುವುಗಳ (ಉಪಸಂಹಾರವಿಲ್ಲ) ; ಏಕೆಂದರೆ ಅರ್ಥಭೇದವಿದೆ.

ಆಥರ್ವಣಿಕರ ಉಪನಿಷತ್ತಿನ ಆರಂಭದಲ್ಲಿ '(ಶತ್ರುವಿನ) ಎಲ್ಲ (ಅಂಗಗಳನ್ನೂ) ಸೀಳು, ಹೃದಯವನ್ನು ಸೀಳು, ನಾಡಿಗಳನ್ನು ಜಜ್ಜು, ತಲೆಯನ್ನು ಒಡೆ, ಮೂರು ವಿಧದಲ್ಲಿ ಚೂರಾಗಲಿ'[1] ಇದೇ ಮೊದಲಾದ ಮಂತ್ರವಿದೆ. ತಾಂಡಿಗಳ, ಶಾಠ್ಯಾಯನಿಗಳ, ಕಠಶಾಖೆಯವರ, ತೈತ್ತಿರೀಯಶಾಖೆಯವರ ಉಪನಿಷತ್ತುಗಳ ಆರಂಭದಲ್ಲಿ ಭಿನ್ನಭಿನ್ನವಾರಗಳಿವೆ. ವಾಜಸನೇಯಿಗಳ ಉಪನಿಷತ್ತಿನ ಆರಂಭದಲ್ಲಿ ಪ್ರವರ್ಗ್ಯಕರ್ಮವೂ ಕೌಷೀತಕಿಗಳ ಶಾಖೆಯಲ್ಲಿ ಅಗ್ನಿಷ್ಟೋಮವೂ ಪಠಿತವಾಗಿದೆ ಈ ಪ್ರವಿಧ್ಯಾದಿ-ಮಂತ್ರಗಳನ್ನೂ ಪ್ರವರ್ಗ್ಯಾದಿ-ಕರ್ಮಗಳನ್ನೂ ಉಪನಿಷತ್ತಿನ ವಿದ್ಯೆಗಳಲ್ಲಿ ಉಪಸಂಹರಿಸಬೇಕೊ ಅಥವಾ ಕೂಡದೊ ?—ಎಂಬುದು ಸಂಶಯ.

ಇವುಗಳನ್ನು ವಿದ್ಯೆಗಳಲ್ಲಿ ಉಪಸಂಹರಿಸಿಕೊಳ್ಳಬೇಕು—ಎಂಬುದು ಪೂರ್ವಪಕ್ಷ ; ಏಕೆಂದರೆ ವಿದ್ಯಾಪ್ರಧಾನವಾಗಿರುವ ಉಪನಿಷತ್ತುಗಳ ಸಮೀಪದಲ್ಲಿ ಇವುಗಳನ್ನು ಪಠಿಸಿದೆ ಈ ಮಂತ್ರಗಳಿಗೆ ವಿದ್ಯಾವಿಷಯದಲ್ಲಿ ಸಾಮರ್ಥ್ಯವು ಕಂಡುಬರದಿದ್ದರೂ ಸಾಮರ್ಥ್ಯವನ್ನು ಕಲ್ಪಿಸಿಕೊಳ್ಳಬೇಕು. ಪ್ರವರ್ಗ್ಯಾದಿ-ಕರ್ಮಗಳು ಬೇರೆ ಬೇರೆಯಾಗಿ ವಿನಿಯೋಗವಾಗಿದ್ದರೂ—ಬೃಹಸ್ಪತಿಸವವನ್ನು ವಾಜಪೇಯದಲ್ಲಿ ವಿನಿಯೋಗಿಸಿದಂತೆ—ವಿದ್ಯೆಗಳಲ್ಲಿ ವಿನಿಯೋಗವಾಗಬಹುದು.

ಇವುಗಳಿಗೆ ವಿದ್ಯೆಗಳಲ್ಲಿ ಉಪಸಂಹಾರವಿಲ್ಲ—ಎಂಬುದು ಸಿದ್ಧಾಂತ, ಏಕೆಂದರೆ ಈ ಮಂತ್ರಗಳಲ್ಲಿ ಹೇಳಿರುವ ಹೃದಯವೇಧವೇ ಮೊದಲಾದುವುಗಳಿಗೆ ಉಪನಿಷದ್ವಿದ್ಯೆಗಳೊಡನೆ ಸಂಬಂಧವಿರುವುದಿಲ್ಲ. ಈ ಮಂತ್ರವು ಆಭಿಚಾರಿಕ-ಕರ್ಮಕ್ಕೆ ಸಂಬಂಧಪಟ್ಟಿದು. ಇದೇ ರೀತಿ ಪ್ರವರ್ಗ್ಯಾದಿ-ಕರ್ಮಗಳಿಗೂ ಈ ಮಂತ್ರಗಳಿಗೂ ಯಾವ ಸಂಬಂಧವೂ ಇರುವುದಿಲ್ಲ. ವಾಜಪೇಯದಲ್ಲಿ ಬೃಹಸ್ಪತಿ-ಸವಕ್ಕೆ ಸ್ಪಷ್ಟವಾಗಿ ಇನ್ನೊಂದು ವಿನಿಯೋಗವು ಕಂಡುಬರುತ್ತದೆ. ಒಂದು ಪ್ರವರ್ಗ್ಯವು ನಿರ್ದಿಷ್ಟವಾದ ಪ್ರಯೋಜನಕ್ಕೆ ಪ್ರಬಲಪ್ರಮಾಣದಿಂದ ಒಂದೇ ಸಲ ನಿಯತವಾಗಿರುವಾಗ ದುರ್ಬಲಪ್ರಯಾಣದಿಂದ ಅವನ್ನು ಮತ್ತೊಂದರಲ್ಲಿ ವಿನಿಯೋಗಿಸಲು ಸಾಧ್ಯವಿಲ್ಲ. ಆದುದರಿಂದ ಈ ಜಾತಿಯ

---

[1] **ಸರ್ವಂ ಪ್ರವಿಧ್ಯ ಹೃದಯಂ ಪ್ರವಿಧ್ಯ ಧಮನೀಃ ಪ್ರವೃಜ್ಯ ಶಿರೋಽಭಿಪ್ರವೃಜ್ಯ ತ್ರಿಧಾ ವಿಪೃಕ್ತಃ (ಸೂ. ಭಾ.)**

ಮಂತ್ರಗಳಾಗಲಿ ಕರ್ಮಗಳಾಗಲಿ ಸಂನಿಧಿಪಾಠಮಾತ್ರದಿಂದ ವಿದ್ಯೆಗೆ ಶೇಷವಾಗುವುದಿಲ್ಲ.[1] ಆದುದರಿಂದ ಸಂನಿಧಿಪಾಠವು ಅರಣ್ಯದಲ್ಲಿ ಅಧ್ಯಯನಮಾಡುವುದೇ ಮೊದಲಾದ ಧರ್ಮ ಸಾಮಾನ್ಯದಿಂದ ಬಂದಿದೆ ಎಂದು ತಿಳಿದುಕೊಳ್ಳಬೇಕು

**ವಿ.—ಶುಕ್ರಂ ಪ್ರವಿಧ್ಯ, ಹೃದಯಂ ಪ್ರವಿಧ್ಯ** ಮೊದಲಾದ ಮಂತ್ರಗಳಿಗೆ ಬೇರೆ ವಿನಿಯೋಗವಿರುವುದರಿಂದ ಅವು ವಿದ್ಯೆಗಳ ಅಂಗವಾಗಲಾರವು.

**ದ್ವೈ.**—'ಮುರಿ, ಹೊಡಿ, ನಾಶಮಾಡು—ಮೊದಲಾದುವುಗಳಿಗೆ ಬೇರೆ ಬೇರೆ ಫಲಗಳಿರುವುದರಿಂದ ಅವು ಉಪಾಸ್ಯವಲ್ಲ'[2] ಎಂಬುದು ಸೂತ್ರಾರ್ಥ.

'ಅಯೋಗ್ಯವಾದ ಉಪಾಸನೆಯಿಂದ ಅನರ್ಥವು ಉಂಟಾಗುವುದಲ್ಲದೆ ಅರ್ಥ ನಾಶವೂ ಆಗುತ್ತದೆ' ಎಂದು ಬೃಹತ್ತಂತ್ರದಲ್ಲಿ ಹೇಳಿದೆ

---

[1] ತಸ್ಮಾದೇವಂಜಾತೀಯಕಾನಾಂ ಮಂತ್ರಾಣಾಂ ಕರ್ಮಣಾಂ ವಾ ನ ಸಂನಿಧಿಪಾಠ-ಮಾತ್ರೇಣ ವಿದ್ಯಾಶೇಷತ್ವಮಾಶಂಕಿತವ್ಯಮ್ (ಸೂ. ಭಾ.).

[2] ಭಿಂಧಿ ವಿದ್ಧಿ ಶೃಣೀಹೀತಿ ಫಲಭೇದೇನ ಸರ್ವಶಃ (ಮ. ಭಾ.).

## ೧೫. ಹಾನ್ಯಧಿಕರಣ*

**ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ॥ ೨೬ ॥**

೨೬ (ಸುಕೃತ-ದುಷ್ಕೃತಗಳ) ಬಿಡುವಿಕೆ (ಶ್ರುತವಾಗಿದ್ದರೂ ಅವುಗಳ ಉಪಾದಾನವನ್ನೂ ಸೇರಿಸಿಕೊಳ್ಳಬೇಕು); ಏಕೆಂದರೆ ಅದಕ್ಕೆ ಉಪಾಯನ-ಶಬ್ದವು[1] ಶೇಷವಾಗಿರುತ್ತದೆ ; ಕುಶಗಳು, ಛಂದಸ್ಸುಗಳು, ಸ್ತುತಿ, ಉಪಗಾನ—ಇವುಗಳಂತೆ (ಇದು). ಅದು (ಪೂರ್ವಮೀಮಾಂಸದಲ್ಲಿ) ಉಕ್ತವಾಗಿದೆ.

'ಅಶ್ವವು ತನ್ನ ರೋಮಗಳನ್ನು ಒದರುವಂತೆ ಪಾಪವನ್ನು ಹೋಗಲಾಡಿಸಿಕೊಂಡು, ಚಂದ್ರನು ರಾಹುವಿನ ಬಾಯಿಂದ ಬಿಡಿಸಿಕೊಂಡಂತೆ ಶರೀರದಿಂದ ಬಿಡಿಸಿಕೊಂಡು, ಕೃತಕೃತ್ಯನಾಗಿ ನಿತ್ಯವಾದ ಬ್ರಹ್ಮಲೋಕವನ್ನು ಹೊಂದುತ್ತೇನೆ'[2] (ಛಾಂ. ಉ. ೮. ೧೩. ೧) ಎಂಬ ತಾಂಡಿಗಳ ಶ್ರುತಿಯಿದೆ 'ಅವನು ಸುಕೃತ-ದುಷ್ಕೃತಗಳನ್ನು ಕೊಡವಿಕೊಳ್ಳುತ್ತಾನೆ. ಅವನಿಗೆ ಪ್ರಿಯರಾದ ಜ್ಞಾತಿಗಳು ಅವನ ಸುಕೃತವನ್ನು ಹೊಂದುತ್ತಾರೆ, ಅಪ್ರಿಯರಾದವರು ದುಷ್ಕೃತವನ್ನು ಹೊಂದುತ್ತಾರೆ'[3] (ಕೌ. ಉ. ೧. ४) ಎಂಬ ಕೌಷೀತಕಿಗಳ ಶ್ರುತಿಯಿದೆ ಸುಕೃತ-ದುಷ್ಕೃತಗಳ ತ್ಯಾಗವನ್ನು ಹೇಳಿರುವ ಸ್ಥಳದಲ್ಲಿ ಅವುಗಳ ಉಪಾಯನವನ್ನು ಸೇರಿಸಿಕೊಳ್ಳಬೇಕೊ ಅಥವಾ ಬೇಡವೊ ?—ಎಂಬುದು ಸಂಶಯ

ಶ್ರುತಿಯಲ್ಲಿ ಇಲ್ಲದ್ದರಿಂದ ಸೇರಿಸಿಕೊಳ್ಳಕೂಡದು—ಎಂಬುದು ಪೂರ್ವಪಕ್ಷ. ಸುಕೃತ-ದುಷ್ಕೃತಗಳಿಗೆ ತಾನೇ ಕರ್ತೃವಾಗಿರುವಾಗ ಅದರ ಉಪಾಯನಕ್ಕೆ ಇನ್ನೊಂದು ಕರ್ತೃವಿರಬೇಕೆಂಬ ಅವಶ್ಯಕತೆಯಿಲ್ಲ. ಆದುದರಿಂದ ತ್ಯಾಗವನ್ನು ಹೇಳಿರುವ ಸ್ಥಾನದಲ್ಲಿ ಉಪಾಯನವನ್ನು ಸೇರಿಸಿಕೊಳ್ಳಬೇಕಾಗಿಲ್ಲ.

ಸುಕೃತ-ದುಷ್ಕೃತಗಳ ತ್ಯಾಗವೊಂದನ್ನೇ ಶ್ರುತಿಯಲ್ಲಿ ಹೇಳಿದ್ದರೂ ಅದನ್ನು

---

* ಮಧ್ವಭಾಷ್ಯದ ಪ್ರಕಾರ ಈ ಸೂತ್ರ ಮತ್ತು ಮುಂದಿನದು ಮುಕ್ತೋಪಾಸನಾಧಿಕರಣ ಎನಿಸಿದೆ.

1 ಉಪಾಯನ ಎಂದರೆ ತೆಗೆದುಕೊಳ್ಳುವಿಕೆ ಅಥವಾ ಗ್ರಹಿಸುವಿಕೆ

2 ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ ।

3 ತತ್ಸುಕೃತದುಷ್ಕೃತೇ ವಿಧೂನುತೇ । ತಸ್ಯ ಪ್ರಿಯಾ ಜ್ಞಾತಯಃ ಸುಕೃತಮುಪಯಂತ್ಯಪ್ರಿಯಾ ದುಷ್ಕೃತಮ್ ।

ಇತರರು ತೆಗೆದುಕೊಳ್ಳುವರೆಂಬುದನ್ನು ಸೇರಿಸಿಕೊಳ್ಳುವುದು ಯುಕ್ತ, ಏಕೆಂದರೆ ಹಾನ ಶಬ್ದಕ್ಕೆ ಶೇಷವಾಗಿ ಉಪಾಯನ-ಶಬ್ದವನ್ನು ಕೌಷೀತಕಿ-ಉಪನಿಷತ್ತಿನಲ್ಲಿ ಹೇಳಿದೆ ಆದುದರಿಂದ ಇತರ ಸ್ಥಾನಗಳಲ್ಲಿ ಕೇವಲ ಹಾನ-ಶಬ್ದವಿದ್ದರೂ ಉಪಾಯನವೆಂಬುದು ಬಂದು ಸೇರಿಕೊಳ್ಳುತ್ತದೆ ಇಲ್ಲಿ ಸುಕೃತ-ದುಷ್ಕೃತಗಳ ಹಾನವಾಗಲಿ ಉಪಾದಾನವಾಗಲಿ ಅನುಷ್ಠೇಯವೆಂದು ಹೇಳಿಲ್ಲ ವಿದ್ಯೆಯನ್ನು ಸ್ತುತಿಸುವುದಕ್ಕಾಗಿ ಇವುಗಳ ಹಾನೋಪಾಯನಗಳನ್ನು ಹೇಳಿದೆ ಆದುದರಿಂದ ಸ್ತುತಿಯ ಪ್ರಕರ್ಷಕ್ಕಾಗಿ ಕೇವಲ ಹಾನವನ್ನು ಹೇಳಿರುವಾಗ ಉಪಾಯನವನ್ನೂ ಸೇರಿಸಿಕೊಳ್ಳುವುದು ಯುಕ್ತವಾಗಿದೆ ಒಂದು ಅರ್ಥವಾದವನ್ನು ಅಪೇಕ್ಷಿಸಿ ಮತ್ತೊಂದು ಅರ್ಥವಾದ ಬಂದಿರುವುದು ಪ್ರಸಿದ್ಧವಾಗಿದೆ ಆದುದರಿಂದ ಗುಣೋಪಸಂಹಾರದ ವಿಚಾರದ ಪ್ರಸಕ್ತಿಯಿಂದ ಸ್ತುತಿಯ ಉಪಸಂಹಾರವನ್ನು ತಿಳಿಸುವುದಕ್ಕೆ ಈ ಸೂತ್ರವು ಬಂದಿದೆ [1] ಭಾಲ್ಲವಿಶಾಖೆಯವರ ಪ್ರಕಾರ ಕುಶಗಳೆಲ್ಲ ವನಸ್ಪತಿಯಿಂದಾಗಿವೆ [2] ಶಾಟ್ಯಾಯನಿಗಳ ವಿಶೇಷವಚನದಿಂದ ಕುಶಗಳು ಉದುಂಬರ-ಮರದಿಂದಾಗಿವೆ [3] ಕೆಲವೆಡೆಗಳಲ್ಲಿ ದೇವಾಸುರಚ್ಛಂದಸ್ಸುಗಳನ್ನು ವಿಶೇಷವಿಲ್ಲದೆ ಅನುಕ್ರಮಿಸಬಹುದೆಂಬ ಪ್ರಸಕ್ತಿಯಿದ್ದರೆ ಪೈಂಗಿಗಳು ದೇವಚ್ಛಂದಸ್ಸುಗಳು ಮೊದಲು ಬರಬೇಕೆಂದು ಹೇಳುತ್ತಾರೆ ಹೀಗೆಯೇ ಷೋಡಶಿಸ್ತೋತ್ರದಲ್ಲಿ ಕೆಲವು ಶಾಖೆಯವರು ಕಾಲವಿಶೇಷವನ್ನು ಹೇಳದಿದ್ದರೆ ಋಗ್ವೇದಿಗಳು ಕಾಲವನ್ನು ನಿಶ್ಚಯಿಸಿರುತ್ತಾರೆ [4] ಯಾವ ವಿಶೇಷವೂ ಇಲ್ಲದೆ ಉಪಗಾನವನ್ನು ಮಾಡಬಹುದೆಂದು ಕೆಲವರು ಹೇಳಿದ್ದರೆ ಭಾಲ್ಲವಿಗಳು ವಿಶೇಷಪೂರ್ವಕವಾಗಿ ಪಠಿಸಿರುತ್ತಾರೆ ಹೇಗೆ ಕುಶಾದಿಗಳಲ್ಲಿ ಶ್ರುತ್ಯಂತರ ವಿಶೇಷವನ್ನು ಅನ್ವಯಿಸಿಕೊಳ್ಳುವರೊ ಹಾಗೆಯೇ ಹಾನವನ್ನು ಹೇಳಿರುವಲ್ಲಿ ಉಪಾಯನವನ್ನು ಅನ್ವಯಿಸಿಕೊಳ್ಳಬೇಕು ಒಂದು ಶ್ರುತಿಯಲ್ಲಿರುವ ವಿಶೇಷವನ್ನು ಇನ್ನೊಂದು ಶ್ರುತಿಯಲ್ಲಿ ಸೇರಿಸಿಕೊಳ್ಳದಿದ್ದರೆ ಸರ್ವತ್ರ ವಿಕಲ್ಪವೇ ಉಂಟಾಗುವುದು

ವಿ.—ಶ್ರುತಿಯು ಕೇವಲ ಹಾನವನ್ನು ಹೇಳಿರಲಿ ಅಥವಾ ಉಪಾಯನವನ್ನು ಹೇಳಿರಲಿ—ಇವೆರಡರ ಸಮುಚ್ಚಯವನ್ನು ಆವಶ್ಯಕವಾಗಿ ಮಾಡಬೇಕಾಗುತ್ತದೆ, ಏಕೆಂದರೆ ಉಪಾಯನ-ಶಬ್ದವು ಹಾನಿ-ವಾಕ್ಯಕ್ಕೆ ಶೇಷವಾಗಿದೆ [5]

---

1 ತಸ್ಮಾದ್ಗುಣೋಪಸಂಹಾರವಿಚಾರಪ್ರಸಂಗೇನ ಸ್ತುತ್ಯುಪಸಂಹಾರಪ್ರದರ್ಶನಾರ್ಥಮ್ ಇದಂ ಸೂತ್ರಮ್ (ಸೂ ಭಾ)

2 ಕುಶಾ ವಾನಸ್ಪತ್ಯಾಃ ಸ್ಥ ತಾ ಮಾ ಪಾತ ।

3 ಔದುಂಬರಾಃ ಕುಶಾಃ ।

4 ಸಮಯಾಧ್ಯುಷಿತೇ ಸೂರ್ಯೇ ।

5 ಕೇವಲಾಯಾಂ ಹಾನೌ ಕೇವಲೇ ಚೋಪಾಯನೇ ಶ್ರೂಯಮಾಣೇ ತಯೋರಿತರೇತರಸಮುಚ್ಚಯೋಽವಶ್ಯಂಭಾವೀ । ಕುತಃ ? ಉಪಾಯನಶಬ್ದಸ್ಯ ಹಾನಿವಾಕ್ಯಶೇಷತ್ವಾತ್ (ಶ್ರೀಭಾಷ್ಯ).

**ದ್ವೈ** —'ಬ್ರಹ್ಮಯಜ್ಞಾನಂತರದಲ್ಲಿ ತಮ್ಮ ಇಚ್ಛೆಯಿಂದಲೇ ಬ್ರಾಹ್ಮಣರು ಅಧ್ಯಯನವನ್ನು ಮಾಡುವ ಹಾಗೆ ಮೋಕ್ಷದಲ್ಲಿಯೂ ಮುಕ್ತರಾದವರು ತಮ್ಮ ಇಚ್ಛೆಯಂತೆ ಉಪಾಸನಾದಿಗಳನ್ನು ಮಾಡುತ್ತಾರೆ'[1] ಎಂಬುದು ಸೂತ್ರಾರ್ಥ

ಮುಕ್ತನು ಉಪಾಸನೆಯನ್ನು ಮಾಡಬೇಕೊ ಅಥವಾ ಮಾಡಕೂಡದೊ ? ಎಂಬುದಕ್ಕೆ ಈ ಸೂತ್ರವು ಉತ್ತರವಾಗಿದೆ

[1] ನಿಯತಸ್ವಾಧ್ಯಾಯಾನಂತರಂ ಸ್ವೇಚ್ಛಯಾ ಕುಶಾಗ್ರಹಣಸ್ತು ತಸ್ಯೋಪಗಾನವದೇವ

## ೧೬. ಸಾಂಪರಾಯಾಧಿಕರಣ*

(ಸೂ. ೨೭–೨೮)

**ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ॥ ೨೭ ॥**

೨೭. (ಇಲ್ಲಿಂದ) ಹೋಗುವಾಗಲೇ (ಸುಕೃತ-ದುಷ್ಕೃತಗಳಿಂದ ಬಿಡಿಸಿಕೊಳ್ಳುತ್ತಾನೆ); ಏಕೆಂದರೆ ಸೇರಬೇಕಾದದ್ದು ಏನೂ ಇರುವುದಿಲ್ಲ; ಹಾಗೆಯೇ ಬೇರೆ (ಶಾಖೆಯವರು) ಪರಿಸುತ್ತಾರೆ.

ಪರ್ಯಂಕದಲ್ಲಿರುವ ಬ್ರಹ್ಮವನ್ನು ಕುರಿತು ದೇವಯಾನದಿಂದ ಹೊರಟವನಿಗೆ ದಾರಿಯಲ್ಲಿಯೇ ಸುಕೃತ-ದುಷ್ಕೃತಗಳ ನಾಶವಾಗುತ್ತದೆಂದು ಕೌಷೀತಕಿ-ಶಾಖೆಯವರು ಪರ್ಯಂಕವಿದ್ಯೆಯಲ್ಲಿ ಹೀಗೆ ಪರಿಸುತ್ತಾರೆ: 'ಅವನು ಈ ದೇವಯಾನವೆಂಬ ಮಾರ್ಗವನ್ನು ಸೇರಿ ಅಗ್ನಿಲೋಕಕ್ಕೆ ಬರುತ್ತಾನೆ'[1] (ಕೌ. ಉ. ೧. ೩), 'ಅವನು ವಿರಜಾನದಿಗೆ ಬರುತ್ತಾನೆ; ಅದನ್ನು ಮನಸ್ಸಿನಿಂದಲೇ ದಾಟುತ್ತಾನೆ; ಅಲ್ಲಿ ಸುಕೃತ-ದುಷ್ಕೃತಗಳನ್ನು ಕೊಡವಿಕೊಳ್ಳುತ್ತಾನೆ'[2] (ಕೌ. ಉ ೧. ೪). ಶ್ರುತಿಯಲ್ಲಿರುವಂತೆ ಅವನು ನಡುದಾರಿಯಲ್ಲಿಯೇ ಸುಕೃತ-ದುಷ್ಕೃತಗಳನ್ನು ಬಿಡುತ್ತಾನೆಯೊ ಅಥವಾ ದೇಹವನ್ನು ಬಿಡುವಾಗಲೇ ಅವುಗಳನ್ನು ತ್ಯಜಿಸುತ್ತಾನೆಯೊ ?—ಎಂಬುದು ಸಂಶಯ ಶ್ರುತಿಯಲ್ಲಿರುವಂತೆಯೇ ತಿಳಿಯಬೇಕೆಂಬುದು ಪೂರ್ವಪಕ್ಷ.

ದೇಹವನ್ನು ಬಿಡುವಾಗಲೇ ಜ್ಞಾನಿಯಾದವನು ತನ್ನ ವಿದ್ಯಾಸಾಮರ್ಥ್ಯದಿಂದ ಸುಕೃತ ದುಷ್ಕೃತಗಳನ್ನು ಬಿಡುತ್ತಾನೆ—ಎಂಬುದು ಸಿದ್ಧಾಂತ; ಏಕೆಂದರೆ ಅವನಿಗೆ ನಡುವೆ ಸುಕೃತ-ದುಷ್ಕೃತಗಳಿಂದ ಪಡೆದುಕೊಳ್ಳಬೇಕಾದುದು ಯಾವುದೂ ಇರುವುದಿಲ್ಲ. ಅವುಗಳ ಫಲವು ವಿದ್ಯೆಗೆ ವಿರೋಧವಾಗಿರುವುದರಿಂದ ಅವು ಕ್ಷಯವಾಗುತ್ತವೆ. ಆದುದರಿಂದ ವಿದ್ಯೆಯು ಫಲಾಭಿಮುಖವಾದ ಕೂಡಲೇ ಅವು ಕ್ಷಯವಾಗುತ್ತವೆಂಬುದು ಯುಕ್ತವಾಗಿದೆ. ಹೀಗೆಯೇ ತಾಂಡಿಗಳು ಮತ್ತು ಶಾಟ್ಯಾಯನಿಗಳು ಪರಿಸಿದ್ದಾರೆ: 'ಅಶ್ವವು ತನ್ನ ರೋಮಗಳನ್ನು ಒದರುವಂತೆ ಪಾಪವನ್ನು ಹೋಗಲಾಡಿಸಿಕೊಂಡು' (ಛಾಂ. ಉ. ೮. ೧೩. ೧) ಮತ್ತು 'ಅವನ ಪುತ್ರರು ಅವನ ಸ್ವತ್ತನ್ನು ಪಡೆಯುವರು, ಅವನ ಸ್ನೇಹಿತರು ಅವನ ಪುಣ್ಯಕರ್ಮವನ್ನು ಪಡೆಯುವರು, ಅವನ ಶತ್ರುಗಳು ಪಾಪಕೃತ್ಯವನ್ನು ಪಡೆಯುವರು.'

---

* ಶ್ರೀಭಾಷ್ಯದ ಪ್ರಕಾರ ಮುಂದಿನ ಐದು ಸೂತ್ರಗಳು (೨೭, ೨೮, ೨೯, ೩೦, ೩೧) ಈ ಅಧಿಕರಣಕ್ಕೆ ಸೇರಿವೆ

1 ಸ ಏನಂ ದೇವಯಾನಂ ಪಂಥಾನಮಾಸಾದ್ಯಾಗ್ನಿಲೋಕಮಾಗಚ್ಛತಿ ।

2 ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈವಾತ್ಯೇತಿ ತತ್ಸುಕೃತದುಷ್ಕೃತೇ ವಿಧೂನುತೇ ।

ವಿ.—ದೇಹವನ್ನು ಬಿಡುವ ಕಾಲದಲ್ಲಿ ಜ್ಞಾನಿಯ ಸುಕೃತ-ದುಷ್ಕೃತಗಳು ನಿಃಶೇಷವಾಗಿ ಹೋಗುತ್ತವೆ, ಏಕೆಂದರೆ ವಿದ್ಯೆಯ ಫಲವಾದ ಬ್ರಹ್ಮಪ್ರಾಪ್ತಿಯೊಂದನ್ನು ಬಿಟ್ಟರೆ ಸುಕೃತ-ದುಷ್ಕೃತಗಳಿಂದ ಅನುಭವಿಸಬೇಕಾದ ಯಾವ ಸುಖದುಃಖಗಳೂ ಅವನಿಗೆ ಇರುವುದಿಲ್ಲ,[1] ಹೀಗೆಯೇ ಇತರ ಶ್ರುತಿಗಳೂ ಹೇಳುತ್ತವೆ [2]

ದ್ವೈ.—'ಉಪಾಸನೆಯು ಮುಕ್ತನ ಇಚ್ಛೆಯಿಂದಲೇ ಮಾಡಲ್ಪಡುತ್ತದೆ, ಏಕೆಂದರೆ ದಾಟಬೇಕಾದದ್ದು ಏನೂ ಇರುವುದಿಲ್ಲ. ಹೀಗೆ ಕೆಲವು ಶಾಖೆಯವರು ಪಠಿಸುತ್ತಾರೆ' ಎಂಬುದು ಸೂತ್ರಾರ್ಥ

ಜೀವನು ದುಃಖಗಳನ್ನೆಲ್ಲ ದಾಟಿ, ಹೃದಯದಲ್ಲಿರುವ ಭಗವಂತನೊಂದಿಗೆ ಸಂಬಂಧವನ್ನು ಪಡೆದಿರುತ್ತಾನೆ'[3] ಎಂದು ಶ್ರುತಿಯು ಹೇಳುತ್ತದೆ

## ಛಂದತ ಉಭಯಾವಿರೋಧಾತ್* ॥ ೨೮ ॥

೨೮ ಸ್ವೇಚ್ಛೆಯಿಂದ (ಆಗಬಹುದು), ಏಕೆಂದರೆ ಎರಡಕ್ಕೂ ವಿರೋಧವಿರುವುದಿಲ್ಲ

ದೇವಯಾನಮಾರ್ಗದಿಂದ ಹೊರಟವನಿಗೆ ಅರ್ಧದಾರಿಯಲ್ಲಿಯೇ ಪುಣ್ಯ-ಪಾಪಗಳ ಕ್ಷಯವಾಗುವುದೆಂದು ಒಪ್ಪಿಕೊಂಡರೆ ದೇಹತ್ಯಾಗವಾದ ಮೇಲೆ ಯಮ, ನಿಯಮ, ಉಪಾಸನೆಯ ಅಭ್ಯಾಸ—ಇವೇ ಮೊದಲಾಗಿ ಸುಕೃತ-ದುಷ್ಕೃತ-ಕ್ಷಯಕ್ಕೆ ಕಾರಣವಾದ ಪುರುಷಪ್ರಯತ್ನವನ್ನು ಸ್ವೇಚ್ಛೆಯಿಂದ ಮಾಡಲು ಆಗುವುದಿಲ್ಲ; ಆದುದರಿಂದ ಸುಕೃತ-ದುಷ್ಕೃತಗಳ ನಾಶವೇ ಆಗುವುದಿಲ್ಲ ಆದುದರಿಂದ ಸಾಧಕಾವಸ್ಥೆಯಲ್ಲಿಯೇ ಸ್ವೇಚ್ಛೆಯಿಂದ ಆ ಪ್ರಯತ್ನವನ್ನು ಮಾಡಬಹುದಾಗಿದೆ ಹಾಗಾದರೇ ಸುಕೃತ-ದುಷ್ಕೃತಗಳ ತ್ಯಾಗವಾಗುತ್ತದೆ ಹೀಗಾದರೆ ಅವುಗಳಿಂದ ಮುಕ್ತನಾಗಲು ಮಾಡುವ ಪ್ರಯತ್ನ ಮತ್ತು ಬಿಡುಗಡೆ—ಎರಡೂ ಹೊಂದುತ್ತವೆ, ತಾಂಡಿ-ಶಾಟ್ಯಾಯನ-ಶ್ರುತಿಗಳೆರಡಕ್ಕೂ ವಿರೋಧವಾಗುವುದಿಲ್ಲ [4]

ವಿ.—ಹೀಗೆ ಯುಕ್ತಿಯಿಂದ ಸುಕೃತ-ದುಷ್ಕೃತಗಳ ಹಾನಿಯ ಕಾಲವನ್ನು ನಿಶ್ಚಯಿಸಿದ ಮೇಲೆ ಶ್ರುತಿಗಳ ಅನ್ವಯವನ್ನು ವಿರೋಧವಾಗದಂತೆ ಯಥೇಷ್ಟವಾಗಿ ಹೇಳಬೇಕು

---

[1] ವಿದ್ಯಾಫಲಭೂತ ಬ್ರಹ್ಮಪ್ರಾಪ್ತಿವ್ಯತಿರೇಕೇಣ ಹಿ ಸುಕೃತದುಷ್ಕೃತಾಭ್ಯಾಂ ಭೋಕ್ತವ್ಯೇ ಸುಖದುಃಖೇ ನ ವಿದ್ಯೇತೇ (ಶ್ರೀಭಾಷ್ಯ)

[2] ಛಾಂ ಉ ೮ ೧೨ ೧, ೩ ಮತ್ತು ೬ ೧೪ ೨ ನೋಡಿ

[3] ತೀರ್ಣೋ ಹಿ ತದಾ ಸರ್ವಾಂಛೋಕಾನ್ ಹೃದಯಸ್ಯ ಭವತಿ (ಬೃ ಉ. ೪ ೩ ೨೨)

* ಮಧ್ವಭಾಷ್ಯದ ಪ್ರಕಾರ ಈ ಸೂತ್ರ ಮತ್ತು ಮುಂದಿನ ಎರಡು ಸೂತ್ರಗಳು ಸೇರಿ ಛಂದಾಧಿಕರಣ ಎನಿಸಿದೆ.

[4] ಏವಂ ನಿಮಿತ್ತನೈಮಿತ್ತಿಕಯೋರುಪಪತ್ತಿಸ್ತಾಂಡಿಶಾಟ್ಯಾಯನಿಶ್ರುತ್ಯೋಶ್ಚ ಸಂಗತಿರಿತಿ (ಸೂ ಭಾ.)

ಎಂದರೆ ಕೌಷೀತಕಿಶಾಖೆಯ 'ಸುಕೃತ-ದುಷ್ಕೃತಗಳನ್ನು ಬಿಡುತ್ತಾನೆ' **ತತ್ಸುಕೃತ-ದುಷ್ಕೃತೇ ಧೂನುತೇ** ಎಂಬ ಹಿಂದೆ ಬರುವ ವಾಕ್ಯವನ್ನು 'ದೇವಯಾನಪಥಕ್ಕೆ ನೇರಿ' **ಏತಂ ದೇವಯಾನಂ ಪಂಥಾನಮಾಪದ್ಯ** ಎಂದು ಮುಂಬರುವ ವಾಕ್ಯಕ್ಕೆ ಮೊದಲೇ ಅನ್ವಯಿಸಿಕೊಳ್ಳಬೇಕು.

ಪ್ರ.—'ಮುಕ್ತರಾದವರು ಸ್ವೇಚ್ಛೆಯಿಂದಲೇ ಕರ್ಮವನ್ನು ಮಾಡುತ್ತಾರೆ; ಅಥವಾ ಮಾಡುವುದಿಲ್ಲ; ಏಕೆಂದರೆ ,ಮಾಡಬೇಕೆಂಬ ನಿರ್ಬಂಧವಾಗಲಿ, ಮಾಡದಿದ್ದರೆ ಪ್ರತ್ಯವಾಯವಾಗಲಿ—ಅವರಿಗೆ ಇರುವುದಿಲ್ಲ'[1] ಎಂಬುದು ಸೂತ್ರಾರ್ಥ

ಮುಕ್ತರು ಕರ್ಮಗಳನ್ನು ಮಾಡುತ್ತಾರೆಯೊ ಅಥವಾ ಇಲ್ಲವೊ ?—ಎಂಬುದಕ್ಕೆ ಈ ಸೂತ್ರವು ಉತ್ತರವಾಗಿದೆ.

---

[1] **ಸ್ವೇಚ್ಛಯಾ ಕುರ್ವಂತಿ ನ ವಾ । ಬಂಧಪ್ರತ್ಯವಾಯಯೋರಭಾವಾತ್ (ಮ. ಭಾ.).**

# ೧೭. ಗತೇರರ್ಥವತ್ತ್ವಾಧಿಕರಣ

(ಸೂ. ೨೯–೩೦)

**ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ* ॥ ೨೯ ॥**

೨೯. ಗತಿಗೆ ಅರ್ಥವು ಎರಡು ವಿಧದಿಂದ ಆಗುವುದು, ಏಕೆಂದರೆ ಹಾಗಾಗ ದಿದ್ದರೆ ವಿರೋಧವಾಗುವುದು

ಪುಣ್ಯಪಾಪಗಳ ತ್ಯಾಗವನ್ನು ಹೇಳುವ ಸಂದರ್ಭದಲ್ಲಿ ಕೆಲವು ಕಡೆ ದೇವಯಾನ ವನ್ನು ಹೇಳಿದೆ, ಕೆಲವು ಕಡೆ ಹೇಳಿರುವುದಿಲ್ಲ. ತ್ಯಾಗವನ್ನು ಹೇಳುವಾಗ ಅವಿಶೇಷವಾಗಿ ದೇವಯಾನವನ್ನು ಸೇರಿಸಿಕೊಳ್ಳಬೇಕೊ ? ಅಥವಾ ಕೆಲವು ಕಡೆ ಸೇರಿಸಿಕೊಳ್ಳಬೇಕು, ಕೆಲವು ಕಡೆ ಸೇರಿಸಬಾರದು ಎಂದು ವಿಂಗಡಿಸಿಕೊಳ್ಳಬೇಕೊ ?—ಎಂಬುದು ಸಂಶಯ. ತ್ಯಾಗವನ್ನು ಹೇಳಿರುವ ಕಡೆಯಲ್ಲಿ ಉಪಾದಾನವನ್ನು ಎಲ್ಲೆಲ್ಲಿಯೂ ಸೇರಿಸಿಕೊಂಡಂತೆ ಇಲ್ಲಿಯೂ ದೇವಯಾನವನ್ನು ಎಲ್ಲ ಕಡೆಗಳಲ್ಲಿಯೂ ಸೇರಿಸಿಕೊಳ್ಳಬೇಕು—ಎಂಬುದು ಪೂರ್ವಪಕ್ಷ.

ಎಲ್ಲಿ ಸಾರ್ಥಕವಾಗುತ್ತದೆಯೊ ಅಲ್ಲಿ ದೇವಯಾನವನ್ನು ಸೇರಿಸಿಕೊಳ್ಳಬೇಕು, ಎಲ್ಲಿ ಆಗುವುದಿಲ್ಲವೊ ಅಲ್ಲಿ ಸೇರಿಸಿಕೊಳ್ಳಬಾರದು—ಎಂಬುದು ಸಿದ್ಧಾಂತ. ಹೀಗೆ ವಿಶೇಷವಿಲ್ಲದೆ ಗತಿಯನ್ನು ಅಂಗೀಕರಿಸಿದರೆ ವಿರೋಧವಾಗುತ್ತದೆ: 'ಆ ವಿದ್ವಾಂಸನು ಪುಣ್ಯಪಾಪಗಳನ್ನು ತೊಲಗಿಸಿಕೊಂಡು ನಿರಂಜನನಾಗಿ ಪರಮಸಾಮ್ಯವನ್ನು ಹೊಂದುತ್ತಾನೆ'[1] (ಮುಂ. ಉ. ೩. ೧. ೩) ಎಂಬ ಶ್ರುತಿಯಲ್ಲಿ ದೇಶಾಂತರವನ್ನು ಹೊಂದಿಸುವ ಗತಿಯು ವಿರುದ್ಧವಾಗುತ್ತದೆ. ನಿರಂಜನನಾಗಿರುವುದರಿಂದ ಎಲ್ಲಿಗೂ ಹೋಗದಿರುವವನು ದೇಶಾಂತರಕ್ಕೆ ಹೇಗೆತಾನೆ ಹೋದಾನು ? ಗಂತವ್ಯವಾದ ಪರಮಸಾಮ್ಯವು ದೇಶಾಂತರ ಪ್ರಾಪ್ತಿಗೆ ಅಧೀನವಾಗಿಲ್ಲದಿರುವುದರಿಂದ ಗತಿಯು ಅಲ್ಲಿ ಅನರ್ಥಕವೆಂದು ಭಾವಿಸುತ್ತೇವೆ.[2]

**ವಿ.**—ಇದು ಪೂರ್ವಪಕ್ಷಸೂತ್ರ: ಸುಕೃತ-ದುಷ್ಕೃತಗಳ ಒಂದು ಭಾಗವು ದೇಹ ವಿಯೋಗಕಾಲದಲ್ಲಿ ಹೋಗುತ್ತದೆ, ಇನ್ನೊಂದು ಭಾಗವು ಅನಂತರ ಹೋಗುತ್ತದೆ— ಎಂದು ಎರಡು ವಿಧವಾಗಿ ಇಟ್ಟುಕೊಂಡರೆ ದೇವಯಾನದ ಗತಿಯನ್ನು ಹೇಳುವ ಶ್ರುತಿಗೆ

---

* ಶ್ರೀಭಾಷ್ಯದ ಪ್ರಕಾರ ಇದು ಪೂರ್ವಪಕ್ಷಸೂತ್ರ.

1 ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ।

2 ಕಥಂ ಹಿ ನಿರಂಜನೋಽಗಂತಾ ದೇಶಾಂತರಂ ಗಚ್ಛೇತ್ ? ಗಂತವ್ಯಂ ಚ ಪರಮಂ ಸಾಮ್ಯಂ ನ ದೇಶಾಂತರಪ್ರಾಪ್ತ್ಯಾಯತ್ತಮಿತ್ಯಾನರ್ಥಕ್ಯಮೇವಾತ್ರ ಗತೇರ್ಮನ್ಯಾಮಹೇ (ಸೂ. ಭಾ.).

ಅರ್ಥವುಂಟಾಗುತ್ತದೆ, ಇಲ್ಲದಿದ್ದರೆ ವಿರೋಧವುಂಟಾಗುತ್ತದೆ ದೇಹವಿಯೋಗಕಾಲದಲ್ಲಿ ಸರ್ವಕರ್ಮಕ್ಷಯವಾದರೆ, ಸೂಕ್ಷ್ಮಶರೀರವೂ ನಾಶವಾಗುವುದರಿಂದ ಆತ್ಮನಿಗೆ ಗಮನವೇ ಸಾಧ್ಯವಾಗುವುದಿಲ್ಲ ಆದುದರಿಂದ ಉತ್ಕ್ರಾಂತಿಕಾಲದಲ್ಲಿ ಕರ್ಮಕ್ಷಯವು ವಿಶೇಷವಾಗಿ ಆಗುತ್ತದೆ ಎಂಬುದು ಸರಿಯಲ್ಲ

ದ್ವೈ —'ವಿಧಿ ಮತ್ತು ಪ್ರತ್ಯವಾಯ—ಇವುಗಳು ಇಲ್ಲದಿದ್ದರೆ ಮೋಕ್ಷವು ಸಾರ್ಥಕವಾಗುತ್ತದೆ, ಮೋಕ್ಷದಲ್ಲಿ ವಿಧಿ-ಪ್ರತ್ಯವಾಯಗಳಿದ್ದರೆ ಮೋಕ್ಷವೇ ಸಂಭವಿಸುವುದಿಲ್ಲ'[1] ಎಂಬುದು ಸೂತ್ರಾರ್ಥ

**ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ॥ ೩೦ ॥**

೩೦ (ಇದು) ಉಪಪನ್ನವಾಗಿದೆ, ಏಕೆಂದರೆ ಗತಿ-ಲಕ್ಷಣವುಳ್ಳ ಅರ್ಥವು ಕಂಡುಬರುತ್ತದೆ, (ಇದು) ಲೋಕದಂತೆಯೇ

ಕೆಲವು ಕಡೆ ದೇವಯಾನದ ಗತಿ ಸಾರ್ಥಕವಾಗಿದೆ, ಕೆಲವು ಕಡೆ ಸಾರ್ಥಕವಾಗಿಲ್ಲ—ಎಂಬ ವಿಭಾಗವು ಯುಕ್ತವಾಗಿದೆ ದೇವಯಾನಗಳಿಗೆ ಕಾರಣವಾಗಿರುವ ಅರ್ಥವು ಪರ್ಯಂಕವಿದ್ಯೆಯೇ ಮೊದಲಾದ ಸಗುಣೋಪಾಸನೆಗಳಲ್ಲಿ ಕಂಡುಬರುತ್ತದೆ ಅಲ್ಲಿ ಪರ್ಯಂಕಾರೋಹಣ, ಪರ್ಯಂಕದಲ್ಲಿರುವ ಬ್ರಹ್ಮನೊಂದಿಗೆ ಸಂವಾದ, ವಿಶಿಷ್ಟಗಂಧಾದಿಗಳ ಪ್ರಾಪ್ತಿ—ಇವೇ ಮೊದಲಾದ ದೇಶಾಂತರ ಪ್ರಾಪ್ತಿಗೆ ಅಧೀನವಾದ ಫಲವನ್ನು ಶ್ರುತಿಯಲ್ಲಿ[2] ಹೇಳಿದೆ ಆದರೆ ಸಮ್ಯಗ್ದರ್ಶನದಲ್ಲಿ ದೇವಯಾನದ ಗತಿಯಿಲ್ಲ, ಏಕೆಂದರೆ ಆತ್ಮೈಕತ್ವವನ್ನು ಸಾಕ್ಷಾತ್ಕರಿಸಿರುವ, ಆಪ್ತಕಾಮರಾದ, ಇಲ್ಲಿಯೇ ಕ್ಲೇಶಬೀಜಗಳನ್ನೆಲ್ಲ ಸುಟ್ಟುಕೊಂಡಿರುವ ಜ್ಞಾನಿಗಳಿಗೆ ಆರಬ್ಧಕರ್ಮಫಲದ ಉಪಭೋಗಕರ್ಮಾಶಯದ ನಾಶವನ್ನು ಬಿಟ್ಟರೆ ಮತ್ತೇನೂ ಇರುವುದಿಲ್ಲ, ಆದುದರಿಂದ ಗತಿಯು ಅಲ್ಲಿ ನಿರರ್ಥಕವು[3] ಈ ವಿಭಾಗವನ್ನು ಲೋಕದಂತೆ ಅರಿತುಕೊಳ್ಳಬೇಕು ನಾವು ಒಂದು ಗ್ರಾಮಕ್ಕೆ ಹೋಗಬೇಕಾದರೆ ಅದಕ್ಕೆ ಹೋಗುವ ಒಂದು ದಾರಿಯಲ್ಲಿ ಹೋಗಬೇಕು, ಆದರೆ ಆರೋಗ್ಯವನ್ನು ಹೊಂದಬೇಕಾದರೆ ಅಂಥ ದಾರಿಯ ಆವಶ್ಯಕತೆಯಿರುವುದಿಲ್ಲ

ವಿ.—'(ಸರ್ವಕರ್ಮಕ್ಷಯವು) ಉಪಪನ್ನವಾಗಿದೆ, ಏಕೆಂದರೆ ಜೀವನಿಗೆ ಶರೀರ ಸಂಬಂಧದ ಲಕ್ಷಣವು ಕಂಡುಬರುತ್ತದೆ, ಇದು ಲೋಕದಂತೆಯೇ' ಎಂಬುದು ಸೂತ್ರಾರ್ಥ

---

1 ಬಂಧಪ್ರತ್ಯವಾಯಾಭಾವೇ ಹಿ ಮೋಕ್ಷಸ್ಯಾರ್ಥವತ್ತ್ವಮ್ । ಅನ್ಯಥಾ ಮೋಕ್ಷತ್ವಮೇವ ನ ಸ್ಯಾತ್ (ಮ ಭಾ)

2 ಕೌ ಉ ೧ ೩ರಿಂದ ಅಧ್ಯಾಯದ ಕೊನೆಯವರೆಗೂ ನೋಡಿ

3 ನ ಹ್ಯಾತ್ಮೈಕತ್ವದರ್ಶಿನಾಮಾಪ್ತಕಾಮಾನಾಮಿಹೈವ ದಗ್ಧಾಶೇಷಕ್ಲೇಶಬೀಜಾನಾಮಾರಬ್ಧಭೋಗಕರ್ಮಾಶಯಕ್ಷಪಣವ್ಯತಿರೇಕೇಣಾಪೇಕ್ಷಿತವ್ಯಂ ಕಿಂಚಿದಸ್ತಿ । ತತ್ರಾನರ್ಥಿಕಾ ಗತಿಃ (ಸೂ ಭಾ.).

ಉತ್ಕ್ರಾಂತಿಕಾಲದಲ್ಲಿ ಸರ್ವಕರ್ಮಕ್ಷಯವಾಗುತ್ತದೆ—ಎಂಬುದು ಉಪಪನ್ನವಾಗಿದೆ, ಏಕೆಂದರೆ ಕರ್ಮಕ್ಷಯವನ್ನು ಮಾಡಿಕೊಂಡು ಆವಿರ್ಭೂತಸ್ವರೂಪವುಳ್ಳ ಜೀವನಿಗೆ ದೇಹಸಂಬಂಧವನ್ನು ಶ್ರುತಿಯು ಹೇಳುತ್ತದೆ 'ಪರಂಜ್ಯೋತಿಯನ್ನು ಹೊಂದಿ ತನ್ನ ಸ್ವರೂಪದಿಂದ ವ್ಯಕ್ತನಾಗುತ್ತಾನೆ'[1] (ಛಾಂ ಉ ೮ ೧೨ ೩) ಇತ್ಯಾದಿ ಆದುದರಿಂದ ಜೀವನು ಸೂಕ್ಷ್ಮಶರೀರದೊಂದಿಗೆ ದೇವಯಾನದಲ್ಲಿ ಹೋಗುತ್ತಾನೆ[2] ಸೂಕ್ಷ್ಮಶರೀರವನ್ನುಂಟುಮಾಡುವ ಕರ್ಮವು ನಾಶವಾಗಿದ್ದರೂ ತನ್ನ ಜ್ಞಾನಶಕ್ತಿಯಿಂದ ಸೂಕ್ಷ್ಮಶರೀರವನ್ನು ಹಿಡಿದಿರುತ್ತಾನೆ ಇದು ಲೋಕದಂತೆ ಲೋಕದಲ್ಲಿ ಸಸ್ಯಾದಿಸಮೃದ್ಧಿಗೆ ಕೊಳವನ್ನು ಕಟ್ಟಿಸಿದ್ದರೂ ಅದರಿಂದ ನೀರನ್ನೆಳೆದು ಕುಡಿಯಲೂಬಹುದು

**ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್*** ॥ ೩ ೩ ೩೧ ॥

**೩೧ ಆಧಿಕಾರಿಕಪುರುಷರಿಗೆ ಅಧಿಕಾರವಿರುವವರೆವವರೆಗೂ ಅವಸ್ಥಿತಿಯಿರುತ್ತದೆ**

ಜ್ಞಾನಿಗಳಿಗೆಲ್ಲ ದೇಹಪಾತಸಮಯದಲ್ಲಿ ಸುಕೃತ-ದುಷ್ಕೃತಗಳೆಲ್ಲ ನಾಶವಾಗುತ್ತವೆಂದು ನಾವು ಹೇಳುವುದಿಲ್ಲ, ಯಾವ ಜ್ಞಾನಿಗಳು ಅರ್ಚಿರಾದಿಮಾರ್ಗದಲ್ಲಿ ಹೋಗುವರೊ ಅವರಿಗೆ ಮಾತ್ರ ದೇಹಪಾತಸಮಯದಲ್ಲಿ ಸುಕೃತ-ದುಷ್ಕೃತಗಳ ತ್ಯಾಗವಿರುತ್ತದೆ ವಸಿಷ್ಠರೇ ಮೊದಲಾದ ಆಧಿಕಾರಿಕಪುರುಷರ ಅಧಿಕಾರವು ಮುಗಿಯದೇ ಇರುವುದರಿಂದ ಅವರಿಗೆ ಅರ್ಚಿರಾದಿಗತಿಯ ಪ್ರಾಪ್ತಿಯಿಲ್ಲ ಆದುದರಿಂದ ಇಂಥ ಪುರುಷರಿಗೆ ಅಧಿಕಾರವಿರುವವರೆಗೂ ಅದನ್ನು ಪ್ರಾರಂಭಿಸಿದ ಕರ್ಮವು ಉಳಿಯುತ್ತದೆ ಮತ್ತು ದೇಹಪಾತವಾದ ಮೇಲೆ ಅರ್ಚಿರಾದಿಗತಿಯ ಪ್ರಾಪ್ತಿಯಿಲ್ಲ

**ದ್ವೈ.**—'ಮೋಕ್ಷದಲ್ಲಿ ಕದಾಚಿತ್ ಕರ್ಮವನ್ನು ಮಾಡುವುದು ಅಥವಾ ಮಾಡದಿರುವುದು ಯುಕ್ತವೇ, ಏಕೆಂದರೆ ಮುಕ್ತರು ಕರ್ಮಸಾಧ್ಯವಾದ ಮೋಕ್ಷವನ್ನು ಹೊಂದಿರುತ್ತಾರೆ[3] ಇದು ಲೋಕದಂತೆ' ಎಂಬುದು ಸೂತ್ರಾರ್ಥ

ಲೋಕದಲ್ಲಿ ಕೆಲವರು ಯಾಗವಿಧಿಪೂರ್ತಿಫಲಸಾಧನವಾದ ವಿಷ್ಣುಕ್ರಮಣಾಖ್ಯವಾದ ಕರ್ಮವನ್ನು ಯಾಗಾದಿಗಳು ಮುಗಿದ ಮೇಲೆ ಮಾಡುತ್ತಾರೆ, ಕೆಲವರು ಮಾಡುವುದಿಲ್ಲ

---

[1] ಪರಂ ಜ್ಯೋತಿರುಪಸಂಪದ್ಯ ಸ್ವೇನ ಸ್ವರೂಪೇಣಾಭಿನಿಷ್ಪದ್ಯತೇ ।

[2] ಅತಃ ಕ್ಷೀಣಕರ್ಮಣೋಽಪಿ ಸೂಕ್ಷ್ಮಶರೀರಯುಕ್ತಸ್ಯ ದೇವಯಾನೇನ ಗಮನಮುಪಪದ್ಯತೇ (ಶ್ರೀಭಾಷ್ಯ)

* ಇದು ಶಾಂಕರಭಾಷ್ಯದಲ್ಲಿ ಯಾವದಧಿಕಾರಾಧಿಕರಣ ಎಂಬ ಹೊಸ ಅಧಿಕರಣದಲ್ಲಿ ೩೨ನೇ ಸೂತ್ರವಾಗಿದೆ ಮತ್ತು ಮಧ್ವಭಾಷ್ಯದಲ್ಲಿ ೩೩ನೇ ಸೂತ್ರವಾಗಿದೆ

[3] ಉಪಪನ್ನಶ್ಚೈವಂಭಾವಃ । ಪ್ರಾಪ್ತತ್ವಾತ್ ತಲ್ಲಕ್ಷಣಸ್ಯ ಫಲಸ್ಯ (ಮ ಭಾ.)

## ೧೮. ಅನಿಯಮಾಧಿಕರಣ

**ಅನಿಯಮಃ ಸರ್ವಾಸಾಮವಿರೋಧಃ ಶಬ್ದಾನುಮಾನಾಭ್ಯಾಮ್ ॥ ೩೧ ॥**

೩೧. ಯಾವ ವಿದ್ಯೆಗೂ (ದೇವಯಾನಗತಿಯ ವಿಷಯದಲ್ಲಿ) ನಿಯಮವೆಂಬುದಿಲ್ಲ ; ವಿರೋಧವೂ ಇಲ್ಲ ; ಏಕೆಂದರೆ ಶಬ್ದ-ಅನುಮಾನಗಳಿವೆ.

ಪರ್ಯಂಕವಿದ್ಯೆ,[1] ಉಪಕೋಸಲವಿದ್ಯೆ[2] ಪಂಚಾಗ್ನಿವಿದ್ಯೆ,[3] ದಹರವಿದ್ಯೆ[4]—ಇವೇ ಮೊದಲಾದ ಸಗುಣವಿದ್ಯೆಗಳಲ್ಲಿ ದೇವಯಾನದ ಗತಿಯನ್ನು ಹೇಳಿದೆ, ಆದರೆ ಮಧುವಿದ್ಯೆ,[5] ಶಾಂಡಿಲ್ಯವಿದ್ಯೆ,[6] ಷೋಡಶಕಲವಿದ್ಯೆ,[7] ವೈಶ್ವಾನರವಿದ್ಯೆ[8]—ಈ ವಿದ್ಯೆಗಳಲ್ಲಿ ಅಂಥ ಗತಿಯನ್ನು ಹೇಳಿಲ್ಲ. ಈ ದೇವಯಾನಮಾರ್ಗವನ್ನು ಎಲ್ಲ ಕಡೆಗಳಲ್ಲಿಯೂ ಸೇರಿಸಿಕೊಳ್ಳಬೇಕೊ ಅಥವಾ ಕೂಡದೊ ?—ಎಂಬುದು ಸಂಶಯ.

ಎಲ್ಲಿ ಶ್ರುತಿಯಿರುವುದೊ ಅಲ್ಲಿಯೇ ಸೇರಿಸಿಕೊಳ್ಳಬೇಕು. ಒಂದೇ ಗತಿಯನ್ನು ಉಪಕೋಸಲವಿದ್ಯೆ, ಪಂಚಾಗ್ನಿವಿದ್ಯೆ—ಇವುಗಳಲ್ಲಿ ಹೇಳಿದೆ; ಗತಿಯನ್ನು ಎಲ್ಲ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕಾಗಿದ್ದರೆ ಈ ಪುನರುಕ್ತಿಗೆ ಕಾರಣವಿಲ್ಲ; ಆದುದರಿಂದ ಗತಿಗೆ ನಿಯಮವಿದೆ—ಎಂಬುದು ಪೂರ್ವಪಕ್ಷ.

ಅಭ್ಯುದಯಪ್ರಾಪ್ತಿಯೆಂಬ ಫಲವುಳ್ಳ ಸಗುಣವಿದ್ಯೆಗಳಿಗೆಲ್ಲ ವಿಶೇಷವಿಲ್ಲದೆ ದೇವಯಾನಗತಿಯನ್ನು ಸೇರಿಸಿಕೊಳ್ಳಬೇಕು ಇದರಿಂದ ಪ್ರಕರಣಕ್ಕೆ ವಿರೋಧವಾಗುವುದಿಲ್ಲ; ಏಕೆಂದರೆ ಶಬ್ದಾನುಮಾನಗಳಿವೆ; ಎಂದರೆ ಶ್ರುತಿಸ್ಮೃತಿಗಳಿವೆ; ಪಂಚಾಗ್ನಿವಿದ್ಯೆಯವರಿಗೆ ದೇವಯಾನವನ್ನು ಹೇಳಿರುವುದಲ್ಲದೆ ಶ್ರದ್ಧಾ-ತಪಸ್ಸುಗಳನ್ನು ಉಪಾಸನೆಮಾಡುವ (ಛಾಂ ಉ. ೫. ೧೦. ೧) ಇತರರಿಗೂ ಅದೇ ಮಾರ್ಗವನ್ನು ಹೇಳಿದೆ. ಬೃಹದಾರಣ್ಯದ ಪಂಚಾಗ್ನಿವಿದ್ಯಾಪ್ರಕರಣದಲ್ಲಿ (ಬೃ. ಉ. ೬. ೨. ೧೫) ಶ್ರದ್ಧಾಲುಗಳಾಗಿ ಸತ್ಯವೆಂಬ ಬ್ರಹ್ಮವನ್ನು ಉಪಾಸನೆಮಾಡುವವರಿಗೂ ಇದೇ ಗತಿಯನ್ನು ಹೇಳಿದೆ. ಆದರೆ ಪಿತೃಯಾಣ-ದೇವಯಾನವೆಂಬ ಮಾರ್ಗದ್ವಯದಿಂದ ತಪ್ಪಿದವರಿಗೆ ಕೀಳುಗತಿಯನ್ನು ಶ್ರುತಿಯು (ಬೃ. ಉ. ೬. ೨. ೧೬) ಹೇಳಿರುವುದರಿಂದ ಉಪಾಸಕರಿಗೆ ದೇವಯಾನಪ್ರಾಪ್ತಿಯೇ

---

[1] ಕೌ. ಉ. ೧—೩ ಖಂಡಗಳು.
[2] ಛಾಂ. ಉ. ೪. ೧೦—೧೪ ಖಂಡಗಳು.
[3] ಛಾಂ. ಉ. ೫. ೩—೧೦ ಖಂಡಗಳು.
[4] ಛಾಂ. ಉ. ೮. ೧—೨ ಖಂಡಗಳು.
[5] ಛಾಂ. ಉ. ೩. ೧—೧೧ ಖಂಡಗಳು
[6] ಛಾಂ. ಉ. ೩. ೧೪ನೆಯ ಖಂಡಗಳು.
[7] ಛಾಂ. ಉ. ೪. ೪—೯ ಖಂಡಗಳು.
[8] ಛಾಂ. ಉ. ೫. ೧೧—೨೪ ಖಂಡಗಳು.

ಆಗುತ್ತದೆ ಜಗತ್ತಿನಲ್ಲಿ ಶುಕ್ಲ-ಕೃಷ್ಣಗಳೆಂಬ ಗತಿದ್ವಯವು ಶಾಶ್ವತವೆಂದು ಗೀತೆಯೂ (೮ ೨೬) ಹೇಳುತ್ತದೆ ಉಪಕೋಸಲವಿದ್ಯೆಯಲ್ಲಿಯೂ ಪಂಚಾಗ್ನಿವಿದ್ಯೆಯಲ್ಲಿಯೂ ದೇವಯಾನಮಾರ್ಗವನ್ನು ಎರಡು ಸಲ ಹೇಳಿರುವುದು ಅನುಚಿಂತನೆಗಾಗಿ ಆದುದರಿಂದ ದೇವಯಾನ ಮಾರ್ಗವು ಇಂಥ ವಿದ್ಯೆಗಳಿಗೇ ಎಂಬ ನಿಯಮವಿಲ್ಲ

**ವಿ.**—'ಇಂಥ ಅಧಿಕಾರಿಗಳಿಗೇ ಅರ್ಚಿರಾದಿಗತಿ ಎಂಬ ನಿಯಮವಿಲ್ಲ; ಬ್ರಹ್ಮವಿದ್ಯಾಧಿಕಾರಿಗಳಿಗೆಲ್ಲ ಗಮನವಿದೆ, (ಆದುದರಿಂದ) ಶ್ರುತಿಸ್ಮೃತಿಗಳ ದೆಸೆಯಿಂದ ವಿರೋಧವಿಲ್ಲ' ಎಂಬುದು ಸೂತ್ರಾರ್ಥ

ಉಪಕೋಸಲಾದಿವಿದ್ಯೆಗಳಲ್ಲಿ ಹೇಳಿರುವ ಅಧಿಕಾರಿಗಳಿಗೆ ಮಾತ್ರ ಅರ್ಚಿರಾದಿಗಮನವಿದೆ, ಇತರರಿಗೆ ಇಲ್ಲ—ಎಂಬ ನಿಯಮವೇನೂ ಇಲ್ಲ, ಬ್ರಹ್ಮವಿದ್ಯೋಪಾಸಕರೆಲ್ಲರಿಗೂ ಅರ್ಚಿರಾದಿಗತಿಯಿದೆ, ಏಕೆಂದರೆ ಛಾಂದೋಗ್ಯದ ಮತ್ತು ಬೃಹದಾರಣ್ಯಕದ ಪಂಚಾಗ್ನಿವಿದ್ಯೆಯಲ್ಲಿ ಬ್ರಹ್ಮೋಪಾಸಕರಿಗೆಲ್ಲ ಅರ್ಚಿರಾದಿಗಮನವನ್ನು ಹೇಳಿದೆ[1]

**ದ್ವೈತ** —'ಉಪಾಸನೆಯಲ್ಲಿ ಬ್ರಹ್ಮನ ಗುಣಗಳನ್ನು ಉಪಸಂಹಾರಮಾಡುವಂತೆ ಮೋಕ್ಷವಿಷಯದಲ್ಲಿ ಕೆಲವು ಜ್ಞಾನಿಗಳಿಗೆ ಮೋಕ್ಷವು, ಕೆಲವರಿಗಿಲ್ಲ—ಎಂದು ತಿಳಿಯಕೂಡದು,[2] ಏಕೆಂದರೆ ಇದಕ್ಕೆ ಯಾವ ವಿರೋಧವೂ ಇಲ್ಲ ಮತ್ತು ಶ್ರುತ್ಯನುಮಾನಗಳ ಪ್ರಮಾಣವಿದೆ' ಎಂಬುದು ಸೂತ್ರಾರ್ಥ

'ಯಾವ ಬ್ರಹ್ಮಜ್ಞಾನಿಗೂ ಸಂಸಾರದ ಅನುಭವವಾಗುವುದಿಲ್ಲ, ಅವನು ಮುಕ್ತನೇ ಆಗುತ್ತಾನೆ' **ನ ಕಶ್ಚಿದ್ಬ್ರಹ್ಮವಿತ್ ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ**—ಎಂಬುದು ಶ್ರುತಿ

---

[1] ಶ್ರುತಿಸ್ತಾವತ್ ಛಾಂದೋಗ್ಯವಾಜಸನೇಯಕಯೋಃ ಪಂಚಾಗ್ನಿವಿದ್ಯಾಯಾಮರ್ಚಿರಾದಿಮಾರ್ಗೇಣ ಸರ್ವಬ್ರಹ್ಮೋಪಾಸನನಿಷ್ಠಾನಾಂ ಗಮನಮಾಹ (ಶ್ರೀಭಾಷ್ಯ) ಬೃ ಉ ೬ ೨ ೧೫, ಛಾಂ. ಉ. ೫ ೧೦. ೧ ಮತ್ತು ಗೀತಾ ೮ ೨೪ ನೋಡಿ

[2] ಪ್ರಾಪ್ತಜ್ಞಾನಾನಾಮಪಿ ಕೇಷಾಂಚಿನ್ಮುಕ್ತಿಪ್ರಾಪ್ತಿಃ ಕೇಷಾಂಚಿನ್ನ ಯಥೋಪಸಂಹಾರನಿಯಮ ಇತಿ ನ ಮಂತವ್ಯಮ್ (ಮ ಭಾ.).

## ೧೯. ಯಾವದಧಿಕಾರಾಧಿಕರಣ*

### ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ॥ ೩೨ ॥

೩೨. ಅಧಿಕಾರವುಳ್ಳವರಿಗೆ ಅಧಿಕಾರವಿರುವವರೆಗೂ ಅವಸ್ಥಿತಿಯಿರುತ್ತದೆ.

ಜ್ಞಾನಿಗೆ ಈ ದೇಹವು ಹೋದಮೇಲೆ ಬೇರೆ ದೇಹವು ಉತ್ಪನ್ನವಾಗುವುದೊ ಅಥವಾ ಇಲ್ಲವೊ ?—ಎಂಬುದು ಸಂಶಯ ; ಏಕೆಂದರೆ ಅಪಾಂತರತಮಸ್, ವಸಿಷ್ಠ, ಭೃಗು, ಸನತ್ಕುಮಾರ, ದಕ್ಷ, ನಾರದ ಮೊದಲಾದವರು ದೇಹಾಂತರವನ್ನು ಸ್ವೀಕರಿಸಿದರೆಂದು ಶ್ರುತಿಸ್ಮೃತಿಗಳು ಹೇಳುತ್ತವೆ.

ಮೇಲೆ ಹೇಳಿದ ದೃಷ್ಟಾಂತಗಳಿಂದ ಬ್ರಹ್ಮವಿದ್ಯೆಯು ಪಾಕ್ಷಿಕವಾಗಿ ಮೋಕ್ಷಕ್ಕೆ ಹೇತುವಾಗಬಹುದು ಅಥವಾ ಆಗದೆಯೂ ಇರಬಹುದು—ಎಂಬುದು ಪೂರ್ವಪಕ್ಷ.

ಪಾಕ್ಷಿಕವಾದ ಮೋಕ್ಷಹೇತುತ್ವವು ಸರಿಯಲ್ಲ—ಎಂಬುದು ಸಿದ್ಧಾಂತ. ಈಗಿನ ಬ್ರಹ್ಮಜ್ಞಾನಿಗಳು ಪ್ರಾರಬ್ಧಕರ್ಮಫಲದ ಭೋಗವು ಮುಗಿದಮೇಲೆ ಕೈವಲ್ಯವನ್ನು ಹೊಂದುವಂತೆ ಅಪಾಂತರತಮಸ್ಸೇ ಮೊದಲಾದವರು ಕೈವಲ್ಯಹೇತುವಾದ ಸಮ್ಯಗ್ ದರ್ಶನವನ್ನು ಪಡೆದಿದ್ದರೂ ಪರಮೇಶ್ವರನಿಂದ ಆಯಾ ಅಧಿಕಾರಗಳಲ್ಲಿ ನಿಯುಕ್ತರಾಗಿ ಕರ್ಮಕ್ಷಯವಾದಮೇಲೆ ಮುಕ್ತರಾಗುತ್ತಾರೆ.[1] ಒಂದು ಸಲ ಪ್ರಾರಂಭವಾಗಿರುವ ಕರ್ಮಾಶಯವೇ ಅಧಿಕಾರವನ್ನು ನಡೆಯಿಸಲು ಅವರಿಗೆ ಬೇರೆ ಬೇರೆ ದೇಹಗಳನ್ನು ಒದಗಿಸಿಕೊಡುತ್ತದೆ. ಜ್ಞಾನದಿಂದ ಅವಿದ್ಯಾದಿಕ್ಲೇಶಗಳು ನಾಶವಾದಮೇಲೆ ಕರ್ಮಾಶಯದ ಒಂದು ಭಾಗವು ಉಳಿಯುತ್ತದೆ—ಎಂಬುದು ಸರಿಯಲ್ಲ. ಆದುದರಿಂದ ಅಧಿಕಾರಿಕರು ಅಧಿಕಾರವಿರುವವರೆಗೂ ಹಾಗೆಯೇ ಇರುವರೆಂಬುದು ಯುಕ್ತವು. ಇದಲ್ಲದೆ ಮಹರ್ಷಿಗಳು ಐಶ್ವರ್ಯಾದಿಫಲಗಳನ್ನು ಕೊಡುವ ಜ್ಞಾನಾಂತರಗಳಲ್ಲಿ ಆಸಕ್ತರಾಗಿದ್ದು, ಆ ಐಶ್ವರ್ಯವು ಕ್ಷಯವಾಗಲು ವೈರಾಗ್ಯದಿಂದ ಪರಮಾತ್ಮಜ್ಞಾನದಲ್ಲಿ ನಿಷ್ಠರಾಗಿ ಕೈವಲ್ಯವನ್ನು ಹೊಂದಬಹುದು. ಕರ್ಮಫಲವಾದ ಸ್ವರ್ಗವೇ ಮೊದಲಾದುದು ಅನುಭವದಲ್ಲಿ ಆರೂಢವಾಗದಿರುವುದರಿಂದ ಆಗುತ್ತದೆಯೊ ಇಲ್ಲವೊ ಎಂಬ ಸಂದೇಹವುಂಟಾಗಬಹುದು. **ತತ್ತ್ವಮಸಿ** (ಛಾಂ. ಉ. ೬. ೮. ೭) ಎಂಬ ಜ್ಞಾನದ ಫಲವು ಪ್ರತ್ಯಕ್ಷವಾಗಿರುವುದರಿಂದ

---

*** ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ಮುಂದಿನ ಸೂತ್ರವನ್ನೂ ಒಳಕೊಂಡಿದೆ.**

**[1] ಯಥಾ ಚ ವರ್ತಮಾನಾ ಬ್ರಹ್ಮವಿದ ಆರಬ್ಧಭೋಗಕ್ಷಯೇ ಕೈವಲ್ಯಮನುಭವಂತಿ । ...ಏವಮಪಾಂತರತಮಃಪ್ರಭೃತಯೋಽಪೀಶ್ವರಾಃ ಪರಮೇಶ್ವರೇಣ ತೇಷು ತೇಷ್ವಧಿಕಾರೇಷು ನಿಯುಕ್ತಾಃ ಸಂತಃ ಸತ್ಯಪಿ ಸಮ್ಯಗ್ದರ್ಶನೇ ಕೈವಲ್ಯಹೇತಾವಕ್ಷೀಣಕರ್ಮಾಣೋ ಯಾವದಧಿಕಾರಮವತಿಷ್ಠಂತೇ, ತದವಸಾನೇ ಚಾಪವೃಜ್ಯಂತೇ (ಸೂ.ಭಾ.).**

ಆದರಿಂದ ಮುಕ್ತರಾಗುವರೊ ಅಥವಾ ಇಲ್ಲವೊ ಎಂಬ ಸಂದೇಹಕ್ಕೆ ಕಾರಣವಿಲ್ಲ. ಆದುದರಿಂದ ಜ್ಞಾನಿಗೆ ಕೈವಲ್ಯಸಿದ್ಧಿಯು ನಿಯಮದಿಂದ ಆಗುತ್ತದೆ.

**ದ್ವೈ.**—'ಮೋಕ್ಷದಲ್ಲಿ ಅಧಿಕಾರವುಳ್ಳವರಿಗೆ ತಮ್ಮ ತಮ್ಮ ಯೋಗ್ಯತಾನುಸಾರವಾಗಿಯೇ ಅವಸ್ಥಿತಿಯು' ಎಂಬುದು ಸೂತ್ರಾರ್ಥ.

'ಜ್ಞಾನ, ಉಪಾಸನೆ, ಮುಕ್ತಿಯಲ್ಲಿ ಆನಂದ—ಇವೆಲ್ಲವೂ ದೇವತೆಗಳ ಯೋಗ್ಯತಾನುಸಾರವಾಗಿ ಉತ್ತರೋತ್ತರ ವರ್ಧಿಸುತ್ತವೆ' ಎಂದು ಅಧ್ಯಾತ್ಮದಲ್ಲಿ ಹೇಳಿದೆ.[1]

---

[1] ಅಧ್ಯಾತ್ಮೇ ಚ—ಜ್ಞಾನಂ ಚೋಪಾಸನಂ ಚೈವ ಮುಕ್ತಾವಾನಂದ ಏವ ಚ । ಯಥಾಧಿಕಾರಂ ದೇವಾನಾಂ ಭವಂತ್ಯೇವೋತ್ತರೋತ್ತರಮಿತಿ (ಮ. ಭಾ.).

## ೨೦. ಅಕ್ಷರಧ್ಯಧಿಕರಣ *

**ಅಕ್ಷರಧಿಯಾಂ ತ್ವವರೋಧಃ ಸಾಮಾನ್ಯತದ್ಭಾವಾಭ್ಯಾಮೌಪಸದವತ್ ತದುಕ್ತಮ್ ॥ ೩೩ ॥**

೩೩ ಅಕ್ಷರ(ವಿಷಯಕವಾದ) (ಪ್ರತಿಷೇಧ)ಪ್ರತ್ಯಯಗಳನ್ನು ಉಪಸಂಹಾರ ಮಾಡಿಕೊಳ್ಳಬೇಕು; ಏಕೆಂದರೆ ಔಪಸದಗಳಂತೆ ಸಮಾನತ್ವವೂ ತದ್ಭಾವವೂ ಇರುತ್ತವೆ. ಇದನ್ನು (ಪೂರ್ವಮೀಮಾಂಸೆಯಲ್ಲಿ) ಹೇಳಿದೆ.

'ಗಾರ್ಗಿ, ಇದೇ ಆ ಅಕ್ಷರವು ಎಂದು ಬ್ರಾಹ್ಮಣರು ಹೇಳುತ್ತಾರೆ. ಅದು ಅಸ್ಥೂಲ ಅನಣು ಅಹ್ರಸ್ವ ಅದೀರ್ಘ ಅಲೋಹಿತ ಅಸ್ನೇಹ'[1] (ಬೃ. ಉ. ೩. ೮ ೮) ಎಂದು ವಾಜಸನೇಯಕದಲ್ಲಿ ಹೇಳಿದೆ. 'ಈಗ ಪರಾವಿದ್ಯೆ—ಯಾವುದರಿಂದ ಅಕ್ಷರವು ಹೊಂದಲ್ಪಡುತ್ತದೆಯೊ (ಅದು ಪರಾವಿದ್ಯೆ). ಅದು ಅದೃಶ್ಯವಾದುದು, ಅಗ್ರಾಹ್ಯವಾದುದು, ಗೋತ್ರವಿಲ್ಲದುದು, ವರ್ಣವಿಲ್ಲದುದು'[2] (ಮುಂ. ಉ. ೧ ೧ ೫–೬) ಎಂದು ಆಥರ್ವಣದಲ್ಲಿ ಶ್ರುತವಾಗಿದೆ. ಹೀಗೆಯೇ ಇತರ ಶ್ರುತಿಗಳಲ್ಲಿಯೂ ವಿಶೇಷನಿರಾಕರಣಪೂರ್ವಕವಾಗಿ ಪರಬ್ರಹ್ಮವು ಶ್ರುತವಾಗಿದೆ. ಆದರೆ ಒಂದು ಕಡೆ ನಿಷೇಧಿಸಿರುವ ವಿಶೇಷಗಳನ್ನು ಇನ್ನೊಂದು ಕಡೆ ನಿಷೇಧಿಸಿಲ್ಲ ಆದುದರಿಂದ ವಿಶೇಷಗಳನ್ನು ಪ್ರತಿಷೇಧಿಸಿರುವಪ್ರತ್ಯಯಗಳನ್ನೆಲ್ಲ ಸರ್ವತ್ರ ಸೇರಿಸಿಕೊಳ್ಳಬೇಕೊ ಅಥವಾ ಕೂಡದೊ ?—ಎಂಬುದು ಸಂಶಯ.

ಆಯಾ ನಿಷೇಧಗಳು ಆಯಾ ಶ್ರುತಿಗೆ ಮಾತ್ರ ತಕ್ಕವು—ಎಂಬುದು ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ. ವಿಶೇಷನಿರಾಕರಣರೂಪವಾದ ಬ್ರಹ್ಮಪ್ರತಿಪಾದನೆಯು ಸರ್ವತ್ರ ಸಮಾನವಾಗಿರುತ್ತದೆ.[3] ಪ್ರತಿಪಾದ್ಯವಾದ ಬ್ರಹ್ಮವು ಒಂದೇ ಎಂದು ಸರ್ವತ್ರ ತಿಳಿಯುತ್ತೇವೆ. ಒಂದು ವಾಕ್ಯದಲ್ಲಿ ಹೇಳಿರುವ ಪ್ರತ್ಯಯಗಳು ಇನ್ನೊಂದು ವಾಕ್ಯದಲ್ಲಿ ಏಕೆ ಸಮಂಜಸವಾಗಬಾರದು ? 'ಔಪಸದಗಳಂತೆ' ಎಂಬುದು ಇಲ್ಲಿ ನಿದರ್ಶನವಾಗಿದೆ. ಜಾಮದಗ್ನ್ಯ-ಅಹೀನ-ಯಾಗದಲ್ಲಿ ಪುರೋಡಾಶಗಳಿಂದ ಉಪಸತ್ತುಗಳು ಆಗಬೇಕೆಂಬ ಚೋದನೆಯಿದೆ ಪುರೋಡಾಶ-ಪ್ರದಾನಮಂತ್ರಗಳು ಸಾಮವೇದದಲ್ಲಿ ಉತ್ಪನ್ನವಾಗಿ

---

* ಶ್ರೀಭಾಷ್ಯದಲ್ಲಿ ಮುಂದಿನ ಸೂತ್ರವೂ ಈ ಅಧಿಕರಣಕ್ಕೇ ಸೇರಿದೆ.

1 ಏತದ್ವೈ ತದಕ್ಷರಂ ಗಾರ್ಗಿಬ್ರಾಹ್ಮಣಾ ಅಭಿವದಂತಿ—ಅಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮ್ ।

2 ಅಥ ಪರಾ ಯಯಾ ತದಕ್ಷರಮಧಿಗಮ್ಯತೇ–ಯತ್ ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮ್ ।

3 ಸಮಾನೋ ಹಿ ಸರ್ವತ್ರ ವಿಶೇಷನಿರಾಕರಣರೂಪೋ ಬ್ರಹ್ಮಪ್ರತಿಪಾದನಪ್ರಕಾರಃ (ಸೂ. ಭಾ.).

ದ್ದರೂ ಅಧ್ವರ್ಯುಗಳು ಉಪಯೋಗಿಸುವರು ; ಏಕೆಂದರೆ ಪುರೋಡಾಶಪ್ರದಾನವು ಅಧ್ವರ್ಯುವಿನ ಕರ್ಮ ಮತ್ತು ಪ್ರಧಾನಕ್ಕೆ ಅಂಗಗಳು ಅಧೀನವಾಗಿವೆ. ಹೀಗೆಯೇ ಇಲ್ಲಿಯೂ ಅಕ್ಷರವೆಂಬ ಪರಬ್ರಹ್ಮದ ವಿಶೇಷಣಗಳು ಎಲ್ಲೆಲ್ಲಿದ್ದರೂ ಅಕ್ಷರಕ್ಕೆ ಸಂಬಂಧಿಸಿ ಕೊಳ್ಳಬೇಕು. 'ಗುಣಕ್ಕೂ ಮುಖ್ಯಕ್ಕೂ ವಿರೋಧವಾದರೆ ವೇದಸಂಬಂಧವು ಮುಖ್ಯಕ್ಕೆ ಆಗಬೇಕು : ಏಕೆಂದರೆ (ಗುಣವು) ಅದಕ್ಕಾಗಿದೆ'[1] (ಜೈ. ಸೂ. ೩. ೩. ೯) ಎಂದು ಪೂರ್ವ ಮೀಮಾಂಸೆಯಲ್ಲಿ ಹೇಳಿದೆ.

ವಿ.—ಅಕ್ಷರಬ್ರಹ್ಮನಿಗೆ ಸಂಬಂಧಪಟ್ಟ ಅಸ್ಥೂಲತ್ವಾದಿಭಾವನೆಗಳನ್ನು ಎಲ್ಲ ಬ್ರಹ್ಮವಿದ್ಯೆಗಳಲ್ಲಿಯೂ ಸಂಗ್ರಹಿಸಿಕೊಳ್ಳಬೇಕು ;[2] ಏಕೆಂದರೆ ಉಪಾಸ್ಯನಾದ ಅಕ್ಷರ ಬ್ರಹ್ಮನು ಎಲ್ಲ ಉಪಾಸನೆಗಳಿಗೂ ಸಮಾನವಾಗಿರುವುದರಿಂದ ಅಸ್ಥೂಲತ್ವಾದಿಗುಣಗಳು ಅವನ ಸ್ವರೂಪಭಾವನೆಯಲ್ಲಿ ಬರುತ್ತವೆ. ವಸ್ತುವಿನ ಗ್ರಹಣವೆಂದರೆ ಅದರ ಅಸಾ-ಧಾರಣಾಕಾರದ ಗ್ರಹಣ.[3] ಕೇವಲ ಆನಂದಾದಿಗಳು ಪರಬ್ರಹ್ಮನ ಅಸಾಧಾರಣವಾದ ಆಕಾರವಲ್ಲ ; ಏಕೆಂದರೆ ಆ ಗುಣಗಳು ಜೀವನಿಗೂ ಇವೆ ಹೇಯಗುಣಗಳಿಗೆ ವಿರೋಧ ವಾಗಿರುವ ಆನಂದಾದಿಗಳು ಬ್ರಹ್ಮನ ಅಸಾಧಾರಣರೂಪ. ಜೀವಾತ್ಮನಿಗೆ ಹೇಯಗುಣ ವಿಲ್ಲದಿದ್ದರೂ ಹೇಯದ ಸಂಬಂಧವಿದೆ ಆದುದರಿಂದ ಬ್ರಹ್ಮಾನುಸಂಧಾನಮಾಡುವವನು ಅಸ್ಥೂಲತ್ವಾದಿಗಳಿಂದ ವಿಶೇಷಿತವಾದ ಜ್ಞಾನಾನಂದಾದಿ ಆಕಾರದಿಂದ ಬ್ರಹ್ಮಾನು-ಸಂಧಾನವನ್ನು ಮಾಡಬೇಕು.

ದ್ವೈ.—'ಮುಕ್ತರಿಗೆ ಮುಕ್ತಿಯಲ್ಲಿ ಪರಸ್ಪರ ಸಾಮ್ಯವಿಲ್ಲದಿದ್ದರೂ ವಿರೋಧ ವಿರುವುದಿಲ್ಲ ; ಏಕೆಂದರೆ ಅಕ್ಷರಬ್ರಹ್ಮನಲ್ಲಿ ಎಲ್ಲರೂ ಬುದ್ಧಿಯನ್ನು ನಿಲ್ಲಿಸಿರುತ್ತಾರೆ, ದೋಷ ಗಳಿಲ್ಲದಿರುವ ಮಟ್ಟಿಗೆ ಸಮಾನರಾಗಿರುತ್ತಾರೆ ಮತ್ತು ಸಚ್ಛಿಷ್ಯನು ಗುರುವಿನಲ್ಲಿ ಹೇಗೋ ಹಾಗೆ ಉತ್ತಮರಿಗೆ ಉಪಕೃತರಾಗಿರುತ್ತಾರೆ'[4] ಎಂಬುದು ಸೂತ್ರಾರ್ಥ

---

1 ಗುಣಮುಖ್ಯವ್ಯತಿಕ್ರಮೇ ತದರ್ಥತ್ವಾನ್ಮುಖ್ಯೇನ ವೇದಸಂಯೋಗಃ ।

2 ಅಕ್ಷರಬ್ರಹ್ಮಸಂಬಂಧಿನೀನಾಮಸ್ಥೂಲತ್ವಾದಿಧಿಯಾಂ ಸರ್ವಬ್ರಹ್ಮವಿದ್ಯಾಸ್ವವರೋಧಃ ಸಂಗ್ರಹಣಮಿತ್ಯರ್ಥಃ (ಶ್ರೀಭಾಷ್ಯ)

3 ಅಸಾಧಾರಣಾಕಾರೇಣ ಗ್ರಹಣಂ ಹಿ ವಸ್ತುನೋ ಗ್ರಹಣಮ್ (ಶ್ರೀಭಾಷ್ಯ).

4 ನ ಚಾಸಮತ್ವೇನ ವಿರೋಧೋ ಭವತಿ । ಬ್ರಹ್ಮಾಧೀನತ್ವಾದ್ದೋಷಾಭಾವಸಾಮ್ಯಾದು-ತ್ತಮೇಭ್ಯೋಽನ್ಯೇಷಾಂ ಭಾವಾಚ್ಚ । ಔಪಸದವಚ್ಛಿಷ್ಯವತ್ (ಮ. ಭಾ.).

## ೨೧. ಇಯದಧಿಕರಣ*

### ಇಯದಾಮನನಾತ್ ॥ ೩೪ ॥

೩೪. ಇಷ್ಟೇ ಎಂದು ಹೇಳಿರುವುದರಿಂದ (ವಿದ್ಯೆಯು ಒಂದೇ).

ಆಥರ್ವಣಿಕರೂ ಶ್ವೇತಾಶ್ವತರರೂ ಅಧ್ಯಾತ್ಮಪ್ರಕರಣದಲ್ಲಿ ಹೀಗೆ ಪಠಿಸುತ್ತಾರೆ. 'ಜೊತೆಯಲ್ಲಿರುವ ಸಖರಾದ ಎರಡು ಪಕ್ಷಿಗಳು ಒಂದೇ ವೃಕ್ಷವನ್ನು ಆಲಿಂಗಿಸಿಕೊಂಡಿವೆ. ಅವೆರಡರಲ್ಲಿ ಒಂದು ಸವಿಯಾದ ಹಣ್ಣನ್ನು ತಿನ್ನುತ್ತಿದೆ, ಇನ್ನೊಂದು ತಿನ್ನದೆ ನೋಡುತ್ತಿದೆ'[1] (ಮುಂ. ಉ. ೩. ೧. ೧; ಶ್ವೇ. ಉ. ೪. ೬). ಹೀಗೆಯೇ ಕಠರೂ ಹೇಳುತ್ತಾರೆ: 'ಈ ಶರೀರದಲ್ಲಿ ಪರಮವಾದ ಹೃದಯಾಕಾಶದಲ್ಲಿರುವ ಬುದ್ಧಿಯಲ್ಲಿ ಸುಕೃತದ ಕರ್ಮಫಲವನ್ನು ಪಾನಮಾಡುತ್ತಿರುವ ಇಬ್ಬರು ಪ್ರವೇಶಿಸಿರುತ್ತಾರೆ. ಇವರನ್ನು ನೆರಳುಬಿಸಿಲುಗಳೆಂದು ಬ್ರಹ್ಮವಿದರೂ ತ್ರಿಣಾಚಿ-ಕೇತರಾದ ಗೃಹಸ್ಥರೂ ಹೇಳುತ್ತಾರೆ'[2] (ಕ. ಉ. ೧ ೩. ೧). ಇಲ್ಲಿ ವಿದ್ಯೆಯು ಒಂದೊ ಅಥವಾ ಎರಡೊ ?—ಎಂಬುದು ಸಂಶಯ.

ಇಲ್ಲಿ ಎರಡು ವಿದ್ಯೆಗಳಿವೆಯೆಂಬುದು ಪೂರ್ವಪಕ್ಷ; ಏಕೆಂದರೆ ವಿಶೇಷವು ಕಂಡುಬರುತ್ತದೆ: 'ಎರಡು ಪಕ್ಷಿಗಳು' ಎಂಬ ಮುಂಡಕಶ್ರುತಿಯಲ್ಲಿ ಭೋಕ್ತೃವು ಒಬ್ಬನೇ; 'ಸುಕೃತದ ಫಲವನ್ನು ಪಾನಮಾಡುತ್ತಿರುವ' ಎಂಬ ಕಠಶ್ರುತಿಯಲ್ಲಿ ಭೋಕ್ತೃಗಳು ಇಬ್ಬರು. ಹೀಗೆ ಜ್ಞಾನದ ವಿಷಯವು ಬೇರೆಬೇರೆಯಾಗಿರುವುದರಿಂದ ವಿದ್ಯೆಗಳು ಬೇರೆ ಬೇರೆಯಾಗಿವೆ.

ಸಿದ್ಧಾಂತವು ಹೀಗಿದೆ. ವಿದ್ಯೆಯೂ ಒಂದೇ; ಏಕೆಂದರೆ ಎರಡು ಕಡೆಗಳಲ್ಲಿಯೂ 'ಇಷ್ಟು' ಎಂಬ ಪರಿಚ್ಛೇದವುಳ್ಳ, ದ್ವಿತ್ವದಿಂದ ಕೂಡಿದ ಅದೇ ವೇದ್ಯರೂಪವನ್ನು ಹೇಳಿರುತ್ತಾರೆ.[3] ವೇದ್ಯದಲ್ಲಿ ರೂಪಭೇದವಿಲ್ಲ; ಏಕೆಂದರೆ ಈ ಎರಡು ಮಂತ್ರಗಳೂ ಜೀವನಿಗಿಂತ ಭಿನ್ನನಾದ ಈಶ್ವರನನ್ನೇ ಪ್ರತಿಪಾದಿಸುತ್ತವೆ. 'ಇನ್ನೊಂದು ತಿನ್ನದೆ ನೋಡುತ್ತಿದೆ' ಎಂಬುದೂ 'ಇವನ ಮಹಿಮೆಯನ್ನು ಹೀಗೆಂದು ಯಾವಾಗ ನೋಡುತ್ತಾನೆಯೊ' (ಮುಂ. ಉ. ೩. ೧. ೨) ಎಂಬ ವಾಕ್ಯಶೇಷವೂ ಪರಮಾತ್ಮನನ್ನೇ ಸೂಚಿಸುತ್ತವೆ. ಆದುದರಿಂದ ಇದು ಪರಮಾತ್ಮಪ್ರಕರಣ. ಇದಲ್ಲದೆ ಪರಮಾತ್ಮನೊಂದಿಗೆ ತಾದಾತ್ಮ್ಯ

---

* ಮಧ್ವಭಾಷ್ಯದಲ್ಲಿ ಈ ಅಧಿಕರಣವು ಮುಂದಿನ ಸೂತ್ರವನ್ನೂ ಒಳಕೊಂಡಿದೆ.

1 ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥

2 ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ ॥

3 ಯತ ಉಭಯೋರಪ್ಯನಯೋರ್ಮಂತ್ರಯೋರಿಯತ್ತಾಪರಿಚ್ಛಿನ್ನಂ ದ್ವಿತ್ವೋಪೇತಂ ವೇದ್ಯಂ ರೂಪಮಭಿನ್ನಮಾಮನಂತಿ (ಸೂ. ಭಾ.).

ವನ್ನು ತಿಳಿಸಲು ಜೀವನನ್ನು ಹೇಳಿದೆ. ಪರಮಾತ್ಮವಿದ್ಯೆಯಲ್ಲಿ ಭೇದಾಭೇದಗಳ ವಿಚಾರವಿಲ್ಲವೆಂದು ಹಿಂದೆಯೇ ಹೇಳಿದೆ ಆದುದರಿಂದ ಈ ಮೂರು ಕಡೆಗಳಲ್ಲಿಯೂ (ಮುಂಡಕ-ಶ್ವೇತಾಶ್ವತರ-ಕಠಗಳಲ್ಲಿ) ಅಧಿಕಧರ್ಮಗಳನ್ನು ಉಪಸಂಹರಿಸಿಕೊಂಡು ತಿಳಿಯಬೇಕು.

ವಿ.—ಇಷ್ಟುಮಾತ್ರವೇ ; ಎಂದರೆ ಅಸ್ಥೂಲತ್ವಾದಿಗುಣಗಳಿಂದ ಕೂಡಿದ ಆನಂದಾದಿಗುಣಗಳುಳ್ಳವನು ಪರಬ್ರಹ್ಮನು—ಎಂದು ಇಷ್ಟುಮಾತ್ರವೇ ಎಲ್ಲ ಬ್ರಹ್ಮವಿದ್ಯೆಗಳಲ್ಲಿಯೂ ಅನುಸಂಧಾನಮಾಡತಕ್ಕದ್ದು ; ಏಕೆಂದರೆ ಪರಬ್ರಹ್ಮಸ್ವರೂಪಾನುಸಂಧಾನಕ್ಕೆ ಯಾವುವು ಮುಖ್ಯವೊ ಅವು ಮಾತ್ರವೇ ಸರ್ವವಿದ್ಯೆಗಳಲ್ಲಿಯೂ ಬೇಕಾದುವು ; ಸರ್ವ-ಕರ್ಮತ್ವವೇ (ಛಾಂ. ಉ. ೩. ೧೪. ೪) ಮೊದಲಾದ ಗುಣಗಳನ್ನು ಆಯಾ ವಿದ್ಯೆಯಲ್ಲಿ ಅನುಸಂಧಾನಮಾಡತಕ್ಕದ್ದು .

ದ್ವೈ.—'ಅಧಿಕಾರದಲ್ಲಿ ನಿಯೋಜಿತರಾದ ಉಪಾಸಕರಿಗೆ ತಾರತಮ್ಯವು ಪ್ರಾಣನ ವರೆಗೆ; ಪ್ರಾಣನಿಗಿಂತ ಅಧಿಕನಿಲ್ಲ. ಶ್ರುತಿಯೂ ಹಾಗೆಯೇ ಹೇಳುತ್ತದೆ' ಎಂಬುದು ಸೂತ್ರಾರ್ಥ.

'ಪ್ರಾಣನು ಎಲ್ಲರಿಗಿಂತಲೂ ದೊಡ್ಡವನು , ಅವನಿಗಿಂತ ದೊಡ್ಡವನಾದವನು ಯಾರೂ ಇಲ್ಲ ; ಪ್ರಾಣನು ಅತ್ಯಂತಶ್ರೇಷ್ಠನಾಗಿರುವುದರಿಂದ ಭೂಯಾನ್ ಎಂದು ಕರೆಯಲ್ಪಡುತ್ತಾನೆ' ಎಂದು ಕೌಂಠರವ-ಶ್ರುತಿಯು ಹೇಳುತ್ತದೆ [1]

---

[1] ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ನ ಹಿ ಪ್ರಾಣಾದ್ಭೂಯಾನ್ ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ಭೂಯಾನ್ನಾಮೇತಿ ಕೌಂಠರವಶ್ರುತೇಃ (ಮ. ಭಾ.).

# ೨೨. ಅಂತರತ್ವಾಧಿಕರಣ*

(ಸೂ ೩೫–೩೬)

**ಅಂತರಾ ಭೂತಗ್ರಾಮವತ್ ಸ್ವಾತ್ಮನಃ† || ೩೫ ||**

೩೫ ಭೂತಗಳ ಸಮೂಹದಂತೆ ಆತ್ಮನು ಒಳಗಿರುವುದರಿಂದ (ವಿದ್ಯೆಯು ಒಂದೇ)

'ಯಾಜ್ಞವಲ್ಕ್ಯ, ಸಾಕ್ಷಾತ್ತಾಗಿ ಅಪರೋಕ್ಷವಾಗಿ ಇರುವ ಬ್ರಹ್ಮವನ್ನು—ಸರ್ವಾಂತರವರ್ತಿಯಾದ ಆತ್ಮನನ್ನು—ತಿಳಿಸು'[1] (ಬೃ ಉ ೩ ೪ ೧) ಎಂದು ಉಷಸ್ತ ಚಾಕ್ರಾಯಣನು ಪ್ರಶ್ನಿಸುತ್ತಾನೆ, ಮುಂದೆ (೩ ೫ ೧) ಕಹೋಲ-ಕೌಷೀತಕೇಯನು ಇದೇ ಪ್ರಶ್ನೆಯನ್ನು ಯಾಜ್ಞವಲ್ಕ್ಯನಿಗೆ ಹಾಕುತ್ತಾನೆ ಇಲ್ಲಿ ವಿದ್ಯೆಯು ಒಂದೂ ಅಥವಾ ಎರಡೊ ? ಎಂಬುದು ಸಂಶಯ

**ಪೂರ್ವಪಕ್ಷ**—ಎರಡು ಸಲ ಹೇಳಿರುವುದರಿಂದ ಎರಡು ವಿದ್ಯೆಗಳಿವೆ ಪೂರ್ವ ಮೀಮಾಂಸೆಯಲ್ಲಿ ಪುನರುಕ್ತಿಯು ಬೇರೆ ಬೇರೆ ಕರ್ಮಗಳನ್ನು ಸೂಚಿಸುವಂತೆ ಇಲ್ಲಿಯೂ ಪುನರುಕ್ತಿಯು ವಿದ್ಯಾನಾನಾತ್ವವನ್ನು ಸೂಚಿಸುತ್ತದೆ

**ಸಿದ್ಧಾಂತಿ**—ಎರಡು ಪಾಠಗಳೂ ಆತ್ಮನೇ ಒಳಗಿರುವನೆಂದು ಹೇಳಿರುವುದರಿಂದ ವಿದ್ಯೆಯು ಒಂದೇ[2] ಎರಡು ವಾಕ್ಯಗಳ ಪ್ರಶ್ನೋತ್ತರಗಳಲ್ಲಿಯೂ ಸರ್ವಾಂತರನಾದ ಆತ್ಮನನ್ನೇ ಹೇಳಿದೆ ಇಬ್ಬರು ಆತ್ಮರು ಒಂದೇ ಶರೀರದಲ್ಲಿ ಸರ್ವಾಂತರವಾಗಿ ಇರಲಾರರು, ಏಕೆಂದರೆ ಒಬ್ಬನಿಗೆ ಸರ್ವಾಂತರತ್ವವನ್ನು ಕಲ್ಪಿಸಬಹುದು, ಇನ್ನೊಬ್ಬನಿಗೆ—ಭೂತ ಸಮೂಹದಂತೆ—ಸರ್ವಾಂತರತ್ವವು ಆಗಲಾರದು ಹೇಗೆ ಪಂಚಭೂತಸಮೂಹವಾದ ದೇಹದಲ್ಲಿ ಪೃಥಿವಿಗಿಂತ ನೀರು ಒಳಗೆ, ನೀರಿಗಿಂತ ತೇಜಸ್ಸು ಒಳಗೆ—ಎಂಬ ಆಪೇಕ್ಷಿಕ ವಾದ ಅಂತರತ್ವವಿದ್ದರೂ ಮುಖ್ಯವಾದ ಸರ್ವಾಂತರತ್ವವು ಹೇಗೆ ಇರಲಾರದೊ ಹಾಗೆಯೇ ಇಲ್ಲಿಯೂ ಆಗಲಾರದು ಅಥವಾ 'ಒಬ್ಬನೇ ದೇವನು ಸರ್ವಪ್ರಾಣಿಗಳಲ್ಲಿ ಗೂಢನಾಗಿರುವನು, ಅವನು ಸರ್ವವ್ಯಾಪಿ, ಸರ್ವಭೂತಗಳ ಅಂತರಾತ್ಮನು'[3] ಎಂಬ ಇನ್ನೊಂದು

---

* ಶ್ರೀಭಾಷ್ಯದ ಪ್ರಕಾರ ವ್ಯತಿಹಾರೋ ವಿಶಿಂಷಂತಿ ಹೀತರವತ್ (೩೭) ಮತ್ತು ಸೈವ ಹಿ ಸತ್ಯಾದಯಃ (೩೮) ಎಂಬ ಮುಂದಿನ ಎರಡು ಅಧಿಕರಣಗಳ ಎರಡು ಸೂತ್ರಗಳು ಈ ಅಧಿಕರಣಕ್ಕೇ ಸೇರಿವೆ ಕೆಲವು ಪಾಠಗಳಲ್ಲಿ ಈ ಅಧಿಕರಣವನ್ನು ಅನಂತರಾಧಿಕರಣ ಎಂದು ಕರೆದಿದೆ

† ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಒಟ್ಟುಗೂಡಿ ಒಂದೇ ಸೂತ್ರವಾಗಿದೆ

1 ಯತ್ ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾಂತರಃ ।

2 ಅಂತರಾಽಽಮ್ನಾನಾವಿಶೇಷಾತ್ ಸ್ವಾತ್ಮನೋ ವಿದ್ಯೈಕತ್ವಮಿತಿ (ಸೂ. ಭಾ )

3 ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ

ಶ್ರುತಿಯ ಪ್ರಕಾರ 'ಭೂತಸಮೂಹದಂತೆ' ಎಂಬುದಕ್ಕೆ ವ್ಯಾಖ್ಯಾನಮಾಡಬಹುದು : ಭೂತಸಮೂಹಗಳಲ್ಲೆಲ್ಲ ಸರ್ವಾಂತರನಾದ ಒಬ್ಬನೇ ಆತ್ಮನಿರುವನು ಎಂದು ಈ ಮಂತ್ರವು ಪರಿಸುವಂತೆ ಆ ಎರಡು ಬ್ರಾಹ್ಮಣವಾಕ್ಯಗಳಲ್ಲಿಯೂ ಒಬ್ಬನನ್ನೇ ಹೇಳಿದೆ ವೇದ್ಯವು ಒಂದೇ ಆಗಿರುವುದರಿಂದ ವಿದ್ಯೆಯು ಒಂದೇ

ವಿ.—ಅಂತರಾ ಭೂತಗ್ರಾಮವತ್ ಸ್ವಾತ್ಮನೋಽನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ॥ ೩. ೩. ೩೫ ॥

೩೫. ಯ ಆತ್ಮಾ ಸರ್ವಾಂತರಃ ಎಂಬ ಉಷಸ್ತಿ-ಪ್ರಶ್ನೆಯು ಭೂತಸಮೂಹವನ್ನು ಹೊಂದಿದ ಜೀವಾತ್ಮನನ್ನು ಸೂಚಿಸುತ್ತದೆ ; ಹಾಗಿಲ್ಲದಿದ್ದರೆ ಯಾಜ್ಞವಲ್ಕ್ಯರ ಭಿನ್ನವಾದ ಉತ್ತರಕ್ಕೆ ಕಾರಣವಿಲ್ಲವಾಗುತ್ತದೆ—ಎಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಅದು ಸದ್ವಿದ್ಯೆಯ ಉಪದೇಶದಂತೆ.

ಛಾಂದೋಗ್ಯದ ಸದ್ವಿದ್ಯೆಯಲ್ಲಿ (೬. ೧) ಉದ್ದಾಲಕನು ಶ್ವೇತಕೇತುವಿಗೆ ಒಬ್ಬನೇ ಆದ ಪರಬ್ರಹ್ಮನ ಮಾಹಾತ್ಮ್ಯವನ್ನು ಪ್ರತಿಪಾದಿಸಲು ಬೇರೆ ಬೇರೆ ಉತ್ತರಗಳನ್ನು ಕೊಟ್ಟಂತೆ ಇಲ್ಲಿಯೂ ತಿಳಿದುಕೊಳ್ಳಬೇಕು. ಇಲ್ಲಿ ಯಾಜ್ಞವಲ್ಕ್ಯರು ಉಷಸ್ತ-ಕಹೋಲರ ಪ್ರಶ್ನೆಗಳಿಗೆ ಕೊಟ್ಟ ಉತ್ತರವು ಪರಮಾತ್ಮವಿಷಯಕವಾದುದರಿಂದ ವಿದ್ಯೆಯು ಒಂದೇ ಆಗಿರುತ್ತದೆ ; ಸರ್ವಾಂತರನೂ ಏಕನೂ ಆದ ಪರಬ್ರಹ್ಮನೇ ಸರ್ವಪ್ರಾಣನಕ್ರಿಯೆಗೆ ಕಾರಣನೆಂಬುದು ಮೊದಲನೆಯ ಪ್ರಶ್ನೆಗೆ ಕೊಟ್ಟ ಉತ್ತರ, ಪರಬ್ರಹ್ಮನು ಹಸಿವು ಬಾಯಾರಿಕೆ ಮೊದಲಾದುವುಗಳನ್ನು ದಾಟಿರುತ್ತಾನೆಂಬುದು ಎರಡನೆಯ ಪ್ರಶ್ನೆಗೆ ಕೊಟ್ಟ ಉತ್ತರ.[1]

ದ್ವೈ —ಅಂತರಾ ಭೂತಗ್ರಾಮವದಿತಿ ಚೇತ್ತದುಕ್ತಮ್ ॥ ೩. ೩. ೩೬ ॥

೩೬ ಭೂತಸಮೂಹದಲ್ಲಿ ಒಂದರ ಮೇಲೆ ಒಂದಿರುವಂತೆ ಪ್ರಾಣನ ಮೇಲೆ ಪರಮಾತ್ಮನ ಕೆಳಗೆ ಒಬ್ಬ ಉತ್ತಮಾಧಿಕಾರಿಯು ಇರುವನೆಂದು ಹೇಳಿದರೆ ಅದು ಸರಿಯಲ್ಲ ; ಏಕೆಂದರೆ ಪ್ರಾಣನಿಗಿಂತ ಉತ್ತಮಾಧಿಕಾರಿಯು ಇಲ್ಲವೆನ್ನುವ ವಿಷಯದಲ್ಲಿ ಪ್ರಮಾಣವು ಹೇಳಲ್ಪಟ್ಟಿತು.[2]

## ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶಾಂತರವತ್ ॥ ೩೬ ॥

೩೬. ಅನ್ಯಥಾ ಭೇದವು ಹೊಂದುವುದಿಲ್ಲವೆಂದರೆ, ಅದು ಸರಿಯಲ್ಲ; ಏಕೆಂದರೆ ಮತ್ತೊಂದು ಉಪದೇಶದಂತೆ ಇದು ಹೊಂದುತ್ತದೆ

ವಿದ್ಯಾಭೇದವನ್ನು ಅಂಗೀಕರಿಸದಿದ್ದರೆ ವಾಕ್ಯಗಳನ್ನು ಬೇರೆಬೇರೆಯಾಗಿ ಎರಡು ಸಲ ಪಠಿಸಿರುವುದು ಹೊಂದುವುದಿಲ್ಲ—ಎಂದು ಆಕ್ಷೇಪಿಸಿದರೆ ಅದಕ್ಕೆ ನಮ್ಮ ಪರಿಹಾರವು

---

1 ಅತ ಏಕಸ್ಯೈವ ಸರ್ವಾಂತರಭೂತಸ್ಯ ಬ್ರಹ್ಮಣಃ ಕೃತ್ಸ್ನಪ್ರಾಣಿಪ್ರಾಣನಹೇತುತ್ವಾಶನಾಯಾದ್ಯತೀತತ್ವಪ್ರತಿಪಾದನೇನ ರೂಪೈಕ್ಯಾದ್ವಿದ್ಯೈಕ್ಯಮ್ (ಶ್ರೀಭಾಷ್ಯ).

2 ಯಥಾಭೂತಗ್ರಾಮ ಏಕಸ್ಮಾದೇಕ ಉತ್ತಮೋಽಸ್ತ್ಯೇವ ಏವಂ ಪ್ರಾಣಾದಪಿ ಪರಮಾತ್ಮಾನಮಂತರಾ ವಿದ್ಯತ ಇತಿ ಚೇನ್ನ । ಪ್ರಾಣಾದುತ್ತಮಾಭಾವೇ ಪ್ರಮಾಣಮುಕ್ತಮ್ (ಮ. ಭಾ.).

ಹೀಗಿದೆ ತಾಂಡಿಗಳ ಉಪನಿಷತ್ತಿನಲ್ಲಿ ‘ಅದೇ ಆತ್ಮನು, ಓ ಶ್ವೇತಕೇತು, ಅದೇ ನೀನಾಗಿರುವೆ’[1] (ಛಾಂ ಉ ೬ ೮ ೭) ಎಂದು ಒಂಬತ್ತು ಸಲ ಉಪದೇಶಿಸಿದ್ದರೂ ವಿದ್ಯೆಯು ಹೇಗೆ ಬೇರೆಬೇರೆಯಾಗುವುದಿಲ್ಲವೊ ಹಾಗೆಯೇ ಇಲ್ಲಿಯೂ ತಿಳಿಯಬೇಕು ಮೊದಲನೆಯ ಬ್ರಾಹ್ಮಣದಲ್ಲಿ (ಬೃ ಉ ೩ ೪ ೧) ಕಾರ್ಯ-ಕಾರಣಗಳಿಗಿಂತ ಬೇರೆಯವನಾದ ಪರಮಾತ್ಮನ ಸದ್ಭಾವವನ್ನು ಹೇಳಿದೆ, ಎರಡನೆಯದರಲ್ಲಿ (ಬೃ ಉ ೩ ೫ ೧) ಅವನೇ ಹಸಿವು ಮೊದಲಾದ ಸಂಸಾರ-ಧರ್ಮಗಳನ್ನು ಅತಿಕ್ರಮಿಸಿರುವನೆಂದು ಹೇಳಿದೆ ಆದುದರಿಂದ ಎರಡು ಬ್ರಾಹ್ಮಣಗಳ ವಿಷಯವೂ ಒಂದೇ ಆಗಿದೆ[2]

**ದ್ವೈ.**—‘ಪ್ರಾಣನಿಗೆ ಸರ್ವೋತ್ತಮತ್ವವಿದ್ದರೆ ಪರಮಾತ್ಮನಿಗಿಂತ ಪ್ರಾಣನಿಗೆ ಭೇದವು ಕೂಡುವುದಿಲ್ಲ—ಎಂದರೆ, ಅದು ಸರಿಯಲ್ಲ, ಏಕೆಂದರೆ ಉಪದೇಶದಿಂದಲೇ ಅದು ಹೊಂದುತ್ತದೆ’ ಎಂಬುದು ಸೂತ್ರಾರ್ಥ

ಎಲ್ಲರಿಗಿಂತಲೂ ಪ್ರಾಣನು ಉತ್ತಮನಾಗಿದ್ದಾನೆ, ಅವನಿಗಿಂತ ಪರಮಾತ್ಮನು ಶ್ರೇಷ್ಠನು—ಎಂಬ ಶ್ರುತಿಯ ಉಪದೇಶವಿದೆ[3]

---

[1] ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ।

[2] ಪೂರ್ವಸ್ಮಿಂಶ್ಚ ಬ್ರಾಹ್ಮಣೇ ಕಾರ್ಯಕರಣವ್ಯತಿರಿಕ್ತಸ್ಯಾತ್ಮನಃ ಸದ್ಭಾವಃ ಕಥ್ಯತೇ । ಉತ್ತರಸ್ಮಿಂಸ್ತು ತಸ್ಯೈವಾಶನಾಯಾದಿಸಂಸಾರಧರ್ಮಾತೀತತ್ವಂ ಕಥ್ಯತೇ ಇತ್ಯೇಕಾರ್ಥಶೋಪಪತ್ತಿಃ (ಸೂ ಭಾ )

[3] ಅನ್ಯೇಭ್ಯಃ ಪ್ರಾಣಸ್ಯೋತ್ತಮತ್ವಂ ತಸ್ಮಾತ್ ಪರಮಾತ್ಮನೋ ಹ್ಯುಪದಿಷ್ಟಮ್ (ಮ ಭಾ )

## ೨೩. ವ್ಯತಿಹಾರಾಧಿಕರಣ

### ವ್ಯತಿಹಾರೋ ವಿಶಿಂಷಂತಿ ಹೀತರವತ್ || ೩೭ ||

೩೭ ವ್ಯತಿಹಾರವನ್ನು* (ಧ್ಯಾನಕ್ಕಾಗಿ ಹೇಳಿದೆ), ಏಕೆಂದರೆ (ಪಠಿಸುವವರು) ಇತರ ಗುಣಗಳಂತೆಯೇ ವಿಶೇಷವಾಗಿ ಹೇಳಿದ್ದಾರೆ

'ನಾನು ಯಾವನೊ ಅವನು ಇವನೇ, ಇವನು ಯಾವನೊ ಅವನು ನಾನೇ'[1] (ಐ ಆ ೨ ೨ ೪) ಎಂದು ಐತರೇಯರು ಪಠಿಸುತ್ತಾರೆ ಹಾಗೆಯೇ ಜಾಬಾಲರು 'ಭಗವಂತನಾದ ದೇವತೆ, ನೀನೇ ನಾನು, ನಾನೇ ನೀನು'[2] ಎಂದು ಪಠಿಸುತ್ತಾರೆ ಇಲ್ಲಿ ವ್ಯತಿಹಾರದಿಂದ ಉಭಯರೂಪವಾದ[3] ಭಾವನೆಯನ್ನು ಮಾಡಬೇಕೊ ಅಥವಾ ಏಕರೂಪ ಭಾವನೆಯನ್ನು[4] ಮಾಡಬೇಕೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಏಕರೂಪದಿಂದ ಚಿಂತಿಸಬೇಕು, ಏಕೆಂದರೆ ಇಲ್ಲಿ ಜೀವನಿಗೂ ಮತ್ತು ಪರಮಾತ್ಮನಿಗೂ ಏಕತ್ವವೊಂದನ್ನೇ ಹೇಳಿದೆ ಸಂಸಾರಿಯು ಈಶ್ವರನೆಂದು ಚಿಂತಿಸಿದರೆ ಉತ್ಕರ್ಷವಾಗುವುದು, ಈಶ್ವರನು ಜೀವನೆಂದು ಚಿಂತಿಸಿದರೆ ನಿಕರ್ಷವಾಗುವುದು, ಆದುದರಿಂದ ಭಾವನೆಯು ಏಕರೂಪದಿಂದಿರಬೇಕು ವ್ಯತಿಹಾರವನ್ನು ಹೇಳಿರುವುದು ಏಕತ್ವವನ್ನು ದೃಢೀಕರಿಸುವುದಕ್ಕೆ

**ಸಿದ್ಧಾಂತಿ**—ಈ ವ್ಯತಿಹಾರವನ್ನು ಧ್ಯಾನಕ್ಕಾಗಿ ಹೇಳಿದೆ ಹೇಗೆ ಸರ್ವಾತ್ಮತ್ವವೇ ಮೊದಲಾದ ಇತರ ಗುಣಗಳನ್ನು ಪಠಿಸಿದೆಯೊ ಹಾಗೆಯೇ ಇಲ್ಲಿಯೂ ಉಭಯರೂಪದಿಂದ ಚಿಂತಿಸಬೇಕು ಹಾಗೆ ಚಿಂತಿಸದಿದ್ದರೆ ಈ ಎರಡನ್ನೂ ವಿಶೇಷವಾಗಿ ಪಠಿಸಿರುವುದು ಅನರ್ಥಕವಾಗುತ್ತದೆ ಶ್ರುತಿಪ್ರಾಮಾಣ್ಯದಿಂದ ಎರಡು ರೂಪದಿಂದಲೂ ಚಿಂತಿಸಬೇಕು, ಈ ದ್ವಿರೂಪಭಾವನೆಯಿಂದ ಏಕತ್ವವು ದೃಢವಾಗುತ್ತದೆ ಧ್ಯಾನಕ್ಕಾಗಿ ಸತ್ಯಕಾಮಾದಿ ಗುಣಗಳನ್ನು ಉಪದೇಶಿಸಿದರೂ ಆ ಗುಣಗಳುಳ್ಳ ಈಶ್ವರನು ಸಿದ್ಧಿಸುವಂತೆ ಇಲ್ಲಿಯೂ ಏಕಾತ್ಮತ್ವವು ಸಿದ್ಧಿಸುತ್ತದೆ

**ವಿ.**—ಎರಡು ಬ್ರಾಹ್ಮಣಗಳೂ ಪರಬ್ರಹ್ಮವಿಷಯವಾಗಿದ್ದರೂ ವಿದ್ಯಾಭೇದವು ಅವರ್ಜನೀಯವು, ಏಕೆಂದರೆ ಉಪಾಸ್ಯವಸ್ತುವಿನ ಗುಣಭೇದದಿಂದ ರೂಪಭೇದವು ಬರುತ್ತದೆ, ಇದಲ್ಲದೆ ಪ್ರಶ್ನಿಸುವವರೂ ಬೇರೆಬೇರೆಯಾಗಿರುತ್ತಾರೆ—ಎಂಬುದು ಆಕ್ಷೇಪಣೆ

---

* ಜೀವ-ಈಶ್ವರ, ಇವರಿಗಿರುವ ಪರಸ್ಪರ ವಿಶೇಷಣ-ವಿಶೇಷ್ಯಭಾವಕ್ಕೆ ವ್ಯತಿಹಾರವೆಂದು ಹೆಸರು (ರ ಪ್ರ)

1 ತದ್ಯೋಽಹಂ ಸೋಽಸೌ ಸೋಽಹಮ್ ।

2 ತ್ವಂ ವಾ ಅಹಮಸ್ಮಿ ಭಗವೋ ದೇವತೇಽಹಂ ವೈ ತ್ವಮಸಿ ।

3 ಜೀವನನ್ನು ಆದಿತ್ಯನೆಂದೂ, ಆದಿತ್ಯನನ್ನು ಜೀವನೆಂದೂ ಚಿಂತಿಸುವುದು

4 ಜೀವನನ್ನು ಆದಿತ್ಯನೆಂದು ಮಾತ್ರ ಚಿಂತಿಸುವುದು.

ಇದಕ್ಕೆ ಪರಿಹಾರವು ಹೀಗಿರುತ್ತದೆ: ಇಲ್ಲಿ ವಿದ್ಯಾಭೇದವಿಲ್ಲ; ಏಕೆಂದರೆ ಪ್ರಶ್ನೆ-ಪ್ರತ್ಯುತ್ತರಗಳ ವಿಷಯವು ಒಂದೇ ಆಗಿರುತ್ತದೆ; ಎಂದರೆ ಸರ್ವಾಂತರಾತ್ಮತ್ವವಿಶಿಷ್ಟನಾದ ಪರಬ್ರಹ್ಮನೇ ವಿಷಯನಾಗಿರುತ್ತಾನೆ ಹೀಗೆ ಉಪಾಸ್ಯವಸ್ತುವು ಒಂದೇ ಆಗಿರುವಾಗ ಕಹೋಲನಿಗೆ ಕೊಟ್ಟ ಉತ್ತರದಲ್ಲಿಯೂ ಉಷಸ್ತಿಗೆ ಕೊಟ್ಟ ಉತ್ತರದಲ್ಲಿಯೂ ಪರಸ್ಪರ ಸಮಾನವಾದ ಬುದ್ಧಿಯನ್ನು ಇಡತಕ್ಕದ್ದು; ಎಂದರೆ ಪರಬ್ರಹ್ಮನೇ ಸರ್ವಪ್ರಾಣಿಗಳ ಪ್ರಾಣನಹೇತುವೆಂಬ ಉಷಸ್ತನ ಭಾವನೆಯನ್ನು ಕಹೋಲನು ಮಾಡಬೇಕು, ಆ ಬ್ರಹ್ಮನೇ ಅಶನಾಯಾದ್ಯತೀತನೆಂಬ ಕಹೋಲನ ಭಾವನೆಯನ್ನು ಉಷಸ್ತನು ಮಾಡಬೇಕು. ಇಂಥ ವ್ಯತಿಹಾರದಿಂದ ಸರ್ವಾಂತರನಾದ ಬ್ರಹ್ಮನು ಜೀವನಿಗಿಂತ ಭಿನ್ನನೆಂಬುದು ಎರಡು ಬ್ರಾಹ್ಮಣಗಳಲ್ಲಿಯೂ ನಿಶ್ಚಯಿಸಲ್ಪಡುತ್ತದೆ.[1] ಸದ್ವಿದ್ಯೆಯ ಪ್ರಶ್ನ-ಪ್ರತಿವಚನಗಳಲ್ಲಿ ಉಪಾಸ್ಯನಾದ ಬ್ರಹ್ಮನು ಒಬ್ಬನೇ ಆಗಿರುವಂತೆ ಇಲ್ಲಿಯೂ ತಿಳಿದುಕೊಳ್ಳಬೇಕು

**ದೈತ್ಲ.**—'(ಪ್ರಾಣನಿಗಿಂತ ಸತ್ಯನೆಂಬ ಹೆಸರುಳ್ಳ ಪರಮಾತ್ಮನು ಉತ್ತಮನು— ಎಂಬುದು ಯುಕ್ತವು); ಇದು ಅಧ್ಯಾಹಾರದಿಂದ (ತಿಳಿದುಬರುತ್ತದೆ); ಏಕೆಂದರೆ ಇತರ ಸ್ಥಾನಗಳಂತೆ ಇಲ್ಲಿಯೂ ಸತ್ಯಕ್ಕೆ ಒಂದು ವಿಶೇಷಣವನ್ನು ಸೇರಿಸಿದೆ' ಎಂಬುದು ಸೂತ್ರಾರ್ಥ.

ಹಿಂದಿನಂತೆ ಪ್ರಶ್ನೆ-ಪ್ರತಿವಚನಗಳನ್ನು ಅಧ್ಯಾಹಾರಮಾಡಿಕೊಂಡರೆ ಪರಮಾತ್ಮನ ಉತ್ತಮತ್ವವು ಸ್ಪಷ್ಟವಾಗುತ್ತದೆ; ಏಕೆಂದರೆ 'ಸತ್ಯವಾದಿಯು ಸತ್ಯವನ್ನೇ ಹೇಳುತ್ತಾನೆ' (ಛಾಂ. ಉ. ೭. ೧೬) ಎಂಬಲ್ಲಿ ಛಂದೋಗರು ಸತ್ಯನನ್ನು ಪ್ರಾಣನ ದೆಸೆಯಿಂದ ವಿಶೇಷಿಸಿದ್ದಾರೆ.[2] **ವಾಗ್ವಾವ ನಾಮ್ನೋ ಭೂಯಸೀ** (ಛಾಂ. ಉ. ೭. ೨) ಎಂಬಲ್ಲಿ ನಾಮಾದಿಗಳಿಂದ ವಾಗಾದಿಗಳನ್ನು ಹೇಗೆ ಬೇರ್ಪಡಿಸಿದೆಯೊ ಹಾಗೆಯೇ ಇಲ್ಲಿಯೂ ತಿಳಿಯಬೇಕು

---

[1] ಏವಂ ವ್ಯತಿಹಾರೇ ಕೃತೇ ಉಭಾಭ್ಯಾಂ ಸರ್ವಾಂತರಸ್ಯ ಬ್ರಹ್ಮಣೋ ಜೀವವ್ಯಾವೃತ್ತಿರವಗತಾ ಭವತಿ (ಶ್ರೀಭಾಷ್ಯ).

[2] ಏಷ ತು ವಾ ಅತಿವದತೀತಿ ವಿಶಿಂಷಂತಿ ಹಿ (ಮ. ಭಾ.).

## ೨೪. ಸತ್ಯಾದ್ಯಧಿಕರಣ

### ಸೈವ ಹಿ ಸತ್ಯಾದಯಃ || ೩೮ ||

೩೮ ಅದೇ (ಸತ್ಯವಿದ್ಯೆಯು); ಸತ್ಯಾದಿಗಳನ್ನು ಉಪಸಂಹರಿಸಿಕೊಳ್ಳ ಬೇಕು).

ವಾಜಸನೇಯಕದಲ್ಲಿ 'ಯಾವನು ಮಹಾಂತನೂ ಪೂಜ್ಯನೂ ಆದ ಪ್ರಥಮಜ ನನ್ನು ಸತ್ಯಬ್ರಹ್ಮವೆಂದು ಅರಿತುಕೊಳ್ಳುವನೊ'[1] (ಬೃ ಉ ೫ ೪. ೧) ಎಂದು ಸತ್ಯ ವಿದ್ಯೆಯನ್ನು ವಿಧಿಸಿದ ಮೇಲೆ, 'ಯಾವುದು ಸತ್ಯಬ್ರಹ್ಮವೊ ಅದು ಆ ಆದಿತ್ಯನು— ಇವನು ಆದಿತ್ಯಮಂಡಲದಲ್ಲಿ ಪುರುಷನು ಮತ್ತು ಬಲಗಣ್ಣಿನಲ್ಲಿರುವ ಪುರುಷನು'[2] (ಬೃ. ಉ. ೫. ೫. ೨) ಎಂದು ಪಠಿಸಿದೆ. ಈ ಸತ್ಯವಿದ್ಯೆಗಳು ಒಂದೊ ಅಥವಾ ಎರಡೊ ?— ಎಂಬುದು ಸಂಶಯ.

**ಪೂರ್ವಪಕ್ಷ**—ಇವು ಎರಡು ವಿದ್ಯೆಗಳು ; ಏಕೆಂದರೆ ಬೇರೆ ಬೇರೆ ಫಲಗಳನ್ನು ಹೇಳಿದೆ. ಲೋಕಗಳನ್ನು ಜಯಿಸಿಕೊಳ್ಳುವುದು (ಬೃ ಉ ೫ ೪. ೧) ಒಂದು ಫಲ, ಪಾಪವನ್ನು ನಾಶಮಾಡಿಕೊಳ್ಳುವುದು ಎರಡನೆಯ ಫಲ (ಬೃ. ಉ. ೫. ೫. ೩); 'ಅದು ಯಾವ ಸತ್ಯವೊ', **ತದ್ಯತ್ ತತ್ ಸತ್ಯಮ್** ಎಂದು ಪ್ರಕೃತವಾದುದನ್ನು ಎಳೆದು ಕೊಂಡು ಹೇಳಿರುವುದು ಉಪಾಸ್ಯದೇವತೆಯು ಒಂದೇ ಎಂಬುದನ್ನು ಸೂಚಿಸುವುದಕ್ಕೆ.

**ಸಿದ್ಧಾಂತಿ**—ಸತ್ಯವಿದ್ಯೆಯೆಂಬುದು ಒಂದೇ ; ಏಕೆಂದರೆ 'ಅದು ಯಾವ ಸತ್ಯವೊ' ಎಂದು ಪ್ರಕೃತವಾದುದನ್ನೇ ಎಳೆದುಕೊಂಡು ಹೇಳಿದೆ ವಿಸ್ಪಷ್ಟವಾದ ಕಾರಣಾಂತರ ದಿಂದ ವಿದ್ಯಾಭೇದವು ತೋರುತ್ತಿದ್ದರೆ ಪ್ರಕೃತಾಕರ್ಷಣಮಾಡಿರುವುದು ಉಪಾಸ್ಯವು ಒಂದೆಂಬ ಕಾರಣದಿಂದ ಯುಕ್ತವಾಗಿದೆ ಎಂದು ಹೇಳಿರುವುದು ಸರಿಯಾಗಬಹುದು ; ಆದರೆ ಇಲ್ಲಿ ವಿದ್ಯೆಯ ಭೇದ ಅಥವಾ ಅಭೇದ ಸಂಭವಿಸಬಹುದಾಗಿರುವುದರಿಂದಲೂ ಪ್ರಕೃತಾಕರ್ಷಣಮಾಡಿರುವುದರಿಂದಲೂ ಪೂರ್ವವಿದ್ಯಾಸಂಬಂಧವಾದ ಸತ್ಯವನ್ನೇ ಮುಂದೆ ಆಕರ್ಷಿಸಿ ಹೇಳಿದೆ ಎಂದು ಏಕವಿದ್ಯಾತ್ವವನ್ನು ನಿಶ್ಚಯಿಸಬಹುದು. ಫಲಭೇದ ವನ್ನು ಹೇಳಿರುವುದು 'ಅವನ ರಹಸ್ಯನಾಮವು ಅಹಸ್' (ಬೃ. ಉ. ೫. ೫. ೩), 'ಅವನ ರಹಸ್ಯನಾಮವು ಅಹಮ್' (ಬೃ. ಉ. ೫. ೫. ೪) ಎಂಬ ಅಂಗಾಂತರ.ಉಪದೇಶವನ್ನು ಹೊಗಳುವುದಕ್ಕಾಗಿ, ವಿಧಿವಾಕ್ಯದಲ್ಲಿ ಫಲವನ್ನು ಹೇಳದಿರುವಾಗ ಅರ್ಥವಾದದಿಂದಲೇ ಅದನ್ನು ಕಲ್ಪಿಸಬೇಕಾಗಿರುವುದರಿಂದಲೂ ವಿದ್ಯೆಯು ಒಂದೇ ಆಗಿರುವುದರಿಂದಲೂ ಅವ-

---

[1] ಸ ಯೋ ಹೈತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮ ।

[2] ತದ್ಯತ್ ತತ್, ಸತ್ಯಮಸೌ ಸ ಆದಿತ್ಯಃ—ಯ ಏಷ ಏತಸ್ಮಿನ್ ಮಂಡಲೇ ಪುರುಷಃ, ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ ।

ಯವಗಳಲ್ಲಿ ಶ್ರುತವಾಗಿರುವ ಬಹುಫಲಗಳನ್ನು ಅವಯವಿಯಾದ ವಿದ್ಯೆಯಲ್ಲಿಯೇ ಸೇರಿಸಿ ಕೊಳ್ಳಬೇಕಾಗುತ್ತದೆ. ಆದುದರಿಂದ ಸತ್ಯಾದಿಗುಣಗಳೆಲ್ಲವನ್ನೂ ಒಂದೇ ವಿದ್ಯೆಯಲ್ಲಿ ಸೇರಿಸಿಕೊಳ್ಳಬೇಕು ಈ ವಾಜಸನೇಯಕ-ವಾಕ್ಯವನ್ನೂ ಬೇರೊಂದು ಛಾಂದೋಗ್ಯ-ವಾಕ್ಯವನ್ನು (ಛಾಂ. ಉ. ೧. ೬. ೬, ೧. ೭. ೫) ಉದಾಹರಿಸಿ ಅಕ್ಷ್ಯಾದಿತ್ಯಪುರುಷನ ವಿಷಯವಾದ ವಿದ್ಯೆಯು ಒಂದೇ ಎಂದು ಹೇಳುವ ಏಕದೇಶಿಗಳ ವ್ಯಾಖ್ಯಾನವು ಸರಿಯಲ್ಲ; ಏಕೆಂದರೆ ಛಾಂದೋಗ್ಯದ ಜ್ಯೋತಿಷ್ಟೋಮಕರ್ಮದ ವಿದ್ಯೆಗೂ ಇದಕ್ಕೂ ಯಾವ ಸಂಬಂಧವೂ ಇಲ್ಲ.

ವಿ.—'ಸತ್ಯಾದಿಗಳಿಂದ ಕರೆಯಲ್ಪಟ್ಟ ಆ ಪರದೇವತೆಯೇ (ಉಪಾಸನೆಗೆ ವಿಷಯವಾಗಿದೆ)' ಎಂಬುದು ಸೂತ್ರಾರ್ಥ.

ಸದ್ವಿದ್ಯೆಯ ಪ್ರಶ್ನ-ಪ್ರತಿವಚನಗಳಲ್ಲಿಯೂ ಭೇದವಿರುವಾಗ ಆ ವಿದ್ಯೆಯನ್ನು ಒಂದೇ ಎಂದು ಹೇಳುವುದು ಹೇಗೆ?—ಎಂಬ ಆಕ್ಷೇಪಣೆಗೆ ಈ ಸೂತ್ರವು ಉತ್ತರವಾಗಿದೆ. ಸಚ್ಛಬ್ದದಿಂದ ಹೇಳಲ್ಪಟ್ಟ ಮತ್ತು 'ಆ ದೇವತೆಯು ಯೋಚಿಸಿತು'[1] (ಛಾಂ. ಉ. ೬. ೩. ೨) ಎಂದು ಪ್ರಕೃತವಾಗಿರುವ ಪರದೇವತೆಯನ್ನೇ ಆ ಅಧ್ಯಾಯದ ಪರ್ಯಾಯಗಳಲ್ಲೆಲ್ಲ ಹೇಳಿದೆ. ಮೊದಲನೆಯ ಪರ್ಯಾಯದಲ್ಲಿ ಹೇಳಲ್ಪಟ್ಟ ಸತ್ಯಾದಿಗಳು ಎಲ್ಲ ಪರ್ಯಾಯಗಳಲ್ಲಿಯೂ ಹೇಳಲ್ಪಟ್ಟು ಕೊನೆಯಲ್ಲಿ 'ಇವೆಲ್ಲವೂ ಪರಮಾತ್ಮನನ್ನೇ ಆತ್ಮವಾಗಿ ಉಳ್ಳವು; ಆ ಪರಮಾತ್ಮನೇ ಸತ್ಯನು. ಅವನೇ ನಿನಗೂ ಆತ್ಮ'[2] (ಛಾಂ. ಉ. ೬. ೮. ೭) ಎಂದು ಉಪಸಂಹರಿಸಿರುವುದರಿಂದ ಇದು ಸಿದ್ಧವಾಗಿದೆ.

ದ್ವೈ.—'ಸತ್ಯಾಖ್ಯನಾದ ವಿಷ್ಣುವು ಪ್ರಾಣನಿಗಿಂತ ಉತ್ತಮನಾಗಿರುವುದಲ್ಲದೆ ಕೃತಿ, ನಿಷ್ಠಾ, ವಿಜ್ಞಾನ ಮೊದಲಾದ ದೇವತೆಗಳೂ ಉತ್ತಮರಾಗಿರುವರು—ಎಂಬ ಆಕ್ಷೇಪಣೆ ಸರಿಯಲ್ಲ; ಏಕೆಂದರೆ ಅದೇ ದೇವತೆಯನ್ನೇ ಸತ್ಯಾದಿನಾಮಗಳಿಂದ ಕರೆದಿದೆ' ಎಂಬುದು ಸೂತ್ರಾರ್ಥ.

ಸತ್ಯಾದಿಗುಣಗಳು ಆ ಪರದೇವತೆಯ ಸ್ವರೂಪವಾಗಿವೆ.[3]

---

[1] ಸೇಯಂ ದೇವತೈಕ್ಷತ ।

[2] ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ।

[3] ಸತ್ಯಾದಿಗುಣಾಸ್ತಸ್ಯಾ ಏವ ಪರದೇವತಾಯಾಃ ಸ್ವರೂಪಭೂತಾಃ (ಮ. ಭಾ.).

## ೨೫. ಕಾಮಾದ್ಯಧಿಕರಣ*

### ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ || ೩೯ ||

೩೯. (ಸತ್ಯ)ಕಾಮಾದಿ (ಗುಣ)ಗಳನ್ನು ಒಂದು ಕಡೆಯಲ್ಲಿಯೂ ಅಲ್ಲಿರುವ (ಗುಣಗಳನ್ನು ಇನ್ನೊಂದು ಕಡೆಯಲ್ಲಿಯೂ ಸಂಬಂಧಿಸಿಕೊಳ್ಳಬೇಕು), ಏಕೆಂದರೆ ಆಯತನವೇ ಮೊದಲಾದುವುಗಳು (ಸಮಾನವಾಗಿವೆ).

'ಈ ಬ್ರಹ್ಮಪುರದಲ್ಲಿ ಸಣ್ಣದಾದ ಹೃದಯಪದ್ಮವೆಂಬ ಒಂದು ಮನೆಯಿದೆ. ಅದರಲ್ಲಿ ಸಣ್ಣದಾದ ಒಂದು ಅಂತರಾಕಾಶವಿದೆ'[1] (ಛಾಂ ಉ. ೮. ೧. ೧) ಎಂದು ಛಂದೋಗರು ಪ್ರಾರಂಭಿಸಿ, 'ಇವನು ಪಾಪರಹಿತನಾದ ಮುಪ್ಪಿಲ್ಲದ, ಮೃತ್ಯುವಿಲ್ಲದ ಶೋಕವಿಲ್ಲದ ಹಸಿವು ಬಾಯಾರಿಕೆಗಳಿಲ್ಲದ ಸತ್ಯಕಾಮನಾದ ಸತ್ಯಸಂಕಲ್ಪನಾದ ಆತ್ಮನು'[2] (ಛಾಂ ಉ ೮. ೧. ೫) ಎಂದು ಅಧ್ಯಯನಮಾಡುತ್ತಾರೆ. ಹೀಗೆಯೇ ವಾಜಸನೇಯಿಗಳು 'ವಿಜ್ಞಾನಮಯನೂ ಇಂದ್ರಿಯಗಳ ಮಧ್ಯದಲ್ಲಿರುವವನೂ ಜನ್ಮರಹಿತನೂ ಮಹಾಂತನೂ ಆದ ಆ ಈ ಆತ್ಮನು ಹೃದಯದಲ್ಲಿರುವ ಆಕಾಶದಲ್ಲಿರುತ್ತಾನೆ ಅವನು ಸರ್ವನಿಯಾಮಕನು'[3] (ಬೃ. ಉ. ೪ ೪. ೨೨) ಎಂದು ಅಧ್ಯಯನಮಾಡುತ್ತಾರೆ. ಈ ಎರಡು ವಾಕ್ಯಗಳು ಒಟ್ಟುಗೂಡಿ ಒಂದೇ ವಾಕ್ಯವಾಗಿದೆಯೊ ಮತ್ತು ಒಂದು ವಾಕ್ಯದಲ್ಲಿ ಹೇಳಿರುವ ಗುಣಗಳನ್ನು ಇನ್ನೊಂದರಲ್ಲಿ ಸಂಬಂಧಿಸಿಕೊಳ್ಳಬೇಕೊ ?—ಎಂಬುದು ಸಂಶಯ.

ಸಿದ್ಧಾಂತವು ಹೀಗಿದೆ: ಛಾಂದೋಗ್ಯವು ಹೃದಯಾಕಾಶಕ್ಕೆ ಹೇಳಿರುವ ಸತ್ಯಕಾಮತ್ವವೇ ಮೊದಲಾದ ಗುಣಸಮೂಹವನ್ನು ಬೃಹದಾರಣ್ಯಕದ ವಾಕ್ಯಕ್ಕೆ ಸಂಬಂಧಿಸಿಕೊಳ್ಳಬೇಕು, ಮತ್ತು ಬೃಹದಾರಣ್ಯಕದಲ್ಲಿ ಹೇಳಿರುವ ವಶಿತ್ವವೇ ಮೊದಲಾದ ಗುಣಗಳನ್ನು ಛಾಂದೋಗ್ಯದಲ್ಲಿ ಪಾಪರಹಿತನೆಂದು ಹೇಳಿರುವ ಆತ್ಮನಿಗೆ ಸಂಬಂಧಿಸಿಕೊಳ್ಳಬೇಕು: ಏಕೆಂದರೆ ಆಯತನವೇ ಮೊದಲಾದ ಹೋಲಿಕೆಯಿದೆ: ಎರಡು ಕಡೆಗಳಲ್ಲಿಯೂ

---

* ಶ್ರೀಭಾಷ್ಯ-ಮಧ್ವಭಾಷ್ಯಗಳ ಪ್ರಕಾರ ಈ ಅಧಿಕರಣವು ಮುಂದಿನ ಎರಡು ಸೂತ್ರಗಳನ್ನೂ ಒಳಕೊಂಡಿದೆ.

1 ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ |

2 ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ |

3 ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿಂಛೇತೇ ಸರ್ವಸ್ಯ ವಶೀ |

ಹೃದಯವೆಂಬ ಆಯತನ, ವೇದ್ಯನಾದ ಈಶ್ವರ, ಅವನಿಗೆ ಹೇಳಿರುವ ಸೇತುತ್ವಾದಿ-ಧರ್ಮಗಳು—ಇವೆಲ್ಲ ಎರಡು ವಾಕ್ಯಗಳಿಗೂ ಸಮಾನವಾಗಿವೆ.

ಆದರೆ ಇಲ್ಲಿ ಈ ವಿಶೇಷವಿದೆ: ಛಾಂದೋಗ್ಯದಲ್ಲಿ ಸಗುಣಬ್ರಹ್ಮವಿದ್ಯೆಯನ್ನು ಉಪದೇಶಿಸಿದೆ, ಬೃಹದಾರಣ್ಯಕದಲ್ಲಿ ನಿರ್ಗುಣವಾದ ಪರಬ್ರಹ್ಮವನ್ನೇ ಉಪದೇಶಿಸಿದೆ. ಬೃಹದಾರಣ್ಯಕದಲ್ಲಿ ಹೇಳಿರುವ ವಶಿತ್ವಾದಿ-ಗುಣಸಮೂಹವನ್ನು ಸ್ತುತಿಗಾಗಿ ಹೇಳಿದೆಯೆಂದು ತಿಳಿದುಕೊಳ್ಳಬೇಕು. ಗುಣಗಳುಳ್ಳ ಬ್ರಹ್ಮವು (ನಿರ್ಗುಣಬ್ರಹ್ಮದೊಂದಿಗೆ) ಒಂದೇ ಆಗಿರುವುದರಿಂದ ಈ ಗುಣಗಳ ಉಪಸಂಹಾರವನ್ನು ಸೂತ್ರದಲ್ಲಿ ಹೇಳಿರುವುದು ವಿಭೂತಿಪ್ರದರ್ಶನಕ್ಕೇ ಹೊರತು ಉಪಾಸನೆಗಲ್ಲ ಎಂದು ತಿಳಿಯಬೇಕು.[1]

ವಿ —ಬೃಹದಾರಣ್ಯಕದಲ್ಲಿಯೂ (೪. ೪. ೨೨) ಛಾಂದೋಗ್ಯದಲ್ಲಿಯೂ (೮. ೧ ೧) ಹೇಳಲ್ಪಟ್ಟಿರುವ ದಹರವಿದ್ಯೆಯು ಬೇರೆಬೇರೆಯೆಂಬುದು ಪೂರ್ವಪಕ್ಷ; ಏಕೆಂದರೆ ಈ ಎರಡು ವಿದ್ಯೆಗಳಲ್ಲಿ ರೂಪಭೇದವೂ ಉಪಾಸ್ಯಭೇದವೂ ಇವೆ ರೂಪಭೇದವಿಲ್ಲದಿರುವುದರಿಂದ ವಿದ್ಯಾಭೇದವಿಲ್ಲ—ಎಂಬುದು ಸಿದ್ಧಾಂತ; ಏಕೆಂದರೆ 'ಇಲ್ಲಿ' ಮತ್ತು 'ಅಲ್ಲಿ' ಸತ್ಯಕಾಮಾದಿಗಳಿಂದ ವಿಶಿಷ್ಟನಾದ ಪರಬ್ರಹ್ಮನೇ ಉಪಾಸ್ಯನಾಗಿದ್ದಾನೆ. ಇದು ಎರಡಕ್ಕೂ ಸಮಾನವಾದ ಆಯತನದಿಂದ ತಿಳಿದುಬರುತ್ತದೆ; ಎಂದರೆ ಎರಡು ವಿದ್ಯೆಗಳಲ್ಲಿಯೂ ಪರಬ್ರಹ್ಮನು ಹೃದಯಾಯತನದಲ್ಲಿರುವನೆಂದೂ ಅವನು ಸೇತುವೆಂದೂ ಹೇಳಿದೆ. ಇದಲ್ಲದೆ ಎರಡು ವಿದ್ಯೆಗಳ ಫಲವೂ ಬ್ರಹ್ಮಪ್ರಾಪ್ತಿರೂಪವಾಗಿದೆ.

ದ್ವೈತ.—'ಸ್ವೇಚ್ಛೆಯಿಂದಲೇ ಮೂಲಸ್ಥಾನದಲ್ಲಿರುವ ಚಿತ್‌ಪ್ರಕೃತಿಯು (ಎಂದರೆ ಲಕ್ಷ್ಮೀದೇವಿಯು) ಈಶ್ವರೇಚ್ಛೆಯ ಪ್ರಕಾರ ಇತರ ಸ್ಥಾನಗಳಲ್ಲಿಯೂ ಅವತರಿಸುತ್ತಾಳೆ; ಏಕೆಂದರೆ "ಯಾವಳು ಸರ್ವಾಯತನವೋ ಸರ್ವಕಾಲವೋ ಸರ್ವೇಚ್ಛೆಯೋ ತಾನು ಬದ್ಧಳಾಗದೆ ಎಲ್ಲವನ್ನೂ ಬದ್ಧಗೊಳಿಸುವಳೋ ಅವಳು ಅವಿಕಾರಿಯಾದ ಪ್ರಕೃತಿ" ಎಂದು ವತ್ಸಶ್ರುತಿಯು ಹೇಳುತ್ತದೆ'[2]—ಎಂಬುದು ಸೂತ್ರಾರ್ಥ.

ಪ್ರಕೃತಿಗೆ ಜನ್ಮಾದಿಗಳಿರುವುದರಿಂದ ಅವಳಿಗೆ ಸಂಸಾರಪ್ರಾಪ್ತಿಯಾಗಬಹುದು; ಹೀಗಿರುವಾಗ ಅವಳನ್ನು ನಾಮಾದಿಗಳ ಪಾರದಲ್ಲಿ ಏಕೆ ಸೇರಿಸಿಲ್ಲ ?—ಎಂಬ ಸಂಶಯಕ್ಕೆ ಈ ಸೂತ್ರವು ಉತ್ತರವಾಗಿದೆ.

---

[1] ಗುಣವತಸ್ತು ಬ್ರಹ್ಮಣ ಏಕತ್ವಾದ್ವಿಭೂತಿಪ್ರದರ್ಶನಾಯಾಯಂ ಗುಣೋಪಸಂಹಾರಃ ಸೂತ್ರಿತೋ ನೋಪಾಸನಾಯೇತಿ ದ್ರಷ್ಟವ್ಯಮ್ (ಶಾ. ಭಾ.).

[2] ಸ್ವೇಚ್ಛಯೈವ ಮೂಲಸ್ಥಾನೇ ಸ್ಥಿತಾಽನ್ಯತ್ರಾವತಾರಾನ್ ಕರೋತೀಶ್ವರೇಚ್ಛಾನುಸಾರೇಣ। ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ನ ಬದ್ಧಾ ಬಂಧಕಾ ಸೈಷಾ ಪ್ರಕೃತಿರವಿಕೃತಿರಿತಿ ವತ್ಸಶ್ರುತೇಃ (ಮ. ಭಾ.).

## ೨೬. ಆದರಾಧಿಕರಣ

(ಸೂ. ೪೦—೪೧)

**ಆದರಾದಲೋಪಃ*  || ೪೦ ||**

೪೦ ಆದರವಿರುವುದರಿಂದ (ಪ್ರಾಣಾಗ್ನಿಹೋತ್ರಕ್ಕೆ) ಲೋಪವಿಲ್ಲ

ಛಾಂದೋಗ್ಯದ ವೈಶ್ವಾನರವಿದ್ಯೆಯಲ್ಲಿ (೫ ೧೯. ೧) ಯಾವ ಅನ್ನವು ಮೊದಲು ಬರುವುದೊ ಅದನ್ನು ಹೋಮಮಾಡತಕ್ಕದ್ದು—ಎಂದು ಹೇಳಿದೆ ಅಲ್ಲಿ ಐದು ಪ್ರಾಣಾಹುತಿಗಳನ್ನು ವಿಧಿಸಿದೆ. ಅನಂತರ ಈ ಆಹುತಿಗಳನ್ನು ಅಗ್ನಿಹೋತ್ರವೆಂದು ಕರೆದಿದೆ (೫. ೨೪. ೨). ಭೋಜನವಿಲ್ಲವಾದರೆ ಪ್ರಾಣಾಗ್ನಿಹೋತ್ರವೂ ಲೋಪವಾಗುವುದೊ ಅಥವಾ ಲೋಪವಾಗುವುದಿಲ್ಲವೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಪ್ರಾಣಾಗ್ನಿಹೋತ್ರವು ಲೋಪವಾಗುವುದಿಲ್ಲ ; ಏಕೆಂದರೆ ವೈಶ್ವಾನರವಿದ್ಯೆಯ ಜಾಬಾಲಶ್ರುತಿಯಲ್ಲಿ ಅತಿಥಿಭೋಜನವನ್ನು ಮೊದಲು ಮಾಡಿಸಬೇಕೆಂಬುದನ್ನು ನಿಂದಿಸಿ, ಯಜಮಾನನಿಗೆ ಮೊದಲು ಭೋಜನವಾಗಬೇಕೆಂದು ಹೇಳಿ ಪ್ರಾಣಾಗ್ನಿಹೋತ್ರದಲ್ಲಿ ಆದರವನ್ನು ತೋರಿಸುತ್ತದೆ. ಆದುದರಿಂದ ಭೋಜನಲೋಪವಾದರೂ ನೀರಿನಿಂದಲೋ ಅಥವಾ ಮತ್ತೊಂದು ದ್ರವ್ಯದಿಂದಲೊ ಪ್ರಾಣಾಗ್ನಿಹೋತ್ರವನ್ನು ಅನುಷ್ಠಿಸಬೇಕು.

**ವಿ.** - 'ಬ್ರಹ್ಮಗುಣಗಳನ್ನು ಶ್ರುತಿಯು ಆದರದಿಂದ ಹೇಳುವುದರಿಂದ ಅವುಗಳ ಲೋಪವಿಲ್ಲ' ಎಂಬುದು ಸೂತ್ರಾರ್ಥ

ವಶಿತ್ವಾದಿಗುಣಗಳೂ ಸತ್ಯಕಾಮತ್ವಾದಿಗುಣಗಳೂ ಪಾರಮಾರ್ಥಿಕವಲ್ಲ ; ಇಂಥ ಅಪಾರಮಾರ್ಥಿಕವಾದ ಗುಣಗಳನ್ನು ಮೋಕ್ಷಾರ್ಥವಾದ ಉಪಾಸನೆಗಳಲ್ಲಿ ಸೇರಿಸಕೂಡದು ಎಂಬುದು ಪೂರ್ವಪಕ್ಷ ; ಪ್ರಮಾಣಾಂತರದಿಂದ ಪ್ರಾಪ್ತವಾಗದ ಬ್ರಹ್ಮಗುಣಗಳನ್ನು ಶ್ರುತಿಯು ಆದರದಿಂದ ಹೇಳುವುದರಿಂದ ಅವುಗಳನ್ನು ಉಪಾಸನೆಗಳಲ್ಲಿ ಬಿಡಲೇಕೂಡದು ಎಂಬುದು ಸಿದ್ಧಾಂತ. **ನೇಹ ನಾನಾಸ್ತಿ ಕಿಂಚನ** (ಬೃ. ಉ. ೬. ೪. ೧೯)—ಇವೇ ಮೊದಲಾದ ಶ್ರುತಿಗಳು ಎಲ್ಲವೂ ಬ್ರಹ್ಮಕಾರ್ಯವಾಗಿರುವುದರಿಂದಲೂ ಬ್ರಹ್ಮಾತ್ಮಕವಾಗಿರುವುದರಿಂದಲೂ ನಾನಾತ್ಮದರ್ಶನವನ್ನು ನಿಷೇಧಿಸಿ, ಏಕಾತ್ಮದರ್ಶನವನ್ನು ವಿಧಿಸುತ್ತವೆ.

**ದ್ವೈ.**—'ತಾನು ಬದ್ಧಳಾಗದಿದ್ದರೂ ಭಕ್ತಿಯ ಅತಿಶಯದಿಂದ ಲಕ್ಷ್ಮೀದೇವಿಗೆ ಉಪಾಸನೆಯ ಲೋಪವಿಲ್ಲ'[1] ಎಂಬುದು ಸೂತ್ರಾರ್ಥ.

---

* ಶಾಂಕರಭಾಷ್ಯದ ಪ್ರಕಾರ ಇದು ಪೂರ್ವಪಕ್ಷದ ಸೂತ್ರವಾಗಿದೆ.

1 ಅಬದ್ಧತ್ವೇಽಪಿ ಭಕ್ತಿವಿಶೇಷಾದೇವೋಪಾಸನಾದ್ಯಲೋಪಸ್ತಸ್ಯಾ ಭವತಿ (ಮ. ಭಾ.).

## ಉಪಸ್ಥಿತೇಽತಸ್ತದ್ವಚನಾತ್ ॥ ೪೧ ॥

೪೧. (ಭೋಜನವು) ಉಪಸ್ಥಿತವಾದಾಗ ಅದರಿಂದಲೇ (ಪ್ರಾಣಾಗ್ನಿಹೋತ್ರವನ್ನು ಮಾಡಬೇಕು) ; ಏಕೆಂದರೆ ಆ ವಚನವಿದೆ.

**ಸಿದ್ಧಾಂತಿ**—ಭೋಜನವು ಉಪಸ್ಥಿತವಾಗಿರುವಾಗ ಆ ಭೋಜನದ್ರವ್ಯದಿಂದಲೇ ಪ್ರಾಣಾಗ್ನಿಹೋತ್ರವನ್ನು ಮಾಡಬೇಕು. ಏಕೆಂದರೆ ವಚನವಿದೆ. 'ಹೀಗಿರುವಾಗ ಯಾವ ಅನ್ನವು ಮೊದಲು ಬರುವುದೊ ಅದನ್ನು ಹೋಮಮಾಡತಕ್ಕದ್ದು'[1] (ಛಾಂ. ಉ. ೫. ೧೯. ೧); ಆದುದರಿಂದ ಭೋಜನಕ್ಕಾಗಿರುವ ದ್ರವ್ಯದಿಂದಲೇ ಪ್ರಾಣಾಹುತಿಗಳನ್ನು ಮಾಡಬೇಕು ಹೀಗಿರುವಾಗ ಭೋಜನವು ಲೋಪವಾದರೆ ಪ್ರಾಣಾಗ್ನಿಹೋತ್ರಕ್ಕೂ ಲೋಪವೇ. ಇಲ್ಲಿ ಪ್ರಕೃತಿ ಎನಿಸಿದ ಅಗ್ನಿಹೋತ್ರದ ಧರ್ಮಗಳೂ ಇಲ್ಲ. ಮತ್ತೆ ಪ್ರಾಣಾಗ್ನಿಹೋತ್ರವು ನಿರ್ದಿಷ್ಟಕಾಲದ ಭೋಜನಕ್ಕೆ ಸಂಬಂಧಪಟ್ಟಿರುವುದರಿಂದ ಅಗ್ನಿಹೋತ್ರದ ಕಾಲಕ್ಕೆ ಅದನ್ನು ನಿರ್ಬಂಧಿಸಬೇಕಾಗಿಲ್ಲ ಆದರೆ-ಶ್ರುತಿಯು ಯಜಮಾನನ ಭೋಜನವು ಮೊದಲಾಗಬೇಕು—ಎಂಬುದನ್ನು ತಿಳಿಸುವುದಕ್ಕ ಬಂದಿದೆಯೇ ಹೊರತು ಈ ಅಗ್ನಿಹೋತ್ರವು ನಿತ್ಯವೆಂದು ತಿಳಿಸಲು ಬಂದಿಲ್ಲ. ಆದುದರಿಂದ ಭೋಜನವು ಲೋಪವಾದರೆ ಪ್ರಾಣಾಗ್ನಿಹೋತ್ರಕ್ಕೂ ಲೋಪವೇ

**ವಿ.**—'ಜೀವನು ಪರಬ್ರಹ್ಮನ ಸಾನ್ನಿಧ್ಯವನ್ನು ಹೊಂದುವುದರಿಂದಲೇ ಅವನಿಗೆ ಸರ್ವಲೋಕಗಳ ಪ್ರಾಪ್ತಿಯಿದೆ ಎಂದು ಶ್ರುತಿಯು ಹೇಳುತ್ತದೆ'—ಎಂಬುದು ಸೂತ್ರಾರ್ಥ.

**ವಿ.**—ಸಗುಣಬ್ರಹ್ಮೋಪಾಸನೆಯಿಂದ ಮೋಕ್ಷವಾಗುವುದಿಲ್ಲ; ಏಕೆಂದರೆ 'ಅವನು ಪಿತೃಲೋಕವನ್ನು ಬಯಸುವವನಾದರೆ ಅವನ ಸಂಕಲ್ಪದಿಂದಲೇ ಪಿತೃಗಳು ಏಳುತ್ತಾರೆ' (ಛಾಂ. ಉ. ೮. ೨. ೧) ಎಂಬ ಸಾಂಸಾರಿಕಫಲವಿದೆ ; ಆದುದರಿಂದ ಬ್ರಹ್ಮವನ್ನು ಬಯಸುವವನು ಸತ್ಯಕಾಮತ್ವಾದಿಗುಣಗಳನ್ನು ಉಪಾಸನೆಯಲ್ಲಿ ಉಪಸಂಹರಿಸಕೂಡದು—ಎಂಬುದು ಪೂರ್ವಪಕ್ಷ. ಸಿದ್ಧಾಂತವು ಹೀಗಿದೆ ಸರ್ವಬಂಧನಿರ್ಮುಕ್ತನಾದ ಜೀವನು ತನ್ನ ನಿಜವಾದ ಸ್ವರೂಪದ ಆವಿರ್ಭಾವವನ್ನು ಪಡೆದು ಪರಬ್ರಹ್ಮನ ಸಾನ್ನಿಧ್ಯವನ್ನು ಹೊಂದುವುದರಿಂದಲೇ ಸರ್ವಲೋಕಗಳಲ್ಲಿ ಸಂಚರಿಸಲು ಶಕ್ತನಾಗುತ್ತಾನೆ; ಏಕೆಂದರೆ ಶ್ರುತಿಯು (ಛಾಂ. ಉ. ೮. ೧೨. ೩) ಹೀಗೆ ಹೇಳುತ್ತದೆ. ಸರ್ವಲೋಕಗಳ ಸ್ವತಂತ್ರಗತಿಯು ಮುಕ್ತನಿಗೆ ಭೋಗ್ಯಫಲವಾಗಿರುವುದರಿಂದ ಸತ್ಯಕಾಮತ್ವಾದಿಗುಣಗಳನ್ನು ಉಪಸಂಹರಿಸಿಕೊಳ್ಳಬೇಕು.

**ದ್ವೈ.**—'ಲಕ್ಷ್ಮೀದೇವಿಯು ಭಗವಂತನ ಸಮೀಪದಲ್ಲಿ ನಿತ್ಯವೂ ಇರುವುದರಿಂದ ಅವಳಿಗೆ ನಿತ್ಯಮುಕ್ತತ್ವವು ಹೊಂದುತ್ತದೆ;[2] ಇದನ್ನೇ **ದ್ವಾವೇತಾವನಾದಿನಿತ್ಯಾವನಾದಿಮುಕ್ತೌ** ಎಂಬ ಗೌಪವನ-ಶ್ರುತಿಯು ತಿಳಿಸುತ್ತದೆ' ಎಂಬುದು ಸೂತ್ರಾರ್ಥ.

---

[1] ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಮ್ ।

[2] ಅನಾದಿಕಾಲಭಗವತ್ಸಂಬಂಧಿತ್ವಾದ್ಯುಜ್ಯತೇ ಚ ನಿತ್ಯಮುಕ್ತತ್ವಮ್ (ಮ. ಭಾ.).

## ೨೭. ತನ್ನಿರ್ಧಾರಣಾಧಿಕರಣ

**ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಮ್ ॥ ೪೨ ॥**

೪೨. ಅವುಗಳ ನಿರ್ಧಾರಣೆಗಳ ನಿಯಮವಿಲ್ಲ; ಏಕೆಂದರ ಹಾಗೆ (ಶ್ರುತಿಯಲ್ಲಿ) ನೋಡಲ್ಪಟ್ಟಿದೆ ಅಪ್ರತಿಬಂಧವೆಂಬ ಬೇರೆಯ ಫಲವೂ ಇದೆ.

ಕರ್ಮಾಂಗಗಳನ್ನು ಆಶ್ರಯಿಸಿಕೊಂಡಿರುವ 'ಉದ್ಗೀಥಶಬ್ದವಾಚ್ಯವಾದ ಓಂ ಎಂಬ ಈ ಅಕ್ಷರವನ್ನು ಉಪಾಸಿಸಬೇಕು'[1] (ಛಾಂ. ಉ. ೧. ೧. ೧) ಎಂಬ ಇವೇ ಮೊದಲಾದ ಉಪಾಸನೆಗಳಿವೆ. ಅವು ಪರ್ಣಮರದ ಜುಹೂ-ಚಮಚದ ಹಾಗೆ ಕರ್ಮಗಳಲ್ಲಿ ನಿತ್ಯವಾಗಿರ ಬೇಕೊ ಅಥವಾ ಗೋದೋಹನ-ಪಾತ್ರೆಯಂತೆ ಅನಿತ್ಯವೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಈ ಉಪಾಸನೆಗಳು ಕರ್ಮಗಳಲ್ಲಿ ನಿತ್ಯವಾಗಿ ಸಂಬದ್ಧವಾಗಿವೆ; ಏಕೆಂದರೆ ಇವು ಯಾವ ಕ್ರತುವಿಶೇಷಕ್ಕೂ ಒಳಗಾಗದಿದ್ದರೂ ಉದ್ಗೀಥಾದಿಗಳ ದ್ವಾರ ದಿಂದ ಕ್ರತುಸಂಬಂಧವಾಗಿರುವುದರಿಂದ ಕ್ರತುಪ್ರಯೋಗವಚನದಿಂದಲೇ ಇತರ ಅಂಗ ಗಳಂತೆ ಸಂಬಂದ್ಧವಾಗಿವೆ. ಇವುಗಳಿಗೆ 'ಅವನು ಕಾಮುಗಳನ್ನು ಪಡೆಯಿಸುವವನಾಗು ತ್ತಾನೆ' (ಛಾಂ. ಉ. ೧. ೧. ೭) ಮೊದಲಾದ ಫಲಶ್ರವಣವಿದ್ದರೆ ಅವು ಅರ್ಥವಾದವೇ ಹೊರತು ಫಲಪ್ರಧಾನವಲ್ಲ. ಆದುದರಿಂದ ಉದ್ಗೀಥಾದಿ-ವಿದ್ಯೆಗಳಿಗೆ ನಿತ್ಯತ್ವವು ಸಿದ್ಧ ವಾಗುತ್ತದೆ.

**ಸಿದ್ಧಾಂತಿ**—ಅವುಗಳ ನಿರ್ಧಾರಣೆಗಳ ನಿಯಮವಿಲ್ಲ; ಎಂದರೆ ಉದ್ಗೀಥಾದಿ-ಕರ್ಮಗುಣಗಳ ಯಾಥಾತ್ಮ್ಯವನ್ನು ನಿರ್ಧರಿಸುವ 'ಉದ್ಗೀಥವು ರಸತಮ' (ಛಾಂ. ಉ. ೧. ೧. ೩), 'ಅವನು ಕಾಮಗಳನ್ನು ಪಡೆಯಿಸುವವನು' (ಛಾಂ. ಉ ೧. ೧. ೭), 'ಸಮೃದ್ಧಿ' (ಛಾಂ. ಉ. ೧. ೧. ೮) 'ಮುಖ್ಯಪ್ರಾಣ' (ಛಾಂ. ಉ. ೧. ೨. ೭) 'ಆದಿತ್ಯ' (ಛಾಂ. ಉ. ೧. ೩. ೧)—ಇವೇ ಮೊದಲಾದ ದೃಢವಚನಗಳು ಕರ್ಮಗಳಲ್ಲಿ ನಿತ್ಯವಾಗಿ ನಿಯತವಾಗಿರುವುದಿಲ್ಲ; ಏಕೆಂದರೆ ಇವು ಅನಿಯತವೆಂದು ಶ್ರುತಿಯು ಹೇಳುತ್ತದೆ. 'ಯಾವನು ಈ ಅಕ್ಷರವನ್ನು ಹೀಗೆ ಅರಿತಿರುವನೊ ಮತ್ತು ಯಾವನು ಅರಿತಿಲ್ಲವೊ—ಇಬ್ಬರೂ ಆ ಅಕ್ಷರದ ಮೂಲಕ ಕರ್ಮವನ್ನು ಮಾಡುತ್ತಾರೆ'[2] (ಛಾಂ. ಉ. ೧. ೧. ೧೦). ಇದಲ್ಲದೆ ಇಂಥ ಕರ್ಮಾಶ್ರಯವಾದ ಉಪಾಸನೆಗೆ ಕರ್ಮಫಲಕ್ಕಿಂತಲೂ ಬೇರೆ ಫಲವನ್ನು

---

1. ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ।

2. ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ ।

ಹೇಳಿದೆ. ಕರ್ಮಫಲವು ಸಿದ್ಧಿಸುವುದಕ್ಕೆ ಅಪ್ರತಿಬಂಧ, ಎಂದರೆ ಅದರ ಸಮೃದ್ಧಿ, ಎಂದರೆ ಒಂದು ಅತಿಶಯವಿಶೇಷ. ಗೋದೋಹನಾದಿಗಳಿಗೆ ನೀರನ್ನು ತುಂಬಿಸಿಕೊಂಡುಹೋಗು ವುದು (ಅಪ್ಪ್ರಣಯನ) ಮೊದಲಾದುವುಗಳ ಆಶ್ರಯವಿರುವುದರಿಂದ ಫಲಸಂಬಂಧವು ಹೊಂದುತ್ತದೆ. ವರ್ಣಸಾರದ ಚಮಸ ಮೊದಲಾದವು ಕ್ರಿಯಾತ್ಮಕವಲ್ಲದುದರಿಂದ ಆಶ್ರಯವಿಲ್ಲದೆ ಫಲಸಂಬಂಧವನ್ನು ಹೊಂದುವುದಿಲ್ಲ. ಆದರೆ ಉಪಾಸನೆಗಳು ಕ್ರಿಯಾ ರೂಪವಾಗಿರುವುದರಿಂದ ಅವುಗಳಿಗೆ ವಿಶೇಷಫಲವನ್ನು ವಿಧಿಸಬಹುದು. ಆದುದರಿಂದ ಹೇಗೆ ಗೋದೋಹನಾದಿಗಳು ಕ್ರತ್ವಾಶ್ರಯವಾಗಿದ್ದರೂ ತಮ್ಮದೇ ಆದ ಫಲಸಂಯೋಗ ದಿಂದ ಕರ್ಮಗಳಲ್ಲಿ ಅನಿತ್ಯವೊ ಹಾಗೆಯೇ ಉದ್ಗೀಥಾದಿ-ಉಪಾಸನೆಗಳೂ ಅನಿತ್ಯವೇ. ಆದುದರಿಂದಲೇ ಕಲ್ಪಸೂತ್ರಕಾರರು ಇಂಥ ಉಪಾಸನೆಗಳನ್ನು ಕ್ರತುಗಳಲ್ಲಿ ಸೇರಿಸಿ ಕೊಂಡಿಲ್ಲ.

ವಿ.—ಉದ್ಗೀಥಾದಿ-ಉಪಾಸನೆಗಳು ಕರ್ಮಗಳಿಗೆ ನಿಯಮದಿಂದ ಸಂಬಂಧಿಸಿಲ್ಲ.

**ದ್ವೈ.**—'ತತ್ತ್ವನಿಶ್ಚಯ, ವೇದಾರ್ಥನಿಶ್ಚಯ—ಇವು ಪರಬ್ರಹ್ಮನ ಅಪರೋಕ್ಷ-ಜ್ಞಾನದಿಂದ ಭಿನ್ನವೇ; ಇವುಗಳ ಫಲ ಬ್ರಹ್ಮದರ್ಶನಕ್ಕೆ ಅಡ್ಡಿಯಾಗಿರುವ ಪ್ರತಿಬಂಧಗಳ ನಿವೃತ್ತಿ'[1] ಎಂಬುದು ಸೂತ್ರಾರ್ಥ.

ಸೂತ್ರದಲ್ಲಿರುವ ಹಿ-ಶಬ್ದವು **ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ** (ಬೃ ಉ. ೨. ೪. ೫) ಎಂಬ ಶ್ರುತಿಯನ್ನು ಸೂಚಿಸು ತ್ತದೆ. ಬ್ರಹ್ಮಸಾಕ್ಷಾತ್ಕಾರಕ್ಕೆ ಅಡ್ಡಿಯಾಗಿರುವ ಅಜ್ಞಾನ-ವಿಪರ್ಯಯಾದಿಗಳ ನಿವೃತ್ತಿಯು ಶ್ರವಣಾದಿಗಳ ಫಲ.

---

[1] **ತತ್ತ್ವನಿಶ್ಚಯೋ ವೇದಾರ್ಥನಿಯಮಶ್ಚ ಬ್ರಹ್ಮದೃಷ್ಟೇಃ ಪೃಥಗೇವ (ಮ. ಭಾ.).**

## ೨೮. ಪ್ರದಾನಾಧಿಕರಣ

### ಪ್ರದಾನವದೇವ ತದುಕ್ತಮ್ ॥ ೪೩ ॥

೪೩. ಪ್ರದಾನದಂತೆಯೇ (ವಾಯು-ಪ್ರಾಣಗಳ ಉಪಾಸನೆಗಳು ಬೇರೆ ಬೇರೆ) ; ಅದನ್ನು (ಸಂಕರ್ಷ-ಕಾಂಡದಲ್ಲಿ) ಹೇಳಿದೆ

ವಾಜಸನೇಯಕದಲ್ಲಿ 'ನಾನು ಮಾತನಾಡುತ್ತಲೇ ಇರುವೆನು ಎಂದು ವಾಕ್ಕು ನಿರ್ಧರಿಸಿತು'[1] (ಬೃ. ಉ. ೧. ೫. ೨೧) ಎಂದು ಪ್ರಾರಂಭವಾಗುವ ಭಾಗವು ವಾಗಾದಿಗಳಲ್ಲಿ ಪ್ರಾಣವು ಶ್ರೇಷ್ಠವೆಂದು ಅಧ್ಯಾತ್ಮವಾಗಿ ನಿಶ್ಚಯಿಸಿದೆ; ಅಗ್ನ್ಯಾದಿಗಳಲ್ಲಿ ವಾಯು ಶ್ರೇಷ್ಠವೆಂದು ಅಧಿದೈವತವಾಗಿ ನಿಶ್ಚಯಿಸಿದೆ. ಹೀಗೆಯೇ ಛಾಂದೋಗ್ಯದಲ್ಲಿ 'ವಾಯುವೇ ಸಂವರ್ಗ'[2] (ಛಾಂ. ಉ. ೪. ೩. ೧) ಎಂಬಲ್ಲಿ ವಾಯು ಸಂವರ್ಗವೆಂದು ಅಧಿದೈವತವಾಗಿ ನಿಶ್ಚಯಿಸಿದೆ; 'ಪ್ರಾಣವೇ ಸಂವರ್ಗ'[3] (ಛಾಂ. ಉ. ೪. ೩. ೩) ಎಂಬಲ್ಲಿ ಪ್ರಾಣವು ಸಂವರ್ಗವೆಂದು ಅಧ್ಯಾತ್ಮವಾಗಿ ನಿಶ್ಚಯಿಸಿದೆ. ಈ ವಾಯು-ಪ್ರಾಣಗಳನ್ನು ಬೇರೆಬೇರೆಯಾಗಿ ಉಪಾಸಿಸಬೇಕೊ ಅಥವಾ ಒಟ್ಟಿಗೆ ಉಪಾಸಿಸಬೇಕೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಒಟ್ಟಿಗೆ ಉಪಾಸನೆಮಾಡಬೇಕು; ಏಕೆಂದರೆ ತತ್ತ್ವವು ಒಂದೇ ಆಗಿರುವುದು. ತತ್ತ್ವವು ಅಭಿನ್ನವಾಗಿರುವಾಗ ಬೇರೆಬೇರೆಯಾಗಿ ಅನುಚಿಂತನಮಾಡುವುದು ಸರಿಯಲ್ಲ. ಪ್ರಾಣ-ವಾಯುಗಳು ಅಧ್ಯಾತ್ಮವಾಗಿಯು ಅಧಿದೈವತವಾಗಿಯೂ ಒಂದೇ ತತ್ತ್ವವೆಂದು ಶ್ರುತಿಗಳು ಹೇಳುತ್ತವೆ[4] ಸಂವರ್ಗವು ಎಲ್ಲರಿಗೂ ಒಂದೇ ಎಂಬುದು ಛಾಂದೋಗ್ಯದ ಅಭಿಪ್ರಾಯ.

**ಸಿದ್ಧಾಂತಿ**—ಪ್ರಾಣ-ವಾಯುಗಳನ್ನು ಬೇರೆ ಬೇರೆಯಾಗಿಯೇ ಉಪಾಸಿಸಬೇಕು; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ. ಉಪಾಸನೆಯನ್ನು ಬೇರೆಯಾಗಿ ಮಾಡದಿದ್ದರೆ ಅಧ್ಯಾತ್ಮ, ಅಧಿದೈವ—ಎಂದು ಧ್ಯಾನಕ್ಕಾಗಿ ಮಾಡಿರುವ ಉಪದೇಶವು ವ್ಯರ್ಥವಾಗುತ್ತದೆ. ತತ್ತ್ವದಲ್ಲಿ ಭೇದವಿಲ್ಲದಿದ್ದರೂ ಅವಸ್ಥೆಯಲ್ಲಿ ಭೇದವಿರುವುದರಿಂದ ಅನುಚಿಂತನೆಗಳು ಬೇರೆಬೇರೆಯಾಗಿರಬಹುದು.[5] ಇದು ಪ್ರದಾನದ ಹಾಗೆ. 'ಇಂದ್ರರಾಜನಿಗೆ

---

[1] ವದಿಷ್ಯಾಮ್ಯೇವಾಹಮಿತಿ ವಾಗ್ದಧ್ರೇ ।

[2] ವಾಯುರ್ವಾವ ಸಂವರ್ಗಃ ।

[3] ಪ್ರಾಣೋ ವಾವ ಸಂವರ್ಗಃ ।

[4] 'ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು' (ಐ. ಆ. ೨. ೪) ; ಬೃ. ಉ. ೧. ೧೫. ೩ ನೋಡಿ.

[5] ತತ್ತ್ವಾಭೇದೇಽಪ್ಯವಸ್ಥಾಭೇದಾದುಪದೇಶಭೇದವಶೇನಾನುಚಿಂತನಭೇದೋಪಪತ್ತೇಃ (ಸೂ. ಭಾ.).

ಹನ್ನೊಂದು ಕಪಾಲದ ಪುರೋಡಾಶವನ್ನು, ಇಂದ್ರ ಅಧಿರಾಜನಿಗೆ, ಇಂದ್ರ ಸ್ವರಾಜನಿಗೆ'[1] (ತೈ. ಸಂ. ೨. ೩. ೬) ಎಂದು ಮೂರು ಪುರೋಡಾಶಗಳ ಇಷ್ಟಿಯಲ್ಲಿ ಇಂದ್ರನು ಒಬ್ಬನೇ ಆಗಿದ್ದರೂ ರಾಜ, ಅಧಿರಾಜ, ಸ್ವರಾಜ—ಎಂಬ ಗುಣಗಳು ಬೇರೆಬೇರೆಯಾಗಿರುವುದರಿಂದ ಪ್ರದಾನವು ಬೇರೆಬೇರೆಯಾಗಿರುತ್ತದೆ. ಹಾಗೆಯೇ ಇಲ್ಲಿಯೂ ಕೂಡ ಪ್ರಾಣ-ವಾಯುಗಳು ಒಂದೇ ತತ್ತ್ವವಾಗಿದ್ದರೂ ಧ್ಯೇಯದ ಅಂಶಗಳು ಬೇರೆಬೇರೆಯಾಗಿರುವುದರಿಂದ ಉಪಾಸನೆಗಳೂ ಬೇರೆಬೇರೆಯಾಗಿರುತ್ತವೆ ಇದನ್ನೇ ಸಂಕರ್ಷ-ಕಾಂಡದಲ್ಲಿ ಹೇಳಿದೆ (ದೇವತೆಗಳು) ಬೇರೆಬೇರೆಯಾಗಿ ಕಾಣುವುದರಿಂದ ದೇವತೆಗಳು ಬೇರೆಬೇರೆಯೇ.'[2]

**ವಿ.**—ಛಾಂದೋಗ್ಯದ ದಹರವಿದ್ಯೆಯಲ್ಲಿ (೮. ೧) ದಹರಾಕಾಶನಾದ ಪರಮಾತ್ಮನ ಉಪಾಸನೆಯನ್ನು ಮೊದಲು ಹೇಳಿ, ಅನಂತರ ಅವನ ಗುಣಗಳ ಉಪಾಸನೆಯನ್ನು ಹೇಳಿದೆ. ಈ ಗುಣಚಿಂತನವನ್ನು ಮಾಡುವಾಗ ಆ ಗುಣಗಳಿಂದ ವಿಶಿಷ್ಟನಾದ ಪರಮಾತ್ಮನನ್ನೂ ಬೇರೆಯಾಗಿ ಉಪಾಸಿಸಬೇಕೊ ಅಥವಾ ಕೂಡದೊ ?—ಎಂಬುದು ಸಂಶಯ. ಪರಮಾತ್ಮನನ್ನು ಬೇರೆಯಾಗಿ ಉಪಾಸಿಸುವ ಆವಶ್ಯಕತೆಯಿಲ್ಲ—ಎಂಬುದು ಪೂರ್ವಪಕ್ಷ ; ಏಕೆಂದರೆ ಆ ಗುಣಗಳಿಂದ ವಿಶಿಷ್ಟನಾದ ಪರಮಾತ್ಮನನ್ನು ಒಂದೇ ಧ್ಯಾನದಲ್ಲಿ ಅನುಸಂಧಾನಮಾಡಬಹುದು. ಉಪಾಸನೆಯಲ್ಲಿ ಆವೃತ್ತಿಯು ಆವಶ್ಯಕವೆಂಬುದು ಸಿದ್ಧಾಂತ ; ಏಕೆಂದರೆ ಪರಮಾತ್ಮನ ಸ್ವರೂಪಕ್ಕೂ ಗುಣವಿಶಿಷ್ಟವಾದ ಅವನ ಆಕಾರಕ್ಕೂ ಭೇದವಿದೆ. ಮೊದಲು ಪರಮಾತ್ಮನನ್ನು ಚಿಂತಿಸಬೇಕು, ಅನಂತರ ಅವನ ಕಲ್ಯಾಣಗುಣಗಳ ಉಪಾಸನಾಕ್ರಮದಲ್ಲಿ ಆವೃತ್ತಿಯಿದೆ. ಪ್ರದಾನಾಹುತಿಗಳಲ್ಲಿ ಹೇಗೆ ಪ್ರತ್ಯೇಕವಾಗಿ ಆವರ್ತನಮಾಡತಕ್ಕದ್ದೊ ಹಾಗೆಯೇ ಇಲ್ಲಿಯೂ.

**ದ್ವೈ.**—'ಶ್ರವಣಾದಿಗಳು ಗುರೂಪದೇಶರೂಪವಾದ ದಾನದಿಂದಲೇ ದೃಷ್ಟಾದೃಷ್ಟಫಲವನ್ನು ಕೊಡುತ್ತವೆ ; ಏಕೆಂದರೆ ಶ್ರುತಿಯಲ್ಲಿ ಹಾಗೆ ಹೇಳಿದೆ' ಎಂಬುದು ಸೂತ್ರಾರ್ಥ.

'ಆಚಾರ್ಯನನ್ನು ಪಡೆದ ಮನುಷ್ಯನೇ (ಪರಬ್ರಹ್ಮನನ್ನು) ಅರಿತುಕೊಳ್ಳುತ್ತಾನೆ' (ಛಾಂ. ಉ. ೬. ೧೪. ೨) ಎಂದು ಶ್ರುತಿಯು ಹೇಳುತ್ತದೆ

---

[1] ಇಂದ್ರಾಯ ರಾಜ್ಞೇ ಪುರೋಡಾಶಮೇಕಾದಶಕಪಾಲಮಿಂದ್ರಾಯಾಧಿರಾಜಾಯೇಂದ್ರಾಯ ಸ್ವರಾಜ್ಞೇ ।

[2] ನಾನಾ ವಾ ದೇವತಾ ಪೃಥಗ್ಜ್ಞಾನಾತ್ ।

# ೨೯. ಲಿಂಗಭೂಯಸ್ತ್ವಾಧಿಕರಣ*

(ಸೂ. ೪೪–೫೨)

**ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ || ೪೪ ||**

೪೪ ಲಿಂಗಗಳು ಬಹುವಾಗಿರುವುದರಿಂದ (ಮಾನಸಾಗ್ನಿಗಳು ಸ್ವತಂತ್ರವಾಗಿವೆ); ಅದು (ಎಂದರೆ ಲಿಂಗವು ಪ್ರಾಣಕ್ಕಿಂತ) ಬಲೀಯವಾಗಿದೆ; ಅದನ್ನೂ (ಪೂರ್ವಮೀಮಾಂಸೆಯಲ್ಲಿ ಹೇಳಿದೆ).

ವಾಜಸನೇಯಿಗಳ ಅಗ್ನಿರಹಸ್ಯದಲ್ಲಿ ಮನಸ್ಸನ್ನು ಕುರಿತು ಹೀಗೆ ಹೇಳಿದೆ. 'ಅದು ಮನೋಮಯವಾದ, ಮನಸ್ಸಿನಿಂದ ಮಾಡಲ್ಪಟ್ಟ, ತನಗೆ ಸೇರಿದ ಮೂವತ್ತಾರು ಸಾವಿರ ಅಗ್ನಿಗಳನ್ನು ನೋಡಿತು.'[1] ಹೀಗೆಯೇ ವಾಕ್ಕು, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಕರ್ಮ ಅಗ್ನಿ—ಇವುಗಳಿಂದ ರಚಿತವಾದ ಅಗ್ನಿಗಳನ್ನು ಹೇಳಿದೆ ಈ ಮಾನಸಾಗ್ನಿಗಳು ಕ್ರಿಯೆಗೆ ಸಂಬಂಧಪಟ್ಟು ಅದಕ್ಕೆ ಶೇಷವಾಗಿರುವುವೊ ಅಥವಾ ಸ್ವತಂತ್ರವಾಗಿ ಕೇವಲ ಉಪಾಸಾತ್ಮಕವಾಗಿರುವುವೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಇದು ಅಗ್ನಿಪ್ರಕರಣವಾದುದರಿಂದ ಅಗ್ನಿಗಳು ಕ್ರಿಯೆಗೆ ಸಂಬಂಧಪಟ್ಟಿವೆ.

**ಸಿದ್ಧಾಂತಿ**—ಅಗ್ನಿಗಳು ಸ್ವತಂತ್ರವಾದುವುಗಳು ಎಂದು ಸೂತ್ರಕಾರರು ಪ್ರತಿಜ್ಞೆ ಮಾಡುತ್ತಾರೆ; ಈ ಅಗ್ನಿಗಳು ಉಪಾಸಾತ್ಮಕಗಳು ಎಂಬುದಕ್ಕೆ ಈ ಬ್ರಾಹ್ಮಣದಲ್ಲಿ ಅನೇಕ ಲಿಂಗಗಳಿವೆ. 'ಈ ಭೂತಗಳು ಮನಸ್ಸಿನಿಂದ ಏನೇನನ್ನು ಸಂಕಲ್ಪಿಸುತ್ತವೆಯೊ ಅವುಗಳ ಕೃತಿಯೇ ಅದು'[2] (ಶ. ಬ್ರಾ. ೩. ೩), 'ಯಾವನು ಹೀಗೆ ಅರಿತುಕೊಂಡಿರುವನೊ ಅವನಿಗೆ ಸರ್ವದಾ ಭೂತಗಳೆಲ್ಲ—ಅವನು ನಿದ್ರಿಸುತ್ತಿದ್ದರೂ—ಅಗ್ನಿಗಳನ್ನು ರಚಿಸುತ್ತವೆ'[3] (ಶ. ಬ್ರಾ. ೧೦. ೫. ೩. ೧೨) ಇತ್ಯಾದಿ. ಈ ಲಿಂಗವು ಪ್ರಕರಣಕ್ಕಿಂತ ಬಲೀಯವಾಗಿದೆ. ಇದನ್ನು ಪೂರ್ವಮೀಮಾಂಸೆಯಲ್ಲಿಯೂ (ಜೈ. ಸೂ. ೩. ೩. ೧೩) ಹೇಳಿದೆ: 'ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯೆಗಳು ಸೇರಿಕೊಂಡಿರುವಾಗ (ಹಿಂದಿನದಕ್ಕಿಂತ)

---

* ಶ್ರೀಭಾಷ್ಯದಲ್ಲಿ ಈ ಅಧಿಕರಣಕ್ಕೆ ಇದೊಂದೇ ಸೂತ್ರವಿದೆ. ಮಧ್ವಭಾಷ್ಯದಲ್ಲಿ ಇದು ಗುರುಪ್ರಸಾದಾಧಿಕರಣ ಎನಿಸಿ ಒಂದೇ ಸೂತ್ರವನ್ನು ಒಳಕೊಂಡಿದೆ.

1 ತತ್ ಷಟ್ತ್ರಿಂಶತ್ಸಹಸ್ರಾಣ್ಯಪಶ್ಯದಾತ್ಮನೋಽಗ್ನೀನರ್ಕಾನ್ ಮನೋಮಯಾನ್ ಮನಶ್ಚಿತಃ ।

2 ತದ್ಯತ್ ಕಿಂಚೇಮಾನಿ ಭೂತಾನಿ ಮನಸಾ ಸಂಕಲ್ಪಯಂತಿ ತೇಷಾಮೇವ ಸಾ ಕೃತಿಃ ।

3 ತಾನ್ ಹೈತಾನೇವಂವಿದೇ ಸರ್ವದಾ ಸರ್ವಾಣಿ ಭೂತಾನಿ ಚಿನ್ವಂತ್ಯಪಿ ಸ್ವಪತೇ ।

ಮುಂದಿನದು ದುರ್ಬಲವಾಗುತ್ತದೆ: ಏಕೆಂದರೆ ಅವಕ್ಕೆ ಅರ್ಥವು ದೂರವಾಗಿರುತ್ತದೆ.'[1]

**ವಿ.**—ತೈತ್ತಿರೀಯದಲ್ಲಿ ಬೇರೊಂದು ದಹರವಿದ್ಯೆಯಿದೆ;[2] ಇದು ಹಿಂದಿನ ಅನುವಾಕದಲ್ಲಿ (೧೨) ಹೇಳಿದ ದಹರವಿದ್ಯೆಯೊಂದಿಗೆ[3] ಏಕವಾಗಿರುವುದರಿಂದ ಆ ವಿದ್ಯೆಯಲ್ಲಿ ಹೇಳಿರುವ ಗುಣಗಳನ್ನು ಉಪಾಸನೆಯಲ್ಲಿ ಸೇರಿಸಿಕೊಳ್ಳಬೇಕೊ? ಅಥವಾ ಸರ್ವವಿದ್ಯೆಗಳಲ್ಲಿ ಹೇಳಿದ ಪರಮಾತ್ಮನ ಗುಣಗಳನ್ನು ಸೇರಿಸಿಕೊಳ್ಳಬೇಕೊ?—ಎಂಬುದು ಸಂಶಯ. ಪ್ರಕರಣವು ದಹರವಿದ್ಯೆಯಾದುದರಿಂದ ಹಿಂದಿನದಕ್ಕೆ ಸೇರಿಸಿಕೊಳ್ಳಬೇಕು—ಎಂಬುದು ಪೂರ್ವಪಕ್ಷ. ಸಿದ್ಧಾಂತ ಹೀಗಿದೆ: ಸಮಸ್ತ ಉಪಾಸನೆಗಳಲ್ಲಿಯೂ ಉಪಾಸ್ಯನಾಗಿರುವ ಪರಬ್ರಹ್ಮನ ಲಕ್ಷಣಗಳನ್ನು ನಿರ್ಧಾರ ಮಾಡಲು ಈ ಅನುವಾಕವು ಬಂದಿದೆ ಎಂಬುದನ್ನು ತಿಳಿಸಲು ಅನೇಕ ಲಿಂಗಗಳಿವೆ. ಅಕ್ಷರ, ಶಿವ, ಶಂಭು, ಪರಬ್ರಹ್ಮ, ಪರಂಜ್ಯೋತಿ, ಪರತತ್ತ್ವ, ಪರಮಾತ್ಮ—ಎಂಬ ಹೆಸರುಗಳಿಂದ ಆಯಾ ವಿದ್ಯೆಗಳಲ್ಲಿ ಹೇಳಲ್ಪಟ್ಟ ಉಪಾಸ್ಯವೇ ಇಲ್ಲಿಯೂ ಅದೇ ಶಬ್ದಗಳಿಂದ ಹೇಳಲ್ಪಟ್ಟು, ಕೊನೆಗೆ ಅದೇ ನಾರಾಯಣನೆಂದು ಹೇಳಿದೆ.[4] ಸಮಸ್ತವಿದ್ಯೆಗಳಲ್ಲಿಯೂ ಉಪಾಸ್ಯನಾದ ಪರಬ್ರಹ್ಮನೇ ನಾರಾಯಣ ಎಂಬುದಕ್ಕೆ ಅನೇಕ ಲಿಂಗಗಳಿವೆ. ಇಲ್ಲಿ 'ಲಿಂಗ' ಎಂದರೆ ಚಿಹ್ನೆಗಳನ್ನೊಳಗೊಂಡ ವಾಕ್ಯ-ಪೂರ್ವಮೀಮಾಂಸೆಯ ಪ್ರಕಾರ ಪ್ರಕರಣಕ್ಕಿಂತ ಲಿಂಗಕ್ಕೆ ಹೆಚ್ಚು ಬಲವಿದೆ. ಆದುದರಿಂದ ಇದು ದಹರವಿದ್ಯೆಗೆ ಸಂಬಂಧಿಸಿಲ್ಲ.

**ದ್ವೈ.**—'ಲಿಂಗವು ಬಹುವಾಗಿರುವುದರಿಂದ ಅದು ಬಲಿಷ್ಠವಾಗಿದೆ; (ಆದರೂ) ಶ್ರವಣಾದಿಗಳು ಆವಶ್ಯಕವೆಂದು ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ.

ಗುರುಪ್ರಸಾದವು ಬಲಿಷ್ಠವೊ? ಅಥವಾ ಸ್ವಪ್ರಯತ್ನವು ಬಲಿಷ್ಠವೊ?—ಎಂಬುದನ್ನು ಇಲ್ಲಿ ವಿಚಾರಿಸಿದೆ. ಗುರುಪ್ರಸಾದವು ಬಲಿಷ್ಠ—ಎಂಬುದಕ್ಕೆ ಅನೇಕ ಲಿಂಗಗಳಿವೆ. ಸತ್ಯಕಾಮನಿಗೆ ಋಷಭಾದಿಗಳು ಉಪದೇಶವನ್ನು ಮಾಡಿದ್ದರೂ ತನ್ನ ಗುರುವಾದ ಗೌತಮನೇ ಉಪದೇಶಿಸಬೇಕೆಂದು ಕೇಳಿಕೊಳ್ಳುತ್ತಾನೆ (ಛಾಂ. ಉ. ೮. ೯); ಹೀಗೆಯೇ ಉಪಕೋಸಲನು ಅಗ್ನಿಗಳಿಂದ ಉಪದೇಶವನ್ನು ಪಡೆದಿದ್ದರೂ ತನ್ನ ಆಚಾರ್ಯನಾದ ಸತ್ಯಕಾಮನಿಂದ ಉಪದೇಶವನ್ನು ಬೇಡುತ್ತಾನೆ (ಛಾಂ ಉ. ೪. ೧೪). ಹೀಗಿದ್ದರೂ

---

[1] ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್ ।

[2] ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪ್ರಭುಮ್ ॥ ಎಂಬಲ್ಲಿಂದ ಸೋಽಕ್ಷರಃ ಪರಮಸ್ಸ್ವರಾಟ್ ಎಂಬುದರ ವರೆಗೆ (ಮ. ನಾ. ಉ. ೧೩).

[3] ದಹ್ರಂ ವಿಪಾಪಂ ಪರವೇಶ್ಮಭೂತಂ ಯತ್ ಪುಂಡರೀಕಂ ಪುರಮಧ್ಯಸಂಸ್ಥಮ್ । ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತದುಪಾಸಿತವ್ಯಮ್ ॥

[4] ಪರವಿದ್ಯಾಸ್ವಕ್ಷರಶಂಭುಪರಬ್ರಹ್ಮಪರಜ್ಯೋತಿಃಪರತತ್ತ್ವಪರಮಾತ್ಮಾದಿಶಬ್ದನಿರ್ದಿಷ್ಟಮುಪಾಸ್ಯಂ ಯಸ್ತ್ವಿಹ ತೈರೇವ ಶಬ್ದೈರನೂದ್ಯ ತಸ್ಯ ನಾರಾಯಣತ್ವಂ ವಿಧೀಯತೇ (ಶ್ರೀಭಾಷ್ಯ).

**ಶ್ರೋತವ್ಯೋ ಮಂತವ್ಯಃ** ಇತ್ಯಾದಿ ಶ್ರುತಿಗಳ ದೆಸೆಯಿಂದ ಶ್ರವಣಾದಿಗಳನ್ನು ಮಾಡಬೇಕು.

**ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್*** || ೪೫ ||

೪೫ (ಮಾನಸಾಗ್ನಿಯು) ಪ್ರಕರಣದಿಂದ ಹಿಂದಿನ (ಕ್ರಿಯಾಮಯವಾದ ಅಗ್ನಿಯ) ವಿಕಲ್ಪವೇ ಆಗುವುದು; ಮಾನಸಪಾತ್ರೆಯಂತೆ ಕ್ರಿಯಾ- (ಶೇಷವಾಗಿರುತ್ತದೆ)

**ಪೂರ್ವಪಕ್ಷಿ**—ಈ ಅಗ್ನಿಗಳು ಸ್ವತಂತ್ರವಾದುವು, ಕ್ರಿಯೆಗೆ ಶೇಷವಲ್ಲ—ಎಂಬ ಸಿದ್ಧಾಂತಿಯ ಅಭಿಪ್ರಾಯ ಸರಿಯಲ್ಲ; ಏಕೆಂದರೆ ಇದು ಹಿಂದಿನ ಕ್ರಿಯಾಮಯವಾದ ಅಗ್ನಿಯ ಪ್ರಕರಣವಾದುದರಿಂದ ಅದರ ವಿಷಯದಲ್ಲಿಯೇ ಒಂದು ವಿಕಲ್ಪವಿಶೇಷವನ್ನು (ಎಂದರೆ ಪ್ರಕಾರಭೇದವನ್ನು) ಉಪದೇಶಿಸಿದೆ: ಇಲ್ಲಿ ಲಿಂಗಕ್ಕಿಂತ ಪ್ರಕರಣವೇ ಪ್ರಬಲವಾಗಿದೆ. ಇದು ಮಾನಸಪಾತ್ರೆಯಂತೆ; ದಶರಾತ್ರಯಾಗದ ಅವಿವಾಕ್ಯವೆಂಬ ಹತ್ತನೆಯ ದಿನದಲ್ಲಿ ಸಮುದ್ರವೆಂಬ ಸೋಮವನ್ನು ಪೃಥಿವಿಯೆಂಬ ಪಾತ್ರೆಯಲ್ಲಿ ಪ್ರಜಾಪತಿದೇವತೆಗೆ ತೆಗೆದುಕೊಳ್ಳಬೇಕಾಗುತ್ತದೆ;[1] ಈ ಪಾತ್ರಗ್ರಹಣ, ಆಸಾದನ, ಹವನ—ಇವೇ ಮೊದಲಾದುವು ಮಾನಸವಾಗಿದ್ದರೂ ಕ್ರಿಯಾಪ್ರಕರಣದಲ್ಲಿರುವುದರಿಂದ ಕ್ರಿಯಾಶೇಷವಾಗಿರುತ್ತವೆ. ಹೀಗೆಯೇ ಅಗ್ನಿಕಲ್ಪವೂ ಕ್ರಿಯಾಶೇಷವಾಗಿರುತ್ತದೆ.

**ವಿ.**—ವಾಜಸನೇಯಕದ ಅಗ್ನಿರಹಸ್ಯದಲ್ಲಿ ಮಾನಸಿಕಾಗ್ನಿಗಳನ್ನು ಹೇಳಿದೆ; ಈ ಅಗ್ನಿಗಳು ಕ್ರಿಯಾಮಯಕ್ರತುವಿಗೆ ಸಂಬಂಧಪಟ್ಟಿರುವುದರಿಂದ ಕ್ರಿಯಾರೂಪಗಳೊ ಅಥವಾ ವಿದ್ಯಾಮಯಕ್ರತುವಿಗೆ ಸಂಬಂಧಪಟ್ಟು ವಿದ್ಯಾರೂಪಗಳಾಗಿವೆಯೊ?—ಎಂಬುದು ಸಂಶಯ. ಇವು ಕ್ರಿಯಾಮಯರೂಪಗಳು—ಎಂಬುದು ಪೂರ್ವಪಕ್ಷ; ಏಕೆಂದರೆ ಪ್ರಕರಣಾನುಸಾರವಾಗಿ ಹಿಂದೆ ಹೇಳಿದ ಇಷ್ಟಕ-ಚಿತವಾದ ಅಗ್ನಿಗೆ ಈ ವಿದ್ಯಾಮಯ ಅಗ್ನಿಗಳು ಸಮವೆಂದು ವಿಕಲ್ಪಿಸಿ ಹೇಳಿದೆ. ಇದು ಮಾನಸಗ್ರಹದ ಹಾಗೆ. ದ್ವಾದಶಾಹವೆಂಬ ಕ್ರತುವಿನ ಅವಿವಾಕ್ಯವೆಂಬ ಹತ್ತನೆಯ ದಿನದಲ್ಲಿ ಮಾನಸಪಾತ್ರೆಗೆ ಸಂಬಂಧಿಸಿದ ಕರ್ಮಗಳು

---

* ಶಾಂಕರಭಾಷ್ಯದಲ್ಲಿ ಮತ್ತು ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಪೂರ್ವಪಕ್ಷದ ಸೂತ್ರಗಳಾಗಿವೆ; ಶ್ರೀಭಾಷ್ಯದಲ್ಲಿ ಈ ಸೂತ್ರದಿಂದ ಪ್ರಾರಂಭಿಸಿ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ (೫೨) ಎಂಬ ಸೂತ್ರದವರೆಗೂ ಪೂರ್ವವಿಕಲ್ಪಾಧಿಕರಣ ಎನಿಸಿದೆ. ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದೂ ಸೇರಿ ಪೂರ್ವವಿಕಲ್ಪಾಧಿಕರಣವಾಗಿದೆ.

1 ತಾಂಡ್ಯಬ್ರಾಹ್ಮಣ, ೪. ೯ ; ತೈತ್ತಿರೀಯಸಂಹಿತಾ, ೭. ೩. ೧.

ವಿದ್ಯಾರೂಪವಾಗಿದ್ದರೂ ಕ್ರಿಯಾಮಯಕ್ರತುವಿಗೆ ಅಂಗವಾಗಿ ಕ್ರಿಯಾರೂಪವಾಗಿರುವಂತೆ ಇಲ್ಲಿಯೂ ಅಗ್ನಿಗಳು ಕ್ರಿಯಾರೂಪವಾಗಿವೆಯೆಂದು ತಿಳಿದುಕೊಳ್ಳಬೇಕು.

**ದ್ವೈ.**—'ಅನುಗ್ರಹಕ್ಕಾಗಿ ಹಿಂದಿನ ಗುರುವನ್ನು ಬಿಟ್ಟು ಇನ್ನೊಬ್ಬ ಗುರುವನ್ನು ಸ್ವೀಕರಿಸಬಹುದು; ಮಾನಸಿಕಕ್ರಿಯೆಯಂತೆ' ಎಂಬುದು ಸೂತ್ರಾರ್ಥ.

ಪೂರ್ವಪ್ರಾಪ್ತವಾದ ಗುರುವೇ ಗುರುವಾಗಿರಬೇಕೆಂಬ ನಿಯಮವಿಲ್ಲ; ಪೂರ್ಣಾನುಗ್ರಹವನ್ನು ಮಾಡಲು ಸಮರ್ಥನಿದ್ದರೆ ಅನಂತರ ಪ್ರಾಪ್ತನಾದ ಗುರುವನ್ನೂ ಸ್ವೀಕರಿಸಲೂ ಬಹುದು, ಬಿಡಲೂಬಹುದು; ಎರಡು ಸಮವಾದ ಧ್ಯಾನಗಳಲ್ಲಿ ವಿಕಲ್ಪವಿದ್ದ ಹಾಗೆ.[1]

## ಅತಿದೇಶಾಚ್ಚ ॥ ೪೬ ॥

೪೬. ಅತಿದೇಶಮಾಡಿರುವುದರಿಂದಲೂ (ಈ ಅಗ್ನಿಗಳು ಕ್ರಿಯೆಗೆ ಅಂಗವಾಗಿವೆ).

ಈಗ ಪೂರ್ವಪಕ್ಷಿಯು ತನ್ನ ಮತವನ್ನು ಸಮರ್ಥಿಸಲು ಮತ್ತೊಂದು ಹೇತುವನ್ನು ಕೊಡುತ್ತಾನೆ: 'ಮೂವತ್ತಾರುಸಾವಿರ ಅಗ್ನಿಗಳು ಅರ್ಕಗಳು; ಅವುಗಳಲ್ಲಿ ಪ್ರತಿಯೊಂದೂ ಹಿಂದಿನ ಅಗ್ನಿಯಷ್ಟೇ ದೊಡ್ಡದಾಗಿದೆ'[2] ಎಂದು ಕ್ರಿಯಾಮಯಾಗ್ನಿಯ ವಿಧಿಗಳನ್ನು ಈ ಮಾನಸಾಗ್ನಿಗಳಿಗೆ ಅತಿದೇಶಮಾಡಿರುವುದರಿಂದ (ಎಂದರೆ ವಿಸ್ತರಿಸಿರುವುದರಿಂದ) ಇವು ಕ್ರಿಯೆಗೆ ಸಂಬಂಧಪಟ್ಟಿವೆ. ಹೋಲಿಕೆಯಿದ್ದರೇ ಅತಿದೇಶವು ಸಾಧ್ಯವಾಗುತ್ತದೆ.

**ವಿ.**—ಪೂರ್ವಪಕ್ಷವು ಮುಂದುವರಿಯುತ್ತದೆ: ಮನಶ್ಚಿತಾಗ್ನಿಯು ಇಷ್ಟಕಚಿತಾಗ್ನಿಗೆ ವಿಕಲ್ಪವೆಂಬುದು ಮತ್ತು ಕ್ರಿಯಾರೂಪವೆಂಬುದು **ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವಃ** ಎಂಬ ವಾಕ್ಯದಿಂದ ತಿಳಿದುಬರುತ್ತದೆ.

**ದ್ವೈ.**—**ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ** ಎಂಬ ಪೌಷ್ಯಾಯಣ-ಶ್ರುತಿಯಲ್ಲಿ ಹಿಂದಿನ ಗುರುಗಳಿಗೆ ಸಮಾನರಾದ ಅಥವಾ ಅವರಿಗಿಂತ ಉತ್ತಮರಾದ ಗುರುಗಳನ್ನು ಸ್ವೀಕರಿಸಲು ಅತಿದೇಶಮಾಡಿರುವುದರಿಂದಲೂ ಸಮಾನರಾದ ಅಥವಾ ಉತ್ತಮರಾದ ಗುರುಗಳನ್ನು ಸ್ವೀಕರಿಸಬಹುದು.

---

[1] ನ ಚ ಪೂರ್ವಪ್ರಾಪ್ತ ಏವ ಗುರುರಿತಿ ನಿಯಮಃ । ಸಮಗ್ರಾನುಗ್ರಹಂ ಚೇತ್ ಪಶ್ಚಾತ್ತನಃ ಪ್ರಕರೋತಿ ಸ್ವಯಮೇವ ತದಾ ವಿಕಲ್ಪಃ ಸ್ಯಾತ್ । ಮಾನಸಕ್ರಿಯಾವತ್ ಯಥೋಭಯೋರ್ಧ್ಯಾನಯೋಃ ಸಮಯೋಃ (ಮ. ಭಾ.).

[2] ಷಟ್ತ್ರಿಂಶತ್ಸಹಸ್ರಾಣ್ಯಗ್ನಯೋಽರ್ಕಾಸ್ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವಃ ।

## ವಿದ್ಯೈವ ತು ನಿರ್ಧಾರಣಾತ್* ॥ ೪೭ ॥

೪೭ ಆದರೆ ವಿದ್ಯೆಯೇ; ಏಕೆಂದರೆ (ಶ್ರುತಿಯು) ಹಾಗೆ ನಿರ್ಧರಿಸಿರುತ್ತದೆ.

ಸೂತ್ರದಲ್ಲಿರುವ ತು-ಶಬ್ದವು ಪೂರ್ವಪಕ್ಷವನ್ನು ನಿರಾಕರಿಸುತ್ತದೆ: ಈ ಮನಶ್ಚಿದಾದಿ-ಅಗ್ನಿಗಳು ಉಪಾಸನಾತ್ಮಕವೂ ಸ್ವತಂತ್ರವೂ ಆಗಿರುವುವು, ಕ್ರಿಯೆಗೆ ಶೇಷವಾಗಿರುವುದಿಲ್ಲ; 'ಈ (ಅಗ್ನಿಗಳು) ಉಪಾಸನೆಯಿಂದ ನಿರ್ಮಿತವಾಗಿವೆ'[1] ಎಂದೂ 'ಹೀಗೆ ಅರಿತಿರುವವನಿಗೆ ಉಪಾಸನೆಯಿಂದಲೇ ಈ (ಅಗ್ನಿಗಳು) ನಿರ್ಮಿತವಾಗಿವೆ'[2] ಎಂದು ಶ್ರುತಿಯು (ಶ. ಬ್ರಾ. ೧೦. ೫. ೩. ೧೨) ನಿರ್ಧರಿಸಿರುತ್ತದೆ.

ವಿ.—'ವಿದ್ಯೈವ ತು ನಿರ್ಧಾರಣಾದ್ದರ್ಶನಾಚ್ಚ ॥ ೩. ೩. ೪೬ ॥

೪೬ ಉಪಾಸನಾರೂಪವೇ ಆಗಿದೆ; ಏಕೆಂದರೆ ಹಾಗೆ ನಿರ್ಧರಿಸಲ್ಪಟ್ಟಿದೆ ಮತ್ತು ಶ್ರುತಿಯಿದೆ.

ಮನಶ್ಚಿದಾದಿ-ಅಗ್ನಿಗಳು ಕ್ರಿಯಾರೂಪದಲ್ಲಿರದೆ ಉಪಾಸನಾರೂಪದಲ್ಲಿವೆ; ಎಂದರೆ ಉಪಾಸನಾರೂಪವಾದ ಕ್ರತುವಿಗೆ ಅಂಗವಾಗಿವೆ; ಏಕೆಂದರೆ **ತೇ ಹೈತೇ ವಿದ್ಯಾಚಿತ ಏವ ವಿದ್ಯಯಾ ಹ್ಯೇವೈತ ಏವಂವಿದಶ್ಚಿತಾ ಭವಂತಿ** ಎಂಬ ಶ್ರುತಿಯಲ್ಲಿ ನಿರ್ಧರಿಸಲ್ಪಟ್ಟಿದೆ ವಾಙ್ಮನಸ್ಸೇ ಮೊದಲಾದುವುಗಳನ್ನು ಇಟ್ಟಿಗೆಯ ಹಾಗೆ ರಚಿಸಲು ಆಗುವುದಿಲ್ಲವ ದುದರಿಂದ ಅವುಗಳು ಮಾನಸಿಕವೇ ಸರಿ ಇದಲ್ಲದೆ ಈ ಅಗ್ನಿಗಳು ಉಪಾಸನಾಮಯ-ಕ್ರತುವಿಗೆ ಅಂಗವೆಂಬುದನ್ನು ಒಂದು ಶ್ರುತಿಯಲ್ಲಿಯೂ ನೋಡಬಹುದು: 'ಮನಸ್ಸಿನಿಂದಲೇ ಅವುಗಳನ್ನು ಆಧಾನಮಾಡಿದ್ದಾಯಿತು, ಮನಸ್ಸಿನಿಂದಲೇ ಅವುಗಳು ರಚಿತವಾದುವು, ಮನಸ್ಸಿನಿಂದಲೇ ಸೋಮಪಾತ್ರವನ್ನು ಗ್ರಹಿಸಿದ್ದಾಯಿತು; ಮನಸ್ಸಿನಿಂದಲೇ ಅವರು ಸ್ತುತಿಸಿದರು, ಆಶಂಸನೆ ಮಾಡಿದರು; ಯಾವಯಾವ ಯಜ್ಞಕರ್ಮವು ಮಾಡಲ್ಪಟ್ಟಿತೊ ಯಾವಯಾವ ಯಜ್ಞಕರ್ಮವಿದೆಯೊ ಮನೋಮಯವಾದ ಅದೆಲ್ಲವೂ ಮನಶ್ಚಿತವಾದ ಅಗ್ನಿಯಲ್ಲಿಯೇ ಮನಸ್ಸಿನಿಂದಲೇ ಮಾಡಲ್ಪಟ್ಟವು.'[3]

ದ್ವೈ.—'ಬ್ರಹ್ಮಜ್ಞಾನವೇ ಮುಕ್ತಿಗೆ ಸಾಧನವು; ಏಕೆಂದರೆ ಶ್ರುತಿಯು ಹೀಗೆ ನಿರ್ಧರಿಸಿದೆ' ಎಂಬುದು ಸೂತ್ರಾರ್ಥ.

---

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಒಟ್ಟುಗೂಡಿ ಒಂದೇ ಸೂತ್ರವಾಗಿದೆ. ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ವಿದ್ಯಾಧಿಕರಣ ಎಂಬ ಹೊಸ ಅಧಿಕರಣದಲ್ಲಿ ಅಂತರ್ಗತವಾಗಿವೆ.

1 ತೇ ಹೈತೇ ವಿದ್ಯಾಚಿತ ಏವ ।

2 ವಿದ್ಯಯಾ ಹ್ಯೇವೈತ ಏವಂವಿದಶ್ಚಿತಾ ಭವಂತಿ ।

3 ತೇ ಮನಸೈವಾಧೀಯಂತ ಮನಸೈವಾಚೀಯಂತ ಮನಸೈಷು ಗ್ರಹಾ ಅಗೃಹ್ಯಂತ ಮನಸಾಸ್ತುವಂತ ಮನಸಾಶಂಸನ್ ಯತ್ಕಿಂಚ ಯಜ್ಞೇ ಕರ್ಮ ಕ್ರಿಯತೇ, ಯತ್ಕಿಂಚ ಯಜ್ಞೀಯಂ ಕರ್ಮ ಮನಸೈವ ತೇಷು ಮನೋಮಯೇಷು ಮನಶ್ಚಿತ್ಸು ಮನೋಮಯಮೇವ ಕ್ರಿಯತ ।

'ಅವನನ್ನೇ ಅರಿತುಕೊಂಡು ಮೃತ್ಯುವನ್ನು ದಾಟುತ್ತಾನೆ, ಭಗವಂತನ ಪ್ರಾಪ್ತಿಗೆ ಜ್ಞಾನದ ಹೊರತು ಬೇರೆ ದಾರಿಯಿಲ್ಲ' (ಶ್ವೇ. ಉ. ೩. ೮) ಎಂದು ಶ್ರುತಿಯು ನಿರ್ಧರಿಸಿರುವುದರಿಂದ ಜ್ಞಾನದಿಂದಲೇ ಮೋಕ್ಷವು ಲಭಿಸುವುದು.[1]

**ದರ್ಶನಾಚ್ಚ || ೪೮ ||**

೪೮. ಮತ್ತು (ಲಿಂಗವು) ಕಂಡುಬರುವುದರಿಂದಲೂ.

ಈ ಅಗ್ನಿಗಳು ಸ್ವತಂತ್ರವೆಂಬುದಕ್ಕೆ ಲಿಂಗವೂ ಇದೆ. **ಲಿಂಗಭೂಯಸ್ತ್ವಾತ್** (೪೪).

**ದ್ವೈ.**—'(ಕೇವಲ ವಿದ್ಯೆಯಿಂದಲ್ಲ); ಭಗವಂತನ ಸಾಕ್ಷಾತ್ ದರ್ಶನದಿಂದಲೂ ಮುಕ್ತಿಯು ಸಿದ್ಧಿಸುತ್ತದೆ'[2] ಎಂಬುದು ಸೂತ್ರಾರ್ಥ.

**ದೃಷ್ಟ್ವೈವ ತಂ ಮುಚ್ಯತೇ ನಾಪರೇಣ** ಎಂದು ಕೌಶಿಕ-ಶ್ರುತಿಯು ಹೇಳುತ್ತದೆ.

**ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ* || ೪೯ ||**

೪೯. (ಅಗ್ನಿಗಳು ಸ್ವತಂತ್ರ—ಎಂಬುದನ್ನು) ಬಾಧಿಸಲು ಸಾಧ್ಯವಿಲ್ಲ, ಏಕೆಂದರೆ ಶ್ರುತಿಯೇ ಮೊದಲಾದುವು ಪ್ರಬಲವಾಗಿವೆ.

ಲಿಂಗಕ್ಕೆ ಬೇರೊಂದರ ಸಹಾಯವಿಲ್ಲದಿದ್ದರೆ ಅದು ಯಾವುದನ್ನೂ ಸಾಧಿಸಲಾರದು ಎಂದು ಆ ಲಿಂಗವನ್ನು ನಿರಾಕರಿಸಿ, ಪ್ರಕರಣದ ಸಾಮರ್ಥ್ಯದಿಂದ ಅಗ್ನಿಗಳು ಕ್ರಿಯಾಶೇಷವೆಂದು ನಿಶ್ಚಯಿಸಿದೆವಲ್ಲ!—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ: ಶ್ರುತಿ, ಲಿಂಗ, ವಾಕ್ಯ—ಇವು ಪ್ರಕರಣಕ್ಕಿಂತಲೂ ಪ್ರಬಲವಾಗಿವೆಯೆಂದು ಶ್ರುತಿಲಿಂಗ-ಸೂತ್ರದಲ್ಲಿ (ಜೈ. ಸೂ. ೩. ೩. ೧೩) ಸ್ಥಾಪಿಸಿದೆ. ಆ ಶ್ರುತ್ಯಾದಿಗಳು ಇಲ್ಲಿ ಅಗ್ನಿಗಳು ಸ್ವತಂತ್ರವೆಂದು ಸಾಧಿಸಿಕೊಡುತ್ತವೆ. 'ಆ ಇವು ವಿದ್ಯೆಯಿಂದಲೇ ರಚಿತವಾಗಿವೆ' ಎಂಬುದು **ಶ್ರುತಿ.** 'ಯಾವಾಗಲೂ ಸರ್ವಪ್ರಾಣಿಗಳೂ ಅವನು ನಿದ್ರಿಸುತ್ತಿದ್ದರೂ ಅವನಿಗೆ ಅಗ್ನಿಗಳನ್ನು ಮಾಡುತ್ತಿರುತ್ತವೆ' (ಶ. ಬ್ರಾ. ೧೦. ೫. ೩. ೧೨) ಎಂಬುದು **ಲಿಂಗ**; 'ಹೀಗೆ ಅರಿತಿರುವವನಿಗೆ ಇವು ವಿದ್ಯೆಯಿಂದಲೇ ರಚಿತವಾಗಿರುತ್ತವೆ' (ಅದೇ) ಎಂಬುದು **ವಾಕ್ಯ.** ಹೀಗೆ ಅರಿತಿರುವವನಿಗೆ ಸರ್ವದಾ ಭೂತಗಳೆಲ್ಲ ಈ ಅಗ್ನಿಚಯನಮಾಡುವುವು—ಎಂದು ಸಾತತ್ಯ

---

[1] ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಅಯನಾಯೇತಿ ನಿರ್ಧಾರಣಾದ್ವಿದ್ಯಯೈವ ಮೋಕ್ಷಃ (ಮ. ಭಾ.).

[2] ನ ಕೇವಲವಿದ್ಯಯಾ ಕಿಂತ್ವಪರೋಕ್ಷಜ್ಞಾನೇನೈವ ಚ (ಮ. ಭಾ.).

* ಈ ಸೂತ್ರವು ಮಧ್ವಭಾಷ್ಯದ ಪ್ರಕಾರ ಅಬಾಧಾಧಿಕರಣ ಎಂಬ ಅಧಿಕರಣದಲ್ಲಿ ಅಂತರ್ಗತವಾಗಿದೆ.

ವನ್ನು ಹೇಳಿರುವುದೂ ಈ ಅಗ್ನಿಗಳು ಸ್ವತಂತ್ರವೆಂಬುದನ್ನು ತಿಳಿಸುತ್ತದೆ. ಇದು ಕೇವಲ ಅರ್ಥವಾದ—ಎನ್ನುವುದೂ ಸರಿಯಲ್ಲ; ಏಕೆಂದರೆ ಇಲ್ಲಿ ಮತ್ತೊಂದು ಸ್ಪಷ್ಟವಾದ ವಿಧಿಯಿಲ್ಲ.

**ವಿ.**—ಪ್ರಬಲವಾದ ಶ್ರುತಿ-ಲಿಂಗ-ವಾಕ್ಯಗಳಿಂದ ಸಿದ್ಧವಾದುದನ್ನು (ಎಂದರೆ ಒಂದು ಸ್ವತಂತ್ರವಾದ ವಿದ್ಯಾಕ್ರತುವಿದೆ ಮತ್ತು ಮನಶ್ಚಿತಾಗ್ನಿಗಳು ವಿದ್ಯಾರೂಪಗಳಾಗಿವೆ ಎಂಬುದನ್ನು) ದುರ್ಬಲವಾದ ಪ್ರಕರಣವು ಬಾಧಿಸಲಾರದು.

**ದ್ವೈ.**—'ಮತ್ತು ಶ್ರುತಿ ಮೊದಲಾದುವು ಪ್ರಬಲವಾಗಿರುವುದರಿಂದ ಜ್ಞಾನವು ಮುಕ್ತಿಯ ಫಲವೆಂಬುದು ಬಾಧಿತವಾಗುವುದಿಲ್ಲ' ಎಂಬುದು ಸೂತ್ರಾರ್ಥ

'ರಾಜಾ ಇಂದ್ರನು ಶತಾಶ್ವಮೇಧಗಳನ್ನು ಮಾಡಿದಮೇಲೆ ಸ್ತುತ್ಯರ್ಹನಾದ ಬ್ರಹ್ಮನ ಬಳಿ ಸಾರಿ "ಕರ್ಮದಿಂದಾಗಲಿ ಧನದಿಂದಾಗಲಿ ಅಥವಾ ಇತರ ಸಾಧನಗಳಿಂದಾಗಲಿ ಸುಖವನ್ನು ಕಾಣೆನು; ನನಗೆ ತತ್ತ್ವವನ್ನು ಉಪದೇಶಿಸಿ"' ಎಂಬ ಶ್ರುತಿಯಲ್ಲಿ ಲಿಂಗವು ಪ್ರಬಲವಾಗಿದೆ.

## ಅನುಬಂಧಾದಿಭ್ಯಃ ಪ್ರಜ್ಞಾಂತರ ಪೃಥಕ್ತ್ವವದ್ದೃಷ್ಟಶ್ಚ ತದುಕ್ತಮ್* ॥ ೫೦ ॥

೫೦ ಅನುಬಂಧವೇ ಮೊದಲಾದುವುಗಳಿಂದ (ಮನಶ್ಚಿದಾದಿಗಳು ಸ್ವತಂತ್ರವಾಗಿವೆ); ಇದು ಇತರ ವಿದ್ಯೆಗಳು ಬೇರೆಯಾಗಿರುವಂತೆ (ಪ್ರಕರಣವನ್ನು ಬಿಟ್ಟು ತಿಳಿಯಬೇಕೆಂಬುದು) ನೋಡಲ್ಪಟ್ಟಿದೆ. ಇದನ್ನು (ಪೂರ್ವಮೀಮಾಂಸೆಯಲ್ಲಿ) ಹೇಳಿದೆ.

ಇನ್ನೊಂದು ಕಾರಣದಿಂದಲೂ ಪ್ರಕರಣವನ್ನು ವಿರೋಧಿಸಿ ಮನಶ್ಚಿದಾದಿಗಳು ಸ್ವತಂತ್ರವೆಂದು ತಿಳಿಯಬೇಕು; ಏಕೆಂದರೆ 'ಮನಸ್ಸಿನಿಂದಲೇ ಅವುಗಳನ್ನು ಆಧಾನಮಾಡಿದ್ದಾಯಿತು' ಎಂಬ ಶ್ರುತಿಯು ಕರ್ಮದ ಅವಯವಗಳನ್ನು ಮನ ಆದಿವ್ಯಾಪಾರಗಳಿಗೆ ಸಂಬಂಧಿಸುತ್ತದೆ. ಈ ಅನುಬಂಧಕ್ಕೆ ಸಂಪತ್ತೇ (ಎಂದರೆ ಉಪಾಸನೆಯೇ) ಫಲವು ಪ್ರತ್ಯಕ್ಷವಾದ ಕ್ರಿಯಾವಯವಗಳಾಗಿದ್ದರೆ ಅವನ್ನು ಸಂಪತ್ತಿನ ಮೂಲಕ ಪಡೆದುಕೊಳ್ಳಬೇಕಾದ ಆವಶ್ಯಕತೆಯಿರುವುದಿಲ್ಲ ಮತ್ತೆ ಶಾಂಡಿಲ್ಯಾದಿ-ವಿದ್ಯೆಗಳು ತಮ್ಮ ತಮ್ಮ ರೂಪ ಗುಣಾದಿಗಳಿಂದ ಅನುಬದ್ಧವಾಗಿದ್ದರೂ ಕರ್ಮಗಳಿಗಿಂತಲೂ ಬೇರೆ ಉಪಾಸನೆಗಳಿಗಿಂತಲೂ ಹೇಗೆ ಸ್ವತಂತ್ರವಾಗಿರುವುವೊ ಹಾಗೆಯೇ ಇಲ್ಲಿಯೂ—ಎಂದು ತಿಳಿಯಬೇಕು ಪ್ರಕರಣ

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅನುಬಂಧಾದಿಭ್ಯಃ ಮತ್ತು ಪ್ರಜ್ಞಾಂತರ ಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಮ್ ಎಂದು ಎರಡು ಸೂತ್ರಗಳಾಗಿ, ಅನುಬಂಧಾದ್ಯಧಿಕರಣ, ದರ್ಶನಭೇದಾಧಿಕರಣ ಎಂಬ ಎರಡು ಹೊಸ ಅಧಿಕರಣಗಳಲ್ಲಿ ಕ್ರಮವಾಗಿ ಅಂತರ್ಗತವಾಗಿವೆ.

ವನ್ನು ಒಟ್ಟಿ ಅರಿಯಲು ಒಂದು ದೃಷ್ಟಾಂತವೂ ಇದೆ : ರಾಜಸೂಯ-ಪ್ರಕರಣದಲ್ಲಿ ಪಠಿತವಾಗಿರುವ ಅವೇಷ್ಟಿ-ಯಾಗವನ್ನು ಪ್ರಕರಣದಿಂದ ಬಿಡಿಸಿ ತಿಳಿಯಬೇಕೆಂಬುದು ಕಂಡುಬರುತ್ತವೆ ; ಏಕೆಂದರೆ ಅದಕ್ಕೆ ವರ್ಣತ್ರಯದ ಸಂಬಂಧವಿದೆ ಮತ್ತು ರಾಜಸೂಯವು ರಾಜನೇ ಮಾಡತಕ್ಕ ಯಜ್ಞವಾಗಿದೆ. ಪೂರ್ವಮೀಮಾಂಸೆಯ ಪ್ರಥಮಕಾಂಡದಲ್ಲಿ ಹೀಗೆ ಹೇಳಿದೆ : 'ಕ್ರತ್ವರ್ಥವಾದ ಅವೇಷ್ಟಿಯಲ್ಲಿಯೂ ಆಗಲಿ—ಎಂದರೆ, ಅದು ಸರಿಯಲ್ಲ ; ಏಕೆಂದರೆ ವರ್ಣತ್ರಯದ ಸಂಬಂಧವಿದೆ'[1] (ಜೈ. ಸೂ. ೧೧. ೪. ೭)

ವಿ.—ಇಷ್ಟಕೆ-ಚಿತಾಗ್ನಿಯು ಅಂಗವಾಗಿರುವ ಕ್ರಿಯಾಮಯ-ಕ್ರತುವಿಗಿಂತ ಬೇರೊಂದಾದ ವಿದ್ಯಾಮಯ-ಕ್ರತುವು ವಿಧಿಸಲ್ಪಟ್ಟಿದೆ ಎಂಬುದಕ್ಕೆ ಅನುಬಂಧಾದಿಗಳು ಕಾರಣವಾಗಿವೆ. ಸೋಮಪಾತ್ರೆ, ಸ್ತೋತ್ರ, ಶಸ್ತ್ರ—ಇವೇ ಮೊದಲಾದುವು ಯಜ್ಞಾನುಬಂಧಿಗಳು. 'ಮನಸ್ಸಿನಿಂದಲೇ ಸೋಮಪಾತ್ರೆಗಳು ಗ್ರಹಿಸಲ್ಪಟ್ಟವು' ಇವೇ ಮೊದಲಾದ ವಾಕ್ಯಗಳು ಈ ಕ್ರತುವು ಮಾನಸಿಕವೆಂಬುದನ್ನು ತಿಳಿಸುತ್ತವೆ. ದಹರಾದಿವಿದ್ಯೆಗಳು ಕ್ರಿಯಾಮಯಕ್ರತುವಿಗಿಂತ ಬೇರೆಯಾಗಿರುವಂತೆ ಈ ವಿದ್ಯಾಮಯ-ಕ್ರತುವೂ ಬೇರೆಯಾಗಿರುತ್ತದೆ. ಈ ಅನುಬಂಧಾದಿಗಳಿಂದ ವಿಧಿಯನ್ನು ಕಲ್ಪಿಸಬಹುದು. ಇದನ್ನು ಪೂರ್ವಮೀಮಾಂಸೆಯಲ್ಲಿ ಹೇಳಿದೆ : 'ಅನುವಾದದಿಂದ ಕೂಡಿದ ವಾಕ್ಯಗಳು ವಿಧಿಯನ್ನು ಕಲ್ಪಿಸುತ್ತವೆ ; ಏಕೆಂದರೆ ಬೇರೆ ಪ್ರಮಾಣಗಳಿಂದ ಪ್ರಾಪ್ತವಾಗದ ಅರ್ಥವನ್ನು ಅವು ಬೋಧಿಸುತ್ತವೆ'[2] (ಜೈ. ಸೂ. ೩. ೫. ೨೧). ಮತ್ತೆ **ತೇಷಾಮೇಕೈಕ ಏವ ತಾವಾನ್** ಎಂಬಲ್ಲಿ ಅತಿದೇಶಮಾಡಿಕೊಳ್ಳಬೇಕೆಂದು ಹೇಳಿರುವುದರಿಂದ ಇಷ್ಟಕಾಗ್ನಿಯ ಮೂಲಕ ಉಂಟಾಗುವ ಫಲವು ಮನಶ್ಚಿದಾದಿಗಳಿಗೂ ಉಂಟಾಗುತ್ತದೆ

**ದ್ವೈ.—ಅನುಬಂಧಾದಿಭ್ಯಃ ॥ ೩. ೩. ೫೧ ॥**

೫೧ ( ಬ್ರಹ್ಮದರ್ಶನವು) ಭಕ್ತಿಯೇ ಮೊದಲಾದುವುಗಳಿಂದಲೂ ಆಗುತ್ತದೆ.[3]

**ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಮ್ ॥ ೩. ೩. ೫೨ ॥**

೫೨. ಅವಿಚ್ಛಿನ್ನವಾದ ಧ್ಯಾನದಲ್ಲಿ ತಾರತಮ್ಯವಿರುವಂತೆಯೇ (ಬ್ರಹ್ಮ) ದರ್ಶನದಲ್ಲಿಯೂ ತಾರತಮ್ಯವಿರುತ್ತದೆ ; ಇದನ್ನು ಶಾಸ್ತ್ರದಲ್ಲಿ ಹೇಳಿದೆ.

'ಕೆಲವರಿಗೆ ಅಂತರ್ದೃಷ್ಟಿಯಿದೆ, ಕೆಲವರಿಗೆ ಬಹಿರ್ದೃಷ್ಟಿಯಿದೆ ; ಕೆಲವರಿಗೆ ಅವತಾರಗಳ ದೃಷ್ಟಿಯಿದೆ, ಮತ್ತೆ ಕೆಲವರು ಪರಬ್ರಹ್ಮನನ್ನು ಎಲ್ಲೆಲ್ಲಿಯೂ ನೋಡುತ್ತಾರೆ'[4] ಎಂದು ಕಮಠ-ಶ್ರುತಿಯು ಹೇಳುತ್ತದೆ.

---

[1] ಕ್ರತ್ವರ್ಥಾಯಾಮಿತಿ ಚೇನ್ನ ವರ್ಣತ್ರಯಸಂಯೋಗಾತ್ ।

[2] ವಚನಾನಿ ತ್ವಪೂರ್ವತ್ವಾತ್ ।

[3] ಕಿಂತು ಭಕ್ತ್ಯಾದಿಭಿಶ್ಚ (ಮ. ಭಾ.).

[4] ಅಂತರ್ದೃಷ್ಟಯೋ ಬಹಿರ್ದೃಷ್ಟಯೋऽವತಾರದೃಷ್ಟಯಃ ಸರ್ವದೃಷ್ಟಯಃ ಇತಿ (ಮ. ಭಾ.).

**ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ* ॥ ೫೧ ॥**

೫೧ (ಮಾನಸಪಾತ್ರಿಗೆ) ಸಮಾನವಾಗಿದ್ದರೂ (ಮನಶ್ಚಿದಾದಿಗಳು ಕ್ರಿಯೆಗೆ ಶೇಷವಾಗುವುದಿಲ್ಲ), ಏಕೆಂದರೆ (ಶ್ರುತ್ಯಾದಿ-ಹೇತುಗಳಿಂದ ಅವು ಸ್ವತಂತ್ರವೆಂಬುದು) ಕಂಡುಬರುತ್ತದೆ ಇದು ಮೃತ್ಯುವಿನಂತೆಯೇ, ಏಕೆಂದರ ಲೋಕಕ್ಕೆ (ಅಗ್ನಿ) ಭಾವವಿಲ್ಲ

ಮಾನಸಪಾತ್ರಿಗೆ ಹೋಲುವುದರಿಂದ ಮನಶ್ಚಿದಾದಿಗಳು ಕ್ರಿಯಾಶೇಷವೆಂದು ಪೂರ್ವಪಕ್ಷಿಯು ಕಲ್ಪಿಸಿರುವುದು ಸರಿಯಲ್ಲ, ಏಕೆಂದರೆ ಹಿಂದೆ ಹೇಳಿರುವ ಶ್ರುತ್ಯಾದಿಹೇತುಗಳಿಂದ ಅವು ಸ್ವತಂತ್ರವಾಗಿ ಫಲವನ್ನು ಕೊಡುವ ಉಪಾಸನೆಗಳೆಂದು ಕಂಡುಬರುತ್ತದೆ ಎರಡು ವಸ್ತುಗಳಿಗೆ ಹೋಲಿಕೆಯಿದ್ದರೂ ಅವು ಬೇರೆ ಬೇರೆಯಾಗಿರಬಹುದು ಶತಪಥ ಬ್ರಾಹ್ಮಣದಲ್ಲಿ (೧೦ ೫ ೨ ೧ ಮತ್ತು ಬೃ ಉ ೩ ೨ ೧೦) ಅಗ್ನಿ, ಆದಿತ್ಯಪುರುಷ —ಇವರಿಬ್ಬರಿಗೂ ಮೃತ್ಯುಶಬ್ದದ ಪ್ರಯೋಗವು ಸಮಾನವಾಗಿದ್ದರೂ, ಅವರಿಬ್ಬರೂ ಬೇರೆಬೇರೆಯಾಗಿರುವರು ಹೀಗೆಯೇ ಛಾಂದೋಗ್ಯದಲ್ಲಿ (೫ ೪ ೧) ಸಮಿದಾದಿಗಳ ಹೋಲಿಕೆಯಿದ್ದರೂ ಲೋಕವು ಅಗ್ನಿಭಾವವನ್ನು ಹೊಂದುವುದಿಲ್ಲ

ವಿ.— ಫಲವಿಷಯದಲ್ಲಿ ಅತಿದೇಶವನ್ನು ಮಾಡಿಕೊಳ್ಳಬೇಕೆಂದು ಹೇಳಿರುವುದರಿಂದ ಎಲ್ಲ ಸಂದರ್ಭಗಳಲ್ಲಿಯೂ ಅತಿದೇಶವನ್ನು ಹೇಳಬೇಕಾದ ಆವಶ್ಯಕವಿಲ್ಲ, ಎಂದರೆ ವಿದ್ಯಾಮಯ-ಕ್ರತುಪ್ರಕರಣವೂ ಕ್ರಿಯಾಮಯ-ಕ್ರತುಪ್ರಕರಣವೂ ಒಂದೇ ಎಂದು ಹೇಳಲಾಗುವುದಿಲ್ಲ, ಏಕೆಂದರೆ ಅತಿದೇಶವು ಯಾವುದಾದರೊಂದು ಸಮಾನಭಾವಮಾತ್ರದಿಂದಲೇ ಆಗಬಹುದು ಇದಕ್ಕೆ ಸೂತ್ರವು ಒಂದು ದೃಷ್ಟಾಂತವನ್ನು ಕೊಡುತ್ತದೆ 'ಸೂರ್ಯಮಂಡಲದಲ್ಲಿರುವ ಪುರುಷನು ಮೃತ್ಯುವೇ' ಎಂಬಲ್ಲಿ ಮಂಡಲಪುರುಷನ ಸರ್ವಸಂಹರ್ತೃತ್ವವನ್ನು ಹೇಳಿದೆಯೇ ಹೊರತು ಅವನು ಮೃತ್ಯುಲೋಕದಲ್ಲಿರುವನೆಂದು ಹೇಳಿಲ್ಲ

ದ್ವೈ.—'ಭಗವದ್ರೂಪಗಳಿಗೆ ಸಾಮ್ಯವಿದ್ದರೂ ಒಂದು ರೂಪದ ಸಾಮಾನ್ಯದರ್ಶನದಿಂದ ಮುಕ್ತಿಯಾಗುವುದಿಲ್ಲ, ಮರಣಾನಂತರದಲ್ಲಿ ಮುಕ್ತಿಯು ಆಗದಂತೆ ಲೋಕಾಂತರಪ್ರಾಪ್ತಿಯಿಂದಲೂ ಮುಕ್ತಿಯಾಗುವುದಿಲ್ಲ'[1] ಎಂಬುದು ಸೂತ್ರಾರ್ಥ

---

* ಮಧ್ವಭಾಷ್ಯದಲ್ಲಿ ಈ ಸೂತ್ರವು ನ ಸಾಮಾನ್ಯಾಧಿಕರಣ ಎಂಬ ಅಧಿಕರಣದಲ್ಲಿ ಅಂತರ್ಗತವಾಗಿದೆ

1 ನ ಸಾಮಾನ್ಯದರ್ಶನಮಾತ್ರೇಣ ಮುಕ್ತಿಃ । ಯಥಾ ಮೃತ್ಯುಮಾತ್ರಾತ್ । ನ ಹಿ ಲೋಕಾಪತ್ತಿಮಾತ್ರಂ ಮುಕ್ತಿಃ (ಮ ಭಾ.).

**ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ*** || ೫೨ ||

೫೨ ಮುಂದಿನ (ಬ್ರಾಹ್ಮಣದಿಂದಲೂ) ಶಬ್ದದ ತಾದ್ವಿಧ್ಯವು (ಕಂಡು ಬರುತ್ತದೆ). (ಸಂಪಾದ್ಯವಾದ ಅವಯವಗಳು) ಬಹುವಾಗಿರುವುದ ರಿಂದ (ಅಗ್ನಿಯ) ಸಂಬಂಧವಿದೆ

'ಈ ಲೋಕವೇ ಈ ಚಿತವಾದ ಅಗ್ನಿ'[1] (ಶ ಬ್ರಾ ೧೦ ೫ ೪ ೧) ಎಂಬ ಮುಂದಿನ ಬ್ರಾಹ್ಮಣದಲ್ಲಿ ತಾದ್ವಿಧ್ಯವು ಎಂದರೆ ಕೇವಲವಿದ್ಯಾವಿಧಿತ್ವವು ಶ್ರುತಿಯ ಪ್ರಯೋಜನವೆಂದು ತಿಳಿದುಬರುತ್ತದೆಯೇ ಹೊರತು ಕೇವಲ ಕರ್ಮಾಂಗವು ಪ್ರಯೋಜನ ವೆಂದು ತಿಳಿದುಬರುವುದಿಲ್ಲ ಹಿಂದಿನ ಬ್ರಾಹ್ಮಣದಲ್ಲಿಯೂ (೧೦ ೫ ೨ ೨೩) 'ಮೃತ್ಯುವು ಯಾವನ ಆತ್ಮವಾಗುತ್ತದೆಯೊ ಅವನು ಅಮೃತನಾಗುತ್ತಾನೆ'[2] ಎಂದು ವಿದ್ಯಾಫಲವನ್ನೇ ಉಪಸಂಹರಿಸಿರುವುದರಿಂದ ವಿದ್ಯಾಪ್ರಾಧಾನ್ಯವೇ ಕಂಡುಬರುತ್ತದೆ ಬಹು ಅಗ್ನ್ಯವಯವ ಗಳನ್ನು ಸಂಪಾದನೆಮಾಡಬೇಕಾಗಿರುವುದರಿಂದ ವಿದ್ಯೆಗೆ ಅಗ್ನಿಯ ಸಂಬಂಧವಿದೆಯೇ ಹೊರತು ಇದು ಕರ್ಮಾಂಗವೆಂಬ ಕಾರಣದಿಂದಲ್ಲ ಆದುದರಿಂದ ಮನಶ್ಚಿದಾದಿಗಳು ಕೇವಲ ವಿದ್ಯಾತ್ಮಕಗಳಾಗಿರುತ್ತವೆ

**ವಿ.**—ಮುಂದಿನ ಬ್ರಾಹ್ಮಣದಿಂದಲೂ (೧೦ ೫ ೪ ೧) ಮನಶ್ಚಿವಾದಿ ಅಗ್ನಿ ಗಳನ್ನು ಹೇಳುವ ವಾಕ್ಯವು ವಿದ್ಯೆಯನ್ನು ಪ್ರತಿಪಾದಿಸುತ್ತದೆ—ಎಂಬುದು ಕಂಡುಬರು ತ್ತದೆ ಮುಂದೆ (೧೦ ೬) ವೈಶ್ವಾನರ-ವಿದ್ಯೆಯಲ್ಲಿಯೂ ಉಪಾಸನೆಯನ್ನೇ ವಿಧಿಸಿದೆ ಇವುಗಳಿಂದ ಅಗ್ನಿರಹಸ್ಯವು (ಶ ಬ್ರಾ ೧೦) ಕೇವಲ ಕ್ರಿಯೆಗೆ ಸಂಬಂಧಪಟ್ಟದ್ದಲ್ಲ— ಎಂಬುದು ತಿಳಿದುಬರುತ್ತದೆ

**ದ್ವೈ.**—'ಜೀವನ ಭಕ್ತಿಯಿಂದ ಸಂತುಷ್ಟನಾದ ಪರಮಾತ್ಮನೇ ದರ್ಶನವನ್ನು ಕೊಟ್ಟು, ಮುಕ್ತಿಯನ್ನು ಅನುಗ್ರಹಿಸುತ್ತಾನೆ, ಆದರೂ ಶ್ರುತಿಯು ಹಾಗೆ ಹೇಳುವುದು (**ಭಕ್ತಿರೇವಂ ನಯತಿ**) ಕೂಡುತ್ತದೆ, ಏಕೆಂದರೆ ಭಕ್ತಿಯು ಪ್ರಧಾನ ಸಾಧನವಾಗಿದೆ'[3] ಎಂಬುದು ಸೂತ್ರಾರ್ಥ

'ಭಕ್ತಿಯೇ ಅವನನ್ನು ಪರಮಾತ್ಮನಿಗೆ ಒಯ್ಯುತ್ತದೆ' ಎಂದು ಮಾಠರಶ್ರುತಿಯು ಹೇಳಿರುವುದರಿಂದ ಪರಮಾತ್ಮನಿಂದ ದರ್ಶನವು ಉಂಟಾಗುವುದಿಲ್ಲ ಎಂಬ ಪೂರ್ವಪಕ್ಷಕ್ಕೆ ಈ ಸೂತ್ರವು ಉತ್ತರವಾಗಿದೆ

---

* ಮಧ್ವಭಾಷ್ಯದಲ್ಲಿ ಈ ಸೂತ್ರವು ತಾದ್ವಿಧ್ಯಾಧಿಕರಣ ಎಂಬುದರಲ್ಲಿ ಅಂತರ್ಗತವಾಗಿದೆ

[1] ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ ।

[2] ಸೋಽಮೃತೋ ಭವತಿ ಮೃತ್ಯುರ್ಹ್ಯಸ್ಯಾತ್ಮಾ ಭವತಿ ।

[3] ಪರಮಾತ್ಮೈವ ಭಕ್ತ್ಯಾ ದರ್ಶನಂ ಪ್ರಾಪ್ಯ ಮುಕ್ತಿಂ ದದಾತಿ । ಪ್ರಧಾನಸಾಧನತ್ವಾ ದ್ಭಕ್ತಿಃ ಕರಣತ್ವೇನೋಚ್ಯತೇ (ಮ ಭಾ )

# ೩೦. ಏಕಾತ್ಮ್ಯಧಿಕರಣ*

(ಸೂ. ೫೩–೫೪)

**ಏಕ ಆತ್ಮನಃ ಶರೀರೇ ಭಾವಾತ್ ॥ ೫೩ ॥**

೫೩. ಕೆಲವರು (ದೇಹವ್ಯತಿರಿಕ್ತನಾದ) ಆತ್ಮನು (ಇಲ್ಲವೆಂದು ತಿಳಿಯುತ್ತಾರೆ), ಏಕೆಂದರೆ ಶರೀರವಿದ್ದರೆ (ಆತ್ಮನು) ಇರುತ್ತಾನೆ.

ದೇಹವ್ಯತಿರಿಕ್ತನಾದ ಆತ್ಮನ ಅಸ್ತಿತ್ವವನ್ನು ಬಂಧಮೋಕ್ಷಾಧಿಕಾರಸಿದ್ಧಿಗಾಗಿ ಸಮರ್ಥಿಸಲಾಗುತ್ತದೆ. ಆತ್ಮನಿಲ್ಲದಿದ್ದರೆ ಬ್ರಹ್ಮವೇ ಆತ್ಮವೆಂದು ಯಾರಿಗೆ ಉಪದೇಶಿಸಬೇಕು ?[1] ಪೂರ್ವಮೀಮಾಂಸೆಯ ಮೊದಲಿನ ಪಾದದಲ್ಲಿ ಆತ್ಮನ ಅಸ್ತಿತ್ವವನ್ನು ಭಾಷ್ಯಕಾರರು ಹೇಳಿದ್ದರೂ ಅಲ್ಲಿ ಸೂತ್ರವಿಲ್ಲ ಇಲ್ಲಿಯಾದರೂ ಸೂತ್ರಕಾರರೇ ಆತ್ಮನ ಅಸ್ತಿತ್ವವನ್ನು ಆಕ್ಷೇಪಪೂರ್ವವಾಗಿ ಸ್ಥಾಪಿಸಿರುತ್ತಾರೆ.

**ಪೂರ್ವಪಕ್ಷ †**—ದೇಹಕ್ಕಿಂತ ವ್ಯತಿರಿಕ್ತನಾದ ಆತ್ಮನಿಲ್ಲ. ಚೈತನ್ಯವು ಸಮಷ್ಟಿ-ವ್ಯಷ್ಟಿರೂಪವಾಗಿರುವ ಪೃಥಿವ್ಯಾದಿಗಳಲ್ಲಿ ಕಾಣದಿದ್ದರೂ ಶರೀರಾಕಾರದಿಂದ ಪರಿಣಿತವಾಗಿರುವ ಭೂತಗಳಲ್ಲಿರಬಹುದು ; ಮಾದಕದ್ರವ್ಯದಿಂದ ಅಮಲು ಉಂಟಾಗುವಂತೆ ಈ ಭೂತಗಳಿಂದ ಚೈತನ್ಯವುಂಟಾಗುತ್ತದೆ. ಇಂಥ ಚೈತನ್ಯದಿಂದ ಕೂಡಿರುವ ಶರೀರವೇ ಪುರುಷನು. ಏಕೆಂದರೆ ಶರೀರವಿದ್ದರೇ ಚೈತನ್ಯವಿರುತ್ತದೆ ; ಉದಾಹರಣೆಗೆ ಅಗ್ನಿಯಿದ್ದರೆ ಉಷ್ಣಪ್ರಕಾಶಗಳಿರುತ್ತವೆ. ಆತ್ಮಧರ್ಮಗಳೆಂದು ಹೇಳಲ್ಪಡುವ ಪ್ರಾಣ, ಚೇಷ್ಟೆ, ಚೈತನ್ಯ, ಸ್ಮೃತಿ ಮೊದಲಾದುವುಗಳೆಲ್ಲ ದೇಹಧರ್ಮಗಳೇ. ಆದುದರಿಂದ ಸ್ವರ್ಗಾಪವರ್ಗಗಳಿಗೆ ಸಮರ್ಥನಾದ ಆತ್ಮನೇ ಇಲ್ಲ.

**ವಿ.**—'ಆತ್ಮನು ಶರೀರದಲ್ಲಿರುವುದರಿಂದ (ಅವನು ಜ್ಞಾತೃ, ಕರ್ತೃ, ಭೋಕ್ತೃ—ಎಂದು ಅನುಸಂಧಾನಮಾಡಬೇಕು) ಎಂದು ಕೆಲವರು ಹೇಳುತ್ತಾರೆ' ಎಂಬುದು ಸೂತ್ರಾರ್ಥ.

ಸಮಸ್ತಪರವಿದ್ಯೆಗಳಲ್ಲಿ ಉಪಾಸ್ಯ-ಉಪಾಸನೆಗಳ ಸ್ವರೂಪದಂತೆ ಉಪಾಸಕನ ಸ್ವರೂಪವನ್ನೂ ತಿಳಿದುಕೊಳ್ಳಬೇಕು. ಪ್ರತ್ಯಗಾತ್ಮನು ಜ್ಞಾತೃ, ಕರ್ತೃ, ಭೋಕ್ತೃ, ಸಂಸಾರಿ—ಎಂದು ಅನುಸಂಧಾನಮಾಡಬೇಕೊ ಅಥವಾ ಪ್ರಜಾಪ್ರತಿಯು ಹೇಳುವಂತೆ (ಛಾ. ಉ. ೮. ೧) ಆತ್ಮನು ಅಪಹತ-ಪಾಪ್ಮತ್ವಾದಿಸ್ವರೂಪನೊ ?—ಎಂಬುದು

---

* ಇದನ್ನು ಶ್ರೀಭಾಷ್ಯದಲ್ಲಿ ಶರೀರೇಭಾವಾಧಿಕರಣ ಎಂದೂ ಮಧ್ವಭಾಷ್ಯದಲ್ಲಿ ಏಕಾಧಿಕರಣ ಎಂದೂ ಕರೆದಿದೆ.

1 ಕಸ್ಯ ವಾ ಬ್ರಹ್ಮಾತ್ಮತ್ವಮ್ ಉಪದಿಶ್ಯೇತ ? (ಸೂ. ಭಾ.).

† ಶಾಂಕರಭಾಷ್ಯ-ಶ್ರೀಭಾಷ್ಯಗಳಲ್ಲಿ ಇದು ಪೂರ್ವಪಕ್ಷಸೂತ್ರವಾಗಿದೆ. ಶಾಂಕರಭಾಷ್ಯದ ಪ್ರಕಾರ ಇದು ಲೋಕಾಯತಿಕರ ಮತ.

ಸಂಶಯ ಪೂರ್ವಪಕ್ಷಿಯು ಮೊದಲನೆಯ ಮತವನ್ನು ಪ್ರತಿಪಾದಿಸುತ್ತಾನೆ, ಏಕೆಂದರೆ ಆತ್ಮನು ಶರೀರದಲ್ಲಿರುವವರೆಗೂ ಕರ್ತೃ, ಭೋಕ್ತೃ, ಜ್ಞಾತೃ—ಇವುಗಳಾಗಿರುತ್ತಾನೆ ಸ್ವರ್ಗವೇ ಮೊದಲಾದುವನ್ನು ಬಯಸುವವನು ಒಂದು ಕರ್ಮವನ್ನು ಮಾಡಿ, ಆ ಫಲ ಪ್ರಾಪ್ತಿಯಾದಮೇಲೆ ಕರ್ತೃತ್ವಾದಿಗಳಿಗಿಂತ ಭಿನ್ನವಾದ ಗುಣಗಳನ್ನು ಪಡೆಯಬಹುದು, ಆದರೆ ಅವನು ಆ ಗುಣಗಳನ್ನು ಫಲಪ್ರಾಪ್ತಿಯಾಗದವರೆಗೂ ಹೊಂದಿರಬಹುದು ಹಾಗೆಯೇ ಉಪಾಸಕನ ವಿಷಯದಲ್ಲಿಯೂ ತಿಳಿಯಬೇಕು 'ಈ ಲೋಕದಲ್ಲಿ ಪುರುಷನು ಎಂಥ ಕ್ರತುವುಳ್ಳವನೊ ಇಲ್ಲಿಂದ ಹೋದಮೇಲೆ ಹಾಗೆಯೇ ಆಗುತ್ತಾನೆ' (ಛಾಂ ಉ ೩ ೧) ಎಂಬ ಶ್ರುತಿಯ ಪ್ರಕಾರ ಉಪಾಸಕನು ಅಪಹತ-ಪಾಪ್ಮತ್ವಾದಿರೂಪವುಳ್ಳವನು ಎಂದು ಅನುಸಂಧಾನಮಾಡಬೇಕಂದರೆ ಅದು ಸರಿಯಲ್ಲ, ಏಕಂದರ **ತಂ ಯಥಾ ಯಥೋ-ಪಾಸತೇ** ಎಂಬ ವಾಕ್ಯವು ಉಪಾಸ್ಯವಿಷಯವನ್ನು ತಿಳಿಸುತ್ತದೆಯೇ ಹೊರತು ಉಪಾಸಕ ವಿಷಯವನ್ನಲ್ಲ

**ದ್ವೈ.**—'ಅಂಶಿಯೂ ಅಂಶವೂ ಒಂದೇ, ಏಕಂದರೆ ಅಂಶಿಯಾದ ಜೀವನು ತನ್ನ ಕರ್ಮದಿಂದ ನಿರ್ಮಿಸಿದ ಶರೀರದಲ್ಲಿ ತನ್ನ ಅಂಶದಿಂದಲೇ ಇರುತ್ತಾನೆ'[1] ಎಂಬುದು ಸೂತ್ರಾರ್ಥ

**ವ್ಯತಿರೇಕಸ್ತದ್ಭಾವಾಭಾವಿತ್ವಾನ್ನ ತೂಪಲಬ್ಧಿವತ್ ॥ ೫೪ ॥**

೫೪ (ಶರೀರದಿಂದ ಆತ್ಮನು) ಬೇರೆಯಾಗಿರುವನು, ಏಕೆಂದರ (ಆತ್ಮ ಧರ್ಮಗಳು) ಅದು (ಎಂದರ ಶರೀರ) ಇರುವಾಗಲೂ ಇರುವುದಿಲ್ಲ, ಆದರ ಉಪಲಬ್ಧಿಯಂತೆ (ಅವ್ಯತಿರೇಕವಿಲ್ಲ)

**ಆಕ್ಷೇಪಣೆ**—ದೇಹಕ್ಕಿಂತ ಬೇರೆಯವನಾದ ಆತ್ಮನೇ ಇಲ್ಲ, ಚೈತನ್ಯವು ಹೊರ ಗಿನ ಪೃಥಿವ್ಯಾದಿಗಳಲ್ಲಿ ಕಾಣದಿದ್ದರೂ ಶರೀರಾಕಾರದಿಂದ ಪರಿಣತವಾದ ಭೂತಗಳಲ್ಲಿರ ಬಹುದು ಅವುಗಳಿಂದ ಚೈತನ್ಯವು ಉತ್ಪನ್ನವಾಗುತ್ತದ, ಇದು ಮದಶಕ್ತಿಯಂತೆ ಚೈತನ್ಯವಿಶಿಷ್ಟವಾಗಿರುವ ಶರೀರವೇ ಮನುಷ್ಯನು ಆತ್ಮಧರ್ಮಗಳೆಂದು ಹೇಳಲ್ಪಡುವ ಪ್ರಾಣ, ಚೇಷ್ಟೆ, ಚೈತನ್ಯ, ಸ್ಮೃತಿ ಮೊದಲಾದುವು ದೇಹದ ಧರ್ಮಗಳೇ ಆದುದರಿಂದ ಆತ್ಮನು ದೇಹಕ್ಕಿಂತ ಬೇರೆಯವನಲ್ಲ

**ಪರಿಹಾರ**— ದೇಹಕ್ಕಿಂತ ಬೇರೆಯವನಾದ ಆತ್ಮನಿದ್ದಾನೆ ದೇಹವಿದ್ದರೂ ಅದರಲ್ಲಿ ಆತ್ಮಧರ್ಮಗಳು ಕಂಡುಬರುವುದಿಲ್ಲ, ಮೃತಶರೀರದಲ್ಲಿ ಪ್ರಾಣ-ಚೇಷ್ಟಾದಿಗಳು ಕಂಡು ಬರುವುದಿಲ್ಲ ಶರೀರಪಾತವಾದ ಮೇಲೆ ಅವುಗಳು ಇಲ್ಲವೆಂದು ನಿರ್ಧರಿಸಲು ಸಾಧ್ಯವಿಲ್ಲ; ಏಕೆಂದರೆ ಅವು ಬೇರೆಯ ದೇಹದಲ್ಲಿ ಇರಬಹುದೆಂಬ ಸಂಶಯವೇ ಪೂರ್ವಪಕ್ಷವನ್ನು ನಿರಾ-

---

[1] ಅಂಶಾಂಶಿನೋರೇಕತ್ವಮೇವ । ಅಂಶಿಕರ್ಮನಿರ್ಮಿತಶರೀರಂ ಏವಾಂಶಸ್ಯ ಭಾವಾತ್ (ಮ. ಭಾ)

ಕರಿಸಿದಂತಾಗುತ್ತದ ಚೈತನ್ಯವು ವಿಷಯಿ, ಭೂತಭೌತಿಕಗಳು ವಿಷಯ, ಆದುದರಿಂದ ಚೈತನ್ಯವು ಅವುಗಳ ಧರ್ಮವನ್ನು ಹೊಂದಲಾರದು ಭೂತಭೌತಿಕವಸ್ತುಗಳು ವಿಷಯವಾಗಿರುವ ಉಪಲಬ್ಧಿಯನ್ನು ಒಪ್ಪಿಕೊಳ್ಳುವಂತೆ ಅದು ಭೂತಾದಿಗಳಿಗಿಂತ ಬೇರೆಯಾಗಿದೆಯೆಂದು ಒಪ್ಪಿಕೊಳ್ಳಬೇಕು ಉಪಲಬ್ಧಿಯ ಸ್ವರೂಪವೇ ನಮ್ಮ ಆತ್ಮನು, ಆದುದರಿಂದ ಆತ್ಮನು ದೇಹಕ್ಕಿಂತ ಬೇರೆಯವನಾಗಿದ್ದಾನೆ[1] ಪ್ರದೀಪವೇ ಮೊದಲಾದ ಉಪಕರಣಗಳಿದ್ದರ ಉಪಲಬ್ಧಿಯಾಗುತ್ತದೆ, ಇಲ್ಲದಿದ್ದರೆ ಆಗುವುದಿಲ್ಲ—ಇಷ್ಟುಮಾತ್ರದಿಂದ ಉಪಲಬ್ಧಿಯು ಪ್ರದೀಪಾದಿಗಳ ಧರ್ಮವಾಗುವುದಿಲ್ಲ ಹೀಗಿರುವಾಗ ದೇಹವಿದ್ದರೆ ಉಪಲಬ್ಧಿಯಾಗುತ್ತದೆ, ಇಲ್ಲದಿದ್ದರೆ ಆಗುವುದಿಲ್ಲ—ಎಂಬುದರಿಂದ ಅದು ದೇಹಧರ್ಮವಾಗಲಾರದು, ಏಕೆಂದರೆ ಪ್ರದೀಪಾದಿಗಳಂತೆ ದೇಹವನ್ನು ಆತ್ಮನ ಉಪಕರಣವಾಗಿ ಉಪಯೋಗಿಸಬಹುದು ಇದಲ್ಲದೆ ಉಪಲಬ್ಧಿಗಾಗಿ ದೇಹವು ಉಪಯೋಗವಾಗಿರುತ್ತದ ಎಂಬುದೂ ಸರಿಯಿಲ್ಲ, ಏಕೆಂದರೆ ದೇಹವು ನಿಶ್ಚೇಷ್ಟಿತವಾಗಿರುವಾಗಲೂ ಸ್ವಪ್ನದಲ್ಲಿ ನಾನಾ ವಿಧವಾದ ಉಪಲಬ್ಧಿಗಳು ಉಂಟಾಗುತ್ತವೆ ಆದುದರಿಂದ ದೇಹವ್ಯತಿರಿಕ್ತನಾದ ಆತ್ಮನು ಇರುವನೆಂಬುದು ಸಿದ್ಧವಾಗಿದ

ವಿ.—'ಅದು ಸರಿಯಲ್ಲ, ವ್ಯತಿರೇಕವಿದ, ಏಕಂದರ ಪ್ರಾಪ್ತಿಯು ಉಪಾಸನೆಯಂತೆ ಆಗುತ್ತದೆ, ಬ್ರಹ್ಮೋಪಲಬ್ಧಿಯಂತೆ' ಎಂಬುದು ಸೂತ್ರಾರ್ಥ

ಜ್ಞಾತೃತ್ವಾದಿಗಳಿಂದ ಕೂಡಿದ ಬದ್ಧ-ಜೀವನ ಸ್ವರೂಪವನ್ನು ಅನುಸಂಧಾನಮಾಡಕೂಡದು, ಆ ಬದ್ಧದೆಸೆಗೆ ವಿಲಕ್ಷಣವಾಗಿ ಮೋಕ್ಷದೆಸೆಯಲ್ಲಿ ಅವನಿಗೆ ಯಾವ ರೂಪವಿರುತ್ತದೆಯೊ ಅದೇ ರೂಪವು ಉಪಾಸನಾವೇಳೆಯಲ್ಲಿಯೂ ಇರುತ್ತದೆ, ಅದನ್ನೇ ಅನುಸಂಧಾನಮಾಡಬೇಕು[2] ಅಪಹತ-ಪಾಪ್ಮತ್ವಾದಿ-ಗುಣಗಳಿಂದ ಕೂಡಿರುವ ಪ್ರತ್ಯಗಾತ್ಮನೇ ಶರೀರವಾಗಿರುವ ಪರಮಾತ್ಮರೂಪವನ್ನೇ ಉಪಾಸಿಸಬೇಕು—ಎಂಬುದು ಪ್ರಜಾಪತಿಯ ಉಪದೇಶ ಬ್ರಹ್ಮೋಪಲಬ್ಧಿಗೆ ಬ್ರಹ್ಮಸ್ವರೂಪವು ಹೇಗೆ ವಿಷಯವಾಗಿರುತ್ತದೆಯೋ ಹಾಗೆಯೇ ಆತ್ಮೋಪಲಬ್ಧಿಗೆ ಆತ್ಮಸ್ವರೂಪವು ವಿಷಯವಾಗಿರುತ್ತದೆ[3]

ದ್ವೈ.—'ಜ್ಞಾನಾದಿಗಳಲ್ಲಿ ಭೇದವಿರುವಂತೆ ಅಂಶಾಂಶಿಗಳಿಗೆ ಭೇದವಿರುವುದಿಲ್ಲ, ಏಕಂದರೆ ಅಂಶಿಯ ಉಪಾಸನಾದಿಗಳಿಂದಲೇ ಅಂಶಕ್ಕೆ ಫಲದ ಅನುಸಂಧಾತೃತ್ವವಿದೆ' ಎಂಬುದು ಸೂತ್ರಾರ್ಥ

---

1 ಉಪಲಬ್ಧಿಸ್ವರೂಪ ಏವ ಚ ನ ಆತ್ಮೇತ್ಯಾತ್ಮನೋ ದೇಹವ್ಯತಿರಿಕ್ತತ್ವಮ್ (ಸೂ.ಭಾ)

2 ಅಸ್ಯ ಮೋಕ್ಷದಶಾಯಾಂ ಯಾದೃಶಂ ರೂಪಂ, ತಾದೃಗ್ರೂಪ ಏವೋಪಾಸನವೇಲಾಯಾಮಾತ್ಮಾನುಸಂಧೇಯಃ ಇತ್ಯರ್ಥಃ (ಶ್ರೀಭಾಷ್ಯ)

3 ಜ್ಞಾನಾದಿಭೇದೇ ವಿದ್ಯಮಾನೇಽಪಿ ನಾಂಶಾಂಶಿನೋಃ ಪೃಥಗ್ಭಾವ ಏವ । ತದುಪಾಸನಾದಿಭೋಗಾದಂಶಸ್ಯ (ಮ ಭಾ.).

## ೩೧. ಅಂಗಾವಬದ್ಧಾಧಿಕರಣ

(ಸೂ. ೫೫—೫೬)

**ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದವತ್ ॥ ೫೫ ॥**

೫೫. ಯಜ್ಞಾಂಗಗಳಿಗೆ ಸಂಬಂಧಿಸಿರುವ (ಉಪಾಸನೆಗಳು) ಪ್ರತಿವೇದದ (ಆಯಾ) ಶಾಖೆಗಳಲ್ಲಿ ವ್ಯವಸ್ಥಿತವಾಗಿರುವುದಿಲ್ಲ.

ಪ್ರಾಸಂಗಿಕವಾದ ಚರ್ಚೆಯಾದಮೇಲೆ ಪ್ರಕೃತವಿಷಯವು ಮುಂದುವರಿಯುತ್ತದೆ : 'ಓಂ ಎಂಬ ಈ ಅಕ್ಷರವನ್ನು ಉದ್ಗೀಥವಾಗಿ ಉಪಾಸಿಸಬೇಕು'[1] (ಛಾಂ. ೧. ೧. ೧), 'ಪಂಚವಿಧಸಾಮವನ್ನು ಲೋಕಗಳೆಂದು ಉಪಾಸಿಸಬೇಕು'[2] (ಛಾಂ. ಉ. ೨. ೨. ೧) ಇವೇ ಮೊದಲಾದ ಉದ್ಗೀಥಾದಿ-ಕರ್ಮಾಂಗಗಳಿಗೆ ಸಂಬದ್ಧವಾದ ಪ್ರತ್ಯಯಗಳು ಪ್ರತಿಯೊಂದು ವೇದದ ಬೇರೆ ಬೇರೆ ಶಾಖೆಗಳಲ್ಲಿ ವಿಹಿತವಾಗಿವೆ ಈ ಉಪಾಸನೆಗಳು ಆಯಾ ಶಾಖೆಗಳಲ್ಲಿರುವ ಉದ್ಗೀಥಾದಿಗಳಿಗೆ ಅನ್ವಯಿಸುತ್ತವೆಯೊ ಅಥವಾ ಎಲ್ಲ ಶಾಖೆಗಳಲ್ಲಿರುವ ಉದ್ಗೀಥಾದಿಗಳಿಗೆ ಅನ್ವಯಿಸುತ್ತವೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಸ್ವಶಾಖೆಯಲ್ಲಿರುವ ಉದ್ಗೀಥಾದಿಗಳಿಗೇ ಇವು ವಿಹಿತವಾಗಿವೆ ; ಏಕೆಂದರೆ ಸಂನಿಧಾನವಿದಲ್ಲಿದೆ. ಹತ್ತಿರದಲ್ಲಿರುವ ಸ್ವಶಾಖಾಗತವಾದ ವಿಶೇಷದಿಂದ ಆಕಾಂಕ್ಷೆಯು ಹೋಗುತ್ತಿರುವಾಗ ಅದನ್ನು ದಾಟಿ ಶಾಖಾಂತರದಲ್ಲಿ ವಿಹಿತವಾಗಿರುವ ವಿಶೇಷವನ್ನು ತೆಗೆದುಕೊಳ್ಳುವುದಕ್ಕೆ ಕಾರಣವಿರುವುದಿಲ್ಲ. ಆದುದರಿಂದ ಆಯಾ ಶಾಖೆಗೇ ಉಪಾಸನೆಯು ಅನ್ವಯಿಸುತ್ತದೆ.

**ಸಿದ್ಧಾಂತಿ**—ಈ ಉಪಾಸನೆಗಳು ಪ್ರತಿವೇದದ ಆಯಾ ಶಾಖೆಗಳಲ್ಲಿಯೇ ವ್ಯವಸ್ಥಿತವಾಗಿರುವುದಿಲ್ಲ, ಸರ್ವಶಾಖೆಗಳಿಗೂ ಅನ್ವಯಿಸುತ್ತವೆ ; ಏಕೆಂದರೆ 'ಉದ್ಗೀಥವನ್ನು ಉಪಾಸಿಸಬೇಕು' ಎಂಬ ಸಾಮಾನ್ಯಶ್ರುತಿಯನ್ನು ಸಂನಿಧಾನವಶದಿಂದ ವಿಶೇಷಕ್ಕೆ ನಿಲ್ಲಿಸುವುದು ಸರಿಯಲ್ಲ ; ಏಕೆಂದರೆ ಸಂನಿಧಾನಕ್ಕಿಂತ ಶ್ರುತಿಯೇ ಪ್ರಬಲವಾಗಿರುತ್ತದೆ. ಇದು ಸಾಮಾನ್ಯವನ್ನು ಆಶ್ರಯಿಸಿರುವ ಉಪಾಸನೆ—ಎಂಬುದಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ. ಆದುದರಿಂದ ಸ್ವರಾದಿಭೇದವಿದ್ದರೂ ಉದ್ಗೀಥತ್ವಾದಿಗಳು ಸಾಮಾನವಾಗಿರುವುದರಿಂದ ಸರ್ವಶಾಖೆಗಳಲ್ಲಿರುವ ಉದ್ಗೀಥಾದಿಗಳಲ್ಲಿಯೂ ಈ ಜಾತಿಯ ಉಪಾಸನೆಗಳು ಅನ್ವಯಿಸುತ್ತವೆ.

**ವಿ.**—ಕ್ರತುಗಳ ಅಂಗವಾಗಿ ವಿಧಿಸಲ್ಪಟ್ಟಿರುವ ಉದ್ಗೀಥಾದಿಗಳು ಸರ್ವಶಾಖೆ

---

[1] ಓಮಿತ್ಯೇತದಕ್ಷರಮುದ್ಗೀಥಮುಪಾಸೀತ ।

[2] ಲೋಕೇಷು ಪಂಚವಿಧಂ ಸಾಮೋಪಾಸೀತ ।

ಗಳಿಗೂ ಅನ್ವಯಿಸುತ್ತವೆ; ಏಕೆಂದರೆ ಶ್ರುತಿಯು ಈ ಉಪಾಸನೆಗಳನ್ನು ಉದ್ಗೀಥಕ್ಕೆ ಸಾಮಾನ್ಯವಾಗಿ ಸಂಬಂಧಿಸುತ್ತದೆ. ಸರ್ವಶಾಖಾಪ್ರತ್ಯಯನ್ಯಾಯದಿಂದಲೂ ಸರ್ವಶಾಖೆಗಳಲ್ಲಿ ವಿಧಿಸಿರುವ ಕ್ರತುವೂ ಒಂದೇ ಆಗಿರುತ್ತದೆ.

**ದ್ವೈ.**—'ಪರಮಪುರುಷನ ಅಂಗಗಳನ್ನು ಆಶ್ರಯಿಸಿರುವ ಬ್ರಹ್ಮಾದಿಗಳ ಉಪಾಸನೆಗಳನ್ನು ಅಧಿಕಾರಿಗಳು ಮಾಡಲೇ ಬೇಕು; ಆದರೆ ಪ್ರತಿವೇದದಲ್ಲಿಯೂ ಪ್ರತಿಶಾಖೆಯಲ್ಲಿಯೂ ವಿಧಿಸಿರುವ ಗುಣಗಳನ್ನೆಲ್ಲ ಉಪಸಂಹರಿಸಕೂಡದು'[1] ಎಂಬುದು ಸೂತ್ರಾರ್ಥ

## ಮಂತ್ರಾದಿವದ್ವಾಽವಿರೋಧಃ ॥ ೫೬ ॥

೫೬　ಅಥವಾ ಮಂತ್ರವೇ ಮೊದಲಾದುವುಗಳಂತೆ ವಿರೋಧವಿರುವುದಿಲ್ಲ.

ಮಂತ್ರಗಳು, ಕರ್ಮಗಳು ಮತ್ತು ಗುಣಗಳು ಶಾಖಾಂತರದಲ್ಲಿ ಉತ್ಪನ್ನವಾಗಿದ್ದರೂ ಇನ್ನೊಂದು ಶಾಖೆಗಳಲ್ಲಿ ಉಪಸಂಗ್ರಹಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ. ಯಜುರ್ವೇದದ ಒಂದು ಶಾಖೆಯಲ್ಲಿ 'ನೀನು ಕುಟರು' (ಮೈ. ಸಂ. ೧. ೧. ೬) ಎಂಬ ಅಶ್ಮಾದಾನಮಂತ್ರವು ಪಠಿತವಾಗಿಲ್ಲ; ಅವರಿಗೂ 'ನೀನು ಕುಕ್ಕುಟ ಅಥವಾ ಕುಟರು—ಎಂದು ಕಲ್ಲನ್ನು ತೆಗೆದುಕೊಳ್ಳಬೇಕು' ಎಂಬ ವಿನಿಯೋಗವಾಕ್ಯವು ಕಂಡುಬರುತ್ತದೆ. ಉಪಾಸನೆಗಳಿಗೆ ಆಶ್ರಯವಾಗಿರುವ ಕರ್ಮಾಂಗಗಳು ಎಲ್ಲ ಶಾಖೆಗಳಲ್ಲಿಯೂ ಅನುವರ್ತಿಸುವ ಹಾಗೆ ಆ ಅಂಗಗಳನ್ನು ಆಶ್ರಯಿಸಿರುವ ಉಪಾಸನೆಗಳೂ ಎಲ್ಲ ಶಾಖೆಗಳಲ್ಲಿಯೂ ಅನುವರ್ತಿಸುತ್ತವೆ—ಎಂಬುದರಲ್ಲಿ ಯಾವ ವಿರೋಧವೂ ಇಲ್ಲ.

ವಿ.—ಇಲ್ಲಿ 'ಅಥವಾ'-ಶಬ್ದಕ್ಕೆ 'ಮತ್ತು' ಎಂಬ ಅರ್ಥವಿದೆ. ಜಾತಿ-ಗುಣ-ಸಂಖ್ಯಾ-ಸಾದೃಶ್ಯ-ಕ್ರಮ-ದ್ರವ್ಯಗಳನ್ನು 'ಆದಿ'-ಶಬ್ದವು ಸೂಚಿಸುತ್ತದೆ. ಹೇಗೆ ಮಂತ್ರಾದಿಗಳು—ಒಂದೇ ಶಾಖೆಯಲ್ಲಿ ಹೇಳಲ್ಪಟ್ಟಿದ್ದರೂ—ಶ್ರುತ್ಯಾದಿಪ್ರಮಾಣದ ಪ್ರಕಾರ ಎಲ್ಲ ಶಾಖೆಗಳಲ್ಲಿಯೂ ಅನುವರ್ತಿಸುವುದರಲ್ಲಿ ವಿರೋಧವಿರುವುದಿಲ್ಲವೊ ಹಾಗೆಯೇ ಉದ್ಗೀಥೋಪಾಸನೆಯೂ ಕೂಡ ಸರ್ವಶಾಖೆಗಳಲ್ಲಿಯೂ ಅನುವರ್ತಿಸುತ್ತದೆ ಎಂಬುದರಲ್ಲಿ ಯಾವ ವಿರೋಧವೂ ಇರುವುದಿಲ್ಲ!

**ದ್ವೈ.**—'ಸರ್ವದೇವತಾಮಂತ್ರಗಳನ್ನು ಅಧ್ಯಯನಮಾಡುವುದರಲ್ಲಿ ಯಾವ ವಿರೋಧವೂ ಇಲ್ಲದಿರುವಂತೆ ಅಧಮದೇವತೆಗಳ ಗುಣಗಳನ್ನು ಉತ್ತಮದೇವತೆಗಳಲ್ಲಿ ಉಪಸಂಹಾರಮಾಡಿದರೆ ಯಾವ ವಿರೋಧವೂ ಇರುವುದಿಲ್ಲ'[2] ಎಂಬುದು ಸೂತ್ರಾರ್ಥ.

---

[1] ಬ್ರಹ್ಮಾದ್ಯಂಗದೇವತಾವಬದ್ಧೋಪಾಸನಾದಿ ಪ್ರತಿಶಾಖಂ ಪ್ರತಿವೇದಂ ಚ ನೋಪಸಂಹ್ರಿಯತೇ (ಮ. ಭಾ.).

[2] ಸರ್ವದೇವತಾಮಂತ್ರಾ ಯಥಾಽಧೀಯಂತ ಏವಮವಿರೋಧೋ ವಾ । ಉಪಾಸನಾಂಗದೇವಾನಾಂ ಪರಮಾಂಗತಯಾ ಭವೇತ್ (ಮ. ಭಾ.).

## ೩೨. ಭೂಮಜ್ಯಾಯಸ್ತ್ವಾಧಿಕರಣ*

**ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ ॥ ೫೭ ॥**

೫೭ ಭೂಮರೂಪವಾದ (ಉಪಾಸನೆಗೇ) ಪ್ರಾಧಾನ್ಯವು, ಕ್ರತುಗಳ ಹಾಗೆ, ಹಾಗೆಯೇ (ಶ್ರುತಿಯು) ತಿಳಿಸುತ್ತದೆ

'ಪ್ರಾಚೀನಶಾಲ ಔಪಮನ್ಯವ' (ಛಾಂ ಉ ೫ ೧೧ ೧) ಎಂಬ ಆಖ್ಯಾಯಿಕೆಯಲ್ಲಿ ವ್ಯಸ್ತವಾದ[1] (ಎಂದರೆ ಬಿಡಿಬಿಡಿಯಾದ) ಮತ್ತು ಸಮಸ್ತವಾದ[2] ವೈಶ್ವಾನರನ ಉಪಾಸನೆಗಳನ್ನು ಹೇಳಿದೆ ಇಲ್ಲಿ ಎರಡು ರೀತಿಯಲ್ಲಿಯೂ ಉಪಾಸಿಸಬೇಕೊ ಅಥವಾ ಸಮಸ್ತವಾಗಿ ಉಪಾಸಿಸಬೇಕೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಇಲ್ಲಿ ವ್ಯಸ್ತವಾದ ವೈಶ್ವಾನರ ಉಪಾಸನೆಯೇ ವಿವಕ್ಷಿತವಾಗಿದೆ, ಏಕೆಂದರೆ ಸುತೇಜಸ್ಸೇ ಮೊದಲಾದ ಪ್ರತಿಯೊಂದು ಅವಯವದಲ್ಲಿಯೂ **ಉಪಾಸ್ಸೇ** 'ಉಪಾಸಿಸುತ್ತಿರುವೆ' ಎಂಬ ಕ್ರಿಯಾಪದವಿದೆ ಮತ್ತು 'ನಿನ್ನ ಕುಲದಲ್ಲಿ ಸುತ ಪ್ರಸುತ ಆಸುತ (ಎಂಬ ಸೋಮಪಾನೀಯಗಳು) ಕಂಡುಬರುತ್ತವೆ' ಎಂಬ ಫಲಭೇದವನ್ನು ಹೇಳಿದೆ.

**ಸಿದ್ಧಾಂತಿ**—ಭೂಮವಾದ ಎಂದರೆ ವಸ್ತುಗಳನ್ನೆಲ್ಲ ಒಳಕೊಂಡಿರುವ ಸಮಸ್ತ-ವೈಶ್ವಾನರೋಪಾಸನೆಗೇ ಇಲ್ಲಿ ಪ್ರಾಧಾನ್ಯವನ್ನು ಹೇಳಿದೆಯೇ ಹೊರತು ಅವಯವವೋಪಾಸನೆಗಳಿಗಲ್ಲ ಇದು ಕ್ರತುಗಳ ಹಾಗೆ ದರ್ಶಪೂರ್ಣಮಾಸವೇ ಮೊದಲಾದ ಕ್ರತುಗಳಲ್ಲಿ ಸಮಸ್ತವಾಗಿ ಸಾಂಗವಾದ ಪ್ರಧಾನಯಾಗದ ಪ್ರಯೋಗವು ವಿವಕ್ಷಿತವಾಗಿರುವುದೇ ಹೊರತು ವ್ಯಸ್ತವಾದ ಪ್ರಯಾಜಾದಿಗಳ ಭಿನ್ನಪ್ರಯೋಗವಾಗಲಿ ಏಕದೇಶಾಂಗಯುಕ್ತವಾದ ಪ್ರಧಾನವಾದ ಪ್ರಯೋಗವಾಗಲಿ ವಿವಕ್ಷಿತವಾಗಿಲ್ಲ ಮತ್ತೆ ಏಕವಾಕ್ಯತೆಯ ನಿರ್ಧಾರದಿಂದ ಭೂಮರೂಪವೈಶ್ವಾನರೋಪಾಸನೆಯೇ ಪ್ರಧಾನವು ಎಂಬುದು ತಿಳಿದು ಬರುತ್ತದೆ ಈ ಗ್ರಂಥಭಾಗಗಳ ಸಂಬಂಧವನ್ನು ಆಲೋಚಿಸಿದರೆ ವೈಶ್ವಾನರವಿದ್ಯೆಯೇ ವಿಷಯವೆಂದು ತಿಳಿದುಬರುತ್ತದೆ, 'ನೀನು ನನ್ನ ಒಳಿಗೆ ಬಾರದಿದ್ದರೆ ನಿನ್ನ ತಲೆ ಬಿದ್ದು ಹೋಗುತ್ತಿತ್ತು' (ಛಾಂ ಉ ೫ ೧೨ ೨) ಎಂಬಲ್ಲಿ ವ್ಯಸ್ತೋಪಾಸನೆಯನ್ನು ನಿಂದಿಸಿದ 'ಅವನು ಸರ್ವಲೋಕಗಳಲ್ಲಿಯೂ ಸರ್ವಪ್ರಾಣಿಗಳಲ್ಲಿಯೂ ಸರ್ವಾತ್ಮಗಳಲ್ಲಿಯೂ ಅನ್ನ

---

* ಇದು ಮಧ್ವಭಾಷ್ಯದಲ್ಲಿ ಭೂಮಾಧಿಕರಣ ಎನಿಸಿದೆ

1 'ನೀನು ಯಾರನ್ನು ಆತ್ಮನೆಂದು ಉಪಾಸಿಸುತ್ತೀಯೊ ಆವನು ಸುತೇಜಸ್ಸೆಂಬ ವೈಶ್ವಾನರಾತ್ಮನು' (ಛಾಂ ಉ ೫ ೧)

2 'ಆ ಈ ವೈಶ್ವಾನರಾತ್ಮನ ತಲೆಯೇ ಸುತೇಜಸ್ಸು, ಕಣ್ಣೇ ವಿಶ್ವರೂಪವು, ಪ್ರಾಣವೇ ಪೃಥಗ್ವರ್ತ್ಮಾತ್ಮನು, ಮುಂಡವೇ ಬಹುಲನು, ಮೂತ್ರಾಶಯವೇ ರಯಿ, ಪಾದಗಳೇ ಪೃಥ್ವಿ' (ಛಾಂ ಉ ೫ ೧೮ ೨)

ವನ್ನು ತಿನ್ನುತ್ತಾನೆ' (ಛಾಂ ಉ ೫ ೧೮ ೧) ಎಂಬಲ್ಲಿ ಭೂಮರೂಪೋಪಾಸನೆಗೆ ಫಲವನ್ನು ಹೇಳಿದೆ ಪ್ರತಿಯೊಂದು ವ್ಯಸ್ತೋಪಾಸನೆಗೂ **ಉಪಾಸ್ತೇ** ಎಂದು ಕ್ರಿಯಾಪದವನ್ನು ಹೇಳಿರುವುದು ಅವರವರ ಅಭಿಪ್ರಾಯವನ್ನು ಅನುವಾದಮಾಡಿಕೊಳ್ಳುವುದಕ್ಕೇ ಹೊರತು ವ್ಯಸ್ತೋಪಾಸನೆಯನ್ನು ವಿಧಿಸುವುದಕ್ಕಲ್ಲ ಆದುದರಿಂದ ಸಮಸ್ತೋಪಾಸನ ಪಕ್ಷವೇ ಒಳ್ಳೆಯದು

**ವಿ** —ಇಲ್ಲಿ ಸಮಸ್ತೋಪಾಸನೆಯನ್ನೇ ವಿಧಿಸಿದೆ ಪಂಚಮಹರ್ಷಿಗಳು ವೈಶ್ವಾನರಾತ್ಮನನ್ನು ತಿಳಿದುಕೊಳ್ಳಲು ಬಯಸಿದರೆಂಬುದು ಮೊದಲಿನಿಂದಲೂ ಸ್ಪಷ್ಟವಾಗಿದೆ ಅಶ್ವಪತಿಯು ಅವರಿಗೆ ಜಗಚ್ಛರೀರಿಯಾಗಿರುವ ವೈಶ್ವಾನರಾತ್ಮನನ್ನು ಉಪದೇಶಿಸುತ್ತಾನೆ, ಅವನ ಉಪದೇಶದ ಕೊನೆಯ ಭಾಗವು ಸರ್ವಲೋಕ-ಸರ್ವಭೂತ-ಸರ್ವಾತ್ಮರ ಅನ್ನವಾದ ಪರಬ್ರಹ್ಮನ ಅನುಭವವೇ ವೈಶ್ವಾನರೋಪಾಸನೆಯ ಫಲವೆಂದು ಹೇಳುತ್ತದೆ ಅವಯವೋಪಾಸನೆಯನ್ನು ಹೇಳಿರುವುದು ಸಮಸ್ತೋಪಾಸನೆಯ ಏಕದೇಶಾನುವಾದವೆಂದು ತಿಳಿಯಬೇಕು

**ದ್ವೈ.**—'ಸರ್ವಗುಣಗಳಲ್ಲಿ ಭೂಮಗುಣಕ್ಕೆ ಪ್ರಾಧಾನ್ಯವಿದೆ, ಇದು ಕ್ರತುವಿನಂತೆ ಎಲ್ಲ ಗುಣಗಳೊಂದಿಗೆ ಇರುತ್ತದೆ, ಹೀಗೆಂದೇ ಶ್ರುತಿಯು ಹೇಳುತ್ತದೆ'[1] ಎಂಬುದು ಸೂತ್ರಾರ್ಥ

'ಪರದೇವತೆಯನ್ನು ಭೂಮವೆಂದೇ ಉಪಾಸಿಸಬೇಕು' **ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯಃ** ಎಂದು ಗೌಪವನ-ಶ್ರುತಿಯು ಹೇಳುತ್ತದೆ

---

1 **ಸರ್ವಗುಣೇಷು ಭೂಮಗುಣಸ್ಯ ಜ್ಯಾಯಸ್ತ್ವಂ ಕ್ರತುವತ್ ಸರ್ವತ್ರ ಸಹಭಾವಾತ್** (**ಮ ಭಾ** )

# ೩೩. ಶಬ್ದಾದಿಭೇದಾಧಿಕರಣ*

**ನಾನಾ ಶಬ್ದಾದಿಭೇದಾತ್ || ೫೮ ||**

೫೮. (ವಿದ್ಯೆಗಳು) ಬೇರೆಬೇರೆಯೇ; ಏಕೆಂದರೆ ಶಬ್ದಾದಿಗಳ ಭೇದವಿದೆ

ಹಿಂದಿನ ಅಧಿಕರಣದಲ್ಲಿ ಸಮಸ್ತೋಪಾಸನೆಯೇ ಶ್ರೇಷ್ಠವೆಂದು ಹೇಳಿದ್ದಾಯಿತು. ಬೇರೆ ಬೇರೆ ಶ್ರುತಿಗಳಲ್ಲಿರುವ ಇತರ ಉಪಾಸನೆಗಳನ್ನೂ ಒಟ್ಟುಗೂಡಿಸಿ ಉಪಾಸಿಸಬೇಕೊ ಅಥವಾ ಬೇರೆ ಬೇರೆ ಮಾಡಬೇಕೊ ?—ಎಂಬ ಸಂಶಯವು ಒದಗುತ್ತದೆ

**ಪೂರ್ವಪಕ್ಷ**—ವೇದ್ಯವು ಒಂದೇ ಆಗಿರುವಾಗ ವಿದ್ಯೆಗಳು ಬೇರೆಬೇರೆಯೆಂದು ನಿರ್ಣಯಿಸಲಾಗುವುದಿಲ್ಲ. ಉದಾಹರಣೆಗೆ. 'ಅವನು ಮನೋಮಯನು ಪ್ರಾಣಶರೀರನು'[1] (ಛಾಂ. ಉ. ೩. ೧೪. ೨); 'ಸುಖವು ಬ್ರಹ್ಮ, ಆಕಾಶವು ಬ್ರಹ್ಮ'[2] (ಛಾಂ. ಉ. ೪. ೧೦. ೪) ಇವೇ ಮೊದಲಾದುವುಗಳಲ್ಲಿ ಶ್ರುತಿಯು ಬೇರೆಬೇರೆಯಾಗಿದ್ದರೂ ವೇದ್ಯನಾದ ಈಶ್ವರನು ಒಬ್ಬನೇ ಆಗಿರುವನು. ಇದರಂತೆ ಕೆಲವೆಡೆಗಳಲ್ಲಿ (ಛಾಂ ಉ. ೪. ೩. ೩, ೫. ೧. ೧; ೭. ೧೫. ೧) ಪ್ರಾಣವು ಒಂದೇ ಆಗಿರುತ್ತದೆ ಶ್ರುತಿಗಳು ಬೇರೆಬೇರೆಯಾಗಿರುವುದು ಬೇರೆ ಬೇರೆ ಗುಣಗಳನ್ನು ವಿಧಾನಮಾಡುವುದಕ್ಕೆ ಎಂದು ತಿಳಿದುಕೊಳ್ಳಬೇಕು.

**ಸಿದ್ಧಾಂತಿ**—ವೇದ್ಯವು ಒಂದೇ ಆಗಿದ್ದರೂ ಉಪಾಸನೆಗಳು ಬೇರೆ ಬೇರೆ; ಏಕೆಂದರೆ ಶಬ್ದಗಳು, ಗುಣಗಳು ಬೇರೆಬೇರೆಯಾಗಿವೆ. 'ತಿಳಿಯಬೇಕು' (**ವೇದ**), 'ಉಪಾಸಿಸಬೇಕು' (**ಉಪಸೀತ**), 'ಅವನು ನಿಶ್ಚಯಿಸಬೇಕು' (**ಸ ಕ್ರತುಂ ಕುರ್ವೀತ**) ಎಂಬಲ್ಲಿ ಶಬ್ದಗಳ ಭೇದವು ಕಂಡುಬರುತ್ತದೆ. ಶಬ್ದಭೇದವು ಕರ್ಮಭೇದಕ್ಕೆ ಕಾರಣವೆಂದು ಪೂರ್ವಮೀಮಾಂಸೆಯಲ್ಲಿ (ಜೈ. ಸೂ. ೨. ೨. ೧)[3] ಹೇಳಿದೆ. **ವೇದ, ಉಪಾಸೀತ** ಮೊದಲಾದ ಶಬ್ದಗಳಲ್ಲಿ ಅರ್ಥಭೇದವು ಕಾಣದೆ, ಒಂದು ಬಗೆಯಾದ ಮನೋವೃತ್ತಿಯು ಕಾಣುತ್ತಿದ್ದರೂ ಅನುಬಂಧವು (ಎಂದರೆ ಸಂಬಂಧವು) ಬೇರೆಯಾಗಿರುವುದರಿಂದ ಉಪಾಸನೆಯೂ ಬೇರೆಯಾಗಿರುತ್ತದೆ. ಉಪಾಸ್ಯನಾದ ಈಶ್ವರನು ಒಬ್ಬನೇ ಆದರೂ ಪ್ರತಿ ಪ್ರಕರಣದಲ್ಲಿಯೂ ಬೇರೆ ಬೇರೆ ಗುಣಗಳನ್ನು ಉಪದೇಶಿಸಿರುತ್ತದೆ. ಬೇರೆ ಬೇರೆ ಗುಣಗಳಿಂದ ವಿಶಿಷ್ಟವಾಗಿ ಬ್ರಹ್ಮವು ಬೇರೆಬೇರೆಯಾಗಿಯೇ ಉಪಾಸ್ಯವಾಗಿರುತ್ತದೆ. 'ಇದು ವಿದ್ಯಾವಿಧಿ', 'ಇವು ಗುಣವಿಧಿಗಳು' ಎಂದು ನಿರ್ಣಯಿಸುವುದಕ್ಕೆ ಯಾವ ಕಾರಣವೂ ಇರುವುದಿಲ್ಲ. ವಿದ್ಯೆಯು ಒಂದೇ ಆಗಿದ್ದರೆ ಸತ್ಯಕಾಮಾದಿ-ಗುಣಗಳನ್ನು ಪುನಃ ಪುನಃ ಹೇಳಿರುವು

---

* ಇದನ್ನು ಮಧ್ವಭಾಷ್ಯದಲ್ಲಿ ನಾನಾಧಿಕರಣ ಎಂದು ಕರೆದಿದೆ.

1 ಮನೋಮಯಃ ಪ್ರಾಣಶರೀರಃ ।

2 ಕಂ ಬ್ರಹ್ಮ ಖಂ ಬ್ರಹ್ಮ ।

3 ಶಬ್ದಾಂತರೇ ಕರ್ಮಭೇದಃ ಕೃತಾನುಬಂಧತ್ವಾತ್ ।

ದಕ್ಕೆ ಕಾರಣವಿರುವುದಿಲ್ಲ. ಪ್ರತಿಯೊಂದು ಪ್ರಕರಣದಲ್ಲಿಯೂ 'ಈ ಕಾಮವುಳ್ಳವನು ಇದನ್ನು ಉಪಾಸಿಸಬೇಕು, ಈ ಕಾಮವುಳ್ಳವನು ಇದನ್ನು ಉಪಾಸಿಸಬೇಕು' ಎಂದು ಆಕಾಂಕ್ಷಾರಾಹಿತ್ಯವೇ ಕಂಡುಬರುತ್ತಿರುವುದರಿಂದ ಏಕವಾಕ್ಯತೆಯೂ ಆಗುವಂತಿಲ್ಲ. ಮತ್ತೆ ವೈಶ್ವಾನರವಿದ್ಯೆಯಂತೆ ಸಮಸ್ತಗುಣಗಳ ಉಪಾಸನೆಯನ್ನು ವಿಧಿಸಿಲ್ಲ. ಆದುದ ರಿಂದ ಇತರ ಉಪಾಸನೆಗಳು ಬೇರೆಬೇರೆಯೇ.

ವಿ.—ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷವೇ ಫಲವುಳ್ಳ ಸದ್ವಿದ್ಯಾದಿಗಳೆಲ್ಲ ಒಂದೇ ವಿದ್ಯೆಯೊ ಅಥವಾ ಬೇರೆಬೇರೆಯೊ—? ಎಂಬುದು ಸಂಶಯ. ಇಂಥ ಉಪಾಸನೆಗಳೆಲ್ಲ ಬೇರೆಬೇರೆಯೆಂಬುದು ಸಿದ್ಧಾಂತ; ಏಕೆಂದರೆ ಶಬ್ದ, ಅಭ್ಯಾಸ, ಸಂಖ್ಯೆ, ಗುಣ, ಪ್ರಕ್ರಿಯೆ, ನಾಮಧೇಯ—ಇವುಗಳಲ್ಲಿ ಭೇದವಿದೆ. ಉಪಾಸನೆಗಳಿಗೆಲ್ಲ ಪರಬ್ರಹ್ಮನೊಬ್ಬನೇ ವಿಷಯ ನಾಗಿದ್ದರೂ ಆಯಾ ಪ್ರಕರಣದಲ್ಲಿ ಹೇಳಿರುವ ಜಗದೇಕಕಾರಣತ್ವ, ಅಪಹತ-ಪಾಪ್ಮತ್ವವೇ ಮೊದಲಾದ ವಿಶೇಷಣಗಳಿಂದ ಅವನು ವಿಶಿಷ್ಟನಾಗಿರುತ್ತಾನೆ; ಆದುದರಿಂದ ಉಪಾಸನೆ ಗಳು ಬೇರೆಬೇರೆಯಾಗಿರುತ್ತವೆ

**ದ್ವೈ.**—'(ಭೂಮತ್ವವು) ನಾನಾ ಪ್ರಕಾರವಾಗಿರುತ್ತದೆ; ಏಕೆಂದರೆ ಶಬ್ದಾದಿ-ಪ್ರಮಾಣಗಳಲ್ಲಿ ತಾರತಮ್ಯವಿದೆ' ಎಂಬುದು ಸೂತ್ರಾರ್ಥ

ಶಬ್ದ, ಅನುಮಾನ, ಪ್ರತ್ಯಕ್ಷ—ಇವುಗಳು ಜೀವರ ಯೋಗ್ಯತೆಯ ಪ್ರಕಾರ ಒಂದೇ ವಸ್ತುವನ್ನು ಬ್ರಹ್ಮಾದಿಗಳಿಗೆ ಬೇರೆಬೇರೆಯಾಗಿ ತೋರಿಸುತ್ತವೆ; ಆದುದರಿಂದ ಈಶ್ವರನ ಪೂರ್ಣತ್ವವೂ ಬೇರೆಬೇರೆಯಾಗಿ ತೋರುತ್ತದೆ ಮತ್ತು ಉಪಾಸನೆಯೂ ಫಲವೂ ಭಿನ್ನ ವಾಗಿರುತ್ತದೆ. ಆದುದರಿಂದ ಭೂಮತ್ವವೂ ಭಿನ್ನವಾಗಿ ಉಪಾಸಿಸಲ್ಪಡುತ್ತದೆ.[1]

---

[1] ಅತೋ ಭೂಮತ್ವಮಪಿ ನಾನೈವೋಪಾಸ್ಯತೇ (ಮ. ಭಾ.).

## ೩೪. ವಿಕಲ್ಪಾಧಿಕರಣ*

**ವಿಕಲ್ಪೋಽವಿಶಿಷ್ಟಫಲತ್ವಾತ್† ॥ ೫೯ ॥**

೫೯. (ಉಪಾಸನೆಗಳಿಗೆ) ವಿಕಲ್ಪವಿದೆ; ಏಕೆಂದರೆ ಫಲದಲ್ಲಿ ವಿಶೇಷವಿಲ್ಲ.

ಉಪಾಸನೆಗಳು ಬೇರೆಬೇರೆ ಎಂದು ಸಿದ್ಧವಾಗಿರುವಾಗ ಅವುಗಳನ್ನು ಉಪಾಸಕನು ತನ್ನ ಇಚ್ಛೆಯಂತೆ ಸಮುಚ್ಚಯಮಾಡಿ ಅಥವಾ ವಿಕಲ್ಪಮಾಡಿ ಉಪಾಸಿಸಬೇಕೊ? ಅಥವಾ ನಿಯಮದಿಂದ ವಿಕಲ್ಪಮಾಡಿ ಉಪಾಸಿಸಬೇಕೊ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಸಮುಚ್ಚಯ-ನಿಯಮವೂ ಇಲ್ಲ; ಏಕೆಂದರೆ ಅಗ್ನಿಹೋತ್ರಾದಿಗಳಂತೆ ಇವು ನಿತ್ಯವಲ್ಲ. ವಿಕಲ್ಪ-ನಿಯಮವೂ ಇಲ್ಲ; ಏಕೆಂದರೆ ಒಂದು ಉಪಾಸನೆಗೆ ಅಧಿಕಾರಿಯಾದವನು ಇನ್ನೊಂದು ಉಪಾಸನೆಗೆ ಅಧಿಕಾರಿಯಲ್ಲವೆಂದು ಹೇಳಿಲ್ಲ. ಆದುದರಿಂದ ತನ್ನ ಇಚ್ಛೆಯಂತೆ ಅನುಷ್ಠಿಸಬಹುದು.

**ಸಿದ್ಧಾಂತಿ**—ಈ ಉಪಾಸನೆಗಳಿಗೆ ವಿಕಲ್ಪವು ಯುಕ್ತವೇ ಹೊರತು ಸಮುಚ್ಚಯವಲ್ಲ; ಏಕೆಂದರೆ ಇವುಗಳಿಗೆ ಉಪಾಸ್ಯವಿಷಯದ ಫಲವು ಸಮಾನವಾಗಿರುತ್ತದೆ. ಒಂದು ಉಪಾಸನೆಯಿಂದ ಈಶ್ವರಾದಿಗಳನ್ನು ಸಾಕ್ಷಾತ್ಕರಿಸಿಕೊಂಡರೆ ಉಳಿದವು ವ್ಯರ್ಥವಾಗುತ್ತವೆ. ಉಪಾಸನೆಗಳ ಸಮುಚ್ಚಯದಿಂದ ಸಾಕ್ಷಾತ್ಕಾರವಾಗುವುದಿಲ್ಲ; ಏಕೆಂದರೆ ಅದರಿಂದ ಚಿತ್ತವಿಕ್ಷೇಪವುಂಟಾಗುತ್ತದೆ. ಉಪಾಸನೆಯ ಫಲವು ಸಾಕ್ಷಾತ್ಕಾರದಿಂದಲೇ ಸಾಧ್ಯವೆಂದು ಶ್ರುತಿಗಳೂ ಸ್ಮೃತಿಗಳೂ ತಿಳಿಸುತ್ತವೆ. 'ಯಾವನಿಗೆ ಇಂಥ ನಿಶ್ಚಯವಿರುವುದೊ, ಸಂಶಯವಿರುವುದಿಲ್ಲವೊ (ಅವನು ಈಶ್ವರಭಾವವನ್ನು ಹೊಂದುತ್ತಾನೆ)'[1] (ಛಾಂ. ಉ ೩. ೧೪. ೪); 'ದೇವನೇ ಆಗಿ ದೇವತೆಗಳನ್ನು ಸೇರುತ್ತಾನೆ'[2] (ಬೃ. ಉ. ೪. ೧. ೨); ಮತ್ತು 'ಯಾವಾಗಲೂ ಆ ಭಾವವನ್ನೇ ಭಾವಿಸುತ್ತಿರುವ ಅವನು ಅದನ್ನೇ ಹೊಂದುವನು'[3] (ಗೀತಾ, ೮ ೬). ಆದುದರಿಂದ ಸಮಾನಫಲವುಳ್ಳ ಉಪಾಸನೆಗಳಲ್ಲಿ ಯಾವುದಾದರೊಂದನ್ನು ತೆಗೆದುಕೊಂಡು ಉಪಾಸ್ಯವಿಷಯದ ಸಾಕ್ಷಾತ್ಕಾರದಿಂದ ಅದರ ಫಲವಾಗುವವರೆಗೂ ಅದರಲ್ಲಿಯೇ ತತ್ಪರನಾಗಿರಬೇಕು.[4]

---

* ಶ್ರೀಭಾಷ್ಯದ ಪ್ರಕಾರ ಮುಂದಿನ ಸೂತ್ರವೂ ಈ ಅಧಿಕರಣಕ್ಕೇ ಸೇರಿದೆ.

† ಮಧ್ವಭಾಷ್ಯದ ಪ್ರಕಾರ ಸೂತ್ರದ ಉತ್ತರಾರ್ಧವು ವಿಶಿಷ್ಟ-ಫಲತ್ವಾತ್ ಎಂದಾಗಿದೆ.

[1] ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ ।

[2] ದೇವೋ ಭೂತ್ವಾ ದೇವಾನಪ್ಯೇತಿ ।

[3] ಸದಾ ತದ್ಭಾವಭಾವಿತಃ ।

[4] ತಸ್ಮಾದವಿಶಿಷ್ಟಫಲಾನಾಂ ವಿದ್ಯಾನಾಮನ್ಯತಮಾಮಾದಾಯ ತತ್ಪರಃ ಸ್ಯಾದ್ಯಾವದುಪಾಸ್ಯವಿಷಯಸಾಕ್ಷಾತ್ಕರಣೇನ ತತ್ಫಲಂ ಪ್ರಾಪ್ತಮಿತಿ (ಸೂ. ಭಾ.).

ವಿ.—ಅಗ್ನಿಹೋತ್ರ, ದರ್ಶಪೂರ್ಣಮಾಸ—ಮೊದಲಾದುವುಗಳಿಗೆ ಸ್ವರ್ಗಪ್ರಾಪ್ತಿಯೆಂಬ ಒಂದೇ ಫಲವಿದ್ದರೂ ಫಲಾಧಿಕ್ಯಕ್ಕಾಗಿ ಅವುಗಳೆಲ್ಲವನ್ನೂ ಅನುಷ್ಠಿಸುವಂತೆ ಇಲ್ಲಿಯೂ ಉಪಾಸನೆಗಳನ್ನು ಸಮುಚ್ಚಯಮಾಡಬೇಕು—ಎಂಬುದು ಪೂರ್ವಪಕ್ಷ. ಫಲಗಳಲ್ಲಿ ಭೇದವಿಲ್ಲದಿರುವುದರಿಂದ ವಿಕಲ್ಪವನ್ನೇ ಮಾಡಬೇಕು—ಎಂಬುದು ಸಿದ್ಧಾಂತ. ಸಮಸ್ತ ಬ್ರಹ್ಮವಿದ್ಯೆಗಳಿಗೂ ಅನವಧಿಕಾತಿಶಯಾನಂದ-ಬ್ರಹ್ಮಾನುಭವವೇ ಫಲವೆಂದು ಹೇಳಿದೆ: 'ಬ್ರಹ್ಮೋಪಾಸಕನು ಸರ್ವೋತ್ಕೃಷ್ಟವಾದುದನ್ನು ಹೊಂದುತ್ತಾನೆ' (ತೈ. ಉ. ೨. ೧. ೧). ಬೇರೆ ಫಲಗಳಿರುವ ಉಪಾಸನೆಗಳಿಗೆ ಸಮುಚ್ಚಯವು ಸಂಭವಿಸಬಹುದೇ ಹೊರತು ಬ್ರಹ್ಮಪ್ರಾಪ್ತಿಯೆಂಬ ಒಂದೇ ಫಲವಿರುವ ಉಪಾಸನೆಗಳಿಗೆ ಸಂಭವಿಸುವುದಿಲ್ಲ.

ದ್ವೈ.—'ಪರಬ್ರಹ್ಮನ ಇತರ ರೂಪಗಳನ್ನು ಉಪಾಸಿಸುವಾಗ ವಿಕಲ್ಪವಿದೆ; ಏಕೆಂದರೆ ವಿಶಿಷ್ಟಫಲವಿದೆ' ಎಂಬುದು ಸೂತ್ರಾರ್ಥ.

ತನ್ನ ಯೋಗ್ಯತೆಯ ಪ್ರಕಾರ ಉಪಾಸನೆಯನ್ನು ಮಾಡಿದ ಮೇಲೆ ವಿಶಿಷ್ಟಫಲದ ಅಪೇಕ್ಷೆಯಿಂದ ಬೇರೆ ರೂಪದ ಉಪಾಸನೆಯನ್ನು ಮಾಡಲು ವಿಕಲ್ಪವಿದೆ.[1] ಮುಕ್ತಿಗೋಸ್ಕರ ಆತ್ಮಯೋಗ್ಯವಾದ ಉಪಾಸನೆಯನ್ನು ಮಾಡಿ, ಪಾಪಕ್ಷಯಕ್ಕೆ ನೃಸಿಂಹಾದಿಗಳ ಉಪಾಸನೆಯನ್ನು ಮಾಡಬಹುದು.

---

[1] ಸ್ವಯೋಗ್ಯೋಪಾಸನಾನಂತರಂ ಸಾಮಾನ್ಯಸ್ಯಾಪಿ ಕಸ್ಯಚಿದುಪಾಸನಂ ವಿಕಲ್ಪೇನ ಭವತಿ ವಿಶಿಷ್ಟಫಲಾಪೇಕ್ಷಯಾ (ಮ. ಭಾ.).

## ೩೫. ಕಾಮ್ಯಾಧಿಕರಣ

**ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವ-ಭಾವಾತ್ ॥ ೬೦ ॥**

೬೦. ಆದರೆ ಕಾಮ್ಯೋಪಾಸನೆಗಳನ್ನು ಇಚ್ಛೆಯಿದ್ದಂತೆ ಸಮುಚ್ಚಯ ಮಾಡಿಕೊಳ್ಳಬಹುದು ಅಥವಾ ಮಾಡಿಕೊಳ್ಳದಿರಬಹುದು ; ಏಕೆಂದರೆ ಹಿಂದೆ ಹೇಳಿದ ಹೇತುವಿರುವುದಿಲ್ಲ.

'ಯಾವನು ಹೀಗೆ ಈ ವಾಯುವನ್ನು ದಿಕ್ಕುಗಳ ಮಗುವೆಂದು ಅರಿತುಕೊಂಡಿರುವನೊ ಅವನು ಪುತ್ರರೋದನವನ್ನು ಮಾಡುವುದಿಲ್ಲ'[1] (ಛಾಂ. ಉ. ೩. ೧೫. ೨), 'ಯಾವನು ನಾಮವನ್ನು ಬ್ರಹ್ಮವೆಂದು ಉಪಾಸಿಸುವನೊ ಅವನು ನಾಮದ ಗತಿ ಹೋಗುವವರೆಗೆ ಸ್ವೇಚ್ಛಾಚಾರಿಯಾಗುತ್ತಾನೆ'[2] (ಛಾಂ. ಉ. ೭. ೧. ೫)—ಇವೇ ಮೊದಲಾದ ಕಾಮವಿದ್ಯೆಗಳು ತಮ್ಮ ಫಲಗಳನ್ನು ಕರ್ಮದ ಹಾಗೆ ಅದೃಷ್ಟರೂಪದಿಂದ ಸಾಧಿಸಿಕೊಡುವುದರಿಂದ ಸಾಕ್ಷಾತ್ಕಾರದ ಅಪೇಕ್ಷೆಯು ಅವುಗಳಿಗಿರುವುದಿಲ್ಲ. ಅವುಗಳನ್ನು ಇಚ್ಛೆಯಿದ್ದಂತೆ ಸಮುಚ್ಚಯಮಾಡಿಕೊಳ್ಳಬಹುದು ಅಥವಾ ಮಾಡಿಕೊಳ್ಳದೆಯೂ ಇರಬಹುದು ; ಏಕೆಂದರೆ ಸಮಾನಫಲವೆಂಬ ಹಿಂದೆ ಹೇಳಿದ ವಿಕಲ್ಪಹೇತುವಿರುವುದಿಲ್ಲ.

ವಿ —ಬ್ರಹ್ಮಪ್ರಾಪ್ತಿಯೆಂಬ ಫಲಕ್ಕಿಂತ ವ್ಯತಿರಿಕ್ತವಾದ ಕಾಮ್ಯಫಲಗಳುಳ್ಳ ವಿದ್ಯೆಗಳಲ್ಲಿ ಉಪಾಸಕನ ಇಷ್ಟಾನುಸಾರವಾಗಿ ಸಮುಚ್ಚಯವನ್ನು ಮಾಡಬಹುದು ಅಥವಾ ಮಾಡದಿರಬಹುದು ; ಏಕೆಂದರೆ ಅವುಗಳಿಗೆ ಪರಿಮಿತವಾದ ಫಲವಿರುವುದರಿಂದ ಅಧಿಕಫಲಪ್ರಾಪ್ತಿಯ ಅಪೇಕ್ಷೆಯಿದೆ.

ದ್ವೈ.—'ವಿಶಿಷ್ಟಫಲಕ್ಕಾಗಿ ಭಗವದ್ರೂಪಗಳನ್ನು ಉಪಾಸಿಸುವಾಗ ಉಪಾಸಕನ ಕಾಮನೆಗೆ ಅನುಸಾರವಾಗಿ ಭಗವಂತನ ಗುಣಗಳನ್ನು ಉಪಸಂಹಾರಮಾಡಬಹುದು ; ಏಕೆಂದರೆ ಹಿಂದಿನ ಉದ್ದೇಶವು ಇರುವುದಿಲ್ಲ' ಎಂಬುದು ಸೂತ್ರಾರ್ಥ.

---

[1] ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದಂ ರೋದಿತಿ ।

[2] ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾಕಾಮಚಾರೋ ಭವತಿ ।

## ೩೬. ಯಥಾಶ್ರಯಭಾವಾಧಿಕರಣ*

(ಸೂ. ೬೧-೬೬)

### ಅಂಗೇಷು ಯಥಾಶ್ರಯಭಾವಃ† ॥ ೬೧ ॥

೬೧. ಕರ್ಮಾಂಗಗಳಲ್ಲಿ (ಉಪಾಸನೆಯು) ಆಶ್ರಯಗಳಂತೆ ಇರುವುದು.

ಕರ್ಮಾಂಗವಾದ ಉದ್ಗೀಥಾದಿಗಳಲ್ಲಿ ಆಶ್ರಯಿಸಿಕೊಂಡಿರುವ ಉಪಾಸನೆಗಳನ್ನು ಸಮುಚ್ಚಯಮಾಡಿಕೊಳ್ಳಬೇಕೋ ಅಥವಾ ಇಷ್ಟಾನುಸಾರವಾಗಿ ಅನುಷ್ಠಿಸಬಹುದೋ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಉಪಾಸನೆಗೆ ಆಶ್ರಯವಾಗಿರುವ ಸ್ತೋತ್ರಾದಿಗಳು ಕ್ರತುವಿನ ಅನುಷ್ಠಾನಕ್ಕೆ ಒಟ್ಟುಗೂಡಿರುವಂತೆ ಉಪಾಸನೆಗಳೂ ಒಟ್ಟುಗೂಡಿರಬೇಕು ; ಏಕೆಂದರೆ ಈ ಉಪಾಸನೆಗಳು ಆಶ್ರಯಗಳಿಗೆ ಅಧೀನವಾಗಿವೆ

**ವಿ.**—ಉಪಾಸನೆಗಳಿಗೆ ಆಶ್ರಯಗಳಾದ ಉದ್ಗೀಥಾದಿಗಳಿಗೆ ಕ್ರತ್ವಂಗವು ಹೇಗೆ ಕೂಡುತ್ತದೆಯೊ ಹಾಗೆಯೆ ಅವುಗಳನ್ನು ಆಶ್ರಯಿಸಿರುವ ಉಪಾಸನೆಗಳಿಗೂ ಕ್ರತ್ವಂಗ ಭಾವವು ಹೊಂದುತ್ತದೆ—ಎಂಬುದು ಪೂರ್ವಪಕ್ಷ.

**ದ್ವೈ.**—ಸೂರ್ಯಾದಿ-ಅಂಗದೇವತೆಗಳಿಗೆ ಪರಮೇಶ್ವರನ ಅಂಗಗಳಲ್ಲಿ ಹೇಗೆ ಹೇಗೆ ಆಶ್ರಯತ್ವವು ಹೇಳಲ್ಪಟ್ಟಿರುವುದೋ—'ಅವನ ಕಣ್ಣಿನಿಂದ ಸೂರ್ಯನು ಹುಟ್ಟಿದನು' (ಋ. ವೇ. ೧೦. ೯೦. ೧೩)—ಹಾಗೆಯೆ ಆ ಅಂಗದೇವತೆಗಳ ಉಪಾಸನೆಯನ್ನು ಮಾಡಬೇಕು'[1] ಎಂಬುದು ಸೂತ್ರಾರ್ಥ.

### ಶಿಷ್ಟೇಶ್ಚ ॥ ೬೨ ॥

೬೨. ಮತ್ತು ಶಾಸನದಿಂದಲೂ (ಹೀಗೆಯೇ).

ಆಶ್ರಯವಾದ ಸ್ತೋತ್ರಾದಿಗಳು ಮೂರು ವೇದಗಳಲ್ಲಿಯೂ ಶಿಷ್ಟವಾಗಿರುವಂತೆ ಅವುಗಳನ್ನು ಆಶ್ರಯಿಸಿರುವ ಉಪಾಸನೆಗಳೂ ಶಿಷ್ಟವಾಗಿವೆ. ಉಪದೇಶದಿಂದಲೂ ಅಂಗಗಳಿಗೂ ಅವುಗಳನ್ನು ಆಶ್ರಯಿಸಿರುವ ಉಪಾಸನೆಗಳಿಗೂ ಯಾವ ವಿಶೇಷವೂ ಇಲ್ಲ—ಎಂದರ್ಥ.

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ಮೊದಲಿನ ನಾಲ್ಕು ಸೂತ್ರಗಳನ್ನು ಮಾತ್ರ ಒಳಕೊಂಡಿದೆ.

† ಶಾಂಕರಭಾಷ್ಯ-ಶ್ರೀಭಾಷ್ಯಗಳ ಪ್ರಕಾರ ಮೊದಲನೆಯ ನಾಲ್ಕು ಸೂತ್ರಗಳು ಪೂರ್ವಪಕ್ಷವನ್ನೂ ಉಳಿದ ಎರಡು ಸೂತ್ರಗಳು ಸಿದ್ಧಾಂತವನ್ನೂ ಪ್ರತಿಪಾದಿಸುತ್ತವೆ.

[1] ಅಂಗದೇವತಾನಾಂ ಯಥಾ ಯಥಾ ಪರಮೇಶ್ವರಾಂಗಾಶ್ರಯತ್ವಂ ಚಕ್ಷೋಃ ಸೂರ್ಯೋಽಜಾಯತೇತ್ಯಾದಿ ತಥಾ ಭಾವನಾ ಕರ್ತವ್ಯಾ (ಮ. ಭಾ.).

ವಿ.—'ಉದ್ಗೀಥವನ್ನು ಉಪಾಸಿಸಬೇಕು' ಎಂಬ ವಿಧಿಯೂ ಉಪಾಸನೆಯೂ ಉದ್ಗೀಥದ ಅಂಗವಾಗಿದೆ ಎಂಬುದನ್ನು ತಿಳಿಸುತ್ತದೆ; ಆದುದರಿಂದ ಉಪಾಸನೆಯು ಕ್ರತ್ವಂಗವೇ ಸರಿ.

ದ್ವೈ.—'ಯಾವ ಯಾವ ಅಂಗವನ್ನು ದೇವತೆಯು ಆಶ್ರಯವಾಗಿ ಹೊಂದಿರುವುದೋ ಆದರೆನ್ನ ಉಪಾಸಿಸಬೇಕು' ಎಂದು ಪೌತ್ರಾಯಣ-ಶ್ರುತಿಯು ಹೇಳಿರುವುದರಿಂದಲೂ ಅಂಗಗಳಲ್ಲಿ ಸೂರ್ಯಾದಿಗಳ ಉಪಾಸನೆಯನ್ನು ಮಾಡಬೇಕು.[1]

## ಸಮಾಹಾರಾತ್ ॥ ೬೩ ॥

೬೩. ಸರಿಮಾಡುವುದರಿಂದಲೂ (ಹೀಗೆಯೇ).

'ಹೋತೃಸ್ಥಾನದಿಂದ ದುರುದ್ಗೀತವನ್ನು ಕೂಡ ಸರಿಮಾಡುತ್ತಾನೆ'[2] (ಛಾಂ ಉ. ೧. ೫. ೫) ಎಂಬ ವಾಕ್ಯವು ಪ್ರಣವ-ಉದ್ಗೀಥಗಳ ಏಕತ್ವದ ವಿಜ್ಞಾನ-ಮಾಹಾತ್ಮ್ಯದಿಂದ ಉದ್ಗಾತೃವು ತನ್ನ ಕರ್ಮದಲ್ಲಿ ಉಂಟಾದ ದೋಷವನ್ನು ಸರಿಮಾಡಿಸಿಕೊಳ್ಳುತ್ತಾನೆ —ಎಂಬುದನ್ನು ತಿಳಿಸುತ್ತದೆ; ಆದುದರಿಂದ ಒಂದು ವೇದದಲ್ಲಿ ಹೇಳಿರುವ ಉಪಾಸನೆಗೆ ಮತ್ತೊಂದು ವೇದದಲ್ಲಿ ಹೇಳಿರುವ ಪದಾರ್ಥದ ಸಂಬಂಧವಿರುವುದರಿಂದ ಸಮಸ್ತ ವೇದಗಳಲ್ಲಿ ಹೇಳಿರುವ ಉಪಾಸನೆಗಳ ಉಪಸಂಹಾರವನ್ನು ಈ ಶ್ರುತಿಯು ಸೂಚಿಸುತ್ತದೆ.[3]

ವಿ.—ಮೇಲೆ ಹೇಳಿದ ಛಾಂದೋಗ್ಯಶ್ರುತಿಯು (೧. ೫. ೫) ದುರುದ್ಗೀತವನ್ನು ಸರಿಪಡಿಸಲು ಉಪಾಸನೆಯು ಆವಶ್ಯಕವೆಂಬುದನ್ನು ತಿಳಿಸುತ್ತದೆ. ಇದರಿಂದಲೂ ಉಪಾಸನೆಯು ಕ್ರತ್ವಂಗವೆಂಬುದು ತಿಳಿದುಬರುತ್ತದೆ.

ದ್ವೈ.—'ಶ್ರುತಿಯಲ್ಲಿ ಉಪಸಂಹಾರವನ್ನು ಹೇಳಿರುವುದರಿಂದಲೂ' ಎಂಬುದು ಸೂತ್ರಾರ್ಥ.

'ಮುಮುಕ್ಷುವು ಪರಮಾತ್ಮನ ಅಂಗಗಳಿಂದ ಹುಟ್ಟಿರುವ ದೇವತೆಗಳ ಗುಣಗಳನ್ನು ಪರಮಾತ್ಮನಲ್ಲಿ ಉಪಸಂಹರಿಸಬೇಕು; ಆ ಅಂಗಗಳಲ್ಲಿರುವ ದೇವತೆಗಳನ್ನು ಧ್ಯಾನಿಸುತ್ತ

---

[1] ಯಸ್ಮಿನ್ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವೇತಿ ಪೌತ್ರಾಯಣಶ್ರುತೇಃ (ಮ. ಭಾ).

[2] ಹೋತೃಷದನಾದ್ಧೈವಾಪಿ ದುರುದ್ಗೀತಮನುಸಮಾಹರತಿ।

[3] ಛಾಂದೋಗ್ಯಶ್ರುತಿಯ ಪ್ರಕಾರ ಋಗ್ವೇದಕ್ಕೆ ಸೇರಿದ ಒಂದು 'ಪದಾರ್ಥವು' ಎಂದರೆ ಪ್ರಣವವು ಸಾಮವೇದದಲ್ಲಿ ಹೇಳಿರುವ ಉದ್ಗೀಥೋಪಾಸನೆಗೆ ಸಂಬಂಧಿಸಿದೆ; ಆದುದರಿಂದ ಬೇರೆ ವೇದಗಳಲ್ಲಿ ಹೇಳಿರುವ ಉಪಾಸನೆಗಳನ್ನು ಉಪಸಂಹರಿಸಬಹುದು. ಸಂಬಂಧವಿರುವ ಮಟ್ಟಿಗೆ ವೇದಗಳಿಗೂ ಮತ್ತು ಪದಾರ್ಥಗಳಿಗೂ ಭೇದವಿರುವುದಿಲ್ಲ.

ಉಪಾಸಕನು ಪರಮಪದವನ್ನು ಹೊಂದುತ್ತಾನೆ' ಎಂದು ಕಾಷಾಯಣಶ್ರುತಿಯು ಹೇಳುತ್ತದೆ.[1]

## ಗುಣಸಾಧಾರಣ್ಯಶ್ರುತೇಶ್ಚ ॥ ೬೪ ॥

೬೪. '(ಉಪಾಸನೆಯ ಒಂದು) ಗುಣವು (ವೇದಗಳಿಗೆಲ್ಲ) ಸಮಾನವಾಗಿದೆಯೆಂದು ಶ್ರುತಿಯು ಹೇಳುವುದರಿಂದಲೂ ಹೀಗೆಯೇ.'

ಉಪಾಸನೆಗೆ ಗುಣವಾದ ಎಂದರೆ ಉಪಾಸನೆಗೆ ಆಶ್ರಯವಾದ ಓಂಕಾರವು ವೇದತ್ರಯಕ್ಕೂ ಸಮಾನವಾಗಿದೆಯೆಂದು ಶ್ರುತಿಯು ತಿಳಿಸುತ್ತದೆ : 'ಓಂಕಾರದಿಂದ ಈ ತ್ರಯೀವಿದ್ಯಾವಿಹಿತವಾದ ಕರ್ಮವು ಪ್ರವೃತ್ತವಾಗಿದೆ ; ಏಕೆಂದರೆ ಓಂ ಎಂದು ಉಚ್ಚರಿಸಿ (ದೇವತೆಗಳು) ಕೇಳುವಂತೆ ಮಾಡುತ್ತಾನೆ, ಓಂ ಎಂದು ಉಚ್ಚರಿಸಿ ಸ್ತೋತ್ರಗಳನ್ನು ಪಠಿಸುತ್ತಾನೆ ಮತ್ತು ಓಂ ಎಂದು ಉಚ್ಚರಿಸಿ ಸಾಮಗಾನಮಾಡುತ್ತಾನೆ'[2] (ಛಾಂ. ಉ. ೧. ೧. ೯). ಆಶ್ರಯವಾದ ಓಂಕಾರವು ಸಮಾನವಾಗಿರುವುದರಿಂದ ಆಶ್ರಿತವಾದ ಉಪಾಸನೆಯೂ ಸಮಾನವಾಗಿರುವುದೆಂದು ಇದರಿಂದ ತಿಳಿದುಬರುತ್ತದೆ.

ವಿ.—ಉಪಾಸನೆಯ ಗುಣವಾದ ಎಂದರೆ ಆಧಾರವಾದ ಪ್ರಣವವು ವೇದತ್ರಯಕ್ಕೂ ಸಮಾನವಾಗಿದೆಯೆಂದು ತಿಳಿಸುವ ಶ್ರುತಿಯು (ಛಾಂ. ಉ. ೧. ೧ ೯) ಉಪಾಸನೆಯು ಕ್ರತ್ವಂಗವೆಂಬುದನ್ನು ತಿಳಿಸುತ್ತದೆ ; ಏಕೆಂದರೆ ಉಪಾಸನೆಯು ಉದ್ಗೀಥಕ್ಕೆ ಸಂಬಂಧಿಸಿದೆ ಮತ್ತು ಉದ್ಗೀಥವು ಎಲ್ಲ ಕ್ರತುಗಳ ಅಂಗವಾಗಿದೆ.

ದ್ವೈ.—'ಶ್ರುತಿಯು ಈಶ್ವರನ ಎಲ್ಲ ಗುಣಗಳಿಗೂ ಉಪಾಸ್ಯತ್ವವನ್ನು ಪ್ರತಿಪಾದಿಸುವುದರಿಂದ ಸೂರ್ಯಾಶ್ರಯವಾದ ಚಕ್ಷುಷ್ಟ್ವಾದಿಗುಣಗಳಿಗೂ ಈಶಗುಣತ್ವದಿಂದಲೇ ಉಪಾಸ್ಯತ್ವವಿದೆ' ಎಂಬುದು ಸೂತ್ರಾರ್ಥ.

'ತತ್ತ್ವದೃಷ್ಟಿಯುಳ್ಳ ಮುಮುಕ್ಷುವು ಪರಮಾತ್ಮನ ಸರ್ವಗುಣಗಳನ್ನೂ ಸಮಾನವಾಗಿ ಉಪಸಂಹರಿಸಿಕೊಳ್ಳಬೇಕು' ಎಂದು ಮಾಂಡವ್ಯಶ್ರುತಿಯು ಹೇಳುತ್ತದೆ.[3]

---

[1] ಅಂಗೈಃ ಪರಾದ್ಯೈಃ ಹಿ ದೇವಾ ವಿಸೃಷ್ಟ್ವಾಸ್ತದ್ಗುಣಾನ್ ಪರಮೇ ಸಂಹರೇತ । ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್ ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತೇತಿ ಚ ಕಾಷಾಯಣಶ್ರುತೌ ಸಮಾಹಾರವಚನಾಚ್ಚ (ಮ. ಭಾ.).

[2] ತೇನೇಯಂ ತ್ರಯೀ ವಿದ್ಯಾ ವರ್ತತ ಓಮಿತ್ಯಾಶ್ರಾವಯತ್ಯೋಮಿತಿ ಶಂಸತ್ಯೋಮಿತ್ಯುದ್ಗಾಯತಿ ।

[3] ಸಾಧಾರಣ್ಯಾತ್ ಸರ್ವಗುಣಾಃ ಪರಸ್ಯ ಸಮಾಹಾರ್ಯಾಸ್ತತ್ತ್ವದೃಶೋ ಮುಮುಕ್ಷೋರಿತಿ ಮಾಂಡವ್ಯಶ್ರುತೇಶ್ಚ (ಮ ಭಾ.).

## ನ ವಾ ತತ್ಸಹಭಾವಾಶ್ರುತೇಃ* || ೬೫ ||

೬೫ (ಕ್ರತ್ವಂಗಗಳನ್ನು ಆಶ್ರಯಿಸಿರುವ ಉಪಾಸನೆಗಳ ಉಪಸಂಹಾರವನ್ನು) ಮಾಡಕೂಡದು; ಏಕೆಂದರೆ ಅವುಗಳ ಸಹಭಾವವನ್ನು ಶ್ರುತಿಯು ಹೇಳುವುದಿಲ್ಲ.

**ಸಿದ್ಧಾಂತಿ**—ಸೂತ್ರದಲ್ಲಿರುವ **ನ ವಾ** ಎಂಬುದು ಪೂರ್ವಪಕ್ಷವನ್ನು ನಿರಾಕರಿಸುತ್ತದೆ ಆಶ್ರಿತವಾದ ಉಪಾಸನೆಗಳಿಗೆ ಆಶ್ರಯಗಳಂತೆ ಸಹಭಾವವಿಲ್ಲ; ಏಕೆಂದರೆ ಸ್ತೋತ್ರಾದಿ ಅಂಗಗಳಿಗೆ ಸಹಭಾವವನ್ನು ಹೇಳಿರುವಂತೆ[1] ಉಪಾಸನೆಗಳಿಗೆ ಹೇಳಿಲ್ಲ. ಪ್ರಯೋಗವಿಧಿಯೂ ಇವುಗಳಿಗೆ ಸಹಭಾವವನ್ನು ತಂದುಕೊಡಲಾರದು; ಏಕೆಂದರೆ ಉಪಾಸನೆಗಳು ಗೋದೋಹನಾದಿಗಳಂತೆ ಪುರುಷಾರ್ಥವಾಗಿವೆ ಎಂದು ಹಿಂದೆಯೇ (೩. ೩. ೪೨) ಹೇಳಿದ್ದಾಗಿದೆ. ಅಂಗಗಳಿಗೆ ಕ್ರತ್ವರ್ಥವಿದ್ದರೆ ಅವುಗಳನ್ನು ಆಶ್ರಯಿಸಿರುವ ಉಪಾಸನೆಗಳಿಗೆ ಪುರುಷಾರ್ಥವಿದೆಯೆಂಬುದೇ ಇವೆರಡಕ್ಕೂ ಇರುವ ಉಪದೇಶವನ್ನಾಶ್ರಯಿಸಿರುವ ವಿಶೇಷ. ಆಶ್ರಯವಾದ ಅಂಗಗಳನ್ನು ಉಪಸಂಹರಿಸಿದರೆ ಅದನ್ನಾಶ್ರಯಿಸಿರುವ ಉಪಾಸನೆಗಳನ್ನೂ ಉಪಸಂಹರಿಸುವುದಕ್ಕೆ ಕಾರಣವಿರುವುದಿಲ್ಲ ಈ ಉಪಾಸನೆಗಳು ಆಶ್ರಯತಂತ್ರವಾಗಿರಬಹುದು; ಆದರೆ ಆಶ್ರಯಗಳ ಸಹಭಾವದಿಂದ ತಾವೂ ಸಹಭಾವನಿಯಮಕ್ಕೆ ಒಳಪಡಬೇಕೆಂಬುದು ಸರಿಯಲ್ಲ; ಏಕೆಂದರೆ ಅವುಗಳ ಸಹಭಾವಕ್ಕೆ ಶ್ರುತಿಯಿರುವುದಿಲ್ಲ. ಆದುದರಿಂದ ಈ ಉಪಾಸನೆಗಳನ್ನು ಇಷ್ಟಾನುಸಾರ ಅನುಷ್ಠಾನಮಾಡಬಹುದು.

**ವಿ.**—ಉದ್ಗೀಥಾದಿಗಳು ಕ್ರತುವಿಗೆ ಅಂಗವಾದ ಹಾಗೆ ಅವುಗಳನ್ನು ಆಶ್ರಯಿಸಿರುವ ಉಪಾಸನೆಗಳೂ ಕ್ರತ್ವಂಗಗಳಾಗಬೇಕೆಂಬ ನಿಯಮವಿಲ್ಲ; ಏಕೆಂದರೆ ಶ್ರುತಿಯು ಹಾಗೆ ಹೇಳುವುದಿಲ್ಲ. ಆದರೆ ಶ್ರುತಿಯು (ಛಾಂ. ಉ. ೧. ೧. ೧೦) ಉಪಾಸನೆಯಿಂದ ಕ್ರತುವು ಅಧಿಕಫಲಪ್ರದವಾಗುತ್ತದೆಂದು ತಿಳಿಸುತ್ತದೆ.[2] ಕ್ರತುವಿನ ಫಲಕ್ಕಿಂತಲೂ ಉಪಾಸನೆಗೆ ಬೇರೆ ಫಲವಿದೆಯೆಂಬುದು ಇದರಿಂದ ತಿಳಿದುಬರುತ್ತದೆ. ಆದುದರಿಂದ ಕ್ರತುವಿನ ಅಂಗವಾದ ಉದ್ಗೀಥಕ್ಕೆ ಉಪಾಸನೆಯು ಅಂಗವಾಗುವುದಿಲ್ಲ.

**ದ್ವೈ.**—'ಈಶ್ವರನ ಅಂಗಗಳಲ್ಲಿ ಸೂರ್ಯಾದಿ ಅಂಗದೇವತೆಗಳನ್ನು ಉಪಾಸಿಸಕೂಡದು; ಏಕೆಂದರೆ ಶ್ರುತಿಯು ಹಾಗೆ ಹೇಳಿಲ್ಲ'[3] ಎಂಬುದು ಸೂತ್ರಾರ್ಥ.

---

* ಮಧ್ವಭಾಷ್ಯದ ಪ್ರಕಾರ್ಯ ಈ ಸೂತ್ರ ಮತ್ತು ಮುಂದಿನದು ಸಹಾ ಶ್ರವಣಾಧಿಕರಣ ಎಂಬ ಹೊಸ ಅಧಿಕರಣಕ್ಕೆ ಸೇರಿದೆ.

[1] 'ಗ್ರಹವನ್ನು ತೆಗೆದುಕೊಂಡು ಅಥವಾ ಚಮಸವನ್ನು ಎತ್ತಿ ಹಿಡಿದುಕೊಂಡು ಸ್ತೋತ್ರವನ್ನು ಪ್ರಾರಂಭಿಸುತ್ತಾನೆ. ಸ್ತೋತ್ರವಾದ ಮೇಲೆ ಹೀಗೆ ಅನುಶಂಸನೆಮಾಡುತ್ತಾನೆ. "ಪ್ರಸ್ತೋತೃವೆ, ಸಾಮಗಾನಮಾಡು; ಹೋತೃವೆ, ಇದರ ಯಾಜ್ಯವನ್ನು ಹೇಳು".'

[2] ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ।

[3] ನ ವಾಽಂಗದೇವತೋಪಸಂಹಾರಃ ಕಾರ್ಯಃ। ಉಪಸಂಹಾರಸ್ಯ ಸಹಾಶ್ರವಣಾತ್ (ಮ. ಭಾ.).

## ದರ್ಶನಾಚ್ಚ || ೬೬ ||

೬೬. ಏಕೆಂದರೆ (ಶ್ರುತಿಯೂ) ಹೀಗೆ ತಿಳಿಸುತ್ತದೆ.

ಉಪಾಸನೆಗಳು ಒಟ್ಟಿಗೆ ಹೋಗುವುದಿಲ್ಲವೆಂದು ಶ್ರುತಿಯೂ ತಿಳಿಸುತ್ತದೆ. 'ಹೀಗೆ ಅರಿತುಕೊಂಡಿರುವ ಬ್ರಹ್ಮನೇ ಯಜ್ಞವನ್ನೂ ಯಜಮಾನನನ್ನೂ ಎಲ್ಲ ಋತ್ವಿಕ್ಕುಗಳನ್ನೂ ಕಾಪಾಡುತ್ತಾನೆ' (ಛಾಂ ಉ. ೪. ೧೭. ೧೦) ಎಲ್ಲ ಉಪಾಸನೆಗಳನ್ನೂ ಉಪಸಂಹರಿಸಬೇಕಾಗಿದ್ದರೆ ಎಲ್ಲ ಋತ್ವಿಕ್ಕುಗಳೂ ಎಲ್ಲವನ್ನೂ ತಿಳಿಯಬೇಕಾದ ಸಂಭವವು ಬರುತ್ತದೆ ಮತ್ತು ಶ್ರುತಿಯು ವಿಜ್ಞಾನವುಳ್ಳ ಬ್ರಹ್ಮನಿಂದ ಋತ್ವಿಕ್ಕುಗಳೆಲ್ಲ ಪರಿಪಾಲಿತರಾಗುತ್ತಾರೆಂದು ಹೇಳುತ್ತಿರಲಿಲ್ಲ. ಆದುದರಿಂದ ಅವರವರ ಇಷ್ಟಾನುಸಾರ ಉಪಾಸನೆಗಳನ್ನು ಸಮುಚ್ಚಯಮಾಡಿಕೊಳ್ಳಬಹುದು ಅಥವಾ ವಿಕಲ್ಪದಿಂದ ಮಾಡಬಹುದು

**ವಿ.**—ಛಾಂದೋಗ್ಯಶ್ರುತಿಯು (೪. ೧೭ ೧೦) ಬ್ರಹ್ಮನ ಜ್ಞಾನದಿಂದ ಋತ್ವಿಕ್ಕುಗಳೆಲ್ಲ ರಕ್ಷಿಸಲ್ಪಡುತ್ತಾರೆ—ಎಂದು ತಿಳಿಸುತ್ತದೆ; ಈ ಶ್ರುತಿಯ ಪ್ರಕಾರ ಉಪಾಸನೆಯು ಕ್ರತುವಿಗೆ ಆವಶ್ಯಕವಾಗಿದೆಯೆಂಬುದು ತಿಳಿದುಬರುತ್ತದೆ. ಆದುದರಿಂದ ಉದ್ಗೀಥೋಪಾಸನೆಯನ್ನು ಕ್ರತ್ವಂಗವಾಗಿಯೇ ಭಾವಿಸಬೇಕೆಂಬ ನಿಯಮವಿಲ್ಲ

**ದ್ವೈತ.**—'(ಮನುಷ್ಯರು) ಯಾವಾಗಲೂ ಹೀಗೆಯೇ ಉಪಾಸಿಸಬೇಕು ಪರಬ್ರಹ್ಮನು ಸತ್ಯನೂ ಜ್ಞಾನಿಯೂ ಪರಮಾನಂದರೂಪನೂ ಆತ್ಮನೂ ಆಗಿದ್ದಾನೆ; ಧೀರನಾದವನು ಬೇರೆ ಯಾವುದನ್ನೂ ಉಪಾಸಿಸಕೂಡದು; ದೇವತೆಗಳು ಭಗವಂತನನ್ನು ಸರ್ವಗುಣಗಳಿಂದಲೂ ಉಪಾಸಿಸಲು ಶಕ್ತರಾಗಿದ್ದಾರೆ' ಎಂದು ಕಮರಶ್ರುತಿಯು ಹೇಳುತ್ತದೆ [2]

---

[1] ಏವಂವಿದ್ಧ ವೈ ಬ್ರಹ್ಮಾ ಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ।

[2] ಸತ್ಯೋ ಜ್ಞಾನಃ ಪರಮಾನಂದರೂಪ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ । ನಾನ್ಯತ್ಕಿಂಚಿತ್ ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತ ಇತಿ ಕಮರ-ಶ್ರುತೌ (ಮ. ಭಾ.).

## ನಾಲ್ಕನೆಯ ಪಾದ

## ೧. ಪುರುಷಾರ್ಥಾಧಿಕರಣ*

(ಸೂ. ೧–೧೭)

**ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ॥ ೧ ॥**

೧. ಶ್ರುತಿಯ ಪ್ರಕಾರ ಇದರಿಂದ ಪುರುಷಾರ್ಥವು (ಸಿದ್ಧಿಸುತ್ತದೆ)—ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ

ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಆತ್ಮಜ್ಞಾನವು ಕರ್ಮಕ್ಕೆ ಅಧಿಕಾರಿಯಾದವನ ಮೂಲಕ್ಕೆ ಕರ್ಮಕ್ಕೇ ಸಂಬಂಧಪಟ್ಟಿದೆಯೊ ಅಥವಾ ಮಾನವನ ಪುರುಷಾರ್ಥಕ್ಕೆ ಸ್ವತಂತ್ರವಾದ ಸಾಧನವಾಗಿದೆಯೊ?—ಎಂದು ವಿಚಾರ ಮಾಡಬೇಕಾಗಿದೆ; ಸೂತ್ರಕಾರರು ಇದನ್ನು ಸಿದ್ಧಾಂತದಿಂದಲೇ ಪ್ರಾರಂಭಿಸುತ್ತಾರೆ. ಈ ವೇದಾಂತವಿಹಿತವಾಗಿರುವ ಸ್ವತಂತ್ರವಾದ ಆತ್ಮಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುತ್ತದೆಂದು ಬಾದರಾಯಣಾಚಾರ್ಯರು ಅಭಿಪ್ರಾಯಪಡುತ್ತಾರೆ.[1] ಇದು ಶ್ರುತಿಗಳಿಂದ ತಿಳಿದುಬರುತ್ತದೆ: 'ಆತ್ಮವಿದನು ಶೋಕವನ್ನು ದಾಟುತ್ತಾನೆ'[2] (ಛಾಂ. ಉ. ೭. ೧. ೩); 'ಯಾವನು ಆ ಪರಮಬ್ರಹ್ಮವನ್ನು ತಿಳಿದುಕೊಳ್ಳುವನೊ ಅವನು ಬ್ರಹ್ಮವೇ ಆಗಿರುವನು'[3] (ಮುಂ. ಉ. ೩. ೨. ೯); 'ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಹೊಂದುತ್ತಾನೆ'[4] (ತೈ. ಉ. ೨. ೧) ಇತ್ಯಾದಿ. ಈ ಜಾತಿಗೆ ಸೇರಿದ ಶ್ರುತಿಗಳು ಕೇವಲ ಜ್ಞಾನವೇ ಪುರುಷಾರ್ಥಕ್ಕೆ ಕಾರಣವೆಂದು ತಿಳಿಸುತ್ತವೆ.

**ವಿ.**—ಪುರುಷಾರ್ಥವು ಉಪಾಸನೆಯಿಂದ ನೇರವಾಗಿ ಉಂಟಾಗುತ್ತದೆಯೊ ಅಥವಾ ಉಪಾಸನೆಯೇ ಅಂಗವಾಗಿರುವ ಕರ್ಮದಿಂದ ಉಂಟಾಗುತ್ತದೆಯೊ?—ಎಂಬುದು ಈಗ ವಿಚಾರಿಸಲ್ಪಡುತ್ತದೆ. ಪುರುಷಾರ್ಥವು ಉಪಾಸನೆಯಿಂದಲೇ ಸಿದ್ಧಿಸುತ್ತದೆ—ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ; ಏಕೆಂದರೆ ಇದು ಶ್ರುತಿಯಿಂದ ತಿಳಿದುಬರುತ್ತದೆ: 'ಯಾವನು ಅವನನ್ನು ಹೀಗೆ ಅರಿತುಕೊಂಡಿರುವನೊ ಅವನು ಇಲ್ಲಿಯೇ ಅಮೃತ

---

* ಶ್ರೀಭಾಷ್ಯದ ಪ್ರಕಾರ ಈ ಅಧಿಕರಣವು ಮೊದಲನೆಯ ೨೦ ಸೂತ್ರಗಳನ್ನು ಒಳಕೊಂಡಿದೆ. ಮಧ್ವಭಾಷ್ಯದ ಪ್ರಕಾರ ಈ ಅಧಿಕರಣಕ್ಕೆ ಮೊದಲನೆಯ ೯ ಸೂತ್ರಗಳು ಮಾತ್ರ ಸೇರಿವೆ.

[1] ಅಸ್ಮಾದ್ವೇದಾಂತವಿಹಿತಾದಾತ್ಮಜ್ಞಾನಾತ್ ಸ್ವತಂತ್ರಾತ್ ಪುರುಷಾರ್ಥಃ ಸಿದ್ಧ್ಯತೀತಿ ಬಾದರಾಯಣ ಆಚಾರ್ಯೋ ಮನ್ಯತೇ (ಸೂ. ಭಾ.).

[2] ತರತಿ ಶೋಕಮಾತ್ಮವಿತ್ ।

[3] ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ ।

[4] ಬ್ರಹ್ಮವಿದಾಪ್ನೋತಿ ಪರಮ್ ।

ನಾಗುತ್ತಾನೆ; ಅಮೃತತ್ವಕ್ಕೆ ಬೇರೊಂದು ದಾರಿಯಿಲ್ಲ'[1] (ಪುರುಷಸೂಕ್ತ, ೧೭); 'ಹೇಗೆ ಪ್ರವಹಿಸುತ್ತಿರುವ ನದಿಗಳು ಸಮುದ್ರದಲ್ಲಿ ತಮ್ಮ ತಮ್ಮ ನಾಮರೂಪಗಳನ್ನು ಹೋಗ ಲಾಡಿಸಿಕೊಂಡು ಅಸ್ತವನ್ನು ಹೊಂದುವುವೊ ಹಾಗೆಯೇ ಜ್ಞಾನಿಯು ನಾಮರೂಪ ವಿಮುಕ್ತನಾಗಿ ಪರಾತ್ಪರನಾದ ದಿವ್ಯಪುರುಷನನ್ನು ಸೇರುವನು'[2] (ಮುಂ. ಉ. ೩. ೨ ೮).

ವ್ಯಾ.—ಈ ವಾದದಲ್ಲಿ ಜ್ಞಾನದ ಸಾಮರ್ಥ್ಯವನ್ನು ಹೇಳಿದೆ. ಯಾವ ಭಗವಂತನ ದರ್ಶನಕ್ಕಾಗಿ ಉಪಾಸನೆಯು ಹೇಳಲ್ಪಟ್ಟಿತೊ ಅವನ ದರ್ಶನದಿಂದ ಸರ್ವಪುರುಷಾರ್ಥವು ಸಿದ್ಧಿಸುತ್ತದೆ—ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ[3] ಇದು ಶ್ರುತಿಯಿಂದ ತಿಳಿದುಬರುತ್ತದೆ: 'ಭಗವದಪರೋಕ್ಷಜ್ಞಾನಿಯು ಯಾವ ಯಾವ ಲೋಕವನ್ನು ಮನಸ್ಸಿನಿಂದ ಬಯಸುತ್ತಾನೆಯೊ ಮತ್ತು ಯಾವ ಕಾಮ್ಯಮಾನವಿಷಯಗಳನ್ನು ಬಯಸುತ್ತಾನೆಯೊ ಆಯಾ ಲೋಕವನ್ನೂ ಆಯಾ ಅಭೀಷ್ಟಗಳನ್ನೂ ಹೊಂದುತ್ತಾನೆ. ಆದುದರಿಂದ ಭಾಗ್ಯವನ್ನಿಚ್ಛಿಸುವವನು ಭಗವಜ್ಞಾನಿಯನ್ನು ಪೂಜಿಸಬೇಕು'[4] (ಮುಂ. ಉ. ೩. ೧. ೧೦).

**ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ*** || ೨ ||

೨. (ಆತ್ಮನು ಕರ್ಮಕ್ಕೆ) ಶೇಷವಾಗಿರುವುದರಿಂದ (ಆತ್ಮಜ್ಞಾನದ ಫಲಶ್ರುತಿಯು) ಅರ್ಥವಾದವೇ; (ಈ ಅರ್ಥವಾದವು) ಮಿಕ್ಕ ಕಡೆಗಳ ಹಾಗೆ—ಎಂದು ಜೈಮಿನಿ (ಆಚಾರ್ಯರು) ಅಭಿಪ್ರಾಯಪಡುತ್ತಾರೆ.

ಪೂರ್ವಪಕ್ಷ—ಆತ್ಮನು ಕರ್ತೃವಾಗಿರುವುದರಿಂದ ಕರ್ಮಕ್ಕೆ ಶೇಷನಾಗಿರುತ್ತಾನೆ; ಆದುದರಿಂದ ಆತ್ಮನ ವಿಜ್ಞಾನವೂ—ಪ್ರೋಕ್ಷಣಮಾಡಿದ ಮೇಲೆ ವ್ರೀಹಿಯು ಕರ್ಮಕ್ಕೆ ಅಂಗವಾಗುವಂತೆ—ವಿಷಯದ ಮೂಲಕ ಕರ್ಮಕ್ಕೆ ಸಂಬಂಧಿಸಲ್ಪಡುತ್ತದೆ. ದ್ರವ್ಯ-ಸಂಸ್ಕಾರ-ಕರ್ಮಗಳಲ್ಲಿ ಫಲಶ್ರುತಿಯು ಅರ್ಥವಾದವಾಗಿರುವಂತೆ ಆತ್ಮಜ್ಞಾನಕ್ಕೆ ಫಲವನ್ನು ಹೇಳುವ ವಾಕ್ಯಗಳೂ ಅರ್ಥವಾದವೇ. ಕರ್ತೃವು ಲೌಕಿಕ-ವೈದಿಕ-ಕರ್ಮಗಳೆರಡಕ್ಕೂ

---

[1] ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃ ಪಂಥಾ ವಿದ್ಯತೇಽಯನಾಯ ।

[2] ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥

[3] ಯದ್ದರ್ಶನಾರ್ಥಮುಪಾಸನೋಕ್ತಾ ತಸ್ಮಾದ್ದರ್ಶನಾತ್ ಸರ್ವಪುರುಷಾರ್ಥಪ್ರಾಪ್ತಿರಿತಿ ಬಾದರಾಯಣೋ ಮನ್ಯತೇ (ಮ. ಭಾ.).

[4] ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ ॥

* ಮೂರು ಭಾಷ್ಯಗಳ ಪ್ರಕಾರವೂ ೨ನೇ ಸೂತ್ರದಿಂದ ೭ನೇ ಸೂತ್ರದವರೆಗೆ ಪೂರ್ವಪಕ್ಷದ ಸೂತ್ರಗಳಾಗಿರುತ್ತವೆ.

ಸಮಾನವಾಗಿರುವುದರಿಂದ ಆತ್ಮಜ್ಞಾನಕ್ಕೆ ಕ್ರತುಸಂಬಂಧವು ಸಿದ್ಧಿಸುವುದಿಲ್ಲ—ಎಂದು ಹೇಳುವುದೂ ಸರಿಯಲ್ಲ, ಏಕೆಂದರೆ ದೇಹವ್ಯತಿರಿಕ್ತವಾದ ಆತ್ಮಜ್ಞಾನವು ವೈದಿಕ-ಕರ್ಮಗಳಲ್ಲಲ್ಲದೆ ಇನ್ನೆಲ್ಲಿಯೂ ಉಪಯೋಗಕ್ಕೆ ಬರುವಂತಿಲ್ಲ ಅಪಹತ-ಪಾಪ್ಮತ್ವವೇ ಮೊದಲಾದ ವಿಶೇಷಣಗಳಿರುವುದರಿಂದ ಸಂಸಾರಿಯಲ್ಲದ ಆತ್ಮನ ವಿಷಯದ ಔಪನಿಷದಜ್ಞಾನವು ಪ್ರವೃತ್ತಿಗೆ ಅಂಗವಾಗಲಾರದು—ಎಂದೂ ಹೇಳಲಾಗುವುದಿಲ್ಲ, ಏಕೆಂದರೆ ಪ್ರಿಯಾದಿ-ಸಂಸೂಚಿತನೂ (ಬೃ ಉ ೨ ४ ೫) ಸಂಸಾರಿಯೂ ಆದ ಆತ್ಮನನ್ನೇ ದರ್ಶನಮಾಡಿಕೊಳ್ಳಬೇಕೆಂದು ವಿಧಿಸಿದೆ ಅಸಂಸಾರಿಯಾದ ಬ್ರಹ್ಮವು ಜಗತ್ಕಾರಣ, ಅದೇ ಸಂಸಾರಿಯಾದ ಆತ್ಮನ ಪಾರಮಾರ್ಥಿಕಸ್ವರೂಪ—ಎಂದು ಶ್ರುತಿಗಳು ಉಪದೇಶಿಸಿದ್ದರೆ, ಅದನ್ನೇ ದೃಢಪಡಿಸಲು ಇಲ್ಲಿ ಫಲದ್ವಾರದಿಂದ ಆಕ್ಷೇಪ-ಸಮಾಧಾನಗಳನ್ನು ಮಾಡಿರುತ್ತದೆ

**ವಿ.**—ಶ್ರುತಿಯ ಪ್ರಕಾರ ಉಪಾಸನೆಗಳಿಂದ ಪುರುಷಾರ್ಥವು ಸಿದ್ಧಿಸುತ್ತದೆಯೆಂಬುದು ಸರಿಯಲ್ಲ, ಏಕೆಂದರೆ ಶ್ರುತಿಗಳು ಹಾಗೆ ಉಪದೇಶಿಸುವುದಿಲ್ಲ ಕರ್ಮಗಳಲ್ಲಿ ಕರ್ತೃಭೂತನಾದ ಆತ್ಮನ ಯಥಾರ್ಥಜ್ಞಾನವನ್ನು ಶ್ರುತಿಗಳು ಪ್ರತಿಪಾದಿಸುತ್ತವೆ[1] ಉಪಾಸನಾರೂಪವಾದ ಜ್ಞಾನವು ಕರ್ತೃವಿನಲ್ಲಿ ಸಂಸ್ಕಾರವನ್ನುಂಟುಮಾಡುವುದರ ಮೂಲಕ ಕ್ರತುವಿಗೆ ಶೇಷವಾಗಿರುತ್ತದೆ, ಆದುದರಿಂದ ಫಲಶ್ರುತಿಗಳನ್ನು ಅರ್ಥವಾದವೆಂದು ಗ್ರಹಿಸಬೇಕು

**ದ್ವೈ.**—'ಜ್ಞಾನಕ್ಕೆ ಇತರ ಪುರುಷಾರ್ಥಕಾರಣತ್ವವಾದವು ಅದಕ್ಕೆ ಕಾರಣವಾದ ಕರ್ಮದಲ್ಲಿ ಶೇಷತ್ವವಿದ್ದುದರಿಂದಲೇ ಹೊರತು ಸಾಕ್ಷಾತ್ತಾಗಿ ಅಲ್ಲ, ಇತರ ಕರ್ಮಶೇಷಗಳ ಹಾಗೆ, ಎಂದು ಜೈಮಿನಿಯು ಅಭಿಪ್ರಾಯಪಡುತ್ತಾರೆ' ಎಂಬುದು ಸೂತ್ರಾರ್ಥ

ಜ್ಞಾನವು ಮೋಕ್ಷಕ್ಕೆ ಸಾಧನವಾಗಿದ್ದರೂ ಸ್ವರ್ಗಪ್ರಾಪ್ತಿಗಾಗಿ ಅದರ ಸಾಧನವಾದ ಕರ್ಮಕ್ಕೆ ಶೇಷವಾಗಿರುತ್ತದೆ[2] 'ಧನದಿಂದಲೂ ದೇಹಶ್ರಮದಿಂದಲೂ ಗೃಹಕೃತ್ಯದಿಂದಲೂ ಧೀರರು ಸ್ವರ್ಗವನ್ನು ಪಡೆಯುತ್ತಾರೆ, ಅಧೀರರಲ್ಲ' ಎಂಬಲ್ಲಿ ಸ್ವರ್ಗಕ್ಕೆ ಕಾರಣಗಳಾದ ಕರ್ಮಶೇಷಗಳಾದ ಧನಾದಿಗಳನ್ನು ಹೇಳಿದೆ

**ಆಚಾರದರ್ಶನಾತ್ ॥ ೩ ॥**

೩ (ಶ್ರುತಿಯಲ್ಲಿ) ಆಚಾರವು ಕಂಡುಬರುವುದರಿಂದಲೂ (ಆತ್ಮಜ್ಞಾನವು ಕರ್ಮಸಂಬಂಧಿಯೇ)

---

[1] ಕರ್ಮಸು ಕರ್ತೃಭೂತಸ್ಯಾತ್ಮನೋ ಯಾಥಾತ್ಮ್ಯವೇದನಪ್ರತಿಪಾದನಪರತ್ವಾತ್ (ಶ್ರೀಭಾಷ್ಯ)

[2] ಅಸ್ತ್ಯೇವ ಮೋಕ್ಷಸಾಧನತ್ವಂ ಜ್ಞಾನಸ್ಯ । ಸ್ವರ್ಗಾದಿಷು ತತ್ಸಾಧನಕರ್ಮಶೇಷತ್ವೇನ (ಮ. ಭಾ )

ಬ್ರಹ್ಮಜ್ಞಾನಿಗಳೂ ಕರ್ಮದಲ್ಲಿ ಪ್ರವೃತ್ತರಾಗಿದ್ದರೆಂಬುದು ಶ್ರುತಿಗಳಲ್ಲಿಯೂ ಕಂಡುಬರುತ್ತದೆ. 'ವಿದೇಹದೇಶದ ಸಮ್ರಾಟನಾದ ಜನಕನು ಬಹುದಕ್ಷಿಣವೆಂಬ ಯಜ್ಞವನ್ನು ಮಾಡಿದನು' (ಬೃ. ಉ. ೩. ೧. ೧); 'ಭಗವಂತರೆ, ನಾನು ಯಜ್ಞಮಾಡಲಿರುವೆನು' (ಛಾಂ. ಉ ೫ ೧೧. ೫). ಕೇವಲ ಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುತ್ತಿದ್ದರೆ ಜನಕ, ಅಶ್ವಪತಿ ಮೊದಲಾದವರು ಅನೇಕಾಯಾಸದಿಂದ ಕೂಡಿರುವ ಕರ್ಮಗಳನ್ನು ಏತಕ್ಕಾಗಿ ಮಾಡುತ್ತಿದ್ದರು? 'ಎಕ್ಕದ ಗಿಡದಲ್ಲಿ ಜೇನುತುಪ್ಪವು ಸಿಕ್ಕುವಂತಿದ್ದರೆ ಪರ್ವತಕ್ಕೆ ಏಕೆ ಹೋಗಬೇಕು?'[1]

ವಿ.—ಬ್ರಹ್ಮಜ್ಞಾನಿಗಳು ಕರ್ಮದಲ್ಲಿ ಪ್ರವೃತ್ತರಾಗಿದ್ದಾರೆಂಬುದು ಉಪಾಸನೆಯು ಸ್ವತಂತ್ರವಲ್ಲ, ಕರ್ತೃವಿನ ಸ್ವರೂಪವನ್ನು ನಿರ್ಧರಿಸುವುದರ ಮೂಲಕ ಕರ್ಮಾಂಗವಾಗಿರುತ್ತದೆ—ಎಂದು ತಿಳಿಸುತ್ತದೆ.

ದ್ವೈ.—'ಜ್ಞಾನಿಗಳಾದ ದೇವಾದಿಗಳೂ ಕೂಡ ಕರ್ಮದಲ್ಲಿ ಪ್ರವೃತ್ತರಾಗಿರುವುದು ಕಂಡುಬರುವುದರಿಂದ ಜ್ಞಾನವು ಕರ್ಮಕ್ಕೆ ಶೇಷವಾಗಿದೆ'[2] ಎಂಬುದು ಸೂತ್ರಾರ್ಥ

## ತಚ್ಛ್ರುತೇಃ ॥ ೪ ॥

೪ ಅದನ್ನೇ ಶ್ರುತಿಯು ಹೇಳುವುದರಿಂದಲೂ (ಆತ್ಮಜ್ಞಾನವು ಕರ್ಮಸಂಬಂಧಿಯೇ).

'ಯಾವುದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಯೋಗದಿಂದಲೂ ಮಾಡಿದರೂ ಅದು ಅಧಿಕಫಲಪ್ರದವಾಗುತ್ತದೆ' (ಛಾಂ. ಉ. ೧. ೧. ೧೦) ಎಂಬಲ್ಲಿ ಜ್ಞಾನವು ಕರ್ಮಕ್ಕೆ ಶೇಷವೆಂದು ಹೇಳಿರುತ್ತದೆ; ಆದುದರಿಂದ ಕೇವಲ ವಿದ್ಯೆಯು ಪುರುಷಾರ್ಥಕ್ಕೆ ಹೇತುವಲ್ಲ.

ವಿ.—ಶ್ರುತಿಯು (ಛಾಂ. ಉ. ೧. ೧. ೧೦) ಉಪಾಸನೆಯು ಕರ್ಮಾಂಗವೆಂದು ಸಾಕ್ಷಾತ್ತಾಗಿ ತಿಳಿಸುತ್ತದೆ; ಇಲ್ಲಿ ಶ್ರುತಿಯು ಪ್ರಕರಣಬಲದಿಂದ ಉದ್ಗೀಥವನ್ನೇ ಸೂಚಿಸುತ್ತದೆ ಎಂದು ಹೇಳಲಾಗುವುದಿಲ್ಲ; ಏಕೆಂದರೆ ಶ್ರುತಿಯು ಪ್ರಕರಣಕ್ಕಿಂತ ಬಲಿಷ್ಠವಾಗಿದೆ.

ದ್ವೈ.—ಛಾಂದೋಗ್ಯಶ್ರುತಿಯು (೧. ೧. ೧೦) ಜ್ಞಾನವು ಕರ್ಮಕ್ಕೆ ಶೇಷವೆಂದು ತಿಳಿಸುತ್ತದೆ.

## ಸಮನ್ವಾರಂಭಣಾತ್ ॥ ೫ ॥

೫ ಒಟ್ಟಿಗೆ (ಫಲವನ್ನು) ಪ್ರಾರಂಭಿಸುವುದರಿಂದಲೂ (ಆತ್ಮಜ್ಞಾನವು ಕರ್ಮಸಂಬಂಧಿಯೇ)

---

[1] ಅರ್ಕೇ ಚೇನ್ಮಧು ವಿಂದೇತ ಕಿಮರ್ಥಂ ಪರ್ವತಂ ವ್ರಜೇತ್?

[2] ಜ್ಞಾನಿನಾಮೇವ ದೇವಾದೀನಾಮಾಚಾರದರ್ಶನಾತ್ (ಮ. ಭಾ.).

'ವಿದ್ಯೆ ಮತ್ತು ಕರ್ಮ—ಇವು ಅವನನ್ನು ಅನುಸರಿಸುತ್ತವೆ' (ಬೃ. ಉ. ೪. ೪. ೨) ಎಂಬ ಶ್ರುತಿಯಲ್ಲಿ ವಿದ್ಯಾಕರ್ಮಗಳೆರಡೂ ಫಲವನ್ನುಂಟುಮಾಡುವುದರಲ್ಲಿ ಸಹಕಾರಿಗಳಾಗಿರುವುವು ಎಂದು ಹೇಳಿರುವುದರಿಂದ ಜ್ಞಾನಕ್ಕೆ ಸ್ವಾತಂತ್ರ್ಯವಿಲ್ಲ

**ವಿ.**—ಬೃಹದಾರಣ್ಯಕ-ಶ್ರುತಿಯ ಪ್ರಕಾರ (ಬೃ. ಉ. ೪. ೪. ೨) ಉಪಾಸನಾ-ಕರ್ಮಗಳೆರಡೂ ಒಟ್ಟಿಗೆ ಹೋಗುತ್ತವೆ; ಉಪಾಸನೆಯು ಕರ್ಮಾಂಗವಾದರೇ ಇದು ಸಾಧ್ಯವಾದೀತು.

**ದ್ವೈ.**—'ಶ್ರುತಿಯ ಪ್ರಕಾರ ಕರ್ಮದಿಂದಲೇ ಐಹಿಕ-ಆಮುಷ್ಮಿಕ ದೇಹಾದಿಗಳು ಉತ್ಪನ್ನವಾಗುತ್ತವೆ' ಎಂಬುದು ಸೂತ್ರಾರ್ಥ.

'ಕರ್ಮದಿಂದಲೇ ದೇಹ-ಮನುಷ್ಯಶರೀರಗಳು ಉತ್ಪನ್ನವಾಗುತ್ತವೆ; ಇನ್ನು ಬೇರೆ ಯಾವ ಕಾರಣವೂ ಇಲ್ಲ' ಎಂದು ಮಾರರಶ್ರುತಿಯು ಹೇಳುತ್ತದೆ. ಸೂತ್ರದಲ್ಲಿರುವ **ಸಂ**-ಶಬ್ದವು ಕರ್ಮದ ಪ್ರಾಧಾನ್ಯವನ್ನು ತಿಳಿಸುತ್ತದೆ.

## ತದ್ವತೋ ವಿಧಾನಾತ್ ॥ ೬ ॥

೬ ಅಂಥವನಿಗೆ (ಶ್ರುತಿಯು ಕರ್ಮವನ್ನು) ವಿಧಿಸಿರುವುದರಿಂದಲೂ (ಜ್ಞಾನವು ಸ್ವತಂತ್ರವಲ್ಲ).

'ಗುರುವಿನ ಶುಶ್ರೂಷಾದಿ-ಕರ್ಮವನ್ನು ಮಾಡಿ, ಉಳಿದ ಕಾಲದಲ್ಲಿ ನಿಯಮಾನು-ಸಾರವಾಗಿ ವೇದಾಧ್ಯಯನಮಾಡಿ, ಗುರುಗೃಹದಿಂದ ಸಮಾವರ್ತನಮಾಡಿ, ಕುಟುಂಬದಲ್ಲಿ ನಿಂತು, ಪವಿತ್ರವಾದ ಸ್ಥಳದಲ್ಲಿ ಸ್ವಾಧ್ಯಾಯವನ್ನು ಮಾಡುತ್ತ' (ಛಾಂ. ಉ. ೮ ೧೫. ೧) ಎಂಬ ಶ್ರುತಿಯು ಸಮಸ್ತ ವೇದಾರ್ಥವನ್ನು ಬಲ್ಲವನಿಗೇ ಕರ್ಮಾಧಿಕಾರವನ್ನು ತಿಳಿಸುತ್ತದೆ. ಆದುದರಿಂದಲೂ ಜ್ಞಾನವು ಸ್ವತಂತ್ರವಾದ ಫಲಹೇತುವಲ್ಲ.

**ವಿ.**—ಉಪಾಸನಾಯುಕ್ತನಾದವನಿಗೇ ಶ್ರುತಿಯಲ್ಲಿ ಕರ್ಮವನ್ನು ವಿಧಿಸಿರುವುದರಿಂದ ಉಪಾಸನೆಯು ಕರ್ಮಾಂಗವೆಂಬುದು ತಿಳಿದುಬರುತ್ತದೆ. ವೇದವನ್ನು ಅಧ್ಯಯನ ಮಾಡಿ ಅದರ ಅರ್ಥವನ್ನು ತಿಳಿದುಕೊಂಡವನಿಗೇ ಶ್ರುತಿಯು (ಛಾಂ. ಉ. ೮. ೧೫. ೧) ಕರ್ಮವನ್ನು ವಿಧಿಸಿರುತ್ತದೆ. ಆದುದರಿಂದ ಬ್ರಹ್ಮವಿದ್ಯೆಯೂ ಕೂಡ ಕರ್ಮಗಳಲ್ಲಿಯೇ ವಿನಿಯುಕ್ತವಾಗಿದೆ.

**ದ್ವೈ.**—'ಜ್ಞಾನವುಳ್ಳವನಿಗೂ ಕರ್ಮವನ್ನು ವಿಧಿಸಿರುವುದರಿಂದ' ಎಂಬುದು ಸೂತ್ರಾರ್ಥ. 'ಜ್ಞಾನಿಯು ಕೂಡ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವನ್ನು ಮಾಡಬೇಕು; ಅವನು ಯಾವಾಗಲೂ ಫಲದಲ್ಲಿ ಅಕಾಮನಾಗಿರಬೇಕು' ಎಂದು ಕಮಠಶ್ರುತಿಯು ಹೇಳುತ್ತದೆ.

## ನಿಯಮಾಚ್ಚ || ೭ ||

೭. ನಿಯಮವಿರುವುದರಿಂದಲೂ (ಜ್ಞಾನವು ಕರ್ಮಕ್ಕೆ ಶೇಷವಾಗಿರುತ್ತದೆ).

'ಈ ಲೋಕದಲ್ಲಿ (ಶಾಸ್ತ್ರವಿಹಿತರಾದ) ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಜೀವಿಸಲು ಇಚ್ಛೆಪಡಬೇಕು' (ಈ. ಉ. ೨) ಮತ್ತು 'ಈ ಅಗ್ನಿಹೋತ್ರವೇ ಜರಾಮರಣ ಪರ್ಯಂತವೂ ಸತ್ರವು, ಜರೆಯಿಂದಲೇ ಮುಕ್ತನಾಗುತ್ತಾನೆ ಅಥವಾ ಮೃತ್ಯುವಿನಿಂದಾದರೂ ಮುಕ್ತನಾಗುತ್ತಾನೆ' (ಶ. ಬ್ರಾ. ೧೨. ೪ ೧. ೧) ಎಂದು ಶ್ರುತಿಯಲ್ಲಿ ಹೇಳಿರುವ ನಿಯಮಗಳ ಪ್ರಕಾರ ಜ್ಞಾನವು ಕರ್ಮಕ್ಕೆ ಶೇಷವಾಗಿರುತ್ತದೆ.

ವಿ.—ಈಶಾವಾಸ್ಯಶ್ರುತಿಯು (೨) ಆತ್ಮಜ್ಞಾನಿಗೆ ಕರ್ಮಗಳನ್ನು ನಿಯಮೇನ ವಿಧಿಸಿರುವುದರಿಂದ ಉಪಾಸನೆಯು ಕರ್ಮಕ್ಕೆ ಅಂಗವಾಗಿದೆ.

ದ್ವೈತ.—ಈಶಾವಾಸ್ಯಶ್ರುತಿಯು (೨) ಜ್ಞಾನಿಗೂ ಕೂಡ ಕರ್ಮವು ನಿಯಮಿತವಾಗಿದೆಯೆಂದು ತಿಳಿಸುತ್ತದೆ.

## ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ || ೮ ||

೮. ಆದರೆ (ಶಾಸ್ತ್ರದಲ್ಲಿ) ಅಧಿಕೋಪದೇಶವಿರುವುದರಿಂದ ಬಾದರಾಯಣರ (ಅಭಿಪ್ರಾಯವು ಸರಿಯೇ); ಏಕೆಂದರೆ ಹಾಗೆ (ಶ್ರುತಿಗಳಲ್ಲಿ) ಹೇಳಿದೆ.

ಮೇಲಿನ ಪೂರ್ವಪಕ್ಷಕ್ಕೆ ಸೂತ್ರಕಾರರು ಪ್ರತಿಯಾಗಿ ಉತ್ತರಿಸುತ್ತಾರೆ. ಕರ್ತೃವೂ ಭೋಕ್ತೃವೂ ಆದ ಕೇವಲ ಸಂಸಾರ್ಯಾತ್ಮನೇ ಶರೀರಕ್ಕಿಂತ ಭಿನ್ನನೆಂದು ಶ್ರುತಿಗಳು ಉಪದೇಶಿಸಿದ್ದರೆ ಫಲಶ್ರುತಿಯು ಅರ್ಥವಾದವಾಗಬಹುದಾಗಿತ್ತು. ಆದರೆ ಶ್ರುತಿಗಳು ವೇದ್ಯನಾದವನು ಶಾರೀರಾತ್ಮನಿಗಿಂತ ಭಿನ್ನನೆಂದು ತಿಳಿಸುತ್ತದೆ: ಅವನು ಅಸಂಸಾರಿಯೂ ಕರ್ತೃತ್ವಾದಿ-ಸಂಸಾರಿಧರ್ಮರಹಿತನೂ ಅಪಹತಪಾಪ್ಮತ್ವಾದಿ-ಧರ್ಮಗಳುಳ್ಳವನೂ ಆದ ಪರಮಾತ್ಮನು. ಅಂಥ ಆತ್ಮಜ್ಞಾನವು ಕರ್ಮಗಳನ್ನು ಪ್ರವರ್ತಿಸದೇ ಇರುವದಲ್ಲದೆ ಕರ್ಮಗಳನ್ನೇ ಬಾಧಿಸುತ್ತದೆಂದು ಮುಂದೆ (ಸೂ. ೧೬) ಹೇಳಿದೆ[1] ಆದುದರಿಂದ ಭಗವಂತರಾದ ಬಾದರಾಯಣರ ಮತವೇ ಸರಿ; ಶೇಷತ್ವಾದಿ-ಹೇತ್ವಾಭಾಸಗಳಿಂದ ಅದನ್ನು ಅಲುಗಾಡಿಸಲು ಸಾಧ್ಯವಿಲ್ಲ. ಶಾರೀರನಿಗಿಂತ ಅಧಿಕನಾಗಿರುವ ಈಶ್ವರಾತ್ಮನನ್ನು ಅನೇಕ ಶ್ರುತಿಗಳು

---

1 ನ ಚ ತದ್ವಿಜ್ಞಾನಂ ಕರ್ಮಣಾಂ ಪ್ರವರ್ತಕಂ ಭವತಿ, ಪ್ರತ್ಯುತ ಕರ್ಮಾಣಿ ಉಚ್ಛಿನತ್ತಿ ಇತಿವಕ್ಷ್ಯತಿ 'ಉಪಮರ್ದಂ ಚ' (ಸೂ. ಭಾ.).

ತಿಳಿಸುತ್ತವೆ: 'ಯಾವನು ಸರ್ವಜ್ಞನೊ ಸರ್ವವಿದನೊ'[1] (ಮುಂ. ಉ. ೧. ೧. ೯), 'ಇವನ ಭಯದಿಂದ ವಾಯುವು ಬೀಸುತ್ತದೆ'[2] (ತೈ. ಉ. ೨. ೮ ೧) ಇತ್ಯಾದಿ[3] ಪ್ರಿಯ ಸಂಸೂಚಿತನಾದ ಸಂಸಾರ್ಯಾತ್ಮನೇ ವೇದ್ಯನೆಂದು ಅನೇಕ ಶ್ರುತಿಗಳು ತಿಳಿಸುತ್ತವೆ: 'ಆತ್ಮನ ಪ್ರಯೋಜನಕ್ಕಾಗಿಯೇ ಎಲ್ಲವೂ ಪ್ರಿಯವಾಗಿರುತ್ತದೆ. ಎಲೈ ಮೈತ್ರೇಯಿ, ಆತ್ಮನನ್ನು ನೋಡಬೇಕು'[4] (ಬೃ. ಉ. ೨. ೪. ೫), 'ಯಾವನು ಪ್ರಾಣದ ಮೂಲಕ ಪ್ರಾಣನ ಕ್ರಿಯೆಯನ್ನು ಮಾಡುತ್ತಿರುವನೊ ಸರ್ವಾಂತರನಾದ ಅವನೇ ನಿನ್ನ ಆತ್ಮನು'[5] (ಬೃ. ಉ. ೩. ೪. ೧) ಇತ್ಯಾದಿ.[6] ಮತ್ತೆ 'ಋಗ್ವೇದ, ಯಜುರ್ವೇದ—ಇವೆಲ್ಲ ಈ ಮಹತ್ ಪರಮಾರ್ಥದ ನಿಃಶ್ವಾಸದಂತೆ'[7] (ಬೃ. ಉ. ೨. ೪ ೧೦), 'ಯಾವನು ಹಸಿವುಬಾಯಾರಿಕೆಗಳನ್ನೂ ಶೋಕಮೋಹಗಳನ್ನೂ ಮುಪ್ಪುಮರಣಗಳನ್ನೂ ದಾಟಿರುವನೊ'[8] (ಬೃ. ಉ. ೩. ೫. ೧)—ಇವೇ ಮೊದಲಾದ ವಾಕ್ಯಶೇಷಗಳು ಅಧಿಕೋಪದೇಶವನ್ನು ಮಾಡುವುದರಿಂದ ಇಲ್ಲಿ ಉಪದೇಶಿಸಿರುವುದೆಲ್ಲ ಜೀವಾತ್ಮ-ಪರಮಾತ್ಮರಿಗಿರುವ ಅತ್ಯಂತವಾದ ಅಭೇದವನ್ನು ಪ್ರದರ್ಶಿಸುವುದಕ್ಕೆ; ಆದುದರಿಂದ ಯಾವ ವಿರೋಧವೂ ಇಲ್ಲ. ಶಾರೀರನಿಗೆ ಪರಮೇಶ್ವರರೂಪವೇ ಪಾರಮಾರ್ಥಿಕವಾದ ಸ್ವರೂಪ, ಶಾರೀರತ್ವವು ಉಪಾಧಿಕೃತವಾದದ್ದು ಎಂಬುದು **ತತ್ತ್ವಮಸಿ** (ಛಾಂ. ಉ ೬. ೮. ೭), **'ನಾನ್ಯದತೋಽಸ್ತಿ ದ್ರಷ್ಟೃ'** (ಬೃ. ಉ. ೩. ೮. ೧೧) ಮೊದಲಾದ ಶ್ರುತಿಗಳಿಂದ ತಿಳಿದುಬರುತ್ತದೆ.

**ವಿ.**—ಸಿದ್ಧಾಂತ: ಉಪಾಸನಾರೂಪವಾದ ಜ್ಞಾನದಿಂದಲೇ ಪುರುಷಾರ್ಥವು ಸಿದ್ಧಿಸುತ್ತದೆ; ಏಕೆಂದರೆ ಕರ್ತೃವಾದ ಜೀವನಿಗಿಂತ ಭಿನ್ನನಾದ, ಹೇಯಪ್ರತ್ಯನೀಕನಾದ, ಅಸಂಖ್ಯೇಯ-ಕಲ್ಯಾಣಗುಣಗಳಿಂದ ಕೂಡಿದ ಪರಬ್ರಹ್ಮನೇ ವೇದ್ಯನೆಂದು ಶ್ರುತಿಗಳು[9] ತಿಳಿಸುತ್ತವೆ. ಜ್ಞಾನಕ್ಕೆ ಸ್ವತಂತ್ರವಾದ ಫಲವಿದೆಯೆಂಬುದೇ ಭಗವಂತರಾದ ಬಾದರಾಯಣರ ಮತ. ಪರಮಪುರುಷ-ವಿಷಯವಾದ ಜ್ಞಾನದ ಫಲವು ತತ್ಪ್ರಾಪ್ತಿರೂಪವಾದ ಅಮೃತತ್ವವೆಂದೇ ಶ್ರುತಿಗಳು ತಿಳಿಸುತ್ತವೆ

---

1 ಯಃ ಸರ್ವಜ್ಞಃ ಸ ಸರ್ವವಿತ್ ।

2 ಭೀಷಾಽಸ್ಮಾದ್ವಾತಃ ಪವತೇ ।

3 ಕ. ಉ. ೨. ೬. ೨, ಬೃ. ಉ. ೩. ೮. ೯, ಛಾಂ. ಉ. ೬. ೨. ೩ ನೋಡಿ.

4 ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ। ಆತ್ಮಾ ವಾ ಅರೇ ದ್ರಷ್ಟವ್ಯಃ ।

5 ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾಂತರಃ ।

6 ಛಾಂ. ಉ. ೮. ೭. ೪-೮, ೯. ೩ ನೋಡಿ.

7 ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದಃ ।

8 ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ । ಛಾಂ. ಉ. ೮. ೧೨. ೩ ನೋಡಿ.

9 ಛಾಂ. ಉ. ೮. ೭. ೧, ೬. ೨. ೩ ; ಮುಂ. ಉ. ೧. ೧. ೯ ; ಶ್ವೇ. ಉ. ೬. ೮ ; ತೈ. ಉ. ೨. ೯ ; ೨. ೮ ನೋಡಿ.

ದ್ವೈ.—'ಜ್ಞಾನಾರ್ಜಿತವಾದ ಫಲವು ಕರ್ಮದಿಂದ ಅಧಿಕವಾಗುತ್ತದೆಂದು ಶ್ರುತಿಯು ಹೇಳುವುದರಿಂದ ಜ್ಞಾನದಿಂದಲೇ ಎಲ್ಲವೂ ಲಭಿಸುತ್ತದೆಂಬುದು ಬಾದ-ರಾಯಣರ ಅಭಿಪ್ರಾಯವು ; ಇದು ಕಂಡುಬರುತ್ತದೆ' ಎಂಬುದು ಸೂತ್ರಾರ್ಥ.

'ಜ್ಞಾನದಿಂದಲೇ ಸ್ವರ್ಗ, ಅಪವರ್ಗ, ಎಲ್ಲ ಕಾಮನೆಗಳು ಉಂಟಾಗುತ್ತವೆ; ಆದರೂ ಕರ್ಮಮಾಡಿದಷ್ಟು ಅಧಿಕನಾಗುತ್ತಾನೆ, ಎಂದರೆ ಅಧಿಕಫಲವನ್ನು ಹೊಂದುತ್ತಾನೆ ಎಂದು ಕೌಂಠರವ್ಯ-ಶ್ರುತಿಯು ಹೇಳುತ್ತದೆ. ಯುಧಿಷ್ಠಿರಾದಿಗಳಿಗೆ ರಾಜಸೂಯಾದಿಗಳಿಂದ ಫಲವು ಅಧಿಕವಾದದ್ದು ಕಂಡುಬರುತ್ತದೆ : ಇದು ಬಾದರಾಯಣರ ಮತ.[1]

## ತುಲ್ಯಂ ತು ದರ್ಶನಮ್ ॥ ೯ ॥

೯. ಆದರೆ (ಆಚಾರ)ದರ್ಶನವು ಸಮಾನವಾಗಿರುತ್ತದೆ

ಶ್ರುತಿಗಳು ಬ್ರಹ್ಮಜ್ಞಾನಿಗಳಿಗೂ ಕರ್ಮಸಂಬಂಧವನ್ನು ಹೇಳುತ್ತವೆ—ಎಂಬ ಪೂರ್ವಪಕ್ಷಕ್ಕೆ (ಸೂ. ೩) ನಮ್ಮ ಪರಿಹಾರವು ಹೀಗಿದೆ. ವಿದ್ಯೆಯು ಕರ್ಮಶೇಷವಲ್ಲ ಎಂದು ತಿಳಿಸುವ ಶ್ರುತಿಗಳಿಗೂ ಸಮಾನವಾದ ಪ್ರಮಾಣವಿರುತ್ತದೆ—'ಇದನ್ನು ಅರಿತು ಕೊಂಡೇ ಕಾವಷೇಯಋಷಿಗಳು ಹೀಗೆಂದು ಹೇಳಿದರು : ನಾವು ಏತಕ್ಕೋಸ್ಕರ ಅಧ್ಯಯನಮಾಡಬೇಕು ? ನಾವು ಏತಕ್ಕೋಸ್ಕರ ಯಜ್ಞಮಾಡಬೇಕು'[2] (ಐ. ಆ. ೩. ೨. ೬); 'ಆ ಈ ಆತ್ಮನನ್ನೇ ಅರಿತುಕೊಂಡು ಬ್ರಾಹ್ಮಣರು ಪುತ್ರರಲ್ಲಿ, ವಿತ್ತದಲ್ಲಿ, ಲೋಕಗಳಲ್ಲಿ ಇರುವ ಕಾಮನೆಯನ್ನು ಬಿಟ್ಟು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ'[3] (ಬೃ. ಉ. ೩. ೫); 'ಇಷ್ಟೇ ಅಮೃತತ್ವಕ್ಕೆ (ಸಾಧನವು)—ಹೀಗೆಂದು ಹೇಳಿ ಯಾಜ್ಞವಲ್ಕ್ಯನು ಹೊರಟು ಹೋದನು'[4] (ಬೃ. ಉ. ೪. ೫. ೧೫). ಇದಲ್ಲದೆ 'ಭಗವಂತರೆ, ನಾನು ಯಜ್ಞಮಾಡ ಲಿರುವೆನು' (ಛಾಂ. ಉ. ೫. ೧೧. ೫) ಎಂಬ ಲಿಂಗದರ್ಶನವು ವೈಶ್ವಾನರವಿದ್ಯೆಗೆ ಸೇರಿದ್ದು. ಸೋಪಾಧಿಕ-ಬ್ರಹ್ಮವಿದ್ಯೆಯಲ್ಲಿ ಕರ್ಮದೊಡನಿರುವ ದರ್ಶನವು ಸಂಭವಿಸುತ್ತದೆ. ಆದರೆ ಇಲ್ಲಿಯೂ ವಿದ್ಯೆಯು ಕರ್ಮಕ್ಕೆ ಅಂಗವಾಗಿಲ್ಲ; ಏಕೆಂದರೆ ಪ್ರಕರಣವೇ ಮೊದಲಾದ ಪ್ರಮಾಣಗಳಿಲ್ಲ.

ವಿ.—ಬ್ರಹ್ಮಜ್ಞಾನಿಗಳು ಕರ್ಮತ್ಯಾಗವನ್ನು ಮಾಡುವುದರಿಂದ ವಿದ್ಯೆಯು

---

[1] ಯುಧಿಷ್ಠಿರಾದೀನಾಂ ರಾಜಸೂಯಾದಿನಾ ಫಲಾಧಿಕ್ಯದರ್ಶನಾಚ್ಚೇತಿ ಬಾದರಾಯಣ-ಮತಮ್ (ಮ. ಭಾ.).

[2] ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುರೃಷಯಃ ಕಾವಷೇಯಾಃ ಕಿಮರ್ಥಾ ವಯ-ಮಧ್ಯೇಷ್ಯಾಮಹೇ ಕಿಮರ್ಥಾ ವಯಂ ಯಕ್ಷ್ಯಾಮಹೇ ।

[3] ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾ-ಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ ।

[4] ಏತಾವದರೇ ಖಲ್ವಮೃತತ್ವಮಿತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ ।

ಕರ್ಮದ ಅಂಗವಲ್ಲವೆಂಬುದು ಶ್ರುತಿಯಿಂದ (ಐ. ಆ. ಇ. ೨ ೬) ತಿಳಿಯಬರುತ್ತದೆ ಫಲಾಭಿಸಂಧಿಯಿಲ್ಲದವನು ಯಜ್ಞಾದಿಕರ್ಮಗಳನ್ನು ಬ್ರಹ್ಮವಿದ್ಯೆಯ ಅಂಗವಾಗಿ ಮಾಡ ಬಹುದು ; ಆದ ದರಿಂದ ಕರ್ಮಾನುಷ್ಠಾನದರ್ಶನವು ಹೊಂದುತ್ತದೆ

ದ್ವೈ.—'ಜ್ಞಾನಿಗಳ ದರ್ಶನವು ರಾಜಸೂಯಾದಿ ಕರ್ಮವನ್ನು ಮಾಡಿದರೂ ಮಾಡದಿದ್ದರೂ ಯಾವಾಗಲೂ ಸಮವಾಗಿರುತ್ತದೆ'[1] ಎಂಬುದು ಸೂತ್ರಾರ್ಥ

**ಅಸಾರ್ವತ್ರಿಕೀ* ॥ ೧೦ ॥**

೧೦. ಸಾರ್ವತ್ರಿಕವಲ್ಲ.

ಈಗ ೪ನೇ ಸೂತ್ರದಲ್ಲಿ ಹೇಳಿದ ಆಕ್ಷೇಪಕ್ಕೆ ಪರಿಹಾರವನ್ನು ಹೇಳಲಾಗುತ್ತಿದೆ. 'ಯಾವುದನ್ನು ವಿದ್ಯೆಯಿಂದ....ಮಾಡುತ್ತಾನೆಯೊ ಅದು ಅಧಿಕಫಲಪ್ರದವಾಗುತ್ತದೆ' (ಛಾಂ. ಉ. ೧. ೧. ೧) ಎಂಬ ಶ್ರುತಿಯು ಸರ್ವವಿದ್ಯಾವಿಷಯವಲ್ಲ ; ಏಕೆಂದರೆ ಅದು ಪ್ರಕೃತವಿದ್ಯೆಗೆ ಸಂಬಂಧಿಸಿರುತ್ತದೆ. ಪ್ರಕೃತವಾದದ್ದು ಉದ್ಗೀಥವಿದ್ಯೆಯೇ ; 'ಉದ್ಗೀಥ-ಶಬ್ದವಾಚ್ಯವಾದ ಓಂ ಎಂಬ ಈ ಅಕ್ಷರವನ್ನು ಉಪಾಸಿಸಬೇಕು' (ಛಾಂ. ಉ ೧. ೧ ೧).

ವಿ.—ಛಾಂದೋಗ್ಯಶ್ರುತಿಯು (೧. ೧. ೧೦) ವಿದ್ಯೆಗಳನ್ನೆಲ್ಲ ಸೂಚಿಸದೆ ಉದ್ಗೀಥ ವಿದ್ಯೆಯನ್ನು ಮಾತ್ರ ಸೂಚಿಸುತ್ತದೆ.

ದ್ವೈ.—'ಮೋಕ್ಷಸಾಧನಜ್ಞಾನದಲ್ಲಿ ಎಲ್ಲರಿಗೂ ಅಧಿಕಾರವಿಲ್ಲ'[2] ಎಂಬುದು ಸೂತ್ರಾರ್ಥ.

ಎಲ್ಲರೂ ಪುರುಷಾರ್ಥವನ್ನು ಬಯಸುವುದರಿಂದ ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರ ವಿದೆ—ಎಂಬ ಅಭಿಪ್ರಾಯವನ್ನು ಈ ಸೂತ್ರದಲ್ಲಿ ನಿರಾಕರಿಸಿದೆ.

**ವಿಭಾಗಃ ಶತವತ್ ॥ ೧೧ ॥**

೧೧. (ವಿದ್ಯಾಕರ್ಮಗಳ) ವಿಭಾಗವು ನೂರರಂತೆ.

ಈಗ ೫ನೇ ಸೂತ್ರದಲ್ಲಿ ಹೇಳಿದ ಅಭಿಪ್ರಾಯವನ್ನು ಖಂಡಿಸಿದೆ: 'ವಿದ್ಯಾಕರ್ಮ-ಗಳು ಆತನನ್ನು ಅನುಸರಿಸುತ್ತವೆ' (ಬೃ. ಉ ೪. ೪. ೨) ಎಂಬ ಶ್ರುತಿಯ ಅರ್ಥವನ್ನು ಹೀಗೆ ತಿಳಿಯಬೇಕು—ವಿದ್ಯೆಯು ಒಬ್ಬನನ್ನು ಅನುಸರಿಸುತ್ತದೆ, ಕರ್ಮವು ಮತ್ತೊಬ್ಬನನ್ನು ಅನುಸರಿಸುತ್ತದೆ. ಇದು ನೂರರ ಹಾಗೆ: 'ಇಬ್ಬರಿಗೂ ನೂರನ್ನು ಕೊಡಿ' ಎಂಬಲ್ಲಿ ನೂರನ್ನು ವಿಭಾಗಿಸಿ ಒಬ್ಬೊಬ್ಬನಿಗೆ ಐವತ್ತನ್ನು ಕೊಟ್ಟ ಹಾಗೆ.

---

[1] ರಾಜಸೂಯಾದಿಕೃತೌ ಚ ಸಮಮೇವ ತೇಷಾಂ ಜ್ಞಾನವಮ್ (ಸೂ. ಭಾ.).

* ಇಲ್ಲಿಂದ ಪ್ರಾರಂಭಿಸಿ ೧೨ನೇ ಸೂತ್ರದ ವರೆಗೂ ಮಧ್ವಭಾಷ್ಯದಲ್ಲಿ ಅಧಿಕಾರಾಧಿಕರಣ ಎಂಬ ಹೊಸ ಅಧಿಕರಣವಾಗಿದೆ.

[2] ನ ಸರ್ವೇಷಾಮಧಿಕಾರಃ (ಮ. ಭಾ.).

ಇದಲ್ಲದೆ ಇಲ್ಲಿ ಶ್ರುತಿಯು (ಬೃ. ಉ. ೪. ೪. ೬) ಮುಮುಕ್ಷುವನ್ನು ಸೂಚಿಸದೆ ಸಂಸಾರಿಯನ್ನೇ ಸೂಚಿಸುತ್ತದೆ.

ವಿ.—ವಿದ್ಯಾ-ಕರ್ಮಗಳಿಗೆ ಬೇರೆ ಬೇರೆ ಫಲವಿರುವುದರಿಂದ ಶ್ರುತಿಯನ್ನು (ಬೃ. ಉ. ೪ ೪. ೨) ವಿಭಾಗಾರ್ಥದಲ್ಲಿ ಗ್ರಹಿಸಬೇಕು. ಕ್ಷೇತ್ರವನ್ನೂ ರತ್ನವನ್ನೂ ಮಾರವವನು ಒಂದೊಂದಕ್ಕೂ ನೂರು ನೂರು ನಾಣ್ಯಗಳನ್ನು ತೆಗೆದುಕೊಂಡ ಹಾಗೆ.

**ದ್ವೈ.**—'(ಅಧಿಕಾರಿಗಳ ಮತ್ತು ಅನಧಿಕಾರಿಗಳ) ವಿಭಾಗವು ನೂರರಂತೆ' ಎಂಬುದು ಸೂತ್ರಾರ್ಥ.

ನವಕೋಟಿದೇವತೆಗಳಲ್ಲಿ ದೇವತ್ವವು ಸಮಾನವಾಗಿದ್ದರೂ ಪರಬ್ರಹ್ಮ-ಅಪರಬ್ರಹ್ಮ ಮತ್ತು ನೂರು ದೇವತೆಗಳು—ಇವರಿಗೆ ಮಾತ್ರ ಸೋಮಾಧಿಕಾರವಿರುವಂತೆ ಸುಖಾಪೇಕ್ಷೆಯು ಸಮಾನವಾಗಿದ್ದರೂ ಕೆಲವರಿಗೆ ಜ್ಞಾನಕ್ಕೆ ಅಧಿಕಾರವಿದೆ, ಕೆಲವರಿಗಿಲ್ಲ.[1]

## ಅಧ್ಯಯನಮಾತ್ರವತಃ ॥ ೧೨ ॥

೧೨. ಕೇವಲ ಅಧ್ಯಯನವನ್ನು ಮಾಡಿದವನಿಗೇ (ಕರ್ಮವನ್ನು ವಿಧಿಸಿದೆ).

ಈಗ ೬ ನೇ ಸೂತ್ರದಲ್ಲಿ ಮಾಡಿದ ಆಕ್ಷೇಪಕ್ಕೆ ಉತ್ತರವನ್ನು ಕೊಡಲಾಗುತ್ತದೆ: 'ವೇದವನ್ನು ಅಧ್ಯಯನಮಾಡಿ, ಗುರುಗೃಹದಿಂದ ಸಮಾವರ್ತನಮಾಡಿ' (ಛಾಂ. ಉ. ೮. ೧೫. ೧) ಎಂಬಲ್ಲಿ ಕೇವಲ ಅಧ್ಯಯನವೇ ಶ್ರುತವಾಗಿರುವುದರಿಂದ ಕೇವಲ ಅಧ್ಯಯನ ಮಾಡಿದವನಿಗೇ ಕರ್ಮವಿಧಿ ಎಂದು ನಿರ್ಧರಿಸಬೇಕಾಗಿದೆ. ಅಧ್ಯಯನದಿಂದುಂಟಾಗುವ ಕರ್ಮದ ಬೋಧನವು ಕರ್ಮಾನುಷ್ಠಾನಕ್ಕೆ ಕಾರಣವು ಎಂಬುದನ್ನು ನಾವು ಇಲ್ಲಿ ನಿರಾಕರಿಸುತ್ತಿಲ್ಲ; ಆದರೆ ಉಪನಿಷತ್ತಿನಿಂದ ಆಗುವ ಆತ್ಮಜ್ಞಾನವು ಸ್ವತಂತ್ರವಾಗಿ ಪ್ರಯೋಜನವುಳ್ಳದ್ದೆಂದು ತಿಳಿಯಬರುತ್ತಿರುವುದರಿಂದ ಅದು ಕರ್ಮಾಧಿಕಾರಕ್ಕೆ ಕಾರಣವಾಗಲಾರದು—ಎಂದಿಷ್ಟೇ ಪ್ರತಿಪಾದಿಸುತ್ತೇವೆ. ಒಂದು ಕ್ರತುವಿನ ಜ್ಞಾನವು ಮತ್ತೊಂದು ಕ್ರತುವಿನ ಅಧಿಕಾರಕ್ಕೆ ಹೇಗೆ ಬೇಕಿಲ್ಲವೊ ಹಾಗೆಯೇ ಇಲ್ಲಿಯೂ.

ವಿ.—ಛಾಂದೋಗ್ಯಶ್ರುತಿಯು (೮. ೧೫. ೧) ಕೇವಲ ಅಧ್ಯಯನಮಾಡಿರುವವನಿಗೆ ಮಾತ್ರ ಕರ್ಮವನ್ನು ವಿಧಿಸುತ್ತದೆ. ಅಧ್ಯಯನವು ಕೇವಲ ಅಕ್ಷರರಾಶಿ-ಗ್ರಹಣದಲ್ಲಿ ಪರ್ಯವಸಾನವಾಗುತ್ತದೆಯೇ ಹೊರತು ಅರ್ಥಗ್ರಹಣದಲ್ಲಲ್ಲ. ಜ್ಯೋತಿಷ್ಟೋಮಕರ್ಮದ ಅನುಷ್ಠಾನವು ಜ್ಯೋತಿಷ್ಟೋಮಕರ್ಮದ ಸ್ವರೂಪ-ಜ್ಞಾನಕ್ಕಿಂತ ಬೇರೆಯಾಗಿರುವಂತೆ ಉಪಾಸನಾದಿಶಬ್ದವಾಚ್ಯವೂ ಪುರುಷಾರ್ಥ ಸಾಧನವೂ ಆದ ವಿದ್ಯೆಯು ಬ್ರಹ್ಮಸ್ವರೂಪದ ಬರಿಯ ಜ್ಞಾನಕ್ಕಿಂತ ಬೇರೆಯಾಗಿರುತ್ತದೆ. ಇಂಥ ವಿದ್ಯೆಗೆ ಕರ್ಮಸಂಬಂಧದ ಗಂಧವೂ ಇರುವುದಿಲ್ಲ.

---

[1] ಸುಖಾಪೇಕ್ಷಾಸಾಮ್ಯೇಽಪಿ ವಿಭಾಗ ಇಷ್ಯತೇಽಧಿಕಾರಾರ್ಥವತ್ (ಮ. ಭಾ.).

ದ್ವೈ.—'ನಿಖಿಲವೇದಾಧ್ಯಯನವನ್ನು ಮಾಡಿದವರಿಗೆ ಮಾತ್ರ ಜ್ಞಾನದಲ್ಲಿ ಅಧಿಕಾರವಿದೆ' ಎಂಬುದು ಸೂತ್ರಾರ್ಥ.

**ನಾವಿಶೇಷಾತ್*** || ೧೩ ||

೧೩. (ಶ್ರುತಿಯಲ್ಲಿ) ವಿಶೇಷವೇನೂ ಇಲ್ಲದಿರುವುದರಿಂದ (ಕರ್ಮನಿಯಮವು ಜ್ಞಾನಿಗಿಲ್ಲ)

ಈಗ ೭ನೇ ಸೂತ್ರದಲ್ಲಿ ಎತ್ತಿದ ಆಕ್ಷೇಪಕ್ಕೆ ಉತ್ತರವನ್ನು ಹೇಳಲಾಗುತ್ತಿದೆ 'ಇಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಜೀವಿಸಲು ಇಚ್ಛಿಸಬೇಕು' (ಈ. ಉ. ೨) ಎಂಬ ನಿಯಮಶ್ರವಣಗಳಲ್ಲಿ 'ಜ್ಞಾನಿಗೆ' ಎಂಬ ವಿಶೇಷವಿಲ್ಲ ; ಏಕೆಂದರೆ ಯಾವ ವಿಶೇಷವೂ ಇಲ್ಲದೆ ಅಲ್ಲಿ ನಿಯಮವನ್ನು ವಿಧಿಸಿದೆ

ವಿ.—ಈಶಾವಾಸ್ಯಶ್ರುತಿಯು (೨) ಆತ್ಮಜ್ಞಾನಿಯನ್ನು ಜ್ಞಾನದಿಂದ ತಿರುಗಿಸಿ ಕರ್ಮಾನುಷ್ಠಾನದಲ್ಲಿ ನಿಯಮಿಸುವುದಿಲ್ಲ; ಏಕೆಂದರೆ ಕರ್ಮವು ಫಲವನ್ನು ಸಾಧಿಸಲು ಒಂದು ಸ್ವತಂತ್ರಸಾಧನವಾಗಿದೆ ಎಂದು ಶ್ರುತಿಯಿಂದ ಅರಿತುಕೊಳ್ಳಲು ಯಾವ ವಿಶೇಷ-ಕಾರಣವೂ ಇರುವುದಿಲ್ಲ. ಇಲ್ಲಿ ಕರ್ಮವು ವಿದ್ಯೆಯ ಅಂಗವಾಗಿಯೂ ಇರಬಹುದು. ಆತ್ಮಜ್ಞಾನಿಯು ೭ದುಕಿರುವವರೆಗೂ ಉಪಾಸನೆಯನ್ನು ಮಾಡಬೇಕಾಗಿರುವುದರಿಂದ ಆ ಉಪಾಸನೆಗೆ ಅನುಕೂಲವಾದ ಕರ್ಮವನ್ನು ಮಾಡುತ್ತಿರಬಹುದು.

ದ್ವೈ.—'ದೇವಾದಿಗಳಿಗೂ ಜ್ಞಾನದಲ್ಲಿ ಅಧಿಕಾರವು ಸಮಾನವಾಗಿರುವುದಿಲ್ಲ'[1] ಎಂಬುದು ಸೂತ್ರಾರ್ಥ.

ಜ್ಞಾನವು ಅಧಿಕಾರಿಯನ್ನು ಅನುಸರಿಸುತ್ತದೆ ಎಂದರ್ಥ.

**ಸ್ತುತಯೇಽನುಮತಿರ್ವಾ†** || ೧೪ ||

೧೪. ಅಥವಾ (ವಿದ್ಯೆಯನ್ನು) ಸ್ತುತಿಸುವುದಕ್ಕಾಗಿ (ಕರ್ಮಾ)ನುಮತಿಯನ್ನು (ಕೊಟ್ಟಿದೆ).

ಈಶಾವಾಸ್ಯಶ್ರುತಿಗೆ (೨) ಇನ್ನೊಂದು ವಿಧದಿಂದಲೂ ಅರ್ಥವನ್ನು ಹೇಳಬಹುದು : ಇಲ್ಲಿ ಪ್ರಕರಣಸಾಮರ್ಥ್ಯದಿಂದ ಜ್ಞಾನಿಯಾದವನೇ ಕರ್ಮವನ್ನು ಮಾಡುತ್ತಾನೆ—ಎಂದು

---

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅಧಿಕಾರವಿಶೇಷಾಧಿಕರಣ ಎಂಬ ಅಧಿಕರಣದಲ್ಲಿ ಅಂತರ್ಗತವಾಗಿದೆ.

1 ನ ಸಾಮಾನ್ಯೇನಾಧಿಕಾರೋ ದೇವಾದೀನಾಮ್ (ಮ. ಭಾ.).

† ಈ ಸೂತ್ರದಿಂದ ಪ್ರಾರಂಭಿಸಿ ೩೩ನೇ ಸೂತ್ರದವರೆಗೂ ಮಧ್ವಭಾಷ್ಯದಲ್ಲಿ ಕಾಮಚಾರಾಧಿಕರಣ ಎಂಬ ಅಧಿಕರಣವಾಗಿದೆ.

ತಿಳಿದುಕೊಳ್ಳಬಹುದಾದರೂ ವಿದ್ಯೆಯ ಸ್ತುತಿಗಾಗಿ ಕರ್ಮಾನುಷ್ಠಾನಕ್ಕೆ ಅನುಮತಿಯನ್ನು ಕೊಟ್ಟಿದೆ ಎಂದು ತಿಳಿಯಬೇಕು; ಏಕೆಂದರೆ 'ಮನುಷ್ಯನಿಗೆ ಕರ್ಮವು ಅಂಟುವುದಿಲ್ಲ' (ಈ. ಉ. ೨) ಎಂದು ಮುಂದೆಯೇ ಹೇಳಿದೆ. ಒಟ್ಟರ್ಥ ಹೀಗಿದೆ: ಜ್ಞಾನಿಯಾದ ಮನುಷ್ಯನು ಯಾವಜ್ಜೀವವೂ ಕರ್ಮವನ್ನು ಮಾಡುತ್ತಿದ್ದರೂ ವಿದ್ಯಾಸಾಮರ್ಥ್ಯದಿಂದ ಅವನಿಗೆ ಕರ್ಮವು ಅಂಟುವುದಿಲ್ಲ; ಆದುದರಿಂದ ವಿದ್ಯೆಯನ್ನು ಇಲ್ಲಿ ಸ್ತುತಿಸಿದೆ.[1]

ವಿ.—ಈಗ ಸೂತ್ರಕಾರರು ಈಶಾವಾಸ್ಯಶ್ರುತಿಗೆ ತಮ್ಮದೇ ಆದ ಅರ್ಥವನ್ನು ಕೊಡುತ್ತಾರೆ: 'ಇದೆಲ್ಲವೂ ಈಶನಿಂದ ವ್ಯಾಪಿಸಲ್ಪಡತಕ್ಕದ್ದು'[2] (ಈ. ಉ. ೧) ಎಂಬುದು ಇದು ವಿದ್ಯಾಪ್ರಕರಣವೆಂಬುದನ್ನು ತಿಳಿಸುತ್ತದೆ; ಆದುದರಿಂದ ಕರ್ಮಾನುಷ್ಠಾನಕ್ಕೆ ಅನುಮತಿಯನ್ನು ಕೊಟ್ಟಿರುವುದು ವಿದ್ಯೆಯ ಸ್ತುತಿಗಾಗಿ ಮನುಷ್ಯನು ಯಾವಾಗಲೂ ಕರ್ಮವನ್ನು ಮಾಡುತ್ತಿದ್ದರೂ ವಿದ್ಯಾಮಾಹಾತ್ಮ್ಯದಿಂದ ಲಿಪ್ತನಾಗುವುದಿಲ್ಲ ಎಂದರ್ಥ.

ದ್ವೈ.—'(ಜ್ಞಾನಿಗೆ ಯಥೇಷ್ಟಾಚರಣವು ವಿಧಿಯಲ್ಲ); ಶ್ರುತಿಯಿರುವುದು ಜ್ಞಾನಿಯ ಸ್ತುತಿಗಾಗಿ ಅಥವಾ ಅನುಮತಿಗಾಗಿ' ಎಂಬುದು ಸೂತ್ರಾರ್ಥ.

**ಸ ಬ್ರಾಹ್ಮಣಃ ಕೇನ ಸ್ಯಾತ್? ಯೇನ ಸ್ಯಾತ್ ತೇನೇದೃಶಃ ಏವ** (ಬೃ. ಉ. ೩. ೫ ೧) ಎಂಬ ಶ್ರುತಿಯಲ್ಲಿ ಜ್ಞಾನಿಗೆ ಯಥೇಷ್ಟಾಚರಣವನ್ನು ವಿಧಿಸಿಲ್ಲ. ಅನುಮತಿ ಎಂದರೆ ಅಪ್ಪಣೆ ಅಥವಾ ಅನುಜ್ಞೆ; ಅನುಷ್ಠಾನಯೋಗ್ಯಗಳಾದ ಕರ್ಮಗಳಲ್ಲಿ ಒಂದನ್ನು ಮಾಡಿದರೂ ಅಥವಾ ಬಿಟ್ಟರೂ ಅನುಮತಿಯೇ.

### ಕಾಮಕಾರೇಣ ಚೈಕೇ ॥ ೧೫ ॥

೧೫. ಕೆಲವರು ತಮ್ಮ ಇಚ್ಛಾನುಸಾರವಾಗಿ (ಕರ್ಮದ ನಿಷ್ಪ್ರಯೋಜನತ್ವವನ್ನು ತೋರಿಸುತ್ತಾರೆ).

ಮತ್ತೆ ಕೆಲವರು ಜ್ಞಾನಿಗಳು ಬ್ರಹ್ಮವಿದ್ಯಾಫಲವನ್ನು ಅನುಭವಿಸಿ ಮತ್ತು ಅದನ್ನು ಆಶ್ರಯಿಸಿಕೊಂಡು ಫಲಾಂತರಸಾಧನವಾದ ಸಂತತಿಗಳಲ್ಲಿ ಪ್ರಯೋಜನವಿಲ್ಲವೆಂದು ಹೇಳಿರುತ್ತಾರೆ. ಸ್ವೇಚ್ಛಾವರ್ತನೆಯ ವಿಷಯದಲ್ಲಿ ವಾಜಸನೇಯಿಗಳ (ಬೃ. ಉ. ೪. ೪. ೨೨) ಶ್ರುತಿಯಿದೆ: 'ಈ ಆತ್ಮನನ್ನೇ ಈ ಲೋಕವನ್ನೇ ಹೊಂದಿರುವ ನಾವು ಸಂತತಿಯಿಂದ ಏನು ಮಾಡಿಕೊಳ್ಳೋಣ?—ಎಂದು ಯೋಚಿಸುತ್ತ ಹಿಂದಿನ ಬ್ರಹ್ಮಜ್ಞಾನಿಗಳು ಸಂತತಿ

---

[1] ಯಾವಜ್ಜೀವಂ ಕರ್ಮ ಕುರ್ವತ್ಯಪಿ ವಿದುಷಿ ಪುರುಷೇ ನ ಕರ್ಮ ಲೇಪಾಯ ಭವತಿ ವಿದ್ಯಾಸಾಮರ್ಥ್ಯಾದಿತಿ ತದೇವಂ ವಿದ್ಯಾ ಸ್ತೂಯತೇ (ಸೂ. ಭಾ.).

[2] ಈಶಾವಾಸ್ಯಮಿದಂ ಸರ್ವಮ್ ।

ಯನ್ನು ಬಯಸಲಿಲ್ಲ '[1] ವಿದ್ಯಾಫಲವು ಅನುಭವಾರೂಢವಾಗಿರುತ್ತದೆ, ಕರ್ಮಫಲದಂತೆ ಕಾಲಾಂತರದಲ್ಲಾಗುವುದಿಲ್ಲ—ಎಂದು ಅನೇಕ ಸಲ ಹೇಳಿರುತ್ತೇವೆ[2] ಆದುದರಿಂದಲೂ ವಿದ್ಯೆಯು ಕರ್ಮಶೇಷವಾಗಲಾರದು ಮತ್ತು ಅದರ ವಿಷಯವಾದ ಫಲಶ್ರುತಿಯು ಯಥಾರ್ಥವಲ್ಲವೆಂದು ಹೇಳಲಾಗುವುದಿಲ್ಲ

ವಿ.—ಕೆಲವು ಶಾಖೆಗಳಲ್ಲಿ (ಬೃ ಉ ೪ ೪ ೨೨) ಬ್ರಹ್ಮವಿದ್ಯಾನಿಷ್ಠನು ತನ್ನ ಇಚ್ಛಾನುಸಾರವಾಗಿ ಗಾರ್ಹಸ್ಥ್ಯತ್ಯಾಗವನ್ನು ಮಾಡಬಹುದೆಂದು ಓದುತ್ತೇವೆ ಈ ಶ್ರುತಿಯಿಂದ ಬ್ರಹ್ಮವಿದ್ಯೆಯು ಕರ್ಮಕ್ಕೆ ಅಂಗವಲ್ಲವೆಂದು ತಿಳಿದುಬರುತ್ತದೆ, ಹಾಗಿದ್ದರೆ ಬ್ರಹ್ಮಜ್ಞಾನಿಗೆ ಗಾರ್ಹಸ್ಥ್ಯತ್ಯಾಗವು ಸಂಭವಿಸುತ್ತಿರಲಿಲ್ಲ

ದ್ವ್ಯಳ.—'ಜ್ಞಾನಿಯಾದವನು ಯಥೇಷ್ಟವಾದ ಕರ್ಮಾಚರಣೆಯಿಂದಲೂ ಮೋಕ್ಷವನ್ನು ಹೊಂದುತ್ತಾನೆ—ಎಂದು ಕೆಲವು ಶಾಖೆಗಳು ಪಠಿಸುತ್ತಾರೆ' ಎಂಬುದು ಸೂತ್ರಾರ್ಥ

'ಬ್ರಹ್ಮಜ್ಞಾನಿಯು ಯಥೇಷ್ಟವಾಗಿ ಆಚರಿಸುತ್ತಾನೆ, ತಿನ್ನುತ್ತಾನೆ, ಮಾತಾಡುತ್ತಾನೆ, ತನಗೆ ಬೇಕಾದಾಗ ಶರೀರವನ್ನು ತ್ಯಜಿಸಿ ಅನಾದಿಯಾದ ಪರಮಪದವನ್ನು ಸೇರುತ್ತಾನೆ' ಎಂದು ಕೆಲವರು ಪಠಿಸುತ್ತಾರೆ[3]

## ಉಪಮರ್ದಂ ಚ ॥ ೧೬ ॥

೧೬ (ಕರ್ಮದ) ನಾಶವನ್ನೂ (ಶ್ರುತಿಯು ಉಪದೇಶಿಸುತ್ತದೆ)

ಮತ್ತೆ ಕಾಮಾಧಿಕಾರಕ್ಕೆ ಕಾರಣವಾಗಿರುವ, ಕ್ರಿಯಾ-ಕಾರಕ-ಫಲರೂಪವಾಗಿರುವ, ಅವಿದ್ಯಾಕೃತವಾದ ಸಮಸ್ತಪ್ರಪಂಚವೂ ವಿದ್ಯಾಸಾಮರ್ಥ್ಯದಿಂದ ಪೂರ್ಣವಾಗಿ ನಾಶವಾಗುತ್ತದೆ 'ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವುದೋ ಅಲ್ಲಿ ಯಾವುದರಿಂದ ಯಾವುದನ್ನು ಮೂಸಿಯಾನು '[4] (ಬೃ ಉ ೨ ೪ ೧೪) ಎಂದು ಶ್ರುತಿಯು ಹೇಳುತ್ತದೆ

ವಿ —ಪುಣ್ಯಾಪುಣ್ಯರೂಪವಾದ ಮತ್ತು ಸಮಸ್ತಸಾಂಸಾರಿಕದುಃಖಮೂಲವಾದ ಕರ್ಮವು ಬ್ರಹ್ಮವಿದ್ಯೆಯಿಂದ ನಾಶವಾಗುತ್ತದೆಯೆಂದು ಕೆಲವರು ಪಠಿಸುತ್ತಾರೆ

---

[1] ಏತದ್ಧ ಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯಂತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ ।

[2] ಅನುಭವಾರೂಢಮೇವ ಚ ವಿದ್ಯಾಫಲಂ ನ ಕ್ರಿಯಾಫಲವತ್ ಕಾಲಾಂತರಭಾವೀತ್ಯಸಕೃದವೋಚಾಮ (ಸೂ. ಭಾ )

[3] ಕಾಮಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇಽಸ್ಯೈವೇಮಂ ದೇಹಮುತ್ಸೃಜ್ಯಾಥ ಪರಾತ್ಪರಮಿಮಾಯುರನಾರಂಭಣಮಿತಿ ಚೈಕೇ ಪಠಂತಿ (ಮ. ಭಾ )

[4] ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ತತ್ಕೇನ ಕಂ ಜಿಘ್ರೇತ್ ।

'ಸರ್ವೋತ್ಕೃಷ್ಟರಾದರೂ ಯಾರನಿಗೆ ನಿಕೃಷ್ಟರೊ ಅಂಥವನನ್ನು ದರ್ಶನಮಾಡಲಾಗಿ ಹೃದಯಗ್ರಂಥಿಗಳು ಕಿತ್ತುಹೋಗುವುವು; ಸರ್ವಸಂದೇಹಗಳೂ ಕತ್ತರಿಸಿಹೋಗುವುವು; ಇವನ ಸರ್ವಕರ್ಮಗಳೂ ಕ್ಷಯಹೊಂದುವುವು'[1] (ಮುಂ. ಉ. ೨. ೨. ೮). ಆದುದರಿಂದ ವಿದ್ಯೆಯು ಕರ್ಮಾಂಗವೆಂಬುದನ್ನು ಇದೂ ನಿರಾಕರಿಸುತ್ತದೆ.

**ವ್ಯಾ.**—'ಜ್ಞಾನದಿಂದ ಪ್ರಾರಬ್ಧಕರ್ಮದ ನಾಶವನ್ನೂ ಕೆಲವರು ಶಾಖಿಗಳು ಪಠಿಸುತ್ತಾರೆ' ಎಂಬುದು ಸೂತ್ರಾರ್ಥ.

'ಓಂ ಎಂದು ಉಚ್ಚರಿಸಿ, ಒಳಗಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ಪುಣ್ಯಪಾಪಗಳನ್ನು (ಜ್ಞಾನದಿಂದ) ನಾಶಗೊಳಿಸಿ, ಯಥೇಷ್ಟವಾಗಿ ಆಚರಿಸುತ್ತ, ಜ್ಞಾನಿಗಳು ಪರಬ್ರಹ್ಮನನ್ನು ಸೇರುತ್ತಾರೆ' ಎಂದು ತುರ-ಶ್ರುತಿಯಲ್ಲಿ ಹೇಳಿದೆ.[2]

**ಊರ್ಧ್ವರೇತಃಸು ಚ ಶಬ್ದೇ ಹಿ ॥ ೧೭ ॥**

೧೭　ಊರ್ಧ್ವರೇತಸ್ಕರಿಗೂ (ವಿದ್ಯೆಯಿದೆ); ಶ್ರುತಿಯಲ್ಲಿ (ಹಾಗೆಂದು ಹೇಳಿದೆ).

ಊರ್ಧ್ವರೇತಸ್ಕರ ಆಶ್ರಮಗಳಲ್ಲಿಯೂ ವಿದ್ಯೆಯಿದೆಯೆಂದು ಶ್ರುತಿಯು ಹೇಳುತ್ತದೆ. ಆದರೆ ಅಲ್ಲಿ ವಿದ್ಯೆಯು ಕರ್ಮಕ್ಕೆ ಅಂಗವಾಗಿಲ್ಲ; ಏಕೆಂದರೆ ಅವರಿಗೆ ಅಗ್ನಿಹೋತ್ರವೇ ಮೊದಲಾದ ವೈದಿಕ-ಕರ್ಮಗಳು ಇಲ್ಲವೇ ಇಲ್ಲ. ಊರ್ಧ್ವರೇತಸ್ಕರ ಆಶ್ರಮಗಳನ್ನು ವೇದದಲ್ಲಿ ಹೇಳಿಲ್ಲ ಎಂಬುದು ಸರಿಯಲ್ಲ; ಏಕೆಂದರೆ ಅವುಗಳನ್ನು ತಿಳಿಸುವ ಶ್ರುತಿಗಳಿವೆ: 'ಧರ್ಮಸ್ಕಂಧಗಳು ಮೂರು'[3] (ಛಾಂ. ಉ. ೨. ೨೩. ೧); 'ಮತ್ತು ಯಾರು ಅರಣ್ಯದಲ್ಲಿ ಶ್ರದ್ಧೆ, ತಪಸ್ಸು ಮೊದಲಾದುವನ್ನು ಅನುಷ್ಠಿಸುವರೊ'[4] (ಛಾಂ. ಉ. ೫. ೧೦. ೧); 'ಯಾರು ಅರಣ್ಯದಲ್ಲಿ ತಪಃಶ್ರದ್ಧೆಗಳನ್ನು ಸೇವಿಸುವರೊ'[5] (ಮುಂ. ಉ. ೨. ೧೧); 'ಸಂನ್ಯಾಸಿಗಳು ಈ ಆತ್ಮಲೋಕವನ್ನೇ ಬಯಸುತ್ತ ಪ್ರವ್ರಜನಮಾಡುತ್ತಾರೆ'[6] (ಬೃ. ಉ. ೪. ೪. ೨೨); 'ಬ್ರಹ್ಮಚರ್ಯದಿಂದಲೇ ಸಂನ್ಯಾಸಮಾಡಲಿ'[7] (ಜಾಬಾಲ ಉ. ೪). ಗೃಹಸ್ಥರಾದವರೂ ಗೃಹಸ್ಥರಾಗದವರೂ, ಋಣತ್ರಯವನ್ನು ತೀರಿಸಿಕೊಂಡ

---

[1] ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥

[2] ಓಮಿತ್ಯಾತ್ಮಾನಂ ಯುಂಜೀತಾಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುಪ್ರಜಂತೀತಿ ಚ ತುರಶ್ರುತೌ (ಮ ಭಾ.).

[3] ತ್ರಯೋ ಧರ್ಮಸ್ಕಂಧಾಃ ।

[4] ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ।

[5] ತಪಃಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ ।

[6] ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ ।

[7] ಬ್ರಹ್ಮಚರ್ಯಾದೇವ ಪ್ರವ್ರಜೇತ್ ।

ವರೂ ತೀರಿಸಿಕೊಳ್ಳದವರೂ ಊರ್ಧ್ವರೇತಸ್ತ್ವವನ್ನು ಹೊಂದಬಹುದೆಂದು ಶ್ರುತಿಸ್ಮೃತಿಗಳು ಹೇಳುತ್ತವೆ. ಆದುದರಿಂದಲೂ ವಿದ್ಯೆಯು ಸ್ವತಂತ್ರವಾಗಿದೆ.

ವಿ.—ಊರ್ಧ್ವರೇತಸ್ಕರಿಗೂ ಬ್ರಹ್ಮವಿದ್ಯೆಯು ಇರುವುದರಿಂದ ಆ ಆಶ್ರಮಿಗಳಿಗೆ ಅಗ್ನಿಹೋತ್ರಾದಿಕರ್ಮಗಳಿಲ್ಲ. ಆದುದರಿಂದಲೂ ವಿದ್ಯೆಯು ಕರ್ಮಕ್ಕೆ ಅಂಗವಲ್ಲ. ಇದು ಶ್ರುತಿಗಳಿಂದಲೂ (ಛಾಂ. ಉ. ೫. ೧೦. ೧; ಬೃ. ಉ. ೪. ೪. ೨೨) ತಿಳಿದುಬರುತ್ತದೆ. ವಿರಕ್ತರಾಗದವರು ಮಾತ್ರ ಬದುಕಿರುವರೆಗೂ ಅಗ್ನಿಹೋತ್ರಾದಿಗಳನ್ನು ಮಾಡಬೇಕು.

ದ್ವೈ.—'ಊರ್ಧ್ವರೇತಸ್ಕರಾದ ಜ್ಞಾನಿಗಳಿಗೇ ಜ್ಞಾನೋಪದೇಶವು; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ' ಎಂಬುದು ಸೂತ್ರಾರ್ಥ.

ಜ್ಞಾನಿಗಳಿಗೆ ಯಥೇಷ್ಟಾಚರಣವಿದ್ದರೂ ಮೋಕ್ಷವು ಲಬ್ಧವಾಗುವಂತೆ ಕಾಮಚಾರಿಗಳಿಗೆ ಜ್ಞಾನಾಧಿಕಾರವಿಲ್ಲ.[1] 'ಯಾವ್ನ ಪರಮಗುಹ್ಯವನ್ನು ಊರ್ಧ್ವರೇತಸ್ಕರಿಗೆ ಹೇಳುವನೊ, ಯಾವನನ್ನು ಹೊಂದಿ ಇತರರು ದೊಡ್ಡವರಾಗುವರೊ ಅಂಥ ಮಹಾನ್ ವ್ಯಕ್ತಿಯು ಅತಿ ವಿರಳ' ಎಂದು ಮಾಠರ-ಶ್ರುತಿಯು ಹೇಳುತ್ತದೆ.

[1] ನ ತಾವತಾ ಕಾಮಚಾರಾಣಾಂ ಜ್ಞಾನಾಧಿಕಾರಃ (ಮ. ಭಾ.).

## ೨. ಪರಾಮರ್ಶಾಧಿಕರಣ

(ಸೂ. ೧೮–೨೦)

**ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ || ೧೮ ||**

೧೮. (ಹಿಂದಿನ ಸೂತ್ರದಲ್ಲಿ ಉದಾಹರಿಸಿದ ಶ್ರುತಿಗಳು) ಪರಾಮರ್ಶವೆಂದೂ (ಸಂನ್ಯಾಸದ) ವಿಧಿಯಲ್ಲವೆಂದೂ ಜೈಮಿನಿಯು (ಅಭಿಪ್ರಾಯಪಡುತ್ತಾನೆ); ಏಕೆಂದರೆ (ಶ್ರುತಿಯು ಸಂನ್ಯಾಸವನ್ನು) ನಿಂದಿಸಿದೆ

**ಪೂರ್ವಪಕ್ಷ**—'ಧರ್ಮಸ್ಕಂಧಗಳು ಮೂರು' (ಛಾಂ. ಉ. ೨. ೨೩. ೧) ಇದೇ ಮೊದಲಾದ ಶ್ರುತಿಗಳು ಊರ್ಧ್ವರೇತಸ್ಕರ ಆಶ್ರಮಗಳನ್ನು ಪರಾಮರ್ಶಿಸಿವೆಯೇ ಹೊರತು ವಿಧಿಸಿಲ್ಲ—ಎಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ; ಏಕೆಂದರೆ ಇಲ್ಲಿ ಯಾವ ಚೋದನಾ-ಶಬ್ದವೂ ಇಲ್ಲ. ಮತ್ತೆ ಇಲ್ಲಿ ಪರಾಮರ್ಶವು ಆಶ್ರಮಗಳನ್ನು ತಿಳಿಸಿದರೂ ಅವು ಸ್ಮೃತ್ಯಾಚಾರಗಳಿಂದ ಪ್ರಸಿದ್ಧವಾಗಿಯೇ ಹೊರತು ಪ್ರತ್ಯಕ್ಷ-ಶ್ರುತಿಯಿಂದಲ್ಲ. ಅವು ಶ್ರುತಿಗೆ ವಿರುದ್ಧವಾಗಿರುವುದರಿಂದ ಅನುಷ್ಠಾನಕ್ಕೆ ಯೋಗ್ಯವಲ್ಲ. ಆದರೆ ಗಾರ್ಹಸ್ಥ್ಯಕ್ಕೆ ಅಗ್ನಿಹೋತ್ರಾದಿ-ಕರ್ಮಗಳ ವಿಧಾನವಿದೆಯೆಂಬುದು ಶ್ರುತಿಪ್ರಸಿದ್ಧವಾಗಿದೆ. ಇದಲ್ಲದೆ ಕೆಲವು ಶ್ರುತಿಗಳು ಆಶ್ರಮಾಂತರಗಳನ್ನು ಹೀಗೆ ನಿಂದಿಸಿರುತ್ತವೆ: 'ಯಾವನು ಅಗ್ನಿಯನ್ನು ತ್ಯಜಿಸುವನೊ ಅವನು ದೇವತೆಗಳನ್ನು ಕೊಂದವನಂತೆಯೇ'[1] (ತೈ. ಸಂ. ೧. ೫. ೨); 'ಆಚಾರ್ಯನಿಗೆ ಇಷ್ಟವಾದ ಧನವನ್ನು ತಂದುಕೊಟ್ಟು ಸಂತತಿಯನ್ನು ವಿಚ್ಛಿನ್ನಗೊಳಿಸದಿರು'[2] (ತೈ. ಉ. ೧೧); 'ಪುತ್ರನಿಲ್ಲದವನಿಗೆ ಲೋಕವಿಲ್ಲವೆಂಬುದನ್ನು ಪಶುಗಳೆಲ್ಲ ಬಲ್ಲವು'[3] (ಐ. ಬ್ರಾ. ೭. ೧೩. ೨). ಶ್ರುತಿಗಳು (ಛಾಂ. ಉ. ೫. ೧೦. ೧, ಮುಂ. ಉ. ೧. ೨. ೧೧) ದೇವಯಾನವನ್ನು ಉಪದೇಶಿಸುತ್ತವೆಯೇ ಹೊರತು ಆಶ್ರಮಾಂತರವನ್ನು ಉಪದೇಶಿಸುವುದಿಲ್ಲ. ಬೃಹದಾರಣ್ಯಕಶ್ರುತಿಯು (೪. ೪. ೨೨) ಲೋಕದ ಸ್ತುತಿಗಾಗಿ ಬಂದಿದೆಯೇ ಹೊರತು ಪಾರಿವ್ರಾಜ್ಯವಿಧಿಗಾಗಿ ಅಲ್ಲ. ಜಾಬಾಲ-ಶ್ರುತಿಯು (೪) ಪಾರಿವ್ರಾಜ್ಯವನ್ನು ವಿಧಿಸಿದ್ದರೂ ಇಲ್ಲಿ ಆ ಶ್ರುತಿಯನ್ನು ಗಣನೆಗೆ ತರದೆ ವಿಚಾರವನ್ನು ಮುಂದುವರಿಸಿದೆ.

**ವಿ.**—ಊರ್ಧ್ವರೇತಸ್ಕರ ಆಶ್ರಮವೇ ಇಲ್ಲವೆಂಬುದು ಜೈಮಿನಿಯ ಮತ.

**ದ್ವೈ.**—'ಶ್ರುತ್ಯಂತರಗಳಲ್ಲಿ ವಿಹಿತವಾಗಿರುವ ಸದಾಚಾರಗಳನ್ನು ವಿಧಿಬಂಧವಿಲ್ಲದೆ

---

[1] ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ ।
[2] ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾವ್ಯವಚ್ಛೇತ್ಸೀಃ ।
[3] ನಾಪುತ್ರಸ್ಯ ಲೋಕೋಽಸ್ತೀತಿ ತತ್ಸರ್ವೇ ಪಶವೋ ವಿದುಃ ।

ತನ್ನ ಇಚ್ಛೆಯಿಂದ ಮಾಡಬಹುದು; ಆದರೆ ಶ್ರುತಿಗಳು ಪಾಪಕರ್ಮವನ್ನು ನಿಷೇಧಿಸುತ್ತವೆ; ಇದು ಜೈಮಿನಿ ಆಚಾರ್ಯರ ಅಭಿಪ್ರಾಯ' ಎಂಬುದು ಸೂತ್ರಾರ್ಥ

## ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ॥ ೧೯ ॥

೧೯. (ಸಂನ್ಯಾಸವು) ಅನುಷ್ಠೇಯವೆಂದು ಬಾದರಾಯಣರು (ಅಭಿಪ್ರಾಯಪಡುತ್ತಾರೆ; ಏಕೆಂದರೆ ಆಶ್ರಮಗಳಿಗೆಲ್ಲ) ಶ್ರುತಿಯು ಸಮಾನವಾಗಿದೆ.

ಸಂನ್ಯಾಸವು ಅನುಷ್ಠೇಯವೆಂಬುದು ಬಾದರಾಯಣರ ಮತ; ಏಕೆಂದರೆ ಅದೂ ವೇದದಲ್ಲಿ ಶ್ರುತವಾಗಿದೆ. ಗಾರ್ಹಸ್ಥ್ಯದಂತೆಯೇ ಸಂನ್ಯಾಸವನ್ನು ಇಚ್ಛೆಯಿಲ್ಲದಿದ್ದರೂ ಒಪ್ಪಿಕೊಳ್ಳಬೇಕು; ಏಕೆಂದರೆ ಶ್ರುತಿಯು (ಛಾಂ ಉ. ೨. ೨೩. ೧) ಆಶ್ರಮಗಳಿಗೆಲ್ಲಾ ಸಮಾನವಾಗಿದೆ. ಬೃಹದಾರಣ್ಯಕಶ್ರುತಿಯು (೪. ೪. ೨೨) ಪಾರಿವ್ರಾಜ್ಯವನ್ನು ವೇದಾನುವಚನಾದಿಗಳೊಡನೆ ಹೇಳುತ್ತದೆ. ಛಾಂದೋಗ್ಯಶ್ರುತಿಯು (೫. ೧೦. ೧) ಪಂಚಾಗ್ನಿವಿದ್ಯೆಯಂತೆ ತಪಸ್ಸೂ ಅನುಷ್ಠೇಯವೆಂದು ತಿಳಿಸುತ್ತದೆ.

ವಿ.—ಶ್ರುತಿಯು (ಛಾಂ. ಉ. ಉ. ೨. ೨೩. ೧) ಎಲ್ಲ ಆಶ್ರಮಗಳನ್ನೂ ಸಮಾನವಾಗಿ ತಿಳಿಸುವುದರಿಂದ ಸಂನ್ಯಾಸಾದಿ-ಆಶ್ರಮಗಳು ಅನುಷ್ಠೇಯವೆಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ. 'ಯಜ್ಞ, ಅಧ್ಯಯನ, ದಾನ, ತಪಸ್ಸು' (ಛಾಂ. ಉ ೨. ೨೩. ೧)-ಇವೆಲ್ಲ ಗಾರ್ಹಸ್ಥ್ಯಧರ್ಮಗಳೆಂದು ತಿಳಿಯಕೂಡದು. ಯಜ್ಞ, ಅಧ್ಯಯನ, ದಾನ—ಇವುಗಳು ಗೃಹಸ್ಥಾಶ್ರಮವನ್ನು ಸೂಚಿಸುತ್ತವೆ. ತಪಶ್ಶಬ್ದವು ವೈಖಾನಸ-ಪರಿವ್ರಾಜಕರ ಧರ್ಮಗಳನ್ನು ತಿಳಿಸುತ್ತದೆ. ಬ್ರಹ್ಮಚರ್ಯಶಬ್ದವು ಬ್ರಹ್ಮಚಾರಿಯ ಧರ್ಮವನ್ನು ತಿಳಿಸುತ್ತದೆ. 'ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುತ್ತಾನೆ' (ಛಾಂ. ಉ. ೨. ೨೩. ೧) ಎಂಬುದು ಎಲ್ಲ ಆಶ್ರಮಗಳಿಗೂ ಸಮಾನವಾಗಿರುತ್ತದೆ; ಏಕೆಂದರೆ ಆಶ್ರಮಿಗಳೆಲ್ಲ ಬ್ರಹ್ಮನಲ್ಲಿಯೇ ಸ್ಥಿರರಾಗಿರುತ್ತಾರೆ.

ದ್ವೈ.—'ಅನುಷ್ಠೇಯ-ಕರ್ಮಗಳಲ್ಲಿ ತನ್ನ ಇಚ್ಛಾನುಸಾರವಾಗಿ ಕೆಲವು ಕರ್ಮಗಳನ್ನು ಮಾಡಬಹುದು ಅಥವಾ ಬಿಡಬಹುದು—ಎಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ; ಏಕೆಂದರೆ ಶ್ರುತಿಯು (ಬೃ. ಉ ೩. ೫. ೧), ಜ್ಞಾನಿಯು ಅನುಷ್ಠೇಯ ಕರ್ಮಗಳನ್ನು ಮಾಡಲಿ ಮಾಡದಿರಲಿ ಹಾಗೆಯೇ ಇರುತ್ತಾನೆ—ಎಂದು ತಿಳಿಸುತ್ತದೆ'[1] ಎಂಬುದು ಸೂತ್ರಾರ್ಥ

---

[1] ಅನುಷ್ಠೇಯಾನಾಂ ಮಧ್ಯ ಏವ ಕಾಮತಶ್ಚರಣಂ ಕಾಮತೋ ನಿವೃತ್ತಿರಿತಿ ಬಾದರಾಯಣೋ ಮನ್ಯತೇ । ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವೇತಿ ಸಾಮ್ಯಶ್ರುತೇಃ (ಮ. ಭಾ.).

## ವಿಧಿರ್ವಾ ಧಾರಣವತ್ ॥ ೨೦ ॥

೨೦. ಅಥವಾ ಇದು ವಿಧಿಯೇ; (ಸಮಿತ್ತನ್ನು) ಹೊತ್ತಂತೆಯೇ (ಇದನ್ನೂ ತಿಳಿದುಕೊಳ್ಳಬೇಕು).

ಅಥವಾ ಇದು ಸಂನ್ಯಾಸದ ವಿಧಿಯೇ ಹೊರತು ಕೇವಲ ಪರಾಮರ್ಶವಲ್ಲ. ಧರ್ಮಸ್ಕಂಧವನ್ನು ತಿಳಿಸುವ ಶ್ರುತಿಯಲ್ಲಿ ಅಪೂರ್ವ ವಿಷಯವಿರುವುದರಿಂದ ಅದು ವಿಧಿಯೆಂದೇ ತಿಳಿಯಬೇಕು ಇದು ಸಮಿತ್ತನ್ನು ಹೊರುವ ಹಾಗೆ: ಮಹಾಪಿತೃಯಜ್ಞಕ್ಕೆ ಸೇರಿದ ಪ್ರೇತಾಗ್ನಿ ಹೋತ್ರಕ್ಕೆ ಸಂಬಂಧಪಟ್ಟ ಒಂದು ಶ್ರುತಿಯಿದೆ—'ಸ್ರುಕ್ಕಿನ ಕೆಳಗೆ ಸಮಿತ್ತನ್ನು ಇಟ್ಟುಕೊಂಡು ಹೋಗಬೇಕು; ಏಕೆಂದರೆ ಮೇಲೆ ದೇವತೆಗಳಿಗೆ ಇಟ್ಟುಕೊಂಡು ಹೋಗುತ್ತಾರೆ'[1] (ಆ. ಶ್ರೌ ಸೂ. ೯. ೧೧. ೮-೯) ಎಂಬಲ್ಲಿ ಅಧೋಧಾರಣಕ್ಕ ಏಕವಾಕ್ಯತೆಯು ತೋರುತ್ತಿದ್ದರೂ ಉಪರಿ-ಧಾರಣವು ಅಪೂರ್ವವಾಗಿರುವುದರಿಂದ ವಿಧಿಯೆಂದೇ ನಿಶ್ಚಯಿಸಿದೆ. ಇದನ್ನೇ ಪೂರ್ವಮೀಮಾಂಸೆಯು ಶೇಷಲಕ್ಷಣದಲ್ಲಿ (ಜೈ. ಸೂ. ೩. ೪) ವಿವರಿಸಿದೆ. ಹೀಗೆಯೇ ಇಲ್ಲಿಯೂ ಕೂಡ ಆಶ್ರಮಪರಾಮರ್ಶ-ಶ್ರುತಿಯನ್ನು ವಿಧಿಯೆಂದೇ ನಿರ್ಧರಿಸಬೇಕು

ಇದು ಆಶ್ರಮಾಂತರಗಳ ಪರಾಮರ್ಶವೆಂದು ಒಪ್ಪಿಕೊಂಡರೂ ಬ್ರಹ್ಮಸಂಸ್ಥತ್ವವನ್ನು ಶ್ರುತಿಯು ಸಾಮರ್ಥ್ಯದಿಂದ ಅವಶ್ಯವಾಗಿ ಒಪ್ಪಿಕೊಳ್ಳಲೇಬೇಕು. ಇಲ್ಲಿ ಬ್ರಹ್ಮ-ಸಂಸ್ಥನೆಂದರೆ ಪರಿವ್ರಾಜಕನೇ. ಮೊದಲಿನ ಮೂರು ಆಶ್ರಮಿಗಳು ಪುಣ್ಯಲೋಕವನ್ನು ಪಡೆದರೆ ಉಳಿದ ಪರಿವ್ರಾಜಕನು ಅಮೃತತ್ವವನ್ನು ಹೊಂದುತ್ತಾನೆ ಒಂದು ಆಶ್ರಮಕ್ಕೆ ಸೇರಿದ ಮಾತ್ರದಿಂದಲೇ ಅಮೃತತ್ವವು ಸಂಭವಿಸುವುದಿಲ್ಲ. ಬ್ರಹ್ಮಸಂಸ್ಥವೆಂಬ ಶಬ್ದವು ಬ್ರಹ್ಮದಲ್ಲಿ ಪರಿಸಮಾಪ್ತಿಯನ್ನು ಹೊಂದುತ್ತದೆ; ಅದು ಅನ್ಯವ್ಯಾಪಾರವಿಲ್ಲದ ಬ್ರಹ್ಮನಿಷ್ಠತ್ವ. ಇದು ಮಿಕ್ಕ ಮೂರು ಆಶ್ರಮಗಳಿಗೆ ಸಂಭವಿಸುವುದಿಲ್ಲ; ಏಕೆಂದರೆ ಆಯಾ ಆಶ್ರಮಿಗಳು ಸ್ವಕರ್ಮವನ್ನು ಅನುಷ್ಠಾನ ಮಾಡದಿದ್ದರೆ ಪ್ರತ್ಯವಾಯವೆಂಬ ದೋಷವನ್ನು ಹೊಂದುತ್ತಾರೆ. ಸರ್ವಕರ್ಮಗಳನ್ನೂ ಸಂನ್ಯಾಸಮಾಡಿರುವ ಪರಿವ್ರಾಜಕನಿಗೆ ಅನುಷ್ಠಾನ ಮಾಡಲಿಲ್ಲವೆಂಬ ನಿಮಿತ್ತದಿಂದ ಯಾವ ಪ್ರತ್ಯವಾಯವೂ ಸಂಭವಿಸುವುದಿಲ್ಲ. ಶಮ-ದಮಾದಿಗಳೆಂಬ ಅವನ ಧರ್ಮವು ಬ್ರಹ್ಮಸ್ಥಿತಿಗೆ ಉಪೋದ್ಬಲಕವಾಗಿರುವುದೇ ಹೊರತು ವಿರೋಧಿಯಾಗಿರುವುದಿಲ್ಲ. ಬ್ರಹ್ಮಸಂಸ್ಥನಿಗೆ ಕರ್ಮವಿಲ್ಲವೆಂದು ಅನೇಕ ಶ್ರುತಿಸ್ಮೃತಿಗಳು ತಿಳಿಸುತ್ತವೆ. 'ವೇದಾಂತವಿಜ್ಞಾನದ ಅರ್ಥವನ್ನು ನಿರ್ಧಾರಮಾಡಿದವರಾಗಿ ಸಂನ್ಯಾಸ ಯೋಗದಿಂದ ಶುದ್ಧಸತ್ತ್ವರಾಗಿ ಆ ಯತಿಗಳೆಲ್ಲ'[2] (ಮುಂ ಉ. ೩. ೨. ೬); 'ಯಾರು ಬ್ರಹ್ಮದಲ್ಲಿಯೇ ನಿಶ್ಚಯಬುದ್ಧಿಯುಳ್ಳವರಾಗಿರುವರೊ, ಯಾರು ಅವರಲ್ಲಿಯೇ ಮನಸ್ಸ

---

[1] ಅಧಸ್ತಾತ್ ಸಮಿಧಂ ಧಾರಯನ್ನನುದ್ರವೇದುಪರಿ ಹಿ ದೇವೇಭ್ಯೋ ಧಾರಯತಿ ।

[2] ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ ।

ನ್ನಿಟ್ಟಿರುವರೊ, ಯಾರು ಬ್ರಹ್ಮನಿಷ್ಠರಾಗಿರುವರೊ"[1] (ಗೀತಾ ೫. ೧೭) ಇತ್ಯಾದಿ.

ಜಾಬಾಲ-ಶ್ರುತಿಯು (೪) ಪ್ರತ್ಯಕ್ಷವಾಗಿಯೇ ಪಾರಿವ್ರಾಜ್ಯವನ್ನು ವಿಧಿಸಿದೆ. ಪಾರಿವ್ರಾಜ್ಯವು ಬ್ರಹ್ಮಜ್ಞಾನದ ಪರಿಪಾಕಕ್ಕೆ ಅಂಗವಾಗಿರುವುದರಿಂದ ಅದು ಅನಧಿಕೃತರಾದವರ ವಿಷಯವಲ್ಲ. ಅದನ್ನೇ ಜಾಬಾಲ-ಶ್ರುತಿಯು (೫) ಹೀಗೆ ತಿಳಿಸುತ್ತದೆ: 'ಇನ್ನು ಪರಿವ್ರಾಜಕನು ವಿವರ್ಣದ ಬಟ್ಟೆಯನ್ನುಟ್ಟುಕೊಂಡು, ಮುಂಡನಮಾಡಿಕೊಂಡು, ಏನನ್ನೂ ಪರಿಗ್ರಹಿಸದೆ, ಶುಚಿಯಾಗಿ, ಅದ್ರೋಹಿಯಾಗಿ ಭಿಕ್ಷಾಚರ್ಯೆಯನ್ನು ಮಾಡುತ್ತ ಬ್ರಹ್ಮಸಾಕ್ಷಾತ್ಕಾರಕ್ಕೆ ಅರ್ಹನಾಗುತ್ತಾನೆ.'[2] ಆದುದರಿಂದ ಊರ್ಧ್ವರೇತಸ್ಕರ ಆಶ್ರಮಗಳು ಶ್ರುತಿಗಳಿಂದ ಸಿದ್ಧವಾದವು.

೬.—**ತ್ರಯೋ ಧರ್ಮಸ್ಕಂಧಾಃ** ಎಂಬಲ್ಲಿಯೂ ಪೂರ್ವಮೀಮಾಂಸೆಯ ಪ್ರಕಾರ (ಜೈ. ಸೂ. ೩. ೪. ೧೫) ವಿಧಿಯೆಂದೇ ಭಾವಿಸತಕ್ಕದ್ದು. ಯಾವಜ್ಜೀವ-ಶ್ರುತಿಯು ವಿರಕ್ತನಲ್ಲದ ಗೃಹಸ್ಥನನ್ನು ಕುರಿತು ಹೇಳಿದ್ದು. ಆದರೆ ಊರ್ಧ್ವರೇತಸ್ಕರಿಗೆ ಬ್ರಹ್ಮವಿದ್ಯೆಯನ್ನು ವಿಧಿಸಿರುವುದರಿಂದ ವಿದ್ಯೆಯು ಕರ್ಮಕ್ಕೆ ಅಂಗವಾಗದೆ ಪುರುಷಾರ್ಥವಾಗುತ್ತದೆ—ಎಂಬುದು ಸಿದ್ಧವಾಯಿತು.[3]

**ದ್ವೈ.**—'ಅಥವಾ ಯಥೇಷ್ಟಾಚರಣ-ವಿಧಿಯು ಜ್ಞಾನಿಗೆ ಮಾತ್ರ; ತ್ರೈವರ್ಣಿಕರಿಗೆ ವೇದಧಾರಣವನ್ನು ವಿಧಿಸಿದ ಹಾಗೆ' ಎಂಬುದು ಸೂತ್ರಾರ್ಥ.

---

1 ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।

2 ಅಥ ಪರಿವ್ರಾಡ್ವಿವರ್ಣವಾಸಾ ಮುಂಡೋಽಪರಿಗ್ರಹಃ ಶುಚಿರದ್ರೋಹೀ ಭೈಕ್ಷಾಣೋ ಬ್ರಹ್ಮಭೂಯಾಯ ಭವತಿ ।

3 ಅಥ ಊರ್ಧ್ವರೇತಸ್ಸು ಚ ಬ್ರಹ್ಮವಿದ್ಯಾವಿಧಾನಾದ್ವಿದ್ಯಾತಃ ಪುರುಷಾರ್ಥ ಇತಿ ಸಿದ್ಧಮ್ (ಶ್ರೀಭಾಷ್ಯ).

# ೩. ಸ್ತುತಿಮಾತ್ರಾಧಿಕರಣ

(ಸೂ. ೨೧–೨೨)

**ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ॥ ೨೧ ॥**

೨೧. (ಕರ್ಮಾಂಗವೆಂದು) ತೆಗೆದುಕೊಂಡಿರುವುದರಿಂದ (ಈ ಶ್ರುತಿಗಳು) ಸ್ತುತಿಮಾತ್ರವೇ—ಎಂದರೆ ಅದು ಸರಿಯಲ್ಲ; ಏಕೆಂದರೆ (ಆ ವಾಕ್ಯಗಳು) ಅಪೂರ್ವವಾಗಿವೆ.

'ಉದ್ಗೀಥವೆನಿಸಿದ ಆ ಈ ಓಂಕಾರವು ರಸಗಳಿಗೆಲ್ಲ ರಸತಮವು, ಪರಮವು, ಪರಾರ್ಧ್ಯವು ಮತ್ತು ಎಂಟನೆಯದು'[1] (ಛಾಂ. ಉ. ೧. ೧. ೩), 'ಈ ಪೃಥ್ವಿಯೇ ಋಕ್ಕು, ಅಗ್ನಿಯು ಸಾಮ'[2] (ಛಾಂ. ಉ. ೧. ೬. ೧), 'ಚಿತವಾದ ಈ ಅಗ್ನಿಯು ಈ ಲೋಕವೇ'[3] (ಶ ಬ್ರಾ. ೧೦. ೧. ೨ ೨), 'ಆ ಉಕ್ಥವು ಈ ಪೃಥ್ವಿಯೇ'[4] (ಐ. ಆ. ೨.-೧. ೨. ೧)—ಇವೇ ಮೊದಲಾದ ಶ್ರುತಿಗಳು ಸ್ತುತಿಗಾಗಿ ಬಂದಿವೆಯೊ ಅಥವಾ ಉಪಾಸನಾವಿಧಿಗಾಗಿ ಬಂದಿವೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಈ ಶ್ರುತಿಗಳು ಸ್ತುತಿಗಾಗಿ ಬಂದಿವೆ ; ಏಕೆಂದರೆ ಅವು ಉದ್ಗೀಥವೇ ಮೊದಲಾದ ಕರ್ಮಾಂಗಗಳಿಗೆ ಸಂಬಂಧಪಟ್ಟ ಹಾಗೆ ಶ್ರುತಿಯು ತಿಳಿಸುತ್ತದೆ ; ಹೇಗೆ 'ಈ ಪೃಥ್ವಿಯು ಜುಹೂ, ಆದಿತ್ಯನು ಕೂರ್ಮ, ಸ್ವರ್ಗಲೋಕವು ಆಹವನೀಯ' ಎಂಬಿವೇ ಮೊದಲಾದ ಶ್ರುತಿಗಳು ಜುಹೂ ಮೊದಲಾದುವುಗಳನ್ನು ಹೊಗಳಲು ಬಂದಿವೆಯೊ ಹಾಗೆಯೆ.

**ಸಿದ್ಧಾಂತಿ**—ಈ ಶ್ರುತಿಗಳಿಗೆ ಸ್ತುತಿಮಾತ್ರವೇ ಪ್ರಯೋಜನವೆಂದು ಹೇಳುವುದು ಸರಿಯಲ್ಲ ; ಏಕೆಂದರೆ ಅವು ಅಪೂರ್ವವಾಗಿವೆ ಈ ಶ್ರುತಿಗಳು ವಿಧಿಗಾಗಿ ಬಂದಿವೆಯೆಂದು ಗ್ರಹಿಸಿಕೊಂಡರೆ ಮಾತ್ರ ಅಪೂರ್ವವಾದ ಅರ್ಥವನ್ನು ವಿಧಿಸುತ್ತವೆ ಎಂದಾಗುವುದು, ಅವು ಸ್ತುತಿಗಾಗಿ ಬಂದಿವೆಯೆಂದು ಗ್ರಹಿಸಿಕೊಂಡರೆ ವ್ಯರ್ಥವೇ ಆಗುವುವು ; ಏಕೆಂದರೆ ವಿಧಿವಾಕ್ಯಕ್ಕೆ ಶೇಷವಾಗಿದ್ದರೆ ಮಾತ್ರ ಸ್ತುತಿಯು ಉಪಯುಕ್ತವಾಗುತ್ತದೆ, ಆದರೆ ವೇದದ ಬೇರೊಂದು ಕಡೆಯಲ್ಲಿ ವಿಧಿಸಿರುವ ಉದ್ಗೀಥಾದಿಗಳಿಗೆ ಮತ್ತೊಂದು ಕಡೆಯಲ್ಲಿ ಹೇಳಿರುವ ಶ್ರುತಿಯು ವಾಕ್ಯಶೇಷತ್ವವನ್ನು ಪಡೆಯದೆ ವ್ಯರ್ಥವೇ ಆಗುವುದು. 'ಈ ಪೃಥ್ವಿಯು ಜುಹೂ' ಇವೇ ಮೊದಲಾದುವು ವಿಧಿಗಳ ಸನ್ನಿಧಿಯಲ್ಲಿ ಪಠಿತವಾಗಿರುವುದರಿಂದ ಇದಕ್ಕೂ

---

[1] ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯದುದ್ಗೀಥಃ ।

[2] ಇಯಮೇವರ್ಗಗ್ನಿಃ ಸಾಮ ।

[3] ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ ।

[4] ತದಿದಮೇವೋಕ್ಥಮಿಯಮೇವ ಪೃಥಿವೀ ।

ಅವುಗಳಿಗೂ ಸಾಮ್ಯವಿಲ್ಲ. ಆದುದರಿಂದ ಈ ಗುಂಪಿನ ಶ್ರುತಿಗಳು ಉಪಾಸನಾವಿಧಿಗಾಗಿಯೇ ಬಂದಿವೆ.

**ವಿ.**—ಉದ್ಗೀಥಸಂಬಂಧಿಯಾದ ಶ್ರುತಿಗಳು (ಛಾಂ. ಉ. ೧. ೧. ೩) ಕೇವಲ ಸ್ತುತಿಗಾಗಿ ಬಂದಿಲ್ಲ; ಏಕೆಂದರೆ ರಸತಮವಾದ ಉದ್ಗೀಥವು ಪ್ರಮಾಣಾಂತರದಿಂದ ಸಿದ್ಧವಾಗುವುದಿಲ್ಲ ಮತ್ತು ಈ ಶ್ರುತಿಯು ಕೇವಲ ಅನುವಾದಕ್ಕಾಗಿ ಬಂದಿಲ್ಲ. ಆದುದರಿಂದ ರಸತಮವಾದ ಉದ್ಗೀಥವನ್ನು ಉಪಾಸ್ಯವಾಗಿ ವಿಧಿಸಲು ಈ ಶ್ರುತಿಯು ಬಂದಿದೆ.

**ದ್ವೈತ.**—**'ಕೇನ ಸ್ಯಾದ್ಯೇನ ಸ್ಯಾತ್** ಎಂಬ ಶ್ರುತಿಯು ಸ್ತುತಿಮಾತ್ರವೇ ಹೊರತು ವಿಧಿಯಲ್ಲ; ಏಕೆಂದರೆ ಜ್ಞಾನಿಗಳೂ ಕೂಡ ಸಾಮಾನ್ಯವಿಧಿಯನ್ನು ಸ್ವೀಕರಿಸುತ್ತಾರೆ—ಎಂದು ಹೇಳಿದರೆ, ಅದು ಸರಿಯಲ್ಲ; ಏಕೆಂದರೆ ಜ್ಞಾನಿಗಳು ಪೂರ್ವರಲ್ಲ, ಬ್ರಹ್ಮಾಧೀನರು'[1] ಎಂಬುದು ಸೂತ್ರಾರ್ಥ.

'ಎಲ್ಲರೂ ವಿಧಿಗಳಿಗೆ ವಶರಾಗಿದ್ದಾರೆ. ಚತುರ್ಮುಖಬ್ರಹ್ಮನಿಗೆ ಕಾಮಚಾರಾನುಮತಿ ಇದೆ; ಆದರೆ ಪರಬ್ರಹ್ಮನು ಮಾತ್ರ ಸರ್ವವಿಧಿಗಳನ್ನೂ ಅತಿಕ್ರಮಿಸಿದ್ದಾನೆ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

## ಭಾವಶಬ್ದಾಚ್ಚ ॥ ೨೨ ॥

೨೨. ವಿಧಿಶಬ್ದವಿರುವುದರಿಂದಲೂ (ಉದ್ಗೀಥಾದಿ-ಶ್ರುತಿಗಳು ಉಪಾಸನೆಯನ್ನು ವಿಧಿಸಲು ಬಂದಿವೆ).

'ಉದ್ಗೀಥವನ್ನು ಉಪಾಸಿಸಬೇಕು' (ಛಾಂ. ಉ. ೧. ೧. ೧.), 'ಸಾಮವನ್ನು ಉಪಾಸಿಸಬೇಕು' (ಛಾಂ ಉ. ೨. ೨ ೧), 'ನಾನು ಉಕ್ಥ—ಎಂದು ತಿಳಿಯಬೇಕು' (ಐ. ಆ. ೨. ೧. ೨)—ಇವೇ ಮೊದಲಾದ ವಿಸ್ಪಷ್ಟವಾದ ವಿಧಿಶಬ್ದಗಳು ವ್ಯರ್ಥವಾಗುತ್ತಿದ್ದುವು. ನ್ಯಾಯವನ್ನು ಬಲ್ಲವರು ಹೀಗೆ ಹೇಳುತ್ತಾರೆ: 'ಅವನು ಮಾಡಬೇಕು, ಅದಾಗಲಿ, ಅದು ಮಾಡಲ್ಪಡಬೇಕು, ಅದಾಗಿರಲಿ, ಆಗಲಿ; ವೇದಗಳಲ್ಲೆಲ್ಲ ಇದು ನಿಯತವಾದ ವಿಧಿಲಕ್ಷಣವು'.[2] ಇದಲ್ಲದೆ ಪ್ರತಿಯೊಂದು ಪ್ರಕರಣದಲ್ಲಿಯೂ ಫಲಗಳನ್ನು ಹೇಳಿದೆ;[3] ಆದುದರಿಂದ ಉದ್ಗೀಥಾದಿ-ಶ್ರುತಿಗಳು ಉಪಾಸನೆಯನ್ನು ವಿಧಿಸುವುದಕ್ಕೇ ಬಂದಿವೆ.

---

[1] ಸ್ತುತಿಮಾತ್ರಮೇವ ಸ್ವೇಚ್ಛಾಚರಣಂ ನ ವಿಧಿಃ, ತೈರಪಿ ಸಾಮಾನ್ಯವಿಧಿಸ್ವೀಕರಣಾದಿತಿ ಚೇನ್ನ । ಅಪೂರ್ವತ್ವಾತ್—ಪರವಶತ್ವಾತ್ (ಮ. ಭಾ.).

2 ಕುರ್ಯಾತ್ ಕ್ರಿಯೇತ ಕರ್ತವ್ಯಂ ಭವೇತ್ ಸ್ಯಾದಿತಿ ಪಂಚಮಮ್ ।
ಏತತ್ಸ್ಯಾತ್ ಸರ್ವವೇದೇಷು ನಿಯತಂ ವಿಧಿಲಕ್ಷಣಮ್ ॥

3 ಛಾಂ. ಉ. ೧. ೧. ೭, ೧ ೭. ೯, ೨. ೨. ೩ ನೋಡಿ.

**ವಿ.—ಉಪಾಸೀತ** (ಛಾಂ. ಉ. ೧. ೧. ೧) ಇದೇ ಮೊದಲಾದ ವಿಧಿಶಬ್ದ-ಗಳಿರುವುದರಿಂದ ವಿಧಿಯೇ ಶ್ರುತಿಯ ತಾತ್ಪರ್ಯವಾಗಿದೆ; ಆದುದರಿಂದ ಈ ಶ್ರುತಿಗಳೆಲ್ಲ ಉಪಾಸನಾವಿಧಿಗಾಗಿಯೇ ಬಂದಿವೆ.

**ದ್ವೈ.**—'ಶ್ರುತಿಯಲ್ಲಿ ಇಚ್ಛಾಪರ-ಪರ್ಯಾಯವಾದ ಭಾವಶಬ್ದವಿರುವುದರಿಂದ ಜ್ಞಾನಿಗಳಿಗೆಲ್ಲ ಸ್ವೇಚ್ಛಾಚಾರ-ವಿಧಿಯಿದೆ ಎಂದು ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ.

'ಎಲ್ಲರೂ ವಿಧಿಯ ಪ್ರಕಾರ ಪ್ರವರ್ತಿಸಬೇಕು. ಪ್ರಜಾಪತಿಯ ವಿಷಯದಲ್ಲಿ ನಿಯಮವು ಅವನ ಭಾವವನ್ನು ಎಂದರೆ ಇಚ್ಛೆಯನ್ನು ಅನುಸರಿಸುತ್ತದೆ; ಆದರೆ ಪರ-ಬ್ರಹ್ಮನಲ್ಲಿ ಸಮಸ್ತವಿಧಿಗಳಿಂದ ಸ್ವಾತಂತ್ರ್ಯವು ಕಂಡುಬರುತ್ತದೆ' ಎಂದು ತುರ-ಶ್ರುತಿಯು ಹೇಳುತ್ತದೆ.[1]

---

1 ಯಥಾ ವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ। ಬ್ರಹ್ಮಣಃ ಪರಮಸ್ಯೈವ ಸರ್ವವಿಧ್ಯತಿದೂರತೇತಿ ಚ ತುರುಶ್ರುತೌ (ಮ. ಭಾ.).

# ೪. ಪಾರಿಪ್ಲವಾಧಿಕರಣ

(ಸೂ. ೨೩–೨೪)

**ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ॥ ೨೩ ॥**

೨೩. (ಆಖ್ಯಾನಗಳು) ಪಾರಿಪ್ಲವಕ್ಕಾಗಿ ಬಂದಿವೆಯೆಂದರೆ, ಅದು ಸರಿಯಲ್ಲ; ಏಕೆಂದರೆ (ಅವುಗಳನ್ನು) ವಿಶೇಷಿಸಿ (ಹೇಳಿದೆ).

ಉಪನಿಷತ್ತುಗಳಲ್ಲಿ ಪಠಿತವಾದ ಆಖ್ಯಾನಗಳು[1] ಪಾರಿಪ್ಲವಕ್ಕಾಗಿ[2] ಬಂದಿವೆಯೊ ಅಥವಾ ಸಂನಿಹಿತವಾದ ವಿದ್ಯೆಯನ್ನು ತಿಳಿಸುವುದಕ್ಕಾಗಿ ಬಂದಿವೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಈ ಆಖ್ಯಾನ-ಶ್ರುತಿಗಳು ಪಾರಿಪ್ಲವಕ್ಕಾಗಿ ಬಂದಿವೆ; ಏಕೆಂದರೆ ಇವೂ ಆಖ್ಯಾನವಾಗಿವೆ. ಆದುದರಿಂದ ವೇದಾಂತವಾಕ್ಯಗಳಿಗೆ ವಿದ್ಯಾಪ್ರಧಾನತ್ವವಿಲ್ಲ; ಏಕೆಂದರೆ ಇವು ಮಂತ್ರಗಳ ಹಾಗೆ ಕರ್ಮಪ್ರಯೋಗಕ್ಕೆ ಶೇಷವಾಗಿವೆ.

**ಸಿದ್ಧಾಂತಿ**—ಇದು ಸರಿಯಲ್ಲ; ಏಕೆಂದರೆ **ಮನುರ್ವೈವಸ್ವತೋ ರಾಜಾ** ಎಂಬ ಕೆಲವೇ ಆಖ್ಯಾನಗಳನ್ನು ಅಲ್ಲಿ ವಿಶೇಷವಾಗಿ ಹೇಳಿದೆ. ಆಖ್ಯಾನಗಳು ಸಮಾನವಾಗಿರುವುದರಿಂದ ಆಖ್ಯಾನಗಳೆಲ್ಲ ತೆಗೆದುಗೊಳ್ಳುವುದಾದರೆ ಈ ವಿಶೇಷಣವು ಅನರ್ಥಕವಾದೀತು; ಆದುದರಿಂದ ಈ ಆಖ್ಯಾನ-ಶ್ರುತಿಗಳು ಪಾರಿಪ್ಲವಕ್ಕಾಗಿ ಬಂದಿಲ್ಲ.

**ವಿ.**—ಎಲ್ಲ ಆಖ್ಯಾನಗಳೂ ಪಾರಿಪ್ಲವಕ್ಕಾಗಿ ಬಂದಿಲ್ಲ. ಶ್ರುತಿಗಳು ಕೆಲವು ಆಖ್ಯಾನಗಳು ಮಾತ್ರ ಪಾರಿಪ್ಲವಕ್ಕೆ ಅರ್ಹವೆಂದು ತಿಳಿಸುತ್ತವೆ; ಆದುದರಿಂದ ಉಪನಿಷತ್ತುಗಳಲ್ಲಿ ಬಂದಿರುವ ಆಖ್ಯಾನ-ಶ್ರುತಿಗಳು ಉಪಾಸನಾವಿಧಿಗಾಗಿಯೇ ಬಂದಿವೆ.

**ದ್ವೈ.**—'ಉಕ್ತಾಭಿಪ್ರಾಯಗಳಿಂದ ಶ್ರುತಿಗಳ ಅರ್ಥಗಳು ಅಸ್ಥಿರವಾಗುತ್ತದೆ ಎಂದರೆ, ಅದು ಸರಿಯಲ್ಲ; ಏಕೆಂದರೆ ಜ್ಞಾನಿಗಳು ವಿಶೇಷಿತರಾಗಿದ್ದಾರೆ' ಎಂಬುದು ಸೂತ್ರಾರ್ಥ.

ಗೌಪವನ-ಶ್ರುತಿಯಲ್ಲಿ ಜ್ಞಾನಿಗಳನ್ನು ಹೀಗೆ ವಿಂಗಡಿಸಿದೆ: 'ಜ್ಞಾನಿಗಳು ಮೂರು ಬಗೆ—ವಿಧಿಗಳಿಂದ ನಿಯತರಾದವರು, ವಿಧಿಗಳಿಂದ ನಿಯತರಾಗದವರು ಮತ್ತು ಯಥೇಷ್ಟಾಚಾರವುಳ್ಳವರು. ವಿಧಿನಿಯತರು ಮನುಷ್ಯರು, ವಿಧಿನಿಯತರಾಗದವರು ದೇವತೆಗಳು, ಬ್ರಹ್ಮನೊಬ್ಬನೇ ಯಥೇಷ್ಟಾಚಾರವುಳ್ಳವನು.'

---

1 ಬೃ. ಉ ೪. ೫. ೧, ಕೌ. ಉ. ೩. ೧, ಛಾಂ. ಉ. ೪. ೧. ೧ ನೋಡಿ.

2 ಅಶ್ವಮೇಧದಲ್ಲಿ ಹೇಳುವ ಕಥೆಗಳಿಗೆ ಪಾರಿಪ್ಲವವೆಂದು ಹೆಸರು.

**ತಥಾ ಚೈಕವಾಕ್ಯತೋಪಬಂಧಾತ್ ॥ ೨೪ ॥**

೨೪. ಮತ್ತು ಹೀಗೆ ಏಕವಾಕ್ಯತೆಗೆ ಸಂಬಂಧಪಟ್ಟಿರುವುದರಿಂದ (ಈ ಆಖ್ಯಾನಗಳು ಸಂನಿಹಿತವಾದ ವಿದ್ಯೆಗಳನ್ನು ಪ್ರತಿವಾದಿಸಲು ಉಪಯುಕ್ತವಾಗಿವೆ).

ಏಕವಾಕ್ಯತೆಯ ಸಂಬಂಧವಿರುವುದರಿಂದ ಈ ಆಖ್ಯಾನಗಳು ಸಂನಿಹಿತವಿದ್ಯೆಗಳನ್ನು ಪ್ರತಿಪಾದಿಸಲು ಉಪಯುಕ್ತವಾಗಿವೆ; ಏಕೆಂದರೆ ಆಖ್ಯಾನಗಳಿಗೆ ವಿದ್ಯೆಗಳಿಗೂ ಇರುವ ಏಕವಾಕ್ಯತೆಯ ಸಂಬಂಧದಿಂದ ಆ ವಿದ್ಯೆಗಳಲ್ಲಿ ರುಚಿಯುಂಟಾಗುತ್ತದೆ ಮತ್ತು ಅರಿತುಕೊಳ್ಳಲು ಸೌಕರ್ಯವುಂಟಾಗುತ್ತದೆ. ಮೈತ್ರೇಯೀಬ್ರಾಹ್ಮಣದಲ್ಲಿ ವಿದ್ಯೆಯೊಂದಿಗೆ ಏಕವಾಕ್ಯತೆಯು ಕಂಡುಬರುತ್ತದೆ: 'ಆತ್ಮನನ್ನೇ ನೋಡಬೇಕು', (ಬೃ. ಉ. ೪ ೫. ೬); ಪ್ರತರ್ದನವಿದ್ಯೆಯಲ್ಲಿಯೂ 'ನಾನು ಪ್ರಾಣನು, ಪ್ರಜ್ಞಾತ್ಮನು'[1] (ಕೌ ಉ ३. ೨) ಎಂಬ ಏಕವಾಕ್ಯತೆಯು ಕಂಡುಬರುತ್ತದೆ. ಹೀಗೆಯೇ ಜಾನಶ್ರುತಿಯ ಆಖ್ಯಾನದಲ್ಲಿಯೂ 'ವಾಯುವೇ ಸಂವರ್ಗವು' (ಛಾಂ. ಉ. ೪. ೩. ೧) ಎಂಬ ವಿದ್ಯೆಯೊಡನೆ ಏಕವಾಕ್ಯತೆಯು ಕಂಡುಬರುತ್ತದೆ. ಹೇಗೆ 'ಅವನು ತನ್ನ ವಪೆಯನ್ನು ಕಿತ್ತುಕೊಂಡನು'[2] (ತೈ. ಸಂ. ೨. ೧. ೪) ಎಂಬಿದೇ ಮೊದಲಾದ ಕರ್ಮಶ್ರುತಿಗಳಲ್ಲಿರುವ ಆಖ್ಯಾನಗಳು ಸಂನಿಹಿತ-ವಿಧಿಗಳ ಸ್ತುತಿಗಾಗಿ ಬಂದಿವೆಯೋ ಹಾಗೆಯೇ ಈ ಆಖ್ಯಾನಗಳು ಬಂದಿವೆ, ಪಾರಿಪ್ಲವಕ್ಕಲ್ಲ.

ವಿ.—'ಆತ್ಮನನ್ನು ನೋಡಬೇಕು' ಎಂಬಿದೇ ಮೊದಲಾದ ವಿಧಿಗಳ ಮೂಲಕ ಏಕವಾಕ್ಯತೆಯ ಸಂಬಂಧವಿರುವುದರಿಂದ ಈ ಆಖ್ಯಾನಗಳು ವಿದ್ಯಾವಿಧಿಗಳಿಗೆ ಉಪಯುಕ್ತವಾಗಿವೆ ಎಂಬುದು ತಿಳಿದುಬರುತ್ತದೆ.

ದ್ವೈ.—'ಹೀಗಿರುವಾಗ (ಎಂದರೆ ಜ್ಞಾನಿಗಳಲ್ಲಿ ತ್ರೈವಿಧ್ಯವು ಸಿದ್ಧವಾಗುತ್ತಿರುವಾಗ) ವಿಧಿವಾಕ್ಯಗಳಿಗೂ ಮತ್ತು ಸ್ವೇಚ್ಛಾವೃತ್ತಿವಾಕ್ಯಗಳಿಗೂ ಸಂಬಂಧವು ಕೂಡುತ್ತದೆ'[3] ಎಂಬುದು ಸೂತ್ರಾರ್ಥ.

---

[1] ಪ್ರಾಣೋಽಸ್ಮಿ ಪ್ರಜ್ಞಾತ್ಮಾ।

[2] ಸ ಆತ್ಮನೋ ವಪಾಮುದಖಿದತ್।

[3] ಏವಂ ಸತಿ ವಿಧಿವಾಕ್ಯಾನಾಂ ಸ್ವೇಚ್ಛಾವೃತ್ತಿವಾಕ್ಯಾನಾಂ ಚ ಸಂಬಂಧೋ ಭವತಿ (ಮ. ಭಾ.).

## ೫. ಅಗ್ನೀಂಧನಾದ್ಯಧಿಕರಣ

**ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ॥ ೨೫ ॥**

೨೫. ಆದುದರಿಂದಲೇ ಅಗ್ನೀಂಧನಾದಿಗಳ ಅಪೇಕ್ಷೆಯಿಲ್ಲ.

ವಿದ್ಯೆಯು ಪುರುಷಾರ್ಥಕ್ಕೆ ಅಗ್ನೀಂಧನವೇ ಮೊದಲಾದ ಆಶ್ರಮಕರ್ಮಗಳನ್ನು ಅಪೇಕ್ಷಿಸುವುದಿಲ್ಲ; ಏಕೆಂದರೆ ವಿದ್ಯೆಯಿಂದಲೇ ಮನುಷ್ಯನ ಪುರುಷಾರ್ಥವು ಸಿದ್ಧಿಸುತ್ತದೆ. ಇಲ್ಲಿ ಸೂತ್ರಕಾರರು ಮುಂದೆ ಅಧಿಕವಿಷಯವನ್ನು ಹೇಳುವ ಇಚ್ಛೆಯಿಂದ ಮೊದಲನೆಯ ಅಧಿಕರಣದ ಫಲವನ್ನು ಉಪಸಂಹರಿಸಿರುತ್ತಾರೆ.

ವಿ.—ಊರ್ಧ್ವರೇತಸ್ಕರಾದ ಆಶ್ರಮಿಗಳಿಗೆ ವಿದ್ಯಾಸಂಬಂಧವಿದೆಯೆಂದು ಶ್ರುತಿಯು[1] ಹೇಳುವುದರಿಂದ ಅವರಿಗೆ ಅಗ್ನ್ಯಾಧಾನಕರ್ಮಗಳಿಲ್ಲ.

ದ್ವೈ.—'ಜ್ಞಾನಿಗಳಿಗೆ ಯಥೇಷ್ಟಾಚಾರವಿದ್ದರೂ ಜ್ಞಾನದಿಂದಲೇ ಮೋಕ್ಷವು ಸಿದ್ಧಿಸುವುದರಿಂದ ಜ್ಞಾನವು ಅಗ್ನಿಹೋತ್ರಾದಿಕರ್ಮಗಳನ್ನು ಅಪೇಕ್ಷಿಸುವುದಿಲ್ಲ[2]' ಎಂಬುದು ಸೂತ್ರಾರ್ಥ.

---

[1] ಛಾಂ. ಉ. ೨. ೨೩. ೧, ಬೃ. ಉ. ೪. ೪ ೨೨.

[2] ಅತ ಏವ ಜ್ಞಾನಸ್ಯ ಮೋಕ್ಷದಾನೇ ನಾಗ್ನಿಹೋತ್ರಾದ್ಯಪೇಕ್ಷಾ (ಮ. ಭಾ.).

## ೬. ಸರ್ವಾಪೇಕ್ಷಾಧಿಕರಣ*

(ಸೂ. ೨೬–೨೭)

**ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ॥ ೨೬ ॥**

೨೬. (ವಿದ್ಯೆಗೆ) ಸರ್ವ (ಕರ್ಮಗಳ) ಅಪೇಕ್ಷೆಯೂ ಇದೆ; ಏಕೆಂದರೆ ಯಜ್ಞಾದಿ-ಶ್ರುತಿಯಿದೆ; ಅಶ್ವದ (ದೃಷ್ಟಾಂತ)ದಂತೆ.

ವಿದ್ಯೆಗೆ ಆಶ್ರಮಕರ್ಮಗಳು ಸ್ವಲ್ಪವೂ ಬೇಡವೊ ಅಥವಾ ಬೇಕೊ ?—ಎಂಬುದನ್ನು ಈಗ ವಿಚಾರಿಸಲಾಗುವುದು. ಅಗ್ನೀಂಧನಾದಿ-ಆಶ್ರಮಕರ್ಮಗಳು ವಿದ್ಯೆಗೆ ಬೇಕಾಗದಂತೆ ಅದಕ್ಕೆ ಕರ್ಮಗಳು ಬೇಕಾಗುವುದಿಲ್ಲ—ಎಂಬುದು ಪೂರ್ವಪಕ್ಷ. ವಿದ್ಯೆಯು ಸರ್ವಾಶ್ರಮಕರ್ಮಗಳನ್ನೂ ಅಪೇಕ್ಷಿಸುತ್ತದೆ, ಅತ್ಯಂತವಾಗಿ ಬೇಡವೆಂಬುದಿಲ್ಲ. ಇದರಲ್ಲಿ ಯಾವ ವಿರೋಧವೂ ಇಲ್ಲ. ವಿದ್ಯೆಯು ಉತ್ಪನ್ನವಾದ ಮೇಲೆ ಫಲಸಿದ್ಧಿಗಾಗಿ ಅದು ಯಾವುದನ್ನೂ ಬಯಸುವುದಿಲ್ಲ, ಆದರೆ ತನ್ನ ಉತ್ಪತ್ತಿಗಾಗಿ ಒಂದಿಷ್ಟನ್ನು ಬಯಸುತ್ತದೆ; ಏಕೆಂದರೆ 'ಆ ಈ ಆತ್ಮನನ್ನು ನಿತ್ಯಸ್ವಾಧ್ಯಾಯದಿಂದಲೂ, ಯಜ್ಞದಿಂದಲೂ, ಜ್ಞಾನದಿಂದಲೂ ಮತ್ತು ನಾಶಕರವಲ್ಲದ ತಪಸ್ಸಿನಿಂದಲೂ ಅರಿತುಕೊಳ್ಳಲು ಬಯಸುತ್ತಾರೆ'[1] (ಬೃ. ಉ. ೪. ೪. ೨೨) ಎಂಬ ಶ್ರುತಿಯು ಯಜ್ಞಾದಿಗಳು ವಿದ್ಯೆಗೆ ಸಾಧನವಾಗಿರುವುವೆಂದು ತಿಳಿಸುತ್ತದೆ. ವಿದ್ಯೆಗೆ ಕರ್ಮಗಳು ಸಾಧನವೆಂಬುದನ್ನು ಅನೇಕ ಶ್ರುತಿಗಳು ತಿಳಿಸುತ್ತವೆ.[2] ಸ್ಮೃತಿಯೂ ಇದನ್ನೇ ಹೇಳುತ್ತದೆ: 'ಕರ್ಮಗಳು ಕಷಾಯಪಾಕಕ್ಕೆ ಕಾರಣವಾಗಿವೆ. ಕಷಾಯವು ಕರ್ಮಗಳಿಂದ ಪಾಕವಾದಾಗ ಜ್ಞಾನವುಂಟಾಗುತ್ತದೆ'[3] (ಮೋ. ಧ. ೨೭೦ ೩೮). 'ಅಶ್ವದಂತೆ' ಎಂಬುದು ಯೋಗ್ಯತೆಗೆ ನಿದರ್ಶನವಾಗಿದೆ. ಹೇಗೆ ಅಶ್ವವನ್ನು ಯೋಗ್ಯತಾವಶದಿಂದ ನೇಗಿಲನ್ನು ಎಳೆಯುವುದಕ್ಕೆ ಉಪಯೋಗಿಸುವುದಿಲ್ಲವೊ, ರಥವನ್ನು ಎಳೆಯುವುದಕ್ಕೆ ಉಪಯೋಗಿಸುವರೊ ಹಾಗೆಯೇ ಆಶ್ರಮಕರ್ಮಗಳು ವಿದ್ಯೆಯ ಫಲಸಿದ್ಧಿಗೆ ಬೇಕಾಗಿಲ್ಲ, ಉತ್ಪತ್ತಿಗೆ ಬೇಕಾಗುತ್ತವೆ.

---

* ಶ್ರೀಭಾಷ್ಯದ ಪ್ರಕಾರ ಈ ಅಧಿಕರಣವು ಒಂದೇ ಸೂತ್ರವನ್ನು ಒಳಕೊಂಡಿದೆ.

[1] ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ ।

[2] ಛಾಂ. ಉ. ೮. ೫. ೧, ಕ. ಉ. ೭. ೧೫ ನೋಡಿ.

[3] ಕಷಾಯಪಕ್ತಿಃ ಕರ್ಮಾಣಿ ಜ್ಞಾನಂ ತು ಪರಮಾ ಗತಿಃ ।
ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ ॥

ವಿ.—ಶ್ರುತಿಯ ಪ್ರಕಾರ (ಬೃ. ಉ. ೪. ೪. ೨೨) ಕರ್ಮನಿಷ್ಠನಾದ ಗೃಹಸ್ಥನಿಗೆ ಸಮಸ್ತಯಜ್ಞಾದಿಗಳ ಆವಶ್ಯಕತೆಯಿದೆ. 'ಯಜ್ಞದಿಂದಲೂ....ಅರಿಕುಕೊಳ್ಳಲು ಬಯಸುತ್ತಾರೆ' ಎಂದರೆ ಯಜ್ಞಾದಿಗಳ ಸಾಧನಗಳಿಂದ ಜ್ಞಾನವನ್ನು ಹೊಂದಲು ಬಯಸುತ್ತಾರೆ. ಇಲ್ಲಿ ಜ್ಞಾನವೆಂದರೆ ಕೇವಲ ವಾಕ್ಯಾರ್ಥಜ್ಞಾನಕ್ಕಿಂತ ಭಿನ್ನವಾದ, ಧ್ಯಾನ ಉಪಾಸನೆ ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟ, ವಿಶದತಮ-ಪ್ರತ್ಯಕ್ಷತಾಪನ್ನವಾದ ಸ್ಮೃತಿರೂಪ; ಇದನ್ನು ನಿರಂತರವೂ ಅಭ್ಯಾಸಮಾಡುತ್ತಿದ್ದರೆ ಇನ್ನೂ ಪೂರ್ಣವಾಗಿ, ಅಂತಿಮಕಾಲದ ವರೆಗೂ ಇದ್ದು, ಮೋಕ್ಷವನ್ನು ಸಾಧಿಸುತ್ತದೆ.[1] ಆದುದರಿಂದ ಗೃಹಸ್ಥರ ವಿಷಯದಲ್ಲಿ ಜ್ಞಾನವು ಯಜ್ಞಾದಿ-ನಿತ್ಯನೈಮಿತ್ತಿಕ-ಸರ್ವಕರ್ಮಗಳನ್ನೂ ಅಪೇಕ್ಷಿಸುತ್ತದೆ. ಗಮನಕ್ಕೆ ಸಾಧನವಾದ ಅಶ್ವವು ಜೀನು, ಲಗಾಮು ಮೊದಲಾದ ಪರಿಕರಗಳನ್ನು ಅಪೇಕ್ಷಿಸುವಂತೆ, ಮೋಕ್ಷಸಾಧನವಾದ ಜ್ಞಾನವು ನಿತ್ಯನೈಮಿತ್ತಿಕ-ಕರ್ಮಪರಿಕರಗಳನ್ನು ಅಪೇಕ್ಷಿಸುತ್ತದೆ. ಭಗವಂತನು ಸ್ವಯಂ ಹೀಗೆ ಹೇಳಿರುತ್ತಾನೆ. 'ಯಜ್ಞ, ದಾನ, ತಪಸ್ಸು ಎಂಬ ಕರ್ಮವು ಬಿಡತಕ್ಕದ್ದಲ್ಲ; ಅದು ಮಾಡಲ್ಪಡತಕ್ಕದ್ದೇ ಯಜ್ಞ, ದಾನ ಮತ್ತು ತಪಸ್ಸು—ಇವು ಮನೀಷಿಗಳಿಗೆ ಪವಿತ್ರವಾದವು'[2] (ಗೀತಾ ೧೮. ೫); 'ಯಾವನಿಂದ ಪ್ರಾಣಿಗಳ ಪ್ರವೃತ್ತಿಯುಂಟಾಗುವುದೊ, ಯಾವನಿಂದ ಈ ಜಗತ್ತೆಲ್ಲ ವ್ಯಾಪ್ತವಾಗಿರುವುದೊ ಅವನನ್ನು ಸ್ವಕರ್ಮದಿಂದ ಆರಾಧಿಸಿ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ'[3] (ಗೀತಾ ೧೮. ೪೬).

ದ್ವೈ.—'ಸರ್ವಧರ್ಮಗಳ ಅಪೇಕ್ಷೆಯೂ ಜ್ಞಾನೋತ್ಪತ್ತಿಗಾಗಿಯೇ;[4] (ಮೋಕ್ಷಕ್ಕಾಗಿ ಅಲ್ಲ) ಯಜ್ಞಾದಿಶ್ರುತಿಯಿದೆ; ಅಶ್ವದ ಹಾಗೆ' ಎಂಬುದು ಸೂತ್ರಾರ್ಥ.

**ವಿವಿದಿಷಂತಿ ಯಜ್ಞೇನ ದಾನೇನ ತಪಸಾ** (ಬೃ. ಉ. ೪. ೪. ೨೨) ಎಂಬ ಶ್ರುತಿಯು ಸರ್ವಧರ್ಮಗಳ ಅಪೇಕ್ಷೆಯನ್ನು ತಿಳಿಸುತ್ತದೆ ಗಮನಕ್ಕೆ ಅಶ್ವಾದಿಗಳು ಬೇಕಾಗುತ್ತವೆಯೇ ಹೊರತು ಗಮನವು ನಿಸ್ವತ್ತವಾದ ಮೇಲೆ ಗ್ರಾಮಾದಿಗಳನ್ನು ಸೇರುವುದಕ್ಕಲ್ಲ; ಹಾಗೆಯೇ ಜ್ಞಾನಾರ್ಥಕರ್ಮಗಳಿಗೆ ಜ್ಞಾನವು ಹುಟ್ಟುವುದರಲ್ಲಿಯೇ ಅಪೇಕ್ಷೆಯು ಹೊರತು ಮೋಕ್ಷವುಂಟಾಗುವುದರಲ್ಲಿ ಅಲ್ಲ

---

1 ಜ್ಞಾನಂ ಚ ವಾಕ್ಯಾರ್ಥಜ್ಞಾನಾದರ್ಥಾಂತರಭೂತಂ ಧ್ಯಾನೋಪಾಸನಾದಿಶಬ್ದವಾಚ್ಯಂ ವಿಶದತಮಪ್ರತ್ಯಕ್ಷತಾಪನ್ನಸ್ಮೃತಿರೂಪಂ ನಿರತಿಶಯಪ್ರಿಯಮಹರಹರಭ್ಯಾಸಾಧೇಯಾತಿಶಯಮಾಪ್ರಯಾಣಾದನುವರ್ತಮಾನಂ ಮೋಕ್ಷಸಾಧನಮಿತಿ (ಶ್ರೀಭಾಷ್ಯ).

2 ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥

3 ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥

4 ಸರ್ವಧರ್ಮಾಪೇಕ್ಷಾ ಚ ಜ್ಞಾನಸ್ಯೋತ್ಪತ್ತೌ (ಮ. ಭಾ.).

**ಶಮದಮಾದ್ಯುಪೇತಃ ಸ್ಯಾತ್ತಥಾऽಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್* ॥ ೨೭ ॥**

೨೭ ಹಾಗಿದ್ದರೂ ಶಮದಮಾದಿಗಳಿಂದ ಕೂಡಿರಬೇಕು, ಏಕೆಂದರೆ ಅವುಗಳನ್ನು ಅದಕ್ಕೆ ಅಂಗವಾಗಿ ವಿಧಿಸಿರುತ್ತದೆ, (ಆದುದರಿಂದ) ಅವು ಅವಶ್ಯವಾಗಿ ಅನುಷ್ಠೇಯವಾಗಿವೆ.

ಶ್ರುತಿಯ (ಬೃ. ಉ. ೪. ೪. ೨೨) ಪ್ರಕಾರ ಯಜ್ಞಾದಿಗಳು ವಿದ್ಯೆಗೆ ಸಾಧನವಲ್ಲ—ಎಂದು ಯಾವನಾದರೂ ತಿಳಿದರೂ ವಿದ್ಯಾರ್ಥಿಯಾದವನು ಶಮದಮಾದಿಗಳಿಂದ ಕೂಡಿರಬೇಕು; ಏಕೆಂದರೆ 'ಆದುದರಿಂದ ಹೀಗೆ ಅರಿತುಕೊಂಡಿರುವವನು ಶಾಂತನೂ, ದಾಂತನೂ, ಉಪರತನೂ, ತಿತಿಕ್ಷುವೂ ಸಮಾಹಿತನೂ ಆಗಿ, ತನ್ನ ಶರೀರದಲ್ಲಿಯೇ ಆತ್ಮನನ್ನು ನೋಡುತ್ತಾನೆ'[1] (ಬೃ ಉ. ೪. ೪. ೨೩) ಎಂದು ಶ್ರುತಿಯು ಶಮದಮಾದಿಗಳನ್ನು ವಿದ್ಯೆಗೆ ಸಾಧನವಾಗಿ ವಿಧಿಸಿರುತ್ತದೆ; ವಿಹಿತವಾದವುಗಳನ್ನು ಅವಶ್ಯವಾಗಿ ಮಾಡಲೇಬೇಕು. ಯಜ್ಞಾದಿಗಳನ್ನೂ ಜ್ಞಾನವು ಅಪೇಕ್ಷಿಸುತ್ತದೆ; ಇದಕ್ಕೆ ಯಜ್ಞಾದಿ ಶ್ರುತಿಯೇ ಪ್ರಮಾಣವು: 'ಯಜ್ಞಾದಿಗಳಿಂದ ತಿಳಿಯಲು ಬಯಸುತ್ತಾರೆ' (ಬೃ. ಉ. ೪. ೪. ೨೨) ಎಂಬಲ್ಲಿ ವಿವಿದಿಷಾ-ಸಂಯೋಗವು ಅಪೂರ್ವವಾಗಿರುವುದರಿಂದ ವಿಧಿಯನ್ನು ಕಲ್ಪಿಸಬೇಕು. ಭಗವದ್ಗೀತಾದಿ-ಸ್ಮೃತಿಗಳಲ್ಲಿಯೂ ಫಲಾಭಿಸಂಧಿಯಿಲ್ಲದೆ ಯಜ್ಞಾದಿಗಳನ್ನು ಅನುಷ್ಠಿಸಿದರೆ ಅವುಗಳು ಮುಮುಕ್ಷುಗಳ ಜ್ಞಾನಕ್ಕೆ ಸಾಧನವಾಗುತ್ತವೆ ಎಂದು ಹೇಳಿರುತ್ತದೆ. ಆದುದರಿಂದ ಆಯಾ ಆಶ್ರಮಕ್ಕೆ ತಕ್ಕಂತೆ ಯಜ್ಞಾದಿಗಳು ಶಮದಮಾದಿಗಳು ಮತ್ತು ಆಶ್ರಮಕರ್ಮಗಳು—ಇವೆಲ್ಲ ವಿದ್ಯೋತ್ಪತ್ತಿಗಾಗಿ ಬೇಕಾಗಿರುತ್ತವೆ ಅದರಲ್ಲಿಯೂ 'ಹೀಗೆಂದು ಅರಿತವನು' (ಬೃ. ಉ. ೪. ೪. ೨೩) ಎಂದು ವಿದ್ಯಾಸಂಯೋಗವಿರುವುದರಿಂದ ಶಮದಮಾದಿಗಳು ಸಮೀಪದಲ್ಲಿರುವ ವಿದ್ಯಾಸಾಧನಗಳು; ಯಜ್ಞಾದಿಗಳಿಗೆ ವಿವಿದಿಷಾ-ಸಂಯೋಗವಿರುವುದರಿಂದ (ಬೃ. ಉ. ೪. ೪. ೨೨) ಅವು ಬಾಹ್ಯಸಾಧನೆಗಳು ಎಂದು ವಿವೇಚಿಸಬೇಕು.

ವಿ.—ಗೃಹಸ್ಥನಾದವನು ಶಮದಮಾದಿಗಳನ್ನು ಅನುಷ್ಠಿಸಬೇಕೋ ಅಥವಾ ಬೇಡವೊ?—ಎಂಬುದು ಸಂಶಯ. ಕರ್ಮಾನುಷ್ಠಾನವು ಅಂತರ-ಬಾಹ್ಯಕರಣಗಳ ವ್ಯಾಪಾರವಾದುದರಿಂದಲೂ ಶಮದಮಾದಿಗಳಿಗೆ ವಿರುದ್ಧವಾಗಿರುವುದರಿಂದಲೂ ಶಮ-ದಮಾದಿಗಳನ್ನು ಗೃಹಸ್ಥನಿಗೆ ವಿಧಿಸಿಲ್ಲ—ಎಂಬುದು ಪೂರ್ವಪಕ್ಷ. ಸೂತ್ರಕಾರರು ಈ ಅಭಿಪ್ರಾಯವನ್ನು ನಿರಾಕರಿಸುತ್ತಾರೆ. ಗೃಹಸ್ಥನು ಬಾಹ್ಯಕರ್ಮಗಳಲ್ಲಿ ಪ್ರವೃತ್ತ

---

* ಇದು ಶ್ರೀಭಾಷ್ಯದಲ್ಲಿ ಶಮದಮಾದ್ಯಧಿಕರಣ ಎನಿಸಿದೆ.

[1] ತಸ್ಮಾದೇವಂವಿಚ್ಛಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾऽऽತ್ಮನ್ಯೇವಾತ್ಮಾನಂ ಪಶ್ಯತಿ ।

ನಾಗಿದ್ದರೂ ತನಗೆ ಜ್ಞಾನವಿರುವ ಮಟ್ಟಿಗೆ ಶಮದಮಾದಿಗಳನ್ನು ಅನುಷ್ಠಿಸಬೇಕು; ಏಕೆಂದರೆ ಶ್ರುತಿಯು (ಬೃ. ಉ. ೪. ೪. ೨೩) ಇವುಗಳನ್ನು ವಿದ್ಯೆಗೆ ಅಂಗವಾಗಿ ಹೇಳುತ್ತದೆ.

ವ್ಯಾ.—'ಜ್ಞಾನಕ್ಕೆ ಮೋಕ್ಷವು ನಿಯತವಾಗಿದ್ದರೂ ಜ್ಞಾನಿಯು ಶಮದಮಾದಿಗಳಿಂದ ಕೂಡಿರಬೇಕು;[1] ಏಕೆಂದರೆ ಇದು ಶ್ರುತಿಯಲ್ಲಿ ವಿಹಿತವಾಗಿದೆ; ಮತ್ತು ಅವು ಜ್ಞಾನಕ್ಕೆ ಅಂಗವಾಗಿರುವುದರಿಂದ ಅವಶ್ಯವಾಗಿ ಅನುಷ್ಠೇಯಗಳು' ಎಂಬುದು ಸೂತ್ರಾರ್ಥ.

ಆಚಾರ್ಯನಿಂದ ವಿದ್ಯೆಯನ್ನು ಪಡೆದ ಮೇಲೆ ಮತ್ತು ಒಳಗಿರುವ ಆತ್ಮನನ್ನು ಸಾಕ್ಷಾತ್ಕರಿಸಿದ ಮೇಲೆ ಶಾಂತನೂ ದಾಂತನೂ ಆಗಿ, ಎಲ್ಲರಿಗೂ ಅನುಕೂಲನಾಗಿ ಆಚಾರ್ಯನ-ಪರಿಚಾರವನ್ನು ಮಾಡಬೇಕು' ಎಂದು ಮಾಠರಶ್ರುತಿಯು ಹೇಳುತ್ತದೆ.

---

[1] ಯದ್ಯಪಿ ಜ್ಞಾನೇನೈವ ಮೋಕ್ಷೋ ನಿಯತಸ್ತಥಾಽಪಿ ಜ್ಞಾನೀ ಶಮದಮಾದ್ಯುಪೇತಃ (ಮ. ಭಾ.).

## ೭. ಸರ್ವಾನ್ನಾನುಮತ್ಯಧಿಕರಣ

(ಸೂ. ೨೮–೩೧)

**ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ॥ ೨೮ ॥**

೨೮. ಸರ್ವಾನ್ನದ ಅನುಮತಿಯು ಪ್ರಾಣವು ಹೋಗುವ ಕಾಲದಲ್ಲಿ; ಏಕೆಂದರೆ ಹಾಗೆ ಶ್ರುತಿಯು ಹೇಳುತ್ತದೆ.

ಛಂದೋಗರ ಪ್ರಾಣಸಂವಾದದಲ್ಲಿ, 'ಹೀಗೆ ಅರಿತುಕೊಂಡಿರುವವನಿಗೆ ಯಾವುದೂ ಅನನ್ನವಾಗುವುದಿಲ್ಲ'[1] (ಛಾಂ. ಉ. ೫. ೨. ೧) ಎಂದು ಹೇಳಿದೆ. ಹೀಗೆಯೇ ವಾಜಸನೇಯಿಗಳ ಶಾಖೆಯಲ್ಲಿ 'ಇವನು ಅನ್ನವಾಗದುದನ್ನು ತಿನ್ನಬೇಕಾಗುವುದಿಲ್ಲ ಅಥವಾ ಪರಿಗ್ರಹಿಸಬೇಕಾಗುವುದಿಲ್ಲ'[2] (ಬೃ. ಉ ೬. ೧. ೧೪) ಎಂದು ಹೇಳಿದೆ. ಇವನು ಯಾವುದನ್ನಾದರೂ ತಿನ್ನಬಹುದು ಎಂದರ್ಥ. ಇದು ಶಮದಮಾದಿಗಳಂತೆ ವಿದ್ಯೆಗೆ ಅಂಗವಾಗಿ ವಿಹಿತವಾಗಿದೆಯೊ ಅಥವಾ ಸ್ತುತಿಗಾಗಿ ಹೇಳಿದೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಇದನ್ನು ವಿಧಿಯೆಂದೇ ಎಣಿಸಬೇಕು; ಏಕೆಂದರೆ ಹಾಗಾದರೆ ಒಂದು ಪ್ರವೃತ್ತಿ ವಿಶೇಷವನ್ನುಂಟುಮಾಡುವ ಉಪದೇಶವಿದೆ—ಎಂದಾಗುತ್ತದೆ. ಆದುದರಿಂದ ಪ್ರಾಣವಿದ್ಯೆಯ ಸಂನಿಧಿಯಲ್ಲಿರುವುದರಿಂದ ಅದಕ್ಕೆ ಅಂಗವಾಗಿದೆ, ಅದಕ್ಕೆ ಅಂಗವಾಗಿರುವುದರಿಂದ ಈ ನಿಯಮವು ಹೋಗುತ್ತದೆ. ಹೀಗಾದರೆ ಭಕ್ಷ್ಯಾಭಕ್ಷ್ಯವಿಭಾಗವನ್ನು ಮಾಡಿರುವ ಶಾಸ್ತ್ರಕ್ಕೆ ವಿರೋಧವಾಗುತ್ತದೆ ಎಂಬುದು ದೋಷವಾಗುವುದಿಲ್ಲ; ಏಕೆಂದರೆ ಇಲ್ಲಿ ಸಾಮಾನ್ಯನಿಯಮಕ್ಕೂ ವಿಶೇಷಕ್ಕೂ ಸಂಬಂಧವಿದೆ; ಹೇಗೆ ಪ್ರಾಣಿಗಳನ್ನು ಹಿಂಸಿಸಕೂಡದೆಂಬ ಪ್ರತಿಷೇಧವು ಪಶುವನ್ನು ಕೊಲ್ಲಬೇಕೆಂಬ ವಿಧಿಯಿಂದ ಬಾಧಿತವಾಗುತ್ತದೆಯೊ ಹಾಗೆಯೆ ಸರ್ವಾನ್ನವನ್ನೂ ತಿನ್ನಬಹುದೆಂಬ ಪ್ರಾಣವಿದ್ಯಾವಿಷಯದ ವಚನದಿಂದಲೂ ಭಕ್ಷ್ಯಾಭಕ್ಷ್ಯವಿಭಾಗಶಾಸ್ತ್ರವು ಬಾಧಿತವಾಗಬಹುದು.

**ಸಿದ್ಧಾಂತಿ**—ಎಲ್ಲ ಅನ್ನವನ್ನೂ ತಿನ್ನುವುದಕ್ಕೆ ಅನುಮತಿಯು ವಿಹಿತವಾಗಿಲ್ಲ. ಶ್ರುತಿಯಲ್ಲಿ (ಛಾಂ. ಉ. ೫. ೨. ೧) ವರ್ತಮಾನಾಪದೇಶವಿರುವುದರಿಂದ ವಿಧಿಯಿಲ್ಲ; ವಿಧಿಯಿಲ್ಲದಿರುವಾಗ ಪ್ರವೃತ್ತಿ ವಿಶೇಷವನ್ನು ಉಂಟುಮಾಡುವುದೆಂಬ ಲೋಭದಿಂದಲೇ ವಿಧಿಯನ್ನು ಕಲ್ಪಿಸಬೇಕಾಗಿಲ್ಲ ಇದಲ್ಲದೆ ನಾಯಿಯವರೆಗೂ ಪ್ರಾಣಕ್ಕೆ ಅನ್ನವೆಂದು ಹೇಳಿದಮೇಲೆ, 'ಹೀಗೆಂದು ಅರಿತವನಿಗೆ ಯಾವುದೂ ಅನನ್ನವಾಗುವುದಿಲ್ಲ' ಎಂದು ಹೇಳಿದೆ. ಆದರೆ ನಾಯಿ ಮೊದಲಾದುವುಗಳನ್ನು ಅನ್ನರೂಪದಿಂದ ಮಾನುಷದೇಹದಲ್ಲಿ

---

[1] ನ ಹ ವಾ ಏವಂವಿದಿ ಕಿಂಚನಾನನ್ನಂ ಭವತಿ ।

[2] ನ ಹ ವಾ ಅಸ್ಯಾನನ್ನಂ ಜಗ್ಧಂ ಭವತಿ, ನಾನನ್ನಂ ಪರಿಗೃಹೀತಮ್ ।

ಉಪಭೋಗಿಸಲು ಆಗುವುದಿಲ್ಲ, ಆದರೆ ಇದೆಲ್ಲವೂ ಪ್ರಾಣಕ್ಕೆ ಅನ್ನವೆಂದು ಚಿಂತಿಸಲು ಸಾಧ್ಯವಾಗುತ್ತದೆ ಆದುದರಿಂದ ಪ್ರಾಣಾನ್ನವನ್ನು ಸ್ತುತಿಸುವುದಕ್ಕಾಗಿ ಬಂದಿರುವ ಅರ್ಥವಾದವು ಇದು ಆದರೆ ಪ್ರಾಣವು ಹೋಗುವ ಪರಸ್ಥಾಪತ್ತಿನಲ್ಲಿ ಅಭಕ್ಷ್ಯವಾದುದನ್ನು ತಿನ್ನಲು ಅನುಮತಿಯಿದೆ, 'ಕುರುದೇಶದ ಸಸ್ಯಗಳು ಆಲಿಕಲ್ಲು ಮಳೆಯಿಂದ ನಾಶವಾಗಲು' (ಛಾಂ ಉ ೧ ೧೦ ೧) ಎಂಬ ಬ್ರಾಹ್ಮಣದಲ್ಲಿ ಅತ್ಯಂತ ದುರವಸ್ಥೆಯನ್ನು ಹೊಂದಿದ ಉಷಸ್ತಿ ಚಾಕ್ರಾಯಣನು ಕುತ್ಸಿತವಾದ ಉದ್ದನ್ನು ತಿಂದನೆಂದೂ, ನೀರನ್ನು ಮಾತ್ರ ಕುಡಿಯಲಿಲ್ಲವೆಂದೂ ಹೇಳಿದೆ ಇದಕ್ಕೆ ಕಾರಣವನ್ನು 'ಉದ್ದನ್ನು ತಿನ್ನದಿದ್ದರೆ ನಾನು ಬದುಕುತ್ತಲೇ ಇರಲಿಲ್ಲ, ಆದರೆ ನೀರು ನನಗೆ ಬೇಕಾದಷ್ಟು ಸಿಗುತ್ತದೆ' ಎಂದು ಹೇಳಿರುತ್ತಾನೆ ಈ ಪ್ರಸಂಗದಿಂದ ಪ್ರಾಣವು ಹೋಗುವಾಗ ಅಭಕ್ಷ್ಯವನ್ನಾದರೂ ತಿನ್ನಬಹುದೆಂದೂ, ಸ್ವಸ್ಥಾವಸ್ಥೆಯಲ್ಲಿ ಜ್ಞಾನಿಯೂ ಕೂಡ ಹೀಗೆ ಮಾಡಕೂಡದೆಂದೂ ನಿಶ್ಚಿತವಾಗುತ್ತದೆ

ವಿ.—ಬ್ರಹ್ಮಜ್ಞಾನಿಗೂ ಕೂಡ ಪ್ರಾಣಹೋಗುವ ಸಂದರ್ಭದಲ್ಲಿ ಸರ್ವಾನ್ನವನ್ನೂ ಪರಿಗ್ರಹಿಸಬಹುದೆಂಬ ಅನುಮತಿಯು ಶ್ರುತಿಯಲ್ಲಿ (ಛಾಂ ಉ ೧ ೧೦) ತೋರಿಬರುತ್ತದೆ ಆದುದರಿಂದ ಸರ್ವಾನ್ನವನ್ನೂ ಪ್ರಾಣವಿದನು ತಿನ್ನಬಹುದೆಂದು ಶ್ರುತಿಯು ಹೇಳುವಾಗ, ಪ್ರಾಣವು ಹೋಗುವ ಸಂದರ್ಭದಲ್ಲಿ ಮಾತ್ರ ಯಾವ ಅನ್ನವನ್ನಾದರೂ ತಿನ್ನಬಹುದೆಂದು ನಿಶ್ಚಯಿಸಬೇಕು

ದ್ವೈ.—'ಹೀಗೆಂದು ಅರಿತವನು ಸರ್ವಾನ್ನವನ್ನು ತಿಂದರೂ ಹಾಗೆಯೇ ಆಗುತ್ತಾನೆ' ಎನ್ನುವ ಶ್ರುತ್ಯುಕ್ತವಾದ ಸರ್ವಾನ್ನಾನುಮತಿಯು ಪ್ರಾಣಾತ್ಯಯ-ವಿಷಯವಾದದ್ದು [1]

## ಅಬಾಧಾಚ್ಚ ॥ ೨೯ ॥

೨೯ ಬಾಧೆಯಿಲ್ಲದಿರವುದರಿಂದಲೂ (ಹೀಗೆಯೇ)

ಮತ್ತು ಹೀಗಾದರೆ, 'ಆಹಾರವು ಶುದ್ಧವಾದಾಗ ಅಂತಃಕರಣವು ಶುದ್ಧವಾಗುತ್ತದೆ'[2] (ಛಾಂ ಉ ೭ ೨೬ ೨) ಎಂಬಿದೇ ಮೊದಲಾದ ಭಕ್ಷ್ಯಾಭಕ್ಷ್ಯ-ವಿಭಾಗದ ಶಾಸ್ತ್ರವೂ ಬಾಧಿತವಾಗುವುದಿಲ್ಲ

ವಿ.—ಬ್ರಹ್ಮವಿದ್ಯೆಯ ಉತ್ಪತ್ತಿಗಾಗಿ ಬ್ರಹ್ಮಜ್ಞಾನಿಗಳಿಗೆ ಆಹಾರಶುದ್ಧಿಯನ್ನು ವಿಧಿಸುವ ಶ್ರುತಿಯು (ಛಾಂ ಉ ೭ ೨೬ ೨) ಬಾಧಿತವಾಗುವುದಿಲ್ಲ ಎಂಬ ಪರಾಮರ್ಶದಿಂದ ಮೇಲೆ ಹೇಳಿದ ಅಭಿಪ್ರಾಯವು ಸಿದ್ಧವಾಗುತ್ತದೆ

---

[1] ಯದಿ ಹ ವಾ ಏವಂವಿನ್ನಿಖಿಲಂ ಭಕ್ಷಯಿತ್ಯೈವಮೇವ ಸ ಭವತೀತಿ ಸರ್ವಾನ್ನಾನುಮತಿಃ ಪ್ರಾಣಾತ್ಯಯವಿಷಯಾ (ಮ ಭಾ )

[2] ಆಹಾರಶುದ್ಧೌ ಸತ್ತ್ವಶುದ್ಧಿಃ ।

ದ್ವೈ.—'ನಿಷಿದ್ಧವನ್ನು ಮಾಡದಿದ್ದರೆ ಜ್ಞಾನವು ಬಾಧಿತವಾಗದಿರುವುದರಿಂದ ಜ್ಞಾನಿಯು ಜ್ಞಾನದ ಉತ್ಕರ್ಷೆಗಾಗಿ ನ್ಯಾಯವಾದುದನ್ನೇ ಮಾಡುತ್ತಾನೆ'[1] ಎಂಬುದು ಸೂತ್ರಾರ್ಥ.

## ಅಪಿ ಚ ಸ್ಮರ್ಯತೇ ॥ ೩೦ ॥

೩೦. ಇದಲ್ಲದೆ ಸ್ಮೃತಿಯೂ ಇದೆ.

ಇದಲ್ಲದೆ ಆಪತ್ತಿನಲ್ಲಿ ಜ್ಞಾನಿಯೂ ಮತ್ತು ಅಜ್ಞಾನಿಯೂ ಸರ್ವಾನ್ನವನ್ನು ತಿನ್ನ ಬಹುದೆಂದು ಸ್ಮೃತಿಯು ಹೇಳುತ್ತದೆ. 'ಜೀವಿತಕ್ಕೆ ಅಪಾಯವನ್ನು ಪಡೆದವನು ಎಲ್ಲಿಂದ ಅನ್ನವನ್ನು ತಿಂದರೂ—ಪದ್ಮಪತ್ರವು ನೀರಿನಿಂದ ಲಿಪ್ತವಾಗದಂತೆ—ಲಿಪ್ತನಾಗು ವುದಿಲ್ಲ'[2] (ಮ ಸ್ಮೃ. ೧೦ ೧೦. ೪). ಇದರಂತೆ ಅನನ್ನವನ್ನು ತ್ಯಜಿಸಬೇಕೆಂದು ಅನೇಕ ಸ್ಮೃತಿಗಳು ಹೇಳುತ್ತವೆ: 'ಬ್ರಾಹ್ಮಣನು ಯಾವಾಗಲೂ ಮದ್ಯವನ್ನು ಬಿಡಬೇಕು'[3] (ಗೌ. ಧ ಸೂ. ೨. ೨೬), 'ಸುರಾಪಾನಮಾಡಿದ ಬ್ರಾಹ್ಮಣನ ಬಾಯಲ್ಲಿ ಕುದಿಯು ತ್ತಿರುವ ಸುರೆಯನ್ನು ಸುರಿಯಬೇಕು'[4] (ಗೌ. ಧ. ಸೂ. ೨೩. ೧) ಮತ್ತು 'ಸುರಾಪಾನ ಮಾಡಿದವರು ಅಭಕ್ಷ್ಯಭಕ್ಷಣದಿಂದ ಕ್ರಿಮಿಗಳಾಗುತ್ತಾರೆ'[5] (ಮ. ಸ್ಮೃ).

ವಿ.—ಬ್ರಹ್ಮಜ್ಞಾನಿಗಳು ಮತ್ತು ಇತರರು ಪ್ರಾಣಾಪತ್ತು ಒದಗಿದಾಗ ಮಾತ್ರ ಸರ್ವಾನ್ನವನ್ನು ತಿನ್ನಬಹುದೆಂದು ಸ್ಮೃತಿಯು (ಮನು) ಹೇಳುತ್ತದೆ.

ದ್ವೈ.—'ಒಬ್ಬನಿಗೆ ಭೂತ-ಭವಿಷ್ಯಗಳು ತಿಳಿದಿರಬಹುದು, ಮೂರು ಲೋಕ ಗಳನ್ನೂ ಉದ್ಧರಿಸಲು ಶಕ್ತಿಯಿರಬಹುದು; ಅಂಥವನೂ ಕೂಡ ಶ್ರುತಿ-ಸ್ಮೃತಿಗಳಲ್ಲಿ ವಿಧಿಸಿರುವ ಆಚಾರವನ್ನು ಬಿಡಕೂಡದು'—ಎಂದು ಹರಿವಂಶದಲ್ಲಿ ಹೇಳಿದೆ'.

## ಶಬ್ದಶ್ಚಾತೋಽಕಾಮಕಾರೇ ॥ ೩೧ ॥

೩೧. ಆದುದರಿಂದ ಇಷ್ಟಪ್ರಕಾರ ನಡೆಯಕೂಡದು ಎಂಬ (ವಿಷಯದಲ್ಲಿ) ಶ್ರುತಿಯಿದೆ.

---

[1] ಅನ್ಯಾಯಾಚರಣಾಭಾವೇ ನ ಹಿ ಜ್ಞಾನಸ್ಯ ಬಾಧನಮ್ । ಅತೋ ವಿದ್ವಾನಪಿ ನ್ಯಾಯ್ಯಂ ವರ್ತೇತೋತ್ಕರ್ಷಸಿದ್ಧಯ ಇತಿ ಚ ಬ್ರಹ್ಮತರ್ಕೇ (ಮ. ಭಾ.).

[2] ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥

[3] ಮದ್ಯಂ ನಿತ್ಯಂ ಬ್ರಾಹ್ಮಣಃ ।

[4] ಸುರಾಪಸ್ಯ ಬ್ರಾಹ್ಮಣಸ್ಯೋಷ್ಣಮಾಸಿಂಚೇಯುಃ ।

[5] ಸುರಾಪಾಃ ಕ್ರಿಮಯೋ ಭವಂತ್ಯಭಕ್ಷ್ಯಭಕ್ಷಣಾತ್ ।

[6] ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ । ಏತಾದೃಶೋಽಪಿ ನಾಽಚಾರಂ ಶ್ರೌತಂ ಸ್ಮಾರ್ತಂ ವಿವರ್ಜಯೇದಿತಿ ಹರಿವಂಶೇ (ಮ. ಭಾ.).

ಅನನ್ನವನ್ನು ಪ್ರತಿಷೇಧಿಸುವ ಮತ್ತು ಯಥೇಷ್ಟಾಚಾರವನ್ನು ತೊಲಗಿಸುವ ಪ್ರಯೋಜನವುಳ್ಳ ಶಬ್ದವು ಕಾಠಕಸಂಹಿತೆಯಲ್ಲಿ ಶ್ರುತವಾಗಿದೆ: 'ಆದುದರಿಂದ ಬ್ರಾಹ್ಮಣನು "ನಾನು ಪಾಪದಿಂದ ಲಿಪ್ತನಾಗದಿರಲಿ" ಎಂದು ಯೋಚಿಸುತ್ತ ಸುರೆಯನ್ನು ಕುಡಿಯುವುದಿಲ್ಲ'[1] (೧೨ ೧೨. ೪). ಮತ್ತೆ 'ಹೀಗೆಂದು ತಿಳಿದಿರುವವನಿಗೆ ಯಾವುದೂ ಅನನ್ನವಾಗುವುದಿಲ್ಲ' (ಛಾಂ. ಉ. ೫ ೨. ೧) ಎಂಬ ವಾಕ್ಯವನ್ನು ಅರ್ಥವಾದವೆಂದು ಗ್ರಹಿಸಿದರೆ ಯುಕ್ತತರವಾಗುತ್ತದೆ.

ವಿ.—ಯಥೇಷ್ಟಾಚಾರವನ್ನು ಪ್ರತಿಷೇಧಿಸುವ ಶ್ರುತಿಯಿಂದ (ಕಾ. ಸಂ. ೧೨. ೧೨. ೪), ಸರ್ವಾನ್ನವನ್ನು ತಿನ್ನುವುದು ಆಪತ್ಕಾಲದಲ್ಲಿ ಮಾತ್ರ ಎಂಬುದು ಸಿದ್ಧವಾಗುತ್ತದೆ.

ವ್ಯಾ.—'ಇಷ್ಟಾನುಸಾರವಾಗಿ ಮಾಡದಿರುವ ವಿಷಯದಲ್ಲಿ ಶ್ರುತಿಯಿದೆ; ಆದುದರಿಂದ ಅಸತ್-ಪ್ರವೃತ್ತಿಯನ್ನು ಮಾಡಕೂಡದು' ಎಂಬುದು ಸೂತ್ರಾರ್ಥ.

'ಯಾವನು ಹೀಗೆ ಅರಿತಿರುವನೊ, ಧ್ಯಾನಿಸುವನೊ, ನೋಡುವನೊ ಅವನು ಯಥೇಷ್ಟವಾಗಿ ಆಚರಿಸುವುದಿಲ್ಲ, ತನಗೆ ಬೇಕಾದುದನ್ನು ತಿನ್ನುವುದಿಲ್ಲ ಮತ್ತು ಕಾಮವನ್ನು ಅನುಸರಿಸುವುದಿಲ್ಲ' ಎಂದು ಕೌಂಡಿನ್ಯ-ಶ್ರುತಿಯು ಹೇಳುತ್ತದೆ.[2]

---

[1] ತಸ್ಮಾದ್ಬ್ರಾಹ್ಮಣಃ ಸುರಾಂ ನ ಪಿಬತಿ ಪಾಪ್ಮನಾ ನೋತ್ಸೃಜಾ ಇತಿ ।

[2] ಸ ಯ ಏತದೇವಂವಿದೇವಂ ಮನ್ವಾನಾ ಏವಂ ಪಶ್ಯನ್ನ ಕಾಮಚರಿತಂ ಚರೇನ್ನ ಕಾಮಂ ಭಕ್ಷಯೀತ ನ ಕಾಮಮನುವರ್ತೇತೇತಿ ಕೌಂಡಿನ್ಯಶ್ರುತೌ (ಮ. ಭಾ.).

# ೮. ಆಶ್ರಮಕರ್ಮಾಧಿಕರಣ*

(ಸೂ. ೩೨–೩೫)

## ವಿಹಿತತ್ವಾಚ್ಚಾಶ್ರಮಕರ್ಮಾಪಿ ॥ ೩೨ ॥

೩೨. ವಿಹಿತವಾಗಿರುವುದರಿಂದ ಆಶ್ರಮಕರ್ಮವು (ಮುಮುಕ್ಷುವಾಗದವನಿಗೂ ಇದೆ).

೨೬ನೆಯ ಸೂತ್ರದಲ್ಲಿ ಆಶ್ರಮಕರ್ಮಗಳು ವಿದ್ಯೆಗೆ ಸಾಧನವೆಂದು ನಿರ್ಧರಿಸಿದ್ದಾಯಿತು. ಮುಮುಕ್ಷುವಾಗದೆ ತನ್ನ ಆಶ್ರಮದಲ್ಲಿಯೇ ನಿಂತು ವಿದ್ಯೆಯನ್ನು ಬಯಸದವನು ಅವುಗಳನ್ನು ಮಾಡಬೇಕೊ ಅಥವಾ ಮಾಡಕೂಡದೊ ?—ಎಂಬುದನ್ನು ಈಗ ವಿಚಾರಮಾಡಲಾಗುತ್ತದೆ.

**ಪೂರ್ವಪಕ್ಷ**—ಶ್ರುತಿಯು (ಬೃ. ಉ. ೪. ೪. ೨೨) ಇವುಗಳನ್ನು ವಿದ್ಯೆಗೆ ಸಾಧನವಾಗಿಯೇ ವಿಧಿಸಿರುವುದರಿಂದ ವಿದ್ಯೆಯನ್ನು ಬಯಸದೆ ಫಲಾಂತರವನ್ನು ಬಯಸುವವನು ನಿತ್ಯಕರ್ಮಗಳನ್ನು ಮಾಡಬೇಕಾಗಿಲ್ಲ. ಹಾಗಿಲ್ಲದೆ ಅವನೂ ಅವುಗಳನ್ನು ಮಾಡಬೇಕಾದರೆ ಅವು ವಿದ್ಯೆಗೆ ಸಾಧನವಾಗಲಾರವು; ಏಕೆಂದರೆ ಕರ್ಮವು ನಿತ್ಯವೂ ಅನಿತ್ಯವೂ ಆಗುವುದೆಂಬ ವಿರೋಧವುಂಟಾಗುವುದು.

**ಸಿದ್ಧಾಂತಿ**—ತನ್ನ ಆಶ್ರಮದಲ್ಲಿಯೇ ನಿಷ್ಠನಾಗಿರುವ ಮುಮುಕ್ಷುವಾಗದವನು ನಿತ್ಯಕರ್ಮಗಳನ್ನು ಮಾಡಲೇಬೇಕು; ಏಕೆಂದರೆ 'ಬದುಕಿರುವವರೆಗೂ ಅಗ್ನಿಹೋತ್ರವನ್ನು ಮಾಡಬೇಕು' **ಯಾವಜ್ಜೀವಮಗ್ನಿಹೋತ್ರಂ ಜುಹೋತಿ** ಎಂಬ ವಿಧಿಯಿದೆ.

**ವಿ.**—ಕೇವಲ ಆಶ್ರಮಿಗಳಾಗಿರುವವರಿಗೂ ಕೂಡ ಯಾವಜ್ಜೀವವೂ ಅಗ್ನಿಹೋತ್ರಾದಿ-ಕರ್ಮಗಳನ್ನು ಮಾಡಲೇಬೇಕು; ಏಕೆಂದರೆ ಯಾವಜ್ಜೀವ-ಶ್ರುತಿಯಿದೆ.

**ದ್ವೈ.**—'ಆಶ್ರಮಕರ್ಮಗಳನ್ನು ವಿಧಿಸಿರುವುದರಿಂದಲೂ' ಎಂಬುದು ಸೂತ್ರಾರ್ಥ. ನಿಷಿದ್ಧಕರ್ಮವನ್ನು ಮಾಡದಿದ್ದರೆ ಮಾತ್ರ ಸಾಕಾಗುವುದಿಲ್ಲ; ವರ್ಣಾಶ್ರಮಿಗಳಿಗೆ ವಿಧಿಸಿರುವ ಕರ್ಮಗಳನ್ನೂ ಮಾಡಬೇಕು.[1]

## ಸಹಕಾರಿತ್ವೇನ ಚ ॥ ೩೩ ॥

೩೩. (ಈ ಕರ್ಮಗಳು ವಿದ್ಯೆಗೆ) ಸಹಕಾರಿಗಳೂ (ಆಗಿರಬಹುದು).

---

* ಶ್ರೀಭಾಷ್ಯದಲ್ಲಿ ಈ ಅಧಿಕರಣವು ವಿಹಿತತ್ವಾಧಿಕರಣ ಎನಿಸಿದೆ.

[1] ನ ಕೇವಲನಿಷಿದ್ಧಾಕರಣೇನ ಪೂರ್ಯತೇ। ಕರ್ತವ್ಯಂ ಚ ವರ್ಣಾಶ್ರಮವಿಹಿತಂ ಕರ್ಮ (ಮ. ಭಾ.).

ಆಶ್ರಮಕರ್ಮಗಳು ವಿದ್ಯೆಗೆ ಸಹಕಾರಿಗಳಾಗಿವೆ; ಏಕೆಂದರೆ **ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ** (ಬೃ. ಉ. ೪. ೪. ೨೨) ಇದೇ ಮೊದಲಾದ ಶ್ರುತಿಗಳು ವಿಧಿಸುತ್ತವೆ. ಈ ಕರ್ಮಗಳು ವಿದ್ಯಾಸಹಕಾರಿಗಳೆಂಬ ವಚನವು—ಪ್ರಯಾಜಾದಿಗಳು ದರ್ಶಪೂರ್ಣಮಾಸಾದಿಗಳಿಗೆ ಸಹಕಾರಿಗಳಾಗಿರುವಂತೆ—ವಿದ್ಯೆಯ ಫಲದ ವಿಷಯದಲ್ಲಿ ಎಂದು ತಿಳಿಯಕೂಡದು; ಏಕೆಂದರೆ ವಿದ್ಯೆಯು ವಿಧಿಗೆ ಗೋಚರವಲ್ಲ ಮತ್ತು ಸಾಧನೆಗಳಿಂದ ಆಗುವುದಿಲ್ಲ. ವಿಧಿಲಕ್ಷಣವಾಗಿರುವ ದರ್ಶಪೂರ್ಣಮಾಸವೇ ಮೊದಲಾದ ಸಾಧನವು ಸ್ವರ್ಗಫಲವನ್ನು ಸಾಧಿಸಲು ಪ್ರಯಾಜಾದಿ-ಸಾಧನಾಂತರವನ್ನು ಅಪೇಕ್ಷಿಸುವಂತೆ ವಿದ್ಯೆಯು ಅಪೇಕ್ಷಿಸುವುದಿಲ್ಲ; ಆದುದರಿಂದ ಆಶ್ರಮಕರ್ಮಗಳು ವಿದ್ಯೆಗೆ ಸಹಕಾರಿಗಳು, ಎಂದರೆ ಅವು ಜ್ಞಾನದ ಉತ್ಪತ್ತಿಗೆ ಮಾತ್ರ ಸಾಧನಗಳು. ಇಲ್ಲಿ ನಿತ್ಯಾನಿತ್ಯ-ಸಂಯೋಗಗಳ ವಿರೋಧಗಳು ಇಲ್ಲ; ಏಕೆಂದರೆ ಕರ್ಮಗಳು ಬೇರೆಬೇರೆಯಾಗದಿರುವಾಗ ಸಂಯೋಗಗಳು ಬೇರೆಬೇರೆಯಾಗಬಹುದು. ಯಾವಜ್ಜೀವಾದಿ-ವಾಕ್ಯಗಳಿಂದ ಕಲ್ಪಿಸಿರುವ ಒಂದು ಸಂಯೋಗವು ನಿತ್ಯವು; ಅದಕ್ಕೆ ವಿದ್ಯೆಯೆಂಬ ಫಲವಿಲ್ಲ. ಶ್ರುತಿವಾಕ್ಯದಿಂದ (ಬೃ. ಉ. ೪. ೪. ೨೨) ಕಲ್ಪಿಸಿರುವ ಇನ್ನೊಂದು ಸಂಯೋಗವು ಅನಿತ್ಯವು; ಅದಕ್ಕೆ ವಿದ್ಯೆಯು ಫಲವು.

**ವಿ.**—ವಿದ್ಯೋತ್ಪತ್ತಿಯ ಮೂಲಕ ವಿದ್ಯೆಗೆ ಸಹಕಾರಿಯಾಗಿರುವುದರಿಂದ ಅಗ್ನಿಹೋತ್ರಾದಿಗಳನ್ನು ಅನುಷ್ಠಿಸಬೇಕು.

**ದ್ವೈ.**—'ಜ್ಞಾನಕ್ಕೆ ಸಹಕಾರಿಯಾದುದರಿಂದಲೂ ವಿಹಿತಕರ್ಮವನ್ನು ಮಾಡಬೇಕು' ಎಂಬುದು ಸೂತ್ರಾರ್ಥ.

**ಸರ್ವಥಾಪಿ ತ ಏವೋಭಯಲಿಂಗಾತ್*** || ೩೪ ||

೩೪. ಸರ್ವಪ್ರಕಾರದಿಂದಲೂ ಆ (ಧರ್ಮಗಳನ್ನೇ ಅನುಷ್ಠಾನಮಾಡಬೇಕು); ಏಕೆಂದರೆ ಉಭಯಲಿಂಗವಿದೆ.

'ಸರ್ವಪ್ರಕಾರದಿಂದಲೂ' ಎಂದರೆ ಆಶ್ರಮಕರ್ಮತ್ವಪಕ್ಷವಾಗಲಿ ವಿದ್ಯಾಸಹಕಾರಿತ್ವಪಕ್ಷವಾಗಲಿ ಆ ಅಗ್ನಿಹೋತ್ರಾದಿ-ಧರ್ಮಗಳನ್ನೇ ಅನುಷ್ಠಿಸಬೇಕು; ಏಕೆಂದರೆ ಉಭಯಲಿಂಗವಿದೆ; ಎಂದರೆ ಶ್ರುತಿಲಿಂಗವಿದೆ ಮತ್ತು ಸ್ಮೃತಿಲಿಂಗವಿದೆ. ಮೊದಲನೆಯದಾಗಿ ಶ್ರುತಿಲಿಂಗ. 'ನಿತ್ಯಸ್ವಾಧ್ಯಾಯದಿಂದ ಆ ಇವನನ್ನು ಬ್ರಾಹ್ಮಣರು ಅರಿತುಕೊಳ್ಳಲು ಬಯಸುತ್ತಾರೆ' (ಬೃ. ಉ. ೪. ೪. ೨೨) ಎಂಬಲ್ಲಿ ಪ್ರಸಿದ್ಧವಾದ ಮತ್ತು ಉತ್ಪನ್ನರೂಪದ ಯಜ್ಞಗಳನ್ನೇ ವಿವಿದಿಷೆಯಲ್ಲಿ ವಿನಿಯೋಗಿಸಿರುತ್ತದೆ; ಇವು ಅವುಗಳಿಗೆ ಹೊಸರೂಪವನ್ನುಂಟುಮಾಡಿಲ್ಲ. ಎರಡನೆಯದಾಗಿ ಸ್ಮೃತಿಲಿಂಗ: 'ಕರ್ಮಫಲವನ್ನು ಆಶ್ರಯಿ

* ಈ ಸೂತ್ರದಿಂದ ಪ್ರಾರಂಭಿಸಿ ೪೦ನೆಯ ಸೂತ್ರದವರೆಗೂ ಮಧ್ವಭಾಷ್ಯದಲ್ಲಿ ಉಭಯಲಿಂಗಾಧಿಕರಣ ಎಂಬ ಅಧಿಕರಣವಾಗಿದೆ.

ಸದೆ, ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಾನೆಯೊ'[1] (ಗೀತಾ ೬ ೧) ಎಂಬಲ್ಲಿಯೂ ಮಾಡಬೇಕೆಂದು ಮೊದಲೇ ತಿಳಿದಿರುವ ಕರ್ಮವನ್ನೇ ವಿದ್ಯೋತ್ಪತ್ತಿಗೆಂದು ಹೇಳಿರುತ್ತದೆ ಆದುದರಿಂದ ಈ ಎರಡು ವಿಧವಾದ ಕರ್ಮಗಳಲ್ಲಿಯೂ ಭೇದವಿಲ್ಲ

ವಿ.—ವಿದ್ಯೆಯ ಅಂಗವಾಗಲಿ ಆಶ್ರಮವಿಹಿತಕರ್ಮವಾಗಲಿ ಆ ಯಜ್ಞಾದಿಗಳೆಲ್ಲ ಒಂದೇ ಆಗಿರುತ್ತವೆ, ಕರ್ಮಸ್ವರೂಪದಲ್ಲಿ ಭೇದವಿಲ್ಲ ಎರಡು ಕಡೆಗಳಲ್ಲಿಯೂ ಶ್ರುತಿಯು ಯಜ್ಞಾದಿ-ಶಬ್ದಗಳನ್ನು ನಾವು ಗುರುತಿಸುವ ಹಾಗೆ ವಿನಿಯೋಗಿಸಿರುತ್ತದೆ ಮತ್ತು ಕರ್ಮಸ್ವರೂಪದಲ್ಲಿ ಭೇದವನ್ನು ಅಂಗೀಕರಿಸಲು ಪ್ರಮಾಣವಿಲ್ಲ

ದ್ವೈ.—'ಸರ್ವಪ್ರಕಾರವಾದ ಪ್ರಯತ್ನವಿದ್ದರೂ ಜ್ಞಾನಯೋಗ್ಯರೇ ಜ್ಞಾನವನ್ನು ಹೊಂದುತ್ತಾರೆ, ಇತರರಲ್ಲ,[2] ಏಕೆಂದರೆ ಸುಜ್ಞಾನ-ದುರ್ಜ್ಞಾನ-ಪ್ರಾಪ್ತಿರೂಪವಾದ ಉಭಯಲಿಂಗವಿದೆ' ಎಂಬುದು ಸೂತ್ರಾರ್ಥ

ಇಂದ್ರ-ವಿರೋಚನರಿಗೆ ಗುರೂಪಸತ್ತಿಪೂರ್ವಕ ಉಪದೇಶವು ಸಮಾನವಾಗಿದ್ದರೂ ವಿರೋಚನನು ವಿಪರೀತಜ್ಞಾನವನ್ನು ಹೊಂದಿದನು, ಇಂದ್ರನು ಸಮ್ಯಕ್-ಜ್ಞಾನವನ್ನು ಪಡೆದನು—ಎಂದು ಶ್ರುತಿಯಿಂದ (ಛಾಂ ೮ ೮ ೭-೮ ಖಂಡಗಳು) ತಿಳಿದುಬರುತ್ತದೆ

## ಅನಭಿಭವಂ ಚ ದರ್ಶಯತಿ ॥ ೩೫ ॥

೩೫ (ರಾಗಾದಿ-ಕ್ಲೇಶಗಳಿಂದ) ಅಭಿಭೂತನಾಗುವುದಿಲ್ಲವೆಂದೂ (ಶ್ರುತಿಯು) ಹೇಳುತ್ತದೆ

ಕರ್ಮಗಳು ವಿದ್ಯೆಗಳಿಗೆ ಸಹಕಾರಿ ಎಂಬುದಕ್ಕೆ ಇನ್ನೊಂದು ಲಿಂಗವನ್ನು ಶ್ರುತಿಯು ತೋರಿಸುತ್ತದೆ ಬ್ರಹ್ಮಚರ್ಯಾದಿ-ಸಾಧನಸಂಪನ್ನನಾದವನಿಗೆ ರಾಗಕ್ಲೇಶಾದಿಗಳ ಹೊಡೆತ ವಿಲ್ಲವೆಂದು ಶ್ರುತಿಯು (ಛಾಂ ೮ ೮ ೫ ೩) ಹೇಳುತ್ತದೆ 'ಯಾವ ಆತ್ಮನನ್ನು ಬ್ರಹ್ಮಚರ್ಯದಿಂದ ಪಡೆದುಕೊಳ್ಳುವನೊ ಅವನು ನಾಶವಾಗುವುದಿಲ್ಲ'[3] ಆದುದರಿಂದ ಯಜ್ಞಾದಿಗಳು ಆಶ್ರಮಕರ್ಮಗಳೂ ಆಗಿರುತ್ತವೆ, ವಿದ್ಯಾಸಹಕಾರಿಗಳೂ ಆಗಿರುತ್ತವೆ ಎಂಬುದು ನಿಶ್ಚಿತವಾಯಿತು

ವಿ.—'(ವಿದ್ಯೆಯು) ಅಭಿಭೂತವಾಗುವುದಿಲ್ಲವೆಂದು ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ

---

[1] ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।

[2] ಸರ್ವಪ್ರಕಾರೇಣೋತ್ಸಾಹೇಽಪಿ ಯೇ ಜ್ಞಾನಯೋಗ್ಯಾಸ್ತ ಏವ ಜ್ಞಾನಂ ಪ್ರಾಪ್ನುವಂತಿ ನಾನ್ಯೇ (ಮ ಭಾ )

[3] ಏಷ ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿಂದತೇ ।

'ಕರ್ಮಾನುಷ್ಠಾನದಿಂದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ'[1] ಇದೇ ಮೊದಲಾದ ಶ್ರುತಿಗಳು ಯಜ್ಞಾದಿ-ಧರ್ಮಾನುಷ್ಠಾನದಿಂದ ವಿದ್ಯೋತ್ಪತ್ತಿಗೆ ಪ್ರತಿಬಂಧಕವಾದ ಪಾಪವನ್ನು ಹೋಗಲಾಡಿಸಿಕೊಳ್ಳುವನು ಎಂದು ಹೇಳುತ್ತದೆ. ಪ್ರತಿದಿನವೂ ಅನುಷ್ಠಾನಮಾಡುತ್ತಿರುವ ಯಜ್ಞಾದಿಕರ್ಮಗಳು ಅಂತಃಕರಣವನ್ನು ಶುದ್ಧಿಮಾಡುತ್ತವೆ; ಅಂತಃಕರಣಶುದ್ಧಿಯಿಂದ ಜ್ಞಾನವು ಇನ್ನೂ ಹೆಚ್ಚು ಪ್ರಕಾಶದಿಂದ ಮನಸ್ಸಿನಲ್ಲಿ ಉತ್ಪನ್ನವಾಗುತ್ತದೆ.

ದ್ವೈ.—'ಸ್ವಭಾವದ ಅನಭಿಭವವನ್ನು ಶ್ರುತಿಯು ತಿಳಿಸುತ್ತದೆ' ಎಂಬುದು ಸೂತ್ರಾರ್ಥ.

'ದೇವತೆಗಳು ದೈವೀಸಂಪತ್ತನ್ನು ಪಡೆಯುತ್ತಾರೆ, ಅಸುರರು ಆಸುರೀ-ಸಂಪತ್ತನ್ನು ಪಡೆಯುತ್ತಾರೆ; ಈ ಎರಡರ ಸ್ವಭಾವದಲ್ಲಿ ಅಭಿಭವವೇ ಇಲ್ಲ; ಏಕೆಂದರೆ ಸ್ವಭಾವವೇ ನಿಲ್ಲುತ್ತದೆ' ಎಂದು ಸ್ವಭಾವದ ಅನಭಿಭವವನ್ನು ಶ್ರುತಿಯು ಹೇಳುತ್ತದೆ.[2]

---

[1] ಧರ್ಮೇಣ ಪಾಪಮಪನುದತಿ।

[2] ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾ ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠಂತ ಇತಿ ಸ್ವಭಾವಾನಭಿಭವಂ ಚ ದರ್ಶಯತಿ (ಮ. ಭಾ.).

## ೯. ವಿಧುರಾಧಿಕರಣ

(ಸೂ ೩೬–೩೯)

**ಅಂತರಾ ಚಾಪಿ ತು ತದ್ದೃಷ್ಟೇಃ ॥ ೩೬ ॥**

೩೬. ಆದರೆ ಮಧ್ಯದಲ್ಲಿ (ಇರುವವರಿಗೂ ವಿದ್ಯಾಧಿಕಾರವುಂಟು), ಏಕೆಂದರೆ (ಶ್ರುತಿಯಲ್ಲಿ) ಹಾಗೆ ಕಂಡುಬರುತ್ತದೆ

ವಿಧುರರೇ ಮೊದಲಾದವರಿಗೆ ಮತ್ತು ದ್ರವ್ಯಾದಿ-ಸಂಪದ್ರಹಿತರಾಗಿ ಆಶ್ರಮಪ್ರಾಪ್ತಿಯಿಲ್ಲದೆ ಮಧ್ಯದಲ್ಲಿರುವವರಿಗೆ ವಿದ್ಯಾಧಿಕಾರವು ಇದೆಯೊ ಅಥವಾ ಇಲ್ಲವೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಅವರಿಗೆ ವಿದ್ಯೆಯಲ್ಲಿ ಅಧಿಕಾರವಿಲ್ಲ ; ಏಕೆಂದರೆ ಆಶ್ರಮ-ಕರ್ಮಗಳು ವಿದ್ಯೆಗೆ ಹೇತುವಾಗಿರುತ್ತವೆಯೆಂದು ನಿಶ್ಚಯವಾಗಿರುತ್ತದೆ ಮತ್ತು ಇವರಿಗೆ ಆಶ್ರಮಕರ್ಮವು ಸಂಭವಿಸುವುದಿಲ್ಲ.

**ಸಿದ್ಧಾಂತಿ**—ಅನಾಶ್ರಮಿಯಾಗಿದ್ದರೂ ವಿದ್ಯೆಗೆ ಅಧಿಕಾರಿಯಾಗಿರುತ್ತಾನೆ ; ಏಕೆಂದರೆ ಗೃಹಸ್ಥನಾದದ ರೈಕ್ವ, ಸ್ತ್ರೀಯಾದ ವಾಚಕ್ನವಿ ಮೊದಲಾದವರು ಬ್ರಹ್ಮಜ್ಞಾನಿಗಳಾಗಿದ್ದರೆಂದು ಶ್ರುತಿಯಲ್ಲಿ ಕಂಡುಬರುತ್ತದೆ.

**ವಿ.**—ಅನಾಶ್ರಮಿಗಳಿಗೂ ವಿದ್ಯೆಯಲ್ಲಿ ಅಧಿಕಾರವಿದೆ ; ಏಕೆಂದರೆ ರೈಕ್ವ, ಭೀಷ್ಮ, ಸಂವರ್ತ—ಇವರೇ ಮೊದಲಾದ ಅನಾಶ್ರಮಿಗಳು ಬ್ರಹ್ಮವಿದ್ಯಾನಿಷ್ಠರಾಗಿದ್ದರೆಂದು ಶ್ರುತಿಗಳಿಂದ ತಿಳಿದುಬರುತ್ತದೆ. ಆಶ್ರಮಧರ್ಮಗಳೇ ವಿದ್ಯೆಯನ್ನು ಅನುಗ್ರಹಿಸುತ್ತವೆಯೆಂದು ಹೇಳಲಾಗುವುದಿಲ್ಲ; ಏಕೆಂದರೆ ಶ್ರುತಿಯು (ಬೃ. ಉ. ೪ ೪. ೨೨) ಆಶ್ರಮಕ್ಕೆ ಸೇರದ ದಾನಾದಿಗಳೂ ಕೂಡ ವಿದ್ಯೆಗೆ ಅನುಗ್ರಾಹಕವಾಗಿರುತ್ತವೆಂದು ತಿಳಿಸುತ್ತದೆ.

**ದ್ವೈ.**—'ಸಮ್ಯಕ್-ಜ್ಞಾನ, ವಿಪರೀತಜ್ಞಾನ—ಇವುಗಳ ಮಧ್ಯದಲ್ಲಿ ನಿಂತಿರುವವರಿಗೂ ಮಿಶ್ರಜ್ಞಾನದಲ್ಲಿ ಅವಸ್ಥಿತಿಯು ; ಎಂದರೆ ದೇವಾಸುರಭಾವಗಳನ್ನು ಹೊಂದುತ್ತಾರೆ. ಈ ಸ್ವಭಾವದ ದಾರ್ಢ್ಯವು ದೃಷ್ಟವಾಗಿದೆ'[1]—ಎಂಬುದು ಸೂತ್ರಾರ್ಥ.

**ಅಪಿ ಚ ಸ್ಮರ್ಯತೇ ॥ ೩೭ ॥**

೩೭. ಮತ್ತೆ ಸ್ಮೃತಿಯೂ ಹೇಳುತ್ತದೆ.

---

[1] ಸಮ್ಯಕ್‌ಜ್ಞಾನವಿಪರೀತಜ್ಞಾನಯೋರಂತರಾ ಸ್ಥಿತಾನಾಮಪಿ ದೇವಾಸುರಭಾವಯೋ-ರ್ದಾರ್ಢ್ಯದೃಷ್ಟೇಃ (ಮ. ಭಾ.).

ಸಂವರ್ತನೇ ಮೊದಲಾದವರು ನಗ್ನಚರ್ಯಾದಿಯೋಗದಿಂದ ಆಶ್ರಮ ಕರ್ಮಗಳನ್ನು ಅಪೇಕ್ಷಿಸದಿದ್ದರೂ ಮಹಾಯೋಗಿತ್ವವನ್ನು ಪಡೆದರೆಂದು ಇತಿಹಾಸದಲ್ಲಿ ಸ್ಮೃತವಾಗಿದೆ

**ವಿ.**—ಅನಾಶ್ರಮಿಗಳೂ ಕೂಡ ಜಪಾದಿಗಳಿಂದ ವಿದ್ಯಾನುಗ್ರಹವನ್ನು ಪಡೆಯುತ್ತಾರೆಂದು ಸ್ಮೃತಿಯು (ಮ ಸ್ಮೃ ೨ ೨ ೧೭) ತಿಳಿಸುತ್ತದೆ 'ಜಪದಿಂದಲೂ ಬ್ರಾಹ್ಮಣನು ಸಂಸಿದ್ಧಿಯನ್ನು ಹೊಂದುತ್ತಾನೆ, ಇದರಲ್ಲಿ ಸಂಶಯವಿಲ್ಲ ಇತರ ಕರ್ಮಗಳನ್ನು ಮಾಡಲಿ ಅಥವಾ ಮಾಡದಿರಲಿ, ಮೈತ್ರಿಯುಳ್ಳವನು ಬ್ರಾಹ್ಮಣ ಎನಿಸುತ್ತಾನೆ[1]

**ದ್ವೈ.**—ಆಸುರರು ಆಸುರ-ಸ್ವಭಾವದಿಂದಲೂ ಖಂಡಿತವಾಗಿ ತಮಸ್ಸಿಗೆ ಹೋಗುತ್ತಾರೆ ದೇವತೆಗಳು ದೈವಸ್ವಭಾವದಿಂದಲೂ, ಕರ್ಮದಿಂದಲೂ ಸಮ್ಯಕ್-ಜ್ಞಾನದಿಂದಲೂ ವಿಷ್ಣುಪದವನ್ನು ಹೊಂದುತ್ತಾರೆ ಯಾವ ಕಾಲದಲ್ಲಿಯೂ ದೇಶದಲ್ಲಿಯೂ ಇವರ ಸ್ವಭಾವಗಳು ಬದಲಾಗುವುದಿಲ್ಲ ಮನುಷ್ಯರು ಮಿಶ್ರಿತವಾದ ಮತಿಗಳುಳ್ಳವರೂ ಗತಿಗಳುಳ್ಳವರೂ ಆಗಿರುತ್ತಾರೆ—ಎಂದು ಸ್ಕಂದಪುರಾಣದಲ್ಲಿ ಹೇಳಿದೆ ಇದರಿಂದ ತ್ರಿವಿಧ-ಜೀವರಿಗೆ ಅಂಥ ಸ್ವಭಾವವಿದೆ ಎಂಬುದು ಸಿದ್ಧವಾಗುತ್ತದೆ

## ವಿಶೇಷಾನುಗ್ರಹಶ್ಚ ॥ ೩೮ ॥

೩೮. (ಧರ್ಮ) ವಿಶೇಷಗಳಿಂದಲೂ (ವಿದ್ಯೆಯ) ಅನುಗ್ರಹವು (ಆಗಬಹುದಾಗಿದೆ)

ವಿಧುರಾದಿಗಳಿಗೂ ತಮ್ಮ ಅವಸ್ಥೆಗೆ ವಿರುದ್ಧವಲ್ಲದ ಮತ್ತು ಪುರುಷಸಾಮಾನ್ಯಕ್ಕೆ ಸಾಧ್ಯವಾದ ಜಪ, ಉಪವಾಸ, ದೇವತಾರಾಧನೆ—ಇವೇ ಮೊದಲಾದ ಧರ್ಮಗಳಿಂದ ವಿದ್ಯೆಯ ಅನುಗ್ರಹವು ಆಗಬಹುದಾಗಿದ ಆದುದರಿಂದಲೇ ಸ್ಮೃತಿಯು (ಮ ಸ್ಮೃ ೨ ೮ ೭) ಆಶ್ರಮಕರ್ಮವನ್ನು ಹೊಂದದವನಿಗೂ ಜಪ್ಯದಲ್ಲಿ ಅಧಿಕಾರವನ್ನು ಹೇಳಿರುತ್ತದೆ ಜನ್ಮಾಂತರದಲ್ಲಿ ಮಾಡಿದ ಆಶ್ರಮಕರ್ಮಗಳಿಂದಲೂ ವಿದ್ಯೆಯ ಅನುಗ್ರಹವು ಆಗುತ್ತದೆಂದು ಗೀತೆಯು (೬ ೪೫) ಹೇಳುತ್ತದೆ 'ಅನೇಕ ಜನ್ಮಗಳಿಂದ ಸಿದ್ಧಿಯನ್ನು ಹೊಂದಿದವನು ಅನಂತರ ಪರಮಗತಿಯನ್ನು ಹೊಂದುತ್ತಾನೆ'[2] ಇದಲ್ಲದೆ ವಿದ್ಯೆಗೆ ಅವಿದ್ಯಾನಿವೃತ್ತಿಯೆಂಬ ದೃಷ್ಟಪ್ರಯೋಜನವಿರುವುದರಿಂದ ಪ್ರತಿಬಂಧವಿಲ್ಲದಿದ್ದರೆ ಅರ್ಥಿಯಾದವನು ಶ್ರವಣಾದಿಗಳಲ್ಲಿ ಅಧಿಕಾರಿಯಾಗುತ್ತಾನೆ ಆದುದರಿಂದ ವಿಧುರಾದಿಗಳಿಗೂ ವಿದ್ಯೆಯಲ್ಲಿ ಅಧಿಕಾರವಿದೆ

---

[1] ಜಪ್ಯೇನಾಪಿ ಚ ಸಂಸಿಧ್ಯೇದ್ಬ್ರಾಹ್ಮಣೋ ನಾತ್ರ ಸಂಶಯ । ।
ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥

[2] ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ।

ವಿ.—ನ್ಯಾಯಸ್ಮೃತಿಗಳಲ್ಲದೆ ಶ್ರುತಿಯೂ ಕೂಡ ಆಶ್ರಮಕ್ಕೆ ನಿಯತವಾಗದೆ ಧರ್ಮವಿಶೇಷಗಳಿಂದ ವಿದ್ಯಾನುಗ್ರಹವಾಗುತ್ತದೆಂದು ತಿಳಿಸುತ್ತದೆ: 'ತಪಸ್ಸಿನಿಂದೂ, ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ ಆತ್ಮನನ್ನು ಅನ್ವೇಷಿಸಬೇಕು'[1] (ಪ್ರ. ಉ. ೧. ೧೦).

**ದ್ವೈ.—ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್** ಎನ್ನುವ ಶ್ರುತಿಯು ಪರಮೇಶ್ವರನ ವಿಶೇಷಾನುಗ್ರಹವನ್ನು ದೇವತೆಗಳಲ್ಲಿ ತೋರಿಸುತ್ತದೆ.

**ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ॥ ೩೯ ॥**

೩೯ ಅದಕ್ಕಿಂತ ಇನ್ನೊಂದು ಒಳ್ಳೆಯದು; ಏಕೆಂದರೆ ಲಿಂಗವಿದೆ.

ಹೀಗೆ ಎರಡು ಆಶ್ರಮಗಳ ಮಧ್ಯದಲ್ಲಿ ಇರುವುದಕ್ಕಿಂತ ಒಂದು ಆಶ್ರಮದಲ್ಲಿರುವುದು ವಿದ್ಯೆಗೆ ಸಾಧನವಾಗಿರುತ್ತದೆ; ಏಕೆಂದರೆ ಶ್ರುತಿಸ್ಮೃತಿಗಳು ಹಾಗೆ ಹೇಳುತ್ತವೆ: 'ಪುಣ್ಯವನ್ನು ಮಾಡಿದವನೂ, ಪರಮಾತ್ಮನ ತೇಜಸ್ಸಿನಲ್ಲಿ ಏಕೀಭೂತನೂ ಆದ ಬ್ರಹ್ಮವಿದನು ಈ ಮಾರ್ಗದಿಂದ ಹೋಗುತ್ತಾನೆ'[2] (ಬೃ. ಉ. ೪. ೪. ೯); 'ದ್ವಿಜನಾದವನು ಒಂದು ದಿನವೂ ಕೂಡ ಅನಾಶ್ರಮಿಯಾಗಿರಕೂಡದು';[3] 'ಒಂದು ಸಂವತ್ಸರದ ವರೆಗೂ ಅನಾಶ್ರಮಿಯಾಗಿದ್ದರೆ ಕೃಚ್ಛ್ರವನ್ನು ಮಾಡಬೇಕು.'[4]

ವಿ.—ಅನಾಶ್ರಮಿತ್ವಕ್ಕಿಂತ ಆಶ್ರಮಿತ್ವವೇ ಒಳ್ಳೆಯದು. ಅನಾಶ್ರಮಿತ್ವವು ಆಪತ್ತಿನಿಂದ ಉಂಟಾಗಬಹುದು; ಆದರೆ ಶಕ್ತನಾದವನು ಆಶ್ರಮದಲ್ಲಿದ್ದರೆ ಒಳ್ಳೆಯದಾಗುತ್ತದೆ.

**ದ್ವೈ.**—'(ಆಸುರೀಪ್ರಕೃತಿಯವರು ತಮ್ಮ ಸ್ವಭಾವವನ್ನು ಬದಲಾಯಿಸಿಕೊಂಡು ದೈವಸ್ವಭಾವನನ್ನು ಹೊಂದಲಾರರು); ಆದುದರಿಂದಲೇ ದೇವತೆಗಳ ಸಮುದಾಯಕ್ಕಿಂತ ಅಸುರರ ಸಮುದಾಯವೇ ಹೆಚ್ಚಾಗಿರುತ್ತದೆ;[5] ಇದು ಶ್ರುತಿಸ್ಮೃತಿಗಳಿಂದ ತಿಳಿದುಬರುತ್ತದೆ ಎಂಬುದು ಸೂತ್ರಾರ್ಥ.

'ಆದುದರಿಂದ ಆ ಜನದ ಹತ್ತಿರ ಹೋಗಕೂಡದು' (ಬೃ. ಉ ೧. ೩. ೧೦), 'ದೇವತೆಗಳು ಅಲ್ಪಸಂಖ್ಯಾಕರೇ, ಅಸುರರು ಬಹುಸಂಖ್ಯಾಕರು' (ಬೃ. ಉ. ೧. ೩. ೧) ಎಂಬುದು ಶ್ರುತಿಲಿಂಗವು; 'ಅಸುರರು ಬಹುವಾಗಿರುವುದರಿಂದ ಆ ಜನದ ಹತ್ತಿರ ಹೋಗಕೂಡದು' ಎಂದು ಬ್ರಹ್ಮಪುರಾಣವು ಹೇಳುತ್ತದೆ.

---

[1] ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾಽಽತ್ಮಾನಮನ್ವಿಷೇತ್ ಇತಿ (ಶ್ರೀಭಾಷ್ಯ).

[2] ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ ಇತಿ ।

[3] ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ ।

[4] ಸಂವತ್ಸರಮನಾಶ್ರಮೀ ಸ್ಥಿತ್ವಾ ಕೃಚ್ಛ್ರಮೇಕಂ ಚರೇತ್ ।

[5] ದೇವಭಾಗಾದಸುರಭಾಗ ಏವ ಬಹುಲಃ (ಮ. ಭಾ.).

## ೧೦. ತದ್ಭೂತಾಧಿಕರಣ*

**ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾ-ಭಾವೇಭ್ಯಃ ॥ ೪೦ ॥**

೪೦. ಅದಾಗಿರುವವನಿಗೆ ಜೈಮಿನಿಯ ಮತದಲ್ಲಿಯೂ ಅತದ್ಭಾವವಿಲ್ಲ; ಏಕೆಂದರೆ ನಿಯಮ, ಅತದ್ರೂಪ, ಅಭಾವ—ಇವುಗಳಿವೆ

ಊರ್ಧ್ವರೇತಸ್ಕನ ಆಶ್ರಮವನ್ನು ಹೊಂದಿದವನು ಯಾವುದಾದರೊಂದು ಕಾರಣದಿಂದ ಚ್ಯುತನಾಗಬಹುದೊ ಅಥವಾ ಇಲ್ಲವೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಪೂರ್ವಾಶ್ರಮದ ಕರ್ಮಗಳನ್ನು ಅನುಷ್ಠಾನಮಾಡಬೇಕೆಂಬ ಆಶೆಯಿಂದಲೊ ಅಥವಾ ರಾಗಾದಿವಶದಿಂದಲೋ ಚ್ಯುತನಾಗಬಹುದು; ಏಕೆಂದರೆ ಆ ಆಶ್ರಮಗಳಲ್ಲಿ ಯಾವ ವಿಶೇಷವೂ ಇಲ್ಲ.

**ಸಿದ್ಧಾಂತಿ**—ಅದಾಗಿರುವನಿಗೆ ಎಂದರೆ ಊರ್ಧ್ವರೇತೋಭಾವವನ್ನು ಪಡೆದವನಿಗೆ, ಅತದ್ಭಾವವಿಲ್ಲ ಎಂದರೆ ಚ್ಯುತಿಯಿಲ್ಲ; ಏಕೆಂದರೆ ನಿಯಮ, ಅತದ್ರೂಪ, ಅಭಾವ—ಇವುಗಳಿವೆ. 'ಆಚಾರ್ಯಗೃಹದಲ್ಲಿ ತನ್ನ ಶರೀರವನ್ನು ಸವೆಯಿಸುತ್ತಿರುವ ಬ್ರಹ್ಮಚಾರಿಯು' (ಛಾಂ. ಉ. ೨. ೨೩. ೧), 'ಅವನು ಅರಣ್ಯಕ್ಕೆ ಹೋಗಬೇಕು, ಅವನು ಅಲ್ಲಿಂದ ಹಿಂತಿರುಗಕೂಡದು',[2] 'ಆಚಾರ್ಯನಿಂದ ಅನುಜ್ಞೆಯನ್ನು ಪಡೆದು ನಾಲ್ಕರಲ್ಲಿ ಒಂದು ಆಶ್ರಮವನ್ನು ಶರೀರಪಾತದ ವರೆಗೂ ವಿಧಿವತ್ತಾಗಿ ಅನುಷ್ಠಿಸುತ್ತಿರಬೇಕು'[3]—ಎಂಬೀ ಜಾತಿಯ ನಿಯಮವು ಪತನವಾಗಲಾರದೆಂಬುದನ್ನು ತಿಳಿಸುತ್ತದೆ. 'ಬ್ರಹ್ಮಚರ್ಯದಿಂದಲೇ ಪ್ರವ್ರಜನ ಮಾಡಬೇಕು' (ಜಾ. ಉ. ೪) ಎಂಬಿದೇ ಮೊದಲಾದ ಆರೋಹ-ವಚನಗಳಿರುವಂತೆ ಅವರೋಹ-ವಚನಗಳಿಲ್ಲ. ಹೀಗೆ ಶಿಷ್ಟಾಚಾರಗಳೂ ಇಲ್ಲ. ಪೂರ್ವಾಶ್ರಮ-ಕರ್ಮಗಳನ್ನು ಚೆನ್ನಾಗಿ ಅನುಷ್ಠಾನಮಾಡಬೇಕೆಂಬ ಇಚ್ಛೆಯಿಂದ ಇಳಿಯಬಹುದು—ಎಂಬ ಪೂರ್ವಪಕ್ಷವು ಸರಿಯಲ್ಲ; ಏಕೆಂದರೆ 'ಗುಣವಿಲ್ಲದ ಸ್ವಧರ್ಮವು ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಶ್ರೇಯಸ್ಕರವಾದದ್ದು'[4] (ಗೀತಾ ೭. ೩೫) ಎಂದು ಸ್ಮೃತಿಯು ಹೇಳುತ್ತದೆ. ಧರ್ಮಕ್ಕೆ ಚೋದನೆಯೇ ಪ್ರಮಾಣವಾದುದರಿಂದ ಯಾವನಿಗೆ ಯಾವುದನ್ನು

---

* ಶ್ರೀಭಾಷ್ಯದ ಪ್ರಕಾರ ಈ ಅಧಿಕರಣವು ನಾಲ್ಕು ಸೂತ್ರಗಳನ್ನು (೪೦—೪೩) ಒಳಕೊಂಡಿದೆ.

[1] ಅತ್ಯಂತಮಾತ್ಮಾನಮಾಚಾರ್ಯಕುಲೇಽವಸಾದಯನ್ ।

[2] ಅರಣ್ಯಮಿಯಾದಿತಿ ಪದಂ ತತೋ ನ ಪುನರೇಯಾದಿತ್ಯುಪನಿಷತ್ ।

[3] ಆಚಾರ್ಯೇಣಾಭ್ಯನುಜ್ಞಾತಶ್ಚತುರ್ಣಾಮೇಕಮಾಶ್ರಮಮ್ ।
ಆ ವಿಮೋಕ್ಷಾಚ್ಛರೀರಸ್ಯ ಸೋಽನುತಿಷ್ಠೇದ್ಯಥಾವಿಧಿ ॥

[4] ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।

ವಿಧಿಸಿರುವುದೊ ಅದು ಅವನ ಧರ್ಮವೇ ಹೊರತು ಯಾವನಿಗೆ ಯಾವುದನ್ನು ಚೆನ್ನಾಗಿ ಮಾಡುವುದಕ್ಕೆ ಆಗುತ್ತದೆಯೋ ಅದು ಅವನ ಧರ್ಮವಲ್ಲ.[1] ರಾಗಾದಿಗಳ ವಶದಿಂದಲೂ ಪತಿತನಾಗುವಂತಿಲ್ಲ ; ಏಕೆಂದರೆ ನಿಯಮಶಾಸ್ತ್ರವು ಅದಕ್ಕಿಂತ ಬಲವಾಗಿರುತ್ತದೆ. 'ಸೂತ್ರದಲ್ಲಿರುವ ಅಪಿ-ಶಬ್ದವು ಜೈಮಿನಿ-ಬಾದರಾಯಣರಿಬ್ಬರಿಗೂ ಈ ಮತದಲ್ಲಿ ಸಮ್ಮತಿಯಿದೆ ಯೆಂದು ತಿಳಿಸುತ್ತದೆ. ಇದರಿಂದ ಸೂತ್ರಕಾರರ ಮತವು ಇನ್ನೂ ದೃಢವಾಗುತ್ತದೆ

ವಿ.—ನೈಷ್ಠಿಕ ವೈಖಾನಸ ಪರಿವ್ರಾಜಕ—ಇವೇ ಮೊದಲಾದ ಅವಸ್ಥೆಗಳಿಂದ ಚ್ಯುತರಾದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆಯೊ ಅಥವಾ ಇಲ್ಲವೊ ?—ಎಂಬುದು ಸಂಶಯ. ಅವರಿಗೂ ವಿಧುರಾದಿಗಳಂತೆ ಜ್ಞಾನದಲ್ಲಿ ಅಧಿಕಾರವಿದೆ ; ಏಕೆಂದರೆ ದಾನಾದಿಗಳಿಂದ ವಿದ್ಯೆಯು ಅವರಲ್ಲಿಯೂ ಉತ್ಪನ್ನವಾಗಬಹುದು—ಎಂಬುದು ಪೂರ್ವಪಕ್ಷ. ನೈಷ್ಠಿಕಾದಿ ಆಶ್ರಮಗಳಲ್ಲಿ ನಿಷ್ಠವಾದವನು ಅನಾಶ್ರಮಿಯಾಗಲಾರನು—ಎಂಬುದು ಸಿದ್ಧಾಂತ ; ಏಕೆಂದರೆ ಶಾಸ್ತ್ರವು ನೈಷ್ಠಿಕಾದಿ-ಆಶ್ರಮಗಳನ್ನು ಪ್ರವೇಶಿಸಿರುವವರನ್ನು ಸ್ವಾಶ್ರಮಧರ್ಮಗಳಿಂದ ನಿವೃತ್ತರಾಗದಂತೆ ನಿಯಮಿಸುತ್ತದೆ.

ದ್ವೈ.—'ಅಸುರತ್ವವನ್ನು ಹೊಂದಿದವನಿಗೆ ಅಸುರಭಾವವು, ದೇವತ್ವವನ್ನು, ಹೊಂದಿದವನಿಗೆ ದೇವಭಾವವು—ಎಂಬುದು ಜೈಮಿನಿಗೂ ಸಿದ್ಧವಾಗಿದೆ ;[2] ಇದು ನಿಯಮ ಶ್ರುತಿಯಿಂದಲೂ ಅತದ್ರೂಪತ್ವ-ಶ್ರುತಿಯಿಂದಲೂ ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ.

'ಅಸುರರು ದೇವಭಾವವನ್ನು ಹೊಂದಲಾರರು, ದೇವತೆಗಳು ಅಸುರಭಾವವನ್ನು ಹೊಂದಲಾರರು ; ಮನುಷ್ಯರು ಇವೆರಡರಲ್ಲಿ ಯಾವುದನ್ನೂ ಹೊಂದಲಾರರು, ತಮ್ಮ ಸ್ವಭಾವವನ್ನೇ ಹೊಂದುತ್ತಾರೆ' ಎಂಬುದು ನಿಯಮ-ಶ್ರುತಿ. ಅಸುರರು 'ದೇವರೂಪವನ್ನು ಹೊಂದಲಾರು;ದೇವತೆಗಳು ಅಸುರರೂಪವನ್ನು ಹೊಂದಲಾರರು ; ಮನುಷ್ಯರು ಎರಡನ್ನೂ ಹೊಂದಲಾರರು. ಯಾರಿಗೆ ಯಾವ ರೂಪವಿರುತ್ತದೆಯೊ ಅದು ಅವನ ನಿಜವಾದ ರೂಪ' ಎಂಬುದು ಅತದ್ರೂಪತ್ವ-ಶ್ರುತಿ. ಈ ಶ್ರುತಿಯ ಪ್ರಕಾರ ಒಬ್ಬನು ತನ್ನ ರೂಪವನ್ನು ಕಳೆದುಕೊಂಡು ಬೇರೊಂದು ರೂಪವನ್ನು ಹೊಂದುವುದಿಲ್ಲ.

---

[1] ಯೋ ಹಿ ಯಂ ಪ್ರತಿ ವಿಧೀಯತೇ ಸ ತಸ್ಯ ಧರ್ಮೋ ನ ತು ಯೋ ಯೇನ ಸ್ವನುಷ್ಠಾತುಂ ಶಕ್ಯತೇ । ಚೋದನಾಲಕ್ಷಣತ್ವಾದ್ಧರ್ಮಸ್ಯ (ಸೂ. ಭಾ.).

[2] ಅಸುರಜಾತೇರೇವಾಸುರತ್ವಂ, ದೇವಜಾತೇರೇವ ದೇವತ್ವಂ ಜೈಮಿನೇರಪಿ ಸಿದ್ಧಮೇವ (ಮ. ಭಾ.).

## ೧೧. ಅಧಿಕಾರಾಧಿಕರಣ*

(ಸೂ ೪೧–೪೨)

**ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್† ॥ ೪೧ ॥**

೪೧ ಅಧಿಕಾರ-ಲಕ್ಷಣದಲ್ಲಿ ವಿಧಿಸಿರುವ ಪ್ರಾಯಶ್ಚಿತ್ತವು ಇವನಿಗಿಲ್ಲ, ಏಕೆಂದರೆ ಪತನ-ಸ್ಮೃತಿಯಿರುವುದರಿಂದ ಅದೂ ಆಗಲಾರದು

ನೈಷ್ಠಿಕಬ್ರಹ್ಮಚಾರಿಯು ವ್ಯಭಿಚಾರಿಯಾದರೆ, 'ವ್ಯಭಿಚಾರಿಯಾದ 'ಬ್ರಹ್ಮ-ಚಾರಿಯು ನಿರ್ಋತಿ-ದೇವತಾಕವಾದ ಕತ್ತೆಯನ್ನು ಬಲಿಕೊಡಬೇಕು'[1] ಎಂಬ ವಾಕ್ಯದ ಪ್ರಕಾರ ಪ್ರಾಯಶ್ಚಿತ್ತವು ಆಗಬಹುದೊ ಅಥವಾ ಇಲ್ಲವೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಅವನಿಗೆ ಪ್ರಾಯಶ್ಚಿತ್ತವಿಲ್ಲ, ಏಕೆಂದರೆ ಪೂರ್ವಮೀಮಾಂಸೆಯ ಅಧಿಕಾರಲಕ್ಷಣದಲ್ಲಿ (ಜೈ ಸೂ ೬ ೮ ೨೧) ಪ್ರಾಯಶ್ಚಿತ್ತವನ್ನು ನಿರ್ಣಯಿಸಿದ್ದರೂ ಅದು ನೈಷ್ಠಿಕನಿಗೆ ಆಗಲಾರದು, ಏಕೆಂದರೆ 'ನೈಷ್ಠಿಕಧರ್ಮದಲ್ಲಿ ಆರೂಢನಾದ ಯಾವನು ಪುನಃ ಪ್ರಚ್ಯುತನಾಗುತ್ತಾನೊ ಅಂಥ ಆತ್ಮಘ್ನನು ಶುದ್ಧನಾಗುವ ಪ್ರಾಯಶ್ಚಿತ್ತವನ್ನೇ ಕಾಣೆನು'[2] ಎಂಬ ಸ್ಮೃತಿಯ ಪ್ರಕಾರ—ತಲೆಯನ್ನು ಕತ್ತರಿಸಿಕೊಂಡವನ ಹಾಗೆ—ಇದಕ್ಕೆ ಯಾವ ಪ್ರತಿಕ್ರಿಯೆಯೂ ಇಲ್ಲ ಆದರೆ ಅಧ್ಯಯನಕ್ಕಾಗಿ ಬ್ರಹ್ಮಚಾರಿಯಾಗಿರುವವನಿಗೆ ಇಂತಹ ಸ್ಮೃತಿಯಿಲ್ಲದಿರುವುದರಿಂದ ಅವನಿಗೆ ಆ ಪ್ರಾಯಶ್ಚಿತ್ತವು ಹೊಂದುತ್ತದೆ

**ವಿ.**—ಅಧಿಕಾರಲಕ್ಷಣದಲ್ಲಿ ಹೇಳಿರುವ ಪ್ರಾಯಶ್ಚಿತ್ತವು ಇತರ ಬ್ರಹ್ಮಚಾರಿಗಳಿಗೆ ಮಾತ್ರ ಸಂಭವಿಸುತ್ತದೆ

**ದ್ವೈ.**—'ಆ ಬ್ರಹ್ಮಾದಿಗಳ ಪದವನ್ನೂ ಕೂಡ ಬಯಸಕೂಡದು ; ಏಕೆಂದರೆ ಪತನವನ್ನು ಅನುಮಾನಿಸಬಹುದು ಮತ್ತು ಅದು ಯೋಗ್ಯವಲ್ಲ' ಎಂಬುದು ಸೂತ್ರಾರ್ಥ

ಬ್ರಹ್ಮಾದಿಗಳ ಪದವನ್ನೂ ಕೂಡ ಬಯಸಕೂಡದು ಹೀಗಿರುವಾಗ ಪರಮಾತ್ಮನಿಗೆ ಸೇರಿದುದುದನ್ನು ಬಯಸಕೂಡದು ಎಂಬುದನ್ನು ಸೂಚಿಸಲು ಸೂತ್ರದಲ್ಲಿರುವ ಅಪಿ-

---

* ಮಧ್ವಭಾಷ್ಯದ ಪ್ರಕಾರ ಈ ಅಧಿಕರಣವು ೪೩ನೆಯ ಸೂತ್ರವನ್ನೂ ಒಳಗೊಂಡಿದೆ

† ಶಾಂಕರಭಾಷ್ಯದ ಪ್ರಕಾರ ಈ ಸೂತ್ರವು ಪೂರ್ವಪಕ್ಷವನು ತಿಳಿಸುತ್ತದೆ.

[1] ಬ್ರಹ್ಮಚಾರ್ಯವಕೀರ್ಣೀ ನೈರ್ಋತಂ ಗರ್ದಭಮಾಲಭೇತ ।

[2] ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ ।
ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುಧ್ಯೇತ್ ಸ ಆತಹಾ ॥

ಶಬ್ದವು ಬಂದಿದೆ.[1] ತನ್ನ ಶಕ್ತಿಯನ್ನು ಮೀರಿ ಹತ್ತುವವನು ಕೆಳಗೆ ಬೀಳುವಂತೆ ಇಲ್ಲಿಯೂ ಪತನವು ಅನುಮಿತವಾಗಿರುತ್ತದೆ.

**ಉಪಪೂರ್ವಮಪಿ ತ್ವೇಕೇ ಭಾವಮಶನವತ್ ತದುಕ್ತಮ್* || ೪೨ ||**

೪೨. ಕೆಲವರು (ಇದನ್ನು) ಉಪಪಾತಕವೆಂದು (ಹೇಳುತ್ತಾರೆ; ಆದುದರಿಂದ ಇದಕ್ಕೆ ಪ್ರಾಯಶ್ಚಿತ್ತ)ವಿದೆ; (ಇದು) ಅಶನದಂತೆ. ಹಾಗೆ (ಪ್ರಮಾಣ-ಲಕ್ಷಣದಲ್ಲಿ) ಹೇಳಿದೆ.

**ಸಿದ್ಧಾಂತಿ**—ಕೆಲವರು ಆಚಾರ್ಯರು ಇದು ಉಪಪಾತಕವೆಂದೇ ಅಭಿಪ್ರಾಯ ಪಡುತ್ತಾರೆ. ನೈಷ್ಠಿಕ-ಬ್ರಹ್ಮಚಾರಿಗೆ ಗುರುತಲ್ಪಾದಿಗಳ ಹೊರತು ಇತರ ಕಾರಣಗಳಿಂದ ಬ್ರಹ್ಮಚರ್ಯವು ಲೋಪವಾದರೆ ಹೇಗೆ ಪ್ರಾಯಶ್ಚಿತ್ತವಿದೆಯೊ, ಹಾಗೆಯೇ ಇದು ಇದು ಅಶನದಂತೆಯೂ : ಹೇಗೆ ಮಧು-ಮಾಂಸಗಳನ್ನು ತಿಂದು ವ್ರತವನ್ನು ಲೋಪಗೊಳಿಸಿ ಕೊಂಡ ಬ್ರಹ್ಮಚಾರಿಗೆ ಪುನಃ ಸಂಸ್ಕಾರವಾಗಬಹುದೊ ಹಾಗೆಯೇ ಇಲ್ಲಿಯೂ ಕೂಡ. ಪ್ರಾಯಶ್ಚಿತ್ತವಿಲ್ಲವೆಂದು ಹೇಳುವವರಿಗೆ ಯಾವ ಪ್ರಮಾಣವೂ ಇಲ್ಲ. ಆದರೆ ಪ್ರಾಯ-ಶ್ಚಿತ್ತವಿದೆಯೆಂದು ಯಾರು ಅಭಿಪ್ರಾಯಪಡುವರೊ ಅವರಿಗೆ **ಬ್ರಹ್ಮಚಾರ್ಯವಕೀರ್ಣೀ** ಎಂಬ ಸಾಮಾನ್ಯಪ್ರಮಾಣವು ಮೂಲವಾಗಿರುತ್ತದೆ. ಆದುದರಿಂದ ಪ್ರಾಯಶ್ಚಿತ್ತವಿದೆ ಯೆಂದು ಒಪ್ಪಿಕೊಳ್ಳುವುದೇ ಯುಕ್ತತರವಾಗಿದೆ. ಇದನ್ನು ಪ್ರಮಾಣಲಕ್ಷಣದಲ್ಲಿ[2] (ಜೈ. ಸೂ. ೧. ೩. ೮-೯) ಹೇಳಿದೆ : ಎರಡು ವಿರುದ್ಧಾರ್ಥಗಳು ಸಮಾನವಾಗಿರುವಾಗ ಶಾಸ್ತ್ರಸ್ಥರಾದವರೇ ಪ್ರಮಾಣರಾಗಿರುತ್ತಾರೆ ; ಏಕೆಂದರೆ ಆ ನಿರ್ಧಾರಣೆಗೆ ಅವರೇ ಕಾರಣ ರಾಗಿರುತ್ತಾರೆ. ಆದುದರಿಂದ ಪ್ರಾಯಶ್ಚಿತ್ತವಿಲ್ಲವೆಂದು ಹೇಳುವ ಸ್ಮೃತಿಯು ಆಶ್ರಮದಲ್ಲಿ ಯತ್ನಗೌರವವನ್ನುಂಟುಮಾಡುವುದಕ್ಕೆ ಹೇಳಿದ್ದು ಎಂದು ವ್ಯಾಖ್ಯಾನಮಾಡಬೇಕು. ಹೀಗೆಯೇ ಭಿಕ್ಷು-ವಾನಪ್ರಸ್ಥರಿಗೂ ಪ್ರಾಯಶ್ಚಿತ್ತವಿದೆ.

**ವಿ.**— ನಿಷಿದ್ಧವಾದ ಆಹಾರವನ್ನು ಸೇವಿಸಿದ ಉಪಕುರ್ವಾಣ-ನೈಷ್ಠಿಕ-ಬ್ರಹ್ಮ-ಚಾರಿಗಳಿಗೆ ಪ್ರಾಯಶ್ಚಿತ್ತವಿರುವಂತೆ ಬ್ರಹ್ಮಚರ್ಯದಿಂದ ಪ್ರಚ್ಯುತರಾದ ನೈಷ್ಠಿಕಾದಿ ಗಳಿಗೂ ಪ್ರಾಯಶ್ಚಿತ್ತವಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ ; ಏಕೆಂದರೆ ಅವರ ಪತನವನ್ನು ಉಪಪಾತಕವೆಂದು ಪರಿಗಣಿಸಿದೆ.

---

[1] ಬ್ರಹ್ಮಾದೀನಾಮಪಿ ನಾಽಕಾಂಕ್ಷ್ಯಂ ಕಿಮು ಪರಸ್ಯೇತಿ ಸೂಚಯಿತುಮಪಿಶಬ್ದಃ (ಮ. ಭಾ.).

* ಮಧ್ವಭಾಷ್ಯದಲ್ಲಿ ಭಾವಮಶನವತ್ ಎಂಬ ಸ್ಥಾನದಲ್ಲಿ ಭಾವಶಮನವತ್ ಎಂದಾಗಿದೆ.

[2] ಸಮಾ ವಿಪ್ರತಿಪತ್ತಿಃ ಸ್ಯಾತ್ । ಶಾಸ್ತ್ರಸ್ಥಾ ವಾ ತನ್ನಿಮಿತ್ತತ್ವಾತ್ ।

**ದ್ವೈ.**—'ವಸಿಷ್ಠಾದಿ-ಪ್ರಧಾನಋಷಿಗಳ ಪದದಂತೆ ಗಂಧರ್ವಾದಿಗಳ ಉಪಪದವನ್ನೂ ಬಯಸಕೂಡದು—ಎಂದು ಕೆಲವರು ಹೇಳುತ್ತಾರೆ';[1] ಇದನ್ನು ಶ್ರುತಿಯಲ್ಲಿ ಹೇಳಿದೆ' ಎಂಬುದು ಸೂತ್ರಾರ್ಥ

'ಋಷಿಗಳ ಅಥವಾ ಪ್ರಜಾಪತಿಗಳ ಪದವನ್ನು ಬಯಸುವುದು ಹೇಗೆ ಸರಿಯಲ್ಲವೊ ಹಾಗೆಯೇ ಗಂಧರ್ವಾದಿಗಳ ಪದವನ್ನು ಬಯಸುವುದೂ ಸರಿಯಲ್ಲ' ಎಂದು ಇಂದ್ರ-ದ್ಯುಮ್ನ-ಶ್ರುತಿಯಲ್ಲಿ ಹೇಳಿದೆ.

[1] ಉಪದೇವಪದಂ ಚ ನಾಪೇಕ್ಷ್ಯಮಿತ್ಯೇಕೇ । ಭಾವಶಮುನವದ್ಧ್ಯೃಷಿಪದವದೇವ (ಮ. ಭಾ.).

## ೧೨. ಬಹಿರಧಿಕರಣ

**ಬಹಿಸ್ತೂಭಯಥಾऽಪಿ ಸ್ಮೃತೇರಾಚಾರಾಚ್ಚ || ೪೩ ||**

೪೩. ಆದರೆ ಎರಡು ಪಕ್ಷದಲ್ಲಿಯೂ ಬಹಿಷ್ಕಾರವಾಡಬೇಕು, ಏಕೆಂದರೆ ಸ್ಮೃತಿಯಿದೆ, ಆಚಾರವೂ ಇದೆ

ಊರ್ಧ್ವರೇತಸ್ಕರು ತಮ್ಮ ಆಶ್ರಮದಿಂದ ಪತನಹೊಂದಿದರೆ—ಅದು ಮಹಾ ಪಾತಕವಾಗಲಿ ಉಪಪಾತಕವಾಗಲಿ—ಅವರನ್ನು ಶಿಷ್ಟರಾದವರು ಬಹಿಷ್ಕರಿಸಬೇಕು 'ಆರೂಢಪತಿತನಾದ ಬ್ರಾಹ್ಮಣನನ್ನೂ ಆಶ್ರಮದಿಂದ ಪತಿತನಾದವನನ್ನೂ ಗಲ್ಲಿಗೆ ಬಿದ್ದವನನ್ನೂ ಕ್ರಿಮಿಗಳಿಂದ ಕಡಿಯಲ್ಪಟ್ಟವನನ್ನೂ ಮುಟ್ಟಿದರೆ ಚಾಂದ್ರಾಯಣವನ್ನು ಮಾಡಬೇಕು'[1] ಎಂದು ಸ್ಮೃತಿಯು ಹೇಳುತ್ತದೆ ಇದು ಶಿಷ್ಟಾಚಾರದಿಂದಲೂ ಸಿದ್ಧವಾಗುತ್ತದೆ, ಏಕೆಂದರೆ ಅವರೊಂದಿಗೆ ಶಿಷ್ಟರು ಯಜ್ಞಾಧ್ಯಯನವಿವಾಹಗಳನ್ನು ಮಾಡುವುದಿಲ್ಲ

ವಿ.—ಉಪಪಾತಕವಾಗಲಿ ಮಹಾಪಾತಕವಾಗಲಿ, ಪತಿತರಾದವರು ಬ್ರಹ್ಮವಿದ್ಯಾಧಿಕಾರಿಗಳಿಂದ ಹೊರಗೆ ನಿಲ್ಲುತ್ತಾರೆ, ಇದು ಶಿಷ್ಟಾಚಾರದಿಂದಲೂ ತಿಳಿದುಬರುತ್ತದೆ ಪತಿತರಾದ ನೈಷ್ಠಿಕಾದಿಗಳು ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಮೇಲೂ ಶಿಷ್ಟರು ಅವರನ್ನು ತ್ಯಜಿಸುವುದಲ್ಲದೆ ಬ್ರಹ್ಮವಿದ್ಯೆಯನ್ನು ಉಪದೇಶಿಸುವುದಿಲ್ಲ ಆದುದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ

ದ್ವೈ.—'ದೇವರ್ಷಿಗಂಧರ್ವಾದಿಪದಗಳ ಹೊರತು ಶುಭವಿಷಯಗಳನ್ನು ಬಯಸಲಿ ಬಯಸದಿರಲಿ ಪತನವಿಲ್ಲ,[2] ಇದು ಸ್ಮೃತಿಯಿಂದಲೂ ಆಚಾರದಿಂದಲೂ ಸಿದ್ಧವಾಗುತ್ತದೆ' ಎಂಬುದು ಸೂತ್ರಾರ್ಥ

'ದೇವರ್ಷಿಗಂಧರ್ವರ ಪದವನ್ನು ಬಯಸುವವನು ಕೆಳಕ್ಕೆ ಬೀಳುವುದು ಖಂಡಿತ ಆದರೆ ಬೇರೆ ಯಾವುದಾದರೊಂದು ಶುಭವನ್ನು ಬಯಸಿದರೆ ಅವನು ಕೆಳಗೆ ಬೀಳುವುದಿಲ್ಲ ಏಕೆಂದರೆ ಅಂಥ ಬಯಕೆಗೆ ವಿರೋಧವಿಲ್ಲ' ಎಂಬುದು ಸ್ಮೃತಿ 'ಬಯಕೆಗಳು ಬಹುವಾಗಿರುತ್ತವೆ, ಅಕಾಮವು ಎಲ್ಲಿಯೂ ಕಂಡುಬರುವುದಿಲ್ಲ ಆದುದರಿಂದ ನಿಷಿದ್ಧಕಾಮಗಳನ್ನು ಬಯಸಕೂಡದು, ಅಂತಹವನನ್ನು ಅಕಾಮನೆಂದು ಹೇಳುತ್ತಾರೆ' ಎಂಬುದು ಆಚಾರಪ್ರತಿಪಾದಕವಾಕ್ಯ

---

[1] ಆರೂಢಪತಿತಂ ವಿಪ್ರಂ ಮಂಡಲಾಚ್ಚ ವಿನಿಃಸೃತಮ್ ।
ಉದ್ಬದ್ಧಂ ಕೃಮಿದಷ್ಟಂ ಚ ಸ್ಪೃಷ್ಟ್ವಾ ಚಾಂದ್ರಾಯಣಂ ಚರೇತ್ ॥

[2] ದೇವರ್ಷಿಗಂಧರ್ವಾದಿಪದೇಭ್ಯೋऽನ್ಯತ್ರ ಶುಭವಿಷಯ ಆಕಾಂಕ್ಷಾಯಾಮನಾಕಾಂಕ್ಷಾಯಾಂ ಚ ನ ಪತನಮ್ (ಮ ಭಾ )

## ೧೩. ಸ್ವಾಮ್ಯಧಿಕರಣ*

(ಸೂ ೪೪–೪೬)

### ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ† ॥ ೪೪ ॥

೪೪. (ಇದು) ಯಜಮಾನನ (ಕರ್ಮ), ಏಕೆಂದರೆ ಫಲಶ್ರುತಿಯಿದೆಯೆಂದು ಆತ್ರೇಯನು (ಅಭಿಪ್ರಾಯಪಡುತ್ತಾನೆ)

ಯಜ್ಞಾಂಗಗಳಲ್ಲಿ ಮಾಡುವ ಉಪಾಸನೆಗಳ ವಿಷಯದಲ್ಲಿ ಅವು ಯಜಮಾನನ ಕರ್ಮಗಳೊ ಅಥವಾ ಋತ್ವಿಕ್ಕರ ಕರ್ಮಗಳೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಅವು ಯಜಮಾನನ ಕರ್ಮಗಳು , ಏಕೆಂದರೆ ಫಲಶ್ರುತಿಯಿದೆ 'ಯಾವನು ಮಳೆಯಲ್ಲಿ ಪಂಚವಿಧಸಾಮವನ್ನು ಹೀಗೆ ಅರಿತುಕೊಂಡು ಉಪಾಸಿಸುತ್ತಾನೆಯೊ ಅವನಿಗೆ ಮಳೆಗರೆಯುತ್ತದೆ, ಅವನು ಮಳೆಗರೆಯಿಸುತ್ತಾನೆ'[1] (ಛಾಂ ಉ ೨ ૩ ೨) ಈ ಶ್ರುತಿಯ ಪ್ರಕಾರ ಮಳೆಯು ಕರ್ತೃವಿಗೆ ಆಗುತ್ತದೆ ಕೆಲವು ಕಡೆಯಲ್ಲಿ ಋತ್ವಿಕ್ಕಿಗೆ ಫಲವನ್ನು ಸ್ಪಷ್ಟವಾಗಿ ಹೇಳಿರುವಾಗ (ಬೃ ಉ ೧ ૩ ૩೮) ಅಲ್ಲಿ ಋತ್ವಿಕ್ಕುಗಳಿಗೇ ಕರ್ತೃತ್ವವಿರುತ್ತದ ಆದುದರಿಂದ ಫಲವುಳ್ಳ ಉಪಾಸನೆಗಳಲ್ಲಿ ಯಜಮಾನನಿಗೆ ಕರ್ತೃತ್ವವಿದೆಯೆಂಬುದು ಆತ್ರೇಯನ ಅಭಿಪ್ರಾಯ

ವಿ.—ಉದ್ಗೀಥೋಪಾಸನೆಯಲ್ಲಿ ಕರ್ತೃತ್ವವು ಯಜಮಾನನಿಗೇ ಸೇರಿದೆಯೆಂದು ಆತ್ರೇಯನು ಅಭಿಪ್ರಾಯಪಡುತ್ತಾನೆ; ಏಕೆಂದರೆ ದಹರಾದ್ಯುಪಾಸನೆಗಳಲ್ಲಿ ಉಪಾಸನೆಯೂ ಫಲವೂ ಒಬ್ಬನಿಗೇ ಸೇರಿದುದಾಗಿ ಶ್ರುತಿಯಲ್ಲಿ ಹೇಳಿದೆ

ದ್ವೈ.—'ಸ್ವಾಮಿಗಳಾದ ದೇವತೆಗಳಿಗೆ ಜ್ಞಾನಫಲವಿದೆಯೆಂದು ಶ್ರುತವಾಗಿದೆ , ಹೀಗೆ ಆತ್ರೇಯ ಋಷಿಯು ತಿಳಿಯುತ್ತಾನೆ' ಎಂಬುದು ಸೂತ್ರಾರ್ಥ

'ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನೇ ಹೊಂದುತ್ತಾನೆ' (ತೈ. ಉ. ೨ ೧) ಎಂಬಲ್ಲಿ ಜ್ಞಾನಫಲವು ಸ್ವಾಮಿಗಳಾದ ದೇವತೆಗಳಿಗೇ ಸೇರಿದೆ[2] ಎಂದು ಹೇಳಿದೆ

---

* ಇದನ್ನು ಮಧ್ವಭಾಷ್ಯದಲ್ಲಿ ಫಲಶ್ರುತ್ಯಧಿಕರಣ ಎಂದು ಕರೆದಿದೆ ಅಲ್ಲಿ ಈ ಅಧಿಕರಣವು ಸಹಕಾರ್ಯಂತರವಿಧಿಃ ಎಂಬ ೪೭ನೆಯ ಸೂತ್ರವನ್ನೂ ಒಳಕೊಂಡಿದೆ

† ಇದು ಮೂರು ಭಾಷ್ಯಗಳಲ್ಲಿಯೂ ಪೂರ್ವಪಕ್ಷಸೂತ್ರವಾಗಿದೆ

1 ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತದೇವಂ ವಿದ್ವಾನ್ ವೃಷ್ಟೌ ಪಂಚವಿಧಂ ಸಾಮೋಪಾಸ್ತೇ ।

2 ಬ್ರಹ್ಮವಿದಾಪ್ನೋತಿ ಪರಮಿತ್ಯಾದಿಫಲಂ ಸ್ವಾಮಿನಾಂ ದೇವಾನಾಮೇವ ಭವತಿ (ಮ ಭಾ )

**ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ*** ‖ ೪೫ ‖

೪೫. (ಇದು) ಋತ್ವಿಕ್ಕುಗಳ ಕರ್ಮವೇ, ಏಕೆಂದರ ಅದಕ್ಕಾಗಿಯೇ ಅವನಿಗೆ ದಕ್ಷಿಣೆಯು ಕೊಡಲ್ಪಡುತ್ತದೆ, ಹೀಗೆ ಔಡುಲೋಮಿಯು (ಅಭಿಪ್ರಾಯ ಪಡುತ್ತಾನೆ)

**ಸಿದ್ಧಾಂತಿ**—ಈ ಉಪಾಸನೆಗಳು ಯಜಮಾನನ ಕರ್ಮಗಳಲ್ಲ, ಋತ್ವಿಕ್ಕುಗಳ ಕರ್ಮಗಳು ಎಂದೇ ಔಡುಲೋಮಿಯು ಅಭಿಪ್ರಾಯಪಡುತ್ತಾನೆ, ಏಕೆಂದರೆ ಆ ಸಾಂಗ ಕರ್ಮಕ್ಕಾಗಿಯೇ ಯಜಮಾನನು ಋತ್ವಿಕ್ಕಿಗೆ ದಕ್ಷಿಣೆಯನ್ನು ಕೊಟ್ಟು, 'ಈ ಕರ್ಮಭಾಗ ವನ್ನು ನನಗಾಗಿ ಮಾಡು' ಎಂದು ಕೇಳಿಕೊಳ್ಳುತ್ತಾನೆ ಆ ಕರ್ಮದ ಪ್ರಯೋಗದೊಳಗೆ ಉದ್ಗೀಥಾದಿ ಉಪಾಸನೆಗಳು ಅಡಕವಾಗಿರುತ್ತವ, ಏಕೆಂದರೆ ಅಧಿಕೃತರಾದವರಿಗೆ ಅವು ಗಳಲ್ಲಿ ಅಧಿಕಾರವಿರುತ್ತದೆ ಆದುದರಿಂದ ಗೋದೋಹನಾದಿ ನಿಯಮದಂತೆಯೇ ಇವನ್ನು ಋತ್ವಿಕ್ಕುಗಳು ಮಾಡಬೇಕು ಹಾಗೆಯೇ 'ಬಕದಾಲ್ಭ್ಯನು ಅವನನ್ನು ಅರಿತುಕೊಂಡನು ಅವನು ನೈಮಿಶೀಯರೆಂಬ ಸತ್ತ್ರಿಗಳ ಉದ್ಗಾತೃವಾಗಿದ್ದನು'[1] (ಛಾಂ ಉ ೧ ೨ ೧೩) ಎಂಬ ಶ್ರುತಿಯ ಪ್ರಕಾರ ಉಪಾಸನೆಗೆ ಉದ್ಗಾತೃವೇ ಕರ್ತೃವೆಂದು ತಿಳಿದುಬರುತ್ತದೆ ಕರ್ತೃವನ್ನು ಆಶ್ರಯಿಸಿದ ಫಲವನ್ನೇ ಶ್ರುತಿಯಲ್ಲಿ ಹೇಳಿದೆ—ಎಂಬ ಪೂರ್ವಪಕ್ಷದಲ್ಲಿ ದೋಷವಿಲ್ಲ; ಏಕೆಂದರೆ ಋತ್ವಿಕ್ಕನು ಇನ್ನೊಬ್ಬರಿಗಾಗಿ ಇರುವುದರಿಂದ ವಚನವಿಲ್ಲದ ಕಡೆಯಲ್ಲಿ ಅವನಿಗೆ ಫಲಸಂಬಂಧವಿಲ್ಲ

**ವಿ.**—ಈ ಉದ್ಗೀಥೋಪಾಸನೆಯನ್ನು ಋತ್ವಿಕ್ಕೇ ಮಾಡತಕ್ಕದ್ದೆಂದು ಔಡು-ಲೋಮಿಯು ಅಭಿಪ್ರಾಯಪಡುತ್ತಾನೆ, ಏಕಂದರೆ ಫಲಸಾಧನಭೂತವಾದ ಸಮಸ್ತಕ್ರತು ವನ್ನು ಮಾಡಲು ಅವನನ್ನು ನಿಯಮಿಸಿದೆ ದಹರಾದಿ ಉಪಾಸನೆಗಳಲ್ಲಿ ಋತ್ವಿಕ್ಕರ್ತೃ-ಕತ್ವವನ್ನು ಹೇಳದಿರುವುದರಿಂದ **ಶಾಸ್ತ್ರಫಲಂ ಪ್ರಯೋಕ್ತರಿ** ಎಂಬ ನ್ಯಾಯದ ಪ್ರಕಾರ ಅಲ್ಲಿ ಫಲವು ಕರ್ತೃವಿಗೇ ಸೇರಿದೆ

**ದ್ವೈ.**—'ಸತ್ತ್ರಯಾಗದಲ್ಲಿ ಋತ್ವಿಕ್ಕುಗಳಿಗೆ ಫಲವಿರುವಂತೆ ಜೀವರಿಗೆ ಕೂಡ ಜ್ಞಾನಫಲವಿದೆ, ಏಕಂದರೆ ಜೀವರಿಗೋಸ್ಕರವೇ ದೇವತೆಗಳು ಜ್ಞಾನಾದಿಗಳನ್ನು ಸಂಪಾದಿಸುತ್ತಾರೆ—ಎಂದು ಔಡುಲೋಮಿಯು ತಿಳಿಯುತ್ತಾನೆ'[2] ಎಂಬುದು ಸೂತ್ರಾರ್ಥ

---

* ಇದು ಶಾಂಕರ-ಶ್ರೀಭಾಷ್ಯಗಳಲ್ಲಿ ಸಿದ್ಧಾಂತಸೂತ್ರವಾಗಿದ್ದರೆ ಮಧ್ವಭಾಷ್ಯದಲ್ಲಿ ಏಕ-ದೇಶಿಗಳ ಮತದಿಂದ ಸಿದ್ಧಾಂತವಾಗಿದೆ

[1] ತಂ ಹ ಬಕೋ ದಾಲ್ಭ್ಯೋ ವಿದಾಂಚಕಾರ। ಸ ಹ ನೈಮಿಶೀಯಾನಾಮುದ್ಗಾತಾ ಬಭೂವ . ‖

[2] ಸತ್ತ್ರಯಾಗೇಷ್ವೃತ್ವಿಜಾಮಪಿ ಫಲದರ್ಶನಾದಲ್ಪಂ ಫಲಂ ಪ್ರಜಾನಾಮಪಿ ಭವತೀ-ತ್ಯಾಡುಲೋಮಿರ್ಮನ್ಯತೇ। ತದರ್ಥಂ ದೇವೈಃ ಕ್ರಿಯಮಾಣತ್ವಾತ್ (ಮ ಭಾ).

**ಶ್ರುತೇಶ್ಚ † ॥ ೪೬ ॥**

೪೬. ಶ್ರುತಿಯಿರುವುದರಿಂದಲೂ (ಹೀಗೆಯೇ).

ಋತ್ವಿಕ್ಕನು ಮಾಡುವ ಉಪಾಸನೆಯ ಫಲವು ಯಜಮಾನನಿಗೇ ಸೇರಿದುದೆಂದು ಅನೇಕ ಶ್ರುತಿಗಳು ತಿಳಿಸುತ್ತವೆ : 'ಯಜ್ಞದಲ್ಲಿ ಋತ್ವಿಕ್ಕುಗಳು ಯಾವುದೊಂದು ಫಲವನ್ನು ಬಯಸಿದರೂ ಅದನ್ನು ಯಜಮಾನನಿಗೇ ಬಯಸುತ್ತಾರೆ—ಎಂದು ಅವನು ಹೇಳಿದನು'[1] (ಶ. ಬ್ರಾ. ೧. ೩. ೧. ೨೬); 'ಆದುದರಿಂದ ಹೀಗೆ ಅರಿತಿರುವ ಉದ್ಗಾತೃವು (ಯಜಮಾನನನ್ನು ಕುರಿತು) "ನಿನಗೆ ಯಾವ ಕಾಮನೆಯನ್ನು ಗಾನದ ಮೂಲಕ ಸಂಪಾದಿಸಲಿ ?"'[2] (ಛಾಂ. ಉ. ೧. ೭. ೮-೯). ಆದುದರಿಂದ ಅಂಗೋಪಾಸನೆಗಳು ಋತ್ವಿಕ್ಕನ ಕರ್ಮವೆಂದು ಸಿದ್ಧವಾಯಿತು.

† ಈ ಸೂತ್ರವು ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ಕಂಡುಬರುವುದಿಲ್ಲ.

1 ಯಾಂ ವೈ ಕಾಂಚನ ಯಜ್ಞ ಋತ್ವಿಜ ಆಶಿಷಮಾಶಾಸತ ಇತಿ ಯಜಮಾನಾಯೈವ ತಾ ಮಾಶಾಸತ ಇತಿ ಹೋವಾಚ ।

2 ತಸ್ಮಾದು ಹೈವಂವಿದುದ್ಗಾತಾ ಬ್ರೂಯಾತ್ ಕಂ ತೇ ಕಾಮಮಾಗಾಯಾನಿ ।

## ೧೪. ಸಹಕಾರ್ಯಂತರವಿಧ್ಯಧಿಕರಣ

(ಸೂ ೪೭–೪೯)

**ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ॥ ೪೭ ॥**

೪೭ ಮೂರನೆಯದನ್ನು ಇನ್ನೊಂದು ಸಹಕಾರಿಯೆಂದು ಒಂದು ಪಕ್ಷದಲ್ಲಿ ವಿಧಿಸಿದೆ, ಆ ವಿದ್ಯಾವಂತನಿಗೇ (ಇದು), ವಿಧಿ ಮೊದಲಾದುವುಗಳಂತೆ.

'ಆದುದರಿಂದ ಬ್ರಾಹ್ಮಣನು ಪಾಂಡಿತ್ಯವನ್ನು ಅರಿತುಕೊಂಡು ಬಾಲ್ಯದಿಂದ ನಿಲ್ಲಲು ಬಯಸಬೇಕು ಈ ಬಾಲ್ಯವನ್ನೂ ಪಾಂಡಿತ್ಯವನ್ನೂ ಅರಿತುಕೊಂಡು ಮುನಿಯಾಗುತ್ತಾನೆ, ಮೌನವನ್ನೂ ಅಮೌನವನ್ನೂ ಅರಿತುಕೊಂಡು ಬ್ರಾಹ್ಮಣನಾಗುತ್ತಾನೆ'[1] (ಬೃ ಉ ೩ ೫ ೧) ಎಂದು ಶ್ರುತಿಯು ಹೇಳುತ್ತದೆ ಅಲ್ಲಿ ಮೌನವು ವಿಹಿತವಾಗಿದೆಯೊ ಅಥವಾ ಇಲ್ಲವೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಮೌನವು ವಿಹಿತವಾಗಿಲ್ಲ, ಏಕೆಂದರೆ 'ಬಾಲ್ಯದಿಂದ ನಿಲ್ಲಲು ಬಯಸಬೇಕು' ಎಂಬಲ್ಲಿಗೆ ವಿಧಿಯು ಮುಗಿಯುತ್ತದೆ, 'ಆಗ ಮುನಿಯಾಗುತ್ತಾನೆ' ಎಂಬಲ್ಲಿ ಯಾವ ವಿಧಾಯಕ-ವಿಭಕ್ತಿಯೂ ಕಂಡುಬರದಿರುವುದರಿಂದ ಅದು ಅನುವಾದವೆಂಬುದು ಯುಕ್ತವು ಮುನಿ, ಪಂಡಿತ—ಈ ಶಬ್ದಗಳಿಗೆ ಜ್ಞಾನವೆಂದೇ ಅರ್ಥವಾಗಿರುವುದರಿಂದ 'ಪಾಂಡಿತ್ಯವನ್ನು ಅರಿತುಕೊಂಡು' ಎಂಬುದರಿಂದಲೇ ಮೌನವು ಪ್ರಾಪ್ತವಾಗುತ್ತದೆ 'ಇದಲ್ಲದೆ ಮೌನವನ್ನೂ ಅಮೌನವನ್ನೂ ಅರಿತುಕೊಂಡು ಬ್ರಾಹ್ಮಣನಾಗುತ್ತಾನೆ' ಎಂಬ ಮುಂದಿನ ವಾಕ್ಯದಲ್ಲಿ ಬ್ರಾಹ್ಮಣತ್ವವನ್ನು ವಿಧಿಸಿಲ್ಲ, ಏಕೆಂದರೆ ಅದು ಮೊದಲೇ ಪ್ರಾಪ್ತವಾಗಿದೆ ಆದುದರಿಂದ 'ಬ್ರಾಹ್ಮಣನು' ಎಂಬುದು ಹೇಗೆ ಪ್ರಶಂಸೆಯೋ ಹಾಗೆಯೆ 'ಮುನಿ' ಎಂಬುದೂ ಪ್ರಶಂಸೆ

**ಸಿದ್ಧಾಂತಿ**—ಇದು ಸಹಕಾರಿಯಾದ ಮತ್ತೊಂದು ವಿಧಿಯು ವಿದ್ಯೆಗೆ ಸಹಕಾರಿಯಾದ ಮೌನವನ್ನು ಬಾಲ್ಯ ಪಾಂಡಿತ್ಯಗಳ ಜೊತೆಗೆ ವಿಧಿಸಿದೆ ಪಾಂಡಿತ್ಯ-ಶಬ್ದದಿಂದ ಮೌನವು ತಿಳಿದುಬಂದಿದ್ದರೂ ಇದರಿಂದ ದೋಷವಾಗುವುದಿಲ್ಲ, ಏಕೆಂದರೆ ಮುನಿ-ಶಬ್ದವನ್ನು ಜ್ಞಾನಾತಿಶಯಾರ್ಥವಾಗಿ ಪ್ರಯೋಗಿಸಿದೆ 'ಮುನಿಗಳಲ್ಲಿ ನಾನು ವ್ಯಾಸನು' (ಗೀತಾ ೧೦ ೩೭) ಎಂಬ ಪ್ರಯೋಗವು ಕಂಡುಬರುತ್ತದೆ ಮುನಿ-ಶಬ್ದವು ಉತ್ತಮಾಶ್ರಮವನ್ನು

---

[1] ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇದ್ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿರಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ।

ಹೇಳುವುದಕ್ಕೆ ಪ್ರಯುಕ್ತವಾಗಿದ್ದರೂ (ಆ ಧ ಸೂ) **ವಾಲ್ಮೀಕಿರ್ಮುನಿಪುಂಗವಃ** ಎಂಬ ಪ್ರಯೋಗಗಳಲ್ಲಿ ಅದು ಬೇರ್ಪಟ್ಟಿರುವುದು ಕಂಡುಬಂದಿದೆ ಆದುದರಿಂದ ಬಾಲ್ಯ-ಪಾಂಡಿತ್ಯಗಳಿಗೆ ಮೂರನೆಯದಾದ ಈ ಮೌನವೆಂಬ ಜ್ಞಾನಾತಿಶಯವನ್ನು ಇಲ್ಲಿ ವಿಧಿಸಿದೆ ಇನ್ನು 'ಬಾಲ್ಯ' ಎಂಬಲ್ಲಿಯೇ ವಿಧಿಯು ಕೊನೆಗೊಂಡಿವೆಯೆಂದು ಪೂರ್ವಪಕ್ಷಿಯು ಹೇಳಿದ್ದರೂ ಮುನಿತ್ವವು ಅಪೂರ್ವವಾಗಿರುವುದರಿಂದ ಅದನ್ನು 'ಮುನಿಯಾಗಬೇಕು' ಎಂದು ವಿಧಿಸಿದೆ ಸೂತ್ರದಲ್ಲಿ **ತದ್ವತಃ** ಎಂಬ ಶಬ್ದಕ್ಕೆ 'ವಿದ್ಯಾವಂತನಾದ ಸಂನ್ಯಾಸಿಗೆ' ಎಂದರ್ಥ, ಏಕೆಂದರೆ ಶ್ರುತಿಯ ಪ್ರಕಾರ (ಬೃ ಉ ೩ ೫ ೧) ಇದು ಅವನನ್ನು ಕುರಿತ ಪ್ರಕರಣವೇ ಆಗಿದೆ ಜ್ಞಾನವುಂಟಾದರೆ, ಅದರ ಅತಿಶಯವೂ ತಾನೇ ಪ್ರಾಪ್ತವಾಗಿರುವುದರಿಂದ ಮೌನವನ್ನು ಏಕೆ ವಿಧಿಸಬೇಕು ?—ಎಂಬ ಆಕ್ಷೇಪಕ್ಕೆ ಸೂತ್ರಕಾರರು **ಪಕ್ಷೇಣ** (ಒಂದು ಪಕ್ಷದಲ್ಲಿ) ಎಂದು ಪರಿಹಾರವನ್ನು ಕೊಟ್ಟಿರುತ್ತಾರೆ ಯಾವ ಪಕ್ಷದಲ್ಲಿ ಭೇದವು ದರ್ಶನಪ್ರಾಬಲ್ಯದಿಂದ ಜ್ಞಾನಾತಿಶಯವು ಪ್ರಾಪ್ತವಾಗುವುದಿಲ್ಲವೊ ಅಲ್ಲಿ ವಿಧಿಯು ಪ್ರಾಪ್ತವಾಗುತ್ತದೆ 'ವಿಧಿ ಮೊದಲಾದುವುಗಳಂತೆ' ಎಂಬುದರ ಅರ್ಥ ಹೀಗಿದೆ 'ಸ್ವರ್ಗವನ್ನು ಬಯಸುವವನು ದರ್ಶಪೂರ್ಣಮಾಸಗಳಿಂದ ಯಾಗಮಾಡಬೇಕು' ಎಂಬಲ್ಲಿ ಅಗ್ನ್ಯ-ನ್ವಾಧಾನವೇ ಮೊದಲಾದ ಅಂಗಸಮೂಹವನ್ನು ಹೇಗೆ ಸಹಕಾರಿಯಾಗಿ ವಿಧಿಸಿದೆಯೊ ಹಾಗೆಯೆ ವಿಧಿಪ್ರಧಾನವಲ್ಲದ ಈ ವಿದ್ಯಾವಾಕ್ಯದಲ್ಲಿ ಮೌನವನ್ನು ವಿಧಿಸಿದೆ

**ವಿ.—ಅಥ ಮುನಿಃ** ಎಂಬುದು ವಿಧಿಯೇ ಹೊರತು ಅನುವಾದವಲ್ಲ 'ಬ್ರಾಹ್ಮಣರು ಆ ಇವನನ್ನು ವೇದಾನುವಚನದಿಂದಲೂ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅರಿತುಕೊಳ್ಳಲು ಬಯಸುತ್ತಾರೆ' (ಬೃ ಉ ೪ ೪ ೨೨), 'ಶಾಂತನೂ ದಾಂತನೂ' (ಬೃ ಉ ೪ ೪ ೨೩)—ಎಂಬ ಸ್ಥಾನಗಳಲ್ಲಿ ಸಹಕಾರಿಯಾಗಿ ಯಜ್ಞವನ್ನೂ ಶಮದಮಾದಿಗಳನ್ನೂ ವಿಧಿಸಿರುವಂತೆ ಮತ್ತು 'ಆತ್ಮನನ್ನು ಮನನಮಾಡಬೇಕು, ನಿದಿಧ್ಯಾಸನ ಮಾಡಬೇಕು' (ಬೃ ಉ ೨ ४ ೫) ಎಂಬಲ್ಲಿ ಶ್ರವಣಮನನಗಳನ್ನು ವಿದ್ಯೆಗೆ ಸಹಕಾರಿಯಾಗಿ ಹೇಳಿರುವಂತೆ ಇಲ್ಲಿಯೂ ಕೂಡ (ಬೃ ಉ ೩ ೫ ೧) ಪಾಂಡಿತ್ಯ, ಬಾಲ್ಯ, ಮೌನ—ಈ ಮೂರನ್ನು ವಿದ್ಯೆಯ ಸಹಕಾರಿಗಳಾಗಿ ವಿಧಿಸಿದೆ ಇಲ್ಲಿ ಮೌನವು ಪಾಂಡಿತ್ಯವನ್ನು ಸೂಚಿಸುವುದಿಲ್ಲ, ಪ್ರಕೃಷ್ಟಮನನಶೀಲತ್ವವನ್ನು ಸೂಚಿಸುತ್ತದೆ

**ದ್ವೈ.**—'ದೇವಾದಿಗಳ ಜ್ಞಾನದಾನಾದಿಗಳಲ್ಲಿ ಜೀವಾತ್ಮರನ್ನು ಸಹಕಾರಿತ್ವದಿಂದ ವಿಧಿಸಿದೆ ಎಂಬುದು ಮೂರನೆಯ ಪಕ್ಷ, ಹೇಗೆ ಪ್ರಜೆಗಳು ಪ್ರಜಾವಂತನಾದ ರಾಜನಲ್ಲಿ ಸಹಕಾರಿತ್ವದಿಂದ ಇರುವರೋ ಹಾಗೆಯೇ ಇಲ್ಲಿಯೂ'[1] ಎಂಬುದು ಸೂತ್ರಾರ್ಥ

ಈ ಮೂರನೆಯ ಅಭಿಪ್ರಾಯವು ಸ್ವಪಕ್ಷವಾಗಿದೆ

---

[1] ದೇವಾನಾಂ ಜ್ಞಾಪನಾದಿಕರ್ಮಣಿ ಸಹಕಾರ್ಯಂತರತ್ವೇನ ಪ್ರಜಾ ವಿಧೀಯಂತೇ। ಯಥಾ ಪ್ರಜಾವತೋ ರಾಜ್ಞಃ ಪ್ರಜಾಃ ಸಹಕಾರಿತ್ವೇನ ವಿಧೀಯಂತೇ (ಮ ಭಾ)

## ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ* ॥ ೪೮ ॥

೪೮. ಆದರೆ (ಗೃಹಸ್ಥನಿಗೆ) ಕೃತ್ಸ್ನಭಾವವಿರುವುದರಿಂದ ಗೃಹಸ್ಥನಿಂದಲೇ ಉಪಸಂಹಾರಮಾಡಿದೆ.

**ಆಕ್ಷೇಪಣೆ**—ಹೀಗೆ ಬಾಲ್ಯಾದಿವಿಶಿಷ್ಟವಾದ ಕೈವಲ್ಯಾಶ್ರಮವು ಶ್ರುತಿ-ಪ್ರಮಾಣವಾಗಿರುವಾಗ 'ಗುರುಗೃಹದಿಂದ ಹಿಂತಿರುಗಿ ಕುಟುಂಬದಲ್ಲಿ ನಿಂತು' (ಛಾಂ. ಉ. ೮. ೧೫. ೧) ಎಂಬಲ್ಲಿ ಗೃಹಸ್ಥಾಶ್ರಮಿಯೊಂದಿಗೆ ಏಕೆ ಉಪಸಂಹಾರ ಮಾಡಬೇಕು ? ಹಾಗೆ ಮಾಡಿರುವುದರಿಂದ ಅವನ ವಿಷಯದಲ್ಲಿ ಆದರವನ್ನು ತೋರಿಸಿದಂತಾಗುವುದಿಲ್ಲವೆ ?

**ಪರಿಹಾರ**—ತು-ಶಬ್ದವು ಗೃಹಸ್ಥನ ಕೃತ್ಸ್ನಭಾವವನ್ನು ಎಂದರೆ ಸಂಪೂರ್ಣತೆಯನ್ನು ತಿಳಿಸುತ್ತದೆ ; ಏಕೆಂದರೆ ಬಹು ಆಯಾಸದಿಂದ ಮಾಡತಕ್ಕ ಯಜ್ಞಾದಿ-ಆಶ್ರಮಕರ್ಮಗಳು ಅವನಿಗೆ ಕರ್ತವ್ಯವೆಂದು ಉಪದಿಷ್ಟವಾಗಿದೆ ; ಇವಲ್ಲದೆ ಅಹಿಂಸೆ, ಇಂದ್ರಿಯ-ಸಂಯಮ ಮೊದಲಾದ ಇತರ ಆಶ್ರಮಕರ್ಮಗಳು ಅವನಿಗೆ ಯಥಾಸಂಭವವಾಗಿ ಇರುವುವು. ಆದುದರಿಂದ ಗೃಹಸ್ಥನಿಂದ ಉಪಸಂಹಾರಮಾಡಿರುವುದು ವಿರುದ್ಧವಲ್ಲ.

**ವಿ.**—'ಸಮಸ್ತ ಆಶ್ರಮಗಳಿಗೂ ಉಪಾಸನೆಯಲ್ಲಿ ಅಧಿಕಾರವಿರುವುದರಿಂದ ಗೃಹಸ್ಥನೊಂದಿಗೆ ಉಪಸಂಹಾರಮಾಡಿದೆ' ಎಂಬುದು ಸೂತ್ರಾರ್ಥ

ಪಾಂಡಿತ್ಯಾದಿಗಳಿಂದ ಸಹಾಯವನ್ನು ಪಡೆದ ಮತ್ತು ಆಯಾ ಆಶ್ರಮಧರ್ಮಕ್ಕೆ ಸಹಕಾರಿಯಾಗಿರುವ ವಿದ್ಯೆಯು ಬ್ರಹ್ಮಪ್ರಾಪ್ತಿಗೆ ಸಾಧನವಾಗಿ ಹೇಳಲ್ಪಟ್ಟಿತು ; ಹೀಗಿರುವಾಗ ಬ್ರಹ್ಮಜ್ಞಾನವಾಗುವವರೆಗೂ ಗೃಹಸ್ಥಾಶ್ರಮದಲ್ಲಿರಬೇಕೆಂಬ ಛಾಂದೋಗ್ಯಶ್ರುತಿಯು (೮. ೧೫. ೧) ಹೇಗೆ ಹೊಂದುತ್ತದೆ ?—ಎಂಬುದಕ್ಕೆ ಈ ಸೂತ್ರವು ಪರಿಹಾರವನ್ನು ಹೇಳುತ್ತದೆ: ಎಲ್ಲ ಆಶ್ರಮಗಳಿಗೂ ವಿದ್ಯೆಯು ಸಮಾನವಾಗಿರುವುದರಿಂದ ಅದು ಗೃಹಸ್ಥನಿಗೂ ಸೇರಿದೆ ; ಆದುದರಿಂದ ಉಪನಿಷತ್ತು ಅವನೊಂದಿಗೆ ಉಪಸಂಹರಿಸುತ್ತದೆ. ಈ ಉಪಸಂಹಾರವು ಸರ್ವಾಶ್ರಮಧರ್ಮವನ್ನು ಪ್ರದರ್ಶಿಸುವುದಕ್ಕೆ ಬಂದಿದೆಯೇ ಹೊರತು ಕೇವಲ ಗೃಹಸ್ಥನ ಉಪಸಂಹಾರಕ್ಕೆ ಬಂದಿಲ್ಲ. ಹೀಗೆಯೇ ಇಲ್ಲಿಯೂ (ಬೃ. ಉ. ೩. ೫. ೧) ಬ್ರಾಹ್ಮಣನು ಏಷಣಾತ್ರಯದಿಂದ ಎದ್ದು ಭಿಕ್ಷಾಚರ್ಯೆಯನ್ನು ಮಾಡುತ್ತಾನೆ—ಎಂಬ ಪಾರಿವ್ರಾಜ್ಯಧರ್ಮವನ್ನು ಹೇಳಿ, ಆಮೇಲೆ 'ಆದುದರಿಂದ ಬ್ರಾಹ್ಮಣನು ಪಾಂಡಿತ್ಯವನ್ನು ಅರಿತುಕೊಂಡು' ಎಂಬ ಮುಂದಿನ ವಾಕ್ಯವು ಪಾಂಡಿತ್ಯವನ್ನೂ ಬಾಲ್ಯವನ್ನೂ ಮೌನವನ್ನೂ ಸರ್ವಾಶ್ರಮಗಳಿಗೂ ಉಪಾಸನೆಯ ಅಂಗವಾಗಿ ಹೇಳಿದೆ.

**ದ್ವೈತ.**—ಗೃಹಸ್ಥನೊಂದಿಗೆ ಉಪಸಂಹಾರಮಾಡಿರುವುದು ದೇವತಾಪರವಾಗಿದೆ ; ಏಕೆಂದರೆ ಅವರಿಗೇ ಎಲ್ಲ ಗೃಹಸ್ಥಧರ್ಮಗಳೂ ಇವೆ' ಎಂಬುದು ಸೂತ್ರಾರ್ಥ.

---

* ಮಧ್ವಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಕೃತ್ಸ್ನಭಾವಾಧಿಕರಣ ಎನಿಸಿದೆ.

ಶ್ರುತಿಯು ಕುಟುಂಬೇ ಶುಚೌ ದೇಶೇ . . . ನ ಚ ಪುನರಾವರ್ತತೇ (ಛಾಂ. ಉ. ೮. ೧೫. ೧) ಎಂದು ಗೃಹಸ್ಥಾಶ್ರಮಿಯಿಂದ ಉಪಸಂಹಾರಮಾಡುತ್ತದೆ. ದೇವತೆಗಳಿಗೆ ಕೃತ್ಸ್ನ-ಗೃಹಸ್ಥಧರ್ಮಗಳಿರುವುದರಿಂದ ತತ್ಪರವಾದುದು.

**ಮೌನವದಿತರೇಷಾಮಪ್ಯುಪದೇಶಾತ್ ॥ ೪೯ ॥**

೪೯. ಮೌನದಂತೆ ಉಳಿದವನ್ನೂ ಉಪದೇಶಿಸಿರುವುದರಿಂದಲೂ.

ಮೌನ, ಗಾರ್ಹಸ್ಥ್ಯ—ಎಂಬ ಎರಡು ಆಶ್ರಮಗಳನ್ನು ಶಾಸ್ತ್ರದಲ್ಲಿ ವಿಧಿಸಿರುವ ಹಾಗೆ ವಾನಪ್ರಸ್ಥ, ಗುರುಕುಲವಾಸ ಎಂಬ ಉಳಿದ ಎರಡು ಆಶ್ರಮಗಳೂ ವಿಧಿಸಲ್ಪಟ್ಟಿವೆ. 'ತಪಸ್ಸೇ ಎರಡನೆಯದು, ಆಚಾರ್ಯಗೃಹದಲ್ಲಿ ವಾಸಿಸುವ ಬ್ರಹ್ಮಚಾರಿಯು ಮೂರನೆಯವನು' (ಛಾಂ. ಉ. ೨. ೨೩. ೧) ಎಂಬಿವೇ ಮೊದಲಾದ ಶ್ರುತಿಯನ್ನು ಮೊದಲೇ ಹೇಳಿದೆ. ಶ್ರುತಿಯು ಹೀಗೆ ನಾಲ್ಕು ಆಶ್ರಮಗಳನ್ನು ವಿಧಿಸುವುದರಿಂದ ಅವುಗಳನ್ನು ಒಂದೊಂದಾಗಿ ಆಶ್ರಯಿಸಿ ಅನುಷ್ಠಾನಮಾಡಬಹುದು ಅಥವಾ ಬ್ರಹ್ಮಚರ್ಯದಿಂದಲೊ ಗಾರ್ಹಸ್ಥ್ಯದಿಂದಲೊ ನೇರವಾಗಿ ಸಂನ್ಯಾಸಾಶ್ರಮಕ್ಕೆ ಹೋಗಬಹುದು.

**ವಿ.**—ಸರ್ವೇಷಣೆಗಳಿಂದ ವಿಮುಕ್ತನಾದವನಿಗೆ ಭಿಕ್ಷಾಚರಣಪೂರ್ವಕವಾಗಿ ಮೌನೋಪದೇಶವನ್ನು ಮಾಡಿರುವುದು ಎಲ್ಲ ಆಶ್ರಮಗಳ ಧರ್ಮಗಳನ್ನು ಪ್ರದರ್ಶಿಸುವುದಕ್ಕಾಗಿಯೇ; ಏಕೆಂದರೆ ಮುನಿ, ಗೃಹಸ್ಥ—ಇವರ ಧರ್ಮಗಳನ್ನು ಉಪದೇಶಿಸಿರುವಂತೆ ಶ್ರುತಿಯು ಉಳಿದ ಆಶ್ರಮಗಳ ಧರ್ಮಗಳನ್ನೂ ಹೇಳಿದೆ. 'ಧರ್ಮಸ್ಕಂಧಗಳು ಮೂರು.... ಆದರೆ ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುತ್ತಾನೆ' (ಛಾಂ. ಉ. ೨. ೨೩. ೧) ಎಂಬಲ್ಲಿ ಧರ್ಮಸಂಸ್ಥ-ಪದವು ಸರ್ವಾಶ್ರಮಗಳಿಗೂ ಅನ್ವಯಿಸುತ್ತದೆ. ಆದುದರಿಂದ ಯಜ್ಞವೇ ಮೊದಲಾದ ಸರ್ವಾಶ್ರಮಧರ್ಮಗಳಂತೆ ಶ್ರುತಿಯು ಪಾಂಡಿತ್ಯ-ಬಾಲ್ಯ-ಮೌನಗಳನ್ನು ವಿದ್ಯೆಗೆ ಸಹಕಾರಿಯಾಗಿ ವಿಧಿಸುತ್ತದೆ.

**ದ್ವೈ.**—'ಯತಿತ್ವದಂತೆ ಇತರಾಶ್ರಮಧರ್ಮಗಳನ್ನು ದೇವತೆಗಳು ಮಾಡುತ್ತಾರೆ ಎಂದು ಶ್ರುತಿಯು ಹೇಳುವುದರಿಂದ' ಎಂಬುದು ಸೂತ್ರಾರ್ಥ.

ಹಿಂದೆ ಹೇಳಿದ ಆಶ್ರಮದ್ವಯವು ಮಾತ್ರವಲ್ಲ, ನಾಲ್ಕು ಆಶ್ರಮಗಳ ಧರ್ಮಗಳನ್ನೂ ದೇವತೆಗಳು ಅನುಷ್ಠಿಸುತ್ತಾರೆ. ಕೌಂಠರವ್ಯ-ಶ್ರುತಿಯು ಯತಿತ್ವದೃಷ್ಟಾಂತದಿಂದ ದೇವತೆಗಳು ಎಲ್ಲ ಆಶ್ರಮಗಳ ಧರ್ಮಗಳನ್ನು ಅನುಷ್ಠಿಸುತ್ತಾರೆಂದು ಹೇಳುತ್ತದೆ: 'ದೇವತೆಗಳೇ ಬ್ರಹ್ಮಚಾರಿಗಳು, ದೇವತೆಗಳೇ ಗೃಹಸ್ಥರು, ದೇವತೆಗಳೇ ವನಸ್ಥರು ಮತ್ತು ಮುನಿಗಳು; ಹೀಗೆ ಸರ್ವವರ್ಣಗಳಿಗೂ ಸರ್ವಾಶ್ರಮಗಳಿಗೂ ಸೇರಿದ ದೇವತೆಗಳು ಸರ್ವರ ಧರ್ಮಗಳನ್ನೂ ಅನುಷ್ಠಿಸುತ್ತಾರೆ.'

## ೧೫. ಅನಾವಿಷ್ಕಾರಾಧಿಕರಣ

**ಅನಾವಿಷ್ಕುರ್ವನ್ನನ್ವಯಾತ್ ॥ ೫೦ ॥**

೫೦ (ಬಾಲ್ಯವೆಂದರ) ತೋರಿಸಿಕೊಳ್ಳದೆ (ಇರುವುದು), ಏಕೆಂದರೆ (ವಾಕ್ಯಕ್ಕೆ) ಅನ್ವಯವಾಗುತ್ತದೆ

'ಬ್ರಾಹ್ಮಣನು ಪಾಂಡಿತ್ಯವನ್ನು ಅರಿತುಕೊಂಡು ಬಾಲ್ಯದಿಂದ ನಿಲ್ಲಲು ಬಯಸಬೇಕು'[1] (ಬೃ. ಉ ೩ ೫ ೧) ಎಂಬ ಶ್ರುತಿಯಲ್ಲಿ ಬಾಲ್ಯವೆಂದರೆ ಯಾವುದು ? ಅಲ್ಲಿ ಬಾಲನ ಭಾವವು ಅಥವಾ ಕರ್ಮವು ,ಬಾಲ್ಯವು ಎಂದು ತದ್ಧಿತಪ್ರತ್ಯಯವಾಗಿರುವಾಗ ಬಾಲಭಾವವೆಂಬ ವಯೋವಿಶೇಷವನ್ನು ಇಚ್ಛೆಯಿಂದ ಪಡೆದುಕೊಳ್ಳುವುದು ಅಶಕ್ಯವಾಗಿದೆ, ಆದುದರಿಂದ ಬಾಲ್ಯವೆಂದರೆ ಅವಿಧಿಪೂರ್ವಕವಾದ ಮೂತ್ರಾದಿಗಳ ವಿಸರ್ಜನೆಯೊ ಅಥವಾ ಆಂತರಿಕಭಾವಶುದ್ಧಿಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಬಾಲ್ಯವೆಂದರೆ ಮನಸ್ಸಿಗೆ ಬಂದ ಹಾಗೆ ತಿನ್ನುವುದು ಮತ್ತು ನಿಯಮವನ್ನನುಸರಿಸದ ಮೂತ್ರ-ಪುರೀಷಾದಿಗಳ ವಿಸರ್ಜನೆ, ಏಕೆಂದರೆ ಜ್ಞಾನಿಯಾದ ಸಂನ್ಯಾಸಿಗೆ ಪತಿತತ್ವಾದಿ-ದೋಷಗಳು ಒದಗುವುದಿಲ್ಲ, ಯಜ್ಞಾದಿಗಳಲ್ಲಿ ಪಶುಹಿಂಸಾದಿ ದೋಷಗಳು ಬರದಂತೆ ಇಲ್ಲಿಯೂ ತಿಳಿದುಕೊಳ್ಳಬೇಕು

**ಸಿದ್ಧಾಂತಿ**—ಪೂರ್ವಪಕ್ಷದ ಅಭಿಪ್ರಾಯವು ಸರಿಯಲ್ಲ; ಏಕೆಂದರೆ ಶ್ರುತಿಗೆ ಬೇರೊಂದು ಅರ್ಥವಿದೆ ಈ ಆಶ್ರಮದಲ್ಲಿ ಜ್ಞಾನಾಭ್ಯಾಸವೇ ಯತಿಗಳಿಗೆ ಅನುಷ್ಠೇಯವಾದ ಪ್ರಧಾನವು ಸಕಲಬಾಲಚರ್ಯೆಯನ್ನೂ ಅಂಗೀಕರಿಸಿದರೆ ಜ್ಞಾನಾಭ್ಯಾಸವು ಸಂಭವಿಸುವುದಿಲ್ಲ ಆದುದರಿಂದ ಆಂತರಿಕವಾದ ಭಾವವಿಶೇಷವನ್ನೇ ಬಾಲ್ಯವೆಂದು ತಿಳಿದುಕೊಳ್ಳಬೇಕು.[2] ಇದನ್ನೇ ತೋರಿಸಿಕೊಳ್ಳಕೂಡದೆಂದು ಸೂತ್ರಕಾರರು ಹೇಳುತ್ತಾರೆ; ಜ್ಞಾನ, ಅಧ್ಯಯನ, ಧಾರ್ಮಿಕತ್ವ ಮೊದಲಾದವುಗಳಿಂದ ತಮ್ಮನ್ನು ತಾವೇ ತೋರಿಸಿಕೊಳ್ಳದೆ ದಂಭದರ್ಪಾದಿರಹಿತನಾಗಿರಬೇಕು ಹೀಗಾದರೆ ಈ ವಾಕ್ಯವು ಪ್ರಧಾನ ವಿಷಯಕ್ಕೆ ಉಪಕಾರಕವಾದ ಅರ್ಥವನ್ನು ಅನುಸರಿಸುತ್ತದೆ ಆದುದರಿಂದಲೇ ಸ್ಮೃತಿಕಾರರು ಹೀಗೆ ಹೇಳುತ್ತಾರೆ. 'ಯಾವನನ್ನು ಸತ್ಪುರುಷ ಅಥವಾ ಅಸತ್ಪುರಷ, ಪಂಡಿತ ಅಥವಾ ಪಾಮರ, ಒಳ್ಳೆಯ ನಡತೆಯುಳ್ಳವನು ಅಥವಾ ಕೆಟ್ಟನಡತೆಯುಳ್ಳವನು—

---

1 ತಸ್ಮಾತ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾ ಸೇತ್ ।

2 ಬೃಹದಾರಣ್ಯಕಭಾಷ್ಯದಲ್ಲಿ ಆತ್ಮವಿಜ್ಞಾನವೆಂಬ ಬಲವನ್ನೇ ಬಾಲ್ಯವೆಂದು ಆಚಾರ್ಯರು ಹೇಳಿರುತ್ತಾರೆ.

ಎಂದು ತಿಳಿದುಕೊಳ್ಳುವುದಕ್ಕೆ ಆಗುವುದಿಲ್ಲವೊ ಅವನೇ ಬ್ರಾಹ್ಮಣನು';[1] 'ಗೂಢವಾದ ಧರ್ಮವನ್ನು ಆಶ್ರಯಿಸಿ ಜ್ಞಾನಿಯು ಅಜ್ಞಾತಚರ್ಯೆಯಿಂದ ನಡೆಯಬೇಕು ; ಕುರುಡನಂತೆಯೂ ಜಡನಂತೆಯೂ ಮೂಕನಂತೆಯೂ ಭೂಮಿಯಲ್ಲಿ ಸಂಚರಿಸಬೇಕು'.[2]

ವಿ.—ಇಲ್ಲಿ ಬಾಲ್ಯವೆಂದರೆ ಬಾಲಭಾವವೂ ಅಲ್ಲ, ಕರ್ಮವೂ ಅಲ್ಲ; ಬಾಲನ ಹಾಗೆ ಸ್ವಭಾವವನ್ನು ತೋರಿಸಿಕೊಳ್ಳದೆ ಇರುವುದು. ಅಂಥ ಸರಳವಾದ ಬಾಲಸ್ವಭಾವವನ್ನೇ ಜ್ಞಾನಿಯು ತನ್ನದಾಗಿ ಮಾಡಿಕೊಳ್ಳಬೇಕು ಎಂದರ್ಥ. ಬಾಲ್ಯದ ಇತರ ಲಕ್ಷಣಗಳು (ಎಂದರೆ ದುರಾಚಾರ, ಅಸಮಾಧಾನ ಮೊದಲಾದುವು) ಜ್ಞಾನಕ್ಕೆ ವಿರೋಧಿಗಳೆಂದು ಶ್ರುತಿಯು (ಕ. ಉ ೧. ೨. ೨೪) ತಿಳಿಸುತ್ತದೆ.

**ದ್ವೈ.**—'ತೋರಿಸಿಕೊಳ್ಳದೆ ಉಪದೇಶವನ್ನು ಮಾಡಬೇಕು ; ಏಕೆಂದರೆ ಅದಕ್ಕೆ ಕಾರಣವಿದೆ' ಎಂಬುದು ಸೂತ್ರಾರ್ಥ.

ಪ್ರಕಟಮಾಡಿಕೊಂಡು ಉಪದೇಶಕೊಟ್ಟರೆ ಅಯೋಗ್ಯರಿಗೂ ಜ್ಞಾನವು ಪ್ರಾಪ್ತವಾಗಿ ಅನರ್ಥವುಂಟಾಗುತ್ತದೆ[3]

---

1 ಯಂ ಸಂತಂ ನ ಚಾಸಂತಂ ನಾಶ್ರುತಂ ನ ಬಹುಶ್ರುತಮ್ ।
ನ ಸುವೃತ್ತಂ ನ ದುರ್ವೃತ್ತಂ ವೇದ ಕಶ್ಚಿತ್ ಸ ಬ್ರಾಹ್ಮಣಃ ॥

2 ಗೂಢಧರ್ಮಾಶ್ರಿತೋ ವಿದ್ವಾನಜ್ಞಾತಚರಿತಂ ಚರೇತ್ ।
ಅಂಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್ ॥

3 ಆವಿಷ್ಕಾರೇಽಯೋಗ್ಯಾನಾಮಪಿ ಸ್ವೀಕಾರಪ್ರಾಪ್ತಿಃ । ತಚ್ಚ ನಿಷಿದ್ಧಮ್ (ಮ. ಭಾ.).

## ೧೬. ಐಹಿಕಾಧಿಕರಣ

**ಐಹಿಕಮಪ್ಯಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ || ೫೧ ||**

೫೧ ಪ್ರಸ್ತುತವಾದುದಕ್ಕೆ ಪ್ರತಿಬಂಧವಿಲ್ಲದಿದ್ದರೆ ಈ ಜನ್ಮದಲ್ಲಿಯೂ (ವಿದ್ಯೆಯು ಉತ್ಪನ್ನವಾಗುತ್ತದೆ), ಏಕೆಂದರೆ (ಶ್ರುತಿಯಲ್ಲಿ) ಹಾಗೆ ಕಂಡುಬರುತ್ತದೆ

ಈ ಪಾದದ ೨೬ನೆಯ ಸೂತ್ರದಿಂದ ಪ್ರಾರಂಭಿಸಿ ಇಲ್ಲಿಯವರೆಗೂ ಅನೇಕ ವಿಧವಾದ ವಿದ್ಯೆಯ ಸಾಧನಗಳನ್ನು ನಿರ್ಧರಿಸಿದ್ದಾಯಿತು ಅವುಗಳ ಫಲವಾದ ವಿದ್ಯೆಯು ಈ ಜನ್ಮದಲ್ಲಿಯೇ ಸಿದ್ಧಿಸುವುದೊ ಅಥವಾ ಮುಂದಿನ ಜನ್ಮದಲ್ಲಿಯೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಈ ಜನ್ಮದಲ್ಲಿಯೇ ವಿದ್ಯೆಯು ಸಿದ್ಧಿಸುತ್ತದೆ, ಶ್ರವಣಾದಿಗಳು ವಿದ್ಯೆಗೆ ಸಾಕ್ಷಾತ್ ಸಾಧನಗಳು ಶ್ರವಣಾದಿಗಳನ್ನು ಮಾಡುವವರು ತಮಗೆ ಮುಂದಿನ ಜನ್ಮದಲ್ಲಿ ವಿದ್ಯೆಯುಂಟಾಗಲಿ ಎಂದು ಅವುಗಳನ್ನು ಮಾಡುವುದಿಲ್ಲ ಯಜ್ಞಾದಿಗಳೂ ಕೂಡ ಶ್ರವಣಾದಿಗಳ ದ್ವಾರದಿಂದಲೇ ವಿದ್ಯೆಯನ್ನುಂಟುಮಾಡುತ್ತವೆ

**ಸಿದ್ಧಾಂತಿ**—ಪ್ರಸ್ತುತವಾದ ವಿದ್ಯಾಸಾಧನಕ್ಕೆ ವಿಪಾಕವು ಸಮೀಪಿಸಿರುವ ಬೇರೆ ಕರ್ಮದಿಂದ ಪ್ರತಿಬಂಧವಾಗದಿದ್ದರೆ ಈ ಜನ್ಮದಲ್ಲಿಯೇ ವಿದ್ಯೆಯು ಹುಟ್ಟುತ್ತದೆ ಅದಕ್ಕೆ ಪ್ರತಿಬಂಧವುಂಟಾದರೆ ವಿದ್ಯೋತ್ಪತ್ತಿಯು ಮುಂದಿನ ಜನ್ಮದಲ್ಲಿ ಉಂಟಾಗುತ್ತದ ಮತ್ತೆ ವಿದ್ಯೋತ್ಪತ್ತಿಯ ವಿಷಯದಲ್ಲಿ, ಈ ಜನ್ಮದಲ್ಲಿಯೇ ಆಗಬೇಕೆಂಬ ಸಂಕಲ್ಪವನ್ನು ಮಾಡಬೇಕಾದ ಆವಶ್ಯಕತೆಯಿಲ್ಲ, ಏಕೆಂದರೆ ಈ ಜನ್ಮದಲ್ಲಿಯೊ ಅಥವಾ ಮುಂದಿನ ಜನ್ಮದಲ್ಲಿಯೊ ತನಗೆ ವಿದ್ಯೆಯುಂಟಾಗಲೆಂಬ ಸಂಕಲ್ಪವನ್ನು ಮಾಡಬಹುದು ಶ್ರವಣಾದಿ-ದ್ವಾರದಿಂದ ಉತ್ಪನ್ನವಾಗುವ ವಿದ್ಯೆಯೂ ಕೂಡ ಪ್ರತಿಬಂಧ-ಕ್ಷಯವನ್ನು ಅಪೇಕ್ಷಿಸಿಯೇ ಉಂಟಾಗುತ್ತದೆ ಆದುದರಿಂದಲೇ ಆತ್ಮನನ್ನು ಅರಿತುಕೊಳ್ಳುವುದು ಕಷ್ಟವೆಂದು ಶ್ರುತಿಯು ಹೇಳುತ್ತದೆ 'ಈ ಆತ್ಮನು ಬಹುಜನರ ಶ್ರವಣಕ್ಕೂ ಲಭ್ಯನಲ್ಲ, ಶ್ರವಣ ಮಾಡಿದ ಮೇಲೂ ಈತನನ್ನು ಬಹುಜನರು ಅರಿಯರು, ಇವನನ್ನು ಹೇಳುವವನು ಆಶ್ಚರ್ಯನು, ಪಡೆಯುವವನು ಕುಶಲನು, ಕುಶಲನಿಂದ ಅನುಶಿಷ್ಟನಾಗಿ ತಿಳಿದುಕೊಳ್ಳುವವನು ಆಶ್ಚರ್ಯನು'[1] (ಕ. ಉ ೧. ೨ ೭) ವಾಮದೇವನು ಗರ್ಭದಲ್ಲಿರುವಾಗಲೇ

---

[1] ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಽಽ-
ಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥

ಬ್ರಹ್ಮಭಾವವನ್ನು ಹೊಂದಿದನು—ಎಂಬ ಶ್ರುತಿಯು (ಐ ಉ ೨ ೫) ಜನ್ಮಾಂತರದಲ್ಲಿ ಸಂಚಿತವಾದ ಸಾಧನದಿಂದ ಇನ್ನೊಂದು ಜನ್ಮದಲ್ಲಿ ವಿದ್ಯೆಯುಂಟಾಗಬಹುದೆಂದು ತಿಳಿಸುತ್ತದೆ ಗೀತೆಯಲ್ಲಿಯೂ (೬ ೪೩) ಹೊಸದಾಗಿ ಪ್ರಾಪ್ತವಾದ ಜನ್ಮದಲ್ಲಿ ಜೀವನು ಪೂರ್ವದೇಹದ ಬುದ್ಧಿಯ ಸಂಬಂಧವನ್ನು ಪಡೆದುಕೊಳ್ಳುತ್ತಾನೆಂದು ಹೇಳಿದೆ ಆದುದರಿಂದ ಪ್ರತಿಬಂಧದ ಅಪೇಕ್ಷೆಯಿಂದ ಈ ಜನ್ಮದಲ್ಲಾಗಲಿ ಇನ್ನೊಂದು ಜನ್ಮದಲ್ಲಾಗಲಿ ವಿದ್ಯೋತ್ಪತ್ತಿಯಾಗಬಹುದು

**ವಿ.**—'ಇಹಲೋಕಕ್ಕೆ ಸೇರಿದ್ದು ಪ್ರಸ್ತುತವಾದ ಪ್ರತಿಬಂಧವಿಲ್ಲದಿದ್ದರೆ ಕೂಡಲೇ ಸಿದ್ಧಿಸುತ್ತದೆ, ಹಾಗೆ ಶ್ರುತಿಯು ತಿಳಿಸುತ್ತದೆ' ಎಂಬುದು ಸೂತ್ರಾರ್ಥ

ವಿದ್ಯೆಯು ಎರಡು ಬಗೆಯಾಗಿದೆ ಅಭ್ಯುದಯಫಲವುಳ್ಳದ್ದು, ಮುಕ್ತಿಫಲವುಳ್ಳದ್ದು ಅವುಗಳಲ್ಲಿ ಅಭ್ಯುದಯಫಲವುಳ್ಳದ್ದು ಸ್ವಸಾಧನವಾದ ಪುಣ್ಯಕರ್ಮಗಳ ಅನಂತರ ಹುಟ್ಟುತ್ತದೆಯೊ ಅಥವಾ ನಿಯಮವಿಲ್ಲದೆ ಕಾಲಾಂತರದಲ್ಲಿ ಹುಟ್ಟುತ್ತದೆಯೊ ?—ಎಂಬುದು ಸಂಶಯ ವಿಳಂಬಕ್ಕೆ ಕಾರಣವೇನೂ ಇಲ್ಲದಿರುವುದರಿಂದ ಕೂಡಲೇ ಉಂಟಾಗುತ್ತದೆಂದು ಪೂರ್ವಪಕ್ಷಿಯು ಹೇಳುತ್ತಾನೆ ಈ ಮತವನ್ನು ಸೂತ್ರಕಾರರು ನಿರಾಕರಿಸುತ್ತಾರೆ **ಐಹಿಕಮ್** ಎಂದರೆ ಅಭ್ಯುದಯಫಲಕ್ಕಾಗಿ ಮಾಡುವ ಉಪಾಸನೆಯು ಪ್ರಬಲವಾದ ಕರ್ಮಾಂತರದ ಪ್ರತಿಬಂಧವಿಲ್ಲದಿದ್ದರೆ ಕೂಡಲೇ ಇದು ಉತ್ಪನ್ನವಾಗುತ್ತದೆ, ಪ್ರತಿಬಂಧವಿದ್ದರೆ ಉತ್ತರಕಾಲದಲ್ಲಿ ಆಗುತ್ತದೆ, ಏಕೆಂದರೆ ಶ್ರುತಿಯು ಕರ್ಮಫಲಪ್ರತಿಬಂಧವನ್ನು ಒಪ್ಪಿಕೊಳ್ಳುತ್ತದೆ. 'ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಉಪನಿಷತ್ತಿನಿಂದಲೂ ಯಾವುದನ್ನು ಮಾಡಿದರೂ ಅದು ವೀರ್ಯವತ್ತರವಾಗುತ್ತದೆ'[1] (ಛಾಂ ಉ ೧ ೧ ೧೦) ಎಂಬ ಶ್ರುತಿಯ ಅರ್ಥ ಹೀಗಿದೆ, ಉದ್ಗೀಥವಿದ್ಯೆಯಿಂದ ಕೂಡಿದ ಕರ್ಮವು ಪ್ರತಿಬಂಧವಿಲ್ಲದೆ ಫಲವನ್ನು ಕೊಡುತ್ತದೆ

**ದ್ವೈ.**—'ಪ್ರಾರಬ್ಧ-ಪ್ರತಿಬಂಧಕವಿಲ್ಲದಿದ್ದರೆ ಈ ಜನ್ಮದಲ್ಲಿಯೇ ಪರಬ್ರಹ್ಮನ ದರ್ಶನವಾಗುತ್ತದೆ,[2] ಹಾಗೆ ಶ್ರುತಿಯಲ್ಲಿ ಕಂಡುಬರುತ್ತದೆ' ಎಂಬುದು ಸೂತ್ರಾರ್ಥ

'ಆತ್ಮನನ್ನೇ ನೋಡಬೇಕು, ಕೇಳಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು' (ಬೃ ಉ. ೪ ೫ ೬) ಎಂಬ ಶ್ರುತಿಯು ಸಾಕ್ಷಾತ್-ಜ್ಞಾನಕ್ಕಾಗಿ ಶ್ರವಣಾದಿಗಳನ್ನು ವಿಧಿಸುತ್ತದೆ ಪ್ರತಿಬಂಧವಿದ್ದರೆ ಜನ್ಮಾಂತರದಲ್ಲಿ ಜ್ಞಾನವು ಉತ್ಪನ್ನವಾಗುತ್ತದೆ

---

[1] ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ ।

[2] ತಜ್ಞ ದರ್ಶನಮೈಹಿಕಮೇವ ಪ್ರಾರಬ್ಧಪ್ರತಿಬಂಧಾಭಾವೇ (ಮ. ಭಾ.).

## ೧೭. ಮುಕ್ತಿಫಲಾಧಿಕರಣ

**ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ॥ ೫೨ ॥**

೫೨ ಹೀಗೆ ಮುಕ್ತಿಫಲದಲ್ಲಿ ಯಾವ ನಿಯಮವೂ ಇಲ್ಲ, ಏಕೆಂದರೆ ಅದೇ ಅವಸ್ಥೆಯೆಂದು ದೃಢವಾಗಿ ಹೇಳಿದೆ, ಅದೇ ಅವಸ್ಥೆಯೆಂದು ದೃಢವಾಗಿ ಹೇಳಿದೆ.

ಮುಮುಕ್ಷುಗಳು ವಿದ್ಯಾಸಾಧನಗಳನ್ನು ಆಶ್ರಯಿಸುವಾಗ ಸಾಧನಗಳ ವೀರ್ಯ ವಿಶೇಷದಿಂದ ವಿದ್ಯಾಸ್ವರೂಪವಾದ ಫಲದಲ್ಲಿ ಐಹಿಕಫಲ, ಆಮುಷ್ಮಿಕಫಲ ಎಂಬ ನಿಯಮವು ಕಂಡುಬರುತ್ತದೆ ಹಾಗೆಯೇ ಮುಕ್ತಿಸ್ವರೂಪವಾದ ಫಲದಲ್ಲಿಯೂ ಯಾವುದಾದರೊಂದು ವಿಶೇಷವಿರಬಹುದು ಎಂಬ ಸಂಶಯುವುಂಟಾಗಬಹುದು ಮುಕ್ತಿಫಲದಲ್ಲಿ ಯಾವ ನಿಯಮವೂ ಇಲ್ಲ—ಎಂದು ಸೂತ್ರಕಾರರು ಹೇಳುತ್ತಾರೆ, ಏಕೆಂದರೆ ಮುಕ್ತಿಯ ಅವಸ್ಥೆಯು ಏಕರೂಪವಾಗಿರುವುದೆಂದು ಸರ್ವಶ್ರುತಿಗಳಲ್ಲಿಯೂ ಒತ್ತಿ ಹೇಳಿದೆ ಬ್ರಹ್ಮವೇ ಮುಕ್ತಿಯ ಅವಸ್ಥೆ, ಬ್ರಹ್ಮದಲ್ಲಿ ಅನೇಕಾಕಾರಗಳ ಸಂಬಂಧವಿಲ್ಲ,[1] ಏಕೆಂದರೆ ಶ್ರುತಿಗಳು 'ಅಸ್ಥೂಲ, ಅನಣು' (ಬೃ ಉ ೩ ೮ ೮), 'ಹೀಗಲ್ಲ, ಹೀಗಲ್ಲ—ಎಂದು ಹೇಳಲ್ಪಟ್ಟಿರುವ ಅವನೇ ಈ ಆತ್ಮನು' (ಬೃ ಉ ೩ ೯ ೨೬), 'ಎಲ್ಲಿ ಮತ್ತೊಂದು ಕಾಣುವುದಿಲ್ಲವೊ' (ಛಾಂ ಉ ೭.೧೪ ೧), 'ಮುಂದಿರುವ ಇದು ಅಮೃತವಾದ ಬ್ರಹ್ಮವೇ' (ಮುಂ. ಉ ೨ ೨ ೧೨), 'ಈ ಸರ್ವವು—ಆತ್ಮನೇ' (ಬೃ. ಉ ೨ ೪ ೬), 'ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವುದೊ ಅಲ್ಲಿ ಯಾವುದರಿಂದ ಯಾವುದನ್ನು ನೋಡಿಯಾನು ?' (ಬೃ ಉ ೪ ೪ ೧೫) ಎಂದು ಏಕಲಿಂಗತ್ವವನ್ನೇ ಒತ್ತಿ ಹೇಳಿರುತ್ತವೆ ಸಗುಣವಿದ್ಯೆಗಳಲ್ಲಿ ಫಲಗಳ ತಾರತಮ್ಯವಿದ್ದರೂ ನಿರ್ಗುಣವಿದ್ಯೆಯಲ್ಲಿ ಫಲಭೇದವಿರುವುದಿಲ್ಲ, ಆದುದರಿಂದ ಮುಕ್ತಿಯಲ್ಲಿ ಯಾವ ಅತಿಶಯುವೂ ಸಂಭವಿಸುವುದಿಲ್ಲ

ವಿ.—ಕರ್ಮಾತಿಶಯದ ಮೂಲಕ ಉತ್ಪನ್ನವಾಗುವ ಮತ್ತು ಮುಕ್ತಿಯೇ ಫಲವಾಗಿರುವ ಉಪಾಸನೆಗೆ 'ಕೂಡಲೇ ಸಿದ್ಧಿಸುತ್ತದೆ' ಎಂಬ ನಿಯಮವಿಲ್ಲ; ಏಕೆಂದರೆ ಪ್ರತಿಬಂಧಕವಿಲ್ಲದಿರುವ ಅವಸ್ಥೆಯು ನಿಶ್ಚಿತವಾಗಿದೆ. ಮುಕ್ತಿಯೇ ಫಲವಾಗಿರುವ ಉಪಾಸನೆಯನ್ನು ಉತ್ಪತ್ತಿಮಾಡುವ ಕರ್ಮಗಳು ಇತರ ಕರ್ಮಗಳಿಗಿಂತ ಪ್ರಬಲವಾಗಿರುವುದರಿಂದ ಪ್ರತಿಬಂಧವನ್ನು ಹೊಂದುವುದಿಲ್ಲವೆಂದು ಆಕ್ಷೇಪಿಸಬಹುದು. ಆದರೆ ಇಲ್ಲಿಯೂ ಬ್ರಹ್ಮ

---

[1] ಮುಕ್ತ್ಯವಸ್ಥಾ ಹಿ ಸರ್ವವೇದಾಂತೇಷ್ವೇಕರೂಪೈವಾವಧಾರ್ಯತೇ। ಬ್ರಹ್ಮೈವ ಹಿ ಮುಕ್ತ್ಯವಸ್ಥಾ। ನ ಚ ಬ್ರಹ್ಮಣೋಽನೇಕಾಕಾರಯೋಗೋಽಸ್ತಿ (ಸೂ. ಭಾ.).

ಜ್ಞಾನಿಗಳಿಗೆ ಹಿಂದೆ ಮಾಡಲ್ಪಟ್ಟ ಪ್ರಬಲವಾದ ಅಪಚಾರಗಳಿಂದ ಪ್ರತಿಬಂಧವು ಸಂಭವಿಸಬಹುದು—ಎಂಬುದು ಪರಿಹಾರ.

**ದ್ವೈ.**—'ಜ್ಞಾನೋತ್ಪತ್ತಿಯಾದ ಕೂಡಲೇ ಮುಕ್ತಿಫಲವಾಗಬೇಕೆಂಬ ನಿಯಮವಿಲ್ಲ ; ಏಕೆಂದರೆ ಬ್ರಹ್ಮಜ್ಞಾನಿಗೆ ಮುಕ್ತಿಫಲವು 'ನಿಶ್ಚಿತವಾಗಿದೆ' ಎಂಬುದು ಸೂತ್ರಾರ್ಥ.

ಹೀಗೆ ಪ್ರಾರಬ್ಧಕರ್ಮವಿಲ್ಲದಿದ್ದರೆ ಶರೀರಪಾತವಾದ ಕೂಡಲೆ ಮೋಕ್ಷವು ಸಿದ್ಧಿಸುತ್ತದೆ ; ಪ್ರಾರಬ್ಧಕರ್ಮವಿದ್ದರೆ ಜನ್ಮಾಂತರಗಳನ್ನು ಹೊಂದಬೇಕಾಗುತ್ತದೆ ; ಆದುದರಿಂದ ಯಾವ ನಿಯಮವೂ ಇಲ್ಲ.[1] ಬ್ರಹ್ಮಸಂಸ್ಥನಿಗೆ ಮೋಕ್ಷವು ಸಿದ್ಧಿಸುತ್ತದೆಂದು ಶ್ರುತಿಯು ಒತ್ತಿಹೇಳುತ್ತದೆ : 'ಧರ್ಮಿಯು ಸ್ವರ್ಗಕ್ಕೆ ಹೋಗುತ್ತಾನೆ, ಅಧರ್ಮಿಯು ನರಕಕ್ಕೆ ಹೋಗುತ್ತಾನೆ ; ಬ್ರಹ್ಮಸಂಸ್ಥನು ಅಮೃತತ್ವವನ್ನು ಹೊಂದುತ್ತಾನೆ.'

[1] ಏವಮೇವ ಪ್ರಾರಬ್ಧಕರ್ಮಾಭಾವೇ ಶರೀರಪಾತಾನಂತರಮೇವ ಮೋಕ್ಷಃ ತದ್ಭಾವೇ ಜನ್ಮಾಂತರಾಣೀತ್ಯನಿಯಮಃ (ಮ. ಭಾ.).

# ನಾಲ್ಕನೆಯ ಅಧ್ಯಾಯ

## ಮೊದಲನೆಯ ಪಾದ

## ೧. ಆವೃತ್ತ್ಯಧಿಕರಣ

(ಸೂ. ೧–೨)

**ಆವೃತ್ತಿರಸಕೃದುಪದೇಶಾತ್ ॥ ೧ ॥**

೧. (ಉಪಾಸನೆಯನ್ನು) ಪುನಃ ಪುನಃ (ಮಾಡಬೇಕು); ಏಕೆಂದರ ಅನೇಕ ವೇಳೆ ಉಪದೇಶಿಸಿರುತ್ತದೆ.

ಮೂರನೆಯ ಅಧ್ಯಾಯದಲ್ಲಿ ಪರಾಪರವಿದ್ಯೆಗಳಿಗೆ ಸಂಬಂಧಪಟ್ಟ ಸಾಧನಗಳ ವಿಷಯದಲ್ಲಿ ಬಹುಮಟ್ಟಿಗೆ ವಿಚಾರವನ್ನು ನಡೆಸಿದ್ದಾಯಿತು. ಈಗ ಈ ನಾಲ್ಕನೆಯ ಅಧ್ಯಾಯದಲ್ಲಿ ಫಲವಿಷಯವಾದ ವಿಚಾರವು ಬರುವುದಲ್ಲದೆ ಪ್ರಸಂಗದಿಂದ ಇತರ ವಿಷಯಗಳನ್ನು ವಿಚಾರಮಾಡಲಾಗುವುದು.

'ಎಲೆ ಮೈತ್ರೇಯಿ, ಆತ್ಮನನ್ನು ನೋಡಬೇಕು, ಶ್ರವಣಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನಮಾಡಬೇಕು,[1] (ಬೃ. ಉ. ೪. ೫. ೬), 'ಧೀಮಂತನಾದ ಬ್ರಾಹ್ಮಣನು ಆತ್ಮನನ್ನೇ ತಿಳಿದುಕೊಂಡು ಪ್ರಜ್ಞೆಯನ್ನು ಅವಲಂಬಿಸಬೇಕು'[2] (ಬೃ. ಉ, ೪. ೪. ೨೧), 'ಅವನನ್ನೇ ಅನ್ವೇಷಿಸಬೇಕು, ಅವನನ್ನೇ ಅರಿತುಕೊಳ್ಳಲು ಬಯಸಬೇಕು'[3] (ಛಾಂ. ಉ. ೮. ೭. ೧)—ಎಂದು ಶ್ರುತಿಗಳು ಹೇಳುತ್ತವೆ. ಇಲ್ಲಿ ಉಪಾಸನೆಯನ್ನು ಒಂದೇ ಸಲ ಮಾಡಬೇಕೊ ಅಥವಾ ಪುನಃ ಪುನಃ ಮಾಡಬೇಕೊ ?—ಎಂಬುದು ಸಂಶಯ.

**ಪೂರ್ವಪಕ್ಷ**—ಪ್ರಯಾಜಾದಿಗಳ ಹಾಗೆ ಒಂದೇ ಸಲ ಮಾಡಿದರೆ ಸಾಕು; ಏಕೆಂದರೆ ಅಷ್ಟರಿಂದಲೇ ಶಾಸ್ತ್ರದ ಉದ್ದೇಶವು ಸಾರ್ಥಕವಾಗುವುದು ಆವೃತ್ತಿಯು (ಎಂದರೆ ಪುನಃ ಪುನಃ ಮಾಡುವುದು) ಶ್ರುತಿಯಲ್ಲಿ ಇಲ್ಲದಿರುವುದರಿಂದ ಅದನ್ನು ಮಾಡಬೇಕಾಗಿಲ್ಲ. 'ಶ್ರವಣಮಾಡಬೇಕು, ಮನನ ಮಾಡಬೇಕು, ನಿದಿಧ್ಯಾಸನ ಮಾಡಬೇಕು' —ಎಂಬುದರ ಅರ್ಥ ಹೀಗಿದೆ: ಒಂದು ಸಲ ಶ್ರವಣ, ಒಂದು ಸಲ ಮನನ, ಒಂದು ಸಲ ನಿದಿಧ್ಯಾಸನ ಮಾಡಿದರೆ ಸಾಕಾಗುತ್ತದೆ, ಪುನಃ ಪುನಃ ಮಾಡುವುದು ಆವಶ್ಯಕವಲ್ಲ.

---

[1] ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ।

[2] ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ।

[3] ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ।

ಸಿದ್ಧಾಂತಿ—'ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನ ಮಾಡಬೇಕು' ಎಂದು ಶ್ರುತಿಯು ಅನೇಕ ಸಲ ಉಪದೇಶಿಸಿರುವುದರಿಂದ ಉಪಾಸನೆಯನ್ನು ಪುನಃ ಪುನಃ ಮಾಡಬೇಕು ಶ್ರವಣಾದಿಗಳು ದರ್ಶನದಲ್ಲಿ ಕೊನೆಗಾಣುವುದರಿಂದ ಅವುಗಳನ್ನು ಆವೃತ್ತಿಮಾಡಿದರೆ ದೃಷ್ಟಾರ್ಥವಾಗುವುವು ಮತ್ತೆ ಉಪಾಸನೆ ಮೊದಲಾದ ಶಬ್ದಗಳು ಆವೃತ್ತಿ ಎಂಬ ಗುಣವುಳ್ಳ ಕ್ರಿಯೆಯನ್ನೇ ಸೂಚಿಸುತ್ತವೆ ವಿದ್, ಉಪಾಸ್—ಎಂಬ ಧಾತುಗಳನ್ನು ಉಪನಿಷತ್ತುಗಳಲ್ಲಿ ಏಕಾರ್ಥದಲ್ಲಿಯೇ ಪ್ರಯೋಗಿಸಿರುವುದು ಕಂಡುಬರುತ್ತದೆ. ಕೆಲವೆಡೆಗಳಲ್ಲಿ ವಿದ್‌ಧಾತುವಿನಿಂದ ಉಪಕ್ರಮಿಸಿ ಉಪಾಸ್-ಧಾತುವಿನಿಂದ ಉಪಸಂಹರಿಸಿರುತ್ತದೆ, ಉದಾಹರಣೆಗೆ **ಯಸ್ತದ್ವೇದ ಯತ್ ಸವೇದ ಸ ಮಯೈತದುಕ್ತಃ**[1] (ಛಾಂ ಉ ೪ ೧ ೪) ಎಂಬಲ್ಲಿ **ಅನು ಮಾ ಏತಾಂ ಭಗವೋ ದೇವತಾಂ ಶಾಧಿ ಯಾಂ ದೇವತಾಮ್ ಉಪಾಸ್ಸೇ**[2] (ಛಾಂ ಉ ೪ ೨ ೨) ಎಂದಿದೆ ಕೆಲವೆಡೆಗಳಲ್ಲಿ ಉಪಾಸ್-ಧಾತುವಿನಿಂದ ಉಪಕ್ರಮಿಸಿ ವಿದ್-ಧಾತುವಿನಿಂದ ಉಪಸಂಹರಿಸಿರುತ್ತದೆ, ಉದಾಹರಣೆಗೆ **ಮನೋ ಬ್ರಹ್ಮೇತ್ಯುಪಾಸೀತ**[3] (ಛಾಂ ಉ ೩ ೧೮ ೧) ಎಂಬಲ್ಲಿ **ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ**[4] (ಛಾಂ ಉ ೩ ೧೮ ೩) ಎಂದಿದೆ ಇದರಿಂದ ಶ್ರುತಿಯು ಒಂದು ಸಲ ಉಪದೇಶಿಸಿರುವಾಗಲೂ ಆವೃತ್ತಿಮಾಡಬೇಕೆಂಬುದು ಸಿದ್ಧವಾಯಿತು ಅನೇಕ ವೇಳೆ ಉಪದೇಶಮಾಡಿರುವಾಗ ಆವೃತ್ತಿಮಾಡಬೇಕೆಂಬುದು ಸಾಕ್ಷಾತ್ತಾಗಿಯೇ ಸೂಚಕವಾಗಿದೆ

ವಿ.—ಮೂರನೆಯ ಅಧ್ಯಾಯದಲ್ಲಿ ಸಾಧನಗಳೊಂದಿಗೆ ಉಪಾಸನೆಯನ್ನು ವಿಚಾರಿಸಿದ್ದಾಯಿತು ಈಗ ಉಪಾಸನಾಸ್ವರೂಪದ ಶೋಧನಪೂರ್ವಕವಾಗಿ ವಿದ್ಯೆಯ ಫಲವನ್ನು ಚಿಂತಿಸಲಾಗುತ್ತದೆ.

**ಬ್ರಹ್ಮವಿದಾಪ್ನೋತಿ ಪರಮ್** (ತೈ ಉ ೨ ೧ ೧) ಇದೇ ಮೊದಲಾದ ವೇದಾಂತವಾಕ್ಯಗಳಲ್ಲಿ ಬ್ರಹ್ಮಪ್ರಾಪ್ತಿಸಾಧನವಾಗಿ ವಿಹಿತವಾಗಿರುವ ವೇದನವನ್ನು ಪುನಃ ಪುನಃ ಮಾಡಬೇಕು, ಏಕೆಂದರೆ ವೇದನವನ್ನು ಅಸಕೃತ್ತಾಗಿ ಮಾಡಿದರೇ ಶಾಸ್ತ್ರದ ಅರ್ಥವು ಪೂರ್ಣವಾಗುತ್ತದೆ ಶಾಸ್ತ್ರವು ಧ್ಯಾನೋಪಾಸನ-ಪರ್ಯಾಯವಾದ ವೇದನ-ಶಬ್ದದಿಂದಲೇ ಉಪದೇಶವನ್ನು ಮಾಡುತ್ತದೆ ಧ್ಯಾಯ್, ಉಪಾಸ್, ವಿದ್—ಇವು

---

1 'ರೈಕ್ವನು ಯಾವುದನ್ನು ಅರಿತುಕೊಂಡಿರುವನೊ ಅದನ್ನು ಅರಿತುಕೊಂಡಿರುವವನಿಗೂ ಹಾಗೆಯೇ ಆವನನ್ನೇ ನಾನು ಹೀಗೆ ಹೇಳಿದ್ದು'

2 'ಭಗವಂತನೆ, ನೀನು ಯಾವ ದೇವತೆಯನ್ನು ಉಪಾಸಿಸುತ್ತಿರುವೆಯೊ ಆ ದೇವತೆಯನ್ನು ನನಗೆ ಉಪದೇಶಿಸು'

3 'ಮನಸ್ಸನ್ನು ಬ್ರಹ್ಮವೆಂದು ಉಪಾಸಿಸಬೇಕು'

4 'ಯಾವನು ಹೀಗೆ ಅರಿತುಕೊಂಡಿರುವನೊ ಅವನು ಕೀರ್ತಿಯಿಂದಲೂ, ಯಶಸ್ಸಿನಿಂದಲೂ, ಬ್ರಹ್ಮವರ್ಚಸ್ಸಿನಿಂದಲೂ ಪ್ರಕಾಶಿಸುತ್ತಾನೆ ಮತ್ತು ತಪಿಸುತ್ತಾನೆ.'

ಗಳನ್ನು ಒಂದೇ ವಾಕ್ಯದಲ್ಲಿ ಒಂದೇ ವಿಷಯದಲ್ಲಿ ಪ್ರಯೋಗಿಸಿರುವುದರಿಂದ ವೇದನೋ-ಪಾಸನಧ್ಯಾನಗಳಿಗೆ ಒಂದೇ ಅರ್ಥವಿದೆಯೆಂಬುದು ತಿಳಿದುಬರುತ್ತದೆ[1] ಧ್ಯಾನವೆಂದರೆ ಚಿಂತನವು ಸ್ಮೃತಿಸಂತತಿರೂಪದಲ್ಲಿರುತ್ತದೆ, ಕೇವಲ ಸ್ಮೃತಿಮಾತ್ರವಲ್ಲ, ಉಪಾಸನಾ-ಶಬ್ದಕ್ಕೂ ಇದೇ ಅರ್ಥವಿದೆ

**ಟಿಪ್ಪಣಿ.**—ಈ ಅಧ್ಯಾಯದಲ್ಲಿ ಬ್ರಹ್ಮಸಾಕ್ಷಾತ್ಕಾರದ ಫಲವನ್ನು ವಿಚಾರಿಸಲಾಗುತ್ತದೆ ಮೊದಲನೆಯ ಪಾದದಲ್ಲಿ ಕರ್ಮನಾಶವನ್ನು ಹೇಳಿದೆ ಮೊದಲು ನಿತ್ಯವೂ ಮಾಡಲ್ಪಡತಕ್ಕ ಮತ್ತು ಮುಖ್ಯವಾದ ಕೆಲವು ಸಾಧನಗಳನ್ನು ವಿವರಿಸಲಾಗುತ್ತದೆ

'ಆತ್ಮನನ್ನು ನೋಡಬೇಕು, ಕೇಳಬೇಕು ಮನನಮಾಡಬೇಕು' (ಬೃ ಉ ೫ ೫ ೬) ಇದೇ ಮೊದಲಾದ ಶ್ರುತಿಗಳಲ್ಲಿ ವಿಧಿಸಲ್ಪಟ್ಟ ಶ್ರವಣಾದಿಗಳು ಅಗ್ನಿಷ್ಟೋಮದಂತೆ ಒಂದೇಸಲ ಮಾಡಿದರೆ ಫಲವನ್ನು ಕೊಡುವುದಿಲ್ಲ ; ಆದುದರಿಂದ ಇವುಗಳನ್ನು ಪುನಃಪುನಃ ಮಾಡಬೇಕು[2] **ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಮ್** (ಛಾಂ ಉ ೬ ೮ ೭) ಇದೇ ಮೊದಲಾದ ಶ್ರುತಿಗಳಲ್ಲಿ ಅಸಕೃದುಪದೇಶವನ್ನು ಮಾಡಿದೆ

## ಲಿಂಗಾಚ್ಚ ॥ ೨ ॥

೨ ಲಿಂಗವಿರುವುದರಿಂದಲೂ (ಆವೃತ್ತಿಯನ್ನು ಮಾಡಬೇಕು)

ಈ ಪ್ರತ್ಯಯಗಳನ್ನು ಆವೃತ್ತಿಮಾಡಬೇಕೆಂಬುದಕ್ಕೆ ಶ್ರುತಿಗಳಲ್ಲಿಯೂ ಲಿಂಗವಿದೆ ಉದ್ಗೀಥವಿದ್ಯೆಯಲ್ಲಿ 'ಆದಿತ್ಯನೇ ಉದ್ಗೀಥನು' (ಛಾಂ ಉ ೧ ೫ ೧) ಎಂಬೀ ಉಪಾ-ಸನೆಯು ಏಕಪುತ್ರತಾದೋಷವಾಗುವುದೆಂದು ನಿಂದಿಸಿ, 'ನೀನು ರಶ್ಮಿಗಳನ್ನು ಆವೃತ್ತಿ ಮಾಡು' (ಛಾಂ ಉ ೧ ೫ ೨) ಎಂದು ರಶ್ಮಿಬಹುತ್ವದ-ಉಪಾಸನೆಯನ್ನು ಬಹುಪುತ್ರರಾಗುವುದಕ್ಕೆ ವಿಧಾನಮಾಡಿದೆ, ಆದುದರಿಂದ ಹೋಲಿಕೆಯಿಂದಲೂ ಸರ್ವಪ್ರತ್ಯಯಗಳಲ್ಲಿಯೂ ಆವೃತ್ತಿಯು ಸಿದ್ಧವಾಯಿತು ಪರಬ್ರಹ್ಮಪ್ರತ್ಯಯದಲ್ಲಿ ಆವೃತ್ತಿಯಿಂದ ಪ್ರಯೋಜನವಾಗುವುದಿಲ್ಲ—ಎಂದು ಹೇಳುವುದು ತಪ್ಪು, ಏಕೆಂದರೆ ಯಾವನು **ತತ್ತ್ವಮಸಿ** ಎಂದು ಒಂದೇ ಸಲ ಹೇಳಿದ ಬ್ರಹ್ಮಾತ್ಮತ್ವವನ್ನು ಅನುಭವಿಸಬಲ್ಲನೊ ಅವನಿಗೆ ಆವೃತ್ತಿಯು ವ್ಯರ್ಥವಾಗಬಹುದು ಆದರೆ ಯಾವನು ಹಾಗೆ ಶಕ್ತನಲ್ಲವೊ ಅವನಿಗೆ ಆವೃತ್ತಿಯು ಉಪಯುಕ್ತವೇ ಆಗಿರುತ್ತದೆ ಆದುದರಿಂದಲೇ ಛಾಂದೋಗ್ಯದಲ್ಲಿ **ತತ್ತ್ವಮಸಿ** ಎಂಬುದನ್ನು ಅನೇಕವೇಳೆ ಉಪದೇಶ ಮಾಡಿರುತ್ತದೆ ಅಜ್ಞಾನ, ಸಂಶಯ, ವಿಪರ್ಯಯ—ಎಂಬ ಪ್ರತಿಬಂಧವಿಲ್ಲದ ಕುಶಲಬುದ್ಧಿಯುಳ್ಳವರಿಗೆ **ತತ್ತ್ವ-ಮಸಿ** ವಾಕ್ಯವನ್ನು ಒಂದೇಸಲ ಹೇಳಿದರೂ ಅದರ ಅರ್ಥವನ್ನು ಅನುಭವಿಸಲು ಅವರು

---

1 ತತ್ಪರ್ಯಾಯತ್ವಂ ಚ ವಿದ್ಯುಪಾಸ್ತಿಧ್ಯಾಯತೀನಾಮೇಕಸ್ಮಿನ್ ವಿಷಯೇ ವೇದನೋ-ಪದೇಶಪರವಾಕ್ಯೇಷು ಪ್ರಯೋಗಾದವಗಮ್ಯತೇ (ಶ್ರೀಭಾಷ್ಯ)

2 ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ಇತ್ಯಾದೀನಾಂ ನಾಗ್ನಿಷ್ಟೋಮಾದಿವದೇಕವಾರೇಣೈವ ಫಲಪ್ರಾಪ್ತಿಃ । ಕಿಂತ್ವಾವೃತ್ತಿಃ ಕರ್ತವ್ಯಾ (ಮ. ಭಾ.).

ಶಕ್ತರಾಗಿರುತ್ತಾರೆ, ಆದುದರಿಂದ ಅವರಿಗೆ ಆವೃತ್ತಿಯು ವ್ಯರ್ಥವಾಗಬಹುದು ಆದರೆ ಯಾವನಿಗೆ ಈ ಅನುಭವವು ಕೂಡಲೇ ಉಂಟಾಗುವುದಿಲ್ಲವೊ ಅವನ ಅನುಭವಕ್ಕಾಗಿ ಆವೃತ್ತಿಯನ್ನು ಒಪ್ಪಿಕೊಂಡಿದ ವಾಕ್ಯಾರ್ಥದ ಜ್ಞಾನವಾದ ಮೇಲೆ ಆವೃತ್ತಿಯಿಲ್ಲ ವಾಕ್ಯಾರ್ಥಜ್ಞಾನವನ್ನು ಹೊಂದಿದವನನ್ನು ಚ್ಯುತನನ್ನಾಗಿ ಮಾಡಿ ಆವೃತ್ತಿಯಲ್ಲಿ ತೊಡಗಿಸಬಾರದು, ವರನನ್ನು ಕೊಲ್ಲಲು ಕನ್ಯೆಯನ್ನು ಕೊಟ್ಟು ಯಾರೂ ಮದುವೆಮಾಡಿಸುವುದಿಲ್ಲ[1] ಆದರೆ ಯಾವನು ಮಂದಮತಿಯಾಗಿ ಸರಿಯಾಗಿ ತಿಳಿಯದುದರಿಂದ ಆ ವಾಕ್ಯಾರ್ಥವನ್ನು ತಾನೇ ಬಿಡುವುದಕ್ಕೆ ಹೋಗುವನೊ ಅವನನ್ನು ವಾಕ್ಯಾರ್ಥದಲ್ಲಿ ಸ್ಥಿರಗೊಳಿಸುವುದನ್ನೇ ಆವೃತ್ತಿಯೇ ಮೊದಲಾದ ವಾಚೋಯುಕ್ತಿಯಿಂದ ಒಪ್ಪಿಕೊಂಡಿರುತ್ತದೆ ಆದುದರಿಂದ ಪರಬ್ರಹ್ಮವಿಷಯಕವಾದ ಪ್ರತ್ಯಯಗಳಲ್ಲಿಯೂ ಅದರ ಸಾಧನವನ್ನು ಉಪದೇಶಿಸುವ ವಾಕ್ಯಗಳಲ್ಲಿಯೂ ಆವೃತ್ತಿಯು ಸಿದ್ಧವಾಯಿತು

**ವಿ.**—ಲಿಂಗವೆಂದರೆ ಸ್ಮೃತಿ, ಸ್ಮೃತಿಯೂ ಕೂಡ ಮೋಕ್ಷಸಾಧನವಾದ ವೇದನವು ಸ್ಮೃತಿ-ಸಂತತಿ-ರೂಪದಲ್ಲಿರುವುದೆಂದು ಹೇಳುತ್ತದೆ 'ಯಾವ ರೂಪದಿಂದ ಧಾರಣೆಯುಂಟಾಯಿತೊ ಆ ರೂಪವನ್ನು ಬಿಟ್ಟು ಮನಸ್ಸಿಗೆ ಬೇರೊಂದು ರೂಪವು ಬರದಿದ್ದರೆ ಅದೇ ಧ್ಯಾನವೆನಿಸುವುದು, ಯಮನಿಯಮಾದಿ ಅಷ್ಟಾಂಗಗಳಿಂದ ಇದು ಉಂಟಾಗುವುದು'[2] (ವಿ ಪು ೬ ೭) ಆದುದರಿಂದ ಧ್ಯಾನವನ್ನು ಪುನಃ ಪುನಃ ಮಾಡಬೇಕು

**ದ್ವೈ.—ಸ ತಪೋಽತಪ್ಯತ, ಪುನರೇವ ವರುಣಂ ಪಿತರಮುಪಸಸಾರ** (ತೈ ಉ ೩ ೧—೬) ಇದೇ ಮೊದಲಾದ ಶ್ರುತಿಗಳಲ್ಲಿ ಶ್ರವಣಾದಿಗಳ ಆವರ್ತನಲಿಂಗವಿದೆ 'ಬ್ರಹ್ಮದರ್ಶನವನ್ನು ಬಯಸುವವರು ಶ್ರವಣ-ಮನನ-ಧ್ಯಾನಗಳನ್ನು ನಿತ್ಯವೂ ಮಾಡಬೇಕು' ಎಂದು ಬೃಹತ್ತಂತ್ರದಲ್ಲಿ ಹೇಳಿದೆ

---

1 ನ ಹಿ ವರಘಾತಾಯ ಕನ್ಯಾಮುದ್ವಾಹಯಂತಿ (ಸೂ. ಭಾ )

2 ತದ್ರೂಪಪ್ರತ್ಯಯೇ ಚೈಕಾ ಸಂತತಿಶ್ಚಾನ್ಯನಿಃಸ್ಪೃಹಾ ।
ತದ್ಧ್ಯಾನಂ ಪ್ರಥಮೈಃ ಷಡ್ಭಿರಙ್ಗೈರ್ನಿಷ್ಪಾದ್ಯತೇ ತಥಾ ॥

# ೨. ಆತ್ಮತ್ವೋಪಾಸನಾಧಿಕರಣ*

## ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ॥ ೩ ॥

೩. (ಶ್ರುತಿಗಳು) ಆತ್ಮನೆಂದೇ ಒಪ್ಪಿಕೊಂಡಿರುತ್ತವೆ ಮತ್ತು ತಿಳಿಸಿಕೊಡುತ್ತವೆ.

ಶಾಸ್ತ್ರದಲ್ಲಿ ಉಕ್ತವಾದ ವಿಶೇಷಣಗಳುಳ್ಳ ಪರಮಾತ್ಮನನ್ನು 'ನಾನು' ಎಂದು ಗ್ರಹಿಸಬೇಕೊ ? ಅಥವಾ ತನಗಿಂತ ಬೇರೆಯಾದವನೆಂದು ಗ್ರಹಿಸಬೇಕೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಪರಮಾತ್ಮನೇ 'ನಾನು' ಎಂದು ಗ್ರಹಿಸಿಕೊಳ್ಳಬಾರದು ; ಏಕೆಂದರೆ ಅಪಹತ-ಪಾಪ್ಮತ್ವಾದಿಗುಣಗಳುಳ್ಳ ಈಶ್ವರನನ್ನು ಜೀವನೆಂದು ಗ್ರಹಿಸುವುದಕ್ಕೆ ಆಗುವುದಿಲ್ಲ ಈಶ್ವರನು ಸಂಸಾರಿಯ ಸ್ವಭಾವದವನು ಎಂದರೆ ಈಶ್ವರನೇ ಇಲ್ಲವೆಂದಾಗುವುದು ; ಅದರಿಂದ ಶಾಸ್ತ್ರದ ಆನರ್ಥಕ್ಯವುಂಟಾಗುವುದು ಸಂಸಾರಿಯು ಈಶ್ವರಸ್ವಭಾವದವನೆಂದರೂ ಅಧಿಕಾರಿಯೇ ಇಲ್ಲವೆಂದಾಗಿ ಆಗಲೂ ಶಾಸ್ತ್ರದ ಆನರ್ಥಕ್ಯವು ಉಂಟಾಗುವುದು ; ಅದಲ್ಲದೆ ಇದು ಪ್ರತ್ಯಕ್ಷಾದಿಗಳಿಗೆ ವಿರೋಧವಾಗಿರುವುದು.

**ಸಿದ್ಧಾಂತಿ**—ಪರಮೇಶ್ವರನನ್ನು ಆತ್ಮನೆಂದೇ ತಿಳಿಯಬಹುದು ; ಏಕೆಂದರೆ ಪರಮೇಶ್ವರ-ಪ್ರಕರಣದಲ್ಲಿ ಜಾಬಾಲರು ಇವನನ್ನು ಆತ್ಮನೆಂದೇ ಅಂಗೀಕರಿಸಿರುತ್ತಾರೆ. 'ಭಗವಂತನಾದ ದೇವತೆಯೆ ! ನೀನೇ ನಾನು, ನಾನೇ ನೀನು.'[1] ಹೀಗೆಯೇ 'ನಾನು ಬ್ರಹ್ಮವಾಗಿರುವೆನು' (ಬೃ. ಉ ೧. ೪. ೧೦) ಎಂಬ ಪರಮೇಶ್ವರನೇ ಆತ್ಮನೆಂದು ತಿಳಿಸುವ ವಾಕ್ಯಗಳಿವೆ. ವೇದಾಂತವಾಕ್ಯಗಳು ಈಶ್ವರನು ಆತ್ಮನೆಂದೇ ತಿಳಿಸುತ್ತವೆ.[2] ಇದು ವಿಷ್ಣುಪ್ರತಿಮಾನ್ಯಾಯದಿಂದ ಹೇಳಿದ ಪ್ರತೀಕೋಪಾಸನೆಯೂ ಅಲ್ಲ; ಏಕೆಂದರೆ ಆತ್ಮಶಬ್ದವನ್ನು ಆಗ ಗೌಣಾರ್ಥದಲ್ಲಿ ತೆಗೆದುಕೊಂಡಂತೆ ಆಗುತ್ತದೆ ಮತ್ತೆ ಪ್ರತೀಕದೃಷ್ಟಿಯಿರುವ ಸ್ಥಾನದಲ್ಲಿ 'ಮನಸ್ಸು ಬ್ರಹ್ಮ' (ಛಾಂ ಉ ೩. ೧೮ ೧), 'ಆದಿತ್ಯನು ಬ್ರಹ್ಮ' (ಛಾಂ. ಉ. ೩. ೧೯ ೧) ಎಂದು ಒಂದೇ ವಚನವಿರುತ್ತದೆ. ಆದರೆ 'ನೀನೇ ನಾನು, ನಾನೇ ನೀನು' ಎಂಬಲ್ಲಿ ಪ್ರತೀಕ-ಶ್ರುತಿಗಿಂತ ಭಿನ್ನವಾದ ಆತ್ಮಜ್ಞಾನವಿದೆ. ಇದಲ್ಲದೆ ಅನೇಕ ಶ್ರುತಿಗಳು ಭೇದದೃಷ್ಟಿಯನ್ನು ನಿಂದಿಸಿರುತ್ತವೆ. 'ಯಾವನು "ಇವನು ಬೇರೆ, ನಾನು

---

* ಇದನ್ನು ಮಧ್ವಭಾಷ್ಯದಲ್ಲಿ ಆತ್ಮೋಪಗಮಾಧಿಕರಣ ಎಂದು ಕರೆದಿದೆ.

1 ತ್ವಂ ವಾ ಅಹಮಸ್ಮಿ ಭಗವೋ ದೇವತೇಽಹಂ ವೈ ತ್ವಮಸಿ ಭಗವೋ ದೇವತೇ (ಸೂ. ಭಾ.).

2 ಬೃ. ಉ. ೩. ೪. ೧ ಮತ್ತು ೩. ೭. ೩, ಛಾಂ. ಉ. ೬. ೮. ೭ ನೋಡಿ.

ಬೇರೆ" ಎಂದು ಬೇರೆ ದೇವತೆಯನ್ನು ಉಪಾಸಿಸುವನೊ ಅವನು ಅರಿಯನು'[1] (ಬೃ. ಉ. ೧. ೪. ೧೦) ಇತ್ಯಾದಿ.[2] ವಿರುದ್ಧ ಗುಣಗಳುಳ್ಳ ಎರಡು ವಸ್ತುಗಳು ಒಂದೇ ಆಗಿರಲಾರವು—ಎಂಬ ಆಕ್ಷೇಪಣೆಯಲ್ಲಿ ದೋಷವಿಲ್ಲ; ಏಕೆಂದರೆ ವಿರುದ್ಧ ಗುಣಗಳು ಮಿಥ್ಯೆಯೆಂದು ತೋರಿಸಬಹುದು. ಶಾಸ್ತ್ರಪ್ರಾಮಾಣ್ಯದಿಂದ ಈಶ್ವರನೇ ಇಲ್ಲವೆಂಬ ಪ್ರಸಕ್ತಿಯುಂಟಾಗಲಾರದು. ಈಶ್ವರನಿಗೆ ಸಂಸಾರಿಯ ಸ್ವರೂಪವನ್ನು ಹೇಳಿದೆ—ಎಂಬುದನ್ನು ನಾವು ಒಪ್ಪುವುದಿಲ್ಲ. ಸಂಸಾರಿಯ ಸಂಸಾರಿತ್ವವನ್ನು ನಿರಾಕರಿಸಿ ಈಶ್ವರಸ್ವರೂಪವನ್ನು ಅವನಿಗೆ ಹೇಳಲು ಶ್ರುತಿಯು ಹೊರಟಿದೆ—ಎಂಬುದನ್ನು ನಾವು ಒಪ್ಪಿಕೊಳ್ಳುತ್ತೇವೆ. ಹೀಗಿರುವಾಗ ಅದ್ವೈತೇಶ್ವರನು ಅಪಹತ-ಪಾಪ್ಮತ್ವಾದಿಗುಣಗಳುಳ್ಳವನು, ಇನ್ನೊಬ್ಬನಾದ ಜೀವನು ವಿಪರೀತಗುಣಗಳುಳ್ಳದನು—ಎಂಬುದು ಮಿಥ್ಯೆಯು ಎಂದು ಸಿದ್ಧವಾಗುತ್ತದೆ. ಇನ್ನು 'ಅಧಿಕಾರಿಯೇ ಇಲ್ಲವೆಂದಾಗುತ್ತದೆ, ಪ್ರತ್ಯಕ್ಷಾದಿಗಳಿಗೆ ವಿರೋಧವಾಗಿರುತ್ತದೆ' ಎಂಬ ವಾದವು ಸರಿಯಲ್ಲ; ಏಕೆಂದರೆ ಜ್ಞಾನವಾಗುವುದಕ್ಕೆ ಮೊದಲು ಸಂಸಾರಿತ್ವವನ್ನು ಒಪ್ಪಿಕೊಂಡಿರುತ್ತೇವೆ; ಮತ್ತು ಅವನಿಗೆ ಪ್ರತ್ಯಕ್ಷಾದಿವ್ಯವಹಾರವು ವಿಷಯವಾಗಿರುತ್ತದೆ. ಪುನಃ 'ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವುದೊ ಅಲ್ಲಿ ಯಾವುದರಿಂದ ಯಾವುದನ್ನು ನೋಡಿಯಾನು ?' (ಬೃ. ಉ. ೨. ೪. ೧೪) ಎಂಬ ಶ್ರುತಿಯು ಜ್ಞಾನವಾದ ಮೇಲೆ ಪ್ರತ್ಯಕ್ಷಾದಿಗಳ ಅಭಾವವನ್ನು ತಿಳಿಸುತ್ತದೆ. ಪ್ರತ್ಯಕ್ಷಾದಿಗಳು ಇಲ್ಲವಾದರೆ ಶ್ರುತಿಯು ಇಲ್ಲ—ಎಂಬ ಆಕ್ಷೇಪಣೆಯು ನಮಗೆ ಇಷ್ಟವಾಗಿರುತ್ತದೆ; ಏಕೆಂದರೆ 'ವೇದಗಳು ಅವೇದಗಳಾಗುತ್ತವೆ' (ಬೃ. ಉ. ೪. ೩. ೨೨) ಎಂಬ ಶ್ರುತಿಯ ಪ್ರಕಾರ ಜ್ಞಾನವಾದ ಮೇಲೆ ಶ್ರುತಿಯು ಇರುವುದಿಲ್ಲ. 'ಹಾಗಾದರೆ ಈ ಅಜ್ಞಾನವು ಯಾರಿಗೆ ?' ಎಂದು ಕೇಳಿದರೆ, 'ಪ್ರಶ್ನಿಸುತ್ತಿರುವ ನಿನಗೇ' ಎಂದು ಹೇಳುತ್ತವೆ.[3] 'ನಾನು ಈಶ್ವರನೇ ಎಂದು ಶ್ರುತಿಯಲ್ಲಿ ಹೇಳಿದೆಯಲ್ಲ ?' ಎಂದು ಹೇಳಿದರೆ, ಹೀಗೆ ಅರಿತುಕೊಂಡಿರುವವನಿಗೆ ಅಜ್ಞಾನವೇ ಇಲ್ಲ' ಎಂಬುದು ನಮ್ಮ ಉತ್ತರ. ಆದುದರಿಂದ ಈಶ್ವರನಲ್ಲಿ ಆತ್ಮನೆಂದೇ ಮನಸ್ಸನ್ನಿಡಬೇಕು.

ವಿ.—ಉಪಾಸ್ಯನಾದ ಪರಬ್ರಹ್ಮನನ್ನು ಉಪಾಸಕನಿಗಿಂತ ಭಿನ್ನನೆಂದು ಧ್ಯಾನಿಸಬೇಕೊ ? ಅಥವಾ ಉಪಾಸಕನ ಆತ್ಮನೆಂದು ಧ್ಯಾನಿಸಬೇಕೊ ?—ಎಂಬುದು ಸಂಶಯ. ಮೊದಲನೆಯದು ಪೂರ್ವಪಕ್ಷಿಯ ಮತ. ಪರಬ್ರಹ್ಮನನ್ನು ಉಪಾಸಕನ ಆತ್ಮನೆಂದೇ ಧ್ಯಾನಿಸಬೇಕು—ಎಂಬುದು ಸಿದ್ಧಾಂತ. ಉಪಾಸಕನಾದ ಜೀವನು ತನ್ನ ಶರೀರಕ್ಕೆ ಹೇಗೆ ಆತ್ಮನಾಗಿರುವನೊ ಹಾಗೆಯೇ ಪರಬ್ರಹ್ಮನು ತನ್ನ ಆತ್ಮನಿಗೆ ಆತ್ಮನಾಗಿರುವನು—ಎಂದು

---

[1] ಅಥ ಯೋಽನ್ಯಾಂ ದೇವತಾಮುಪಾಸ್ತೇ, ಅನ್ಯೋಽಸಾವನ್ಯೋಽಹಮಸ್ಮೀತಿ, ನ ಸ ವೇದ।

[2] ಬೃ. ಉ. ೪. ೧೯ ಮತ್ತು ೪. ೫. ೭ ನೋಡಿ.

[3] ಕಸ್ಯ ಪುನರಯಮಪ್ರಬೋಧ ಇತಿ ಚೇತ್। ಯಸ್ತ್ವಂ ಪೃಚ್ಛಸಿ ತಸ್ಯ ತ ಇತಿ ವದಾಮಃ (ಸೂ. ಭಾ.).

ಉಪಾಸಿಸಬೇಕು ;[1] ಏಕೆಂದರೆ ಪ್ರಾಚೀನಕಾಲದ ಉಪಾಸಕರು ಇದನ್ನೇ ಸರಿಯಾದ ಉಪಾಸನೆಯೆಂದು ತಿಳಿದಿರುತ್ತಾರೆ. ಪರಬ್ರಹ್ಮನು ಉಪಾಸಕರ ಆತನ್ಮೆಂಬುದು ಶ್ರುತಿಯಿಂದ ತಿಳಿದುಬರುತ್ತದೆ: 'ಯಾವನು ಆತ್ಮನಲ್ಲಿರುವವನಾಗಿ ಆತ್ಮನ ಒಳಗಿರುವನೊ, ಯಾವನನ್ನು ಆತ್ಮನು ತಿಳಿಯನೊ, ಯಾವನಿಗೆ ಆತ್ಮನು ಶರೀರವೊ, ಯಾವನು ಒಳಗಿದ್ದುಕೊಂಡು ಆತ್ಮನನ್ನು ನಿಯಮಿಸುವನೊ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು'[2] (ಬೃ. ಉ. ಮಾ. ಪಾ.) ಇತ್ಯಾದಿ. ಭಾವನೆಗಳೆಲ್ಲ ಪರಬ್ರಹ್ಮನಲ್ಲಿಯೇ ನಿಲ್ಲುವುದರಿಂದಲೂ, ಶಬ್ದಗಳೆಲ್ಲ ಪರಬ್ರಹ್ಮನನ್ನೇ ಸೂಚಿಸುವುದರಿಂದಲೂ ಶ್ರುತಿಗಳು 'ನಾನೇ ನೀನು, ನೀನೇ ನಾನು' ಎಂದು ವ್ಯತಿರೇಕದಿಂದ ಹೇಳುತ್ತವೆ. ಜೀವ-ಪರಮಾತ್ಮರ ಸಂಬಂಧವನ್ನು ಹೀಗೆ ಅರಿತುಕೊಂಡರೆ ಭೇದಶ್ರುತಿಯಲ್ಲಿಯೂ ಅಭೇದಶ್ರುತಿಯಲ್ಲಿಯೂ ಇರುವ ವಿರೋಧವು ಹೋಗುತ್ತದೆ. 'ನಾನು' ಎಂಬುದು ಪರಮಾತ್ಮನ ಸ್ವರೂಪವಾಗಿರುವಷ್ಟು ಭೇದವನ್ನು ನಿರಾಕರಿಸುತ್ತೇವೆ; ಜೀವಾತ್ಮನು ತನ್ನ ಶರೀರಕ್ಕಿಂತ ಬೇರೆಯಾಗಿರುವಂತೆ ಪರಮಾತ್ಮನೂ ಜೀವನಿಗಿಂತ ಬೇರೆಯಾಗಿರುವನು—ಎನ್ನುವಷ್ಟು ಭೇದವನ್ನು ಒಪ್ಪಿಕೊಳ್ಳುತ್ತೇವೆ.[3] ಆದುದರಿಂದ ಪರಬ್ರಹ್ಮನನ್ನು ಉಪಾಸಕನ ಆತ್ಮನೆಂದೇ ಧ್ಯಾನಿಸಬೇಕು—ಎಂಬುದು ಸಿದ್ಧವಾಯಿತು.

ದ್ವೈ.—'ಮುಮುಕ್ಷುಗಳು ಆತ್ಮನನ್ನೇ (ಎಂದರೆ ಶ್ರೀಹರಿಯನ್ನೇ) ಸ್ವಾಮಿಯೆಂದು ಉಪಾಸಿಸಬೇಕು ಮತ್ತು ಉಪದೇಶಿಸಬೇಕು ;[4] ಹೀಗೆಯೇ ಮೋಕ್ಷಾರ್ಥಿಗಳು ತಿಳಿಯುತ್ತಾರೆ ಮತ್ತು ಶಿಷ್ಯರಿಗೆ ಉಪದೇಶಿಸುತ್ತಾರೆ' ಎಂಬುದು ಸೂತ್ರಾರ್ಥ.

'ನಾನು ಬೇರೆ ಯಾರನ್ನೂ ಧ್ಯಾನಿಸುವುದಿಲ್ಲ; ಆತ್ಮನನ್ನೇ ಅರಿಯುತ್ತೇನೆ, ಆತ್ಮನನ್ನೇ ಉಪಾಸಿಸುತ್ತೇನೆ ; ಏಕೆಂದರೆ ಆತ್ಮನೇ ನನ್ನ ಸ್ವಾಮಿಯು' ಎಂದು ಮೋಕ್ಷಾರ್ಥಿಗಳು ತಿಳಿಯುತ್ತಾರೆ. ಇಲ್ಲಿ ಆತ್ಮನೆಂದರೆ ಸಾಕ್ಷಾತ್ ನಾರಾಯಣನೇ.[5]

---

[1] ಉಪಾಸಿತಾ ಪ್ರತ್ಯಗಾತ್ಮಾ ಸ್ವಶರೀರಸ್ಯ ಸ್ವಯಂ ಯಥಾಽಽತ್ಮಾ, ತಥಾ ಸ್ವಾತ್ಮನೋಽಪಿ ಪರಂ ಬ್ರಹ್ಮಾತ್ಮೇತ್ಯೇವೋಪಾಸೀತೇತ್ಯರ್ಥಃ (ಶ್ರೀಭಾಷ್ಯ).

[2] ಯ ಆತ್ಮನಿ ತಿಷ್ಠನ್ ಆತ್ಮನೋಽಂತರಃ, ಯಮಾತ್ಮಾ ನ ವೇದ, ಯಸ್ಯಾತ್ಮಾ ಶರೀರಂ, ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ।

[3] ಅಹಮಿತಿ ಸ್ವಾತ್ಮತಯಾಽನುಸಂಧಾನಾದನ್ಯತ್ವಾನುಸಂಧಾನನಿಷೇಧೋ ರಕ್ಷಿತಃ। ಸ್ವಶರೀರಾತ್ ಸ್ವಾತ್ಮನೋಽಧಿಕತ್ವಾನುಸಂಧಾನವತ್ ಸ್ವಾತ್ಮನೋಽಪಿ ಪರಮಾತ್ಮನೋಽಧಿಕತ್ವಾನುಸಂಧಾನಾತ್ ಪೃಥಕ್ತ್ವಾನುಸಂಧಾನವಿಧಾನಂ ಚ ರಕ್ಷಿತಮ್ (ಶ್ರೀಭಾಷ್ಯ).

[4] ಆತ್ಮೇತ್ಯುಪದೇಶ ಉಪಾಸನಂ ಚ ಮೋಕ್ಷಾರ್ಥಿಭಿಃ ಸರ್ವಥಾ ಕಾರ್ಯಮೇವ (ಮ. ಭಾ.).

[5] ಆತ್ಮೇತಿ ನಾಮ ಕಥಿತಂ ಸಾಕ್ಷಾನ್ನಾರಾಯಣಸ್ಯ ಹಿ (ಅನುವ್ಯಾಖ್ಯಾನ).

## ೩. ಪ್ರತೀಕಾಧಿಕರಣ

### ನ ಪ್ರತೀಕೇ ನ ಹಿ ಸಃ ॥ ೪ ॥

೪ ಪ್ರತೀಕದಲ್ಲಿ (ಆತ್ಮಬುದ್ಧಿ ಇಡ)ಕೂಡದು, ಏಕೆಂದರೆ ಆ (ಉಪಾಸಕನು ಅದನ್ನು ಆತ್ಮನೆಂದು) ತಿಳಿಯಲಾರನು

'ಮನಸ್ಸನ್ನು ಬ್ರಹ್ಮವೆಂದು ಉಪಾಸಿಸಬೇಕು, ಇದು ಅಧ್ಯಾತ್ಮ ಇನ್ನು ಅಧಿದೈವತ ಆಕಾಶವನ್ನು ಬ್ರಹ್ಮವೆಂದು (ಉಪಾಸಿಸಬೇಕು)'[1] (ಛಾಂ ಉ ೩ ೧೮ ೧) ಇದೇ ಮೊದಲಾದ ಪ್ರತೀಕೋಪಾಸನೆಗಳಲ್ಲಿ[2] ಅವುಗಳನ್ನು 'ನಾನು' ಎಂದು ಗ್ರಹಿಸಬೇಕೊ ಅಥವಾ ಕೂಡದೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಅವುಗಳಲ್ಲಿ ಆತ್ಮಬುದ್ಧಿಯನ್ನಿಡುವುದೇ ಯುಕ್ತವು, ಏಕಂದರ ಬ್ರಹ್ಮವು ಆತ್ಮನೆಂದು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ ಪ್ರತೀಕಗಳು ಬ್ರಹ್ಮದ ಕಾರ್ಯವಾಗಿರುವುದರಿಂದ ಬ್ರಹ್ಮವೇ, ಆದುದರಿಂದ ಅವೂ ಆತ್ಮವಾಗಬಹುದು

**ಸಿದ್ಧಾಂತಿ**—ಪ್ರತೀಕದಲ್ಲಿ ಆತ್ಮಬುದ್ಧಿಯನ್ನಿಡುವುದು ಸರಿಯಲ್ಲ, ಏಕೆಂದರೆ ಉಪಾಸಕನು ಬೇರೆ ಬೇರೆ ಪ್ರತೀಕಗಳನ್ನು ತನ್ನ ಆತ್ಮನೆಂಧು ಗ್ರಹಿಸಲಾರನು ಪ್ರತೀಕಗಳು ಬ್ರಹ್ಮಕಾರ್ಯವಾಗಿರುವುದರಿಂದ ಅವು ಬ್ರಹ್ಮವೇ, ಆದುದರಿಂದ ಆತ್ಮನೇ—ಎಂಬುದೂ ಸರಿಯಲ್ಲ, ಏಕೆಂದರೆ ಪ್ರತೀಕವೇ ಇಲ್ಲವೆಂಬ ಪ್ರಸಂಗವು ಬಂದೀತು ನಾಮಾದಿಗಳ ಕಾರ್ಯಸ್ವರೂಪವನ್ನು ನಾಶಮಾಡಿದರೆ ಅವುಗಳಿಗೆ ಬ್ರಹ್ಮತ್ವವು ಒದಗುತ್ತದೆ ನಾಮಾದಿಗಳ ಸ್ವರೂಪವೇ ಹೋದ ಮೇಲೆ ಅವುಗಳಿಗೆ ಪ್ರತೀಕತ್ವವಾಗಲಿ ಆತ್ಮಬುದ್ಧಿಯಾಗಲಿ ಎಲ್ಲಿಂದ ಬರಬೇಕು ? ಬ್ರಹ್ಮವು ಆತ್ಮನಾಗಿರುವುದರಿಂದ ಪ್ರತೀಕಗಳಲ್ಲಿಯೂ ಬ್ರಹ್ಮದೃಷ್ಟಿಯನ್ನಿಡಬೇಕಂದು ಉಪದೇಶಿಸುವ ವಾಕ್ಯಗಳಲ್ಲಿ ಆತ್ಮದೃಷ್ಟಿಯನ್ನು ಮಾಡಬೇಕೆಂಬುದೂ ಸರಿಯಲ್ಲ, ಕರ್ತೃತ್ವಾದಿಗಳನ್ನು ನಾವು ನಿರಾಕರಿಸಿಲ್ಲ, ಅಂಥ ಸಂಸಾರಧರ್ಮಗಳನ್ನು ನಿರಾಕರಿಸಿದ ಮೇಲೆಯೇ ಬ್ರಹ್ಮವು ಆತ್ಮನೆಂದು ಉಪದೇಶಿಸಬೇಕಾಗಿದೆ ಆದರೆ ಅದನ್ನು ನಿರಾಕರಣಮಾಡದೆಯೇ ಉಪಾಸನೆಯನ್ನು ವಿಧಿಸಲಾಗಿದೆ ಆದುದರಿಂದ ಉಪಾಸಕನು ಪ್ರತೀಕಗಳಿಗೆ ಸಮನೇ ಆಗಿರುವುದರಿಂದ ಅವುಗಳಲ್ಲಿ ಆತ್ಮಬುದ್ಧಿಯನ್ನಿಡಲು ಸಾಧ್ಯವಿಲ್ಲ

**ವಿ.**—ಪ್ರತೀಕದಲ್ಲಿ ಆತ್ಮತ್ವಾನುಸಂಧಾನ ಮಾಡಕೂಡದು, ಏಕಂದರೆ ಪ್ರತೀಕವು ಉಪಾಸಕನ ಆತ್ಮನಲ್ಲ ಪ್ರತೀಕೋಪಾಸನೆಯಲ್ಲಿ ಪ್ರತೀಕವನ್ನು ಉಪಾಸಿಸಬೇಕೇ

---

* ಶ್ರೀಭಾಷ್ಯದ ಪ್ರಕಾರ ಮುಂದಿನ ಸೂತ್ರವೂ ಈ ಅಧಿಕರಣಕ್ಕೇ ಸೇರಿದೆ

1 ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತಿ ।

2 ಛಾಂ ಉ. ೩ ೧೯. ೧, ೭.೧ ೫ ನೋಡಿ

ಹೊರತು ಪರಬ್ರಹ್ಮನನ್ನಲ್ಲ ; ಆ ಉಪಾಸನೆಯಲ್ಲಿ ಬ್ರಹ್ಮನು ವಿಶೇಷಣಮಾತ್ರವಾಗಿರುತ್ತಾನೆ. ಅಬ್ರಹ್ಮದಲ್ಲಿ ಬ್ರಹ್ಮದೃಷ್ಟಿಯಿಂದ ಅನುಸಂಧಾನ ಮಾಡುವುದೇ ಪ್ರತೀಕೋಪಾಸನೆಯೆನಿಸುವುದು.[1] ಉಪಾಸ್ಯವಾದ ಪ್ರತೀಕವು ಉಪಾಸಕನ ಆತ್ಮನಲ್ಲದುದರಿಂದ ಆತ್ಮತ್ವಾನುಸಂಧಾನವಾಗುವುದಿಲ್ಲ.

**ದ್ವೈತ.**—'ಪ್ರತೀಕಗಳನ್ನು ಆತ್ಮನೆಂದು ಉಪಾಸಿಸಕೂಡದು ; ಏಕೆಂದರೆ ಆತ್ಮನು ಪ್ರತೀಕರೂಪದಲ್ಲಿರದೆ ಪ್ರತೀಕದಲ್ಲಿದ್ದಾನೆ' ಎಂಬುದು ಸೂತ್ರಾರ್ಥ.

'ಯಾವನು ನಾಮವನ್ನು ಬ್ರಹ್ಮನೆಂದು ಉಪಾಸಿಸುವನೋ' (ಛಾಂ. ಉ. ೭. ೧. ೫) ಇದೇ ಮೊದಲಾದ ಶ್ರುತಿಗಳಿಂದ ಪ್ರಾಪ್ತವಾದ ಪ್ರತೀಕದಲ್ಲಿ ಬ್ರಹ್ಮದೃಷ್ಟಿಯನ್ನಿಡಕೂಡದು ; ಆದರೆ ಬ್ರಹ್ಮನು ಪ್ರತೀಕದಲ್ಲಿರುವಂತೆ ಉಪಾಸಿಸಬೇಕು.[2]

---

[1] ಪ್ರತೀಕೋಪಾಸನಂ ಹಿ ನಾಮ ಅಬ್ರಹ್ಮಣಿ ಬ್ರಹ್ಮದೃಷ್ಟ್ಯಾಽನುಸಂಧಾನಮ್ (ಶ್ರೀಭಾಷ್ಯ).

[2] ನಾಮ ಬ್ರಹ್ಮೇತ್ಯುಪಾಸ್ತೇ ಇತ್ಯಾದಿನಾ ಶಬ್ದಭ್ರಾಂತ್ಯಾ ನ ಪ್ರತೀಕೇ ಬ್ರಹ್ಮದೃಷ್ಟಿಃ ಕಾರ್ಯಾ । ಕಿಂತು ತತ್ಸ್ಥತ್ವೇನೈವೋಪಾಸನಂ ಕಾರ್ಯಮ್ (ಮ. ಭಾ.).

## ೪. ಬ್ರಹ್ಮದೃಷ್ಟ್ಯಧಿಕರಣ

### ಬ್ರಹ್ಮದೃಷ್ಟಿರುತ್ಕರ್ಷಾತ್ ॥ ೫ ॥

೫. (ಆದಿತ್ಯಾದಿಗಳಲ್ಲಿ) ಬ್ರಹ್ಮದೃಷ್ಟಿಯನ್ನಿಡಬೇಕು, ಏಕೆಂದರೆ (ಆಗ) ಉತ್ಕರ್ಷವಾಗುತ್ತದೆ

ಇಲ್ಲಿ ಇನ್ನೊಂದು ಸಂದೇಹವು ಬರುತ್ತದೆ ಆದಿತ್ಯಾದಿ-ದೃಷ್ಟಿಗಳನ್ನು ಬ್ರಹ್ಮದಲ್ಲಿಡಬೇಕೊ ಅಥವಾ ಬ್ರಹ್ಮದೃಷ್ಟಿಯನ್ನು ಆದಿತ್ಯಾದಿಗಳಲ್ಲಿಡಬೇಕೊ ? ಏಕೆಂದರೆ 'ಆದಿತ್ಯನು ಬ್ರಹ್ಮ' ಎಂಬಲ್ಲಿ ಸಮಾನವಿಭಕ್ತಿಯ ನಿರ್ದೇಶವಿದ್ದರೂ ಮುಖ್ಯಾರ್ಥದಲ್ಲಿ ಸಾಮಾನಾಧಿಕರಣ್ಯವು ಹೊಂದುವುದಿಲ್ಲ, ಏಕೆಂದರೆ ಬ್ರಹ್ಮಾದಿತ್ಯಶಬ್ದಗಳು ಬೇರೆ ಬೇರೆ ಪದಾರ್ಥಗಳನ್ನು ಸೂಚಿಸುತ್ತವೆ 'ಗೋವು ಕುದುರೆ' ಎಂಬುದು ಸಾಮಾನಾಧಿಕರಣ್ಯವಾಗಲಾರದು

**ಪೂರ್ವಪಕ್ಷಿ**—ಇಲ್ಲಿ ಹೀಗೆಯೇ ಮಾಡಬೇಕೆಂಬ ಯಾವ ನಿಯಮವೂ ಇಲ್ಲ ಅಥವಾ ಆದಿತ್ಯಾದಿ-ದೃಷ್ಟಿಗಳನ್ನೇ ಬ್ರಹ್ಮದಲ್ಲಿ ಇಡಬೇಕು, ಏಕೆಂದರೆ ಬ್ರಹ್ಮೋಪಾಸನೆಯು ಫಲವುಳ್ಳದ್ದೆಂದು ಶಾಸ್ತ್ರವು ನಿಶ್ಚಯಿಸಿದೆ ಆದುದರಿಂದ ಬ್ರಹ್ಮದೃಷ್ಟಿಯನ್ನು ಆದಿತ್ಯಾದಿಗಳಲ್ಲಿ ಇಡಕೂಡದು

**ಸಿದ್ಧಾಂತಿ**—ಬ್ರಹ್ಮದೃಷ್ಟಿಯನ್ನೇ ಆದಿತ್ಯಾದಿಗಳಲ್ಲಿಡಬೇಕು, ಏಕೆಂದರೆ ಆಗ ಉತ್ಕರ್ಷವಾಗುತ್ತದೆ ಹೀಗಾದರೆ ಆದಿತ್ಯಾದಿಗಳು ಉತ್ಕೃಷ್ಟರಾಗಿ ಕಂಡುಬರುತ್ತಾರೆ ನಿಕೃಷ್ಟವಾದುದರಲ್ಲಿ ಉತ್ಕೃಷ್ಟದೃಷ್ಟಿಯನ್ನಿಡುವುದು ಸರಿಯೆಂಬುದು ಲೌಕಿಕನ್ಯಾಯವಾಗಿದೆ ಉದಾಹರಣೆಗೆ ಕ್ಷತ್ತೃವನ್ನು[1] ರಾಜನೆಂದು ಭಾವಿಸುವುದು, ಆದರೆ ರಾಜನನ್ನು ಕ್ಷತ್ತೃವೆಂದು ಭಾವಿಸಿದರೆ ಅವನನ್ನು ನಿಕೃಷ್ಟವಾಗಿ ಮಾಡಿದಂತೆ ಆಗುವುದರಿಂದ ಒಳ್ಳೆಯ ಫಲವುಂಟಾಗುವುದಿಲ್ಲ ಶಾಸ್ತ್ರಾರ್ಥವು ಸಂದಿಗ್ಧವಾಗಿರುವಾಗ ಅದರ ನಿರ್ಣಯಕ್ಕೆ ಲೌಕಿಕನ್ಯಾಯವನ್ನು ಆಶ್ರಯಿಸಿದರೆ ದೋಷವಾಗುವುದಿಲ್ಲ ಮತ್ತೆ 'ಆದಿತ್ಯನು ಬ್ರಹ್ಮ' ಎಂಬ ವಾಕ್ಯದಲ್ಲಿ ಆದಿತ್ಯ-ಶಬ್ದವು ಮೊದಲು ಬರುವುದರಿಂದ ಅದಕ್ಕೆ ಮುಖ್ಯಾರ್ಥವನ್ನು ಗ್ರಹಿಸಬೇಕು, ಅನಂತರ ಬರುವ ಬ್ರಹ್ಮ-ಶಬ್ದಕ್ಕೆ ಮುಖ್ಯಾರ್ಥದಿಂದ ಸಾಮಾನಾಧಿಕರಣ್ಯವು ಹೊಂದುವದಿಲ್ಲವಾದುದರಿಂದ ಅದು ಬ್ರಹ್ಮದೃಷ್ಟಿಯನ್ನು ವಿಧಿಸುವುದಕ್ಕೆ ಬಂದಿದೆ ಎಂಬುದು ಸಿದ್ಧವಾಗುತ್ತದೆ **ಮನೋ ಬ್ರಹ್ಮೇತ್ಯುಪಾಸೀತ** (ಛಾಂ ಉ ೩ ೧೮ ೧) ಎಂಬಲ್ಲಿ ಬ್ರಹ್ಮಶಬ್ದವು ಇತಿ-ಪರವಾಗಿರುವುದರಿಂದ ಇದೇ ಅರ್ಥವು ಹೊಂದು

---

[1] ಕ್ಷತ್ರಿಯನಿಂದ ಶೂದ್ರಾದಿಗಳಲ್ಲಿ ಜನಿಸಿದವನಿಗೆ ಕ್ಷತ್ತೃವೆಂದು ಹೆಸರು, ಇವನು ಸಾಮಾನ್ಯವಾಗಿ ಸಾರಥಿಯ ಕೆಲಸವನ್ನು ಮಾಡುತ್ತಾನೆ

ತ್ತದೆ. ವಾಕ್ಯಶೇಷದಲ್ಲಿ (ಯಾವನು ಹೀಗೆ ಈ ಆದಿತ್ಯನನ್ನು ಬ್ರಹ್ಮವೆಂದು ಉಪಾಸಿಸುವನೋ[1]) ಆದಿತ್ಯಾದಿಗಳನ್ನು ಉಪಾಸಿಸಬೇಕೆಂದು ದ್ವಿತೀಯಾವಿಭಕ್ತಿಯಿಂದ ತಿಳಿಸಿದೆ. ಫಲಕ್ಕಾಗಿ ಬ್ರಹ್ಮೋಪಾಸನೆಯನ್ನೇ ಮಾಡಬೇಕು—ಎಂಬ ಆಕ್ಷೇಪಣೆಯು ಸರಿಯಲ್ಲ; ಏಕೆಂದರೆ ಅತಿಥಿಯ ಉಪಾಸನೆಯಲ್ಲಿ ಹೇಗೊ ಹಾಗೆ ಆದಿತ್ಯಾದಿ-ಉಪಾಸನೆಯಲ್ಲಿಯೂ ಸರ್ವಾಧ್ಯಕ್ಷನಾದ ಬ್ರಹ್ಮವೇ ಫಲವನ್ನು ಕೊಡುತ್ತದೆ. ಬ್ರಹ್ಮವು ಉಪಾಸ್ಯವಾಗಿರುವುದು ಹೀಗೆ. ಪ್ರತಿಮಾದಿಗಳಲ್ಲಿ ವಿಷ್ಣುವೇ ಮೊದಲಾದವರ ದೃಷ್ಟಿಯನ್ನು ಆರೋಪಿಸುವಂತೆ ಪ್ರತೀಕಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನು ಆರೋಪಿಸಬೇಕು.

ವಿ.—ಮನಸ್ಸೇ ಮೊದಲಾದುವುಗಳಲ್ಲಿ ಬ್ರಹ್ಮದೃಷ್ಟಿಯು ಯುಕ್ತವೇ; ಆದರೆ ಬ್ರಹ್ಮನಲ್ಲಿ ಮನ ಆದಿ ದೃಷ್ಟಿಯನ್ನು ಮಾಡಕೂಡದು; ಏಕೆಂದರೆ ಪರಬ್ರಹ್ಮನು ಮನ ಆದಿಗಳಿಗಿಂತ ಶ್ರೇಷ್ಠನಾಗಿರುವನು. ಭೃತ್ಯನನ್ನು ರಾಜನೆಂದು ನೋಡಬಹುದೇ ಹೊರತು ರಾಜನನ್ನು ಭೃತ್ಯನೆಂದು ಪರಿಗಣಿಸಲಾಗುವುದಿಲ್ಲ.

ದ್ವೈ.—'ಪರಮೇಶ್ವರನಲ್ಲಿ ಬ್ರಹ್ಮದೃಷ್ಟಿಯನ್ನು ಎಂದರೆ ಪೂರ್ಣತ್ವೋಪಾಸನೆಯನ್ನು ಸರ್ವಥಾ ಮಾಡಬೇಕು;[2] ಏಕೆಂದರೆ ಸರ್ವಗುಣಪೂರ್ಣತ್ವರೂಪವಾದ ಉಪಾಸನೆಗೆ ಉತ್ಕೃಷ್ಟತ್ವವಿದೆ' ಎಂಬುದು ಸೂತ್ರಾರ್ಥ

---

[1] ಸ ಯ ಏತಮೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇ (ಛಾಂ. ಉ. ೩. ೧೯. ೪).

[2] ಬ್ರಹ್ಮದೃಷ್ಟಿಶ್ಚ ಸರ್ವಥಾ ಕಾರ್ಯೈವ ಪರಮೇಶ್ವರೇ (ಮ. ಭಾ.).

## ೫. ಆದಿತ್ಯಾದಿಮತ್ಯಧಿಕರಣ

### ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ || ೬ ||

೬ (ಉದ್ಗೀಥಾದಿ)-ಅಂಗಗಳಲ್ಲಿ ಆದಿತ್ಯಾದಿ-ಬುದ್ಧಿಗಳನ್ನು (ಇಡಬೇಕು), ಏಕೆಂದರ ಅದು ಹೊಂದುತ್ತದೆ

'ತಪಿಸುತ್ತಿರುವ ಆದಿತ್ಯನನ್ನು ಉದ್ಗೀಥವೆಂದು ಉಪಾಸಿಸಬೇಕು'[1] (ಛಾಂ ಉ ೧ ೩, ೧) ಇದೇ ಮೊದಲಾದ[2] ಅಂಗಾವಬದ್ಧವಾದ ಉಪಾಸನೆಗಳಲ್ಲಿ ಈ ಸಂಶಯವು ಬರುತ್ತದೆ - ಆದಿತ್ಯಾದಿಗಳಲ್ಲಿ ಉದ್ಗೀಥಾದಿ-ದೃಷ್ಟಿಗಳನ್ನು ವಿಧಿಸಿದೆಯೊ ಅಥವಾ ಉದ್ಗೀ-ಥಾದಿಗಳಲ್ಲಿ ಆದಿತ್ಯಾದಿ-ದೃಷ್ಟಿಗಳನ್ನು ವಿಧಿಸಿದೆಯೊ ?

**ಪೂರ್ವಪಕ್ಷಿ**—ಯಾವ ನಿಯಮವೂ ಇಲ್ಲ, ಏಕೆಂದರೆ ಇಲ್ಲಿ ಜಗತ್ಕಾರಣವಾದ ಬ್ರಹ್ಮದಂತೆ ಉತ್ಕರ್ಷವಿಶೇಷವಿದೆಯೆಂದು ನಿರ್ಧರಿಸಲು ಸಾಧ್ಯವಿಲ್ಲ ಅಥವಾ ಆದಿತ್ಯಾದಿ ಗಳಲ್ಲಿ ನಿಯಮೇನ ಉದ್ಗೀಥಾದಿ-ದೃಷ್ಟಿಗಳನ್ನೇ ಇಡಬೇಕು, ಏಕಂದರೆ ಉದ್ಗೀಥಾದಿಗಳು ಕರ್ಮಾತ್ಮಕವಾಗಿವೆ, ಕರ್ಮದಿಂದ ಫಲವುಂಟಾಗುತ್ತದೆ ಶ್ರುತಿಯ ಪ್ರಕಾರ (ಛಾಂ ಉ ೧ ೬ ೧) ಋಕ್ಶಬ್ದದಿಂದ ಪೃಥಿವಿಯನ್ನೂ ಸಾಮಶಬ್ದದಿಂದ ಅಗ್ನಿಯನ್ನೂ ತಿಳಿಸಿರುತ್ತದೆ ಆದುದರಿಂದ ಅಂಗವಿಲ್ಲದ ಆದಿತ್ಯಾದಿಗಳಲ್ಲಿ ಅಂಗದೃಷ್ಟಿಯನ್ನಿಡಬೇಕು

**ಸಿದ್ಧಾಂತಿ**—ಆದಿತ್ಯಾದಿದೃಷ್ಟಿಗಳನ್ನೇ ಉದ್ಗೀಥಾದಿಗಳಲ್ಲಿ ಇಡಬೇಕು, ಏಕೆಂದರೆ ಆದಿತ್ಯಾದಿಬುದ್ಧಿಗಳಿಂದ ಉದ್ಗೀಥಾದಿಗಳಿಗೆ ಸಂಸ್ಕಾರವಾಗಿರುವಾಗ ಅಪೂರ್ವಕ್ಕೆ ಸಮೀಪ ವಾಗಿರುವುದರಿಂದ ಕರ್ಮಸಮೃದ್ಧಿಯಾಗುತ್ತದೆ ವಿದ್ಯೆಯು ಕರ್ಮಸಮೃದ್ಧಿಗೆ ಕಾರಣ ವೆಂದು ಹಿಂದೆಯೇ (ಛಾಂ ಉ ೧ ೧ ೧೦) ಹೇಳಿದೆ 'ಯಾವನು ಇದನ್ನು ಹೀಗೆ ಅರಿತುಕೊಂಡು ಪಂಚವಿಧ-ಸಾಮವನ್ನು ಉಪಾಸಿಸುತ್ತಾನೆಯೊ' (ಛಾಂ ಉ. ೨ ೩) ಇದೇ ಮೊದಲಾದ ಸ್ವತಂತ್ರಫಲವುಳ್ಳ ಉಪಾಸನೆಗಳಲ್ಲಿ ಕರ್ಮಗಳಲ್ಲಿ ಅಧಿಕೃತನಾದವನಿಗೇ ಅಧಿಕಾರವಿರುವುದರಿಂದ ಅಲ್ಲಿಯೂ ಅಪೂರ್ವದ ಸಂನಿಕರ್ಷದಿಂದಲೇ ಫಲವನ್ನು ಕಲ್ಪಿಸು ವುದು ಯುಕ್ತವಾಗಿರುತ್ತದೆ ಆದಿತ್ಯಾದಿಗಳು ಫಲಾತ್ಮಕರಾಗಿರುವುದರಿಂದ ಕರ್ಮಾತ್ಮಕ ವಾದ ಉದ್ಗೀಥಾದಿಗಳಿಗಿಂತ ಅವರಿಗೆ ಉತ್ಕರ್ಷವು ಹೊಂದುತ್ತದೆ ಉದ್ಗೀಥಾದಿಬುದ್ಧಿ ಗಳಿಂದ ಆದಿತ್ಯಾದಿಗಳನ್ನು ಉಪಾಸಿಸಿದರೆ ಅವರು ಕರ್ಮಭಾವವನ್ನು ಹೊಂದಿ ಫಲವನ್ನು ಕೊಡುತ್ತಾರೆ—ಎಂಬುದೂ ಸರಿಯಲ್ಲ, ಏಕಂದರೆ ಉಪಾಸನೆಯೇ ಕರ್ಮವಾಗಿರು ವುದರಿಂದ ಅದೇ ಫಲವನ್ನು ಕೊಡತಕ್ಕದ್ದಾಗಿದೆ '(ಅಗ್ನಿಯೆಂಬ) ಆ ಸಾಮವು

---

[1] ಯ ಏವಾಸೌ ತಪತಿ ತಮುದ್ಗೀಥಮುಪಾಸೀತ ।

[2] ಛಾಂ ಉ ೨ ೨ ೧, ೨ ೮ ೧ ಮತ್ತು ೧. ೬ ೧ ನೋಡಿ

(ಪೃಥಿವಿಯೆಂಬ) ಈ ಋಕ್ಕಿನ ಮೇಲೆ ಅಧಿಷ್ಠಿತವಾಗಿದೆ'[1] (ಛಾಂ. ಉ. ೧. ೬. ೧) ಎಂಬಲ್ಲಿ ಪೃಥಿವಿ-ಅಗ್ನಿಗಳಲ್ಲಿ ಋಕ್-ಸಾಮ-ಶಬ್ದಗಳನ್ನು ಪ್ರಯೋಗಿಸಿರುವುದು ಲಕ್ಷಣೆಯಿಂದಲೇ ; ಆದರೆ ಲಕ್ಷಣೆಯು ಸಂಭವವಿದ್ದಂತೆ ತನ್ನ ಅರ್ಥಕ್ಕೆ ಹತ್ತಿರದ ಅಥವಾ ದೂರದ ಸಂಬಂಧದಿಂದ ಪ್ರವರ್ತಿಸಬಹುದು 'ಈ ಪೃಥಿವಿಯೇ ಋಕ್ಕು'[2] (ಛಾಂ. ಉ. ೧. ೬. ೧) ಎಂಬಲ್ಲಿ ಅಕ್ಷರನ್ಯಾಸಕ್ಕೆ ಅನುಗುಣವಾಗಿ ಋಕ್ಕನ್ನೇ ಪೃಥಿವಿಯೆಂದು ನಿರ್ಧರಿಸಿ ಹೇಳಿದೆ ; ಏಕೆಂದರೆ ಪೃಥಿವಿಯೇ ಋಕ್ಕು ಎಂಬುದನ್ನು ಅವಧಾರಣೆಮಾಡುವ ಹಾಗಿದ್ದರೆ 'ಈ ಪೃಥಿವಿಯು ಋಕ್ಕೇ' **ಇಯಮೃಗೇವ** ಎಂದು ಅಕ್ಷರನ್ಯಾಸವಿರುತ್ತಿತ್ತು. 'ಯಾವನು ಹೀಗೆಂದು ತಿಳಿದು ಸಾಮಗಾನಮಾಡುತ್ತಾನೆಯೊ' (ಛಾಂ. ಉ. ೧ ೭. ೭) ಎಂಬಲ್ಲಿ ಅಂಗಾಶ್ರಯವಾಗಿಯೇ ವಿಜ್ಞಾನವನ್ನು ಉಪಸಂಹರಿಸಿದೆಯೇ ಹೊರತು ಪೃಥಿವ್ಯಾದಿಗಳನ್ನು ಆಶ್ರಯಿಸಿ ಉಪಸಂಹರಿಸಿಲ್ಲ. ಹೀಗೆಯೇ 'ಪೃಥಿವಿಯು ಹಿಂಕಾರವು' (ಛಾಂ. ಉ. ೨. ೨ ೧) ಇದೇ ಮೊದಲಾದ ನಿರ್ದೇಶದಲ್ಲಿ ವಿಪರ್ಯಾಯವಿದ್ದರೂ ಹಿಂಕಾರಾದಿಗಳಲ್ಲಿಯೇ ಪೃಥಿವ್ಯಾದಿಗಳ ದೃಷ್ಟಿಯನ್ನಿಡಬೇಕು. ಆದುದರಿಂದ ಆದಿತ್ಯಾದಿಗಳ ಬುದ್ಧಿಯನ್ನು ಉದ್ಗೀಥಾದಿಗಳಲ್ಲಿ ಇಡಬೇಕು.

**ವಿ.**—'ತಪಿಸುತ್ತಿರುವ ಆದಿತ್ಯನನ್ನು ಉದ್ಗೀಥವೆಂದು ಉಪಾಸಿಸಬೇಕು' (ಛಾಂ. ಉ. ೧ ೩. ೧)—ಇದೇ ಮೊದಲಾದ ಉಪಾಸನೆಗಳಲ್ಲಿ ಆದಿತ್ಯಾದಿಬುದ್ಧಿಗಳನ್ನು ಕ್ರತ್ವಂಗಗಳಾದ ಉದ್ಗೀಥಾದಿಗಳಲ್ಲಿ ಇಡಬೇಕು ; ಏಕೆಂದರೆ ಆದಿತ್ಯರೇ ಮೊದಲಾದ ದೇವತೆಗಳ ಆರಾಧನದಿಂದಲೇ ಕರ್ಮಗಳು ಫಲಗಳನ್ನು ಕೊಡುತ್ತವೆ.

**ದ್ವೈ.**—'ದೇವತೆಗಳು ವಿಷ್ಣುವಿನ ಅಂಗಗಳನ್ನು ಉಪಾಸಿಸಬೇಕು ; ಏಕೆಂದರೆ ಇದು ಉಪಪನ್ನವಾಗಿದೆ' ಎಂಬುದು ಸೂತ್ರಾರ್ಥ.

'ಕಣ್ಣಿನಿಂದ ಸೂರ್ಯನು ಹುಟ್ಟಿದನು'—ಎಂಬ ಶ್ರುತಿಯ (ಋ.ವೇ. ೧೦.೯.೧೩) ಪ್ರಕಾರ ವಿಷ್ಣುವು ಆದಿತ್ಯಾದಿಗಳಿಗೆ ಆಶ್ರಯವಾದ ಚಕ್ಷುಸ್ಸೇ ಮೊದಲಾದ ಅಂಗಗಳುಳ್ಳವನೆಂದು ದೇವತೆಗಳು ಉಪಾಸಿಸಬೇಕು ;[3] ಆದಿತ್ಯಾದಿದೇವತೆಗಳು ಚಕ್ಷುಸ್ಸೇ ಮೊದಲಾದ ಅಂಗಗಳಲ್ಲಿ ಹುಟ್ಟಿ, ಸ್ಥಿತಿಯನ್ನು ಪಡೆದು ಅಲ್ಲಿಯೇ ಲಯವನ್ನು ಹೊಂದುವುದರಿಂದ ಉಪಾಸನೆಗೆ ಈ ರೀತಿ ಉಪಪತ್ತಿಯಿದೆ.

---

1 ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ।

2 ಇಯಮೇವರ್ಕ್ ।

3 ಚಕ್ಷೋಃ ಸೂರ್ಯೋ ಅಜಾಯತೇತ್ಯಾದ್ಯುಪಾಸನಂ ಚ ದೇವಾನಾಂ ಕಾರ್ಯಮೇವ (ಮ. ಭಾ.).

## ೬. ಆಸೀನಾಧಿಕರಣ*

(ಸೂ. ೭–೧೦)

**ಆಸೀನಃ ಸಂಭವಾತ್ ॥ ೭ ॥**

೭. ಕುಳಿತುಕೊಂಡು (ಉಪಾಸಿಸಬೇಕು); ಏಕೆಂದರೆ (ಹಾಗಾದರೆ) ಸಂಭವ ವಿದೆ.

ಕರ್ಮಾಂಗಕ್ಕೆ ಸಂಬಂಧಿಸಿರುವ ಉಪಾಸನೆಗಳು ಕರ್ಮಕ್ಕೆ ಆಧೀನವಾಗಿರುವುದ ರಿಂದ ಆಸನಾದಿಗಳ ವಿಚಾರವನ್ನು ಚಿಂತಿಸಬೇಕಾಗಿಲ್ಲ, **ಸಮ್ಯಗ್ದರ್ಶನದಲ್ಲಿಯೂ** ಹೀಗೆಯೇ ; ಏಕೆಂದರೆ ಅಲ್ಲಿ ಜ್ಞಾನವು ವಸ್ತುವಿಗೆ ಅಧೀನವಾಗಿದೆ. ಆದರೆ ಇತರ ಉಪಾ- ಸನೆಗಳ ವಿಷಯಲ್ಲಿ ಅವುಗಳನ್ನು ನಿಯಮವಿಲ್ಲದೆ ನಿಂತುಕೊಂಡು, ಕುಳಿತುಕೊಂಡು, ಮಲಗಿಕೊಂಡು ಮಾಡಬಹುದೊ ಆಥವಾ ನಿಯಮದಿಂದ ಕುಳಿತುಕೊಂಡೇ ಮಾಡ ಬೇಕೊ ?—ಎಂಬುದಕ್ಕೆ ಸೂತ್ರಕಾರರು ಈಗ ವಿಚಾರಮಾಡುತ್ತಾರೆ.

**ಪೂರ್ವಪಕ್ಷಿ**—ಉಪಾಸನೆಯು ಮಾನಸವಾಗಿರುವುದರಿಂದ ಶರೀರದ ಸ್ಥಿತಿಗೆ ಯಾವ ನಿಯಮವೂ ಇಲ್ಲ.

**ಸಿದ್ಧಾಂತಿ**—ಕುಳಿತುಕೊಂಡೇ ಉಪಾಸನೆಯನ್ನು ಮಾಡಬೇಕು ; ಏಕೆಂದರೆ ಆಗ ಅದು ಸಂಭವಿಸುತ್ತದೆ. ಉಪಾಸನೆಯೆಂದರೆ ಸಮಾನವಾದ, ಎಂದರೆ ಒಂದೇ ವಿಧ ವಾದ ಪ್ರತ್ಯಯಗಳನ್ನು ಪ್ರವಹಿಸುವುದು.[1] ಅದು ನಡೆಯುತ್ತಿರುವಾಗ ಅಧವಾ ಓಡು ತ್ತಿರುವಾಗ ಮನುಷ್ಯನಿಗೆ ಸಂಭವಿಸುವುದಿಲ್ಲ ; ಏಕೆಂದರೆ ಗತಿ ಮೊದಲಾದುವು ಚಿತ್ತವಿಕ್ಷೇಪ ವನ್ನುಂಟುಮಾಡುತ್ತವೆ. ನಿಂತಿರುವವನ ಮನಸ್ಸು ದೇಹಧಾರಣದ ಕಡೆಗೆ ಹೋಗುವುದ ರಿಂದ ಅವನಿಗೂ ಸೂಕ್ಷ್ಮವಸ್ತುವನ್ನು ನೋಡಲು ಆಗುವುದಿಲ್ಲ ಮಲಗಿರುವವನು ನಿದ್ರೆಯಿಂದ ಅಭಿಭೂತನಾಗಬಹುದು. ಆದರೆ ಕುಳಿತಿರುವವನು ಈ ಜಾತಿಯ ಬಹು ದೋಷಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದಾದುದರಿಂದ ಅವನಿಗೆ ಉಪಾಸನೆಯು ಸಂಭವಿಸುತ್ತದೆ.[2]

ವಿ.—ಮೋಕ್ಷಸಾಧನವೆಂದು ವೇದಾಂತಶಾಸ್ತ್ರದಲ್ಲಿ ವಿಹಿತವಾದ ಧ್ಯಾನೋ- ಪಾಸನಾದಿಶಬ್ದಗಳಿಂದ ಹೇಳಲ್ಪಟ್ಟ ಜ್ಞಾನವನ್ನು ಪುನಃ ಪುನಃ ಮಾಡಬೇಕೆಂದೂ ಅದು

---

* ಶ್ರೀಭಾಷ್ಯ-ಮಧ್ವಭಾಷ್ಯಗಳಲ್ಲಿ ೧೧ನೇ ಸೂತ್ರವೂ ಈ ಅಧಿಕರಣಕ್ಕೇ ಸೇರಿದೆ. ಮಧ್ವಭಾಷ್ಯದಲ್ಲಿ ಇದನ್ನು ಆಸನಾಧಿಕರಣ ಎಂದು ಕರೆದಿದೆ

[1] ಉಪಾಸನಂ ನಾಮ ಸಮಾನಪ್ರತ್ಯಯಪ್ರವಾಹಕರಣಮ್ (ಸೂ. ಭಾ.).

[2] ಆಸೀನಸ್ಯ ತ್ವೇವಂಜಾತೀಯಕೋ ಭೂಯಾನ್ ದೋಷಃ ಸುಪರಿಹರ ಇತಿ ಸಂಭವತಿ ತಸ್ಯೋಪಾಸನಮ್ (ಸೂ. ಭಾ.)

ಸಂತತಿಸ್ಮೃತಿರೂಪದಲ್ಲಿರುವುದೆಂದೂ ಹೇಳಿದ್ದಾಯಿತು ಇಂಥ ಧ್ಯಾನವನ್ನು ಸಾಧಕನು ಆಸೀನನಾಗಿಯೇ ಮಾಡಬೇಕು, ಏಕೆಂದರೆ ಕುಳಿತುಕೊಂಡಿರುವಾಗಲೇ ಏಕಾಗ್ರಚಿತ್ತತೆಯು ಸಂಭವಿಸುತ್ತದೆ

**ದ್ವೈ**—ಸರ್ವದಾ ಉಪಾಸನೆಯನ್ನು ಮಾಡುತ್ತಿದ್ದರೂ ವಿಶೇಷತಃ ಆಸನದಲ್ಲಿ ಕುಳಿತುಕೊಂಡವನಾಗಿಯೇ ಉಪಾಸನೆಯನ್ನು ಮಾಡಬೇಕು, ಏಕೆಂದರೆ ಆಗ ವಿಕ್ಷೇಪಗಳು ಕಡಮೆಯಾಗಿ ಉಪಾಸನೆಯು ಸಂಭವಿಸುತ್ತದೆ [1]

**ಧ್ಯಾನಾಚ್ಚ ॥ ೮ ॥**

೮ ಮತ್ತು ಧ್ಯಾನವಾಗಿರುವುದರಿಂದಲೂ

ಧ್ಯಾನ-ಶಬ್ದವು ಸಮಾನಪ್ರತ್ಯಯಗಳ ಪ್ರವಾಹವನ್ನು ಸೂಚಿಸುತ್ತದೆ ಶರೀರದ ವ್ಯಾಪಾರವನ್ನು ಸಡಿಲಿಸಿಕೊಂಡು, ದೃಷ್ಟಿಯನ್ನು ನಿಲ್ಲಿಸಿಕೊಂಡು ಏಕವಿಷಯದಲ್ಲಿ ಚಿತ್ತವನ್ನು ನಿಲ್ಲಿಸಿರುವವನ ವಿಷಯದಲ್ಲಿ ಧ್ಯಾನಶಬ್ದವನ್ನು ಪ್ರಯೋಗಿಸುತ್ತೇವೆ ಇಂಥ ಧ್ಯಾನವು ಕುಳಿತುಕೊಂಡಿರುವವನಿಗೆ ಆಯಾಸವಿಲ್ಲದೆ ಆಗುತ್ತದೆ ಆದುದರಿಂದ ಧ್ಯಾನವೆಂಬುದು ಆಸೀನನಾದವನಿಗೆ ಆಗುತ್ತದೆ

**ವಿ**—'ಆತ್ಮನನ್ನು ನಿದಿಧ್ಯಾಸನಮಾಡಬೇಕು' (ಬೃ ಉ ೪ ೫ ೬) ಎಂಬ ಶ್ರುತಿಯ ಪ್ರಕಾರ ಉಪಾಸನೆಯು ಧ್ಯಾನರೂಪವಾಗಿರುವುದರಿಂದ ಏಕಾಗ್ರಚಿತ್ತತೆಯು ಆವಶ್ಯಕವಾಗಿರುತ್ತದೆ ಭಿನ್ನವಸ್ತುಗಳ ಚಿಂತನೆಯಿಲ್ಲದೆ ಒಂದೇ ವಸ್ತುವನ್ನು ಚಿಂತಿಸುವುದಕ್ಕೆ ಧ್ಯಾನವೆಂದು ಹೆಸರು

**ದ್ವೈ**—ಧ್ಯಾನವು ಎರಡುಬಗೆಯಾಗಿರುವುದು ಸ್ಮರಣೆ, ಉಪಾಸನೆ ಸ್ಮರಣೆಯು ಸರ್ವದಾ ಮಾಡಲು ಯೋಗ್ಯವಾಗಿರುವುದು ಆದರೆ ಉಪಾಸನೆಯನ್ನು—ಧ್ಯಾನರೂಪತ್ವವಿರುವುದರಿಂದ—ಕುಳಿತುಕೊಂಡೇ ಮಾಡಬೇಕು

**ಅಚಲತ್ವಂ ಚಾಪೇಕ್ಷ್ಯ ॥ ೯ ॥**

೯ ಅಚಲತ್ವವನ್ನು ಅಪೇಕ್ಷಿಸಿ (ಶ್ರುತಿಯು ಧ್ಯಾನಶಬ್ದವನ್ನು ಪ್ರಯೋಗಿಸಿದೆ)

'ಪೃಥಿವಿಯು ಧ್ಯಾನಿಸುವಂತಿದೆ' (ಛಾಂ ಉ ೭ ೬ ೧) ಎಂಬಲ್ಲಿ ಅಚಲತ್ವವನ್ನೇ ಅಪೇಕ್ಷಿಸಿ ಶ್ರುತಿಯು ಪೃಥಿವ್ಯಾದಿಗಳಲ್ಲಿ ಧ್ಯಾನಶಬ್ದವನ್ನು ಪ್ರಯೋಗಿಸಿದೆ ಉಪಾಸನೆಯು ಆಸೀನಕರ್ಮವೆಂಬುದಕ್ಕೆ ಇದು ಲಿಂಗವಾಗಿದೆ

**ವಿ.**—ಪೃಥಿವ್ಯಂತರಿಕ್ಷಾದಿಗಳಲ್ಲಿ ನಿಶ್ಚಲತ್ವವನ್ನು ಅಪೇಕ್ಷಿಸಿ 'ಪೃಥಿವಿಯು ಧ್ಯಾನಿ-

---

[1] ಸರ್ವದೋಪಾಸನಂ ಕುರ್ವನ್ನಪ್ಯಾಸೀನೋ ವಿಶೇಷತಃ ಕುರ್ಯಾತ್ । ತದಾ ವಿಕ್ಷೇಪಾಲ್ಪತ್ವೇನ ಸಂಭವಾತ್ (ಮ ಭಾ ).

ಸುವಂತಿದೆ' ಎಂದು ಶ್ರುತಿಯಲ್ಲಿ ಹೇಳಿದೆ. ಆದುದರಿಂದ ಅಚಲತ್ವವು ಏಕಾಗ್ರಚಿತ್ತದಿಂದ ಧ್ಯಾನಿಸುತ್ತಿರುವವನ ಲಕ್ಷಣವಾಗಿದೆ; ಅಂಥ ಅಚಲತ್ವವು ಆಸೀನನಾದ ಉಪಾಸಕನಿಗೇ ಸಂಭವಿಸುತ್ತದೆ

**ದ್ವೈ.**—'ಅಚಲತ್ವವನ್ನು ಅಪೇಕ್ಷಿಸಿಕೊಂಡು ಚಿತ್ತಕ್ಕೆ ವಿಕ್ಷೇಪಾಭಾವವು ಆಗುತ್ತದೆ' ಎಂಬುದು ಸೂತ್ರಾರ್ಥ.

'ಶರೀರವು ಅಚಲವಾಗಿದ್ದರೆ ಮನಸ್ಸೂ ಅಚಲವಾಗಿರುತ್ತದೆ; ಶರೀರವು ಚಲಿಸುತ್ತಿದ್ದರೆ ಮನಸ್ಸು ಚಂಚಲವಾಗುತ್ತದೆ' ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.[1]

**ಸ್ಮರಂತಿ ಚ ॥ ೧೦ ॥**

೧೦. ಸ್ಮೃತಿಗಳೂ (ಆಸನವನ್ನೇ) ಹೇಳುತ್ತವೆ.

ಶಿಷ್ಟರು ಉಪಾಸನಾಂಗವಾಗಿ ಆಸನವನ್ನು ಹೇಳಿರುತ್ತಾರೆ. 'ಶುಚಿಯಾದ ದೇಶದಲ್ಲಿ ಸ್ಥಿರವಾದ ಆಸನವನ್ನು ತನಗಾಗಿ ಸ್ಥಾಪಿಸಿಕೊಂಡು'[2]—(ಗೀತಾ ೬. ೧೧); ಆದುದರಿಂದಲೇ ಯೋಗಶಾಸ್ತ್ರದಲ್ಲಿ ಪದ್ಮಕವೇ ಮೊದಲಾದ ಆಸನಗಳ ಉಪದೇಶವಿದೆ.

**ವಿ.**—ಸ್ಮೃತಿಯೂ (ಗೀತಾ ೬. ೧೧. ೧೨) ಕೂಡ ಆಸೀನನಾದವನಿಗೇ ಧ್ಯಾನವು ಸಂಭವಿಸುತ್ತದೆಂದು ತಿಳಿಸುತ್ತದೆ.

**ದ್ವೈ.**—ಇದನ್ನೇ ಶ್ರೀಕೃಷ್ಣಾದಿಗಳು ಹೇಳಿರುತ್ತಾರೆ.

---

[1] ಅಚಲಂ ಚೇಚ್ಛರೀರಂ ಸ್ಯಾನ್ಮನಸಶ್ಚಾಪ್ಯಚಾಲನಮ್। ಚಲನೇ ತು ಶರೀರಸ್ಯ ಚಂಚಲಂ ತು ಮನೋ ಭವೇದಿತಿ ಚ ಬ್ರಹ್ಮಾಂಡೇ (ಮ. ಭಾ.).

[2] ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।

## ೭. ಏಕಾಗ್ರತಾಧಿಕರಣ

**ಯತ್ರೈಕಾಗ್ರತಾ ತತ್ರಾವಿಶೇಷಾತ್ ॥ ೧೧ ॥**

೧೧ ಎಲ್ಲಿ ಏಕಾಗ್ರತೆಯುಂಟಾಗುವುದೊ ಅಲ್ಲಿ (ಉಪಾಸಿಸಬೇಕು), ಏಕೆಂದರೆ (ಯಾವ) ವಿಶೇಷವೂ ಇಲ್ಲ

ಈಗ ದಿಗ್ದೇಶಕಾಲಗಳ ವಿಷಯದಲ್ಲಿ ಈ ಸಂಶಯವು ಬರುತ್ತದೆ ವೈದಿಕ ಕರ್ಮಗಳಲ್ಲಿ ದಿಕ್ಕು ಮೊದಲಾದುವುಗಳ ನಿಯಮವಿರುವಂತೆ ಇಲ್ಲಿಯೂ ಅಂಥ ನಿಯಮವಿದೆಯೊ ಅಥವಾ ಇಲ್ಲವೊ ? ಇದೆ—ಎಂದು ಹೇಳುವವನಿಗೆ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ ದಿಕ್ಕು ದೇಶ ಕಾಲ—ಎಂಬ ನಿಯಮಗಳು ಉದ್ದೇಶವನ್ನೇ ಅವಲಂಬಿಸಿವೆ, ಯಾವ ದಿಕ್ಕಿನಲ್ಲಿ ದೇಶದಲ್ಲಿ ಅಥವಾ ಕಾಲದಲ್ಲಿ ಮನಸ್ಸಿಗೆ ಸೌಕರ್ಯದಿಂದ ಏಕಾಗ್ರತೆಯಾಗುವುದೊ ಅಲ್ಲಿಯೆ ಉಪಾಸಕನು ಧ್ಯಾನಿಸಬಹುದು ,[1] ಏಕಂದರೆ ಈ ದಿಕ್ಕೇ ಮೊದಲಾದುವುಗಳ ವಿಷಯದಲ್ಲಿ ಶ್ರುತಿಯಿರುವುದಿಲ್ಲ ಶ್ವೇತಾಶ್ವತರದಲ್ಲಿ[2] (೨ ೧೦) ಕೆಲವು ವಿಶೇಷಗಳನ್ನು ಹರಿಸಿದ್ದರೂ ವಿಶೇಷಗಳ ವಿಷಯದಲ್ಲಿ ಯಾವ ನಿಯಮವೂ ಇಲ್ಲ—ಎಂದು ಆಚಾರ್ಯರು ಸುಹೃದ್ಭಾವದಿಂದ ಹೇಳಿರುತ್ತಾರೆ ಶ್ವೇತಾಶ್ವತರದ 'ಮನಸ್ಸಿಗೆ ಅನುಕೂಲವಾದ' **ಮನೋಽನುಕೂಲೇ** ಎಂಬುದು 'ಎಲ್ಲಿ ಏಕಾಗ್ರತೆಯುಂಟಾಗುವುದೊ ಅಲ್ಲಿಯೆ' ಎಂಬುದನ್ನು ತಿಳಿಸುತ್ತದೆ

**ವಿ.**—ವಿಶೇಷವಾದ ದೇಶಕಾಲಗಳನ್ನು ಶ್ರುತಿಗಳು ಹೇಳದಿರುವುದರಿಂದ ಏಕಾಗ್ರತೆಗೆ ಅನುಕೂಲವಾದ ದೇಶಕಾಲಗಳೇ ಉಪಾಸನೆಯ ದೇಶಕಾಲಗಳಾಗಿರುತ್ತವೆ

**ದ್ವೈ.**—ಯಾವ ದೇಶಕಾಲಾವಸ್ಥೆಗಳಲ್ಲಿ ಏಕಾಗ್ರತೆಯು ಬರುತ್ತದೆಯೊ ಅಲ್ಲಿಯೇ ಇದು (ಧ್ಯಾನಿಸಬೇಕು) [3]

---

[1] ಯತ್ರೈವಾಸ್ಯ ದಿಶಿ ದೇಶೇ ಕಾಲೇ ವಾ ಮನಸಃ ಸೌಕರ್ಯೇಣೈಕಾಗ್ರತಾ ಭವತಿ ತತ್ರೈವೋಪಾಸೀತ (ಸೂ ಭಾ.)

[2] 'ಸಮವಾದ, ಶುಚಿಯಾದ, ಸಣ್ಣ ಕಲ್ಲುಗಳು ಬೆಂಕಿ ಧೂಳು ಶಬ್ದ ನೀರು ಜನರ ವಾಸಸ್ಥಾನ—ಇವುಗಳಿಲ್ಲದ, ಮನಸ್ಸಿಗೆ ಅನುಕೂಲವಾದ, ಕಣ್ಣಿಗೆ ಪೀಡೆಯನ್ನುಂಟುಮಾಡದ, ಗುಹೆಯೇ ಮೊದಲಾದ ವಾಯುಪ್ರವಾಹವಿಲ್ಲದ ಸ್ಥಾನದಲ್ಲಿ (ಮನಸ್ಸನ್ನು) ನಿಯೋಜಿಸಬೇಕು '

[3] ದೇಶಕಾಲಾವಸ್ಥಾದಿಷು ಯತ್ರೈಕಾಗ್ರತಾ ಭವತಿ ತತ್ರೈವ ಸ್ಥಾತವ್ಯಮ್ (ಮ. ಭಾ.)

# ೮. ಆ ಪ್ರಾಯಣಾಧಿಕರಣ

## ಆ ಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ॥ ೧೨ ॥

೧೨. ಮರಣಕಾಲದವರೆಗೂ (ಉಪಾಸನೆಯನ್ನು ಮಾಡಬೇಕು); ಏಕೆಂದರೆ ಶ್ರುತಿಯಲ್ಲಿಯೂ ಹಾಗೆ ಕಂಡುಬಂದಿದೆ.

ಎಲ್ಲ ಉಪಾಸನೆಗಳಲ್ಲಿಯೂ ಆವೃತ್ತಿಯನ್ನು ಮಾಡಬೇಕೆಂದು ಮೊದಲನೆಯ ಅಧಿಕರಣದಲ್ಲಿ ಸೂಚಿಸಿದ್ದಾಯಿತು. ಈಗ ಅಭ್ಯುದಯವೇ ಫಲವಾಗಿರುವ ಉಪಾಸನೆಗಳನ್ನು ಸ್ವಲ್ಪಕಾಲ ಮಾಡಿ ಬಿಡಬೇಕೊ ಅಥವಾ ಯಾವಜ್ಜೀವವೂ ಆವೃತ್ತಿ ಮಾಡಬೇಕೊ ?— ಎಂಬ ಸಂಶಯವು ಬರುತ್ತದೆ

**ಪೂರ್ವಪಕ್ಷಿ**—ಉಪಾಸನೆಯನ್ನು ಸ್ವಲ್ಪಕಾಲದ ವರೆಗೆ ಮಾಡಿ ಬಿಡಬೇಕು; ಏಕೆಂದರೆ ಆಗ ಆವೃತ್ತಿವಿಶಿಷ್ಟವಾದ ಉಪಾಸನಾ-ಶಬ್ದದ ಅರ್ಥವನ್ನು ಪೂರೈಸಿದಂತೆ ಆಗುತ್ತದೆ.

**ಸಿದ್ಧಾಂತಿ**—ಮರಣಕಾಲದ ವರೆಗೂ ಉಪಾಸನೆಯನ್ನು ಆವೃತ್ತಿಮಾಡುತ್ತಲೇ ಇರಬೇಕು; ಏಕೆಂದರೆ ಅಂತಿಮೋಪಾಸನೆಯ ವಶದಿಂದ ಅದೃಷ್ಟಫಲವು ಪ್ರಾಪ್ತವಾಗುತ್ತದೆ. ಕರ್ಮಗಳು ಕೂಡ ಮುಂದಿನ ಜನ್ಮದಲ್ಲಿ ಉಪಯೋಗಿಸತಕ್ಕ ಫಲವನ್ನುಂಟುಮಾಡಲು ತಮಗೆ ಅನುರೂಪವಾದ ಭಾವನಾವಿಜ್ಞಾನವನ್ನು ಮರಣಕ್ಕೆ ಮೊದಲು ಬಯಸುತ್ತವೆ. ಶ್ರುತಿಗಳೂ ಹೀಗೆ ಹೇಳುತ್ತವೆ: '(ಆಗ ಆತ್ಮನು) ವಿಶೇಷವಿಜ್ಞಾನವುಳ್ಳವನಾಗಿರುತ್ತಾನೆ ಮತ್ತು ವಿಶೇಷವಿಜ್ಞಾನದಿಂದ (ಪ್ರಕಾಶಿಸಲ್ಪಟ್ಟ ಶರೀರವನ್ನೇ) ಪ್ರವೇಶಿಸುತ್ತಾನೆ'[1] (ಬೃ ಉ. ೪- ೪. ೨), 'ಈ ಜೀವನು ಯಾವ ಚಿತ್ತದಿಂದ ಕೂಡಿರುವನೊ ಅದರಿಂದ ಪ್ರಾಣನನ್ನು ಹೊಂದುತ್ತಾನೆ. ಪ್ರಾಣನು ತೇಜಸ್ಸಿನಿಂದ ಕೂಡಿ ಆತ್ಮನೊಂದಿಗೆ ಅವನ ಸಂಕಲ್ಪಕ್ಕೆ ಅನುಸಾರವಾದ ಲೋಕಕ್ಕೆ ಒಯ್ಯುತ್ತಾನೆ'[2] (ಪ್ರ. ಉ ೩. ೧೦) ಇತ್ಯಾದಿ. ಈ ಉಪಾಸನಾಪ್ರತ್ಯಯಗಳು ಸ್ವರೂಪಾನುವೃತ್ತಿಯನ್ನು ಬಿಟ್ಟು ಮರಣಕಾಲದಲ್ಲಿ ಬೇರೆ ಯಾವ ಭಾವನಾವಿಜ್ಞಾನವನ್ನೂ ಅಪೇಕ್ಷಿಸುವುದಿಲ್ಲ. ಆದುದರಿಂದ ಫಲಭಾವನಾರೂಪವಾದ ಪ್ರತ್ಯಯಗಳನ್ನು ಮರಣಕಾಲದ ವರೆಗೂ ಆವೃತ್ತಿಮಾಡಬೇಕು. 'ಯಾವ ಯಾವ ಭಾವನೆಯಿಂದ ಈ ಲೋಕದಿಂದ ಹೋಗುವನೊ'[3] (ಶ. ಬ್ರಾ. ೧೦. ೬. ೩. ೧) ಎಂಬ ಶ್ರುತಿಯು ಮರಣಕಾಲದ ವರೆಗೂ ಪ್ರತ್ಯಯಾನುವೃತ್ತಿ

---

[1] ಸವಿಜ್ಞಾನೋ ಭವತಿ, ಸವಿಜ್ಞಾನಮೇವಾನ್ವವಕ್ರಾಮತಿ ।

[2] ಯಚ್ಚಿತ್ತಸ್ತೇನೈಷ ಪ್ರಾಣಸ್ತೇಜಸಾ ಯುಕ್ತಃ ಸಹಾತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ ।

[3] ಸ ಯಾವತ್ಕ್ರತುರಯಮಸ್ಮಾಲ್ಲೋಕಾತ್ ಪ್ರೈತಿ ।

ಯನ್ನು ಮಾಡಬೇಕೆಂದು ತಿಳಿಸುತ್ತದೆ. ಸ್ಮೃತಿಯೂ ಕೂಡ ಇದನ್ನೇ ಹೇಳುತ್ತದೆ: 'ಎಲೈ ಅರ್ಜುನ, ಮರಣಕಾಲದಲ್ಲಿ ಯಾವ ಯಾವ ಭಾವವನ್ನಾದರೂ ಸ್ಮರಿಸುತ್ತ ದೇಹವನ್ನು ಬಿಡುವನೋ, ಯಾವಾಗಲೂ ಆ ಭಾವವನ್ನೇ ಭಾವಿಸುತ್ತಿರುವ ಅವನು ಅದದನ್ನೇ ಹೊಂದುವನು'[1] (ಗೀತಾ. ೮. ೬) ಮತ್ತು 'ಮರಣಕಾಲದಲ್ಲಿ ಅಚಲವಾದ ಮನಸ್ಸಿನಿಂದ'[2] (ಗೀತಾ. ೮. ೧೦).

**ವಿ.**—ಅಪವರ್ಗಸಾಧನವಾದ ಉಪಾಸನೆಯನ್ನು ಮರಣಪರ್ಯಂತ ಮಾಡಬೇಕು ; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ : 'ಬದುಕಿರುವ ವರೆಗೂ ಹೀಗೆ ಆಚರಿಸುತ್ತಿದ್ದರೆ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ'[3] (ಛಾಂ. ಉ ೮ ೧೫. ೧).

**ದ್ವೈ.**—ಮೋಕ್ಷಪರ್ಯಂತ ಧ್ಯಾನವನ್ನು ಆವಶ್ಯಕವಾಗಿ ಮಾಡಬೇಕು ;[4] 'ಮುಕ್ತರೂ ಕೂಡ ಅವನನ್ನು ಧ್ಯಾನಿಸುತ್ತಾರೆ' ಎಂದು ಸೌಪರ್ಣಶ್ರುತಿಯು ಹೇಳುತ್ತದೆ.

---

1 ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥

2 ಪ್ರಯಾಣಕಾಲೇ ಮನಸಾಽಚಲೇನ ।

3 ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ।

4 ಯಾವನ್ಮೋಕ್ಷಸ್ತಾವದುಪಾಸನಾದಿ ಕಾರ್ಯಮ್ (ಮ. ಭಾ.).

# ೯. ತದಧಿಗಮಾಧಿಕರಣ*

**ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ॥ ೧೪ ॥**

೧೩ ಅದನ್ನು ಅರಿತುಕೊಂಡರೆ ಮುಂದಿನ ಮತ್ತು ಹಿಂದಿನ ಪಾಪಗಳಿಗೆ ಅಲೇಪ ವಿನಾಶಗಳಾಗುವುವು, ಏಕೆಂದರೆ (ಶ್ರುತಿಯಲ್ಲಿ) ಹಾಗೆ ಹೇಳಿದೆ

ಬ್ರಹ್ಮಜ್ಞಾನವಾದಾಗ ಅದಕ್ಕೆ ವಿಪರೀತಫಲವಾಗಿರುವ ಪಾಪವು ಕ್ಷಯವಾಗುತ್ತದೆಯೊ ಅಥವಾ ಇಲ್ಲವೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಕರ್ಮವು ಫಲಕ್ಕಾಗಿಯೇ ಇರುವುದರಿಂದ ಅದು ಫಲವನ್ನು ಕೊಡುವುದಕ್ಕೆ ಮೊದಲು ಕ್ಷಯವಾಗಲಾರದು ಇದಕ್ಕೆ ಫಲವನ್ನು ಕೊಡುವ ಶಕ್ತಿಯಿದೆಯೆಂಬುದು ಶ್ರುತಿಯಿಂದ ತಿಳಿದುಬಂದಿದೆ ಅದರ ಫಲದ ಭೋಗವಾಗದೆಯೆ ಅದು ನಾಶವಾದರೆ ಶ್ರುತಿಯು ವ್ಯರ್ಥವಾಗುವುದು 'ಕರ್ಮವು ಕ್ಷಯವಾಗುವುದಿಲ್ಲ'[1] (ಗೌ ಧ ಸೂ ೩ ೧ ೫) ಎಂದು ಸ್ಮೃತಿಯೂ ಹೇಳುತ್ತದೆ ಪ್ರಾಯಶ್ಚಿತ್ತೋಪದೇಶವು ವ್ಯರ್ಥವೆಂದು ಹೇಳಲಾಗುವುದಿಲ್ಲ, ಏಕೆಂದರೆ ಅವು ನೈಮಿತ್ತಕವೆಂದಾಗಬಹುದು ಪ್ರಾಯಶ್ಚಿತ್ತಗಳನ್ನು ದೋಷಸಂಯೋಗದಿಂದ ವಿಧಿಸಿರುವುದರಿಂದ ಅವು ದೋಷಗಳನ್ನು ನಾಶಗೊಳಿಸುತ್ತವೆ, ಆದರೆ ಬ್ರಹ್ಮವಿದ್ಯೆಯನ್ನು ಪಾಪನಾಶಕ್ಕೆಂದು ವಿಧಿಸಿಲ್ಲ. ಮೋಕ್ಷವು ಕೂಡ ಕರ್ಮಫಲದಂತೆ ದೇಶ-ಕಾಲ-ನಿಮಿತ್ತಗಳನ್ನು ಅಪೇಕ್ಷಿಸಿ ಆಗಬಹುದಾಗಿದೆ ಆದುದರಿಂದ ಬ್ರಹ್ಮಜ್ಞಾನವಾದಾಗ ಪಾಪದ ನಿವೃತ್ತಿಯಿಲ್ಲ

**ಸಿದ್ಧಾಂತಿ.**—ಬ್ರಹ್ಮಜ್ಞಾನವಾದಾಗ ಮುಂದಿನ ಪಾಪವು ಅಂಟಿಕೊಳ್ಳುವುದಿಲ್ಲ, ಹಿಂದಿನ ಪಾಪವು ನಾಶವಾಗುತ್ತದೆ, ಏಕೆಂದರೆ ಬ್ರಹ್ಮವಿದ್ಯಾಪ್ರಕರಣದಲ್ಲಿ ಶ್ರುತಿಯು ಹಾಗೆ ಹೇಳುತ್ತದೆ 'ಹೇಗೆ ಪದ್ಮಪತ್ರಕ್ಕೆ ನೀರು ಅಂಟಿಕೊಳ್ಳುವುದಿಲ್ಲವೊ ಹಾಗೆಯೇ ಬ್ರಹ್ಮವನ್ನು ಅರಿತುಕೊಂಡಿರುವವನಿಗೆ ಪಾಪಕರ್ಮವು ಅಂಟಿಕೊಳ್ಳುವುದಿಲ್ಲ'[2] (ಛಾಂ ಉ ೪ ೧೪ ೩), ಹೀಗೆಯೇ ಹಿಂದಿನ ಪಾಪದ ನಾಶವನ್ನು ಶ್ರುತಿಯು ಹೇಳುತ್ತದ 'ಅವನ ಪಾಪಗಳೆಲ್ಲ—ಅಗ್ನಿಯಲ್ಲಿ ಹಾಕಿದ ಇಷೀಕದ ಕಡ್ಡಿಗಳಂತೆ—ಸುಟ್ಟುಹೋಗುತ್ತವೆ'[3] (ಛಾಂ ಉ ೫ ೨೪ ೩) ಭೋಗಿಸದೆ ಇರುವ ಕರ್ಮಕ್ಕೆ ನಾಶವನ್ನು

---

* ಮಧ್ವಭಾಷ್ಯದಲ್ಲಿ ಈ ಅಧಿಕರಣವು ೧೯ನೇ ಸೂತ್ರದ ವರೆಗೂ ಹೋಗುತ್ತದೆ

[1] ನ ಹಿ ಕರ್ಮ ಕ್ಷೀಯತೇ ।

[2] ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ।

[3] ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ।

ಕಲ್ಪಿಸಿದರೆ ಶಾಸ್ತ್ರವು ವ್ಯರ್ಥವಾಗುವುದೆಂಬ ಆಕ್ಷೇಪಣೆಯೂ ಸರಿಯಲ್ಲ, ಏಕೆಂದರೆ ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯಿದ್ದರೂ ಅದು ವಿದ್ಯೆಯೇ ಮೊದಲಾದ ಕಾರಣಾಂತರದಿಂದ ಪ್ರತಿಬದ್ಧವಾಗುತ್ತದೆ ಶಾಸ್ತ್ರವು 'ಆ ಶಕ್ತಿ ಇದೆ' ಎನ್ನುವ ಮಟ್ಟಿಗೆ ವ್ಯವಹರಿಸುತ್ತದೆಯೇ ಹೊರತು ಪ್ರತಿಬಂಧ-ಅಪ್ರತಿಬಂಧಗಳ ವಿಷಯದಲ್ಲಿ ವ್ಯವಹರಿಸುವುದಿಲ್ಲ 'ಕರ್ಮವು ಕ್ಷಯವಾಗುವುದಿಲ್ಲ' ಎಂಬ ಸ್ಮೃತಿವಚನವು ಸಾಮಾನ್ಯನಿಯಮವನ್ನು ಮಾತ್ರ ಹೇಳುತ್ತದೆ ಕರ್ಮಕ್ಕೆ ಪ್ರಾಯಶ್ಚಿತ್ತಾದಿಗಳಿಂದ ನಾಶವಿದೆಯೆಂದು ಶಾಸ್ತ್ರದಲ್ಲಿ ಒಪ್ಪಿಕೊಂಡಿದೆ 'ಯಾವನು ಅಶ್ವಮೇಧದಿಂದ ಯಾಗಮಾಡುವನೊ, ಯಾವನು ಹೀಗೆ ಅರಿತುಕೊಂಡಿರುವನೊ ಅವನು ಪಾಪವನ್ನೆಲ್ಲ ದಾಟುತ್ತಾನೆ, ಬ್ರಹ್ಮ-ಹತ್ಯೆಯನ್ನು ದಾಟುತ್ತಾನೆ'[1] (ತೈ ಸಂ ೫ ೩ ೧೨ ೨) ಪ್ರಾಯಶ್ಚಿತ್ತಗಳು ನೈಮಿತ್ತಿಕ-ಕರ್ಮವಾಗಬಹುದೆಂಬುದೂ ಸರಿಯಲ್ಲ, ಏಕೆಂದರೆ ದೋಷಗಳ ಸಂಯೋಗದಿಂದ ವಿಧಿಸಲ್ಪಟ್ಟ ಇವುಗಳಿಗೆ ದೋಷನಾಶವೆಂಬ ಫಲವು ಆಗುತ್ತಿರುವಾಗ ಮತ್ತೊಂದು ಫಲವನ್ನು ಕಲ್ಪಿಸುವುದು ಸರಿಯಾಗುವುದಿಲ್ಲ 'ಬ್ರಹ್ಮವಿದ್ಯೆಯನ್ನು ಪಾಪನಾಶಕ್ಕೆಂದು ವಿಧಿಸಿಲ್ಲ' ಎಂಬ ಪೂರ್ವಪಕ್ಷವೂ ಸರಿಯಲ್ಲ, ಏಕೆಂದರೆ ಸಗುಣವಿದ್ಯೆಗಳ ವಾಕ್ಯಶೇಷದಲ್ಲಿ ಐಶ್ವರ್ಯಪ್ರಾಪ್ತಿಯನ್ನೂ ಪಾಪನಿವೃತ್ತಿಯನ್ನೂ ಜ್ಞಾನಿಗೆ ಹೇಳಿದೆ ನಿರ್ಗುಣವಿದ್ಯೆಯಲ್ಲಿ ಅಂಥ ವಿಧಾನವಿಲ್ಲದಿದ್ದರೂ ಅಕರ್ತಾತ್ಮಜ್ಞಾನದಿಂದ ಕರ್ಮಗಳು ಸುಟ್ಟುಹೋಗುತ್ತವೆಂಬುದು ಸಿದ್ಧವಾಗುತ್ತದೆ[2] ಮೋಕ್ಷವು ದೇಶಕಾಲನಿಮಿತ್ತಗಳನ್ನು ಅಪೇಕ್ಷಿಸುವುದಿಲ್ಲ, ಏಕಂದರೆ ಆಗ ಅದು ಅನಿತ್ಯವೆಂಬ ಪ್ರಸಂಗವು ಬರುತ್ತದೆ ಆದುದರಿಂದ ಬ್ರಹ್ಮಜ್ಞಾನವಾದಾಗ ದುರಿತ-ಕ್ಷಯವಾಗುತ್ತದ—ಎಂಬುದು ಸಿದ್ಧವಾಗುತ್ತದೆ

ವಿ.—ಜ್ಞಾನಪ್ರಾಪ್ತಿಯಾದಾಗ ಮುಂದಿನ ಮತ್ತು ಹಿಂದಿನ ಪಾಪಗಳ ನಿರ್ಲೇಪವೂ ನಾಶವೂ ಉಂಟಾಗುತ್ತದ, ಏಕೆಂದರೆ ಶ್ರುತಿಯು (ಛಾಂ ಉ ೪ ೧೪ ೩) ಹಾಗೆ ಹೇಳುತ್ತದೆ

**ದ್ವೈ.**—ಬ್ರಹ್ಮದರ್ಶನವಾದ ಮೇಲೆ ಹಿಂದಿನ ಪಾಪಕ್ಕೆ ಅಶ್ಲೇಷವೂ ಮುಂದಿನ ಪಾಪಕ್ಕ ನಾಶವೂ ಉಂಟಾಗುತ್ತದ,[3] ಏಕಂದರೆ ಶ್ರುತಿಯು (ಛಾಂ ಉ ೪ ೧೪ ೩, ೫ ೧೫ ೩) ಹಾಗೆ ಹೇಳುತ್ತದೆ

---

[1] ಸರ್ವಂ ಪಾಪ್ಮಾನಂ ತರತಿ, ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ ।

[2] ನಿರ್ಗುಣಾಯಾಂ ತು ವಿದ್ಯಾಯಾಂ ಯದ್ಯಪಿ ವಿಧಾನಂ ನಾಸ್ತಿ ತಥಾಽಪಿ ಅಕರ್ತ್ರಾತ್ಮಬೋಧಾತ್ ಕರ್ಮಪ್ರದಾಹಸಿದ್ಧಿಃ (ಸೂ ಭಾ.)

[3] ಬ್ರಹ್ಮದರ್ಶನ ಉತ್ತರಾಘಸ್ಯಾಶ್ಲೇಷಃ ಪೂರ್ವಸ್ಯ ವಿನಾಶಶ್ಚ (ಮ ಭಾ )

## ೧೦. ಇತರಾಸಂಶ್ಲೇಷಾಧಿಕರಣ

### ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ॥ ೧೪ ॥

೧೪ ಇನ್ನೊಂದಕ್ಕೂ ಹೀಗೆಯೇ ಅಶ್ಲೇಷವಿದೆ, ಆದರೆ (ಶರೀರ) ಪಾತವಾದ ಮೇಲೆ (ಮುಕ್ತಿಯಾಗುವುದು)

ಹಿಂದಿನ ಅಧಿಕರಣದಲ್ಲಿ ಬಂಧಹೇತುವೂ ಸ್ವಾಭಾವಿಕವೂ ಆದ ಪಾಪವು ಜ್ಞಾನ-ನಿಮಿತ್ತದಿಂದ ಅಂಟುವುದಿಲ್ಲ ಅಥವಾ ನಾಶವಾಗುವುದು—ಎಂದು ಹೇಳಿದ್ದಾಯಿತು ಆದರೆ ಧರ್ಮವು ಶಾಸ್ತ್ರೀಯವಾಗಿರುವುದರಿಂದ ಶಾಸ್ತ್ರೀಯಜ್ಞಾನಕ್ಕೆ ಅದರಿಂದ ಯಾವ ವಿರೋಧವೂ ಉಂಟಾಗುವುದಿಲ್ಲವೆಂಬ ಆಶಂಕೆಯು ಬರಬಹುದು, ಅದನ್ನು ನಿರಾಕರಿಸಲು ಹಿಂದಿನ ಅಧಿಕರಣದ ನ್ಯಾಯವನ್ನೇ ಇಲ್ಲಿ ಅತಿದೇಶಮಾಡಲಾಗುವುದು

ಜ್ಞಾನಿಗೆ ಪಾಪದಂತೆಯೇ ಪುಣ್ಯಕರ್ಮಕ್ಕೂ ಅಶ್ಲೇಷ-ವಿನಾಶಗಳಾಗುತ್ತವೆ, ಏಕೆಂದರೆ ಅದೂ ತನ್ನ ಫಲಕ್ಕೆ ಕಾರಣವಾಗಿರುವುದರಿಂದ ಜ್ಞಾನಫಲಕ್ಕೆ ಪ್ರತಿಬಂಧಕವಾಗುವ ಪ್ರಸಂಗವಿದೆ 'ಇವನು ಇವೆರಡನ್ನೂ ದಾಟುತ್ತಾನೆ'[1] (ಬೃ ಉ ೪ ೪ ೨೨) ಇದೇ ಮೊದಲಾದ ಶ್ರುತಿಗಳು ಪಾಪದಂತೆ ಪುಣ್ಯವೂ ನಾಶವಾಗುತ್ತದೆಂದು ತಿಳಿಸುತ್ತವೆ ಅಕರ್ತಾತ್ಮಜ್ಞಾನವು ಪಾಪದಂತೆ ಪುಣ್ಯವನ್ನೂ ನಾಶಮಾಡುತ್ತದೆ 'ಇವನ ಕರ್ಮಗಳು ನಾಶವಾಗುತ್ತವೆ'[2] (ಮುಂ ಉ ೨ ೨ ೮) ಎಂಬುದು ಸಾಮಾನ್ಯವಚನವಾಗಿದೆ ಶ್ರುತಿಯು ಪಾಪಶಬ್ದವನ್ನು ಹೇಳುವಾಗ ಪುಣ್ಯವನ್ನೂ ಗ್ರಹಿಸಿದೆಯೆಂದು ತಿಳಿಯಬೇಕು ಹೀಗೆ ಬಂಧಕ್ಕೆ ಕಾರಣಗಳಾಗಿರುವ ಧರ್ಮಾಧರ್ಮಗಳಿಗೆ ವಿದ್ಯಾಸಾಮರ್ಥ್ಯದಿಂದ ಅಶ್ಲೇಶ-ವಿನಾಶಗಳು ಸಿದ್ಧಿಸುವುದರಿಂದ ಜ್ಞಾನಿಗೆ ಶರೀರಪಾತವಾದ ಮೇಲೆ ಮುಕ್ತಿಯು ಆವಶ್ಯಕವಾಗಿ ಆಗುವುದು

ವಿ.—'ಇನ್ನೊಂದಕ್ಕೂ ಅಶ್ಲೇಷವಿದೆ, ಆದರೆ ಶರೀರಪಾತವಾದ ಮೇಲೆ' ಎಂಬುದು ಸೂತ್ರಾರ್ಥ

ಪುಣ್ಯಕ್ಕೂ ವಿದ್ಯೆಯಿಂದ ಅಶ್ಲೇಷ-ವಿನಾಶಗಳಾಗುತ್ತವೆ, ಏಕೆಂದರೆ ಇಲ್ಲಿಯೂ ಕೂಡ ವಿದ್ಯೆಗೂ ಪುಣ್ಯಕರ್ಮದ ಫಲಕ್ಕೂ ವಿರೋಧವಿದೆ- 'ಅಹೋರಾತ್ರಿಗಳು ಈ ಸೇತುವನ್ನು ದಾಟುವುದಿಲ್ಲ ಎಲ್ಲ ಪಾಪಗಳೂ ಇದರಿಂದ ಹಿಂತಿರುಗುವುವು'[3] (ಛಾಂ

---

[1] ಉಭೇ ಉ ಹ್ಯೇವೈಷ ಏತೇ ತರತಿ ।

[2] ಕ್ಷೀಯಂತೇ ಚಾಸ್ಯ ಕರ್ಮಾಣಿ ।

[3] ನೈತಂ ಸೇತುಮಹೋರಾತ್ರೇ ತರತಃ . ಸರ್ವೇ ಪಾಪ್ಮಾನೋಽತೋ ನಿವರ್ತಂತೇ ।

ಉ. ೮. ೪. ೧), 'ಸುಕೃತ-ದುಷ್ಕೃತಗಳನ್ನು ಒದರುತ್ತಾನೆ'[1] (ಕೌ. ಉ. ೧. ೪) ಎಂದು ಶ್ರುತಿಗಳು ಹೇಳುತ್ತವೆ. ಮೊದಲನೆಯ ಶ್ರುತಿಯಲ್ಲಿ ಸುಕೃತವನ್ನೂ ಪಾಪವೆಂದು ಕರೆದಿದೆ; ಏಕೆಂದರೆ ಅದರ ಫಲವು ಮುಮುಕ್ಷುವಿಗೆ ಅನಿಷ್ಟವಾಗಿರುತ್ತದೆ. ಬ್ರಹ್ಮಜ್ಞಾನಿಯ ಉಪಾಸನೆಗೆ ಧರ್ಮಫಲಗಳಾದ ವೃಷ್ಟ್ಯಾದಿಗಳು ಇಷ್ಟವಾಗಿರುವುದರಿಂದ ಜ್ಞಾನವು ಅವುಗಳಿಗೆ ವಿರೋಧಿಯಾಗಿ ಅವುಗಳನ್ನು ನಾಶಮಾಡುತ್ತದೆ—ಎಂದು ಹೇಗೆ ಹೇಳಬಹುದು? ಸೂತ್ರವು ಹೀಗೆ ಪರಿಹಾರವನ್ನು ಹೇಳುತ್ತದೆ. ವಿದ್ಯೆಗೆ ಅನುಕೂಲವಾದ ಸುಕೃತಫಲಗಳು ಶರೀರಪಾತವಾದ ಮೇಲೆಯೇ ನಾಶವಾಗುತ್ತವೆ.[2]

**ದ್ವೈ.**—'ತಮಸ್ಸಿಗೆ ಬೀಳುವವನಿಗೆ ಅದೇ ರೀತಿ ಪುಣ್ಯದ ಅಸಂಶ್ಲೇಷವೂ (ವಿನಾಶವೂ) ಆಗುತ್ತದೆ'[3] ಎಂಬುದು ಸೂತ್ರಾರ್ಥ.

'ಮುಕ್ತನಾದವನ ಪಾಪಕರ್ಮಗಳಿಗೆ ಅಶ್ಲೇಷ-ವಿನಾಶಗಳಿರುವಂತೆ ತಮಸ್ಸಿನಲ್ಲಿ ಬಿದ್ದವನ ಪುಣ್ಯಕರ್ಮಗಳಿಗೂ ಅಶ್ಲೇಷ-ವಿನಾಶಗಳಿವೆ' ಎಂದು ಆಗ್ನೇಯದಲ್ಲಿ ಹೇಳಿದೆ. ಸೂತ್ರದಲ್ಲಿರುವ ತು-ಶಬ್ದವು ಅವನು ಏಳುವುದೇ ಇಲ್ಲ ಎಂಬುದನ್ನು ತಿಳಿಸುತ್ತದೆ.[4]

---

[1] ತತ್ಸುಕೃತದುಷ್ಕೃತೇ ಧೂನುತೇ ।

[2] ಶರೀರಪಾತಾದೂರ್ಧ್ವಂ ತು ವಿದ್ಯಾನುಗುಣಾದೃಷ್ಟಫಲಾನಿ ಸುಕೃತಾನಿ ನಶ್ಯಂತೀತ್ಯರ್ಥಃ (ಶ್ರೀಭಾಷ್ಯ).

[3] ಪುಣ್ಯಸ್ಯಾಪ್ಯೇವಮಸಂಶ್ಲೇಷಃ ಪಾತೇ (ಮ. ಭಾ.).

[4] ತುಶಬ್ದೋಽನುತ್ಥಾನವಾಚೀ (ಮ. ಭಾ.).

## ೧೧. ಅನಾರಬ್ಧಾಧಿಕರಣ

**ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ॥ ೧೫ ॥**

೧೫ ಅನಾರಬ್ಧಕಾರ್ಯವಾದ ಪೂರ್ವ(ಕರ್ಮಗಳು) ಮಾತ್ರ (ಜ್ಞಾನದಿಂದ ನಾಶವಾಗುವುವು), ಏಕೆಂದರೆ (ಶ್ರುತಿಯು) ಆ ಅವಧಿಯನ್ನು ಹೇಳುತ್ತದೆ

ಹಿಂದಿನ ಎರಡು ಅಧಿಕರಣಗಳಲ್ಲಿ ಜ್ಞಾನದಿಂದ ಪುಣ್ಯಪಾಪಗಳು ನಾಶವಾಗುತ್ತವೆಂದು ನಿಶ್ಚಯಿಸಲಾಯಿತು ಈಗ ಈ ನಾಶವು, ಪ್ರಾರಂಭವಾದ ಕಾರ್ಯಗಳುಳ್ಳ ಕರ್ಮ (ಆರಬ್ಧಕಾರ್ಯ) ಮತ್ತು ಪ್ರಾರಂಭವಾಗದ ಕಾರ್ಯಗಳುಳ್ಳ ಕರ್ಮ (ಅನಾರಬ್ಧಕಾರ್ಯ)—ಇವೆರಡಕ್ಕೂ ಸಮಾನವಾಗಿದೆಯೊ ಅಥವಾ ವಿಶೇಷವಾಗಿ ಅನಾರಬ್ಧಕಾರ್ಯವನ್ನೇ ನಾಶಗೊಳಿಸುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಶ್ರುತಿಯು 'ಇವನು ಇವೆರಡನ್ನೂ ದಾಟುತ್ತಾನೆ' (ಬೃ ಉ ೪ ೪ ೨೨) ಎಂದು ಅವಿಶೇಷವಾಗಿ ಹೇಳಿರುವುದರಿಂದ ಇವೆರಡೂ ಅವಿಶೇಷವಾಗಿಯೇ ನಾಶವಾಗುತ್ತವೆ

**ಸಿದ್ಧಾಂತಿ**—ಹಿಂದಿನ ಜನ್ಮಗಳಲ್ಲಿಯೂ ಮತ್ತು ಈ ಜನ್ಮದಲ್ಲಿಯೂ ಜ್ಞಾನೋತ್ಪತ್ತಿಗಿಂತ ಮೊದಲು ಸಂಚಿತವಾಗಿದ್ದ ಪುಣ್ಯಪಾಪಗಳು ಮಾತ್ರ ಜ್ಞಾನಪ್ರಾಪ್ತಿಯಿಂದ ನಾಶವಾಗುತ್ತವೆಯೇ ಹೊರತು ಆರಬ್ಧಕಾರ್ಯವಾದ ಮತ್ತು ಅರ್ಧಭುಕ್ತಫಲವುಳ್ಳ ಕರ್ಮಗಳು ನಾಶವಾಗುವುದಿಲ್ಲ ಶ್ರುತಿಯೂ ಕೂಡ ಮೋಕ್ಷಪ್ರಾಪ್ತಿಯಾಗುವುದಕ್ಕೆ ಶರೀರಪಾತವನ್ನು ಅವಧಿಯಾಗಿ ಮಾಡಿರುತ್ತದೆ 'ಅವನಿಗೆ ಎಲ್ಲಿಯ ವರೆಗೆ ಮೋಕ್ಷವಾಗುವುದಿಲ್ಲವೊ ಅಲ್ಲಿಯ ವರೆಗೇ ವಿಳಂಬ'[1] (ಛಾಂ ಉ ೬ ೧೪ ೨) ಜ್ಞಾನವು ಆರಬ್ಧಕಾರ್ಯವಾದ ಕರ್ಮಾಶಯವನ್ನು ಆಶ್ರಯಿಸಿ ಉತ್ಪನ್ನವಾಗುತ್ತದೆ ಆ ಕರ್ಮವು—ಕುಂಬಾರನ ಚಕ್ರದಂತೆ—ತನ್ನ ವೇಗವು ಕ್ಷಯವಾಗುವ ವರೆಗೂ ಇರುತ್ತದೆ ಅಕರ್ತಾತ್ಮಜ್ಞಾನವೂ ಮಿಥ್ಯಾಜ್ಞಾನವನ್ನು ಬಾಧಿಸುವುದರ ಮೂಲಕ ಕರ್ಮಗಳನ್ನು ನಾಶಮಾಡುತ್ತದೆ ಆದರೆ ಮಿಥ್ಯಾಜ್ಞಾನವು—ದ್ವಿಚಂದ್ರಜ್ಞಾನದಂತೆ—ಬಾಧಿತವಾದ ಮೇಲೆಯೂ ಸಂಸ್ಕಾರವಶದಿಂದ ಕೆಲವು ಕಾಲದ ವರೆಗೂ ಇರುತ್ತದೆ[2]

---

[1] ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೆ ಇತಿ ।

[2] ಅಕರ್ತಾತ್ಮಬೋಧೋಽಪಿ ಹಿ ಮಿಥ್ಯಾಜ್ಞಾನಬಾಧನೇನ ಕರ್ಮಾಣ್ಯುಚ್ಛಿನತ್ತಿ । ಬಾಧಿತಮಪಿ ತು ಮಿಥ್ಯಾಜ್ಞಾನಂ ದ್ವಿಚಂದ್ರಜ್ಞಾನವತ್ ಸಂಸ್ಕಾರವಶಾತ್ ಕಂಚಿತ್ಕಾಲಮನುವರ್ತತ ಏವ (ಸೂ. ಭಾ )

ವಿ.—ವಿದ್ಯೋತ್ಪತ್ತಿಗೆ ಪೂರ್ವದಲ್ಲಿ ಮಾಡಲ್ಪಟ್ಟ, ಅಪ್ರವೃತ್ತ-ಫಲವುಳ್ಳ ಕರ್ಮವು ಮಾತ್ರ ನಾಶವಾಗುತ್ತದೆ; ಏಕೆಂದರೆ ಶ್ರುತಿಯು (ಛಾಂ. ಉ. ೬. ೧೪. ೨) ಶರೀರಪಾತಾವಧಿಯನ್ನು ಹೇಳಿರುತ್ತದೆ. ಪುಣ್ಯಪಾಪಗಳಿಂದ ಉಂಟಾದ ಭಗವತ್ ಪ್ರೀತಿ-ಅಪ್ರೀತಿಗಳ-ಹೊರತು ಶರೀರಸ್ಥಿತಿಗೆ ಹೇತುವಾದ ಸಂಸ್ಕಾರಕ್ಕೆ ಯಾವ ಪ್ರಮಾಣವೂ ಇರುವುದಿಲ್ಲ.

ದ್ವೈ.—ಫಲವನ್ನು ಕೊಡಲು ಪ್ರಾರಂಭಿಸದೆ ಇರುವ ಪುಣ್ಯಪಾಪಗಳು ಮಾತ್ರ ನಾಶವಾಗುತ್ತವೆ;[1] ಶ್ರುತಿಯು (ಛಾಂ. ಉ. ೬. ೨೪. ೨) ಪ್ರಾರಬ್ಧಕರ್ಮಾವಸಾನವೇ ಮೋಕ್ಷದ ಅವಧಿಯೆಂದು ತಿಳಿಸುತ್ತದೆ.

[1] ಅನಾರಬ್ಧಕಾರ್ಯೇ ಏವ ಪೂರ್ವೇ ಪುಣ್ಯಪಾಪೇ ವಿನಶ್ಯತಃ (ಮ. ಭಾ.).

# ೧೨. ಅಗ್ನಿಹೋತ್ರಾದ್ಯಧಿಕರಣ*

(ಸೂ ೧೬—೧೭)

**ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ॥ ೧೬ ॥**

೧೬ ಆದರೆ ಅಗ್ನಿಹೋತ್ರಾದಿಗಳು ಅದರ ಕಾರ್ಯಕ್ಕೇ ಆಗುತ್ತವೆ, ಏಕೆಂದರೆ ಶ್ರುತಿಯು ಅದನ್ನು (ತಿಳಿಸುತ್ತದೆ)

ಪುಣ್ಯಕ್ಕೂ ಪಾಪದ ಹಾಗೆ ಅಶ್ಲೇಶ-ವಿನಾಶಗಳಿವೆ—ಎಂದು ಅತಿದೇಶ-ಮಾಡಿದ್ದಾಯಿತು ಈ ಅತಿದೇಶವು ಎಲ್ಲ ಪುಣ್ಯಗಳಿಗೂ ಅನ್ವಯಿಸುತ್ತದೆಯೊ ?—ಎಂಬುದು ಸಂಶಯ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ ಅಗ್ನಿಹೋತ್ರಾದಿ ವೈದಿಕ-ನಿತ್ಯ ಕರ್ಮಗಳು ಅದರ ಕಾರ್ಯಕ್ಕೇ ಆಗುತ್ತವೆ, ಎಂದರೆ ಜ್ಞಾನಕ್ಕೆ ಯಾವ ಕಾರ್ಯವಿದೆಯೊ ಅದೇ ಇವುಗಳಿಗೂ ಆಗುತ್ತದೆ, ಏಕೆಂದರೆ ಶ್ರುತಿಯು 'ಆ ಇವನನ್ನು ಬ್ರಾಹ್ಮಣರು ವೇದಾನುವಚನದಿಂದಲೂ ಯಜ್ಞದಿಂದಲೂ ದಾನದಿಂದಲೂ ತಿಳಿಯಲು ಬಯಸುತ್ತಾರೆ'[1] (ಬೃ ಉ ೪ ೪ ೨೨) ಎಂದು ಹೇಳುತ್ತದೆ ಮೋಕ್ಷವು ಒಂದು ಕರ್ಮದ ಕಾರ್ಯವಾಗದಿದ್ದರೂ ಕರ್ಮವು ಜ್ಞಾನೋತ್ಪತ್ತಿಯ ಮೂಲಕ ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾಗುತ್ತದೆ ಆದುದರಿಂದ ಕಾರ್ಯವು ಸಮಾನವಾಗಿರುವುದೆಂದು ಹಿಂದೆ ಹೇಳಿದ್ದು ಜ್ಞಾನೋತ್ಪತ್ತಿಗೆ ಮೊದಲು ಮಾಡಿದ ನಿತ್ಯಕರ್ಮಕ್ಕೇ ಅನ್ವಯಿಸುತ್ತದೆ, ಏಕೆಂದರೆ ಬ್ರಹ್ಮಜ್ಞಾನಿಗೆ ಮುಂದೆ ಅಗ್ನಿಹೋತ್ರಾದಿಗಳು ಸಂಭವಿಸುವುದಿಲ್ಲ ಸಗುಣ ವಿದ್ಯೆಯಲ್ಲಿ ಕರ್ತೃತ್ವವು ಹೋಗದೆ ಇರುವುದರಿಂದ ಮುಂದೆಯೂ ಅಗ್ನಿಹೋತ್ರಾದಿಗಳು ಸಂಭವಿಸಬಹುದು ಅವುಗಳು ಕೂಡ—ಫಲಾಭಿಸಂಧಿಯಿಲ್ಲದೆ ಮಾಡಲ್ಪಟ್ಟರೆ—ಕಾರ್ಯವನ್ನುಂಟುಮಾಡದೆ ಜ್ಞಾನದೊಂದಿಗೆ ಇರಬಹುದಾಗಿದೆ

**ವಿ.**—ಅಗ್ನಿಹೋತ್ರವೇ ಮೊದಲಾದ ಆಶ್ರಮಕರ್ಮಗಳ ಫಲಗಳು ಅಂಟಿಕೊಳ್ಳದೇ ಇರುವುದು ಅಸಂಭವವಾದುದರಿಂದ ಅವುಗಳನ್ನು ಅನುಷ್ಠಿಸಲೇಬೇಕು ಶ್ರುತಿಯು (ಬೃ ಉ ೪ ೪ ೨೨) ಪ್ರಕಾರ ಅಗ್ನಿಹೋತ್ರಾದಿಗಳು ಜ್ಞಾನಕ್ಕೆ ಸಾಧನವಾಗಿರುತ್ತವೆ; ಅಂಥ ಜ್ಞಾನವು ಬೆಳೆದು ಸಮೃದ್ಧಿಯಾಗಬೇಕಾದರೆ ಅದನ್ನು ಯಾವಜ್ಜೀವವೂ ಅಭ್ಯಾಸ ಮಾಡಬೇಕಾಗಿರುತ್ತದೆ, ಆದುದರಿಂದ ಜ್ಞಾನೋತ್ಪತ್ತಿಗೆ ಸಹಾಯಕಗಳಾದ ಆಶ್ರಮ

---

* ಶ್ರೀಭಾಷ್ಯದ ಪ್ರಕಾರ ೧೮ನೇ ಸೂತ್ರವೂ ಈ ಅಧಿಕರಣಕ್ಕೇ ಸೇರಿದೆ

[1] ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ।

[2] ಜ್ಞಾನಸ್ಯೈವ ಹಿ ಪ್ರಾಪಕಂ ಸತ್ ಕರ್ಮ ಪ್ರಣಾಡ್ಯಾ ಮೋಕ್ಷಕಾರಣಮ್ ಇತ್ಯುಪಚರ್ಯತೇ (ಸೂ ಭಾ).

ಕರ್ಮಗಳನ್ನು ಪ್ರತಿದಿನವೂ ಮಾಡಬೇಕಾಗಿರುತ್ತದೆ. ಹಾಗಾಗದಿದ್ದರೆ ಆಶ್ರಮಕರ್ಮವು ಲೋಪವಾಗುವುದರಿಂದ ಅಂತಃಕರಣವು ಕಲುಷಿತವಾಗಿ ಜ್ಞಾನೋತ್ಪತ್ತಿಯೇ ಆಗುವುದಿಲ್ಲ.

**ದ್ವೈ.**—ಅಗ್ನಿಹೋತ್ರಾದಿಕರ್ಮಗಳೂ ಕೂಡ ಮೋಕ್ಷದ ಅನುಭವಕ್ಕೆ ಸಹಕಾರಿಯಾಗಿರುತ್ತವೆ.[1] 'ಯಾವನು ಪರಮಾತ್ಮನನ್ನೇ ತನ್ನ ಲೋಕವೆಂದು ಉಪಾಸಿಸುತ್ತಾನೆಯೊ ಅವನ ಕರ್ಮವು ಕ್ಷಯಿಸುವುದೇ ಇಲ್ಲ, ಏಕೆಂದರೆ ಅವನು ಯಾಯಾವುದನ್ನು ಬಯಸುತ್ತಾನೆಯೊ ಅದದನ್ನು ಪರಮಾತ್ಮನಿಂದಲೇ ಸೃಷ್ಟಿಸಿಕೊಳ್ಳುತ್ತಾನೆ' (ಬೃ ಉ ೧ ೪ ೧೫) ಎಂದು ಶ್ರುತಿಯು ಹೇಳುತ್ತದೆ.

## ಅತೋಽನ್ಯಾಪಿ ಹ್ಯೇಕೇಷಾಮುಭಯೋಃ ॥ ೧೭ ॥

೧೭ ಒಂದು ಶಾಖೆಯ ಪ್ರಕಾರ ಇದಕ್ಕಿಂತಲೂ ಬೇರೆಯಾದ (ಕರ್ಮವು) ಇದೆ (ಇದು) ಇಬ್ಬರು (ಆಚಾರ್ಯರಿಗೂ ಸಮ್ಮತವಾಗಿರುತ್ತದೆ).

ಪ್ರಶ್ನೆ. ಹಾಗಾದರೆ ಯಾವ ಕರ್ಮದ ವಿಷಯವಾಗಿ ಅಶ್ಲೇಷ-ವಿನಾಶಗಳನ್ನು ಹೇಳಿದೆ? 'ಅವನ ಮಕ್ಕಳು ಅವನ ಆಸ್ತಿಯನ್ನು ಪಡೆಯುತ್ತಾರೆ, ಅವನ ಸ್ನೇಹಿತರು ಪುಣ್ಯಕರ್ಮವನ್ನೂ ಶತ್ರುಗಳು ಪಾಪಕರ್ಮವನ್ನೂ ಹೊಂದುತ್ತಾರೆ'[2] ಎಂದು ಒಂದು ಶಾಖೆಯಲ್ಲಿ ಹೇಳಿರುವ ವಿನಿಯೋಗ-ವಚನವನ್ನು ಯಾವ ಕರ್ಮದ ವಿಷಯವಾಗಿ ಹೇಳಿದೆ?

ಪರಿಹಾರ. ಈ ಅಗ್ನಿಹೋತ್ರವೇ ಮೊದಲಾದ ನಿತ್ಯಕರ್ಮಕ್ಕಿಂತಲೂ ಬೇರೆಯಾದ ಪುಣ್ಯಕರ್ಮವಿದೆ, ಅದನ್ನು ಫಲದ ಬಯಕೆಯಿಂದ ಮಾಡುತ್ತಾರೆ, ಅದಕ್ಕೇ 'ಅವನ ಸ್ನೇಹಿತರು ಪುಣ್ಯಕರ್ಮವನ್ನು ಪಡೆಯುತ್ತಾರೆ' ಎಂಬ ವಿನಿಯೋಗವನ್ನು ಹೇಳಿದೆ. 'ಇನ್ನೊಂದೂ ಹೀಗೆಯೇ ಲೇಪವಾಗದೆ ಇರುತ್ತದೆ' (ಸೂ ೧೪) ಎಂದು ಹೇಳಿರುವುದೂ ಅದಕ್ಕೇ. ಆ ಜಾತಿಯ ಕಾಮ್ಯಕರ್ಮವು ಜ್ಞಾನಕ್ಕೆ ಉಪಕಾರಕವಲ್ಲವೆಂದು ಜೈಮಿನಿ-ಬಾದರಾಯಣರಿಬ್ಬರಿಗೂ ಒಮ್ಮತವಿದೆ.

**ವಿ.**—'ಒಂದು ಶಾಖೆಯ ಪ್ರಕಾರ ಇದಕ್ಕಿಂತ ಬೇರೆಯಾದ ಮತ್ತು ಉಭಯರೂಪದಲ್ಲಿರುವ ಪುಣ್ಯಕರ್ಮವು ಪ್ರಬಲಕರ್ಮದಿಂದ ಪ್ರತಿಬದ್ಧವಾಗಿದೆ' ಎಂಬುದು ಸೂತ್ರಾರ್ಥ.

ಅಗ್ನಿಹೋತ್ರಾದಿ-ಕರ್ಮಗಳು ವಿದ್ಯೋತ್ಪತ್ತಿಗಾಗಿ ಎಂದು ಹಿಂದೆ ಹೇಳಲ್ಪಟ್ಟಿತು. ಆದರೆ ವಿದ್ಯೋತ್ಪತ್ತಿಗೆ ಪೂರ್ವೋತ್ತರಗಳಾದ ಪುಣ್ಯಕರ್ಮಗಳು ಇದ್ದೇ ಇರುತ್ತದೆ, ಅವುಗಳ ಪ್ರಬಲಕರ್ಮದಿಂದ ಪ್ರತಿಬಂಧಿಸಲ್ಪಟ್ಟಿವೆ. **ತಸ್ಯ ಪುತ್ರಾ ದಾಯಮುಪಯಂತಿ** ಎಂಬ ವಚನವು ಇವುಗಳನ್ನು ಕುರಿತು ಹೇಳಿದ್ದೇ.

---

[1] **ಅಗ್ನಿಹೋತ್ರಾದ್ಯಪಿ ಮೋಕ್ಷೇಽನುಭವಾಯೈವ** (ಮ ಭಾ)

[2] **ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಮ್ ।**

ದ್ವೈ.—'ಮುಕ್ತಾವಸ್ಥೆಯ ಅನುಭವಕ್ಕೆ ಕಾರಣವಾದ ಅಕಾಮ್ಯಕ್ಕಿಂತ ಅನ್ಯವಾದ ಪುಣ್ಯವೂ ನಾಶವಾಗುತ್ತದೆ , ಹೀಗೆ ಅಪ್ರಾರಬ್ಧವೂ ಅನಿಷ್ಟವೂ ನಾಶವಾಗುತ್ತದೆ'[1] ಎಂಬುದು ಸೂತ್ರಾರ್ಥ

ಶಾಟ್ಯಾಯನ-ಶಾಖೆಯ **ತಸ್ಯ ಪುತ್ರಾ ದಾಯಮುಪಯಂತಿ** ಎಂಬ ಪಾಠವು ಪಾಪಪುಣ್ಯಗಳೆರಡರ ನಾಶವನ್ನೂ ತಿಳಿಸುತ್ತದೆ

[1] ಮುಕ್ತಾವನುಭವಕಾರಣಾದ್ಯದನ್ಯತ್ ತತ್ಪುಣ್ಯಮಪಿ ವಿನಶ್ಯತಿ, ಅಪ್ರಾರಬ್ಧಮನಭೀಷ್ಟಂ ಚ (ಮ ಭಾ)

# ೧೩. ವಿದ್ಯಾಜ್ಞಾನಸಾಧನಾಧಿಕರಣ

## ಯದೇವ ವಿದ್ಯಯೇತಿ ಹಿ ॥ ೧೮ ॥

೧೮ ಏಕೆಂದರ 'ಯಾವುದನ್ನು ವಿದ್ಯೆಯಿಂದ ಮಾಡುತ್ತಾನೆಯೊ' ಎಂಬ (ಶ್ರುತಿಯು ಇದನ್ನೇ ತಿಳಿಸುತ್ತದೆ)

ಹಿಂದಿನ ಅಧಿಕರಣದಲ್ಲಿ ಅಗ್ನಿಹೋತ್ರಾದಿ-ನಿತ್ಯಕರ್ಮವನ್ನು ಮುಮುಕ್ಷುವು ಮೋಕ್ಷ ಪ್ರಯೋಜನೋದ್ದೇಶದಿಂದ ಮಾಡಿದರೆ ಅದು ಸತ್ತ್ವಶುದ್ಧಿಗೆ ಕಾರಣವಾಗಿ ಮೋಕ್ಷವೆಂಬ ಪ್ರಯೋಜನವುಳ್ಳ ಬ್ರಹ್ಮಜ್ಞಾನಕ್ಕೆ ನಿಮಿತ್ತವಾಗಿ ಬ್ರಹ್ಮವಿದ್ಯೆಯೊಂದಿಗೆ ಒಂದೇ ಕಾರ್ಯವನ್ನುಂಟುಮಾಡುತ್ತದೆ—ಎಂಬುದು ಸಿದ್ಧವಾಯಿತು ಇಲ್ಲಿ ಅಗ್ನಿಹೋತ್ರಾದಿಗಳು ಕರ್ಮಾಂಗಗಳನ್ನು ಆಶ್ರಯಿಸಿರುವ ಜ್ಞಾನದೊಂದಿಗೆ ಸೇರಿರುತ್ತವೆ ಅಥವಾ ಕೇವಲವಾಗಿರುತ್ತವೆ 'ಇದನ್ನು ಹೀಗೆ ಅರಿತುಕೊಂಡು ಯಾಗ ಮಾಡುತ್ತಾನೆ, ಹೀಗೆ ಅರಿತುಕೊಂಡು ಹಾಡುತ್ತಾನೆ, ಹೀಗೆ ಅರಿತುಕೊಂಡಿರುವವನನ್ನೇ ಬ್ರಹ್ಮನನ್ನಾಗಿ ಮಾಡಬೇಕು, ಅರಿತುಕೊಳ್ಳದಿರುವವನನ್ನು ಮಾಡಕೂಡದು' ಇವೇ ಮೊದಲಾದ ವಚನಗಳು ವಿದ್ಯಾಸಂಯುಕ್ತ ಕರ್ಮವನ್ನೂ ಕೇವಲಕರ್ಮವನ್ನೂ ತಿಳಿಸುತ್ತವೆ ವಿದ್ಯಾಸಂಯುಕ್ತವಾದ ಅಗ್ನಿ-ಹೋತ್ರಾದಿಕರ್ಮವೇ ಜ್ಞಾನಹೇತುವಾಗಿ ಅದರೊಂದಿಗೆ ಒಂದೇ ಕಾರ್ಯವನ್ನು ಉಂಟುಮಾಡುತ್ತದೆಯೊ ಅಥವಾ ವಿದ್ಯಾಸಂಯುಕ್ತವಾದ ಕರ್ಮವೂ ಮತ್ತು ಕೇವಲ ಕರ್ಮವೂ ಸಮಾನವಾಗಿ ಒಂದೇ ಕಾರ್ಯವನ್ನು ಉಂಟುಮಾಡುತ್ತವೆಯೊ ?—ಎಂಬುದನ್ನು ಈಗ ವಿಚಾರಮಾಡಬೇಕು, ಏಕಂದರೆ ಆ ಈ ಆತ್ಮನನ್ನು ಅರಿತುಕೊಳ್ಳಲು ಬಯಸುತ್ತಾರೆ' (ಬೃ ಉ ೪ ೪ ೨೨) ಎಂದು ಯಜ್ಞಾದಿಗಳನ್ನು ಅವಿಶೇಷವಾಗಿ ಆತ್ಮಜ್ಞಾನಕ್ಕೆ ಅಂಗಗಳೆಂದು ಹೇಳಿರುತ್ತವೆ, ಮತ್ತೆ ವಿದ್ಯಾಸಂಯುಕ್ತವಾದ ಅಗ್ನಿಹೋತ್ರಾದಿಗಳು ಶ್ರೇಷ್ಠವೆಂದೂ ತಿಳಿದುಬರುತ್ತದೆ

**ಪೂರ್ವಪಕ್ಷಿ**—ಜ್ಞಾನಸಂಯುಕ್ತವಾದ ಅಗ್ನಿಹೋತ್ರಾದಿ-ಕರ್ಮವೇ ಆತ್ಮಜ್ಞಾನಕ್ಕೆ ಸಾಧನವಾಗಿರುತ್ತದೆ, ಏಕೆಂದರೆ ಜ್ಞಾನಸಂಯುಕ್ತವಾದ ಕರ್ಮವು ಜ್ಞಾನ-ರಹಿತವಾದ ಕರ್ಮಕ್ಕಿಂತ ಶ್ರೇಷ್ಠವೆಂದು ಶ್ರುತಿ-ಸ್ಮೃತಿಗಳಿಂದ ತಿಳಿದುಬರುತ್ತದೆ. 'ಹೀಗೆ ತಿಳಿದಿರುವವನು ಯಾವ ದಿನದಲ್ಲಿ ಹೋಮಮಾಡುವನೊ ಆ ದಿನದಲ್ಲಿಯೇ ಪುನರ್ಮರಣವನ್ನು ಜಯಿಸುತ್ತಾನೆ' (ಬೃ ಉ ೧ ೫ ೨). 'ಈ ಜ್ಞಾನದಿಂದ ಕೂಡಿದವನಾದರೆ ನೀನು ಕರ್ಮಬಂಧವನ್ನು ತ್ಯಾಗಮಾಡುವೆ', 'ಕರ್ಮವು ಬುದ್ಧಿಯೋಗಕ್ಕಿಂತ ತುಚ್ಛವಾದದ್ದು' (ಗೀತಾ ೨ ೩೯, ೪೯). ಇತ್ಯಾದಿ

**ಸಿದ್ಧಾಂತಿ**—ವಿದ್ಯಾವಿಹೀನನಾದ ಬ್ರಾಹ್ಮಣನಿಗಿಂತ ವಿದ್ಯಾವಂತನಾದ ಬ್ರಾಹ್ಮಣನು ಶ್ರೇಷ್ಠನಾಗಿರುವಂತೆ ಜ್ಞಾನಸಂಯುಕ್ತವಾದ ಅಗ್ನಿಹೋತ್ರಾದಿ-ಕರ್ಮವು

ಜ್ಞಾನವಿಹೀನವಾದ ಅಗ್ನಿಹೋತ್ರಕ್ಕಿಂತ ಶ್ರೇಷ್ಠವಾಗಿದೆ ಆದರೂ ಜ್ಞಾನವಿಹೀನವಾದ ಕರ್ಮವು ಅತ್ಯಂತವಾಗಿ ಅನಪೇಕ್ಷವೆಂದು ಹೇಳುವ ಹಾಗಿಲ್ಲ, ಏಕೆಂದರೆ ಶ್ರುತಿಯು (ಬೃ ಉ ೪ ೪ ೨೨) ಅಗ್ನಿಹೋತ್ರಾದಿ-ಕರ್ಮವೆಲ್ಲ ಜ್ಞಾನಹೇತುವೆಂದು ಅವಿಶೇಷವಾಗಿ ಹೇಳುತ್ತದೆ ಜ್ಞಾನಕ್ಕೆ ಸಹಾಯವಾಗಿರುವ ಅಗ್ನಿಹೋತ್ರಾದಿಕರ್ಮವು ಜ್ಞಾನದ ನಿಮಿತ್ತದಿಂದ ಸಾಮರ್ಥ್ಯಾತಿಶಯವನ್ನು ಪಡೆದಿರುವುದರಿಂದ ಆತ್ಮಜ್ಞಾನಕ್ಕೆ ಅತಿಶಯ ಕಾರಣವಾಗಿದೆ, ಜ್ಞಾನರಹಿತವಾದ ಕರ್ಮಕ್ಕೆ ಅಂಥ ಅತಿಶಯವು ಇರಲಾರದು—ಎಂದು ಕಲ್ಪಿಸುವುದು ಯುಕ್ತವು 'ಯಜ್ಞದಿಂದ ಅರಿತುಕೊಳ್ಳಲು ಬಯಸುತ್ತಾರೆ' ಎಂಬಲ್ಲಿ ಅವಿಶೇಷವಾಗಿ ಆತ್ಮಜ್ಞಾನಕ್ಕೆ ಅಂಗವಾಗಿ ಶ್ರುತವಾಗಿರುವ ಅಗ್ನಿಹೋತ್ರಾದಿಕರ್ಮವು ಅದಕ್ಕೆ ಅಂಗವಲ್ಲವೆಂದು ನಾವು ಒಪ್ಪಿಕೊಳ್ಳುವುದಿಲ್ಲ ಆದುದರಿಂದಲೇ ಶ್ರುತಿಯು 'ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಯೋಗದಿಂದಲೂ ಯಾವುದನ್ನು ಮಾಡಿದರೂ ಅದು ಅಧಿಕಫಲಪ್ರದವಾಗುತ್ತದೆ'[1] (ಛಾಂ ಉ ೧ ೧ ೧೦) ಎಂದು ಜ್ಞಾನಸಂಯುಕ್ತವಾದ ಕರ್ಮವು ಅಧಿಕಫಲಪ್ರದವೆಂದು ಹೇಳಿ, ತನ್ನ ಕಾರ್ಯದ ವಿಷಯದಲ್ಲಿ ಒಂದು ಅತಿಶಯವನ್ನು ತಿಳಿಸಿ, ಜ್ಞಾನವಿಹೀನವಾದ ಕರ್ಮವು ಆ ಪ್ರಯೋಜನದ ವಿಷಯದಲ್ಲಿ ಸ್ವಲ್ಪ ಶಕ್ತಿಯುಳ್ಳದ್ದೆಂದು ತಿಳಿಸುತ್ತದೆ

ವಿ.—ಕ್ರತುವಿನ ಫಲಕ್ಕೆ ಪ್ರತಿಬಂಧವಾಗದಿರುವುದೇ ಉದ್ಗೀಥವಿದ್ಯೆಯ ಫಲವೆಂಬ ಶ್ರುತಿಯ (ಛಾಂ ಉ ೧ ೧ ೧೦) ವಚನವು ಕರ್ಮವನ್ನು ಅನುಷ್ಠಿಸಿದರೂ ಫಲಕ್ಕೆ ಪ್ರತಿಬಂಧವಾಗಬಹುದೆಂಬುದನ್ನು ಸೂಚಿಸುತ್ತದೆ ಆದುದರಿಂದ 'ಅವನ ಸ್ನೇಹಿತರು ಅವನ ಪುಣ್ಯವನ್ನು ಪಡೆಯುತ್ತಾರೆ' ಎಂಬ ಶಾಟ್ಯಾಯನಿಗಳ ವಚನವು ಜ್ಞಾನಿಯು ಪುಣ್ಯಕರ್ಮವನ್ನು ಅನುಷ್ಠಿಸಿದರೂ ಅದರ ಫಲವು ಪ್ರತಿಬದ್ಧವಾಗಿದೆಯೆಂಬುದನ್ನು ತಿಳಿಸುತ್ತದೆ[2]

ದ್ವೈ.—'ಬ್ರಹ್ಮದರ್ಶಿಯು ಸ್ವಲ್ಪ ಪುಣ್ಯವನ್ನು ಮಾಡಿದರೂ ಅದು ಮಹತ್ತಮವೂ ಅನಂತವೂ ಆಗುತ್ತದೆ,[3] ಏಕೆಂದರೆ **ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ** ಎಂದು ಛಾಂದೋಗ್ಯ-ಶ್ರುತಿಯು (೧ ೧ ೧೦) ಹೇಳುತ್ತದೆ' ಎಂಬುದು ಸೂತ್ರಾರ್ಥ

---

[1] ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ ।

[2] ವಿದುಷೋಽನುಷ್ಠಿತಪ್ರತಿಬದ್ಧಫಲವಿಷಯಂ ಸುಹೃದಸ್ಸಾಧುಕೃತ್ಯಾಮಿತಿ ಶಾಟ್ಯಾಯನಿಕವಚ್ (ಶ್ರೀಭಾಷ್ಯ)

[3] ಬ್ರಹ್ಮದರ್ಶಿಕೃತಮಲ್ಪಮಪಿ ಪುಣ್ಯಂ ಮಹತ್ತಮಮನಂತಂ ಚ ಭವತಿ (ಮ. ಭಾ)

## ೧೪. ಇತರಕ್ಷಪಣಾಧಿಕರಣ

**ಭೋಗೇನ ತ್ವಿತರೇ ಕ್ಷಪಯಿತ್ವಾ ಸಂಪದ್ಯತೇ* ॥ ೧೯ ॥**

೧೯ ಆದರೆ ಉಳಿದೆರಡನ್ನೂ ಭೋಗದಿಂದ ನಾಶಗೊಳಿಸಿ ಬ್ರಹ್ಮದಲ್ಲಿ ಒಂದಾಗುತ್ತಾನೆ

ಕಾರ್ಯವನ್ನು ಪ್ರಾರಂಭಿಸದೇ ಇರುವ ಪುಣ್ಯಪಾಪಗಳು ವಿದ್ಯಾಸಾಮರ್ಥ್ಯದಿಂದ ನಾಶವಾಗುತ್ತವೆಂದು ಹೇಳಿದ್ದಾಯಿತು ಆದರೆ ಸಾಧಕನು ಕಾರ್ಯವನ್ನು ಪ್ರಾರಂಭಿಸಿರುವ ಪುಣ್ಯಪಾಪಗಳನ್ನು ಭೋಗದ ಮೂಲಕ ನಾಶಗೊಳಿಸಿ ಬ್ರಹ್ಮದಲ್ಲಿ ಒಂದಾಗುತ್ತಾನೆ ಇದು ಶ್ರುತಿಗಳಿಂದ ತಿಳಿದುಬರುತ್ತದೆ 'ಅವನಿಗೆ ಎಲ್ಲಿಯವರೆಗೆ ಮೋಕ್ಷವಾಗುವುದಿಲ್ಲವೊ ಅಲ್ಲಿಯವರೆಗೇ ವಿಳಂಬ , ಆಗಲೇ ಅವನು ಸದ್ವಸ್ತುವನ್ನು ಹೊಂದುತ್ತಾನೆ'[1] (ಛಾಂ ಉ ೬ ೧೪ ೨), 'ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ'[2] (ಬೃ ಉ ೪ ೪ ೬)

**ಆಕ್ಷೇಪಣೆ**—ದೇಹಪಾತುವಾಗುವುದಕ್ಕೆ ಮೊದಲು ಭೇದದರ್ಶನವಿದ್ದ ಹಾಗೆ ಸಮ್ಯಗ್ದರ್ಶನವಾದ ಮೇಲೂ, ಶರೀರಪಾತದ ಬಳಿಕ, ಭೇದದರ್ಶನವಿರಬಹುದಲ್ಲ !

**ಪರಿಹಾರ**—ಹಾಗಾಗುವುದಿಲ್ಲ, ಏಕೆಂದರೆ ಶರೀರಪಾತವಾದ ಮೇಲೆ ಅದು ಇರಲು ಕಾರಣವಿಲ್ಲ ಮರಣದವರೆಗೂ ಉಪಭೋಗಶೇಷದ ಕ್ಷಯವೆಂಬ ನಿಮಿತ್ತವಿರುತ್ತದೆ

ಮತ್ತೊಂದು ಕರ್ಮಾಶಯವು ಶರೀರಪಾತವಾದ ಮೇಲೆ ಹೊಸ ಉಪಭೋಗವನ್ನು ಉಂಟುಮಾಡಬಹುದು—ಎಂಬುದೂ ಸರಿಯಲ್ಲ , ಏಕೆಂದರೆ ಅದರ ಬೀಜವು ಸುಟ್ಟುಹೋಗುತ್ತದೆ ಮಿಥ್ಯಾಜ್ಞಾನವನ್ನು ಆಶ್ರಯಿಸಿಕೊಂಡಿರುವ ಮತ್ತೊಂದು ಕರ್ಮವು ದೇಹಪಾತವಾದ ಮೇಲೆ ಇನ್ನೊಂದು ಭೋಗವನ್ನುಂಟುಮಾಡುವುದು. ಆದರೆ ಆ ಮಿಥ್ಯಾಜ್ಞಾನವು ಸಮ್ಯಗ್‌ಜ್ಞಾನದಿಂದ ದಗ್ಧವಾಗಿರುವುದರಿಂದ ಆರಬ್ಧಕಾರ್ಯದ ಕ್ಷಯಕ್ಕಾಗಿ ಜ್ಞಾನಿಗೆ ಕೈವಲ್ಯವು ಅವಶ್ಯಕವಾಗುತ್ತದೆ

**ವಿ.**—ಬ್ರಹ್ಮವಿದ್ಯಾನಿಷ್ಠನು ಆರಬ್ಧಕರ್ಮಗಳನ್ನು ವಿದ್ಯೆಯು ಉತ್ಪನ್ನವಾಗಿರುವ ಈ ಶರೀರದಲ್ಲಿಯೇ ಹೋಗಲಾಡಿಸಿಕೊಳ್ಳುವನೊ ? ಅಥವಾ ಈ ಶರೀರದಲ್ಲಿ ಇಲ್ಲವೊ ಶರೀರಾಂತರದಲ್ಲಿ ಹೋಗಲಾಡಿಸಿಕೊಳ್ಳುವನೊ ?—ಎಂಬುದು ಸಂಶಯ ಪೂರ್ವಪಕ್ಷಿಯ ಪ್ರಕಾರ ಈ ಶರೀರದಲ್ಲಿಯೇ ಆರಬ್ಧಕಾರ್ಯದ ನಾಶವಾಗುತ್ತದೆ ಸಿದ್ಧಾಂತವು ಹೀಗಿದೆ ಪುಣ್ಯಪಾಪಕರ್ಮಗಳು ಒಂದೇ ಶರೀರದಲ್ಲಿ ಕ್ಷಯವಾಗುವುದಾದರೆ ಆ ಶರೀರದ

---

* ಮಧ್ವಭಾಷ್ಯದಲ್ಲಿ ಸಂಪತ್ಸ್ಯತೇ ಎಂದಾಗಿದೆ

[1] ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ ।

[2] ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।

ಅವಸಾನದಲ್ಲಿಯೇ ಮೋಕ್ಷವಾಗುತ್ತದೆ; ಅನೇಕ ಶರೀರಗಳಲ್ಲಿ ಕ್ಷಯವಾಗುವುದಾದರೆ ಕೊನೆಯಲ್ಲಿಯೇ ಮೋಕ್ಷವಾಗುತ್ತದೆ; ಅವುಗಳ ಶರೀರಾವಸಾನದ ನಿಯಮವಿಲ್ಲ.

**ದ್ವೈತ.**—'ಪ್ರಾರಬ್ಧ ಪುಣ್ಯಪಾಪಗಳನ್ನು ಭೋಗದಿಂದ ಕ್ಷಯಗೊಳಿಸಿ ಕೂಡಲೇ ಪರಬ್ರಹ್ಮನನ್ನು ಹೊಂದುತ್ತಾನೆ'[1] ಎಂಬುದು ಸೂತ್ರಾರ್ಥ.

ಅಥವಾ ಅಂಧತಮಸ್ಸನ್ನಾಗಲೀ ಹೊಂದುತ್ತಾನೆ; ಇದರಲ್ಲಿ ಸಂಶಯವಿಲ್ಲ[2]—ಎಂದು ನಾರಾಯಣತಂತ್ರದಲ್ಲಿ ಹೇಳಿದೆ.

---

1 ಆರಬ್ಧಪುಣ್ಯಪಾಪೇ ಭೋಗೇನ ಕ್ಷಪಯಿತ್ವಾಽಥ ಸಂಪತ್ಸ್ಯತೇ (ಮ. ಭಾ.).

2 ತಮೋ ಘೋರಂ ಬ್ರಹ್ಮ ವಾ ನಾತ್ರ ಸಂಶಯಃ (ಸೂ. ಭಾ.).

## ಎರಡನೆಯ ಪಾದ

## ೧. ವಾಗಧಿಕರಣ

(ಸೂ ೧-೨)

### ವಾಙ್ಮನಸಿ ದರ್ಶನಾಚ್ಛಬ್ದಾಚ್ಚ || ೧ ||

೧ ವಾಕ್ಕು ಮನಸ್ಸಿನಲ್ಲಿ (ಲಯವಾಗುತ್ತದೆ), ಏಕೆಂದರ ಹಾಗೆ ಕಂಡು ಬರುತ್ತದೆ ಮತ್ತು ಶ್ರುತಿಯೂ ಇದೆ

ದೇವಯಾನವೆಂಬ ಮಾರ್ಗವು **ಅಪರಾವಿದ್ಯೆಯನ್ನು** ಪಡೆದುಕೊಂಡಿರುವವರನ್ನು[1] ಅವರ ಫಲಪ್ರಾಪ್ತಿಗಾಗಿ ಒಯ್ಯುತ್ತದೆ, ಸೂತ್ರಕಾರರು ಆ ಮಾರ್ಗವನ್ನು ವಿವರಿಸಲು ಪ್ರವೃತ್ತರಾಗಿ ಮೊದಲು ಶಾಸ್ತ್ರದ ಪ್ರಕಾರ ಉತ್ಕ್ರಾಂತಿಪ್ರಕಾರವನ್ನು (ಎಂದರೆ ಜೀವಾತ್ಮನು ಶರೀರದಿಂದ ಹೊರಡುವ ಕ್ರಮವನ್ನು) ಹೇಳುತ್ತಾರೆ, **ತಿಳಿದ** ಉಪಾಸಕರಿಗೂ ತಿಳಿಯದವರಿಗೂ ಉತ್ಕ್ರಾಂತಿಯು ಸಮಾನವಾಗಿರುವುದೆಂದು ಮುಂದೆ ಹೇಳುತ್ತಾರೆ

ಪ್ರಾಣಪ್ರಯಾಣದ ವಿಷಯದಲ್ಲಿ ಒಂದು ಶ್ರುತಿಯಿದೆ 'ಸೋಮ್ಯ, ಸಾಯುತ್ತಿರುವ ಈ ಮನುಷ್ಯನ ವಾಕ್ಕು ಮನಸ್ಸಿನಲ್ಲಿಯೂ, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ತೇಜಸ್ಸಿನಲ್ಲಿಯೂ, ತೇಜಸ್ಸು ಪರದೇವತೆಯಲ್ಲಿಯೂ (ಉಪಸಂಹೃತವಾಗುತ್ತದೆ)'[2] (ಛಾಂ ೬ ೭ ೮ ೬), ಇಲ್ಲಿ ವೃತ್ತಿಯಿಂದ ಕೂಡಿದ ವಾಕ್ಕೇ ಮನಸ್ಸಿನಲ್ಲಿ ಲಯವಾಗುತ್ತದೆಯೊ ಅಥವಾ ವಾಗ್ವೃತ್ತಿಯೇ ಲಯವಾಗುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ವಾಕ್ಕೇ ಮನಸ್ಸಿನಲ್ಲಿ ಲಯವಾಗುತ್ತದೆ, ಹಾಗಾದರೇ ಶ್ರುತಿಯೊಂದಿಗೆ ಸರಿಹೋಗುತ್ತದೆ, ಹಾಗಾಗದಿದ್ದರೆ ಲಕ್ಷಣಾರ್ಥವನ್ನು ಆಶ್ರಯಿಸಬೇಕಾಗುತ್ತದೆ ಶ್ರುತಿ ಮತ್ತು ಲಕ್ಷಣೆ—ಇವುಗಳ ವಿಷಯದಲ್ಲಿ ಸಂಶಯವುಂಟಾದಾಗ ಶ್ರುತಿಯು ನ್ಯಾಯವಾಗಿರುತ್ತದೆಯೇ ಹೊರತು ಲಕ್ಷಣೆಯಲ್ಲ, ಆದುದರಿಂದ ವಾಕ್ಕೇ ಮನಸ್ಸಿನಲ್ಲಿ ಲಯವಾಗುತ್ತದೆ

**ಸಿದ್ಧಾಂತಿ**—ಮನೋವೃತ್ತಿಯು ಇರುವಾಗಲೇ ವಾಗ್ವೃತ್ತಿಯು ಮಾತ್ರ ಲಯವಾಗುತ್ತದೆ, ಏಕೆಂದರೆ ಮನೋವೃತ್ತಿಯು ಇರುವಾಗಲೇ ವಾಗ್ವೃತ್ತಿಯು ಲಯವಾಗು

---

[1] ಶ್ರೀಭಾಷ್ಯವು ಪರಾವಿದ್ಯೆ, ಅಪರಾವಿದ್ಯೆ—ಎಂಬ ಭೇದವನ್ನು ಮಾಡದಿರುವುದರಿಂದ ಉಪಾಸಕನಾದ ಜ್ಞಾನಿಯು ಒಬ್ಬನೇ ಆಗಿರುತ್ತಾನೆ, ಉತ್ಕ್ರಾಂತಿಯಾಗುವುದು ಅವನಿಗೇ.

[2] ಅಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ-ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮ್ ।

ವುದು ಕಂಡುಬರುತ್ತದೆ, ಆದರೆ ವೃತ್ತಿಯಿಂದ ಕೂಡಿದ ವಾಕ್ಕು ಮನಸ್ಸಿನಲ್ಲಿ ಲಯವಾಗುವುದನ್ನು ಯಾರೂ ನೋಡಿಲ್ಲ ಯಾವುದು ಯಾವುದರಿಂದ ಉತ್ಪನ್ನವಾಗುತ್ತದಯೊ ಅದು ಅದರಲ್ಲಿಯೇ ಲಯವಾಗುವುದು ಯುಕ್ತವು ಮನಸ್ಸು ವಾಕ್ಕಿನಿಂದ ಹುಟ್ಟಿದ ಯೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ ವೃತ್ತಿಯ ಉದ್ಭವ-ಅಭಿಭವಗಳು ತಮ್ಮ ಕಾರಣವಲ್ಲದ್ದನ್ನು ಆಶ್ರಯಿಸಿಕೊಂಡೂ ಆಗುವುದು ಕಂಡುಬರುತ್ತದೆ, ಉದಾಹರಣೆಗೆ ಪಾರ್ಥಿವವಾದ ಕಟ್ಟಿಗೆಯಿಂದ ತೈಜಸವಾದ ಅಗ್ನಿಯ ವೃತ್ತಿಯು ಹುಟ್ಟುತ್ತದೆ ಮತ್ತೆ ನೀರಿನಲ್ಲಿ ಆರಿಹೋಗುತ್ತದೆ ಇದು ಶ್ರುತಿಗೆ ಹೇಗೆ ಹೊಂದುತ್ತದೆ ? ವೃತ್ತಿಗೂ ವೃತ್ತಿಯುಳ್ಳದ್ದಕ್ಕೂ ಉಪಚಾರದಿಂದ ಅಭೇದವನ್ನು ಕಲ್ಪಿಸಿದರೆ 'ವಾಕ್ಕು ಮನಸ್ಸಿನಲ್ಲಿ ಲಯವಾಗುತ್ತದೆ' ಎಂಬುದು ಹೊಂದುತ್ತದೆ

**ವಿ.**—ವಾಗಿಂದ್ರಿಯವೇ ಮನಸ್ಸಿನಲ್ಲಿ ಸೇರಿಕೊಳ್ಳುತ್ತದೆ, ವಾಗಿಂದ್ರಿಯವು ಉಪರತವಾಗಿರುವಾಗಲೂ ಮನಃಪ್ರವೃತ್ತಿಯಿರುವುದು ಕಂಡುಬರುತ್ತದೆ ವೃತ್ತಿಯು ಮಾತ್ರ ಸೇರಿಕೊಳ್ಳುವುದು ಹೊಂದುವುದಿಲ್ಲ, ಏಕೆಂದರೆ ಶ್ರುತಿಯು (ಛಾಂ ಉ ೬ ೬ ೧) ವಾಗಿಂದ್ರಿಯದ ಸಂಪತ್ತಿಯನ್ನು ಹೇಳುತ್ತದೆಯೇ ಹೊರತು ವೃತ್ತಿಯ ಸಂಪತ್ತಿಯನ್ನಲ್ಲ ವೃತ್ತಿಯು ಉಪರತವಾಗಿರುವಾಗ ವಾಗಿಂದ್ರಿಯವು ಮಾತ್ರ ಇದೆಯೆಂದು ತಿಳಿದುಕೊಳ್ಳಲು ಯಾವ ಪ್ರಮಾಣವೂ ಇಲ್ಲ ಮನಸ್ಸು ವಾಕ್ಕಿನ ಕಾರಣವಾಗದುದರಿಂದ ವಾಕ್ಕು ಮನಸ್ಸಿನಲ್ಲಿ ಲಯವಾಗಲಾರದು ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ವಾಕ್ಕು ಮನಸ್ಸಿನಲ್ಲಿ ಲಯವಾಗುವುದು—ಎಂದು ಶ್ರುತಿಯು ಹೇಳುವುದಿಲ್ಲ, ವಾಕ್ಕು ಮನಸ್ಸಿನೊಂದಿಗೆ ಸೇರಿಕೊಳ್ಳುತ್ತದೆ ಅಥವಾ ಸಂಬಂಧವಾಗುತ್ತದೆ ಎಂದರ್ಥ [1]

**ದ್ವೈ.**—ಈ ಪಾದದಲ್ಲಿ ದೇವತೆಗಳು ಹೇಗೆ ಉತ್ಕ್ರಮಿಸುತ್ತಾರೆ ಮತ್ತು ಮೋಕ್ಷವನ್ನು ಪಡೆಯುತ್ತಾರೆ ?—ಎಂಬುದು ಹೇಳಲ್ಪಡುತ್ತದೆ [2] ವಾಗಭಿಮಾನಿನಿಯಾದ ಉಮೆಯು ಮನೋಽಭಿಮಾನಿಯಾದ ರುದ್ರನಲ್ಲಿ ಲಯವನ್ನು ಹೊಂದುತ್ತಾಳೆ,[3] ಏಕೆಂದರೆ ವಾಕ್ಕು ಮನಸ್ಸಿನ ವಶದಲ್ಲಿರುವುದು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ 'ಎಲ್ಲಿಯ ವರೆಗೆ ವಾಕ್ಕು ಮನಸ್ಸಿನಲ್ಲಿ ಲಯವಾಗುವುದಿಲ್ಲವೊ ಅಲ್ಲಿಯ ವರೆಗೆ ಅವರನ್ನು ಅರಿಯುತ್ತಾನೆ'[4] (ಛಾಂ ಉ ೬ ೧೫ ೧) ಎಂದು ಶ್ರುತಿಯೂ ಹೇಳುತ್ತದೆ

## ಅತ ಏವ ಸರ್ವಾಣ್ಯನು ॥ ೨ ॥

೨ ಆದುದರಿಂದಲೇ ಎಲ್ಲ (ಇಂದ್ರಿಯಗಳೂ ಮನಸ್ಸನ್ನು) ಅನುಸರಿಸುತ್ತವೆ

---

[1] ವಾಙ್ಮನಸಿ ಸಂಪದ್ಯತ ಇತಿ ವಚನಾತ್ ಮನಸಾ ವಾಕ್ಸಂಯುಜ್ಯತೇ, ನ ತು ತತ್ರ ಲೀಯತ ಇತಿ ಪರಿಹರ್ತವ್ಯಮ್ (ಶ್ರೀಭಾಷ್ಯ).

[2] ದೇವಾನಾಂ ಮೋಕ್ಷ ಉತ್ಕ್ರಾಂತಿಶ್ಚಾಸ್ಮಿನ್ ಪಾದ ಉಚ್ಯತೇ (ಮ. ಭಾ )

[3] ವಾಗಭಿಮಾನಿನ್ಯುಮಾ ಮನೋಽಭಿಮಾನಿನಿ ರುದ್ರೇ ವಿಲೀಯತೇ (ಮ ಭಾ )

[4] ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತ ಇತಿ ಶಬ್ದಾಚ್ಚ (ಮ ಭಾ.).

ಹೀಗೆಯೇ ಅವಿಶೇಷವಾಗಿ ಇಂದ್ರಿಯಗಳೆಲ್ಲ ಮನಸ್ಸಿನಲ್ಲಿ ಸಂಪನ್ನವಾಗುತ್ತವೆಂದು ಇನ್ನೊಂದು ಶ್ರುತಿಯು ಹೇಳುತ್ತದ 'ಆದುದರಿಂದ ಕ್ಷೀಣವಾದ ತೇಜಸ್ಸುಳ್ಳವನು ಮನಸ್ಸಿನಲ್ಲಿ ಪ್ರವಿಷ್ಟವಾದ ಇಂದ್ರಿಯಗಳೊಂದಿಗೆ ಪುನರ್ಜನ್ಮವನ್ನು ಹೊಂದುತ್ತಾನೆ'[1] (ಪ್ರ ಉ ೩ ೯) 'ಆದುದರಿಂದಲೇ' ಎಂದರೆ ವಾಕ್ಕಿನಂತೆ ಚಕ್ಷುರಾದಿಗಳಿಗೂ—ವೃತ್ತಿಯುಕ್ತವಾದ ಮನಸ್ಸು ಇದ್ದುಕೊಂಡಿರುವಾಗಲೇ—ವೃತ್ತಿಯು ಇಲ್ಲದಿರುವುದ-ರಿಂದಲೂ, ಇಂದ್ರಿಯಗಳ ಲಯವಾಗದಿರುವುದರಿಂದಲೂ ಮತ್ತು ಈ ಅರ್ಥವು ಶ್ರುತಿಗೆ ಹೊಂದುವುದರಿಂದಲೂ ಇಂದ್ರಿಯಗಳೆಲ್ಲ ಮನಸ್ಸನ್ನು ಅನುಸರಿಸುತ್ತವೆ—ಎಂದು ನಿರ್ಧರಿಸಬೇಕು

**ವಿ.**—ವಾಕ್ಕು ಮನಸ್ಸಿನೊಂದಿಗೆ ಸೇರುವುದರಿಂದಲೂ, ಶ್ರುತಿಯೂ (ಪ್ರ ಉ ೩ ೯) ಹಾಗೆಯೇ ಹೇಳುವುದರಿಂದಲೂ ಉಳಿದ ಇಂದ್ರಿಯಗಳೆಲ್ಲ ವಾಕ್ಕನ್ನು ಅನುಸರಿಸಿ ಮನಸ್ಸಿನೊಂದಿಗೆ ಸಂಪತ್ತಿಯನ್ನು ಪಡೆಯುತ್ತವೆ

**ದ್ವೈ.**—'ಆದುದರಿಂದಲೇ' ಎಂದರೆ ಶ್ರುತಿಯ ಪ್ರಕಾರವೇ ದೇವತೆಗಳೆಲ್ಲ ಕ್ರಮವಾಗಿ ಲಯವಾಗುತ್ತಾರೆ[2] 'ದೇವತೆಗಳೆಲ್ಲ ಅಗ್ನಿಯಲ್ಲಿ ಲಯವಾಗುತ್ತಾರೆ, ಅಗ್ನಿಯು ಇಂದ್ರನಲ್ಲಿಯೂ, ಇಂದ್ರನು ಉಮೆಯಲ್ಲಿಯೂ, ಉಮೆಯು ರುದ್ರನಲ್ಲಿಯೂ ಲಯವಾಗುತ್ತಾರೆ, ಹೀಗೆಯೇ ಇತರ ದೇವತೆಗಳೂ ಲಯವಾಗುತ್ತಾರೆ' ಎಂದು ಗೌಪವನ ಶ್ರುತಿಯು ಹೇಳುತ್ತದೆ

---

[1] ತಸ್ಮಾದುಪಶಾಂತತೇಜಾಃ ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ ।

[2] ಅತ ಏವ ಶಬ್ದಾತ್ ಸರ್ವಾಣಿ ದೈವಾನಿ ಯಥಾಽನುಕೂಲಂ ನಿಲೀಯಂತೇ (ಮ. ಭಾ.).

# ೨. ಮನೋಽಧಿಕರಣ

**ತನ್ಮನಃ ಪ್ರಾಣ ಉತ್ತರಾತ್ ॥ ೩ ॥**

೩ ಆ ಮನಸ್ಸು ಪ್ರಾಣದಲ್ಲಿ (ಲಯವಾಗುತ್ತದೆ), ಮುಂದಿನ ವಾಕ್ಯದಿಂದ (ಇದು ತಿಳಿದುಬರುತ್ತದೆ)

'ಮನಸ್ಸು ಪ್ರಾಣದಲ್ಲಿ ಉಪಸಂಹೃತವಾಗುತ್ತದೆ'[1] (ಛಾಂ ಉ ೬ ೮ ೬) ಎಂಬಲ್ಲಿಯೂ ವೃತ್ತಿಯು ಮಾತ್ರ ಲಯವಾಗುತ್ತದೆಯೊ ? ಅಥವಾ ವೃತ್ತಿಯಿಂದೂಡ ಗೂಡಿದ ಮನಸ್ಸು ಲಯವಾಗುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಇಲ್ಲಿ ವೃತ್ತಿಗಳಿಂದ ಕೂಡಿದ ಮನಸ್ಸಿನ ಸಂಪತ್ತಿಯನ್ನೇ ಹೇಳಿದ, ಏಕೆಂದರೆ ಶ್ರುತಿಯು (ಛಾಂ ಉ ೬ ೫ ೪) ಮನಸ್ಸಿಗೆ ಅನ್ನವು (ಎಂದರೆ ಪೃಥ್ವಿಯು) ಕಾರಣವೆಂದೂ ಪ್ರಾಣಕ್ಕೆ ನೀರು ಕಾರಣವೆಂದೂ ತಿಳಿಸುತ್ತದೆ. ಆದುದರಿಂದ 'ಮನಸ್ಸು ಪ್ರಾಣದಲ್ಲಿ ಉಪಸಂಹೃತವಾಗುತ್ತದೆ' ಎಂದರೆ ಅನ್ನವು ನೀರಿನಲ್ಲಿ ಲಯವಾಗುತ್ತದೆ, ಏಕೆಂದರೆ ಕಾರ್ಯ-ಕಾರಣಗಳಿಗೆ ಭೇದವಿಲ್ಲ

**ಸಿದ್ಧಾಂತಿ**—ಮನಸ್ಸು ಬಾಹ್ಯೇಂದ್ರಿಯವೃತ್ತಿಗಳನ್ನೆಲ್ಲ ಲಯಮಾಡಿಕೊಂಡು ತನ್ನ ವೃತ್ತಿಯ ಮೂಲಕವೇ ಪ್ರಾಣದಲ್ಲಿ ಲಯವಾಗುತ್ತದೆ—ಎಂಬುದದ್ದು ಮುಂದಿನ ವಾಕ್ಯದಿಂದ ತಿಳಿದುಕೊಳ್ಳಬೇಕು, ಏಕೆಂದರೆ ನಿದ್ರೆಯಲ್ಲಿರುವವನಿಗೂ ಸಾಯುವವನಿಗೂ ಪ್ರಾಣವೃತ್ತಿಯು ಇರುವಾಗ ಮನೋವೃತ್ತಿಯಿಲ್ಲದಿರುವುದು ಕಂಡುಬರುತ್ತದೆ ಮನಸ್ಸು ಪ್ರಾಣದಲ್ಲಿ ಲಯವಾಗುವುದಿಲ್ಲ, ಏಕೆಂದರೆ ಮನಸ್ಸಿಗೆ ಪ್ರಾಣವು ಉಪಾದಾನಕಾರಣ ವಲ್ಲ ಪೂರ್ವಪಕ್ಷಿಯು ಹೇಳಿದಂತೆ ಒಂದಕ್ಕೊಂದು ಹೇಗೋ ಕಾರಣವಾದರೆ ಅನ್ನದಲ್ಲಿ ಮನಸ್ಸೂ, ನೀರಿನಲ್ಲಿ ಅನ್ನವೂ, ನೀರಿನಲ್ಲಿಯೇ ಪ್ರಾಣವೂ ಲಯವಾಗುತ್ತದೆ ಈ ಪಕ್ಷದಲ್ಲಿಯೂ ಪ್ರಾಣಭಾವದಿಂದ ಪರಿಣಿತವಾಗಿರುವ ನೀರಿನಿಂದ ಮನಸ್ಸು ಹುಟ್ಟುತ್ತದ— ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ ಆದುದರಿಂದ ಇಲ್ಲಿಯೂ ವೃತ್ತಿಯೇ ಲಯವಾಗುತ್ತದೆ ಎಂದು ತಿಳಿದುಕೊಳ್ಳಬೇಕು

**ವಿ** —ಪ್ರಾಣೇಂದ್ರಿಯಗಳಿಂದ ಕೂಡಿದ ಮನಸ್ಸು ಪ್ರಾಣದೊಂದಿಗೆ ಕೂಡುತ್ತದೆ ಮನೋವೃತ್ತಿಮಾತ್ರವಲ್ಲ, ಇದು ಮುಂದಿನ ವಾಕ್ಯದಿಂದ (ಛಾಂ. ಉ ೬. ೮. ೬) ತಿಳಿದುಬರುತ್ತದೆ 'ಮನಸ್ಸು ಅನ್ನಮಯ' (ಛಾಂ. ಉ ೬ ೬ ೫) ಎಂದು ಶ್ರುತಿಯು ಮನಸ್ಸಿಗೆ ಅನ್ನಮಯತ್ವವನ್ನು ಹೇಳಿರುವುದರಿಂದಲೂ ಮತ್ತು ನೀರು ಅನ್ನಕ್ಕೆ ಕಾರಣವಾಗಿರುವುದರಿಂದಲೂ 'ಮನಸ್ಸು ನೀರಿನಲ್ಲಿ ಲಯವಾಗಬೇಕು' ಎಂಬುದು ಸರಿಯಲ್ಲ,

---

1 ಮನಃ ಪ್ರಾಣೇ ।

ಏಕೆಂದರೆ 'ಮನಸ್ಸು ಅನ್ನಮಯ, ಪ್ರಾಣವು ಆಪೋಮಯ' ಎಂಬ ವಾಕ್ಯಗಳು ಮನಃ ಪ್ರಾಣಗಳು ಅನ್ನ-ನೀರುಗಳಿಂದ ಪುಷ್ಟಿಯನ್ನು ಪಡೆಯುತ್ತವೆ ಎಂಬುದನ್ನು ತಿಳಿಸುತ್ತದೆ. ಪ್ರಾಣಶಬ್ದವು ಲಕ್ಷಣೆಯಿಂದ ನೀರನ್ನು ತಿಳಿಸಬಹುದು.

**ದ್ವೈ.**—ಮನಸ್ಸಿನ ಅಭಿಮಾನಿದೇವತೆಯಾದ ರುದ್ರನು ಪ್ರಾಣದ ಅಭಿಮಾನಿ ದೇವತೆಯಾದ ವಾಯುವಿನಲ್ಲಿ ಲಯವಾಗುತ್ತಾನೆ—ಎಂಬುದು **ಮನಃ ಪ್ರಾಣೇ** ಎಂಬ ಉತ್ತರವಾಕ್ಯದಿಂದ ತಿಳಿದುಬರುತ್ತದೆ.[1]

---

[1] ಮನಃ ಪ್ರಾಣ ಇತ್ಯುತ್ತರಾದ್ವಚನಾನ್ಮನೋಽಭಿಮಾನೀ ರುದ್ರಃ ಪ್ರಾಣೇ ವಾಯೌ ವಿಲೀಯತೇ (ಮ. ಭಾ.).

## ೩. ಅಧ್ಯಕ್ಷಾಧಿಕರಣ*

(ಸೂ ೪-೬)

**ಸೋಽಧ್ಯಕ್ಷೇ ತದುಪಗಮಾದಿಭ್ಯಃ ॥ ೪ ॥**

೪ ಆ (ಪ್ರಾಣವು) ಅಧ್ಯಕ್ಷನಲ್ಲಿ (ಉಪಸಂಹೃತವಾಗುತ್ತದೆ), (ಪ್ರಾಣಗಳು) ಅವನ ಬಳಿಗೆ ಬರುವುದೇ ಮೊದಲಾದವುಗಳಿಂದ (ಇದು ತಿಳಿದುಬರುತ್ತದೆ)

'ಪ್ರಾಣವು ತೇಜಸ್ಸಿನಲ್ಲಿ (ಉಪಸಂಹೃತವಾಗುತ್ತದೆ)'[1] (ಛಾಂ ಉ ೬ ೮ ೬) ಎಂಬ ಶ್ರುತಿಯ ಪ್ರಕಾರ ಪ್ರಾಣದ ವೃತ್ತಿಯು ತೇಜಸ್ಸಿನಲ್ಲಿ ಉಪಸಂಹೃತವಾಗುತ್ತದೆಯೊ ಅಥವಾ ದೇಹೇಂದ್ರಿಯ-ಪಂಜರದ ಅಧ್ಯಕ್ಷನಾದ ಜೀವನಲ್ಲಿ ಉಪಸಂಹೃತವಾಗುತ್ತದೆಯೊ? —ಎಂಬುದು ಸಂಶಯ ಪ್ರಾಣವು ತೇಜಸ್ಸಿನಲ್ಲಿಯೇ ಲಯವಾಗುತ್ತದೆ—ಎಂಬುದು ಪೂರ್ವಪಕ್ಷ

**ಸಿದ್ಧಾಂತಿ**—ಅವಿದ್ಯೆ, ಕರ್ಮ, ಪೂರ್ವಪ್ರಜ್ಞೆ—ಎಂಬ ಉಪಾಧಿಗಳನ್ನು ಹೊಂದಿರುವ ಜೀವಾತ್ಮನಲ್ಲಿಯೇ ಪ್ರಾಣವು ಉಪಸಂಹೃತವಾಗುತ್ತದ, ಏಕೆಂದರೆ ಪ್ರಾಣಗಳು ಅವನ ಬಳಿಗೆ ಬರುವುವು ಮೊದಲಾದ ಕಾರಣಗಳಿವೆ ಪ್ರಾಣಗಳೆಲ್ಲ ವಿಶೇಷವಿಲ್ಲದೆ ಜೀವನ ಬಳಿಗೆ ಹೋಗುತ್ತವೆಂದು ಶ್ರುತಿಯು ತಿಳಿಸುತ್ತದೆ 'ಈ ಆತ್ಮನ ಅಂತಿಮಕಾಲದಲ್ಲಿ—ಅವನು ಉಸಿರಾಡಲು ಕಷ್ಟಪಡುತ್ತಿರುವಾಗ—ಎಲ್ಲ ಪ್ರಾಣಗಳೂ ಅವನ ಸುತ್ತಲೂ ಒಟ್ಟುಗೂಡುವುವು'[2] (ಬೃ ಉ ೪ ೩ ೩೮) ಉತ್ಕ್ರಮಿಸುತ್ತಿರುವ ಜೀವನನ್ನು ಅನುಸರಿಸಿ ಪ್ರಾಣವೂ ಉತ್ಕ್ರಮಿಸುತ್ತದೆ—ಎಂದು ಅದೇ ಶ್ರುತಿಯು (೪ ೪ ೨) ತಿಳಿಸುತ್ತದೆ '(ಆಗ ಆತ್ಮನು) ವಿಶೇಷವಾದ ವಿಜ್ಞಾನವುಳ್ಳವನಾಗಿರುತ್ತಾನೆ' (ಬೃ ಉ ೪ ೪ ೨) ಎಂಬ ವಾಕ್ಯವು ಇಂದ್ರಿಯಗ್ರಾಮವು ಲಯವಾಗಿರುವ ಪ್ರಾಣವು ಜೀವನಲ್ಲಿಯೇ ಇರುತ್ತದ ಎಂಬುದನ್ನು ತಿಳಿಸುತ್ತದೆ. ಪ್ರಾಣವು ತೇಜಸ್ಸಿನಲ್ಲಿ ಲಯವಾಗುತ್ತದೆಂದು ಶ್ರುತಿಯು ಹೇಳಿದ್ದರೂ ಉತ್ಕ್ರಮಣಾದಿವ್ಯವಹಾರಕ್ಕೆ ಜೀವನೇ ಪ್ರಧಾನನಾಗಿರುವುದರಿಂದಲೂ ಶ್ರುತ್ಯಂತರದಲ್ಲಿರುವ ವಿಶೇಷವು ಅಪೇಕ್ಷಣೀಯವಾಗಿರುವುದರಿಂದಲೂ ಹೆಚ್ಚು ಅರ್ಥವನ್ನು ಸೇರಿಸಬೇಕಾಗುತ್ತದೆ

---

* ಶ್ರೀಭಾಷ್ಯ, ಮಧ್ವಭಾಷ್ಯ—ಇವುಗಳ ಪ್ರಕಾರ ಈ ಅಧಿಕರಣವು ೪ನೇ ಸೂತ್ರವನ್ನು ಮಾತ್ರ ಒಳಕೊಂಡಿದೆ

[1] ಪ್ರಾಣಸ್ತೇಜಸಿ ।

[2] ಏವಮೇವೇಮಮಾತ್ಮಾನಮಂತಕಾಲೇ ಸರ್ವೇ ಪ್ರಾಣಾ ಅಭಿಸಮಾಯಂತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ।

ವಿ.—'ಪ್ರಾಣವು ತೇಜಸ್ಸನ್ನು ಸೇರುತ್ತದೆ' ಎಂದರೆ ಜೀವನೊಂದಿಗೆ ಸಂಯುಕ್ತವಾದ ಪ್ರಾಣವು ತೇಜಸ್ಸನ್ನು ಸೇರುತ್ತದೆ;[1] ಯಮುನೆಯು ಗಂಗೆಯೊಂದಿಗೆ ಸೇರಿ ಸಾಗರದ ಕಡೆಗೆ ಪ್ರವಹಿಸುತ್ತಿರುವಾಗ 'ಯಮುನೆಯು ಸಾಗರಕ್ಕೆ ಹೋಗುತ್ತಿದೆ' ಎಂದು ಹೇಳಿದ ಹಾಗೆ.

ದ್ವೈ.—ಪ್ರಾಣನು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೆ;[2] ಏಕೆಂದರೆ ಶ್ರುತಿಯು ಹೀಗೆ ಹೇಳುತ್ತದೆ: 'ಎಲ್ಲರೂ ಪ್ರಾಣನ ಬಳಿಗೆ ಹೋಗುತ್ತಾರೆ; ಪ್ರಾಣನು ಪರಮಾತ್ಮನ ಬಳಿಗೆ ಹೋಗುತ್ತಾನೆ'[3] ಇತ್ಯಾದಿ.

## ಭೂತೇಷು ತಚ್ಛ್ರುತೇಃ* ॥ ೫ ॥

೫ ಭೂತಗಳಲ್ಲಿ (ಜೀವನು ಇರುತ್ತಾನೆ); ಏಕೆಂದರೆ ಹಾಗೆ ಶ್ರುತಿಯಿದೆ.

ಹಾಗಾದರೆ 'ಪ್ರಾಣವು ತೇಜಸ್ಸಿನಲ್ಲಿ ಲಯವಾಗುತ್ತದೆ' ಎಂಬುದರ ಅರ್ಥವೇನು? ಪ್ರಾಣಸಂಯುಕ್ತನಾದ ಜೀವನು ತೇಜಸ್ಸಿನಿಂದ ಒಡಗೂಡಿರುವ ದೇಹಕಾರಣವಾದ ಸೂಕ್ಷ್ಮಭೂತಗಳಲ್ಲಿ ಇರುತ್ತಾನೆ ಎಂದರ್ಥ; ಸ್ರುಘ್ನದಿಂದ ಮಧುರೆಗೆ ಹೋಗಿ ಮಥುರೆಯಿಂದ ಪಾಟಲಿಪುತ್ರಕ್ಕೆ ಹೋಗುವವನನ್ನು 'ಸ್ರುಘ್ನದಿಂದ ಪಾಟಲಿಪುತ್ರಕ್ಕೆ ಹೋಗುತ್ತಾನೆ' ಎಂದು ಹೇಳಿದಂತೆ.

ವಿ.—'ಪ್ರಾಣವು ತೇಜಸ್ಸನ್ನು ಸೇರುತ್ತದೆ' ಎಂದರೆ ತೇಜಸ್ಸನ್ನು ಮಾತ್ರ ಸೇರುತ್ತದೆ ಎಂದು ತಿಳಿಯಕೂಡದು; ಪ್ರಾಣಯುಕ್ತನಾದ ಜೀವನು ಭೂತಸೂಕ್ಷ್ಮಗಳನ್ನು ಸೇರುತ್ತಾನೆ ಎಂದರ್ಥ. ಸಂಚರಿಸುತ್ತಿರುವ ಜೀವನು ಸರ್ವಭೂತಮಯನಾಗಿರುವನೆಂದು ಶ್ರುತಿಯು ಹೇಳುತ್ತದೆ: 'ಅವನು ಪೃಥ್ವೀಮಯನು, ಆಪೋಮಯನು....ತೇಜೋಮಯನು' (ಬೃ ಉ. ೪. ೪. ೫).

ದ್ವೈ.—ಇತರ ದೇವತೆಗಳು ಭೂತಗಳಲ್ಲಿ ಲಯವಾಗುತ್ತಾರೆ;[4] ಏಕೆಂದರೆ 'ದೇವತೆಗಳು ಭೂತಗಳಲ್ಲಿ ಲಯವಾಗುತ್ತಾರೆ; ಭೂತಗಳು ಪರಮೇಶ್ವರನಲ್ಲಿ ಲಯವಾಗುತ್ತವೆ; ಪರಮಾತ್ಮನು ಉದಯಿಸುವುದೂ ಇಲ್ಲ, ಅಸ್ತಮಿಸುವುದೂ ಇಲ್ಲ' ಎಂದು ಬೃಹಚ್ಛ್ರುತಿಯು ಹೇಳುತ್ತದೆ.

---

[1] ಏವಂ ಜೀವೇನ ಸಂಯುಜ್ಯ ತೇನ ಸಹ ತೇಜಸ್ಸಂಪತ್ತಿರಿಹ ಪ್ರಾಣಸ್ತೇಜಸಿ ಇತ್ಯುಚ್ಯತೇ (ಶ್ರೀಭಾಷ್ಯ.).

[2] ಸ ಪ್ರಾಣಃ ಪರಮಾತ್ಮನಿ ವಿಲೀಯತೇ (ಮ. ಭಾ.).

[3] ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಮುಪಗಚ್ಛತಿ (ಮ. ಭಾ.).

* ಶ್ರೀಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನದು ಭೂತಾಧಿಕರಣ ಎನಿಸಿದೆ. ಮಧ್ವಭಾಷ್ಯದಲ್ಲಿ ಈ ಅಧಿಕರಣಕ್ಕೆ ೫ನೇ ಸೂತ್ರವು ಮಾತ್ರವಿದೆ.

[4] ಭೂತೇಷ್ವನ್ಯೇಷಾಂ ದೇವಾನಾಂ ಲಯಃ (ಮ. ಭಾ.)

## ನೈಕಸ್ಮಿನ್ ದರ್ಶಯತೋ ಹಿ* ॥ ೬ ॥

೬ ಜೀವನು ಒಂದು (ಭೂತಕ್ಕೇ) ಹೋಗುವುದಿಲ್ಲ ; ಏಕೆಂದರೆ (ಪ್ರಶ್ನಪ್ರತಿವಚನಗಳು ಹೀಗೆ) ತಿಳಿಸುತ್ತವೆ.

ಜೀವನು ಶರೀರಾಂತವನ್ನು ಪಡೆಯುವ ಕಾಲದಲ್ಲಿ ತೇಜಸ್ಸೊಂದರಲ್ಲಿಯೇ ಇದ್ದುಕೊಂಡಿರುವುದಿಲ್ಲ ; ಏಕೆಂದರೆ ಕಾರ್ಯವಾದ ಶರೀರವು ಅನೇಕ ಭೂತಗಳನ್ನು ಒಳಕೊಂಡಿರುತ್ತದೆ. ಈ ಅರ್ಥವನ್ನು ಪ್ರಶ್ನ-ಪ್ರತಿವಚನಗಳಲ್ಲಿ ಹೀಗೆ ತೋರಿಸಿದೆ : 'ನೀರು ಪುರುಷನೆಂಬ ಹೆಸರನ್ನು ಪಡೆಯುವುದು'[1] (ಛಾಂ. ಉ. ೫. ೩. ೩) ಇದನ್ನೇ ೩. ೧. ೨ ರಲ್ಲಿ ವಿವರಿಸಲಾಗಿದೆ 'ಇವನು ಪೃಥ್ವೀಮಯನು, ಆಪೋಮಯನು, ವಾಯುಮಯನು, ಆಕಾಶಮಯನು, ತೇಜೋಮಯನು'[2] (ಬೃ. ಉ. ೪. ೪. ೫) ಎಂದು ಶ್ರುತಿಯು ಹೇಳುತ್ತದೆ. ಸ್ಮೃತಿಯೂ (ಮ. ಸ್ಮೃ. ೧. ೨೭) ಇದನ್ನೇ ಹೇಳುತ್ತದೆ : 'ಅಣುವೂ ಅವಿನಾಶಿಯೂ ಆದ ಪಂಚತನ್ಮಾತ್ರೆಗಳೊಂದಿಗೆ ಈ ಜಗತ್ತು ಉತ್ಪನ್ನವಾಗುತ್ತದೆ' [3]

**ವಿ.**—ಒಂದೇ ಭೂತವು ಕಾರ್ಯವನ್ನುಂಟುಮಾಡಲು ಶಕ್ತನಾಗಿರುವುದಿಲ್ಲ. ನಾಮರೂಪಗಳನ್ನು ವಿಂಗಡಿಸಿಕೊಳ್ಳಲು ಪ್ರತಿಯೊಂದು ಭೂತವೂ ಮೂರು ಮೂರಾಯಿತೆಂದು ಶ್ರುತಿಯು (ಛಾಂ. ಉ. ೬. ೨) ತಿಳಿಸುತ್ತದೆ. ಆದುದರಿಂದ **ಪ್ರಾಣಸ್ತೇಜಸಿ** ಎಂಬಲ್ಲಿ ತೇಜಃಶಬ್ದವು ಇತರ ಭೂತಗಳೊಂದಿಗೆ ಸೇರಿಕೊಂಡಿರುವ ತೇಜಸ್ಸನ್ನು ಸೂಚಿಸುತ್ತದೆ.

**ದ್ವೈ.**—'ಒಂದೇ ಭೂತದಲ್ಲಿ (ಎಂದರೆ ಅಗ್ನಿಯಲ್ಲಿಯೇ) ಎಲ್ಲ ದೇವತೆಗಳೂ ಲಯವನ್ನು ಹೊಂದುವುದಿಲ್ಲ'[4] ಎಂಬುದು ಸೂತ್ರಾರ್ಥ.

**ಪೃಥಿವ್ಯಾಮ್ಪೃಭವೋ ವಿಲೀಯಂತೇ** ಎಂದು ಮಹೋಪನಿಷತ್ತೂ **ಮೃತ್ಯವಃ ಪೃಥಿವ್ಯಾಮ್** ಎಂದು ಚತುರ್ವೇದಶಿಖೆಯೂ ದೇವತೆಗಳ ಈ ಲಯಕ್ರಮವನ್ನು ತಿಳಿಸುತ್ತವೆ.

---

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅನೇಕಲಯಾಧಿಕರಣ ಎನಿಸಿದೆ.

1 ಆಪಃ ಪುರುಷವಚಸಃ ।

2 ಪೃಥಿವೀಮಯ ಆಪೋಮಯೋ ವಾಯುಮಯ ಆಕಾಶಮಯಸ್ತೇಜೋಮಯಃ ।

3 ಅಣ್ವ್ಯೋ ಮಾತ್ರಾऽವಿನಾಶಿನ್ಯೋ ದಶಾರ್ಧಾನಾಂ ತು ಯಾಃ ಸ್ಮೃತಾಃ ।
ತಾಭಿಃ ಸಾರ್ಧಮಿದಂ ಸರ್ವಂ ಸಂಭವತ್ಯನುಪೂರ್ವಶಃ ॥

4 ನೈಕಸ್ಮಿನ್ ಭೂತೇ ಸರ್ವೇಷಾಂ ದೇವಾನಾಂ ಲಯಃ (ಮ. ಭಾ.).

# ೪. ಆಸೃತ್ಯುಪಕ್ರಮಾಧಿಕರಣ*

**ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥ ೭ ॥**

೭ (ಈ ಉತ್ಕ್ರಾಂತಿಯು) ಮಾರ್ಗದ ಪ್ರಾರಂಭದ ವರೆಗೂ (ಜ್ಞಾನಿ-ಅಜ್ಞಾನಿಗಳಿಗೆ) ಸಮಾನವಾಗಿರುತ್ತದೆ, (ಜ್ಞಾನಿಯ ಈ) ಅಮೃತತ್ವವು (ಅವಿದ್ಯಾದಿಗಳನ್ನು) ದಹಿಸದೆ (ಆಪೇಕ್ಷಿಕವಾಗಿರುತ್ತದ)

ಈ ಉತ್ಕ್ರಾಂತಿಯು ಜ್ಞಾನಿ (ಎಂದರೆ ಉಪಾಸಕ) ಮತ್ತು ಅಜ್ಞಾನಿ—ಇವರಿಬ್ಬರಿಗೂ ಸಮಾನವಾಗಿರುತ್ತದೆಯೊ ಅಥವಾ ಏನಾದರೂ ವಿಶೇಷವಿದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷ**—ವಿಶೇಷವಿದೆ, ಏಕೆಂದರೆ ಉತ್ಕ್ರಾಂತಿಗೆ ಭೂತಗಳ ಆಶ್ರಯವಿದೆ ಮತ್ತು ಭೂತಾಶ್ರಯವು ಪುನರ್ಜನ್ಮಕ್ಕಾಗಿಯೇ ಆದರೆ ಉಪಾಸಕನಿಗೆ ಜನ್ಮಾಂತರವಿಲ್ಲ, ಅವನು ಅಮೃತತ್ವವನ್ನು ಹೊಂದುತ್ತಾನೆ ಆದುದರಿಂದ ಅಜ್ಞಾನಿಗೇ ಈ ಅಮೃತತ್ವವನ್ನು ಹೇಳಿದೆ ಇದು ಉಪಾಸನಾಪ್ರಕರಣವಾಗಿದ್ದರೂ ಉತ್ಕ್ರಾಂತಿಯು ಉಪಾಸಕನಿಗೇ ಆಗಿರಬೇಕೆಂಬುದು ಯುಕ್ತವಲ್ಲ, ಏಕೆಂದರೆ ನಿದ್ರಾದಿಗಳಂತೆ ಇಲ್ಲಿಯೂ ಪ್ರಾಪ್ತವಾಗಿರುವುದನ್ನೇ ಹೇಳಿದೆ ಜ್ಞಾನಿಗೆ ಪ್ರಾಣಗಳು ಉತ್ಕ್ರಮಿಸುವುದಿಲ್ಲವೆಂದು ಶ್ರುತಿಯು (ಬೃ ಉ ೪ ೪ ೬) ತಿಳಿಸುತ್ತದೆ

**ಸಿದ್ಧಾಂತಿ**—ಈ ಉತ್ಕ್ರಾಂತಿಯು ಉಪಾಸಕನಿಗೂ ಅಜ್ಞಾನಿಗೂ ದೇವಯಾನಮಾರ್ಗವು ಪ್ರಾರಂಭವಾಗುವವರೆಗೂ ಸಮಾನವಾಗಿರುತ್ತದೆ, ಏಕೆಂದರೆ ಶ್ರುತಿಯು ಯಾವ ವಿಶೇಷವನ್ನೂ ಹೇಳುವುದಿಲ್ಲ ಅಜ್ಞಾನಿಯಾದವನು ದೇಹಕ್ಕೆ ಕಾರಣವಾಗಿರುವ ಸೂಕ್ಷ್ಮಭೂತಗಳನ್ನು ಆಶ್ರಯಿಸಿಕೊಂಡು ಕರ್ಮಪ್ರಯುಕ್ತನಾಗಿ ದೇಹವನ್ನು ಪಡೆಯಲು ಸಂಸರಿಸುತ್ತಾನೆ ಆದರೆ ಉಪಾಸಕನು ಜ್ಞಾನಪ್ರಕಾಶಿತವಾದ ಮೋಕ್ಷನಾಡೀದ್ವಾರವನ್ನು ಆಶ್ರಯಿಸುತ್ತಾನೆ[1] ಅಮೃತತ್ವವು ದೇಶಾಂತರಕ್ಕೆ ಅಧೀನವಾಗಿರುವುದಿಲ್ಲ—ಎಂಬುದು ಸರಿಯಲ್ಲ, ಏಕೆಂದರೆ ಅವಿದ್ಯಾದಿಕ್ಲೇಶಗಳನ್ನು ಅತ್ಯಂತವಾಗಿ ಸುಡದೆ ಅಪರಾವಿದ್ಯಾಸಾಮರ್ಥ್ಯದಿಂದ ಆಪೇಕ್ಷಿಕವಾದ ಅಮೃತತ್ವವನ್ನು ಪಡೆಯಲು ಇಚ್ಛಿಸುವವನಿಗೆ ಆ ದೇವಯಾನಮಾರ್ಗದ ಪ್ರಾರಂಭ ಮತ್ತು ಭೂತಾಶ್ರಯತ್ವ ಸಂಭವಿಸುತ್ತದೆ ಆಶ್ರಯವಿಲ್ಲದೆ ಪ್ರಾಣಗಳು ಹೊರಡುವುದಿಲ್ಲ ಆದುದರಿಂದ ಇದರಲ್ಲಿ ಯಾವ ದೋಷವೂ ಇಲ್ಲ

---

* ಶ್ರೀಭಾಷ್ಯ, ಮಧ್ವಭಾಷ್ಯ—ಇವುಗಳಲ್ಲಿ ಈ ಅಧಿಕರಣವು ಸ್ಮರ್ಯತೇ ಚ ಎಂಬ ೧೪ನೆಯ ಸೂತ್ರದ ವರೆಗೂ ಹೋಗುತ್ತದೆ. ಮಧ್ವಭಾಷ್ಯದಲ್ಲಿ ಈ ಅಧಿಕರಣವನ್ನು ಸಮಾನಾಧಿಕರಣ ಎಂದು ಕರೆದಿದೆ

[1] ವಿದ್ವಾಂಸ್ತು ಜ್ಞಾನಪ್ರಕಾಶಿತಂ ಮೋಕ್ಷನಾಡೀದ್ವಾರಮಾಶ್ರಯತೇ (ಸೂ. ಭಾ ).

**ವಿ.**—ಅರ್ಚಿರಾದಿಗತಿಯು ಪ್ರಾರಂಭಿಸುವವರೆಗೂ ಎಂದರೆ ಸುಷುಮ್ನಾನಾಡಿಯನ್ನು ಪ್ರವೇಶಿಸುವವರೆಗೂ ಉಪಾಸಕನಿಗೂ ಅಜ್ಞಾನಿಗೂ ಗತಿಯು ಸಮಾನವಾಗಿರುತ್ತದೆ. ಉಪಾಸಕನು ನಾಡೀವಿಶೇಷದ ಮೂಲಕ ಹೋಗುತ್ತಾನೆಂದು ಶ್ರುತಿಯು ಹೇಳುತ್ತದೆ: 'ಹೃದಯಕ್ಕೆ ನೂರೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯನ್ನು ಭೇದಿಸಿಕೊಂಡು ಹೊರಟಿರುವುದು ಅದರ ಮೂಲಕ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ. ಎಲ್ಲ ಕಡೆಗಳಲ್ಲಿಯೂ ಹರಡಿರುವ ಇತರ ನಾಡಿಗಳು ಸಂಸಾರಕ್ಕೆ ಕಾರಣವಾಗುತ್ತವೆ.'[1] ಹೀಗೆ ಶ್ರುತಿಯು ವಿಶೇಷನಾಡಿಯ ಮೂಲಕ ಗತಿಯನ್ನು ಹೇಳಿರುವುದರಿಂದ ಉತ್ಕ್ರಾಂತಿಯನ್ನು ಒಪ್ಪಿಕೊಳ್ಳಲೇಬೇಕು. ನಾಡೀಪ್ರವೇಶದವರೆಗೆ ಇವರಿಬ್ಬರಿಗೂ ಯಾವ ವಿಶೇಷವಿಲ್ಲದಿದ್ದರೂ ಪ್ರವೇಶದ ದಶೆಯಲ್ಲಿ ವಿಶೇಷವನ್ನು ಶ್ರುತಿಯು ತಿಳಿಸುತ್ತದೆ: '(ಆಗ) ಹೃದಯದ ನಾಡೀಮುಖವು ಪ್ರಜ್ವಲಿಸುತ್ತದೆ. ಆ ಜ್ಯೋತಿಯ ಸಹಾಯದಿಂದ ಈ ಆತ್ಮನು ಕಣ್ಣಿನ ಮೂಲಕ ಅಥವಾ ತಲೆಯ ಮೂಲಕ ಅಥವಾ ಇತರ ಶರೀರಪ್ರದೇಶದ ಮೂಲಕ ನಿಷ್ಕ್ರಮಿಸುತ್ತಾನೆ.'[2] ಈ ಶ್ರುತಿಯ ಪ್ರಕಾರ ನೆತ್ತಿಯ ಮೂಲಕ ಹೋಗುವುದು ಉಪಾಸಕನ ಗತಿಯೆಂದೂ ಬೇರೆ ವಿಧದಿಂದ ಹೋಗುವುದು ಇತರರ ಗತಿಯೆಂದೂ ತಿಳಿದುಬರುತ್ತದೆ. 'ಇವನ ಹೃದಯದಲ್ಲಿರುವ ಕಾಮಗಳೆಲ್ಲ ಯಾವಾಗ ಬಿಟ್ಟುಹೋಗುವುವೊ ಆಗ ಮನುಷ್ಯನು ಅಮೃತನಾಗುತ್ತಾನೆ, ಮತ್ತು ಈ ಶರೀರದಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ'[3] (ಬೃ. ಉ. ೪ ೪. ೭) ಎಂಬಲ್ಲಿ ಹೇಳಿರುವ ಅಮೃತತ್ವವು ಶರೀರೇಂದ್ರಿಯಾದಿಗಳ ಸಂಬಂಧವನ್ನು ದಹಿಸದೇ ಇರುವ ಅಮೃತತ್ವವು; ಈ ಅವಸ್ಥೆಯಲ್ಲಿ ಹಿಂದಿನ ಮತ್ತು ಮುಂದಿನ ಪಾಪಗಳ ಅಶ್ಲೇಷವೂ ವಿನಾಶವೂ ಉಂಟಾಗುತ್ತದೆ. ಅದೇ ಶ್ರುತಿಯಲ್ಲಿ ಹೇಳಿರುವ **ಅತ್ರ ಬ್ರಹ್ಮ ಸಮಶ್ನುತೇ** ಎಂಬುದು ಉಪಾಸನವೇಳೆಯಲ್ಲಿ ಆಗುವ ಬ್ರಹ್ಮಾನುಭವವನ್ನು ಸೂಚಿಸುತ್ತದೆ.

**ದ್ವೈ.**—'ಪ್ರಕೃತಿಯು (ಎಂದರೆ ಲಕ್ಷ್ಮೀದೇವಿಯು) ಪರಮಪುರುಷನಲ್ಲಿ ಲಯವನ್ನು ಹೊಂದುವುದಿಲ್ಲ; ಏಕೆಂದರೆ ದೇಶಕಾಲವ್ಯಾಪ್ತಿಯಿಂದಲೇ ಅವಳು ಅವನೊಂದಿಗೆ ಸಮನಾಗಿರುವಳು; ಯಾವಾಗಲೂ ಸಂಸಾರೋಪಕ್ರಮವೇ ಇಲ್ಲದಿರುವುದರಿಂದ ಉಪಾಸನೆಯಿಲ್ಲದೆಯೇ ಪ್ರಕೃತಿಗೆ ಅಮೃತತ್ವವಿದೆ'[4] ಎಂಬುದು ಸೂತ್ರಾರ್ಥ.

---

[1] ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥

[2] ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ—ಚಕ್ಷುಷ್ಟೋ ವಾ, ಮೂರ್ಧ್ನೋ ವಾ, ಅನ್ಯೇಭ್ಯೋ ವಾ ಶರೀರದೇಶೇಭ್ಯಃ ।

[3] ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥

[4] ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮಾನಾ । ಸಂಸಾರಾನುಪಕ್ರಮಾತ್ ಸ್ವಮ್ ಏವಾಮೃತತ್ವಂ ತಸ್ಯಾಃ (ಮ. ಭಾ.).

## ೫. ಸಂಸಾರವ್ಯಪದೇಶಾಧಿಕರಣ

(ಸೂ ೮–೧೧)

**ತದಾಽಪೀತೇಃ ಸಂಸಾರವ್ಯಪದೇಶಾತ್ ॥ ೮ ॥**

ಆ (ಭೂತಸೂಕ್ಷ್ಮವು) ಮೋಕ್ಷವಾಗುವ ವರಗೂ (ಇರುತ್ತದೆ), ಏಕೆಂದರೆ (ಶ್ರುತಿಯು) ಸಂಸಾರಾವಸ್ಥೆಯನ್ನು ಹೇಳುತ್ತದೆ

'ತೇಜಸ್ಸು ಪರದೇವತೆಯಲ್ಲಿ ಉಪಸಂಹೃತವಾಗುತ್ತದ' (ಛಾಂ ಉ ೬. ೮ ೬) ಎಂಬಲ್ಲಿ ಪ್ರಕರಣಸಾಮರ್ಥ್ಯದಿಂದ ತೇಜಸ್ಸು ಜೀವ-ಪ್ರಾಣ-ಇಂದ್ರಿಯ-ಭೂತಾಂತರ ಗಳೊಂದಿಗೆ ಪರದೇವತೆಯಲ್ಲಿ ಲಯವಾಗುತ್ತದೆ ಎಂಬುದು ತಿಳಿದುಬರುತ್ತದೆ ಈ ಸಂಪತ್ತಿಯು ಆತ್ಯಂತಿಕವೊ ಅಥವಾ ಅಲ್ಲವೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಇದು ಆತ್ಯಂತಿಕವಾದ ಸ್ವರೂಪಲಯ, ಏಕೆಂದರೆ ಉತ್ಪನ್ನ ವಾಗುವ ವಸ್ತುಸಮೂಹಕ್ಕೆಲ್ಲ ಪರದೇವತೆಯೇ ಕಾರಣವೆಂದು ಹಿಂದೆ ಸ್ಥಾಪಿಸಲಾಗಿದೆ

**ಸಿದ್ಧಾಂತಿ**—ಶ್ರೋತ್ರವೇ ಮೊದಲಾದ ಇಂದ್ರಿಯಗಳಿಗೆ ಆಶ್ರಯವಾಗಿರುವ ತೇಜಸ್ಸೇ ಮೊದಲಾದ ಭೂತಸೂಕ್ಷ್ಮವು ಸಮ್ಯಗ್ಜ್ಞಾನನಿಮಿತ್ತದಿಂದ ಮೋಕ್ಷವಾಗುವ ವರೆಗೂ ಇರುತ್ತದೆ, ಏಕೆಂದರೆ 'ಕರ್ಮಕ್ಕನುಸಾರವಾಗಿಯೂ ಜ್ಞಾನಕ್ಕನುಸಾರವಾಗಿಯೂ ಕೆಲವರು ದೇಹಿಗಳು ಶರೀರಗ್ರಹಣಕ್ಕಾಗಿ ಯೋನಿಯನ್ನೂ, ಇನ್ನು ಕೆಲವರು ಸ್ಥಾವರ ಜನ್ಮವನ್ನೂ ಹೊಂದುತ್ತಾರೆ'[1] (ಕ. ಉ ೨, ೫ ೭) ಎಂದು ಶ್ರುತಿಯು ಹೇಳುತ್ತದೆ ಹಾಗಾಗದಿದ್ದರೆ ಪ್ರತಿಯೊಬ್ಬನೂ ಮರಣಕಾಲದಲ್ಲಿಯೇ—ಉಪಾಧಿಯು ನಾಶವಾಗು ವುದರಿಂದ—ಅತ್ಯಂತವಾಗಿ ಬ್ರಹ್ಮವನ್ನು ಪಡೆಯಬೇಕಾಗುತ್ತಿತ್ತು, ಆಗ ಶಾಸ್ತ್ರದ ವಿಧಿಯೂ ಜ್ಞಾನವೂ ವ್ಯರ್ಥವಾಗುತ್ತಿತ್ತು, ಇದಲ್ಲದೆ ಮಿಥ್ಯಾಜ್ಞಾನದಿಂದಾಗುವ ಬಂಧವು ಸಮ್ಯಗ್ಜ್ಞಾನವಿಲ್ಲದ ಸಡಿಲವಾಗಲಾರದು ಆದುದರಿಂದ ಬ್ರಹ್ಮವೇ ಆ ಭೂತಗಳ ಕಾರಣವಾಗಿದ್ದರೂ—ಸುಷುಪ್ತಿ ಪ್ರಲಯಗಳ ಹಾಗೆ—ಅವು ಬೀಜಭಾವ ದಿಂದ ಉಳಿದುಕೊಂಡು ಮರಣಕಾಲದಲ್ಲಿ ಲಯವನ್ನು ಹೊಂದುತ್ತವೆ.

**ವಿ.**—'ಅಮೃತತ್ವವು ಹಿಂದೆ ಹೇಳಿದಂತೆಯೆ, ಬ್ರಹ್ಮಪ್ರಾಪ್ತಿಯಾಗುವವರೆಗೂ ಸಂಸಾರವಿರುತ್ತದೆ' ಎಂಬುದು ಸೂತ್ರಾರ್ಥ

ಹಿಂದೆ ಹೇಳಿದ ಅಮೃತತ್ವವು (ಬೃ ಉ ೪ ೪ ೭) ದೇಹಸಂಬಂಧದ ನಾಶವನ್ನು ಸೂಚಿಸುವುದಿಲ್ಲವೆಂದು ಅವಶ್ಯವಾಗಿ ತಿಳಿದುಕೊಳ್ಳಬೇಕು, ಏಕೆಂದರೆ ಬ್ರಹ್ಮಪ್ರಾಪ್ತಿ

---

1 ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥

ಯಾಗುವವರೆಗೂ ಸಂಸಾರವಿರುವುದೆಂದು ಶ್ರುತಿಯು ಹೇಳುತ್ತದೆ: 'ಅವನಿಗೆ ಎಲ್ಲಿಯ ವರೆಗೆ ಶರೀರಸಂಬಂಧವು ಹೋಗುವುದಿಲ್ಲವೊ ಅಲ್ಲಿಯವರೆಗೇ ತಡ; ಅನಂತರ ಪರಬ್ರಹ್ಮ ನನ್ನು ಹೊಂದುತ್ತಾನೆ'[1] (ಛಾಂ. ಉ, ೬. ೧೪. ೨). ಬ್ರಹ್ಮಪ್ರಾಪ್ತಿಯು ಅರ್ಚಿರಾದಿ ಮಾರ್ಗದ ಮೂಲಕ ಒಂದು ದೇಶವಿಶೇಷವನ್ನು ಹೊಂದಿದ ಮೇಲೆ ಆಗುತ್ತದೆ.

**ದ್ವೈ.**—'ಪ್ರಕೃತಿಯನ್ನು ಸೇರುವುದೇ ಸಂಸಾರದ ಪ್ರಾರಂಭವಾಗಿರುತ್ತದೆ; (ಹರಿ ಯನ್ನು ಸೇರುವುದು ಸಂಸಾರದಿಂದ ಮೋಕ್ಷವಾಗಿರುತ್ತದೆ)'—ಎಂಬುದು ಸೂತ್ರಾರ್ಥ.

ಪ್ರಕೃತಿಗೆ ಪರಮಪುರುಷನೊಂದಿಗೆ ವ್ಯಾಪ್ತಿಯಿದ್ದರೂ ಇವರಿಬ್ಬರೂ ಸಮಾನರೆಂದು ತಿಳಿಯಕೂಡದು; **ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇ ಹ್ಯಮೃತತ್ವಮೇತಿ** ಎಂಬ ಸೌಪರ್ಣಶ್ರುತಿಯು ಪ್ರಕೃತಿಯಲ್ಲಿ ಲಯಕ್ಕೆ ಸಂಸಾರ-ಕಾರಣತ್ವವನ್ನು ಹೇಳಿರುವುದರಿಂದಲೂ ಹರಿಯಲ್ಲಿ ಲಯಕ್ಕೆ ಮುಕ್ತಿಕಾರಣತ್ವವನ್ನು ಹೇಳಿರುವುದರಿಂದಲೂ—ಇವರಿಬ್ಬರಿಗೂ ಸರ್ವಸಾಮ್ಯವಿಲ್ಲ.

## ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ॥ ೯ ॥

೯. (ಆ ತೇಜಸ್ಸು) ಪ್ರಮಾಣದಿಂದಲೂ ಸೂಕ್ಷ್ಮವು; ಏಕೆಂದರೆ ಹಾಗೆ ತಿಳಿದುಬರುತ್ತದೆ.

ಈ ಶರೀರದಿಂದ ಹೊರಗೆ ಹೋಗುತ್ತಿರುವ ಜೀವನಿಗೆ ಆಶ್ರಯವಾಗಿರುವ ಮತ್ತು ಇತರ ಭೂತಸಹಿತವಾದ ತೇಜಸ್ಸು ಸ್ವರೂಪದಿಂದಲೂ ಪ್ರಮಾಣದಿಂದಲೂ ಸೂಕ್ಷ್ಮ ವಾಗಿರಬೇಕು. ನಾಡಿಯ ಮೂಲಕ ಜೀವನ ನಿಷ್ಕ್ರಮಣವನ್ನು ತಿಳಿಸುವ ಶ್ರುತಿಗಳಿಂದ ಅದು ಸೂಕ್ಷ್ಮವೆಂದು ತಿಳಿದುಬರುತ್ತದೆ' ಅದು ಸೂಕ್ಷ್ಮವಾಗಿರುವುದರಿಂದ ಅದರ ಸಂಚಾರವು ಹೊಂದುತ್ತದೆ; ಅದು ಸ್ವಚ್ಛವಾಗಿರುವುದರಿಂದ ಅದನ್ನು ಯಾವ ಸ್ಥೂಲ ವಸ್ತುವೂ ತಡೆಯುವುದಿಲ್ಲ. ಈ ಕಾರಣಗಳಿಂದ ಅದು ಶರೀರದಿಂದ ಹೊರಟಾಗ ಪಾರ್ಶ್ವಸ್ಥ ರಿಗೆ ಕಾಣುವುದಿಲ್ಲ.

**ವಿ.**—'ಉತ್ಕ್ರಾಂತ್ಯನಂತರವೂ ಸೂಕ್ಷ್ಮಶರೀರವು ಅನುವರ್ತಿಸಿಕೊಂಡು ಬರು ತ್ತದೆ; ಇದು ಪ್ರಮಾಣದಿಂದ ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ.

ಆ ಅವಸ್ಥೆಯಲ್ಲಿ ಜ್ಞಾನಿಯ ಬಂಧವು ನಾಶವಾಗುವುದಿಲ್ಲ; ಏಕೆಂದರೆ ಸೂಕ್ಷ್ಮ ಶರೀರವು ಅನುವರ್ತಿಸಿಕೊಂಡು ಬರುತ್ತದೆ. ಇದು ಶಬ್ದಪ್ರಮಾಣದಿಂದ ತಿಳಿದುಬರು ತ್ತದೆ; ದೇವಯಾನದಲ್ಲಿ ಹೋಗುತ್ತಿರುವ ಜ್ಞಾನಿಯು ಚಂದ್ರನೊಂದಿಗೆ ಸಂವಾದಮಾಡು ತ್ತಾನೆಂದು ಶ್ರುತಿಯು (ಕೌ. ಉ. ೧. ೩)[2] ತಿಳಿಸುತ್ತದೆ.

---

[1] ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ ।

[2] ತಂ ಪ್ರತಿಬ್ರೂಯಾತ್ । ಸತ್ಯಂ ಬ್ರೂಯಾತ್ ।

**ದ್ವೈ.**—'ಪ್ರಕೃತಿಗಿಂತಲೂ ಪರಬ್ರಹ್ಮನು ಸೂಕ್ಷ್ಮನೆಂದೂ ಗುಣಪರಿಮಾಣದಿಂದ ಅಧಿಕನೆಂದೂ ಶ್ರುತಿಯಿಂದ ತಿಳಿದುಬರುತ್ತದೆ'[1] ಎಂಬುದು ಸೂತ್ರಾರ್ಥ.

'ಪ್ರಕೃತಿಯು ಎಲ್ಲ ವಸ್ತುಗಳಿಗಿಂತಲೂ ಸೂಕ್ಷ್ಮವು; ಪರಮೇಶ್ವರನು ಪ್ರಕೃತಿಗಿಂತಲೂ ಸೂಕ್ಷ್ಮನು. ಜ್ಞಾನ ಆನಂದ ಐಶ್ವರ್ಯ—ಇವೇ ಮೊದಲಾದವು ಪ್ರಕೃತಿಗಿಂತ ಪರಮೇಶ್ವರನಲ್ಲಿ ಅಧಿಕವಾಗಿವೆ' ಎಂದು ತುರು-ಶ್ರುತಿಯು ಹೇಳುತ್ತದೆ

**ನೋಪಮರ್ದೇನಾತಃ ॥ ೧೦ ॥**

೧೦ ಈ ಕಾರಣದಿಂದಲೂ (ಸ್ಥೂಲಶರೀರದ) ನಾಶದಿಂದ (ಅದರ ನಾಶವು) ಇಲ್ಲ

ಈ ಸೂಕ್ಷ್ಮಶರೀರವು ಸೂಕ್ಷ್ಮವಾಗಿರುವುದರಿಂದಲೇ ಸ್ಥೂಲಶರೀರದ ನಾಶದಿಂದ ಇದು ನಾಶವಾಗುವುದಿಲ್ಲ.

**ವಿ.—ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ। ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ** (ಬೃ. ಉ. ೪. ೪ ೭) ಎಂಬ ಶ್ರುತಿವಚನವು ಬಂಧನಾಶದಿಂದಾಗುವ ಅಮೃತತ್ವವನ್ನು ಹೇಳುವುದಿಲ್ಲ

**ದ್ವೈ.**—'ಹೀಗೆ ಸಾಮ್ಯ-ಸಾಮ್ಯಾಭಾವವನ್ನು ಸಾಧಿಸಿದ್ದರಿಂದ ವಿಶೇಷಗುಣಗಳನ್ನು ಬಿಟ್ಟು ಪರಮೇಶ್ವರನಿಂದ ಪ್ರಕೃತಿಗೆ ಸಾಮ್ಯವಿದೆ'[2] ಎಂಬುದು ಸೂತ್ರಾರ್ಥ

**ಅಸ್ಯೈವ ಚೋಪಪತ್ತೇರೇಷ ಊಷ್ಮಾ ॥ ೧೧ ॥**

೧೧. ಈ (ಸೂಕ್ಷ್ಮಶರೀರಕ್ಕೇ) ಈ ಉಷ್ಣವು (ಸೇರಿದೆ); ಏಕೆಂದರೆ ಉಪಪತ್ತಿಯಿದೆ.

ಬದುಕಿರುವ ಶರೀರದಲ್ಲಿ ಸ್ಪರ್ಶದಿಂದ ತಿಳಿದುಬರುವ ಉಷ್ಣವು ಈ ಸೂಕ್ಷ್ಮಶರೀರಕ್ಕೇ ಸೇರಿದ್ದು. ಮೃತಾವಸ್ಥೆಯಲ್ಲಿ ದೇಹವಿದ್ದರೂ, ದೇಹಗುಣಗಳಾದ ರೂಪಾದಿಗಳಿದ್ದರೂ ಉಷ್ಣವು ಕಂಡುಬರುವುದಿಲ್ಲ; ಆದರೆ ಅದು ಬದುಕಿರುವ ಅವಸ್ಥೆಯಲ್ಲಿಯೇ ಇರುತ್ತದೆ. ಆದುದರಿಂದ ಪ್ರಸಿದ್ಧಸ್ಥೂಲಶರೀರಕ್ಕಿಂತ ಭಿನ್ನವಾದ ಶರೀರವನ್ನು ಈ

---

1 ಸೂಕ್ಷ್ಮತ್ವಂ ಚಾಧಿಕಂ ಬ್ರಹ್ಮಣಃ ಪ್ರಕೃತೇಃ । ಜ್ಞಾನಾನಂದೈಶ್ವರ್ಯಾದಿಪ್ರಮಾಣಾಧಿಕ್ಯಂ ಚ (ಮ. ಭಾ.).

2 ಅತಸ್ತಸ್ಯ ಯೇ ವಿಶೇಷಗುಣಾಸ್ತೇಷಾಮನುಪಮರ್ದೇನೈವ ಸಾಮ್ಯಮ್ (ಮ. ಭಾ.).

ಉಷ್ಣವು ಆಶ್ರಯಿಸಿಕೊಂಡಿರುತ್ತದೆ. 'ಬದುಕಿರುವಾಗ ಉಷ್ಣವಾಗಿರುತ್ತಾನೆ, ಸತ್ತಾಗ ತಣ್ಣಗಿರುತ್ತಾನೆ'[1] ಎಂದು ಶ್ರುತಿಯು ಹೇಳುತ್ತದೆ.

ವಿ.—ಮರಣಕಾಲದಲ್ಲಿ ಶರೀರದ ಯಾವುದೋ ಒಂದು ಪ್ರದೇಶದಲ್ಲಿ ಉಷ್ಣವು ಕಂಡುಬರುತ್ತದೆ; ಅದು ಸ್ಥೂಲಶರೀರಕ್ಕೆ ಸೇರಿದ್ದಲ್ಲ; ಸ್ಥೂಲಶರೀರದ ಯಾವುದೋ ಒಂದು ಪ್ರದೇಶದಲ್ಲಿರುವ ಸೂಕ್ಷ್ಮಶರೀರಕ್ಕೆ ಸೇರಿದೆ.

ದೈತ.—'ಇಂಥ ಸಾಮ್ಯಕ್ಕೆ ಉಪಪತ್ತಿಯನ್ನು ಸಾಧಿಸಲು ಉಷ್ಮಾಶ್ರುತಿಯು ಬಂದಿದೆ' ಎಂಬುದು ಸೂತ್ರಾರ್ಥ.

**ದ್ವಿಧಾ ಹೀದಮವದೃಶ್ಯತೇ ಊಷ್ಮಾವದನೂಷ್ಮಾವಚ್ಚ** ಎಂಬ ಸೌಪರ್ಣಶ್ರುತಿಯು ಸ್ವಲ್ಪ ಸಾಮ್ಯವನ್ನು ಉಪಪಾದಿಸುತ್ತದೆ

[1] ಉಷ್ಣ ಏವ ಜೀವಿಷ್ಯನ್ ಶೀತೋ ಮರಿಷ್ಯನ್ ।

## ೬. ಪ್ರತಿಷೇಧಾಧಿಕರಣ

(ಸೂ ೧೨–೧೪)

**ಪ್ರತಿಷೇಧಾದಿತಿ ಚೇನ್ನ ಶಾರೀರಾತ್*  ॥ ೧೨ ॥**

೧೨  (ಶ್ರುತಿಯು) ಪ್ರತಿಷೇಧಿಸಿರುವುದರಿಂದ (ಉತ್ಕ್ರಾಂತಿಯಿಲ್ಲ) ವೆಂದರೆ ಅದು ಸರಿಯಲ್ಲ, ಏಕೆಂದರೆ ಶರೀರವುಳ್ಳ ಜೀವನಿಂದ (ಪ್ರಾಣಗಳ ಉತ್ಕ್ರಾಂತಿಯನ್ನು ನಿಷೇಧಿಸಿದೆ)

**ಅಮೃತತ್ವಂ ಚಾನುಪೋಷ್ಯ** (೭) ಎಂಬ ಸೂತ್ರದಲ್ಲಿ ಹೇಳಿರುವ ವಿಶೇಷಣದಿಂದ ಆತ್ಯಂತಿಕವಾದ ಅಮೃತತ್ವದಲ್ಲಿ ಗತಿ-ಉತ್ಕ್ರಾಂತಿಗಳು ಇಲ್ಲವೆಂದು ತಿಳಿದುಬರುತ್ತದೆ. ಆದರೂ ಯಾವುದಾದರೊಂದು ಕಾರಣದಿಂದ ಉತ್ಕ್ರಾಂತಿಯಾಗಬಹುದೆಂದು ಸೂತ್ರಕಾರರು ಆಶಂಕಿಸಿ ಅದನ್ನು ಪ್ರತಿಷೇಧಿಸುತ್ತಾರೆ 'ಈಗ ಅಕಾಮಿಯಾದವನು—ಯಾವನು ಅಕಾಮನೊ ನಿಷ್ಕಾಮನೊ ಆಪ್ತಕಾಮನೊ ಆತ್ಮಕಾಮನೊ ಅವನ ಪ್ರಾಣಗಳು **ಉತ್ಕ್ರಮಿಸುವುದಿಲ್ಲ** ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ'[1] (ಬೃ ಉ ೪ ೪ ೬) ಎಂಬ ಪರವಿದ್ಯಾವಿಷಯದಲ್ಲಿ ಉತ್ಕ್ರಾಂತಿಯನ್ನು ಪ್ರತಿಷೇಧಿಸಿರುವುದರಿಂದ ಪ್ರಾಣಗಳು ಪರಬ್ರಹ್ಮಜ್ಞಾನಿಯ ದೇಹದಿಂದ ಉತ್ಕ್ರಮಿಸುವುದಿಲ್ಲ

**ಪೂರ್ವಪಕ್ಷ**—ಉತ್ಕ್ರಾಂತಿಯಾಗುತ್ತದೆ, ಏಕೆಂದರೆ ಶಾರೀರನಾದ ಆತ್ಮನಿಂದ ಪ್ರಾಣಗಳ ಉತ್ಕ್ರಾಂತಿಯನ್ನು ನಿಷೇಧಿಸಿದೆಯೇ ಹೊರತು ಶರೀರದಿಂದ ನಿಷೇಧಿಸಿಲ್ಲ ಇದು ಶ್ರುತಿಯಿಂದ ತಿಳಿದುಬರುತ್ತದೆ ಇನ್ನೊಂದು ಶಾಖೆಯಲ್ಲಿ, ಎಂದರೆ ಬೃಹದಾರಣ್ಯಕದ ಮಾಧ್ಯಂದಿನಶಾಖೆಯಲ್ಲಿ 'ಅವನಿಂದ ಪ್ರಾಣಗಳು ಉತ್ಕ್ರಮಿಸುವುದಿಲ್ಲ'[2] ಎಂದು ಪಂಚಮೀವಿಭಕ್ತಿಯನ್ನು ಪ್ರಯೋಗಿಸಿದೆಯೇ ಹೊರತು ಷಷ್ಠೀವಿಭಕ್ತಿಯನ್ನು ಪ್ರಯೋಗಿಸಿಲ್ಲ ಸಾಮಾನ್ಯಸಂಬಂಧವನ್ನು ತಿಳಿಸುವ ಷಷ್ಠೀವಿಭಕ್ತಿಯು ಶಾಖಾಂತರದಲ್ಲಿರುವ ಪಂಚಮೀವಿಭಕ್ತಿಯಿಂದ ವಿಶೇಷಸಂಬಂಧವನ್ನು ತಿಳಿಸುತ್ತದೆ 'ಅವನಿಂದ' ಎಂಬಲ್ಲಿ ಅಭ್ಯುದಯನಿಃಶ್ರೇಯಸಗಳಿಗೆ ಅಧಿಕಾರಿಯೂ ಪ್ರಧಾನನೂ ಆದ ಜೀವನನ್ನು ಸಂಬಂಧಿಸಿಕೊಳ್ಳಬೇಕೇ ಹೊರತು ದೇಹವನ್ನಲ್ಲ ಆದುದರಿಂದ ಉತ್ಕ್ರಾಂತನಾಗಲಿರುವ ಜೀವನಿಂದ ಪ್ರಾಣಗಳು ಬಿಟ್ಟು ಹೋಗದೆ ಅವನೊಂದಿಗೇ ಇರುತ್ತವೆ—ಎಂದರ್ಥ.

---

* ಇದು ಶಂಕರಭಾಷ್ಯದಲ್ಲಿ ಪೂರ್ವಪಕ್ಷದ ಸೂತ್ರವಾಗಿದೆ ಶ್ರೀಭಾಷ್ಯದಲ್ಲಿ ಇದು ಮತ್ತು ಮುಂದಿನ ಸೂತ್ರ ಒಟ್ಟುಗೂಡಿ ಒಂದೇ ಸೂತ್ರವಾಗಿದೆ

1 ಅಥಾಕಾಮಯಮಾನಃ—ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ, ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।

2 ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ ।

**೩.—ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಸ್ಪಷ್ಟೋ ಹ್ಯೇಕೇಷಾಮ್**
॥ ೪. ೨. ೧೨ ॥

೧೨ ಪ್ರತಿಷೇಧಿಸಿರುವುದರಿಂದ ಉತ್ಕ್ರಾಂತಿಯಿಲ್ಲವೆಂದರೆ ಅದು ಸರಿಯಲ್ಲ; ಏಕೆಂದರೆ ಜೀವನಿಂದ ಉತ್ಕ್ರಾಂತಿಯನ್ನು ಪ್ರತಿಷೇಧಿಸಿದೆಯೇ ಹೊರತು ಶರೀರದಿಂದಲ್ಲ. ಇದು ಶಾಖಾಂತರದಿಂದ ತಿಳಿದುಬರುತ್ತದೆ.

ಅಕಾಮಿಯಾದವನ ಪ್ರಾಣಗಳು ಉತ್ಕ್ರಮಿಸುವುದಿಲ್ಲ; ಅವನು ಪರಬ್ರಹ್ಮನೇ ಆಗಿ ಪರಬ್ರಹ್ಮನನ್ನೇ ಹೊಂದುವನು—ಎಂದು ಶ್ರುತಿಯು (ಬೃ. ಉ. ೪. ೪. ೬) ಹೇಳುತ್ತದೆ; ಇದರಿಂದ ಮೋಕ್ಷಾರ್ಥಿಗೆ ಉತ್ಕ್ರಾಂತಿಯಿಲ್ಲ ಎಂಬುದು ತಿಳಿದುಬರುತ್ತದೆ—ಎಂಬುದು ಪೂರ್ವಪಕ್ಷ. ಸಿದ್ಧಾಂತವು ಹೀಗಿದೆ: ಜೀವಾತ್ಮನಿಂದ ಪ್ರಾಣಗಳು ಹೋಗುವುದನ್ನು ಪ್ರತಿಷೇಧಿಸಿದೆಯೇ ಹೊರತು ಶರೀರದಿಂದ ಹೋಗುವುದನ್ನಲ್ಲ.[1] ಶ್ರುತಿಯಲ್ಲಿರುವ **ತಸ್ಯ** ಎಂಬ ವಿಭಕ್ತಿಯು ಜೀವನನ್ನು ಸೂಚಿಸುತ್ತದೆಯೇ ಹೊರತು ಶರೀರವನ್ನಲ್ಲ. ಮಾಧ್ಯಂದಿನಶಾಖೆಯು ಇದನ್ನು ಇನ್ನೂ ಸ್ಪಷ್ಟಗೊಳಿಸುತ್ತದೆ. **ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ**—ಎಂಬಲ್ಲಿ **ತಸ್ಮಾತ್** ಎಂಬುದು ಹಿಂದೆ ಹೇಳಿದ ಅಕಾಮಿಯನ್ನೇ ಸೂಚಿಸುತ್ತದೆ. ವಿದುಷನಾದ ಜೀವನು ದೇವಯಾನಪಥದ ಮೂಲಕ ಪರಬ್ರಹ್ಮನನ್ನು ಹೊಂದುವವರೆಗೂ ಪ್ರಾಣಗಳು ಅವನನ್ನು ಬಿಡುವುದಿಲ್ಲ.[2]

**ದ್ವೈ.**—'ಪರಮೇಶ್ವರನೊಂದಿಗೆ ಎಲ್ಲರಿಗೂ ಸಾಮ್ಯವನ್ನು ಪ್ರತಿಷೇಧಿಸಿರುವುದರಿಂದ (ಪ್ರಕೃತಿಗೂ ಸಾಮ್ಯವಿಲ್ಲವೆಂದರೆ) ಅದು ಸರಿಯಲ್ಲ; ಏಕೆಂದರೆ ಜೀವನಿಗೆ ಮಾತ್ರ ಈಶ್ವರನೊಂದಿಗೆ ಸಾಮ್ಯವನ್ನು ಪ್ರತಿಷೇಧಿಸಿದೆ—ಎಂಬುದು ಸೂತ್ರಾರ್ಥ

**ಅಸಮೋ ವಾ ಏಷ ಪರಃ** ಎಂಬ ಚತುರ್ವೇದಶಿಖೆಯಲ್ಲಿ ಈಶ್ವರನೊಂದಿಗೆ ಪ್ರಕೃತಿಯ ಸಾಮ್ಯವನ್ನು ಪ್ರತಿಷೇಧಿಸಿರುವಂತೆ ಕಂಡುಬರುತ್ತದೆ; ಇದು ಸರಿಯಲ್ಲ; ಏಕೆಂದರೆ ಇಲ್ಲಿ ಜೀವನ ಸಾಮ್ಯವನ್ನು ಮಾತ್ರ ನಿರಾಕರಿಸಿದೆ.[3]

**ಸ್ಪಷ್ಟೋ ಹ್ಯೇಕೇಷಾಮ್ ॥ ೧೩ ॥**

೧೩. ಏಕೆಂದರೆ ಕೆಲವು (ಶಾಖೆಯವರ ಪಾಠದಲ್ಲಿ ಪ್ರತಿಷೇಧವು) ಸ್ಪಷ್ಟವಾಗಿರುತ್ತದೆ.

ಈ ಸೂತ್ರವು ಹಿಂದಿನ ಸೂತ್ರದಲ್ಲಿ ಪ್ರತಿಪಾದಿಸಿದ ಪೂರ್ವಪಕ್ಷವನ್ನು ನಿರಾಕರಿಸುತ್ತದೆ: 'ಯಾಜ್ಞವಲ್ಕ್ಯ, ಈ ಮನುಷ್ಯನು ಮೃತನಾದಾಗ, ಅವನ ಪ್ರಾಣಗಳು ಅವನನ್ನು

[1] ಶಾರೀರಾತ್ ಪ್ರತ್ಯಗಾತ್ಮನಃ ಪ್ರಾಣಾನಾಮುತ್ಕ್ರಾಂತಿರ್ಹ್ಯತ್ರ ಪ್ರತಿಷಿಧ್ಯತೇ, ನ ಶರೀರಾತ್ (ಶ್ರೀಭಾಷ್ಯ).

[2] ದೇವಯಾನೇನ ಪಥಾ ಬ್ರಹ್ಮಪ್ರಾಪ್ತೇಃ ಪ್ರಾಗ್ನೈವಾದ್ವಿದುಷೋಽಪಿ ಪ್ರಾಣಾ ನ ವಿಶ್ಲಿಷ್ಯಂತೀತ್ಯುಚ್ಯತೇ (ಶ್ರೀಭಾಷ್ಯ).

[3] ಶಾರೀರಾದ್ಧಿ ಸಾಮ್ಯಂ ಪ್ರತಿಷಿಧ್ಯತೇ (ಮ. ಭಾ.).

ಬಿಡುತ್ತವೆಯೊ ಅಥವಾ ಇಲ್ಲವೊ?' (ಬೃ. ಉ. ೩. ೨. ೧೧) ಎಂಬ ಆರ್ತಭಾಗನ ಪ್ರಶ್ನೆಗೆ ಯಾಜ್ಞವಲ್ಕ್ಯನು 'ಇಲ್ಲ, ಅವು ಅವನಲ್ಲಿಯೇ ಲೀನವಾಗುತ್ತವೆ. ಶರೀರವು ಊದಿಕೊಳ್ಳುತ್ತದೆ, ಉಬ್ಬಿಕೊಳ್ಳುತ್ತದೆ; ಆ ಅವಸ್ಥೆಯಲ್ಲಿ ಅದು ಮೃತವಾಗಿ ಮಲಗಿರುತ್ತದೆ' ಎಂದು ಉತ್ತರಿಸುತ್ತಾನೆ. ಇಲ್ಲಿ ಪ್ರಾಣಗಳಿಗೆ ಲಯವನ್ನು ಹೇಳಿ, ಅದನ್ನು ಸಿದ್ಧಗೊಳಿಸಲು ಇಲ್ಲಿ **ಸಃ** ಎಂದು ಪರಾಮರ್ಶಿಸಲ್ಪಟ್ಟಿರುವ ದೇಹಕ್ಕೆ ಉಬ್ಬಿಕೊಳ್ಳುವುದೇ ಮೊದಲಾದುವುಗಳನ್ನು ಹೇಳಿದೆ. ಈ ಶ್ರುತಿಯ ಪ್ರಕಾರ ಶರೀರದಿಂದ ಪ್ರಾಣಗಳು ಉತ್ಕ್ರಮಿಸುವುದಿಲ್ಲ ಎಂಬುದು ತಿಳಿದುಬರುತ್ತದೆ. **ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ** ಎಂಬ ಮಾಧ್ಯಂದಿನ ಪಾಠದಲ್ಲಿಯೂ **ತಸ್ಮಾತ್**-ಶಬ್ದವು ಅಭೇದೋಪಚಾರದಿಂದ ದೇಹವನ್ನೇ ಸೂಚಿಸುತ್ತದೆ. ಇನ್ನು ಷಷ್ಠೀವಿಭಕ್ತಿಯಿರುವ ಕಾಣ್ವರ ಪಾಠದಲ್ಲಿಯೂ ಜ್ಞಾನಿಯ ಉತ್ಕ್ರಾಂತಿಯನ್ನು ಪ್ರತಿಷೇಧಿಸಿದೆಯೆಂದು ತಿಳಿದುಕೊಳ್ಳಬೇಕು; ಏಕೆಂದರೆ ದೇಹದಿಂದ ಉತ್ಕ್ರಾಂತಿಯು ಪ್ರಾಪ್ತವಾಗಿರುವುದರಿಂದ ಅದನ್ನು ಪ್ರತಿಷೇಧಿಸುವುದೇ ಶ್ರುತಿಯ ತಾತ್ಪರ್ಯವಾಗಿರುತ್ತದೆ. ಮತ್ತೆ ಅಜ್ಞಾನಿಗಳಿಗೆ ಉತ್ಕ್ರಾಂತಿಯನ್ನು ಹೇಳಿದ ಮೇಲೆ ಜ್ಞಾನಿಯ ಪ್ರಕರಣವನ್ನು ಬೇರೆಯಾಗಿ ಪ್ರಾರಂಭಿಸಿ (ಬೃ. ಉ. ೪. ೪. ೬) ಅವನ ವಿಷಯದಲ್ಲಿಯೂ ಉತ್ಕ್ರಾಂತಿಯನ್ನು ಹೇಳಿದರೆ ಅದು ಸಮಂಜಸವಾಗಲಾರದು. ಸರ್ವಗತನೂ ಬ್ರಹ್ಮಾತ್ಮಭೂತನೂ ಕಾಮ-ಕರ್ಮಗಳನ್ನು ನಾಶಗೊಳಿಸಿಕೊಂಡಿರುವವನೂ ಆದ ಬ್ರಹ್ಮವಿದನಿಗೆ ಉತ್ಕ್ರಾಂತಿಯಾಗಲಿ ಗತಿಯಾಗಲಿ ಹೊಂದುವುದಿಲ್ಲ.[1] 'ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ'[2] (ಬೃ. ಉ. ೪. ೪. ೬) ಎಂಬ ಈ ಜಾತಿಯ ಶ್ರುತಿಗಳೂ ಗತಿ-ಉತ್ಕ್ರಾಂತಿಗಳ ಅಭಾವವನ್ನು ಸೂಚಿಸುತ್ತವೆ.

ದ್ವೈತ.—'**ಪ್ರಕೃತಿರ್ವಾವ ಸಮಾಸನ್ಯೈಷಾ** ಎಂಬ ಮಾಧ್ಯಂದಿನಪಾಠದಲ್ಲಿ ಪ್ರಕೃತಿಗೆ ಸಮಾಸಮತ್ವವು ಸ್ಪಷ್ಟವಾಗಿದೆ' ಎಂಬುದು ಸೂತ್ರಾರ್ಥ

**ಸ್ಮರ್ಯತೇ ಚ ॥ ೧೪ ॥**

೧೪. ಮತ್ತು ಸ್ಮೃತಿಯೂ (ಇದನ್ನೇ) ಹೇಳುತ್ತದೆ.

'ಸರ್ವ ಪ್ರಾಣಿಗಳಿಗೂ ಆತ್ಮನಾಗಿರುವ ಮತ್ತು ಸರಿಯಾಗಿ ಪ್ರಾಣಿಗಳನ್ನೆಲ್ಲ ನೋಡುತ್ತಿರುವ ಜ್ಞಾನಿಯ ಮಾರ್ಗದಲ್ಲಿ ಪದವಿಲ್ಲದ ಪದವನ್ನು ಹುಡುಕುತ್ತ ದೇವತೆಗಳೂ ಮುಗ್ಧರಾಗುವರು'[3] ಎಂದು ಮಹಾಭಾರತವು ಜ್ಞಾನಿಗೆ ಗತಿ-ಉತ್ಕ್ರಾಂತಿಗಳಿಲ್ಲವೆಂದು ಹೇಳುತ್ತದೆ.

---

[1] ನ ಚ ಬ್ರಹ್ಮವಿದಃ ಸರ್ವಗತಬ್ರಹ್ಮಾತ್ಮಭೂತಸ್ಯ ಪ್ರಕ್ಷೀಣಕಾಮಕರ್ಮಣ ಉತ್ಕ್ರಾಂತಿರ್ಗತಿರ್ವೋಪಪದ್ಯತೇ (ಸೂ. ಭಾ.).

[2] ಅತ್ರ ಬ್ರಹ್ಮ ಸಮಶ್ನುತೇ ।

[3] ಸರ್ವಭೂತಾತ್ಮಭೂತಸ್ಯ ಸಮ್ಯಗ್‌ಭೂತಾನಿ ಪಶ್ಯತಃ ।
ದೇವಾ ಅಪಿ ಮಾರ್ಗೇ ಮುಹ್ಯಂತ್ಯಪದಸ್ಯ ಪದೈಷಿಣಃ ॥

**ವಿ.**—ಜ್ಞಾನಿಯಾದವನು ನೆತ್ತಿಯ ನಾಡಿಯ ಮೂಲಕ ಉತ್ಕ್ರಮಿಸುತ್ತಾನೆಂದು ಸ್ಮೃತಿಯು (ಯಾ. ಸ್ಮೃ. ೩. ೩೭) ಹೇಳುತ್ತದೆ: 'ಅವುಗಳಲ್ಲಿ ಮೇಲಿರುವ ಒಂದು ನಾಡಿಯ ಮೂಲಕ ಸೂರ್ಯನನ್ನು ಭೇದಿಸಿಕೊಂಡು ಬ್ರಹ್ಮಲೋಕವನ್ನು ಅತಿಕ್ರಮಿಸಿ, ಅದರ ಮೂಲಕ ಪರಾಗತಿಯನ್ನು ಹೊಂದುತ್ತಾನೆ.'[1]

**ದ್ವೈ.**—'ಮತ್ಸ್ಯ-ಕೂರ್ಮ-ವರಾಹಾದಿ ಅವತಾರಗಳು ಸಮವಾಗಿರುತ್ತವೆ; ಏಕೆಂದರೆ ಅವು ವಿಷ್ಣುವಿಗಿಂತ ಬೇರೆಯಲ್ಲ; ಚತುರ್ಮುಖಬ್ರಹ್ಮಾದಿಗಳು ಅಸಮರು ಆದರೆ ಪ್ರಕೃತಿಯು ಸಮಾಸಮಳಾಗಿರುತ್ತಾನೆ'[2] ಎಂದು ವರಾಹಪುರಾಣದಲ್ಲಿ ಹೇಳಿದೆ.

---

1 ಊರ್ಧ್ವಮೇಕಃ ಸ್ಥಿತಸ್ತೇಷಾಂ ಯೋ ಭಿತ್ತ್ವಾ ಸೂರ್ಯಮಂಡಲಮ್ ।
ಬ್ರಹ್ಮಲೋಕಮತಿಕ್ರಮ್ಯ ತೇನ ಯಾತಿ ಪರಾಂ ಗತಿಮ್ ॥

2 ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ ।
ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮೇತಿ ಚ ವಾರಾಹೇ (ಮ. ಭಾ.).

## ೭. ವಾಗಾದಿಲಯಾಧಿಕರಣ*

**ತಾನಿ ಪರೇ ತಥಾಹ್ಯಾಹ ॥ ೧೫ ॥**

೧೫ ಅವು ಪರಮಾತ್ಮನಲ್ಲಿ (ಲಯವಾಗುತ್ತವೆ), ಏಕೆಂದರೆ ಹಾಗೆಂದು (ಶ್ರುತಿಯು) ಹೇಳುತ್ತದೆ.

ಪರಬ್ರಹ್ಮಜ್ಞಾನಿಯ ಪ್ರಾಣಶಬ್ದವಾಚ್ಯವಾದ ಇಂದ್ರಿಯಗಳೂ ಭೂತಗಳೂ ಪರಮಾತ್ಮನಲ್ಲಿ ಲಯವಾಗುತ್ತವೆ, ಏಕೆಂದರೆ ಶ್ರುತಿಯು ಹಾಗೆಂದು ಹೇಳುತ್ತದೆ 'ಹಾಗೆಯೇ ಈ ಸರ್ವಸಾಕ್ಷಿಯ ಪುರುಷನನ್ನೇ ಹೊಂದಬೇಕಾಗಿರುವ ಈ ಹದಿನಾರು ಕಲೆಗಳು ಪುರುಷನನ್ನು ಹೊಂದಿ ವಿಲೀನವಾಗುವುವು'[1] (ಪ್ರ ಉ ೬ ೫) ಕಲೆಗಳು ತಮ್ಮ ಕಾರಣಗಳನ್ನು ಸೇರುತ್ತವೆಂದು ಇನ್ನೊಂದು ಶ್ರುತಿಯು (ಮುಂ ಉ ३ ೨ ೭) ಹೇಳಿದ್ದರೂ ಅದು ವ್ಯಾವಹಾರಿಕದೃಷ್ಟಿಯಿಂದ ಹೇಳಿದ್ದೆಂದು ತಿಳಿಯಬೇಕು ಮೊದಲಿನ ಪ್ರಶ್ನ-ಶ್ರುತಿಯು ವಿದ್ವಾಂಸನ ಜ್ಞಾನದ ಅಪೇಕ್ಷೆಯಿಂದ ಹೇಳಿದ್ದು ಆ ಶ್ರುತಿಯ ಪ್ರಕಾರ ಪರಬ್ರಹ್ಮಜ್ಞಾನಿಯ ಕಲಾಸಮೂಹವೆಲ್ಲ ಬ್ರಹ್ಮದಲ್ಲಿಯೇ ಲಯವಾಗುತ್ತದೆ ಆದುದರಿಂದ ಯಾವ ವಿರೋಧವೂ ಇಲ್ಲ

ವಿ.—ಸೂಕ್ಷ್ಮಭೂತಗಳು ಪರಮಾತ್ಮನನ್ನೇ ಸೇರುತ್ತವೆ; ಏಕೆಂದರೆ ಶ್ರುತಿಯು 'ತೇಜಸ್ಸು ಪರದೇವತೆಯನ್ನು ಸೇರುತ್ತದೆ' (ಛಾಂ ಉ ೬ ೮ ೬) ಎಂದು ಹೇಳುತ್ತದೆ ಶ್ರುತಿಗೆ ಅನುಗುಣವಾಗಿಯೇ ಈ ಸೂಕ್ಷ್ಮಭೂತಗಳ ವ್ಯಾಪಾರವನ್ನು ತಿಳಿದುಕೊಳ್ಳಬೇಕು ಸುಷುಪ್ತಿ-ಪ್ರಲಯಗಳಲ್ಲಿ ಪರಮಾತ್ಮ-ಸಂಪತ್ತಿಯಿಂದ ಸುಖದುಃಖಗಳ ಆಯಾಸವು ಪರಿಹಾರವಾದಂತೆ ಇಲ್ಲಿಯೂ ತಿಳಿದುಕೊಳ್ಳಬೇಕು

ದ್ವೈ.—'ಎಲ್ಲ ದೇವತೆಗಳೂ ಪ್ರಾಣದ್ವಾರಾ ಪರಮಾತ್ಮನನ್ನು ಪ್ರವೇಶಿಸುತ್ತಾರೆ, ಹಾಗೆಂದು ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ

**ಪ್ರಾಣದ್ವಾರೇಣ ಸರ್ವಾಣಿ ದೈವಾನಿ ಪರಮಾತ್ಮನಿ ಲೀಯಂತೇ** ಎಂದು ಕೌಷಾರವ-ಶ್ರುತಿಯು ಹೇಳುತ್ತದೆ

---

* ಇದು ಶ್ರೀಭಾಷ್ಯದಲ್ಲಿ ಪರಸಂಪತ್ತ್ಯಧಿಕರಣ ಎಂದೂ ಮಧ್ವಭಾಷ್ಯದಲ್ಲಿ ಪರಲಯಾಧಿಕರಣ ಎಂದೂ ಹೇಳಲ್ಪಟ್ಟಿದೆ

1 ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ ।

## ೮. ಅವಿಭಾಗಾಧಿಕರಣ

**ಅವಿಭಾಗೋ ವಚನಾತ್ ॥ ೧೬ ॥**

೧೬ (ಲಯವಾದ ಕಲೆಗಳು ಬ್ರಹ್ಮದಿಂದ) ಅವಿಭಾಗವಾಗುತ್ತವೆ, ಏಕೆಂದರೆ ಹಾಗೆ ವಚನವಿದೆ

ಜ್ಞಾನಿಗಾಗುವ ಈ ಕಲಾಪ್ರಲಯವು ಸಾವಶೇಷವಾಗಿ ಆಗುತ್ತದೆಯೊ ಅಥವಾ ಅವಶೇಷವಿಲ್ಲದೆ ಆಗುತ್ತದೆಯೊ ?—ಎಂಬುದು ಸಂಶಯ 'ಅವಿಭಾಗವಾಗಿಯೇ ಆಗುತ್ತದೆ' ಎಂಬುದು ಸಿದ್ಧಾಂತ , ಏಕೆಂದರೆ ಶ್ರುತಿಯು ಕಲಾಪ್ರಲಯವನ್ನು ಹೇಳಿದ ಮೇಲೆ 'ಇವುಗಳ ನಾಮರೂಪಗಳು ನಾಶವಾಗುವುವು ಮತ್ತು (ಇದೆಲ್ಲವೂ) ಪುರುಷನೆಂದೇ ಹೇಳಲ್ಪಡುತ್ತದೆ ಆ ಇವನು ಕಲಾಶೂನ್ಯನೂ ಅಮೃತನೂ ಆಗುತ್ತಾನೆ'[1] (ಪ್ರ ಉ ೬ ೫) ಎಂದು ಹೇಳುತ್ತದೆ ಮತ್ತೆ ಅವಿದ್ಯೆಯಿಂದಾಗಿರುವ ಕಲೆಗಳು ವಿದ್ಯೆಯಿಂದಾಗಿರುವ ಪ್ರಲಯದಲ್ಲಿ ಸಾವಶೇಷವಾಗಿರುವುದು ಹೊಂದುವುದಿಲ್ಲ

**ವಿ.**—ಪರಮಾತ್ಮನಲ್ಲಿ ಈ ಸೂಕ್ಷ್ಮಭೂತಗಳ ಸಂಪತ್ತಿಯಾದಾಗ ಅವು ಪೃಥಕ್-ಭಾವವಿಲ್ಲದೆ ಒಂದಾಗುತ್ತವೆ, ಎಂದರೆ ಇವು ಪರಬ್ರಹ್ಮನಿಂದ ಬೇರೆಯೆಂದು ವ್ಯವಹರಿಸಲು ಸಾಧ್ಯವಾಗುವುದಿಲ್ಲ ಇದನ್ನು ಶ್ರುತಿಯೇ ಹೇಳುತ್ತದೆ. **ತೇಜಃ ಪರಸ್ಯಾಂ ದೇವತಾಯಾಂ** ಎಂಬುದು ಹಿಂದಿನ **ವಾಙ್ಮನಸಿ ಸಂಪದ್ಯತೇ** ಎಂಬುದರೊಂದಿಗೆ ಸಂಬಂಧಿಸಿರುವುದರಿಂದ **ಸಂಪದ್ಯತೇ** ಎಂಬ ಕ್ರಿಯಾಪದವನ್ನು ಮುಂದೆ ಎಲ್ಲ ಕಡೆಯಲ್ಲಿಯೂ ಅನುಷಂಗಮಾಡಿಕೊಳ್ಳಬೇಕು ಈ ಹಿಂದಿನ ವಾಕ್ಯವು ಒಂದು ಸಂಸರ್ಗವಿಶೇಷವನ್ನು ಎಂದರೆ ಅವಿಭಾಗವನ್ನು ತಿಳಿಸುತ್ತದೆ ಉತ್ಕ್ರಾಂತಿವೇಳೆಯಲ್ಲಿ ಸೂಕ್ಷ್ಮಭೂತಗಳು ತಮ್ಮ ಕಾರಣಾವಸ್ಥೆಯನ್ನು ಹೊಂದುವುದಕ್ಕಾಗಲಿ, ಪುನಃ ಸೃಷ್ಟಿಗೆ ಹಿಂತಿರುಗುವುದಕ್ಕಾಗಲಿ ಯಾವ ಕಾರಣವೂ ಇಲ್ಲ

ದ್ವೈ.—'ಮುಕ್ತರಿಗೆ (ಈಶ್ವರೇಚ್ಛಾದಿಗಳಿಂದ) **ವಿ**ಭಾಗವಿಲ್ಲ , ಹಾಗೆಂದು ಶ್ರುತಿಯು ಹೇಳುತ್ತದೆ' ಎಂಬುದು ಸೂತ್ರಾರ್ಥ

**ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ** ಎಂಬ ಗೌಪವನ-ಶ್ರುತಿಯ ಪ್ರಕಾರ ಮುಕ್ತರ ಇಚ್ಛೆಯು ಸತ್ಯವಾಗಿರುತ್ತದೆ , ಏಕೆಂದರೆ ಅದು ಪರಮಾತ್ಮನ ಇಚ್ಛೆಗಿಂತ ಬೇರೆಯಾಗಿರುವುದಿಲ್ಲ

---

[1] **ಭಿದ್ಯೇತೇ ಚಾಸಾಂ ನಾಮರೂಪೇ, ಪುರುಷ ಇತ್ಯೇವಂ ಪ್ರೋಚ್ಯತೇ ; ಸ ಏಷೋಽಕಲೋಽಮೃತೋ ಭವತಿ ।**

## ೯. ತದೋಕೋಽಧಿಕರಣ*

ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ॥ ೧೭ ॥

೧೭ ಅದರ ಸ್ಥಾನದ ಅಗ್ರವು ಜ್ವಲಿಸುತ್ತದೆ, ಅದರಿಂದ ದ್ವಾರವು ಪ್ರಕಾಶಿತವಾಗಿ ವಿದ್ಯೆಯ ಸಾಮರ್ಥ್ಯದಿಂದಲೂ, ಅದಕ್ಕೆ ಶೇಷವಾಗಿರುವ ಗತಿಯ ಸ್ಮೃತಿಯೋಗದಿಂದಲೂ ಹೃದಯಾನುಗೃಹೀತನಾಗಿ ನೂರಕ್ಕಿಂತ ಹೆಚ್ಚಾದ (ನಾಡಿಯ ಮೂಲಕ ಉತ್ಕ್ರಮಿಸುತ್ತಾನೆ)

ಪ್ರಾಸಂಗಿಕವಾದ ಪರಾವಿದ್ಯಾವಿಷಯದ ಆಲೋಚನೆಯು ಮುಗಿಯಿತು ಈಗ ಅಪರವಿದ್ಯಾವಿಷಯದ ಚಿಂತೆಯು ಮುಂದುವರಿಯುತ್ತದೆ ಮಾರ್ಗವು ಪ್ರಾರಂಭವಾಗುವವರೆಗೆ ಉಪಾಸಕನಿಗೂ ಅಜ್ಞಾನಿಗೂ ಉತ್ಕ್ರಾಂತಿಯು ಸಮಾನವೆಂದು ಹಿಂದೆ (೪ ೨ ೭) ಹೇಳಿದ್ದಾಯಿತು ಈಗ ಸೂತ್ರವು ಆ ಮಾರ್ಗದಲ್ಲಿ ಜೀವಾತ್ಮನ ಪ್ರವೇಶವನ್ನು ತಿಳಿಸುತ್ತದೆ 'ಈ ಆತ್ಮನು ತೇಜೋಮಾತ್ರೆಗಳನ್ನು ಸಂಪೂರ್ಣವಾಗಿ ತೆಗೆದುಕೊಂಡವನಾಗಿ ಹೃದಯವನ್ನೇ ಬಂದು ಸೇರುತ್ತಾನೆ'[1] (ಬೃ ಉ ೪ ೪ ೧) ಎಂಬ ಶ್ರುತಿಯ ಪ್ರಕಾರ ಆ ವಾಗಾದಿಸಮೂಹವನ್ನು ಉಪಸಂಹರಿಸಿಕೊಂಡು ಉತ್ಕ್ರಮಿಸಲಿರುವ ಜೀವಾತ್ಮನಿಗೆ ಹೃದಯವು ಓಕವು ಎಂದರೆ ಸ್ಥಾನವು ಆಗಿರುತ್ತದೆ ಹೃದಯಾಗ್ರದ ಜ್ವಲನಪೂರ್ವಕವಾಗಿ ಚಕ್ಷುರಾದಿಸ್ಥಾನಗಳಿಂದ ಜೀವಾತ್ಮನು ಉತ್ಕ್ರಮಿಸುವನೆಂದು ಶ್ರುತಿಯು ಹೇಳುತ್ತದೆ '(ಆಗ) ಹೃದಯದ ನಾಡೀಮುಖವು ಪ್ರಜ್ವಲಿಸುತ್ತದೆ ಆ ಜ್ಯೋತಿಯ ಸಹಾಯದಿಂದ ಈ ಆತ್ಮನು ಕಣ್ಣಿನ ಮೂಲಕ ಅಥವಾ ತಲೆಯ ಮೂಲಕ ಅಥವಾ (ಯಾವುದಾದರೂ) ಶರೀರದೇಶದ ಮೂಲಕ ನಿಷ್ಕ್ರಮಿಸುತ್ತಾನೆ'[2] (ಬೃ ಉ ೪ ೪ ೨) ಈ ಉತ್ಕ್ರಾಂತಿಯು ಯಾವ ನಿಯಮವೂ ಇಲ್ಲದೆ ಜ್ಞಾನಿ-ಅಜ್ಞಾನಿಗಳಿಗೆ ಸಮಾನವಾಗಿರುತ್ತದೆಯೊ ? ಅಥವಾ ಜ್ಞಾನಿಗೆ ಯಾವುದಾದರೊಂದು ವಿಶೇಷ ನಿಯಮ-

---

* ಮಧ್ವಭಾಷ್ಯದ ಪ್ರಕಾರ ಹೃದಯಾಗ್ರಜ್ವಲನಾಧಿಕರಣ ಎನಿಸಿದ ಈ ಅಧಿಕರಣವು ಅತಶ್ಚಾಯನೇಽಪಿ ದಕ್ಷಿಣೇ ಎಂಬ ಸೂತ್ರದ ವರೆಗೂ ಹೋಗುತ್ತದೆ

1 ಸ ಏತಾಸ್ತೇಜೋಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ ।

2 ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ, ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ—ಚಕ್ಷುಷ್ಟೋ ವಾ ಮೂರ್ಧ್ನೋ ವಾ ಅನ್ಯೇಭ್ಯೋ ವಾ ಶರೀರದೇಶೇಭ್ಯಃ ।

ವಿದೆಯೊ ?—ಎಂಬುದು ಸಂಶಯ. ಶ್ರುತಿಯು ಸಮಾನವಾಗಿರುವುದರಿಂದ ಯಾವ ನಿಯಮವೂ ಇಲ್ಲ—ಎಂಬುದು ಪೂರ್ವಪಕ್ಷ.

ಸಿದ್ಧಾಂತವು ಹೀಗಿದೆ : ಹೃದಯಾಗ್ರದ ಪ್ರದ್ಯೋತನ, ಅದರಿಂದ ದ್ವಾರದ ಪ್ರಕಾಶತ್ವ—ಇವು ಜ್ಞಾನಿ-ಅಜ್ಞಾನಿಗಳಿಗೆ ಸಮವಾಗಿದ್ದರೂ ಜ್ಞಾನಿಯು ಮೂರ್ಧಸ್ಥಾನದಿಂದಲೇ ಹೋಗುತ್ತಾನೆ, ಇತರರು ಮಿಕ್ಕ ಸ್ಥಾನಗಳಿಂದ ಹೋಗುತ್ತಾರೆ. ಏಕೆಂದರೆ ವಿದ್ಯಾಸಾಮರ್ಥ್ಯವಿದೆ : ಜ್ಞಾನಿಯು ಕೂಡ ಇತರರಂತೆ ಯಾವುದೋ ಒಂದು ದೇಹಪ್ರದೇಶದಿಂದ ಉತ್ಕ್ರಮಿಸಿದರೆ ಅವನು ಉತ್ಕೃಷ್ಟಲೋಕವನ್ನು ಪಡೆಯುವುದಿಲ್ಲ ; ಆಗ ವಿದ್ಯೆಯು ವ್ಯರ್ಥವಾಗುವುದು. ಮತ್ತೆ ವಿದ್ಯಾಶೇಷಭೂತವಾದ ಮತ್ತು ಮೂರ್ಧನ್ಯನಾಡಿಗೆ ಸಂಬದ್ಧವಾಗಿರುವ ಗತಿಯನ್ನು ಅನುಸ್ಮರಣೆಮಾಡಬೇಕೆಂದು ವಿದ್ಯಾವಿಶೇಷಗಳಲ್ಲಿ ವಿಹಿತವಾಗಿದೆ. ಅದನ್ನು ಅಭ್ಯಾಸಮಾಡುತ್ತಿರುವವನು ಆ ನಾಡೀದ್ವಾರದಿಂದಲೇ ಹೋಗುತ್ತಾನೆಂಬುದು ಯುಕ್ತವಾಗಿದೆ. ಆದುದರಿಂದ ಜ್ಞಾನಿಯು ಹೃದಯಾಲಯದಲ್ಲಿರುವ ಬ್ರಹ್ಮವನ್ನು ಉಪಾಸನೆಮಾಡಿರುವುದರಿಂದ ತದನುಗ್ರಹೀತನಾಗಿ, ತದ್ಭಾವವನ್ನೇ ಪಡೆದು ಮೂರ್ಧನ್ಯವಾದ ನೂರೊಂದನೇ ನಾಡಿಯಿಂದ ಹೊರಟುಹೋಗುತ್ತಾನೆ ; ಉಳಿದವರು ಬೇರೆ ನಾಡಿಗಳಿಂದ ಹೋಗುತ್ತಾರೆ. ಆದುದರಿಂದಲೇ ಹಾರ್ದವಿದ್ಯಾಪ್ರಕರಣದಲ್ಲಿ ಹೀಗೆ ಹೇಳಿದೆ . 'ಹೃದಯಕ್ಕೆ ನೂರೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ನೆತ್ತಿಯನ್ನು ಭೇದಿಸಿಕೊಂಡು ಹೊರಟಿರುವುದು. ಅದರ ಮೂಲಕ- ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ. ಎಲ್ಲ ಕಡೆಯಲ್ಲಿಯೂ ಹರಡಿರುವ ಇತರ ನಾಡಿಗಳು ಸಂಸಾರಕ್ಕ ಕಾರಣವಾಗುತ್ತವೆ'[1] (ಛಾಂ. ಉ. ೮. ೬. ೬).

ವಿ.—'ಬ್ರಹ್ಮವಿದ್ಯಾಸಾಮರ್ಥ್ಯದಿಂದಲೂ ಆ ವಿದ್ಯೆಗೆ ಅಂಗವಾದ ಅರ್ಚಿರಾದಿಗತಿ-ಚಿಂತನೆಯಿಂದಲೂ ಹೃದಯಸ್ಥಿತನಾದ ಪರಮಾತ್ಮನಿಂದ ಉಪಾಸಕನು ಅನುಗ್ರಹಿಸಲ್ಪಡುತ್ತಾನೆ ; ಅನಂತರ ಅವನ ವಾಸಸ್ಥಾನವಾದ ಹೃದಯದ ಅಗ್ರಭಾಗವು ಪ್ರಕಾಶಿಸುವುದು ; ಅದರಿಂದ ಪ್ರಕಾಶಿಸಲ್ಪಟ್ಟ ದ್ವಾರವುಳ್ಳವನಾಗಿ ನೂರೊಂದನೆಯ ನಾಡಿಯಿಂದ ಅವನು ನಿಷ್ಕ್ರಮಿಸುತ್ತಾನೆ' ಎಂಬುದು ಸೂತ್ರಾರ್ಥ.

ಜ್ಞಾನಿಯು ನೂರೊಂದನೆಯ ನಾಡಿಯ ಮೂಲಕವೇ ನಿಷ್ಕ್ರಮಿಸುತ್ತಾನೆ ; ನಿಷ್ಕ್ರಮಿಸುತ್ತಿರುವ ಆತ್ಮನಿಗೆ ನಾಡಿಯನ್ನು ಕಂಡುಹಿಡಿಯುವುದು ಕಷ್ಟವೆಂಬ ಪಕ್ಷವು ಸರಿಯಲ್ಲ ; ಏಕೆಂದರೆ ಪರಮಪುರುಷನ ಉಪಾಸನೆಯ ಸಾಮರ್ಥ್ಯದಿಂದಲೂ ಆ ಉಪಾಸನೆಯ ಅಂಗವಾದ ಅರ್ಚಿರಾದಿಗತಿಯ ಧ್ಯಾನದಿಂದಲೂ ಉಪಾಸಕನು ಹೃದಯದಲ್ಲಿರುವ ಪರಮಾತ್ಮನಿಂದ ಅನುಗ್ರಹಿಸಲ್ಪಡುತ್ತಾನೆ ; ಇದರಿಂದ ಇವನ ಸ್ಥಾನವಾದ ಹೃದಯದ ಅಗ್ರಭಾಗವು ಪ್ರಕಾಶಿತವಾಗುತ್ತದೆ ; ಪರಮಪುರುಷನ ಅನುಗ್ರಹದಿಂದ ಪ್ರಕಾಶಿತದ್ವಾರ

---

1 ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥

ವುಳ್ಳ ಜೀವಾತ್ಮನು ಆ ನಾಡಿಯನ್ನು ಕಂಡುಹಿಡಿದು ಅದರ ಮೂಲಕವೇ ಹೊರಟು ಹೋಗುತ್ತಾನೆ.

ದ್ವೈ.—'ಉತ್ಕ್ರಮಣಕಾಲದಲ್ಲಿ ಪರಮಾತ್ಮನ ವಾಸಸ್ಥಾನವಾಗಿರುವ ಜೀವನ ಹೃದಯದ ಅಗ್ರಭಾಗದಲ್ಲಿ ಪ್ರಭೆಯು ಬೆಳಗುತ್ತದೆ; ಆ ಪ್ರಕಾಶದಿಂದ ಪ್ರಕಾಶಿಸಲ್ಪಟ್ಟ ನಾಡೀದ್ವಾರವುಳ್ಳವನಾಗಿ ಜ್ಞಾನಿಯು ತನ್ನ ವಿದ್ಯೆಯ ಸಾಮರ್ಥ್ಯದಿಂದಲೂ, ಆ ವಿದ್ಯೆಯ ಅಂಗಭೂತವಾದ ಗತಿಯ ಧ್ಯಾನದಿಂದಲೂ ಹೃದಯಸ್ಥನಾದ ಪರಮಾತ್ಮನ ಅನುಗ್ರಹ ದಿಂದಲೂ ನೂರೊಂದನೆಯ ನಾಡಿಯ ಮೂಲಕ ನಿಷ್ಕ್ರಮಿಸುತ್ತಾನೆ' ಎಂಬುದು ಸೂತ್ರಾರ್ಥ.

'ಮರಣಕಾಲದಲ್ಲಿ ಯಾವ ಯಾವ ಭಾವವನ್ನಾದರೂ ಸ್ಮರಿಸುತ್ತ (ಸಾಧಕನು) ದೇಹವನ್ನು ಬಿಡುವನೊ ಯಾವಾಗಲೂ ಆ ಭಾವವನ್ನೇ ಭಾವಿಸುತ್ತಿರುವ ಅವನು ಅದದನ್ನೇ ಹೊಂದುವನು'[1] (ಗೀತಾ ೮. ೬) ಎಂಬ ಸ್ಮೃತಿಯು ಬ್ರಹ್ಮವಿದ್ಯೆಯಿಂದಾಗುವ ಗತಿಯ ಸ್ಮೃತಿಯನ್ನು ತಿಳಿಸುತ್ತದೆ. 'ಆಚಾರ್ಯನು ನಿನಗೆ ಗತಿಯನ್ನು ಉಪದೇಶಿ-ಸುವನು' (ಛಾಂ. ಉ ೧. ೧೫. ೧) ಎಂಬುದೂ ಸ್ಮೃತಿಯ ಲಿಂಗವು.[2]

---

[1] ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥

[2] ಆಚಾರ್ಯಸ್ತು ತೇ ಗತಿಂ ವಕ್ತೇತಿ ಹಿ ಲಿಂಗಮ್ (ಮ. ಭಾ.).

# ೧೦. ರಶ್ಮ್ಯಧಿಕರಣ*

(ಸೂ ೧೮–೧೯)

## ರಶ್ಮ್ಯನುಸಾರೀ ॥ ೧೮ ॥

೧೮ (ಶರೀರದಿಂದ ನಿಷ್ಕ್ರಮಿಸಿದ ಆತ್ಮನು) ರಶ್ಮಿಗಳನ್ನು ಅನುಸರಿಸುತ್ತಾನೆ

'ಈ ಬ್ರಹ್ಮಪುರದಲ್ಲಿ ಸಣ್ಣದಾದ (ಹೃದಯ) ಪದ್ಮವೆಂಬ ಒಂದು ಮನೆಯಿದೆ'[1] (ಛಾ ಉ ೮ ೧ ೧) ಎಂದು ಪ್ರಾರಂಭಿಸಿ ವಿಹಿತವಾಗಿರುವ ಹಾರ್ದವಿದ್ಯೆಯಿದೆ 'ಇನ್ನು ಹೃದಯದ ನಾಡಿಗಳು' (ಛಾಂ ಉ ೮ ೬ ೧) ಎಂದು ಪ್ರಾರಂಭಿಸುವ ಮುಂದಿನ ಭಾಗವು ರಶ್ಮಿಗಳಿಗೂ ನಾಡಿಗಳಿಗೂ ಇರುವ ಸಂಬಂಧವನ್ನು ಹೇಳಿ 'ಇನ್ನು ಯಾವಾಗ ಈ ಶರೀರದಿಂದ ಉತ್ಕ್ರಮಿಸುವನೊ ಆಗ ಈ ರಶ್ಮಿಗಳಿಂದಲೇ ಮೇಲಕ್ಕೆ ಹೋಗುತ್ತಾನೆ'[2] (ಛಾಂ ಉ ೮ ೬ ೫) ಎಂದು ಹೇಳುತ್ತದೆ ಪುನಃ 'ಅದರ ಮೂಲಕ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ'[3] (ಛಾಂ ಉ ೮ ೬. ೬) ಎಂದು ಹೇಳುತ್ತದೆ ಆದುದರಿಂದ ನೂರೊಂದನೆಯ ನಾಡಿಯಿಂದ ಹೋಗುವವನು ರಶ್ಮಿಯನ್ನು ಅನುಸರಿಸುತ್ತಾನೆಂಬದು ನಿಶ್ಚಿತವಾಗುತ್ತದೆ ಹಗಲಲ್ಲಾಗಲಿ ಅಥವಾ ರಾತ್ರಿಯಲ್ಲಾಗಲಿ ಸಾಯುವವನು ಈ ರಶ್ಮಿಗಳನ್ನು ಅನುಸರಿಸುತ್ತಾನೆಯೊ ? ಅಥವಾ ಹಗಲಲ್ಲಿ ಸಾಯುವವನು ಮಾತ್ರ ರಶ್ಮಿಗಳನ್ನು ಅನುಸರಿಸುತ್ತಾನೆಯೊ ?— ಎಂಬುದು ಸಂಶಯ ಶ್ರುತಿಯು ಯಾವ ಭೇದವನ್ನೂ ಮಾಡದಿರುವುದರಿಂದ ಎರಡು ವೇಳೆಗಳಲ್ಲಿಯೂ ರಶ್ಮಿಗಳನ್ನು ಅನುಸರಿಸುತ್ತಾನೆ ಎಂಬುದು ಸೂತ್ರಕಾರರ ಅಭಿಪ್ರಾಯ

ವಿ —ರಶ್ಮಿಗಳನ್ನು ಅನುಸರಿಸುತ್ತ ಉಪಾಸಕನು ಮೇಲೆಯೇ ಹೋಗುತ್ತಾನೆ ರಾತ್ರಿಕಾಲದಲ್ಲಿ ಸಾಯುವವನು—ಆಗ ರಶ್ಮಿಗಳು ಇಲ್ಲದಿರುವುದರಿಂದ—ರಶ್ಮಿಗಳನ್ನನುಸರಿಸುವುದಿಲ್ಲ—ಎಂಬ ಆಕ್ಷೇಪಣೆಯಲ್ಲಿ ಅರ್ಥವಿಲ್ಲ ಬೇಸಿಗೆ ಕಾಲದ ರಾತ್ರಿಯಲ್ಲುಂಟಾಗುವ ಉಷ್ಣದ ಅನುಭವದಿಂದ ರಾತ್ರಿಯಲ್ಲಿಯೂ ರಶ್ಮಿಗಳಿವೆ ಎಂಬುದು ತಿಳಿದುಬರುತ್ತದೆ. ನಾಡಿಗಳಿಗೂ ರಶ್ಮಿಗಳಿಗೂ ಸರ್ವದಾ ಅನ್ಯೋನ್ಯಸಂಬಂಧವಿದೆಯೆಂದು ಶ್ರುತಿಯು ತಿಳಿಸುತ್ತದೆ 'ವಿಸ್ತೀರ್ಣವಾದ ಒಂದು ಮಹಾಪಥವು ಹೇಗೆ ಎರಡು ಗ್ರಾಮಗಳ ನಡುವೆ ಹೋಗುವುದೊ ಹಾಗೆಯೇ ಆದಿತ್ಯನ ರಶ್ಮಿಗಳು ಈ ಲೋಕಕ್ಕೂ ಮತ್ತು ಆ ಲೋಕಕ್ಕೂ

---

* ಶ್ರೀಭಾಷ್ಯದಲ್ಲಿ ಈ ಅಧಿಕರಣಕ್ಕೆ ಒಂದೇ ಸೂತ್ರವಿದೆ

[1] ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ।

[2] ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ ।

[3] ತಯೋರ್ಧ್ವಮಾಯನ್ನಮೃತತ್ವಮೇತಿ ।

ಹೋಗುವುವು ಅವು ಆದಿತ್ಯನಿಂದ ಹೊರಟು ಈ ನಾಡಿಗಳಲ್ಲಿ ಪ್ರವೇಶಿಸಿವೆ, ಅವು ಈ ನಾಡಿಗಳಿಂದ ಹೊರಟು ಆ ಆದಿತ್ಯನಲ್ಲಿ ಪ್ರವೇಶಿಸಿವೆ'[1] (ಛಾಂ ಉ ೮ ೬ ೨)

**ದ್ವೈ.—ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ** ಎಂಬ ಪೌತ್ರಾಯಣ ಶ್ರುತಿಯ ಪ್ರಕಾರ ಜ್ಞಾನಿಯು ಸುಷುಮ್ನಾ-ನಾಡಿಯನ್ನು ಪ್ರವೇಶಿಸಿರುವ ಸುಷುಮ್ನವೆಂಬ ಶ್ವೇತ-ರಶ್ಮಿಯ ಮೂಲಕ ಹೊರಟುಹೋಗುತ್ತಾನೆ

**ನಿಶಿ ನೇತಿ ಚೇನ್ನ ಸಂಬಂಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿ ಚ* ॥ ೧೯ ॥**

೧೯ ರಾತ್ರಿಯಲ್ಲಿ (ಆತ್ಮನು ರಶ್ಮಿಗಳನ್ನು) ಅನುಸರಿಸಲಾರನು ಎಂದರ ಅದು ಸರಿಯಲ್ಲ, ಏಕೆಂದರೆ (ನಾಡಿಗೂ ರಶ್ಮಿಗೂ ಇರುವ) ಸಂಬಂಧವು ದೇಹವಿರುವ ವರೆಗೂ ಇರುತ್ತದೆ ಮತ್ತು (ಶ್ರುತಿಯು ಇದನ್ನೇ) ತಿಳಿಸುತ್ತದೆ

ಹಗಲು ನಾಡೀ-ರಶ್ಮಿಗಳ ಸಂಬಂಧವಿದೆ, ರಾತ್ರಿಯಲ್ಲಿರುವುದಿಲ್ಲ, ಆದುದರಿಂದ ಹಗಲಲ್ಲಿ ಸತ್ತವನಿಗೆ ರಶ್ಮಿಗಳ ಅನುಸರಣೆಯಿರುತ್ತದೆಯೇ ಹೊರತು ರಾತ್ರಿಯಲ್ಲಿ ಸತ್ತವನಿಗೆ ಇರುವುದಿಲ್ಲ—ಎಂಬ ಪೂರ್ವಪಕ್ಷವು ಸರಿಯಲ್ಲ; ಏಕೆಂದರೆ ನಾಡಿ-ರಶ್ಮಿಗಳ ಸಂಬಂಧವು ದೇಹವಿರುವವರೆಗೂ ಇರುತ್ತದೆಂದು ಶ್ರುತಿಯು (ಛಾಂ ಉ ೮ ೬ ೨) ತಿಳಿಸುತ್ತದೆ 'ರಾತ್ರಿಯಲ್ಲಿ ಹಗಲನ್ನೇ ಮಾಡುತ್ತಾನೆ'[2] ಎಂದು ಒಂದು ಶ್ರುತಿಯು ಹೇಳುತ್ತದೆ ಇದಲ್ಲದೆ ರಾತ್ರಿಯಲ್ಲಿ ಮೃತನಾದವನು ರಶ್ಮಿಗಳ ಅನುಸರಣವಿಲ್ಲದೆ ಮೇಲಕ್ಕೆ ಹೋಗುವುದಾದರೆ ರಶ್ಮಿಗಳ ಅನುಸರಣವೆಂಬುದು ವ್ಯರ್ಥವೇ ಆಗುವುದು ಇದಲ್ಲದೆ ರಾತ್ರಿಯಲ್ಲಿ ಮೃತನಾದನೆಂಬ ಅಪರಾಧದಿಂದ ಉಪಾಸಕನು ಮೇಲಕ್ಕೇಳದಿದ್ದರೆ ವಿದ್ಯೆಯು ಪಾಕ್ಷಿಕವಾದ ಫಲವುಳ್ಳದ್ದಾಗಿ ಅದರಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲ, ಏಕೆಂದರೆ ಮರಣದ ಕಾಲಕ್ಕೆ ನಿಯಮವಿಲ್ಲ ರಾತ್ರಿಯಲ್ಲಿ ಮೃತನಾದವನು ಹಗಲಾಗುವವರೆಗೂ ರಶ್ಮಿಗಳಿಗಾಗಿ ನಿರೀಕ್ಷಿಸುತ್ತಾನೆಂಬುದೂ ಸರಿಯಲ್ಲ, ಏಕೆಂದರೆ ಸೂರ್ಯೋದಯವಾದರೂ ಅವನಿಗೆ ಒಂದು ವೇಳೆ ಅಗ್ನ್ಯಾದಿಸಂಪರ್ಕದಿಂದ ರಶ್ಮಿಸಂಬಂಧಕ್ಕೆ ಶರೀರವು ಅನರ್ಹವೂ ಆಗ

---

[1] ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛಂತೀಮಂ ಚಾಮುಂ ಚಾಮುಷ್ಮಾದಾದಿತ್ಯಾತ್ ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯಂತೇ ತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ।

* ಈ ಸೂತ್ರವು ಶ್ರೀಭಾಷ್ಯದಲ್ಲಿ ನಿಶಾಧಿಕರಣ ಎಂಬ ಬೇರೆ ಅಧಿಕರಣದಲ್ಲಿ ಅಂತರ್ಗತವಾಗಿದೆ. ಮಧ್ವಭಾಷ್ಯದಲ್ಲಿ ಈ ಸೂತ್ರವು ಎರಡಾಗಿದೆ

[2] ಅಹರೇವೈತದ್ರಾತ್ರೌ ದಧಾತಿ।

ಬಹುದು ಅವನಿಗೆ ನಿರೀಕ್ಷಣೆಯಿಲ್ಲವೆಂದು ಶ್ರುತಿಯು ಖಂಡಿತವಾಗಿ ಹೇಳುತ್ತದೆ 'ಮನಸ್ಸು ಎಷ್ಟು ಬೇಗ ಹೋಗುವುದೊ ಅಷ್ಟು ಬೇಗ ಅವನು ಆದಿತ್ಯನನ್ನು ಸೇರುತ್ತಾನೆ'[1] (ಛಾಂ ಉ ೮ ೬ ೫) ಆದುದರಿಂದ ಯಾವ ವಿಶೇಷವೂ ಇಲ್ಲದೆ ಹಗಲಲ್ಲಿಯೂ ರಾತ್ರಿಯಲ್ಲಿಯೂ ಉಪಾಸಕನು ರಶ್ಮಿಗಳನ್ನು ಅನುಸರಿಸುತ್ತಾನೆ

ವಿ.—ರಾತ್ರಿಯಲ್ಲಿ ಮೃತನಾದವನಿಗೆ ಬ್ರಹ್ಮಪ್ರಾಪ್ತಿಯಾಗುವುದಿಲ್ಲ—ಎಂಬುದು ಸರಿಯಲ್ಲ ದಿವಾಮರಣವು ಪ್ರಶಸ್ತವೆಂದೂ ಇದಕ್ಕೆ ವಿಪರೀತವಾಗಿ ನಿಶಾಮರಣವು ನಿಂದಿತವೆಂದೂ ಶಾಸ್ತ್ರವು ಹೇಳಿದರೂ[2] ನಿಶಾಮರಣದಿಂದ ಅಧೋಗತಿಯಾಗುತ್ತದೆಂದು ಹೇಳಲಾಗುವುದಿಲ್ಲ, ಏಕೆಂದರೆ 'ಜ್ಞಾನಿಯಾದ ಉಪಾಸಕನಿಗೆ ದೇಹವಿರುವ ವರೆಗೂ ಕರ್ಮದ ಸಂಬಂಧವಿರುತ್ತದೆ' ಎಂದು ಸೂತ್ರವು ಹೇಳುತ್ತದೆ, ಎಂದರೆ ವಿದ್ಯಾಸಂಬಂಧದಿಂದ ಅಧೋಗತಿಗೆ ಕಾರಣವಾದ ಅನಾರಬ್ಧಕರ್ಮವು ನಾಶವಾಗುವುದರಿಂದಲೂ ಮುಂದಿನ ಕರ್ಮವು ಅಂಟಿಕೊಳ್ಳದಿರುವುದರಿಂದಲೂ ಪ್ರಾರಬ್ಧಕರ್ಮಕ್ಕೆ ಚರಮದೇಹವೇ ಅವಧಿಯಾಗಿರುವುದರಿಂದಲೂ ಜ್ಞಾನಿಯು ಬಂಧನದಲ್ಲಿರುವುದಕ್ಕೆ ಕಾರಣವಿರುವುದಿಲ್ಲ, ಆದುದರಿಂದ ಅವನು ರಾತ್ರಿಯಲ್ಲಿ ಮೃತನಾದರೂ ಬ್ರಹ್ಮವನ್ನು ಹೊಂದುತ್ತಾನೆ ಹಗಲು, ಶುಕ್ಲಪಕ್ಷ ಮೊದಲಾದುವನ್ನು ಹೊಗಳುವ ಶ್ರುತಿಯು ಅಜ್ಞಾನಿಗಳ ವಿಷಯವೆಂದು ತಿಳಿಯತಕ್ಕದ್ದು[3]

ದ್ವೈ —ನಿಶಿ ನೇತಿ ಚೇನ್ನ ಸಂಬಂಧಾತ್ ॥ ೪ ೨ ೧೯ ॥

೧೯ ರಾತ್ರಿಯಲ್ಲಿ ಸೂರ್ಯರಶ್ಮಿಗಳು ಇಲ್ಲದಿರುವುದರಿಂದ ಉತ್ಕ್ರಮಣವಾಗುವುದಿಲ್ಲವೆಂದು ಹೇಳಕೂಡದು, ಏಕೆಂದರೆ ನಾಡಿಗೂ ರಶ್ಮಿಗಳಿಗೂ ಯಾವಾಗಲೂ ಸಂಬಂಧವಿರುತ್ತದೆ.[4]

ಯಾವದ್ದೇಹಭಾವಿತ್ವಾದ್ದರ್ಶಯತಿ ಚ ॥ ೪ ೨ ೨೦ ॥

೨೦ ಶರೀರವಿರುವ ವರೆಗೆ ನಾಡೀ-ರಶ್ಮಿಗಳ ಸಂಬಂಧವಿರುತ್ತದೆ, ಶ್ರುತಿಯು ಇದನ್ನೇ ಹೇಳುತ್ತದೆ

**ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮ್** ಎನ್ನುವ ಮಾಧ್ಯಂದಿನ-ಶ್ರುತಿಯು ಇದನ್ನೇ ಹೇಳುತ್ತದೆ

---

[1] ಸ ಯಾವತ್ ಕ್ಷಿಪ್ಯೇನ್ಮನಸ್ತಾವದಿತ್ಯಂ ಗಚ್ಛತಿ ।

[2] ದಿವಾ ಚ ಶುಕ್ಲಪಕ್ಷಶ್ಚ ಉತ್ತರಾಯಣಮೇವ ಚ ।
ಮುಮೂರ್ಷತಾಂ ಪ್ರಶಸ್ತಾನಿ ವಿಪರೀತಂ ತು ಗರ್ಹಿತಮ್ ॥

[3] ದಿವಾ ಚ ಶುಕ್ಲಪಕ್ಷಶ್ಚೇತ್ಯಾದಿವಚನಮವಿದ್ವದ್ವಿಷಯಮ್ ॥

[4] ಸರ್ವದಾ ಸಂಬಂಧಾದ್ರಶ್ಮೀನಾಮ್ (ಮ. ಭಾ ).

# ೧೧. ದಕ್ಷಿಣಾಯನಾಧಿಕರಣ

(ಸೂ ೨೦–೨೧)

**ಅತಶ್ಚಾಯನೇಽಪಿ ದಕ್ಷಿಣೇ ॥ ೨೦ ॥**

೨೦ ಆದುದರಿಂದಲೇ ದಕ್ಷಿಣಾಯನದಲ್ಲಿಯೂ (ವಿದ್ಯಾಫಲದ ಪ್ರಾಪ್ತಿಯಿದೆ)

ಆದುದರಿಂದಲೇ ಎಂದರೆ ನಿರೀಕ್ಷಣೆಯೂ ಹೊಂದುವುದಿಲ್ಲವಾದುದರಿಂದಲೂ ವಿದ್ಯೆಗೆ ಪಾಕ್ಷಿಕಫಲವಿಲ್ಲದುದರಿಂದಲೂ ಮೃತ್ಯುವಿಗೆ ನಿಯತಕಾಲವಿಲ್ಲದಿರುವುದರಿಂದಲೂ ದಕ್ಷಿಣಾಯನದಲ್ಲಿ ಮೃತನಾದ ಜ್ಞಾನಿಯೂ ವಿದ್ಯೆಯ ಫಲವನ್ನು ಖಂಡಿತವಾಗಿ ಪಡೆಯುತ್ತಾನೆ

ಆದರೆ ಉತ್ತರಾಯಣದಲ್ಲಿ ಮರಣವನ್ನು ಹೊಂದುವುದು ಪ್ರಶಸ್ತವೆಂಬ ಪ್ರಸಿದ್ಧಿಯಿರುವುದರಿಂದಲೂ ಭೀಷ್ಮನು ಉತ್ತರಾಯಣವನ್ನು ನಿರೀಕ್ಷಿಸಿದನೆಂದು ಹೇಳಿರುವುದರಿಂದಲೂ ಶ್ರುತಿಯು 'ಶುಕ್ಲಪಕ್ಷದಿಂದ—ಯಾವಾಗ ಆದಿತ್ಯನು ಉತ್ತರದಿಕ್ಕಿಗೆ ಹೋಗುವನೊ—ಆ ಮಾಸಗಳನ್ನು' (ಛಾಂ ಉ ೪ ೧೫ ೫) ಎಂದು ಹೇಳುವುದರಿಂದಲೂ ಮರಣಕ್ಕೆ ಉತ್ತರಾಯಣದ ಅಪೇಕ್ಷೆಯಿದೆ ಎಂಬ ಭಾವನೆಯು ಹುಟ್ಟಬಹುದು ಈ ಭಾವನೆಯನ್ನು ಸೂತ್ರವು ನಿರಾಕರಿಸುತ್ತದೆ

ಉತ್ತರಾಯಣ-ಮರಣವು ಪ್ರಶಸ್ತವೆಂಬ ಪ್ರಸಿದ್ಧಿಯು ಅಜ್ಞಾನಿಗಳ ವಿಷಯವಾಗಿರುತ್ತದೆ ಭೀಷ್ಮನು ಉತ್ತರಾಯಣವನ್ನು ನಿರೀಕ್ಷಿಸಿದ್ದು ಶಿಷ್ಟಾಚಾರವನ್ನು ಪಾಲಿಸುವುದಕ್ಕಾಗಿಯೂ ಪಿತೃಪ್ರಸಾದದಿಂದ ಲಬ್ಧವಾದ ಸ್ವೇಚ್ಛಾಮರಣವನ್ನು ಪ್ರದರ್ಶಿಸುವುದಕ್ಕಾಗಿಯೂ—ಎಂದು ತಿಳಿದುಕೊಳ್ಳಬೇಕು ಶ್ರುತಿಯ ಅರ್ಥವನ್ನು ೪ ೩ ೪ ರಲ್ಲಿ ವಿಶದಪಡಿಸಲಾಗುತ್ತದೆ

**ವಿ.**—'ದಕ್ಷಿಣಾಯನದಲ್ಲಿ ಮೃತನಾಗುವವನು ಪಿತೃಗಳ ಮಹಿಮೆಯನ್ನು ಹೊಂದಿ ಚಂದ್ರನೊಂದಿಗೆ ಸಾಯುಜ್ಯವನ್ನು ಪಡೆಯುವನು'[1] (ಮ ನಾ ಉ ೨೫) ಎಂದು ಶ್ರುತಿಯು ಹೇಳುವುದರಿಂದಲೂ ಬ್ರಹ್ಮನಿಷ್ಠರಾದ ಭೀಷ್ಮಾದಿಗಳು ಉತ್ತರಾಯಣವನ್ನು ನಿರೀಕ್ಷಿಸಿದುದರಿಂದಲೂ ದಕ್ಷಿಣಾಯನದಲ್ಲಿ ಮೃತನಾದವನಿಗೆ ಬ್ರಹ್ಮಪ್ರಾಪ್ತಿಯಿಲ್ಲ—ಎಂಬುದು ಪೂರ್ವಪಕ್ಷವು ಸಿದ್ಧಾಂತವು ಹೀಗಿದೆ. ಅಜ್ಞಾನಿಗಳು ಮಾತ್ರ ಚಂದ್ರನಿಂದ ಹಿಂದಿರುಗುತ್ತಾರೆ ಜ್ಞಾನಿಯಾದವನು ಚಂದ್ರನನ್ನು ಹೊಂದಿದರೂ ಹಿಂದಿರುಗುವುದಿಲ್ಲ, ಏಕೆಂದರೆ ಮಹಾನಾರಾಯಣೋಪನಿಷತ್ತಿನ ವಾಕ್ಯಶೇಷವು 'ಅಲ್ಲಿಂದ ಪರಬ್ರಹ್ಮನ ಮಹಿಮೆಯನ್ನು ಹೊಂದುತ್ತಾನೆ'[2] ಎಂದು ಹೇಳುತ್ತದೆ ಆದುದರಿಂದ ದಕ್ಷಿಣಾಯನದಲ್ಲಿ

---

[1] ಅಥ ಯೋ ದಕ್ಷಿಣೇ ಪ್ರಮೀಯತೇ ಪಿತೃಣಾಮೇವ ಮಹಿಮಾನಂ ಗತ್ವಾ ಚಂದ್ರಮಸಃ ಸಾಯುಜ್ಯಂ ಗಚ್ಛತಿ ।

[2] ತಸ್ಮಾದ್ಬ್ರಹ್ಮಣೋ ಮಹಿಮಾನಮಾಪ್ನೋತಿ

ಮೃತನಾದ ಜ್ಞಾನಿಗೆ ಚಂದ್ರಪ್ರಾಪ್ತಿಯು ಒಂದು ವಿಶ್ರಾಂತಿಸ್ಥಾನವಾಗಿರುತ್ತದೆ. ಉತ್ತರಾಯಣದ ಪ್ರಾಶಸ್ತ್ಯದ ಪ್ರದರ್ಶನಕ್ಕಾಗಿ ಮತ್ತು ಧರ್ಮಪ್ರವರ್ತನೆಗಾಗಿ ಭೀಷ್ಮಾದಿಗಳು ತಮ್ಮ ಯೋಗಬಲದಿಂದ ಸ್ವೇಚ್ಛಾಮರಣವನ್ನು ಪಡೆದಿದ್ದರೂ ಉತ್ತರಾಯಣವು ಬರುವ ವರೆಗೂ ಮೃತ್ಯುವನ್ನು ತಡೆದಿದ್ದರು.

ದ್ವೈ.—'ದಕ್ಷಿಣಾಯಣದಲ್ಲಿ ಉತ್ಕ್ರಮಿಸಿ ಸ್ವರ್ಗವನ್ನು ಸೇರುತ್ತಾನೆ, ಉತ್ತರಾಯಣದಲ್ಲಿ ಉತ್ಕ್ರಮಿಸಿ ಪರಬ್ರಹ್ಮನನ್ನು ಹೊಂದುತ್ತಾನೆ' ಎಂದು ಹೇಳಿದ್ದರೂ ಜ್ಞಾನಿಗಳು ದಕ್ಷಿಣಾಯನಕಾಲದಲ್ಲಿ ಉತ್ಕ್ರಮಿಸುವುದೂ ಯುಕ್ತವಾಗಿರುತ್ತದೆ.[1]

**ಯೋಗಿನಃ ಪ್ರತಿ ಚ ಸ್ಮರ್ಯತೇ ಸ್ಮಾರ್ತೇ ಚೈತೇ* ॥ ೨೧ ॥**

೨೧. ಸ್ಮೃತಿಯಲ್ಲಿ ಹೇಳಿರುವುದು ಯೋಗಿಗಳಿಗಾಗಿ; ಮತ್ತು ಇವೆರಡೂ (ಎಂದರೆ ಸಾಂಖ್ಯ-ಯೋಗಗಳು) ಸ್ಮಾರ್ತವೇ.

**ಆಕ್ಷೇಪಣೆ**—'ಎಲೈ ಅರ್ಜುನ, ಯಾವ ಕಾಲದಲ್ಲಿ ಪ್ರಯಾಣಮಾಡುವ ಯೋಗಿಗಳು ಅನಾವೃತ್ತಿಯನ್ನೂ (ಎಂದರೆ ಹಿಂದಿರುಗದಿರುವಿಕೆಯನ್ನೂ) ಆವೃತ್ತಿಯನ್ನೂ (ಹಿಂದಿರುಗುವಿಕೆಯನ್ನೂ) ಹೊಂದುವರೊ ಆ ಕಾಲವನ್ನು ಹೇಳುತ್ತೇನೆ'[2] (ಗೀತಾ ಅ. ೨೩) ಎಂಬಲ್ಲಿ ಹಗಲೇ ಮೊದಲಾದ ಕಾಲವಿಶೇಷದಲ್ಲಿ ಮೃತನಾದವನು ಹಿಂದಿರುಗುವುದಿಲ್ಲವೆಂದು ಹೇಳಿದೆ. ಹೀಗಿರುವಾಗ ರಾತ್ರಿಯಲ್ಲಿ ಅಥವಾ ದಕ್ಷಿಣಾಯನದಲ್ಲಿ ಮೃತನಾದವನು ಹೇಗೆ ಹಿಂದಿರುಗುವುದಿಲ್ಲ ?

**ಪರಿಹಾರ**—ಹಗಲೇ ಮೊದಲಾದ ಕಾಲವಿನಿಯೋಗವು ಅನಾವೃತ್ತಿಫಲವೆಂದು ಸ್ಮೃತಿಯಲ್ಲಿ ಹೇಳಿರುವುದು ಯೋಗಿಗಳಿಗಾಗಿ. ಈ ಯೋಗ-ಸಾಂಖ್ಯಗಳು ಸ್ಮಾರ್ತವೇ ಹೊರತು ಶ್ರೌತವಲ್ಲ. ಆದುದರಿಂದ ವಿಷಯವು ಬೇರೆಬೇರೆಯಾಗಿರುವುದರಿಂದಲೂ ಪ್ರಮಾಣವಿಶೇಷವು ಬೇರೆಯಾಗಿರುವುದರಿಂದಲೂ ಸ್ಮಾರ್ತದ ಕಾಲವಿನಿಯೋಗವು ಶ್ರೌತದ ಉಪಾಸನೆಗಳಿಗೆ ಅನ್ವಯಿಸುವುದಿಲ್ಲ.

**ಆಕ್ಷೇಪಣೆ**—ಆದರೆ 'ಅಗ್ನಿ ಜ್ಯೋತಿ ಹಗಲು ಶುಕ್ಲಪಕ್ಷ ಉತ್ತರಾಯಣದ ಆರು ಮಾಸಗಳು (ಗೀತಾ ಅ. ೨೪);[3] ಧೂಮ ರಾತ್ರಿ ಕೃಷ್ಣಪಕ್ಷ ದಕ್ಷಿಣಾಯನದ ಆರು ಮಾಸ

[1] ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣ ಇತ್ಯುಕ್ತೇಽಪಿ ಜ್ಞಾನಿನೋ ದಕ್ಷಿಣಾಯನೋತ್ಕ್ರಾಂತಿರ್ಯುಜ್ಯತೇ (ಮ. ಭಾ.).

* ಮಧ್ವಭಾಷ್ಯದಲ್ಲಿ ಈ ಸೂತ್ರವು ಪ್ರತಿಸ್ಮರಣಾಧಿಕರಣ ಎಂಬ ಬೇರೆ ಅಧಿಕರಣದಲ್ಲಿ ಅಂತರ್ಗತವಾಗಿದೆ.

[2] ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥

[3] ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।

ಗಳು' (ಗೀತಾ ೮. ೨೫);[1] ಎಂದು ಶ್ರುತಿಯಲ್ಲಿ ತಿಳಿದುಬರುವ ಈ ದೇವಯಾನ-ಪಿತೃಯಾಣಗಳೇ ಸ್ಮೃತಿಯಲ್ಲಿಯೂ ತಿಳಿದುಬರುತ್ತವೆಯಲ್ಲ ?

**ಪರಿಹಾರ**—'ಆ ಕಾಲವನ್ನು ಹೇಳುತ್ತೇನೆ' (ಗೀತಾ ೮. ೨೩) ಎಂಬಲ್ಲಿ ಮರಣ ಕಾಲವನ್ನು ಹೇಳಿರುವುದರಿಂದ ವಿರೋಧವಾಗಬಹುದೆಂದು ಆಶಂಕಿಸಿ ಪರಿಹಾರವನ್ನು ಹೇಳಿರುತ್ತದೆ; ಆದರೆ ಅಗ್ನಿಯೇ ಮೊದಲಾದ ಕಾಲಾಭಿಮಾನಿ ದೇವತೆಗಳು ಆತ್ಮನನ್ನು ಒಯ್ಯುತ್ತಾರೆ—ಎಂಬುದರಲ್ಲಿ ಯಾವ ವಿರೋಧವೂ ಇಲ್ಲ.

**ವಿ.**—ಸ್ಮೃತಿಯ ವಾಕ್ಯಗಳು (ಗೀತಾ ೮. ೨೩. ೨೬) ವ್ಯಾಪೃತರಾಗುತ್ತಿರುವ ವಿಷಯದಲ್ಲಿ ಮರಣಕಾಲದ ವಿಶೇಷವನ್ನು ಹೇಳುತ್ತಿಲ್ಲ; ಯೋಗನಿಷ್ಠರು ಸ್ಮಾರ್ತವಾದ ದೇವಯಾನ-ಪಿತೃಯಾಣಗಳೆಂಬ ಎರಡು ಗತಿಗಳನ್ನು ಸ್ಮರಿಸಿಕೊಳ್ಳಲಿ ಎಂದು ಹೇಳಿದೆ; ಯೋಗಿಗಳು ಅನುದಿನವೂ ಯೋಗಾಂಗವಾಗಿ ಇವುಗಳನ್ನು ಚಿಂತಿಸಬೇಕು—ಎಂದರ್ಥ. ಇದಕ್ಕೆ ಹೊಂದಿಕೊಂಡು 'ಈ ಎರಡು ಮಾರ್ಗಗಳನ್ನು ತಿಳಿದುಕೊಂಡು ಯಾವ ಯೋಗಿಯೂ ಮರುಳಾಗುವುದಿಲ್ಲ. ಆದುದರಿಂದ ಎಲೈ ಅರ್ಜುನ, ಎಲ್ಲ ಕಾಲಗಳಲ್ಲಿಯೂ ಯೋಗಯುಕ್ತನಾಗಿರು'[2] (ಗೀತಾ ೮. ೨೭) ಎಂದು ಉಪಸಂಹಾರಮಾಡಿದೆ. ಮೊದಲು 'ಯಾವ ಕಾಲದಲ್ಲಿ' ಎಂಬಲ್ಲಿ ಕಾಲಶಬ್ದವು ಆತಿವಾಹಿಕ-ದೇವತೆಗಳನ್ನು ಸೂಚಿಸುತ್ತದೆ; ಏಕೆಂದರೆ ಅಗ್ನ್ಯಾದಿಗಳು ಕಾಲವಾಗಲಾರವು. 'ಇವರು ಅರ್ಚಿಯನ್ನು ಸೇರುತ್ತಾರೆ'[3] (ಛಾಂ. ಉ. ೪. ೧೫. ೧೦) ಎಂದು ವಿಹಿತವಾಗಿರುವ ದೇವಯಾನದ ಅನುಸ್ಮೃತಿಯನ್ನೇ ಇಲ್ಲಿ ವಿದ್ಯಾನಿಷ್ಠರಿಗೆ ವಿಧಿಸಿದೆಯೇ ಹೊರತು ಮುಮೂರ್ಷುಗಳ ಮರಣಕಾಲವಿಶೇಷವನ್ನು ವಿಧಿಸಿಲ್ಲ.

**ದ್ವೈ.**—'ಯೋಗಿಗಳನ್ನು ಕುರಿತು ಸ್ಮೃತಿಗಳಲ್ಲಿ ಈ ಗತಿಗಳೆರಡನ್ನೂ ಹೇಳಿದೆ; ಇವು ಸ್ಮರಣವನ್ನು ಅವಲಂಬಿಸಿವೆ' ಎಂಬುದು ಸೂತ್ರಾರ್ಥ.

ಬ್ರಹ್ಮ-ಚಂದ್ರಗತಿಗಳು ಕೇವಲ ಕಾಲದ ವಶದಲ್ಲಿಲ್ಲ; ಅವು ಜ್ಞಾನಯೋಗಿಗಳು, ಕರ್ಮಯೋಗಿಗಳು—ಎಂಬ ಭೇದದ ಪ್ರಕಾರ ಬೇರೆಬೇರೆಯಾಗಿವೆ.[4] ಈ ಗತಿಗಳೆರಡನ್ನೂ ಗೀತೆಯಲ್ಲಿ (೮. ೨೪. ೨೫) ಹೇಳಿದೆ. 'ಗತಿಯ ಅನುಸ್ಮರಣೆಯಿಂದ ಉತ್ಕ್ರಮಿಸುತ್ತಿರುವ ಜೀವನು ಪರಬ್ರಹ್ಮನನ್ನಾಗಲಿ ಚಂದ್ರನನ್ನಾಗಲಿ ಹೊಂದುತ್ತಾನೆ; ಸ್ಮರಣೆಯನ್ನು ಪಡೆಯದವನು ಇನ್ನೊಂದು ಜನ್ಮದಲ್ಲಿ ಸ್ಮರಿಸಿಕೊಂಡು ಗತಿಯನ್ನು ಹೊಂದುತ್ತಾನೆ' ಎಂದು ಅಧ್ಯಾತ್ಮದಲ್ಲಿ ಹೇಳಿದೆ.

---

[1] ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।

[2] ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥

[3] ತೇಽರ್ಚಿಷಮಭಿಸಂಭವಂತಿ ।

[4] ನ ಕೇವಲಂ ಕಾಲಾದಿಕೃತೇ ಬ್ರಹ್ಮಚಂದ್ರಗತೀ ಸ್ಮರ್ಯೇತೇ । ಕಿಂ ತು ಜ್ಞಾನಯೋಗಿನಃ ಕರ್ಮಯೋಗಿನಶ್ಚ (ಮ. ಭಾ.).

## ಮೂರನೆಯ ಪಾದ

# ೧. ಅರ್ಚಿರಾದ್ಯಧಿಕರಣ

**ಅರ್ಚಿರಾದಿನಾ ತತ್ಪ್ರಥಿತೇಃ ॥ ೧ ॥**

೧ ಅರ್ಚಿರಾದಿಮಾರ್ಗದಿಂದಲೇ (ಉಪಾಸಕನು) ಹೋಗುತ್ತಾನೆ ಏಕೆಂದರೆ ಅದು ಪ್ರಸಿದ್ಧವಾಗಿದೆ

ಮಾರ್ಗವು ಪ್ರಾರಂಭವಾಗುವವರೆಗೆ ಉತ್ಕ್ರಾಂತಿಯು ಜ್ಞಾನಿ-ಅಜ್ಞಾನಿಗಳಿಗೆ ಸಮಾನವೆಂದು ಹೇಳಿದ್ದಾಯಿತು ಆದರೆ ಮಾರ್ಗದ ವಿಷಯದಲ್ಲಿ ಬೇರೆ ಬೇರೆ ಶ್ರುತಿಗಳು ಬೇರೆಬೇರೆಯಾಗಿ ಹೇಳುತ್ತವೆ 'ಆಗ ಈ ರಶ್ಮಿಗಳಿಂದಲೇ ಹೋಗುತ್ತಾನೆ' (ಛಾಂ ಉ ೮ ೬ ೫) ಎಂದು ನಾಡೀ-ರಶ್ಮಿಸಂಬಂಧವನ್ನು ತಿಳಿಸಿರುವ ಮಾರ್ಗವು ಒಂದು 'ಅವರು ಅರ್ಚಿಯನ್ನು ಸೇರುತ್ತಾರೆ, ಅರ್ಚಿಯಿಂದ ಅಹರ್ದೇವತೆಯನ್ನು' (ಛಾಂ ಉ ೫ ೧೦ ೧) ಎಂಬುದು ಅರ್ಚಿರಾದಿಮಾರ್ಗ 'ಅವನು ಈ ದೇವಯಾನಮಾರ್ಗವನ್ನು ಪಡೆದು ಅಗ್ನಿಲೋಕಕ್ಕೆ ಬರುತ್ತಾನೆ'[1] (ಕೌ ಉ ೧ ೩) ಎಂಬುದು ಇನ್ನೊಂದು ಮಾರ್ಗ 'ಯಾವಾಗ ಮನುಷ್ಯನು ಈ ಲೋಕವನ್ನು ಬಿಡುತ್ತಾನೆಯೊ ಆಗ ವಾಯುವನ್ನು ಸೇರುತ್ತಾನೆ'[2] (ಬೃ ಉ ೫ ೧೦ ೧) ಎಂಬುದು ಮತ್ತೊಂದು 'ಅವರು ಪುಣ್ಯಪಾಪಗಳನ್ನು ಕಳೆದುಕೊಂಡು ಸೂರ್ಯದ್ವಾರದ ಮೂಲಕ ಹೋಗುತ್ತಾರೆ'[3] (ಮುಂ ಉ ೧. ೨ ೧೧) ಎಂಬುದು ಮಗದೊಂದು ಮಾರ್ಗ ಈ ಮಾರ್ಗಗಳು ಪರಸ್ಪರ ಭಿನ್ನವಾಗಿವೆಯೊ ? ಅಥವಾ ಒಂದೇ ಮಾರ್ಗಕ್ಕೆ ಶ್ರುತಿಗಳು ಅನೇಕ ವಿಶೇಷಣಗಳನ್ನು ಹೇಳುತ್ತವೆಯೊ ?—ಎಂಬುದು ಸಂಶಯ.

**ಪೂರ್ವಪಕ್ಷಿ**—ಈ ಮಾರ್ಗಗಳು ಬೇರೆಬೇರೆಯಾಗಿವೆ, ಏಕೆಂದರೆ ಅವು ಬೇರೆ ಬೇರೆಯ ಪ್ರಕರಣಗಳಲ್ಲಿ ಬರುತ್ತವೆ ಮತ್ತು ಬೇರೆಬೇರೆಯ ಉಪಾಸನೆಗಳಿಗೆ ಶೇಷವಾಗಿವೆ ಅರ್ಚಿರಾದಿಗಳನ್ನು ಅಪೇಕ್ಷಿಸುವುದಾದರೆ 'ಈ ರಶ್ಮಿಗಳಿಂದಲೇ' (ಛಾಂ ಉ ೮ ೬ ೫) ಎಂಬ ಅವಧಾರಣೆಯು ವಿರುದ್ಧವಾಗುವುದು, ಮತ್ತು 'ಅವನ ಮನಸ್ಸು ಎಷ್ಟು ಬೇಗ ಹೋಗುವುದೊ ಅಷ್ಟು ಬೇಗ ಆದಿತ್ಯನನ್ನು ಸೇರುತ್ತಾನೆ' (ಛಾಂ ಉ ೮. ೬ ೫) ಎಂಬ ತ್ವರೆಯ ವಚನಕ್ಕೂ ವಿರೋಧವಾಗುವುದು. ಆದುದರಿಂದ ಈ ಮಾರ್ಗಗಳು ಅನ್ಯೋನ್ಯ ಭಿನ್ನವೇ

---

[1] ಸ ಏತಂ ದೇವಯಾನಂ ಪಂಥಾನಮಾಸಾದ್ಯಾಗ್ನಿಲೋಕಮಾಗಚ್ಛತಿ ।

[2] ಯದಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ ।

[3] ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ।

**ಸಿದ್ಧಾಂತಿ**—ಬ್ರಹ್ಮಪ್ರಾಪ್ತಿಯನ್ನು ಬಯಸುವ ಪ್ರತಿಯೊಬ್ಬನೂ ಅರ್ಚಿರಾದಿ ಮಾರ್ಗದಿಂದಲೇ ಹೋಗುತ್ತಾನೆ ಎಂಬುದು ನಮ್ಮ ಅಭಿಪ್ರಾಯ ;[1] ಏಕೆಂದರೆ ಉಪಾಸಕರಿಗೆಲ್ಲ ಈ ಮಾರ್ಗವು ತಿಳಿದಿದೆ. ಉಪಾಸನೆಗಳಲ್ಲಿ ಗತಿಯನ್ನು ಹೇಳದಿರುವಾಗ ಅರ್ಚಿರಾದಿಗತಿಯಾಗಲಿ ; ಆದರೆ ಗತಿಯನ್ನು ಹೇಳಿರುವಾಗ ಅರ್ಚಿರಾದಿಗತಿಯನ್ನು ಏಕೆ ಅವಲಂಬಿಸಬೇಕು ?—ಎಂಬ ಆಕ್ಷೇಪಣೆಗೆ ಪರಿಹಾರ ಹೀಗಿದೆ : ಈ ಮಾರ್ಗಗಳು ಅತ್ಯಂತ ಭಿನ್ನವಾಗಿದ್ದರೆ ಆಕ್ಷೇಪವು ಹೊಂದುತ್ತಿತ್ತು ; ಆದರೆ ಬ್ರಹ್ಮಲೋಕವನ್ನು ಹೊಂದಿಸುವ ಮಾರ್ಗವು ಒಂದೇ ಆಗಿದ್ದು ಅದಕ್ಕೆ ಅನೇಕ ವಿಶೇಷಣಗಳಿವೆ. ಒಂದೊಂದು ಕಡೆಯಲ್ಲಿ ಒಂದೊಂದು ವಿಶೇಷಣದಿಂದ ಅದು ಲಕ್ಷಿತವಾಗಿರುತ್ತದೆ. ಪ್ರಕರಣಗಳು ಬೇರೆಬೇರೆಯಾಗಿದ್ದರೂ ಉಪಾಸನೆಯು ಒಂದೇ ಆಗಿದ್ದರೆ ಒಂದರ ವಿಶೇಷಣವನ್ನು ಮತ್ತೊಂದರಲ್ಲಿ ಉಪಸಂಹರಿಸಿಕೊಳ್ಳುವಂತೆ ಗತಿಗಳ ವಿಶೇಷಣಗಳನ್ನು ಉಪಸಂಹರಿಸಿಕೊಳ್ಳಬಹುದಾಗಿರುತ್ತದೆ. ಒಂದು ವೇಳೆ ಉಪಾಸನೆಗಳು ಬೇರೆಬೇರೆಯಾಗಿದ್ದರೂ ಗತಿಯು ಒಂದು ಭಾಗದಿಂದ ಅದರ ಗುರುತು ಸಿಕ್ಕುವುದರಿಂದಲೂ ಹೋಗಬೇಕಾದ ಸ್ಥಾನವು ಎಲ್ಲ ಕಡೆಗಳಲ್ಲಿಯೂ ಒಂದೇ ಆಗಿರುವುದರಿಂದಲೂ ಗತಿಯನ್ನು ಒಂದೇ ಎಂದು ತಿಳಿದುಕೊಳ್ಳಬೇಕು.[2] ಅನೇಕ ಶ್ರುತಿಗಳು[3] ಬ್ರಹ್ಮಲೋಕಪ್ರಾಪ್ತಿರೂಪವಾದ ಫಲವು ಒಂದೇ ಎಂದು ತಿಳಿಸುತ್ತವೆ. 'ಈ ರಶ್ಮಿಗಳಿಂದಲೇ' (ಛಾಂ. ಉ. ೮. ೬. ೫) ಎಂಬ ಅವಧಾರಣೆಯು ರಶ್ಮಿಪರವಾಗಿರುವುದರಿಂದ ಏವ-ಶಬ್ದವು ಏಕಕಾಲದಲ್ಲಿ ರಶ್ಮಿಪ್ರಾಪ್ತಿಯನ್ನು ಹೇಳಿ ಅರ್ಚಿರಾದಿಯನ್ನು ನಿರಾಕರಿಸಲಾರದು. ತ್ವರೆಯನ್ನು ಹೇಳುವ ವಚನವೂ (ಛಾಂ. ಉ. ೮. ೬. ೫) ಕೂಡ ಬ್ರಹ್ಮಲೋಕಪ್ರಾಪ್ತಿಯು ಇತರ ಗಂತವ್ಯಕ್ಕಿಂತ ಶೀಘ್ರವಾಗಿ ಆಗುತ್ತದೆ ಎಂಬುದನ್ನು ತಿಳಿಸುವುದರಿಂದ ವಿರುದ್ಧವಾಗುವುದಿಲ್ಲ. ಅರ್ಚಿರಾದಿ ಮಾರ್ಗದಲ್ಲಿ ಮಾರ್ಗಪರ್ವಗಳು ಹೆಚ್ಚಾಗಿರುವುದರಿಂದಲೂ ಮಿಕ್ಕ ಮಾರ್ಗಗಳಲ್ಲಿ ಅವು ಕಡಿಮೆಯಾಗಿರುವುದರಿಂದಲೂ ಅಧಿಕಸಂಖ್ಯೆಗೆ ಅನುಗುಣವಾಗಿ ಅಲ್ಪಸಂಖ್ಯೆಯ ಮಾರ್ಗಗಳನ್ನು ಹೊಂದಿಸುವುದು ಯುಕ್ತವಾಗಿರುತ್ತದೆ.

**ವಿ.**—ಅರ್ಚಿರಾದಿಮಾರ್ಗವನ್ನೇ ಶ್ರುತಿಗಳೆಲ್ಲ ಹೇಳುತ್ತವೆ ; ಏಕೆಂದರೆ ಆ ಮಾರ್ಗವು ಶ್ರುತಿಗಳಲ್ಲೆಲ್ಲ ಪ್ರಸಿದ್ಧವಾಗಿದೆ. ಶ್ರುತಿಗಳು ಆ ಮಾರ್ಗವನ್ನು ನ್ಯೂನಾಧಿಕಭಾವದಿಂದ ವಿವರಿಸಿದ್ದರೂ ಅದರ ಗುರುತನ್ನು ಕಂಡುಹಿಡಿಯಬಹುದು. ಉಪಾಸನೆಗಳಲ್ಲಿ ಒಂದು ಕಡೆ ಹೇಳಿದ ಗುಣಗಳನ್ನು ಇನ್ನೊಂದು ಕಡೆ ಉಪಸಂಹಾರಮಾಡಿಕೊಳ್ಳುವಂತೆ

[1] ಸರ್ವೋಽಪಿ ಬ್ರಹ್ಮಪ್ರೇಪ್ಸುರರ್ಚಿರಾದಿನೈವಾಧ್ವನಾ ರಂಹತೀತಿ ಪ್ರತಿಜಾನೀಮಹೇ (ಸೂ. ಭಾ.).

[2] ವಿದ್ಯಾಭೇದೇಽಪಿ ತು ಗತ್ಯೇಕದೇಶಪ್ರತ್ಯಭಿಜ್ಞಾನಾದ್ಗಂತವ್ಯಾಭೇದಾಚ್ಚ ಗತ್ಯಭೇದ ಏವ (ಸೂ. ಭಾ.).

[3] ಬೃ. ಉ. ೬. ೨. ೧೫, ೫. ೧೦. ೧ ; ಕೌ. ಉ. ೧. ೨ ಮತ್ತು ಛಾಂ. ಉ. ೮. ೬. ೫ ನೋಡಿ.

ಇಲ್ಲಿಯೂ ತಿಳಿದುಕೊಳ್ಳಬೇಕು. ಛಾಂದೋಗ್ಯದಲ್ಲಿ ಬರುವ ಉಪಕೋಸಲವಿದ್ಯೆಯೂ ಪಂಚಾಗ್ನಿವಿದ್ಯೆಯೂ ಒಂದೇ ಮಾರ್ಗವನ್ನು ವಿವರಿಸುತ್ತವೆ. ಬೃಹದಾರಣ್ಯಕದಲ್ಲಿ ಬರುವ ಪಂಚಾಗ್ನಿವಿದ್ಯೆಯೂ ಸ್ವಲ್ಪ ಭೇದದಿಂದ ಅರ್ಚಿರಾದಿಮಾರ್ಗವನ್ನೇ ಹೇಳುತ್ತದೆ. ಅಲ್ಲಿಯೂ ಛಾಂದೋಗ್ಯದಲ್ಲಿ ವಿವರಿಸಿದ ಮಾರ್ಗವನ್ನೇ ಗುರುತಿಸಬಹುದು.

**ದ್ವೈ.**—ಪರಬ್ರಹ್ಮನನ್ನು ಹೊಂದತಕ್ಕ ಜ್ಞಾನಿಯು ಅರ್ಚಿರಾದಿಮಾರ್ಗದಿಂದಲೇ ಹೋಗುತ್ತಾನೆ. ವಾಯ್ವಾದಿಮಾರ್ಗದಿಂದಲ್ಲ. ಅರ್ಚಿಃಪ್ರಾಪ್ತಿಯೇ ಮೊದಲನೆಯ ಹಂತವಾಗಿರುತ್ತದೆ. **ತೇಽರ್ಚಿಷಮಭಿಸಂಭವಂತಿ** (ಛಾಂ. ಉ. ೫. ೧೦. ೧) ಎಂಬ ಶ್ರುತಿಯಲ್ಲಿಯೂ **ದ್ವಾವೇವ ಮಾರ್ಗೌ ಪ್ರಥಿತೌ** ಎಂಬ ಸ್ಮೃತಿಯಲ್ಲಿಯೂ ಈ ಮಾರ್ಗವು ಪ್ರಸಿದ್ಧವಾಗಿದೆ.

# ೨. ವಾಯ್ವಧಿಕರಣ*

**ವಾಯುಮಬ್ದಾದವಿಶೇಷವಿಶೇಷಾಭ್ಯಾಮ್ ॥ ೨ ॥**

೨ ಸಂವತ್ಸರದಿಂದ ವಾಯುವನ್ನು (ಸೇರುತ್ತಾನೆ), ಏಕೆಂದರೆ ಅವಿಶೇಷ-ವಿಶೇಷಗಳಿವೆ.

ಈಗ ಮಾರ್ಗ-ಪರ್ವಗಳ ಸಂನಿವೇಶ-ಕ್ರಮವನ್ನು ಆಚಾರ್ಯರು ವಿವರಿಸುತ್ತಾರೆ. 'ಅವನು ದೇವಯಾನಮಾರ್ಗವನ್ನು ಹೊಂದಿ ಅಗ್ನಿಲೋಕಕ್ಕೆ ಬರುತ್ತಾನೆ, ಅನಂತರ ವಾಯುಲೋಕಕ್ಕೂ ವರುಣಲೋಕಕ್ಕೂ ಇಂದ್ರಲೋಕಕ್ಕೂ ಪ್ರಜಾಪತಿಲೋಕಕ್ಕೂ ಬರುತ್ತಾನೆ'[1] (ಕೌ ಉ ೧ ೩) ಎಂದು ಕೌಷೀತಕಿಗಳು ದೇವಯಾನವನ್ನು ಪಠಿಸುತ್ತಾರೆ ಇಲ್ಲಿ ಹೇಳಿರುವ ಅಗ್ನಿಶಬ್ದವು ಅರ್ಚಿಯನ್ನೇ ಸೂಚಿಸುತ್ತದೆ, ಏಕೆಂದರೆ ಎರಡೂ ಜ್ವಲನ-ವಚನಗಳು ಆದುದರಿಂದ ಇಲ್ಲಿ ಸಂನಿವೇಶಕ್ರಮವನ್ನು ಎಲ್ಲಿಯೂ ಹುಡಕಬೇಕಾಗಿಲ್ಲ ಆದರೆ ಅರ್ಚಿರಾದಿಮಾರ್ಗದಲ್ಲಿ ವಾಯುವು ಶ್ರುತವಾಗಿಲ್ಲ ಅದನ್ನು ಯಾವ ಸ್ಥಾನದಲ್ಲಿ ಇಟ್ಟುಕೊಳ್ಳಬೇಕು ?—ಎಂಬುದು ಪ್ರಶ್ನೆ

ಇದಕ್ಕೆ ಉತ್ತರ ಹೀಗಿದೆ. 'ಅವರು ಅರ್ಚಿಯನ್ನೇ ಸೇರುತ್ತಾರೆ, ಅರ್ಚಿಯಿಂದ ಅಹಸ್ಸನ್ನೂ ಅಹಸ್ಸಿನಿಂದ ಶುಕ್ಲಪಕ್ಷವನ್ನೂ ಶುಕ್ಲಪಕ್ಷದಿಂದ—ಯಾವಾಗ ಆದಿತ್ಯನು ಉತ್ತರದಿಕ್ಕಿಗೆ ಹೋಗುವನೋ—ಆ ಷಣ್ಮಾಸಗಳನ್ನೂ ಆ ಷಣ್ಮಾಸಗಳಿಂದ ಸಂವತ್ಸರವನ್ನೂ ಆ ಸಂವತ್ಸರದಿಂದ ಆದಿತ್ಯನನ್ನೂ (ಸೇರುತ್ತಾರೆ)' (ಛಾಂ ಉ ೫ ೧೦ ೧೨) ಎಂಬಲ್ಲಿ ಸಂವತ್ಸರದ ಅನಂತರ ಮತ್ತು ಆದಿತ್ಯನಿಗೆ ಮೊದಲು ವಾಯುವನ್ನು ಸೇರುತ್ತಾರೆ, ಏಕೆಂದರೆ ಇದು ಅವಿಶೇಷ-ವಿಶೇಷಗಳಿಂದ ತಿಳಿದುಬರುತ್ತದೆ ಹೇಗೆಂದರೆ—'ಅವನು ವಾಯುಲೋಕವನ್ನು ಸೇರುತ್ತಾನೆ' (ಕೌ ಉ. ೧ ೩) ಎಂಬಲ್ಲಿ ಅವಿಶೇಷವನ್ನು ಹೇಳಿರುವುದು ಕಂಡುಬರುತ್ತದೆ. 'ಮನುಷ್ಯನು ಈ ಲೋಕವನ್ನು ಬಿಡುವಾಗ ವಾಯುವನ್ನು ಸೇರುತ್ತಾನೆ, ವಾಯುವು ಅವನಿಗೆ ರಥಚಕ್ರದ ಛಿದ್ರದಷ್ಟು ದಾರಿಯನ್ನು ಕೊಡುತ್ತಾನೆ, ಅವನು ಅದರ ಮೂಲಕ ಮೇಲಕ್ಕೆ ಹೋಗಿ ಆದಿತ್ಯನನ್ನು ಸೇರುತ್ತಾನೆ' (ಬೃ ಉ ೫ ೧೦ ೧) ಆದಿತ್ಯನಿಗಿಂತ ಮೊದಲು ವಾಯುವು ಬರುವನೆಂಬ ವಿಶೇಷದಿಂದ ಸಂವತ್ಸರಾದಿತ್ಯಗಳ ಮಧ್ಯದಲ್ಲಿ ವಾಯುವನ್ನು ಸೇರಿಸಿಕೊಳ್ಳಬೇಕು ಕೌಷೀತಕಿಯಲ್ಲಿ ಅಗ್ನಿಯಾದ ಮೇಲೆ ವಾಯುವನ್ನು ಹೇಳಿರುವುದರಿಂದ ಅರ್ಚಿಯಾದ ಮೇಲೆ ವಾಯುವನ್ನು ಏಕೆ ನಿವೇಶಿಸುವುದಿಲ್ಲ ?—ಎಂದು ಆಕ್ಷೇಪಿಸಿದರೆ ಇದು ಅಂಥ ವಿಶೇಷವಲ್ಲ ಎಂಬುದು

---

* ಮಧ್ವಭಾಷ್ಯದಲ್ಲಿ ಇದನ್ನು ವಾಯುಗತ್ಯಧಿಕರಣ ಎಂದು ಕರೆದಿದೆ

1 ಸ ಏತಂ ದೇವಯಾನಂ ಪಂಥಾನಮಾಸಾದ್ಯಾಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ವರುಣಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮಲೋಕಮ್

ನಮ್ಮ ಪರಿಹಾರವು. ಉದಾಹರಿಸಿದ ಕೌಷೀತಕಿ-ಶ್ರುತಿಯಲ್ಲಿ (೧. ೩) ಕೇವಲ ಪಾಠವೇ ಹಿಂದುಮುಂದಾಗಿದೆಯೇ ಹೊರತು ಕ್ರಮವಚನವಿಲ್ಲ. ಆದರೆ ಬೃಹದಾರಣ್ಯಕದಲ್ಲಿ 'ವಾಯುವು ಅವನಿಗೆ ರಥಚಕ್ರದ ಛಿದ್ರದಷ್ಟು ದಾರಿಯನ್ನು ಕೊಡುತ್ತಾನೆ; ಅದರ ಮೂಲಕ ಮೇಲಕ್ಕೆ ಹೋಗಿ ಆದಿತ್ಯನನ್ನು ಸೇರುತ್ತಾನೆ' ಎಂಬ ಕ್ರಮವಚನವಿದೆ.

ಆದರೆ ವಾಜಸನೇಯಿಗಳು 'ಮಾಸಗಳಿಂದ ದೇವಲೋಕಗಳನ್ನೂ ದೇವಲೋಕದಿಂದ ಆದಿತ್ಯನನ್ನೂ (ಸೇರುತ್ತಾರೆ)' (ಬೃ. ಉ. ೬. ೨. ೧೫) ಎಂದು ಪಠಿಸುತ್ತಾರೆ. ಅಲ್ಲಿಯೂ ಕ್ರಮವನ್ನು ಇಟ್ಟುಕೊಳ್ಳಲು ದೇವಲೋಕವಾದ ಮೇಲೆ ವಾಯುಲೋಕವನ್ನು ಸೇರುತ್ತಾರೆಂದು ನಿರ್ಧರಿಸಬೇಕಾಗುವುದು. 'ಸಂವತ್ಸರದಿಂದ ವಾಯುವನ್ನು' ಎಂಬ ಸೂತ್ರಭಾಗವು ಛಾಂದೋಗ್ಯ-ಶ್ರುತಿಯ ಅಪೇಕ್ಷೆಯಿಂದ ಹೇಳಿದ್ದು. ಆದರೆ ಛಾಂದೋಗ್ಯ-ಬೃಹದಾರಣ್ಯಕಗಳೆರಡರಲ್ಲಿ ದೇವಲೋಕವು ಒಂದರಲ್ಲಿಲ್ಲ, ಸಂವತ್ಸರವು ಇನ್ನೊಂದರಲ್ಲಿಲ್ಲ. ಇಲ್ಲಿ ಎರಡು ಶ್ರುತಿಗಳೂ ಪ್ರಮಾಣವಾಗಿರುವುದರಿಂದ ಈ ಎರಡು ಪರ್ವಗಳನ್ನೂ ಎರಡು ಕಡೆಗಳಲ್ಲಿಯೂ ಸೇರಿಸಿಕೊಳ್ಳಬೇಕು; ಅದರಲ್ಲಿಯೂ ಮಾಸದ ಸಂಬಂಧವಿರುವುದರಿಂದ ಸಂವತ್ಸರಕ್ಕೆ ಮೊದಲನೆಯ ಸ್ಥಾನ, ದೇವಲೋಕಕ್ಕೆ ಎರಡನೆಯ ಸ್ಥಾನ ಎಂದು ವಿವೇಚಿಸಿಕೊಳ್ಳಬೇಕು.

ವಿ.—ಸಂವತ್ಸರದಿಂದ ಹೊರಟ ಜೀವಾತ್ಮನು ಆದಿತ್ಯನಿಗೆ ಮೊದಲು ವಾಯುವನ್ನು ಸೇರುತ್ತಾನೆ; ಇದು ಅವಿಶೇಷ-ವಿಶೇಷಗಳಿಂದ ತಿಳಿದುಬರುತ್ತದೆ. ದೇವಲೋಕಶಬ್ದವು ಸಾಮಾನ್ಯವಾಗಿರುವುದರಿಂದ ವಾಯುವನ್ನು ಸೂಚಿಸುತ್ತದೆ; ಆದರೆ ವಾಯು-ಶಬ್ದವು ವಿಶೇಷವಾಗಿ ವಾಯುವನ್ನೇ ಸೂಚಿಸುತ್ತದೆ. ಕೌಷೀತಕಿಗಳು ಹೇಳುವ ವಾಯು-ಲೋಕಶಬ್ದವು ಲೋಕವೂ ಆಗಿರುವ ವಾಯುವನ್ನು ಸೂಚಿಸುತ್ತದೆ. 'ಬೀಸುವವನು ದೇವತೆಗಳ ಗೃಹಗಳು'[1] ಎಂಬ ಇನ್ನೊಂದು ಶ್ರುತಿಯ ಪ್ರಕಾರ ವಾಯುವು ದೇವತೆಗಳ ವಾಸಸ್ಥಾನವೆಂದು ತಿಳಿಯಬಹುದು.

ದ್ವೈ.—ಜ್ಞಾನಿಯು ಅರ್ಚಿರ್ಲೋಕದಿಂದ ವಾಯುಲೋಕವನ್ನು ಹೊಂದುತ್ತಾನೆ;[2] ಏಕೆಂದರೆ **ಸ ವಾಯುಮಾಗಚ್ಛತಿ** (ಬೃ. ಉ. ೫. ೧೦. ೧) ಎಂಬ ಸಾಮಾನ್ಯವಚನವೂ **ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ** ಎಂಬ ವಿಶೇಷವಚನವೂ ಇದೆ.

---

1 ಯೋಽಯಂ ಪವತ ಏಷ ಏವ ಗೃಹಾಃ ।

2 ಅರ್ಚಿಷೋ ವಾಯುಂ ಗಚ್ಛತಿ ।

## ೩. ತಡಿದಧಿಕರಣ*

### ತಡಿತೋಽಧಿ ವರುಣಃ ಸಂಬಂಧಾತ್ ॥ ೩ ॥

೩ ವಿದ್ಯುತ್ತಿನಿಂದಾಚೆಗೆ ವರಣನು (ಇರುತ್ತಾನೆ), ಏಕೆಂದರ ಸಂಬಂಧ ವಿದೆ

'ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುದ್ದೇವತೆಯನ್ನು (ಸೇರುತ್ತಾರೆ)' ಛಾಂ ಉ ೪ ೧೫ ೫) ಎಂದು ಶ್ರುತಿಯು ಮುಂದುವರಿಯುತ್ತದೆ, ಇಲ್ಲಿ ವಿದ್ಯುತ್ತಿನ ಮೇಲೆ ವರುಣನು ಸಂಬಂಧವಾಗತಕ್ಕದ್ದು, ಏಕೆಂದರೆ ವಿದ್ಯುತ್ತಿಗೂ ವರುಣನಿಗೂ ಸಂಬಂಧವಿರುತ್ತದೆ ವಿಶಾಲವಾದ ವಿದ್ಯುಲ್ಲೇಖೆಗಳು ತೀವ್ರವಾದ ಸಿಡಿಲಿನ ಶಬ್ದದಿಂದ ಕೂಡಿ ಮೇಘಗರ್ಭದಲ್ಲಿ ಕುಣಿಯುತ್ತಿರುವಾಗ ಮಳೆಬೀಳುತ್ತದೆ ನೀರಿಗೆಲ್ಲ ವರುಣನು ಅಧಿಪತಿಯೆಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ ವರುಣನು ಆದ ಮೇಲೆ ಇಂದ್ರ-ಪ್ರಜಾಪತಿಗಳನ್ನು ಸೇರಿಸಿಕೊಳ್ಳಬೇಕು ಏಕೆಂದರೆ ಅವರಿಗೆ ಬೇರೆ ಸ್ಥಾನವಿಲ್ಲ ಅರ್ಚಿರಾದಿಮಾರ್ಗದಲ್ಲಿ ವಿದ್ಯುತ್ತು ಕೊನೆಯದಾಗಿದೆ[1]

ವಿ.—ಛಾಂದೋಗ್ಯದಲ್ಲಿ (೪ ೧೫ ೫) ಹೇಳಿರುವ ಕ್ರಮದ ಪ್ರಕಾರ ವಿದ್ಯುತ್ತಾದ ಮೇಲೆ ವರುಣನು ಬರಬೇಕು, ಏಕೆಂದರೆ ನೀರಿನ ಅಧಿಪತಿಯಾದ ವರುಣನು ಮೇಘೋ-ದರದಲ್ಲಿರುವ ವಿದ್ಯುತ್ತಿಗೆ ಸಂಬಂಧಪಟ್ಟಿರುತ್ತಾನೆ ಈ ಅರ್ಥಕ್ರಮವು ಕೌಷೀತಕಿ-ಪಾಠ ಕ್ರಮಕ್ಕಿಂತ ಬಲವತ್ತರವಾಗಿದೆ

ದ್ವೈ.—ತಟಿತಾ ಹ್ಯೂಹ್ಯತೇ ವರುಣಲೋಕಃ ಎಂಬ ಶ್ರುತಿಯ ಪ್ರಕಾರ ಜ್ಞಾನಿಯು ತಟಿಲ್ಲೋಕದಿಂದ ವರುಣಲೋಕಕ್ಕೆ ಹೋಗುತ್ತಾನೆ[2]

---

* ಇದು ಶ್ರೀಭಾಷ್ಯದಲ್ಲಿ ವರುಣಾಧಿಕರಣ ಎನಿಸಿದೆ

1 ಆದುದರಿಂದ ವಿದ್ಯುತ್ತು ಆದ ಮೇಲೆ ಆಗಂತುಕರಾದ ವರುಣಾದಿಗಳನ್ನು ಸೇರಿಸಿ ಕೊಳ್ಳಬೇಕು.

2 ತತ್ರ ತಟಿತೋ ವರುಣಂ ಗಚ್ಛತಿ (ಮ ಭಾ.).

# ೪. ಆತಿವಾಹಿಕಾಧಿಕರಣ*

(ಸೂ ೪-೬)

**ಆತಿವಾಹಿಕಸ್ತಲ್ಲಿಂಗಾತ್ || ೪ ||**

೪ (ಅರ್ಚಿರಾದಿಗಳು) ಆತಿವಾಹಿಕರು, ಏಕೆಂದರೆ ಆ ಲಿಂಗವಿದೆ

ಈ ಆರ್ಚಿರಾದಿಗಳು ಮಾರ್ಗಚಿಹ್ನೆಗಳೊ ಅಥವಾ ಭೋಗಭೂಮಿಗಳೊ ಅಥವಾ ಹೋಗುತ್ತಿರುವ ಜೀವರ ಮಾರ್ಗದರ್ಶಿಗಳೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಅರ್ಚಿರಾದಿಗಳು ಮಾರ್ಗಚಿಹ್ನೆಗಳು, ಏಕೆಂದರೆ ಶ್ರುತಿಯ ಉಪದೇಶವು ಆ ರೂಪದಲ್ಲಿದೆ ಒಂದು ಊರನ್ನು ಕುರಿತು ಹೊರಟಿರುವವನಿಗೆ ಮಾರ್ಗದ ಗುರುತುಗಳನ್ನು ಹೇಳುವಂತೆ ಇಲ್ಲಿಯೂ 'ಅರ್ಚಿಯಿಂದ ಅಹಸ್ಸು, ಅಹಸ್ಸಿನಿಂದ ಶುಕ್ಲ ಪಕ್ಷ' ಎಂದು ಶ್ರುತಿಯು ಹೇಳುತ್ತದೆ ಅಥವಾ ಇವು ಭೋಗ-ಭೂಮಿಗಳೂ ಆಗಬಹುದು, ಏಕೆಂದರೆ ಲೋಕಶಬ್ದವು 'ಪಿತೃಲೋಕ, ದೇವಲೋಕ' ಎಂಬ ಭೋಗಭೂಮಿಯನ್ನು ಸೂಚಿಸುತ್ತದೆ ಆದುದರಿಂದ ಅರ್ಚಿರಾದಿಗಳು—ಅಚೇತನವಾಗಿರುವುದರಿಂದ—ಆತಿವಾಹಿಕವಾಗಲಾರವು

**ಸಿದ್ಧಾಂತಿ**—ಇವರು ಆತಿವಾಹಿಕರೇ ಆಗಿರಬೇಕು ಏಕೆಂದರೆ ಲಿಂಗವಿದೆ, 'ಚಂದ್ರನಿಂದ ವಿದ್ಯುತ್ತನ್ನು ಸೇರುತ್ತಾರೆ. ಅಲ್ಲಿರುವ ಅಮಾನವ-ಪುರುಷನೊಬ್ಬನು ಇವರನ್ನು ಬ್ರಹ್ಮದ ಬಳಿಗೆ ಸೇರಿಸುತ್ತಾನೆ'[1] (ಛಾಂ ಉ ೪ ೧೫ ೫) ಎಂಬಲ್ಲಿ ಗಮಯಿತೃತ್ವವು ಸಿದ್ಧವಾಗಿದೆ ಇದರಿಂದ ಈ ಮಾರ್ಗದಲ್ಲಿ ಮಾನವ-ಪುರುಷರು ಇರುತ್ತಾರೆಂಬುದು ತಿಳಿದು ಬರುತ್ತದೆ

**ವಿ.**—ಅರ್ಚಿರಾದಿಗಳು ಪರಮಪುರುಷನಿಂದ ನಿಯುಕ್ತರಾದ ದೇವತಾವಿಶೇಷಗಳು, ಇವರು ಉಪಾಸಕರನ್ನು ಮಾರ್ಗದ ಹಂತಗಳಲ್ಲಿ ಒಯ್ಯುತ್ತಾರೆ[2] ಇದನ್ನೇ ಶ್ರುತಿಯು (ಛಾಂ. ಉ ೪ ೧೫ ೫) ಹೇಳುತ್ತದೆ ಅಮಾನವನ ವಿಷಯದಲ್ಲಿ ಹೇಳಿದ ಗಮಯಿತೃತ್ವವು ಇತರ ಆತಿವಾಹಿಕರ ವಿಷಯದಲ್ಲಿಯೂ ಅನ್ವಯಿಸುತ್ತದೆ

**ದ್ವೈ.**—ಹಿಂದೆ ಹೇಳಲ್ಪಟ್ಟ ವಾಯುವೇ ಆತಿವಾಹಿಕನು, ಪೂರ್ವದಲ್ಲಿಯೇ ಜೀವನು ಇವನಲ್ಲಿಗೆ ಹೋಗುವನೆಂಬ ಲಿಂಗದಿಂದ ಇದು ಸಿದ್ಧಿಸುತ್ತದೆ[3]

---

* ಮಧ್ವಭಾಷ್ಯದ ಪ್ರಕಾರ ಮುಂದಿನ ಸೂತ್ರವು ಮಾತ್ರ ಈ ಅಧಿಕರಣಕ್ಕೆ ಸೇರಿದೆ

[1] ಚಂದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತಿ ।

[2] ವಿದುಷಾಮತಿವಾಹೇ ಪರಮಪುರುಷೇಣ ನಿಯುಕ್ತಾಃ ಆತಿವಾಹಿಕಾಃ ದೇವತಾವಿಶೇಷಾ ಏತೇಽರ್ಚಿರಾದಯಃ (ಶ್ರೀಭಾಷ್ಯ)

[3] ಪೂರ್ವತ್ರೋಕ್ತಸ್ತ್ವಾತಿವಾಹಿಕೋ ವಾಯುಃ । ಪೂರ್ವಗಮನಲಿಂಗಾತ್ (ಮ. ಭಾ.)

## ಉಭಯವ್ಯಾಮೋಹಾತ್ ತತ್ಸಿದ್ಧೇಃ* ॥ ೫ ॥

೫. ಇಬ್ಬರಿಗೂ ವ್ಯಾಮೋಹವಾಗಿರುವುದರಿಂದ ಅದು ಸಿದ್ಧಿಸುತ್ತದೆ

**ಸಿದ್ಧಾಂತಿ**—ಮಾನವಪುರುಷರು ಇದ್ದಾರೆಂಬುದಕ್ಕೆ ಪ್ರಮಾಣವಿಲ್ಲದುದರಿಂದ ಬರಿಯ ಲಿಂಗವು ಪ್ರಬಲವಾಗಲಾರದು ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ: ಅರ್ಚಿ-ರಾದಿಮಾರ್ಗದಲ್ಲಿ ಹೋಗುವವರು—ದೇಹವಿಯೋಗದಿಂದಲೂ ಇಂದ್ರಿಯಗಳು ಒಟ್ಟು ಗೂಡಿರುವುದರಿಂದಲೂ—ಅಸ್ವತಂತ್ರರಾಗಿರುತ್ತಾರೆ; ಅರ್ಚಿರಾದಿಗಳೂ ಅಚೇತನವಾಗಿರು ವುದರಿಂದ ಅಸ್ವತಂತ್ರವಾಗಿರುತ್ತವೆ. ಆದುದರಿಂದ ಅರ್ಚಿರಾದಿ-ಅಭಿಮಾನಿಗಳಾದ ಮತ್ತು ಚೇತನರಾದ ದೇವತೆಗಳು ಅವರನ್ನು ಒಯ್ಯಲು ನಿಯುಕ್ತರಾಗಿರುತ್ತಾರೆಂದು ತಿಳಿದುಬರು ತ್ತದೆ. ಅರ್ಚಿರಾದಿಗಳು ಯಾವಾಗಲೂ ಇರುವುದಿಲ್ಲವಾದುದರಿಂದ ಮಾರ್ಗಚಿಹ್ನೆಗಳಾಗ ಲಾರವು: ಏಕೆಂದರೆ ರಾತ್ರಿಯಲ್ಲಿ ಮೃತನಾದವನಿಗೆ ಹಗಲಿನ ಸ್ವರೂಪವನ್ನು ಪಡೆಯಲು ಸಾಧ್ಯವಿಲ್ಲ. ಆದುದರಿಂದ ಅರ್ಚಿರಾದಿಗಳನ್ನು ಅಹರಭಿಮಾನಿದೇವತೆಗಳೆಂದೇ ತಿಳಿದು ಕೊಳ್ಳಬೇಕು. 'ಅರ್ಚಿಯಿಂದ ಅಹಸ್ಸನ್ನು' (ಛಾಂ. ಉ. ೪. ೧೫. ೫) ಎಂಬಲ್ಲಿ ಆತಿ-ವಾಹಿಕರೆಂದು ಅರ್ಥಮಾಡಿದರೂ ವಿರುದ್ಧವಾಗುವುದಿಲ್ಲ; ಏಕೆಂದರೆ 'ಅರ್ಚಿಯೆಂಬ ಹೇತುವಿನಿಂದ ಅಹಸ್ಸನ್ನು ಪಡೆಯುತ್ತಾನೆ' ಎಂದಾಗುತ್ತದೆ. ಶರೀರರಹಿತರಾಗಿ ಹೋಗು ವವರಿಗೆ ಇಂದ್ರಿಯಗಳು ಒಟ್ಟುಗೂಡಿರುವುದರಿಂದ ಅವರಿಗೆ ಭೋಗವು ಸಂಭವಿಸುವುದಿಲ್ಲ; ಹೀಗಿದ್ದರೂ ಲೋಕಶಬ್ದಕ್ಕೆ—ಅದು ಅಲ್ಲಿನ ನಿವಾಸಿಗಳಿಗೆ ಭೋಗಭೂಮಿಯಾಗಿರುವುದ ರಿಂದ—ಅರ್ಥವನ್ನು ಹೊಂದಿಸಬಹುದು. ಆದುದರಿಂದ ಅಗ್ನಿಸ್ವಾಮಿಕವಾದ ಲೋಕ ವನ್ನು ಹೊಂದಿದವನನ್ನು ಅಗ್ನಿಯು ಒಯ್ಯುತ್ತಾನೆ—ಎಂದು ಯೋಜನೆ ಮಾಡಬೇಕು.

**ದ್ವೈ.**—'ಹಿಂದೆ ಹೇಳಲ್ಪಟ್ಟ ವಾಯುವು ಮುಖ್ಯನೊ ಅಥವಾ ಆತಿವಾಹಿಕನೊ? —ಎಂಬ ಸಂಶಯವುಂಟಾಗುತ್ತಿರಲು **ದಿವಸ್ಪತಿಃ** ಎಂಬ ವಿಶೇಷಣರೂಪವಾದ ಲಿಂಗದಿಂದ ಉತ್ತರಪ್ರಾಪ್ಯನಾದ ವಾಯುವಿಗೆ ಮುಖ್ಯತ್ವವು ಸಿದ್ಧಿಸುವುದರಿಂದ ಪೂರ್ವಪ್ರಾಪ್ಯನಾದ ವಾಯುವಿಗೆ ಆತಿವಾಹಿಕತ್ವವು ಸಿದ್ಧಿಸುತ್ತದೆ' ಎಂಬುದು ಸೂತ್ರಾರ್ಥ.

'ಅವನು ವಾಯುವಿಗೆ ಹೋಗುತ್ತಾನೆ' (ಬೃ. ಉ. ೫. ೧೦. ೧) ಎಂದು ಮೊದಲು ಹೇಳಿ, ಶ್ರುತಿಯು ಕೊನೆಯಲ್ಲಿ ಹೀಗೆ ಹೇಳಿರುತ್ತದೆ: 'ಉತ್ಕ್ರಮಿಸಿದ ಜ್ಞಾನಿಯು ಪರಮಾತ್ಮನಲ್ಲಿಗೆ ಹೋಗುವಾಗ ವಿದ್ಯುತ್ತನ್ನು ಸೇರುತ್ತಾನೆ. ವಿದ್ಯುತ್ತೇ ದ್ಯೌ (ಭಾರತೀ) ಎಂಬುದು; ಅನಂತರ ಅವಳ ಪತಿಯಾದ ವಾಯುವನ್ನು ಸೇರುತ್ತಾನೆ. ಅವನಿಂದಲೇ ಪರಬ್ರಹ್ಮನನ್ನು ಸೇರುತ್ತಾನೆ.'[1] ಇಲ್ಲಿ **ದಿವಸ್ಪತಿ** ಎಂಬ ವಿಶೇಷಣವನ್ನು ಉತ್ತರಪ್ರಾಪ್ಯ

---

* ಈ ಸೂತ್ರವು ಶ್ರೀಭಾಷ್ಯದಲ್ಲಿ ಕಂಡುಬರುವುದಿಲ್ಲ.

[1] ಉತ್ಕ್ರಾಂತೋ ವಿದ್ವಾನ್ ಪರೇಶುಭಿಗಚ್ಛನ್ ವಿದ್ಯುತಮೇವಾಂತತ ಉಪಗಚ್ಛತಿ ದ್ಯೌರ್ವಾವ ವಿದ್ಯುತ್ ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ (ಮ. ಭಾ.).

ನಾದ ವಾಯುವಿಗೆ ಕೊಟ್ಟಿರುವುದರಿಂದ ಪೂರ್ವಪ್ರಾಪ್ಯನಾದ ವಾಯುವು ಆತಿವಾಹಿಕನು—ಎಂಬುದು ಸಿದ್ಧಿಸುತ್ತದೆ.

**ವೈದ್ಯುತೇನೈವ ತತಸ್ತಚ್ಛ್ರುತೇಃ*** ॥ ೬ ॥

೬. ಅಲ್ಲಿಂದ ವೈದ್ಯುತನಿಂದಲೇ (ಆತಿವಾಹಿಕರಾಗಿ ಹೋಗುತ್ತಾರೆ); ಏಕೆಂದರೆ ಶ್ರುತಿಯು ಅದನ್ನೇ ಹೇಳುತ್ತದೆ

**ಆಕ್ಷೇಪಣೆ**—ಇವರು ಆತಿವಾಹಿಕರಾದರೆ ಇದು ವರುಣಾದಿಗಳಿಗೆ ಹೇಗೆ ಸಂಭವಿಸುತ್ತದೆ? ವರುಣಾದಿಗಳು ವಿದ್ಯುತ್ತಾದ ಮೇಲೆ ಬರುವರೆಂದು ಹಿಂದೆ ಹೇಳಿದೆಯಲ್ಲವೆ? ಆದರೆ ವಿದ್ಯುತ್ತಿನಿಂದ ಬ್ರಹ್ಮಪ್ರಾಪ್ತಿಯಾಗುವವರೆಗೂ ಅಮಾನವ-ಪುರುಷನೇ ಕರೆದುಕೊಂಡು ಹೋಗುವನೆಂದು ಶ್ರುತಿ ಹೇಳುತ್ತದೆ.

**ಪರಿಹಾರ**—ವಿದ್ಯುತ್ತನ್ನು ಸೇರಿದ ಮೇಲೆ ಅದರ ಅನಂತರವೇ ಬರುವ ಅಮಾನವ-ಪುರುಷನಿಂದಲೇ ವರುಣಾದಿಲೋಕಗಳ ಮೂಲಕ ಆತಿವಾಹಿಕರಾಗಿ ಬ್ರಹ್ಮಲೋಕವನ್ನು ಸೇರುತ್ತಾರೆ. 'ಅಮಾನವ-ಪುರುಷನು ಬಂದು ಅವರನ್ನು ವಿದ್ಯುಲ್ಲೋಕದಿಂದ ಬ್ರಹ್ಮ-ಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ'[1] ಎಂದು ಶ್ರುತಿಯು ಹೇಳುತ್ತದೆ. ವರುಣಾದಿಗಳು ಪ್ರತಿಬಂಧಮಾಡದಿರುವುದರಿಂದಲೊ ಅಥವಾ ಸಹಾಯವನ್ನು ಮಾಡುವುದರಿಂದಲೊ ಅನುಗ್ರಾಹಕರಾಗಿರುತ್ತಾರೆಂದು ತಿಳಿಯಬೇಕು. ಆದುದರಿಂದ ಅರ್ಚಿರಾದಿಗಳೇ ಆತಿವಾಹಿಕರಾದ ದೇವತೆಗಳು.

**ವಿ.**—ವಿದ್ಯುಲ್ಲೋಕದಿಂದ ಬ್ರಹ್ಮಪ್ರಾಪ್ತಿಯವರೆಗೂ ಆತಿವಾಹಿಕನಾಗಿರುವವನು ಅಮಾನವನಾದ ವೈದ್ಯುತ-ಪುರುಷನೇ; ಏಕೆಂದರೆ **ಸ ಏನಾನ್ ಬ್ರಹ್ಮ ಗಮಯತಿ** (ಛಾಂ. ಉ. ೪. ೧೫. ೫) ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ. ವರುಣಾದಿಗಳು ಅಮಾನವ-ಪುರುಷನಿಗೆ ಅನುಗ್ರಾಹಕರಾಗಿರುತ್ತಾರೆಂದು ತಿಳಿಯಬೇಕು.

**ದ್ವೈ.**—'ಅಲ್ಲಿಂದ ಜ್ಞಾನಿಯು ವಿದ್ಯುತ್ಪತಿಯಿಂದಲೇ ಪರಬ್ರಹ್ಮನನ್ನು ಸೇರುತ್ತಾನೆ' ಎಂಬುದು ಸೂತ್ರಾರ್ಥ. ಬೇರೆ ಬೇರೆ ಶ್ರುತಿಗಳಲ್ಲಿ ಬೇರೆ ಬೇರೆ ವಿಧವಾಗಿ ಹೇಳಿರುವುದರಿಂದ ವಾಯುವಾದಮೇಲೆ ಪರಬ್ರಹ್ಮನಿಗೆ ಮೊದಲು ಇನ್ನೊಂದು ಹೋಗಬೇಕಾದ ಸ್ಥಾನವಿದೆಯೆಂದು ತಿಳಿಯಕೂಡದು; ಏಕೆಂದರೆ ವಿದ್ಯುತ್ಪತಿಯಾದ ವಾಯುವಿನಿಂದಲೇ ಜ್ಞಾನಿಯು ಪರಬ್ರಹ್ಮವನ್ನು ಸೇರುತ್ತಾನೆ; ಹಾಗೆಂದೇ ಬ್ರಹ್ಮಗಮನ-ಶ್ರುತಿಯು (ಛಾಂ. ಉ. ೫. ೧೦. ೨) ಹೇಳುತ್ತದೆ.[2]

---

* ಇದು ಮಧ್ವಭಾಷ್ಯದಲ್ಲಿ ವೈದ್ಯುತಾಧಿಕರಣ ಎಂಬ ಹೊಸ ಅಧಿಕರಣದಲ್ಲಿ ಅಂತರ್ಗತವಾಗಿದೆ

[1] ತಾನ್ ವೈದ್ಯುತಾನ್ ಪುರುಷೋಽಮಾನವಃ ಏತ್ಯ ಬ್ರಹ್ಮಲೋಕಾನ್ ಗಮಯತಿ (ಸೂ. ಭಾ); ಇದು ಬೃ. ಉ. ೬. ೨. ೧೫ ಕ್ಕಿಂತ ಸ್ವಲ್ಪ ಬೇರೆಯಾಗಿದೆ.

[2] ವಿದ್ಯುತ್ಪತಿನಾ ವಾಯುನೈವ ಸ ಏನಾನ್ ಬ್ರಹ್ಮ ಗಮಯತೀತಿ ಬ್ರಹ್ಮಗಮನಶ್ರುತೇಃ (ಮ. ಭಾ.).

## ೫. ಕಾರ್ಯಾಧಿಕರಣ*

(ಸೂ ೭–೧೪)

**ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ॥ ೭ ॥**

೭ ಕಾರ್ಯ (ಬ್ರಹ್ಮಕ್ಕೆ ಒಯ್ಯುತ್ತಾನೆಂದು) ಬಾದರಿಯು (ಅಭಿಪ್ರಾಯ ಪಡುತ್ತಾನೆ), ಏಕೆಂದರ ಅದರ ಬಳಿಗೆ ಹೋಗುವುದು ಹೊಂದುತ್ತದೆ

'ಅವನು ಇವರನ್ನು ಬ್ರಹ್ಮದ ಬಳಿಗೆ ಸೇರಿಸುತ್ತಾನೆ' (ಛಾಂ ಉ ೪ ೧೫ ೫) ಎಂಬಲ್ಲಿ ಅಮಾನವ-ಪುರುಷನು ಕಾರ್ಯವಾದ ಅಪರಬ್ರಹ್ಮದ ಬಳಿಗೆ ಜೀವರನ್ನು ಸೇರಿಸುತ್ತಾನೆಯೊ ಅಥವಾ ಕಾರ್ಯವಲ್ಲದ ಮುಖ್ಯವಾದ ಪರಬ್ರಹ್ಮವನ್ನೇ ಸೇರಿಸುತ್ತಾನೆಯೊ ? —ಎಂಬುದು ಸಂಶಯ, ಏಕೆಂದರೆ ಬ್ರಹ್ಮಶಬ್ದವನ್ನು ಪ್ರಯೋಗಿಸಿದೆ ಮತ್ತು ಗತಿ-ಶ್ರುತಿಯಿದ

ಅಮಾನವ-ಪುರುಷನು ಇವರನ್ನು ಕಾರ್ಯವೂ ಸಗುಣವೂ ಆದ ಅಪರಬ್ರಹ್ಮದ ಬಳಿಗೇ ಸೇರಿಸುತ್ತಾನೆಂದು **ಆಚಾರ್ಯ ಬಾದರಿಯು** ಅಭಿಪ್ರಾಯಪಡುತ್ತಾನೆ,[1] ಏಕೆಂದರೆ ಅದರ ಬಳಿಗೆ ಹೋಗಲು ಸಾಧ್ಯವಾಗುತ್ತದೆ, ಒಂದು ಪ್ರದೇಶದಲ್ಲಿರುವ ಕಾರ್ಯ-ಬ್ರಹ್ಮವು ಗಂತವ್ಯವಾಗುವುದೂ ಹೊಂದುತ್ತದೆ ಆದರೆ ಬ್ರಹ್ಮದಲ್ಲಿ ಗಂತೃತ್ವವಾಗಲಿ ಗಂತವ್ಯತ್ವವಾಗಲಿ ಗತಿಯಾಗಲಿ ಕಲ್ಪಿಸಲು ಸಾಧ್ಯವಿಲ್ಲ, ಏಕಂದರೆ ಅದು ಸರ್ವಗತವೂ ಗಂತೃಗಳ ಪ್ರತ್ಯಗಾತ್ಮವೂ ಆಗಿದೆ

**ವಿ.**—ಅರ್ಚಿರಾದಿ ಆತಿವಾಹಿಕ-ಗಣಗಳು (೧) ಕಾರ್ಯಬ್ರಹ್ಮದ, ಎಂದರೆ ಹಿರಣ್ಯಗರ್ಭನ ಉಪಾಸಕರನ್ನು ಒಯ್ಯುತ್ತಾರೆಯೊ ? (೨) ಅಥವಾ ಪರಬ್ರಹ್ಮೋ-ಪಾಸಕರನ್ನು ಒಯ್ಯುತ್ತಾರೆಯೊ ? (೩) ಅಥವಾ ಪರಬ್ರಹ್ಮೋಪಾಸಕರನ್ನೂ ಮತ್ತು ಪರಮಾತ್ಮನೇ ಜೀವನ ಆತ್ಮನೆಂದು ಉಪಾಸಿಸುವವರನ್ನೂ ಒಯ್ಯುತ್ತಾರೆಯೊ ?— ಎಂಬುದು ಸಂಶಯ ಕಾರ್ಯ ಬ್ರಹ್ಮೋಪಾಸಕರನ್ನೇ ಒಯ್ಯುತ್ತಾರೆಂಬುದು ಬಾದರಿಯ ಅಭಿಪ್ರಾಯ, ಏಕೆಂದರೆ ಅಂಥವರಿಗೇ ಪರಿಚ್ಛಿನ್ನದೇಶದಲ್ಲಿರುವ ವಸ್ತುವನ್ನು ಸೇರಲು ಸಾಧ್ಯವಾಗುತ್ತದ ಪರಿಪೂರ್ಣವೂ ಸರ್ವಜ್ಞವೂ ಸರ್ವಗತವೂ ಸರ್ವಾತ್ಮಭೂತವೂ ಆದ ಬ್ರಹ್ಮವನ್ನು ಉಪಾಸಿಸುವವರು ಅದನ್ನು ಹೊಂದಲು ಒಂದು ದೇಶಕ್ಕೆ ಹೋಗುತ್ತಾರೆಂದು ಭಾವಿಸಲು ಸಾಧ್ಯವಾಗುವುದಿಲ್ಲ.

---

*ಶ್ರೀಭಾಷ್ಯ ಮಧ್ವಭಾಷ್ಯಗಳಲ್ಲಿ ಈ ಅಧಿಕರಣವು ಈ ಪಾದದ ಕೊನೆಯವರೆಗೂ ಹೋಗುತ್ತದೆ ಇದು ಮಧ್ವಭಾಷ್ಯದಲ್ಲಿ ಕಾರ್ಯಪ್ರಾಪ್ತ್ಯಧಿಕರಣ ಎನಿಸಿದೆ

[1] ತತ್ರ ಕಾರ್ಯಮೇವ ಸಗುಣಪರಂ ಬ್ರಹ್ಮೈನಾನ್ ಗಮಯತ್ಯಮಾನವಃ ಪುರುಷ ಇತಿ ಬಾದರಿರಾಚಾರ್ಯೋ ಮನ್ಯತೇ (ಸೂ ಭಾ ).

ದ್ವೈ.—'ವಾಯುವು ಚತುರ್ಮುಖಬ್ರಹ್ಮನಲ್ಲಿಗೆ ಜೀವನನ್ನು ಒಯ್ಯುತ್ತಾನೆ ಎಂದು ಬಾದರಿಯು ತಿಳಿದುಕೊಳ್ಳುತ್ತಾನೆ; ಏಕೆಂದರೆ ಅದು ಹೊಂದುತ್ತದೆ'[1] ಎಂಬುದು ಸೂತ್ರಾರ್ಥ.

## ವಿಶೇಷಿತತ್ವಾಚ್ಚ ॥ ೮ ॥

೮. (ಶ್ರುತ್ಯಂತರದಲ್ಲಿ) ವಿಶೇಷಣವಿರುವುದರಿಂದಲೂ (ಈ ಗತಿಯು ಕಾರ್ಯಬ್ರಹ್ಮದ ವಿಷಯವೇ).

'ಬ್ರಹ್ಮಲೋಕಗಳಿಗೆ ಅವರನ್ನು ಕರೆದುಕೊಂಡು ಹೋಗುತ್ತಾನೆ. ಅವರು ಆ ಬ್ರಹ್ಮಲೋಕಗಳಲ್ಲಿ ಪ್ರಕೃಷ್ಟರಾಗಿ ಅನೇಕ ಸಂವತ್ಸರಗಳವರೆಗೆ ವಾಸಿಸುತ್ತಾರೆ'[2] (ಬೃ. ಉ. ೬. ೨. ೧೫) ಎಂದು ಶ್ರುತ್ಯಂತರದಲ್ಲಿ ವಿಶೇಷಣವಿರುವುದರಿಂದ ಈ ಗತಿಯು ಕಾರ್ಯಬ್ರಹ್ಮದ ವಿಷಯವೆಂದು ತಿಳಿದುಬರುತ್ತದೆ. 'ಬ್ರಹ್ಮಲೋಕಗಳಿಗೆ' ಎಂದು ಬಹುವಚನದಿಂದ ವಿಶೇಷಣವನ್ನು ಹೇಳಿರುವುದು ಪರಬ್ರಹ್ಮಕ್ಕೆ ಹೊಂದುವುದಿಲ್ಲ, ಅವಸ್ಥಾಭೇದವಿರುವ ಕಾರ್ಯಬ್ರಹ್ಮಕ್ಕೆ ಹೊಂದಬಹುದು. ಲೋಕಶಬ್ದವೂ ಕಾರ್ಯವಿಷಯಕವಾದ ಸಂನಿವೇಶವಿಶಿಷ್ಟವಾದ ಭೋಗಭೂಮಿಗೇ ಸರಿಯಾಗಿ ಹೊಂದುತ್ತದೆ. ಅಧಿಕರಣ (ಎಂದರೆ ಸ್ಥಾನ), ಅಧಿಕರ್ತವ್ಯ (ಎಂದರೆ ಅದರಲ್ಲಿ ಇರುವವನು)—ಎಂಬ ಶ್ರುತಿಯ ನಿರ್ದೇಶವೂ ಪರಬ್ರಹ್ಮಕ್ಕೆ ಮುಖ್ಯಾರ್ಥದಲ್ಲಿ ಹೊಂದುವುದಿಲ್ಲ. ಆದುದರಿಂದ ಜೀವರ ಒಯ್ಯುವಿಕೆಯೆಂಬುದು ಕಾರ್ಯಬ್ರಹ್ಮದ ವಿಷಯವೇ ಆಗಿರುತ್ತದೆ.

ವಿ.—ಶ್ರುತಿಯು (ಬೃ. ೬. ೨. ೧೫) ಬಹುವಚನದಿಂದ ಹೇಳುವ ಲೋಕಶಬ್ದವು ಲೋಕವಿಶೇಷದಲ್ಲಿರುವ ಹಿರಣ್ಯಗರ್ಭನ ಉಪಾಸಕರನ್ನು ಅಮಾನವ-ಪುರುಷನು ಒಯ್ಯುತ್ತಾನೆಂದು ವಿಶೇಷವಾಗಿ ಹೇಳುತ್ತದೆ. 'ನಾನು ಪ್ರಜಾಪತಿಯ ಸಭೆಯನ್ನು ಹೊಂದುತ್ತೇನೆ' (ಛಾಂ. ಉ. ೮. ೧೪) ಎಂಬ ಶ್ರುತಿಯು ಅರ್ಚಿರಾದಿಯಲ್ಲಿ ಹೋಗುವವನು ಹಿರಣ್ಯಗರ್ಭನ ಸಮೀಪಕ್ಕೆ ಹೋಗುತ್ತಾನೆಂಬುದನ್ನು ತಿಳಿಸುತ್ತದೆ.

ದ್ವೈ.—'ಅವನು ಪರಮಾತ್ಮನನ್ನು ನೋಡಿದರೂ ಚತುರ್ಮುಖ-ಬ್ರಹ್ಮನನ್ನೇ ಹೊಂದುತ್ತಾನೆ' ಎಂದು ಕೌಷಾರವ-ಶ್ರುತಿಯಲ್ಲಿ ವಿಶೇಷಣವನ್ನು ಕೊಟ್ಟಿರುತ್ತದೆ.[3]

---

[1] ಸ ಏನಾನ್ ಬ್ರಹ್ಮ ಗಮಯತೀತಿ ಕಾರ್ಯಂ ಬ್ರಹ್ಮ ಗಮಯತೀತಿ ಬಾದರಿರ್ಮನ್ಯತೇ (ಮ. ಭಾ.).

[2] ಬ್ರಹ್ಮಲೋಕಾನ್ ಗಮಯತಿ ತೇ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸಂತಿ ।

[3] ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಮಿತಿ ಕೌಷಾರವಶ್ರುತಿಃ (ಮ. ಭಾ.).

**ಸಾಮೀಪ್ಯಾತ್ತು ತದ್ವ್ಯಪದೇಶಃ ॥ ೯ ॥**

೯. ಆದರೆ ಸಾಮೀಪ್ಯದಿಂದ ಆ ವ್ಯಪದೇಶವಾಗುತ್ತದೆ.

**ಆಕ್ಷೇಪಣೆ**—ಕಾರ್ಯವಿಷಯದಲ್ಲಿಯೂ ಬ್ರಹ್ಮಶಬ್ದವು[1] ಹೊಂದುವುದಿಲ್ಲ. ಸಮನ್ವಯಾಧ್ಯಾಯದಲ್ಲಿ ಬ್ರಹ್ಮವು ಸಮಸ್ತಜಗತ್ತಿನ ಜನ್ಮಾದಿಗಳಿಗೆ ಕಾರಣವೆಂದು ಸ್ಥಾಪಿಸಿದೆಯಲ್ಲ!

**ಪರಿಹಾರ**—ಅಪರಬ್ರಹ್ಮವು ಪರಬ್ರಹ್ಮದ ಸಮೀಪದಲ್ಲಿರುವುದರಿಂದ ಅದರಲ್ಲಿ ಬ್ರಹ್ಮಶಬ್ದದ ಪ್ರಯೋಗವು ವಿರುದ್ಧವಾಗುವುದಿಲ್ಲ;[2] ಏಕೆಂದರೆ ಪರಬ್ರಹ್ಮವೇ ಕೆಲವು ವಿಕಾರಗಳ ಧರ್ಮಗಳಾದ ಮನೋಮಯತ್ವಾದಿಗಳಿಂದ ಕೂಡಿದ ಉಪಾಸನೆಗಾಗಿ ಉಪದೇಶಿಸಲ್ಪಟ್ಟಿರುವಾಗ ಅಪರಬ್ರಹ್ಮವೆನಿಸುತ್ತದೆ.

ವಿ.—ಗಂತವ್ಯನಾದವನು ಹಿರಣ್ಯಗರ್ಭನಾಗಿದ್ದರೆ **ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತಿ** (ಛಾಂ. ಉ. ೪. ೧೫. ೫) ಎಂಬುದು ಸರಿಯಾಗುವುದಿಲ್ಲ, **ಸ ಏತಾನ್ ಬ್ರಹ್ಮಾಣಂ ಗಮಯತಿ** ಎಂದು ಪುಲ್ಲಿಂಗವಾಗಿರಬೇಕಾಗಿತ್ತು—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ. **ಯೋ ಬ್ರಹ್ಮಾಣಂ ವಿದಧಾತಿ** (ಶ್ವೇ. ಉ. ೬. ೧೮) ಎಂಬ ಶ್ರುತಿಯ ಪ್ರಕಾರ ಹಿರಣ್ಯಗರ್ಭನು ಪರಬ್ರಹ್ಮನಿಗೆ ಪ್ರಥಮಜನಾಗಿರುವುದಿಂದ ಅವನ ಸಮೀಪದಲ್ಲಿಯೇ ಇರುತ್ತಾನೆ; ಆದುದರಿಂದ ಬ್ರಹ್ಮಶಬ್ದವು ನಪುಂಸಕಲಿಂಗದಿಂದ ಹೇಳಲ್ಪಟ್ಟಿದೆ.

**ದ್ವೈ.**—**ಬ್ರಹ್ಮವಿದಾಪ್ನೋತಿ ಪರಮ್** (ತೈ. ಉ. ೨. ೧) ಎಂಬ ವ್ಯಪದೇಶವು ಜ್ಞಾನಿಯು ಪರಬ್ರಹ್ಮನನ್ನು ಶೀಘ್ರದಲ್ಲಿ ಸೇರುತ್ತಾನೆ ಎಂಬುದನ್ನು ತಿಳಿಸುತ್ತದೆ.[3]

**ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ॥ ೧೦ ॥**

೧೦. ಕಾರ್ಯ (ಜಗತ್ತು) ಮುಗಿದ ಮೇಲೆ ಅದರ ಅಧ್ಯಕ್ಷನೊಂದಿಗೆ ಅದಕ್ಕಿಂತ ಹೆಚ್ಚಿನದನ್ನು (ಜೀವರು ಸೇರುತ್ತಾರೆ); ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ.

**ಆಕ್ಷೇಪಣೆ**—ಜೀವರು ಕಾರ್ಯಬ್ರಹ್ಮವನ್ನು ಹೊಂದುವುದಾದರೆ ಶ್ರುತಿಯು ಹೇಳುವ ಅನಾವೃತ್ತಿಯು ಹೊಂದುವುದಿಲ್ಲ; ಏಕೆಂದರೆ ಪರಬ್ರಹ್ಮದ ಹೊರತು ಎಲ್ಲಿಯೂ ನಿತ್ಯತ್ವವು ಸಂಭವಿಸುವುದಿಲ್ಲ. ಶ್ರುತಿಯೂ ಕೂಡ ದೇವಯಾನದಲ್ಲಿ ಹೋಗುವವರು

---

1 ಏಕೆಂದರೆ ಈ ಶಬ್ದವು ನಪುಂಸಕವಾಗಿದೆ.

2 ಪರಬ್ರಹ್ಮಸಾಮೀಪ್ಯಾದಪರಸ್ಮಿನ್ ಬ್ರಹ್ಮಣಸ್ತಸ್ಮಿನ್ನಪಿ ಬ್ರಹ್ಮಶಬ್ದಪ್ರಯೋಗೋ ನ ವಿರುಧ್ಯತೇ (ಸೂ. ಭಾ.).

3 ಬ್ರಹ್ಮವಿದಾಪ್ನೋತಿ ಪರಮಿತಿ ವ್ಯಪದೇಶಸ್ತು ಸಮೀಪತ ಏವ ಪರಮಪಿ ಪ್ರಾಪ್ನೋತೀತ್ಯೇತದರ್ಥಮೇವ (ಮ. ಭಾ.).

ಹಿಂತಿರುಗುವುದಿಲ್ಲವೆಂದು ಹೇಳುತ್ತದೆ: 'ಇದರಿಂದ ಹೋಗಿ ಬ್ರಹ್ಮವನ್ನು ಹೊಂದುವವರು ಈ ಸಂಸಾರಚಕ್ರಕ್ಕೆ ಹಿಂತಿರುಗುವುದಿಲ್ಲ' (ಛಾಂ. ಉ. ೪. ೧೫. ೫) ಇತ್ಯಾದಿ

**ಪರಿಹಾರ**—ಕಾರ್ಯಬ್ರಹ್ಮಲೋಕದ ಪ್ರಲಯವು ಬಂದೊದಗಿದಾಗ ಅಲ್ಲಿಯೇ ಸಮ್ಯಗ್ದರ್ಶನವನ್ನು ಪಡೆದ ಜೀವರು ಅದರ ಅಧ್ಯಕ್ಷನಾದ ಹಿರಣ್ಯಗರ್ಭನೊಂದಿಗೆ ಆ ಲೋಕಕ್ಕಿಂತ ಪರಿಶುದ್ಧವಾದ ವಿಷ್ಣುವಿನ ಪರಮಪದವನ್ನು ಹೊಂದುತ್ತಾರೆ.[1] ಹೀಗೆ ಕ್ರಮಮುಕ್ತಿಯಾಗುವುದೆಂದು ಅನಾವೃತ್ತಿಯನ್ನು ಹೇಳುವ ಶ್ರುತಿಗಳಿಂದ ತಿಳಿದುಕೊಳ್ಳಬೇಕು; ಏಕೆಂದರೆ ಗತಿಪೂರ್ವಕವಾಗಿ ಪರಪ್ರಾಪ್ತಿಯು ಸಂಭವಿಸುವುದಿಲ್ಲವೆಂದು ಹಿಂದೆಯೇ ತೋರಿಸಿದೆ.

**ವಿ.**—ದ್ವಿಪರಾರ್ಧವಾದ ಮೇಲೆ ಕಾರ್ಯನಾದ ಹಿರಣ್ಯಗರ್ಭನಿಗೆ ಅವಸಾನವಿದೆಯೆಂದು ಶ್ರುತಿಯು ಹೇಳುವುದರಿಂದ ಹಿರಣ್ಯಗರ್ಭನಲ್ಲಿಗೆ ಹೋದವರು ಪುನಃ ಹಿಂತಿರುಗಬೇಕು ಎಂಬ ಆಕ್ಷೇಪಕ್ಕೆ ಉತ್ತರವು ಹೀಗಿದೆ: ಕಾರ್ಯವಾದ ಬ್ರಹ್ಮಲೋಕವು ಮುಗಿಯಲು ಅದರ ಅಧ್ಯಕ್ಷನೂ ತನ್ನ ಜ್ಞಾನಾಧಿಕಾರವನ್ನು ತಿಳಿದುಕೊಂಡವನೂ ಆದ ಹಿರಣ್ಯಗರ್ಭನೊಂದಿಗೆ ಅಲ್ಲಿರುವ ಜೀವನೂ ಜ್ಞಾನವನ್ನು ಪಡೆದುಕೊಂಡು ಆ ಲೋಕಕ್ಕಿಂತಲೂ ಶ್ರೇಷ್ಠವಾದ ಪರಬ್ರಹ್ಮವನ್ನು ಹೊಂದುತ್ತಾನೆ. 'ಅವರೆಲ್ಲ ಬ್ರಹ್ಮಲೋಕದಲ್ಲಿ ಚರಮಕಾಲದಲ್ಲಿ ಬ್ರಹ್ಮಭೂತರಾಗಿ ಮುಕ್ತರಾಗುವರು' (ಮುಂ. ಉ. ೩. ೨. ೬) ಎಂದು ಶ್ರುತಿಯೂ ತಿಳಿಸುತ್ತದೆ.

**ವ್ಯಾ.**—**ತೇ ಹ ಬ್ರಹ್ಮಾಣಮಭಿಸಂಪದ್ಯ ಯದೈತದ್ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ** ಎಂಬ ಸೌಪರ್ಣಶ್ರುತಿಯ ಪ್ರಕಾರ ಮಹಾಪ್ರಲಯವು ಬಂದಾಗ ಕಾರ್ಯಜಗತ್ತಿನ ಅಧ್ಯಕ್ಷನಾದ ಚತುರ್ಮುಖಬ್ರಹ್ಮನೊಂದಿಗೆ ಪರಬ್ರಹ್ಮನನ್ನು ಜೀವರೂ ಹೊಂದುತ್ತಾರೆ[2] ಎಂದು ತಿಳಿದುಬರುತ್ತದೆ.

## ಸ್ಮೃತೇಶ್ಚ ॥ ೧೧ ॥

೧೧. ಸ್ಮೃತಿಯಿಂದಲೂ (ಈ ಅರ್ಥವನ್ನು ಒಪ್ಪಿಕೊಳ್ಳಬೇಕು).

ಸ್ಮೃತಿಯೂ ಕೂಡ ಈ ಅರ್ಥವನ್ನೇ ಒಪ್ಪುತ್ತದೆ: 'ಮಹಾಪ್ರಲಯವೂ ಮತ್ತು ಪರನಾದ ಹಿರಣ್ಯಗರ್ಭನ ಅವಸಾನವೂ ಬಂದಾಗ ಅವರೆಲ್ಲರೂ ಶುದ್ಧ ಮನಸ್ಸಿನಿಂದ

---

1 ಕಾರ್ಯಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ ತತ್ರೈವೋತ್ಪನ್ನಸಮ್ಯಗ್ದರ್ಶನಾಃ ಸಂತಸ್ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹಾತಃ ಪರಂ ಪರಿಶುದ್ಧಂ ವಿಷ್ಣೋಃ ಪರಮಂ ಪದಂ ಪ್ರತಿಪದ್ಯಂತ ಇತಿ (ಸೂ. ಭಾ.).

2 ಮಹಾಪ್ರಲಯೇ ತದಧ್ಯಕ್ಷೇಣ ಬ್ರಹ್ಮಣಾ ಸಹ ಗಚ್ಛತಿ (ಮ. ಭಾ.).

ಬ್ರಹ್ಮನೊಡನೆ ಪರಮಪದವನ್ನು ಹೊಂದುತ್ತಾರೆ'[1] ಆದುದರಿಂದ ಕಾರ್ಯಬ್ರಹ್ಮದ ವಿಷಯದಲ್ಲಿಯೇ ಶ್ರುತಿಯು ಗತಿಯನ್ನು ಹೇಳುತ್ತದೆ ಎಂಬುದು ಸಿದ್ಧಾಂತವು

**ವಿ.**—ಈ ಅರ್ಥವನ್ನೇ ಸ್ಮೃತಿಯೂ[2] ಹೇಳುತ್ತದೆ ಆದ್ದರಿಂದ ಹಿರಣ್ಯಗರ್ಭೋಪಾಸಕರನ್ನೇ ಅರ್ಚಿರಾದಿ-ಗಣವು ಒಯ್ಯುತ್ತದೆ ಎಂಬುದು ಬಾದರಿಯ ಸಿದ್ಧಾಂತವು

**ವ್ಯಾ.**—**ಬ್ರಹ್ಮಣಾ ಸಹ ತೇ ಸರ್ವೇ** ಎಂಬ ಸ್ಮೃತಿಯೂ ಜ್ಞಾನಿಯು ಚತುರ್ಮುಖನೊಂದಿಗೆ ಕೂಡಿ ಪರಬ್ರಹ್ಮನನ್ನು ಹೊಂದುತ್ತಾನೆ ಎಂಬುದನ್ನು ತಿಳಿಸುತ್ತದ

## ಪರಂ ಜೈಮಿನಿರ್ಮುಖ್ಯತ್ವಾತ್ ॥ ೧೨ ॥

೧೨ ಪರಬ್ರಹ್ಮನಲ್ಲಿಗೇ (ಜೀವಾತ್ಮರನ್ನು ಒಯ್ಯುತ್ತಾರೆಂದು) ಜೈಮಿನಿಯು ಅಭಿಪ್ರಾಯಪಡುತ್ತಾನೆ, ಏಕೆಂದರೆ ಇದು (ಬ್ರಹ್ಮಶಬ್ದದ) ಮುಖ್ಯಾರ್ಥವಾಗಿದೆ

ಯಾವ ಪೂರ್ವಪಕ್ಷವನ್ನು ಆಶಂಕಿಸಿ ೭-೧೧ ಸೂತ್ರಗಳಲ್ಲಿ ಸಿದ್ಧಾಂತವನ್ನು ಸ್ಥಾಪಿಸಲಾಗಿದೆ?—ಎಂಬ ಪ್ರಶ್ನೆಗೆ ಈಗ ಸೂತ್ರಗಳಿಂದಲೇ ಪೂರ್ವಪಕ್ಷವನ್ನು ತೋರಿಸುತ್ತಾರೆ

'ಅವನು ಇವರನ್ನು ಬ್ರಹ್ಮದ ಬಳಿಗೆ ಸೇರಿಸುತ್ತಾನೆ' (ಛಾಂ ಉ ೪ ೧೫ ೫) ಎಂಬಲ್ಲಿ ಜೈಮಿನಿ ಆಚಾರ್ಯನು 'ಅವನು ಇವರಿಗೆ ಪರಬ್ರಹ್ಮವನ್ನೇ ಪಡೆಯಿಸುತ್ತಾನೆ' ಎಂದು ಅರ್ಥಮಾಡಿರುತ್ತಾನೆ, ಏಕೆಂದರೆ ಪರಬ್ರಹ್ಮವು ಗೌಣವಾಗಿರುತ್ತದೆ ಮುಖ್ಯಾರ್ಥ ಮತ್ತು ಗೌಣ—ಇವೆರಡರಲ್ಲಿ ಮುಖ್ಯಾರ್ಥವನ್ನೇ ಅಪೇಕ್ಷಿಸಬೇಕು

**ವಿ.**—ಅರ್ಚಿರಾದಿ-ಗಣವು ಪರಬ್ರಹ್ಮೋಪಾಸಕರನ್ನೇ ಒಯ್ಯುತ್ತದೆ—ಎಂಬುದು ಜೈಮಿನಿಯ ಅಭಿಪ್ರಾಯವು, ಏಕಂದರೆ ಶ್ರುತಿಯಲ್ಲಿ (ಛಾಂ ಉ ೪ ೧೫ ೫) ಹೇಳಿರುವ ಬ್ರಹ್ಮಶಬ್ದಕ್ಕೆ ಪರಬ್ರಹ್ಮದಲ್ಲಿಯೇ ಮುಖ್ಯಾರ್ಥವಿದೆ ಜೀವನಿಗೆ ಗತಿಯಿಲ್ಲವೆಂಬುದರಲ್ಲಿ ಪ್ರಮಾಣವಿಲ್ಲ, ಪರಬ್ರಹ್ಮವು ಸರ್ವಗತವಾಗಿದ್ದರೂ ಜ್ಞಾನಿಯು ಒಂದು ವಿಶಿಷ್ಟದೇಶಕ್ಕ ಹೋದ ಮೇಲೆಯೇ ಅವಿದ್ಯೆಯಿಂದ ಬಿಡಿಸಿಕೊಳ್ಳುತ್ತಾನೆಂದು ಶಾಸ್ತ್ರವು ಹೇಳುತ್ತದ, ಇದು ಹೇಗಂದರೆ ಜ್ಞಾನೋತ್ಪತ್ತಿಯು ವರ್ಣಾಶ್ರಮಧರ್ಮಾದಿಗಳನ್ನು ಅಪೇಕ್ಷಿಸಿದ ಹಾಗೆ 'ಬ್ರಹ್ಮಲೋಕಗಳು' ಎಂದು ಬಹುವಚನದಿಂದ ವಿಶೇಷಿಸಿರುವುದರಿಂದ ಅದು ಕಾರ್ಯವಾದ ಹಿರಣ್ಯಗರ್ಭನಾಗಬೇಕು ಎಂಬುದೂ ಸರಿಯಲ್ಲ, ಏಕೆಂದರೆ ಪೂರ್ವ-

---

[1] ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥

[2] ಮೇಲಿನ ಶ್ಲೋಕವನ್ನು ನೋಡಿ

ಮೀಮಾಂಸೆಯ ಪ್ರಕಾರ ನಿಷಾದ-ಸ್ಥಪತಿ ಎಂಬ ಸಮಾಸವು ನಿಷಾದನಾದ ಸ್ಥಪತಿಯನ್ನು ಸೂಚಿಸುತ್ತದೆಯೇ ಹೊರತು ನಿಷಾದರ ಸ್ಥಪತಿಯನ್ನು ಸೂಚಿಸುವುದಿಲ್ಲ 'ಅದಿತಿಯ ಪಾಶಗಳು' **ಅದಿತೇಃ ಪಾಶಾನ್** ಎಂಬ ಮಂತ್ರದಲ್ಲಿ ಒಂದೇ ಪಾಶವು ಸೂಚಿಸಲ್ಪಟ್ಟಂತೆ ಒಂದು ವಸ್ತುವೆಂದು ನಿಶ್ಚಿತವಾಗಿದ್ದರೆ ಅದನ್ನು ಬಹುವಚನದಿಂದ ಹೇಳಬಹುದು ಆದುದರಿಂದ ಇಲ್ಲಿ ಶ್ರುತಿ ಸ್ಮೃತಿ ಇತಿಹಾಸ ಪುರಾಣ ಎಂಬ ಪ್ರಮಾಣಗಳ ಪ್ರಕಾರ ಪರಿಪೂರ್ಣನೂ ಸರ್ವಗತನೂ ಆದ ಪರಬ್ರಹ್ಮನ ಸ್ವೇಚ್ಛೆಯಿಂದ ಕಲ್ಪಿತವಾದ ಲೋಕಗಳು ಅನಂತವಾಗಿರುತ್ತವೆ ಎಂದು ತಿಳಿದುಬರುತ್ತದೆ

**ದ್ವೈತ.—ಸ ಏನಾನ್ ಬ್ರಹ್ಮ ಗಮಯತಿ** ಎಂಬಲ್ಲಿ ಬ್ರಹ್ಮಶಬ್ದಕ್ಕೆ ಮುಖ್ಯತ್ವವಿರುವುದರಿಂದ ವಾಯುವು ಜೀವನನ್ನು ಪರಬ್ರಹ್ಮನಲ್ಲಿಗೇ ಕರೆದುಕೊಂಡು ಹೋಗುತ್ತಾನೆ—ಎಂದು ತಿಳಿದುಕೊಳ್ಳಬೇಕು ಇದು ಜೈಮಿನಿಯ ಅಭಿಪ್ರಾಯವು [1]

**ದರ್ಶನಾಚ್ಚ || ೧೩ ||**

೧೩ ಮತ್ತು ದರ್ಶನವಿರುವುದರಿಂದಲೂ

'ಅದರ ಮೂಲಕ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ' (ಛಾಂ ಉ ೮ ೬ ೬) ಎಂಬ ಶ್ರುತಿಯು ಗತಿಪೂರ್ವಕವಾಗಿಯೇ ಅಮೃತತ್ವವಾಗುವುದೆಂದು ತಿಳಿಸುತ್ತದೆ ಅಮೃತತ್ವವು ಪರಬ್ರಹ್ಮದಲ್ಲಿ ಆಗುತ್ತದೆಯೇ ಹೊರತು ವಿನಾಶಿಯಾದ ಕಾರ್ಯದಲ್ಲಲ್ಲ ಆದುದರಿಂದಲೇ ಶ್ರುತಿಯು 'ಎಲ್ಲಿ ಬೇರೊಂದನ್ನು ನೋಡುವನೊ .ಅದು ಅಲ್ಪವು, ಅದು ಮರ್ತ್ಯವು' (ಛಾಂ ಉ ೭ ೨೪ ೧) ಎಂದು ಹೇಳುತ್ತದೆ ಕೆರಸಲ್ಲಿಗಳಲ್ಲಿಯೂ ಪರಬ್ರಹ್ಮದ ಕಡೆಗೇ ಜೀವನ ಗತಿಯನ್ನು ಹೇಳಿರುತ್ತದೆ ಅಲ್ಲಿ 'ಧರ್ಮಕ್ಕಿಂತ ಭಿನ್ನವೂ ಅಧರ್ಮಕ್ಕಿಂತ ಭಿನ್ನವೂ' (ಕ ಉ ೧ ೨ ೧೪) ಎಂದು ಪರಬ್ರಹ್ಮವನ್ನೇ ಉಪಕ್ರಮಿಸಿದೆಯೇ ಹೊರತು ವಿದ್ಯಾಂತರದ ಪ್ರಕ್ರಮವಿಲ್ಲ

ವಿ.—ಮೂರ್ಧನ್ಯನಾಡಿಯಿಂದ ನಿಷ್ಕ್ರಮಿಸಿ ದೇವಯಾನದಲ್ಲಿ ಹೊರಟುಹೋದ ಜೀವನು ಪರಬ್ರಹ್ಮನನ್ನೇ ಹೊಂದುತ್ತಾನೆಂದು ಶ್ರುತಿಯು ತಿಳಿಸುತ್ತದೆ. 'ಈ ಸಂಪ್ರಸಾದ-ಗುಣವುಳ್ಳ ಆತ್ಮನು ಈ ಶರೀರದಿಂದ ಎದ್ದು ಪರಮಾತ್ಮನ ಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಕಾಣಿಸಿಕೊಳ್ಳುತ್ತಾನೆ'- (ಛಾಂ ಉ ೮ ೧೨ ೩)

**ದ್ವೈತ.**—'ಜೀವರಿಗೆ ಪರಬ್ರಹ್ಮನ ದರ್ಶನವಾಗುವುದರಿಂದಲೂ (ಅವರು ಪರಬ್ರಹ್ಮನನ್ನೇ ಸೇರುತ್ತಾರೆಂಬುದು ಯುಕ್ತವು)' ಎಂಬುದು ಸೂತ್ರಾರ್ಥ

ಇದೂ ಜೈಮಿನಿಯ ಅಭಿಪ್ರಾಯ

---

[1] ಬ್ರಹ್ಮಶಬ್ದಸ್ಯ ತತ್ರೈವ ಮುಖ್ಯತ್ವಾತ್ ಪರಮೇವ ಬ್ರಹ್ಮ ಗಮಯತೀತಿ ಜೈಮಿನಿರ್ಮನ್ಯತೇ (ಮ ಭಾ )

[2] ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

## ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ॥ ೧೪ ॥

೧೪. ಮತ್ತು ಕಾರ್ಯಬ್ರಹ್ಮವನ್ನು ಪಡೆಯಲು ಸಂಕಲ್ಪವಿರುವುದಿಲ್ಲ.

'ನಾನು ಪ್ರಜಾಪತಿಯ ಸಭೆಯನ್ನೂ ಅರಮನೆಯನ್ನೂ ಹೊಂದುತ್ತೇನೆ' (ಛಾಂ. ಉ. ೮. ೧೪. ೧) ಎಂಬಲ್ಲಿ ತಿಳಿಸಿರುವ ಸಂಕಲ್ಪವು ಕಾರ್ಯಬ್ರಹ್ಮದ ವಿಷಯವಾಗಲಾರದು; ಏಕೆಂದರೆ ಆಕಾಶವೆಂಬ ಹೆಸರಿನ ಬ್ರಹ್ಮವು ನಾಮರೂಪಗಳನ್ನು ವಿಂಗಡಿಸುತ್ತದೆ; 'ನಾಮರೂಪಗಳು ಯಾವುದರಲ್ಲಿ ಇವೆಯೊ ಅದು ಬ್ರಹ್ಮವು' ಎಂಬ ಹಿಂದಿನ ವಾಕ್ಯದಲ್ಲಿ ಕಾರ್ಯಕ್ಕಿಂತ ಬೇರೆಯಾದ ಪರಬ್ರಹ್ಮವೇ ಪ್ರಕೃತವಾಗಿದೆ; ಮತ್ತೆ 'ನಾನು ಬ್ರಾಹ್ಮಣರ ಯಶನ್ನಾಗುತ್ತೇನೆ' ಎಂಬ ಮುಂದಿನ ವಾಕ್ಯವೂ ಸರ್ವಾತ್ಮತ್ವದಿಂದಲೇ ಉಪಕ್ರಮವಾಗಿರುತ್ತದೆ. ಯಶಸ್ಸು ಪರಬ್ರಹ್ಮದ ಹೆಸರೆಂದು ಶ್ರುತಿಯಿಂದ (ಶ್ವೇ ಉ. ೪. ೧೯) ತಿಳಿದುಬರುತ್ತದೆ. ಪದ್-ಧಾತುವಿಗೂ ಗತಿಯ ಅರ್ಥವೇ ಇರುವುದರಿಂದ ಮಾರ್ಗದ ಅಪೇಕ್ಷೆಯಿದೆಯೆಂಬುದು ತಿಳಿದುಬರುತ್ತದೆ. ಆದುದರಿಂದ ಗತಿ-ಶ್ರುತಿಗಳೂ ಪರಬ್ರಹ್ಮವಿಷಯವೆಂಬುದು ಮತ್ತೊಂದು ಪೂರ್ವಪಕ್ಷವು.

ಸೂತ್ರಕಾರರು ಹೀಗೆ ಎರಡು ಪಕ್ಷಗಳನ್ನು ಹೇಳಿರುತ್ತಾರೆ: ಮೊದಲನೆಯ ಪಕ್ಷವು (ಸೂ. ೭-೧೧) ಗತಿಯ ಉಪಪತ್ತಿಯನ್ನು ತಿಳಿಸುತ್ತದೆ; ಎರಡನೆಯ ಪಕ್ಷವು (ಸೂ. ೧೨-೧೪) ಬ್ರಹ್ಮ-ಶಬ್ದದ ಮುಖ್ಯಾರ್ಥವು ಅಪೇಕ್ಷಣೀಯವೆಂದು ಹೇಳುತ್ತದೆ. ಇವುಗಳಲ್ಲಿ ಮೊದಲನೆಯ ಪಕ್ಷದ ಗತಿಯ ಉಪಪತ್ತಿಗಳು ಎರಡನೆಯ ಪಕ್ಷದ ಮುಖ್ಯತ್ವಾದಿಗಳನ್ನು ಆಭಾಸಗೊಳಿಸಲು ಶಕ್ತವಾಗಿರುತ್ತವೆಯೇ ಹೊರತು ಎರಡನೆಯ ಪಕ್ಷವು ಮೊದಲನೆಯದನ್ನು ಆಭಾಸಗೊಳಿಸಲಾರದು; **ಆದುದರಿಂದ ಮೊದಲನೆಯ ಪಕ್ಷವು ಸಿದ್ಧಾಂತವೆಂದೂ ಎರಡನೆಯದು ಪೂರ್ವಪಕ್ಷವೆಂದೂ ವ್ಯಾಖ್ಯಾನಮಾಡಿರುತ್ತೇವೆ.**

ಮುಖ್ಯಾರ್ಥವು ಅಸಂಭವವಾಗಿದ್ದರೂ ಅದನ್ನೇ ಗ್ರಹಿಸಬೇಕೆಂದು ಯಾರೂ ಆಜ್ಞಾಪಿಸಲಾರರು. ವಿದ್ಯಾಂತರವನ್ನು ಆಶ್ರಯಿಸಿಕೊಂಡಿರುವ ಗತಿಯು ಪರವಿದ್ಯಾ-ಪ್ರಕರಣದಲ್ಲಿ ಕಂಡುಬಂದರೂ ಪರವಿದ್ಯೆಯ ಸ್ತುತಿಗಾಗಿ ಬಂದಿದೆಯೆಂಬುದು ಉಪಪನ್ನವಾಗುತ್ತದೆ. ಪ್ರಜಾಪತಿಯ ಸಭಾಪ್ರವೇಶವನ್ನು ತಿಳಿಸುವ ವಾಕ್ಯವನ್ನು ಹಿಂದಿನ ವಾಕ್ಯದಿಂದ ಬಿಡಿಸಿ ಅದು ಕಾರ್ಯಬ್ರಹ್ಮಪ್ರವೇಶದ ಸಂಕಲ್ಪವೆಂದು ಹೇಳಿದರೆ ವಿರುದ್ಧವಾಗಲಾರದು. ಸಗುಣಬ್ರಹ್ಮವಿಷಯದಲ್ಲಿಯೂ ಶ್ರುತಿಗಳು 'ಸರ್ವಕರ್ಮನು, ಸರ್ವಕಾಮನು' (ಛಾಂ. ಉ. ೩. ೧೪. ೨) ಎಂದು ಸರ್ವಾತ್ಮತ್ವವನ್ನು ಹೇಳಿರುತ್ತವೆ. ಆದುದರಿಂದ ಗತಿ-ಶ್ರುತಿಗಳು ಅಪರಬ್ರಹ್ಮವನ್ನೇ ಸೂಚಿಸುತ್ತವೆ.

ಗತಿ-ಶ್ರುತಿಗಳು ಪರಬ್ರಹ್ಮವಿಷಯವೆಂಬುದು ಹೊಂದುವುದಿಲ್ಲ; ಏಕೆಂದರೆ ಪರ-ಬ್ರಹ್ಮವು ಗಂತವ್ಯವಾಗುವುದೇ ಇಲ್ಲ. ಅನೇಕ ಶ್ರುತಿಗಳು[1] ಪರಬ್ರಹ್ಮವು ಸರ್ವಗತವೂ ಸರ್ವಾಂತರವೂ ಸರ್ವಾತ್ಮಕವೂ ಆಗಿದೆಯೆಂದು ನಿರ್ಧರಿಸಿರುತ್ತವೆ. ಇಂಥ ವಿಶೇಷರೂಪ

---

[1] ಬೃ. ಉ. ೩. ೪. ೧, ಛಾಂ. ಉ. ೭. ೨೫. ೨, ಮುಂ. ಉ. ೨. ೨. ೧೧ ಇತ್ಯಾದಿ.

ದಲ್ಲಿರುವ ಪರಬ್ರಹ್ಮವು ಗಂತವ್ಯವಾಗಲಾರದು , ಏಕೆಂದರೆ ನಾವು ನೇರಿದುದನ್ನೇ ಸೇರಲಾರೆವು , ತನಗಿಂತ ಬೇರೆಯಾದುದನ್ನೇ ಮನುಷ್ಯನು ನೇರುತ್ತಾನೆಂಬುದು ಲೋಕದಲ್ಲಿ ತಿಳಿದುಬರುತ್ತದೆ ಪರಬ್ರಹ್ಮಕ್ಕೆ ಯಾವ ವಿಶೇಷವೂ ಇಲ್ಲವೆಂದು ಶ್ರುತಿಗಳು[1] ಹೇಳುವುದರಿಂದ ಅದರಲ್ಲಿ ಪ್ರದೇಶ, ಅವಸ್ಥೆ ಮೊದಲಾದುವುಗಳನ್ನು ಕಲ್ಪಿಸಿ ಗಂತವ್ಯತ್ವವನ್ನು ಮಾಡಲು ಸಾಧ್ಯವಿಲ್ಲ ಗತಿ-ಶ್ರುತಿಗಳು ಸಗುಣವಿದ್ಯಾವಿಷಯದಲ್ಲಿ ಮಾತ್ರ ಹೊಂದುತ್ತವೆ ಆಪ್-ಧಾತುವಿಗೆ ಗತಿ ಎಂಬ ಅರ್ಥವಿದ್ದರೂ ದೇಶಾಂತರಪ್ರಾಪ್ತಿಯು ಸಂಭವಿಸುವುದಿಲ್ಲವಾದುದರಿಂದ ಅವಿದ್ಯೆಯಿಂದ ಆರೋಪಿತವಾಗಿರುವ ನಾಮರೂಪಗಳನ್ನು ವಿದ್ಯೆಯಿಂದ ಲಯಮಾಡುವುದರಿಂದಲೇ ಸ್ವರೂಪಪ್ರಾಪ್ತಿಯಾಗುತ್ತದೆ ಪರ-ಅಪರ ಎಂಬ ಬ್ರಹ್ಮಗಳನ್ನು ವಿವೇಚಿಸಿ ತಿಳಿದುಕೊಳ್ಳದೆ ಇರುವುದರಿಂದ ಅಪರಬ್ರಹ್ಮದ ವಿಷಯದಲ್ಲಿರುವ ಗತಿ-ಶ್ರುತಿಗಳನ್ನು ಪರಬ್ರಹ್ಮದಲ್ಲಿ ತಪ್ಪಾಗಿ ಅಧ್ಯಾರೋಪಮಾಡಿಕೊಂಡಿರುತ್ತಾರೆ ಪರಾ-ಪರಬ್ರಹ್ಮಗಳು ಶ್ರುತಿಯಿಂದ (ಪ್ರ ಉ ೫ ೨)[2] ಸಿದ್ಧವಾಗುತ್ತವೆ ಎಲ್ಲಿ ಅವಿದ್ಯಾಕೃತವಾದ ನಾಮರೂಪಾದಿ-ವಿಶೇಷಗಳನ್ನು ಪ್ರತಿಷೇಧಿಸಿ ಅಸ್ಥೂಲಾದಿ-ಶಬ್ದಗಳಿಂದ ಬ್ರಹ್ಮವನ್ನು ಉಪದೇಶಿಸಿರುತ್ತದೆಯೊ ಅದು **ಪರ-ಬ್ರಹ್ಮವು** , ಅದನ್ನೇ ಎಲ್ಲಿ ನಾಮರೂಪಾದಿ-ವಿಶೇಷದಿಂದ ವಿಶಿಷ್ಟವಾದ ಉಪಾಸನೆಗಾಗಿ 'ಮನೋಮಯನು, ಪ್ರಾಣಶರೀರನು, ಭಾರೂಪನು' (ಛಾಂ ಉ ೩ ೧೪ ೨) ಎಂಬಿವೇ ಮೊದಲಾದ ಶಬ್ದಗಳಿಂದ ಉಪದೇಶಿಸಿರುತ್ತದೆಯೋ ಅದು **ಅಪರ-ಬ್ರಹ್ಮವು.**[3]

ಆದುದರಿಂದ ಏಳನೆಯ ಸೂತ್ರದಲ್ಲಿ ಹೇಳಿರುವ ಬಾದರಿಯ ಮತವೇ ಕೊನೆಯ ಪಕ್ಷವಾಗಿ ನಿಲ್ಲುತ್ತದೆ , ಜೈಮಿನಿಯ ಮತವನ್ನು ಹೇಳುವ ಹನ್ನೆರಡನೆಯ ಸೂತ್ರವು ಬುದ್ಧಿವಿಕಾಸಕ್ಕಾಗಿ ಮತ್ತೊಂದು ಪಕ್ಷವನ್ನು ಪ್ರತಿಪಾದಿಸುತ್ತದೆ

**ವಿ.**—ಜೀವಾತ್ಮನ ಗುರಿ ಹಿರಣ್ಯಗರ್ಭನಲ್ಲ, ಪರಬ್ರಹ್ಮವೇ , ಏಕೆಂದರೆ 'ನಾನು ಬ್ರಾಹ್ಮಣರಲ್ಲಿ ಯಶಸ್ಸಾಗುತ್ತೇನೆ' ಎಂಬ ವಾಕ್ಯಶೇಷವು ಅವಿದ್ಯಾನಾಶಪೂರ್ವಕವಾದ ಸರ್ವಾತ್ಮಭಾವವೇ ಜೀವನ ಗುರಿಯೆಂಬುದನ್ನು ತಿಳಿಸುತ್ತದೆ 'ಅಶ್ವಗಳು ತನ್ನ ರೋಮವನ್ನು ಒದರುವಂತೆ ಪಾಪವನ್ನು ಹೋಗಲಾಡಿಸಿಕೊಂಡು ನಿತ್ಯವಾದ ಬ್ರಹ್ಮಲೋಕವನ್ನು ಹೊಂದುತ್ತೇನೆ' (ಛಾಂ ಉ ೮ ೧೩ ೧) ಎಂಬ ಹಿಂದಿನ ಖಂಡದ ವಾಕ್ಯವೂ ಬ್ರಹ್ಮಲೋಕವು ಅಕೃತವಾದುದೆಂದೂ ಅದನ್ನು ಹೊಂದುವುದರಿಂದ ಸರ್ವಬಂಧನಿವೃತ್ತಿ

---

[1] ಶ್ವೇ ಉ ೬ ೧೯, ಬೃ ಉ ೩ ೮ ೮, ಮುಂ ಉ ೨. ೧ ೨ ಇತ್ಯಾದಿ

[2] 'ಎಲೈ ಸತ್ಯಕಾಮ, ಓಂಕಾರವೇ ಪರಬ್ರಹ್ಮವೂ ಅಪರಬ್ರಹ್ಮವೂ ಆಗಿದೆ' ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ ।

[3] ಯತ್ರಾವಿದ್ಯಾಕೃತನಾಮರೂಪಾದಿವಿಶೇಷಪ್ರತಿಷೇಧಾದಸ್ಥೂಲಾದಿಶಬ್ದೈರ್ಬ್ರಹ್ಮೋಪದಿಶ್ಯತೇ ತತ್ಪರಮ್ । ತದೇವ ಯತ್ರ ನಾಮರೂಪಾದಿವಿಶೇಷೇಣ ಕೇನಚಿದ್ವಿಶಿಷ್ಟಮುಪಾಸನಾಯೋಪದಿಶ್ಯತೇ 'ಮನೋಮಯಃ ಪ್ರಾಣಶರೀರೋ ಭಾರೂಪಃ' ಇತ್ಯಾದಿಶಬ್ದೈಸ್ತದಪರಮ್ (ಸೂ ಭಾ )

ಯಾಗುವುದೆಂದೂ ತಿಳಿಸುತ್ತದೆ. ಆದುದರಿಂದ ಪರಬ್ರಹ್ಮೋಪಾಸಕರನ್ನೇ ಅರ್ಚಿರಾದಿ ಆತಿವಾಹಿಕಗಣವು ಒಯ್ಯುತ್ತದೆಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ.

**ದ್ವೈ೪.**—'ಅವರು ಕಾರ್ಯಬ್ರಹ್ಮವನ್ನು ನೋಡುವುದೂ ಇಲ್ಲ, "ಕಾರ್ಯ-ಬ್ರಹ್ಮವನ್ನು ಹೊಂದುತ್ತೇನೆ" ಎಂದು ಬಯಸುವುದೂ ಇಲ್ಲ'[1] ಎಂಬುದು ಸೂತ್ರಾರ್ಥ.

ಇದೂ ಜೈಮಿನಿಯ ಅಭಿಪ್ರಾಯವು. ಆದುದರಿಂದ ಪರಬ್ರಹ್ಮನೇ ಪ್ರಾಪ್ಯನು.

[1] ನ ಹಿ ಕಾರ್ಯೇ ಪ್ರತಿಪತ್ತಿಃ ಪ್ರಾಪ್ನವಾನೀತ್ಯಭಿಸಂಧಿಶ್ಚ (ಮು. ಭಾ.).

## ೬. ಅಪ್ರತೀಕಾಲಂಬನಾಧಿಕರಣ

(ಸೂ. ೧೫–೧೬)

**ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾಽದೋಷಾತ್* ತತ್ಕ್ರತುಶ್ಚ ॥ ೧೫ ॥**

೧೫ ಅಪ್ರತೀಕಾಲಂಬರನ್ನು (ಅಮಾನವ-ಪುರುಷನು) ಒಯ್ಯುತ್ತಾನೆ ಎಂದು ಬಾದರಾಯಣರು (ಅಭಿಪ್ರಾಯಪಡುತ್ತಾರೆ), ಏಕೆಂದರೆ ಎರಡು ವಿಧದಿಂದಲೂ ದೋಷವಿರುವುದಿಲ್ಲ, ಮತ್ತು ಅದರ ಧ್ಯಾನವಿರುವುದೆಂಬುದೂ (ಈ ಉಭಯ-ಭಾವಕ್ಕೆ ಹೇತುವಾಗಿದೆ)

ಗತಿಯು ಪರಬ್ರಹ್ಮವಿಷಯವಲ್ಲವೆಂದೂ ಕಾರ್ಯಬ್ರಹ್ಮವಿಷಯವೆಂದೂ ನಿರ್ಧರಿಸಿದ್ದಾಯಿತು ಅಮಾನವ-ಪುರುಷನು ಕಾರ್ಯಬ್ರಹ್ಮವನ್ನು ಅವಲಂಬಿಸಿರುವವರನ್ನೆಲ್ಲ ಅವಿಶೇಷವಾಗಿ ಒಯ್ಯುತ್ತಾನೆಯೊ ? ಅಥವಾ ಕೆಲವರನ್ನು ಮಾತ್ರ ಒಯ್ಯುತ್ತಾನೆಯೊ? —ಎಂಬುದು ಸಂಶಯ

**ಪೂರ್ವಪಕ್ಷ**—ಪರಬ್ರಹ್ಮಜ್ಞಾನಿಗಳ ಹೊರತು ಉಳಿದ ಜ್ಞಾನಿಗಳೆಲ್ಲ ಕಾರ್ಯಬ್ರಹ್ಮಕ್ಕೆ ಹೋಗುತ್ತಾರೆ, ಏಕೆಂದರೆ **ಅನಿಯಮಃ ಸರ್ವಾಸಾಮ್** (೩. ೩. ೩೧) ಎಂಬ ಸೂತ್ರವು ಗತಿಯನ್ನು ಸಗುಣಬ್ರಹ್ಮನ ವಿದ್ಯೆಗಳಿಗೆಲ್ಲ ಅವಿಶೇಷವಾಗಿ ಸಂಬಂಧಿಸಿರುತ್ತದೆ

**ಸಿದ್ಧಾಂತಿ**—ಪ್ರತೀಕವನ್ನು ಅವಲಂಬಿಸಿರುವವರನ್ನು ಬಿಟ್ಟು ಉಳಿದ ಕಾರ್ಯಬ್ರಹ್ಮೋಪಾಸಕರನ್ನೆಲ್ಲ ಅಮಾನವ-ಪುರುಷನು ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ—ಎಂದು ಆಚಾರ್ಯ ಬಾದರಾಯಣರು ಅಭಿಪ್ರಾಯಪಡುತ್ತಾರೆ, ಏಕೆಂದರೆ ಹೀಗೆ ಎರಡು ವಿಧವಾದ ಸಂಬಂಧವನ್ನು ಒಪ್ಪಿಕೊಂಡರೆ ಯಾವ ದೋಷವೂ ಇರುವುದಿಲ್ಲ ಅನಿಯಮ-ನ್ಯಾಯವು (೩. ೩. ೩೧) ಪ್ರತೀಕಕ್ಕಿಂತ ಬೇರೆಯಾಗಿರುವ ಉಪಾಸನೆಗಳಿಗೆಲ್ಲ ಹೊಂದುತ್ತದೆ 'ಅದರ ಧ್ಯಾನವಿರುವುದು' **ತತ್ಕ್ರತುಶ್ಚ** ಎಂಬುದು ಈ ಉಭಯ ವಿಧವಾದ ಸಂಬಂಧಕ್ಕೂ ಹೇತುವನ್ನು ಕೊಡುತ್ತದೆ, ಏಕೆಂದರೆ ಶ್ರುತಿಯ ಪ್ರಕಾರ ಬ್ರಹ್ಮವನ್ನೇ ಧ್ಯಾನಿಸುವವನು ಬ್ರಹ್ಮದ ಐಶ್ವರ್ಯವನ್ನು ಹೊಂದುತ್ತಾನೆ 'ಅವನನ್ನು ಹೇಗೆ ಉಪಾಸಿಸುತ್ತಾನೆಯೋ ಹಾಗೆಯೇ ಆಗುತ್ತಾನೆ' ಆದರೆ ಪ್ರತೀಕೋಪಾಸನೆಯಲ್ಲಿ ಧ್ಯಾನವು ಬ್ರಹ್ಮವನ್ನು ಅವಲಂಬಿಸಿರುವುದಿಲ್ಲ, ಏಕೆಂದರೆ ಆ ಉಪಾಸನೆಗೆ ಪ್ರತೀಕವೇ ಪ್ರಧಾನವಾಗಿರುತ್ತದೆ ಆದರೆ ಪಂಚಾಗ್ನಿವಿದ್ಯೆಯಲ್ಲಿ 'ಅವನು ಇವರನ್ನು ಬ್ರಹ್ಮದ ಬಳಿಗೆ ಸೇರಿಸು

---

* ಶ್ರೀಭಾಷ್ಯ, ಮಧ್ವಭಾಷ್ಯ—ಇವುಗಳಲ್ಲಿ ಈ ಸೂತ್ರದ ಪಾಠವು ಸ್ವಲ್ಪ ಬೇರೆಯಾಗಿದೆ.

ತ್ಕಾನೆ' (ಛಾ. ಉ. ೪. ೧೫. ೫) ಎಂದು ಹೇಳಿದೆಯಲ್ಲ?—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ : ಎಲ್ಲಿ ಸ್ಪಷ್ಟವಾಗಿ ಹೇಳಿದೆಯೊ ಅಲ್ಲಿ ಹಾಗೆಯೇ ಆಗಬಹುದು. ಹಾಗೆ ಹೇಳದಿರುವಾಗ ಸಾಮಾನ್ಯನಿಯಮವಾಗಿರುವ ತತ್ಕ್ರತುನ್ಯಾಯದಿಂದ ಬ್ರಹ್ಮೋಪಾಸಕರಿಗೆ ಬ್ರಹ್ಮಪ್ರಾಪ್ತಿಯಾಗುತ್ತದೆಯೇ ಹೊರತು ಇತರರಿಗಲ್ಲ—ಎಂದು ತಿಳಿಯಬೇಕು

**ವಿ.—ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ ತತ್ಕ್ರತುಶ್ಚ ॥ ೪. ೩. ೧೪ ॥**

೧೪ ಪ್ರತೀಕಾಲಂಬನರಲ್ಲದವರನ್ನು ಅವನು ಒಯ್ಯುತ್ತಾನೆಂದು ಬಾದರಾಯಣರು ಅಭಿಪ್ರಾಯಪಡುತ್ತಾರೆ; ಏಕೆಂದರೆ ಎರಡು ಪಕ್ಷಗಳಲ್ಲಿಯೂ ದೋಷವಿದೆ ; ತತ್ಕ್ರತುನ್ಯಾಯವೂ ಇದೆ.

ಈಗ ಭಗವಾನ್ ಬಾದರಾಯಣರು ಸಿದ್ಧಾಂತವಾಗಿರುವ ತಮ್ಮ ಮತವನ್ನು ಹೇಳುತ್ತಾರೆ: ಪ್ರತೀಕಾಲಂಬನರಲ್ಲದವರನ್ನು ಅರ್ಚಿರಾದಿಗಣವು ಒಯುತ್ತದೆ; ಕಾರ್ಯಬ್ರಹ್ಮೋಪಾಸಕರೇ ಒಯ್ಯಲ್ಪಡುತ್ತಾರೆ ಎಂಬ ಬಾದರಿಯ ಮತ ಅಥವಾ ಪರಬ್ರಹ್ಮೋಪಾಸಕರೇ ಒಯ್ಯಲ್ಪಡುತ್ತಾರೆ ಎಂಬ ಜೈಮಿನಿಯ ಮತ—ಇವೆರಡೂ ಸರಿಯಲ್ಲ. ಆದರೆ ಪರಬ್ರಹ್ಮೋಪಾಸಕರು ಮತ್ತು ಪ್ರಕೃತಿವಿಯುಕ್ತನಾದ ಆತ್ಮನು ಬ್ರಹ್ಮಾತ್ಮಕನೆಂದು ಉಪಾಸಿಸುವರು—ಇವರಿಬ್ಬರನ್ನೂ ಅರ್ಚಿರಾದಿಗಣವು ಒಯ್ಯುತ್ತದೆ.[1] ಕಾರ್ಯಬ್ರಹ್ಮದಲ್ಲಿ ಅಂತರ್ಗತವಾಗಿರುವ ನಾಮವೇ ಮೊದಲಾದುವನ್ನು ಬ್ರಹ್ಮದೃಷ್ಟಿಯಿಂದ ಅಥವಾ ಕೇವಲವಾಗಿ ಉಪಾಸಿಸುವವರು ಒಯ್ಯಲ್ಪಡುವುದಿಲ್ಲ; ಏಕೆಂದರೆ ಎರಡು ಪಕ್ಷಗಳಲ್ಲಿಯೂ ದೋಷವಿದೆ : ಕಾರ್ಯಬ್ರಹ್ಮೋಪಾಸಕರು ಒಯ್ಯಲ್ಪಡುತ್ತಾರೆಂಬ ಪಕ್ಷವು 'ಈ ಶರೀರದಿಂದ ಎದ್ದು ಪರಮಾತ್ಮನ ಜ್ಯೋತಿಗೆ ನೇರಿಕೊಂಡು' (ಛಾಂ. ಉ. ೮ ೧೨. ೩) ಎಂಬ ಶ್ರುತಿಗೆ ವಿರೋಧವಾಗುತ್ತದೆ. ಪರಬ್ರಹ್ಮೋಪಾಸಕರೇ ಒಯ್ಯಲ್ಪಡುತ್ತಾರೆಂಬ ಇನ್ನೊಂದು ಪಕ್ಷವು, ಪಂಚಾಗ್ನಿವಿದರೂ ಅರಣ್ಯದಲ್ಲಿ ಶ್ರದ್ಧಾದಿಗಳನ್ನು ಉಪಾಸಿಸುವರೂ ದೇವಯಾನದಲ್ಲಿ ಹೋಗುತ್ತಾರೆ (ಛಾಂ. ಉ. ೫. ೧೦. ೧) ಎಂಬ ಶ್ರುತಿಯನ್ನು ಬಾಧಿಸುತ್ತದೆ. ಇದಲ್ಲದೆ 'ಲೋಕದಲ್ಲಿ ಮನುಷ್ಯನು ಎಂಥ ಭಾವನೆಯುಳ್ಳವನೊ ಇಲ್ಲಿಂದ ಹೋದ ಮೇಲೆ ಹಾಗೆಯೇ ಆಗುತ್ತಾನೆ' (ಛಾಂ. ಉ. ೩. ೧೪ ೧) ಎಂದು ತತ್ಕ್ರತುನ್ಯಾಯವೂ ಇದೆ; ಈ ನ್ಯಾಯವು ಮರಣಕಾಲದಲ್ಲಿ ಯಾವನು ಯಾವ ಭಾವವನ್ನು ಸ್ಮರಿಸಿಕೊಂಡು ದೇಹವನ್ನು ಬಿಡುವನೊ ಅವನು ಅದನ್ನೇ ಹೊಂದುವನು—ಎಂಬುದನ್ನು ಸೂಚಿಸುತ್ತದೆ. ನಾಮಾದಿ-ಪ್ರತೀಕೋಪಾಸನೆಗಳಲ್ಲಿ ಅಚಿತ್ತು ಬೆರೆತಿರುವುದರಿಂದ ಆ ಉಪಾಸಕರಿಗೆ ಅರ್ಚಿರಾದಿಗತಿಯಾಗಲಿ ಬ್ರಹ್ಮಪ್ರಾಪ್ತಿಯಾಗಲಿ ಇಲ್ಲ.

**ದ್ವೈ.**—'ವಾಯುವು ಅಪ್ರತೀಕಾಲಂಬನರನ್ನು ಪರಬ್ರಹ್ಮನಲ್ಲಿಗೆ ಒಯ್ಯುತ್ತಾನೆ, ಇತರರನ್ನು ಕಾರ್ಯಬ್ರಹ್ಮನಲ್ಲಿಗೆ ಒಯ್ಯುತ್ತಾನೆ—ಎಂದು ಬಾದರಾಯಣಾಚಾರ್ಯರು

[1] ಅಪಿ ತು ಯೇ ಪರಂ ಬ್ರಹ್ಮೋಪಾಸತೇ, ಯೇ ಚಾತ್ಮಾನಂ ಪ್ರಕೃತಿವಿಯುಕ್ತಂ ಬ್ರಹ್ಮಾತ್ಮಕಮುಪಾಸತೇ ತಾನುಭಯವಿಧಾನ್ನಯತಿ (ಶ್ರೀಭಾಷ್ಯ).

ತಿಳಿಯುತ್ತಾರೆ; ಹಿಂದಿನ ಎರಡು ಪಕ್ಷಗಳಲ್ಲಿಯೂ ದೋಷವಿದೆ ಮತ್ತು ತತ್ಕ್ರತುವನ್ನು ತಿಳಿಸುವ ಶ್ರುತಿಯೂ ಇದೆ' ಎಂಬುದು* ಸೂತ್ರಾರ್ಥ

ದೇಹಾದಿಗಳಲ್ಲಿ ಬ್ರಹ್ಮನನ್ನು ನೋಡುವವರು ಪ್ರತೀಕಾಲಂಬನರು, ತದ್ವ್ಯತಿರಿಕ್ತ ವಾಗಿ ವ್ಯಾಪ್ತರೂಪದಿಂದ ಬ್ರಹ್ಮನನ್ನು ನೋಡುವವರು ಅಪ್ರತೀಕಾಲಂಬನರು ; ಅಪ್ರತೀ-ಕಾಲಂಬನರನ್ನು ವಾಯುವು ಪರಬ್ರಹ್ಮನಲ್ಲಿಗೆ ಒಯ್ಯುತ್ತಾನೆ, ಇತರರನ್ನು ಕಾರ್ಯ-ಬ್ರಹ್ಮದಲ್ಲಿಗೆ ಒಯ್ಯುತ್ತಾನೆ. ಇದು ಬಾದರಾಯಣರ ಸಿದ್ಧಾಂತ. ಹಿಂದಿನ ಎರಡು ಪಕ್ಷಗಳಲ್ಲಿಯೂ ದೋಷವಿದೆ; ಎಂದರೆ ಎಲ್ಲರನ್ನೂ ಕಾರ್ಯಬ್ರಹ್ಮಕ್ಕೆ ಒಯ್ಯುತ್ತಾನೆ ಎಂಬ ಬಾದರಿಯ ಪಕ್ಷ, ಎಲ್ಲರನ್ನೂ ಪರಬ್ರಹ್ಮನಲ್ಲಿಗೇ ಒಯ್ಯುತ್ತಾನೆ ಎಂಬ ಜೈಮಿನಿಯ ಪಕ್ಷ; ಇವೆರಡರಲ್ಲಿಯೂ ದೋಷವಿದೆ. ಮತ್ತೆ ಮುಕ್ತರೆಲ್ಲ ತಮ್ಮ ಇಚ್ಛೆಯಂತೆ ಹೋಗಲು ಸಾಧ್ಯವಿಲ್ಲ ; 'ಪರಮೇಶ್ವರನು ಇಚ್ಛಿಸುವುದನ್ನು ಜೀವನೂ ಬಯಸುತ್ತಾನೆ ; ಜೀವನು ಏನನ್ನು ಮಾಡಲು ಬಯಸುತ್ತಾನೆಯೊ ಅದನ್ನೇ ಮಾಡಲು ಸಂಕಲ್ಪಿಸು ತ್ತಾನೆ ; ಯಾವುದನ್ನು ಮಾಡಲು ಸಂಕಲ್ಪಿಸುತ್ತಾನೆಯೊ ಅದನ್ನೇ ಪಡೆಯುತ್ತಾನೆ'[1] (ಬೃ. ಉ ೪. ೪. ೫) ಎಂಬಲ್ಲಿ ಕರ್ಮವು ಉಪಾಸನೆಯೇ.

### ವಿಶೇಷಂ ಚ ದರ್ಶಯತಿ ॥ ೧೬ ॥

೧೬. ಮತ್ತು ವಿಶೇಷ (ಫಲವನ್ನೂ ಶ್ರುತಿಯು) ತಿಳಿಸುತ್ತದೆ.

ನಾಮವೇ ಮೊದಲಾದ ಪ್ರತೀಕೋಪಾಸನೆಗಳಲ್ಲಿ ಹಿಂದುಹಿಂದಿನ ಉಪಾಸನೆಗಿಂತ ಮುಂದುಮುಂದಿನ ಉಪಾಸನೆಯಲ್ಲಿ ಬೇರೆ ಫಲವಿದೆಯೆಂದು ಶ್ರುತಿಯು ತಿಳಿಸುತ್ತದೆ : 'ಅವನು ನಾಮದ ಗತಿಯು ಹೋಗುವ ವರೆಗೆ ಸ್ವೇಚ್ಛಾಚಾರಿಯಾಗುತ್ತಾನೆ' (ಛಾಂ. ಉ. ೭. ೧. ೫) ; 'ಅವನು ವಾಕ್ಕಿನ ಗತಿಯು ಹೋಗುವ ವರೆಗೆ ಸ್ವೇಚ್ಛಾಚಾರಿಯಾಗು ತ್ತಾನೆ' (ಛಾಂ. ಉ. ೭. ೨. ೨) ಇತ್ಯಾದಿ. ಉಪಾಸನೆಗಳು ಪ್ರತೀಕಕ್ಕೆ ಅಧೀನ ವಾಗಿರುವುದರಿಂದ ಈ ಫಲಭೇದಗಳು ಹೊಂದುತ್ತವೆ ; ಆದರೆ ಉಪಾಸನೆಯು ಸರ್ವೋ-ಪಾಸನೆಗಳಿಗೂ ಸಮನಾಗಿರುವ ಬ್ರಹ್ಮವನ್ನೇ ಅವಲಂಬಿಸಿದ್ದರೆ ಫಲಭೇದವು ಸಾಧ್ಯ ವಾಗುವುದಿಲ್ಲ. ಆದುದರಿಂದ ಪ್ರತೀಕಾಲಂಬನರಿಗೆ ಇತರ ಉಪಾಸಕರ ಸಮಾನವಾದ ಫಲವು ಆಗುವುದಿಲ್ಲ.

ವಿ.—ನಾಮದಿಂದ ಪ್ರಾರಂಭಿಸಿ ಪ್ರಾಣದ ವರೆಗೆ ಪ್ರತೀಕೋಪಾಸನೆಯನ್ನು ಮಾಡುವವರು ಯಾವ ಗತಿಯನ್ನೂ ಅಪೇಕ್ಷಿಸದೆ ಪರಿಮಿತಫಲವಿಶೇಷವನ್ನು ಹೊಂದುತ್ತಾ ರೆಂದು ಶ್ರುತಿಯು (ಛಾಂ. ಉ. ೭. ೨) ತಿಳಿಸುತ್ತದೆ. ಆದುದರಿಂದ ಅಚಿತ್ತನ್ನಾಗಲಿ

---

* ಶ್ರೀಭಾಷ್ಯದ ಪಾಠಕ್ಕೂ ಈ ಭಾಷ್ಯದ ಪಾಠಕ್ಕೂ ಯಾವ ವ್ಯತ್ಯಾಸವೂ ಇಲ್ಲ.

[1] ಸ ಯಥಾ ಕಾಮೋ ಭವತಿ ತತ್ಕ್ರತುರ್ಭವತಿ, ಯತ್ಕ್ರತುರ್ಭವತಿ ತತ್ಕರ್ಮ ಕುರುತೇ, ಯತ್ಕರ್ಮ ಕುರುತೇ ತದಭಿಸಂಪದ್ಯತೇ ।

ಅಥವಾ ಅಚಿನ್ಮಿಶ್ರವಾದ ಚಿತ್ತನ್ನಾಗಲಿ ಉಪಾಸಿಸುವವರಿಗೆ ಅರ್ಚಿರಾದಿಗತಿಯಿಲ್ಲ. ಆದುದರಿಂದ ಪರಬ್ರಹ್ಮೋಪಾಸಕರನ್ನೂ ಮತ್ತು ಪ್ರಕೃತಿವಿಯುಕ್ತನಾದ ಜೀವನು ಬ್ರಹ್ಮಾತ್ಮಕನೆಂದು ಉಪಾಸಿಸುವವನನ್ನೂ ಅರ್ಚಿರಾದಿಗಣವು ಒಯ್ಯುತ್ತದೆಂಬುದು ಸಿದ್ಧವಾಯಿತು.

ದ್ವೈ.—'ಜ್ಞಾನಿಗಳಲ್ಲಿರುವ ವಿಶೇಷಗಳನ್ನು ಶ್ರುತಿಯು ತೋರಿಸುತ್ತದೆ' ಎಂಬುದು ಸೂತ್ರಾರ್ಥ.

'ಜ್ಞಾನಿಗಳು ಮೂರು ವಿಧವಾಗಿರುವರು : ಬ್ರಹ್ಮನ ಅಂತಃಪ್ರಕಾಶವುಳ್ಳವರು, ಬ್ರಹ್ಮನ ಬಹಿಃಪ್ರಕಾಶವುಳ್ಳವರು ಮತ್ತು ಬ್ರಹ್ಮನ ಸರ್ವಪ್ರಕಾಶವುಳ್ಳವರು. ದೇವತೆಗಳು ಸರ್ವಪ್ರಕಾಶವುಳ್ಳವರು, ಋಷಿಗಳು ಅಂತಃಪ್ರಕಾಶವುಳ್ಳವರು, ಮನುಷ್ಯರು ಬಹಿಃಪ್ರಕಾಶವುಳ್ಳವರು' ಎಂದು ಚತುರ್ವೇದಶಿಖೆಯಲ್ಲಿ ಹೇಳಿದೆ

# ನಾಲ್ಕನೆಯ ಪಾದ

## ೧. ಸಂಪದ್ಯಾವಿರ್ಭಾವಾಧಿಕರಣ

(ಸೂ ೧–೩)

**ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್*** ॥ ೧ ॥

೧ (ಜೀವನು ಪರಂಜ್ಯೋತಿಯನ್ನು) ಸೇರಿಕೊಂಡ ಮೇಲೆ (ತನ್ನ ರೂಪದಿಂದ) ಆವಿರ್ಭಾವವಾಗುತ್ತಾನೆ, ಏಕೆಂದರೆ 'ಸ್ವೇನ' ಎಂಬ ಶಬ್ದವಿದೆ

'ಹಾಗೆಯೇ ಸಂಪ್ರಸಾದಗುಣವುಳ್ಳ ಆತ್ಮನು ಈ ಶರೀರದಿಂದ ಎದ್ದು ಪರಂಜ್ಯೋತಿಯನ್ನು ಸೇರಿಸಿಕೊಂಡು **ತನ್ನ ರೂಪದಿಂದ** ಕಾಣಿಸಿಕೊಳ್ಳುತ್ತಾನೆ'[1] (ಛಾಂ ಉ ೮ ೧೨ ೩) ಎಂಬ ಶ್ರುತಿಯು ಹೇಳುತ್ತದೆ, ದೇವಲೋಕಾದಿ ಭೋಗಸ್ಥಾನಗಳಲ್ಲಿ ವ್ಯಕ್ತವಾಗುವಂತೆ ಯಾವುದೋ ಒಂದು ಆಗಂತುಕವಾದ ವಿಶೇಷ ರೂಪದಿಂದ ಆತ್ಮನು ವ್ಯಕ್ತನಾಗುವನೊ ? ಅಥವಾ ತನ್ನ ರೂಪದಿಂದಲೇ ವ್ಯಕ್ತನಾಗುವನೊ ?—ಎಂಬ ಸಂಶಯವು ಇಲ್ಲಿ ಬರುತ್ತದೆ

**ಪೂರ್ವಪಕ್ಷಿ**—ಸ್ಥಾನಾಂತರದಲ್ಲಿ ಆಗುವಂತೆ ಇಲ್ಲಿಯೂ ಆತ್ಮನು ಒಂದು ವಿಶೇಷರೂಪದಿಂದ ವ್ಯಕ್ತನಾಗುತ್ತಾನೆ, ಏಕೆಂದರೆ ಮೋಕ್ಷವೂ ಫಲವೆಂದು ಪ್ರಸಿದ್ಧವಾಗಿದೆ ಅಭಿನಿಷ್ಪತ್ತಿ ಎಂದರೆ ಉತ್ಪತ್ತಿ ಆತ್ಮನು ರೂಪದಿಂದಲೇ ಅಭಿನಿಷ್ಪತ್ತಿಯಾಗುತ್ತಿದ್ದರೆ—ಸ್ವರೂಪವೂ ಯಾವಾಗಲೂ ಹೋಗದಿರುವುದರಿಂದ—ಅದು ಪೂರ್ವಾವಸ್ಥೆಗಳಲ್ಲಿಯೂ ಕಂಡುಬರುತ್ತಿದ್ದಿತು ಆದುದರಿಂದ ಆತ್ಮನು ಯಾವುದೋ ಒಂದು ವಿಶೇಷ ರೂಪದಿಂದಲೇ ವ್ಯಕ್ತನಾಗುತ್ತಾನೆ

**ಸಿದ್ಧಾಂತಿ**—ಆತ್ಮನು ಕೇವಲ ತನ್ನ ಸ್ವರೂಪದಿಂದಲೇ ವ್ಯಕ್ತನಾಗುತ್ತಾನೆಯೇ ಹೊರತು ಮತ್ತೊಂದು ಧರ್ಮದಿಂದ ವ್ಯಕ್ತನಾಗುವುದಿಲ್ಲ, ಏಕೆಂದರೆ **ಸ್ವೇನರೂಪೇಣ ಅಭಿನಿಷ್ಪದ್ಯತೇ** ಎಂಬಲ್ಲಿ ಸ್ವ-ಶಬ್ದವಿದೆ[2] ಅನ್ಯಥಾ ಸ್ವ-ಶಬ್ದದಿಂದ ವಿಶೇಷಣವನ್ನು ಹೇಳಿರುವುದು ನಿರರ್ಥಕವಾಗುತ್ತಿತ್ತು

**ವಿ.**—ಈಗ ಮುಕ್ತರ ಐಶ್ವರ್ಯಪ್ರಕಾರವನ್ನು ಸೂತ್ರಗಳು ವಿವರಿಸುತ್ತವೆ ಈ ಪ್ರತ್ಯಗಾತ್ಮನು ಅರ್ಚಿರಾದಿಮಾರ್ಗದಿಂದ ಪರಂಜ್ಯೋತಿಯನ್ನು ಸೇರಿದ ಮೇಲೆ ಯಾವ

---

* ಮಧ್ವಭಾಷ್ಯದಲ್ಲಿ ಸೂತ್ರಪಾಠವು ಸ್ವಲ್ಪ ಭಿನ್ನವಾಗಿದೆ

1 ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।

2 ಕೇವಲೇನೈವಾತ್ಮನಾಽಽವಿರ್ಭವತಿ ನ ಧರ್ಮಾಂತರೇಣೇತಿ । ಕುತಃ ? ಸ್ವೇನ ರೂಪೇಣಾಭಿನಿಷ್ಪದ್ಯತ ಇತಿ ಸ್ವಶಬ್ದಾತ್ (ಸೂ ಭಾ.).

ವಿಶೇಷದಶೆಯನ್ನು ಹೊಂದುತ್ತಾನೆಯೊ ಅದೇ ಅವನ ಸ್ವರೂಪದ ಅವಿರ್ಭಾವವು, ಒಂದು ಹೊಸ ಸ್ವರೂಪವನ್ನು ಹೊಂದುವುದಿಲ್ಲ,[1] ಏಕೆಂದರೆ ಶ್ರುತಿಯಲ್ಲಿ (ಛಾಂ ಉ ೮ ೧೨ ೩) ಸ್ವೇನ-ಶಬ್ದವಿದೆ

ದ್ವೈತ —ಸಂಪದ್ಯಾವಿಹಾಯ ಸ್ವೇನಶಬ್ದಾತ್ ॥ ೪ ೪ ೧ ॥

೧ ಜ್ಞಾನಿಯು ಪರಬ್ರಹ್ಮನನ್ನು ಪಡೆದು, ಅವನನ್ನೂ ಅತಿಕ್ರಮಿಸದೆ ತನ್ನ ರೂಪದಿಂದಲೇ ಭೋಗಗಳನ್ನು ಅನುಭವಿಸುತ್ತಾನೆ, ಏಕೆಂದರೆ ಶಬ್ದವಿದೆ

ಈ ಪಾದದಲ್ಲಿ ಮುಕ್ತರ ಭೋಗಗಳನ್ನು ಹೇಳಲಾಗಿದೆ 'ಈ ಘೋರವೂ ಅಶಿವವೂ ಆದ ನದಿಯನ್ನು ದಾಟಿ, ಈ ಸೇತುವನ್ನು ಹೊಂದಿ, ಈ ಸೇತುವಿನಿಂದಲೇ ಮೋದಿಸುತ್ತಾನೆ, ಪ್ರಮೋದಿಸುತ್ತಾನೆ, ಆನಂದಿಯಾಗುತ್ತಾನೆ' ಎಂದು ಮೌದ್ಗಲ್ಯಶ್ರುತಿಯು ಹೇಳುತ್ತದೆ

## ಮುಕ್ತಃ ಪ್ರತಿಜ್ಞಾನಾತ್ ॥ ೨ ॥

೨ (ಸ್ವರೂಪದಿಂದ ವ್ಯಕ್ತನಾದ ಆತ್ಮನು) ಮುಕ್ತನಾಗುತ್ತಾನೆ, ಏಕೆಂದರೆ ಪ್ರತಿಜ್ಞೆಯಿದೆ

**ಆಕ್ಷೇಪಣೆ**—ಪೂರ್ವಾವಸ್ಥೆಯಲ್ಲಿಯೂ ಈಗಿನ ಅವಸ್ಥೆಯಲ್ಲಿಯೂ ಸ್ವರೂಪವು ಸಮಾನವಾಗಿರುವಾಗ ಇಲ್ಲಿ ವಿಶೇಷವೇನು ?

**ಪರಿಹಾರ**—ಯಾವ ಆತ್ಮನನ್ನು ತನ್ನ ರೂಪದಿಂದ ವ್ಯಕ್ತನಾಗುತ್ತಾನೆಂದು ಶ್ರುತಿಯು ಹೇಳುತ್ತದೆಯೊ ಅವನು ಸರ್ವಬಂಧದಿಂದಲೂ ಮುಕ್ತನಾಗಿ, ಶುದ್ಧವಾದ ತನ್ನ ರೂಪದಿಂದಲೇ ಅವಸ್ಥಿತನಾಗಿರುತ್ತಾನೆ, 'ಅವನು ಕುರುಡನಾಗುತ್ತಾನೆ' (ಛಾಂ ಉ ೮ ೯ ೨), 'ಅವನು ರೋದಿಸುವಂತೆ ಇರುತ್ತಾನೆ' (ಛಾಂ ಉ ೮ ೧೦ ೪), 'ಅವನು ವಿನಾಶವನ್ನು ಹೊಂದಿದವನಂತೆ ಇರುತ್ತಾನೆ' (ಛಾಂ ಉ ೮ ೧೧ ೨) ಎಂದು ಶ್ರುತಿಗಳು ಹೇಳುವಂತೆ ಅವನು ಹಿಂದೆ ಅವಸ್ಥಾತ್ರಯದಿಂದ ಕಲುಷಿತವಾದ ರೂಪದಿಂದ ಇದ್ದನು ಅವನು ಈಗ ಮುಕ್ತನಾಗಿರುತ್ತಾನೆಂಬುದು 'ಪ್ರತಿಜ್ಞೆಯಿಂದ' ತಿಳಿದುಬರುತ್ತದ 'ನಿನಗೆ ಈ ಆತ್ಮನನ್ನು ಇನ್ನೂ ಸ್ಪಷ್ಟವಾಗಿ ಹೇಳುತ್ತೇನೆ' (ಛಾಂ ಉ. ೮ ೯ ೩, ೮ ೧೦ ೪, ೮ ೧೧ ೩) ಎಂಬಲ್ಲಿ ಅವಸ್ಥಾತ್ರಯರಹಿತನಾದ ಆತ್ಮನನ್ನು ಉಪದೇಶಿಸುತ್ತೇನೆಂದು ಆಚಾರ್ಯನು ಪ್ರತಿಜ್ಞೆ ಮಾಡಿ, 'ಶರೀರವಿಲ್ಲದವನನ್ನು ಪ್ರಿಯಾಪ್ರಿಯಗಳು ಸೋಂಕುವುದೇ ಇಲ್ಲ' (ಛಾಂ ಉ ೮ ೧೨ ೧) ಎಂದು ಉಪಕ್ರಮಿಸಿ, 'ತನ್ನ ರೂಪದಿಂದಲೇ ವ್ಯಕ್ತನಾಗುತ್ತಾನೆ ಅವನು ಉತ್ತಮಪುರುಷನು' (ಛಾಂ ಉ ೮

[1] ಅಯಂ ಪ್ರತ್ಯಗಾತ್ಮಾಽರ್ಚಿರಾದಿನಾ ಪರಂ ಜ್ಯೋತಿರುಪಸಂಪದ್ಯ ಯಂ ದಶಾವಿಶೇಷಮಾಪದ್ಯತೇ, ಸಃ ಸ್ವರೂಪಾವಿರ್ಭಾವರೂಪಃ, ನಾಪೂರ್ವಾಕಾರೋತ್ಪತ್ತಿರೂಪಃ (ಶ್ರೀಭಾಷ್ಯ)

೧೨ ೩) ಎಂದು ಉಪಸಂಹಾರ ಮಾಡಿರುತ್ತಾನೆ ಹೀಗೆಯೇ ಆಖ್ಯಾಯಿಕೆಯ ಉಪಕ್ರಮ ದಲ್ಲಿಯೂ 'ಯಾವ ಆತ್ಮನು ಅಪಹತ-ಪಾಪ್ಮನೋ' (ಛಾಂ ಉ ೮ ೭ ೧) ಎಂದು ಮುಕ್ತಾತ್ಮನ ವಿಷಯದಲ್ಲಿಯೇ ಪ್ರತಿಜ್ಞೆಯನ್ನು ಮಾಡಿರುತ್ತದೆ ಬಂಧನಿವೃತ್ತಿಯ ಅಪೇಕ್ಷೆಯಿಂದ ಮೋಕ್ಷವು ಫಲವೆನಿಸಿರುವುದೇ ಹೊರತು ಒಂದು ಅಪೂರ್ವ ರೂಪವು ವ್ಯಕ್ತ ವಾಗುವುದೆಂಬ ಅಪೇಕ್ಷೆಯಿಂದಲ್ಲ ಅಭಿನಿಷ್ಪತ್ತಿ ಎಂದರೆ ಉತ್ಪತ್ತಿ—ಎಂಬ ಆಕ್ಷೇಪಣೆಗೆ ಪರಿಹಾರವು ಹೀಗಿದೆ ಅದು ಪೂರ್ವಾವಸ್ಥೆಯ ಅಪೇಕ್ಷೆಯಿಂದ ಹೇಳಿದ್ದು , 'ರೋಗವು ಹೋದರೆ ಅರೋಗಿಯಾಗುತ್ತಾನೆ' ಎಂದು ಹೇಳಿದಂತೆ

ವಿ.—ಜೀವಾತ್ಮನ ಸ್ವರೂಪವು ನಿತ್ಯಪ್ರಾಪ್ತವಾಗಿರುವುದರಿಂದ **ಸ್ವೇನರೂಪೇಣ ಅಭಿನಿಷ್ಪದ್ಯತೇ** (ಛಾಂ ಉ ೮. ೧೨ ೩) ಎಂಬುದು ಅರ್ಥರಹಿತವು—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ ಕರ್ಮಸಂಬಂಧದಿಂದಲೂ ಅದರಿಂದ ಉತ್ಪನ್ನವಾದ ದೇಹಾದಿಗಳಿಂದಲೂ ವಿನಿರ್ಮುಕ್ತನಾದ ಜೀವನು ತನ್ನ ಸ್ವಾಭಾವಿಕ ರೂಪದಿಂದ ಅವಸ್ಥಿತ ನಾಗುತ್ತಾನೆ—ಎಂಬುದು ಶ್ರುತಿಯ ಅಭಿಪ್ರಾಯವು ಜೀವನ ಸ್ವರೂಪವು ನಿತ್ಯಪ್ರಾಪ್ತ ವಾಗಿದ್ದರೂ ಸಂಸಾರದೆಶೆಯಲ್ಲಿ ಕರ್ಮರೂಪದಲ್ಲಿರುವ ಅವಿದ್ಯೆಯಿಂದ ತಿರೋಹಿತವಾಗಿರು ವುದರಿಂದ ತಿರೋಧಾನ-ನಿವೃತ್ತಿಯನ್ನೇ ಶ್ರುತಿಯು ನಿಷ್ಪತ್ತಿ-ಶಬ್ದದಿಂದ ಹೇಳಿದೆ ಇದು ಪ್ರಜಾಪತಿಯ ಪ್ರತಿಜ್ಞಾ-ವಾಕ್ಯದಿಂದ (ಛಾಂ ಉ ೮ ೯ ೩) ತಿಳಿದುಬರುತ್ತದೆ

**ದ್ವೈ.—ಅಥ ಯದ್ಯೈನಂ ಮುಕ್ತೋಽನುಪ್ರವಿಶತಿ ಮೋದತೇ ಚ ಪ್ರಮೋದತೇ** ಎಂಬ ಬೃಹಚ್ಛ್ರುತಿಯಲ್ಲಿ ಮುಕ್ತನಿಗೇ ಇಂಥ ಭೋಗವನ್ನು ಪ್ರತಿಜ್ಞೆ ಮಾಡಿದೆ

**ಆತ್ಮಾ ಪ್ರಕರಣಾತ್ ॥ ೩ ॥**

೩ (ಜೀವನು ಪ್ರವೇಶಿಸುವ ಜ್ಯೋತಿಯು) ಆತ್ಮನೇ , ಏಕೆಂದರೆ (ಅದು ಅವನ) ಪ್ರಕರಣವಾಗಿದೆ

**ಆಕ್ಷೇಪಣೆ**—ಇವನನ್ನು ಮುಕ್ತನೆಂದು ಹೇಳುವುದು ಹೇಗೆ? ಪರಂ **ಜ್ಯೋತಿರುಪ-ಸಂಪದ್ಯ** (ಛಾಂ ಉ ೮ ೧೨ ೩) ಎಂಬುದು ಜೀವನು ಕಾರ್ಯದಲ್ಲಿರುವನೆಂದೇ ತಿಳಿಸುತ್ತದೆ , ಏಕೆಂದರೆ ಜ್ಯೋತಿಃಶಬ್ದವು ಭೌತಿಕ-ಜ್ಯೋತಿಯನ್ನೇ ಸೂಚಿಸುತ್ತದೆ ಕಾರ್ಯವನ್ನು ಅತಿಕ್ರಮಿಸದೆ ಯಾವನೂ ಮುಕ್ತನಾಗಲಾರನು , ಏಕೆಂದರೆ ಕಾರ್ಯವೆಲ್ಲ ತುಚ್ಛವೆಂದು (ಬೃ ಉ ೩ ೨೩) ಶ್ರುತಿಪ್ರಸಿದ್ಧವಾಗಿದೆ

**ಪರಿಹಾರ**—ಇದು ದೋಷವಲ್ಲ, ಏಕೆಂದರೆ ಇಲ್ಲಿ ಜ್ಯೋತಿಃಶಬ್ದದಿಂದ ಆತ್ಮನನ್ನೇ ತಿಳಿಸಿದೆ. 'ಯಾವ ಆತ್ಮನು ಪಾಪರಹಿತನೋ ಮುಪ್ಪಿಲ್ಲದವನೋ ಮೃತ್ಯುರಹಿತನೋ' (ಛಾಂ ಉ ೮. ೭ ೧) ಎಂಬುದು ಪರಮಾತ್ಮನ ಪ್ರಕರಣವಾಗಿರುವಾಗ ಕೂಡಲೇ

ಭೌತಿಕಜ್ಯೋತಿಯನ್ನು ಗ್ರಹಿಸುವುದು ಆಗಲಾರದು, ಹಾಗೆ ಮಾಡಿದರೆ ಪ್ರಕೃತವಾದುದನ್ನು ಬಿಡುವುದೂ ಅಪ್ರಕೃತವಾದುದನ್ನು ಆರಂಭಿಸುವುದೂ ಆಗುತ್ತದೆ **ತದ್ದೇವಾ ಜ್ಯೋತಿಷಾಂ ಜ್ಯೋತಿಃ** (ಬೃ ಉ ೪ ೪ ೧೬) ಎಂಬಲ್ಲಿಯೂ ಜ್ಯೋತಿಃಶಬ್ದವು ಪರಮಾತ್ಮನನ್ನೇ ಸೂಚಿಸುತ್ತದೆ ಇದನ್ನು **ಜ್ಯೋತಿರ್ದರ್ಶನಾತ್** (೧ ೩ ೪೦) ಎಂಬ ಸೂತ್ರದ ವ್ಯಾಖ್ಯಾನದಲ್ಲಿ ವಿವರಿಸಿದ್ದಾಗಿದೆ

ವಿ —ಆತ್ಮನು ಪಾಪ್ಮತ್ವಾದಿರಹಿತನೆಂಬುದು ಇಡೀ ಪ್ರಕರಣದಿಂದ (ಛಾಂ ಉ ೮ ೭) ತಿಳಿದುಬರುತ್ತದೆ ಈ ಆತ್ಮನೇ ಜೀವಾತ್ಮನೆಂದು ೧ ೩ ೧೯ ರಲ್ಲಿ ವಿವರಿಸಿದ್ದಾಯಿತು ಕರ್ಮದಿಂದ ಸಂಕುಚಿತವಾದ ಜ್ಞಾನಾನಂದಾದಿಗುಣಗಳು ಕರ್ಮರೂಪ ಬಂಧವು ಕ್ಷಯವಾದಾಗ, ಜೀವನು ಪರಂಜ್ಯೋತಿಯನ್ನು ಸೇರಿದಾಗ ವಿಕಾಸವನ್ನು ಹೊಂದಿ ಆವಿರ್ಭವಿಸುವುವು ಭಗವಾನ್ ಶೌನಕರು ಹೀಗೆ ಹೇಳಿರುತ್ತಾರೆ 'ಮಣಿಯನ್ನು ಉಜ್ಜುವುದರಿಂದ ಅದರ ಪ್ರಕಾಶವು ಹೇಗೆ ಹೊರಹೊಮ್ಮುವುದಿಲ್ಲವೊ ಹಾಗೆಯೇ ದೋಷಗಳ ನಾಶದಿಂದ ಆತ್ಮಜ್ಞಾನವು ಸೃಷ್ಟಿಸಲ್ಪಡುವುದಿಲ್ಲ'[1] (ವಿಷ್ಣುಧರ್ಮ, ೧೦೪ ೫೫)

ದ್ವೈ.—ಪರಂಜ್ಯೋತಿಃಶಬ್ದವು (ಮುಕ್ತಪ್ರಾಪ್ಯನಾದ) ಪರಮಾತ್ಮನನ್ನೇ ಸೂಚಿಸುತ್ತದೆ, ಏಕೆಂದರೆ ಅದು ಅವನ ಪ್ರಕರಣವಾಗಿದೆ[2]

---

[1] ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಲನಾನ್ಮಣೇಃ ।
ದೋಷಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ ॥

[2] ಪರಂಜ್ಯೋತಿಃಶಬ್ದೇನ ಪರಮಾತ್ಮೈವೋಚ್ಯತೇ । ತತ್ಪ್ರಕರಣತ್ವಾತ್ (ಮ ಭಾ )

# ೨. ಅವಿಭಾಗೇನದೃಷ್ಟತ್ವಾಧಿಕರಣ*

## ಅವಿಭಾಗೇನ ದೃಷ್ಟತ್ವಾತ್ ॥ ೪ ॥

೪ (ಮುಕ್ತನು ಪರಮಾತ್ಮನಿಗಿಂತ) ಬೇರೆಯಾಗದೇ (ಇರುತ್ತಾನೆ), ಏಕೆಂದರೆ ಅದು (ಶ್ರುತಿಯಲ್ಲಿ) ಕಂಡುಬರುತ್ತದೆ

'ಪರಂಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಕಾಣಿಸಿಕೊಳ್ಳುತಾನೆ' (ಛಾಂ ಉ ೮ ೧೨ ೩) ಎಂಬಲ್ಲಿ ಜೀವಾತ್ಮನು ಪರಮಾತ್ಮನಿಗಿಂತ ಬೇರೆಯಾಗಿಯೇ ಉಳಿಯುತ್ತಾನೆಯೊ ಅಥವಾ ಪರಮಾತ್ಮನೊಂದಿಗೆ ಒಂದಾಗುತ್ತಾನೆಯೊ ?—ಎಂಬ ಸಂಶಯವು ಬರುತ್ತದೆ 'ಅವನು ಅಲ್ಲಿ ಸಂಚರಿಸುತ್ತಾನೆ' (ಛಾಂ ಉ ೮ ೧೨ ೩) ಎಂಬಲ್ಲಿ ಆಧಾರ-ಆಧೇಯ ಭಾವದ ನಿರ್ದೇಶವಿರುವುದರಿಂದಲೂ, 'ಜ್ಯೋತಿಯನ್ನು ಸೇರಿಕೊಂಡು' ಎಂಬಲ್ಲಿ ಕರ್ತೃ-ಕರ್ಮಗಳ ನಿರ್ದೇಶವಿರುವುದರಿಂದಲೂ ಜೀವನು ಬೇರೆಯಾಗಿಯೇ ಇರುವನೆಂದು ಕೆಲವರು ಭಾವಿಸಬಹುದು ಸೂತ್ರಕಾರರು ಇದನ್ನು ನಿರಾಕರಿಸುತ್ತಾರೆ, ಮುಕ್ತನು ಪರಮಾತ್ಮನೊಂದಿಗೆ ವಿಭಾಗವಿಲ್ಲದೆಯೇ ಇರುತ್ತಾನೆಂಬುದು ಸಿದ್ಧಾಂತ, ಏಕೆಂದರೆ ಶ್ರುತಿಗಳು ಪರಮಾತ್ಮನಿಗೆ ಭಾಗವೇ ಇಲ್ಲವೆಂದು ತಿಳಿಸುತ್ತವೆ 'ಅದೇ ನೀನಾಗಿರುವೆ' (ಛಾಂ ಉ ೬ ೮ ೭.), 'ನಾನು ಬ್ರಹ್ಮವಾಗಿರುವೆನು' (ಬೃ.ಉ ೧ ೪ ೧೦), 'ಎಲ್ಲಿ ಬೇರೆಯಾದುದನ್ನು ನೋಡುವುದಿಲ್ಲವೊ' (ಛಾಂ. ಉ. ೭. ೨೪ ೧) ಇತ್ಯಾದಿ ಮುಕ್ತರ ಸ್ವರೂಪವನ್ನು ತಿಳಿಸುವ ವಾಕ್ಯಗಳೂ ಅವಿಭಾಗವನ್ನೇ ತಿಳಿಸುತ್ತವೆ 'ಹೇಗೆ ಶುದ್ಧವಾದ (ನೀರಿನಲ್ಲಿ) ಹಾಕಿದ ಶುದ್ಧವಾದ ನೀರು ಅದರಂತೆಯೇ ಆಗುವುದೊ ಹಾಗೆಯೇ ಗೌತಮ, ಅರಿತುಕೊಂಡಿರುವ ಮುನಿಯ ಆತ್ಮನು ಆಗುತನು'[1] (ಕ ಉ ೨ ೪ ೧೫) ಭೇದನಿರ್ದೇಶವು ಅಭೇದವನ್ನು ಉಪಚಾರದಿಂದ ತಿಳಿಸುವುದಕ್ಕಾಗಿಯೇ ಬಂದಿದೆಯೆಂದು ಅರಿತುಕೊಳ್ಳಬೇಕು 'ಆ ಭೂಮವು ಯಾವುದರಲ್ಲಿ ಪ್ರತಿಷ್ಠಿತವಾಗಿದೆ ? ತನ್ನ ಮಹಿಮೆಯಲ್ಲಿ' (ಛಾಂ ಉ ೭ ೨೪ ೧), 'ಆತ್ಮರತಿಯು, ಆತ್ಮಕ್ರೀಡನು' (ಛಾಂ ಉ ೭ ೨೫ ೨) ಎಂದು ಶ್ರುತಿಗಳು ಹೇಳುತ್ತವೆ

ವಿ.—ಪರಂಜ್ಯೋತಿಯನ್ನು ಸೇರಿ ಮುಕ್ತನಾದ ಜೀವನು ತಾನು ಪರಮಾತ್ಮನಿಗಿಂತ ಬೇರೆಯವನೆಂದು ಅನುಭವಿಸುತ್ತಾನೆಯೊ ? ಅಥವಾ ಅವನ ಪ್ರಕಾರವಾಗಿರುವಷ್ಟು ಅವನಿಗಿಂತ ಬೇರೆಯಲ್ಲವನೆಂದು ಅನುಭವಿಸುತ್ತಾನೆಯೊ ?—ಎಂಬುದು ಸಂಶಯ. ಮುಕ್ತಜೀವನು ಪರಬ್ರಹ್ಮನಿಂದ ತಾನು ಬೇರೆಯಲ್ಲವನೆಂದು ಅನುಭವಿಸುತ್ತಾನೆ

---

* ಮಧ್ವಭಾಷ್ಯದಲ್ಲಿ ಇದು ಅವಿಭಾಗಾಧಿಕರಣ ಎನಿಸಿದೆ

1 ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥

ಎಂಬುದು ಸಿದ್ಧಾಂತ; ಏಕೆಂದರೆ ಪರಬ್ರಹ್ಮನನ್ನು ಸೇರಿ ಅವಿದ್ಯೆಯನ್ನು ಕಳೆದುಕೊಂಡ ಜೀವನು ಯಥಾರ್ಥವಾಗಿ ತನ್ನ ಸ್ವರೂಪವನ್ನು 'ನೋಡುತ್ತಾನೆ'. ಪರಮಾತ್ಮನೇ ತನ್ನ ಆತ್ಮನು, ತಾನು ಅವನ ಶರೀರವಾದುದರಿಂದ ಅವನ ಪ್ರಕಾರವು—ಎಂಬುದೇ ತನ್ನ ಸ್ವರೂಪವು. ಇದು **ತತ್ತ್ವಮಸಿ, ಅಯಮಾತ್ಮಾ ಬ್ರಹ್ಮ, ಐತದಾತ್ಮ್ಯಮಿದಂ ಸರ್ವಮ್** ಇವೇ ಮೊದಲಾದ ಸಾಮಾನಾಧಿಕರಣ್ಯವನ್ನು ನಿರ್ದೇಶಿಸುವ ಶ್ರುತಿಗಳಿಂದ ತಿಳಿದುಬರುತ್ತದೆ. 'ಅವಿಭಾಗದಿಂದ ನಾನು ಪರಬ್ರಹ್ಮನಾಗಿದ್ದೇನೆ' ಎಂಬುದು ಮುಕ್ತ-ಜೀವನ ಅನುಭವವು.

**ದ್ವೈ.**—'ಯಾವ ಭೋಗಗಳು ಪರಮಾತ್ಮನಿಂದ ಅನುಭವಿಸಲ್ಪಡುತ್ತವೆಯೊ ಅವುಗಳನ್ನು ಮುಕ್ತನು ಅನುಭವಿಸುತ್ತಾನೆ,[2] ಇದು ಶ್ರುತಿಗಳಿಂದ ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ.

'ನಾನು ಯಾವುದನ್ನು ಕೇಳುತ್ತೇನೆಯೊ ಯಾವುದನ್ನು ನೋಡುತ್ತೇನೆಯೊ ಯಾವುದನ್ನು ಮೂಸುತ್ತೇನೆಯೊ, ಅವುಗಳನ್ನೇ ಶರೀರದಿಂದ ಮುಕ್ತನಾದವನು ಅನು-ಭವಿಸುತ್ತಾನೆ' ಎಂದು ಚತುರ್ವೇದಶಿಖೆಯಲ್ಲಿ ಹೇಳಿದೆ.

---

[1] ಪರಸ್ಮಾದ್ಬ್ರಹ್ಮಣಃ ಸ್ವಾತ್ಮಾನಮವಿಭಾಗೇನಾನುಭವತಿ ಮುಕ್ತಃ (ಶ್ರೀಭಾಷ್ಯ).

[2] ಯೇ ಭೋಗಾಃ ಪರಮಾತ್ಮನಾ ಭುಜ್ಯಂತೇ ತ ಏವ ಮುಕ್ತ [illegible]

## ೩. ಬ್ರಾಹ್ಮಾಧಿಕರಣ*

(ಸೂ ೫–೭)

**ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ॥ ೫ ॥**

೫ ಬ್ರಾಹ್ಮರೂಪದಿಂದ (ಕಾಣಿಸಿಕೊಳ್ಳುತ್ತಾನೆ) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ), ಏಕೆಂದರೆ ಉಪನ್ಯಾಸಾದಿಗಳಿವೆ

'ತನ್ನ ರೂಪದಿಂದ ಕಾಣಿಸಿಕೊಳ್ಳುತ್ತಾನೆ' (ಛಾಂ ಉ ೮ ೩ ೪) ಎಂಬಲ್ಲಿ ಆತ್ಮರೂಪದಿಂದ ಕಾಣಿಸಿಕೊಳ್ಳುತ್ತಾನೆಯೇ ಹೊರತು ಆಗಂತುಕವಾದ ಅಪರರೂಪದಿಂದಲ್ಲವೆಂದು ಸಿದ್ಧವಾಯಿತು ಈಗ ಆ ಸ್ವರೂಪದ ವಿಶೇಷಗುಣಗಳನ್ನು ವಿಚಾರಿಸಲಾಗುವುದು ಮೊದಲು ಜೈಮಿನಿಯ ಮತವನ್ನು ಸೂತ್ರಕಾರರು ಹೇಳುತ್ತಾರೆ ಇವನ ಸ್ವರೂಪವು ಬ್ರಾಹ್ಮವು, ಎಂದರೆ ಅಪಹತ-ಪಾಪ್ಮತ್ವದಿಂದ ಪ್ರಾರಂಭಿಸಿದ ಸತ್ಯ-ಸಂಕಲ್ಪತ್ವದವರೆಗೆ ಹೇಳಿರುವ (ಛಾಂ ಉ ೮ ೭ ೧) ಎಲ್ಲ ಗುಣಗಳನ್ನೂ ಮತ್ತು ಸರ್ವಜ್ಞತ್ವ-ಸರ್ವೇಶ್ವರತ್ವಗಳನ್ನೂ ಒಳಕೊಂಡಿರುತ್ತದೆ ಹೀಗೆ ಮುಕ್ತನು ಕಾಣಿಸಿಕೊಳ್ಳುತ್ತಾನೆ, ಏಕೆಂದರೆ ಉಪನ್ಯಾಸಾದಿಗಳಿಂದ ಇದು ತಿಳಿದುಬರುತ್ತದ 'ಯಾವನು ಅಪಹತ-ಪಾಪ್ಮನೊ' (ಛಾಂ ಉ ೮ ೭ ೧) ಎಂದು ಮೊದಲಾಗಿ 'ಸತ್ಯಕಾಮನು' ಸತ್ಯಸಂಕಲ್ಪನು' (ಛಾಂ ಉ ೮ ೭ ೧) ಎಂಬುದರವರೆಗಿರುವ ಉಪನ್ಯಾಸವು ಆತ್ಮನು ಈ ಸ್ವರೂಪವುಳ್ಳವನೆಂದು ತಿಳಿಸುತ್ತದೆ 'ಅಲ್ಲಿ ಅವನು ನಗುತ್ತ, ಕ್ರೀಡಿಸುತ್ತ, ರಮಿಸುತ್ತ, (ಛಾಂ ಉ ೮ ೧೨ ೩) ಎಂಬಲ್ಲಿ ಅವನ ಐಶ್ವರ್ಯರೂಪವನ್ನು ತಿಳಿಸಿರುತ್ತದೆ 'ಅವನು ಸರ್ವಜ್ಞನು, ಸರ್ವೇಶ್ವರನು' ಎಂಬ ವ್ಯಪದೇಶವು ಹೀಗೆಯೇ ಹೊಂದುತ್ತದೆ

**ವಿ.**—ಪರಬ್ರಹ್ಮನಿಗೆ ಸಂಬಂಧಿಸಿದ ಅಪಹತ-ಪಾಪ್ಮತ್ವಾದಿ-ಗುಣಗಳಿಂದ ಜೀವನು ಪ್ರಕಾಶಿಸುತ್ತಾನೆ ಎಂದು ಜೈಮಿನಿಯು ಹೇಳುತ್ತಾನೆ ಬ್ರಹ್ಮಗುಣಗಳು ಮುಕ್ತಜೀವನ ಗುಣಗಳೆಂಬುದು ಪ್ರಜಾಪತಿಯ ಉಪನ್ಯಾಸದಿಂದ (ಛಾಂ ಉ ೮ ೭ ೧) ತಿಳಿದುಬರುತ್ತದೆ ಆದುದರಿಂದ ವಿಜ್ಞಾನವು ಮಾತ್ರ ಮುಕ್ತಜೀವನ ಸ್ವರೂಪವಲ್ಲವೆಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ

**ದ್ವೈ.**—'ಮುಕ್ತನು ಬ್ರಹ್ಮಸಂಬಂಧಿಯಾದ ಶರೀರದಿಂದ ಭೋಗವನ್ನು ಅನುಭವಿಸುತ್ತಾನೆ—ಎಂದು ಜೈಮಿನಿಯು ತಿಳಿಯುತ್ತಾನೆ, ಇದು ಉಪನ್ಯಾಸಾದಿಗಳಿಂದ ತಿಳಿದುಬರುತ್ತದೆ' ಎಂಬುದು ಸೂತ್ರಾರ್ಥ

ಸರ್ವದೇಹಪರಿತ್ಯಾಗದಿಂದ ಮುಕ್ತರಾದ ಜೀವರು ಬ್ರಾಹ್ಮವಾದ ದೇಹದಿಂದಲೇ ಭೋಗಗಳನ್ನು ಅನುಭವಿಸುತ್ತಾರೆಂದು ಜೈಮಿನಿಯು ತಿಳಿಯುತ್ತಾನೆ [1]

---

* ಇದನ್ನು ಮಧ್ವಭಾಷ್ಯದಲ್ಲಿ ಚಿತಿಮಾತ್ರಾಧಿಕರಣ ಎಂದು ಕರೆಯಲಾಗಿದೆ

[1] ಸರ್ವದೇಹಪರಿತ್ಯಾಗೇನ ಮುಕ್ತಃ ಸಂತೋ ಬ್ರಾಹ್ಮೇಣೈವ ದೇಹೇನ ಭೋಗಾನ್ ಭುಂಜತ ಇತಿ ಜೈಮಿನಿರ್ಮನ್ಯತೇ (ಮ ಭಾ.)

ಇದು ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಎಂಬ ಮಾಧ್ಯಂದಿನಾಯನ-ಶ್ರುತಿಯಿಂದ ತಿಳಿದುಬರುತ್ತದೆ

**ಚಿತಿತನ್ಮಾತ್ರೇಣ* ತದಾತ್ಮಕತ್ವಾದಿತ್ಯೌಡುಲೋಮಿಃ ॥ ೬ ॥**

೬ (ಆತ್ಮನು) ಚೈತನ್ಯಮಾತ್ರದಿಂದಲೇ (ಕಾಣಿಸಿಕೊಳ್ಳುತ್ತಾನೆ), ಏಕೆಂದರ (ಅವನು) ಆ ಸ್ವರೂಪದವನಾಗಿರುತ್ತಾನೆ—ಎಂದು ಔಡುಲೋಮಿಯು (ಅಭಿಪ್ರಾಯಪಡುತ್ತಾನೆ)

ಶ್ರುತಿಗಳು ಅಪಹತ-ಪಾಪ್ಮತ್ವವೇ ಮೊದಲಾದ ಬೇರ ಬೇರೆ ಧರ್ಮಗಳನ್ನು ನಿರ್ದೇಶಿಸಿದ್ದರೂ ಅವು ಶಬ್ದವಿಕಲ್ಪದಿಂದಲೇ ಆಗಿರುತ್ತವೆ ಏಕೆಂದರೆ ಪಾಪಾದಿಗಳ ಅಭಾವವನ್ನು ಹೇಳುವುದೇ ಶ್ರುತಿಗಳ ಉದ್ದೇಶವಾಗಿರುತ್ತದ ಚೈತನ್ಯವೇ ಆತ್ಮನ ಸ್ವರೂಪವಾದುದರಿಂದ ಅಷ್ಟುಮಾತ್ರದ ಸ್ವರೂಪದಿಂದಲೇ ಮುಕ್ತನು ಕಾಣಿಸಿಕೊಳ್ಳುತಾನೆಂಬುದು ಯುಕ್ತವಾಗಿರುತ್ತದೆ ಇದು 'ಎಲೆ, ಈ ಆತ್ಮನು ಒಳಗಿಲ್ಲದೆ ಹೊರಗಿಲ್ಲದೆ ಪೂರ್ಣವಾದ ಪ್ರಜ್ಞಾನಘನನಾಗಿರುವನು'[1] (ಬೃ ಉ ೪ ೫ ೧೩) ಎಂಬ ಶ್ರುತಿಯೊಂದಿಗೆ ಹೊಂದುತ್ತದೆ ಸತ್ಯಸಂಕಲ್ಪತ್ವಾದಿ-ಧರ್ಮಗಳು ವಸ್ತು-ಸ್ವರೂಪದಿಂದಲೇ ಉಕ್ತವಾಗಿದ್ದರೂ ಅವು ಉಪಾಧಿಸಂಬಂಧಕ್ಕೆ ಅಧೀನವಾಗಿರುವುದರಿಂದ ಅವುಗಳಿಗೆ ಚೈತನ್ಯದಂತೆ ಸ್ವರೂಪತ್ವವಿಲ್ಲ, ಏಕೆಂದರೆ ೩ ೨ ೧೧ರಲ್ಲಿ ಬ್ರಹ್ಮಕ್ಕೆ ಅನೇಕಾಕಾರತ್ವವನ್ನು ಪ್ರತಿಷೇಧಿಸಿದೆ ಆದುದರಿಂದಲೇ 'ತಿನ್ನುವುದು', ಜಕ್ಷಣ ಮೊದಲಾದುವನ್ನು ಮುಕ್ತನಿಗೆ ದುಃಖವಿಲ್ಲವೆಂಬ ಅಭಿಪ್ರಾಯದಿಂದಲೂ 'ಆತ್ಮರತಿ' ಮೊದಲಾದುವನ್ನು ಸ್ತುತಿಗಾಗಿಯೂ ಹೇಳಿದೆ ಆದುದರಿಂದ ನಿಷ್ಪ್ರಪಂಚವಾದ ಪ್ರಸನ್ನವಾದ ವ್ಯಪದೇಶಿಸಲಾದ ಚಿದ್ರೂಪದಿಂದಲೇ ಆತ್ಮನು ತೋರಿಸಿಕೊಳ್ಳುತ್ತಾನೆ—ಎಂದು ಆಚಾರ್ಯ ಔಡುಲೋಮಿಯು ಅಭಿಪ್ರಾಯಪಡುತ್ತಾನೆ [2]

ವಿ —ಚೈತನ್ಯಮಾತ್ರವೇ ಜೀವನ ಸ್ವರೂಪ, ಆದುದರಿಂದ ಅದರಿಂದಲೇ ಮುಕ್ತ-ಜೀವನು ಪ್ರಕಾಶಿಸುತ್ತಾನೆ—ಎಂಬುದು ಔಡುಲೋಮಿಯು ಮತ, ಏಕೆಂದರೆ ಇದು ಶ್ರುತಿಯಿಂದ (ಬೃ ಉ ೪ ೫ ೧೩) ತಿಳಿದುಬರುತ್ತದೆ ಶ್ರುತಿಗಳು ಅಪಹತ-ಪಾಪ್ಮತ್ವಾದಿ ಗುಣಗಳನ್ನು ಹೇಳಿರುವುದು ಅವಿದ್ಯಾತ್ಮಕವಾದ ವಿಕಾರ-ಸುಖ-ದುಃಖಾದಿಗಳನ್ನು ನಿರಾಕರಿಸುವುದಕ್ಕೇ ಹೊರತು ಗುಣಗಳನ್ನು ಹೇಳುವುದಕ್ಕಲ್ಲ

---

* ಮಧ್ವಭಾಷ್ಯದ ಪಾಠದಲ್ಲಿ ಚಿತಿಮಾತ್ರೇಣ ಎಂದಾಗಿದೆ

1 ಏವಂ ವಾ ಅರೇಽಯಮಾತ್ಮಾನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ ।

2 ತಸ್ಮಾನ್ನಿರಸ್ತಾಶೇಷಪ್ರಪಂಚೇನ ಪ್ರಸನ್ನೇನಾವ್ಯಪದೇಶ್ಯೇನ ಬೋಧಾತ್ಮನಾಽಭಿನಿಷ್ಪದ್ಯತ ಇತ್ಯೌಡುಲೋಮಿರಾಚಾರ್ಯೋ ಮನ್ಯತೇ (ಸೂ ಭಾ.)

**ದ್ವೈ.**—'ಚಿನ್ಮಾತ್ರರೂಪವುಳ್ಳ ದೇಹದಿಂದ ಮುಕ್ತನು ಭೋಗಗಳನ್ನು ಅನುಭವಿಸುತ್ತಾನೆ,[1] ಏಕೆಂದರೆ ಅದಕ್ಕೆ ಮುಕ್ತಸ್ವರೂಪತ್ವವಿದೆ—ಎಂದು ಔಡುಲೋಮಿಯು ತಿಳಿಯುತ್ತಾನೆ' ಎಂಬುದು ಸೂತ್ರಾರ್ಥ

**ಸರ್ವಂ ವಾ ಏತದಚಿತ್ ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾವತಿಷ್ಠತೇ ತಾವನೇತಾಂ ಮುಕ್ತಿರಿತ್ಯಾಚಕ್ಷತೆ,** ಎಂಬ ಉದ್ದಾಲಕಶ್ರುತಿಯಿಂದ ಮುಕ್ತನಿಗೆ ಚಿದಾತ್ಮಕದೇಹವಿದೆಯೆಂಬುದು ತಿಳಿದುಬರುತ್ತದೆ

**ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ॥ ೭ ॥**

೭ ಹೀಗಾದರೂ ಉಪನ್ಯಾಸದಿಂದ (ತಿಳಿದುಬಂದಿರುವ) ಹಿಂದಿನ (ಗುಣಗಳೂ) ಇರುವುದರಿಂದ (ಯಾವ) ವಿರೋಧವೂ ಇಲ್ಲವೆಂದು ಬಾದರಾಯಣರು (ಅಭಿಪ್ರಾಯಪಡುತ್ತಾರೆ)

ಚೈತನ್ಯವು ಆತ್ಮನ ಪಾರಮಾರ್ಥಿಕಸ್ವರೂಪವೆಂದು ಒಪ್ಪಿಕೊಂಡರೂ—ವ್ಯವಹಾರಾಪೇಕ್ಷೆಯಿಂದ—ಉಪನ್ಯಾಸಾದಿಗಳಿಂದ ಹಿಂದೆ ತಿಳಿಸಿರುವ ಬ್ರಾಹ್ಮದ ಐಶ್ವರ್ಯರೂಪವನ್ನು ನಾವು ತಿರಸ್ಕರಿಸುವುದಿಲ್ಲ, ಆದುದರಿಂದ ಯಾವ ವಿರೋಧವೂ ಇಲ್ಲ ಇದು ಬಾದರಾಯಣರ ಅಭಿಪ್ರಾಯ

**ವಿ.**—ಆತ್ಮನು ವಿಜ್ಞಾನಸ್ವರೂಪನಾಗಿದ್ದರೂ ಹಿಂದೆ ಹೇಳಿದ ಸತ್ಯಕಾಮತ್ವಾದಿ—ಗುಣಗಳನ್ನು ನಿರಾಕರಿಸಬೇಕಾಗಿಲ್ಲ—ಎಂಬುದು ಬಾದರಾಯಣರ ಅಭಿಪ್ರಾಯ, ಇದು **ಯ ಆತ್ಮಾऽಪಹತಪಾಪ್ಮಾ** ಇದೇ ಮೊದಲಾದ ಶ್ರುತಿಗಳಿಂದ ತಿಳಿದುಬರುತ್ತದೆ ಪ್ರಮಾಣಗಳು ಸಮಾನವಾಗಿರುವಾಗ ಒಂದು ಇನ್ನೊಂದನ್ನು ಬಾಧಿಸಲಾರದು ಉಪ್ಪಿನ ಗಟ್ಟಿಯು ಒಳಗೂ ಹೊರಗೂ ಹೇಗೆ ಸಮರಸವಾಗಿರುವುದೊ ಹಾಗೆಯೇ ಆತ್ಮನು ವಿಜ್ಞಾನಸ್ವರೂಪನಾಗಿರುವನು—ಎಂಬುದು ವಾಕ್ಯದ ತಾತ್ಪರ್ಯ

**ದ್ವೈ.**—'ಹಿಂದೆ ಹೇಳಿದ ಎರಡು ಅಭಿಪ್ರಾಯಗಳೂ ನಿಜವಾಗಿರುವುದರಿಂದ ಯಾವ ವಿರೋಧವೂ ಇಲ್ಲವೆಂದು ಬಾದರಾಯಣಾಚಾರ್ಯರು ತಿಳಿಸುತ್ತಾರೆ' ಎಂಬುದು ಸೂತ್ರಾರ್ಥ

**ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೋ ಭವತಿ** ಎಂಬ ಶ್ರುತಿಯಲ್ಲಿ ಚಿನ್ಮಾತ್ರದೇಹದಿಂದ ಭೋಗಗಳನ್ನು ಅನುಭವಿಸುತ್ತಾರೆ—ಎಂದು ಹೇಳಿರುವುದರಿಂದಲೂ ಜೈಮಿನಿಯ ಅಭಿಪ್ರಾಯವು ಯುಕ್ತವಾಗಿರುವುದರಿಂದಲೂ ಎರಡು ಮತಗಳಿಗೂ ಯಾವ ವಿರೋಧವೂ ಇಲ್ಲವೆಂದು ಬಾದರಾಯಣರು ತಿಳಿಯುತ್ತಾರೆ

---

[1] **ಚಿತಿಮಾತ್ರೋ ದೇಹೋ ಮುಕ್ತಾನಾಂ ಪೃಥಗ್ವಿದ್ಯತೇ, ತೇನ ಭುಂಜತೇ** (ಮ. ಭಾ.)

# ೪. ಸಂಕಲ್ಪಾಧಿಕರಣ

(ಸೂ. ೮—೯)

**ಸಂಕಲ್ಪಾದೇವ ತು ತಚ್ಛ್ರುತೇಃ* ॥ ೮ ॥**

೮ ಸಂಕಲ್ಪದಿಂದಲೇ (ಮುಕ್ತರು ತಮ್ಮ ಬಯಕೆಗಳನ್ನು ಪಡೆಯುತ್ತಾರೆ), ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ

ಹಾರ್ದವಿದ್ಯೆಯಲ್ಲಿ ಶ್ರುತಿಯಲ್ಲಿ ಹೀಗೆ ಹೇಳುತ್ತದೆ 'ಅವನು ಪಿತೃಲೋಕವನ್ನು ಬಯಸುವವನಾದರೆ ಅವನ ಸಂಕಲ್ಪದಿಂದಲೇ ಪಿತೃಗಳು ಏಳುತ್ತಾರೆ'[1] (ಛಾಂ ಉ ೮ ೨ ೧), ಪಿತೃಗಳ ಸಮುತ್ಥಾನಕ್ಕೆ ಕೇವಲ ಸಂಕಲ್ಪವೇ ಕಾರಣವೊ ಅಥವಾ ನಿಮಿತ್ತಾಂತರಗಳೂ ಸಹ ಇರವುವೊ ?—ಎಂಬುದು ಸಂಶಯ

**ಪೂರ್ವಪಕ್ಷ**—ಶ್ರುತಿಯು 'ಸಂಕಲ್ಪದಿಂದಲೇ' ಎಂದು ಹೇಳಿದ್ದರೂ ಲೋಕದಲ್ಲಿ ಹೇಗೋ ಹಾಗೆ ನಿಮಿತ್ತಾಂತರಗಳ ಅಪೇಕ್ಷೆಯಿರುವುದು ಯುಕ್ತವು ಲೋಕದಲ್ಲಿ ಒಬ್ಬನು ತನ್ನ ತಂದೆಯನ್ನು ನೋಡಬೇಕಾಗಿದ್ದರೆ ತನ್ನ ಸಂಕಲ್ಪದೊಂದಿಗೆ ಗಮನಾದಿಗಳೂ ಇರುತ್ತವೆ ಮುಕ್ತನ ವಿಷಯದಲ್ಲಿಯೂ ಹೀಗೆಯೇ ತಿಳಿಯಬೇಕು ಕೇವಲ ಸಂಕಲ್ಪ ದಿಂದಲೇ ಪಿತೃಗಳು ಎದ್ದು ಬಂದರೆ, ಅವರು ನಮ್ಮ ಮನೋರಥಗಳ ಹಾಗೆ ಅಸ್ಥಿರರಾಗಿ ಪುಷ್ಕಲಭೋಗವನ್ನುಂಟುಮಾಡಲಾರರು

**ಸಿದ್ಧಾಂತಿ**—ಕೇವಲ ಸಂಕಲ್ಪದಿಂದಲೇ ಪಿತೃಗಳು ಎದ್ದು ಬರುತ್ತಾರೆ, ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ ಮತ್ತೊಂದು ಕಾರಣವೂ ಬೇಕಾಗಿದ್ದರೆ 'ನಿಮಿತ್ತ ದಿಂದಲೇ' ಎಂಬ ಶ್ರುತಿಯ ವಚನಕ್ಕೆ ವಿರೋಧವಾಗುತ್ತದೆ ನಿಮಿತ್ತಾಂತರವೂ ಸಂಕಲ್ಪ ದೊಂದಿದೆ ಇರುತ್ತವೆಯೆಂದು ಒಪ್ಪಿಕೊಂಡರೂ ಅದು ಪ್ರಯತ್ನಾಂತರದಿಂದ ನಿಮಿತ್ತಾಂತರ ವಾಗುವುದಿಲ್ಲ, ಏಕೆಂದರೆ ಆಗ ನಿಮಿತ್ತಾಂತರವು ಉಂಟಾಗುವುದಕ್ಕೆ ಮೊದಲು ಸಂಕಲ್ಪವು ವ್ಯರ್ಥವಾಗುವುದು ಶ್ರುತಿಯಿಂದ ಅರಿತುಕೊಳ್ಳಬೇಕಾದ ವಿಷಯದಲ್ಲಿ ಲೋಕದ ದೃಷ್ಟಾಂತಗಳು ಹೊಂದುವುದಿಲ್ಲ ಮುಕ್ತರ ಸಂಕಲ್ಪವು ಸಾಮಾನ್ಯರ ಸಂಕಲ್ಪಕ್ಕಿಂತ ಬೇರೆಯಾಗಿರುವುದರಿಂದ ಅವರು ತಮ್ಮ ಸಂಕಲ್ಪಬಲದಿಂದಲೇ ಪ್ರಯೋಜನವಾಗುವವರೆಗೂ ಪಿತ್ರಾದಿಗಳಲ್ಲಿ ಸ್ಥೈರ್ಯವನ್ನುಂಟುಮಾಡಬಹುದು

---

* ಮಧ್ವಭಾಷ್ಯದ ಪ್ರಕಾರ ಈ ಸೂತ್ರವೊಂದೇ ಸಂಕಲ್ಪಾಧಿಕರಣಕ್ಕೆ ಸೇರಿದೆ ಈ ಭಾಷ್ಯದ ಸೂತ್ರಪಾಠದಲ್ಲಿ ತು ಬದಲು ಚ ಬಂದಿದೆ. ಅದರೆ ಶ್ರೀಭಾಷ್ಯದ ಪಾಠದಲ್ಲಿ ಯಾವುದೂ ಇಲ್ಲ.

[1] ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ

**ವಿ.**—ಮುಕ್ತನ ವಿಷಯದಲ್ಲಿ ಶ್ರುತಿಯು ಹೀಗೆ ಹೇಳುತ್ತದೆ: 'ಅಲ್ಲಿ ಅವನು ನಗುತ್ತ, ಕ್ರೀಡಿಸುತ್ತ, ಸ್ತ್ರೀಯರೊಂದಿಗೆ ಜ್ಞಾತಿಗಳೊಂದಿಗೆ ಅಥವಾ ವಾಹನಗಳಿಂದ ರಮಿಸುತ್ತ ಸಂಚರಿಸುತ್ತಾನೆ'[1] (ಛಾಂ. ಉ. ೮. ೧೨. ೩); ಇಲ್ಲಿ ಜ್ಞಾತಿಗಳು ಮೊದಲಾದವರ ಪ್ರಾಪ್ತಿಯು ಪ್ರಯತ್ನಾಂತರದಿಂದ ಆಗುತ್ತದೆಯೊ ಅಥವಾ ಪರಮಪುರುಷನ ಸಂಕಲ್ಪಮಾತ್ರದಿಂದಲೇ ಆಗುತ್ತದೆಯೊ ?—ಎಂಬುದು ಸಂಶಯ. ಪ್ರಯತ್ನಾಂತರವು ಬೇಕಾಗುತ್ತದೆಯೆಂಬುದು ಪೂರ್ವಪಕ್ಷ 'ಸಂಕಲ್ಪದಿಂದಲೇ' ಎಂಬುದು ಸಿದ್ಧಾಂತ; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ. ಹಿಂದಿನ ಒಂದು ವಾಕ್ಯದಲ್ಲಿಯೂ (ಛಾಂ. ಉ. ೮. ೨. ೧) ಸಂಕಲ್ಪದಿಂದಲೇ ಪಿತೃಗಳೇ ಮೊದಲಾದವರ ಸಮುತ್ಥಾನವನ್ನು ಹೇಳಿದೆ ಮತ್ತಿ ಪ್ರಯತ್ನಾಂತರವು ಆವಶ್ಯಕವೆಂದು ತಿಳಿಸುವ ಬೇರೆ ಶ್ರುತಿಯೂ ಇಲ್ಲ.

**ದ್ವೈ.**—'ಮುಕ್ತರಿಗೆ ತಮ್ಮ ಸಂಕಲ್ಪದಿಂದಲೇ ಭೋಗವು ಸಿದ್ಧಿಸುತ್ತದೆ; ಏಕೆಂದರೆ ಹಾಗೆ ಶ್ರುತಿಯು (ಛಾಂ. ಉ. ೮. ೨. ೧) ಹೇಳುತ್ತದೆ ಎಂಬುದು ಸೂತ್ರಾರ್ಥ. ಮುಕ್ತರು ಭೋಗಾದಿಗಳಿಗಾಗಿ ಪ್ರಯತ್ನಪಡಬೇಕಾಗಿಲ್ಲ.[2]

## ಅತ ಏವ ಚಾನನ್ಯಾಧಿಪತಿಃ* ॥ ೯ ॥

೯. ಆದುದರಿಂದಲೇ (ಮುಕ್ತನಿಗೆ) ಬೇರೆ ಅಧಿಪತಿಯಿಲ್ಲ.

ಆದುದರಿಂದಲೇ, ಎಂದರೆ ಮುಕ್ತನ ಸಂಕಲ್ಪವು ನಿಷ್ಫಲವಾಗದಿರುವುದರಿಂದ ಜ್ಞಾನಿಯಾದವನ ಮೇಲೆ ಯಾವ ಅಧಿಪತಿಯೂ ಇರುವುದಿಲ್ಲ. ಸಾಮಾನ್ಯ ಮನುಷ್ಯನು ಕೂಡ ಸಂಕಲ್ಪಿಸುವಾಗ—ಸಾಧ್ಯವಾದರೆ—ತನ್ನ ಮೇಲೆ ಒಬ್ಬ ಒಡೆಯನನ್ನು ಬಯಸುವುದಿಲ್ಲ. ಶ್ರುತಿಯು ಕೂಡ ಇದನ್ನೇ ತಿಳಿಸುತ್ತದೆ: 'ಆದರೆ ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮಗಳನ್ನೂ ತಿಳಿದುಕೊಂಡು ಹೋಗುವರೊ ಅವರಿಗೆ ಸರ್ವಲೋಕಗಳಲ್ಲಿ ಸ್ವತಂತ್ರಗತಿಯಿರುತ್ತದೆ'[3] (ಛಾಂ. ಉ. ೮. ೧. ೬.)

**ವಿ.**—ಮುಕ್ತನು ಸತ್ಯಸಂಕಲ್ಪನಾದುದರಿಂದ ಅವನಿಗೆ ಯಾವ ಅಧಿಪತಿಯೂ ಇರುವುದಿಲ್ಲ. ಒಬ್ಬನ ಅಧೀನದಲ್ಲಿರುವುದೆಂದರೆ ವಿಧಿ-ನಿಷೇಧಗಳಿಗೆ ಒಳಗಾಗುವುದು;

---

[1] ಸ ತತ್ರ ಪರ್ಯೇತಿ ಜಕ್ಷತ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ।

[2] ನ ತೇಷಾಂ ಭೋಗಾದಿಷು ಪ್ರಯತ್ನಾಪೇಕ್ಷಾ (ಮ. ಭಾ.).

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅನನ್ಯಾಧಿಪತಿತ್ವಾಧಿಕರಣ ಎಂಬ ಒಂದು ಹೊಸ ಅಧಿಕರಣದಲ್ಲಿ ಅಂತರ್ಗತವಾಗಿದೆ.

[3] ಅಥ ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ।

ಇಂಥ ಅಸ್ವಾತಂತ್ರ್ಯವು ಸತ್ಯಸಂಕಲ್ಪತ್ವಕ್ಕೆ ವಿರೋಧವಾಗಿರುತ್ತದೆ. ಆದುದರಿಂದಲೇ ಶ್ರುತಿಯು 'ಅವನು ಸ್ವರಾಟ್ ಆಗುತ್ತಾನೆ' (ಛಾಂ. ಉ. ೭. ೨೫. ೨) ಎಂದು ಹೇಳುತ್ತದೆ.

**ದ್ವೈ.**—ಮುಕ್ತನು ಸತ್ಯಸಂಕಲ್ಪನಾದುದರಿಂದಲೇ—ಪರಮಾತ್ಮನ ಮತ್ತು ಶ್ರೇಷ್ಠರಾದ ಕೆಲವು ಮುಕ್ತರ ಹೊರತು—ಅವನ ಮೇಲೆ ಯಾವ ಅಧಿಪತಿಯೂ ಇರುವುದಿಲ್ಲ

## ೩. ಅಭಾವಾಧಿಕರಣ*

(೧೦–೧೪)

**ಅಭಾವಂ ಬಾದರಿರಾಹ ಹ್ಯೇವಮ್ ‖ ೧೦ ‖**

೧೦ (ಮುಕ್ತನಿಗೆ ಶರೀರೇಂದ್ರಿಯಗಳು) ಇಲ್ಲವೆಂದು ಬಾದರಿಯು (ಅಭಿಪ್ರಾಯಪಡುತ್ತಾನೆ), ಏಕೆಂದರೆ (ಶ್ರುತಿಯು) ಹೀಗೆ ಹೇಳುತ್ತದೆ.

'ಸಂಕಲ್ಪದಿಂದಲೇ ಅವನ ಪಿತೃಗಳು ಏಳುತ್ತಾರೆ' (ಛಾಂ ಉ. ೮ ೨ ೧) ಎಂಬ ಶ್ರುತಿಯ ಪ್ರಕಾರ ಮುಕ್ತನು ಸಂಕಲ್ಪಕ್ಕೆ ಸಾಧನವಾದ ಮನಸ್ಸನ್ನು ಹೊಂದಿರುತ್ತಾನೆ ಎಂಬುದು ಸಿದ್ಧವಾಗುತ್ತದೆ ಈಗ ಐಶ್ವರ್ಯವನ್ನು ಪಡೆದ ಜ್ಞಾನಿಗೆ ಶರೀರೇಂದ್ರಿಯಗಳೂ ಇವೆಯೊ ಅಥವಾ ಇಲ್ಲವೊ ?—ಎಂಬುದನ್ನು ವಿಚಾರಿಸಲಾಗುತ್ತದೆ

ಐಶ್ವರ್ಯವನ್ನು ಪಡೆದ ಜ್ಞಾನಿಗೆ ಶರೀರೇಂದ್ರಿಯಗಳಿಲ್ಲವೆಂದು ಬಾದರಿ ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ; ಏಕೆಂದರೆ 'ಬ್ರಹ್ಮಲೋಕದಲ್ಲಿರುವ ಕಾಮಗಳನ್ನೆಲ್ಲ ಮನಸ್ಸಿನಿಂದ ನೋಡುತ್ತ ರಮಿಸುತ್ತಾನೆ'[1] (ಛಾಂ ಉ ೮ ೧೨ ೫) ಎಂದು ಶ್ರುತಿಯು ಹೇಳುತ್ತದೆ ಮನಸ್ಸಿನಿಂದಲೂ ಮತ್ತು ಶರೀರೇಂದ್ರಿಯಗಳಿಂದಲೂ ವಿಹರಿಸುತ್ತಿದ್ದರೆ 'ಮನಸ್ಸಿನಿಂದ' ಎಂಬ ವಿಶೇಷಣವು ಇರುತ್ತಿರಲಿಲ್ಲ ಆದುದರಿಂದ ಮೋಕ್ಷಾವಸ್ಥೆಯಲ್ಲಿ ಶರೀರೇಂದ್ರಿಯಗಳಿಲ್ಲ

ವಿ.—ಮುಕ್ತನಿಗೆ ಶರೀರೇಂದ್ರಿಯಗಳಿಲ್ಲವೆಂಬುದು ಬಾದರಿಯ ಅಭಿಪ್ರಾಯವು; ಏಕೆಂದರೆ ಶ್ರುತಿಯು ಹಾಗೆ ಹೇಳುತ್ತದೆ 'ಶರೀರವುಳ್ಳವನಿಗೆ ಪ್ರಿಯಾಪ್ರಿಯಗಳ ವಿನಾಶವೂ ಇಲ್ಲವೇ ಇಲ್ಲ ಶರೀರವಿಲ್ಲದವನನ್ನು ಪ್ರಿಯಾಪ್ರಿಯಗಳು ಸೋಂಕುವುದೇ ಇಲ್ಲ'[2] (ಛಾಂ. ಉ ೮ ೧೨ ೧) **ಅಸ್ಮಾಚ್ಛರೀರಾತ್ ಸಮುತ್ಥಾಯ** (ಛಾಂ ಉ ೮ ೧೨ ೩) ಎಂಬ ಶ್ರುತಿಯು ಮುಕ್ತನಿಗೆ ಅಶರೀರತ್ವವನ್ನು ಹೇಳುತ್ತದೆ

ದ್ವೈ.—ಚಿನ್ಮಾತ್ರವಾದ ದೇಹದ ಹೊರತು ಮುಕ್ತನಿಗೆ ಬೇರೆ ದೇಹವಿಲ್ಲವೆಂದು ಬಾದರಿಯು ತಿಳಿದುಕೊಳ್ಳುತ್ತಾನೆ[3] **ಅಶರೀರೋ ವಾವ ತದಾ ಭವತಿ** ಎಂಬ ಕೌಂರರವ್ಯ-ಶ್ರುತಿಯು ಇದನ್ನೇ ತಿಳಿಸುತ್ತದೆ.

---

* ಶ್ರೀಭಾಷ್ಯ, ಮಧ್ವಭಾಷ್ಯ—ಇವುಗಳಲ್ಲಿ ಈ ಅಧಿಕರಣವು ೧೬ನೇ ಸೂತ್ರದ ವರೆಗೂ ಮುಂದುವರಿಯುತ್ತದೆ ಇದು ಮಧ್ವಭಾಷ್ಯದಲ್ಲಿ ಉಭಯವಿಧಭೋಗಾಧಿಕರಣ ಎನಿಸಿದೆ.

[1] ಮನಸೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ ।

[2] ನ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ।

[3] ಚಿನ್ಮಾತ್ರಂ ವಿನಾಽನ್ಯೋ ದೇಹಸ್ತೇಷಾಂ ನ ವಿದ್ಯತ ಇತಿ ಬಾದರಿಃ (ಮ. ಭಾ.)

## ಭಾವಂ ಜೈಮಿನಿರ್ವಿಕಲ್ಪಾಮನನಾತ್ ॥ ೧೧ ॥

೧೧ (ಶರೀರೇಂದ್ರಿಯಗಳು) ಇರುತ್ತವೆಯೆಂದು ಜೈಮಿನಿಯು (ಅಭಿಪ್ರಾಯ ಪಡುತ್ತಾನೆ), ಏಕೆಂದರೆ (ಶ್ರುತಿಯು) ವಿಕಲ್ಪವನ್ನು ಹೇಳಿದೆ.

ಮನಸ್ಸಿನಂತೆ ಶರೀರೇಂದ್ರಿಯಗಳೂ ಮುಕ್ತನಿಗೆ ಇರುತ್ತವೆಯೆಂದು ಆಚಾರ್ಯ ಜೈಮುನಿಯು ಅಭಿಪ್ರಾಯಪಡುತ್ತಾನೆ; ಏಕೆಂದರೆ ಅವನು ಅನೇಕವಾಗಿ ಇರುತ್ತಾನೆಂಬ ವಿಕಲ್ಪವನ್ನು ಶ್ರುತಿಯು ಹೇಳುತ್ತದೆ: 'ಅವನು ಒಂದಾಗಿರುತ್ತಾನೆ, ಮೂರಾಗಿರುತ್ತಾನೆ'[1] (ಛಾಂ. ಉ. ೭. ೨೬. ೨). ಶರೀರವು ಅನೇಕವಾಗದಿದ್ದರೆ ಮುಕ್ತನು ಅನೇಕ ಪ್ರಕಾರ ಗಳಿಂದ ಇರಲಾರನು. ಈ ವಿಕಲ್ಪವು ನಿರ್ಗುಣವಾದ ಭೂಮವಿದ್ಯಾಸ್ತುತಿಗಾಗಿ ಹೇಳಿರುವುದರಿಂದ ಇದು ಸಗುಣವಿದ್ಯಾಫಲವೂ ಆಗಿರುತ್ತದೆ.

ವಿ.—ಶ್ರುತಿಯ ಪ್ರಕಾರ (ಛಾಂ. ಉ. ೭. ೨೬. ೨) ಮುಕ್ತನಿಗೆ ಶರೀರೇಂದ್ರಿಯ ಗಳವೆಯೆಂದು ಜೈಮಿನಿಯು ಅಭಿಪ್ರಾಯಪಡುತ್ತಾನೆ. ಏಕನೂ ಅಚ್ಛೇದ್ಯನೂ ಆದ ಆತ್ಮನು ಅನೇಕನಾಗದಿರುವುದರಿಂದ ಶ್ರುತಿಯು ಹೇಳುವ ಅನೇಕತ್ವವು ಶರೀರವನ್ನೇ ಅವಲಂಬಿಸಿದೆ. ಶ್ರುತಿಯು ಹೇಳುವ ಅಶರೀರತ್ವವು ಕರ್ಮನಿಮಿತ್ತಶರೀರದ ಅಭಾವವನ್ನು ಹೇಳುವುದಕ್ಕಾಗಿ.

ದ್ವೈ.—ಮುಕ್ತನಿಗೆ ಚಿನ್ಮಾತ್ರದೇಹವಲ್ಲದೆ ಬೇರೊಂದು ಶರೀರವಿದೆಯೆಂದು ಜೈಮಿನಿಯು ತಿಳಿಸುತ್ತಾನೆ. ಇದು **ಚಿತಾ ವಾ ಅಚಿತಾ ವಾ** ಎಂಬ ಉದ್ದಾಲಕಾಯನ-ಶ್ರುತಿಯಿಂದ ತಿಳಿದುಬರುತ್ತದೆ.

## ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ॥ ೧೨ ॥

೧೨. ಆದುದರಿಂದ ದ್ವಾದಶಾಹದಂತೆ ಉಭಯವಿಧವೂ (ಇದೆ) ಎಂದು ಬಾದರಾಯಣನು ಅಭಿಪ್ರಾಯಪಡುತ್ತಾನೆ.

ಈಗ ಸಿದ್ಧಾಂತವನ್ನು ಹೇಳಿದೆ: ಉಭಯಲಿಂಗದ ಶ್ರುತಿಯು ಇರುವುದರಿಂದ ಉಭಯವಿಧವೂ ಸರಿಯೆಂದು ಬಾದರಾಯಣಾಚಾರ್ಯರು ಅಭಿಪ್ರಾಯಪಡುತ್ತಾರೆ. ಯಾವಾಗ ಸಶರೀರನಾಗಲು ಸಂಕಲ್ಪಿಸುವನೋ ಆಗ ಸಶರೀರನಾಗುತ್ತಾನೆ; ಯಾವಾಗ ಅಶರೀರನಾಗಲು ಸಂಕಲ್ಪಿಸುವನೊ ಆಗ ಅಶರೀರನಾಗುತ್ತಾನೆ; ಏಕೆಂದರೆ ಮುಕ್ತನು ಸತ್ಯಸಂಕಲ್ಪನಾಗಿರುತ್ತಾನೆ. ಇದು ದ್ವಾದಶಾಹದಂತೆ: ದ್ವಾದಶಾಹವೆಂಬ ಯಾಗವು

---

1 ಸ ಏಕಧಾ ಭವತಿ ತ್ರಿಧಾ ಭವತಿ ।

ಸತ್ರವೂ ಆಗಬಹುದು ಅಹೀನವೂ ಆಗಬಹುದು, ಏಕೆಂದರೆ ಉಭಯಲಿಂಗದ[1] ಶ್ರುತಿಗಳೂ ಕಂಡುಬರುತ್ತವೆ

**ವಿ.**—ಈಗ ಭಗವಾನ್ ಬಾದರಾಯಣರು ಸ್ವಮತದ ಸಿದ್ಧಾಂತವನ್ನು ಹೇಳುತ್ತಾರೆ ಮುಕ್ತನು ತನ್ನ ಸಂಕಲ್ಪದಂತೆ ಸಶರೀರನಾಗಿಯೂ ಇರಬಹುದು, ಅಶರೀರನಾಗಿಯೂ ಇರಬಹುದು ಇದು ಉಭಯಶ್ರುತಿಗಳಿಗೂ ಹೊಂದುತ್ತದೆ ಇದು ಎರಡು ವಿಧವಾದ ಚೋದನೆಯ ಪ್ರಕಾರ ಸತ್ರವೂ ಅಹೀನವೂ ಆಗುವ ದ್ವಾದಶಾಹದಂತೆ **ದ್ವಾದಶಾಹಮೃದ್ಧಿಕಾಮಾ ಉಪೇಯುಃ** ಎಂಬಲ್ಲಿ ಉಪಯಿ-ಧಾತುವಿನಿಂದ ಚೋದನೆಯಿದೆ, **ದ್ವಾದಶಾಹೇನ ಪ್ರಜಾಕಾಮಂ ಯಾಜಯೇತ್** ಎಂಬಲ್ಲಿ **ಯಜ್-ಧಾತುವಿನಿಂದ** ಚೋದನೆಯಿದೆ

**ದ್ವೈ.**—ದ್ವಾದಶಾಹ-ಯಾಗವು ಕ್ರತುವೂ ಸತ್ರವೂ ಆಗುವಂತೆ ಮುಕ್ತನ ಭೋಗವು ಬಾಹ್ಯಶರೀರದಿಂದಾಗಲಿ ಅಥವಾ ಚಿನ್ಮಾತ್ರಶರೀರದಿಂದಾಗಲಿ ಆಗಬಹುದು—ಎಂದು ಬಾದರಾಯಣರು ತಿಳಿಸುತ್ತಾರೆ[2]

## ತನ್ವಭಾವೇ ಸಂಧ್ಯವದುಪಪತ್ತೇಃ ॥ ೧೩ ॥

೧೩ ಶರೀರವಿಲ್ಲದಿರುವಾಗ ಸ್ವಪ್ನದಂತೆ ಆಗಬಹುದು, ಏಕೆಂದರೆ ಇದು ಹೊಂದುತ್ತದೆ

ಸ್ವಪ್ನದಲ್ಲಿ ಶರೀರೇಂದ್ರಿಯ-ವಿಷಯುಗಳು ಇಲ್ಲದಿದ್ದರೂ ಪಿತ್ರಾದಿಕಾಮುಗಳು ಕೇವಲ ಜ್ಞಾನರೂಪದಿಂದಲೇ ಆಗುವಂತೆ ಮೋಕ್ಷದಲ್ಲಿಯೂ ಶರೀರೇಂದ್ರಿಯಗಳಿಲ್ಲದಿರುವಾಗ ಆಗಬಹುದು

**ವಿ.**—ಸ್ವಸಂಕಲ್ಪದಿಂದ ಉತ್ಪನ್ನವಾದ ದೇಹವೇ ಮೊದಲಾದ ಉಪಕರಣಗಳಿಲ್ಲದಿದ್ದರೂ ಪರಮಪುರುಷನಿಂದ ಸೃಷ್ಟಿಸಲ್ಪಟ್ಟ ಉಪಕರಣಗಳಿಂದ ಮುಕ್ತನು ಸುಖವನ್ನು ಅನುಭವಿಸಬಹುದು, ಮುಕ್ತನು ಸತ್ಯಸಂಕಲ್ಪನಾಗಿದ್ದರೂ ಸ್ವಯಂ ಸೃಷ್ಟಿಸುವುದಿಲ್ಲ, ಸ್ವಪ್ನದಲ್ಲಿ ಈಶ್ವರನಿಂದ ಸೃಷ್ಟಿಸಲ್ಪಟ್ಟ ರಥವೇ ಮೊದಲಾದುವುಗಳನ್ನು (ಬೃ ಉ ೪ ೩ ೧೦) ಜೀವನು ಹೇಗೆ ಅನುಭವಿಸುವನೊ ಹಾಗೆಯೇ ಇಲ್ಲಿಯೂ ಹೀಗೆ ಲೀಲಾಪ್ರವೃತ್ತನಾದ ಈಶ್ವರನಿಂದ ಸೃಷ್ಟಿಸಲ್ಪಟ್ಟ ಪಿತೃಲೋಕಾದಿಗಳನ್ನು ಮುಕ್ತನೂ ಅನುಭವಿಸಬಹುದು

---

[1] ಉಪಯಂತಿ ಎಂಬ ಚೋದನೆಯನ್ನು ಸತ್ರದಲ್ಲಿ ಪ್ರಯೋಗಿಸುತ್ತಾರೆ. ಯಾಜಯೇತ್ ಎಂಬುದನ್ನು ಅಹೀನದಲ್ಲಿ ಪ್ರಯೋಗಿಸುತ್ತಾರೆ ಪೂರ್ವಮೀಮಾಂಸಾಸೂತ್ರ ೬ ೩ ನೋಡಿ.

[2] ಯಥಾ ದ್ವಾದಶಾಹಃ ಕ್ರತ್ವಾತ್ಮಕಃ ಸತ್ರಾತ್ಮಕಶ್ಚ ಭವತಿ, ಏವಂ ಮುಕ್ತಭೋಗೋ ಬಾಹ್ಯಶರೀರಕೃತಶ್ಚಿನ್ಮಾತ್ರಕೃತಶ್ಚ ಭವತೀತಿ ಬಾದರಾಯಣೋ ಮನ್ಯತೇ (ಮ. ಭಾ.).

ದ್ವೈ.—ಸ್ವಪ್ನಾವಸ್ಥೆಯಲ್ಲಿ ದೇಹವಿಲ್ಲದಿದ್ದರೂ ಹೇಗೆ ಭೋಗವಿದೆಯೋ ಹಾಗೆಯೇ ಮುಕ್ತನಿಗೆ ಬಾಹ್ಯಶರೀರವಿಲ್ಲದಿದ್ದರೂ ಭೋಗವುಂಟಾಗುತ್ತದೆ

**ಭಾವೇ ಜಾಗ್ರದ್ವತ್ ॥ ೧೪ ॥**

೧೪. (ಶರೀರವು) ಇರುವಾಗ ಜಾಗ್ರದವಸ್ಥೆಯಂತೆ

ಮುಕ್ತನಿಗೆ ಶರೀರವಿರುವಾಗ ಪಿತ್ರಾದಿಕಾಮಗಳು ಜಾಗ್ರದವಸ್ಥೆಯಂತೆ ನಿಜವಾಗಿ ಆಗಬಹುದು.

ವಿ.—ಮುಕ್ತನಿಗೆ ಸ್ವಸಂಕಲ್ಪದಿಂದ ಉಂಟಾದ ಶರೀರವಿರುವಾಗ—ಜಾಗ್ರದವಸ್ಥೆಯಲ್ಲಿರುವ ಮನುಷ್ಯನಂತೆ—ಲೀಲಾರಸವನ್ನು ಅನುಭವಿಸುತ್ತಾನೆ.

ದ್ವೈ.—ಜಾಗ್ರದವಸ್ಥೆಯಲ್ಲಿ ದೇಹವಿರುವಾಗ ಹೇಗೆ ಭೋಗವಿದೆಯೋ ಹಾಗೆಯೇ ಮೋಕ್ಷದಲ್ಲಿಯೂ ದೇಹವಿರುವಾಗ ಭೋಗವು ಯುಕ್ತವಾಗಿರುತ್ತದೆ.

## ೬ ಪ್ರದೀಪಾಧಿಕರಣ

(ಸೂ. ೧೫–೧೬)

**ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ॥ ೧೫ ॥**

೧೫ (ಅನೇಕಶರೀರಗಳಲ್ಲಿ ಒಬ್ಬ ಆತ್ಮನ) ಪ್ರವೇಶವು ಪ್ರದೀಪದಂತೆ, ಹಾಗೆಯೇ ಶ್ರುತಿಯು ಹೇಳುತ್ತದೆ

೧೧ನೆಯ ಸೂತ್ರದಲ್ಲಿ ಮುಕ್ತನಿಗೆ ಶರೀರವಿದೆಯೆಂದು ಹೇಳಿದ್ದಾಯಿತು ಆತ್ಮನು ಅನೇಕ ಶರೀರಗಳನ್ನು ಸೃಷ್ಟಿಸಿಕೊಳ್ಳುವಾಗ ಅವುಗಳು ನಿರಾತ್ಮಕವಾದ ಮರದ ಯಂತ್ರಗಳಂತಿರುತ್ತವೆಯೊ ? ಅಥವಾ ನಮ್ಮ ಶರೀರಗಳಂತೆ ಸಾತ್ಮಕವಾಗಿರುತ್ತವೆಯೊ ?— ಎಂಬುದು ಸಂಶಯ

**ಪೂರ್ವಪಕ್ಷಿ**—ಆತ್ಮ-ಮನಸ್ಸುಗಳನ್ನು ಬೇರೆ ಬೇರೆ ಮಾಡಲು ಆಗದಿರುವುದರಿಂದ ಅವು ಒಂದೇ ಶರೀರಕ್ಕೆ ಸಂಬಂಧಿಸಿರುತ್ತವೆ, ಇತರ ಶರೀರಗಳು ನಿರಾತ್ಮಕವಾಗಿರುತ್ತವೆ

**ಸಿದ್ಧಾಂತಿ**—ಒಂದೇ ಪ್ರದೀಪದ ಶಿಖೆಯು ತನ್ನ ವಿಕಾರಶಕ್ತಿಯಿಂದ ಅನೇಕ ದೀಪಶಿಖೆಗಳಾಗುವಂತೆ ಜ್ಞಾನಿಯು ಒಬ್ಬನೇ ಆಗಿದ್ದರೂ ತನ್ನ ಐಶ್ವರ್ಯ-ಶಕ್ತಿಯಿಂದ ಅನೇಕನಾಗಿ 'ಸರ್ವ ಶರೀರಗಳನ್ನು ಪ್ರವೇಶಿಸುತ್ತಾನೆ ಹೀಗೆಯೇ ಶ್ರುತಿಯು ಹೇಳುತ್ತದೆ, 'ಅವನು ಒಂದು ಬಗೆಯಾಗುತ್ತಾನೆ, ಮೂರು ಬಗೆಯಾಗುತ್ತಾನೆ, ಐದು, ಏಳು, ಒಂಬತ್ತು ಬಗೆಯಾಗುತ್ತಾನೆ'[1] (ಛಾಂ. ಉ ೭ ೨೬ ೨) ಹೀಗೆ ಆತ್ಮನು ಅನೇಕ ಬಗೆಯಾಗುವುದು ಮರದ ಯಂತ್ರದ ಉಪಮೆಯನ್ನು ಒಪ್ಪಿಕೊಂಡರೂ ಆಗುವುದಿಲ್ಲ, ಅಥವಾ ಬೇರೆಯ ಜೀವರು ಆ ಶರೀರಗಳನ್ನು ಪ್ರವೇಶಿಸಿರುತ್ತಾರೆಂದು ಒಪ್ಪಿಕೊಂಡರೂ ಆಗುವುದಿಲ್ಲ. ಆದರೆ ನಿರಾತ್ಮಕವಾದ ಶರೀರಗಳು ಪ್ರವರ್ತಿಸುವುದು ಸಂಭವಿಸುವುದೇ ಇಲ್ಲ ಶರೀರ ಮನಸ್ಸುಗಳನ್ನು ಬೇರೆ ಬೇರೆಮಾಡಲು ಆಗದಿರುವುದರಿಂದ ಅವುಗಳಿಗೆ ಅನೇಕ ಶರೀರಗಳ ಸಂಬಂಧವು ಸಂಭವಿಸುವುದಿಲ್ಲವೆಂಬ ಪೂರ್ವಪಕ್ಷದಲ್ಲಿ ಯಾವ ಅರ್ಥವೂ ಇರುವುದಿಲ್ಲ ಆತ್ಮನು ಸತ್ಯಸಂಕಲ್ಪನಾದುದರಿಂದ ಮೂಲವಾದ ಮನಸ್ಸನ್ನು ಅನುಸರಿಸುವ ಮನಃಸಹಿತವಾದ ಬಹುಶರೀರಗಳನ್ನು ಸೃಷ್ಟಿಸಿಕೊಳ್ಳಬಹುದು ;[2] ಆತ್ಮನೂ ಉಪಾಧಿಭೇದದಿಂದ ಅನೇಕನಾಗಿ ಸೃಷ್ಟಿಸಲ್ಪಟ್ಟ ಆ ಶರೀರಗಳಲ್ಲಿ ಅಧಿಷ್ಠಾತೃವಾಗಬಹುದು. ಯೋಗಿಗಳಿಗೆ ಅನೇಕ ಶರೀರಗಳ ಸಂಬಂಧವಾಗುವುದೆಂದು ಯೋಗಶಾಸ್ತ್ರದಲ್ಲಿಯೂ ಹೇಳಿದೆ.

---

[1] ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ನವಧಾ ।

[2] ಏಕಮನೋಽನುವರ್ತೀನಿ ಸಮನಸ್ಕಾನ್ಯೇವಾಪರಾಣಿ ಸತ್ಯಸಂಕಲ್ಪತ್ವಾತ್ ಸ್ರಕ್ಷ್ಯತಿ (ಸೂ. ಭಾ ).

ವಿ.—ಜೀವನು ಅಣುಪರಿಮಾಣವುಳ್ಳವನೆಂದು ಹೇಳಿದ್ದಾಯಿತು ; ಹೀಗಿರುವಾಗ ಅವನು ಹೇಗೆ ಅನೇಕ ಶರೀರಗಳ ಸಂಬಂಧವನ್ನು ಪಡೆಯುತ್ತಾನೆ ?—ಎಂಬ ಪೂರ್ವ ಪಕ್ಷಕ್ಕೆ ಪರಿಹಾರವು ಹೀಗಿದೆ ; ಒಂದೇ ಸ್ಥಳದಲ್ಲಿರುವ ಪ್ರದೀಪವು ಸ್ವಪ್ರಭೆಯಿಂದ ಅನೇಕ ಸ್ಥಳಗಳನ್ನು ವ್ಯಾಪಿಸಿಕೊಳ್ಳುವಂತೆ ಏಕದೇಶಸ್ಥಿತನಾದ ಜೀವಾತ್ಮನು ಸ್ವಪ್ರಭಾರೂಪವಾದ ಚೈತನ್ಯದಿಂದ ಅನೇಕ ಶರೀರಗಳಲ್ಲಿ ವ್ಯಾಪಿಸಿಕೊಳ್ಳುತ್ತಾನೆ—ಎಂಬುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ.[1] ಬದ್ಧದಶೆಯಲ್ಲಿಯೂ ಒಂದೇ ಶರೀರದಲ್ಲಿರುವ ಹೃದಯದ ಅಲ್ಪ ಭಾಗದಲ್ಲಿರುವ ಜೀವನು ತನ್ನ ಜ್ಞಾನದಿಂದ ಶರೀರವನ್ನೆಲ್ಲ ವ್ಯಾಪಿಸಿಕೊಳ್ಳುವುದು ಕಂಡು ಬರುತ್ತದೆ. ಬದ್ಧಜೀವನಿಗೂ ಮುಕ್ತಜೀವನಿಗೂ ಇಷ್ಟೇ ಭೇದವಿದೆ: ಬದ್ಧಜೀವನ ಜ್ಞಾನವು ಕರ್ಮದಿಂದ ಸಂಕುಚಿತವಾಗಿರುವುದರಿಂದ ಅವನಿಗೆ ದೇಹಾಂತರಗಳಲ್ಲಿ ವ್ಯಾಪ್ತಿಯು ಸಂಭವಿಸುವುದಿಲ್ಲ ; ಮುಕ್ತಜೀವನ ಜ್ಞಾನವು ಸಂಕುಚಿತವಾಗದಿರುವುದರಿಂದ ಅವನಿಗೆ ಶರೀರಾಂತರಗಳಲ್ಲಿ ವ್ಯಾಪ್ತಿಯಿದೆ. ಶ್ರುತಿಯೂ (ಶ್ವೇ. ಉ. ೫. ೯) ಕೂಡ ಜೀವನು ಅಣುಪರಿಮಾಣವುಳ್ಳವನಾಗಿದ್ದರೂ ಅನಂತನೆಂದು ತಿಳಿಸುತ್ತದೆ.

ದ್ವೈ.—ಮುಕ್ತರು ಶರೀರವನ್ನು ಪ್ರವೇಶಿಸಿದರೂ, ಅದನ್ನು ತಮ್ಮ ಪ್ರಕಾಶದಿಂದ ಬೆಳಗುತ್ತ ಪುಣ್ಯಭೋಗಗಳನ್ನು ಅನುಭವಿಸುತ್ತಾರೆಯೇ ಹೊರತು ದುಃಖಗಳನ್ನಲ್ಲ ;[2] ಹೇಗೆ ದೀಪವು ದೀಪಿಕಾದಿಗಳಲ್ಲಿ ತೈಲಾದಿಗಳನ್ನು ಅನುಭವಿಸುತ್ತದೆಯೇ ಹೊರತು ಮಸಿ ಮೊದಲಾದುವನ್ನು ಅನುಭವಿಸುವುದಿಲ್ಲವೊ ಹಾಗೆಯೇ ಇಲ್ಲಿಯೂ ತಿಳಿದುಕೊಳ್ಳಬೇಕು. ಶ್ರುತಿಯೂ ಹೀಗೆಯೇ ಹೇಳುತ್ತದೆ : 'ಏಕೆಂದರೆ ಆಗ ಅವನು ದುಃಖಗಳನ್ನೆಲ್ಲ ದಾಟಿರುತ್ತಾನೆ ಮತ್ತು ಹೃದಯದಲ್ಲಿರುವ ಪರಮಾತ್ಮನೊಂದಿಗೆ ಸಂಬಂಧವನ್ನು ಪಡೆದಿರುತ್ತಾನೆ' (ಬೃ. ಉ. ೪. ೩. ೨೨).

**ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ॥ ೧೬ ॥**

೧೬. (ವಿಶೇಷಜ್ಞಾನವಿಲ್ಲವೆಂಬ ವಚನವು) ಸ್ವಾಪ್ಯಯವನ್ನೊ ಅಥವಾ ಸಂಪತ್ತಿಯನ್ನೊ ಸೂಚಿಸುತ್ತದೆ; ಏಕೆಂದರೆ (ಇದು ಶ್ರುತಿಯಲ್ಲಿಯೇ) ಸ್ಪಷ್ಟಮಾಡಲ್ಪಟ್ಟಿದೆ.

**ಆಕ್ಷೇಪಣೆ**—ಮುಕ್ತನು ಅನೇಕ ಶರೀರಗಳನ್ನು ಪ್ರವೇಶಿಸುವನು ಎಂಬ ಐಶ್ವರ್ಯವನ್ನು ಒಪ್ಪಿಕೊಳ್ಳುವುದು ಹೇಗೆ ? ಏಕೆಂದರೆ ಅನೇಕ ಶ್ರುತಿಗಳು ಆತ್ಮನಿಗೆ ಆ ಅವಸ್ಥೆಯಲ್ಲಿ ವಿಶೇಷ ವಿಜ್ಞಾನವನ್ನು ಹೇಳುವುದಿಲ್ಲ : 'ಅಲ್ಲಿ ಯಾವುದರಿಂದ ಯಾವುದನ್ನು

---

1 ಯಥಾ ಪ್ರದೀಪಸ್ಯೈಕಸ್ಯೈಕಸ್ಮಿನ್ ದೇಶೇ ವರ್ತಮಾನಸ್ಯ ಸ್ವಪ್ರಭಯಾ ದೇಶಾಂತರಾವೇಶಃ; ತಥಾಽಽತ್ಮನೋಽಪ್ಯೇಕದೇಹಸ್ಥಿತಸ್ಯೈವ ಸ್ವಪ್ರಭಾರೂಪೇಣ ಚೈತನ್ಯೇನೈವ ಸರ್ವಶರೀರಾವೇಶೋ ನಾನುಪಪನ್ನಃ (ಶ್ರೀಭಾಷ್ಯ).

2 ಶರೀರಮನುವಿಶ್ಯಾಪಿ ತತ್ಪ್ರಕಾಶಯಂತಃ ಪುಣ್ಯಾನೇವ ಭೋಗಾನನುಭವಂತಿ ನ ತು ದುಃಖಾದೀನ್ (ಮ. ಭಾ.).

ಅರಿತುಕೊಂಡಾನು ?' 'ಆದರೆ ಅರಿಯಬಹುದಾದ ಆ ಎರಡನೆಯ ವಸ್ತುವು ತನಗಿಂತ ಬೇರೆಯಾಗಿ ವಿಂಗಡವಾಗಿರುವುದಿಲ್ಲ,' (ಆತ್ಮನು ಸುಷುಪ್ತಿಯಲ್ಲಿ) ನೀರಿನಂತೆ (ಸ್ವಚ್ಛನೂ) ಏಕನೂ ದ್ರಷ್ಟೃವೂ ದ್ವೈತರಹಿತನೂ ಆಗುತ್ತಾನೆ' (ಬೃ. ಉ. ೨. ೪. ೧೪, ೪. ೩. ೩೦ ; ೩೨).

**ಪರಿಹಾರ**—ಸ್ವಾಪ್ಯಯದ ಅಪೇಕ್ಷೆಯಿಂದಲೊ ಅಥವಾ ಸಂಪತ್ತಿಯ ಅಪೇಕ್ಷೆಯಿಂದಲೊ ಇದನ್ನು ಹೇಳಿದ್ದು. ಸ್ವಾಪ್ಯಯವೆಂದರೆ ಸುಷುಪ್ತಿ : ಇದು 'ಸ್ವರೂಪವನ್ನು ಹೊಂದಿರುತ್ತಾನೆ ; ಆದುದರಿಂದ ಇವನನ್ನು "ಸ್ವಪಿತಿ" ಎಂದು ಹೇಳುತ್ತಾರೆ'[1] (ಛಾಂ. ಉ. ೬. ೮. ೧) ಎಂಬ ಶ್ರುತಿಯಿಂದ ತಿಳಿದುಬರುತ್ತದೆ. ಸಂಪತ್ತಿಯೆಂದರೆ ಕೈವಲ್ಯವು ; ಇದು 'ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ'[2] (ಬೃ. ಉ. ೪. ೪. ೬) ಎಂಬ ಶ್ರುತಿಯಿಂದ ತಿಳಿದುಬರುತ್ತದೆ. ವಿಶೇಷಸಂಜ್ಞೆಯಿಲ್ಲವೆಂಬ ವಚನವನ್ನು ಒಂದುಕಡೆ ಸುಷುಪ್ತಾವಸ್ಥೆಯ ಅಪೇಕ್ಷೆಯಿಂದ ಹೇಳಿದೆ, ಇನ್ನೊಂದು ಕಡೆ ಕೈವಲ್ಯಾವಸ್ಥೆಯ ಅಪೇಕ್ಷೆಯಿಂದ ಹೇಳಿದೆ. ಇದು ಪ್ರಕರಣವಶದಿಂದಲೇ ಸ್ಪಷ್ಟವಾಗಿ ತಿಳಿದುಬರುತ್ತದೆ : 'ಈ ಭೂತಗಳಿಂದ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ ತಾನೂ ಲಯವಾಗುತ್ತದೆ. ಇಲ್ಲಿಂದ ಹೋದಮೇಲೆ ವಿಶೇಷ ಜ್ಞಾನವಿರುವುದಿಲ್ಲ,'[3] 'ಆದರೆ ಎಲ್ಲಿ ಇವನಿಗೆ ಆತ್ಮನೇ ಆಗಿರುವುದೊ,'[4] 'ಎಲ್ಲಿ ಸುಪ್ತನಾದಾಗ ಇವನು ಯಾವ ಬಯಕೆಯನ್ನೂ ಬಯಸುವುದಿಲ್ಲವೊ, ಯಾವ ಸ್ವಪ್ನವನ್ನೂ ಕಾಣುವದಿಲ್ಲವೊ'[5] (ಬೃ. ಉ. ೨. ೪. ೧೨ ; ೪. ೫. ೧೫ ; ೪. ೩. ೧೯).

ಐಶ್ವರ್ಯವನ್ನು ವರ್ಣಿಸಿರುವ ವಾಕ್ಯಗಳು ಸಗುಣವಿದ್ಯೆಯ ಫಲವಾಗಿರುವ ಸ್ವರ್ಗವೇ ಮೊದಲಾದ ಅವಸ್ಥಾಂತರಗಳನ್ನು ತಿಳಿಸುತ್ತವೆ. ಆದುದರಿಂದ ಯಾವ ದೋಷವೂ ಇಲ್ಲ.

ವಿ —'ಪರಮಾತ್ಮನಿಂದ ಆಲಿಂಗಿತನಾದ ಪುರುಷನು ಹೊರಗಿನ ಅಥವಾ ಒಳಗಿನ ಯಾವುದನ್ನೂ ಅರಿಯನು' (ಬೃ. ಉ. ೪. ೩. ೨೧) ಎಂಬ ಶ್ರುತಿಯ ಪ್ರಕಾರ ಪರಬ್ರಹ್ಮನನ್ನು ಸೇರಿದವನಿಗೆ ಒಳಗಿನ ಜ್ಞಾನವಾಗಲಿ ಹೊರಗಿನ ಜ್ಞಾನವಾಗಲಿ ಇರುವುದಿಲ್ಲ ; ಹೀಗಿರುವಾಗ ಮುಕ್ತನು ಸರ್ವಜ್ಞನೆಂಬುದು ಹೇಗೆ ?—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ : ಈ ವಚನವನ್ನು ಮುಕ್ತನ ವಿಷಯದಲ್ಲಿ ಹೇಳಿಲ್ಲ, ಸ್ವಾಪ್ಯಯದ ವಿಷಯದಲ್ಲಿ ಅಥವಾ ಸಂಪತ್ತಿಯ ವಿಷಯದಲ್ಲಿ ಹೇಳಿದೆ. ಸ್ವಾಪ್ಯಯವೆಂದರೆ ಸುಷುಪ್ತಿ, ಸಂಪತ್ತಿ

---

[1] ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ ಸ್ವಂ ಹ್ಯಪೀತೋ ಭವತಿ ।

[2] ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।

[3] ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ, ನ ಪ್ರೇತ್ಯ ಸಂಜ್ಞಾಸ್ತೀತಿ ।

[4] ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ।

[5] ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ, ನ ಕಂಚನ ಸ್ವಪ್ನಂ ಪಶ್ಯತಿ ।

ಯೆಂದರೆ ಮರಣ 'ಆಗ ವಾಕ್ಕು ಮನಸ್ಸಿನಲ್ಲಿ ಲಯವಾಗುತ್ತದೆ' 'ತೇಜಸ್ಸು ಪರದೇವತೆಯಲ್ಲಿ ಲಯವಾಗುತ್ತದೆ' (ಛಾಂ ಉ ೬ ೧೫, ೧) ಎಂಬ ವಾಕ್ಯಗಳು ಸಂಪತ್ತಿಯನ್ನು ತಿಳಿಸುತ್ತವೆ ಈ ಎರಡು ಅವಸ್ಥೆಗಳಲ್ಲಿಯೂ ಪರಮಾತ್ಮಪ್ರಾಪ್ತಿಯನ್ನು ಹೊಂದಿದ ಜೀವನು ಬೋಧರಹಿತನಾಗಿರುತ್ತಾನೆ ಸುಷುಪ್ತಿ-ಮರಣಗಳಲ್ಲಿ ಜೀವನಿಗೆ ಬೋಧವಿಲ್ಲದಿರುವುದನ್ನೂ ಮುಕ್ತನಿಗೆ ಸರ್ವಜ್ಞತ್ವವಿರುವುದನ್ನೂ ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ 'ಇವನು ಈಗ "ನಾನು ಇಂಥವನು" ಎಂದು ತನ್ನನ್ನು ತಿಳಿದಿರುವುದೇ ಇಲ್ಲ, ಈ ಪ್ರಾಣಿಗಳನ್ನು ತಿಳಿದಿರುವುದೇ ಇಲ್ಲ ವಿನಾಶವನ್ನೇ ಹೊಂದಿರುತ್ತಾನೆ ಇಲ್ಲಿ ನಾನು ಯಾವ ಭೋಗ್ಯವನ್ನೂ ನೋಡೆನು'[1] (ಛಾಂ ಉ ೮ ೧೧ ೧) ಎಂಬ ಶ್ರುತಿಯು ಸುಷುಪ್ತಿ ವೇಳೆಯಲ್ಲಿ ನಿಸ್ಸಂಬೋಧತ್ವವನ್ನು ತಿಳಿಸುತ್ತದೆ ಈ ಭಾಗದಲ್ಲಿಯೇ ಮುಕ್ತನ ಸರ್ವಜ್ಞತ್ವವನ್ನೂ ಹೇಳಿದೆ 'ಅವನು ದೈವಚಕ್ಷುಸ್ಸಾದ ಮನಸ್ಸಿನಿಂದ ಬ್ರಹ್ಮಲೋಕದಲ್ಲಿರುವ ಈ ಕಾಮಗಳನ್ನೆಲ್ಲ ನೋಡುತ್ತ ರಮಿಸುತ್ತಾನೆ'[2] (ಛಾಂ ಉ ೮ ೧೨ ೫) ಆದುದರಿಂದ 'ಪರಮಾತ್ಮನಿಂದ ಆಲಿಂಗಿತನಾದ ಪುರುಷನು' ಎಂಬ ವಾಕ್ಯವು ಸುಷುಪ್ತಿಯನ್ನೊ ಅಥವಾ ಮರಣವನ್ನೊ ಸೂಚಿಸುತ್ತದೆ

ದ್ವೈ ೩ —'ಸ್ವರ್ಗಲೋಕದಲ್ಲಿ ಯಾವ ಭಯವೂ ಇಲ್ಲ' (ಕ ಉ ೧ ೧ ೧೨) ಎಂಬ ಶ್ರುತಿಯ ಪ್ರಕಾರ ಮೇಲೆ ಹೇಳಿದ್ದು ಸ್ವರ್ಗಾದಿಲೋಕವನ್ನು ಹೊಂದಿದವನನ್ನು ಸೂಚಿಸುವುದಿಲ್ಲ **ತೀರ್ಣೋ ಹಿ ತದಾ ಸರ್ವಾನ್ ಶೋಕಾನ್** (ಬೃ ಉ ೪ ೩ ೨೨) ಎಂಬ ವಾಕ್ಯವು ಸುಷುಪ್ತಿಯನ್ನೊ ಅಥವಾ ಮೋಕ್ಷವನ್ನೊ ಸೂಚಿಸುತ್ತದೆ[3] ಇದು 'ಅಲ್ಲಿ ತಂದೆಯು ತಂದೆಯಲ್ಲ, ತಾಯಿಯು ತಾಯಿಯಲ್ಲ' (ಬೃ ಉ ೪ ೩ ೨೨) ಎಂಬ ವಾಕ್ಯದಿಂದ ಆವಿಷ್ಕೃತವಾಗಿದೆ

---

1 **ನಾಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮಿ ।**

2 **ಸ ವಾ ಏಷ ದಿವ್ಯೇನ ಚಕ್ಷುಷಾ ಮನಸೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ ।**

3 **ಸುಷುಪ್ತಿ ಮೋಕ್ಷೇ ವಾ ತದುಚ್ಯತೇ (ಮ. ಭಾ.)**

# ೭. ಜಗದ್ವ್ಯಾಪಾರಾಧಿಕರಣ*

(ಸೂ ೧೭–೨೨)

**ಜಗದ್ವ್ಯಾಪಾರವರ್ಜಂ ಪ್ರಕರಣಾದಸಂನಿಹಿತತ್ವಾಚ್ಚ †  || ೧೭ ||**

೧೭ ಜಗದ್ವ್ಯಾಪಾರದ ಹೊರತು (ಮುಕ್ತನಿಗೆ ಉಳಿದ ಐಶ್ವರ್ಯ-ವಿರುತ್ತದೆ), ಏಕೆಂದರೆ (ಅದು ಈಶ್ವರನ) ಪ್ರಕರಣವಾಗಿರುತ್ತದೆ ಮತ್ತು (ಜೀವರು ಜಗದ್ವ್ಯಾಪಾರಕ್ಕೆ) ಸಂನಿಹಿತರಾಗಿಲ್ಲ.

ಯಾರು ಸಗುಣಬ್ರಹ್ಮೋಪಾಸನೆಯಿಂದ ಮನಸ್ಸಿನೊಂದಿಗೆ ಈಶ್ವರ-ಸಾಯುಜ್ಯ-ವನ್ನು ಹೊಂದುತ್ತಾರೆಯೊ ಅವರಿಗೆ ಯಾವ ನಿರ್ಬಂಧವೂ ಇಲ್ಲದ ಐಶ್ವರ್ಯವಾಗುತ್ತದೆಯೊ ಅಥವಾ ನಿರ್ಬಂಧವಿರುವ ಐಶ್ವರ್ಯವಾಗುತ್ತದೆಯೊ ?—ಎಂಬುದು ಸಂಶಯ

**ಪೂರ್ವಪಕ್ಷಿ**—ಇವರಿಗೆ ನಿರಂಕುಶವಾದ ಐಶ್ವರ್ಯವೇ ಇರಬೇಕು, ಏಕೆಂದರೆ ಸ್ವರಾಜ್ಯವನ್ನು ಹೊಂದುತ್ತಾನೆ' (ತೈ ಉ ೧ ೬), 'ಎಲ್ಲ ದೇವತೆಗಳೂ ಇವನಿಗೆ, ಕಾಣಿಕೆಯನ್ನು ತರುತ್ತಾರೆ' (ತೈ. ಉ ೧ ೫), 'ಅವರಿಗೆ ಸರ್ವಲೋಕಗಳಲ್ಲಿ ಸ್ವತಂತ್ರ ಗತಿಯಿರುತ್ತದೆ' (ಛಾಂ ಉ ೮ ೧ ೬) ಎಂದು ಶ್ರುತಿಗಳು ಹೇಳುತ್ತವೆ

**ಸಿದ್ಧಾಂತಿ**—ಜಗತ್ತಿನ ಉತ್ಪತ್ತಿಯೇ ಮೊದಲಾದ ವ್ಯಾಪಾರದ ಹೊರತು ಉಳಿದ ಅಣಿಮಾದಿರೂಪವಾದ ಐಶ್ವರ್ಯವು ಮುಕ್ತರಿಗೆ ಇರುತ್ತದೆ, ಏಕೆಂದರೆ ಪರಮೇಶ್ವರನೇ ಜಗದ್ವ್ಯಾಪಾರಕ್ಕೆ ಅಧಿಕೃತನಾಗಿರುತ್ತಾನೆ, ಅವನ ಪ್ರಕರಣದಲ್ಲಿ ಉತ್ಪತ್ತ್ಯಾದಿಗಳನ್ನು ಉಪದೇಶಿಸಿದೆ ಮತ್ತೆ ನಿತ್ಯ-ಶಬ್ದವು ಅವನ ವಿಷಯದಲ್ಲಿಯೇ ಪ್ರಯೋಗಿಸಲ್ಪಟ್ಟಿದೆ ಆದರೆ ಅವನನ್ನು ಅನ್ವೇಷಣಮಾಡಿ ಅರಿತುಕೊಂಡರೇ ಇತರರಿಗೆ ಅಣಿಮಾದಿ-ಐಶ್ವರ್ಯ ವುಂಟಾಗುವುದೆಂದು ಶ್ರುತಿಯು ಹೇಳುತ್ತದೆ. ಆದುದರಿಂದ ಅವರು ಜಗದ್ವ್ಯಾಪಾರಕ್ಕೆ ದೂರವಾಗಿರುತ್ತಾರೆ ಇವರಿಗೆ ಮನಸ್ಸಿರುವುದರಿಂದಲೇ ಭಿನ್ನಮತವುಳ್ಳವರಾಗಿ ಒಬ್ಬರನ್ನೊಬ್ಬರು ವಿರೋಧಿಸಬಹುದು ಒಬ್ಬನಿಗೆ ಜಗತ್ತನ್ನು ಕಾಪಾಡಬೇಕೆಂಬ ಅಭಿಪ್ರಾಯವಿರುವಾಗ, ಇನ್ನೊಬ್ಬನಿಗೆ ಅದರ ಸಂಹಾರದಲ್ಲಿ ಅಭಿಪ್ರಾಯವಿರಬಹುದು. ಒಬ್ಬನ ಸಂಕಲ್ಪವನ್ನು ಅನುಸರಿಸಿ ಇನ್ನೊಬ್ಬನ ಸಂಕಲ್ಪವಿರಬೇಕು—ಎಂದು ಒಪ್ಪಿಕೊಂಡರೆ ಮಾತ್ರ ಇತರೇತರ ವಿರೋಧವು ಹೋಗುತ್ತದೆ, ಆಗ ಪರಮೇಶ್ವರನನ್ನೇ ಉಳಿದವರೆಲ್ಲರೂ ಅವಲಂಬಿಸಬೇಕು ಎಂಬುದು ಮಾತ್ರ ನಿಲ್ಲುತ್ತದೆ

---

* ಇದು ಶ್ರೀಭಾಷ್ಯದಲ್ಲಿ ಜಗದ್ವ್ಯಾಪಾರವರ್ಜಾಧಿಕರಣ ಎಂದೆನಿಸಿದೆ ಮಧ್ವಭಾಷ್ಯದಲ್ಲಿ ಇಲ್ಲಿಂದ ಸರ್ವಕಾಮಾಧಿಕರಣವು ಪ್ರಾರಂಭವಾಗಿ ೨೦ನೆಯ ಸೂತ್ರದ ವರೆಗೂ ಹೋಗುತ್ತದೆ.

† ಇದು ಮಧ್ವಭಾಷ್ಯದಲ್ಲಿ ಎರಡು ಸೂತ್ರಗಳಾಗಿ ವಿಂಗಡಿಸಲ್ಪಟ್ಟಿದೆ.

ಪೂ.—ಮುಕ್ತನ ಐಶ್ವರ್ಯವು ಜಗತ್ಸೃಷ್ಟ್ಯಾದಿಗಳನ್ನು ಒಳಕೊಂಡಿರುವ ಪರಮೇಶ್ವರನ ಸರ್ವೇಶ್ವರತ್ವವಾಗಿರುತ್ತದೆಯೊ ? ಅಥವಾ ಪರಮಪುರುಷನ ಕೇವಲ ಅನುಭವವಾಗಿರುತ್ತದೆಯೊ ?—ಎಂಬುದು ಸಂಶಯ. ಮುಕ್ತನ ಐಶ್ವರ್ಯವು ಜಗದೀಶ್ವರತ್ವವೆಂಬುದು ಪೂರ್ವಪಕ್ಷಿಯ ಮತ ; ಏಕೆಂದರೆ ಶ್ರುತಿಯು ಪರಮಪುರುಷನೊಂದಿಗೆ ಮುಕ್ತನ ಸಾಮ್ಯವನ್ನು ಹೇಳುತ್ತದೆ: 'ನಿರಂಜನನಾಗಿ ಪರಮಸಾಮ್ಯವನ್ನು ಹೊಂದುವನು' (ಮುಂ. ಉ. ೩. ೧. ೩); ಇದಲ್ಲದೆ ಇವನಿಗೆ ಸತ್ಯಸಂಕಲ್ಪತ್ವವನ್ನೂ ಶ್ರುತಿಯು ಹೇಳುತ್ತದೆ. ಪರಮಸಾಮ್ಯ ಮತ್ತು ಸತ್ಯಸಂಕಲ್ಪತ್ವ—ಇವೆರಡೂ ಸರ್ವೇಶ್ವರತ್ವವಿಲ್ಲದಿದ್ದರೆ ಸಾಧ್ಯವಿಲ್ಲ.

ಸಿದ್ಧಾಂತವು ಹೀಗಿದೆ : ಬ್ರಹ್ಮಾನುಭವವೇ ಮುಕ್ತನ ಐಶ್ವರ್ಯವು ; ಅವನಿಗೆ ಜಗದ್ವ್ಯಾಪಾರಗಳಾದ ಸೃಷ್ಟಿ-ಸ್ಥಿತಿ-ನಿಯಮನ-ಲಯಾದಿಗಳಲ್ಲಿ ಸಂಬಂಧವಿಲ್ಲವು ; ಏಕೆಂದರೆ ಜಗತ್ತಿನ ಸೃಷ್ಟಿ-ಸ್ಥಿತಿ-ನಿಯಮನಾದಿಗಳನ್ನು ಬೋಧಿಸುವ ಪ್ರಕರಣದಲ್ಲಿ ಪರಬ್ರಹ್ಮನನ್ನೇ ಹೇಳಿದೆ: 'ಯಾವುದರಿಂದ ಈ ಪ್ರಾಣಿಗಳು ಹುಟ್ಟುವುವೊ, ಹಾಗೆ ಹುಟ್ಟಿದವುಗಳು ಯಾವುದರಿಂದ ಜೀವಿಸುವುವೊ ಮತ್ತು ಯಾವುದನ್ನು ಪ್ರವೇಶಿಸುವುವೊ ಅದನ್ನು ಉಪಾಸಿಸು, ಅದು ಬ್ರಹ್ಮ'[1] (ತೈ. ಉ. ೩. ೧). ಈ ನಿಖಿಲಜಗನ್ನಿಯಮನವು ಮುಕ್ತನಿಗೆ ಸೇರಿದ್ದರೆ ಶ್ರುತಿಯು ಇದನ್ನು ಪರಬ್ರಹ್ಮಲಕ್ಷಣವನ್ನು ತಿಳಿಸುವಾಗ ಹೇಳುತ್ತಿರಲಿಲ್ಲ ; ಏಕೆಂದರೆ ಇದು ಅಸಾಧಾರಣಲಕ್ಷಣವಾಗಿದೆ. ಹೀಗೆಯೇ ಈ ನಿಖಿಲಜಗನ್ನಿಯಮನವು ಪರಮಪುರುಷನಿಗೇ ಸೇರಿದುದೆಂದು ಅನೇಕ ಶ್ರುತಿಗಳು ಹೇಳುತ್ತವೆ[2] ಇದಲ್ಲದೆ ಶ್ರುತಿಗಳು ನಿಖಿಲಜಗನ್ನಿಯಮನವನ್ನು ಹೇಳುವಾಗ ಪ್ರಕರಣದಲ್ಲಿ ಮುಕ್ತನ ವಿಷಯವು ಬರುವುದಿಲ್ಲ

**ದ್ವೈತಿ—ಜಗದ್ವ್ಯಾಪಾರವರ್ಜಮ್ ॥ ೪. ೪. ೧೭ ॥**

೧೭. ಜಗದ್ವ್ಯಾಪಾರವನ್ನು ಬಿಟ್ಟು ಮುಕ್ತನು ಸಮಸ್ತಕಾಮಗಳನ್ನೂ ಅನುಭವಿಸುತ್ತಾನೆ.

'ಸರ್ವಕಾಮಗಳನ್ನು ಹೊಂದಿ ಮುಕ್ತನು ಅಮೃತನಾಗುತ್ತಾನೆ' ಎಂದು ಶ್ರುತಿಯು ಹೇಳುತ್ತದೆ; ಇಲ್ಲಿ ಸೃಷ್ಟ್ಯಾದಿಗಳನ್ನು ಬಿಟ್ಟು ಉಳಿದ ಕಾಮಗಳನ್ನು ಹೊಂದುತ್ತಾನೆ ಎಂದು ತಿಳಿದುಕೊಳ್ಳಬೇಕು.[3]

---

[1] ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ ।

[2] ಛಾ. ಉ. ೬. ೨; ಬೃ. ಉ. ೧. ೪. ೧೧ ; ಐ. ಆ. ೨. ೪ ೧೧; ಬೃ. ಉ. ೩. ೭. ೩.

[3] ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವದಿತ್ಯುಚ್ಯತೇ । ತತ್ರ ಸೃಷ್ಟ್ಯಾದಿಭ್ಯೋಽನ್ಯಾನಾಪ್ನೋತಿ (ಮ. ಭಾ.).

ಪ್ರಕರಣಾದಸಂನಿಹಿತತ್ವಾಚ್ಚ ॥ ೪ ೪ ೧೮ ॥

೧೮ ಏಕೆಂದರೆ ಇದು ಜೀವ-ಪ್ರಕರಣವಾಗಿದೆ ಮತ್ತು ಅವರಿಗೆ ಜಗಜ್ಜನನಾದಿಸಾಮರ್ಥ್ಯದಲ್ಲಿ ಸಂನಿಹಿತತ್ವವಿಲ್ಲ [1]

**ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ ॥ ೧೮ ॥**

೧೮ ಪ್ರತ್ಯಕ್ಷೋಪದೇಶವಿರುವುದರಿಂದ (ನಿರಂಕುಶವಾದ ಐಶ್ವರ್ಯವಿರಬೇಕು) ಎಂದರೆ, ಅದು ಸರಿಯಲ್ಲ, ಏಕಂದರೆ ಅಧಿಕಾರಿಕನಾಗಿ ಮಂಡಲದಲ್ಲಿರುವವನನ್ನು ಹೇಳಿದೆ

'ಅವನು ಸ್ವಾರಾಜ್ಯವನ್ನು ಹೊಂದುತ್ತಾನೆ' (ತೈ ಉ ೧ ೬) ಎಂಬ ಪ್ರತ್ಯಕ್ಷೋಪದೇಶವಿರುವುದರಿಂದ ಜ್ಞಾನಿಗಳಿಗೆ ನಿರಂಕುಶವಾದ ಐಶ್ವರ್ಯವಿರುವುದು ನ್ಯಾಯವು—ಎಂಬ ಪೂರ್ವಪಕ್ಷಕ್ಕೆ ಪರಿಹಾರವು ಹೀಗಿದೆ ಆಧಿಕಾರಿಕನಾಗಿ[2] ಸವಿತೃಮಂಡಲಾದಿ-ವಿಶೇಷಸ್ಥಾನಗಳಲ್ಲಿರುವ ಪರಮೇಶ್ವರನ ಅಧೀನದಲ್ಲಿಯೇ ಮುಕ್ತನಿಗೆ ಸ್ವಾರಾಜ್ಯಪ್ರಾಪ್ತಿಯನ್ನು ಹೇಳಿದೆ, ಏಕೆಂದರೆ ಶ್ರುತಿಯು ಮುಂದೆ 'ಮನಸಸ್ಪತಿಯನ್ನು ಹೊಂದುತ್ತಾನೆ' (ತೈ ಉ ೧ ೬) ಎಂದು ಹೇಳುತ್ತದೆ, ಸರ್ವಮನಸ್ಸುಗಳಿಗೆ ಪತಿಯೆಂದು ಪ್ರಸಿದ್ಧನಾದ ಈಶ್ವರನನ್ನೇ ಹೊಂದುತ್ತಾನೆ ಎಂದರ್ಥ ಅದಕ್ಕನುಸಾರವಾಗಿಯೇ ಮುಂದೆ ವಾಕ್ಪತಿಯೂ ಚಕ್ಷುಷ್ಪತಿಯೂ ಶ್ರೋತ್ರಪತಿಯೂ ವಿಜ್ಞಾನಪತಿಯೂ ಆಗುತ್ತಾನೆಂದು ಶ್ರುತಿಯು (ತೈ. ಉ ೧ ೬) ಹೇಳುತ್ತದೆ

ವಿ —'ಅವನು ಸ್ವರಾಟ್ ಆಗುತ್ತಾನೆ, ಅವನಿಗೆ ಸರ್ವಲೋಕಗಳಲ್ಲಿಯೂ ಸ್ವಚ್ಛಂದ ಗತಿಯಿರುತ್ತದೆ' (ಛಾಂ ಉ ೮ ೨೫ ೨) ಇದೇ ಮೊದಲಾದ ಶ್ರುತಿಗಳು ಮುಕ್ತನಿಗೆ ಜಗದ್ವ್ಯಾಪಾರವನ್ನು ಹೇಳುತ್ತವೆ—ಎಂದು ಆಕ್ಷೇಪಿಸಿದರೆ ಪರಿಹಾರವು ಹೀಗಿದೆ ವಿಶೇಷವಾದ ಅಧಿಕಾರಗಳಲ್ಲಿ ನಿಯುಕ್ತರಾದ ಹಿರಣ್ಯಗರ್ಭನೇ ಮೊದಲಾದವರ ಮಂಡಲಗಳಲ್ಲಿ ಇರುವ ಭೋಗಗಳನ್ನು ಕರ್ಮವಶನಾಗದ ಮುಕ್ತನು ಅನುಭವಿಸುತ್ತಾನೆ—ಎಂಬುದು ಮೇಲೆ ಹೇಳಿದ ಶ್ರುತಿಯ ತಾತ್ಪರ್ಯವಾಗಿದೆ ಕರ್ಮದಿಂದ ಪ್ರತಿಹತವಾಗದ ಜ್ಞಾನವುಳ್ಳ ಮುಕ್ತನು ಬ್ರಹ್ಮವಿಭೂತವಾದ ಆ ಲೋಕಗಳಲ್ಲಿ ಭೋಗಗಳನ್ನು ಯಥೇಷ್ಟವಾಗಿ ಅನುಭವಿಸುತ್ತಾನೆ ಮತ್ತು ತೃಪ್ತನಾಗುತ್ತಾನೆ

**ದ್ವೈ.—ತಾ ಯೋ ವೇದ, ಸ ವೇದ ಬ್ರಹ್ಮ, ಸರ್ವೇಽಸ್ಮೈ ದೇವಾ ಬಲಿಮಾವಹಂತಿ** (ತೈ ಉ ೧ ೫) ಎಂದು ಪ್ರತ್ಯಕ್ಷವಾಗಿ ಮುಕ್ತನಿಗೆ ಪೂಜ್ಯತ್ವವನ್ನು ಹೇಳಿರುವುದರಿಂದ ಮುಕ್ತರಿಗೆ ಜಗದೈಶ್ವರ್ಯವಿದೆ—ಎಂದು ಹೇಳಕೂಡದು, ಏಕೆಂದರೆ

---

[1] ಜೀವಪ್ರಕರಣತ್ವಾಜ್ಜೀವಾನಾಂ ತಾದೃಕ್ಸಾಮರ್ಥ್ಯವಿದೂರತ್ವಾಚ್ಚ (ಮ ಭಾ )

[2] ಆದಿತ್ಯಾದಿಗಳನ್ನು ಅಧಿಕಾರದಲ್ಲಿ ನಿಯೋಜಿಸುವವನು ಅಧಿಕಾರಿಕನು

ಆ ಶ್ರುತಿಯಲ್ಲಿ ತನಗೆ ಯೋಗ್ಯವಾದ ಪದವಿಯನ್ನು ಹೊಂದಿರುವ ದೇವತೆಗಳ ಮಂಡ-ಲಾಧಿಪತಿಯಾದ ಚತುರ್ಮುಖಬ್ರಹ್ಮನನ್ನೇ ಹೇಳಿದೆ.[1] ಆದುದರಿಂದ ಮುಕ್ತರಿಗೆಲ್ಲ ಜಗದ್ವಿಷಯಕವಾದ ಐಶ್ವರ್ಯವಿಲ್ಲ.

**ವಿಕಾರಾವರ್ತಿ ಚ ತಥಾ ಹಿ ಸ್ಥಿತಿಮಾಹ* ॥ ೧೯ ॥**

೧೯. ಕಾರ್ಯದಲ್ಲಿಲ್ಲದ (ಪರಮೇಶ್ವರನ ರೂಪವೂ) ಇದೆ; ಏಕೆಂದರೆ ಹಾಗೆಯೇ (ಶ್ರುತಿಯು) ಅವನ ಸ್ಥಿತಿಯನ್ನು ಹೇಳುತ್ತದೆ.

ಪರಮೇಶ್ವರನ ರೂಪವು ಕಾರ್ಯದಲ್ಲಿ ಮಾತ್ರ ಗೋಚರವಾಗಿ ಸವಿತೃ—ಮಂಡಲಾದಿಗಳಲ್ಲಿ ಅಧಿಷ್ಠಾತೃವಾಗಿರುವುದು ಮಾತ್ರವೇ ಅಲ್ಲ; ಕಾರ್ಯದಲ್ಲಿಲ್ಲದ ನಿತ್ಯಮುಕ್ತವಾದ ರೂಪವೂ ಇದೆ; ಆದುದರಿಂದಲೇ ಪರಮೇಶ್ವರನಿಗೆ ದ್ವಿರೂಪದಲ್ಲಿ ಸ್ಥಿತಿಯಿರುವುದೆಂದು ಶ್ರುತಿಯು ಹೇಳುತ್ತದೆ. 'ಇದರ ಮಹಿಮೆಯು ಅಷ್ಟು ಆದರೆ ಪುರುಷನು ಅದಕ್ಕಿಂತಲೂ ದೊಡ್ಡವನು. ಈ ಜಗತ್ತೆಲ್ಲ ಇವನ ಒಂದು ಪಾದವಾಗಿದೆ. ಇವನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆ'[2] (ಛಾ ೩. ೧೨ ೬) ವಿಕಾರರೂಪವನ್ನು ಅವಲಂಬಿಸಿರುವ ಉಪಾಸಕರು ಆ ನಿರ್ವಿಕಾರರೂಪವನ್ನು ಪಡೆಯುತ್ತಾರೆ ಎಂದು ಹೇಳುವುದು ಶಕ್ಯವಲ್ಲ; ಏಕೆಂದರೆ ಅವರು ನಿರ್ವಿಕಾರರೂಪದಲ್ಲಿ ಮನಸ್ಸನ್ನು ಇಟ್ಟಿರುವುದಿಲ್ಲ. ಆದುದರಿಂದ ಉಪಾಸಕರು ಹೇಗೆ ದ್ವಿರೂಪವುಳ್ಳ ಪರಮೇಶ್ವರನ ನಿರ್ಗುಣರೂಪವನ್ನು ಹೊಂದದೆ ಸಗುಣ-ರೂಪದಲ್ಲಿಯೇ ನಿಲ್ಲುವರೊ ಹಾಗೆಯೇ ಸಗುಣರೂಪದಲ್ಲಿಯೂ ನಿರಂಕುಶವಾದ ಐಶ್ವರ್ಯವನ್ನು ಪಡೆಯದೆ ಸಾಂಕುಶವಾದ ಐಶ್ವರ್ಯದಲ್ಲಿ ನಿಲ್ಲುತ್ತಾರೆ ಎಂದು ತಿಳಿದುಕೊಳ್ಳಬೇಕು.[3]

ವಿ.—'ವಿಕಾರವೇ ಇಲ್ಲದ (ಪರಮಪುರುಷನು ಮುಕ್ತನಿಗೆ ಭೋಗ್ಯನು); ಹಾಗೆಯೇ ಶ್ರುತಿಯು ಅವನ ಸ್ಥಿತಿಯನ್ನು ತಿಳಿಸುತ್ತದೆ' ಎಂಬುದು ಸೂತ್ರಾರ್ಥ.

ಸಂಸಾರಿಯಂತೆ ಮುಕ್ತನೂ ವಿಕಾರಾಂತವರ್ತಿಯಾದ ಭೋಗಗಳನ್ನು ಅನುಭವಿಸುವುದಾದರೆ ಬದ್ಧನಂತೆ ಮುಕ್ತನಿಗೂ ಪರಿಮಿತಭೋಗಗಳಾಗುತ್ತವೆ—ಎಂಬ ಆಕ್ಷೇಪಕ್ಕೆ ಪರಿಹಾರವು ಹೀಗಿದೆ: ಸಮಸ್ತವಿಕಾರರಹಿತನೂ ನಿರತಿಶಯಾನಂದರೂಪನು ಆದ ಪರ-

---

1 ಆಧಿಕಾರಿಕಮಂಡಲಾಧಿಪತಿರ್ಬ್ರಹ್ಮಾ ಹಿ ತತ್ರೋಚ್ಯತೇ (ಮ. ಭಾ).

* ಮಧ್ವಭಾಷ್ಯದಲ್ಲಿ ಸೂತ್ರವು ವಿಕಾರಾವರ್ತಿ ಚ ತಥಾ ಹಿ ದರ್ಶಯತಿ ಎಂದಾಗಿದೆ. ಸ್ಥಿತಿಮಾಹ ಎಂಬ ಉತ್ತರಭಾಗವು ಮುಂದಿನ ಸೂತ್ರಕ್ಕೆ ಸೇರಿಸಲ್ಪಟ್ಟಿದೆ.

2 ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ। ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

3 ಅತಶ್ಚ ಯಥೈವ ದ್ವಿರೂಪೇ ಪರಮೇಶ್ವರೇ ನಿರ್ಗುಣಂ ರೂಪಮನವಾಪ್ಯ ಸಗುಣ ಏವಾವತಿಷ್ಠಂತೇ, ಏವಂ ಸಗುಣೇಽಪಿ ನಿರವಗ್ರಹಮೈಶ್ವರ್ಯಮನವಾಪ್ಯ ಸಾವಗ್ರಹ ಏವಾವತಿಷ್ಠಂತ ಇತಿ ದ್ರಷ್ಟವ್ಯಮ್ (ಸೂ. ಭಾ.).

ಬ್ರಹ್ಮನು ತನ್ನ ವಿಭೂತಿಯೊಡನೆ ಮುಕ್ತನಿಗೆ ಭೋಗ್ಯನಾಗಿರುತ್ತಾನೆ. ಪರಬ್ರಹ್ಮನ ವಿಭೂತಿಯಲ್ಲಿ ಅಂತರ್ಗತವಾಗಿರುವ ವಿಕಾರವುಳ್ಳ ಲೋಕಗಳೂ ಮುಕ್ತನಿಗೆ ಭೋಗ್ಯವಾಗಿರುತ್ತವೆ; ಏಕೆಂದರೆ ಮುಕ್ತನು ನಿರ್ವಿಕಾರಿಯಾದ ಪರಬ್ರಹ್ಮನನ್ನು ಅನುಭವಿಸುವನೆಂದು ಶ್ರುತಿಯು ಹೇಳುತ್ತದೆ: ಯಾವಾಗ ಅವನು ಈ ಅದೃಶ್ಯನೂ ಅಶರೀರನೂ ಅನಿರ್ವಾಚ್ಯನೂ ಆಧಾರರಹಿತನೂ ಆದ ಪರಬ್ರಹ್ಮನಲ್ಲಿ ಅಭಯಸಾಧನಭೂತವಾದ ಧ್ಯಾನನಿಷ್ಠೆಯನ್ನು ಹೊಂದುವನೊ ಆಗ ಅವನು ಅಭಯವನ್ನು ಹೊಂದುವನು'[1] (ತೈ ಉ. ೨. ೭) ಜಗತ್ತು ಪರಬ್ರಹ್ಮನ ವಿಭೂತಿಯಾಗಿ ಅವನಲ್ಲಿಯೇ ಇರುತ್ತದೆಂದು ಶ್ರುತಿಯು ಹೇಳುತ್ತದೆ: 'ಅವನಲ್ಲಿ ಲೋಕಗಳೆಲ್ಲ ಆಶ್ರಯವನ್ನು ಹೊಂದಿವೆ. ಅವನನ್ನು ಯಾವನೂ ಮೀರಲಾರನು' (ಕ. ಉ. ೨. ೫. ೮). ಆದುದರಿಂದ ಬ್ರಹ್ಮಾನುಭವವುಳ್ಳ ಮುಕ್ತನು ವಿಕಾರಾಂತ-ರ್ವರ್ತಿಗಳಾದ ಮತ್ತು ಅಧಿಕಾರಕ ಮಂಡಲಗಳಲ್ಲಿರುವ ಭೋಗಗಳನ್ನು ಅನುಭವಿಸುತ್ತಾನೆ —ಎಂಬುದು ಕಾಮಚಾರಶ್ರುತಿಯ ತಾತ್ಪರ್ಯವು. ಆದರೆ ಮುಕ್ತನಿಗೆ ಜಗದ್-ವ್ಯಾಪಾರವಿಲ್ಲ.

ದ್ವೈ.—'ಸಂಸಾರವನ್ನು ಹೊಂದಿಸಿಕೊಡತಕ್ಕ ವ್ಯಾಪಾರವು ಮುಕ್ತರಿಗಿಲ್ಲ;[2] **ಇಮಂ ಮಾನವಮಾವರ್ತಂ ನಾವರ್ತಂತೇ** (ಛಾ. ಉ. ೪. ೧೫. ೬) ಎಂಬ ಶ್ರುತಿಯು ಹಾಗೆ ಹೇಳುತ್ತದೆ ಎಂಬುದು ಸೂತ್ರಾರ್ಥ.

**ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ*** || ೨೦ ||

೨೦. ಹೀಗೆ ಪ್ರತ್ಯಕ್ಷಾನುಮಾನಗಳು ತಿಳಿಸುತ್ತವೆ.

ಪರಂಜ್ಯೋತಿಯಾದ ಪರಮಾತ್ಮನು ವಿಕಾರ ವಸ್ತುಗಳಲ್ಲಿಲ್ಲವೆಂದು ಶ್ರುತಿ, ಸ್ಮೃತಿಗಳು ತಿಳಿಸುತ್ತವೆ: 'ಅಲ್ಲಿ ಸೂರ್ಯನಾಗಲಿ ಚಂದ್ರನಾಗಲಿ ನಕ್ಷತ್ರಗಳಾಗಲಿ ಪ್ರಕಾಶಿಸುವುದಿಲ್ಲ, ಈ ಮಿಂಚುಗಳೂ ಪ್ರಕಾಶಿಸುವುದಿಲ್ಲ; ಈ ಅಗ್ನಿಯು ಪ್ರಕಾಶಿಸುವುದೆಲ್ಲಿ?'[3] (ಮುಂ. ಉ. ೨. ೨. ೧೧); 'ಅದನ್ನು ಸೂರ್ಯನಾಗಲಿ ಚಂದ್ರನಾಗಲಿ ಅಗ್ನಿಯಾಗಲಿ ಬೆಳಗುವುದಿಲ್ಲ'[4] (ಗೀತಾ ೧೫. ೬) ಪರಂಜ್ಯೋತಿಯು ವಿಕಾರ ವಸ್ತುಗಳಲ್ಲಿಲ್ಲವೆಂಬುದು ಪ್ರಸಿದ್ಧವಾಗಿದೆ—ಎಂಬುದು ಸೂತ್ರದ ಅಭಿಪ್ರಾಯವು.

---

[1] ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ ಅಥ ಸೋಽಭಯಂ ಗತೋ ಭವತಿ ।

[2] ವಿಕಾರಾವರ್ತಿ ವ್ಯಾಪಾರೋ ಮುಕ್ತಾನಾಂ ನ ವಿದ್ಯತೇ ।

* ಈ ಸೂತ್ರ ಮತ್ತು ಮುಂದಿನದು ಮಧ್ವಭಾಷ್ಯದಲ್ಲಿ ಏಕರೂಪಸ್ಥಿತ್ಯಧಿಕರಣ ಎಂಬ ಹೊಸ ಅಧಿಕರಣದಲ್ಲಿ ಅಂತರ್ಗತವಾಗಿದೆ.

[3] ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।

[4] ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।

ವಿ.—ನಿಖಿಲಜಗನ್ನಿಯಮನರೂಪವಾದ ವ್ಯಾಪಾರವು ಪರಮಪುರುಷನ ಅಸಾಧಾರಣ ಗುಣವೆಂಬುದನ್ನು ಶ್ರುತಿ-ಸ್ಮೃತಿಗಳು ತೋರಿಸುತ್ತವೆ: 'ಇವನ ಭಯದಿಂದ ವಾಯುವು ಬೀಸುವುದು'[1] (ತೈ. ಉ. ೨. ೮); 'ಈ ಅಕ್ಷರದ ಶಾಸನದಿಂದಲೇ, ಗಾರ್ಗಿ, ಸೂರ್ಯಚಂದ್ರರು ತಮ್ಮ ಸ್ಥಾನಗಳಲ್ಲಿ ನಿಲ್ಲಿಸಲ್ಪಟ್ಟಿರುತ್ತಾರೆ'[2] (ಬೃ. ಉ. ೩. ೮. ೯); 'ನಾನು ಈ ಜಗತ್ತೆಲ್ಲವನ್ನೂ ಒಂದೇ ಅಂಶದಿಂದ ಧರಿಸಿಕೊಂಡಿದ್ದೇನೆ'[3] (ಗೀತಾ ೧೦ ೪೨) ಇತ್ಯಾದಿ. ಮುಕ್ತಿಯ ಅವಸ್ಥೆಯಲ್ಲಿ ವ್ಯಕ್ತವಾಗುವ ಅಪಹತ-ಪಾಪ್ಮತ್ವಾದಿಗುಣಗಳು ಜೀವಾತ್ಮನ ಸ್ವರೂಪಕ್ಕೆ ಸೇರಿದ್ದರೂ ಜೀವಾತ್ಮನ ಇಂಥ ಸ್ವಭಾವವು ಪರಮಪುರುಷನನ್ನು ಅವಲಂಬಿಸಿದೆ. ಆದುದರಿಂದ ಮುಕ್ತನಿಗೂ ಪರಮಪುರುಷನಿಗೂ ಸತ್ಯಸಂಕಲ್ಪತ್ವಾದಿಗಳು ಸಾಮಾನ್ಯವಾಗಿದ್ದರೂ ಜಗದ್ವ್ಯಾಪಾರವು ಮುಕ್ತನಿಗೆ ಸೇರಿದುದಲ್ಲ.

**ದ್ವೈತ....ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ॥ ೪. ೪. ೨೧ ॥**

೨೧. ಶ್ರುತಿಯು ಮುಕ್ತರಿಗೆ ಏಕಪ್ರಕಾರದಿಂದ ಸ್ಥಿತಿಯನ್ನು ಹೇಳುತ್ತದೆ;[4] ಮಹಾನುಭಾವರ ಪ್ರತ್ಯಕ್ಷವೂ ಅನುಮಾನವೂ ಇದನ್ನೇ ತೋರಿಸಿಕೊಡುತ್ತವೆ.

**ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ** ಎಂಬ ಜಾಬಾಲ-ಶ್ರುತಿಯು ಮುಕ್ತರಿಗೆ ಏಕಪ್ರಕಾರದಿಂದ ಸ್ಥಿತಿಯನ್ನು ಹೇಳುತ್ತದೆ. ಮುಕ್ತ ವೃದ್ಧಿಹ್ರಾಸಾದಿಗಳಿಗೆ ಕಾರಣವಿಲ್ಲದಿರುವುದೇ ಅನುಮಾನ.

## ಭೋಗಮಾತ್ರಸಾಮ್ಯಲಿಂಗಾಚ್ಚ ॥ ೨೧ ॥

೨೧. ಭೋಗಮಾತ್ರವು ಸಮಾನವೆಂಬ ಲಿಂಗವಿರುವುದರಿಂದಲೂ.

ಕಾರ್ಯಬ್ರಹ್ಮವನ್ನು ಉಪಾಸಿಸುವವರಿಗೆ ನಿರಂಕುಶವಾದ ಐಶ್ವರ್ಯವಾಗುವುದಿಲ್ಲ; ಏಕೆಂದರೆ ಅನಾದಿಸಿದ್ಧವಾದ ಈಶ್ವರನಿಗೂ ಮತ್ತು ಇವರಿಗೂ ಭೋಗವೊಂದೇ ಸಮಾನವೆಂದು ಶ್ರುತಿಯು ಹೇಳುತ್ತದೆ: 'ಇವನು ಅವನನ್ನು ಕುರಿತು ಹೇಳುತ್ತಾನೆ—"ನೀರನ್ನು ನಾನು ಭೋಗಿಸುತ್ತೇನೆ; ಇದು (ನಿನಗೆ ಭೋಗ್ಯವಾದ) ಲೋಕ'[5] (ಕೌ. ಉ. ೧. ೭); 'ಅದರಿಂದ ಈ ದೇವತೆಯೊಂದಿಗೆ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ'[6] (ಬೃ. ಉ. ೧. ೫. ೨೩) ಇತ್ಯಾದಿ.

---

1 ಭೀಷಾಽಸ್ಮಾದ್ವಾತಃ ಪವತೇ ।
2 ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ।
3 ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ।
4 ಏಕಪ್ರಕಾರೇಣೈವ ಸರ್ವದಾ ಸ್ಥಿತಿಃ (ಮ. ಭಾ.).
5 ತಮಾಹಾಪೋ ವೈ ಖಲು ಮೀಯಂತೇ ಲೋಕೋಽಸೌ ।
6 ತೇನೋ ಏತಸ್ಯೈ ದೇವತಾಯೈ ಸಾಯುಜ್ಯಂ ಸಲೋಕತಾಂ ಜಯತಿ ।

ವಿ.—ಮುಕ್ತನಿಗೆ ಪರಬ್ರಹ್ಮನೊಂದಿಗೆ ಬ್ರಹ್ಮಸ್ವರೂಪಾನುಭವರೂಪವಾದ ಭೋಗವು ಮಾತ್ರ ಸಮಾನವಾಗಿರುವುದೆಂಬುದು ಅವನಿಗೆ ಜಗದ್ವ್ಯಾಪಾರದಲ್ಲಿ ಅಧಿಕಾರವಿಲ್ಲವೆಂಬುದನ್ನು ತಿಳಿಸುತ್ತದೆ 'ಅವನು ಸರ್ವಜ್ಞನಾದ ಬ್ರಹ್ಮನೊಡನೆ ಅವನ ಕಲ್ಯಾಣಗುಣಗಳನ್ನು ಭೋಗ್ಯತ್ವೇನ ಹೊಂದುವನು'[1] (ತೈ ಉ ೨ ೧), ಆದುದರಿಂದ ನಿಖಿಲಜಗನ್ನಿಯಮನವು ಪರಮಪುರುಷನಿಗೆ ಅಸಾಧಾರಣಧರ್ಮವಾಗಿರುವುದರಿಂದ ಮುಕ್ತನ ಐಶ್ವರ್ಯದಲ್ಲಿ ಸೇರಿಲ್ಲವೆಂಬುದನ್ನು ಶ್ರುತಿಯಿಂದ ಅರಿತುಕೊಳ್ಳಬೇಕು

ದ್ವೈ.—'ಭೋಗವು ಏಕಪ್ರಕಾರವಾಗಿರುವುದೆಂಬ ಲಿಂಗವಿರುವುದರಿಂದ (ಮುಕ್ತನ ಭೋಗದಲ್ಲಿ ವೃದ್ಧಿ-ಹ್ರಾಸಗಳಿಗೆ ಕಾರಣವಿರುವುದಿಲ್ಲ)' ಎಂಬುದು ಸೂತ್ರಾರ್ಥ

**ಏತಮಾನಂದಮಯಮಾತ್ಮಾನಮನುಪ್ರವಿಶ್ಯ ನ ಜಾಯತೇ ನ ಮ್ರಿಯತೇ** ಎಂಬ ಶ್ರುತಿಯಲ್ಲಿ ಮುಕ್ತನಿಗೆ ವೃದ್ಧ್ಯಾದಿಗಳು ಇಲ್ಲವೆಂದು ಹೇಳುತ್ತದೆ

**ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್*** || ೨೨ ||

೨೨ (ಅವರು) ಹಿಂದಿರುಗುವುದಿಲ್ಲ, ಏಕೆಂದರೆ ಹಾಗೆ ಶ್ರುತಿಯು ಹೇಳುತ್ತದೆ ಹಿಂದಿರುಗುವುದಿಲ್ಲ, ಏಕೆಂದರೆ ಹಾಗೆ ಶ್ರುತಿಯು ಹೇಳುತ್ತದೆ

**ಆಕ್ಷೇಪಣೆ**—ಮುಕ್ತರ ಐಶ್ವರ್ಯವು ನಿರತಿಶಯವಾಗದಿರುವುದರಿಂದ ಅದಕ್ಕೆ ಕೊನೆಯಿರುತ್ತದೆಯಲ್ಲವೆ! ಆದುದರಿಂದ ಅವರು ಸಂಸಾರಕ್ಕೆ ಹಿಂದಿರುಗುತ್ತಾರೆ

**ಪರಿಹಾರ**—ಶ್ರುತಿಯ ಪ್ರಕಾರ ಅವರು ಹಿಂದಿರುಗುವುದಿಲ್ಲ—ಎಂದು ಭಗವಾನ್ ಬಾದರಾಯಣರು ಹೇಳುತ್ತಾರೆ ಯಾರು ನಾಡೀರಶ್ಮಿಗಳಿಂದ ಸಮನ್ವಿತವಾದ ಮತ್ತು ಅರ್ಚಿರಾದಿ-ಪರ್ವಗಳುಳ್ಳ ಬ್ರಹ್ಮಲೋಕಕ್ಕೆ ಹೋಗುವರೊ ಅವರು—ಚಂದ್ರಲೋಕದಿಂದ ಹಿಂದಿರುಗುವಂತೆ—ಸಂಸಾರಕ್ಕೆ ಹಿಂದಿರುಗುವುದಿಲ್ಲ ಬ್ರಹ್ಮಲೋಕದ ವಿವರ ಭೂಮಿ-ಅಂತರಿಕ್ಷಗಳಿಂದಾಚೆಗೆ ಇರುವ ದ್ಯುಲೋಕದಲ್ಲಿ ಅರ ಮತ್ತು ಣ್ಯ ಎಂಬ ಸಮುದ್ರಗಳೂ, ಐರಂಮದೀಯವೆಂಬ ಸರಸ್ಸೂ, ಸೋಮವನ್ನು ಸುರಿಸುತ್ತಿರುವ ಅಶ್ವತ್ಥವೂ, ಅಪರಾಜಿತವೆಂಬ ಬ್ರಹ್ಮಪುರವೂ ಇವೆ, ಆ ಪುರದಲ್ಲಿ ಪ್ರಭುನಿರ್ಮಿತವಾದ ಹಿರಣ್ಮಯವಾದ ಮಂಟಪವಿದೆ (ಛಾಂ ಉ ೮. ೫ ೩), ಇದನ್ನೇ ಮಂತ್ರಗಳು ಮತ್ತು ಅರ್ಥವಾದಗಳು ವಿವರಿಸಿವೆ ಅವರ ಅನಾವೃತ್ತಿಯ ವಿಷಯದಲ್ಲಿ ಶ್ರುತಿಗಳು ಹೀಗೆ ಹೇಳುತ್ತವೆ ಅದರ ಮೂಲಕ ಮೇಲಕ್ಕೆ ಹೋಗುವವನು ಅಮೃತತ್ವವನ್ನು ಪಡೆಯುತ್ತಾನೆ'[2] (ಛಾಂ ಉ.

---

[1] ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ ।

* ಈ ಸೂತ್ರವು ಮಧ್ವಭಾಷ್ಯದಲ್ಲಿ ಅನಾವೃತ್ತ್ಯಧಿಕರಣ ಎಂಬ ಬೇರೆ ಅಧಿಕರಣದಲ್ಲಿ ಅಂತರ್ಗತವಾಗಿದೆ

[2] ತಯೋರ್ಧ್ವಮಾಯನ್ನಮೃತತ್ವಮೇತಿ ।

೮ ೬ ೬), 'ಅವರು ಸಂಸಾರಕ್ಕೆ ಹಿಂದಿರುಗುವುದಿಲ್ಲ'[1] (ಬೃ ಉ ೬. ೨ ೧೫); 'ಇದರಿಂದ ಹೋಗಿ ಬ್ರಹ್ಮವನ್ನು ಹೊಂದುವವರು ಈ ಸಂಸಾರಚಕ್ರಕ್ಕೆ ಹಿಂದಿರುಗುವುದಿಲ್ಲ'[2] (ಛಾಂ ಉ ೪ ೧೫ ೫), 'ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ, ಹಿಂದಿರುಗುವುದಿಲ್ಲ'[3] (ಛಾಂ ಉ ೮ ೧೫ ೧) ಮುಕ್ತರ ಐಶ್ವರ್ಯವು ಕೊನೆಯುಳ್ಳದ್ದಾದರೂ ಅವರು ಸಂಸಾರಕ್ಕೆ ಹಿಂದಿರುಗುವುದಿಲ್ಲವೆಂಬುದನ್ನು ೪ ೩ ೧೦ರಲ್ಲಿ ತೋರಿಸಿಕೊಟ್ಟಿದೆ

ಸಮ್ಯಗ್ದರ್ಶನದಿಂದ ತಮಸ್ಸನ್ನು ಕಳೆದುಕೊಂಡು ನಿತ್ಯಸಿದ್ಧ-ನಿರ್ವಾಣವೇ ಪರಾಯಣವಾಗಿರುವ ಜ್ಞಾನಿಗಳಿಗೆ ಅನಾವೃತ್ತಿಯು ಸಿದ್ಧವಾಗಿರುತ್ತದೆ, ಏಕೆಂದರೆ ಆ ನಿರ್ವಾಣವನ್ನು ಆಶ್ರಯಿಸಿಕೊಂಡೇ ಸಗುಣಬ್ರಹ್ಮನಲ್ಲಿ ಶರಣುಹೊಂದಿದವರಿಗೂ ಅನಾವೃತ್ತಿಯು ಸಿದ್ಧವಾಗುತ್ತದೆ[4] **ಅನಾವೃತ್ತಿಃ ಶಬ್ದಾತ್, ಅನಾವೃತ್ತಿಃ ಶಬ್ದಾತ್** ಎಂದು ಸೂತ್ರವನ್ನು ಎರಡು ಸಲ ಹೇಳಿರುವುದು ಈ ಶಾಸ್ತ್ರದ ಪರಿಸಮಾಪ್ತಿಯನ್ನು ತಿಳಿಸುತ್ತದೆ

ವಿ .ನಿಖಿಲಹೇಯ-ಪ್ರತ್ಯನೀಕನೂ ಕಲ್ಯಾಣಗುಣಾಕರನೂ ಜಗಜ್ಜನ್ಮಾದಿ-ಕಾರಣನೂ ಸಮಸ್ತವಸ್ತು-ವಿಲಕ್ಷಣನೂ ಸರ್ವಜ್ಞನೂ ಸತ್ಯಸಂಕಲ್ಪನೂ ಆಶ್ರಿತ-ವಾತ್ಸಲ್ಯೈಕಜಲಧಿಯೂ ಪರಮಕಾರುಣಿಕನೂ ನಿಃಸಮಾಭ್ಯಧಿಕನೂ ಪರಬ್ರಹ್ಮನೆಂಬ ಹೆಸರುಳ್ಳವನೂ ಆದ ಪರಮಪುರುಷನು ಇರುವನೆಂಬುದು ಶಾಸ್ತ್ರದಿಂದ ತಿಳಿದುಬರುತ್ತದೆ ಹೀಗೆಯೇ ವರ್ಣಾಶ್ರಮಧರ್ಮಗಳಿಂದ ಅನುಗೃಹೀತವಾದ ನಿತ್ಯೋಪಾಸನೆಯಿಂದ ಪ್ರೀತನಾದ ಪರಮೇಶ್ವರನು ಅನಾದಿಕಾಲಪ್ರವೃತ್ತವಾದ ಅನಂತದುಸ್ತರವಾದ ಕರ್ಮಸಂಚಯರೂಪದಲ್ಲಿರುವ ಅವಿದ್ಯೆಯಿಂದ ಈ ಉಪಾಸಕರನ್ನು ಬಿಡಿಸಿ ಸ್ವಯಾಥಾತ್ಮ್ಯಾನುಭವರೂಪದಲ್ಲಿರುವ ಅನವಧಿಕಾತಿಶಯಾನಂದವನ್ನು ಅವರು ಹೊಂದುವಂತೆ ಮಾಡಿ, ಪುನರಾ-ವೃತ್ತಿಯನ್ನು ನಿಲ್ಲಿಸುವನೆಂಬುದೂ ಶಾಸ್ತ್ರದಿಂದ ತಿಳಿದುಬರುತ್ತದೆ 'ಬದುಕಿರುವವರೆಗೂ ಹೀಗೆ ಆಚರಿಸುತ್ತಿದ್ದರೆ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ, ಹಿಂದಿರುಗುವುದಿಲ್ಲ, ಖಂಡಿತವಾಗಿ ಹಿಂದಿರುಗುವುದಿಲ್ಲ' (ಛಾಂ ಉ ೮ ೧೫ ೧) ಎಂದು ಶ್ರುತಿಯು ಹೇಳುತ್ತದೆ ಭಗವಂತನೂ ಸ್ವಯಂ ಹೀಗೆಯೇ ಹೇಳಿರುತ್ತಾನೆ. 'ಪರಮಸಿದ್ಧಿಯನ್ನು ಹೊಂದಿರುವ ಮಹಾತ್ಮರು ನನ್ನನ್ನು ಸೇರಿ, ದುಃಖಾಲಯವೂ ಅಶಾಶ್ವತವೂ ಆದ ಪುನರ್ಜನ್ಮವನ್ನು ಪಡೆಯುವುದಿಲ್ಲ ಬ್ರಹ್ಮಲೋಕದವರೆಗಿನ ಲೋಕಗಳೆಲ್ಲ ಪುನಃ ಬರತಕ್ಕವುಗಳು ಆದರೆ ಎಲೈ ಕೌಂತೇಯ, ನನ್ನನ್ನು ಹೊಂದಿದರೆ ಪುನರ್ಜನ್ಮವಿಲ್ಲ'

1 ತೇಷಾಂ ನ ಪುನರಾವೃತ್ತಿಃ ।

2 ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ।

3 ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ।

4 ಸಮ್ಯಗ್ದರ್ಶನವಿಧ್ವಸ್ತತಮಸಾಂ ತು ನಿತ್ಯಸಿದ್ಧನಿರ್ವಾಣಪರಾಯಣಾನಾಂ ಸಿದ್ಧೈವಾನಾವೃತ್ತಿ, ತದಾಶ್ರಯಣೇನೈವ ಹಿ ಸಗುಣಶರಣಾನಾಮಪ್ಯನಾವೃತ್ತಿಸಿದ್ಧಿರಿತಿ (ಸೂ. ಭಾ.)-

(ಗೀತಾ, ೮ ೧೫ ೧೬)[1] ಮತ್ತೆ ಕರ್ಮಬಂಧದಿಂದ ಬಿಡಿಸಿಕೊಂಡ, ಅಸಂಕುಚಿತ ಜ್ಞಾನವುಳ್ಳ ಪರಬ್ರಹ್ಮಾನುಭವವೇ ಸ್ವಭಾವವಾಗಿರುವ ಮುಕ್ತನು ಏನನ್ನೂ ಅಪೇಕ್ಷಿಸುವುದಿಲ್ಲ, ಆದುದರಿಂದ ಅವನಿಗೆ ಪುನರಾವೃತ್ತಿಯಾಗುವದೆಂಬ ಶಂಕೆಯೇ ಬರುವುದಿಲ್ಲ ಸತ್ಯಸಂಕಲ್ಪನಾದ ಪರಮೇಶ್ವರನು ತನಗೆ ಅತ್ಯಂತ ಪ್ರಿಯನಾದ ಜ್ಞಾನಿಯನ್ನು ಹೊಂದಿ ಎಂದಿಗೂ ಸಂಸಾರಕ್ಕೆ ಹಿಂದಿರುಗಿರುವುದಿಲ್ಲ![2] ಏಕೆಂದರೆ ಅವನೇ ಹೀಗೆ ಹೇಳಿರುತ್ತಾನೆ 'ಅವರಲ್ಲಿ ನಿತ್ಯಯುಕ್ತನೂ ಏಕಭಕ್ತಿಯುಳ್ಳವನೂ ಆದ ಜ್ಞಾನಿಯು ಶ್ರೇಷ್ಠನು ; ನಾನು ಜ್ಞಾನಿಗೆ ಅತ್ಯಂತಪ್ರಿಯನು ಮತ್ತು ಅವನು ನನಗೆ ಪ್ರಿಯನಾಗಿರುವನು ಇವರೆಲ್ಲರೂ ಉದಾರಿಗಳೇ ಸರಿ, ಆದರೆ ಜ್ಞಾನಿಯು ನನ್ನ ಆತ್ಮನೇ ಎಂದು ನನ್ನ ಮತವು, ಏಕೆಂದರೆ ಆ ಯುಕ್ತಾತ್ಮನು ನಾನೇ ಅತ್ಯುತ್ತಮಗತಿಯೆಂದು ನನ್ನನ್ನೇ ಆಶ್ರಯಿಸಿರುತ್ತಾನೆ. ಬಹು ಜನ್ಮಗಳ ಕೊನೆಯಲ್ಲಿ ಜ್ಞಾನವಂತನಾಗಿ "ವಾಸುದೇವನೇ ಸರ್ವವು" ಎಂದು ನನ್ನನ್ನು ಹೊಂದುತ್ತಾನೆ ಅಂಥ ಮಹಾತ್ಮನು ಅತ್ಯಂತದುರ್ಲಭನು' (ಗೀತಾ ೭ ೧೭ ೧೯)[3] ಹೀಗೆ ಎಲ್ಲವೂ ಸಮಂಜಸವಾಗಿದೆ

ದ್ವೈ.—ಮುಕ್ತನಿಗೆ ಪುನರಾವೃತ್ತಿಯಿಲ್ಲ **ನ ಚ ಪುನರಾವರ್ತತೇ** (ಛಾಂ ಉ. ೮ ೧೫ ೧), **ಸರ್ವಾನ್ ಕಾಮಾನಾಪ್ತ್ವಾ ಸಮಭವತ್** (ಐ ಆ ೨ ೫ ೧ ೫) ಎಂದು ಶ್ರುತಿಗಳು ಹೇಳುತ್ತವೆ

---

[1] ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥
ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥

[2] ನ ಚ ಪರಮಪುರುಷಃ ಸತ್ಯಸಂಕಲ್ಪೋಽತ್ಯರ್ಥಪ್ರಿಯಂ ಜ್ಞಾನಿನಂ ಲಬ್ಧ್ವಾ ಕದಾಚಿದಾವರ್ತಯಿಷ್ಯತಿ (ಶ್ರೀಭಾಷ್ಯ).

[3] ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥
ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥
ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥

# ಸೂತ್ರಗಳ ಅಕಾರಾದಿ ಸೂಚಿ

ಅ.=ಅಧ್ಯಾಯ ಪಾ.=ಪಾದ ಸೂ.=ಸೂತ್ರ

| | ಅ. | ಪಾ. | ಸೂ. |
|---|---|---|---|
| ಸ್ಮರಂತಿ ಚ | ೩ | ೨ | ೧೪ |
| ,, | ೪ | ೧ | ೧ |
| ಸ್ಮರ್ಯತೇ ಚ | ೪ | ೨ | ೧೪ |
| ಸ್ಮರ್ಯತೇಽಪಿ ಚ ಲೋಕೇ | ೩ | ೧ | ೧೯ |
| ಸ್ಮರ್ಯಮಾಣಮನುಮಾ-ನಮ್ | ೧ | ೨ | ೨೫ |
| ಸ್ಮೃತೇಶ್ಚ | ೧ | ೨ | ೬ |
| ,, | ೪ | ೩ | ೧೧ |
| ಸ್ಮೃತ್ಯನವಕಾಶದೋಷ-ಪ್ರಸಂಗಃ | ೨ | ೧ | ೧ |
| ಸ್ಯಾಚ್ಚೈಕಸ್ಯ ಬ್ರಹ್ಮಶಬ್ದ-ವತ್ | ೨ | ೩ | ೫ |
| ಸ್ವಪಕ್ಷದೋಷಾಚ್ಚ | ೨ | ೧ | ೧೦ |
| ,, | ೨ | ೧ | ೨೯ |

| | ಅ. | ಪಾ. | ಸೂ. |
|---|---|---|---|
| ಸ್ವಶಬ್ದೋನ್ಮಾನಾಭ್ಯಾಮ್ | ೨ | ೩ | ೨೨ |
| ಸ್ವಾತ್ಮನಾ ಚೋತ್ತರಯೋಃ | ೨ | ೩ | ೨೦ |
| ಸ್ವಾಧ್ಯಾಯಸ್ಯ ತಥಾತ್ವೇನಹಿ | ೩ | ೩ | ೩ |
| ಸ್ವಾಪ್ಯಯಸಂಪತ್ತ್ಯೋ-ರನ್ಯತರ | ೪ | ೪ | ೧೬ |
| ಸ್ವಾಪ್ಯಯಾತ್ | ೧ | ೧ | ೯ |
| ಸ್ವಾಮಿನಃ ಫಲಶ್ರುತೇಃ | ೩ | ೪ | ೪೪ |

## ಹ

| | ಅ. | ಪಾ. | ಸೂ. |
|---|---|---|---|
| ಹಸ್ತಾದಯಸ್ತು ಸ್ಥಿತೇ | ೨ | ೪ | ೬ |
| ಹಾನೌ ತೂಪಾಯನಶಬ್ದ | ೩ | ೩ | ೨೬ |
| ಹೃದ್ಯಪೇಕ್ಷಯಾ ತು | ೧ | ೩ | ೨೫ |
| ಹೇಯತ್ವಾವಚನಾಚ್ಚ | ೧ | ೧ | ೮ |